ಮಹಾನುಭಾವಿ

# ಶ್ರೀ ಚನ್ನಮಲ್ಲಿಕಾರ್ಜುನರು

ಸಂಪಾದಕರು:
ಎಚ್. ದೇವೀರಪ್ಪ
ಚನ್ನಪ್ಪ ಎರೆಸೀಮೆ



ಶ್ರೀ ಜಗದ್ಗುರು ಗಂಗಾ...

ಮ ಹಾ ನು ಭಾ ವಿ

# ಶ್ರೀ ಚನ್ನಮಲ್ಲಿಕಾರ್ಜುನರು

ಸಂಪಾದಕರು:

ಎಚ್. ದೇವೀರಪ್ಪ ಎಂ.ಎ.

ಚನ್ನಪ್ಪ ಎರೆಸೀಮೆ



ಪ್ರಕಾಶಕರು:

ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ

ಮೂರುಸಾವಿರಮಠ, ಹುಬ್ಬಳ್ಳಿ

೧೯೮೩

MAHANUBHAVI MALLIKARJUNARU : Edited by H. Deveerappa and Ereseeme Channappa, Published by J. G. Mandal Murusaviramath HUBLI.

Page : 928+xii+12



ಪ್ರಥಮ ಮುದ್ರಣ : ೧೯೮೩

ಪ್ರತಿಗಳು : ೧೦೦೦

ಬೆಲೆ : ರೂ. ೬೫-೦೦

ಮುದ್ರಣ:
ಫ. ಶಿ. ಭಾಂಡಗೆ
ತ್ವರಿತ ಮುದ್ರಣಾಲಯ
ಗಂಗಾಪೂರಪೇಟ
ಗದಗ-582 101

### ಶ್ರೀ ಮನ್ಮಹಾರಾಜ ನಿರಂಜನ
### ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
### ಮೂರುಸಾವಿರಮಠ, ಹುಬ್ಬಳ್ಳಿ ಅವರ

## ಆಶೀರ್ವಚನ

ನಾಡಿನಲ್ಲಿ ವಚನಪಿತಾಮಹ ಫ. ಗು. ಹಳಕಟ್ಟಿಯವರು ವಚನ ಸಾಹಿತ್ಯ ಸಂಶೋಧನೆಯಲ್ಲಿ ಅಗ್ರಗಣ್ಯರಾಗಿದ್ದಂತೆ ಚನ್ನಮಲ್ಲಿಕಾರ್ಜುನರೂ ಸಹ ಸಂಶೋಧನೆ ಮಾಡುವದರಲ್ಲಿ ಪರಿಣಿತರಾಗಿದ್ದರು. ಇವರ ಸಾಹಸ ಅತ್ಯದ್ಭುತವಾದುದು. ಇವರ ಶರೀರವು ವಿದ್ರೂಪಗೊಂಡಿದ್ದರೂ ಕಾರ್ಯತತ್ಪರತೆಯಲ್ಲಿ ನಿಷ್ಠೆಯಿಂದ ಕಾರ್ಯಮಾಡ ತಕ್ಕವರು. ಸತ್ಯಶುದ್ಧ ಕಾಯಕದಲ್ಲಿ ನಿರತರು. ಆಚಾರ ವಿಚಾರ ಸಂಪನ್ನರು. ಎಲೆಯ ಮರೆಯ ಹೂವಿನಂತೆ ಅವರ ಜೀವನ. ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿ ಗಳೆಂದರೆ ಅವರಿಗೆ ಪಂಚಪ್ರಾಣ. ಬಾಲ್ಯದಿಂದಲೂ ಹರಿತ ಬುದ್ಧಿ. ಕುಮಾರ ಶಿವ ಯೋಗಿಗಳ ಮಾರ್ಗದರ್ಶನದಂತೆ ನಡೆಯುತ್ತಿದ್ದರು. ಸಂಸ್ಕೃತ, ಇಂಗ್ಲೀಷ, ಕನ್ನಡದಲ್ಲಿ ಅಪಾರ ಪಾಂಡಿತ್ಯ ಪಡೆದವರಾಗಿದ್ದರು. ಅವರಿಗೆ ಯಾವ ಪದವಿ ಇರದಿದ್ದರೂ, ಪದವಿ ಪಡೆದವರಿಗಿಂತ ಸಾವಿರಪಟ್ಟು ಜ್ಞಾನ ಸಂಪಾದಿಸಿದ್ದರು. ಸತತಾಭ್ಯಾಸ ಅವರ ಜೀವನದ ಉಸಿರಾಗಿತ್ತು. ಅವರಂತಹ ಆದರ್ಶ ಸಂಶೋಧಕರು ಇಂದು ಸಿಗುವದು ದುರ್ಲಭ. ಅವರು ಸಾಕಷ್ಟು ಆರ್ಥಿಕ ತೊಂದರೆಯಲ್ಲಿದ್ದರೂ ಸಹ, ವಚನ ಹಾಗು ಇನ್ನುಳಿದ ಪುಸ್ತಕಗಳ ಸಂಶೋಧನೆಯಲ್ಲಿಯೇ ಕಾಲಕಳೆಯುತ್ತಿದ್ದರು. ಮಹಾತ್ಮಾ ಬಸವಣ್ಣನವರು ಹಾಗು ರೇವಣಸಿದ್ಧರ ಕಾಲ ನಿರ್ಣಯದ ಸಾಕಷ್ಟು ಸಂಶೋಧನೆ ಮಾಡಿದ್ದರು. ಅವರುಗೈದ ಸಂಶೋಧನೆಯು ಉಳಿಯಲೆಂಬ ಉದ್ದೇಶದಿಂದಲೇ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ಸವಿನೆನಹಿನಲ್ಲಿಯೇ "ಸದ್ಧರ್ಮ ದೀಪಿಕೆ" ಮಾಸಪತ್ರಿಕೆಯನ್ನು ಹೊರಡಿಸುತ್ತಿದ್ದರು. ಅವರ ಪ್ರಸಾದ ಒಪ್ಪತ್ತು. ಅದರಲ್ಲಿಯೂ ಬಲುಮಿತಿ. ಶರಣ ಸಂಸ್ಕೃತಿಯನ್ನು ಚನ್ನಾಗಿ ಪರಿಪಾಲನ ಮಾಡುತ್ತಿದ್ದರು. ಪ್ರಸಾದದ

ಮೇಲೆ ಅವರದು ಅಪಾರ ಶ್ರದ್ಧೆ. ಒಂದು ಸಲ ಶಿವಯೋಗಮಂದಿರದಲ್ಲಿ ಪ್ರಸಾದಕ್ಕೆ ಕುಳಿತಾಗ ಯಾರೋ ಒಬ್ಬರು ಪ್ರಸಾದ ನೀಡುವ ಕಾಲದಲ್ಲಿ ಅವಸರವಾಗಿ ಏನೋ ನೋಡದೆ, ಅಲ್ಲಿಯೇ ಹತ್ತಿರವಿದ್ದ ಡಬ್ಬಿಯಲ್ಲಿರುವ ಗುಗ್ಗಳ ಪುಡಿಯನ್ನು ಚಟ್ನಿಯೆಂದು ಭಾವಿಸಿ, ಅದೆಲ್ಲವನ್ನು ಎಡೆಬಟ್ಟಲಕ್ಕೆ ನೀಡಿದ ಮೇಲೆ, ಗುಗ್ಗಳವೆಂದು ತಿಳಿದುಬಂದ ನಂತರ ಅನೇಕರು ಅದನ್ನು ಸ್ವೀಕರಿಸಬಾರದು ಎಂದು ಒತ್ತಾಯ ಮಾಡಿದರೂ "ಅದು ಕುಮಾರೇಶನ ಪ್ರಸಾದ, ನನಗೆ ಅನುಗ್ರಹವಾಗಿದೆ, ಬಿಡಲು ಬರುವದಿಲ್ಲ, ಅದನ್ನು ಸ್ವೀಕರಿಸುವದು ನನ್ನ ಧರ್ಮ ಕಾಯುವದು ಬಿಡುವದು ಕುಮಾರೇಶನದು" ಎಂದು ಹೇಳುತ್ತ ಅದೆಲ್ಲವನ್ನು ಸ್ವೀಕರಿಸಿದ್ದು ನಾವು ಪ್ರತ್ಯಕ್ಷ ನೋಡಿದಾಗ ಅತ್ಯಾಶ್ಚರ್ಯ ವಾಯ್ತು. ಆಗ ನಾವು ಶಿವಯೋಗಮಂದಿರದಲ್ಲಿ ಸಾಧಕರಾಗಿದ್ದೆವು. ಇದನ್ನು ನೋಡಿ ದಾಗ ಚನ್ನಮಲ್ಲಿಕಾರ್ಜುನರಲ್ಲಿರುವ ಪ್ರಸಾದದಲ್ಲಿಯ ಅಚಲ ನಿಷ್ಠೆಯು ಎಷ್ಟು ಬಲ ವಾಗಿತ್ತು. ಎಂಬುದು ಕಂಡುಕೊಳ್ಳಬಹುದು. ಪ್ರತಿಯೊಂದು ಕಾರ್ಯದಲ್ಲಿಯೂ ಇದೇ ರೀತಿಯ ನಿಷ್ಠೆಯು ಎದ್ದು ಕಾಣುತ್ತಿತ್ತು. ತಮ್ಮ ಆಯುಷ್ಯವನ್ನು ಸಾಹಿತ್ಯ ಸಂಸ್ಕೃತಿ ಪರಿಪೂರ್ಣ ಗ್ರಂಥಗಳನ್ನು ಪ್ರಕಟಿಸುವವರಲ್ಲಿಯೇ ತಮ್ಮ ಶರೀರವನ್ನು ಸವೆಯಿಸಿದರು. ಶರೀರದ ಬಗ್ಗೆ ಎಷ್ಟು ಚಿಂತೆ ಇರುತ್ತಿದ್ದಿಲ್ಲ. ಮೂರ್ತಿ ಚಿಕ್ಕದಾಗಿದ್ದರೂ ವ್ಯಕ್ತಿತ್ವ ಹಿರಿದು. ಹಿಂದಿನ ಶಿವಶರಣರಂತೆಯೇ ನಿಷ್ಠೆಪತಿವಾದ ಶುದ್ಧ ಆಚಾರ ವಿಚಾರದಲ್ಲಿಯೇ ಮಗ್ನರಾಗುತ್ತಿದ್ದರು. ಶಿವಾನುಭವವನ್ನು ಹೇಳಲು ಕುಳಿತರೆ ಸೈದ್ಧಾಂತಿಕವಾಗಿ ನಿರ್ಣಯ ಮಾಡಿ, ದೊಡ್ಡ ದೊಡ್ಡ ಪಂಡಿತರಿಗೂ ತಿಳಿಯಲಾರದ ವಿಷಯವನ್ನು ತಿಳಿಸುತ್ತಿದ್ದರು. ಒಂದೊಂದು ವಿಷಯವನ್ನು ತಿಂಗಳವರೆಗೆ ಚರ್ಚಿಸಿ, ನಿರ್ಣಯಕ್ಕೆ ಬರುವ ವರೆಗೆ, ತಮಗೆ ಸಂಪೂರ್ಣ ಸಮಾಧಾನವಾಗುವ ವರೆಗೆ ಬಿಡುತ್ತಿದ್ದಿಲ್ಲ. ಧರ್ಮ, ತತ್ವ, ನೀತಿಯಿಂದ ಕೂಡಿದ ತಾಳ ಓಲೆ ಗ್ರಂಥಗಳನ್ನು ಹಾಗು ಶಿಲಾ ಶಾಸನಗಳನ್ನು ಎಲ್ಲಿಯೇ ಇರಲಿ ಸಂಗ್ರಹಿಸಿ ಸಂಶೋಧನೆ, ಮಾಡುತ್ತಿದ್ದರು. ವೀರಶೈವ ತತ್ವವನ್ನು ಚನ್ನಾಗಿ ಮೈಗೂಡಿಸಿಕೊಂಡಿದ್ದರು. ಈ ತತ್ವ ಪ್ರಸಾರಕ್ಕಾಗಿ "ಸಿದ್ಧೇಶ್ವರ ಮುದ್ರ ಣಾಲಯವನ್ನು ಸ್ಥಾಪಿಸಿಕೊಂಡು ಕಾರ್ಯ ಮಾಡಿದವರಾಗಿದ್ದರು. ಆತ್ಮಶ್ರೀ ಸಮನ್ವಿತ ರಾದ ಶ್ರೀ ಚನ್ನಮಲ್ಲಿಕಾರ್ಜುನರು ಅಂದು ಹಚ್ಚಿದ ದೀಪವನ್ನು ಇಂದು ಅವರ ಅನುಯಾಯಿಗಳು ಮುಂದುವರಿಸುತ್ತಿರುವದು ನಾಡಿನ ಭಾಗ್ಯವೆಂದೇ ಹೇಳಬೇಕು. ಅವರು ಕಡುಬಡತನದಲ್ಲಿಯೂ, ಅನ್ನ ಅರಿವೆ ಪರಿವೆಯಿಲ್ಲದೆ, ಅತ್ಯಂತ ಸಾಹಸದಿಂದ ಸಂಶೋಧನೆ ಮಾಡಿದ್ದು ನೋಡಿದರೆ, ಇಂದು ಅವರಂತಹ ವ್ಯಕ್ತಿಗಳು ಸಿಗುವದು ದುರ್ಲಭ. "ಸದ್ಧರ್ಮ ದೀಪಿಕೆ"ಯಲ್ಲಿ ಅವರು ಬರೆದ ಪ್ರತಿಯೊಂದು ಲೇಖನಗಳು ಬಹು ಉಪಯುಕ್ತವಾದವುಗಳು. ಮೇಲಿಂದ ಮೇಲೆ ಮೆಲಕು ಹಾಕುವಂತಹವು. ಅವರು ವ್ಯಕ್ತಿಯಾಗಿರದೆ ಸಮಾಜದ ಮಹಾಶಕ್ತಿ ಎಂದು ಹೇಳಿದರೆ ತಪ್ಪಾಗದು. ನಾವು ಚಿಕ್ಕವರಾಗಿದ್ದಾಗ ಬರೆದ ಕಂದ–ಪದ್ಯಗಳನ್ನು, ಹಾಗು ಸಂಸ್ಕೃತ ಶ್ಲೋಕಗಳನ್ನು



ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ
ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥಾಪಕರಾದ
ಲಿಂ. ಹಾನಗಲ್ಲ ಕುಮಾರ ಶಿವಯೋಗಿವರೇಣ್ಯರು

ಮಹಾನುಭಾವಿ ಚನ್ನಮಲ್ಲಿಕಾರ್ಜುನರ
ಹೃದಯ ಮೂರ್ತಿಗಳು.

ಸದ್ಧರ್ಮ ದೀಪಿಕೆ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರೋತ್ಸಾಹಿಸುತ್ತಿದ್ದರು. ಅವರಿಗೆ ನಮ್ಮ ಮೇಲೆ ಬಹಳ ಅಭಿಮಾನ. ಸಾಮಾಜಿಕ ಸೇವೆ, ಸಾಹಿತ್ಯ ಸೇವೆ ಮಾಡುವವರನ್ನು ಕಂಡರೆ ಬಲು ಪ್ರೀತಿ. ಅನೇಕ ಸಲಹೆ ನೀಡುತ್ತಿದ್ದರು. ಇಂತಹ ಮಹಾನ್ ವ್ಯಕ್ತಿಯ ಸ್ಫೂರ್ತಿದಾಯಕ ವಿಚಾರಗಳನ್ನು ಹಾಗು ಸಂಶೋಧನೆಯ ವಿವರಗಳು ಹಾಗೆಯೇ ಕಳೆದು ಹೋದರೆ ಸಮಾಜಕ್ಕೆ ಅವರ ಪರಿಶ್ರಮ ಗೊತ್ತಾಗದೆ ಹೋದರೆ ಸಮಾಜಕ್ಕೆ ಹಾನಿಯಾದೀತೆಂದು ಬಗೆದು, ಅನುಭವಿಕರೂ, ಘನವಿದ್ವಾಂಸರೂ, ಆದ ಶ್ರೀ ಎಚ್. ದೇವೀರಪ್ಪನವರು ಹಾಗೂ ಪಂಡಿತ ಎರೆಸೀಮೆ ಚನ್ನಪ್ಪನವರು ಚನ್ನಮಲ್ಲಿಕಾರ್ಜುನರು ಬಿಟ್ಟುಹೋದ ಸಾಹಿತ್ಯವನ್ನು ಮತ್ತೆ ಬೆಳಕಿಗೆ ತರಬೇಕೆಂದು ಬಯಸಿ "ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು" ಈ ಹೆಸರಿನಿಂದ ಸಂಪಾದಿಸಿ ನಾಡಿಗೆ ನೀಡಿದ್ದು, ಚನ್ನ ಮಲ್ಲಿಕಾರ್ಜುನರ ಮೇಲಿನ ಅಭಿಮಾನ ಹಾಗು ಸಾಹಿತ್ಯ ಪ್ರೇಮವನ್ನು ಎತ್ತಿ ತೋರಿಸುತ್ತದೆ. ಇದೊಂದು ಉದ್‌ಗ್ರಂಥವಾಗಿದೆ. ಇವರೀರ್ವರು ಅವರ ಬಗ್ಗೆ ಸಾಹಸ ಮಾಡದೆ ಸಂಶೋಧಿಸದೆ ಹೋಗಿದ್ದರೆ ಚನ್ನಮಲ್ಲಿಕಾರ್ಜುನ ಕರ್ತೃತ್ವ ಶಕ್ತಿಯು ಜನರಿಗೆ ತಿಳಿಯುತ್ತಿದ್ದಿಲ್ಲ.

"ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು" ಇದೊಂದು ಅತ್ಯಮೂಲ್ಯ ಗ್ರಂಥವಾಗಿದ್ದು, ಸಂಶೋಧನೆಗೆ ಸಾರಭೂತ ಸಂಗ್ರಹವಾಗಿದೆ. ಈ ಪುಸ್ತಕವನ್ನು ತೆರೆದ ಹೃದಯದಿಂದ ಓದುವವರಿಗೆ ಇವರ ಪರಿಶ್ರಮದ ಸಾರ್ಥಕತೆ ಗೊತ್ತಾಗುವದು. ಇದರಲ್ಲಿ ಒಟ್ಟು ೮-೧೦ ಭಾಗಗಳನ್ನು ಮಾಡಿದ್ದಾರೆ. (೧) ಜೀವನ ಚಾರಿತ್ರ್ಯ ಹಾಗೂ ಆರಂಭದ ಬರವಣಿಗೆಗಳು. (೨) ಸಂಶೋಧನೆ, ಚನ್ನಮಲ್ಲಿಕಾರ್ಜುನರ ಎರಡು ಮಹತ್ವದ ಸಂಶೋಧನ ಗ್ರಂಥಗಳ ಸ್ಥೂಲ ಪರಿಚಯ ಮತ್ತು ಅವರ ಕೆಲವು ಸಂಶೋಧನಾತ್ಮಕ ಲೇಖನಗಳು. (೩) ತತ್ವ ವಿಚಾರ-ವಿಜ್ಞಾನ. (೪) ಗ್ರಂಥ ಪರಿಚಯ ಮತ್ತು ಗ್ರಂಥ ವಿಮರ್ಶೆ. (೫) ಗ್ರಂಥ ಸಂಗ್ರಹ ಸಂಪಾದನೆ ಪ್ರಾಚೀನ ಕಾವ್ಯಗಳು. (೬) ಲಿಂಗವಂತ ಸಮಾಜದ ಏಳಿಗೆ. (೭) ಪತ್ರಿಕೋದ್ಯಮ. (೮) ಪತ್ರೋತ್ತರ ಮತ್ತು ವಾದ ಭೂಮಿ, ಹೀಗೆ ಮುಂತಾದ ವಿಚಾರಗಳನ್ನೊಳಗೊಂಡ ಈ ಗ್ರಂಥವು ಮೇರು ಕೃತಿಯಾಗಿದೆ. ಇಂತಹ ಗ್ರಂಥದ ಹಸ್ತಪ್ರತಿಯನ್ನು ಎಚ್. ದೇವೀರಪ್ಪನವರು ಮತ್ತು ಎರೆಸೀಮೆ ಚನ್ನಪ್ಪನವರು ನಮಗೆ ತೋರಿಸಿ, ಇದು ನಿಮ್ಮ ಮಠದಿಂದ ಪ್ರಕಟಿಸಲು ಕೇಳಿಕೊಂಡರು. ಕೂಡಲೇ ನಾವು ಒಪ್ಪಿಕೊಂಡು ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದಿಂದ ಇದನ್ನೂ ಪ್ರಕಟಿಸಿ ನಾಡಿಗರ ಕೈಗೆ ನೀಡಿದ್ದೇವೆ.

ವೀರಶೈವ ಸಾಹಿತ್ಯ ಸಂಸ್ಕೃತಿಯಿಂದ ಕೂಡಿದ ಈ ಸಂಶೋಧನ ಗ್ರಂಥವನ್ನು ಸಂಪಾದಿಸಿ ಎಚ್. ದೇವೀರಪ್ಪನವರು ಪಂಡಿತ ಎರೆಸೀಮೆ ಚನ್ನಪ್ಪನವರು ನಾಡಿಗೆ ಮಹದುಪಕಾರ ಮಾಡಿದ್ದಾರೆ. ಲಿಂ. ಚನ್ನಮಲ್ಲಿಕಾರ್ಜುನರ ಆತ್ಮಕ್ಕೆ ತೃಪ್ತಿಯಾಗಬಹು

ದೆಂದು ಭಾವಿಸಿದ್ದೇವೆ. ಇವರೀರ್ವರು ಅನೇಕ ಗ್ರಂಥಗಳನ್ನು ಬರೆದು ನಾಡಿಗೆ ಚಿರ ಪರಿಚಿತರಾಗಿದ್ದಾರೆ. ಸಾಹಿತ್ಯ ಸೇವೆ ಮಾಡಿ ನಾಡಿನಲ್ಲಿ ಅಗ್ರಗಣ್ಯರೆನಿಸಿದ್ದಾರೆ. ಇವರ ಸಾಹಸ ಸ್ತುತ್ಯಾರ್ಹವಾದುದು. ಇವರಿಂದ ಇನ್ನೂ ಇಂತಹ ಉತ್ತಮ ಸಂಪಾದನ ಗ್ರಂಥಗಳು ಹೊರಬಂದು ನಾಡಿಗೆ ಶಕ್ತಿ ಸ್ಫೂರ್ತಿಯನ್ನು ನೀಡಲಿ.

ವೇಳೆಗೆ ಸರಿಯಾಗಿ ಮುದ್ರಿಸಿಕೊಟ್ಟ ಗದುಗಿನ ತ್ವರಿತ ಮುದ್ರಣದ ಮಾಲಿಕರಾದ ಶ್ರೀ ಫ. ಶಿ. ಭಾಂಡಗೆಯವರಿಗೂ ಪರಮಾತ್ಮನು ಅನುಗ್ರಹಿಸಲಿ.

ಪರಂಜ್ಯೋತಿ ಭವನ
ಜೆ. ಜಿ. ಮಂಡಳ
ಮೂರುಸಾವಿರಮಠ, ಹುಬ್ಬಳ್ಳಿ
ದಿ. ೨೮-೪-೧೯೮೩

—ಶ್ರೀ ಮೂಜಗಂ.

# ಅರಿಕೆ

ಸಮಾಜದ ಸಕಲ ಬಗೆಯ ಸಂಪದಭ್ಯುದಯಕ್ಕೆ ಕಾರಣರಾದ ಪುರುಷರನ್ನು ಗುರುತಿಸಿ ಕೃತಜ್ಞತಾ ಪೂರ್ವಕವಾದ ಗೌರವವನ್ನು ಸಲ್ಲಿಸುವುದು ಪ್ರತಿಯೊಬ್ಬ ಪ್ರಜ್ಞಾವಂತ ಸಾಮಾಜಿಕನ ಪ್ರಥಮ ಕರ್ತವ್ಯ. ಆದರೆ ಅಂತಹ ಮಹನೀಯರನ್ನು 'ಗುರುತಿಸು'ವುದೇ ಈ ದಿನಮಾನಗಳಲ್ಲಿ ಒಂದು ಸಮಸ್ಯೆಯಾಗಿಯೇ ಪರಿಣಮಿಸಿದೆ.

ಕೆಲವರು ಕೇವಲ ತಮ್ಮ ರೂಪ ಸಂಪತ್ತಿನಿಂದ, ಕೆಲವರು ತಮ್ಮ ಶ್ರೀಮಂತಿಕೆಯ ಬಲದಿಂದ, ತಮ್ಮ ಅಧಿಕಾರ ಪದವಿ ಪ್ರಭಾವಗಳೇ ಕಾರಣವಾಗಿ ಕೆಲವರು ಜನಮನ್ನಣೆಗೆ 'ಅರ್ಹ'ರಾದುದುಂಟು. ನಮ್ಮ ಶ್ರೀ ಚನ್ನಮಲ್ಲಿಕಾರ್ಜುನರಿಗೆ ಈ ಯಾವ 'ಅರ್ಹತೆ'ಗಳೂ ಇರಲಿಲ್ಲ. ಇವರಿಗೆ ಇವರೇ ಸಂಪಾದಿಸಿದ ಅನುಭವದ ಕಸುವಿದ್ದಿತು; ಅನುಭಾವದ ರಸವಿದ್ದಿತು: ಲೇಖನ ಸಾಮರ್ಥ್ಯವಿದ್ದಿತು; ಸಮಾಜದ ಕೊಳೆಯನ್ನು ತೊಳೆಯಲೇಬೇಕೆಂಬ ಹಠಮಾರಿತನವಿತ್ತು; ಶ್ರೀ ಶಿವನ ಮತ್ತು ಶಿವಶರಣರ ಸಂಗ ಸಹವಾಸ ಸಹಾಯ ಸಹಾನುಭೂತಿಗಳು ಯಥೇಚ್ಛವಾಗಿದ್ದುವು. ಇಷ್ಟಾದರೂ ಇವರು ಶ್ರೀಸಾಮಾನ್ಯನ ಕಣ್ಣಿಗೆ ಬೀಳಲೇ ಇಲ್ಲ. ಇವರ ವಿಚಾರ ವಿವೇಚನೆಗಳು ಹೆಚ್ಚು ಪ್ರಚಾರಕ್ಕೆ ಬರಲಿಲ್ಲ.

ನಾಡವರಿಗೆ ಶ್ರೀ ಚನ್ನಮಲ್ಲಿಕಾರ್ಜುನರ ಭಾಷಣ, ಲೇಖನ, ಪ್ರವಚನ, ಅರಿವು ಆಚಾರಗಳ ಪ್ರಯೋಜನ ಅಂದೂ ಬೇಕಿದ್ದಿತು; ಇಂದೂ ಬೇಕು; ಮುಂದೆಯೂ ಬೇಕು. ಆದುದರಿಂದ ಇಲ್ಲಿ, ಇವರ ಜೀವನ ಚಾರಿತ್ರಗಳನ್ನೂ ಇವರ ಬರವಣಿಗೆಗಳಲ್ಲಿ ಸತ್ವ ಸೌಂದರ್ಯವುಳ್ಳವುಗಳನ್ನು ಆಯ್ಕೆಮಾಡಿ ವಿಂಗಡಿಸಿ ಲಘು ಪೀಠಿಕೆಗಳೊಡನೆ ಪವಣಿಸಲಾಗಿದೆ.

ಶ್ರೀ ಚನ್ನಮಲ್ಲಿಕಾರ್ಜುನ ಅವರು ನೂರಾರು ಸಣ್ಣ ದೊಡ್ಡ, ಕನ್ನಡ, ಸಂಸ್ಕೃತ ಕೃತಿಗಳನ್ನು ತಮ್ಮ 'ಸದ್ಧರ್ಮ ದೀಪಿಕೆ'ಯಲ್ಲಿಯೂ ಸ್ವತಂತ್ರ ಗ್ರಂಥರೂಪದಲ್ಲಿಯೂ ಪ್ರಕಟಿಸಿದ್ದರು. ಅವುಗಳಲ್ಲಿ ಕೆಲವರ ಪರಿಚಯವನ್ನು ಇಲ್ಲಿ ಮಾಡಿಕೊಟ್ಟಿದೆ. ಆ

ಕೃತಿಗಳೆಲ್ಲವನ್ನು ಒಂದೆರಡು ಸಂಪುಟಗಳಲ್ಲಿ ಮತ್ತೆ ಮುದ್ರಿಸಿ ಬೆಳಕಿಗೆ ತರುವುದು ಸೂಕ್ತವೆಂದು ನಮಗೆನ್ನಿಸಿದೆ. ಈ ಮಹಾಮಣಿಹವನ್ನು ಧರ್ಮಾಭಿಮಾನಿಗಳು ಕೈಗೊಳ್ಳುವರೆಂದು ಆಶಿಸುತ್ತೇವೆ.

ಧರ್ಮ ಸಾಹಿತ್ಯ ಸಂಸ್ಕೃತಿಗಳ ಸರ್ವಾಂಗೀಣ ಸಮುನ್ನತಿಗಾಗಿ ದುಡಿದಂತಹ ಮಹನೀಯರೆಲ್ಲರಿಗೂ ಅವರವರ ಜೀವಿತ ಕಾಲದಲ್ಲಿಯೇ ಪುರಸ್ಕಾರ ದೊರೆಯುವುದಿಲ್ಲ. ಎಲ್ಲಿಯೋ ಕೆಲವರಿಗೆ ಮಾತ್ರ ಅವರು ಜೀವಿಸಿರುವಾಗಲೇ ಸನ್ಮಾನ ಸೌಭಾಗ್ಯ. ಮತ್ತೆ ಕೆಲವರಿರುತ್ತಾರೆ, 'ಮರಣೋತ್ತರ ಪ್ರಶಸ್ತಿ' ವಿಜೇತರು. ಇನ್ನೊಂದು ಗುಂಪಿನವರಿರುತ್ತಾರೆ ಸೇವೆಯಲ್ಲಿಯೇ ಶಿವನನ್ನು ಕಾಣಬಲ್ಲವರು. ಶ್ರೀ ಚೆನ್ನಮಲ್ಲಿಕಾರ್ಜುನ ಮೂರನೆಯ ವರ್ಗಕ್ಕೆ ಸೇರಿದವರು. ವನಸುಮದಂತೆ ಅವರ ಅಮರ ಜೀವನ. ಇಂಥವರ ಅರಿವು ಆಚಾರ ಅನುಭವಗಳ ಪ್ರಯೋಜನವನ್ನು ಶ್ರೀಸಾಮಾನ್ಯನೂ ಪಡೆಯಲೆಂದೂ ನಮ್ಮ ಹಿರಿಯಾಸೆ.

ಇವರು ತಾವು ಮಾಡಿದ ಸೇವೆಯ ಬಗೆಗೆ ಪ್ರಸ್ತಾಪಿಸುತ್ತ, "ಮೂವತ್ತೈದು ವರ್ಷ ಸರಕಾರದ ಸೇವೆ, ಮೂವತ್ತೈದು ವರ್ಷ ಶಿವನ ಸೇವೆ" ಎಂದು ನಸುನಗುತ್ತ ನುಡಿದುದುಂಟು. ಎರಡು ಬಗೆಯ ಸೇವೆಯೂ ನೂರಕ್ಕೆ ನೂರು ಸಾರ್ಥಕವಾಗಿರುವುದರಲ್ಲಿ ಸಂದೇಹವಿಲ್ಲ. ನಾಲ್ಕೈದು ದಶಕಗಳಕಾಲ ಇವರ ಈ ಶಿವಸೇವಾ ಕಾರ್ಯವನ್ನು ಅತ್ಯಂತ ಅಭಿಮಾನ ಅಕ್ಕರೆಗಳಿಂದ ನೋಡಿನಲಿಯುತ್ತಿದ್ದ, ಕಲಿಯುತ್ತಿದ್ದ ನಾವು ಇವರ ದಿವ್ಯಜೀವನ, ಭಾಷಣ, ಲೇಖನಾದಿಗಳ ಸಂಗ್ರಹವನ್ನು ನಮಗೆ ತಿಳಿದ ರೀತಿಯಲ್ಲಿ ಮಾಡಿಕೊಟ್ಟು, ನಮ್ಮ ಹೊಣೆಗಾರಿಕೆಯನ್ನು ನೀಗಿಕೊಂಡಿರುತ್ತೇವೆ. ಇದರಿಂದ ನಮ್ಮ ಮನಸ್ಸಿಗೆ ನೆಮ್ಮದಿ, ನಲಿವು, ಗೆಲವು.

ಬೆಂಗಳೂರು ಶ್ರೀ ಸರ್ಪಭೂಷಣ ಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಸ್ವ. ಶಿವಕುಮಾರ ಮಹಾಸ್ವಾಮಿಗಳು ಇಂತಹ ಒಂದು ಜಂಗಮ ಸ್ಮಾರಕನನ್ನು ಮಾಡಬೇಕೆಂದು ಅಪ್ಪಣೆ ಮಾಡಿ ಆರಂಭನ ವೆಚ್ಚಕ್ಕಾಗಿ ಐದುನೂರು ರೂಪಾಯಿಗಳನ್ನಿತ್ತಿದ್ದರು. ಆದರೆ ಈ ಗ್ರಂಥವನ್ನು ಅಣಿಗೊಳಿಸಿದ ಮೇಲೆ ಇದನ್ನು ಬೆಳಕಿಗೆ ತರುವ ಸಮಸ್ಯೆಯನ್ನು ನಾವೇ ಎದುರಿಸಬೇಕಾಯ್ತು. ಇಂತಹ ಇಕ್ಕಟ್ಟಿನ ಸಂದರ್ಭದಲ್ಲಿ ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲದ ಉದಾರಾಶ್ರಯವಿಲ್ಲದಿದ್ದರೆ ನಾವು ಸುಮಾರು ಮೂರು ವರ್ಷಗಳ ಕಾಲ ಎಡೆಬಿಡದೆ ಮಾಡಿದ ಮಣಿಹ ಮಣ್ಣುಪಾಲಾಗುತ್ತಿತ್ತು. ಒಳ್ಳೆಯ ಕಾರ್ಯಕ್ಕೆ ಎಲ್ಲೆಲ್ಲಿಂದಲೋ ತಾನಾಗಿಯೇ ನೆರವು ದೊರೆಯುತ್ತದೆಯೆಂಬುದಕ್ಕೆ ಈ ಘಟನೆ ಒಂದು ಜ್ವಲಂತ ನಿದರ್ಶನ.

ನಾವು ಈ ಗ್ರಂಥದ ಆರಂಭದಲ್ಲಿಯೇ ಇರಲೆಂದು ಒಂದು ರಸಭರಿತ ಸ್ತೋತ್ರ ಪದ್ಯವನ್ನು ಆಯ್ಕೆ ಮಾಡಿರುತ್ತೇವೆ. ಅದು ಈಗಿನ ಶ್ರೀ ಮೂರುಸಾವಿರಮಠ ಮಹಾಸಂಸ್ಥಾನದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ

ಮಹಾಸ್ವಾಮಿಗಳವರು ತಮ್ಮ ಪೂರ್ವಾಶ್ರಮದಲ್ಲಿ ರಚಿಸಿದ ಕವನವೆಂದು ನಮಗೆ ಇತ್ತೀಚೆಗೆ ಗೊತ್ತಾಯ್ತು. ಇದು ಒಂದು ಯೋಗಾಯೋಗವೆ. ನಮಗಂತೂ ಈ ಸನ್ನಿವೇಶ ಒಂದು ಪವಾಡವೇನೋ ಎನ್ನಿಸುತ್ತಿದೆ.

ಪ್ರಕೃತ ಗ್ರಂಥಕ್ಕೆ ಮೂಲ ಮತ್ತು ಮುಖ್ಯ ಆಧಾರ "ಸದ್ಧರ್ಮ ದೀಪಿಕೆ"ಯ ಎಲ್ಲಾ ಸಂಚಿಕೆಗಳು ಮತ್ತು ಪ್ರಕಟಣೆಗಳು. ಇವನ್ನು ಸಕಾಲದಲ್ಲಿ ಒದಗಿಸಿಕೊಟ್ಟ ಶ್ರೀ ಶಿವಯೋಗಮಂದಿರದ ಸಂಚಾಲಕರಾದ ಶ್ರೀ ನಿ. ಪ್ರ. ಸದಾಶಿವ ಮಹಾಸ್ವಾಮಿಗಳವರಿಗೆ ನಮ್ಮ ಸಾಷ್ಟಾಂಗ ಪ್ರಣಾಮಗಳು.

ವಿಷಯ ಸಂಗ್ರಹಕ್ಕಾಗಿ ನಾವು ಶಿರಾಳಕೊಪ್ಪಕ್ಕೆ ಹೋಗಿದ್ದಾಗ, ಶರಣರಾದ ಸೂರಣಗಿ ಸಂಗಪ್ಪನವರು, ಟಿ. ಗುರುಶಾಂತಪ್ಪ, ಎಣ್ಣೆ ಚನ್ನಪ್ಪ, ಮಾಸ್ತರ್ ಭೀಮಪ್ಪ, ಸಾವಳಿಗಪ್ಪ– ಇವರುಗಳು ಶ್ರೀ ಚನ್ನಮಲ್ಲಿಕಾರ್ಜುನ ಅವರ ಬಗೆಗೆ ಹಲವು ಉಪಯುಕ್ತ ಮಾದರಿಗಳನ್ನು ಒದಗಿಸಿದ್ದಾರೆ. ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಮೈಕ್ರೋ ಫಿಲಂ ವಿಭಾಗದ ಮುಖ್ಯಸ್ಥರಾದ ಶ್ರೀ ಶ್ರೀನಿವಾಸನ್ ಅವರು ಹಲವು ರೀತಿಯಲ್ಲಿ ನೆರವಿತ್ತಿದ್ದಾರೆ. ನಾಡಿನ ಅನೇಕ ಮಹನೀಯರು ಶ್ರೀ ಚನ್ನಮಲ್ಲಿಕಾರ್ಜುನರ ಮತ್ತು ಗ್ರಂಥಗಳ ಬಗೆಗೆ ಲೇಖನಗಳನ್ನಿತ್ತು ಸಹಕರಿಸಿದ್ದಾರೆ. ಇವರೆಲ್ಲರಿಗೂ ನಮ್ಮ ನೆನಕೆಗಳು ಸಲ್ಲುತ್ತವೆ.

ನಾವು ಇಲ್ಲಿ– ಬೆಂಗಳೂರಿನಲ್ಲಿ; ಗ್ರಂಥ ಮುದ್ರಣವಾದುದು ಗದುಗಿನಲ್ಲಿ. ಹಳೆಯ ಮೈಸೂರಿನವರ ಬರವಣಿಗೆಯ ಶೈಲಿಗೂ ಧಾರವಾಡ ಸೀಮೆಯವರ ಶೈಲಿಗೂ ಹಲವು ವ್ಯತ್ಯಾಸಗಳು. ಇದು ಕಾರಣವಾಗಿ, ಗ್ರಂಥದಲ್ಲಿ ಕೆಲವು ಮುದ್ರಣ ದೋಷಗಳಿರಬಹುದು. ವಾಚಕರು ಕ್ಷಮಿಸಬೇಕು; ತಿದ್ದಿಕೊಂಡು ಓದಬೇಕು. ಪುನರ್ಮುದ್ರಣದಲ್ಲಿ ಇವೆಲ್ಲ ದೋಷಗಳನ್ನು ನಿವಾರಿಸಲಾಗುವುದು.

ಬೆಂಗಳೂರು
೨೦–೪–೧೯೮೩

ಇತಿ,
**ಸಂಪಾದಕರು**

# ನುಡಿಯಣಿ

# ಯೋಗಿವರೇಣ್ಯ ಹಾನಗಲ್ಲು ಶಿವಯೋಗಿಗಳವರ ಸ್ತುತಿ ಪಂಚಕ

**ಎಂ. ಐ. ಶಿವಯೋಗಮಂದಿರ**

ಯತೀಂದ್ರವೃಂದ ಪೂಜಿತಂ ಚರಾಗಭೋಗವರ್ಜಿತಂ
ಕೃತೇಶ ಭವ್ಯಮಂದಿರಂ ಗಿರೀಶಯೋಗರಾಜಿತಂ
ಸುವೀರಶೈವ ರಕ್ಷಕಂಚ ಧರ್ಮಬೋಧ ಶಿಕ್ಷಕಂ
ವಿರಾಟ್ಪುರಾಧಿ ನಾಯಕಂ ಭಜಾಮಿ ಮುಕ್ತಿದಾಯಕಂ ॥೧॥

ವಿಚಾರಸಾರ ಪೂರಕಂ ಸ್ವಭಕ್ತ ಶೋಕನಾಶಕಂ
ಭವಾದಿಮೂಲ ದಾಹಕಂ ಯಮೀಶಸಂಘದೀಪಕಂ
ಅನಾಥವೃಂದ ಪೋಷಕಂ ಮಹಾಪದಂನಿವಾರಕಂ
ವಿರಾಟ್ಪುರಾಧಿ ನಾಯಕಂ ಭಜಾಮಿ ಮುಕ್ತಿದಾಯಕಂ ॥೨॥

ಚಿದಂಗಯೋಗಿ ಸಿದ್ಧಿದಂ ಚ ಭಕ್ತಿಶಕ್ತಿಮುಕ್ತಿದಂ
ಶಿವಾನುರಾಗಿಯೋಗಿ ಶಂಕರಾನುಭಾವ ಶಾಂತಿದಂ
ಕೃಪಾಕರಂ ಗುಣಾಕರಂ ಪರೋಪಕಾರ ಸಾಗರಂ
ವಿರಾಟ್ಪುರಾಧಿ ನಾಯಕಂ ನಮಾಮಿ ಭಕ್ತಿ ಪೂರ್ವಕಂ ॥೩॥

ನಿರಂಜನಂಚ ನಿರ್ಗುಣಂ ಕು ಪಾಪಪಂಕಶೋಷಣಂ
ವಿರಾಗಸತ್ಯ ಭೂಷಣಂ ಚ ಷಟ್‌ಸ್ಥಲ ಸ್ವರೂಪಿಣಂ
ವಿರಕ್ತವೃಂ ಶೇಖರಂಪ್ಯ ನೀತಿ ವರ್ತ್ಮ ಭೀಕರಂ
ವಿರಾಟ್ಪುರಾಧಿ ನಾಯಕಂ ನಮಾಮಿ ಮುಕ್ತಿದಾಯಕಂ ॥೪॥

ಸುಭಾವ ಭಕ್ತ ಭಾಸ್ಕರಂ ಸುಶಾಂತಿ ಮುಕ್ತಿಮಂದಿರಂ
ಚರೇಶ್ವರಂ ಪರೇಶ್ವರಂ ಸುಜಂಗಮೇಶ್ವರಂ ಗುರುಂ
ಫಲಪ್ರದಂ ಪ್ರಮೋದದಂ ಚಿದಾತ್ಮಲಿಂಗ ಭೋಗಿನಂ
ಸದಾಶಿವಂ ಚ ಮತ್ಪ್ರಭುಂ ಭಜೇಕುಮಾರಯೋಗಿನಂ ॥೫॥

(ಸಂಚಿಕೆ ೯೧-೯೨)

# ಶ್ರೀ ಚನ್ನಮಲ್ಲಿಕಾರ್ಜುನರ ಗುರುವರ್ಯ

## ಹಾನಗಲ್ಲು ಶ್ರೀಗಳು

ವೀರಶೈವ ಧರ್ಮೇತಿಹಾಸದಲ್ಲಿ ಹಾನಗಲ್ಲು ಕುಮಾರಮಹಾಸ್ವಾಮಿಗಳು ೧೯ ಮತ್ತು ೨೦ ನೆಯ ಶತಮಾನದ ಬಹುದೊಡ್ಡ ಹೆಸರು. ಶುದ್ಧಿ ಮತ್ತು ಸಿದ್ಧಿಗಳಿಗೆ ಅವರು ಮೇಲ್ಮಟ್ಟದ ಶಿವಯೋಗಿಗಳೆನಿಸಿದ್ದರು. ಅವರು ತಮ್ಮ ಜೀವನದುದ್ದಕ್ಕೂ ಅನುಸರಿಸಿದ ಶುದ್ಧ ಸತ್ವಭರಿತವಾದ ಮಹಾಜೀವನದಿಂದಲೇ ಅನೇಕ ಸಿದ್ಧಿಗಳನ್ನು ಸಾಧಿಸಿ, ವೀರಶೈವ ಸಂಸ್ಕೃತಿ, ಸಂಸ್ಕಾರ, ಧರ್ಮ, ಸಾಹಿತ್ಯ ಲೋಕದಲ್ಲಿ ಮಹಾ ಯಶಸ್ಸಂಪಾದಿಸಿದವರು. ಇಂಥ ಮಹಾಪುರುಷರ ಕಾರುಣ್ಯ ಶ್ರೀ ಚನ್ನಮಲ್ಲಿಕಾರ್ಜುನರ ಮೇಲಾಗಿ ಅವರ ಪೂರ್ವವಾಸನೆಗಳೆಲ್ಲ ತೊಲಗಿ ವೈರಾಗ್ಯಪೂರ್ಣ ಜೀವನ ಸಾಗಿಸುವಂತಾಯಿತೆಂಬುದು ಬಹುಜನಕ್ಕೆ ತಿಳಿದಿರುವ ಅಂಶವಾಗಿದೆ.

ಹಾನಗಲ್ಲು ಶ್ರೀಗಳು ಧಾರವಾಡ ಜಿಲ್ಲಾ ರಾಣೇಬೆನ್ನೂರು ತಾಲೂಕು ಜೋಯಿಸರ ಹರಳಹಳ್ಳಿ ಎಂಬ ಗ್ರಾಮದಲ್ಲಿ ಕ್ರಿ. ಶ. ೧೮೬೭ರಲ್ಲಿ ಶಿವಬಸವಯ್ಯ–ನೀಲಮ್ಮ ದಂಪತಿಗಳ ಪುತ್ರರೆನಿಸಿ ಸಂಜನಿಸಿದರು. ಆ ದಂಪತಿಗಳು 'ಮನೆನೋಡಾ ಬಡವರು ಮನನೋಡಾ ಘನ' ಎಂಬ ಶರಣವಾಣಿಯಂತೆ ಇದ್ದವರು. ತಮ್ಮ ತೇಜೋವಿಶಿಷ್ಟನಾದ ಕುಮಾರನಿಗೆ 'ಹಾಲಯ್ಯ' ಎಂದು ನಾಮಕರಣಮಾಡಿದರು. ಹಾಲಯ್ಯ ಕಡುಬಡತನದಲ್ಲಿಯೇ ಬೆಳೆದು ಪ್ರಾಥಮಿಕ ಶಿಕ್ಷಣವನ್ನು ತಮ್ಮ ಊರಿನಲ್ಲಿಯೇ ಪಡೆದು, ಕಜ್ಜರಿಯೆಂಬ ಗ್ರಾಮದಲ್ಲಿ ನಿಂತು ೭ನೆಯ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಮಾಡಿದನು. ಮುಲ್ಕಿ ಪರೀಕ್ಷೆಗಾಗಿ ಧಾರವಾಡದ ವರೆಗೆ ನಡೆದುಕೊಂಡೇ ಹೋದುದೊಂದು ಇವನ ಕಡುಬಡತನಕ್ಕೆ ದೊಡ್ಡ ಉದಾಹರಣೆಯಾಗಿದೆ. ಮುಲ್ಕೀಪರೀಕ್ಷೆಯಲ್ಲಿ ತೇರ್ಗಡೆಯೇನೂ ಆಗಲಿಲ್ಲ. ಅನಂತರ ಲಿಂಗದಹಳ್ಳಿಗೆ ಬಂದು ಅಲ್ಲಿ ಒಂದು ಶಾಲೆಯನ್ನು ತೆರೆದು ಅಧ್ಯಾಪಕ ವೃತ್ತಿಯನ್ನೂ ಕೆಲವು ದಿನ ಮಾಡಿದರು. ಬಾಲ್ಯದಿಂದಲೂ ಈ ಬಾಲಕ ಹಾಲಯ್ಯನವರ ಒಲವು ನಿಜಗುಣರ ಶಾಸ್ತ್ರಾರ್ಥ ಚಿಂತನೆಯದಾಗಿತ್ತು. ಉಪಾಧ್ಯಾಯ ವೃತ್ತಿಯ ಜೊತೆಗೆ ಲಿಂಗದಹಳ್ಳಿಯಲ್ಲಿಯೇ ಇದ್ದ ಚನ್ನಬಸವಯ್ಯ ಎಂಬುವರ ಜೊತೆಯಲ್ಲಿ ನಿಜಗುಣರ ಷಟ್‌ಶಾಸ್ತ್ರಗಳ ಚಿಂತನೆಯಲ್ಲಿ ಮೂರುವರ್ಷ ಕಾಲ ಕಳೆಯುತ್ತ ಮೂರುನೂರು ರೂಪಾಯಿ ಸಂಪಾದನೆಮಾಡಿದನು. ಹರಳಹಳ್ಳಿಯಿಂದ ತಾಯಿ ಬಂದು ಲಗ್ನ ವಿಷಯಕ ಪ್ರಸ್ತಾಪವೆತ್ತಿದಾಗ ತಾಯಿಯ ಮಡಿಲಿಗೆ ಸಂಪಾದಿಸಿದ ಮೂರುನೂರು ರೂಪಾಯಿ ಹಾಕಿ ನನಗೆ ಮದುವೆ ಬೇಡವೆಂದು ತಿಳಿಸಿ ತಾವು ತತ್ತ್ವಜ್ಞಾನ ಪಿಪಾಸುಗಳಾಗಿ ಸಂಚಾರ ಕೈಕೊಂಡರು. ನಿಜಗುಣರ ಷಟ್‌ಶಾಸ್ತ್ರಗಳನ್ನು ಸಮಗ್ರ ಅಧ್ಯಯನದ ಹಂಬಲ ಅಧಿಕವಾಗಿ ಮೊದಲು ಹುಬ್ಬಳ್ಳಿಯ ಸಿದ್ಧಾರೂಢರ

ಬಳಿಗೆ ಬಂದು ನಿಂತರು. ಆದರೆ ಅಲ್ಲಿನ ಅವಧೂತ ಮಾರ್ಗವು ಮನಸ್ಸಿಗೆ ಬಾರದೆ ಅಲ್ಲಿಂದ ಹೊರಟು ಮಹಾವಿದ್ವಾಂಸರೂ ಶಿವಯೋಗಿ ಪುಂಗವರೂ ಎನಿಸಿದ್ದ ಎಳಂದೂರು ಬಸವಲಿಂಗಸ್ವಾಮಿಗಳಲ್ಲಿಗೆ ಬಂದು ನಿಜಗುಣ ಶಿವಯೋಗಿಗಳ ಷಟ್ ಶಾಸ್ತ್ರಾಭ್ಯಾಸ ಮಾಡಿದರು. ಎಳಂದೂರು ಶ್ರೀಗಳವರು ಹಾಲಯ್ಯನವರ ಸಚ್ಛೀಲ, ಸೌಜನ್ಯ, ವೈರಾಗ್ಯಾತಿಶಯಗಳಿಗೆ ಮಾರುಹೋಗಿ ಸಂತೋಷಗೊಂಡು ಶಿವಯೋಗ ರಹಸ್ಯಗಳನ್ನೆಲ್ಲ ತಿಳಿಯಪಡಿಸಿದರು.

ಎಳಂದೂರು ಶ್ರೀಗಳವರ ಸಂಸರ್ಗಜನ್ಯ ಜ್ಞಾನದಿಂದ ಅತ್ಯಂತೋತ್ಸಾಹಭರಿತ ರಾದ ಹಾಲಯ್ಯನವರು ಕೊಳ್ಳೆಗಾಲ ಸಮೀಪದ ಚಿಲಕವಾಡಿಗೆ ಬಂದು ಅಲ್ಲಿನ ನಿಜಗುಣ ಶಿವಯೋಗಿಗಳ ತಪೋಭೂಮಿಯಾದ ಶಂಭುಲಿಂಗನ ಬೆಟ್ಟದಲ್ಲಿ ಅನೇಕ ದಿನಗಳು ಉಗ್ರವಾದ ತಪಸ್ಸನ್ನಾಚರಿಸಿ ಶುದ್ಧಿ ಸಿದ್ಧಿಗಳನ್ನು ಪಡೆದು ಆತ್ಮೋನ್ನತಿಮಾಡಿ ಕೊಂಡರು. ಕಾಳಿಕೆಗಳೆದ ಅಪರಂಜಿಯಂತೆ ಪ್ರಕಾಶಿಸುತ್ತಿದ್ದ ಹಾಲಯ್ಯನವರ ಸಚ್ಛೀಲ, ಸೌಜನ್ಯವೂ, ಆಚಾರವಿಚಾರದ ಉತ್ಕರ್ಷವೂ, ಶಿವಯೋಗಜನ್ಯ ತೇಜೋ ವಿಶೇಷ ಗಳೂ ಎಲ್ಲ ಕಡೆಗೆ ಪ್ರಕಾಶಗೊಂಡವು. ಹಾನಗಲ್ಲು ಪ್ರಾಂತದ ಭಕ್ತಕೋಟಿಯ ಅಭೀ ಪ್ಸೆಯ ಮೇರೆಗೆ ಆ ಮಠದ ಚರಿತ್ರಾರ್ಹವಾದ ಆ ಮಠದ ನಿರಾಭಾರಿ ದೇಶಿಕ ವರೇಣ್ಯ ರಾಗಿ ಕುಮಾರಸ್ವಾಮಿಗಳು ಅಥವಾ ಸದಾಶಿವಸ್ವಾಮಿಗಳು ಎಂಬ ನೂತನಾಭಿಧಾನ ದಿಂದ ಲೋಕವಿಖ್ಯಾತರಾದರು.

ಶ್ರೀ ಸದಾಶಿವಸ್ವಾಮಿಗಳು ಹಾನಗಲ್ಲು ಮಠದ ಆಧಿಪತ್ಯವನ್ನು ವಹಿಸಿದುದೇ ತಡ. ಸಮಗ್ರ ವೀರಶೈವದ ಉದ್ಧಾರ ಮಾರ್ಗಗಳನ್ನು ಹಗಲಿರುಳು ಚಿಂತಿಸುತ್ತ ಅನೇಕ ರಚನಾತ್ಮಕ ಕಾರ್ಯ ಕೈಕೊಂಡರು. ಶಿಕಾರಿಪುರ ಪ್ರಾಂತದಲ್ಲಿ ಶ್ರೀಗಳವರ ಸಂಚಾ ರವೂ ವಿಶೇಷವಾಗಿತ್ತು. ಅಲ್ಲಿ ಅವರೇ ಸ್ಥಾಪಿಸಿದ 'ಕಪನಹಳ್ಳಿ' ಆಶ್ರಮ ಪ್ರಸಿದ್ಧ ವಾಗಿದೆ. ಹೀಗೆ ಶಿಕಾರಿಪುರ ಪ್ರಾಂತ ಸಂಚಾರ ಕೈಕೊಂಡಾಗಲೇ ಸುಮಾರು ಕ್ರಿ. ಶ. ೧೯೧೮ನೆಯ ಇಸ್ವಿಯ ಸುಮಾರಿಗೆ ಶ್ರೀ ಚನ್ನಮಲ್ಲಿಕಾರ್ಜುನರು ಶಿವಯೋಗಿಗಳ ದೃಷ್ಟಿಗೆ ಬಿದ್ದರು. ಶಿವಯೋಗಿಗಳು ಶ್ರೀ ಚನ್ನಮಲ್ಲಿಕಾರ್ಜುನರ ಅಗಾಧ ವಿದ್ವತ್ತು, ಶೀಲಸ್ವಭಾವ, ಕಾರ್ಯ ನಿಷ್ಠೆಗಳೇ ಮೊದಲಾದ ಗುಣಗಳಿಗೆ ಮೆಚ್ಚಿ ಅವರ ಮೇಲೆ ತಮ್ಮ ಅಂತಃಕರಣವನ್ನು ಹರಿಸಿದರು. ಇಂಥ ಮಹಾಶಿವಯೋಗಿಗಳ ಅಂತಃಕರಣ ಪಾಕಮಾಡಿಕೊಂಡ ಚನ್ನಮಲ್ಲಿಕಾರ್ಜುನರೂ ತೇಜೋವಿಶೇಷದಿಂದ ಬೆಳಗಿದರು. ತಮ್ಮ ವೃತ್ತಿಯಲ್ಲಿ ಕೊಂಚವೂ ಲೋಪವಾಗದ ಹಾಗೆ ಹಾನಗಲ್ಲು ಶ್ರೀಗಳವರ ಸೇವೆಗೆ ಸಿದ್ಧ ರಾದ ಚನ್ನಮಲ್ಲಿಕಾರ್ಜುನರಲ್ಲಿ ಶಿವಯೋಗ ಪ್ರಕಾಶವು ಬೆಳಗತೊಡಗಿತು. ಶ್ರೀ ಶಿವ ಯೋಗಿಗಳವರ ಅಪ್ಪಣೆಯ ಮೇರೆಗೆ ಶಿವಾನುಭಾವ ಪ್ರವಚನಗಳನ್ನು ಶ್ರೀ ಚನ್ನ ಮಲ್ಲಿಕಾರ್ಜುನರು ಮಾಡತೊಡಗಿದರು. ಕೊನೆಗೆ ಶಿವಯೋಗಿಗಳಿಂದಲೇ ಅನುಗ್ರಹ ದೀಕ್ಷೆಯನ್ನು ಕೈಕೊಂಡು ಶ್ರೀಗಳವರ ಮೇಲಿನ ಭಕ್ತಿಪ್ರತೀಕವಾಗಿ ಆ ಮಹಾಸ್ವಾಮಿ ಗಳವರ ಸ್ಮಾರಕವಾಗಿ ಯಾವಜ್ಜೀವವೂ ತಮ್ಮ 'ಸದ್ಧರ್ಮ ದೀಪಿಕೆ' ಮಾಸಪತ್ರವನ್ನು ನಡೆಸಿಕೊಂಡು ಬಂದರು.

ಹಾನಗಲ್ಲು ಕುಮಾರಸ್ವಾಮಿಗಳವರ ಪ್ರಭಾವ ಮುದ್ರೆ ಅಸದೃಶವಾದುದು. ಅವರು ತಮ್ಮ ಸ್ವಾನುಭಾವ ಪ್ರಕಾಶದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರಂತಹ ಅನೇಕ ಶರಣರನ್ನು ಬೆಳಗಿಸಿದರು. ಸಮಾಜೋದ್ಧಾರದ ಅನೇಕ ಮುಖಗಳ ರಚನಾತ್ಮಕ ಕಾರ್ಯ ಗೌರವಗಳನ್ನು ತಮ್ಮ ಶುದ್ಧಿ ಸಿದ್ಧಿಗಳ ಮೂಲಕ ಯಶಸ್ವಿಗೊಳಿಸಿದರು. ಸಮಾಜೋದ್ಧಾರಕ್ಕೆ ಜನತೆಯ ಶೀಲ ಸ್ವಭಾವಗಳನ್ನು ಮೇಲಕ್ಕೆತ್ತಲಿಕ್ಕೆ ಮಠಮಾನ್ಯಗಳಲ್ಲಿನ ಸ್ವಾಮಿಗಳು ಕ್ರಿಯಾಶೀಲರೂ, ಪ್ರಜಾಧುರೀಣರೂ, ಆಚಾರಶೀಲರೂ, ಕಾಯಕ ಸದ್ಭಾವಿಗಳೂ ಆಗಿರಬೇಕೆಂಬುದನ್ನು ಅರಿತ ಶ್ರೀಗಳವರು ಅಂಥ ಮೂರ್ತಿಗಳನ್ನು ಸಿದ್ಧಪಡಿಸಲು ಒಂದು 'ಶಿವಯೋಗ ಮಂದಿರ'ವನ್ನೇ ನಿರ್ಮಾಣಮಾಡಬೇಕು. ಅಲ್ಲಿ ಶಿವಯೋಗ, ತತ್ತ್ವಜ್ಞಾನ, ಕಾಯಕ ಸದ್ಭಾವಾದಿ ವಿಶಿಷ್ಟ ರೀತಿಯ ಶಿಕ್ಷಣ ಕೊಡಬೇಕೆಂದು ಬಾದಾಮಿಯ ಸಮೀಪದ ಮಲಪ್ರಹರಿಣೀ ನದೀತೀರದಲ್ಲಿ ೧೯೦೯ ನೆಯ ಇಸ್ವಿಯಲ್ಲಿ ಒಂದು ಮಹಾಸಂಸ್ಥೆ ಕಟ್ಟಿದರು. ಆಗಿನ ವೀರಶೈವ ಸಮಾಜ ಕುಮಾರಸ್ವಾಮಿಗಳವರ ಈ ಯೋಚನೆ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ವಿಶೇಷವಾಗಿ ಶ್ರಮಿಸಿ ಶ್ರೀಗಳವರ ಕನಸನ್ನು ನನಸನ್ನಾಗಿ ಮಾಡಿತು. ಇಂದಿಗೂ ಶಿವಯೋಗ ಮಂದಿರ ಕುಮಾರಸ್ವಾಮಿಗಳವರ ಸಂಕಲ್ಪವನ್ನು ಈಡೇರಿಸಿಕೊಂಡು ಬರುತ್ತಿರುವುದನ್ನು ನೋಡಬಹುದು.

ವೀರಶೈವ ಸಮಾಜವನ್ನು ಒಂದುಗೂಡಿಸುವ ರಚನಾತ್ಮಕವಾಗಿ ಸಾಮಾಜಿಕೋದ್ಧಾರ ಮಾರ್ಗಗಳನ್ನು ಕಂಡುಹಿಡಿಯಬೇಕು. ಧರ್ಮ, ಕಲೆ, ಸಾಹಿತ್ಯ, ಸಂಸ್ಕೃತಿ ಸಂಸ್ಕಾರಗಳನ್ನು ಅನೇಕ ಮುಖಗಳಲ್ಲಿ ಅಭಿವೃದ್ಧಿಗೊಳಿಸಬೇಕೆಂದು ಯೋಚಿಸಿ ೧೯೦೩-೧೯೦೪ ನೆಯ ಇಸ್ವಿಯಲ್ಲಿ ವೀರಶೈವ ಮಹಾಸಭೆಯೆಂಬ ಸಂಸ್ಥೆಯನ್ನು ಕಟ್ಟಿದ ಕೀರ್ತಿ ಯಾರು ಏನೇ ಹೇಳಿದರೂ ಅದು ಹಾನಗಲ್ಲು ಕುಮಾರಸ್ವಾಮಿಗಳಿಗೇ ಸಲ್ಲಬೇಕು.

ಇಂಥ ಮಹಾಶಿವಯೋಗಿಗಳು ಸಮಾಜದ ಸರ್ವತೋಮುಖ ಅಭಿವೃದ್ಧಿ ಕಾರ್ಯಗಳನ್ನೆಸಗಿ ಸಮಾಜದ ಅಪಾರ ಭಕ್ತಿ ಪ್ರೇಮಗಳನ್ನು ಗಳಿಸಿ ೧೯೩೦ ರಲ್ಲಿ ಶಿವಯೋಗ ಮಂದಿರದಲ್ಲಿ ಲಿಂಗೈಕ್ಯರಾದರು. ಇವರು ಬೆಳಗಿದ ಅನೇಕ ಮಹಿಮಾಪುರುಷರಲ್ಲಿ ನಮ್ಮ ಸದ್ಧರ್ಮದೀಪಿಕೆ ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನ ಶರಣರೂ ಒಬ್ಬರು; ಶ್ರೇಷ್ಠರು.

# ಸಂದೇಶಗಳು

ಶಿವಯೋಗಮಂದಿರ
೪-೧೨-೧೯೭೩

## ಶ್ರೀಮನ್ನಿರಂಜನ ಪ್ರ. ಸ್ವ. ಸದಾಶಿವಸ್ವಾಮಿಗಳು

ಹಾನಗಲ್ಲು ಜಡೇಸಂಸ್ಥಾನಮಠ, ಶಿವಯೋಗಮಂದಿರ

ವೀರಶೈವ ಸಮಾಜವು ಹೀನಾವಸ್ಥೆಗೆ ಬಂದ ಸಮಯದಲ್ಲಿ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಹಾನಗಲ್ಲು ಶ್ರೀ ಕುಮಾರ ಯತಿಪುಂಗವರು ಸಮಾಜದ ಉದ್ಧಾರಕ್ಕಾಗಿಯೇ ಅವತರಿಸಿದರು. ಅದರಂತೆ ತಮ್ಮ ಜೀವಿತಕಾಲದಲ್ಲಿ ಎಷ್ಟೋ ಸಮಾಜ ಕಾರ್ಯಗಳನ್ನು ಮಾಡಿದರು. ಅವುಗಳಲ್ಲಿ ಮುಖ್ಯವಾಗಿ ಮಠಗಳು ಉನ್ನತಿಯಾಗಿ ತದ್ವಾರ ಸಮಾಜವು ಉದ್ಧಾರವಾಗಬೇಕೆಂಬ ಮಹೋದ್ದೇಶದಿಂದ ಪವಿತ್ರವಾದ 'ಶಿವ ಯೋಗ ಮಂದಿರ'ವೆಂಬ ಯೋಗಾಶ್ರಮವನ್ನು ಸ್ಥಾಪಿಸಿದ್ದು ಸರ್ವಶ್ರುತವಾಗಿದೆ. ಇದೊಂದು ಸಂಸ್ಥೆಯಲ್ಲದೆ ಅಲ್ಲಲ್ಲಿ ಯೋಗಾಶ್ರಮಗಳು ಆಗಬೇಕೆಂಬ ವಿಶಾಲ ಭಾವನೆಯಿಂದ ಶಿವಮೊಗ್ಗ ಜಿಲ್ಲಾ ಶಿಕಾರಿಪುರಕ್ಕೆ ಸಮೀಪದಲ್ಲಿ ಶಿವಯೋಗಾಶ್ರಮವೆಂಬ ಮತ್ತೊಂದು ಸಂಸ್ಥೆಯನ್ನು ಸ್ಥಾಪಿಸಿದರು. ಅಲ್ಲಿಯೂ ಕೆಲವು ಸಾಧಕರು ಶಿವಯೋಗವನ್ನಾಚರಿಸುತ್ತಲಿದ್ದಾರೆ. ಈ ಆಶ್ರಮ ಸಂಬಂಧವಾಗಿ ಪೂಜ್ಯರು ಅಲ್ಲಿಗೆ ದಯಮಾಡಿಸಿದಾಗ ಶಿರಾಳಕೊಪ್ಪದ ಶ್ರೀ ಚನ್ನಮಲ್ಲಿಕಾರ್ಜುನರು ಶಿವಯೋಗಿಗಳ ದರ್ಶನ ಲಾಭ ಮಾಡಿಕೊಂಡರು. ಇದು ಕ್ರಿ.ಶ. ೧೯೧೮ ನೆಯ ಇಸ್ವಿಯಲ್ಲಿ ನಡೆದ ಘಟನೆ. ಶ್ರೀಗಳವರು ಅವರಲ್ಲಿನ ಬುದ್ಧಿವಂತಿಕೆ ಮತ್ತು ಸಾತ್ವಿಕ ಭಕ್ತಿಗಳಿಗೆ ಮೆಚ್ಚಿಕೊಂಡರು. ಅವರಿಗೆ ಇಂಥ ಸುಶೀಲರೂ, ಆಧ್ಯಾತ್ಮ ಸಂಪನ್ನರೂ,ಭಕ್ತಿಜೀವನ ನಡೆಸುವವರೂ ಇಂಥವರನ್ನು ಕಂಡರೆ ಬಹಳ ಹರ್ಷವಾಗುತ್ತಿತ್ತು. ಏಕೆಂದರೆ ಇಂಥವರಿಂದಲೇ ಸಮಾಜಕಲ್ಯಾಣ ಕಾರ್ಯವಾಗುತ್ತದೆಂದು ನಂಬಿದ್ದರು. ಶ್ರೀಗಳವರಲ್ಲಿ ತಮ್ಮ ಹತ್ತಿರಕ್ಕೆ ಬಂದ ವ್ಯಕ್ತಿಯಲ್ಲಿ ಯಾವ ಶಕ್ತಿ ಅಡಗಿದೆಯೆಂಬುದನ್ನು ಕಂಡುಹಿಡಿಯುವ ಶಕ್ತಿಯಿತ್ತು. ಅವರನ್ನು ಅನುಗ್ರಹಿಸಿ ಅವರಿಗೆ ಯೋಗ್ಯವಾದ ಸಾಮಾಜಿಕೋದ್ಧಾರ ಕಾರ್ಯದಲ್ಲಿ ನಿಯೋಜಿಸುವ ಸಂವಿಧಾನ ಕೌಶಲವಿತ್ತು. ಅಂತೆಯೇ ಶ್ರೀ ಚನ್ನಮಲ್ಲಿಕಾರ್ಜುನರನ್ನು ಬಿಡದೆ ಕರೆದು ಕೊಂಡು ಹೋದರು. ಶ್ರೀ ಚನ್ನಮಲ್ಲಿಕಾರ್ಜುನರೂ ಶ್ರೀಗಳವರ ಅದ್ಭುತ ಅನುಗ್ರಹ ಶಕ್ತಿಗೆ ಮಾರುಹೋಗಿ ತಮ್ಮ ಶಾಲಾಧ್ಯಾಪಕ ವೃತ್ತಿಯ ಮತ್ತು ಆಸ್ತಿಪಾಸ್ತಿಗಳ ಮೋಹವನ್ನು ತೊರೆದರು. ಅವರ ಸನ್ನಿಧಾನವನ್ನು ಸೇರಿ ಶಿವಾನುಭವ ಪಡೆಯುವ ಮತ್ತು ಗ್ರಂಥಸಂಗ್ರಹ ಶೋಧನೆಮಾಡುವ ಕಾಯಕ ನಿರತರಾದರು. ಎಂಟುನೂರು ವರ್ಷಗಳ ಪೂರ್ವದಲ್ಲಿ ಶ್ರೀ ಬಸವಣ್ಣನವರು ಅಮರವಾದ ಅನುಭವ ಮಂಟಪವನ್ನು

ರಚಿಸಿ, ವಿಶಾಲವಾದ ವೀರಶೈವ ತತ್ತ್ವವನ್ನು ಪ್ರಚಾರಮಾಡಿ ವೀರಶೈವ ಧರ್ಮೋದ್ಧಾರ ಮಾಡಿದರು. ಅವರ ಹಾಗೆಯೇ ಹಾನಗಲ್ಲು ಶ್ರೀಗಳವರು ಇಪ್ಪತ್ತನೆಯ ಶತಮಾನದಲ್ಲಿ ವೀರಶೈವ ತತ್ತ್ವದ ಶಿವಾನುಭಾವವನ್ನು ಸಮಾಜಕ್ಕೆ ಬೋಧಿಸಿ ವೀರಶೈವವನ್ನು ಪುನರುದ್ಧಾರಗೊಳಿಸಿದರು. ಶ್ರೀ ಚನ್ನಮಲ್ಲಿಕಾರ್ಜುನರು ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾಗಿ ತಚ್ಛಿಷ್ಯರಾದರು. ಕೆಲದಿನಗಳ ಮೇಲೆ ಶಿವಯೋಗ ಮಂದಿರದಲ್ಲಿ ಅವರಿಂದಲೇ ಅನುಗ್ರಹಹೊಂದಿದರು. ಚನ್ನಮಲ್ಲಿಕಾರ್ಜುನರಲ್ಲಿ ಹುದುಗಿರುವ ಅದ್ಭುತಶಕ್ತಿಯನ್ನು ಕಂಡು ಇವರ ಮೂಲಕ ಒಂದು ಮಾಸಪತ್ರಿಕೆಯನ್ನು ಹೊರಡಿಸಬೇಕೆಂದು ಶ್ರೀಗಳವರಿಗೆ ಇಚ್ಛೆಯಾಗಿತ್ತು. ಶ್ರೀಗಳವರ ಈ ಸಂಕಲ್ಪ ಹುಸಿಯಾಗಲಿಲ್ಲ. ಮುಂದೆ ೧೯೩೧-೩೨ ನೆಯ ಇಸ್ವಿಯ ಹೊತ್ತಿಗೆ ಶಿವಯೋಗಮಂದಿರದ ಒಡೆತನದ 'ಶಿವಲಿಂಗ ವಿಜಯ ಮುದ್ರಣಾಲಯ' ಎಂಬ ಮುದ್ರಣಾಲಯದಿಂದ 'ಸದ್ಧರ್ಮದೀಪಿಕೆ' ಎಂಬ ಮಾಸಪತ್ರವನ್ನು ಹಾವೇರಿಯಿಂದ ಶ್ರೀ ಚನ್ನಮಲ್ಲಿಕಾರ್ಜುನರು ಹೊರಡಿಸಿ ತನ್ಮೂಲಕ ಅಪಾರ ಸೇವೆಯನ್ನು ಸಮಾಜಕ್ಕೂ ನಾಡಿಗೂ ಸಲ್ಲಿಸಿದರು. ಅವರ ಪತ್ರಿಕಾ ಜೀವನದ ಕಾರ್ಯ ಪ್ರಶಂಸನೀಯವಾಗಿತ್ತು. ಪತ್ರಿಕೆಯ ಜೊತೆಗೆ ಅನೇಕ ಮಹತ್ವದ ಗ್ರಂಥ ಶೋಧನೆಮಾಡಿ ಪ್ರಕಟಿಸಿ ವೀರಶೈವ ಸಾಹಿತ್ಯ ಸಂಸ್ಕೃತಿಗಳ ಉದ್ಧಾರದ ಮಹಾಕಾರ್ಯದಲ್ಲಿ ಇವರ ಆಯುಷ್ಯವೆಲ್ಲ ಸವೆಯಿತು. ಮುಂದೆ ಶ್ರೀ ಚನ್ನಮಲ್ಲಿಕಾರ್ಜುನರು ಶಿವಯೋಗ ಮಂದಿರದಲ್ಲಿಯೇ ಇದ್ದು ಸದ್ಧರ್ಮ ದೀಪಿಕೆಯನ್ನು ಹೊರಡಿಸಬೇಕೆಂದು ನಾವು ಸೂಚಿಸಿದೆವು. ಅದಕ್ಕೆ ಅವರು ಶಿವಯೋಗಮಂದಿರದ ಟ್ರಸ್ಟ ಕಮಿಟಿಯ ಅಧೀನದಲ್ಲಿ ಪತ್ರಿಕೆ ಹೊರಡಿಸಲು ಒಪ್ಪದೆ ಮೈಸೂರಿಗೆ ಹೋಗಿ ಸ್ವಶಕ್ತಿಯಿಂದಲೇ ಒಂದು ಪ್ರೆಸ್ಸನ್ನು ಮಾಡಿ ಅಲ್ಲಿಂದಲೇ ಆ ಪತ್ರಿಕೆಯನ್ನು ಹೊರಡಿಸಲು ಪ್ರಾರಂಭಿಸಿದರು. ಜೊತೆಗೆ ಅನೇಕ ಮಹತ್ವದ ಗ್ರಂಥಗಳನ್ನು ಪ್ರಕಟಿಸಿದರು. ಕೊನೆಯವರೆಗೂ ಅವರು ತಮ್ಮನ್ನನುಗ್ರಹಿಸಿದ ಪರಮ ತಪಸ್ವಿಗಳಾದ ಹಾನಗಲ್ಲು ಶ್ರೀ ಕುಮಾರಸ್ವಾಮಿಗಳವರ ಸ್ಮಾರಕವಾಗಿಯೇ ಪತ್ರಿಕೆಯನ್ನು ಹೊರಡಿಸಿಕೊಂಡು ಬಂದುದು ಅವರ ದೃಢ ಸಂಕಲ್ಪ, ಗುರುಗಳ ಆಜ್ಞಾಪಾಲನಗಳಿಗೊಂದು ಉತ್ತಮ ನಿದರ್ಶನ. ಅವರಮ ಸದಾ ಸಮಾಜೋದ್ಧಾರದ ಚಿಂತನೆಯೇ ಆಗಿತ್ತು. ಕೊನೆಗೆ ತಮ್ಮ ಸರ್ವಸ್ವವನ್ನು ಸಮಾಜಕ್ಕೆ ಅರ್ಪಿಸಿ ಲಿಂಗೈಕ್ಯರಾದರು. ಸಮಾಜ ಮೂರ್ತಿಯಾದ ಲಿಂಗೈಕ್ಯ ಶ್ರೀ ಚನ್ನಮಲ್ಲಿಕಾರ್ಜುನರ ಸಂಸ್ಮರಣ ಗ್ರಂಥ ಪ್ರಕಟನೆಯ ಕಾರ್ಯವನ್ನು ಸಮಿತಿಯವರು ಕೈಕೊಂಡಿದ್ದು ಯೋಗ್ಯವೂ ಸ್ತುತ್ಯವೂ ಆದುದಾಗಿದೆ.

ಇತ್ಯಾಶಿಷಃ

ಶುಭಂ ಭವತು

* * * *

ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು
ಶ್ರೀಗುರು ಮೃತ್ಯುಂಜಯಮಹಾಸ್ವಾಮಿಗಳು
ಮುರುಘಾಮಠ ಧಾರವಾಡ

ಮೃತ್ಯುಂಜಯನಗರ
ಧಾರವಾಡ-೬
೨೦-೧೨-೮೩

'ನೋಡುವುದ ನೋಡಲರಿಯದೆ ಕೆಟ್ಟಿತ್ತು ಲೋಕವೆಲ್ಲ;
ನೋಡುವುದ ನೋಡಬಲ್ಲರೆ ಕೂಡಲಿಲ್ಲ; ಅಗಲಿಲ್ಲ.
ನೋಟದ ಕೂಟದ ಅಗಲದ ಸುಖವನು ಗುಹೇಶ್ವರಾ
ನಿಮ್ಮ ಶರಣಬಲ್ಲ.'

ಶಿವಭಕ್ತರು-ಶಿವಶರಣರು ಜೀವನಯಾತ್ರೆಯನ್ನು ಹೇಗೆ ಸಾಧಿಸಬೇಕೆಂಬ ಬಗೆಗೆ ಭಕ್ತಿ ಜ್ಞಾನ ವಿರತಿಗಳ ಅಕ್ಷಯ ನಿಧಿಯಾದ ಶ್ರೀ ಅಲ್ಲಮ ಪ್ರಭುದೇವರು ಅನುಭವದ ನುಡಿಯನ್ನು ಕರುಣೆಯಿಂದ ಜ್ಯೋತಿರ್ಲಿಂಗವಾಗಿ ಪ್ರಕಟಿಸಿದ್ದಾರೆ. 'ಮರ್ತ್ಯಲೋಕವು ಹಾಳಾಗಬಾರದೆಂದು ಕರ್ತನಟ್ಟಿದನೊಬ್ಬ ಶರಣನ' ಎಂದು ಬಸವ ಮಹಾನುಭಾವನ ಬಗೆಗೂ ಅನುಭವದ ನುಡಿ ಹೊರಹೊಮ್ಮಿದೆ. ಪ್ರಭುವಿನ, ಬಸವಾದಿ ಪ್ರಮಥರ ಬಳಿವಿಡಿದು ಶಿವಯೋಗಿಗಳೂ, ಶಿವಶರಣರೂ, ಸಕಲ ಜೀವಾತ್ಮರ ಲೇಸಿಗಾಗಿ. ಅನಿಮಿತ್ತ ಬಾಂಧವರಾಗಿ, ತಮ್ಮ ಲಿಂಗಮಯ ನಡೆನುಡಿಗಳಿಂದ ಅಸದೃಶ ಬೋಧೆಯಿಂದ ಲಿಂಗವಂತರ ದಿವ್ಯ ಶಿವಾದ್ವೈತ ಪಥವನ್ನು ಹಸನುಮಾಡಿ, ದೇದೀಪ್ಯವನ್ನಾಗಿ ಮಾಡಿದ್ದಾರೆ. ಈ ದಿವ್ಯಮಾರ್ಗದಲ್ಲಿ ನಡೆದವರನೇಕರು ಭೋಗಮೋಕ್ಷಗಳನ್ನು ಪಡೆದು ನಿತ್ಯ ಸುಖಿಗಳಾಗುತ್ತಿದ್ದಾರೆ. ಅಂಥವರಲ್ಲಿ ಶಿರಾಳಕೊಪ್ಪದ ಕೋರಿ ಚನ್ನಮಲ್ಲಪ್ಪನವರೊಬ್ಬರು. ಅವರು ಎಲೆಯ ಮರೆಯ ಹಣ್ಣಿನಂತಿದ್ದು ತಮ್ಮ ದಿವ್ಯ ಶರಣ ಜೀವನವನ್ನು ಬೆಳಗಿದರು. ಅವರ ಸಾರ್ಥಕ ಜೀವಿತದ ಸಮಗ್ರ ವಿಷಯಗಳನ್ನೊಳಗೊಂಡ ಒಂದು ಸಂಸ್ಮರಣ ಗ್ರಂಥವನ್ನು ಹೊರಡಿಸುವ ನಿಮ್ಮ ಗ್ರಂಥ ಸಂಪಾದನಾ ಸಮಿತಿಯ ಕಾರ್ಯ ಸಮುಚಿತವೂ ಸಮಯೋಚಿತವೂ ಆಗಿದೆ.

ಶ್ರೀ ಚನ್ನಮಲ್ಲಪ್ಪನವರು ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದ ಶ್ರೀ ಕೋರಿಯವರ ಮನೆತನದಲ್ಲಿ ಜನ್ಮವೆತ್ತಿ ಪೂರ್ವಜನ್ಮ ಸುಕೃತದಿಂದ ಸನ್ಮಾರ್ಗಗಾಮಿಗಳಾದರು. ಕನ್ನಡ ಸಂಸ್ಕೃತ ಭಾಷೆಯಲ್ಲಿ ಪ್ರಭುತ್ವ ಸಂಪಾದಿಸಿದ ಅವರಿಗೆ ಇಂಗ್ಲೀಷ್ ಭಾಷಾ ಜ್ಞಾನವೂ ಆಗಿತ್ತು. ಉಪಾಧ್ಯಾಯರಾಗಿ ಶಿಕ್ಷಣ ಕ್ಷೇತ್ರದಲ್ಲಿ ಸೇವೆಸಲ್ಲಿಸಿದರು. ಅವರ ಉಜ್ವಲ ಶಕ್ತಿಗೆ ಆ ಉಪಾಧ್ಯಾಯ ಕ್ಷೇತ್ರ ಸಣ್ಣದೆನಿಸಿತು. ಮುದ್ರಣಾಲಯವನ್ನು ರಚಿಸಿಕೊಂಡು 'ಸದ್ಧರ್ಮ ದೀಪಿಕೆ'ಯೆಂಬ ಮಾಸಪತ್ರಿಕೆಯನ್ನು ಹೊರಡಿಸಿ ತಮ್ಮ ಜೀವಿತದ ಕೊನೆಯವರೆಗೂ ಧರ್ಮ, ತತ್ತ್ವ, ನೀತಿ, ಸಾಹಿತ್ಯ, ಸಂಸ್ಕೃತಿಗಳ ಪ್ರಚಾರ ಮಾಡಿದರು. ತಾಡವೋಲೆ ಗ್ರಂಥಗಳನ್ನು ಶಿಲಾಶಾಸನಗಳನ್ನು ಸಂಶೋಧಿಸಿ ಪ್ರಕಟಿಸಿದರು. ಶಿವಶರಣರು ಮತ್ತು ಶರಣೆಯರುಗಳ ಅತ್ಯಮೌಲ್ಯವಾದ ಸಾಹಿತ್ಯವನ್ನು ಚಿಕ್ಕ ಚಿಕ್ಕ ಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಿ ಪ್ರಚಾರಮಾಡಿದರು. ಅಲ್ಲದೆ ದೊಡ್ಡ ಗ್ರಂಥಗಳೂ ಅವರಿಂದ ರಚಿತವಾಗಿವೆ.

'ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಭವದ ಕೇಡು ನೋಡಯ್ಯ' ಶಿವಶರಣರ ಸಂಗ ಹಾಗು ಅವರ ಅನುಭಾವದಿಂದ ಜನನಮರಣಗಳು ಇಲ್ಲದಂತಾಗುತ್ತ ವೆಂದೂ, 'ಅರಿದಡೆ ಶರಣ ಮರೆದಡೆ ಮಾನವ ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಯ್ಯನ' ಎಂಬ ಶಿವಶರಣರ ಪ್ರಸಾದ ವಾಣಿಯಲ್ಲಿ ಸದ್ಬುದ್ಧಿಯನ್ನಿರಿಸಿ, ಶ್ರೀ ಚನ್ನ ಮಲ್ಲಪ್ಪನವರು ಅನಂತಪುರದ ಶ್ರೀ ಲಿಂಗಸ್ವಾಮಿಗಳು, ಗುತ್ತಲದ ಶ್ರೀ ರುದ್ರಸ್ವಾಮಿ ಗಳು, ಹಾನಗಲ್ಲು ಕುಮಾರಸ್ವಾಮಿಗಳು, ಕೆಳದಿ ರೇವಣಸಿದ್ಧ ಪಟ್ಟಾಧ್ಯಕ್ಷರು, ಗೊಗ್ಗಿ ಹಳ್ಳಿ ಶಾಸ್ತ್ರಿಗಳೇ ಮೊದಲಾದವರನ್ನು ಕೂಡಿಕೊಂಡು ಶಿವಾನುಭವಿ ಕಬ್ಬೂರು ಶರಣ ರಾದ ಲಿಂಗಪ್ಪನವರಲ್ಲಿ ಮೇಲಿಂದ ಮೇಲೆ ಶಿವಾನುಭವಗೋಷ್ಠಿಗಳನ್ನು ನಡೆಸುತ್ತಿದ್ದರು. ಅನುಗ್ರಹಸ್ಥರ ಹೊರತು ಆ ಪ್ರಸಂಗಗಳಲ್ಲಿ ಯಾರಿಗೂ ಪ್ರವೇಶವಿರುತ್ತಿರಲಿಲ್ಲ. ಇವರ ಪಾಂಡಿತ್ಯ ಹಾಗು ಅನುಭವಗಳ ಉಪಯೋಗವು ಸಮಾಜದಲ್ಲಿಯ ಸರ್ವರಿಗೂ ಆಗ ಲೆಂದು ಬೈಲುಹೊಂಗಲ ಮೊದಲಾದ ಕಡೆಗಳಲ್ಲಿ ಅವರಿಂದ ಶಿವಾನುಭಾವ ಪ್ರವಚನ ವನ್ನು ನಮ್ಮ ಪರಮ ಪೂಜ್ಯ ಮೃತ್ಯುಂಜಯಪ್ಪಗಳು ನಡೆಸುತ್ತಿದ್ದರು. ಅಖಿಲ ಭಾರತ ಶಿವಾನುಭಾವ ಬೋಧಕ ತರಬೇತಿ ವರ್ಗವು ಚಿತ್ರದುರ್ಗದ ಬೃಹನ್ಮಠಾಶ್ರಯ ದಲ್ಲಿ ನಡೆದಾಗ ಪೂಜ್ಯ ಶ್ರೀ ಅಪ್ಪಗಳ ಆದೇಶದಂತೆ ಇವರು ಪ್ರಾಧ್ಯಾಪಕರಾಗಿ ಬಂದು ಶಿವಾನುಭಾವ ಪಾಠ ಹೇಳುವ ಸೇವೆ ಸಲ್ಲಿಸಿದರು.

ಕೊನೆಗೆ ಮೈಸೂರಿನಲ್ಲಿ ಸೇರಿ ಸ್ವತಂತ್ರ ಮುದ್ರಣಾಲಯವನ್ನು ಮಾಡಿ ವೀರಶೈವ ಸಾಹಿತ್ಯ, ಸಂಶೋಧನ ಕಾರ್ಯದಲ್ಲಿ ಮಗ್ನರಾದರು. ಕಾರ್ಯನಿಮಿತ್ತವಾಗಿ ಶಿರಾಳಕೊಪ್ಪಕ್ಕೆ ಹೋದಾಗ ಅನಾರೋಗ್ಯದಿಂದ ಶಿವನಿಚ್ಛೆಯಂತೆ ಅಲ್ಲಿಯೇ ಲಿಂಗೈಕ್ಯರಾದರು. ತಾವಿರು ವಾಗಲೇ ತಮ್ಮದೊಂದು ಮನೆಯನ್ನು ಅಲ್ಲಿಯ ಪ್ರಸಾದ ನಿಲಯಕ್ಕೆ ಸಲ್ಲಿಸಿದ್ದರು. ಗುರುಲಿಂಗ ಜಂಗಮರಲ್ಲಿ ಅವರಿಗೆ ಅಪಾರ ನಿಷ್ಠೆ. ಪರಶಿವನು ತಮಗೆ ಕರುಣಿಸಿದ ಬುದ್ಧಿಶಕ್ತಿ, ಪಾಂಡಿತ್ಯ, ಅನುಭವಗಳನ್ನು ಸಮಾಜಕ್ಕೆ ನಾನಾಮುಖವಾಗಿ ನೀಡಿ ಕೃತಾರ್ಥರಾದರು; ಜನ್ಮ ಸಾಫಲ್ಯ ಮಾಡಿಕೊಂಡರು. ಸರ್ವರೂ ಸಹಜ ಶುದ್ಧ ಶರಣ ಮಾರ್ಗದಲ್ಲಿ ನಡೆದು ನಿತ್ಯ ಸುಖಿಗಳಾಗಲಿ, ಸರ್ವರಿಗೂ ಮಂಗಳವಾಗಲಿ.

ಇತಿ ಮಂಗಲಾಶೀರ್ವಾದಗಳು.

* * * *

**ಶ್ರೀ ಮ. ನಿ. ಪ್ರ. ಚನ್ನವೀರಸ್ವಾಮಿಗಳು** ಮೂಡಿ

ಮೂಡಿ ಮತ್ತು ಬನವಾಸಿಮಠ, ಮೂಡಿ ೧೬-೧೧-೧೯೭೩

ಲಿಂಗೈಕ್ಯ ಶ್ರೀ ಕೋರಿ ಚನ್ನಮಲ್ಲಪ್ಪನವರು ನಮಗೆ ತುಂಬಾ ಪರಿಚಿತರು. ನಾವು ಬರೆದ ಭಾಮಿನಿ ಷಟ್ಪದಿಯ ಶ್ರೀ ಅನ್ನದಾನೀಶ್ವರ ಬೋಧಾಶತಕಕ್ಕೆ ಮುನ್ನುಡಿ ಬರೆದು ಅದನ್ನು ಮುದ್ರಿಸಿ ಪ್ರಕಟಪಡಿಸಿದ್ದಾರೆ. ಅವರು ನಿಜವಾದ ಶಿವಾನುಭಾವಿಗಳು. ಚಿಕ್ಕಕಬ್ಬೂರು ಶರಣರಲ್ಲಿಗೆ ಗುತ್ತಲ ಅಗಡಿಮಠದ ಶ್ರೀ ನಿ. ಪ್ರ. ರುದ್ರಸ್ವಾಮಿಗಳು ಹಾಗು ಹಾನಗಲ್ಲು ಶ್ರೀ ಕುಮಾರ ಶಿವಯೋಗಿಗಳವರೊಡನೆ ಶಿವಾನುಭಾವದ ಗಹನ ವಿಷಯಗಳನ್ನು ಚರ್ಚಿಸಲು ಮೇಲಿಂದಮೇಲೆ ಹೋಗುತ್ತಿದ್ದರೆಂದು ಅವರೇ ನಮಗೆ

ತಿಳಿಸಿದ್ದರಲ್ಲದೆ ಕ್ರಿ. ಶ. ೧೯೫೫ ರಲ್ಲಿ ನಾವು ಮೂಡಿ ಗ್ರಾಮದ ನದಿಯ ದಂಡೆಯ ಮೇಲಿರುವ ಬಿಲ್ವ ವನದಲ್ಲಿ ಅನುಷ್ಠಾನ ಮಾಡುವ ಕಾಲಕ್ಕೆ ಅವರು ಬಂದು ತಾವು ತಿಳಿದುಕೊಂಡ ಶಿವಮಂತ್ರ ಜಪಾನುಷ್ಠಾನ ವಿಧಾನವನ್ನು ತಿಳಿಸುವುದರ ಜೊತೆಗೆ ಶಿವ ದ್ವಾರಶಾಕ್ಷರ ಮಹಾಮಂತ್ರವನ್ನು ಹೇಗೆ ಜಪಿಸಬೇಕು ಮತ್ತು ಆ ಮಂತ್ರದ ಋಷಿ, ಛಂದಸ್ಸು, ಅಧಿದೇವತಾ ಶಕ್ತಿಕೀಲಕಗಳನ್ನು ತಿಳಿಸಿ ಮಾರ್ಗದರ್ಶನ ಮಾಡಿದ ಮಹಾನುಭಾವಿಗಳು. ಷಣ್ಮುದ್ರೆಗಳಲ್ಲದೆ ವೀರಶೈವ ಸಿದ್ಧಾಂತದ ತಿರುಳಾದ ಮೂವತ್ತೆರಡು ಉದ್ಧರಣೆಗಳನ್ನು ಚೆನ್ನಾಗಿ ತಿಳಿದುಕೊಂಡವರಾಗಿದ್ದರು. ಶಿವಾನುಭವದ ಜಟಿಲ ಮತ್ತು ಗಹನವಾದ ವಿಷಯಗಳ ಮೇಲೆ ಚರ್ಚಿಸುವುದೆಂದರೆ ಎತ್ತಿದ ಕೈ ಅವರದು. ೧೯೫೮ ರಲ್ಲಿ ನಮ್ಮ ಪಟ್ಟಾಭಿಷೇಕ ಕಾಲಕ್ಕೆ ಇಲ್ಲೇ ಇದ್ದು, ಮಂತ್ರಗೋಪ್ಯ, ಕರಣದ ಹಸಿಗೆ ಮತ್ತು ಶಿವಾನುಭವ ಸೂತ್ರಗಳನ್ನು ಸರಿಯಾದ ರೀತಿಯಿಂದ ಅನುಭಾವ ಮಾಡಿದರು. ಅಲ್ಲದೆ ಅದರಂತೆಯೇ ತಮ್ಮ ನಡೆಗಳಲ್ಲಿ ಅಳವಡಿಸಿಕೊಂಡವರು.

ಅವರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ ಸದ್ಧರ್ಮದೀಪಿಕೆಯೆಂಬ ಮಾಸಪತ್ರಿಕೆಯಲ್ಲಿ ವೀರಶೈವ ಸಿದ್ಧಾಂತದ ಎಷ್ಟೋ ವಿಷಯಗಳು ಪ್ರಕಟಗೊಂಡವು. ಹಾಲಕೆರೆ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳವರಲ್ಲಿ ನಾವಿದ್ದಾಗ ಇವರ ಪತ್ರಿಕೆಯಲ್ಲಿ ಪ್ರಕಟವಾದ ಶ್ರೀ ರೇವಣಸಿದ್ಧೇಶ್ವರರ ಭಸ್ಮಧಾರಣ ಮಂತ್ರವೆಂಬುದು ಇವುಗಳಲ್ಲೊಂದು. ಆ ಮಂತ್ರವನ್ನು ಹಾಲಕೆರೆ ಪರಮಪೂಜ್ಯ ಗುರುಗಳು ಇಂದಿಗೂ ತಮ್ಮ ನಿತ್ಯ ಭಸ್ಮಧಾರಣ ಮಂತ್ರವನ್ನಾಗಿ ಗ್ರಹಿಸಿದ್ದಾರೆ. ಅವರ ಮುಖೇನವೂ ಕೂಡ ಇಂದಿಗೂ ಆ ಮಂತ್ರವನ್ನು ಭಸ್ಮಧಾರಣಕ್ಕೆ ಉಪಯೋಗಿಸುತ್ತೇವೆ. ಆ ಮಂತ್ರದ ಪುನಶ್ಚರಣೆಯಿಂದ ಅಘಟಿತಘಟನಾಸಾಮರ್ಥ್ಯ ದೊರಕುವುದೆಂಬುದು ನಮ್ಮ ಅನುಭವ. ಇಂಥ ಅನೇಕ ವಿಚಾರಗಳನ್ನು ನಾವು ಕಂಡಂತೆ ಮುಚ್ಚಿಡದೆ ತೆರೆದ ಹೃದಯದಿಂದ ಹೇಳುವ ಹಾಗು ತಿಳಿಸುವ ಸ್ವಭಾವ ಅವರದು. ಇಂಥ ವೀರಶೈವ ಧರ್ಮದ ಆಸ್ತಿಯೆನಿಸಿದ್ದ ಲಿಂ. ಶ್ರೀ ಚನ್ನಮಲ್ಲಿಕಾರ್ಜುನರ ಸ್ಮಾರಕ ಗ್ರಂಥ ಹೊರಡಿಸುವುದೊಂದು ಭಾಗ್ಯವೇ ಸರಿ. ಈಗಿನ ವಿಜ್ಞಾನ ಯುಗದಲ್ಲಿ ವೈಜ್ಞಾನಿಕ ರೀತಿಯಾಗಿ ತತ್ತ್ವಾನ್ವೇಷಕರು, ತತ್ತ್ವವೇತ್ತರು ದುರ್ಲಭವೆನಿಸಿರುವಾಗ ತತ್ತ್ವಾಚರಣೆಯನ್ನು ತಮ್ಮ ಉಸಿರಾಗಿರಿಸಿಕೊಂಡವರ ಪರಿಚಯವನ್ನು ಈಗಿನ ಹಾಗು ಮುಂದಿನ ವೀರಶೈವ ಜನಾಂಗದ ಪೀಳಿಗೆಗೆ ಮಾಡಿಕೊಡುವುದೊಂದು ಮಹಾ ಪುಣ್ಯವೇ ಸರಿ. ನಾವು ಶಿರಾಳಕೊಪ್ಪದ ಮಠಕ್ಕೆ ಹೋದಾಗ ಆ ಮಠದ ರುದ್ರಭೂಮಿಯಲ್ಲಾದ ಅವರ ಸಮಾಧಿಯನ್ನು ನೋಡಿದಾಗಲೆಲ್ಲ ನೆನಪಾಗುತ್ತಿದ್ದ ನಮ್ಮ ಕನಸು ಈಗ ಶಿರಾಳಕೊಪ್ಪದ ವಿರಕ್ತಮಠಾಧ್ಯಕ್ಷತೆಯಲ್ಲಿ ಶ್ರೀ ಹೆಚ್. ದೇವೀರಪ್ಪ ಎಂ.ಎ. ಹಾಗು ಪಂಡಿತ ಚನ್ನಪ್ಪ ಎರೇಸೀಮೆ ಇವರುಗಳ ಸಂಪಾದಕತ್ವದಲ್ಲಿ ಹೊರಬರಲಿರುವ ಸ್ಮಾರಕ ಗ್ರಂಥ ನನಸಾಗಿಸಿದೆ. ಅವರ ಘನ ವ್ಯಕ್ತಿತ್ವಕ್ಕನುಸಾರವಾಗಿ ಗ್ರಂಥ ಹೊರಬರಲೆಂದು ಹಾರೈಸಿ ನಮ್ಮ ಈ ಶುಭಾಶಯದ ಸಂದೇಶವನ್ನು ಮುಗಿಸುತ್ತೇವೆ.

—ಶುಭಂ ಭೂಯಾತ್—

* * * *

**ಟಿ. ಗುರುಶಾಂತಪ್ಪ**
ಮಲ್ಲಿಕಾರ್ಜುನ ರೈಸ್ ಮಿಲ್,
ಶಿರಾಳಕೊಪ್ಪ

ಶಿರಾಳಕೊಪ್ಪ
೧೫-೧೦-೧೯೭೩

ನನ್ನ ಪೂಜ್ಯ ಗುರುವರ್ಯರಾದ ಶ್ರೀ ಚನ್ನಮಲ್ಲಿಕಾರ್ಜುನರವರ ಬಗೆಗೆ ಸಂಸ್ಮರಣ ಗ್ರಂಥವೊಂದನ್ನು ಅವರ ನೂರಾರು ಮುಖದ ವ್ಯಕ್ತಿತ್ವ ಪರಿಚಯ ಮುಂದಿನ ಪೀಳಿಗೆಗೆ ಆಗಬೇಕೆಂಬ ಸದುದ್ದೇಶದಿಂದ ಹೊರ ತರುತ್ತಿರುವುದಕ್ಕೆ ನಾನು ಬಹಳವಾಗಿ ಸಂತೋಷಿಸುತ್ತೇನೆ. ಶ್ರೀ ಚನ್ನಮಲ್ಲಿಕಾರ್ಜುನರು ಕೋರಿಸೆಟ್ಟಿ ಮನೆತನದವರು. ಕೋರಿಸೆಟ್ಟಿ ಮನೆತನದವರಿಗೆ ಒಂದು ವಿಶಿಷ್ಟಸ್ಥಾನ ನಮ್ಮ ಸಮಾಜದಲ್ಲಿದೆ. ಅವರು ಸತ್ಯಶುದ್ಧ ವ್ಯಾಪಾರ ಕಾಯಕ ಮಾಡುವುದರ ಜೊತೆಗೆ ಲಿಂಗಾಂಗಿಗಳು ನಿತ್ಯ ಕಾಯಕ ವೃತ್ತಿಯಿಂದ. ಭಕ್ತಿ ಜೀವನದಿಂದ ಹೇಗೆ ಹೇಗೆ ವರ್ತಿಸುತ್ತಿದ್ದಾರೆ; ಮಠಾಧಿಪತಿಗಳು ಹೇಗೆ ಕೆಲಸ ಮಾಡುತ್ತಾರೆ; ಇತ್ಯಾದಿ ಅಂಶಗಳನ್ನು ಅಧ್ಯಯನ ಮಾಡಿ ಬಸವಣ್ಣನವರಿಗೆ ಮತ್ತು ಆಯಾಯ ಪ್ರಾಂತದ ಚರಪಟ್ಟಾಧಿಕಾರಿಗೆ ವರದಿ ಮಾಡುವ ಕಾಯಕವನ್ನು ಮಾಡುತ್ತಿದ್ದರು. ಇಂಥ ವೀರಶೈವಾಚಾರ ಸಂಪನ್ನ ಜನಾಂಗಕ್ಕೆ ಕೋರಿಸೆಟ್ಟರೆಂದು ಹೆಸರುಬಂದ ಹಾಗೆ ತಿಳಿದುಬರುತ್ತದೆ. ಇವರು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವ್ಯಾಪಾರಕ್ಕಾಗಿ ಹೋಗಿಬರುತ್ತ ರಾಯಭಾರ ವೃತ್ತಿಯನ್ನೂ ಸಹ ಮಾಡುವ ನಿಪುಣತೆಯನ್ನು ಹೊಂದಿದ್ದರಂತೆ.

ಈ ಪಂಗಡಕ್ಕೆ ಸೇರಿದ ನಮ್ಮ ಪೂಜ್ಯ ಗುರುವರ್ಯ ಶ್ರೀ ಚನ್ನಮಲ್ಲಿಕಾರ್ಜುನರ ತಂದೆಯವರಾದ ನೂರೊಂದಪ್ಪನವರು ಶಿರಾಳಕೊಪ್ಪದಲ್ಲಿ ಪ್ರಥಮತಃ ಒಂದು ಗಾವಠಿ ಶಾಲೆಯ ಉಪಾಧ್ಯಾಯರು. ಈಗಲೂ ನಮ್ಮ ಕಡೆಯ ಜನತೆಯಲ್ಲಿ ಒಬ್ಬ ಯಾವುದೇ ಹುಡುಗ ಜಾಣನಾಗಿದ್ದರೆ ಅವನನ್ನು ಕುರಿತು 'ಇವನು ನೂರೊಂದಪ್ಪನವರ ಶಾಲೆಯಲ್ಲಿ ಕಲಿತವ'-ಎಂದೇ ಗಾದೆಯಾಗಿಬಿಟ್ಟಿದೆ. ಇದರ ಅರ್ಥ ಇಷ್ಟು: ನೂರೊಂದಪ್ಪನವರ ಶಾಲೆಯಲ್ಲಿ ಶಿಕ್ಷಣ ಪಡೆದವರೆಲ್ಲ ಜಾಣರೇ ಆಗುತ್ತಿದ್ದರು. ಅಷ್ಟೊಂದು ಕಟ್ಟುನಿಟ್ಟಿನ ಶಿಕ್ಷಣ ಕೊಡುವಿಕೆ ಅವರದಾಗಿತ್ತು. ನಮ್ಮ ಊರಿನ ಹಿಂದಿನ ತಲೆಮಾರಿನವರೆಲ್ಲರೂ ನೂರೊಂದಪ್ಪನವರ ಶಿಷ್ಯರೇ. ಇಂಥ ಆದರ್ಶ ಶಿಕ್ಷಕ, ಆಚಾರಶೀಲ, ಕಾಯಕ ಸದ್ಭಾವಿ ನೂರೊಂದಪ್ಪನವರ ಶಾಲೆಯಲ್ಲಿಯೇ ಶ್ರೀ ಚನ್ನಮಲ್ಲಿಕಾರ್ಜುನರ ಶಿಕ್ಷಣವೂ ಕೂಡ ಆಯಿತು. ಇವರ ಬುದ್ಧಿವಂತಿಕೆಯನ್ನು ಕಂಡು ಸರಕಾರದವರು ಓದುತ್ತಿರುವಾಗಲೇ ಸರಕಾರಿ ಶಾಲೆಯ ಶಿಕ್ಷಕರನ್ನಾಗಿ ಮಾಡಿದರು.

ಇವರು ಮೂರು ಲಗ್ನವಾಗಿ ಗೃಹಸ್ಥ ಜೀವನವನ್ನು ನಡೆಸಿದರೂ ದಾಂಪತ್ಯ ಜೀವನ ಬಹುದಿನ ಉಳಿಯಲಿಲ್ಲ. ಸಂತಾನಾಭಿವೃದ್ಧಿಯೂ ಆಗಲಿಲ್ಲ. ಅಲ್ಲಿಂದ ಮುಂದೆ ಹಾನಗಲ್ಲು ಕುಮಾರ ಶಿವಯೋಗಿಗಳ ಅಂತಃಕರಣಕ್ಕೆ ಪ್ರಾಪ್ತರಾಗಿ ವೈರಾಗ್ಯಹೊಂದಿ, ಸಮಸ್ತ ಕ್ರಿಯಾಮುಖದಲ್ಲೂ ಗುರುಲಿಂಗಜಂಗಮ ಸೇವಾಭಾವವಳವಟ್ಟುಹೋಯಿತು.

ಕನ್ನಡ, ಸಂಸ್ಕೃತ, ಇಂಗ್ಲೀಷ್ ಭಾಷೆಗಳ ಆಳವಾದ ಅಧ್ಯಯನ ನಡೆಸಿದ ಇವರು ವೀರಶೈವ ತತ್ತ್ವಶಾಸ್ತ್ರವನ್ನೆಲ್ಲ ಮೈಗೂಡಿಸಿಕೊಂಡು ಅದರಂತೆ ಅರಿತು ಆಚರಿಸಿ ವೀರ

ಶೈವ ಧರ್ಮವು ವಿಶ್ವಧರ್ಮವೆಂಬ ದಿವ್ಯ ಸಂದೇಶವನ್ನು ಸಾರುವುದರಲ್ಲೇ ತಮ್ಮ ಆಯುಷ್ಯ ಸವೆಸಿದರು. ದಿನಕ್ಕೆ ಒಂದು ಹೊತ್ತು ಮಾತ್ರ ಪ್ರಸಾದವನ್ನು ಲಿಂಗಮುಖ ದಿಂದ ಸ್ವೀಕರಿಸುತ್ತ ಸುಮಾರು ಎಂಬತ್ತೆರಡು ವರ್ಷಗಳ ನಿಡು ಬಾಳನ್ನು ಬಾಳಿ ೧೯೬೨ ನೆಯ ಇಸ್ವಿಯಲ್ಲಿ ಲಿಂಗೈಕ್ಯರಾದರು. ಹುಟ್ಟೂರಾದ ಶಿರಾಳಕೊಪ್ಪಕ್ಕೆ ಕೀರ್ತಿ ತಂದರು. ಈ ಊರಿನ ಕಣಕಣವೂ ಇವರ ನಿಧನಕ್ಕಾಗಿ ಸಂತಪ್ತಗೊಂಡಿತು. ಅವರ ಮಹಾವ್ಯಕ್ತಿ ತ್ವಕ್ಕೆ ಯೋಗ್ಯ ಸ್ಮಾರಕ ಮಾಡುವುದು ನಮ್ಮ ಕರ್ತವ್ಯವಾಗಿದೆ. ಪ್ರಕೃತ ಅವರ ಸಂಸ್ಮರಣ ಸಂಚಿಕೆ ಅವರ ಸಮಗ್ರ ಜೀವನದ ಒಂದು ಪಕ್ಷಿನೋಟವಾಗಿ ಹೊರಬರುತ್ತಿ ರುವುದೊಂದು ಸಂತೋಷದ ಸಂಗತಿ. ಈ ಕಾರ್ಯ ಯಶಸ್ವಿಗೊಳ್ಳಲು ನಮ್ಮ ಊರಿನ ವಿರಕ್ತಮಠಾಧ್ಯಕ್ಷರೂ ವೇದಾಂತಾಚಾರ್ಯರೂ ಆದ ಶ್ರೀ ನಿ. ಪ್ರ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮುಖ್ಯ ಕಾರಣರು. ಅವರು ಈ ಕಾರ್ಯಭಾರವನ್ನು ಯಶಸ್ವಿ ಗೊಳಿಸಲು ಶ್ರೀ ಚನ್ನಮಲ್ಲಿಕಾರ್ಜುನರ ನಿಕಟವರ್ತಿಗಳಾಗಿದ್ದ ಶ್ರೀ ಹೆಚ್. ದೇವೀರಪ್ಪ ಮತ್ತು ಪಂಡಿತ ಚನ್ನಪ್ಪ ಎರೇಸೀಮೆ ಅವರಿಗೆ ವಹಿಸಿರುವುದು ಅರ್ಥಪೂರ್ಣವಾಗಿದೆ. ಆ ದಿವ್ಯಾತ್ಮ ಶ್ರೀ ಚನ್ನಮಲ್ಲಿಕಾರ್ಜುನರವರ ದಿವ್ಯ ತೇಜಸ್ಸು ನಮಗೆ ಜ್ಞಾನಪ್ರಕಾಶ ವನ್ನುಂಟುಮಾಡಲಿ.

ಭದ್ರಂ—ಶುಭಂ—ಮಂಗಲಂ

*　　*　　*　　*

**ಎಚ್. ಸಂಗನಬಸಪ್ಪ**　　ಮೈಸೂರು
ನಂಜುಂಡಪ್ಪ ಆ್ಯಂಡ್ ಸನ್ಸ್ ಮರ್ಚಂಟ್ಸ್　　೧೫–೯–೧೯೭೩
ಮೈಸೂರು.

ಶ್ರೀ ಚನ್ನಮಲ್ಲಿಕಾರ್ಜುನರು ಎಂಥವರೆಂಬುದು ನೀವು ನನಗೆ ಬರೆದ ಪತ್ರದಲ್ಲೇ ಸೂಕ್ಷ್ಮವಾಗಿ ನಮೂದಿಸಿದ್ದೀರಿ. ಶ್ರೀ ಚನ್ನಮಲ್ಲಿಕಾರ್ಜುನರು ಎಂದೂ ಹಣದ ಆಸೆ ಗಾಗಿ ಕೆಲಸ ಮಾಡಿದವರಲ್ಲ; ಲೋಕದಲ್ಲಿ ಕೀರ್ತಿಯನ್ನು ಪಡೆಯಬೇಕೆಂಬ ಆಸೆಯಂತೂ ಅವರ ಹತ್ತಿರ ಸುಳಿದಿರಲಿಲ್ಲ. ಯಥಾರ್ಥ ನಡೆ ನುಡಿ ಕ್ರಿಯೆ—ಇದು ಅವರ ವೀರ ಸಂಕಲ್ಪವೇ ಹೊರತು ಅನ್ಯಥಾ ಅಲ್ಲ. ಇವರು ಮೈಸೂರಿಗೆ ಬರುವುದಕ್ಕೆ ಶ್ರೀ ಸುತ್ತೂರು ಶಿವರಾತ್ರಿ ರಾಜೇಂದ್ರ ಜಗದ್ಗುರುಗಳೇ ಕಾರಣರು. ಮೊದಮೊದಲು ಇವರ ಆಶ್ರಯ ದಲ್ಲೇ ಶ್ರೀ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಯ್ಯನವರ ಪಾಠಶಾಲೆಯಲ್ಲಿ ಒಂದು ಕೊಠಡಿಯಲ್ಲಿ ತಮ್ಮ ಗ್ರಂಥಗಳನ್ನೆಲ್ಲ ಒಟ್ಟಿ, ಮಧ್ಯದಲ್ಲಿ ತಮಗೆ ಕೂಡಲು ಒಂದು ಸ್ಥಳ ಮಾಡಿಕೊಂಡು ತಮ್ಮ ಪತ್ರಿಕಾ ಜೀವನ ಪ್ರಾರಂಭಿಸಿದರು. ತದನಂತರ ಬಾದಾಮಿ ನಂಜಪ್ಪನವರ ಛತ್ರದಲ್ಲಿ ವಾಸ್ತವ್ಯಮಾಡಿ ಅಲ್ಲಿಯೇ ತಮ್ಮ ಸ್ವತಂತ್ರವಾದ 'ಸಿದ್ಧೇಶ್ವರ' ಮುದ್ರಣಾಲಯವನ್ನು ಸ್ಥಾಪಿಸಿ ಕೊನೆಯವರೆಗೂ ತಮ್ಮ ಸತ್ಸಂಕಲ್ಪವಾದ 'ಸದ್ಧರ್ಮ ದೀಪಿಕೆ' ಪ್ರಕಟನೆ, ಗ್ರಂಥ ಸಂಶೋಧನೆ, ಸಂಸ್ಕರಣಾದಿಕಾರ್ಯ ನಿರ್ವಹಣೆ ಮಾಡಿದ ಅಪಾರ ಅನುಭಾವಿ ಮತ್ತು ವಿದ್ವಾಂಸ. ಇವರು ಶುದ್ಧ ಸಾತ್ವಿಕರು; ಕಾಪಟ್ಯವೆಂದ

ರೇನೆಂಬುದೇ ಇವರಿಗೆ ಗೊತ್ತಿರಲಿಲ್ಲ. ಆದರೆ ಮೂರನ್ನೇ ಆಗಲಿ ಒಮ್ಮೆಲೆ ನಂಬುತ್ತಿರಲಿಲ್ಲ. ಅವರನ್ನು ಪರೀಕ್ಷಿಸಿ, ನಂಬುಗೆಗೆ ಯೋಗ್ಯರೇ ಎಂದು ಖಚಿತಪಡಿಸಿಕೊಂಡ ಮೇಲೆ ಅಂಥವರೊಡನೆ ವ್ಯವಹರಿಸುತ್ತಿದ್ದರು. ಇವರು ಇದ್ದಷ್ಟು ಕಾಲವೂ ನಮ್ಮ ಮನೆತನದಮೇಲೆ ಅಪಾರ ನಂಬುಗೆಯಿಟ್ಟು ವ್ಯವಹರಿಸಿದರು. ನಾವೆಲ್ಲ ಇವರ ಶಿವಾನುಭಾವ ಸಂಪತ್ತಿಗೆ ಮಾರುಹೋಗಿದ್ದೆವು. ಇಂಥ ಮಹಾಶರಣರ ಬಗೆಗೆ ಸಂಸ್ಮರಣ ಗ್ರಂಥವೊಂದು ಹೊರಬೀಳುವುದರ ಅವಶ್ಯಕತೆ ಹೆಚ್ಚಾಗಿದೆ. ಈ ಕಾರ್ಯವನ್ನು ಶಿರಾಳಕೊಪ್ಪದ ವಿರಕ್ತಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಶಿವಕುಮಾರ ಮಹಾಸ್ವಾಮಿಗಳು ಶ್ರೀ ಹೆಚ್. ದೇವೀರಪ್ಪ ಮತ್ತು ಪಂಡಿತ ಚನ್ನಪ್ಪ ಎರೇಸೀಮೆ ಅವರಿಗೆ ವಹಿಸಿದುದು ಸ್ತುತ್ಯಾರ್ಹ. ಸರ್ವವೂ ಮಂಗಳದಲ್ಲಿ ಮುಕ್ತಾಯಗೊಳ್ಳಲಿ ಎಂದು ಹಾರೈಸುತ್ತೇನೆ.

# ಶಿವಾನುಭಾವಿ ಚನ್ನಮಲ್ಲಪ್ಪನವರು ಕೋರಿ

**ಮುರಿಗೆಪ್ಪ ಈರಪ್ಪ ಎಲಿ,** ಮಾಸ್ತರ
ಮುರುಘಾಮಠ ಧಾರವಾಡ

ಶ್ರೀ ಚನ್ನಮಲ್ಲಪ್ಪನವರು ಹುಟ್ಟಿದುದು ಶಿರಾಳಕೊಪ್ಪದಲ್ಲಿ. ಬಾಲ್ಯದಲ್ಲಿಯೇ ಕಾರಣಾಂತರದಿಂದ ವಿಕಾರಗೊಂಡ ಅಂಗಾಂಗಗಳ ಫಲವಾಗಿ ನೋಡುವವರಿಗೆ ಆಕರ್ಷಕ ವಲ್ಲದ ದೇಹಶ್ರೀಯಿಂದ ಕೂಡಿದ ಇವರು ಆತ್ಮ ಶ್ರೀ ಸಮನ್ವಿತರಾಗಿ ಬೆಳೆದು ಬಾಳಿ ಕೀರ್ತಿಶೇಷರಾದ ಶ್ರೀಯುತರ ಬಗೆಗೆ ಬರೆಯಬೇಕಾದವರೂ ಸ್ವಲ್ಪಯೋಚಿಸಿ ಬರೆಯ ಬೇಕಾಗುವುದು.

ಬಾಲ್ಯದಿಂದಲೂ ಚುರುಕುಬುದ್ಧಿ, ಸತತಾಭ್ಯಾಸ, ನಿರಂತರೋದ್ಯೋಗಶೀಲ ರಾದ ಇವರಿಗೆ ಮಹಾಮಹಾ ಶಿವಯೋಗಿಗಳವರ ಸಂಸರ್ಗವೂ ಉಂಟಾಗಿ ಆಧ್ಯಾತ್ಮಿಕ ಒಲವಿನಿಂದ ಕೂಡಿದ್ದರು. ದೇಹ ವೃದ್ಧಿಯಾದಂತೆ ಅವರ ದೈವೀ ಭಾವನೆಯೂ ದ್ವಿಗುಣಿತವಾಗಿ ವೃದ್ಧಿಯಾಗತೊಡಗಿತು. ಮಹಾಮಹಿಮರಾದ ಹಾನಗಲ್ಲು ಶ್ರೀ ನಿ. ಪ್ರ. ಕುಮಾರಮಹಾಸ್ವಾಮಿಗಳವರ ಕ್ರಿಯಾಮೂರ್ತಿಗಳಾಗಿದ್ದ ಶ್ರೀ ನಿ. ಪ್ರ. ಗೋಣೀ ಬೀಡು ಸಿದ್ಧವೀರಮಹಾಸ್ವಾಮಿಗಳವರಿಂದ ಇವರಿಗೆ ಅನುಗ್ರಹವೂ ಷಟ್‌ಸ್ಥಲ ಜ್ಞಾನೋಪದೇಶವೂ ಆಯಿತು. ಪುಟಕ್ಕಿಟ್ಟ ಚಿನ್ನದಂತೆ ಈ ಅನುಗ್ರಹದ ಫಲವಾಗಿ ಶ್ರೀ ಚನ್ನಮಲ್ಲಪ್ಪನವರು ಶೋಭಿಸತೊಡಗಿದರು. ಶಿವಾನುಭಾವ ಜ್ಞಾನವನ್ನು ಸಂಗ್ರ ಹಿಸಿ ಅದನ್ನು ಕ್ರಿಯೆಗೆ ಅಳವಡಿಸಿಕೊಂಡರು. ಜ್ಞಾನಕ್ರಿಯಾ ಸಮುಚ್ಚಯ ಮಾರ್ಗ ದಲ್ಲಿ ಪರಿಣಿತರಾದರು. ಗುತ್ತಲದ ಮಹಾತಪಸ್ವಿ ಶ್ರೀ ನಿ. ಪ್ರ. ರುದ್ರಮುನಿಸ್ವಾಮಿ ಗಳ, ಹಾನಗಲ್ಲು ಶ್ರೀಗಳ, ಅನಂತಪುರದ ಶ್ರೀ ಲಿಂಗಸ್ವಾಮಿಗಳ, ಕೆಳದಿ ರೇವಣಸಿದ್ಧ ಪಟ್ಟದದೇವರ–ಸಂಗದಿಂದ ನಿಸ್ಸಂಗತ್ವ, ನಿರ್ಲೋಹತ್ವ, ನಿರ್ಮಮಕಾರವುಳ್ಳವರಾಗಿ ಜೀವನ್ಮುಕ್ತ ಸ್ಥಿತಿಗೇರಿದರು. ತಮ್ಮ ಸಮಗ್ರ ಜೀವಿತವನ್ನು ಶರಣಸಾಹಿತ್ಯ, ಶಿವಾ ನುಭವ ಪ್ರಚಾರ, ಸಂಶೋಧನೆ ಮೊದಲಾದ ಉನ್ನತ ಮಟ್ಟದ ಕಾರ್ಯಗಳಿಗಾಗಿ ಮೀಸ ಲಾಗಿರಿಸಿದ ಮಹಾನುಭಾವರಾದ ಇವರು ಆಧ್ಯಾತ್ಮ ಸೌಧಕ್ಕೆ ಅನುಭಾವವು ಮುಖ್ಯ ವೆಂಬುದನ್ನು ಆಚರಿಸಿ ತೋರಿಸಿದರು.

> "ಅನುಭಾವವೆಂಬುದು ಆತ್ಮವಿದ್ಯೆ; ಅನುಭಾವವೆಂಬುದು ತಾನಾರೆಂಬುದ ತೋರುವುದು; ಅನುಭಾವವೆಂಬುದು ನಿಜನಿವಾಸದಲ್ಲಿರಿಸುವುದು; ಇಂತಪ್ಪ ಅನುಭಾವದನುವನರಿಯದೆ, ಶಾಸ್ತ್ರ ಜಾಲದ ಪಸರವನಿಕ್ಕಿ, ಕೊಳ್ಳದ ಕೊಡದ ವ್ಯವಹಾರ ಮಾಡುವ ಅಣ್ಣಗಳಿರಾ, ನೀವೆತ್ತ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಅನುಭಾವವೆತ್ತ ಹೋಗಿರಣ್ಣ"

--ಎಂದು ಶ್ರೀ ಸ್ವತಂತ್ರ ಸಿದ್ಧಲಿಂಗೇಶ್ವರರು ಬೋಧಿಸಿದ್ದಾರೆ. ಇವರು ಘನಮಹಿಮ

ರಾದ ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಅನುಯಾಯಿಗಳು, ಇವರ ಕಾಲ ಹದಿನೈದನೆಯ ಶತಮಾನದ ಉತ್ತರಾರ್ಧ.

ಶ್ರೀ ಚನ್ನಮಲ್ಲಪ್ಪನವರು ಮಿಡ್ಲಸ್ಕೂಲ್ ಪ್ರಧಾನಾಧ್ಯಾಪಕ ಸ್ಥಾನದಿಂದ ನಿವೃತ್ತರಾಗಿ ತಮ್ಮ ಜೀವಿತದ ಪೂರ್ಣ ಕಾಲವನ್ನು ಸರ್ವರ ಕಲ್ಯಾಣಕ್ಕಾಗಿ ಅನೇಕ ಮುಖವಾಗಿ ತತ್ತ್ವಪ್ರಚಾರ ಮಾಡಲನುವಾದರು. ತನ್ನಲ್ಲಿ ಲಿಂಗವನ್ನೂ, ಲಿಂಗದ ಬೆಳಕನ್ನೂ ಕಂಡು ಅದರಲ್ಲಿ ಮುಳುಗುಳಿಯುವುದನ್ನು ಸಾಧಿಸದ ಹೊರತು ವಿಶ್ವವೆಲ್ಲ ಶಿವನೆಂಬುದನರಿಯುವುದು ಭ್ರಮೆಯೆಂದು ಸದಾ ಆತ್ಮಾನುಭವದಲ್ಲಿ, ಶಿವಾನುಭಾವದಲ್ಲಿ ನಿರತರಾದರು. ಆ ಕಾಲದಲ್ಲಿ ಕಬ್ಬೂರು ಲಿಂಗಪ್ಪ ಶರಣರು ಮಹಾಶಿವಾನುಭಾವಿಗಳಾಗಿದ್ದರು. ಹಾನಗಲ್ಲು ಶ್ರೀಗಳವರು ಶಿವಾನುಭವ ಗೋಷ್ಠಿ ಮಾಡುವುವಕ್ಕಾಗಿ ಆ ಶರಣರಲ್ಲಿ ಬಂದು ಆಗಾಗ ಮೊದಲು ನೀರಲಗಿ ದೇವಸ್ಥಾನ, ತೊಗರ್ಸಿ ದೇವಸ್ಥಾನಗಳಲ್ಲಿ ಅನುಭವಗೋಷ್ಠಿಗಳನ್ನೇರ್ಪಡಿಸುತ್ತಿದ್ದರು. ಆದರೆ ಅಲ್ಲಿ ಜನದಟ್ಟಣೆ ವಿಶೇಷವಾಗತೊಡಗಿದ್ದರಿಂದ ಶಿರಾಳಕೊಪ್ಪಕ್ಕೆ ಸಮೀಪದಲ್ಲಿರುವ ಬಿಳವಾಣಿ ಮರಡಿಯ ಏಕಾಂತವೂ ಪ್ರಶಾಂತವೂ ಆದ ಸ್ಥಳದಲ್ಲಿ ಎಲ್ಲ ಅನುಭಾವಿಗಳೂ ಸೇರಿ ಶಿವಾನುಭವ ಗೋಷ್ಠಿಗಳನ್ನೇರ್ಪಡಿಸುತ್ತಿದ್ದರು. ಆ ಸುಪ್ರಸಂಗಗಳಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು, ಗೊಗ್ಗಿಹಳ್ಳಿ ಶಾಸ್ತ್ರಿಗಳು, ಕೆಳದಿ ರೇವಣಸಿದ್ಧ ಪಟ್ಟದದೇವರು, ಅನಂತಪುರದ ಲಿಂಗಸ್ವಾಮಿಗಳು, ಶಿರಾಳಕೊಪ್ಪದ ರುದ್ರಮುನಿಸ್ವಾಮಿಗಳು ಭಾಗಿಗಳಾಗುತ್ತಿದ್ದರು. ಆಗ ಹಾನಗಲ್ಲು ಶ್ರೀಗಳವರ ಸೇವೆಯಲ್ಲಿ ನವಿಲುಗುಂದದ ಬಸವಲಿಂಗ ಸ್ವಾಮಿಗಳೂ, ನಾಗನೂರು ಶಿವಬಸವಸ್ವಾಮಿಗಳೂ ಇದ್ದರು. ಆಗ ಇವರಿನ್ನೂ ಜಂಗಮಗದ ಸ್ವೀಕಾರ ಮಾಡಿದ್ದಿಲ್ಲ. ವಟುಗಳಾಗಿದ್ದರು. ಅನುಗ್ರಹಸ್ಥರನ್ನಲ್ಲದೆ ಆ ಶಿವಾನುಭವಗೋಷ್ಠಿಗೆ ಬೇರೆಯವರನ್ನು ಬಿಡುತ್ತಿರಲಿಲ್ಲ. ಶರಣರ ಒಡನಾಟದಿಂದ ಲಿಂಗಸಕೀಲಗಳ, ಶಿವಾನುಭಾವದ ಸೂಕ್ಷ್ಮ ವಿಚಾರಗಳ ನಿಷ್ಕರ್ಷೆಯಾಗಿ ಸ್ವಾನುಭಾವಕ್ಕೆ ನಿಲುಕುವಂತಾಗುತ್ತಿದ್ದವು. ಲಿಂಗಪ್ಪ ಶರಣರ ಆಳವಾದ ಅನುಭವವು ಈ ಸಂದರ್ಭದಲ್ಲಿ ಶ್ರೀ ಚನ್ನಮಲ್ಲಪ್ಪನವರಿಗೆ ದೊರಕಿದುದು ಅವರ ಪುಣ್ಯ ವಿಶೇಷವೆಂದೇ ಹೇಳಬೇಕು. ಈ ಅನುಭವ ಮಥನದಿಂದಾಗಿ ಶ್ರೀ ಚನ್ನಮಲ್ಲಪ್ಪನವರ ಶಿವಾನುಭಾವ ಜ್ಞಾನ ಅತ್ಯುಚ್ಚಮಟ್ಟಕ್ಕೇರಿ ಏರಿದರೆ ಅರಿವು ಇಳಿದರೆ ಕ್ರಿಯೆ ಎನ್ನುವ ಮಟ್ಟಕ್ಕೆ ಹೋಯಿತು.

ಮುಂದೆ ಇವರು ಸರಕಾರೀ ಸೇವೆಯಿಂದ ನಿವೃತ್ತರಾದ ಮೇಲೆ ತಮ್ಮ ಈ ಜ್ಞಾನವನ್ನು ಪ್ರಸಾರಮಾಡಲು ಒಂದು ಮುದ್ರಾಕ್ಷರ ಶಾಲೆಯನ್ನು ಹಾವೇರಿಯಲ್ಲಿ ಶಿವಯೋಗ ಮಂದಿರದವರ ಆಶ್ರಯದಿಂದ ತೆರೆದು ತಮ್ಮ ಪೂಜ್ಯ ಗುರುಗಳಾದ ಹಾನಗಲ್ಲು ಕುಮಾರ ಸ್ವಾಮಿಗಳವರ ಸ್ಮಾರಕವಾಗಿ 'ಸದ್ಧರ್ಮ ದೀಪಿಕೆ'ಯೆಂಬ ಮಾಸಪತ್ರ ಪ್ರಕಟನೆಗೆ ತೊಡಗಿ ಆ ಕಾರ್ಯವನ್ನು ಯಾವಜ್ಜೀವವೂ ನಡೆಸಿಕೊಂಡು ಬಂದರು. ಅನೇಕ ಲೇಖನಗಳನ್ನು ಬರೆದು, ಶರಣರ ವಚನಗಳನ್ನು, ಸಾಹಿತ್ಯ ಗ್ರಂಥಗಳನ್ನು, ಆಧ್ಯಾತ್ಮಿಕ ಗ್ರಂಥಗಳನ್ನು 'ಸದ್ಧರ್ಮ ಗ್ರಂಥಮಾಲೆ' ಎಂಬ ಹೆಸರಿನ ಗ್ರಂಥಮಾಲೆಯಿಂದ ಬೆಳಕಿಗೆ ತಂದು ಶಿವಾನುಭಾವ ತತ್ತ್ವವನ್ನು ಜನರ ದೃಷ್ಟಿ ಪಥಕ್ಕೆ ತಂದರು. ಜ್ಞಾನಾಪೇಕ್ಷಿ

ಗಳಿಗೂ, ತತ್ತ್ವಾಪೇಕ್ಷಿಗಳಿಗೂ ಅವರ ಈ ರೀತಿಯ ಸೇವೆ ಆನಂದದ ಝುರಿಯಾಯಿತು. ಸರ್ವರ ಪ್ರೇಮಾದರಗಳಿಗೆ ಪಾತ್ರರಾದರು.

ಶ್ರೀ ಚನ್ನಮಲ್ಲಪ್ಪನವರದು ಸಂಶೋಧಕ ದೃಷ್ಟಿ; ಮೈಲಾರಬಸವಲಿಂಗ ಶರಣರ ಕೃತಿಗಳನ್ನು ಕೂಲಂಕಷವಾಗಿ ಅಭ್ಯಾಸಮಾಡಿ, ಪರಿಷ್ಕರಿಸಿ ಚಿಕ್ಕ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿ ಅತಿ ಕಡಿಮೆ ಬೆಲೆಗೇ ಮಾರಿದರು. ಇದರಂತೆ ಶತಕತ್ರಯಗಳೇ ಮೊದಲಾದ ವೀರಶೈವ ತತ್ತ್ವಗ್ರಂಥಗಳು ಅತಿಕಡಿಮೆ ಬೆಲೆಗೆ ಮಾರಾಟಮಾಡುತ್ತ ಇದೆಲ್ಲ ಶಿವನ ಸೇವೆಯೆಂದೇ ಹೇಳುತ್ತ ಹಾಗೆಯೇ ಕರ್ತವ್ಯವೆಸಗಿದರು. ಹಾವೇರಿಯಿಂದ ಮೈಸೂರಿಗೆ ಹೋದಮೇಲೆ ಇವರು ಸ್ವಂತ ಮುದ್ರಣ ಶಾಲೆಯನ್ನೇ ತೆರೆದು ಅನೇಕ ಮಹತ್ವಪೂರ್ಣ ಕೃತಿಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಬಸವೇಶ್ವರರ ಕಾಲ ನಿರ್ಣಯ, ರೇವಣ ಸಿದ್ಧರ ಕಾಲನಿರ್ಣಯ ಮೊದಲಾದುವು ಬಹುಮಹತ್ವದವು. ಈ ಗ್ರಂಥ ಪ್ರಕಟನೆಯ ಕಾಲದಲ್ಲಿ ಬ್ಯಾಡಗಿ ವಿರಕ್ತಮಠದ ಶ್ರೀಗಳವರ ಸಹಾಯ ಸಹಕಾರಗಳು ಇವರಿಗೆ ಹೆಚ್ಚಾಗಿ ದೊರೆತವು.

ಶ್ರೀ ಚನ್ನಮಲ್ಲಪ್ಪನವರು ವೀರಶೈವ ಧರ್ಮದ ತತ್ತ್ವಗಳನ್ನು ಚೆನ್ನಾಗಿ ಅಭ್ಯಸಿಸಿ ಜೀರ್ಣಿಸಿಕೊಂಡವರು, ಕ್ರಿಯಾದ್ವೈತಿಗಳು, ಅನುಭವದ ಒರೆಗಲ್ಲಿಗೆ ತತ್ತ್ವಗಳನ್ನು ಹಚ್ಚಿ ತಿಕ್ಕಿ ಪರೀಕ್ಷಿಸಿ ತತ್ತ್ವಸಾರ ಗ್ರಹಿಸಿದವರು. ಮೊಗ್ಗೆಯ ಮಾಯಿದೇವರ ಶತಕ ತ್ರಯ, ಪ್ರಭುಲಿಂಗಲೀಲೆ, ವಚನಶಾಸ್ತ್ರಗಳನ್ನು ಪ್ರವಚನ ಮಾಡುವುದರಲ್ಲಿ ಸಮರ್ಥ ಅನುಭಾವಿಗಳಾಗಿದ್ದರು. ಇವರು ಧಾರವಾಡದ ಮುರುಘಾಮಠದ ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳವರ ಶಿವಾನುಭಾವ ತರಬೇತಿ ಕಾರ್ಯಕ್ರಮಗಳಲ್ಲಿ ಭಾಗ ವಹಿಸಿ ಅನೇಕ ಕಡೆ ಶಿವಾನುಭಾವ ಬೋಧೆ ಪ್ರವಚನಗಳನ್ನು ಮಾಡಿ ಅವರ ಪರಿಪೂರ್ಣ ಕೃಪೆಗೂ ಪಾತ್ರರಾಗಿದ್ದರು.

ಸಾದಾಜೀವನ, ಸರಳಸ್ವಭಾವ, ಸತತೋದ್ಯೋಗದಿಂದ ಕೂಡಿದ ಇವರು ಕಾಣಲು ಬಂದವರನ್ನು ಪ್ರೇಮಾದರಗಳಿಂದ ಕಂಡು ಅವರು ಕೇಳಿದ ಪ್ರಶ್ನೆಗಳಿಗೆಲ್ಲ ನಿರುದ್ವಿಗ್ನರಾಗಿಯೇ ಉತ್ತರಿಸಿ ಅವರ ಸಂಶಯ ನಿವೃತ್ತಿಗೊಳಿಸುವ ಅಧಿಕಾರಿಕ ಶಕ್ತಿ ಸಂಪನ್ನರಾಗಿದ್ದರು. ಒಮ್ಮೆ ಒಂದು ಪ್ರಸಂಗ ನಡೆಯಿತು: ಇವರು ಸಂಶೋಧನಾ ಕಾರ್ಯದಲ್ಲಿ ತೊಡಗಿ ಒಂದು ದಿನ ಶಿರಾಳಕೊಪ್ಪಕ್ಕೆ ಬ್ಯಾಡಗಿಯಿಂದ ಚಕ್ಕಡಿ ಗಾಡಿಯಲ್ಲಿ ಪ್ರವಾಸಮಾಡುತ್ತಿದ್ದರು. ಆ ಗಾಡಿಯಲ್ಲಿ ಇವರು ಸಂಶೋಧಿಸಿ ಬರೆದಿಟ್ಟ ಅನೇಕ ಬರಹಗಳೂ ಮಹತ್ವದ ಗ್ರಂಥಗಳೂ ಒಂದು ಪೆಟ್ಟಿಗೆಯಲ್ಲಿ ತುಂಬಿಡಲ್ಪಟ್ಟಿದ್ದವು. ಬ್ಯಾಡಗಿಯಿಂದ ಎರಡು ಮೂರು ಮೈಲು ದೂರ ಹೋಗುವುದರೊಳಗೆ ಆ ಪೆಟ್ಟಿಗೆಯು ಉದ್ದೇಶ ಪೂರ್ವಕವಾಗಿಯೇ ಕೆಲವರಿಂದ ಅಪಹರಿಸಲ್ಪಟ್ಟಿತು. ಆಗ ಅವರು ಕಿಂಚಿತ್ತೂ ಅಧೈರ್ಯಪಟ್ಟುಕೊಳ್ಳದೆ, ತಮ್ಮ ಜ್ಞಾಪಕ ಶಕ್ತಿಯ ಬಲದಿಂದಲೂ, ಪುನಃ ಸಂಶೋಧನೆ ಮಾಡುವುದರ ಮೂಲಕವೂ ಆ ನಷ್ಟವನ್ನು ತುಂಬಿಕೊಂಡರೆಂಬುದು ಬಹುಮಹತ್ವದ ಪ್ರಸಂಗವಾಗಿದೆ. ಇಂಥ ಮಹಾನುಭಾವಿ ಸಂಶೋಧಕ, ತತ್ತ್ವಜ್ಞಾನಿ ಶ್ರೀ ಚನ್ನಮಲ್ಲಿಕಾರ್ಜುನರು ನಿಡುಬಾಳು ಬಾಳಿ ಲಿಂಗೈಕ್ಯರಾದರು. ಅವರ ಅತ್ಯುಚ್ಚಮಟ್ಟದ ವ್ಯಕ್ತಿತ್ವ ನಮ್ಮ ಮುಂದೆ ಇದೆ.

# ಶಿರಾಳಕೊಪ್ಪದ ಚನ್ನಮಲ್ಲಪ್ಪನವರು

## ಚನ್ನಪ್ಪ ಎರೇಸೀಮೆ

ಶ್ರೀಯುತ ಚನ್ನಮಲ್ಲಿಕಾರ್ಜುನರ ಪೂರ್ವಜರು ಹಾವೇರಿಯ ಪ್ರಸಿದ್ಧ ಕೋರಿ ಸೆಟ್ಟಿ ಮನೆತನದವರು. ಹಾವೇರಿಯಲ್ಲಿ ಇವರ ವೃತ್ತಿ ವ್ಯಾಪಾರ. ಶ್ರೀ ಚನ್ನಮಲ್ಲಿ ಕಾರ್ಜುನರ ಅಜ್ಜಂದಿರು ತಮ್ಮ ಮಗ ನೂರೊಂದಪ್ಪನೊಡನೆ ಶಿರಾಳಕೊಪ್ಪಕ್ಕೆ ಬಂದರು. ಇವರ ಇನ್ನೊಬ್ಬ ದಾಯಾದಿ ರಾಣೆಬೆನ್ನೂರು ತಾಲೂಕು ಹಾದರಗೇರಿಗೆ ಹೋದರು. ನೂರೊಂದಪ್ಪನವರ ಮಕ್ಕಳೇ ಚನ್ನಮಲ್ಲಿಕಾರ್ಜುನರು. ಚನ್ನಮಲ್ಲಿಕಾರ್ಜುನರ ಹೆಸರು ಪೂರ್ಣವಾಗಿ ಚನ್ನಮಲ್ಲಪ್ಪ, ನೂರೊಂದಪ್ಪ ಕೋರೀಸೆಟ್ಟಿ ಎಂದು. ಇತ್ತೀಚೆಗೆ ಚನ್ನಮಲ್ಲಪ್ಪನವರು ತಮ್ಮ ಹೆಸರನ್ನು 'ಶ್ರೀ ಚನ್ನಮಲ್ಲಿಕಾರ್ಜುನ' ಎಂದು ಬದಲಾಯಿಸಿಕೊಂಡರು.

## ಶಿರಾಳಕೊಪ್ಪದ ಪ್ರಾಮುಖ್ಯತೆ

ಶಿರಾಳಕೊಪ್ಪ ಪ್ರಾಚೀನಕಾಲದಿಂದಲೂ ಬಹುಪ್ರಸಿದ್ಧವಾದ ಮಲೆನಾಡಿನ ವ್ಯಾಪಾರ ಕೇಂದ್ರ. ಇದಕ್ಕೆ 'ಮಲೆನಾಡಿನ ಅಗಸೆ' (ಗೇಟ್ ವೇ ಆಫ್ ಮಲೆನಾಡು) ಎಂದು ಕರೆಯುತ್ತಿದ್ದರು. ಬಳ್ಳಿಗಾವೆಯ ಪಕ್ಕದಲ್ಲಿಯೇ ಇರುವ ಈ ಊರು ವೀರ ಬಣಂಜುಗಳ ಮುಖ್ಯ ಕೇಂದ್ರಗಳಲ್ಲೊಂದು. ಐಹೊಳೆಯಿಂದ, ಅಣ್ಣಿಗೆರೆ, ಲಕ್ಷ್ಮೇಶ್ವರ, ಹಾನಗಲ್ಲು, ಆಲೂರು, ಬಳ್ಳಿಗಾವಿ, ಅರಸಿಕೆರೆ, ಬೆಂಗಳೂರು, ಹರದನಹಳ್ಳಿ, ಮಧುರೆಯವರೆಗೆ ವೀರಬಣಂಜುಗಳು ಎತ್ತುಗಳ ಕಂಟಲಿಯ ಮೇಲೆ ಸಾಮಾನು ಸಾಗಿಸಿ ವ್ಯಾಪಾರ ಮಾಡುತ್ತಿದ್ದರು. ಶಿರಾಳಕೊಪ್ಪ ಕೇಂದ್ರದಿಂದ ಮಲೆನಾಡಿನ ವಸ್ತುಗಳಾದ ಯಾಲಕ್ಕಿ, ಮೆಣಸು, ಶುಂಠಿ, ಅಡಿಕೆ ಅರಣ್ಯೋತ್ಪನ್ನ ವಸ್ತುಗಳೇ ಮೊದಲಾದುವನ್ನು ತುಂಬಿಕೊಂಡು ವಾಲೋಜಿ ಚಿತ್ತೂರುಗಳ ಮೂಲಕ ಮದ್ರಾಸು ನಗರದವರೆಗೂ ವ್ಯಾಪಾರ ಮಾರ್ಗವೊಂದಿತ್ತು. ವಿವಿಧ ವರ್ಗದ ಸೆಟ್ಟಿಗಳು ಬಣ್ಣಕ್ಕೆ ಸಾವಿರ ಎತ್ತುಗಳ ಮಾಲೀಕರಾಗಿರುತ್ತಿದ್ದರು. ಈ ವ್ಯಾಪಾರಸ್ಥರಿಗೆ ಸಮಾಜದಲ್ಲಿ ಬಹಳ ಮಾನ ಮನ್ನಣೆಯಿತ್ತು. ಲಾಭವನ್ನು ಧಾರ್ಮಿಕ ವಿಧಿ ವಿಧಾನಗಳನ್ನನುಸರಿಸಿ ವಸ್ತುಗಳ ಮೇಲೆ ಇಡುತ್ತಿದ್ದರಲ್ಲದೆ ಧನದಾಸೆಯಿಂದ ಮನಸ್ಸಿಗೆ ಬಂದಷ್ಟು ಲಾಭ ತಕ್ಕೊಳ್ಳುವ ಪದ್ಧತಿ ಇವರದಾಗಿರಲಿಲ್ಲ. ಎತ್ತುಗಳ ಸಂಗಡ ಹೋಗುವ ವೀರಬಣಂಜು ಸಂಘದ ಹರದರೆಲ್ಲ ಶೂರರಾಗಿರುತ್ತಿದ್ದರು. ಕವಣೆಕಲ್ಲು ಹೊಡೆಯುವುದರಲ್ಲಿ ನಿಪುಣರು. ಇವರು ಪಯಣಗಳ ಮೇಲೆ ಪಯಣ ಮಾಡಿ ತಮ್ಮ ಸಮಯಾಚಾರಕ್ಕೆ ಕಾಲವಾದಾಗ ಹೊಳೆ ಅಥವಾ ಹಳ್ಳ, ಸರೋವರ, ಕೆರೆ, ಹೊಂಡಗಳಿರುವ ಸ್ಥಳಗಳಲ್ಲಿ ಬೀಡುಬಿಟ್ಟು ಡೇರೆಹೊಡೆದು ಸಾಮಾನು ಸರಂಜಾಮುಗಳನ್ನೆಲ್ಲ ಇಳಿಸಿ, ಎತ್ತುಗಳನ್ನು ಮೇಯಲು ಬಿಟ್ಟು ತಾವು

ತಮ್ಮ ಪೂಜೆ; ಪ್ರಸಾದ ವ್ಯವಹಾರಗಳನ್ನು ಮುಗಿಸುತ್ತಿದ್ದರು. ಇವರು ಇಳಿದ ಕೆಲವು ಸ್ಥಳಗಳು ಸಂಕೆಯುಮಾಳಗಳೂ ಆಗಿರುತ್ತಿದ್ದವು. ತಮ್ಮ ಸಮಯಾಚಾರಕ್ಕಾಗಿ ಈ ವೀರಬಣಂಜುಗಳು ತಮ್ಮ ಲಾಭಾಂಶದಿಂದ ಕೆಲವು ಮಠಗಳನ್ನೂ ನಿರ್ಮಾಣಗೊಳಿಸಿ ಅಲ್ಲಿ ಸಮಯಾಚಾರದ ಸ್ವಾಮಿಗಳನ್ನು ನೇಮಕ ಮಾಡಿಕೊಂಡು ಅವರಿಂದ ತೀರ್ಥ ಪ್ರಸಾದ ಸ್ವೀಕಾರ ಮಾಡುತ್ತಿದ್ದರು. ಕೆರೆ ಕುಂಟೆಗಳನ್ನೂ ಕಟ್ಟಿಸುತ್ತಿದ್ದರು. 'ವೀರಸೆಟ್ಟಿ ಒಡ್ಡು' ಎಂದು ಹೇಳುವ ಕೆರೆಯೊಂದು ಬಳ್ಳಿಗಾವಿ ತಾಳಗುಂದಗಳ ಮಧ್ಯದಲ್ಲಿದೆ. ಈ ಕೆರೆಯನ್ನು ವೀರಬಣಂಜುಗಳು ತಮ್ಮ ಎತ್ತುಗಳಿಗೆ ನೀರು ಕುಡಿಸಲು ಅವುಗಳ ಮೈ ತೊಳೆಯಲು ನಿರ್ಮಾಣಗೊಂಡಿತೆಂದು ಹೇಳಲಾಗುತ್ತಿದೆ. ಶಿರಾಳಕೊಪ್ಪ ಕೇಂದ್ರಸ್ಥಳ ವಾದ್ದರಿಂದ ಇಲ್ಲಿ ಸಾವಿರಾರು ಎತ್ತುಗಳು ಯಾವಾಗಲೂ ಇರುತ್ತಿದ್ದವು. ಎತ್ತುಗಳ ಮಾರಾಟದ ಪರಿಷೆಯೂ ಇಲ್ಲಿ ಇರುತ್ತಿತ್ತು. ಎತ್ತುಗಳೆಲ್ಲ ಈ ಕೆರೆಯಲ್ಲಿ ನೀರು ಕುಡಿದು, ಈಜಾಡಿ ಪಕ್ಕದ ವಿಪುಲವಾದ ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದುವಂತೆ. ಶಿರಾಳ ಕೊಪ್ಪದ ಪೇಟೆಯಿಂದಲೇ ಬನವಾಸಿ, ಬಳ್ಳಿಗಾವಿ, ತಾಳಗುಂದ ಮೊದಲಾದ ಪ್ರಸಿದ್ಧ ಐತಿಹಾಸಿಕ ಸ್ಥಳಗಳ ನಾಗರಿಕರಿಗೆ, ರಾಜಮಹಾರಾಜರಿಗೆ ಅವಶ್ಯಕ ವಸ್ತುಗಳು ಪೂರೈಸ ಲ್ಪಡುತ್ತಿದ್ದವು. ಶ್ರೀಮಂತ ವ್ಯಾಪಾರಿಗಳಿಂದ ತುಂಬಿದ ಈ ಶಿರಾಳಕೊಪ್ಪಕ್ಕೆ 'ಸಿರಿ ವೊಳಲು' ಎಂಬ ಅನ್ವರ್ಥಕ ನಾಮವೂ ಉಂಟಾಯಿತು. ಶಾಸನಗಳಲ್ಲಿ 'ಸಿರಿವೊಳಲು' ಎಂದೇ ಈ ಊರು ಪ್ರಸಿದ್ಧವಾಗಿದೆ. ಇಂದಿಗೂ ವೀರಬಣಂಜುಗಳ ವಂಶಜರು ಈ ಭಾಗದಲ್ಲಿದ್ದಾರೆ. ಅವರಲ್ಲಿ ಅನೇಕರು ಈಗ ವ್ಯಾಪಾರದಿಂದ ವಿಮುಖರಾಗಿ ಬೇರೆ ಬೇರೆ ವೃತ್ತಿಯಲ್ಲಿ ನಿರತರಾಗಿದ್ದಾರೆ. ಕೋರಿಯವರು, ಕೋರಿಸೆಟ್ಟರು, ಶೀಲವಂತರು, ಬಣಜಿಗರು, ವಾಲಿಸೆಟ್ಟಿ, ಪಟ್ಟಣಸೆಟ್ಟಿ, ಬಣಕಾರಸೆಟ್ಟಿ—ಮುಂತಾದ ಅನೇಕ ಪ್ರಕಾರಗಳು ಈ ವ್ಯಾಪಾರಿ ಜನಗಳ ಪ್ರಭೇದಗಳು. ಈಗ ಅವರ ವಂಶಜರನ್ನು ನಾವು ಶಿರಾಳ ಕೊಪ್ಪದ ನಾಡಿನಲ್ಲಿ ಗುರುತಿಸಬಹುದು. ಶಿರಾಳಕೊಪ್ಪದಿಂದ ಒಂದು ಮಾರ್ಗ ಮದ್ರಾಸು ಮತ್ತು ಮಧುರೆಗಳ ಕಡೆಗೆ ಹೋದರೆ, ಬೈಲುಸೀಮೆಯ ಅನೇಕ ಪದಾರ್ಥ ಗಳು ಸೊರಬ, ಸಾಗರಗಳ ಮಾರ್ಗವಾಗಿ ಭಟ್ಕಳ, ಹೊನ್ನಾವರಗಳಿಗೂ, ಬನವಾಸಿ, ಶಿರ್ಸಿಗಳ ಮಾರ್ಗವಾಗಿ ಕುಮಟಾ ಗೋಕರ್ಣಗಳ ಕಡೆಗೂ ರವಾನಿಸಲ್ಪಡುತ್ತಿದ್ದವು. ಹೀಗೆ ಅನೇಕ ಕಡೆಗಳಿಂದ ಒಂದುಗೂಡುವ ಕೇಂದ್ರ ವ್ಯಾಪಾರ ಸ್ಥಳವಾದ ಶಿರಾಳ ಕೊಪ್ಪದ ಕೀರ್ತಿ ಅರ್ಜನೀಯವಾದುದಾಗಿತ್ತು.

ಇಂಥ ಶಿರಾಳಕೊಪ್ಪಕ್ಕೆ ಬಂದ ಶ್ರೀ ಚನ್ನಮಲ್ಲಿಕಾರ್ಜುನರ ವಂಶಜರು ವ್ಯಾಪಾರ ವೃತ್ತಿಯಿಂದ ಬಂದರೊ ಏನೊ ಗೊತ್ತಾಗುವುದಿಲ್ಲ. ಚನ್ನಮಲ್ಲಿಕಾರ್ಜುನರ ತಂದೆ ಯವರಾದ ನೂರೊಂದಪ್ಪನವರು ಶಿರಾಳಕೊಪ್ಪದಲ್ಲಿ ಕೂಲಿಮಠದ ಅಯ್ಯಗಳಾಗಿ ತಿಂಗಳೊಂದಕ್ಕೆ ಐದು ರೂಪಾಯಿಗಳ ಸಂಬಳದ ಮೇಲೆ ಕಾರ್ಯ ಮಾಡತೊಡಗಿದರು. ನೂರೊಂದಪ್ಪನವರ ಪ್ರಭಾವ ಊರ ಮತ್ತು ಸುತ್ತಮುತ್ತಣ ಹಳ್ಳಿಪಳ್ಳಿಗಳ ಜನಗಳ ಮೇಲೆ ವಿಶೇಷವಾಗಿತ್ತು. ಅವರು ಅಲ್ಪ ಸ್ವಲ್ಪ ವ್ಯಾಪಾರವನ್ನು ಮಾಡುತ್ತಿದ್ದರು. ಈ ನೂರೊಂದಪ್ಪನವರಿಗೆ ಇಬ್ಬರು ಮಕ್ಕಳು. ಹಿರಿಯ ಮಗನೇ ಚನ್ನಮಲ್ಲಪ್ಪ; ಇನ್ನೊಬ್ಬ ಸಿದ್ಧಲಿಂಗಪ್ಪ.

ಚನ್ನಮಲ್ಲಪ್ಪ ಕ್ರಿ. ಶ. ಸುಮಾರು ೧೮೭೪-೭೫ ನೆಯ ಸಾಲಿನಲ್ಲಿ ಜನಿಸಿರಬಹುದು.1 ಬಾಲ್ಯದಿಂದಲೂ ಇವರಲ್ಲಿ ಗುರುಲಿಂಗಜಂಗಮ ಭಕ್ತಿ ಅನ್ಯಾದೃಶವಾಗಿತ್ತು. ತಂದೆ ತಾಯಿಯರು ಅತ್ಯಂತ ಆಚಾರಶೀಲರು; ಶಿವಾನುಭಾವಿಗಳು. ಅವರು ಇತ್ತ ಸಂಸ್ಕಾರ ಬಲದಿಂದ ಚನ್ನಮಲ್ಲಪ್ಪನವರೂ ಬಾಲ್ಯದಿಂದಲೇ ಶಿವಾನುಭಾವ ಸಂಪನ್ನರಾಗಿಯೇ ಬೆಳೆದರು. ಸ್ನಾನ ಪೂಜಾದಿಗಳಿಲ್ಲದೆ ಎಂದೂ ಪ್ರಸಾದವನ್ನೇ ಇವರು ಸ್ವೀಕರಿಸುತ್ತಿದ್ದಿಲ್ಲ. ಸ್ವಲ್ಪ ದೊಡ್ಡವರಾದ ಮೇಲೆ ನೂರೊಂದಪ್ಪನವರು ಇವರನ್ನು ತಮ್ಮ ಶಾಲೆಗೇ ಸೇರಿಸಿಕೊಂಡು ವಿದ್ಯಾಭ್ಯಾಸ ಮಾಡಿಸಿದರು. ಮುಂದೆ ನೂರೊಂದಪ್ಪನವರ ಗಾವಠಿ ಶಾಲೆ ಸರಕಾರಿ ಶಾಲೆಯಾಯಿತು. ಲೋವರ್ ಸೆಕೆಂಡರಿ ಪರೀಕ್ಷೆಯ ತರಗತಿಯಲ್ಲಿ ಚನ್ನಮಲ್ಲಪ್ಪ ಓದುವಾಗ ಶಾಲಾ ತನಿಖಾಧಿಕಾರಿಗಳು ಶಾಲೆಗೆ ಬಂದರು. ಅವರಿಗೆ ಬಾಲಕ ಚನ್ನಮಲ್ಲಪ್ಪನ ಪ್ರತಿಭೆ, ಬುದ್ಧಿವಂತಿಕೆಗಳು ಬಹಳ ಮೆಚ್ಚುಗೆಯಾದವು. ಆಗ ಶಾಲೆಗೆ ಬೇಕಾಗಿದ್ದ ಒಬ್ಬ ಶಿಕ್ಷಕನ ಸ್ಥಾನವನ್ನು ಓದುತ್ತಿರುವ ಬಾಲಕ ಚನ್ನಮಲ್ಲಪ್ಪನಿಗೇ ಕೊಟ್ಟು ಓದುತ್ತ ಉಪಾಧ್ಯಾಯ ವೃತ್ತಿಯನ್ನು ನಿರ್ವಹಿಸುವ (Pupil teacher) ಅವಕಾಶವನ್ನು ಕಲ್ಪಿಸಿದರು. ಆ ವರ್ಷವೇ ಚನ್ನಮಲ್ಲಪ್ಪ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಹೊಂದಿ ಕ್ರಿ. ಶ. ೧೮೮೯-೯೦ ನೆಯ ಸಾಲಿನಲ್ಲಿ ಪೂರ್ಣಾವಧಿಯ ಶಿಕ್ಷಕ ಸ್ಥಾನವನ್ನು ತಾನು ಓದಿದ ಸ್ಕೂಲಿನಲ್ಲಿಯೇ ಪಡೆದನು. ಮುಂದೆ ಅಪ್ಪರ್ ಸೆಕೆಂಡರಿ ಪರೀಕ್ಷೆ ಕಟ್ಟಿ ತೇರ್ಗಡೆ ಹೊಂದಿ ೧೯೧೨ ರಲ್ಲಿ ಶಿರಾಳಕೊಪ್ಪದಲ್ಲಿ ಎ. ವಿ. ಸ್ಕೂಲ್ ಆದಮೇಲೆ ಆ ಸ್ಕೂಲಿನ ಅಸಿಸ್ಟಂಟ್ ಮಾಸ್ತರ್ ಆಗಿ ಅದೇ ಹೈಸ್ಕೂಲಿನಲ್ಲಿಯೇ ನಿವೃತ್ತರಾದರು. ಕನ್ನಡ ಪಂಡಿತ ಪರೀಕ್ಷೆಗೆ ವ್ಯಾಸಂಗ ಮಾಡಬೇಕೆಂಬಪೇಕ್ಷೆಯಿಂದ ಆ ಪಠ್ಯ ಪುಸ್ತಕಗಳನ್ನು ತರಿಸಿ ಸ್ವತಃ ವ್ಯಾಸಂಗ ಮಾಡುತ್ತಿದ್ದರೆಂದು ತಿಳಿದುಬರುವುದು. ಆದರೆ ಆ ಪರೀಕ್ಷೆ ಕಟ್ಟಲಿಲ್ಲ.

ಚನ್ನಮಲ್ಲಪ್ಪನಿಗೆ ಬಾಲ್ಯದಿಂದ ಓದುವುದರಲ್ಲಿ ಎಷ್ಟು ಮಮತೆಯೋ ವ್ಯಾಪಾರ ಮಾಡುವುದರಲ್ಲೂ ಅಷ್ಟೇ ಉತ್ಸಾಹ. ಪ್ರಾಥಮಿಕ ಮೂರು-ನಾಲ್ಕು-ಐದನೆಯ ತರಗತಿಗಳಲ್ಲಿ ಓದುವಾಗ ತಂದೆ ನೂರೊಂದಪ್ಪನವರು ಮಗನನ್ನು ಸಂತೆಯಲ್ಲಿ ಬೆಂಕಿಪೊಟ್ಟಣಗಳನ್ನು ಮಾರಲಿಕ್ಕೆ ಕಳುಹಿಸುತ್ತಿದ್ದರಂತೆ. ಆಗ ಆಣೆಗೆ ಒಂದು ಡಜನ್ ಬೆಂಕಿಪೊಟ್ಟಣಗಳ ಮಾರಾಟದ ಕಾಲ. ಚನ್ನಮಲ್ಲಪ್ಪ ಒಂದು ಚೀಲದಲ್ಲಿ ಬೆಂಕಿಪೊಟ್ಟಣಗಳನ್ನು ತುಂಬಿಕೊಂಡು ರಾಗವಾಗಿ ಹಾಡುತ್ತ ಬೆಂಕಿಪೊಟ್ಟಣ ಮಾರುತ್ತಿದ್ದರೆ, ಜನರು ನೂರೊಂದಪ್ಪ ಮಾಸ್ತರ್ ಮಗನೆಂದು ಪ್ರೀತಿಯಿಂದ ಇವನ ಹತ್ತಿರವೇ ಬೆಂಕಿಪೊಟ್ಟಣಗಳನ್ನು ಕೊಂಡುಕೊಳ್ಳುತ್ತಿದ್ದರಂತೆ. ಆ ವ್ಯಾಪಾರದಲ್ಲಿ ಪ್ರತಿ ವಾರವೂ ಚನ್ನಮಲ್ಲಪ್ಪ

---

1 ಶ್ರೀ ಚನ್ನಮಲ್ಲಿಕಾರ್ಜುನರ ಜನನದ ಕಾಲ ನಿಶ್ಚಯವಾಗಿ ತಿಳಿದಿಲ್ಲ. ಅವರ ಶಿಷ್ಯರಾದ, ಬೆಂಗಳೂರು ಗವರ್ನಮೆಂಟ್ ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್ ಶಾಖೆಯ ಡೈರೆಕ್ಟರರಾಗಿ ನಿವೃತ್ತರಾಗಿದ್ದ ಶ್ರೀ ಡಿ. ಎಸ್. ಗುರುಬಸಪ್ಪನವರು ಈ ಕಾಲವನ್ನು ಹೇಳಿದ್ದಾರೆ.

ಚೆನ್ನಾಗಿಯೇ ಲಾಭವನ್ನು ಗಿಟ್ಟಿಸುತ್ತಿದ್ದನು. ಈ ವ್ಯಾಪಾರದ ಅಭಿರುಚಿಯೇ ಮುಂದೆ ಅವರು ದೊಡ್ಡವರಾಗಿ ಉಪಾಧ್ಯಾಯರಾದಮೇಲೆ ಹೆಚ್ಚಾಗಿ ಅನೇಕ ಬಗೆಯ ವ್ಯಾಪಾರ ವನ್ನು ಮಾಡುತ್ತಿದ್ದರಂತೆ. ಎಣ್ಣೆ, ರಾಗಿ, ಬತ್ತ, ಬೆಣ್ಣೆ ಮೊದಲಾದ ವ್ಯಾಪಾರವು ಇವರು ತಮ್ಮ ಉಪಾಧ್ಯಾಯ ವೃತ್ತಿಯ ಬಿಡುವಿನ ಸಮಯದ ಹವ್ಯಾಸವಾಗಿತ್ತು ಮತ್ತು ವ್ಯಾಪಾರ ಮಾಡುವವರಿಗೆ ಹಣ ಕೊಟ್ಟು ವ್ಯಾಪಾರ ಮಾಡಿಸಿ ಲಾಭಾಂಶವನ್ನು ಅವರಿಂದ ಪಡೆಯುತ್ತಿದ್ದರು. ಸುಗ್ಗಿಯಲ್ಲಿ ಅಗ್ಗವೆಂದು ಕಂಡುಬಂದ ಕಾಳುಕಡಿಗಳನ್ನು ಅಳೆಸಿ ಸಂಗ್ರಹ ಮಾಡಿ, ಮಳೆಗಾಲದಲ್ಲಿ ಮಾರಾಟ ಮಾಡುತ್ತಿದ್ದರಂತೆ. ಒಮ್ಮೆ ಬೆಲ್ಲವನ್ನು ಸಂಗ್ರಹಿಸಿಟ್ಟು ಮಳೆಗಾಲದಲ್ಲಿ ಮಾರಾಟ ಮಾಡಬೇಕೆನ್ನುವಷ್ಟರಲ್ಲಿ ಬೆಲ್ಲದ ಧಾರಣೆ ಕುಸಿದುಹೋಗಲು, ಹಾನಿಯಾಗುವುದೆಂದು ಹಾಗೆಯೇ ಬಿಟ್ಟರಂತೆ. ಆದರೆ ತೀವ್ರ ಮಳೆಗಾಲದ ಪರಿಣಾಮವಾಗಿ ಸಂಗ್ರಹಿಸಿದ ಬೆಲ್ಲವೂ ನೀರಾಗಿ ಹರಿದು ಬಹಳ ನಷ್ಟಹೊಂದಿದರಂತೆ. ಇಷ್ಟೆಲ್ಲ ವ್ಯಾಪಾರ–ಸಾಪಾರ ಮಾಡುತ್ತಿದ್ದರೂ ಜವಳಿ ಅಂಗಡಿ ಮಾಡಿದರೆ ಬಹಳ ಲಾಭವೆಂದು ಬೇರೆಯವರು ಹೇಳಿದುದನ್ನು ಕೇಳಿ ತಿಳಿದು ಜವಳಿ ಯನ್ನು ತರಿಸಿ, ವ್ಯಾಪಾರ ಪ್ರಾರಂಭ ಮಾಡಿದರಂತೆ. ಜವಳಿಯನ್ನು ಗಜಕಡ್ಡಿಯಿಂದ ಅಳತೆಮಾಡಿ ಹರಿದುಕೊಡುವಾಗ ಬಹಳ ತೊಂದರೆಪಡುತ್ತಿದ್ದರಂತೆ. ಕಾರಣ; ಅವರ ಬಲಗೈ ಊನವಾಗಿದ್ದುದು. ಮೈಲೀಬೇನೆಯ ಪರಿಣಾಮವಾಗಿ ಬಲಗೈ ಪೂರ್ಣ ನಷ್ಟ ವಾಗಿರದಿದ್ದರೂ ತುಂಡಾಗಿತ್ತು. ಹಸ್ತಭಾಗ ನೇರವಾಗಿರದೆ ಸೊಟ್ಟಾಗಿ ಮಣಿ ಕಟ್ಟಿಗೆ ಅಂಟಿಕೊಂಡಿತ್ತು. ಬಲಗಣ್ಣು ಕುರುಡಾಗಿತ್ತು, ಬಲ ಕಾಲೂ ಡೊಂಕಾಗಿತ್ತು. ಈ ಅಂಗವಿಕಲತೆಯೆಲ್ಲಾ ಮೈಲೀಬೇನೆ ಚನ್ನಮಲ್ಲಪ್ಪನವರಿಗೆ ಉಂಟುಮಾಡಿ ಪ್ರಾಣಹರಣ ಮಾಡದೆ ಬಿಟ್ಟುಹೋಗಿತ್ತು.

ಜವಳಿ ಅಂಗಡಿಯ ವ್ಯವಹಾರ ತನ್ನ ದೇಹಧರ್ಮಕ್ಕೆ ಹೊಂದಿಕೊಳ್ಳದ ವ್ಯಾಪಾರ ವೆಂದು ಅದನ್ನು ಕೈಬಿಟ್ಟರು. ಬರಬರುತ್ತ ಉಳಿದ ವ್ಯಾಪಾರಗಳನ್ನೂ ಕೈಬಿಟ್ಟರು. ಇವರು ವ್ಯಾಪಾರ ರಂಗದ ಒಡನಾಡಿಗಳು ಮುಖ್ಯವಾಗಿ ಆಲೂರಿನ ಪ್ರಸಿದ್ಧ ವ್ಯಾಪಾರಿ ಗಳಾಗಿದ್ದ ಸೂರಣಗಿ ಸಿದ್ಧಬಸಪ್ಪನವರು. ಯಾವ ವ್ಯಾಪಾರವನ್ನೇ ಮಾಡಲಿ ಅವರ ಸಲಹೆ ಸಹಕಾರಗಳನ್ನು ವಿಶೇಷವಾಗಿ ಪಡೆಯುತ್ತಿದ್ದರು. ಶಿರಾಳಕೊಪ್ಪದ ಈಗಿನ ಪ್ರಸಿದ್ಧ ವ್ಯಾಪಾರಿಗಳಾದ ಸೂರಣಗಿ ಸಂಗಪ್ಪನವರು, ಗುರುಶಾಂತಪ್ಪನವರು, ಎಣ್ಣೆ ಚನ್ನಪ್ಪ ಮತ್ತು ಸಹೋದರರು ಇನ್ನೂ ಅನೇಕರು ಇವರ ಶಿಷ್ಯವರ್ಗದವರೇ. ಇವ ಲ್ಲದೆ, ಲಿಂ. ಡಿ. ಎಸ್. ಗುರುಬಸಪ್ಪನವರು (ದಿ. ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್ ಡೈರೆಕ್ಟರ್ ಬೆಂಗಳೂರು) ಎಮ್ಮಿಗನೂರು ಶ್ರೀಕಂಠಯ್ಯನವರು (ದಿ. ಕೋ. ಆ. ರಜಿ ಸ್ಟ್ರಾರ್), ಉಡುಗಣಿಯ ರಾಘವೇಂದ್ರರಾವ್ ಮತ್ತು ಇಂಡಸ್ಟ್ರೀಸ್ ಆ್ಯಂಡ್ ಕಾಮರ್ಸ್ ಡೈರೆಕ್ಟರರಾಗಿ ನಿವೃತ್ತರಾಗಿರುವ ಶ್ರೀಮಾನ್ ಶಾಮಣ್ಣನವರೋ ಮೊದಲಾದ ನೂರಾರು ಜನ ವಿಖ್ಯಾತ ಅಧಿಕಾರಿಗಳಾಗಿದ್ದವರು ಚನ್ನಮಲ್ಲಪ್ಪನವರ ಶಿಷ್ಯರ ವರ್ಗ ದವರು.[1]

---

1 ಲಿಂ. ಶ್ರೀ ಡಿ. ಎಸ್. ಗುರುಬಸಪ್ಪನವರು ಶ್ರೀ ಚನ್ನಮಲ್ಲಿಕಾರ್ಜುನರ ಬಗೆಗೆ ಇದೇ ಗ್ರಂಥದಲ್ಲಿ ಬರೆದ ಲೇಖನವನ್ನು ಅವಲೋಕಿಸಿರಿ.

## ಉತ್ತಮ ವರ್ಗದ ಉಪಾಧ್ಯಾಯರು

ಶ್ರೀ ಚನ್ನಮಲ್ಲಿಕಾರ್ಜುನರು1 ಸಮಕಾಲೀನ ಉಪಾಧ್ಯಾಯರಲ್ಲಿ ಬಹಳ ಖ್ಯಾತಿವೆತ್ತವರೆನಿಸಿ ಕೀರ್ತಿಗಳಿಸಿದರು. ಇವರ ಬೋಧನಾ ಸಾಮರ್ಥ್ಯದ ಅರಿವು ವಿದ್ಯಾಧಿಕಾರಿಗಳಿಗೆ ಉಂಟಾಗಿತ್ತು. ಅಲ್ಲದೆ ಶಾಲಾಸಂವಿಧಾನ ಪಾಲನೆ. ಲೆಕ್ಕಪತ್ರಗಳ ಇಡುವಿಕೆ, ಕರ್ತವ್ಯದಲ್ಲಿ ಶ್ರದ್ಧಾಭಕ್ತಿ ವಿಶ್ವಾಸಪೂರ್ಣ ನಡೆವಳಿಕೆಗಳ ಫಲವಾಗಿ ಯಾವ ಅಧಿಕಾರಿಗಳೂ ಇವರ ಬಗ್ಗೆ ಯಾವ ರೀತಿಯಿಂದಲೂ ಎಂದೂ ತನಿಖೆಮಾಡುತ್ತಿರಲಿಲ್ಲ. 'ನಿಮ್ಮನ್ನು ತನಿಖೆಮಾಡುವ ಮಟ್ಟಕ್ಕೆ ನಾವಿನ್ನೂ ಏರಿಲ್ಲ'ವೆಂದು ಕೆಲಕೆಲವು ಅಧಿಕಾರಿಗಳು ಅನ್ನುತ್ತಿದ್ದರಂತೆ. ವಿದ್ಯಾರ್ಥಿಗಳಿಗೆ ಒಂದು ಸಲ ಪಾಠ ಹೇಳಿ ವಿವರಿಸಿದರೆ ಸಾಕು, ಇನ್ನೊಂದು ಸಲ ಆ ಪಾಠವನ್ನು ಹೇಳುವ ಆವಶ್ಯಕತೆಯೇ ಉಳಿಯುತ್ತಿದ್ದಿಲ್ಲ. ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವನ್ನು ಓದುವ ಅಗತ್ಯವೂ ಇರುತ್ತಿರಲಿಲ್ಲವಂತೆ. ಗಣಿತದಲ್ಲಿ ಅತ್ಯಂತ ಉತ್ತಮ ಬೋಧನಾ ಸಾಮರ್ಥ್ಯ ಪಡೆದಿದ್ದರು. ಭೂಗೋಳ ಚರಿತ್ರೆಯ ಪಾಠದಲ್ಲಿ ನಕಾಶ (ಮ್ಯಾಪ್) ಮೊದಲಾದುವನ್ನು ಉಪಯೋಗಿಸಿ, ಬೋಧಿಸುತ್ತಿದ್ದರೆ ವಿಷಯ ಕಣ್ಮುಂದೆ ಕಟ್ಟಿದ ಹಾಗಾಗುತ್ತಿತ್ತೆಂದು ಅವರ ಶಿಷ್ಯವರ್ಗ ಇಂದಿಗೂ ಹೇಳುತ್ತಿದೆ. ಈ ಎಲ್ಲ ಪಾಠಗಳನ್ನು ಅವರು ಪುಸ್ತಕ ನೋಡದೆಯೇ ಹೇಳುತ್ತಿದ್ದುದೊಂದು ವಿಶೇಷವೆನ್ನುತ್ತದೆ ಶಿಷ್ಯವರ್ಗ. ಜೊತೆಗೆ ನಿಗೂಢವೇದಾಂತ ತತ್ತ್ವಗಳನ್ನು ಅನೇಕ ಸುಂದರೋಪಮಾನಗಳನ್ನು ಹೇಳುವುದರ ಮೂಲಕ ಮನದಟ್ಟಾಗುವಂತೆ ಮಾಡಿ ವಿದ್ಯಾರ್ಥಿಗಳಲ್ಲಿ ನೀತಿ ನಿಯಮಗಳ ಭದ್ರ ತಳಹದಿಯನ್ನುಂಟುಮಾಡುತ್ತಿದ್ದರು. ಲೋವರ್ ಸೆಕೆಂಡರಿ ತರಗತಿಯಲ್ಲಿನ ವಿದ್ಯಾರ್ಥಿಗಳಿಗೆ ಹಗಲು ರಾತ್ರಿ ಕಷ್ಟಪಟ್ಟು ಯಾವ ಪ್ರತಿಫಲವನ್ನೂ ಬಯಸದೆ ಪಾಠಹೇಳಿ ಪರೀಕ್ಷೆಗೆ ಸಿದ್ಧಗೊಳಿಸುತ್ತಿದ್ದರು. ಅಂತೆಯೆ ಪ್ರತಿವರ್ಷ ಸೇಕಡ ೮೫–೯೦ರಷ್ಟು ವಿದ್ಯಾರ್ಥಿಗಳು ತೇರ್ಗಡೆ ಹೊಂದಿ ಶಿರಾಳಕೊಪ್ಪದ ಶಾಲೆಗೊಂದು ದೊಡ್ಡ ಕೀರ್ತಿಯನ್ನೇ ತಮ್ಮ ಉಪಾಧ್ಯಾಯ ವೃತ್ತಿಯ ಕೊನೆಯ ಕೊನೆಯುವರೆಗೂ ಉಳಿಸಿಕೊಂಡು ಬಂದರು. ಪ್ರತಿವರ್ಷವೂ ಎಲ್. ಎಸ್. ತರಗತಿಯ ಪಾಠಪ್ರವಚನಗಳೆಲ್ಲ ಇವರವೇ. ಮನೆಯಲ್ಲಿ ರಾತ್ರಿ ವಿದ್ಯಾರ್ಥಿಗಳನ್ನೆಲ್ಲ ಕರೆಸಿ ಇಂಗ್ಲೀಷ್, ಗಣಿತ ಮೊದಲಾದ ಕಠಿಣ ವಿಷಯಗಳ ಬೋಧನೆಯಲ್ಲಿ ನಿರತರಾಗಿರುತ್ತಿದ್ದರು. ಇವರ ಈ ರೀತಿಯ ಬೋಧನೆಯ ಫಲವಾಗಿ ಎಲ್ಲ ಜನರೂ ಇವರಲ್ಲಿ ಅಪಾರ ಗೌರವ ಭಾವ ತೋರಿಸುತ್ತಿದ್ದರು. ಅವರನ್ನು ಹೆಸರು ಹಿಡಿದು ಇಂದಿಗೂ ಅಲ್ಲಿಯ ಜನ ಕರೆಯುತ್ತಿಲ್ಲವಂತೆ.

## ಶಿವಾನುಭಾವ ಪ್ರವಚನಕಾರ

ಬರಬರುತ್ತ ಚನ್ನಮಲ್ಲಿಕಾರ್ಜುನರು ಊರಿನಲ್ಲಿ ಶಿವಾನುಭಾವ ಪ್ರವಚನ ಪ್ರಾರಂಭಿಸಿದರು. ತಮ್ಮ ಆ ಶಿವಾನುಭಾವ ಪ್ರವಚನ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳೆಲ್ಲ ಭಾಗವಹಿಸಬೇಕೆಂದು ಸೂಚನೆ ಕೊಡುತ್ತಿದ್ದರು. ಬಹಳ ವಿದ್ಯಾರ್ಥಿಗಳು ಅವರ

---

1 ಇನ್ನು ಮುಂದೆ ಚನ್ನಮಲ್ಲಪ್ಪನವರನ್ನು ಅವರೇ ಇಟ್ಟುಕೊಂಡ ಶ್ರೀ ಚನ್ನಮಲ್ಲಿಕಾರ್ಜುನ, ಶ್ರೀ ಚ. ಎಂದೇ ಹೆಸರಿಸಲಾಗಿದೆ.

ಶಿವಾನುಭಾವ ಪ್ರವಚನ ಲಾಭವನ್ನು ಪಡೆದರು. ಚನ್ನಮಲ್ಲಿಕಾರ್ಜುನರ ಶಿವಾನುಭಾವ ಪ್ರವಚನದ ಅಭಿರುಚಿಗೆ ಶಿರಾಳಕೊಪ್ಪದ ಸುಪ್ರಸಿದ್ಧ ಶಿವಾನುಭಾವಿಗಳೂ ಸಂಗೀತ ಸಾಹಿತ್ಯ ವಿದ್ವಾಂಸರೂ ಆದ ಎಮ್ಮಿಗನೂರು ಗದಿಗೆಯ್ಯನವರು. ಸಮಕಾಲೀನ ಕರ್ನಾಟಕದಲ್ಲಿ ಗದಿಗೆಯ್ಯನವರು ಮೇಲ್ಮಟ್ಟದ ಸಂಗೀತ ವಿದ್ವಾಂಸರು. ಹಾನಗಲ್ಲು ಕುಮಾರಸ್ವಾಮಿಗಳ ಶಿಷ್ಯರೂ ಕರ್ನಾಟಕದಲ್ಲಿ ಸಂಗೀತ ಪರಂಪರೆಯ ಮಹಾಕ್ರಾಂತಿಗೆ ಕಾರಣಪುರುಷರೂ, ಸುಪ್ರಸಿದ್ಧ ಪ್ರವಚನ ಪಟುಗಳೂ ಎನಿಸಿ ಕೀರ್ತಿಶೇಷರಾಗಿರುವ ಕಾಡಸೆಟ್ಟಿಹಳ್ಳಿ ಪಂಚಾಕ್ಷರಿ ಗವಾಯಿಗಳು ಗದಿಗೆಯ್ಯನವರಲ್ಲಿ ಸಂಗೀತ ಪಾಠವನ್ನೂ ಶಿವಾನುಭಾವ ಪ್ರವಚನಾನುಭವವನ್ನು ಪಡೆದವರು. ಗದಿಗೆಯ್ಯನವರ ಸಂಗೀತ ವಿದ್ವತ್ತಿಗೆ ಮಾರುಹೋಗಿ ತಂಜಾವೂರಿನಿಂದ ಅನೇಕ ವಿದ್ವಾಂಸರು ಶಿರಾಳಕೊಪ್ಪಕ್ಕೆ ಬಂದು ಸಂಗೀತಶಾಸ್ತ್ರ ರಹಸ್ಯವನ್ನೂ. ಅನುಭವವನ್ನೂ ಪಡೆದು ತೆರಳುತ್ತಿದ್ದರು. ಈ ಗದಿಗೆಯ್ಯನವರೇ ಚನ್ನಮಲ್ಲಿಕಾರ್ಜುನರ ಮೇಲೆ ಅತ್ಯಂತ ಪ್ರಭಾವ ಬೀರಿದ ವ್ಯಕ್ತಿಯಾಗಿದ್ದರು. ಶ್ರೀ ಚ. ಅವರು ಹೆಚ್ಚಾಗಿ ಈ ಎಮ್ಮಿಗನೂರು ಗದಿಗೆಯ್ಯನವರ ಒಡನಾಡಿಗಳು. ಬಿಡುವಿನ ವೇಳೆಯನ್ನೆಲ್ಲ ಸಾಮಾನ್ಯವಾಗಿ ಇತರರೊಡನೆಯೇ ಕಳೆಯುತ್ತಿದ್ದರು. ಈಗ ಗದಿಗೆಯ್ಯನವರಲ್ಲದೆ ಆಗ ಶಿರಾಳಕೊಪ್ಪದ ನಾಡಿನಲ್ಲಿ ಶಿವಾನುಭಾವ ಪ್ರವಚನ ಕ್ರಾಂತಿಯನ್ನು ಮಾಡಿದವರು ಮುಖ್ಯವಾಗಿ ಗೊಗ್ಗಿಹಳ್ಳಿ ಸೋಮನಾಥಶಾಸ್ತ್ರಿಗಳು. ಕಬ್ಬೂರು ಶರಣರು, ಶ್ರೀ ಚ. ಅವರು. ಶಿರಾಳಕೊಪ್ಪಕ್ಕೆ ಮೂರುಮೈಲಿ ದೂರವಿರುವ 'ಬಿಳವಾಣಿ ಮರಡಿ', ಶಿರಾಳಕೊಪ್ಪದ ವಿರಕ್ತಮಠ, ನೀರಲಗಿ ದೇವಾಲಯ, ಅನಿಮಿಷಾರ್ಯರ ಕೊಪ್ಪಲು ಮುಂತಾದ ಕಡೆಗಳಲ್ಲೆಲ್ಲ ಶಿವಾನುಭಾವ ಪ್ರವಚನ ಕಾರ್ಯಕ್ರಮಗಳು ಜರುಗುತ್ತಿದ್ದವು. ಈ ಗೋಷ್ಠಿಗಳಲ್ಲಿ ಮುಖ್ಯವಾಗಿ ಹಾನಗಲ್ಲು ಮಠದ ಶ್ರೀ ನಿ.ಪ್ರ. ಕುಮಾರಮಹಾಸ್ವಾಮಿಗಳು ಇದ್ದೇ ಇರುತ್ತಿದ್ದರು. ವಿಶೇಷ ಸಂದರ್ಭಗಳಲ್ಲಿ ಕೆಳದಿ ಮಠದ ಘ. ಲಿಂ. ಚ. ರೇವಣಸಿದ್ಧ ಶಿವಯೋಗಿಗಳು, ಬೀಳಗಿಸ್ವಾಮಿಗಳು ದಯಮಾಡಿಸುತ್ತಿದ್ದರು. ಇವರೆಲ್ಲರ ಕೃಪಾದೃಷ್ಟಿಯ ಫಲವಾಗಿ ಶಿರಾಳಕೊಪ್ಪದ ಸುತ್ತಮುತ್ತಣ ಪ್ರದೇಶ ೧೨ನೆಯ ಶತಮಾನದ ಕಲ್ಯಾಣದ ಶರಣರ ಮಹಾಕ್ರಾಂತಿಯನ್ನು ನೆನಪಿಗೆ ತರುವಂತಿತ್ತು. ಕಬ್ಬೂರು ಶರಣರು ಮಹಾಮಹಿಮಾಶಾಲಿಗಳೆನಿಸಿದ್ದರು. ಅವರು ಪ್ರವಚನ ಪ್ರಾರಂಭಮಾಡಿದರೆ ಜನಜಂಗುಳಿ ಸದ್ದುಗದ್ದಲವಿಲ್ಲದೆ ಶ್ರದ್ಧಾಭಕ್ತಿಯಿಂದ ಕೇಳಿ ಮೈಮರೆಯುತ್ತಿತ್ತು. ಒಮ್ಮೆ ಕಬ್ಬೂರು ಶರಣರ ಮನೆಯಲ್ಲಿ ಹಾನಗಲ್ಲು ಕುಮಾರಸ್ವಾಮಿಗಳವರ ಪಾದಪೂಜೆ ನಡೆಯುತ್ತಿತ್ತು. ಆ ದಿನ ನವಿಲುಗುಂದದ ಬಸವಲಿಂಗಸ್ವಾಮಿಗಳೂ ದಯಮಾಡಿಸಿದ್ದರು. ಆಗ ಶರಣರ ಮನೆಯ ಒಂದು ಪಾರ್ಶ್ವಕ್ಕೆ ಬೆಂಕಿಹತ್ತಿತಂತೆ. ಶರಣರು ಪಾದಪೂಜಾ ಸಂಭ್ರಮದಲ್ಲಿ ತಲ್ಲೀನರಾಗಿದ್ದರು. ಜನರೆಲ್ಲ ಗಾಬರಿಯಿಂದ ಬೆಂಕಿ ಬೆಂಕಿ ಎಂದು ಗದ್ದಲಮಾಡಿ ಮನೆಯ ಹೊರಭಾಗದಲ್ಲಿ ಕೂಗಾಡುತ್ತಿದ್ದರು. ಒಳಗೆ ಪೂಜಾಕಾರ್ಯದಲ್ಲಿ ಮಗ್ನರಾಗಿದ್ದ ಕಬ್ಬೂರು ಶರಣರಿಗೆ ನಿಮ್ಮ ಮನೆಗೆ ಬೆಂಕಿಬಿದ್ದಿದೆ ಎಂದು ಕೂಗಿ ಹೇಳಿದರು. ಆಗ ಶರಣರು, 'ಶಿವಯೋಗಿಯ ಪಾದಪೂಜೆ ತೀರ್ಥಪ್ರಸಾದ ಸ್ವೀಕಾರ ಸಮಯದಲ್ಲಿ ಬೆಂಕಿಹತ್ತಿದರೆ ಅದೇ ಆರುತ್ತದೆ' ಎಂದು ನಿರ್ವಿಕಾರಭಾವದಿಂದ ಯಥಾರೀತಿ ತಮ್ಮ ಕರ್ತವ್ಯದಲ್ಲಿಯೇ ನಿರತರಾಗಿಬಿಟ್ಟ

ದ್ದರು. ಆಗ ಬೆಂಕಿಯೂ ಆರಿತಂತೆ. ಇಂಥ ಮಹಾಮಹಿಮರಾದ ಕಬ್ಬೂರು ಸರಣರ ಒಡನಾಟದಿಂದಲೂ, ಹಾನಗಲ್ಲು ಶಿವಯೋಗಿಗಳ ಕೃಪಾಕಟಾಕ್ಷಕ್ಕೆ ಪಾತ್ರರಾದುದರಿಂದಲೂ ಶ್ರೀ ಜ. ಅವರು ಶಿವಾನುಭಾವ ಶಾಸ್ತ್ರದಲ್ಲಿ ಪರಿಪಕ್ವಮತಿಗಳಾಗಿ ಹೋಗಿದ್ದರು. ತಕ್ಕಷ್ಟು ಸಂಸ್ಕೃತಾಭ್ಯಾಸಮಾಡಿದ್ದರಿಂದಲೂ ಕನ್ನಡದಲ್ಲಿ ಉತ್ತಮ ಪಾಂಡಿತ್ಯ ಗಳಿಸಿದುದರಿಂದಲೂ ಶ್ರೀ ಜ. ಅವರು ಶಿವಾನುಭಾವ ಶಾಸ್ತ್ರ ಗ್ರಂಥಗಳಾದ ಮೊಗ್ಗಿಯ ಮಾಯಿ ದೇವರ ಶತಕತ್ರಯ, ಅನುಭವಸೂತ್ರ, ಕರಣದಹಸಿಗೆ, ಮಿಶ್ರಾರ್ಪಣ, ಮಂತ್ರ ಗೋಪ್ಯ, ಬಸವಾದಿ ಪ್ರಮಥರ ವಚನ ಶಾಸ್ತ್ರಾದಿಗಳನ್ನು ಕರತಲಾಮಲಕಮಾಡಿಕೊಂಡು ಜಿಜ್ಞಾಸುಗಳ ಯಾವ ಸಂಶಯವನ್ನೇ ಆಗಲಿ ನಿವಾರಿಸುವ ಅದ್ಭುತ ಸಾಮರ್ಥ್ಯ ಪಡೆದಿದ್ದರು. ಅಂತೆಯೆ ಮಹಾಮಹಿಮರೆನಿಸಿದ್ದ ಹಾನುಗಲ್ಲು (ಹಾನಗಲ್ಲು) ಕುಮಾರ ಸ್ವಾಮಿಗಳವರ ಸಂಪೂರ್ಣ ಕೃಪೆಗೆ ಪಾತ್ರರಾಗಿ ಅವರಿಂದ ೧೯೧೨ ನೆಯ ಇಸ್ವಿಯಲ್ಲಿ ಅನುಗ್ರಹ ಪಡೆದು ಆ ತಮ್ಮ ಗುರುಗಳ ಅನುಜ್ಞೆಯ ಮೇರೆಗೆ ಯಾವಜ್ಜೀವವೂ ಶಿವಾನುಭಾವ ಪ್ರಚಾರ ಕಾರ್ಯದಲ್ಲಿ ತಮ್ಮ ಸರ್ವಸ್ವವನ್ನೂ ವಿನಿಯೋಗಿಸುವ ಸಂಕಲ್ಪದಿಂದ ಬದ್ಧರಾದರು. ತಾವು ಮುಂದೆ ಹೊರಡಿಸಿದ ಸದ್ಧರ್ಮ ದೀಪಿಕೆಯು 'ಪರಮ ಪೂಜ್ಯರಾದ ಶ್ರೀ ನಿ. ಪ್ರ. ಸದಾಶಿವಸ್ವಾಮಿಗಳು (ಕುಮಾರಸ್ವಾಮಿಗಳು) ಶಿವಯೋಗ ಮಂದಿರ ಇವರ ಸ್ಮಾರಕದಲ್ಲಿ ನಡೆಯಿಸುವ ಪತ್ರವಿದು' ಎಂಬ ಮೇಲ್ಪಟದ ಮೊದಲಕ್ಷರಗಳಿಂದ ಕೂಡಿದುದನ್ನು ಗಮನಿಸಬಹುದು.

ಹಾನಗಲ್ಲು ಕುಮಾರಸ್ವಾಮಿಗಳವರ ಸಂಪರ್ಕ ಶ್ರೀ ಜ. ಅವರಿಗೆ ಬಹುಪೂರ್ವದಿಂದಲೇ ಆಗಿತ್ತು. ೧೯೦೮ ರಲ್ಲಿ ಶಿವಯೋಗಮಂದಿರದ ಸಂಸ್ಥಾಪನೆಯ ಸಮಯದಲ್ಲಿ ಶ್ರೀ ಜ. ಅವರು ಅಲ್ಲಿಗೆ ಹೋಗಿ ತಮ್ಮ ಭಾಷಣ ಪ್ರವಚನಗಳನ್ನು ಮಾಡಿದ್ದರು. ೧೯೧೨ ರಲ್ಲಿ ಅವರ ಅನುಗ್ರಹ ದೀಕ್ಷೆ ಪಡೆದಮೇಲೆ ಸತತ ಅವರ ಸಂಪರ್ಕವನ್ನು ಎಲ್ಲ ವಿಧದಲ್ಲೂ ಇಟ್ಟುಕೊಂಡೇ ಬಾಳಿದರು. ಮತ್ತು ಅವರ ಮಹಾಕ್ರಾಂತಿಯಲ್ಲಿ ಹಲವಾರು ಬಗೆಯ ನೆರವು ನೀಡಿದ ಮಹನಿಯರಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರೂ ಒಬ್ಬರು.

೨೦ನೆಯ ಶತಮಾನದ ಪೂರ್ವಾರ್ಧದ ವೀರಶೈವೇತಿಹಾಸದಲ್ಲಿ ಪರಳಿ ಜ್ಯೋತಿರ್ಲಿಂಗದ ಸಂಬಂಧದಲ್ಲಿ ಬಿದ್ದ ವ್ಯಾಜ್ಯ ಸಾಕಷ್ಟು ಕೋಲಾಹಲವನ್ನುಂಟುಮಾಡಿದ ಘಟನೆ. ಈ ಘಟನೆ ನಡೆದುದು ೧೯೨೪ನೆಯ ಇಸ್ವಿಯಲ್ಲಿ ಇದರ ಅಧ್ವರ್ಯುಗಳು ಚೌಡದಾನಪುರದ ಶ್ರೀ ಜಗದಾರ್ಯ ಸ್ವಾಮಿ ವಿರೂಪಾಕ್ಷ ಒಡೆಯರು. ವೈದ್ಯನಾಥ ಜ್ಯೋತಿರ್ಲಿಂಗವಿದ್ದುದು ಆಗಿನ ನಿಜಾಮ ಸ್ಟೇಟ್‌ನಲ್ಲಿ "ವೀರಶೈವರಿಗೆ ವೇದಾಧಿಕಾರ ವಿಲ್ಲ; ಅವರು ಶೂದ್ರರು. ವೈದ್ಯನಾಥಸ್ವಾಮಿಗೆ ರುದ್ರಾಭಿಷೇಕಾದಿಗಳನ್ನು ಮಾಡಲು ಅವರಿಗೆ ಅಧಿಕಾರವಿಲ್ಲ"ವೆಂಬುದೇ ಇಲ್ಲಿ ವ್ಯಾಜ್ಯದ ಮುಖ್ಯ ಅಂಶ. ಮೊದಲು ಇದು ವೈಯುಕ್ತಿಕವಾದುದಾಗಿತ್ತು. ಅನಂತರ ವೀರಶೈವ ಸಮಾಜದ ಮಾನಮರ್ಯಾದೆಯ ಪ್ರಶ್ನೆಯಾಗಿ ಸಮಗ್ರ ವೀರಶೈವ ಪ್ರಪಂಚದಲ್ಲೇ ಎಲ್ಲರ ಗಮನಸೆಳೆಯುವ ಅಂಶವಾಗಿ ಹರಡಿಕೊಂಡಿತು. ನಿಜಾಂ ಸರಕಾರ ಈ ವ್ಯಾಜ್ಯವನ್ನು ಬಗೆಹರಿಸಲು ನಿವೃತ್ತ ಹೈಕೋರ್ಟು ನ್ಯಾಯಮೂರ್ತಿ ಶ್ರೀ ಬಾಲಮುಕುಂದರಾವ್ ಎಂಬುವರನ್ನು ನೇಮಿಸಿತು. ಈ ವ್ಯಾಜ್ಯದಲ್ಲಿ ವಾದಮಾಡಲು ವೀರಶೈವರ ಪರವಾಗಿ ಆಗ ಇಂದೂರಿನಲ್ಲಿ

ವೇದಭಾಷ್ಯ ಪ್ರೊಫೆಸರರಾಗಿದ್ದ ಮೇಲೆಹೇಳಿದ ಸ್ವಾಮಿ ವಿರೂಪಾಕ್ಷ ಒಡೆಯರವರನ್ನು ಆರಿಸಿತು. ಹಾನಗಲ್ಲು ಕುಮಾರಸ್ವಾಮಿಗಳು ಇನ್ನಿತರ ಅನೇಕ ಮಠಾಧೀಶ್ವರರು ವಾದ ಮಾಡಲು ಅನೇಕ ಆಧಾರಗಳನ್ನು ಧನ ಸಂಗ್ರಹವನ್ನೂ ಒಡೆಯರವರಿಗೆ ಒದಗಿಸಿತು. ಆಗ ಶ್ರೀ ಚ. ಅವರು ಶ್ರೀ ಕುಮಾರಸ್ವಾಮಿಗಳ ಮೂಲಕ ವೀರಶೈವರು ಶೂದ್ರರಲ್ಲ ವೆಂಬಂಶಕ್ಕೆ ವೇದೋಪನಿಷತ್ತಿನ ಅನೇಕ ಆಧಾರಗಳನ್ನು ಒದಗಿಸಿದರೆಂಬುದು ಬಹಳ ಮಹತ್ವದ ಅಂಶ. ಧನಸಂಗ್ರಹಣ ಕಾರ್ಯದಲ್ಲಿ ಶ್ರೀ ಕುಮಾರಸ್ವಾಮಿಗಳವರ ಸಂಗಡ ಶ್ರೀ ಚ. ಅವರೂ ವಿಶೇಷ ಪರಿಶ್ರಮ ವಹಿಸಿದರು. ಆ ವ್ಯಾಜ್ಯದಲ್ಲಿ ವೀರ ಶೈವರಿಗೆ ಗೆಲುವಾಯಿತು. ವೀರಶೈವರು ವೇದಾಧಿಕಾರಿಗಳೆಂದೂ ಅವರಿಗೆ ರುದ್ರಾಭಿ ಷೇಕ ಮಾಡುವ ಅಧಿಕಾರವುಂಟೆಂದೂ ಹೈಕೋರ್ಟು ತೀರ್ಮಾನ ನೀಡಿತು.

ವಾದ ಭೂಮಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರಿಗೆ ಅಪ್ರತಿಹತ ಸಾಮರ್ಥ್ಯ ವಿತ್ತು. ಅವರು ಮೈಗೂಡಿಸಿಕೊಂಡ ಅನೇಕ ಶಾಸ್ತ್ರಗ್ರಂಥಗಳ ಜ್ಞಾನರಾಶಿ, ಸ್ವತಃ ಶಿವಾನುಭಾವದಲ್ಲಿ ಓತಪ್ರೇತಗೊಂಡ ನಡೆನುಡಿ, ಭಾಷಾಪ್ರಭುತ್ವ, ಲೌಕಿಕ ಜ್ಞಾನ–ಈ ಅನೇಕ ಗುಣಗಳು ಅವರಿಗೆ ವಾದ ಭೂಮಿಯಲ್ಲಿ ವಿಶೇಷ ಸಾಮರ್ಥ್ಯವನ್ನುಂಟುಮಾಡಿ ದ್ದುವು. ಅಂತೆಯೇ ಅವರು ವಾದದಲ್ಲಿ ಎಂಥ ವಿದ್ವಾಂಸರನ್ನೇ ಆಗಲಿ ಸುಲಭವಾಗಿ ಸೋಲಿಸುತ್ತಿದ್ದರು. ೧೯೨೭ ರಲ್ಲಿ ರಂಭಾಪುರಿ ಜಗದ್ಗುರುಗಳವರು ಶಿರಾಳಕೊಪ್ಪಕ್ಕೆ ಬಂದಾಗ ಗುರುವಿರಕ್ತ ಸಂಬಂಧವಾದ ಚರ್ಚೆ ನಡೆಯಿತೆಂದು ತಿಳಿದುಬರುತ್ತದೆ. ಈ ಘಟನೆ ನಡೆದ ಕೆಲದಿನಗಳ ಮೇಲೆ ಶ್ರೀ ಚ. ಅವರು 'ಜಂಗಮಾಧಿಕ್ಯ'ವೆಂಬ ಗ್ರಂಥ ವನ್ನು ಪ್ರಕಟಿಸಿದರು. ಇನ್ನೊಮ್ಮೆ ೧೯೩೪ ನೆಯ ಇಸ್ವಿಯೆಂದು ತೋರುತ್ತದೆ. ಆಗ ಹಾವೇರಿಯ ಶಿವಾನಂದ ಥೇಟರಿನಲ್ಲಿ ನೆರೆದ ಮಹಾಸಭೆಯಲ್ಲಿಯೂ ರಂಭಾಪುರಿ ಶ್ರೀಗಳವರ ಸಮ್ಮುಖದಲ್ಲಿ ಲಿಂ. ನಾಗನೂರು ಬ್ರಹ್ಮಸೂತ್ರಾಧ್ಯಕ್ಷ ಕಾಶಿನಾಥಶಾಸ್ತ್ರಿಗಳವ ರೊಡನೆ ಅದ್ಭುತವಾಗಿ ವಾದಮಾಡಿ 'ಜಂಗಮಾಧಿಕ್ಯ'ವನ್ನು ಎತ್ತಿಹಿಡಿದು ಸಮಸ್ತ ಸಭೆಯ ಶ್ಲಾಘನೆಗೆ ಪಾತ್ರರಾದರು.

## ಸಂಶೋಧನ ಕಾರ್ಯ

ಶ್ರೀ ಚ. ಅವರು ತಮ್ಮ ಉಪಾಧ್ಯಾಯ ವೃತ್ತಿಯ ಜೊತೆ ಜೊತೆಯಲ್ಲಿಯೇ ಮೇಲೆ ಕಾಣಿಸಿದ ಸಾಮಾಜಿಕ ಕಾರ್ಯ ನಿರತರಾಗಿರುತ್ತಿದ್ದರು. ಬಿಡುವಿದ್ದಾಗ ಬಳ್ಳಿ ಗಾವಿ, ತಾಳಗುಂದ, ಬನವಾಸಿ, ಬಂದಳಿಕೆ, ಏಕಾಂತರಾಮಯ್ಯನಗುಡ್ಡ, ಮುತ್ತಿಗೆ, ತೊಗರಸೆ–ಇತ್ಯಾದಿ ಅನೇಕ ಪ್ರಾಚೀನ ಐತಿಹಾಸಿಕ ಸ್ಥಳಗಳಲ್ಲಿ ತಿರುಗಿ, ಅವುಗಳ ಐತಿಹ್ಯ ವನ್ನು ಸಂಗ್ರಹಿಸುವುದು, ಅಲ್ಲಿನ ಶಾಸನಗಳನ್ನು ಓದುವುದು, ಆಯಾಯ ಹಳ್ಳಿಗಳಲ್ಲಿ ಸಿಗುವ ಓಲೆಗರಿಗಳ ಗ್ರಂಥಗಳು, ಕೈಬರವಣಿಗೆಯ ಪ್ರತಿಗಳೇ ಮೊದಲಾದವುಗಳನ್ನು ಸಂಗ್ರಹಿಸಿಕೊಂಡುಬರುವುದು–ಇಂಥ ಕಾರ್ಯದಲ್ಲಿರುತ್ತಿದ್ದರು. ಅವನ್ನೆಲ್ಲ ಮನೆಯಲ್ಲಿ ರಾಶಿರಾಶಿಯಾಗಿ ತಂದೊಟ್ಟುತ್ತಿದ್ದರು. ಹಾನಗಲ್ಲು ಸ್ವಾಮಿಗಳು ಬಂದಾಗಲೆಲ್ಲ ಅವರಿಗೆ ತಮ್ಮ ವರದಿಯನ್ನೊಪ್ಪಿಸುತ್ತಿದ್ದರು. ಹಾನಗಲ್ಲು ಸ್ವಾಮಿಗಳು ಅಪ್ರಕಟಿತ ವೀರಶೈವ ಸಾಹಿತ್ಯ ರಾಶಿಯನ್ನು ಪ್ರಕಟಗೊಳಿಸಲು ಪ್ರೋತ್ಸಾಹಿಸುತ್ತಿದ್ದರು. ಅಂತೆಯೇ ಶ್ರೀ ಚ. ಅವರು ಹಳೆಯ ಗ್ರಂಥರಾಶಿಯನ್ನೆಲ್ಲ ಓದುವುದು, ಅವುಗಳನ್ನು ಶುದ್ಧವಾಗಿ ಬರೆಯು

ವುದು ಈ ಕಾರ್ಯದಲ್ಲೇ ಸತತ ತೊಡಗಿರುತ್ತಿದ್ದರು. ಸತತವೂ ಒಂದಿಲ್ಲೊಂದು ಉದ್ಯೋಗದಲ್ಲಿಯೇ ಅವರು ತೊಡಗಿರುತ್ತಿದ್ದರಲ್ಲದೆ, ವ್ಯರ್ಥ ತಿರುಗಾಡುವುದು, ಕಾಡು ಹರಟೆ ಕೊಚ್ಚುವುದು, ಸುಮ್ಮನೆ ಮಲಗುವುದು—ಇತ್ಯಾದಿಗಳು ಅವರ ಜೀವನದಲ್ಲಿ ಇಣಿಕಿ ಹಾಕಿರಲೇ ಇಲ್ಲ. ಹಾನಗಲ್ಲು ಸ್ವಾಮಿಗಳು ಬಂದಾಗ ಶ್ರೀ ಚ. ಅವರು ಅವರ ಸಮೀಪದಲ್ಲಿ ಇರಲೇಬೇಕು. ಆಗ ಊರಿನಲ್ಲಿ ಏನಾದರೂ ಕಾರ್ಯಕ್ರಮ ನಡೆಯಲೇಬೇಕು. ಆ ಕಾರ್ಯ ಕ್ರಮಗಳನ್ನು ಏರ್ಪಾಟುಗೊಳಿಸುವ ಭಾರವೆಲ್ಲ ಶ್ರೀ ಚ. ಅವರ ಮೇಲೆಯೇ ಇರುತ್ತಿತ್ತು. ಹೀಗಾಗಿ ಶಿರಾಳಕೊಪ್ಪದ ಜನಜೀವನದೊಡನೆ ಶ್ರೀ ಚನ್ನಮಲ್ಲಪ್ಪನವರು ತುಂಬಾ ಬೆರೆತುಹೋಗಿದ್ದರು.

ಶ್ರೀ ಚನ್ನಮಲ್ಲಪ್ಪನವರು ಸಂನ್ಯಾಸಿಗಳೇನಲ್ಲವಾದರೂ ಸಂನ್ಯಾಸಿ ಜೀವನವೇ ಇವರ ನಡೆ-ನುಡಿಗಳಲ್ಲಿ ವ್ಯಕ್ತವಾಗುತ್ತಿತ್ತು. ಇವರು ಮೂರು ಸಲ ಲಗ್ನ ಮಾಡಿಕೊಂಡರು. ಆದರೂ ಇವರ ವಂಶವೃದ್ಧಿಯೇನೂ ಆಗಲಿಲ್ಲ. ಮೊದಲ ಹೆಂಡತಿ ೧೯೧೧ ರಲ್ಲಿಯೇ ತೀರಿಕೊಂಡರು. ಅವರ ಗರ್ಭದಿಂದ ಶಂಕರ ಎಂಬ ಮಗನೇನೋ ಹುಟ್ಟಿದ್ದ. ಆದರೆ ನಾಲ್ಕೈದು ವರ್ಷವಾಗುತ್ತಲೆ ತಾಯಿಗಿಂತ ಮೊದಲೇ ಶಂಕರ ಶಿವನಪಾದ ಸೇರಿದ್ದ. ಅನಂತರ ೧೯೧೨ ರಲ್ಲಿ ನಂದಿಹಳ್ಳಿಯಿಂದ ಇನ್ನೊಂದು ಕನ್ಯೆಯೊಂದಿಗೆ ಲಗ್ನವಾದರು. ಅವರೂ ೧೯೧೭ ರಲ್ಲಿ ತೀರಿಕೊಂಡರು. ಪುನಃ ಯಾದವಾಡದ ಅಣವೀರಪ್ಪನವರ ಮಗಳು ಪಾರ್ವತಮ್ಮ ಎಂಬ ಕನ್ಯೆಯೊಡನೆ ತೃತೀಯ ಲಗ್ನವನ್ನು ೧೯೧೭ ರಲ್ಲಿಯೇ ಮಾಡಿಕೊಂಡರು. ಮೂರು ನಾಲ್ಕು ವರ್ಷಗಳಲ್ಲಿ ಅವರೂ ತೀರಿಕೊಂಡರು. ಬಹುಶಃ ಈ ಮೂರೂ ಲಗ್ನಗಳೂ ಅವರಿಗೆ ಸುಖವನ್ನು ತಂದುಕೊಡಲಿಲ್ಲವೆಂದು ತೋರುತ್ತದೆ. ಮುಂದೆ ಇವರ ಜೀವಿತವೆಲ್ಲ ಗುರುಲಿಂಗ ಜಂಗಮ ಸೇವೆಗೇ ಮೀಸಲಾಗಿ ಸಾಗಿತು. ಬಾಲ್ಯದಲ್ಲೇ ಉಪಾಧ್ಯಾಯ ವೃತ್ತಿಗೆ ಸೇರಿದ್ದರಿಂದ ಇವರು ಸುಮಾರು ೩೫ ವರ್ಷದ ಸೇವೆ ಸಂದನಂತರ ತಮ್ಮ ಉಪಾಧ್ಯಾಯ ವೃತ್ತಿಯಿಂದ ನಿವೃತ್ತರಾದರು. ಮುಂದೆ ಇವರ ಸೇವೆಯೆಲ್ಲ ಗ್ರಂಥಾಲೋಕನ ಮಾಡುವುದು. ಪಾಠಾಂತರಗಳನ್ನು ಗುರುತಿಸಿ ಶುದ್ಧ ಹಸ್ತಪ್ರತಿಗಳನ್ನು ತಯಾರುಗೊಳಿಸುವುದು. ಹಾನಗಲ್ಲು ಸ್ವಾಮಿಗಳವರಿಗೆ ತಮ್ಮ ಈ ಕಾರ್ಯದ ವರದಿಯನ್ನು ತಿಳಿಸುವುದು—ಇವೇ ಮೊದಲಾದ ಕಾರ್ಯದಲ್ಲಿ ನಿರತರಾದರು. ಹಾನಗಲ್ಲು ಶ್ರೀಗಳು ಶ್ರೀ ಚ. ಅವರು ಸಂಪಾದಿಸಿದ ಗ್ರಂಥ ಪ್ರಕಟನೆಗೆ ವ್ಯವಸ್ಥೆ ಮಾಡಬೇಕೆನ್ನುವಷ್ಟರಲ್ಲಿ ಕ್ರಿ. ಶ. ೧೯೩೦ ರಲ್ಲಿ ಲಿಂಗೈಕ್ಯರಾಗಲು ಶ್ರೀ ಚ. ಅವರು ತಬ್ಬಲಿಗಳಾದರು. ಆದರೂ ಶ್ರೀ ಚ. ಅವರು ಎದೆಗುಂದದೆ ತಮ್ಮ ಪೂಜ್ಯ ಗುರುಗಳು ಅಪ್ಪಣೆಕೊಡಿಸಿದ ಪ್ರಾಚೀನ ವೀರಶೈವ ಗ್ರಂಥ ಪ್ರಕಟನೆ ಮಾಸಪತ್ರ ಪ್ರಕಟನೆಯ ಕಾರ್ಯದತ್ತ ಸದಾ ಯೋಚಿಸತೊಡಗಿದರು. ಹಾವೇರಿ ಹುಕ್ಕೇರಿ ಮಠದ ತಪಸ್ವಿಗಳಾದ ಶ್ರೀ ಶಿವಬಸವ ಮಹಾಸ್ವಾಮಿಗಳಿಗೆ ಶ್ರೀ ಚ. ಅವರ ವೈರಾಗ್ಯಭಾವ, ಸಾಮಾಜಿಕ ಸೇವಾಮನೋಭಾವ, ಸಂಶೋಧನಾವೃತ್ತಿ ಇವೆಲ್ಲವುಗಳ ಪರಿಚಯವಾಗಿತ್ತು. ಆ ಮಹಾತಪಸ್ವಿಗಳೂ ಹಾನಗಲ್ಲು ಶ್ರೀ ಕುಮಾರ ಸ್ವಾಮಿಗಳವರ ಒಡನಾಡಿಗಳೂ ಶಿವಯೋಗ ಮಂದಿರ ಸಂಸ್ಥಾಪನಾ ಕಾರ್ಯದಲ್ಲಿ ಕುಮಾರ ಸ್ವಾಮಿಗಳವರೊಡನೆ ಹೆಗಲಿಗೆ ಹೆಗಲು ಕೊಟ್ಟು ಹೆಣಗಿದವರೂ ಆಗಿದ್ದರು.

ಹಾನಗಲ್ಲು ಸ್ವಾಮಿಗಳ ಸಂಕಲ್ಪಗಳನ್ನು ಕಾರ್ಯರೂಪಕ್ಕೆ ತರುವ ಹೊಣೆ ಅವರ ಮೇಲೂ ಇತ್ತು. ಹೀಗಾಗಿ ಶ್ರೀ ಚ. ಅವರು ಹಾವೇರಿ ಹುಕ್ಕೇರಿಮಠದ ಶ್ರೀಗಳವರಲ್ಲಿ ತಮ್ಮ ಮುಂದಿನ ಬೃಹತ್ ಕಾರ್ಯರಂಗವಾದ ಪತ್ರಿಕಾ ಪ್ರಕಟನೆ, ಧರ್ಮಗ್ರಂಥಗಳ ಮುದ್ರಣದ ಸಂಕಲ್ಪವನ್ನು ಸುರಿದಾಗ ಶ್ರೀಗಳವರ ಆಶೀರ್ವಾದ ಬಲದಿಂದ ಹಾವೇರಿಯಲ್ಲಿ ಶಿವಯೋಗಮಂದಿರದ ಒಡೆತನದಲ್ಲಿದ್ದ ಹಳೆಯ ಪ್ರೆಸ್ ಒಂದನ್ನು ಪಡೆದು ಅದಕ್ಕೆ 'ಶಿವಲಿಂಗ ವಿಜಯ ಮುದ್ರಣಾಲಯ' ಎಂದು ನಾಮಕರಣ ಮಾಡಿ ಹಾಲಿಸೆಟ್ಟರ ಮಠದಲ್ಲಿ ಕ್ರಿ. ಶ. ೧೯೩೧ನೇ ಮಾರ್ಚ್ ೨೦ನೆಯ ತಾರೀಖಿನಂದು ಪ್ರಜೋತ್ಪತ್ತಿ ನಾಮ ಸಂವತ್ಸರ ಚೈತ್ರ ಶುದ್ಧ ಪ್ರತಿಪದೆ ಯುಗಾದಿಯಂದು) ಪ್ರಾರಂಭಿಸಿದರು. ಆ ದಿವಸ ಹುಕ್ಕೇರಿಮಠದ ಶಿವಬಸವ ಸ್ವಾಮಿಗಳು ಪ್ರಾರಂಭೋತ್ಸವಕ್ಕೆ ಬಂದು ಎರಡು ರೂಪಾಯಿಗಳನ್ನು ಆಶೀರ್ವಾದಮಾಡಿ ಹೋದರೆಂದು ಶ್ರೀ ಚ. ಅವರೇ ಬರೆದಿಟ್ಟಿದ್ದಾರೆ.

ಶ್ರೀ ಚ. ಅವರು ಮುದ್ರಣಾಲಯವನ್ನು ೧೯೩೧ ನೆಯ ಇಸ್ವಿಯಲ್ಲಿ ಪ್ರಾರಂಭಿಸಿದರೂ ಇವರ ಪೂರ್ವಯೋಜಿತ ಸಂಕಲ್ಪವಾದ ಮಾಸಪತ್ರದ ಪ್ರಕಟನೆ ೧೯೩೨ ನೆಯ ಇಸ್ವಿ ಅಂಗೀರಸನಾಮ ಸಂವತ್ಸರ ಚೈತ್ರ ಮಾಸದಲ್ಲಿ ಪ್ರಥಮ ಸಂಪುಟದ ಪ್ರಥಮ ಸಂಚಿಕೆಯೆನಿಸಿ ಹೊರಬಂದಿತು. ಈ ಸಂಚಿಕೆಯಲ್ಲಿಯೇ ತಮ್ಮ ಮೂಲಧ್ಯೇಯವಾದ ಪ್ರಾಚೀನ ಧಾರ್ಮಿಕ ಸಾಹಿತ್ಯಕ ಗ್ರಂಥ ಪ್ರಕಟನೆಯ ಕಾರ್ಯವನ್ನು ಹಂಪೆಯ ಹರಿಹರದೇವನ ಮಹಾದೇವಿಯಕ್ಕನ ರಗಳೆ, ತೋಂಟದ ಸಿದ್ಧಲಿಂಗ ಯತಿಗಳು ಸುರಿದ ಸಿದ್ಧೇಶ್ವರ ವಚನಗಳಿಗೆ ಪ್ರಥಮ ಪ್ರಾಶಸ್ತ್ಯವಿತ್ತು ಪ್ರಾರಂಭಿಸಿದರು. ಈ ಪ್ರಥಮ ಮಾಸಪತ್ರ ಪ್ರಕಟನೆಯ ಸ್ಥಳ ಹಾವೇರಿಯ ಮಹಾತಪಸ್ವಿಗಳೆನಿಸಿದ್ದ ಶಿವಬಸವ ಮಹಾಸ್ವಾಮಿಗಳವರ ಹುಕ್ಕೇರಿ ಮಠದಲ್ಲಿ.

ಹಾವೇರಿಯಲ್ಲಿ ಒಟ್ಟು ೫೧ ಸಂಚಿಕೆಗಳನ್ನು ಅನೇಕ ಗ್ರಂಥಗಳನ್ನೂ ಪ್ರಕಟನೆ ಮಾಡಿದ ಮೇಲೆ ಕಾರಣಾಂತರದಿಂದ ಮುದ್ರಣಾಲಯವನ್ನು ಶಿವಯೋಗಮಂದಿರದವರು ಬಿಟ್ಟುಕೊಡಬೇಕೆಂದು ಕೇಳಿದುದರಮೇರೆಗೆ ಅವರಿಗೆ ಬಿಟ್ಟುಕೊಟ್ಟು ಉದಾರಾಶ್ರಯ ಹುಡುಕಿಕೊಂಡು ಮೈಸೂರಿಗೆ ಬಂದರು. ಮೈಸೂರಿನಲ್ಲಿ ಸುತ್ತೂರು ಶಿವರಾತ್ರೀಶ್ವರ ಸ್ವಾಮಿಗಳ ಆಶ್ರಯದಲ್ಲಿ ವಾಣಿವಿಲಾಸ ರಸ್ತೆಯಲ್ಲಿರುವ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ಪಾಠಶಾಲೆಯಲ್ಲಿ ಒಂದು ಕೊಠಡಿಯನ್ನು ಪಡೆದುಕೊಂಡು ಅಲ್ಲಿಂದಲೇ ೫೨ನೆಯ ಸಂಚಿಕೆಯನ್ನು ಪ್ರಕಟಗೊಳಿಸಿದರು. ಅನಂತರ ಹಳೇ ಅಗ್ರಹಾರದಲ್ಲಿದ್ದ ಬಾದಾಮಿ ನಂಜಪ್ಪನವರ ಛತ್ರವೊಂದರಲ್ಲಿ ನೆಲಸಿ ಕೊನೆಯವರೆಗೆ ಅಲ್ಲಿಯೇ ತಮ್ಮ ಚಟುವಟಿಕೆಗಳನ್ನು ಮಾಡಿದರು. ಅನೇಕ ವರ್ಷಗಳು ಬೇರೆ ಬೇರೆ ಮುದ್ರಣಾಲಯಗಳಲ್ಲಿ ತಮ್ಮ ಪತ್ರಿಕೆ ಮತ್ತು ಗ್ರಂಥಗಳ ಮುದ್ರಣ ಕಾರ್ಯವನ್ನು ಮಾಡಿಸುತ್ತಿದ್ದರು. ಕೊನೆಗೆ ಸ್ವತಂತ್ರ ಮುದ್ರಣಾಲಯವೊಂದನ್ನು ಮಾಡಿ ಅದಕ್ಕೆ ಸಿದ್ಧೇಶ್ವರ ಮುದ್ರಣಾಲಯವೆಂಬ ನಾಮವಿಟ್ಟು ತಮ್ಮ ಅಚಲ ನಿಷ್ಠೆಯ, ಪ್ರಬಲ ಸಂಕಲ್ಪದ ಕಾರ್ಯವನ್ನೆಸಗಿದರು.

ಶ್ರೀ ಚನ್ನಮಲ್ಲಿಕಾರ್ಜುನರ ಧಾರ್ಮಿಕ ಶ್ರದ್ಧೆ, ಸಮಾಜಪ್ರೇಮ ಬಹಳ ದೊಡ್ಡದು. ಅವರು ತಮ್ಮ ಸರ್ವಸುಖವನ್ನೂ ಮರೆತು ಸಮಾಜ ಸುಖಕ್ಕಾಗಿ ತಮ್ಮ

ನಿಡು ಬಾಳನ್ನು ಕೊನೆಯುಸಿರಿನವರೆಗೂ ಸವೆಸಿದರು. ತಮ್ಮ ೮೮ ನೆಯ ವಯಸ್ಸಿನಲ್ಲೂ ಅವರು ಪ್ರವಚನಗಳಿಗಾಗಿ ಯಾರಾದರೂ ಕರೆದರೆ ಇಲ್ಲ ಎನ್ನದೆ ಹೋಗುತ್ತಿದ್ದರು. ೧೯೬೭ ನೆಯ ಇಸ್ವಿ ಬನವಾಸಿಯಲ್ಲಿ ಶಿವಾನುಭವ ಸಮ್ಮೇಲನಕ್ಕೆಂದು ಅಲ್ಲಿಗೆ ಬಂದಿದ್ದರು. ಆರೋಗ್ಯ ಅಷ್ಟೊಂದು ಹಿತಕರವಿದ್ದಿಲ್ಲ. ಬನವಾಸಿ–ಮೂಡಿಯ ಚರಪರೇಣ್ಯರು ನೂರೆಂಟು ಜನ ಮೂರ್ತಿಗಳನ್ನು ಕೂಡಿಸಿ ಶಿವಾನುಭವ ಸಮ್ಮೇಲನವನ್ನೇರ್ಪಡಿಸಿ ಬಹು ವಿಜೃಂಭಣೆಯಿಂದ ಕಾರ್ಯಕ್ರಮಗಳನ್ನು ನಡೆಸಿದರು. ಆ ಕಾರ್ಯಕ್ರಮದಲ್ಲಿ ಶ್ರೀ ಚ. ಅವರ ಅಮೋಘ ಪ್ರವಚನವಾಯಿತು. ಮೊದಲೇ ಅನಾರೋಗ್ಯದಿಂದ ಇದ್ದುದರಿಂದ ಬಹಳ ಸುಸ್ತಾಗಿದ್ದರು. ಆ ಸ್ಥಿತಿಯಲ್ಲಿ ಶಿರಾಳಕೊಪ್ಪಕ್ಕೆ ಬಂದು ಒಂದೆರಡು ದಿನ ಸುಧಾರಿಸಿಕೊಂಡು ಧಾರವಾಡಕ್ಕೆ ಹೋಗಿ ತಮ್ಮ ಕೊನೆಯ ಗ್ರಂಥವಾದ 'ಮೊಗ್ಗೆಯ ಮಾಯಿದೇವ ಪ್ರಭುವಾಣಿ' ಎಂಬ ಗ್ರಂಥವನ್ನು ಅಥಣಿ ಶಿವಯೋಗಿಗಳಿಗೆ ಅರ್ಪಿಸಿ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರಿಂದಲೇ ಶ್ರೀ ಮುರುಘಾಮಠದಲ್ಲಿ ಪ್ರಕಟನೆ ಮಾಡಿಸಿ, ನೇರವಾಗಿ ಶಿರಾಳಕೊಪ್ಪಕ್ಕೆ ಬಂದು ಅಲ್ಲಿ ಒಂದೆರಡು ದಿನಗಳಿದ್ದು, ಅನಂತರ ಹಿರೇಕೆರೂರಿಗೆ ಹೋಗಿ ಅಲ್ಲಿಯೂ ಒಂದೆರಡು ದಿನ ಪುನಃ ಶಿರಾಳಕೊಪ್ಪಕ್ಕೇ ಬಂದರು. ೧೯೬೭ ನೆಯ ಫೆಬ್ರುವರಿ ೧ ನೆಯ ತಾರೀಖಿನ ರಾತ್ರಿ ತಮ್ಮ ಮನೆಯಲ್ಲಿ ಪೂಜಾದಿವ್ಯವಹಾರ ಮುಗಿಸಿದರು, ದೇಹಾಲಸ್ಯ ಬಹಳವಿತ್ತು. ಆ ದಿನ ಕಬ್ಬಿನ ಹಾಲಿನ ಪ್ರಸಾದ ಸ್ವೀಕರಿಸಿ ಮಲಗಿದರು. ರಾತ್ರಿ ಅವರ ದೇಹಸ್ಥಿತಿ ವಿಕೋಪಕ್ಕೆ ಹೋಯಿತು. ಬೆಳಗಿನ ಜಾವಕ್ಕೆ ದಿವ್ಯಾತ್ಮ ಪರಮಾತ್ಮನಲ್ಲಿ ಲೀನವಾಗಿಹೋಯಿತು. ಅವರು ಎಂದೂ ನೆಲ ಹಿಡಿಯಲಿಲ್ಲ; ಇನ್ನೊಬ್ಬರ ಸೇವೆಯನ್ನು ವೃದ್ಧಾಪ್ಯದಲ್ಲಿ ಪಡೆಯಲಿಲ್ಲ. ಇಚ್ಛಾಮರಣಿಯಂತೆ ತಮಗೆ ದೇಹ ಬೇಡವಾದಾಗ ದೇಹ ಬಿಟ್ಟರೆಂದೇ ನಾವು ಈಗ ವ್ಯಾಖ್ಯಾನಿಸಬೇಕಾಗಿದೆ ಅಷ್ಟೆ. ಪ್ರಾಚೀನ ಸಂಸ್ಕೃತಿಯ ಮಹಾ ಕೇಂದ್ರದಂತಿರುವ ಶಿರಾಳಕೊಪ್ಪದ ಬಹುದಿನದ ಪುಣ್ಯವೇ ಬೊಬ್ಬುಳಿಗೊಂಡು ಮೂರ್ತೀಭವಿಸಿ ಬಂದಂತೆ ಆಚಾರದಲ್ಲಿ, ನಡೆಯಲ್ಲಿ, ನುಡಿಯಲ್ಲಿ, ವಿದ್ವತ್ತಿನಲ್ಲಿ, ಸತತೋದ್ಯೋಗದಲ್ಲಿ ಪರಿಪೂರ್ಣರೆನಿಸಿ, ಸಮಸ್ತ ಶಿರಾಳಕೊಪ್ಪದ ಜನರ ಗೌರವಾದರಗಳಿಗೆ ಪಾತ್ರರಾಗಿ ೮೮ ವರ್ಷಗಳ ನಿಡುಬಾಳನ್ನು ಬೆಳಗಿದ ಗ್ರಾಮ ಜ್ಯೋತಿ ನಂದಿದಂತಾಯಿತು. ಅವರ ದಿವ್ಯಜೀವನ ನಮ್ಮ ಇತಿಹಾಸ ಪ್ರಸಿದ್ಧ ಸ್ಥಳದ ಸಮಸ್ತರಿಗೂ ದಾರಿದೀಪವಾಗಲೆಂದೂ ಆ ಪುಣ್ಯಕ್ಷೇತ್ರದಿಂದ ಅಂಥ ಅನೇಕ ಇತಿಹಾಸ ಪ್ರಸಿದ್ಧ ವ್ಯಕ್ತಿಗಳು ಮೂಡಿಬರಲೆಂದೂ ದಯಾಮಯನಾದ ಶಿವನನ್ನು ಪ್ರಾರ್ಥಿಸುತ್ತೇವೆ.

ಹೇಳಿದವರು : ಸೂರಣಗಿ ಸಂಗಪ್ಪ ಶಿರಾಳಕೊಪ್ಪ ಮತ್ತು
ಟಿ. ಗುರುಶಾಂತಪ್ಪ ಶಿರಾಳಕೊಪ್ಪ
ಬರೆದು ಸಂಪಾದಿಸಿದವರು : ಚನ್ನಪ್ಪ ಎರೇಸೀಮೆ

# ನಾ ಕಂಡಂತೆ ಶ್ರೀ ಚನ್ನಮಲ್ಲಿಕಾರ್ಜುನರು

## ಚನ್ನಪ್ಪ ಎರೇಸೀಮೆ

(೧)

೧೯೩೨ ನೆಯ ಇಸ್ವಿ. ನಾನು ಹಾನಗಲ್ಲು ವಿರಕ್ತಮಠದಲ್ಲಿದ್ದುಕೊಂಡು ಪ್ರಾಥಮಿಕ ೭ನೆಯ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದೆ. ನನ್ನ ಜೊತೆಗೆ ಇನ್ನೂ ಮೂರು ನಾಲ್ಕು ಜನರಿದ್ದರು. ಹಾನಗಲ್ಲು ವಿರಕ್ತಮಠ ಮತ್ತು ಆಲೂರು ವಿರಕ್ತಮಠಗಳು ಒಂದಕ್ಕೊಂದು ಸೋದರ ಸಂಬಂಧದ ಮಠಗಳಿದ್ದ ಹಾಗೆ. ಆಲೂರು ಮಠದಲ್ಲಿ ವಿಶೇಷ ಕಾರ್ಯಕ್ರಮಗಳಿದ್ದಾಗ, ರಜೆ ಬಂದಾಗ ನಾವೆಲ್ಲ ಅಲ್ಲಿಗೆ ಹೋಗುತ್ತಿದ್ದುದುಂಟು. ಅಲ್ಲಿ ಒಂದು ಸಂಸ್ಕೃತ ಪಾಠಶಾಲೆಯೂ ಇತ್ತು. 'ಹಾಲಮರಿ' ಎಂಬುವರು ಮಠದಲ್ಲಿ ಪೂಜಾದಿ ಸೇವಾಕಾರ್ಯ ಮಾಡಿಕೊಂಡು ಇದ್ದರು. ಅವರೇ ಊರಲ್ಲಿ ಕಂತಿಭಿಕ್ಷೆ ಮಾಡಿಕೊಂಡು ನಮಗೆಲ್ಲ ಮಮತೆಯಿಂದ ಪ್ರಸಾದ ಕೊಡುತ್ತಿದ್ದರು. ಹಾನಗಲ್ಲು ಮಠದಲ್ಲಿ ಆಗ ಮಹಾಮಹಿಮರಾದ ಕುಮಾರ ಮಹಾಸ್ವಾಮಿಗಳವರ ಕರಕಂಜಸಂಜಾತರಾದ ಮಹೇಶ್ವರ ಸ್ವಾಮಿಗಳೆಂಬುವರೂ ಇದ್ದರು. ಆಲೂರು ಮಠದ ವ್ಯವಹಾರವನ್ನು ಜಡೇಸಂಸ್ಥಾನ ಮಠದ ಸಿದ್ಧಬಸವ ಸ್ವಾಮಿಗಳೆಂಬುವರು ನೋಡುತ್ತಿದ್ದರು. ಈ ಇಬ್ಬರೂ ಶ್ರೀಗಳವರ ವಾತ್ಸಲ್ಯ ನನ್ನ ಮೇಲೆ ಅಧಿಕವಾಗಿತ್ತು. ಕಾರಣ : ನಾನು ಬಹಳ ಚಿಕ್ಕವನೆಂದೋ, ಚುರುಕು ಸ್ವಭಾವದವನೆಂದೋ ಗೊತ್ತಿಲ್ಲ. ನಿಜವಾಗಿ ನಾನು ಚುರುಕು ಸ್ವಭಾವದವನೇ ಆಗಿದ್ದೆ. ಸ್ವಾಮಿಗಳು ಯಾವುದೇ ಕೆಲಸ ಹೇಳಿದರೂ ಅದನ್ನು ಚಟುವಟಿಕೆಯಿಂದ ಮಾಡಿ ಮುಗಿಸುವುದು ನನ್ನ ಸ್ವಭಾವವಾಗಿತ್ತು.

ಭಾದ್ರಪದ ಅಥವಾ ಆಶ್ವೀಜ ಮಾಸವೆಂದು ತೋರುತ್ತದೆ. ಒಬ್ಬರು ವಿಚಿತ್ರ ರೂಪದ ವ್ಯಕ್ತಿಗಳು ಆಲೂರು ಮಠಕ್ಕೆ ಬಂದರು. ಮಠದಲ್ಲಿ ಪ್ರವಚನ ನಿತ್ಯನಿತ್ಯ ಪೂಜೋತ್ಸವಾದಿಗಳು ಜರುಗುತ್ತಲೇ ಇರುತ್ತಿದ್ದವು. ಮಠಕ್ಕೆ ಬಂದ ವಿಚಿತ್ರರೂಪದ ವ್ಯಕ್ತಿಯನ್ನು ಎಲ್ಲರೂ ಅತ್ಯಂತ ಗೌರವಾದರಗಳಿಂದ ಕಾಣುತ್ತಿದ್ದರು. ಬಲಗೈ ಡೊಂಕು, ಬಲಗಾಲು ಡೊಂಕು, ಬಲಗಣ್ಣು ಕುರುಡು, ಮುಖವೆಲ್ಲ ಮೈಲಿಯ ಕಲೆ, ಎತ್ತರವೋ ಸುಮಾರು ಮೂರುವರೆ ಅಥವಾ ಮೂರು ಮುಕ್ಕಾಲು ಅಡಿ ಮಾತ್ರ. ಇದ್ದನೆಯ ಒಂದು ಬಿಳಿಯ ಉರುಟು ಬಟ್ಟೆಯ ಪೂರ್ಣ ಮುಚ್ಚಿದ ಕೋಟು (ಕ್ಲೋಜ್ ಕಾಲರ್ ಕೋಟ್) ತಲೆಯ ತುಂಬ ಮುಚ್ಚಿದ ಬಿಳಿಯ ರುಮಾಲು, ಮೊಳಕಾಲು ಮುಚ್ಚುವಷ್ಟು ಉಟ್ಟ ಪಂಚೆ, ಮೈಮೇಲೆ ಹೊದ್ದ ಸಣ್ಣ ದುಪ್ಪಟ್ಟಿ. ಉಟ್ಟ ಬಟ್ಟೆಯಲ್ಲಿ ತಿದ್ದಿ ತೀಡಿ ಮಾಡಿಕೊಂಡ ಠೀವಿ ಏನೂ ಇದ್ದಿಲ್ಲ. ಅವರು ಯಾವು ಯಾವುದೋ ನೂರಾರು ಪುಸ್ತಕಗಳನ್ನು ಹೊರಿಸಿಕೊಂಡು ಬಂದಿದ್ದರು. ಆಗ ಮಠದಲ್ಲಿ ಜಡೇ ಸಂಸ್ಥಾನ ಮಠದ ಸಿದ್ಧಬಸವ ಸ್ವಾಮಿಗಳಿದ್ದರು. ಜಡೇಮಠದ ಶ್ರೀಗಳು

ಕಟ್ಟುನಿಟ್ಟಾದ ಆಚಾರ ವಿಚಾರಶೀಲರು. ನಮ್ಮಂಥ ವಿದ್ಯಾರ್ಥಿಗಳ ಆಚಾರ ವಿಚಾರದಲ್ಲಿ ಏನಾದರೂ ದೋಷ ಅವರ ಕಣ್ಣಿಗೆ ಬಿದ್ದರಾಯಿತು ಕೈಯಲ್ಲಿ ಯಾವಾಗಲೂ ಹಿಡಿಯುತ್ತಿದ್ದ ದಪ್ಪನೆಯ ದೊಣ್ಣೆಯ ಏಟಿನಿಂದ ಯಾವ ವಿದ್ಯಾರ್ಥಿಯೂ ತಪ್ಪಿಸಿಕೊಳ್ಳಲಾಗುತ್ತಿದ್ದಿಲ್ಲ. ಆದರೆ ನನಗೆ ಆ ದೊಣ್ಣೆಯ ಏಟು ಎಂದೂ ಬೀಳಲಿಲ್ಲವಾದರೂ ಏಟು ತಿನ್ನುವವರನ್ನು ಕಂಡು ಜಂಘಾಬಲವೇ ಉಡುಗಿದವನಂತಾಗಿ ಆ ಸ್ವಾಮಿಗಳ ನಾಮಮಾತ್ರದಿಂದಲೇ ಭಯದಿಂದ ನಡುಗುತ್ತಿದ್ದೆ. ಅವರಿಗೆ ನನ್ನ ಮೇಲೆ ಎಂದೂ ಕೋಪವುಂಟಾಗದ ಹಾಗೆಯೇ ನಡೆದುಕೊಳ್ಳುವ ವಿಧಾನವಾವುದೆಂಬುವನ್ನು ಅರಿತು ವ್ಯವಹರಿಸುತ್ತಿದ್ದೆನಾಗಿ ಎಂದೂ ಅವರ ಕೋಪಕ್ಕೆ ಪಾತ್ರನಾಗಿ ದೊಣ್ಣೆಯ ಏಟುಗಳಿಂದ ವರ್ಜ್ಯನಾಗಿದ್ದೆ. ಇಂಥ ಉಗ್ರರೂಪದ, ಕಟ್ಟುನಿಟ್ಟಾದ ಆಚಾರಶೀಲರು ಮಠಕ್ಕೆ ಬಂದ ವಾಮನಾಕಾರದ ನೂತನ ವ್ಯಕ್ತಿಗಳೊಡನೆ ಬಹಳ ಮಾನಮನ್ನಣೆಯಿಂದ ನಡೆದುಕೊಳ್ಳುವುದು, ಅವರ ಆದರೋಪಚಾರದಲ್ಲಿ ಬಹಳ ಶ್ರದ್ಧೆಯನ್ನು ತೋರಿಸುವುದು, ಅತ್ಯಂತ ಮಮತೆಯಿಂದ ನಗುನಗುತ್ತ ಮಾತನಾಡುವುದು—ಇವೆಲ್ಲವುಗಳಿಂದಲೇ ನಮಗೆ ನೂತನ ವ್ಯಕ್ತಿಯ ಆಕಾರ ರೂಪಾದಿಗಳನ್ನು ಮೀರಿನಿಂತ ಗೌರವಾದರಗಳು ಅವರ ವಿಷಯದಲ್ಲಿ ಬಲಿಯಲೆಡೆಮಾಡಿದವು. ಜಡೇಸ್ವಾಮಿಗಳು ನಗುವುದೇ ಅಪರೂಪ. ಅವರು ನಕ್ಕರೆ ನಮಗೆ ಸ್ವರ್ಗವೇ ಧರೆಗಿಳಿದು ಬಂದಂತಾಗುತ್ತಿತ್ತು. ಅಂಥವರು ನೂತನ ವ್ಯಕ್ತಿಗಳೊಡನೆ ನಗುನಗುತ್ತ ಮಾತನಾಡುವಾಗಲೇ ಈ ನೂತನ ವ್ಯಕ್ತಿ ಬಹಳ ದೊಡ್ಡವರಾಗಿರಬೇಕೆಂದು ಧ್ವನಿತವಾಯಿತು. ಅದಕ್ಕೂ ಮೊದಲು ಬಾಲೋಚಿತ ಸಹಜ ಚೇಷ್ಟೆಯಿಂದ ಈ ನೂತನ ವ್ಯಕ್ತಿಯನ್ನು ಕಂಡು ಮುಸು ಮುಸು ಮುಖ ಮುಚ್ಚಿ ನಕ್ಕದ್ದೂ ಉಂಟು. ಹಿಂದಿನಿಂದ ಚೇಷ್ಟೆಮಾಡಿ ಅವರ ನಡಿಗೆಯನ್ನು ಅನುಸರಿಸಿ ನಾಟಕವಾಡಿದ್ದೂ ಉಂಟು.

ಸಾಯಂಕಾಲವಾಗುತ್ತಲೇ ಪ್ರವಚನ ಕಾರ್ಯಕ್ರಮವೇರ್ಪಟ್ಟಿತು. ವೇದಿಕೆಯ ಮೇಲೆ ಸ್ವಾಮಿಗಳೂ ಈ ನೂತನ ವ್ಯಕ್ತಿಗಳಿಗೂ ಮಂಡಿಸಿದರು. ನೂರಾರು ಜನ ಶ್ರೋತೃಗಳು ಮಠಕ್ಕೆ ಬಂದರು. ಪ್ರವಚನ ಪ್ರಾರಂಭದಲ್ಲಿ ಈ ನೂತನ ವ್ಯಕ್ತಿಗಳ ಪರಿಚಯ ಭಾಷಣವಾದಾಗಲೇ ಈ ನೂತನ ಮಹಾವ್ಯಕ್ತಿಯೇ ಹಾವೇರಿಯಿಂದ ಹೊರಡುವ ಸದ್ಧರ್ಮ ದೀಪಿಕೆಯೆಂಬ ಮಾಸಪತ್ರಿಕೆಯ ಸಂಪಾದಕರೆಂದೂ, ಮೊದಲು ಇವರು ಶಿರಾಳಕೊಪ್ಪದ ಮಿಡಲ್‌ಸ್ಕೂಲ್ ಉಪಾಧ್ಯಾಯ ವೃತ್ತಿಯಲ್ಲಿದ್ದು ನಿವೃತ್ತಿಹೊಂದಿದವರೆಂದೂ, ಹಾವೇರಿಯಲ್ಲಿ ಶಿವಲಿಂಗ ವಿಜಯ ಮುದ್ರಣಾಲಯ ನಡೆಸುತ್ತ ಅನೇಕ ಧಾರ್ಮಿಕ ಗ್ರಂಥಪ್ರಕಟನೆ ಮಾಡುತ್ತಿರುವರೆಂದೂ, ಶ್ರೇಷ್ಠವರ್ಗದ ಶಿವಾನುಭಾವಿಗಳೆಂದೂ ಹೆಸರು ಶ್ರೀ ಚನ್ನಮಲ್ಲಿಕಾರ್ಜುನರೆಂದೂ ತಿಳಿದು ನಮ್ಮ ನಮ್ಮ ಗಲ್ಲಗಳನ್ನು ನಾವು ನಾವೇ ಬಡಿದುಕೊಂಡದ್ದಾಯಿತು. ಆಗ ಅವರ ವಿಷಯದಲ್ಲಿ ನಮ್ಮ ಭಕ್ತಿ ಭಾವ ಉದ್ದೀಪನಗೊಂಡಿತು. ರೂಪ ವೇಷ ಭೂಷಣಾದಿಗಳು ಮನುಷ್ಯನ ಯೋಗ್ಯತಾ ನಿರ್ಣಯದ ಮಾನದಂಡಗಳಲ್ಲವೆಂಬ ಪಾಠ ಅಂದೇ ನಮಗೆ ಉಂಟಾದದ್ದು.

ಸರಿ: ಅನಂತರ ಪ್ರಾರಂಭವಾಯಿತು ಶ್ರೀ ಚನ್ನಮಲ್ಲಿಕಾರ್ಜುನರ ಶಿವಾನುಭಾವ ಪ್ರವಚನದ ಸಮ್ಯಕ್ ವಾಗ್ಧಾರೆ. ಆ ಪ್ರವಚನ ನಮಗೆ ಅರ್ಥವಾಯಿತೋ ಇಲ್ಲವೋ

ಆ ಪ್ರಶ್ನೆ ಬೇರೆ. ಮೇಘಮಂದ್ರ ಧ್ವನಿಯಂತೆ ಧ್ವನಿಗುಡುತ್ತ ನಿರರ್ಗಳವಾಗಿ ಸುರಿಯುತ್ತಿರುವ ಅವರ ಮಾತಿನ ಸುರಿಮಳೆ, ಸರಿಮಳೆಯಿಂದ ಅವಾಕ್ಕಾಗಿ ಹೋದ ನಾನು ಆ ದಿನದಿಂದಲೇ ನನ್ನ ಹೃದಯ ಮಣಿಮಂಟಪದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರನ್ನು ಕೂಡಿಸಿ, ನನ್ನನ್ನು ನಾನು ಅಲಂಕರಿಸಿಕೊಂಡೆನೆಂದರೆ ತಪ್ಪಲ್ಲ. ಅವರ ಜೀವಿತದ ಕೊನೆಯವರೆಗೂ ಅವರ ಸಂಬಂಧವನ್ನು ಒಂದಿಲ್ಲೊಂದು ರೀತಿಯಿಂದ ಇಟ್ಟುಕೊಂಡು ಕೃತಾರ್ಥನಾದೆನೆಂದು ಭಾವಿಸಿಕೊಂಡಿದ್ದೇನೆ. ಶ್ರೀ ಚನ್ನಮಲ್ಲಿಕಾರ್ಜುನರು ಪ್ರಥಮತಃ ನನಗೆ ಪರಿಚಯವಾದುದು ಹೀಗೆ !

ಬೆಳಗಾಯಿತು. ಅಂದು ಮಂಗಳವಾರ. ಆಲೂರು ಸಂತೆ ಸೇರುವುದು ಅದೇ ದಿನ. ಆಲೂರು ಸಂತೆ ಮಲೆನಾಡಿನಲ್ಲೆಲ್ಲ ಪ್ರಸಿದ್ಧವಾದ ಸಂತೆ. ವ್ಯಾಪಾರ ದೃಷ್ಟಿಯಿಂದ ಪ್ರಮುಖ ಕೇಂದ್ರ. ಸಂತೆಯ ದಿನ ಪಸಿಗೆ ಎತ್ತಿಕೊಂಡು ಬರುವುದು ಆ ಮಠದ ಸಂಪ್ರದಾಯ. ಸಂತೆಯವರೆಲ್ಲ ಮಠಕ್ಕೆ ಭಯ ಭಕ್ತಿಯಿಂದ ತರಕಾರಿ, ಕಾಳು, ಕಡಿ—ಎಲ್ಲವನ್ನೂ ಸ್ವಲ್ಪಸ್ವಲ್ಪ ಅರ್ಪಿಸುತ್ತಿದ್ದರು. ಹಾಲಮರಿಯನೊಡನೆ ನಾವೆಲ್ಲ ಐದಾರು ಜನ ವಿದ್ಯಾರ್ಥಿಗಳು ಕೈಯಲ್ಲಿ ಚೀಲಗಳನ್ನು ಹಿಡಿದು ಪಸಿಗೆಗಾಗಿ ಹೊರಟೆವು. ಸಂತೆಯನ್ನೆಲ್ಲ ತಿರುಗಿ ಸಾಯಂಕಾಲ ೪ ಘಂಟೆಯ ಸುಮಾರಿಗೆ ಹತ್ತಾರು ತುಂಬಿದ ಚೀಲಗಳೊಡನೆ ಪಸಿಗೆಯ ಪದಾರ್ಥಗಳನ್ನು ಮಠಕ್ಕೆ ತಂದು ಸುರಿದೆವು. ಶ್ರೀ ಚನ್ನಮಲ್ಲಿಕಾರ್ಜುನರು ಹಾಲಮರಿಯ ಮುಖಾಂತರ ನಮ್ಮನ್ನೆಲ್ಲ ಕರೆಯಿಸಿದರು. ನಾವೆಲ್ಲ ಹೋಗಿ, ಚನ್ನಮಲ್ಲಿಕಾರ್ಜುನರ ಎದುರಿನಲ್ಲಿ ನಿಂತೆವು. ಅವರು “ಯಾವ ಯಾವ ತರಗತಿಗಳಲ್ಲಿ ಓದುತ್ತಿದ್ದೀರಿ; ಯಾವೂರು” ಇತ್ಯಾದಿ ಪ್ರಶ್ನೆಹಾಕಿ ಉತ್ತರಪಡೆದು ನಮ್ಮ ಪರಿಚಯಮಾಡಿಕೊಂಡರು. ಅನಂತರ “ನೋಡಿ, ನಿಮಗೆಲ್ಲ ಒಂದೊಂದು ಕೆಲಸ ಕೊಡುತ್ತೇನೆ. ಆ ಕೆಲಸವನ್ನು ಸಮರ್ಪಕವಾಗಿ ಮಾಡಿಕೊಂಡು ಬಂದ ಮೇಲೆ ನಿಮ್ಮ ವಿದ್ಯಾಭ್ಯಾಸದ ಖರ್ಚಿಗಾಗಿ ಸ್ವಲ್ಪ ದುಡ್ಡನ್ನು ಕೊಡುತ್ತೇನೆ. ಯಾರು ಯಾರು ಎಷ್ಟೆಷ್ಟು ಬುದ್ಧಿವಂತರೆಂಬುದನ್ನೂ ಗೊತ್ತುಹಚ್ಚುತ್ತೇನೆ” ಎಂದು ತಾವು ತಂದ ಅನೇಕ ಪುಸ್ತಕಗಳಿಂದ ಕೂಡಿದ ಗಂಟನ್ನು ಬಿಚ್ಚಿ, ಶತಕತ್ರಯ, ನುಲಿಯ ಚಂದಯ್ಯನ ಶಾರದ, ಕರಣದ ಹಸಿಗೆ, ಕೋಳೂರು ಕೊಡಗೂಸನ ರಗಳೆ... ಇವೇ ಮೊದಲಾದ ಅನೇಕ ಬಗೆಯ ಪುಸ್ತಕಗಳನ್ನು ಕೈಗೆಕೊಟ್ಟು ಸಂತೆಯಲ್ಲಿ ‘ಇವನ್ನು ಮಾರಿಕೊಂಡು ಬನ್ನಿರಿ’ ಎಂದು ಹೇಳಿ ಕಳಿಸಿಕೊಟ್ಟರು. ಅವುಗಳ ಬೆಲೆ ಅರ್ಧ ಆಣೆಯಿಂದ ಮೊದಲ್ಗೊಂಡು ಒಂದೂವರೆ ಆಣೆಯವರೆಗೆ ಮಾತ್ರ ಇದ್ದುವು. ನಾವು ಇದೊಂದು ಹೊಸರೀತಿಯ ಲಾಭದಾಯಕ ಕೆಲಸವೆಂದು ಒಪ್ಪಿಕೊಂಡು ಆ ಪುಸ್ತಕಗಳನ್ನೆಲ್ಲ ಪಡೆದು ಸಂತೆಗೆ ಹೋಗಿ ನಮ್ಮ ನಮ್ಮ ಚಾರಿತ್ರ್ಯಗಳನ್ನು ಪ್ರಕಟಿಸುತ್ತ ಮಾರಾಟಮಾಡಲಾರಂಭಿಸಿದೆವು. ನಾನು ಪುಸ್ತಕಗಳ ನಾಮಘೋಷ ಮಾಡುತ್ತ ದನದ ಪರಿಷೆಯಿರುವ ಸಂತೆಯ ಭಾಗವನ್ನು ಹೊಕ್ಕು ಹಾಡುಕಟ್ಟಿ ಹಾಡುತ್ತ ಅವುಗಳ ಮಾರಾಟಕ್ಕೆ ತೊಡಗಿದೆ. ಇದೊಂದು ತಮಾಷೆಯ ಕೆಲಸವೇ ಆಗಿತ್ತು ನನಗೆ. ಪುಸ್ತಕಗಳಿಗೆ ಸಂತೆಯೇಕಾಗಬಹುದು; ಸಂತೆಯ ಜನಕ್ಕೆ ಈ ಪುಸ್ತಕಗಳೇಕೆ ಬೇಕು ? ಕೊಳ್ಳುವವರ ಸಂಖ್ಯೆ ತೀರಾ ಕಡಿಮೆ. ನಾನು ಮಾತ್ರ ಕೆಲವು ಕಡೆ ಪುಸ್ತಕಗಳ ಮಹತ್ವವೇನೆಂಬುದು ಗೊತ್ತಿರದಿದ್ದರೂ ಗೊತ್ತಿದ್ದವ

ನಂತೆ ಪುಟ್ಟಪುಟ್ಟ ಭಾಷಣಗಳನ್ನೇ ಬಿಗಿಯುತ್ತ ಹೋರಾಟಕ್ಕೆ ತೊಡಗಿದ್ದೆ. ನನ್ನ ತುಂಟ ಭಾಷಣ, ತುಂಡು ಭಾಷಣಗಳಿಗೆ ಮರುಳಾಗಿಯೋ, ನನ್ನ ಉತ್ಸಾಹವನ್ನು ಕಂಡೋ, ಅಥವಾ ಪುಸ್ತಕಗಳ ಮಹತ್ವವನ್ನರಿತೋ ಏನೋ ಗೊತ್ತಿಲ್ಲ. ಜನ ನನ್ನ ಸುತ್ತ ಮುತ್ತೆಲ್ಲ ಮುತ್ತಿಕೊಂಡು ಪುಸ್ತಕಗಳನ್ನು ಕೊಳ್ಳತೊಡಗಿದರು. ತಂದ ಪುಸ್ತಕಗಳೆಲ್ಲ ಮುಗಿದುವು. ಎಲ್ಲರೂ ಬರುವುದಕ್ಕಿಂತ ಮುಂಚೆಯೇ ಮಠಕ್ಕೆ ಹಿಂತಿರುಗಿ ಬಂದು ಶ್ರೀ ಚನ್ನಮಲ್ಲಿಕಾರ್ಜುನರ ಮುಂದೆ ದುಡ್ಡು ಸುರುವಿ ಎಣಿಸಿದೆ. ನಾನು ದುಡ್ಡು ಎಣಿಸುವಾಗ ಸ್ವಾಮಿಗಳೂ ಇದ್ದರು. ಶ್ರೀ ಚನ್ನಮಲ್ಲಿಕಾರ್ಜುನರು ನಗುತ್ತ "ಈ ಹುಡುಗ ಬಹಳ ಜಾಣ ಇದ್ದಾನೆ ಬುದ್ಧಿ" ಎಂದರು. ಸ್ವಾಮಿಗಳು "ಹೌದು ಈತ ಬಹಳ ಜಾಣ, ಬಹಳ ಚುರುಕು" ಎಂದು ನನ್ನನ್ನು ನೋಡಿ ನಕ್ಕರು. ಆಗ ನನಗೆ ಎದ್ದು ಕುಣಿಯುವಷ್ಟು ಉತ್ಸಾಹ ಉಕ್ಕಿತು. ನನ್ನ ಬೆನ್ನನ್ನು ನಾನೇ ತಟ್ಟಿಕೊಳ್ಳು ವಂತಾಗಿತ್ತು. ಜಡೆಸ್ವಾಮಿಗಳು ನಕ್ಕುದನ್ನು ವಿಶೇಷವಾಗಿ ಕಂಡವನೇ ಅಲ್ಲ. ಅವರ ಉಗ್ರಮುಖದ ಪರಿಚಯ ಮಾತ್ರ ನನಗೆ ಆಗಿತ್ತು. ನನ್ನನ್ನು ನೋಡಿ ನಕ್ಕಾಗ ನಿಜ ವಾಗಿ ನನ್ನ ಪಾಲಿಗೆ ಸ್ವರ್ಗವೇ ಧರೆಗಿಳಿದು ಬಂದಂತಾಗಿತ್ತು. ಅವರ ಪ್ರಶಂಸೆಯೇ ನನಗೆ ಬೇಕಾಗಿತ್ತು. ಸ್ವಾಮಿಗಳವರ ಕೃಪೆಗೆ ಪಾತ್ರನಾಗಿದ್ದರೆ ಅವರಿಂದ ಆಗಾಗ ಬೀಳ ಬಹುದಾದ ದೊಣ್ಣೆಯ ಏಟುಗಳಿಂದ ದೂರವಿರಬಹುದು; ಏಟು ತಿನ್ನುವವರನ್ನು ಕಂಡು ನಗಬಹುದು. ಎಂದು ನನ್ನ ಮನದಿಚ್ಛೆ. ಶ್ರೀ ಚನ್ನಮಲ್ಲಿಕಾರ್ಜುನರು ದುಡ್ಡನ್ನು ಎಣಿಸಿಕೊಂಡು ಜೇಬಿನಲ್ಲಿ ಇಟ್ಟುಕೊಂಡು ಆರಾಣೆಗಳನ್ನು ನನ್ನ ಕೈಗೆ ಕೊಡುತ್ತ, 'ಈ ದುಡ್ಡನ್ನು ಏತಕ್ಕೆ ಬಳಸುತ್ತೀಯೆ' ಎಂದರು. ನಾನು 'ಕಾಗದ, ಮಸಿ, ರಬ್ಬರು, ಪೆನ್ಸಿಲ್ಲು, ಎಕ್ಸರ್‌ಸೈಜು....' ಇತ್ಯಾದಿ ಪಟ್ಟಿಮಾಡಿ ಹೇಳಿದೆ. ಆ ಮಾತು ಅವರಿಗೆ ತುಂಬಾ ಹಿಡಿಸಿರಬೇಕು. ಏಕೆಂದರೆ ಬೀದಿಯ ತಿಂಡಿಯ ಮಾತು ಬರಲಿಲ್ಲವಲ್ಲಾ ಎಂದು. ಅವರಿಗೆ ಬೀದಿಯ ತಿಂಡಿ, ಹೋಟಲಿನ ತಿಂಡಿ ತೀರ್ಥಗಳನ್ನು ತಿನ್ನುವ ಜನಗಳನ್ನು ಕಂಡರೆ ಆಗುತ್ತಿದ್ದಿಲ್ಲ. ನಿನ್ನೆಯ ರಾತ್ರಿ ಅವರು ಮಾಡಿದ ಪ್ರವಚನದಲ್ಲಿ ಆ ವಿಷಯ ವನ್ನು ಪ್ರಸ್ತಾಪಮಾಡಿದ್ದು ನನಗೆ ಚೆನ್ನಾಗಿ ಜ್ಞಾಪಕದಲ್ಲಿ ಉಳಿದಿತ್ತು. ಪ್ರಸಾದ ತತ್ತ್ವದಲ್ಲಿ ಬಹಳ ಕಟ್ಟುನಿಟ್ಟಾಗಿದ್ದ ಅವರಿಗೆ ಈ ವ್ಯವಹಾರಗಳು ತೀರಾ ಅಸಹ್ಯ ಹುಟ್ಟಿಸುವವುಗಳಾಗಿದ್ದುವು ಎಂಬುದು ನನಗೆ ಆಗಲೆ ತಿಳಿದುಹೋಗಿತ್ತು. ನನ್ನ ಮಾತು ಕೇಳಿ ಸ್ವಾಮಿಗಳವರ ಕಡೆಗೆ ಒಮ್ಮೆ ನೋಡಿ ನಕ್ಕು 'ಆಗಲಿ ಹೋಗಪ್ಪ' ಎಂದರು. ನಾನು ಅದ್ಭುತ ಕಾರ್ಯವೆಸಗಿದವನಂತೆ, ಬಹು ಲಾಭದಾಯಕವಾದ ವ್ಯಾಪಾರ ಮಾಡಿ ಕೊಂಡು ಯಶಸ್ಸಂಪಾದನೆ ಮಾಡಿದವನಂತೆ, ನನ್ನ ಭುಜವನ್ನು ನಾನೇ ತಟ್ಟಿಕೊಳ್ಳುತ್ತ ನನ್ನ ಕೊಠಡಿಗೆ ಹೋಗಿ, ಆ ಹಣವನ್ನು ಎರಡುನೂರು ಸಲ ನಾನೇ ಎಣಿಸಿ, ಲೆಕ್ಕಾ ಚಾರ ಹಾಕುತ್ತ ಕುಳಿತುಕೊಂಡೆ. ಆ ಕಾಲದಲ್ಲಿ ಆರಾಣೆ ನಮ್ಮ ದೃಷ್ಟಿಯಿಂದ ದೊಡ್ಡ ಮೊತ್ತದ ಹಣವೇ ಆಗಿತ್ತು. ನಮ್ಮ ಮೂರುನಾಲ್ಕು ತಿಂಗಳ ಖರ್ಚಿಗೆ ಅಷ್ಟು ಹಣ ಸಾಕಾಗುತ್ತಿತ್ತು. ಹೀಗೆ ಆಲೂರು ಮಠದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರ ಪರಿಚಯ ಆದಮೇಲೆ ಎರಡು ಮೂರು ದಿನ ಅಲ್ಲಿದ್ದು ಪುನಃ ನಾವು ಓದುತ್ತಿದ್ದ ಹಾನಗಲ್ಲು ಮಠಕ್ಕೆ ಬಂದೆವು.

ಹಾನಗಲ್ಲು ಮಠದಲ್ಲಿ ನಾವು ಓದುತ್ತಿರುವಾಗಲೆ ಒಮ್ಮೆ ಹಾವೇರಿ ಹುಕ್ಕೇರಿ ಮಠದ ಶ್ರೀ ನಿ. ಪ್ರ. ಶ್ರೀ ಶಿವಬಸವಮಹಾಸ್ವಾಮಿಗಳವರ ಕೃಪೆಗೆ ಪಾತ್ರರಾಗುವ ಸನ್ನಿವೇಶ ನನಗೊದಗಿತು.

ಹಾನಗಲ್ಲು ವಿರಕ್ತಮಠಾಧ್ಯಕ್ಷರಾಗಿ ಆಗ ಇದ್ದ ಮಹೇಶ್ವರಸ್ವಾಮಿಗಳೆಂಬುವರು ೧೯೩೩ ರಲ್ಲಿಯೇ ಲಿಂಗೈಕ್ಯರಾದರು. ಆ ಸಮಯಕ್ಕೆ ಹಾನಗಲ್ಲು ಮಠಕ್ಕೆ ದಯಮಾಡಿಸಿದ ಶ್ರೀ ಶಿವಬಸವಸ್ವಾಮಿಗಳ ಸೇವೆಗೆ ನಾನೇ ನೇಮಕವಾಗುವ ಸನ್ನಿವೇಶವೊದಗಿತು. ವಯೋವೃದ್ಧರಾದ ಶಿವಬಸವ ಸ್ವಾಮಿಗಳು ಪವಡಿಸುವ ಸ್ಥಳದ ಸಮೀಪದಲ್ಲೇ ನಾನು ಮಲಗಬೇಕು. ಅವರು ಕೂಗಿದಾಗ ಚಟ್ಟನೆ ಎದ್ದು ಅವರ ಸೇವೆಗೆ ಸಿದ್ಧನಾಗಬೇಕು. ಬೆಳಗಾಗುತ್ತಲೆ ಅವರ ಸಂಚಾರದ ತಂಬಿಗೆ ಬೆತ್ತಗಳನ್ನು ಹಿಡಿದುಕೊಂಡು ದೂರದವರೆಗೆ ಸಂಚಾರಕ್ಕೆ ಕರೆದೊಯ್ಯಬೇಕು. ಹಾನಗಲ್ಲಿನ ದಕ್ಷಿಣಕ್ಕೆ ಒಂದು ಮೈಲು ದೂರದಲ್ಲಿರುವ ಧರ್ಮಾ ನದಿಯನ್ನು ದಾಟಿ ಅವರು ಸಂಚಾರಕ್ಕೆ ಹೋದರು. ಚಿದಾರಣ್ಯಕ್ಕೆ ಅವರು ದಯಮಾಡಿಸಿದಾಗ ಬಹು ಕಟ್ಟುನಿಟ್ಟಾದ ಆಚಾರ ಅವರದು. ಕೈತೊಳೆಯಲು ತಂಬಿಗೆ ಬೆಳಗಲು ಮಣ್ಣು ಚೆನ್ನಾಗಿರಬೇಕು. ಅದು ಕಲ್ಲು ಹರಳಿನಿಂದ ಮಿಶ್ರವಾಗಿರಬಾರದು. ಒಳ್ಳೆಯ ಸ್ಥಾನದ್ದಾಗಿರಬೇಕು. ಹಲ್ಲು ಉಜ್ಜಲು ಬೇವಿನಕಡ್ಡಿ ದಪ್ಪವೂ ಅಲ್ಲದ ಸೀದಾ ದದ್ದಲ್ಲದ್ದಾಗಿರಬೇಕು. ಕೈಕಾಲು ಮುಖ ತೊಳೆದು ಬಾಯಿ ಮುಕ್ಕಳಿಸುವವರೆಗೆ ಮಾತನಾಡುವಂತಿಲ್ಲ ಬರಿ ಕೈಸನ್ನೆ ಕಣ್ಸನ್ನೆ ಮಾತ್ರ. ಅವರ ಮನೋಧರ್ಮವನ್ನು ಬಹು ಬೇಗ ಅರಿತು ಅವರೊಡನೆ ನಡೆದುಕೊಳ್ಳುತ್ತಿದ್ದೆನಾಗಿ ನಾನು ಅವರ ವಾತ್ಸಲ್ಯಕ್ಕೆ ಪಾತ್ರನಾದೆನು. ಸಂಚಾರ ಮುಗಿಸಿ ಮಠಕ್ಕೆ ಬರುವ ಸಮಯದಲ್ಲಿ ಸಲುಗೆಯಿಂದ ಶ್ರೀಗಳವರಲ್ಲಿ "ಬುದ್ಧಿ, ಮುಂದಿನವರ್ಷ ನಾನು ಹಾವೇರಿಗೆ ಬಂದು ತಮ್ಮ ಮಠದಲ್ಲಿದ್ದು ವಿಳನೆಯ ತರಗತಿಯ ಅಭ್ಯಾಸ ಮಾಡುತ್ತೇನೆ. ಇಲ್ಲಿ ಮಲೇರಿಯಾ ಜ್ವರದಿಂದ ನನಗೆ ಬಹಳ ತೊಂದರೆಯಾಗಿದೆ" ಎಂದೆ ಶ್ರೀಗಳು 'ಆಗಲಿ, ಈ ವರ್ಷ ಇಲ್ಲಿನ ಓದು ಪೂರೈಸಿ ಮುಂದಿನ ವರ್ಷ ಬಾ' ಎಂದರು. ನನಗೆ ಕುಣಿದಾಡುವಷ್ಟು ಸಂತೋಷ. ಅವರ ಸೇವೆಯನ್ನು ಇನ್ನಷ್ಟು ಶ್ರದ್ಧಾಭಕ್ತಿಯಿಂದ ಮಾಡತೊಡಗಿದೆ. ಅಂತು ಮರುವರ್ಷ ಹಾವೇರಿ ಹುಕ್ಕೇರಿಮಠಕ್ಕೆ ಬಂದು ಸೇರಿದೆ. ಹಾನಗಲ್ಲು ಮಠದಲ್ಲಿ ನನ್ನನ್ನು ಚೆನ್ನಾಗಿ ಅರಿತಿದ್ದ ಶ್ರೀಗಳು ತಮ್ಮ ಮಠದಲ್ಲಿ ನನ್ನನ್ನು ಬಹು ವಾತ್ಸಲ್ಯದಿಂದ ಕಂಡು ಇಟ್ಟುಕೊಂಡರೆಂದು ಹೇಳುವ ಅವಶ್ಯಕತೆಯಿಲ್ಲ.

(೨)

ದಿನಾಲು ಶ್ರೀಗಳವರನ್ನು ಹಾವೇರಿಯಿಂದ ವಾಯುವ್ಯ ದಿಕ್ಕಿನಲ್ಲಿ ಒಂದುಮೈಲು ದೂರದಲ್ಲಿರುವ ಕನವಳ್ಳಿ ತೋಟದವರೆಗೆ ಚಿದಾರಣ್ಯಕ್ಕೆ ಕರೆದೊಯ್ಯುವುದು. ಅಲ್ಲಿ ಬಾವಿಯಲ್ಲಿ ಕೈತೊಳೆಸಿ ಬೇವಿನಕಡ್ಡಿಯನ್ನು ತಂದುಕೊಟ್ಟು ದಂತಧಾವನ ಮಾಡಿಸಿಕೊಂಡು ಕರೆತರುವುದು ರಾತ್ರಿ ಪಾದವೊತ್ತುವುದು, ಅಭ್ಯಂಜನದ ದಿನ ತಲೆಗೆ ಎಣ್ಣೆ ಒತ್ತುವುದು, ಇವೇ ಮೊದಲಾದ ಸೇವಾ ಕಾರ್ಯಗಳು ನನಗೆ ಒದಗಿದುವು. ಶ್ರೀ ಚನ್ನಮಲ್ಲಿಕಾರ್ಜುನರ ಎರಡನೆಯ ಸಲದ ದರ್ಶನ ನನಗೆ ಈ ಸ್ಥಿತಿಯಲ್ಲಿ ಆಯಿತು. ಹಾವೇರಿ

ಮಠಕ್ಕೆ ನಾನು ಬಂದ ಎರಡು ಮೂರು ದಿನಗಳಲ್ಲಿಯೇ ಒಮ್ಮೆ ಹುಕ್ಕೇರಿಮಠಕ್ಕೆ ಸ್ವಾಮಿಗಳ ಪಾದಕ್ಕೆ 'ಸೈಪ್ರಸ್ ಸಾಲ್ವ್' ಎಂಬ ಔಷಧ ಹಚ್ಚಿ ತಿಕ್ಕುತ್ತಿದ್ದಾಗ ಬಂದ ಅವರು ನನ್ನನ್ನು ಕಂಡು ಪಿಳಿಪಿಳಿ ನೋಡಿ "ಏನಪ್ಪ, ಯಾವಾಗ ಬಂದೆ" ಎಂದು ಮಾತನಾಡಿಸಿದರು. ನನ್ನನ್ನು ಚನ್ನಮಲ್ಲಿಕಾರ್ಜುನರು ಮರೆತಿರಬಹುದೆಂದುಕೊಂಡಿದ್ದೆ. ನನ್ನ ಊಹೆ ತಪ್ಪಾಯಿತು. ಮುಂದುವರಿದು ಅವರು ಶ್ರೀಗಳವರಿಗೆ "ಈತ ಬಹು ಜಾಣ ವಿದ್ಯಾರ್ಥಿ..." ಇತ್ಯಾದಿಯಾಗಿ ಆಲೂರಿನಲ್ಲಿ ಪುಸ್ತಕ ಮಾರಾಟಮಾಡಿದ ವಿಷಯ ವನ್ನೂ ಜ್ಞಾಪಿಸಿ ಹೇಳಿ ಮುಗಿಸಿದರು. ಶ್ರೀಗಳವರೂ ಚನ್ನಮಲ್ಲಿಕಾರ್ಜುನರ ಮಾತು ಗಳಿಗೆ ನಗುವಿನ ಮೂಲಕವೇ ಸಮ್ಮತಿ ತೋರಿಸುತ್ತ 'ಜಾಣ ಜಾಣ! ನಮ್ಮ ಮಠದಲ್ಲಿ ರಲು ಬಂದಿದ್ದಾನೆ' ಎಂದು ಹೇಳಿದರು. ಹೀಗೆ ಹಾವೇರಿಮಠದಲ್ಲಿದ್ದುಕೊಂಡು ಶ್ರೀ ಚ. ಅವರ ಪ್ರೀತಿಗೆ ಪಾತ್ರನಾಗುವ ಸನ್ನಿವೇಶವೊದಗಿತು. ಅವರ ಪ್ರವಚನವನ್ನು ಹುಕ್ಕೇರಿ ಮಠದಲ್ಲಿ ಆಗಾಗ ಕೇಳುವ ಸುವರ್ಣಾವಕಾಶವೂ ಪ್ರಾಪ್ತವಾಯಿತು.

ಶ್ರೀ ಚ. ಅವರು ಆಗ ಶಿವಬಸವ ಸ್ವಾಮಿಗಳವರ ಉದಾರಾಶ್ರಯ ಹೊಂದಿ, 'ಶಿವಲಿಂಗವಿಜಯ ಮುದ್ರಣಾಲಯ'ವನ್ನು 'ವಾಲೀಮಠ'ವೆಂಬ ಮಠದಲ್ಲಿ, ನಡೆಯಿಸು ತ್ತಿದ್ದರು. ಹುಕ್ಕೇರಿಮಠಕ್ಕೆ ಅನತಿ ದೂರದಲ್ಲೇ ಅದು ಇತ್ತು. ಶಿವಬಸವ ಸ್ವಾಮಿ ಗಳು ಚಿದಾರಣ್ಯಕ್ಕೆ ದಯಮಾಡಿಸುತ್ತಿದ್ದುದು ಆ ಮಠದ ಮುಂಭಾಗದಿಂದಲೇ. ಚಿದಾ ರಣ್ಯದಿಂದ ತಿರುಗಿಬರುವಾಗ ಆ ಮುದ್ರಣಾಲಯವನ್ನು ಒಮ್ಮೊಮ್ಮೆ ಹೊಕ್ಕು ನೋಡಿ ಕೊಂಡುಬರುವ ಪದ್ಧತಿ. ಅಲ್ಲದೆ, ಆ ವಾಲೀಮಠದ ಪಕ್ಕದಲ್ಲಿಯೇ ಕಜ್ಜರಿ ಗುರು ಮೂರ್ತಿಶಾಸ್ತ್ರಿ ಎಂಬುವರ ಮನೆಯಿದ್ದು ಅವರು ಅನಾರೋಗ್ಯದಿಂದ ನರಳುತ್ತಿದ್ದರು. ಅವರನ್ನೂ ಶ್ರೀಗಳವರು ಆಗಾಗ ಮಾತನಾಡಿಸಿಕೊಂಡು ಬರುತ್ತಿದ್ದರು. ಶ್ರೀಗಳವರ ಹಿಂದೆಯೇ ಯಾವಾಗಲೂ ಹೋಗುತ್ತಿದ್ದ ನನಗೆ ಚನ್ನಮಲ್ಲಿಕಾರ್ಜುನರನ್ನು ಆಗಾಗ ನೋಡುವ ಅವಕಾಶವುಂಟಾಗುತ್ತಲೇ ಇತ್ತು. ಆದ್ದರಿಂದ ಅವರ ಪರಿಚಯ ದಿನೇ ದಿನೇ ಗಾಢವಾಗುತ್ತ ಹೋಯಿತು. ಅವರ ಶರಣಜನೋಚಿತ ಸಜ್ಜನಿಕೆ, ಕಾಯಕ ಸದ್ಭಾವದಲ್ಲಿದ್ದ ಅಪಾರಪ್ರೇಮ, ಆಹಾರವಿಹಾರ ವಿಚಾರದಲ್ಲಿದ್ದ ಶಾಸ್ತ್ರಗಾಮಿತ್ವ, ಆಡಂಬರ ಸಾಹಿತ್ಯ ನಡೆನುಡಿ, ಜೀವನಶ್ರದ್ಧೆ ಮತ್ತು ನಿಯತಕಾಲಿಕವಾಗಿ ಪ್ರಕಟಿಸುತ್ತಿದ್ದ ಸದ್ಧರ್ಮದೀಪಿಕೆ, ಅದೇ ಹೆಸರಿನ ಗ್ರಂಥಮಾಲೆಯಿಂದ ಪ್ರಕಟವಾಗುತ್ತಿದ್ದ ಅನೇಕ ಧಾರ್ಮಿಕ ಸಂಶೋಧನಾತ್ಮಕ ಗ್ರಂಥ ಬಾಹುಳ್ಯ—ಈ ಕಾರಣದಿಂದ ಅವರು ಹಾವೇರಿ ಜನಗಳ ಮನೆಮಾತಾಗಿದ್ದರು. ಶ್ರೀಗಳವರು ಅವರ ಬಗ್ಗೆ ಅಪಾರ ವಾತ್ಸಲ್ಯದಿಂದ ಮಾತನಾಡುತ್ತಿದ್ದರು. ಹಾವೇರಿಯಲ್ಲಿ ಆಗ ನೂರಾರುಜನ ಶಿವಾನುಭಾವಿಗಳಿದ್ದರು. ಗಣ್ಯರಾದ ಆ ಶಿವಾನುಭಾವಿಗಳು ಶ್ರೀ ಚ. ಅವರಲ್ಲಿ ಶಿವಾನುಭಾವ ವಿಷಯಕರಾದ ಅನೇಕ ಚರ್ಚೆಗಳನ್ನು ಮಾಡುತ್ತಿದ್ದರು. ಆಗಾಗ ಪ್ರವಚನವನ್ನು ಏರ್ಪಡಿಸುತ್ತಿದ್ದರು. ಇದು ಶ್ರೀ ಚನ್ನಮಲ್ಲಿಕಾರ್ಜುನರನ್ನು ದೂರ ದೂರದಿಂದ ಕಂಡುದಾಯಿತು. ಇನ್ನೂ ಅವರ ಸಮೀಪದಲ್ಲಿಯೇ ಇದ್ದು ಅವರನ್ನು ಅರ್ಥಮಾಡಿಕೊಳ್ಳುವ ಸಂದರ್ಭವೂ ನನಗೆ ಪುಣ್ಯವಶಾತ್ ಲಭ್ಯವಾಯಿತು.

೧೯೩೫-೩೬ ನೆಯ ಇಸ್ವಿಯಲ್ಲಿ ನಾನು 'ವರ್ನಾಕ್ಯುಲರ್ ಫೈನಲ್' ಪರೀಕ್ಷೆ (ಮುಲ್ಕೀ ಪರೀಕ್ಷೆ) ಯಲ್ಲಿ ಉತ್ತೀರ್ಣನಾಗಿ ನೌಕರಿಗಾಗಿ (ಮುಖ್ಯವಾಗಿ ಉಪಾಧ್ಯಾಯ ವೃತ್ತಿಗಾಗಿ) ಹಾವೇರಿ ಹುಕ್ಕೇರಿಮಠದ ಶ್ರೀಗಳವರ ಬೆನ್ನುಬಿದ್ದೆ. ಅಪ್ರಾಪ್ತ ವಯಸ್ಕ ನೆಂಬ ಕಾರಣದಿಂದ ಯಾವ ನೌಕರಿಯೂ ನನಗೆ ಲಭ್ಯವಾಗುವಂತಿರಲಿಲ್ಲ. ಆಗ ಶ್ರೀಗಳ ವರು ನನಗೆ ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತವನ್ನು ಅಭ್ಯಾಸ ಮಾಡು. ಅಲ್ಲಿ ಸೇರಿಸುತ್ತೇನೆ ಅಂದರು. ನನಗೆ ಸಂಗೀತ ಕಲಿಯುವಿಕೆಗಿಂತ ಸಂಪಾದನೆ ಮಾಡುವ ಒಂದು ಅವಕಾಶ ಬೇಕಾಗಿತ್ತು. ನನ್ನ ಸನ್ನಿವೇಶದ ಒತ್ತಡ ಹಾಗಿತ್ತು. ಆ ಕಾರಣ ದಿಂದ ಸಂಗೀತ ಕಲಿಕೆಗೆ ಮನಸ್ಸು ಮಾಡಲಿಲ್ಲ. ಆಗ ಚನ್ನಮಲ್ಲಿಕಾರ್ಜುನರನ್ನು ಕರೆಯಿಸಿ ಅವರಿಗೆ-"ನಿಮ್ಮ ಪ್ರೆಸ್ಸಿನಲ್ಲಿ ಈತನನ್ನು ಇಟ್ಟುಕೊಳ್ಳಿ ನಿಮಗೆ ಮರಿಯಾಗಿರುತ್ತಾನೆ" ಎಂದಪ್ಪಣೆ ಮಾಡಿದರು. ಅವರು ನಗುತ್ತ ನನ್ನ ಕಡೆಗೆ ನೋಡಿ-'ಪ್ರೆಸ್ಸಿನಲ್ಲಿ ಕೆಲಸ ಮಾಡಿಕೊಂಡು ಇರುತ್ತೀಯೇನಪ್ಪ' ಎಂದರು. ನಾನು ಅತ್ಯುತ್ಸಾಹದಿಂದ ಒಪ್ಪಿ 'ಇರುತ್ತೇನೆ' ಎಂದು ಹೇಳಿ, ಅವರನ್ನು ಹಿಂಬಾಲಿಸಿದೆನು.

ಶ್ರೀ ಚನ್ನಮಲ್ಲಿಕಾರ್ಜುನರನ್ನು ದೂರ ದೂರದಿಂದಲೇ ಅದುವರೆಗೆ ಕಂಡಿದ್ದ ನನಗೆ ಅವರ ಹತ್ತಿರಲ್ಲಿದ್ದು ಅವರೊಡನೆ ಹೊಂದಿಕೊಂಡು ವ್ಯವಹರಿಸುವುದು ಸಾಮಾನ್ಯ ರಿಗೆ ಸುಲಭ ಸಾಧ್ಯವಲ್ಲವೆಂದು ಬಹುಬೇಗ ಅರಿತುಕೊಂಡೆನು. ಅವರದು ತುಂಬಾ ಆದರ್ಶವಾದದ ಜೀವನ. ಎಲ್ಲವೂ ಶಿವನ ಸೇವೆಯಾಗಿ ಮಾರ್ಪಾಡಬೇಕು ಎಂಬುದೇ ಅವರ ಅಭಿಮತ. ಮಾತಿನಲ್ಲಿ, ನಡೆಯಲ್ಲಿ, ನುಡಿಯಲ್ಲಿ, ಕ್ರಿಯೆಯಲ್ಲಿ, ಊಟ ಉಪ ಚಾರದಲ್ಲಿ ತುಂಬಾ ಶಾಸ್ತ್ರಗಾಮಿತ್ವ ಅವರದು. ಸತತವೂ ಆದರ್ಶವಾದವನ್ನು ಎತ್ತಿ ಹಿಡಿಯಲೆತ್ನಿಸುತ್ತಿದ್ದ ಅವರನ್ನು ಆಶ್ರಯಿಸಿ ಇದ್ದವರೂ ಹಾಗೇ ನಡೆಯಬೇಕೆಂಬುದು ಅವರ ಮನೀಷೆ. ನಮ್ಮಂಥವರಿಂದ ಅವರ ಎಲ್ಲ ಆದರ್ಶ ಪಾಲನೆ ದುಸ್ಸಾಧ್ಯವೆಂಬು ದನ್ನು ಹೇಳದೆ ವಿಧಿಯಿಲ್ಲ.

ಅವರು ದಿನಕ್ಕೊಂದಾವರ್ತಿ ಮಧ್ಯಾಹ್ನ ೧೨ ಘಂಟೆಯ ಸಮಯದಲ್ಲಿ ತಮ್ಮ ಪ್ರೆಸ್ಸಿನ ಮುಂಭಾಗದಲ್ಲಿಯೇ ಇದ್ದ ಬಾವಿಯ ನೀರು ಸೇದಿಕೊಂಡು ತಣ್ಣೀರು ಸ್ನಾನ ಮಾಡಬೇಕು; ತಮ್ಮ ಬಟ್ಟೆಬರೆಗಳನ್ನು ತಾವೇ ತೊಳೆದುಕೊಳ್ಳಬೇಕು. ಸ್ನಾನವಾದ ಮೇಲೆ ಹೂ ಪತ್ರೆ ತರಬೇಕು; ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳಬೇಕು; ಅಡಿಗೆಯನ್ನು ಮಾಡಿಟ್ಟು ಶಿವಪೂಜೆಗೆ ಕುಳಿತುಕೊಂಡು ಶಿವಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ, ಪಾತ್ರೆಗಳನ್ನು ತೊಳೆದಿಟ್ಟು ಮೂರು ಘಂಟೆ ಹೊಡೆಯುವ ಹೊತ್ತಿಗೆ ಪ್ರೆಸ್ಸಿನ ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗಬೇಕು. ಸಾಮಾನ್ಯವಾಗಿ ಅವರು ಏಕಾಂತವನ್ನು ಹೆಚ್ಚಾಗಿ ಬಯಸುತ್ತಿದ್ದರು. ಮುದ್ರಣಾಲಯದ ಕೆಲಸಗಾರರೆಲ್ಲ ಸಾಯಂಕಾಲ ಹೊರಟುಹೋದಮೇಲೆ ಕದ ಹಾಕಿಕೊಂಡು ಒಬ್ಬರೇ ಕುಳಿತು ನೂರಾರು ವಿಷಯಗಳ ಬಗ್ಗೆ ಯೋಚಿಸುತ್ತಿದ್ದರು. ಅವರನ್ನು ಕಾಣಲು ಯಾರಾದರೂ ಶರಣರು ಬಂದರೆ ಅವರೊಡನೆ ಬಹು ಪ್ರಿಯವಾಗಿ ವರ್ತಿಸಿ, ಎಷ್ಟು ಅವಶ್ಯಕವೊ ಅಷ್ಟನ್ನು ಅವ ರೊಡನೆ ಮಾತನಾಡಿ ಕಳಿಸಿಬಿಡುತ್ತಿದ್ದರು. ರಾತ್ರಿಯಾಗುತ್ತಲೆ ಮಿಣಕು ದೀಪದ ಮುಂದ ಪ್ರಕಾಶದಲ್ಲಿ ಕುಳಿತು ಬರೆಯಲು ತೊಡಗುತ್ತಿದ್ದರು. ನಿದ್ರೆ ಬಂದರೆ ದೀಪ

ಅರಿಸಿ ಕುಳಿತ ಬೆಂಚಿನ ಮೇಲೆಯೇ ಹಾಸಲು ಹೊದಿಯಲು ಎರಡೂ ಪ್ರಯೋಜನ ವನ್ನುಂಟುಮಾಡುವ ದೊಡ್ಡ ದುಪ್ಪಟ್ಟಿಯನ್ನು ಸುತ್ತಿಕೊಂಡು ಕಾಲು ಮಡಚಿಕೊಂಡು ದುಂಡಗೆ ಮಲಗಿಬಿಡುತ್ತಿದ್ದರು. ನಿದ್ರೆ ಅವರಿಗೆ ಯಾವಾಗ ಹತ್ತುತ್ತಿತ್ತೊ! ಯಾವಾಗ ಎಚ್ಚರಗೊಳ್ಳುತ್ತಿದ್ದರೋ! ಸಾಮಾನ್ಯವಾಗಿ ದಿನಾಲು ಬಹುಬೇಗ ೮-೯ ಘಂಟೆ ಸುಮಾರಿಗೆ ಮಲಗಿ ರಾತ್ರಿ ಒಂದು ಅಥವಾ ಎರಡು ಘಂಟೆಯ ಸುಮಾರಿಗೆ ಎದ್ದು ಮುಖಮಾರ್ಜನ ಮಾಡಿಕೊಂಡು ನೀರು ಮುಕ್ಕಳಿಸಿ ಭಸ್ಮಧಾರಣೆ ಮಾಡಿಕೊಂಡು ಬರೆಯಲು ತೊಡಗುತ್ತಿದ್ದರು. ಬರೆಯಲು ಅವರಿಗೆ ಆ ನಿಶ್ಶಬ್ದಮಯ ನಿಶೀಥವೇ ಪ್ರಶಸ್ತ ಸಮಯ. ಏಕಾಂತ ವಾಸದಲ್ಲಿ ವಿಶೇಷ ಕಾಲವನ್ನು ವ್ಯಯಿಸುತ್ತಿದ್ದ ಅವರಿಗೆ ತಮ್ಮ ಸ್ವತಂತ್ರ ವಿಚಾರಗಳನ್ನು ಅನಂತ ಮುಖದಲ್ಲಿ ಪ್ರಕಟಿಸಲು ಸಹಕಾರಿಯಾಯಿತು. ನಿಜವಾಗಿ ಅವರು ಏಕಾಂಗ ಸಾಹಸವೀರರು; ಶರಣಜನೋಚಿತ ಸಜ್ಜನಿಕೆಯ ಧೀರರು. ಕರ್ಮಯೋಗಿಗಳು. ವೀರಶೈವ ಪರಿಭಾಷೆಯಲ್ಲಿ ಹೇಳಬೇಕೆಂದರೆ ಕಾಯಕ ಸದ್ಭಾವಿಗಳು.

ನಾನು ಅವರ ಸಮೀಪ ಸ್ಥಾನದ ಮೇಲೆ ಅವರು ಊನವಾದ ತಮ್ಮ ಕೈಗಳಿಂದ ನೀರು ಸೇದಿ, ಸ್ನಾನ ಮಾಡುವ ಬವಣೆಯನ್ನು ಕಂಡು ನಾನೇ ಸ್ನಾನ ಮಾಡಿಸುವೆನೆಂದು ಹೇಳಿ ನೀರನ್ನು ಸೇದಲು ಮೊದಲ ಸಲ ಬಾವಿಕಟ್ಟೆಯನ್ನೇರಿದೆ. ಬಾವಿಯೋ ಪಾತಾಳ ದಲ್ಲಿ ನೀರನ್ನುಳ್ಳದ್ದು. ನನಗೆ ಚೆನ್ನಾಗಿ ಸ್ನಾನ ಮಾಡಿಸಿ, ಮೈ ತಿಕ್ಕಿ ಸೇವೆ ಮಾಡ ಬೇಕೆಂಬ ಆಸೆಯಾಗಿತ್ತು. ಈ ಆಶೆ ಫಲಾಕಾಂಕ್ಷೆಯದೇನೂ ಆಗಿರಲಿಲ್ಲ. ಸಹಜ ವಾಗಿಯೇ ನನ್ನಲ್ಲುಂಟಾದ ಮನೋಭಾವದ್ದು. ಆದರೆ ಮೊದಲದಿನ ಸ್ನಾನಮಾಡಿಸು ವಾಗಲೇ ನನ್ನ ಆಸೆಗೆ ಅವರು ತಣ್ಣೀರೆರಚಿದರು.

ನೀರನ್ನೆಳೆಯಲು ಅವರಿಟ್ಟುಕೊಂಡ ಕೊಡಪಾನ (ತಾಮ್ರದ ಕೊಡ) ಕೇವಲ ನಾಲ್ಕೈದು ತಂಬಿಗೆ ನೀರು ಹಿಡಿಯುವಂತಹುದು. ಅಂಗವೈಕಲ್ಯ ಶಕ್ತಿವಿಹೀನತೆಗಳ ಪರಿಣಾಮವಾಗಿ ದೊಡ್ಡ ಕೊಡವನ್ನು ಎಳೆಯುವುದು ಅವರಿಗೆ ಶಕ್ಯವಿರಲಿಲ್ಲ. ಶಕ್ತಿ ಗನುಗುಣವಾದ ಕೊಡವನ್ನೇ ಇಟ್ಟುಕೊಂಡಿದ್ದರು. ನನ್ನ ಉತ್ಸಾಹಕ್ಕೆ ಆ ಕೊಡ ಏತಕ್ಕೂ ಸಾಲದು. ನಾನು ಆ ಕೊಡವನ್ನು ಬಿಟ್ಟು ಬೇರೆ ಇನ್ನೊಂದು ದೊಡ್ಡ ಕೊಡದಲ್ಲಿ ನೀರು ಸೇದಿ ಬಾವಿಯ ಕಟ್ಟೆಯ ಮೇಲೆ ಅವರನ್ನು ಕುಳ್ಳಿರಿಸಿ ದಬದಬ ನೀರು ಸುರಿಯತೊಡಗಿದೆ. ಒಂದು ಕೊಡ ನೀರು ಸುರಿಯುತ್ತಿದ್ದಂತೆಯೇ ನನ್ನನ್ನು ದುರುಗುಟ್ಟಿ ನೋಡಿದರು. ನಾನು ಅವಾಕ್ಕಾದೆ. "ಅಲ್ಲಪ್ಪ, ಬಾವಿಯೊಳಗಿನ ನೀರು ಪುಕ್ಕಟೆ ಸಿಗುವುದೆಂದು ಮನಸ್ಸೀ ಬಳಸಲು ನಮಗೇನು ಅಧಿಕಾರವಿದೆ. ಅದು ಶಿವನ ವಸ್ತು ಅದನ್ನು ಬಳಸುವಲ್ಲಿ ವಿತರಣೆ ಬೇಡವೇ ? ಶಿವನ ಪ್ರಸಾದವಾದ್ದರಿಂದ ಅದನ್ನು ಬಹಳ ಭಯಭಕ್ತಿಯಿಂದ ಎಷ್ಟುಬೇಕು ಅಷ್ಟನ್ನೇ ಬಳಸಬೇಕಲ್ಲವೆ ಮನಸ್ಸಿ ಬಳಸಿ, ಇನ್ನೊಬ್ಬರ ಉಪಯೋಗಕ್ಕೆ ಬೇಕಾಗುವ ಅದನ್ನು ನಾವು ವ್ಯಥಾ ಹಾಳು ಮಾಡಿದಂತ ಲ್ಲವೆ ?" ಎಂದರು. ಈ ತತ್ತ್ವ ನನಗೇನೂ ಕನಸು ಮನಸ್ಸಿನಲ್ಲೂ ಗೊತ್ತಿರಲಿಲ್ಲ. ಇಂದು ನೀರು, ವಿದ್ಯುಚ್ಛಕ್ತಿ ಮೊದಲಾದುವನ್ನು ಮಿತವಾಗಿ ಬಳಸಬೇಕೆಂದು ಸರಕಾರ ಹೇಳುತ್ತಿದೆ. ಈ ತತ್ತ್ವವನ್ನು ಶರಣರು ತಮ್ಮ ಜೀವನದಲ್ಲಿ ಎಂದೋ ಅಳವಡಿಸಿ

ಕೊಂಡಿದ್ದರು. ಈ ಅಂಶ ಗಮನಾರ್ಹವಾದುದು. ಮುಂದುವರಿದು ಶ್ರೀ ಚ. ಅವರು "ಏನು ಕೆಲಸ ಮಾಡಬೇಕಾದರೂ ಶಿವನು ಮೆಚ್ಚುವಂತೆ ಕೆಲಸ ಮಾಡಬೇಕು. ತಡೆ ತಡೆ ಮೈ ತಿಕ್ಕಿಕೊಳ್ಳುತ್ತೇನೆ" ಎಂದು ಮೈಕೈ ತಿಕ್ಕಿಕೊಳ್ಳತೊಡಗಿದರು. ನಾನು 'ಬೆನ್ನು ತಿಕ್ಕಿ ಕೊಳ್ಳುತ್ತೇನೆ' ಎಂದೆ ಸುಮ್ಮನಾದರು.'ಮೌನಂ ಅರ್ಧಸಮ್ಮತಿಃ' ಎಂಬುದನ್ನರಿತು ನಾನು ಬೆನ್ನು ತಿಕ್ಕತೊಡಗಿದೆ. ನನ್ನ ಹುಮ್ಮಸ್ಸು ಅವರಿಗೆ ಅರ್ಥವಾಗಿರಲಿಕ್ಕಿಲ್ಲ. ನನ್ನ ಸ್ವಲ್ಪ ಶಕ್ತಿಯನ್ನೇ ಉಪಯೋಗಿಸಿ ಬೆನ್ನು ತಿಕ್ಕಿದೆ. ಅವರಿಗೆ ಆ ನನ್ನ ಶಕ್ತಿ ಪ್ರಯೋಗದಿಂದ ಹಿತಕ್ಕಿಂತ ಅಹಿತವೇ ಆಗಿರಬೇಕೆಂದು ಇಂದು ನನ್ನ ಜ್ಞಾಪಕ್ಕೆ ಬರುತ್ತದೆ. ಅಂದು ಅದು ನನ್ನ ಕನಸು ಮನಸಿನಲ್ಲೂ ಹೊಳೆಯದೆ ಹೋಯಿತು. ಅವರು ನನ್ನನ್ನು ನಸುನಕ್ಕು ದಿಟ್ಟಿಸಿ ಮುಖ ಹೊರಳಿಸಿ ನೋಡಿ, "ಪ್ರಾಯದ ಹುಡುಗ ಕೈಯಲ್ಲಿ ಶಕ್ತಿ ಬಹಳ ! ನಿನ್ನ ಹುಮ್ಮಸ್ಸೂ ಅತ್ಯಂತ ಹೆಚ್ಚಿನದು ಸಾಕು ಬಿಡಪ್ಪ" ಎಂದೇಬಿಟ್ಟರು.

ನಾನು ಪುನಃ ಇನ್ನೊಂದು ಕೊಡ ನೀರು ಸೇದಿದೆ. "ನೋಡಪ್ಪ ಈ ಕೊಡ ದೊಳಗಿನ ಸ್ವಲ್ಪ ನೀರನ್ನು ಮೈಮೇಲೆ ಹಾಕಿ, ಸ್ವಲ್ಪ ನೀರನ್ನು ಉಳಿಸು. ಅವನ್ನೇ ಬಟ್ಟೆ ತೊಳೆಯಲು ಉಪಯೋಗಿಸಬೇಕೆಂದರು" ಆಗಲಿ ಎಂದುಕೊಂಡು ನೀರನ್ನು ತಲೆಯ ಮೇಲೆ ಸುರಿಯತೊಡಗಿದೆ. "ಸಾಕಪ್ಪ ಸಾಕು ಸಾಕು, ಮಡಿಯನ್ನು ಕೊಡು" ಎಂದರು. ನಾನು "ಅಯ್ಯೋ ! ಪಂಚೆಯೇ ತೊಯ್ದಿಲ್ಲ. ಕುಳಿತುಕೊಳ್ಳಿ ಈ ಕೊಡದ ನೀರೆಲ್ಲ ಮುಗಿಯಲಿ; ಬಟ್ಟೆ ತೊಳೆಯಲು ಬೇರೆ ನೀರನ್ನು ಸೇದಿ ತೊಳೆಯುತ್ತೇನೆ" ಎಂದೆ ಅದಕ್ಕೆ ಅವರು "ದಬ ದಬ ಹೀಗೆ ನೀರು ಸುರಿದರೆ ಪಂಚೆ ಹೇಗೆ ನೆನೆಯುತ್ತದೆ ? ಪಂಚೆ ಪೂರ್ಣ ನೆನೆಯದಿದ್ದರೂ ಚಿಂತೆಯಿಲ್ಲ. ಇಂದು ಬಹಳ ನೀರು ಉಪಯೋಗಿಸಿ ಬಿಟ್ಟೆ, ಸಾಕಪ್ಪಾ ಸಾಕು ! ಇದು ನನ್ನ ತತ್ತ್ವಕ್ಕೆ ಪೂರ್ಣ ವಿರೋಧ" ಎಂದುಬಿಟ್ಟರು. ಚೆನ್ನಾಗಿ ಸ್ನಾನಮಾಡಿಸಬೇಕೆಂದಿದ್ದ ನನ್ನ ಕನಸು ಗಾಳಿಗೋಪುರವಾಯಿತು. ನನಗೆ ಆಗ ನಿರಾಸೆಯೇ ಆಯಿತು. ಅವರಿಗೆ ಮಡಿಯನ್ನು ಕೊಟ್ಟು, ಅವರು ಬಿಟ್ಟ ಆ ಪಂಚೆ, ಕೋಟು, ಅಂಗಿಗಳನ್ನು ತೊಳೆಯಲು ಪಕ್ಕಕ್ಕೆ ಸರಿಸಿ ಇಟ್ಟು ನೆನೆದುಕೊಳ್ಳಲೆಂದು ಚೆನ್ನಾಗಿ ತೊಯ್ಸಿಟ್ಟೆ. ಅವರು ನನಗೆ 'ಈ ಬಟ್ಟೆಗಳನ್ನು ಹೇಗೆ ತೊಳೆಯಬೇಕೆಂಬುದನ್ನು ಆಮೇಲೆ ಹೇಳುತ್ತೇನೆ' ಎನ್ನುತ್ತ ಮಡಿಯುಟ್ಟು ಶಿವಪೂಜಾ ಗೃಹ ಪ್ರವೇಶ ಮಾಡಿದರು.

ಆ ದಿನ ಮೊದಲೇ ನನಗೆ ಈ ದಿನ ತಮಗೆ ಏನೇನು ಪ್ರಸಾದಕ್ಕೆ ಸಿದ್ಧಪಡಿಸ ಬೇಕೆಂದು ತಿಳಿಸಿದ್ದರು. ಅದಕ್ಕಾಗಿ ಸಿದ್ಧಪಡಿಸತೊಡಗಿದೆ. ಮಡಿಯ ನೀರಿನಲ್ಲಿ ಗಜ್ಜರಿ, ಸೌತೇಕಾಯಿ, ಬೆಂಡೇಕಾಯಿಗಳನ್ನು ತೊಳೆದು ಅವನ್ನೆಲ್ಲ ಚೂರು ಚೂರು ಮಾಡಿದೆ; ಪಲ್ಲೆ ಮಾಡಲಿಕ್ಕಿಲ್ಲ. ಆ ಹಸಿಯ ಹೋಳುಗಳನ್ನೇ ಸ್ವೀಕರಿಸುತ್ತೇವೆಂದಿದ್ದರು. ಈ ತರದ ಹಸಿಯ ತರಕಾರಿಗಳನ್ನು ಅವರು ತಮ್ಮ ಯಾವುದೋ ದೈಹಿಕ ಶುದ್ಧಿಗಾಗಿ ತೆಗೆದುಕೊಳ್ಳುತ್ತಾರೆಂದು ಆಮೇಲೆ ನನಗೆ ತಿಳಿಯಿತು. ಆದರೆ ಬೇಯಿಸಿದ ಪ್ರಸಾದವೂ ಸಿದ್ಧವಾಗಬೇಕಾಗಿತ್ತು. ಅದು ಹಸಿಯ ಮೆಂತೆ ಹಿಟ್ಟಿನ ಗಂಜಿ. ಕಷಾಯ ಕಾಸಲು ಸೌದೆ ತರಬೇಕಾದ ಪ್ರಮೇಯವಿರಲಿಲ್ಲ. ಪೇಪರ್ ರೀಮುಗಳನ್ನು ಕಟ್ಟಿಬಂದ ಹರುಕು ಮುರುಕು ಕಾಗದ ಮತ್ತು ಪ್ರೆಸ್ಸಿನಲ್ಲಿ ಉಪಯೋಗರಹಿತವಾಗಿ ಉಳಿದ ಪ್ರೂಫ್ ಕಾಗದ

ಮತ್ತು ಇನ್ನಿತರ ನಿರುಪಯುಕ್ತ ಹರಕು ಮುರುಕು ಕಾಗದ. ಇಂಥ ಕಾಗದವನ್ನು ಸಣ್ಣ ಸಣ್ಣ ಕಂತೆಗಳನ್ನಾಗಿ ಮಾಡಿ ಎಂದಿನಿಂದಲೊ ಕಟ್ಟಿ ಪೇರಿಸಿಟ್ಟಿದ್ದರು. ಈ ಕಾಗದ ಗಳನ್ನು ಕಸಕ್ಕೆಸೆಯಬಾರದೆಂದೂ, ಅವು ಸೌದೆಯ ಕೆಲಸ ಮಾಡುತ್ತವೆಂದೂ, ನನಗೆ ಮೊದಲೇ ತಿಳಿಸಿ ಅದನ್ನು ಉಪಯೋಗಿಸ ಹೇಳಿದ್ದರು. ಇಂಥ ಕಾಗದದ ಕಂತೆಗಳೇ ಸೌದೆ. ಆ ಕಾಗದದ ಕಂತೆಗಳನ್ನು ಉರಿಸಿ ಅಡಿಗೆ ಮಾಡುವವನಿಗೆ ತಾಳ್ಮೆ ಎಷ್ಟಿರ ಬೇಕೆಂಬುದನ್ನು ವಿವರಿಸಬೇಕಾದುದೇ ಇಲ್ಲ. ಹೊಗೆಯೋ ಹೊಗೆ! ಪದೇ ಪದೇ ಕಾಗದದ ಆ ಕಂತೆಗಳನ್ನು ಒಲೆಯಲ್ಲಿ ತುರುಕುತ್ತಲೇ ಕುಳಿತಿರಬೇಕಾಗುತ್ತಿತ್ತು. ಉರಿಯೋ ಒಮ್ಮೆ ದಿಗ್ಗನೆ ಏಳುತ್ತಿತ್ತು. ಉರಿಯು ದಿಗ್ಗನೆ ಉರಿದು ಇನ್ನೊಂದು ಕಂತೆಯನ್ನಿಡುವುದರೊಳಗೆ ಒಲೆ ಆರಿಹೋಗುತ್ತಿತ್ತು. ಈ ಎಲ್ಲ ಅವಸ್ಥೆಗಳೂ ಕಾಗದ ಸುಟ್ಟು ಅಡಿಗೆಮಾಡುವವನಿಗೆ ಉಂಟಾಗುವುದು ಸ್ವಾಭಾವಿಕ. ಎಷ್ಟು ದಿನಗಳಿಂದ ಈ ಕಠಿಣ ವ್ರತವನ್ನು ಪಾಲಿಸಿಕೊಂಡು ಬಂದಿದ್ದರೋ ಆ ಮಹಾರಾಯರು!

ಶಿವಪೂಜೆ ಮುಗಿದ ಮೇಲೆ ಪ್ರಸಾದ ತರಲು ಸಂಜ್ಞೆ ಮಾಡಿದರು. ಸಿದ್ಧಪಡಿ ಸಿದ್ದ ಪ್ರಸಾದವನ್ನೆಲ್ಲ ಒಯ್ದು ಮುಂದಿಟ್ಟೆ. ಹಸಿಯ ತರಕಾರಿಯನ್ನೆಲ್ಲ ಪಕ್ಕಕ್ಕೆ ಸರಿಸಿ ಕೊಂಡು ತಮಗೆಷ್ಟು ಬೇಕೋ ಅಷ್ಟನ್ನು ತಮ್ಮ ಪ್ರಸಾದ ಬಟ್ಟಲಕ್ಕೆ ಹಾಕಿಕೊಂಡು ಉಳಿದುದನ್ನು ನನಗೆ ಕೊಟ್ಟು "ಇದನ್ನೆಲ್ಲ ನೀನು ಸ್ವೀಕರಿಸು. ಬೇಕಾದರೆ ಇನ್ನಷ್ಟು ಹೋಳನ್ನು ಹೆಚ್ಚಿಕೊಂಡು ತೆಗೆದುಕೋ, ಹಸಿಯ ಪದಾರ್ಥ ದೇಹಕ್ಕೆ ಬಹಳ ಒಳ್ಳೆ ಯದು" ಎಂದರು. ಆ ಪ್ರಸಾದವನ್ನು ಸ್ವೀಕರಿಸಿದ ಮೇಲೆ ಬೇಯಿಸಿದ ಮೆಂತೆ ಹಿಟ್ಟಿನ ಅಂಬಲಿಯನ್ನೇ ಎದುರಿಗಿಟ್ಟೆ. ಒಂದುವರೆಗಿಳಲಿನಷ್ಟು ಕಷಾಯವನ್ನು ಉಳಿಸಿ 'ಇದನ್ನು ನೀನು ಕುಡಿ ಬಹಳ ಒಳ್ಳೆಯಪ್ರಸಾದವಿದು' ಎಂದರು. ನಾನು ಗಜ್ಜರಿ ಸೌತೇಕಾಯಿಗಳ ನ್ನೇನೋ ಹಾಗೂ ಹೀಗೂ ತಿಂದೆ. ಬೆಂಡಿಕಾಯಿ ತಿನ್ನುವುದಕ್ಕೆ ಮಾತ್ರ ಸಾಧ್ಯವೇ ಆಗಲಿಲ್ಲ. ಹಸಿದ ಹೊಟ್ಟೆ; ಹಾಗೂ ಹೀಗೂ ಗಜ್ಜರಿ ಸವತೇಕಾಯಿಗಳಿಗೆ ಸ್ಥಾನವಿತ್ತರೂ ಬೆಂಡೆಕಾಯಿಯನ್ನು ಏನುಮಾಡಿದರೂ ಒಳಗೆ ಪ್ರವೇಶಮಾಡಗೊಡಲಿಲ್ಲ. ಗಟ್ಟಿಮನಸ್ಸು ಮಾಡಿ ಮುಖವನ್ನೆಲ್ಲ ಹಾಳುಮಾಡಿಕೊಂಡು ಹಾಗೂ ಹೀಗೂ ನಾಲ್ಕಾರು ಹೋಳು ಗಳನ್ನು ಜಗಿದು ತಿನ್ನುವ ಹೊತ್ತಿಗೆ ನನ್ನ ಪುಣ್ಯವೆಲ್ಲ ಖರ್ಚಾಗಿ ಹೋಯಿತು. ಸರಿ. ಮೆಂತೆಯ ಅಂಬಲಿಯಾದರೂ ನನ್ನ ಪೂರ್ಣಾಭಿಲಾಷೆಗೆ ಸಹಕಾರಿಯಾದೀತೆಂದು ಭಾವಿ ಸಿದ್ದೆ. ಎಂದೂ ಅದರ ರುಚಿಗಾಣದ ನನಗೆ ಅದು ಅಕ್ಕಿಯ ಅಂಬಲಿಯಂತೆ ಇರಬಹು ದೆಂದುಕೊಂಡಿದ್ದೆ. ಹಸಿಯ ತರಕಾರಿಯನ್ನು ತಿನ್ನುವ ಸಾಹಸವನ್ನು ಬದಿಗೆ ಸರಿಸಿ, ಅಂಬ ಲಿಯಂತೆ ತೆಳುವಾಗಿದ್ದ ಮೆಂತೆ ಹಿಟ್ಟಿನ ಕಷಾಯವನ್ನೆಲ್ಲ ತಟ್ಟೆಗೆ ಸುರಿವಿಕೊಂಡು ಬಾಯಿ ಗೊತ್ತಿದೆ. ಕೇಳಬೇಕೆ! ಕಹಿಯೋ ಕಹಿ. ಅಂದಿನಿಂದ ಮೆಂತೆಹಿಟ್ಟಿನ ಕಷಾಯದ ಗುಣ ಧರ್ಮವೇನೆಂಬುದರ ಅರಿವು ನನಗಾಗ ಆಯಿತು. ಅದುವರೆಗೆ ಮೆಂತಕಾಳಿನ ಸ್ನೇಹವೇ ನನಗಾಗಿರಲಿಲ್ಲ. ಬಾಯಿಗೆಳೆದುಕೊಂಡು ಬಾಯಿತುಂಬ ತುಂಬಿಕೊಂಡು ಕಹಿಯಾದ ಈ ಕಷಾಯವನ್ನು ಉಗುಳಬೇಕೆ? ನುಂಗಬೇಕೆ? ಗಟ್ಟಿಮನಸ್ಸು ಮಾಡಿ ನುಂಗಿದೆ. ಹೊಟ್ಟೆಮಾತ್ರ ಅದನ್ನು ಸ್ವಾಗತಿಸಲು ಸರ್ವಥಾ ನಾಲಗೆಗೆ ಆಜ್ಞೆ ಮಾಡಲಿಲ್ಲ. ಕುಡಿ ಯದೆ ಬಿಟ್ಟರೆ ಶ್ರೀ ಜ. ಅವರಿಗೆ ಹೇಳುವುದೇನು? ಚೆಲ್ಲುವುದಂತೂ ಮಹಾಪರಾಧವೇ.

ಕುಡಿದೆನೆಂದು ಸುಳ್ಳು ಹೇಳಲೂ ಸಾಧ್ಯವಿಲ್ಲ. ಹೊಟ್ಟೆಯ ಹಸಿವೋ ಹೆಚ್ಚಾಗಿ ಹೋಗಿದೆ. ಈ ತೂಗುಯ್ಯಾಲೆಯಲ್ಲಿ ಮನಸ್ಸು ಪೂಜ್ಯ ಶಿವಬಸವಸ್ವಾಮಿಗಳವರನ್ನೇ ನೆನೆಯತೊಡಗಿತು. ಆ ದಿವಸ ಹಾಗೂ ಹೀಗೂ ಆ ದಿನ ಹಸಿವನ್ನು ಈ ಪದಾರ್ಥಗಳಿಂದ ನೂಕಿದ್ದಾಯಿತು. ನನ್ನ ಜೀವಮಾನದಲ್ಲೇ ಆ ದಿನದ ಪ್ರಸಾದ ಸ್ವೀಕಾರದ ಅನುಭವ ಪೂರ್ಣ ಹೊಸ ಮಾದರಿಯದು. ಇನ್ನೊಂದು ದಿನ ಇಂಥ ಆಹಾರವನ್ನು ತಕ್ಕೊಳ್ಳಲು ಸಾಧ್ಯವೇ ಇಲ್ಲ; ಪ್ರೆಸ್ಸಿನ ಕೆಲಸ ನನಗಿಲ್ಲದಿದ್ದರೂ ಚಿಂತೆಯಿಲ್ಲ ಎಂದುಕೊಂಡೆ.

ಈ ರಾದ್ಧಾಂತ ಇಷ್ಟಾದಮೇಲೆ ಅಡಿಗೆ ಮನೆಯನ್ನು ಚೊಕ್ಕಟಗೊಳಿಸಿ, ಬಾವಿ ಕಟ್ಟೆಯ ಮೇಲೆ ಸ್ನಾನಮಾಡಿ ಬಿಟ್ಟ ಪಂಚೆ, ವಸ್ತ್ರ ಅಂಗಿ, ಕೋಟುಗಳನ್ನು ತೊಳೆಯಲು ನಾನು ಬಾವಿಯಕಟ್ಟೆಗೆ ಹೋದೆ. ನೀರನ್ನು ಸೇದಿ ಅಲ್ಲಿದ್ದ ಕಲ್ಲುಬಾನಿಯನ್ನು ತುಂಬಿಸಿದೆ. ಶ್ರೀ ಚ. ಅವರು ಶಿವಪೂಜೆ ಮುಗಿಸಿ ಇದ್ದ ಇನ್ನೊಂದಂಗಿಯನ್ನು ಧರಿಸಿ, ಹೊರಗೆ ಬಂದು ನನ್ನ ಚಟುವಟಿಕೆಯನ್ನೀಕ್ಷಿಸಿದರು. ಅವರು ಬಟ್ಟೆ ತೊಳೆಯುವ ಅವರದೇ ಆದ ವಿಧಾನವನ್ನು ನನಗೆ ಹೇಳಿಕೊಡಬೇಕಾಗಿತ್ತು. ಅದಕ್ಕಾಗಿ ಬಾವಿಯ ಕಟ್ಟೆಯ ಹತ್ತಿರ ಬಂದು. "ನೋಡಪ್ಪ, ನಿನ್ನ ಮನಸ್ಸಿಗೆ ಬಂದಂತೆ ನನ್ನ ಬಟ್ಟೆಗಳನ್ನು ತೊಳೆಯಬೇಡ. ನಾನು ಹೇಳಿದಂತೆ ತೊಳೆ. ಇಲ್ಲವಾದರೆ ನನ್ನ ಕೆಲಸವೇನೂ ನನಗೆ ಭಾರವಲ್ಲ; ನಾನೇ ತೊಳೆದುಕೊಳ್ಳುತ್ತೇನೆ. ನೀನು ಉತ್ಸಾಹದಿಂದ ನನ್ನ ಸೇವೆಮಾಡಬೇಕೆಂಬ ಹುಮ್ಮಸ್ಸಿನಿಂದ ಕಾರ್ಯಗಳನ್ನು ಬಹಳ ಚಟುವಟಿಕೆಯಿಂದ ಮಾಡುತ್ತಿದ್ದೀಯೆ, ಸಂತೋಷ." ಎನ್ನುತ್ತ ಕೈಯಲ್ಲಿ ಹಿಡಿದಿದ್ದ ಸಣ್ಣ ಸಬಕಾರದ ತುಂಡನ್ನು ನನ್ನ ಕೈಗೆ ಕೊಟ್ಟು, "ಬಟ್ಟೆಯೆಲ್ಲ ನೆನೆದಿವೆ. ಸ್ವಲ್ಪ ಸ್ವಲ್ಪ ಸೋಪನ್ನು ಬಟ್ಟೆಗೆ ಹಚ್ಚಿ ಬಟ್ಟೆಗಳನ್ನು ಮೆಲ್ಲಗೆ ಕುಕ್ಕು. ಆಗ ಬಟ್ಟೆಗೆಲ್ಲ ಸೋಪು ಅಂಟುತ್ತದೆ. ಆಮೇಲೆ ಮೆಲ್ಲನೆ ಮತ್ತೆರಡು ಮೂರು ಸಲ ಬಟ್ಟೆಗಳನ್ನು ಹಾಗೇ ಕುಕ್ಕಿ, ನೀರಿನಲ್ಲದ್ದಿ ಹಿಂಡಿಬಿಡು. ಕಲ್ಲ ಮೇಲೆ ರಪರಪ ಸಿಕ್ಕವರಂತೆ ಬಡಿಯಬೇಕಾದುದೇನೂ ಇಲ್ಲ. ನೀರನ್ನು ಮಾತ್ರ ಹೆಚ್ಚಾಗಿ ಬಳಸಬೇಡ. ಹಿಂಡುವಾಗ ಎಚ್ಚರ. ನಿನ್ನ ಶಕ್ತಿಯನ್ನೆಲ್ಲ ಬಿಟ್ಟು ಹಿಂಡಬೇಡ. ಹೊಲಿಗೆಗಳು ಹರಿದು ಬಟ್ಟೆ ಬೇಗ ಹೊಲಿಗೆ ಬಿಟ್ಟುಕೊಳ್ಳುತ್ತವೆ" ಇತ್ಯಾದಿಯಾಗಿ ಹೇಳಿದರು. ನಾನು 'ಆಗಲಿ' ಎಂದು ಅವರು ಹೇಳಿದ ಹಾಗೆ ಬಟ್ಟೆ ತೊಳೆಯಲು ಪ್ರಯತ್ನಿಸಿದೆ. ಕಲ್ಲಮೇಲೆ ಬಡಿಯದೆ ಬಟ್ಟೆ ಹೇಗೆ ಸ್ವಚ್ಛವಾಗಬೇಕು? ಎಂಬುದೇ ನನ್ನ ಪ್ರಶ್ನೆ. ಅಂತೂ ಹಾಗೆ ಹೀಗೆ ಕಲ್ಲಮೇಲೆಯೇ ಅವರು ಹೇಳಿದ ಹಾಗೆ ಶಕ್ತಿಯಿಂದಲೇ ಕುಕ್ಕುತ್ತಿದ್ದೆ. ಕುಕ್ಕಿ ನೀರಿನಲ್ಲಿ ಜಾಲಾಡಿ ಹಿಂಡಿ ಒಣಹಾಕಿದೆ. ಆದರೂ ನನ್ನ ಒಗೆತ ಅವರ ಮನಸ್ಸಿಗೆ ಬರಲಿಲ್ಲವೆಂದು ತೋರುತ್ತದೆ. ಅಂದಿನಿಂದ ಮುಂದೆ ಅವರು ನನಗೆ ಬಟ್ಟೆಯನ್ನು ತೊಳೆಯುವ ಗೋಜಿಗೇ ನನ್ನನ್ನು ಬಿಡಲಿಲ್ಲ. ತಾವೇ ತಮ್ಮದೇ ಆದ ವಿಧಾನದಿಂದ ಒಗೆದುಕೊಳ್ಳತೊಡಗಿದರು.

ನನಗೆ ಚನ್ನಮಲ್ಲಿಕಾರ್ಜುನರ ಹತ್ತಿರ ಇರಲು ಇಷ್ಟ. ಪ್ರೆಸ್ಸಿನ ಕೆಲಸ ಕಲಿಯಲು, ಮತ್ತು ಅವರ ಸೇವೆಮಾಡಲು ಮನಸ್ಸು ಒಪ್ಪುತ್ತಿತ್ತು. ಆದರೆ ಅವರಲ್ಲಿ ಊಟೋಪಚಾರ ಮಾಡಿಕೊಂಡಿರುವುದು ದುಸ್ಸಾಧ್ಯವೆನಿಸಿತು. ಹುಕ್ಕೇರಿಮಠಕ್ಕೆ ಬಂದು ಸ್ವಾಮಿಗಳವರಲ್ಲಿ ಬಿನ್ನವಿಸಿಕೊಂಡೆ. ಶ್ರೀಗಳವರು ನಸುನಕ್ಕು "ಇನ್ನುಮೇಲೆ ನೀನು ಮಠದಲ್ಲಿ

ಊಟಮಾಡಿಕೊಂಡು ಪ್ರೆಸ್ಸಿಗೆ ಹೋಗು ರಾತ್ರಿ ಬಂದು ಮಠದಲ್ಲಿಯೇ ಮಲಗಿಕೋ" ಎಂದು ಅಪ್ಪಣೆಮಾಡಿದರು. ಈ ಪ್ರಸಂಗವೆಲ್ಲ ಮುಗಿದ ಮೇಲೆ ಕೆಲವು ಕಾಲ ಅವರ ಪ್ರೆಸ್ಸಿನಲ್ಲಿದ್ದು ಕೆಲಸ ಕಾರ್ಯಗಳನ್ನು ಮಾಡುತ್ತ ಬಂದೆ. ಇನ್ನು ಮುಂದೆ ಶ್ರೀ ಚನ್ನ ಮಲ್ಲಿಕಾರ್ಜುನರನ್ನು ಶರಣರು ಎಂದು ಸಂಬೋಧಿಸುತ್ತೇನೆ.

ಶರಣರ ರಾತ್ರಿ ಪೂಜೆಯಿಲ್ಲ; ಆದ್ದರಿಂದ ಅವರ ಪ್ರಸಾದವೂ ಇಲ್ಲ. ಅವರ ಪೂಜೆ ಮತ್ತು ಪ್ರಸಾದ ಒಂದೇ ಹೊತ್ತು. ಪ್ರೆಸ್ಸಿನ ಕೆಲಸಗಾರರೆಲ್ಲ ಸಾಯಂಕಾಲ ಐದು ಘಂಟೆಗೆ ಹೋದನಂತರ ಎಂಟು-ಎಂಟುವರೆ ಸುಮಾರಿಗೆ ಮಲಗಿಬಿಡುತ್ತಿದ್ದರು. ಹಾಸಿಗೆಯ ಮೇಲೆ ಮಲಗುತ್ತಿದ್ದರೆಂದು ಭಾವಿಸಬಾರದು. ಒಂದು ಬೆಂಚು. ಅದರ ಮೇಲೆ ಪೇಪರ್ ರೀಮುಗಳ ಮೇಲೆ ಕಟ್ಟಿಬಂದ ಮೇಲುಹೊದಿಕೆಯ ದಪ್ಪನೆಯ ಕಾಗದಗಳ ಹಾಸಿಗೆ. ಹಿಂದೆ ಈ ವಿಷಯ ಹೇಳಿದ್ದೇನೆ. ಒಂದು ದೊಡ್ಡ ದುಪ್ಪಟ್ಟಿ ಹಾಸಿಗೆಯೂ ಆಗಬೇಕು ಹೊದಿಕೆಯೂ ಆಗಬೇಕು. ಇಷ್ಟೇ ಅವರ ಶಯನದ ಸಿರಿ. ತೊಟ್ಟ ಕೋಟು, ಅಂಗಿ, ರುಮಾಲುಗಳನ್ನೊಂದೂ ಕಳಚುತ್ತಿರಲೇ ಇಲ್ಲ. ಅವು ಸಮೇತ ವಾಗಿ ಮಲಗುತ್ತಿದ್ದರು. ಕೋಟಿನ ಅಂಗಿಯ ಎಲ್ಲ ಐದಾರು ಜೇಬುಗಳ ತುಂಬಾ ಸಾಮಗ್ರಿಗಳು. ಅವು ಆ ಸಾಮಗ್ರಿಗಳಿಂದ ಸದಾ ಉಬ್ಬಿರುತ್ತಿದ್ದವು ಆ ಜೇಬುಗಳಲ್ಲಿ ನೂರಾರು ಚೀಟಿಗಳು, ಟಿಪ್ಪಣಿಗಳು, ಡೈರಿ, ಡೈರಿಯಲ್ಲಿ ಸ್ಟಾಂಪುಗಳು, ಲೆಕ್ಕದ ಪುಸ್ತಕ, ಬೆಂಕಿ ಪೊಟ್ಟಣ... ಇನ್ನೂ ಏನೇನು ತಮಗೆ ಬೇಕಾಗುವ ಸಾಮಾನುಗಳೋ ಅವೆಲ್ಲ ಇರುತ್ತಿದ್ದವು. ಒಳಜೇಬುಗಳೇ ಅವರ ಟ್ರೇಝರಿ. ಅವುಗಳಲ್ಲಿ ಅಷ್ಟು ಇಷ್ಟು ದುಡ್ಡು ಕಾಸು ಇರುತ್ತಿತ್ತು. ಇಂಥ ಪೂರ್ಣ ಉಡುಪಿನಲ್ಲೇ ಮೈ ಕೈ ಮುದುಡಿಕೊಂಡು ೩-೪ ತಾಸು ಮಲಗಿ ನಿದ್ರೆಮಾಡಿ ಮುಗಿಸಿದ ಮೇಲೆ ಎದ್ದು ಮುಖಮಾರ್ಜನ ಮಾಡಿ ಕೊಂಡು ಪುನಃ ಭಸ್ಮಧರಿಸಿ ದೀಪ ಮುಡಿಸಿಕೊಂಡು ಬರವಣಿಗೆಗೆ ತೊಡಗುತ್ತಿದ್ದರು. ಬೆಳಕುಹರಿಯುವವರೆಗೆ ಗ್ರಂಥಾವಲೋಕನ, ಬರವಣಿಗೆಗಳು ಬೇಸರವಿಲ್ಲದೆ ಸೀಮೆ ಎಣ್ಣೆಯ ಲ್ಯಾಂಪಿನ ಬೆಳಕಿನಲ್ಲಿ ಅವ್ಯಾಹತವಾಗಿ ಸಾಗುತ್ತಿತ್ತು. ಬೆಳಗಾದ ಮೇಲೆ ಪೂರ್ಣ ಸಮವಸ್ತ್ರ ಧರಿಸಿಯೇ ತುಂಬಿದ ಸಣ್ಣ ಚೆಂಬನ್ನು ಕೈಯಲ್ಲಿ ಹಿಡಿದುಕೊಂಡು ಪ್ರೆಸ್ಸಿಗೆ ಬೀಗಹಾಕಿ ಹೊರಗೆ ಹೊರಡುತ್ತಿದ್ದರು.

ಸುಮಾರು ದಕ್ಷಿಣದಿಗ್ಭಾಗದಲ್ಲಿ ಮುಕ್ಕಾಲು ಮೈಲು ದೂರದಲ್ಲಿರುವ ಹಳ್ಳದವರೆಗೆ ನಡೆದುಕೊಂಡು ಹೋಗಿ ಅಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿ ಹರಳು ಕಡ್ಡಿ (ಮರಾಡಲ ಕಡ್ಡಿ)ಯಿಂದ ಹಲ್ಲುಗಳನ್ನು ಉಜ್ಜಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಬೇವು, ಉತ್ರಾಣಿ ಕಡ್ಡಿಗಳನ್ನು ಉಪಯೋಗಿಸುತ್ತಿದ್ದುದೂ ಉಂಟು. ಈ ಎಲ್ಲ ಕ್ರಿಯೆಗಳು ಮುಗಿದ ಮೇಲೆ ತಂಬಿಗೆಯಲ್ಲಿ ತುಂಬೆ, ಹೊನ್ನಾವರಿಕೆ (ತಂಗಡಿ) ಹೂವುಗಳನ್ನು ಎತ್ತಿ ತಂಬಿಗೆ ಯಲ್ಲಿ ತುಂಬಿಕೊಂಡು ಬರುತ್ತಿದ್ದರು. ಒಂದು ದಿನ ಒಂದು ಪ್ರಸಂಗ ನಡೆಯಿತು.

ಪ್ರಾತರ್ವಿಧಿಯನ್ನು ಮುಗಿಸಿಕೊಂಡು ಬರುವ ಸಮಯದಲ್ಲಿ ಒಂದು ಮಾವಿನ ಮರದ ಬುಡದಲ್ಲಿ ಉದುರಿಬಿದ್ದ ಒತ್ತುಗಲು ಮಾವಿನಕಾಯಿಗಳನ್ನೂ, ಒಂದು ತರದ ಸೊಪ್ಪು (ಸೊಪ್ಪಿನ ಹೆಸರು ಮರೆತಿದೆ. ಲಾಯವಾಡಂಗದ ಸೊಪ್ಪೆಂದು ಮಸಮಸಕು ಜ್ಞಾಪಕ) ಇದನ್ನು ತಂದು ಅಡಿಗೆಯ ಮನೆಯಲ್ಲಿ ಇಟ್ಟಿದ್ದರು. ಬಹುಶಃ ಇವೆರಡೂ

ಪದಾರ್ಥಗಳು ಅಂದಿನ ಅವರ ಪ್ರಸಾದಕ್ಕೆ ಬೇಕಾಗುವ ಸಾಮಗ್ರಿಗಳೆಂದು ನಮಗೆ ಆಮೇಲೆ ತಿಳಿಯಿತು. ನಾನು ಹುಕ್ಕೇರಿಮಠದಿಂದ ಬೆಳಿಗ್ಗೆ ಬಂದು ಅಡಿಗೆಮನೆ ಶಿವಪೂಜಾಗೃಹ ಇವನ್ನು ಕಸಗೂಡಿಸಿ ಸ್ವಚ್ಛಗೊಳಿಸುವ ಕಾರ್ಯದಲ್ಲಿ ನಿರತನಾಗಿದ್ದೆ. ಶರಣರು ಬೆಂಚಿನ ಮೇಲೆ ಕುಳಿತು ಏನನ್ನೊ ಬರೆಯಲು ತೊಡಗಿದ್ದರು. ಮಾವಿನಕಾಯಿಗಳು ಬತ್ತಿ ಮೇಲೆ ಕಪ್ಪು ಕಪ್ಪು ಕಲೆಗಳಾಗಿದ್ದುವು. ಅವು ಮರದಿಂದ ಉದುರಿ ಎರಡು ಮೂರು ದಿನಗಳಾಗಿರಬೇಕು. ಸೊಪ್ಪು ತೂತುತೂತಾಗಿತ್ತು. ಮೇಲಾಗಿ ನನ್ನ ಕಣ್ಣಿಗೆ ಆ ಸೊಪ್ಪು ಕಾಡುಸೊಪ್ಪಾಗಿ ಕಂಡಿತು. ಅವೆರಡು ಪದಾರ್ಥಗಳನ್ನೂ ಕಸದೊಡನೆ ಹೊರಗೆ ಚಲ್ಲಿಬಿಟ್ಟೆ. ಮಾವಿನಕಾಯಿ ಚೆನ್ನಾಗಿದ್ದಿದ್ದರೆ ಈ ಕೆಲಸವನ್ನು ನಾನು ಮಾಡುತ್ತಿರಲಿಲ್ಲ. ಮಾವಿನಕಾಯಿ ಬತ್ತಿ ಕಪ್ಪುಕಲೆಗಳಾಗಿದ್ದ ಮೇಲೆ ಇವು ಸ್ವೀಕಾರಾರ್ಹವೆಂದೇ ನನ್ನ ತೀರ್ಮಾನ. ಸೊಪ್ಪಾದರೊ ಯಾವುದೋ ಕಾಡುಗಿಡದ್ದಾದ್ದರಿಂದ ಇವರ ಉಪಯೋಗವಾದರೂ ಏನು ಎಂಬುದೇ ಹುಡುಗುಬುದ್ಧಿಯ ಅಪಕ್ವಯೋಚನೆಯ ತೀರ್ಮಾನ. ಕಸಗೂಡಿಸಿ ಕಸವನ್ನೆಲ್ಲ ಚಲ್ಲಿ ಬಂದ ನಂತರ ನಾನು ನನ್ನ ಇನ್ನಿತರ ಕಾರ್ಯದಲ್ಲಿ ಮಗ್ನನಾದೆ. ಕೆಲಸಮಯದ ನಂತರ ಶರಣರ ದೃಷ್ಟಿ ತಾವು ತಂದಿಟ್ಟ ಎರಡು 'ಶಿವಾರ್ಪಣ ಸಾಮಗ್ರಿ'[1]ಗಳ ಮೇಲೆ ಹೋಗಿ ಅವು ಕಣ್ಣಿಗೆ ಕಾಣದಿರಲು ಗಾಬರಿಯಿಂದಲೇ ನನ್ನನ್ನು ಕರೆದು "ಹೊಸತಿಲ ಹತ್ತಿರ ಮಾವಿನಕಾಯಿ ಸ್ವಲ್ಪ ವನಸ್ಪತಿಯಿತ್ತಲ್ಲಾ ! ಅದನ್ನೆಲ್ಲಿಟ್ಟೆ" ಎಂದರು. ನನ್ನ ಎದೆ ಆ ಮಾತು ಕೇಳಿ 'ಧಸ್' ಎಂದಿತು. ಗಾಬರಿಯಿಂದಲೇ ನಾನು 'ಅವೆಲ್ಲ ಬತ್ತಿ ಹಾಳಾಗಿಹೋಗಿದ್ದವು. ಅವೇತಕ್ಕೆ ಬೇಕೆಂದು ಕಸಗೂಡಿಸಿ ಹೊರಗೆ ಚಲ್ಲಿಬಿಟ್ಟೆ' ಎಂದೆ. 'ಅವನ್ನು ಎಲ್ಲಿ ಚಲ್ಲಿದೆ ತೋರಿಸು ನಡೆ' ಎಂದು ಸ್ವಲ್ಪ ಕೋಪದಿಂದಲೇ ಕೇಳಿ ನನ್ನನ್ನು ಕರೆದುಕೊಂಡೇ ಹೊರಹೊರಟರು. ನಾನು ಅವನ್ನು ದೂರ ಎಸೆಯದೆ ಬಾವಿಕಟ್ಟೆಯ ಪಕ್ಕದಲ್ಲಿ ಹುಲ್ಲಿನ ಮೇಲೆ ಚಲ್ಲಿದ್ದೆ. ಆ ಸೊಪ್ಪನ್ನೂ ಮಾವಿನಕಾಯಿಗಳನ್ನೂ ಪುನಃ ಆರಿಸಿ ತಮ್ಮ ಪಂಚೆಯ ಮಡಿಲಲ್ಲಿ ತುಂಬಿಕೊಂಡು—"ಸದ್ಯ ಇವನ್ನು ಚರಂಡಿಗೆ ಎಸೆಯಲಿಲ್ಲವಲ್ಲ ! ಅದೇ ಸಂತೋಷ. ನೀನು ಹೀಗೆಲ್ಲ ಮಾಡಿದರೆ ಆಗುವುದಿಲ್ಲ. ಹೊರಗೆ ಚೆಲ್ಲುವಾಗ ನನ್ನನ್ನು ಕೇಳಬಾರದೆ. ಇಂದು ಇದು ನನಗೆ ಶಿವಕೊಟ್ಟ ಪ್ರಸಾದ ಸಾಮಗ್ರಿ. ಇಂದಿನ ಪ್ರಸಾದಕ್ಕೆ ಇವನ್ನು ಉಪಯೋಗಿಸಬೇಕೆಂದು ಅಂತಃಪ್ರೇರಣೆಯಾಗಿತ್ತು. ಈ ಸೊಪ್ಪು ಆರೋಗ್ಯಕ್ಕೆ ಹಿತಕರ. ಇದೂ ಕೂಡ ಶಿವನ ಪ್ರಸಾದವೇ" ಎಂದು ಅದರ ಬಗ್ಗೆ ದೀರ್ಘ ಉಪನ್ಯಾಸವನ್ನೇ ಮಾಡುತ್ತ ಹೇಳಿದರು.

"ನೋಡಪ್ಪ, ನಾನು ದಿನಾನು ಪ್ರಸಾದ ತೆಗೆದುಕೊಳ್ಳುವುದು, ನಾಲಗೆಯ ರುಚಿಗಾಗಿ ಅಲ್ಲ; ದೇಹಕ್ಕೆ ಯಾವ ಪ್ರಸಾದ ಬೇಕೋ, ದೇಹಧಾರಣೆ ಪೋಷಣೆಗೆ ಏನೇನು

1 ಶರಣರು ತಾವು ಪ್ರಸಾದಕ್ಕೆಂದು ತೆಗೆದುಕೊಂಡು ಬರುವ ಪದಾರ್ಥಗಳಿಗೆಲ್ಲ ಶಿವಾರ್ಪಣ ಸಾಮಗ್ರಿ ಎಂದೇ ಬರೆದಿಡುತ್ತಿದ್ದರು. ಅಂಗಡಿಯಿಂದ ತಮಗೆ ಬೇಕಾಗುವ ಯಾವುದೇ ಪದಾರ್ಥ ತಂದರೂ ಲೆಕ್ಕದ ಬುಕ್ಕಿನಲ್ಲಿ 'ಸ್ವಂತ ಖಾತೆಗೆ ಖರ್ಚು' ಶಿವಾರ್ಪಣ ಸಾಮಗ್ರಿಗಳಿಗಾಗಿ ಎಂದು ಬರೆದಿರುವುದನ್ನು ಅವರ ಲೆಕ್ಕದ ಪುಸ್ತಕದಲ್ಲಿ ನೋಡಬಹುದು.

ಬೇಕೋ ಅದನ್ನು ತೆಗೆದುಕೊಳ್ಳುವುದು ಶರಣ ತತ್ತ್ವ. ದಿನಾಲು ಹಸಿಯ ತರಕಾರಿ ಮತ್ತು ಮೆಂತೆ ಹಿಟ್ಟಿನ ಅಂಬಲಿ ಇವನ್ನು ತೆಗೆದುಕೊಳ್ಳುವುದರ ಉದ್ದೇಶವೂ ಕೂಡ ಇದೇ. ನನ್ನ ಕಾಯಕಲ್ಪಕ್ಕೆ ಇವುಗಳ ಅವಶ್ಯಕತೆಯಿದೆಯೆಂದು ತಿಳಿದೇ ಇವನ್ನು ತೆಗೆದುಕೊಳ್ಳುತ್ತಿದ್ದೇನೆ" ಎಂದು ಶರಣರ ಪ್ರಸಾದ ತತ್ತ್ವದ ಬಗೆಗೆ ವಿಶೇಷ ವಿವರಣೆಯನ್ನೇ ಕೊಟ್ಟರು. ಆ ವಿವರಣೆ ಆಗಿನ ನನ್ನ ವಯಸ್ಸಿಗೆ, ಜ್ಞಾನಕ್ಕೆ ಎಷ್ಟರಮಟ್ಟಿಗೆ ಹಿಡಿಸಿತೋ ಏನೋ ಆ ಪ್ರಶ್ನೆ ಬೇರೆ.

ಶರಣರ ದೇಹ ತುಂಬಾ ಕೃಶವಾದದ್ದು. ಅವರು ಅದರ ರಕ್ಷಣೆ ಶೋಷಣೆ ಮಾಡಿಕೊಳ್ಳುವ ವಿಧಾನ ತುಂಬಾ ಶಾಸ್ತ್ರೀಯವಾಗಿತ್ತು. ಆಯುರ್ವೇದಾದಿ ಗ್ರಂಥಾವಲೋಕನಮಾಡಿ ಅಲ್ಲಿ ಹೇಳಿದ್ದ ಅನೇಕ ಗಿಡಮೂಲಿಕೆಗಳನ್ನು ಪ್ರಸಾದರೂಪವಾಗಿಯೇ ಸ್ವೀಕರಿಸಿ ಎಂದೂ ಹಾಸಿಗೆ ಹಿಡಿದು ಮಲಗದಂತೆ ಆರೋಗ್ಯ ಮತ್ತು ಚಟುವಟಿಕೆಯುಳ್ಳವರಾಗಿ ತಮ್ಮನ್ನು ತಾವು ರಕ್ಷಿಸಿಕೊಂಡು ಬರುತ್ತಿದ್ದರು. ಏನಾದರೂ ಬಳಲಿಕೆ ಬೇಸರಿಕೆಗಳಾದರೆ ನರಳುತ್ತ ಮಲಗದ ಹಾಗೆ, ಕಾಯಿಲೆಯಿಂದ ಹಾಸಿಗೆ ಹಿಡಿಯದ ಹಾಗೆ ಆಹಾರದಿಂದಲೇ ತಮಗೆ ಬಂದ ಜಾಡ್ಯಾದಿಗಳನ್ನು ತೊಲಗಿಸಿಕೊಳ್ಳುತ್ತಿದ್ದರಲ್ಲದೆ ಬೇರೆ ಹೊರಗಿನ ಯಾವ ಔಷಧಿಯನ್ನೂ ಮುಟ್ಟುತ್ತಿರಲಿಲ್ಲ. "ಈ ಕಾಯ ಈಶ್ವರನನ್ನೊಲಿಸಲು ಬಂದ ಪ್ರಸಾದ ಕಾಯ. ಇದನ್ನು ಅವಿವೇಕದಿಂದ ಕೆಡಿಸಿಕೊಳ್ಳಲಾಗದು" ಎಂದು ಪದೇ ಪದೇ ಹೇಳುತ್ತಿದ್ದರು. ಮಲಬದ್ಧತೆ ಆಗಿದೆಯೆಂದು ಕಂಡುಬಂದರೆ ತಾವು ದಿನಾಲು ತೆಗೆದುಕೊಳ್ಳುವ ಪ್ರಸಾದದ ಜೊತೆಗೇ ಸೋನಾಮುಖಿ ಎಲೆಗಳ ಕಷಾಯವನ್ನು ಪ್ರಸಾದರೂಪವಾಗಿಯೇ ಸ್ವೀಕರಿಸಿಬಿಡುತ್ತಿದ್ದರು. ಕೆಲವು ಪ್ರಸಂಗದಲ್ಲಿ ಬೇವಿನ ಕಡ್ಡಿಗಳು ಅಥವಾ ಅದರ ಚಕ್ಕೆ ಮೊದಲಾದುವನ್ನು ಮೆಣಸು ಜೀರಿಗೆ ಹಾಕಿ ಕಷಾಯರೂಪವನ್ನಾಗಿ ಮಾಡಿಕೊಂಡು ಪ್ರಸಾದದ ಜೊತೆಗೇ ಸ್ವೀಕರಿಸುತ್ತಿದ್ದುದುಂಟು. ಹಸಿ ತರಕಾರಿ ಮೊದಲಾದುವು ಬೇಡವಾದಾಗ ಸ್ವಲ್ಪ ಅನ್ನ ಸಪ್ಪೆಯ ಸಾರು, ಸ್ವಲ್ಪ ಹಾಲು ಮೊದಲಾದುವನ್ನು ಸ್ವೀಕರಿಸುತ್ತಿದ್ದರು. ಹುಕ್ಕೇರಿ ಮಠಕ್ಕೆ ಶ್ರೀಗಳವರ ಆಹ್ವಾನದ ಮೇರೆಗೆ ಹೋದಾಗ ಅಲ್ಲಿ ಶ್ರೀಗಳವರ ತೀರ್ಥಪ್ರಸಾದ ಸ್ವೀಕರಿಸಿ ಶ್ರೀಗಳವರಿಗೆ ತಯಾರಿಸಿದ ಪ್ರಸಾದ ಸ್ವೀಕರಿಸುತ್ತಿದ್ದರು. ಅಂತೂ ಅವರ ಆಹಾರ ನಿಯಮಾವಳಿ ಅವರದೇ ಆಗಿತ್ತು. ಲೋಕಕ್ಕೆ ವಿಚಿತ್ರವೆನಿಸುತ್ತಿತ್ತು. ದೈಹಿಕ ಉಪಾಧಿಗಳಿಂದ ಸಾಮಾನ್ಯವಾಗಿ ಅವರು ನರಳಿದುದನ್ನು ನಾನು ಅನೇಕ ವರ್ಷಗಳು ಅವರ ಸಮೀಪವರ್ತಿಯಾಗಿದ್ದಾಗಲಂತೂ ಕಂಡೇ ಇಲ್ಲ. ಆಗಾಗ ನಾವೇನಾದರೂ ಅನಾರೋಗ್ಯದಿಂದ ಮಲಗಿದಾಗ ಆಯುರ್ವೇದಿಕ್ ಔಷಧಿಗಳು ಮತ್ತು ಕಷಾಯಾದಿಗಳನ್ನು ಕೊಟ್ಟು ಚೆನ್ನಾಗಿ ಉಪಚಾರ ಮಾಡುತ್ತಿದ್ದರು. ಆಗ ತಾವು ಹೇಗೆ ಆರೋಗ್ಯ ಕಾಪಾಡಿಕೊಳ್ಳುತ್ತೇವೆಂಬುದರ ಬಗೆಗೆ ನಮಗೆ ವಿವರಣೆ ನೀಡುತ್ತಿದ್ದರು. ತಮ್ಮ ಹಲ್ಲುಗಳನ್ನು ತೋರಿಸುತ್ತ "ನೋಡು, ನನ್ನ ಹಲ್ಲುಗಳು ಇಷ್ಟು ವಯಸ್ಸಾದರೂ ಹೇಗೆ ಗಟ್ಟಿಯಾಗಿವೆ; ಇಂದೂ ನಾನು ಕಬ್ಬನ್ನು ತಿನ್ನಬಲ್ಲೆ. ಕಾರಣವೇನು ಗೊತ್ತೆ? ಈ ಹಲ್ಲುಗಳು ಹಾಳಾಗದಂತೆ ದಿನಾಲು ಹರಳುಕಡ್ಡಿ ಇಲ್ಲವೆ ಬೇವು, ಉತ್ತರಾಣೆ, ಏನೂ ಸಿಗದಿದ್ದಾಗ ತಂಗಡಿಕಡ್ಡಿ—ಇವುಗಳಿಂದ ತಿಕ್ಕಿಕೊಂಡು ಸ್ವಚ್ಛವಾಗಿಟ್ಟುಕೊಂಡು ಅವಕ್ಕೆ ರೋಗ ಬಾರದ ರೀತಿ ಕಾಪಾಡಿಕೊಂಡು

ಬಂದುದರ ಫಲ. ಆದುದರಿಂದ ಇವುಗಳ ಬಾಧೆ ನನಗೆ ಆಗುತ್ತಲೇ ಇಲ್ಲ.

ಶರಣರು ಒಮ್ಮೊಮ್ಮೆ ಬಲು ಸಲುಗೆಯಿಂದ ಮಾತನಾಡಿ ಹಾಸ್ಯ ಪ್ರಸಂಗಾದಿಗಳನ್ನು ಹೇಳಿ ನಮ್ಮನ್ನೂ ನಗಿಸಿ ತಾವೂ ಗಟ್ಟಿಯಾಗಿ ನಕ್ಕುಬಿಡುತ್ತಿದ್ದರು. ಒಮ್ಮೆ ಮಳೆಗಾಲದ ಸಮಯ ಜಿಟಿಜಿಟಿ ಮಳೆಯು ಸೋನೆ ಇಳಿಯುತ್ತಲೇ ಇತ್ತು. ರಾತ್ರಿ ಎಂಟುಗಂಟೆಯ ಸಮಯ. ಚಳಿಯಿಂದ ದುಪ್ಪಟ್ಟಿಯನ್ನು ತುಂಬ ಹೊದ್ದುಕೊಂಡು ಬೆಂಚಿನಮೇಲೆ ಮುದುಡಿಕೊಂಡು ಕುಳಿತಿದ್ದರು. ನಾನೂ ಕೆಳಗೆ ಮುದುಡಿಕೊಂಡು ಕುಳಿತಿದ್ದೆ. ಏನೇನೋ ಮಾತಿನ ಪ್ರಸಂಗಗಳು ಅತ್ಯಂತ ಸಲುಗೆಯಿಂದಲೇ ನಡೆದು ಹೋದವು. ನಾನು ಅವರ ಕಣ್ಣು ಕುರುಡಾಗಲು, ಬಲಗೈ, ಬಲಗಾಲು ಸೊಟ್ಟಾಗಲು ಕಾರಣವೇನೆಂದು ಕೇಳಿದೆ. ಆಗ ಅವರು ಅದರ ಬಗೆಗೆ ನಗುತ್ತ ಹೇಳತೊಡಗಿದರು :

"ಅದೊಂದು ದೊಡ್ಡ ಕಥೆ ಕಣಪ್ಪ. ಶಿರಾಳಕೊಪ್ಪದ ನಮ್ಮ ಮನೆಯಲ್ಲಿ ಮದುವೆಯ ಸಂಭ್ರಮ. ನಾನಿನ್ನೂ ಆಗ ನಾಲ್ಕೈದು ವರ್ಷದ ಹುಡುಗ. ಮೈತುಂಬ ಮೈಲಿ ಎದ್ದು ಮೈಲಿಬೇನೆಯಿಂದ ನರಳುತ್ತಿದ್ದೆ. ಮದುವೆಗೆ ಬಂದವರು ನೋಡಿ ಅಸಹ್ಯಪಟ್ಟುಕೊಳ್ಳಬಾರದೆಂದು ಒಂದು ಕೊಠಡಿಯಲ್ಲಿ ನನ್ನನ್ನು ಹಾಕಿ ಮನೆಯವರೆಲ್ಲ ಮದುವೆಯ ಸಂಭ್ರಮದಲ್ಲಿ ಮುಳುಗಿಹೋಗಿದ್ದರು. ನನಗೆ ಗಲಾಟೆ ಗಿಲಾಟೆ ಮಾಡಿಗೀಡಿಯೆ ಹುಷಾರ್ ಎಂದು ಬೆದರಿಸಿಬಿಟ್ಟಿದ್ದರು. ಕೊಠಡಿಯಲ್ಲಿ ನಾನು ಹೆದರಿಕೊಂಡು ಬಿದ್ದುಕೊಂಡಿದ್ದೆ. ಮೈಯ ಕಡಿತವನ್ನು ತಾಳಲಾರದೆ ಮೈಕೈಗಳನ್ನು ತುರಿಸಿಕೊಂಡೆ. ಮೈಯೆಲ್ಲ ದೊಡ್ಡ ದೊಡ್ಡ ಗಾಯದಿಂದ ಕೂಡಿಹೋಯಿತು. ಬಲಗೈ ಮುಂಗೈ ಹತ್ತಿರ ದೊಡ್ಡ ಗಾಯವಾಗಿ ಕಿಚಿಕಿಚಿ ಎನ್ನುವಂತಾಯಿತು. ಮದುವೆಯೆಲ್ಲ ಮುಗಿದು ಬೀಗರೆಲ್ಲ ಊರಿಗೆ ಹೊರಟುಹೋದಮೇಲೆ ಕೊಠಡಿಯ ಬಾಗಿಲನ್ನು ತೆರೆದು ನನ್ನನ್ನು ಹೊರಗೆ ತಂದುಹಾಕಿದರು. ಆಗ ನಮ್ಮ ತಂದೆ ತಾಯಿಯರು ನಾನು ಬದುಕುವುದೇ ಇಲ್ಲವೆಂದು ನಿರ್ಧರಿಸಿಬಿಟ್ಟರು. ಬಲಗೈ ತೀರಾ ಅಸಹ್ಯವಾಗಿ ಗಾಯದಿಂದ ಬಾತುಕೊಂಡು ಇದು ಉದುರಿಯೇ ಹೋಗುತ್ತದೆಂದು ತೀರ್ಮಾನಿಸಿಬಿಟ್ಟರು. ಹೇಗೋ ಈಶ್ವರೇಚ್ಛೆಯಿಂದ ದಿನೇದಿನೇ ಗಾಯಗಳೆಲ್ಲ ಮಾದು ನಾನು ಬದುಕಿಕೊಂಡೆ. ಆ ಮೈಲಿಬೇನೆಯೇ ನನ್ನ ಅಂಗಾಂಗಗಳು ವಿಕಾರಹೊಂದಲು ಕಾರಣವಾಯಿತು" ಎಂದು ಹೇಳುವಾಗ ಯಾವ ಮಾನಸಿಕ ನೋವನ್ನೂ ತೋರಗೊಡದೆ ನಗುತ್ತಲೇ ಹೇಳಿ ಪ್ರಸಂಗವನ್ನು ಮುಗಿಸಿಬಿಟ್ಟರು. ಒಮ್ಮೆ ಒಂದು ಪ್ರಸಂಗವನ್ನು ಮಾತ್ರ ಸ್ವಲ್ಪ ನೋವಿನಿಂದ ಹೇಳಿದರೆಂದು ಇಂದು ನಾನು ಯೋಚಿಸುತ್ತೇನೆ. ಅದು ಅವರ ಮಗ ಶಂಕರನ ವಿಚಾರ :

ಶರಣರು ಸಂಸಾರಿಗಳು. ಅವರಿಗೆ ಒಂದಲ್ಲವೆಂದರೆ ಮೂರು ಮದುವೆಗಳಾಗಿದ್ದುವು. ಅವರ ಪ್ರಥಮ ಪತ್ನಿಯೋ ಅಥವಾ ದ್ವಿತೀಯ ಪತ್ನಿಯೋ ಚೆನ್ನಾಗಿ ಜ್ಞಾಪಕವಿಲ್ಲ. ಅವರ ಹೊಟ್ಟೆಯಿಂದ ಒಂದು ಮಗುವಾಗಿತ್ತು. ಆ ಮಗುವಿನ ರೂಪ ಮತ್ತು ಇನ್ನಿತರ ಸದ್ಗುಣಗಳ ಬಗೆಗೆ ವಿವರಣೆ ಕೊಟ್ಟದ್ದು ಹೀಗೆ : "ಮಗು ಬಹಳ ಮುದ್ದಾಗಿತ್ತು. ಚುರುಕಾಗಿತ್ತು. ಆ ಮಗುವನ್ನು ಒಂದು ದಿನ ಕರೆದುಕೊಂಡು ವಿರಕ್ತಮಠಕ್ಕೆ ಹೋಗಿದ್ದೆ. ನಾನು ಸ್ವಾಮಿಗಳವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ

ಎದ್ದುನಿಂತೆ. ಮಗುವು ನಮಸ್ಕಾರ ಮಾಡುತ್ತ 'ಅಪ್ಪಾಜಿ, ಸಾಷ್ಟಾಂಗ ನಮಸ್ಕಾರ ಮಾಡುವುದು ಹೇಗೆ' ಎಂದು ಕೈಗಳನ್ನು ಮುಷ್ಟಿಮಾಡಿ ಸಾಷ್ಟಾಂಗ ನಮಸ್ಕಾರಮಾಡಿ ತೋರಿಸಿ ಅಲ್ಲಿದ್ದವರನ್ನೆಲ್ಲ ನಗಿಸಿಬಿಟ್ಟಿತು. ಸ್ವಾಮಿಗಳವರು ಮಗುವನ್ನು ಬಾಚಿತಬ್ಬಿ ಮುದ್ದಾಡಿ 'ಬಹು ಜಾಣ, ಬಹು ಜಾಣ' ಎಂದು ಶ್ಲಾಘಿಸಿ ಬಾದಾಮಿ, ಕಲ್ಲುಸಕ್ಕರೆ ಕೊಟ್ಟರು" ಎಂದು ಮಗುವಿನ ವಿಚಾರವನ್ನು ಜ್ಞಾಪಿಸಿಕೊಂಡು ಕಣ್ಣಂಚಿನಲ್ಲಿ ನೀರು ತಂದು ತತ್‌ಕ್ಷಣದಲ್ಲಿ ತಮ್ಮ ಮಾನಸಿಕ ವಿಕಾರವನ್ನು ಬದಿಗೊತ್ತಿ ನಗುತ್ತ "ಮಗು ಚೆನ್ನಾಗಿತ್ತು. ಅಷ್ಟು ಚಿಕ್ಕ ವಯಸ್ಸಿನಲ್ಲೇ ನನಗೆ ಬುದ್ಧಿ ಹೇಳಲು ಬರುತ್ತಿತ್ತು" ಎಂದು ಹೇಳಿ ನನ್ನನ್ನು ಬೇರೆ ಕೆಲಸಕ್ಕೆ ನಿಯೋಜಿಸಿದರು. ನಾನು ಹೊರಟುಹೋದೆ. ಆಗ ಶರಣರು ಒಬ್ಬರೇ ಕುಳಿತುಕೊಂಡು ಗತಿಸಿಹೋದ ತಮ್ಮ ಸಂಸಾರ ಜೀವನದ ಬಗೆಗೆ ಏನೇನು ಜ್ಞಾಪಿಸಿಕೊಂಡರೋ ಕೊರೆಯುವ ಚಳಿಯಿಂದ ಕೂಡಿದ ಗಾಢ ನಿಶೀಥವೇ ಬಲ್ಲುದು; ದೇವರೇ ಬಲ್ಲ. ಆದರೆ ಕಳೆದುಹೋದ ತಮ್ಮ ಸಾಂಸಾರಿಕ ಜೀವನದ ಬಗೆಗೆ ವಿಶೇಷ ಸಂಕಟವನ್ನೇನೂ ತೋರಿಸಿಕೊಳ್ಳುತ್ತ ಇರಲಿಲ್ಲ. ಬಾಯ್ನೀರು ಸುರಿಸುತ್ತಿರಲಿಲ್ಲ. ತಮ್ಮ ಪ್ರಬಲ ವೈರಾಗ್ಯ ಪ್ರವೃತ್ತಿಯಿಂದ ಅಷ್ಟಷ್ಟಕ್ಕೆ ಅದನ್ನೆಲ್ಲ ಮರೆತು ಶಿವ ಚಿಂತನೆ ಮಾಡುತ್ತ ತಮ್ಮ ಮನಸ್ಸನ್ನು ತಿರುಗಿಸಿಬಿಡುತ್ತಿದ್ದರು. ಈ ರೀತಿಯಲ್ಲಿ ತಮ್ಮ ಸಾಂಸಾರಿಕ ಜೀವನದ ಬಗೆಗೆ ಜ್ಞಾಪಿಸಿಕೊಂಡುದು ನನ್ನೆದುರಿಗೆ ಕೇವಲ ಒಂದೇ ಸಲ.

ಕೆಲ ದಿನಗಳು ಹೀಗೆ ಕಳೆದುಹೋದಂತೆಲ್ಲ ನನ್ನ ವಿಷಯದಲ್ಲಿ ಅವರ ವಾತ್ಸಲ್ಯ ಬೆಳೆಯತೊಡಗಿತು. ಶರಣರಿಗೆ ಶಿರಾಳಕೊಪ್ಪದಲ್ಲಿ ಒಳ್ಳೇ ಗದ್ದೆ ಹೊಲ, ಎರಡು ಮನೆಗಳಿದ್ದು ಆಸ್ತಿ ಬಹಳ ಬೆಲೆಯುಳ್ಳದ್ದಾಗಿಯೇ ಇತ್ತು. ಸುಮಾರು ೧೨೦ ರೂ. ಕಂದಾಯ ಕೊಡುತ್ತಿದ್ದರೆಂದು ಅವರೇ ಒಂದು ಸಲ ಹೇಳಿದ್ದು ಜ್ಞಾಪಕ. ಈ ಆಸ್ತಿಯನ್ನು ರೂಢಿಸಿಕೊಂಡು ಬರುವವರಾರೂ ಇದ್ದಿಲ್ಲ. ಒಳ್ಳೊಳ್ಳೆ ಗದ್ದೆ ಬೀಳು ಬಿದ್ದಿತ್ತು. ಶಿರಾಳಕೊಪ್ಪದಿಂದ ನಾಲ್ಕು ಮೈಲು ದೂರವಿರುವ 'ಕುಮುಸಿ' ಎಂಬ ಗ್ರಾಮದ ಹತ್ತಿರವೂ ಮೂರು ನಾಲ್ಕು ಎಕರೆ ಒಳ್ಳೆ ಗದ್ದೆಯಿತ್ತು. ಯಾವುದರ ಸಾಗುವಳಿಯೂ ಚೆನ್ನಾಗಿ ಆಗದೆ ವ್ಯರ್ಥ ಕಂದಾಯ ಕಟ್ಟುತ್ತಿದ್ದರು. ಮನೆಗಳನ್ನೇನೋ ಊರಿನಲ್ಲಿ ಇಬ್ಬರಿಗೆ ವಾಸಕ್ಕೆ ಕೊಟ್ಟು ಅವುಗಳ ರಿಪೇರಿ ಮಾಡಿಕೊಂಡು ಇರಲಿಕ್ಕೆ ತಿಳಿಸಿದ್ದರು. ಅವರು ಆ ಮನೆಗಳನ್ನೇನೋ ಅಚ್ಚುಕಟ್ಟಾಗಿಟ್ಟುಕೊಂಡಿದ್ದರು.

ಗದ್ದೆಗಳನ್ನು ಯಾರಾರಿಗೋ ಕೋರಿನಂತೆ ಮಾಡಲು ಕೊಟ್ಟಿದ್ದರು. ಆದರೆ ಯಾರೂ ಸರಿಯಾಗಿ ಮಾಡಿ ಉತ್ಪತ್ತಿಯಲ್ಲಿ ಅರ್ಧ ಭಾಗವನ್ನು ಕೊಡುತ್ತಿರಲಿಲ್ಲ. ಅವರು ಕೊಟ್ಟಷ್ಟು ಇವರು ತೆಗೆದುಕೊಂಡಷ್ಟು. ಹೀಗಿರುವಾಗ ನನ್ನನ್ನು ಕುರಿತು ನನ್ನ ಮನೆತನದ ವಿಷಯವನ್ನೆಲ್ಲ ಕೇಳಿ, "ನೋಡು, ನಮ್ಮ ಶಿರಾಳಕೊಪ್ಪದ ಜಮೀನು ಮನೆ ಇವನ್ನೆಲ್ಲ ಒಂದು ವ್ಯವಸ್ಥೆಗೊಳಿಸಬೇಕೆಂದು ಮಾಡಿದ್ದೇನೆ. ಬೇಕಾದಷ್ಟು ಹೊಲ ಗದ್ದೆ ಇದೆ. ಅವನ್ನು ರೂಢಿಸಿಕೊಂಡು ಹೋಗುವುವವರು ಯಾರೂ ಇಲ್ಲ. ಕೋರು ಕುಂಬಳಿಗೆ ಕೊಟ್ಟರೆ ಅವರು ಸರಿಯಾಗಿ ತಾವೂ ಬೆಳೆ ತೆಗೆಯುತ್ತಿಲ್ಲ: ನಮಗೂ ಏನನ್ನೂ ಕೊಡುತ್ತಿಲ್ಲ. ವೃಥಾ ಕಂದಾಯ ಕಟ್ಟಿ ಕಟ್ಟಿ ಸಾಕಾಗಿದೆ. ನಮ್ಮ ಆ ಮನೆತನಕ್ಕೆ

ನಿನ್ನನ್ನು ದತ್ತುಪುತ್ರನನ್ನಾಗಿ ಮಾಡಿಕೊಂಡುಬಿಡುತ್ತೇನೆ. ನಿನ್ನ ಒಪ್ಪಿಗೆಯೇ" ಎಂದು ಬಿಟ್ಟರು. ಈ ಮಾತು ಕೇಳಿ ನಾನು ಅವಾಕ್ಕಾಗಿಹೋದೆ. ಸ್ವಲ್ಪಹೊತ್ತು ಯೋಚಿಸಿ "ನಾನು ನಮ್ಮ ತಂದೆ ತಾಯಿಗಳ ಅಪ್ಪಣೆಯಿಲ್ಲದೆ ಈ ವಿಷಯದಲ್ಲಿ ಒಪ್ಪಿಗೆ ನೀಡಲು ಹೇಗೆ ಸಾಧ್ಯ?" ಎಂದೆ. ಅದಕ್ಕೆ ಅವರು ಹೌದು. ಅದು ನಿಜ. "ಹೋಗಿ ನಿಮ್ಮ ತಂದೆ ತಾಯಿಯರನ್ನು ಕೇಳಿ ಬಾ" ಎಂದು ಊರಿಗೆ ಬಸ್ಸುಚಾರ್ಜು ಕೊಟ್ಟು ನನ್ನನ್ನು ಕಳಿಸಿಕೊಟ್ಟರು. ನಾನು ಊರಿಗೆ ಬಂದು ಈ ಪ್ರಸ್ತಾಪವನ್ನು ನಮ್ಮ ಪಿತೃಗಳ ಎದುರಿಗಿಟ್ಟೆ. ಅವರು ಅದಕ್ಕೆ ಸಮ್ಮತಿಸಲಿಲ್ಲ. ಈ ವಿಷಯವನ್ನು ಶರಣರೆದುರಿಗೆ ಬಂದು ತಿಳಿಸಿದೆ. ಅವರು ಸುಮ್ಮನಾದರು. ಯಾವ ಮಾತನ್ನೂ ಆಡಲಿಲ್ಲ. ಹೀಗೆ ಕೆಲ ದಿನಗಳು ಶ್ರೀ ಚನ್ನಮಲ್ಲಿಕಾರ್ಜುನರ ಬಳಿ ಕಾಲಯಾಪನೆ ಮಾಡಿದ ನಾನು ನಮ್ಮ ಊರಿಗೆ ಬಂದು ನಮ್ಮ ಮನೆಯಲ್ಲಿಯೇ ವ್ಯವಸಾಯ ಕಾರ್ಯದಲ್ಲಿ ಮಗ್ನನಾದೆ. ಇಲ್ಲಿಂದ ಮುಂದೆ ಬಹು ದೀರ್ಘಕಾಲದವರೆಗೆ ಶರಣರ ಸಂಬಂಧ ನನಗೆ ತಪ್ಪಿ ಹೋಯಿತು.

(೩)

೧೯೪೩ ನೆಯ ಇಸ್ವಿ. ನಾನು ಶಿವಮೊಗ್ಗ ನಾರ್ಮಲ್ ಸ್ಕೂಲ್ ಸೇರಿ ವಿದ್ಯಾಭ್ಯಾಸ ಮಾಡುವ ಸನ್ನಾಹದಲ್ಲಿದ್ದೆ. ನಾರ್ಮಲ್ ಸ್ಕೂಲಿನಲ್ಲಿ ವರ್ನಾಕ್ಯುಲರ್ ಟೀಚರ್ಸ್ ಸರ್ಟಿಫಿಕೇಟ್ (V. T. C.) ಪರೀಕ್ಷೆಗೆ ಪ್ರೈವೇಟ್‌ನಲ್ಲಿ ಸೇರಿ ವಿದ್ಯಾಭ್ಯಾಸ ಮಾಡುವವರಿಗೆಲ್ಲ ಏಳು ರೂಪಾಯಿ ಸ್ಕಾಲರ್‌ಶಿಪ್ ದೊರೆಯುತ್ತಿತ್ತು. ಆ ಏಳು ರೂಪಾಯಿಯಲ್ಲಿ ನನ್ನ ಖರ್ಚು ವೆಚ್ಚಗಳನ್ನು ಪೂರೈಸಿಕೊಂಡು ಹೇಗೋ ಮೂರು ವರ್ಷ ವಿದ್ಯಾಭ್ಯಾಸ ಮಾಡಿಬಿಡಬಹುದೆಂದು ನನ್ನ ಲೆಕ್ಕಾಚಾರವಾಗಿತ್ತು. ನಾರ್ಮಲ್ ಸ್ಕೂಲ್ ಅಧಿಕಾರಿಗಳನ್ನು ಕಂಡು ನನಗೊಂದು ವಿದ್ಯಾರ್ಥಿ ಸ್ಥಾನವನ್ನು ತಮ್ಮ ಸ್ಕೂಲಿನಲ್ಲಿ ಕೊಡಬೇಕೆಂದು ಪ್ರಾರ್ಥಿಸಿ ಅರ್ಜಿ ಸಲ್ಲಿಸಿದೆ. ಧಾರವಾಡ ಜಿಲ್ಲೆಯವನಾದ ನನಗೆ ಅವರು ನೀವು ಬೇರೆ ಸ್ಟೇಟ್‌ನವರು ನಿಮಗೆ ಎಲ್ಲಿ ಓದಲು ಸ್ಥಾನ ಕೊಟ್ಟರೂ ಸ್ಕಾಲರ್‌ಶಿಪ್ ಕೊಡಲಾಗುವುದಿಲ್ಲ. ಶಾಲಾ ಶುಲ್ಕಕೊಟ್ಟು ಓದಬಹುದು ಎಂದು ತಿಳಿಸಿದರು. ಈ ವಿಷಯದಲ್ಲಿ ಶರಣರ ಸಹಾಯವನ್ನು ಪಡೆದು ಏನಾದರೂ ಮಾಡಿ ಫೀ ಕೊಡುವುದನ್ನು ತಪ್ಪಿಸಿಕೊಂಡು ಸ್ಕಾಲರ್‌ಶಿಪ್ ಪಡೆದು ಓದಬೇಕೆಂದು ಯೋಚಿಸಿ ಹಾವೇರಿಗೆ ಶರಣರನ್ನು ಕಾಣಲು ಹೋದೆ. ಆ ಸಮಯದಲ್ಲಿ ಶರಣರು ಹಾವೇರಿಯಲ್ಲಿರದೆ ಶಿರಾಳಕೊಪ್ಪಕ್ಕೆ ಹೋಗಿರುವರೆಂದು ತಿಳಿಯಿತು. ಬಸ್ಸಿಗೆ ಕೊಡಲು ದುಡ್ಡಿನ ಅಭಾವವಿದ್ದುದರಿಂದ ಹಾವೇರಿಯಲ್ಲಿ ಏಳೆಂಟು ರೊಟ್ಟಿಗಳನ್ನು ಖಾನಾವಳಿಯಲ್ಲಿ ಕೊಂಡು ಕಟ್ಟಿಕೊಂಡು ಹೆಗಲೇರಿಸಿಕೊಂಡು ಹಾವೇರಿಯಿಂದ ಶಿರಾಳಕೊಪ್ಪದವರೆಗೆ ಮಧ್ಯದಲ್ಲಿ ಹಿರೇಕೌಂಶಿಯಲ್ಲಿ ಒಂದು ವಸ್ತಿಮಾಡಿ ಹಿರೇಕೌಂಶಿಯಿಂದ ಮರುದಿನ ೧೨ ಘಂಟೆಗೆ ಶಿರಾಳಕೊಪ್ಪಕ್ಕೆ ಬಂದೆ. ಶರಣರಿಗೆ ಎಲ್ಲ ವಿಷಯವನ್ನೂ ತಿಳಿಸಿದೆ. ಅವರು ಕ್ಷಣಕಾಲ ಯೋಚಿಸಿ "ನೀನು ಬೇರೆ ಸ್ಟೇಟಿನವನೆಂದು ನಿನಗೆ ಸ್ಕಾಲರ್‌ಶಿಪ್ ಕೊಡುವುದಿಲ್ಲವೆಂದು ಹೇಳುವುದಾದರೆ ನಿನ್ನನ್ನು ಇದೇ ಸ್ಟೇಟಿನವನೆಂದು ಮಾಡಲು ಒಂದು ಯೋಚನೆಯಿದೆ.

ನಮ್ಮ ಕುಮಸಿಯ ಎರಡೆಕರೆ ಗದ್ದೆಯನ್ನು ನಿನ್ನ ನಿನ್ನ ಹೆಸರಿಗೆ ಖಾತೆ ಮಾಡಿಸಿ ಮೈಸೂರು ಸ್ಟೇಟಿನಲ್ಲಿ (ಆಗಿನ ಹಳೆಯ ಮೈಸೂರು ಸ್ಟೇಟ್‌ನಲ್ಲಿ) ಕಂದಾಯ ಕೊಡುವವನು ಎನ್ನಿಸಿಬಿಟ್ಟರೆ ಆಯಿತಪ್ಪ. ಆಮೇಲೆ ನೀನು ಮೂರುವರ್ಷ ಸ್ಕಾಲರ್‌ಶಿಪ್ ಪಡೆದು ವಿ.ಟಿ.ಸಿ. ಮಾಡಿಕೊಂಡು ಇಲ್ಲಿ ಉಪಾಧ್ಯಾಯ ವೃತ್ತಿಗೆ ಸೇರಿ ಬಿಡಬಹುದು. ಎಂದು ಹೇಳಿ ಅಂದೇ ಗಾಡಿಕಟ್ಟಿಸಿಕೊಂಡು ಸುಮಾರು ಹನ್ನೊಂದು ಮೈಲಿ ದೂರವಿರುವ ಸೊರಬಕ್ಕೆ ಹೊರಟುಬಿಟ್ಟರು. ಕೌಂಶಿಗ್ರಾಮವಿರುವುದು ಸೊರಬ ತಾಲೂಕಿನಲ್ಲಿ. ತಾಲೂಕು ಕಚೇರಿಯಲ್ಲಿ ಅವರ ಗದ್ದೆಯ ಖಾತೆಯನ್ನು ನನ್ನ ಹೆಸರಿಗೆ ವರ್ಗಾಯಿಸಿ ಕೊಡಬೇಕಲ್ಲವೆ. ಆದ್ದರಿಂದ ಸೊರಬಕ್ಕೆ ಕರೆದುಕೊಂಡು ಬಂದರು. ಶರಣರ ಆಪ್ತಾಭಿಮಾನಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆಯನ್ನು ಇನ್ನೆಲ್ಲಿಂದ ತರಲಿ. ಸೊರಬಕ್ಕೆ ಬಂದು ಒಂದೇ ದಿನದಲ್ಲಿ ನನ್ನ ಹೆಸರಿಗೆ ಎರಡು ಎಕರೆ ಗದ್ದೆಯನ್ನು ಖಾತೆ ಮಾಡಿಸಿ ನನ್ನನ್ನು ಮೈಸೂರು ದೇಶದಲ್ಲಿ ೧೨ ರೂಪಾಯಿ ಕಂದಾಯ ಕಟ್ಟುವ ರೈತನನ್ನಾಗಿಸಿಯೇ ಬಿಟ್ಟರು. ಇಷ್ಟಾದರೂ ಯಾವು ಯಾವುದೋ ತೊಡಕುಗಳು ಬಂದು ನಾನು ಫೀಜು ಕಟ್ಟಿಯೇ ಓದಬೇಕಾದ ಪ್ರಸಂಗ ಬಂತು. ಧೈರ್ಯಗುಂದದೆ ಹಾಗೆಯೇ ಓದಿ ವಿ.ಟಿ.ಸಿ. ಮುಗಿಸಿ ತುಮಕೂರು ಜಿಲ್ಲೆಯ ತೊಂಡಗೆರೆ ಎಂಬ ಊರಿನಲ್ಲಿ ೧೯೪೬ನೆಯ ಆಗಸ್ಟ್ ೨೪ನೆಯ ತಾರೀಖಿನಿಂದ ಉಪಾಧ್ಯಾಯ ವೃತ್ತಿಗೆ ತೊಡಗಿದೆ.

ಇಷ್ಟರಲ್ಲಿ ಶರಣರ ಪತ್ರಿಕಾಜೀವನದ ಮೇಲೆ ದೊಡ್ಡದೊಂದು ಆಘಾತದ ಪ್ರಸಂಗವೊದಗಿತು. ೧೯೩೧ನೆಯ ಇಸ್ವಿಯಿಂದ ಹಾವೇರಿಯಲ್ಲಿ ಶರಣರು 'ಶಿವಲಿಂಗ ವಿಜಯ ಮುದ್ರಣಾಲಯ'ವೆಂಬ ಹೆಸರಿನ ಶಿವಯೋಗಮಂದಿರದ ಒಡೆತನದ ಪ್ರೆಸ್ಸನ್ನು ನಡೆಯಿಸಿಕೊಂಡು, ಸದ್ಧರ್ಮ ದೀಪಿಕೆ ಎಂಬ ಮಾಸಪತ್ರವನ್ನು ಕೆಲವು ಪ್ರಾಚೀನ ಧರ್ಮಗ್ರಂಥಗಳನ್ನು ಪ್ರಕಟಿಸಿಕೊಳ್ಳುತ್ತ ಬರುತ್ತಿದ್ದರಷ್ಟೆ. ಶಿವಯೋಗಮಂದಿರದವರು ಆ ಪ್ರೆಸ್ಸನ್ನು ಶರಣರ ಕೈಯಿಂದ ತಪ್ಪಿಸಿ ಶಿವಯೋಗಮಂದಿರಕ್ಕೆ ಒಯ್ದುಬಿಟ್ಟರು. ಟ್ರಸ್ಟ್ ಕಮಿಟಿಯ ಮುಖ್ಯ ಸದಸ್ಯರಾದ ರಾ. ಬ. ದೇವೀಹೊಸೂರು ಚನ್ನಬಸಪ್ಪಸೆಟ್ಟರು ಶರಣರ ಸದ್ಧರ್ಮ ದೀಪಿಕೆಯ ಪ್ರಕಟನಾ ಕಾರ್ಯವನ್ನು ಮೂಲೆಗೆ ತಳ್ಳಿಬಿಟ್ಟರು. ಈ ವಿಷಯವನ್ನು ಶರಣರೇ ತಮ್ಮ ಮೈಸೂರಿನಿಂದ ಹೊರಡಿಸಿದ ೫೨ನೆಯ ಸಂಚಿಕೆ (೧೯೪೪ನೆಯ ನವಂಬರ್ ತಿಂಗಳ ಸಂಚಿಕೆ)ಯಲ್ಲಿ ಮೊದಲ ಪುಟದಲ್ಲಿಯೇ ಆತ್ಮನಿವೇದನೆ ಮಾಡಿಕೊಂಡಿದ್ದಾರೆ. ಅವರ ಅಭಿಪ್ರಾಯವನ್ನು ಈ ಕೆಳಗೆ ಕೊಟ್ಟಿದ್ದೇನೆ.

"ಮಹನೀಯರಾದ ಓದುಗರ ಗುಂಪಿನಲ್ಲಿ ಸದ್ಧರ್ಮ ದೀಪಿಕೆಯು ವಿನಯದಿಂದ ಶಿರವ ಬಗ್ಗಿಸಿ ಬಿನ್ನವಿಸಿಕೊಳ್ಳುವುದು ಹೀಗೆ: ಹಿಂದೂ ಧರ್ಮದ ಮುಖ್ಯ ವಿಷಯಗಳ ಸಾರವನ್ನೂ, ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿತೋರಿಸಿದ ತತ್ತ್ವಗಳನ್ನು ಪ್ರಕಟಿಸುವವನಾಗಿ ಹಾವೇರಿಯಿಂದ ಹೊರಡುತ್ತಿದ್ದ ಮಾಸಪತ್ರಿಕೆಯಾದ ನನಗೆ ೫೧ನೆಯ ಸಂಚಿಕೆಗೇನೇ ಕೊಂಚ ತೊಂದರೆಯು ಸಂಭವಿಸಿ ಆ ಸಂಚಿಕೆಯಲ್ಲಿ ಮುಂದೆ ಶಿವಯೋಗ ಮಂದಿರದಿಂದ ನಾನು ಹೊರಡುವ ಅನುಕೂಲ ಮಾಡಲ್ಪಡುವುದೆಂದು ತಮಗೆ ಬಿನ್ನವಿಸಿಕೊಂಡೆನು. ಧರ್ಮಕ್ಕೆ ಯಾವಾಗಲೂ ಕರ್ಮದ ಬಾಧೆಯಿರುವಂತೆ ನನಗೆ ಶಿವಯೋಗ ಮಂದಿರದಲ್ಲಿ ಆಗ ಅವಕಾಶ ಸಿಕ್ಕುವುದಕ್ಕೆ ಅಲ್ಲಿ ಹಣದ

ಕೊರತೆಯಿಂದ ವಿಶ್ವಾಸಿ ಸಂಘ (Trust Committee) ದ ಅನುಮತಿ ದೊರೆಯದೆ ಹೋಯಿತು. ಆ ಸಂಘದಲ್ಲಿ ಮುಖ್ಯ ಸದಸ್ಯರಾದ ರಾ. ಬ. ದೇವೀಹೊಸೂರು ಚನ್ನಬಸಪ್ಪ ಸೆಟ್ಟರು ನನ್ನ ಪ್ರಕಟನೆಯನ್ನು ಮುಂದಕ್ಕೆ ಎಸೆದರು. ಆಗ ಮೂಲೆಯಲ್ಲಿ ನರಳುತ್ತಿದ್ದ ನಾನು ಧರ್ಮ ಕರ್ಮ ಸಂಯೋಗದಿಂದ ಮೈಸೂರಿನಲ್ಲಿ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರ ಪರಮ ಕರುಣಾ ಬಲದಿಂದ ಚೇತರಿಸಿಕೊಂಡೇಳಲಿಕ್ಕೆ ಪ್ರಾರಂಭಿಸಿದೆನು. ಚೇತರಿಸುವ ಚೆಚ್ಚರದಲ್ಲಿ ಈಗಿನ ಜಾಗತಿಕ ಮಹಾಯುದ್ಧ, ಮೈಸೂರು ದೇಶದ ವಿದ್ಯುಚ್ಛಕ್ತಿಯ ಪ್ರಧಾನ ಕಾರ್ಯಾಲಯದ ಆಘಾತ ಮುಂತಾದ ಕಾರಣಗಳಿಂದ ಕಾಗದ ನಿರ್ಮಾಣಕ್ಕೆ ಕೊರತೆ ಬಂದು ನನ್ನ ಆಹಾರವಾದ ಕಾಗದವಿಲ್ಲದೆ ಮತ್ತೆಗಟ್ಟಿಯಾದ ಪೆಟ್ಟನ್ನು ತಿಂದು ಮಲಗಿದೆನು. ಇಂತಹ ತೊಂದರೆಯಲ್ಲಿಯೂ ಡಿಸ್ಟ್ರಿಕ್ಟ ಬೋರ್ಡು ಪ್ರೆಸಿಡೆಂಟರವರಾದ ಮ। ರಾ। ಕೆ. ಸಿ. ಸುಬ್ಬಣ್ಣನವರು ನನ್ನ ಪ್ರಕಟನೆಗಾಗಿ ವೀರಶೈವ ಸಮಾಜ ಬಾಂಧವರಲ್ಲಿ ವಿನಯ ಪೂರ್ವಕವಾದ ವಿನಂತಿಯನ್ನು ಪ್ರಸಿದ್ಧ ಪತ್ರಿಕೆಯ ಮೂಲಕ ಪ್ರಕಟಿಸಿದುದರ ಬಲ ದಿಂದಲೂ, ಸುತ್ತೂರು ವೀರಸಿಂಹಾಸನ ಮಠದ ಸ್ವಾಮಿ ಸ್ವಾಮಿಗಳವರ ಆಶ್ರಯ ಬಲ ದಿಂದಲೂ, ಮೆ॥ ಮೈಸೂರು ಡಿಸ್ಟ್ರಿಕ್ಟ ಡೆಪ್ಯುಟಿ ಕಮಿಷನರ್ ಅವರ ಸಹಾನುಭೂತಿಯ ಬಲದಿಂದಲೂ ನಾನು ಹೊರಬೀಳುವುದಕ್ಕೆ ಮೈಸೂರಿನ ರಾಜಕೀಯಾಜ್ಞೆಯ ಸರಬ ರಾಜು ಇಲಾಖೆಯು ಮಿತಪಡಿಸುವ ಅಧಿಕಾರಿ (Controller of civil suppliee) ಗಳಿಂದ ದೊರೆತು ಮುದ್ರಣ ಕಾಗದಗಳು ದೊರೆತ ಬಲದಿಂದಲೂ ನಾನು ಮೆಲ್ಲಮೆಲ್ಲನೆ ಎದ್ದು ಈಗ ಕಣ್ಬಿಟ್ಟು ನೋಡುವಲ್ಲಿ ನನಗೆ ಮಹಾ ವಿಭವವು ತೋರುತ್ತಲಿದೆ.

ಕರ್ನಾಟಕದಲ್ಲಿ ಮುಖ್ಯ ಪ್ರಭುಗಳಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರವರು ಅವರ ರಾಜಧಾನಿಯ ಸ್ಥಳ. 'ಸತ್ಯಮೇವೋದ್ಧರಾಮ್ಯಹಂ' ಎಂಬ ಬಿರುದನ್ನುಳ್ಳ ಆ ಶ್ರೀಮನ್ಮಹಾರಾಜರವರ ಕೃಪಾಛತ್ರದ ಆಶ್ರಯ ಸ್ಥಳ, ಚಿನ್ನದ ಬೀಡು, ಸುಂದರ ನಾಡಿನ ಮುಖ್ಯಸ್ಥಳ–ಇಂತಹ ಸ್ಥಳದಲ್ಲಿ (ಮೈಸೂರಿನಲ್ಲಿ) ನಾನು ಹೊರಬೀಳುವುದು ನನ್ನ ಸುದೈವವೆಂದು ಭಾವಿಸಿದೆನು. ಈಗೀಗ ನನ್ನ ಪರಿಚಯ ವನ್ನು, ಕಾರ್ಯವನ್ನು ಇನ್ನೂ ಹೆಚ್ಚಾಗಿ ಬಿನ್ನೈಸುವೆನು. ದಯವಿಟ್ಟು ಮನ್ನಿಸಿರಿ.

ನನ್ನ ಮೊದಲಿನ ಧ್ಯೇಯವನ್ನು ನಾನು ಬಿಟ್ಟಿಲ್ಲ. ವೀರಶೈವ ಸಂಸ್ಕೃತಿಯು ವೇದಾಗಮೋಪನಿಷತ್ ಪ್ರತಿಪಾದಿಕವೆಂಬುದನ್ನು ಸಿದ್ಧಮಾಡಲು ಹಾವೇರಿಯಲ್ಲಿದ್ದುದ ಕ್ಕಿಂತಲೂ ಹೆಚ್ಚಿನ ಬಲವು ಇಲ್ಲಿ ನನಗೆ ಬಂದಿದೆ. ವೀರಶೈವ ಸಂಬಂಧದ ಉಪನಿಷತ್ತು ಗಳನ್ನೂ ಆಗಮಗಳನ್ನೂ ಪ್ರಕಟಿಸುವೆನೆಂಬ ನನ್ನ ಒಂದನೆಯ ಸಂಚಿಕೆಗೆ ಮುಂಚೆಯೇ ಪ್ರಕಟವಾದ ಪ್ರಸಿದ್ಧ ಪತ್ರಿಕೆಯಂತೆ, ನಡೆಯಲು ಬದ್ಧಕಂಕಣನಾಗಿದ್ದೇನೆ. ಹಾವೇರಿ ಯಲ್ಲಿದ್ದಾಗ 'ಲಿಂಗೋಪನಿಷತ್' ಒಂದನ್ನೇ ಹೊರಗೆಡಹಿದೆನು. ಈಗ ಇನ್ನೂ ಕೆಲವು ಉಪನಿಷತ್ತುಗಳನ್ನು ಪ್ರಕಟಿಸಲುಳ್ಳವನಾಗಿದ್ದೇನೆ. ಅಲ್ಲಿ ಕನ್ನಡ ಗ್ರಂಥಗಳೇ ಹೆಚ್ಚಾಗಿ ಪ್ರಕಟಗೊಂಡವು. ಇಲ್ಲಿ ಕನ್ನಡ ಗ್ರಂಥಗಳ ಜೊತೆಯಲ್ಲಿ ವೀರಶೈವ ಸಂಬಂಧ ವಾದ ಕೆಲವು ಸಂಸ್ಕೃತ ಗ್ರಂಥಗಳನ್ನು ಪ್ರಕಟಿಸಲಿರುವೆನು. ನನ್ನ ಸಹವರ್ತಿಯಾದ ಸದ್ಧರ್ಮ ಗ್ರಂಥಮಾಲೆಯ ಪುಸ್ತಕಗಳ ಸಂಖ್ಯೆಯನ್ನು ಹೆಚ್ಚಿಸಲಿರುವೆನು. ಅಲ್ಲದೆ

ಈ ಪ್ರಾಂತದಲ್ಲಿ ನಡೆಯುತ್ತಿರುವ ವಿದ್ಯಾರ್ಥಿ ನಿಲಯ ವಿಚಾರ, ಸಮಾಜೋನ್ನತಿ, ಧಾರ್ಮಿಕ ಸಮ್ಮೇಲನ, ಸ್ತ್ರೀ ಸಮಾಜೋನ್ನತಿ ಮೊದಲಾದ ವಿಷಯಗಳ ಪ್ರಕಟನೆಗೂ ನನ್ನಲ್ಲಿ ಅವಕಾಶವುಂಟು..."

ಇದಿಷ್ಟು, ಶರಣ ಚನ್ನಮಲ್ಲಿಕಾರ್ಜುನರ ಮೈಸೂರಿನಿಂದ ಪುನಃ ತಲೆಯೆತ್ತಿನಿಂತ ಸದ್ಧರ್ಮ ದೀಪಿಕೆಯ ಮೊದಲ ಸಂಚಿಕೆಯ ದಿಟ್ಟನುಡಿ ಸುತ್ತೂರು ಶ್ರೀಗಳವರು ಶರಣರಿಗೆ ವಾಣಿವಿಲಾಸ ರಸ್ತೆಯಲ್ಲಿರುವ ಕ್ಯಾತನಹಳ್ಳಿ ಸಾಹುಕಾರ್ ಸಿದ್ದಪ್ಪನವರ ವಿದ್ಯಾರ್ಥಿ ನಿಲಯದಲ್ಲಿ ಒಂದು ದೊಡ್ಡ ಕೊಠಡಿಯನ್ನು ಬಿಟ್ಟುಕೊಟ್ಟರು. ಶರಣರು ಆ ಕೊಠಡಿಯ ತುಂಬೆಲ್ಲ ಗ್ರಂಥಗಳನ್ನು, ಖರ್ಚಾಗದೆ ಉಳಿದ ಸದ್ಧರ್ಮ ದೀಪಿಕೆಯ ಹಳೆಯ ಸಂಚಿಕೆಗಳನ್ನೂ, ಹಸ್ತಪ್ರತಿಗಳನ್ನೂ ತುಂಬಿಕೊಂಡು ಆ ಗ್ರಂಥಗಳ ರಾಶಿಯ ಮಧ್ಯದಲ್ಲಿ ತಮಗೊಂದು ಆಸನ ಹಾಕಿಕೊಂಡು ಸತತ ಕಾರ್ಯಮಗ್ನರಾಗಿ, ಏಕಾಂಗ ಸಾಹಸಿಗಳಾಗಿ ತಮ್ಮ ಎರಡನೆಯ ಸಂಚಿಕೆಯನ್ನು ಪ್ರಾರಂಭಿಸುವುದರ ಮೂಲಕ ತಮ್ಮ ಸತ್ಯಸಂಕಲ್ಪವಾದ, ದೃಢ ಪ್ರತಿಜ್ಞೆಯ ಕುರುಹಾಗಿ ಹಾನಗಲ್ಲು ಕುಮಾರಸ್ವಾಮಿಗಳವರಿಗೆ ಯಾವಜ್ಜೀವವೂ ನಡೆಸಿಕೊಂಡು ಬರುತ್ತೇನೆಂದು ಮಾತುಕೊಟ್ಟು, ಅವರ ಸ್ಮಾರಕವಾಗಿ ಹೊರಡುತ್ತಿದ್ದ ಸದ್ಧರ್ಮ ದೀಪಿಕೆಗೆ ವಿನೂತನ ಜನ್ಮ ಕೊಟ್ಟರು ಎಂಬುದು ಮೇಲಿನ ಅವರ ಹೇಳಿಕೆಯಿಂದಲೇ ಬೆಳ್ಳಂಬೆಳಕಾಗಿ ತೋರುವುದು.

ತಮ್ಮ ನಿತ್ಯ ವ್ಯವಹಾರಗಳನ್ನೆಲ್ಲ ಯಾರ ಸಹಾಯವನ್ನೂ ತೋರದೆ, ತಾವೇ ಮಾಡಿಕೊಂಡು ಮುಗಿಸಿ, ಅಡಿಗೆಯನ್ನು ತಾವೇ ಸ್ವತಃ ಮಾಡಿಕೊಂಡು ಆ ಎತ್ತರ ವಯಸ್ಸಿನಲ್ಲಿ ತರುಣರನ್ನೂ ನಾಚಿಸುವಂತಹ ಕಾರ್ಯ ಚಟುವಟಿಕೆಯಲ್ಲಿ ತೊಡಗಿದರು. ತಾವೊಬ್ಬರೇ ವಿಷಯ ಸಂಗ್ರಹಣ ಮಾಡುವುದು, ಕಾಗದ ಇನ್ನಿತರ ಸಾಮಗ್ರಿಗಳಿಗಾಗಿ ತಾವೊಬ್ಬರೇ ತಿರುಗುವುದು. ಮುದ್ರಣ ವಿಷಯವನ್ನು ವಿಜಯಲಕ್ಷ್ಮಿ ಪ್ರೆಸ್‌ಗೆ ಕೊಟ್ಟು ಬರುವುದು ಪ್ರೂಫ್‌ಗಳನ್ನು ತರಿಸಿ ತಿದ್ದಿ ಕಳಿಸುವುದು--ಈ ಎಲ್ಲ ವ್ಯವಹಾರಗಳನ್ನು ಸಾಗಿಸಿಕೊಂಡು ಬರತೊಡಗಿದರು. ಇಂತಹ ಸ್ಥಿತಿಯಲ್ಲಿ ಈ ಕಾರ್ಯವನ್ನು ಚನ್ನಮಲ್ಲಿಕಾರ್ಜುನರಲ್ಲದೆ ಇನ್ನಾರಾದರೂ ನಿರ್ವಹಿಸುತ್ತಿದ್ದರೆ ಅವರು ಈ ಸಮಾಜ ಸೇವೆಯೂ ಬೇಡ, ಪತ್ರಿಕೆಯೂ ಬೇಡ, ಧರ್ಮಗ್ರಂಥಗಳ ಪ್ರಕಟನೆಯೂ ಬೇಡ ಎಂದು ತೆಪ್ಪಗೆ ತಮ್ಮಷ್ಟಕ್ಕೆ ತಾವು ತಮ್ಮ ವೃದ್ಧಾಪ್ಯ ವೇತನದಲ್ಲಿ ತಮ್ಮ ವೃದ್ಧಾಪ್ಯ ಜೀವನವನ್ನು ಹಾಯಾಗಿ ಕಳೆಯಲು ಮನಸ್ಸು ಮಾಡಿ ನಿಷ್ಕ್ರಿಯರಾಗುತ್ತಿದ್ದರೆಂದು ನನ್ನ ಊಹೆ. ಮೊದಲೇ ಅಂಗಹೀನತ್ವ; ಅದರಲ್ಲೂ ವೃದ್ಧಾಪ್ಯ: ಸಾಲದ್ದಕ್ಕೆ ಸ್ವತಂತ್ರ ಮುದ್ರಣಾಲಯವಿಲ್ಲ; ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವವರಾರೂ ಇಲ್ಲ; ಸ್ನಾನ, ಅಡಿಗೆ ಎಲ್ಲವನ್ನೂ ಸ್ವತಃ ತಾವೇ ಎಲ್ಲವನ್ನೂ ತಾವೇ ನೋಡಿಕೊಳ್ಳಬೇಕು. ಒಂದಲ್ಲ, ಎರಡಲ್ಲ ಸಮಸ್ತ ಕ್ರಿಯೆಗಳೂ ತಮ್ಮೊಬ್ಬರಿಂದಲೇ ಸಾಗಬೇಕು. ಇಷ್ಟೊಂದು ಭಾರವನ್ನು ಮೈಮೇಲೆಳೆದುಕೊಂಡು ಸಮಾಜ ಸೇವೆಯನ್ನು ಶಕ್ಯವಿದ್ದಷ್ಟು ಮಾಡೇತೀರಬೇಕೆಂಬುದು ಕಾರ್ಯಪ್ರವೃತ್ತರಾಗುವವರ ನಿಷ್ಠೆಯನ್ನು ಅಳೆಯಲೂ ಸಮಾಜಕ್ಕೆ ಸಾಮರ್ಥ್ಯ ಬೇಕಾದೀತು. ಶರಣರ ಛಲ ಅದ್ಭುತ: ಅನುಪಮ! ಅನ್ಯಾದೃಶ. ಧೀರ ಪ್ರವೃತ್ತಿಯ, ಉದಾತ್ತ ಧ್ಯೇಯದ, ಅದ್ಭುತ ಸಂಕಲ್ಪ ಶಕ್ತಿಯ ಶರಣರು ತಾವು

ಹಿಡಿದ ಈ ಕಾಯಕವನ್ನು ತಮ್ಮ ಕೊನೆಯುಸಿರ ವರೆಗೂ ಧೈರ್ಯದಿಂದ ನಡೆಸಿಕೊಂಡು ಬಂದುದು ಅವರ ಏಕಾಂಗ ಸಾಹಸಕ್ಕೆ ಹಿಡಿದ ಕನ್ನಡಿ. ತಮ್ಮ ಪೂಜ್ಯ ಗುರುಗಳಾದ ಹಾನಗಲ್ಲು ಕುಮಾರಸ್ವಾಮಿಗಳವರಲ್ಲಿ ಸಾಷ್ಟಾಂಗ ನಮಸ್ಕಾರ ಹಾಕಿ, ಕಾರ್ಯಪ್ರವೃತ್ತ ರಾಗಿದ್ದ ಶ್ರೀ ಶರಣ ಧ್ಯೇಯೋದ್ದೇಶಗಳಿಗೆ ಬಂದ ವಿಘ್ನಗಳೆಲ್ಲ ಶಿವನೊಡ್ಡಿದ ಪರೀಕ್ಷಾ ಪ್ರಸಂಗಗಳೆಂದೆನ್ನಬೇಕಲ್ಲದೆ ಬೇರೆ ಏನನ್ನೂ ಹೇಳಲು ಸಾಧ್ಯ. ಕೊಲುವೆನೆಂಬುದು ದೇವನ ಭಾಷೆಯಾದರೆ ಸತ್ಯವೆಂಬ ಕೂರಲಗನೆ ಹಿಡಿದು ಗೆಲುವೆನೆಂದು ಭಕ್ತ ಹೋರಾ ಟಕ್ಕಿಳಿದು ದೇವನ ಮಾತನ್ನೂ ಹುಸಿಯಾಗಿಸುತ್ತಾನೆ. ಶಿವನು ಇವರನ್ನು ಒರೆದು, ಅರಿದು, ಅರಿದು ನೋಡಿದನು. ಶರಣರು ಬೆದರದೆ ಬೆಚ್ಚದೆ ಮುನ್ನುಗ್ಗಿದುದನ್ನು ಕಂಡು ಶಿವಕೃಪೆಯೊದಗಿ ಬಂದು ಮೈಸೂರಿನಲ್ಲಿ ಅವರಿಂದ ಅದ್ಭುತ ಕಾರ್ಯ ಮಾಡಿ ಸಿತು. ಮೈಸೂರಿನಿಂದ ಹೊರಬಂದ ಗ್ರಂಥಸಂಖ್ಯೆ ದೊಡ್ಡದು ಸಂಖ್ಯೆಯಿಂದಷ್ಟೇ ಅಲ್ಲ ಮೌಲ್ಯ ದೃಷ್ಟಿಯಿಂದಲೂ ದೊಡ್ಡದು. ಚಿರಕಾಲ ನಿಲ್ಲುವಂತಹುದು. ಇಷ್ಟಕ್ಕೆ ಶರಣರ ಸಂಕಲ್ಪಗಳು ಪೂರ್ಣ ಈಡೇರಿದುವೆಂದಲ್ಲ. ದೇವನು ಇನ್ನೂ ಇವರಿಗೆ ಇಲ್ಲಿ ಅನೇಕ ವಿಘ್ನಗಳನ್ನು ತಂದೊಡ್ಡಿದನು. ಕೊನೆಗೆ ಅವೆಲ್ಲ ಪರಿಹಾರವಾಗಿ ಶರಣರು ಅಜೇಯರಾಗಿ ನಿಂತರು.

(೪)

ಮೈಸೂರಿನಲ್ಲಿ ಸದ್ಧರ್ಮ ದೀಪಿಕೆ ಕಾರ್ಯಾಲಯಕ್ಕೆ ಸುತ್ತೂರು ಶಿವರಾತ್ರೀಶ್ವರ ಸ್ವಾಮಿಗಳು ಒಂದು ವ್ಯವಸ್ಥಿತ ಮುದ್ರಣಾಲಯ ಮಾಡಿಕೊಡುತ್ತೇವೆಂದು ಅಪ್ಪಣೆ ಕೊಡಿಸಿದ್ದರಂತೆ. ಸರಿಯಾಗಿ ಪ್ರೆಸ್ ನೋಡಿಕೊಂಡು ಹೋಗುವ ಒಬ್ಬ ವ್ಯವಸ್ಥಾಪಕ ರನ್ನು ಕರೆಯಿಸಿರಿ. ಆಮೇಲೆ ಮುಂದಿನ ಯೋಚನೆ ಮಾಡೋಣವೆಂದು ಹೇಳಿದ್ದ ರಂತೆ. ಈ ಕಾರಣದಿಂದಾಗಿ ಶರಣರಿಗೆ ಮುದ್ರಣಾಲಯದ ಕಾರ್ಯ ಕಲಾಪಗಳನ್ನು ನೋಡಿಕೊಂಡು ಹೋಗುವ, ಪತ್ರಿಕೆಯನ್ನು ವ್ಯವಸ್ಥಿತವಾಗಿ ನಡೆಯಿಸಿಕೊಂಡು ಹೋಗುವ ಒಬ್ಬ ವ್ಯವಸ್ಥಾಪಕರ ಅವಶ್ಯಕತೆಯಿತ್ತು. ಶರಣರ ದೃಷ್ಟಿಗೆ ಆಗ ಬಿದ್ದ ವನು ನಾನೇ. ಆಗ ನಾನು ಈ ಹಿಂದೆಯೇ ಹೇಳಿದಂತೆ ತುಮಕೂರು ಜಿಲ್ಲಾ ಕೊಂಡಿ ಗೆರೆಯಲ್ಲಿ ಏಕೋಪಾಧ್ಯಾಯ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದೆ ಕೆಲಸಕ್ಕೆ ಸೇರಿ ಒಂದು ವರೆ ತಿಂಗಳು ಮಾತ್ರ ಆಗಿತ್ತು ಅಷ್ಟೆ. ಅಷ್ಟರಲ್ಲಿ ಶರಣರಿಂದ ಈ ಕೂಡಲೆ ಮೈಸೂರಿಗೆ ಹೊರಟುಬರಬೇಕೆಂದು ಪತ್ರ ಬಂತು. ಆ ಪ್ರಕಾರ ನಾನು ಕೆಲವು ದಿನಗಳ ರಜೆ ತೆಗೆದುಕೊಂಡು ಮೈಸೂರಿಗೆ ಹೋದೆ. ನಾನು ಬಂದುದನ್ನು ಕಂಡು ಶರಣರು ಹರ್ಷ ಗೊಂಡು—"ನೀನು ಶಾಲೆಯ ಕೆಲಸವನ್ನು ಬಿಟ್ಟುಬಿಡು. ಇಲ್ಲಿ ಪ್ರೆಸ್ ಮಾಡಿಕೊಡು ತ್ತೇನೆ. ಪ್ರೆಸ್ ವ್ಯವಹಾರ ಮತ್ತು ಸದ್ಧರ್ಮ ದೀಪಿಕೆಯ ವ್ಯವಸ್ಥಾಪಕತ್ವವನ್ನು ವಹಿಸಿ ಕೊಂಡು ಮುಂದುವರೆ. ಮುಂದೆ ಈ ಪತ್ರಿಕೆಯನ್ನು ನಡೆಸಿಕೊಂಡು ಹೋಗುವು ದಕ್ಕೂ ಸಮರ್ಥನಾಗಬೇಕು" ಎಂದರು. ನಾನು ಅವರು ಹೇಳಿದ ಮಾತಿಗೆ ಪ್ರತ್ಯುತ್ತರ ವನ್ನು ಹೇಳದೆ ಸುಮ್ಮನಾದರೂ ಮನಸ್ಸಿನಲ್ಲಿ ನೂರಾರು ಯೋಚನೆಗಳು ಬಂದು ಹೋಗತೊಡಗಿದವು. ಸಿಕ್ಕ ಒಂದು ಗವರ್ನಮೆಂಟ್ ಚಾಕರಿಯನ್ನು ಬಿಟ್ಟು ಇಲ್ಲಿರುವುದು

## ಮೈಸೂರಿನಲ್ಲಿ ಸಿದ್ಧವಾದ ಪುಸ್ತಕಗಳು.

### ಬಸವೇಶ್ವರನ ಕಾಲ

ಬಸವೇಶ್ವರನ ವಿಷಯಗಳು ಶೋಧನೆಯಿಂದ ಪ್ರಕಟವಾಗಿ ಇ
ಶ್ರೀ ನಿ. ಚನ್ನಬಸವಸ್ವಾಮಿಗಳು, ವಿರಕ್ತಮಠ. ಬ್ಯಾಡಗಿ.
ಇವರಲ್ಲಿ ದೊರೆಯುತ್ತವೆ ಬೆಲೆ

### ಸಿದ್ಧೇಶ್ವರ ವಚನ

(ಬೆಡಗಿನ ವಚನಗಳ ಟಿಪ್ಪಣಿ ಸಹಿತ) ಬೆಲೆ

### ಅನಾದಿ ವೀರಶೈವ ಸಂಗ್ರಹ

ವರ ಧರ್ಮ ತತ್ತ್ವಗಳನ್ನು ವಿಶದವಾಗಿ ತಿಳಿಸುವ ಪುಸ್ತಕ
ಉತ್ತಮವಾದ ಕಟ್ಟು. ಅಚ್ಚುಕಟ್ಟಾದ ಹೊಲಿಗೆ ಬೆಲೆ

### ...ಡುತಡಿಯ ಮಹಾದೇವಿಯಕ್ಕನ ವಚನ

...ಭಾಗವು ಮುದ್ರಣವಾಗುತ್ತಲಿದೆ. ಇದಕ್ಕೆ ಮೊದಲನೆಯ ...
...ರಿಸಿ ಸೇರಿಸಿ ಒಂದೇ ಪುಸ್ತಕವನ್ನು ಮಾಡಬೇಕೆಂಬ ಯೋ...
ದವರು ಬರೆದಲ್ಲಿ ತಯಾರಾದ ಓದಿಸೆಯೋ ಪುಸ್ತಕಗಳು ಕಳ...
ತ್ತವೆ ವಚನಗಳ ಅಕ್ಷರಾನುಕ್ರಮಣಿಕೆಯೂ ಕೊಡಲ್ಪಡು...

### ಯೋಗಾಂಗ ತ್ರಿವಿಧಿ

...ವರಿಗೆ ಕೈಪಿಡಿ (Hand book) ಆಗಿದೆ

### ಗುರುಶಂಕರೇಶ್ವರಾ ಶತಕ

ಈ ಶತಕವು ಶಂಕರದೇವರಿಂದ ರಚಿಸಲ್ಪಟ್ಟುದು. ಸಾಮಾ...
ಬರಬರುತ್ತಾ ಉನ್ನತಿಯನ್ನು ಹೊಂದಿ ಶಿವಶರಣನಾಗಿ ಆತ್ಮಂ...
ಮಾರ್ಗವನ್ನು ಕ್ರಮವಿಡಿದು ಬೋಧಿಸುವುದು ಅನುಬಂಧಾವ...
...ಮ ಪಾಠಾಂತರಗಳ ಸಹಿತ ಮುದ್ರಿಸಲ್ಪಟ್ಟಿದೆ. ಬೆಲೆ ೦

### ಮುಕ್ತ್ಯಂಗನಾ ಕಂಠಮಾಲೆ

...ಸಲ್ಪಟ್ಟು ಪ್ರಕಟವಾದುದು (ಸ್ವತಂತ್ರ ಸಿದ್ಧಲಿಂಗೇಶ್ವರರ ವ...
ವಚನಗಳ ತಾತ್ಪರ್ಯ)

### ಸ್ತೋತ್ರ ಪಾರಾಯಣ

...ರಶೈವರು ಆಚರಿಸುತ್ತಿರುವ ಧಾರ್ಮಿಕ ಪದ್ಧತಿಯು
...ಬ ಹೆಸರುಳ್ಳುದು. ಅನಾದಿ ವೀರಶೈವ ಸಂಗ್ರಹ ಎಂಬ ಗ್ರ...
...ಷ್ಟಪಡುತ್ತದೆ. ಈ ಧಾರ್ಮಿಕದಲ್ಲಿ ಇರುವ ಜಂಗಮವು...
ಭಕ್ತನು ಅನಾದಿ ಭಕ್ತ ಎಂದೂ ಕರೆಯಲ್ಪಡುತ್ತಾರೆ.
...ನಾಮ ಶ್ಲೋಕ, ನಾಮಾವಳಿ, ಅನಾದಿ ಜಂಗಮ ಅ...
...ಕ, ನಾಮಾವಳಿ ಮೊದಲಾದುವುಗಳನ್ನು ಪೂರ್ವಿಕರು...
...ನ್ನೂ ಪೂರ್ವಿಕರು ರಚಿಸಿದ ಬಸವೇಶ್ವರ ಸಹಸ್ರನಾಮ...
...ಮ ಸ್ತೋತ್ರ, ಉದ್ಧರಣೆ ಪ್ರಾರ್ಥನೆ ಇವುಗಳೊಡನೆ
...ಯಣ' ಎಂಬ ಪುಸ್ತಕವನ್ನು ಈಗ ಸಿದ್ಧಪಡಿಸಿ ಇದೆ.
ಪುಟಗಳುಳ್ಳುದಾಗಿ ಸುಂದರವಾದ ರಟ್ಟಿನಿಂದ ಕೂ...
ಪಡಿಸಲು ನಾರು ಬಟ್ಟೆಯ ರಟ್ಟು ಮಾಡಿದೆ. ಗುರು ಜ...
..., ಲಿಂಗಾರ್ಚನೆಯ ವಿಶೇಷದಿನ, ಇಷ್ಟಪಟ್ಟರೆ ನಿತ್ಯಲಿಂ...
...ಎದುದನ್ನು ಕಾಲಾವಕಾಶವಿದ್ದಂತೆ ಪಾರಾಯಣ ಮ...
...ನುಕೂಲವಾಗಿದೆ. ಸಾಮಾನ್ಯವಾಗಿ ಶಿವಸಹಸ್ರನಾಮ ಶಿ...
ಇವುಗಳನ್ನು ಓದುವುದಕ್ಕಿಂತಲೂ ಶಿವಾಧಿಷ್ಠಾನ ಮ...
...ು ತತ್ವದ ಸ್ತೋತ್ರ ಪಾರಾಯಣ ಮಾಡುವುದು ಶ್ರೇಷ್ಠ...
..., ಗ್ರಂಥವು ಎಲ್ಲ ವೀರಶೈವರಿಗೂ ಅನುಕೂಲವಾದುದು.
...ವೂ ಆಚರಣೆಯ ಸಂಬಂಧ ವಿಷಯಗಳೂ ಇದರಲ್ಲಿ ಬಂ...
...ತ್ತಿಸಲು ಯೋಗ್ಯವಾಗಿದೆ. ಈ ಪುಸ್ತಕದ ಬೆಲೆ ೧-...
...ಳ್ಳುವವರಿಗೆ ಧಾರಾಳವಾದ ಕಮಿಷನ್ ಕೊಡಲ್ಪಡುತ್ತದೆ

### ...ರ್ ಗ್ರಂಥಮಾಲೆಯ ಪುಸ್ತಕಗಳು.

...ರಣ ತ್ರಿವಿಧಿ ೦-೪-೦. ಜ್ಯೋತಿರ್ಮಯ ಶಾಂಭ...
...-೮-೦. ಲಿಂಗೋಪನಿಷತ್ ೦-೬-೦. ಪಾದ...
ವಾಗದ್ವೈತ ನಿರಸನ ತ್ರಿವಿಧಿ (ದಪ್ಪರಟ್ಟು) ೧-
...ಲನೆಯ ಪುಸ್ತಕ ೦-೮-೦. ಶಿವಯೋಗ ದರ್ಪಣ ೦-
...ಪಿಕೆ ೦-೪-೦. ಕೋಳೂರು ಕೊಡುಗೂಸಿನ ರಗಳೆ ೦-
...ಂಟಾವಳಿ ೦-೧-೦. ದೇಹದ ಹಸುಗೆ ೦-೦-೬. ಅಸ್ಪ...
ದೇವನಾಯಕನ ಶಾರದ ೦-೧-೦. ನುಲಿಯ ಚಂದ...
ಶಿವಯೋಗ ೦-೧-೦. ಶತಕತ್ರಯ (ಮೂಲ ವ...
...ಮ್ಮನ ತ್ರಿವಿಧಿ ೦-೧-೦. ಬಾಲಿಕಾ ಗೀತಾ ಶತಕ ೦-
...೦-೧-೦. ಸಿದ್ಧೇಶ್ವರ ತ್ರಿವಿಧಿ ೦-೧-೦. ಪುರಾತನ ದೇ...
ಸ್ತೋತ್ರ ಪಾರಾಯಣ ೧-೮-೦.

ವಿಳಾಸಕ್ಕೆ ಬರೆಯಿರಿ :—ಪ್ರಕಾಶಕ, ಸದ್ಧರ್ಮ ದೀಪಿಕೆ.

ಸದ್ಧರ್ಮ ದೀಪಿಕೆಯ ಪುಸ್ತಕ ಪ್ರಕಟಣೆಗಳ ಪಟ್ಟಿ.

ಉಚಿತವೆ ? ಒಂದು ವೇಳೆ ಪ್ರೆಸ್ ಆಗದಿದ್ದರೆ ಮುಂದೇನು ? ಶ್ರೀ ಶರಣರು ಇದು ವರೆಗೆ ಅನುಭವಿಸಿದ ಭವಣೆಗಳೇನು ಕಡಿಮೆಯವೇ ? "ಯಾವ ಕೆಲಸ ಸಿಗದಿದ್ದರೆ ಮಾತ್ರ ಪತ್ರಿಕೆಯ ಆಫೀಸಿನಲ್ಲಿ ಸೇರಿಕೋ" ಎಂದು ಜನರೆನ್ನುವ ಗಾದೆಯನ್ನು ಸ್ಮರಿಸಿಕೊಂಡು ಒಂದು ತಿಂಗಳು ಇಪ್ಪತ್ತಾರು ದಿನಗಳು ಸ್ವಸ್ಥವಾಗಿ ಮೈಸೂರಿನಲ್ಲಿ ಉಳಿದು ಬಿಟ್ಟೆ. ಒಂದು ದಿನ ಸುತ್ತೂರು ಶ್ರೀಗಳವರ ಹತ್ತಿರ ನನ್ನನ್ನು ಕರೆದುಕೊಂಡು ಹೋಗಿ ಪ್ರೆಸ್ ವಿಚಾರ ಪ್ರಸ್ತಾಪಿಸಿದರು. ಅದೇನು ಶಿವನೊಡ್ಡಿದ ಪ್ರಸಂಗವೋ ನಾನು ಪ್ರೆಸ್ಸಿನ ಮ್ಯಾನೇಜರ್ ಆಗುವ ಗಳಿಗೆ ಕೂಡಿ ಬರಲೇ ಇಲ್ಲ. ಶರಣರು ಸುತ್ತೂರು ಶ್ರೀಗಳವ ರಿಂದ ನಿರೀಕ್ಷಿಸಿದ ನಿರೀಕ್ಷಣೆ ಕಾರ್ಯಗತವಾಗದೆ ವ್ಯಾಕುಲಕ್ಕೊಳಗಾದರು. ಅಷ್ಟರಲ್ಲಿ ಕೊಂಡಗೆರೆ ಶಾಲಾ ಉಪಾಧ್ಯಾಯನಾಗಿದ್ದ ನನಗೆ ಹಬ್ಬೂರು ಸ್ಕೂಲರೇಂಜ್ ಇನ್ ಸ್ಪೆಕ್ಟರ್ ಅವರಿಂದ ಒಂದು ಕಾಗದ ಬಂತು. ಅದನ್ನು ಶರಣರಿಗೆ ತೋರಿಸಿದೆ. ಅದ ರಲ್ಲಿ "ಒಂದು ವಾರದೊಳಗೆ ನೀವು ಶಾಲೆಗೆ ಬಂದು ಹಾಜರಾಗಿ ನಿಮ್ಮ ಕೆಲಸ ನಡೆಸಿ ಕೊಂಡು ಹೋಗದಿದ್ದರೆ ನಿಮ್ಮನ್ನು ಕೆಲಸದಿಂದ ತೆಗೆದು ಹಾಕಲಾಗುವುದು" ಎಂದಿದ್ದು ದನ್ನು ಕಂಡು ಶರಣರು "ಹೋಗಪ್ಪ 'ಹಿಂದಿನ ಮನೆ ಭಿಕ್ಷೆಯೂ ತಪ್ಪಿತು ಮುಂದಿನ ಮನೆಯ ಕೋರಾಣವೂ ತಪ್ಪಿತು' ಅನ್ನುವಂತಾಗಬಾರದು. ನೀನು ಇಂದೇ ಹೋಗಿ ನಾಳೆ ಕೆಲಸಕ್ಕೆ ಸೇರಿಕೊಂಡು ಬಿಡು ನನಗೆ ಶಿವನು ಏನು ಮಾರ್ಗ ತೋರಿಸುವನೋ ತಿಳಿಯದು ಸದ್ಯಕ್ಕೆ ಪ್ರೆಸ್ ಆಗುವ ಯೋಗ ಕೂಡಿ ಬರಲಿಲ್ಲ." ಎಂದು ಹೇಳಿ ಕಳಿಸಿ ಕೊಟ್ಟುಬಿಟ್ಟರು. ನಾನು ಬಂದು ಕೆಲಸಕ್ಕೆ ಸೇರಿಕೊಂಡೆ.

ಶರಣರು ಹಾಗೂ ಹೀಗೂ ತೊಂದರೆಗಳನ್ನು ಅನುಭವಿಸುತ್ತಲೇ ತಾವು ಸಂಶೋಧಿ ಸಿದ, ಸಂಪಾದಿಸಿದ ಗ್ರಂಥಗಳನ್ನು ಒಂದೊಂದಾಗಿ ಹೊರತರುವ ಸಂಕಲ್ಪದಿಂದ ಸ್ವಲ್ಪವೂ ಹಿಂದೆ ಸರಿಯದೆ ಪ್ರಕಟನಾ ಕಾರ್ಯವನ್ನು ಮುಂದುವರಿಸುತ್ತಿದ್ದಂತೆಯೇ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ವಿದ್ಯಾರ್ಥಿ ನಿಲಯವನ್ನು ಬಿಡಬೇಕಾದ ಸಂದರ್ಭ ಒದಗಿತು. ಅದಕ್ಕೂ ಧೈರ್ಯಗೆಡದೆ ಬಿಟ್ಟು ಬಿಡುತ್ತೇವೆಂದು ಅವರಿಗೆ ತಿಳಿಸಿ, ಬಾದಾಮಿ ನಂಜಪ್ಪನವರು ಹಳೇ ಅಗ್ರಹಾರದಲ್ಲಿ ಕಟ್ಟಿಸಿದ್ದ ಛತ್ರಕ್ಕೆ ತಮ್ಮ ಸರಕನ್ನೆಲ್ಲ ಸಾಗಿಸಿದರು.

ಬಾದಾಮಿ ನಂಜಪ್ಪನವರೆಂಬುವರು ಹಳೇ ಅಗ್ರಹಾರದ ಪ್ರತಿಷ್ಠಿತ ವ್ಯಕ್ತಿ. ಅವರು ಶರಣರ ಮಹಾಸಂಕಲ್ಪವನ್ನು ಬಲ್ಲವರು. ಉದಾರಿಗಳು ಅವರು ಶರಣರನ್ನು ಕಂಡು ಸ್ವಸಂತೋಷದಿಂದ "ನಮ್ಮ ಛತ್ರದ ಒಂದು ಭಾಗವನ್ನು ನಿಮಗೆ ಪೂರ್ಣವಾಗಿ ಬಿಟ್ಟು ಕೊಡುತ್ತೇವೆ. ಅಲ್ಲಿ ನಿಮ್ಮ ಸಮಾಜ ಸೇವೆ, ಸಾಹಿತ್ಯ, ಸಿದ್ಧಾಂತ ಸೇವಾ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗಬಹುದು" ಎಂದು ಹೇಳಿದ್ದರಂತೆ. ಶರ ಣರು ಶಿವನೇ ಈ ರೂಪದಲ್ಲಿ ತಮಗೆ ತಿಳಿಸಿದನೆಂದು ಬಹಳ ಸಂತೋಷದಿಂದ ಅಲ್ಲಿಗೆ ಹೋದರು. ಇಷ್ಟೇ ಅಲ್ಲ ೧೯೬೬ರ ಕೊನೆಯ ತಮ್ಮ ದಿನಗಳ ವರೆಗೂ ಅಲ್ಲಿಯೇ ತಮ್ಮ ಚಟುವಟಿಕೆಗಳನ್ನು ಮುಂದುವರಿಸಿದರು. ಇಲ್ಲಿದ್ದಾಗಲೇ ಶರಣರ ತಮ್ಮ ಬಹು ಮಹ ತ್ವದ ಗ್ರಂಥಗಳನ್ನು ಪ್ರಕಟಿಸಿದರು.

(೫)

೧೯೪೭ನೆಯ ಇಸ್ವಿ ಜೂನ್ ಮೊದಲನೆಯ ದಿನಾಂಕ. ಶಿವೇಚ್ಛೆಯಿಂದ ನಾನು ಶರಣರ ಹತ್ತಿರವೇ ಇರುವ ಪ್ರಸಂಗವನ್ನು ಶಿವನೇ ಕರುಣಿಸಿದನೆನ್ನಬೇಕು. ಶಿಕ್ಷಣ ಇಲಾಖೆಯವರು ನನ್ನನ್ನು ಕನ್ನಡ ಪಂಡಿತ ಪರೀಕ್ಷೆಗಾಗಿ ವ್ಯಾಸಂಗ ಮಾಡಲು ಇಲಾಖೆ ಯಿಂದ ಆರಿಸಿ ಮೈಸೂರಿಗೆ ಕಳಿಸಿಕೊಟ್ಟರು. ಮೈಸೂರಿಗೆ ಬಂದೊಡನೆಯೇ ನಾನು ಪ್ರಥಮತಃ ಶರಣರನ್ನು ಕಂಡು ನಡೆದ ವೃತ್ತಾಂತವನ್ನೆಲ್ಲ ತಿಳಿಸಿದೆ. ಶರಣರಿಗೆ ಬಹು ಸಂತೋಷವಾಯಿತು. "ಆಯಿತು ಒಳ್ಳೆಯದಾಯಿತು. ನನ್ನಲ್ಲಿ ಶಬ್ದಮಣಿದರ್ಪಣ ಶಬ್ದಾನು ಶಾಸನಗಳಿವೆ. ಅವನ್ನೇನೂ ಕೊಳ್ಳಬೇಡ ಹುಡುಕಿ ಕೊಡುತ್ತೇನೆ ಎಂದು ಆಗಲೇ ಹುಡುಕಿ ಕೈಗೆ ಕೊಟ್ಟು ಬಿಟ್ಟರು. ಚೆನ್ನಾಗಿ ಓದು." ಎಂದು ಹೇಳುತ್ತ ಕಳೆದ ಆರೇಳು ತಿಂಗಳುಗಳಿಂದ ನಡೆದ ಘಟನೆಗಳನ್ನೆಲ್ಲ ತಿಳಿಸಿದರು. ನಾನು ಅವರ ಆಶೀರ್ವಾದ ಪಡೆದು ಬೇರೆ ಒಂದು ಕೊಠಡಿಯನ್ನು ಮಾಡಿಕೊಂಡು ನನ್ನ ಕರ್ತವ್ಯದಲ್ಲಿ ನಿರತನಾಗಿ ಬಿಡುವಿನ ಸಮಯದಲ್ಲಿ ಅವರ ಬಳಗೆ ಹೋಗಿ ನನ್ನ ಸೇವೆಯನ್ನು ಸಲ್ಲಿಸುತ್ತ ವಿದ್ಯಾರ್ಥಿ ಜೀವನದಲ್ಲಿ ಕಾಲಯಾಪನೆ ಮಾಡತೊಡಗಿದೆ. ಶರಣರು ಕೊಟ್ಟ 'ಶಬ್ದಮಣಿದರ್ಪಣ' ಅವರ ಆಶೀರ್ವಾದದ ಕುರುಹಾಗಿ ನನ್ನ ಬಳಿ ಇನ್ನೂ ಇದೆ. ಅದನ್ನು ನೋಡಿದಾಗ ಲೆಲ್ಲ ಅಂದಿನ ಶರಣರ ಜೀವನದ ಸಮಗ್ರ ಚಿತ್ರ ಕಣ್ಮುಂದೆ ಬಂದು ಹೋಗುತ್ತದೆ. ಶಬ್ದಾನುಶಾಸನವನ್ನು ಮಾತ್ರ ನಾನು ಇಟ್ಟುಕೊಳ್ಳಲಿಲ್ಲ. ಅವರಿಗೇ ಅನಂತರ ಹಿಂದಿರುಗಿಸಿದೆ.

ನಾನು ಮೈಸೂರಿನಲ್ಲಿ ನಾಲ್ಕು ವರ್ಷಗಳು ವ್ಯಾಸಂಗ ಜೀವನದಲ್ಲಿ ಇದ್ದಷ್ಟು ಕಾಲವೂ ಶರಣರ ಸೇವೆಯನ್ನು ಅಷ್ಟಿಷ್ಟು ಮಾಡಬೇಕೆಂದು ಅಪೇಕ್ಷೆಪಟ್ಟು ಅವರಲ್ಲಿಗೆ ಹೋಗುತ್ತಿದ್ದೆ. ಆದರೆ ನಮ್ಮ ಸೇವೆಯನ್ನು ಪಡೆಯಲು ಅವರೇ ಇಚ್ಛಿಸುತ್ತಿರಲಿಲ್ಲ. "ನನ್ನ ಕೆಲಸ ಕಾರ್ಯ ನನಗೆ, ನಿನ್ನ ಓದು ನಿನಗೆ ಚೆನ್ನಾಗಿ ಓದಿ ಜಾಣನಾದರೆ ಅಷ್ಟೇ ಸಾಕು" ಎಂದು ಎಷ್ಟೋ ಸಲ ಅವರೇ ಹೇಳಿ ನಮ್ಮ ಸೇವೆಯನ್ನು ನಿರಾಕರಿಸುತ್ತಿದ್ದರು. ನನಗೆ ಅವರು ಹಾಕಿಕೊಳ್ಳುವ ಕೋಟು, ಷರಟು, ಹೊದ್ದುಕೊಳ್ಳುವ ದುಪ್ಪಟ್ಟಿ, ಪೇಟಾ, ಪಂಚೆ ಇವನ್ನೆಲ್ಲ ಚೆನ್ನಾಗಿ ತೊಳೆದು ಸ್ವಚ್ಛ ಮಾಡಿ ಕೊಡಬೇಕೆಂದು ಅವುಗಳ ಮೇಲೆಯೇ ಕಣ್ಣು. ಒಮ್ಮೆ ಒತ್ತಾಯ ಮಾಡಿ ಒಪ್ಪಿಸಿ ಎಲ್ಲವನ್ನು ತೊಳೆಯಲು ಸಿದ್ಧನಾದೆ. ನನಗೆ ಅವರ ಬಟ್ಟೆ ಬರೆಗಳನ್ನು ತೊಳೆಯುವ, ಹಿಂಡುವ ವಿಧಾನದ ಬಗೆಗೆ ಹಾವೇರಿಯಲ್ಲಿದ್ದಾಗ ಹೇಳಿದ ಸಲಹೆಗಳು ಜ್ಞಾಪಕದಲ್ಲಿದ್ದುವು.ಆದರೆ ಅಂದಿಗಿಂತ ಇಂದು ಅವರ ಹೆದರಿಕೆ ಕಡಿಮೆಯಾಗಿತ್ತು. ಎರಡು ಬೈದರೆ ನಾನೇನೂ ಈಗ ಅಂಜು ತ್ತಿರಲಿಲ್ಲ. ಹೊಡೆಯುವ ಭಯವಂತೂ ಇರಲಿಲ್ಲ. ಹಾವೇರಿಯಲ್ಲಿದ್ದಾಗ ಬಡಿದಾರೆಂಬ ಭಯವಿತ್ತು. ಎಲ್ಲ ಬಟ್ಟೆಗಳನ್ನು ತಂದು ನೆನಿಸಿ, ಸೋಪು ಹಚ್ಚಿ ಸ್ವಲ್ಪ ಹೊತ್ತು ನೆನೆ ಯಿಟ್ಟೆ. ಅಷ್ಟರಲ್ಲಿ ಶರಣರು ಅಲ್ಲಿಗೆ ಬಂದು "ಇವನ್ನು ಕಲ್ಲಿಗೆ ಹಾಕಿ ಚೆನ್ನಾಗಿ ಬಡಿಯ ಬೇಡ; ಸೋಪು ಹಚ್ಚಿದ್ದೀಯೆ ಹಾಗೆ ಮೆತ್ತಗೆ ಕಲ್ಲ ಮೇಲೆ ಕುಕ್ಕಿ ಸೋಪು ಬಟ್ಟೆಯ ಎಲ್ಲ ಭಾಗಕ್ಕೂ ಇಳಿಯುವಂತೆ ಮಾಡಿ ನೀರಿನಲ್ಲಿ ಜಾಲಾಡಿ ಹಿಂಡಿ ಹಾಕಿ ಬಿಡು ಕೋಟು ಜೋಕೆ. ಅದನ್ನು ಮನಸ್ಸಿಗೆ ಕಲ್ಲಿಗೆ ಬಡಿದರೆ ಬಹಳ ಮುರಿ ಮಾಡಿ ಹಿಂಡಿದರೆ

ಹೊಲಿಗೆಗಳೆಲ್ಲ ಬಿಚ್ಚಿ ಹೋಗುತ್ತವೆ." ಎಂದು ಹೇಳುತ್ತ ತಾವು ಸ್ನಾನ ಶಿವಪೂಜೆಗೆ ಹೋದರು. ನಾನು ಅವರು ಹೇಳಿದ ಹೇಳಿಕೆಗಳನ್ನೆಲ್ಲ ಅತಿಕ್ರಮಿಸಿದೆ. ಅವರು ಕೊಟ್ಟ ಸೋಪಲ್ಲದೆ ಬೇರೆ ಉತ್ತಮ ಸೋಪೊಂದನ್ನು ತಂದು, ಎಲ್ಲ ಬಟ್ಟೆಗಳಿಗೂ ಸೋಪನ್ನು ಚೆನ್ನಾಗಿ ಹಚ್ಚಿ ಚೆನ್ನಾಗಿಯೇ ಕಲ್ಲ ಮೇಲೆ ಒಗೆಯುತ್ತ ಕೊಳೆಯನ್ನೆಲ್ಲ ಕಳೆದು ಶುಭ್ರ ಗೊಳಿಸಿ ಹಿಂಡಿ ಒಣ ಹಾಕಿದೆ. ಅಂದು ನನಗೆ ಬಹು ತೃಪ್ತಿಯಾಯಿತು. ಶರಣರು ಶಿವಪೂಜೆ ಪ್ರಸಾದ ಮುಗಿಸಿ ಬರುವಷ್ಟರಲ್ಲಿ ಮೂರು ಘಂಟೆಯಾಗಿತ್ತು. ಬಟ್ಟೆಗಳೆಲ್ಲ ಬಿಸಿಲಲ್ಲಿ ಚೆನ್ನಾಗಿ ಒಣಗಿದ್ದುವು. ಕೋಟು ಪರಟು ರುಮಾಲಗಳನ್ನು ಹಸಿಯಿರು ವಾಗಲೇ ಚೆನ್ನಾಗಿ ತಿದ್ದಿ ತೀಡಿ ಒಣ ಹಾಕಿದ್ದರಿಂದ ಅವು ಸುಕ್ಕಿಲ್ಲದೆ ಇಸ್ತ್ರಿ ಮಾಡಿದ ಹಾಗೆ ಕಾಣುತ್ತಿದ್ದವು. ಅವನ್ನೆಲ್ಲ ಒಣಗಿದ ಕೂಡಲೆ ಮಡಿಕೆ ಮಾಡಿ ಅವರು ಕೂಡುವ ಬೆಂಚಿನ ಮೇಲೆ ತಂದು ಇಟ್ಟಿದ್ದೆ. ಬಂದು ಬಟ್ಟೆಯನ್ನು ನೋಡಿ, ಒಮ್ಮೆ ನಕ್ಕರು. ಆಗ ನನಗೆ ಹಿಡಿಸಲಾರದ ಆನಂದ. ನಾನು ಬಟ್ಟೆಗಳನ್ನು ಕಲ್ಲಿಗೆ ಹಾಕಿ ಬಡಿದದ್ದು ಅವರ ಕಿವಿಗೆ ತಾಕಿರಬೇಕು. ಏಕೆಂದರೆ ಶಿವಪೂಜೆ ಮನೆಗೂ ಬಟ್ಟೆ ತೊಳೆಯುವ ಸ್ಥಳಕ್ಕೂ ಬಹುದೂರವೇನೂ ಇರಲಿಲ್ಲ. ಈ ಕಾರಣದಿಂದಲೋ ಅಥವಾ ನಾನು ಕೊಟ್ಟ ಸೋಪಿ ಗಿಂತ ಹೆಚ್ಚಾಗಿ ಸೋಪನ್ನು ಇವನೇ ಬಳಸಿರಬಹುದೆಂಬ ಸಂಶಯ ಬಂದೊ ಏನೋ ಮತ್ತೊಮ್ಮೆ ಬಟ್ಟೆ ತೊಳೆಯಲು ನನಗೆ ಮಾತ್ರ ಎಂದೂ ಕೊಡಲಿಲ್ಲ. ಅನೇಕ ಸಲ ನಾನು ಬಟ್ಟೆ ತೊಳೆದು ಕೊಡುತ್ತೇನೆಂದು ಕೇಳಿದ ಕೇಳಿಕೆಗಳೆಲ್ಲವೂ ವ್ಯರ್ಥವಾಗಿ ಹೋದವು.

ನನಗೆ "ನೀನೂ ಇಲ್ಲಿಯೇ ಊಟ ಮಾಡು ನಿನಗೂ ಅಡಿಗೆ ಮಾಡಿದ್ದೇನೆ ಪ್ರಸಾದ ಬಹಳ ಚೆನ್ನಾಗಿದೆ" ಎಂದರು. ನಾನು ಸ್ನಾನಾದಿಗಳನ್ನು ಮುಗಿಸಿದ್ದೆನಾಗಿ ಅಡಿಗೆ ಮನೆಯನ್ನು ಪ್ರವೇಶಿಸಿದೆ. ಆ ದಿನದ ಅವರ ಪ್ರಸಾದವೆಂದರೆ ಒಂದೇ ಪಾತ್ರೆಯಲ್ಲಿ ಅಕ್ಕಿ, ಬೇಳೆ, ಹುಳಿ, ಸಂಬಾರ ಪುಡಿ, ಕಾರ, ಸೊಪ್ಪು, ಈರುಳ್ಳಿ, ಸ್ವಲ್ಪ ಗೋದಿಯ ರವೆ, ಎಣ್ಣೆ ಎಲ್ಲವನ್ನು ಹಾಕಿ ಬೇಯಿಸಿ ತಿರುವಿದ ಕೂಟು. ಇಂಥ ವಿಚಿತ್ರ ಪ್ರಸಾದ ವನ್ನು ತೆಗೆದುಕೊಳ್ಳುವ ಅಭ್ಯಾಸವಿಲ್ಲದ ನನಗೆ ಆ ಪ್ರಸಾದ ಹಿಡಿಸಿತೋ ಇಲ್ಲವೋ ಆ ಪ್ರಶ್ನೆ ಬೇರೆ. ಪ್ರಸಾದವನ್ನು ಹಾಗೂ ಹೀಗೂ ಕಷ್ಟಪಟ್ಟು ಮುಗಿಸಿ, ಪಾತ್ರೆಗಳನ್ನೆಲ್ಲ ತಿಕ್ಕಿ ತೊಳೆದು ಅಡಿಗೆ ಮನೆಯನ್ನು ಸ್ವಚ್ಛಗೊಳಿಸಿ ಹೊರಗೆ ಬಂದೆ. ಅಷ್ಟರಲ್ಲಿ ಮಡಿ ಬಟ್ಟೆಗಳನ್ನು ಧರಿಸಿ ಬೆಂಚಿನ ಮೇಲೆ ದುಂಡಗೆ ಕುಳಿತು ತಮ್ಮ ಹತ್ತು ನಿಮಿಷಗಳ ಕಣ್ಣು ಮುಚ್ಚುವಿಕೆಯ ಶಾಸ್ತ್ರ ಮುಗಿಸಿದ್ದರು. ಅಂದು ಅವರು ಅತಿ ಶುಭ್ರ ವಸ್ತುಗಳನ್ನು ಧರಿಸಿ ಕುಳಿತದ್ದನ್ನು ಕಂಡ ನನಗೆ ಆದಾದ ತೃಪ್ತಿಗೆ ಸಮಾನವಾದ ತೃಪ್ತಿಯನ್ನು ಪುನಃ ಎಂದೂ ಕಾಣಲಾಗದೇ ಇಲ್ಲ. ಅವರು ನನ್ನ ಮುಖ ನೋಡಿ ಒಮ್ಮೆ ನಕ್ಕು "ಈ ದಿನ ನನ್ನನ್ನು ಒಳ್ಳೆಯ ಮದುವೆಯ ಗಂಡು ಕಾಣುವ ಹಾಗೆ ಮಾಡಿ ಬಿಟ್ಟಿದ್ದೀಯೆ ಬಿಡಪ್ಪಾ" ಎಂದು ತಮ್ಮ ಕೋಟು ಅಂಗಿ ಪಂಚೆಗಳನ್ನೊಮ್ಮೆ ನೋಡಿ ಮತ್ತೊಮ್ಮೆ ನಕ್ಕು ನುಡಿದು "ನೀನಿನ್ನು ನಿನ್ನ ಅಭ್ಯಾಸ ಮಾಡಿಕೋ ಹೋಗಪ್ಪ" ಎಂದರು. ನಾನು ಹೊರಟು ಹೋದೆ.

(೬)

ಮತ್ತೊಮ್ಮೆ ಕೆಲವು ದಿನಗಳ ನಂತರ ಶರಣರ ಕೊಠಡಿಗೆ ಬಂದೆ. ನಮ್ಮ ಕಾಲೇಜಿಗೆ ಎರಡು ಮೂರು ದಿನಗಳ ರಜೆಯಿತ್ತು. ಅವರ ವಿಶಾಲವಾದ ಆ ಕೊಠಡಿಯನ್ನು ಸ್ವಚ್ಛಗೊಳಿಸಿ ಪುಸ್ತಕಗಳನ್ನೆಲ್ಲ ಸರಿಪಡಿಸಿ ಓರಣವಾಗಿ ಹೊಂದಿಸಿ ಒಂದು ರೀತಿಯಲ್ಲಿ ಅಚ್ಚುಕಟ್ಟುಗೊಳಿಸಬೇಕೆಂದು ನನ್ನ ಬಹು ದಿನದ ಬಯಕೆಯಾಗಿತ್ತು. ಅದು ಮಹಡಿಯ ಮೇಲಿಣ ಕೊಠಡಿ, ಆ ಕೊಠಡಿಯು ತುಂಬಾ ಗ್ರಂಥರಾಶಿ. ಒಂದುಕಡೆ ಸದ್ಧರ್ಮ ದೀಪಿಕೆಯ ಹೆಚ್ಚುವರಿ ಉಳಿದ ಪ್ರಶ್ನೆಗಳು; ಈ ಪತ್ರಿಕೆಗಳೇ ಕೊಠಡಿಯಲ್ಲಿ ಉಪಕೊಠಡಿಯನ್ನಾಗಿ ಮಾಡಿದ ಗೋಡೆಯಾಗಿತ್ತು. ಇನ್ನೊಂದುಕಡೆ ಪ್ರಕಟಗೊಂಡು ಖರ್ಚಾಗದೆ ಉಳಿದ ಗ್ರಂಥಗಳ ರಾಶಿ. ಮತ್ತೊಂದು ಕಡೆ ಓಲೆ ಗ್ರಂಥಗಳ ಸಾಲು. ಮಗುದೊಂದೆಡೆ ಹಾವೇರಿಯಲ್ಲಿ ಮುದ್ರಣಗೊಂಡ ಹಳೆಗಾಲದ ಚಿಕ್ಕಚಿಕ್ಕ ಪುಸ್ತಕದ ಸಾಲು ಹೊರೆಗಳು. ಇವೆಲ್ಲವೂ ಕೊಠಡಿಯನ್ನು ಐದಾರು ಭಾಗಗಳನ್ನಾಗಿ ಮಾಡಿದ್ದವು. ಈ ಕೊಠಡಿಯಲ್ಲಿ ಒಂದೇ ಒಂದು ಕಾಲುದಾರಿ ಅಂಕುಡೊಂಕಾಗಿ ಹರಿದು ಬಿಸಿಲು ಮಚ್ಚಿನ ಬಾಗಿಲ ಕಡೆಗೆ ಹೋಗಿತ್ತು. ಬಿಸಿಲು ಮಚ್ಚಿನ ಮೇಲೆಯೇ ಚಿಕ್ಕದಾಗಿ ಮಾಡಿಕೊಂಡ ಒಂದು ಶಿವ ಪೂಜಾ ಗೃಹ, ಸ್ನಾನದ ಮನೆ, ಅಡಿಗೆಯ ಮನೆಗಳು ಇದ್ದುವು. ಈ ಶಿವಪೂಜಾ ಗೃಹಕ್ಕೆ ಹೋಗಲು ಈ ಸಾಹಿತ್ಯ ಸರಸ್ವತೀ ಭಾಂಡಾಗಾರದ ಮಧ್ಯೆ ಇದ್ದ ಅಂಕುಡೊಂಕಾದ ಚಕ್ರವ್ಯೂಹ ಮಾರ್ಗದಲ್ಲಿ ಹರಿದು ಸಾಗಬೇಕಾಗಿತ್ತು. ಇದನ್ನು ಸರಿಪಡಿಸುತ್ತೇನೆಂದು ಕೇಳಿಕೊಂಡ ನನ್ನ ಪ್ರಾರ್ಥನೆಗೆ ಮನ್ನಣೆ ಸಿಕ್ಕರು ಒಂದೆರಡು ಕರಾರುಗಳ ಮೇಲೆ ಯಾವ ಕಾಗದವನ್ನೂ ಹೊರಗಡೆ ಬಿಸಾಡಕೂಡದು. ಬಿಸಾಡುವ ಕಾಗದ ವಿದ್ದರೆ ಅದನ್ನು ನನ್ನ ಗಮನಕ್ಕೆ ತಂದು ಬಿಸಾಡಬೇಕು. ಪುಸ್ತಕಗಳ ಕಟ್ಟುಗಳು ಎಲ್ಲೆಲ್ಲಿಯೋ ಅಲ್ಲಲ್ಲಿಯೇ ಇರಬೇಕು...... ಇತ್ಯಾದಿ ಇತ್ಯಾದಿ.

ಸರಿಪಡಿಸುವ ಕಾರ್ಯ ಸಾಗಿತು. ಬಿಡಿ ಪುಸ್ತಕಗಳನ್ನು ಕಟ್ಟಿಟ್ಟು, ಓಲೆಯ ಗ್ರಂಥಗಳನ್ನೆಲ್ಲ ಕ್ರಮವಾಗಿ ಕಟ್ಟಿಟ್ಟು, ವಾಲಿಕೊಂಡು ನಿಂತಿದ್ದ ಪುಸ್ತಕಗಳ ಮತ್ತು ಖರ್ಚಾಗದೆ ಉಳಿದ ಸದ್ಧರ್ಮ ದೀಪಿಕೆಗಳನ್ನು ಬುಡಮಟ್ಟದಿಂದ ಕಿತ್ತು, ನೆಟ್ಟಗೆ ಗೋಡೆಗಳಂತೆ ಮಾಡಿ, ಅನಂತರ ಕಸವನ್ನು ಒಂದುಕಡೆಯಿಂದ ಗೂಡಿಸಿಕೊಂಡು ಒಂದು ಒಂದುಕಡೆ ಗುಡ್ಡೆ ಮಾಡಿಕೊಂಡು ಅಲ್ಲಿರುವ ಕಾಗದ ಮೊದಲಾದುವುಗಳ ಸಂಶೋಧನೆಗೆ ಕುಳಿತೆ. ಕಸದ ಗುಡ್ಡೆಯಲ್ಲಿ ಅನೇಕ ಕಾಗದಗಳು, ಕವರುಗಳು ಹಳತಾಗಿ ಯಾವ ಉಪಯೋಗಕ್ಕೂ ಬಾರದವುಗಳೆಂದು ನಮ್ಮ ದೃಷ್ಟಿಯಲ್ಲಿನ ಕಾಗದಗಳೂ ಕೂಡ ಶ್ರೀ ಶರಣರ ದೃಷ್ಟಿಯಲ್ಲಿ ಉಪಯೋಗವಾದುವುಗಳೂ ಕೆಲವು ಇದ್ದುವು. ಅವುಗಳನ್ನು ಅವರೇ ಪರೀಕ್ಷಿಸತೊಡಗಿದರು. ಬೇಕಾದುವುಗಳನ್ನು ತೆಗೆದುಕೊಂಡು ಬೇಡವಾದವುಗಳನ್ನು ಒಂದೆಡೆಗೆ ಕೂಡಿಸಿ ಸಣ್ಣ ಸಣ್ಣ ಕರಿಕೆಗಳನ್ನಾಗಿ ಕಟ್ಟಿಡು ಒಲೆಯುರಿಗೆ ಬರುತ್ತವೆ ಎಂದು ಹೇಳಿ ನನ್ನ ಕೈಗೆ ಕೊಡುತ್ತಿದ್ದರು. ನಾನು ಹಾಗೆಯೇ ಮಾಡುತ್ತಿದ್ದೆ. ಇದ್ದಕ್ಕಿದ್ದಂತೆ ನನ್ನ ಕೈಗೆ ಎರಡು ಹಳೆಯ ಕವರುಗಳು ಸಿಕ್ಕವು. ಅವುಗಳಲ್ಲಿ ಏನೇನೋ ಕಾಗದಗಳಿರುವುದನ್ನು ಕಂಡು ಆ ಕವರುಗಳನ್ನು ಬಿಚ್ಚಿ ನೋಡಿದೆ. ಒಂದು ಕವರಿನಲ್ಲಿ ಎಪ್ಪತ್ತೈದು ರೂಪಾಯಿಗಳ ನೋಟುಗಳು ಇದ್ದವು. ನಾನು "ಇದೇನು ! ಈ ಕವರಿನಲ್ಲಿ ನೋಟು

ಗಳಿವೆಯಲ್ಲಾ !" ಎಂದೆ. ಶರಣರು "ಎಲ್ಲಿ ಸಿಕ್ಕಿತಪ್ಪ ! ಅದು ? ನೋಡು ! ಎಷ್ಟೋ ದಿನ ಹುಡುಕಿದೆ. ಎಲ್ಲಿ ಹೋಯಿತೋ ಎಂದುಕೊಂಡಿದ್ದೆ ಸಿಕ್ಕಿತಲ್ಲಾ ! ನಮ್ಮಂಥವರ ದುಡ್ಡನ್ನು ಶಿವನೇ ಹುಡುಕಿಕೊಡುತ್ತಾನಪ್ಪ !" ಎಂದರು ಅವರಿಗೆ ಎಲ್ಲವೂ ಶಿವನ ಲೀಲೆಯೇ. ಕಳೆಯುವವನೂ ಅವನೇ ಹುಡುಕಿಕೊಡುವವನೂ ಅವನೇ; ಈ ಭಾವನೆ. ಇನ್ನೊಂದು ಕವರಿನಲ್ಲಿ ಹಳೆಗಾಲದ ಸ್ಟಾಂಪುಗಳು, ಕಾಲಾಣೆ ಕಿಮ್ಮತ್ತಿನ ಕಾರ್ಡುಗಳು– ಇದ್ದವು. ಅವನ್ನು ನಾನು ತೆಗೆದು ನೋಡಿ ತೋರಿಸಿದೆ. ಅವರು ನೋಡಿ–"ಹೌದು ಯಾವಾಗಲೋ ಶಿರಾಳಕೊಪ್ಪದಲ್ಲಿದ್ದಾಗ ಕೊಂಡಿಟ್ಟವು. ಮರೆತಿದ್ದೆ. ಬೇಕಾದರೆ ಇವನ್ನು ನೀನು ಉಪಯೋಗಿಸಬಹುದು" ಎಂದರು. ಇದರಂತೆ ಕಸದ ಗುಡ್ಡೆಗೆ ಬಂದಿದ್ದ ಎಲ್ಲ ಕಾಗದಗಳ ಪರೀಕ್ಷೆಯನ್ನು ಕ್ರಮಪಾಗಿ ಮಾಡಿದೆವು. ಕೆಲವು ಕಾಗದಗಳ ಮೇಲೆ ಶರಣರು ತಮಗೆ ನೆನಪು ಆದಾಗಲೆಲ್ಲ ಬರೆದಿಟ್ಟುಕೊಂಡಿದ್ದ ಅನೇಕ ಟಿಪ್ಪಣಿಗಳು, ಶ್ಲೋಕಗಳು ಇದ್ದುವು. ಅವುಗಳನ್ನೆಲ್ಲ ತಕ್ಕೊಂಡರು. ಉಳಿದ ಕಾಗದಗಳನ್ನೆಲ್ಲ ಅವರೇ ಮತ್ತೊಮ್ಮೆ ಪರೀಕ್ಷಿಸಿದರು ಅವನ್ನು ಸಣ್ಣ ಸಣ್ಣ ಕಂತೆಗಳನ್ನಾಗಿ ಮಾಡಿ ಕಟ್ಟಿಟ್ಟೆನು.

ಬಾದಾಮಿ ನಂಜಪ್ಪನವರ ಛತ್ರಕ್ಕೆ ಬಂದ ಮೇಲೆ ಶ್ರೀ ಶರಣರು ಬಹಳ ಮಾನಸಿಕ ನೆಮ್ಮದಿ ಪಡೆದರೆಂದು ನನ್ನ ಅನುಭವಕ್ಕೆ ಬಂದ ವಿಷಯ. ಅದು ಅವರ ಸ್ವತಂತ್ರ ಸ್ಥಾನವೆಂದೇ ಅವರು ತಿಳಿದಿದ್ದರು. ಶಿವನ ಕಾರುಣ್ಯದಿಂದಲೇ ಈ ಸ್ಥಾನ ನಮಗೆ ಲಭ್ಯವಾದುದೆಂದೇ ಅವರು ಭಾವಿಸಿದ್ದರು. ಶಿವನ ನಿಬ್ಬೆರಗಿನಲ್ಲಿ ಮುಳುಗಿಹೋದ ಅವರು ಇನ್ನೇನೆಂದು ತಿಳಿಯಲು ಸಾಧ್ಯ ! ಶರಣರು ಸುಖ ದುಃಖಗಳೆರಡನ್ನೂ ಶಿವನ ಕಾರುಣ್ಯವೆಂದೇ ತಿಳಿಯುತ್ತಿದ್ದರು. ಅತ್ಯಂತ ಸಂದಿಗ್ಧ ಪರಿಸ್ಥಿತಿಗಳು ಅವರಿಗೆ ಉಂಟಾದಾಗಲೂ, 'ಶಿವನೇ ಹೀಗಾಗಬೇಕೆಂದು ಕರುಣಿಸಿದಂತೆ ತೋರುತ್ತದೆ' ಎನ್ನುತ್ತಿದ್ದರು. ಬಾದಾಮಿ ನಂಜಪ್ಪನವರು ಶರಣರಿಂದ ಏನನ್ನೂ ಅಪೇಕ್ಷಿಸದೆ ತಮ್ಮ ಜೀವಿತಾವಧಿಯವರೆಗೆ ಶರಣರು ಶಿವನ ಕೆಲಸವೆಂದು ಹೇಳುವ ಎಲ್ಲ ಕಾರ್ಯಗಳನ್ನು ಮಾಡಿಕೊಂಡು ಹೋಗಲಿ ಎಂದುಕೊಂಡೇ ಕಟ್ಟಡದ ಮೇಲುಭಾಗವನ್ನು ಬಿಟ್ಟುಕೊಟ್ಟಿದ್ದರಲ್ಲದೆ ಮುಂದೆ ನಾಲ್ಕೈದು ವರ್ಷಗಳ ನಂತರ ಕೆಳಭಾಗದ ಒಂದು ದೊಡ್ಡ ಕೊಠಡಿಯನ್ನೂ ಬಿಟ್ಟುಕೊಟ್ಟರು. ಅದರಲ್ಲಿ ಪ್ರಯತ್ನ ಮಾಡಿ ತಮ್ಮದೇ ಆದ ಒಂದು ಸ್ವತಂತ್ರ ಮುದ್ರಣಾಲಯವನ್ನು ಮಾಡಬೇಕೆಂಬ ಸಂಕಲ್ಪವನ್ನು ಶರಣರು ಇಟ್ಟುಕೊಂಡಿದ್ದರು. ಇಲ್ಲಿಯವರೆಗೆ ಪತ್ರಿಕೆಯನ್ನೂ ಗ್ರಂಥಗಳನ್ನೂ ವಿಜಯಲಕ್ಷ್ಮಿ ಪ್ರೆಸ್, ರಘುವೀರ ಪ್ರೆಸ್‌ಗಳಲ್ಲಿ ಮುದ್ರಣ ಮಾಡಿಸುತ್ತಿದ್ದರು. ಒಮ್ಮೆ ಹುಬ್ಬಳ್ಳಿಯ ಆದರ್ಶ ಪ್ರೆಸ್ಸಿನಲ್ಲಿಯೂ ಮುದ್ರಣ ಮಾಡಿಸಿ ರೈಲಿನಲ್ಲಿ ತರಿಸಿದ್ದುಂಟು. ಹೀಗಾಗಿ ಬರಬರುತ್ತ ಪತ್ರಿಕೆ ನಡೆಸುವುದು ಅವರಿಗೆ ತುಂಬಾ ಶ್ರಮವಾಗತೊಡಗಿತು. ಆದ್ದರಿಂದಲೇ ಸಮಾಜದ ಗಮನಕ್ಕೆ ತಮ್ಮ ಕುಂದು ಕೊರತೆಗಳನ್ನು ಹೇಳಿಕೊಂಡು ತಾ. ೧–೧೦–೪೯ರ ದಸರಾ ಹಬ್ಬದ ದಿನ ಸದ್ಧರ್ಮ ದೀಪಿಕೆ ಕಾರ್ಯಾಲಯದಲ್ಲಿಯೇ ಶ್ರೀ ಮ. ನಿ. ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳವರು ಆನಂದಪುರ ಮಹಾ ಸಂಸ್ಥಾನಮಠ ಅವರ ಅಧ್ಯಕ್ಷತೆಯಲ್ಲಿ ಒಂದು

ಸಭೆಯನ್ನು ಕರೆದರು.[1] ಹಾವೇರಿ ಹುಕ್ಕೇರಿಮಠದ ಶಿವಲಿಂಗಸ್ವಾಮಿಗಳು, ಶಿರಸಿ ಬಣ್ಣದಮಠದ ಗುರುಸಿದ್ಧಸ್ವಾಮಿಗಳು, ಹುಬ್ಬಳ್ಳಿ ಹೊಸಮಠದ ಶಿವಬಸವಸ್ವಾಮಿಗಳು, ಹಾಸನದ ಜವರನಹಳ್ಳಿ ಮಠದ ಸದಾಶಿವಸ್ವಾಮಿಗಳು, ಬಾದಾಮಿ ನಂಜಪ್ಪನವರು (ಮೈಸೂರು), ಜಯಬಸವರಾಜದೇವರು ಮೈಸೂರು—ಇವರೇ ಮೊದಲಾದವರು ಸಭೆಯಲ್ಲಿ ಹಾಜರಾಗಿ ಈ ಕೆಳಗಿನ ನಿರ್ಣಯಗಳನ್ನು ಮಾಡಿದರು.

೧) ಮೈಸೂರಿನಲ್ಲಿ 'ಸದ್ಧರ್ಮ ದೀಪಿಕೆಯು' ವೀರಶೈವ ಸಮಾಜಸೇವೆಯನ್ನು ಮಾಡುತ್ತ ಇರುವುದು ಸಮಾಜಕ್ಕೆ ಅತ್ಯವಶ್ಯಕವಾದ ಕಾರ್ಯವೆಂಬುದಾಗಿ ಸರ್ವಾನುಮತದಿಂದ ನಿರ್ಧರಿಸಲಾಯಿತು.

೨) ಈ ಪತ್ರಿಕೆಯ ಪ್ರಕಟನೆಗಾಗಿ ಒಂದು ಮುದ್ರಣಾಲಯವಿರುವುದು ಅತ್ಯವಶ್ಯಕವೆಂದೂ ಸಮಾಜದವರು ಅದನ್ನು ಏರ್ಪಡಿಸಲು ಸಹಾಯಮಾಡಬೇಕೆಂದೂ ಸರ್ವಾನುಮತದಿಂದ ನಿರ್ಧರಿಸಲ್ಪಟ್ಟಿತು.

೩) ಈ ಮುದ್ರಣಾಲಯಕ್ಕೆ ಬೇಕಾಗುವ ಅನುಕೂಲ ಮತ್ತು ಮುದ್ರಣಾಲಯದಲ್ಲಿ ಪ್ರಕಟವಾದ ಪುಸ್ತಕ ಪ್ರಸಾರ ಮುಂತಾದ ವಿಷಯಗಳಲ್ಲಿ ಈ ಕೆಳಗೆ ಕಂಡ ನಿರ್ಣಯಗಳಾದುವು.

i) ಅಷ್ಟಾವರಣ ಸಂಬಂಧದ ಚಿಕ್ಕ ಚಿಕ್ಕ ಪುಸ್ತಕಗಳಾಗಬೇಕು.

ii) ಪ್ರೌಢಶಾಲೆಯ ವಿದ್ಯಾರ್ಥಿಗಳು ಧರ್ಮದ ತತ್ತ್ವದ ಕಡೆಗೆ ಗಮನಕೊಡುವಂತೆ ಈಗಿನ ಸೈನ್ಸ್ ಪ್ರಕಾರ ಧರ್ಮತತ್ತ್ವ ಪುಸ್ತಕಗಳನ್ನು ಮುದ್ರಣಮಾಡಿಸುವುದು.

iii) ಸಮಾಜದ ಆಚಾರ ವಿಚಾರಗಳಲ್ಲಿ ಇರತಕ್ಕ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವಂತಹ ಪುಸ್ತಕಗಳು ಮುದ್ರಣವಾಗಬೇಕು. ಮತ್ತು ಮಾಸಪತ್ರಿಕೆಯಲ್ಲಿ ಲೇಖನಗಳನ್ನು ಕೊಡಬೇಕು.

iv) ಹಾಲಿ ಈಗ ಪ್ರಕಟವಾಗುತ್ತಿರುವ ಪತ್ರಿಕೆಗಳಲ್ಲಿರುವ ಧರ್ಮ ಸಂಬಂಧದ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಬೇಕು. ಮತ್ತು ರಾಜಕೀಯವು ಸದ್ಧರ್ಮವನ್ನು ಪಾಲಿಸುವಂತೆ, ಅದರ ಲಕ್ಷ್ಯವನ್ನು ಧರ್ಮದ ಕಡೆಗೆ ಎಳೆಯುವ ಅಭಿಪ್ರಾಯವುಳ್ಳ ಲೇಖನಗಳನ್ನು ಬರೆದು ಪ್ರಕಟಿಸುವಂತೆ ಆಗಬೇಕು.

ಮೇಲೆ ಕಂಡ ಸಮಸ್ತ ನಡುವಳಿಕೆಗಳು ಸಭೆಯಲ್ಲಿ ತೀರ್ಮಾನಗೊಂಡ ಬಳಿಕ ಪತ್ರಿಕಾಲಯ ಅಭಿವೃದ್ಧಿಗೆ ಈ ಕೆಳಗೆ ಕಂಡಂತೆ ಧನಸಹಾಯವನ್ನು ಮಾಡಿದರು.

೧೦೦೧—೦೦ ರೂ. ಶ್ರೀ ಮ. ನಿ. ಜ. ಸಚ್ಚಿದಾನಂದ ಸ್ವಾಮಿಗಳು ಆನಂದಪುರ
೧೦೧—೦೦ ,, ಶಿವಲಿಂಗಸ್ವಾಮಿಗಳು ಹುಕ್ಕೇರಿಮಠ ಹಾವೇರಿ.
೧೦೧—೦೦ ,, ಗುರುಸಿದ್ಧಸ್ವಾಮಿಗಳು ಬಣ್ಣದಮಠ ಶಿರ್ಸಿ.
೧೦೧—೦೦ ,, ಶಿವಬಸವಸ್ವಾಮಿಗಳು ಹೊಸಮಠ ಹುಬ್ಬಳ್ಳಿ.

---

1 ಸದ್ಧರ್ಮ ದೀಪಿಕೆ ಸಂಚಿಕೆ ೭೫-೭೬ರ. ೨೭-೨೮-೨೯ ಪುಟಗಳಲ್ಲಿ ಸಭೆಯ ನಡೆವಳಿಕೆಯೆಲ್ಲ ಪ್ರಕಟವಾಗಿದೆ.

೧೦೧-೦೦ ರೂ. ಸದಾಶಿವಸ್ವಾಮಿಗಳು ಜವಹರನಹಳ್ಳಿ ವಿರಕ್ತಮಠ ಹಾಸನ.
೨೫-೦೦ ,, ಎಸ್. ಎಮ್. ರುದ್ರಾರಾಧ್ಯರು ವಕೀಲರು.
೨೫-೦೦ ,, ಮಹಾಲಿಂಗಪ್ಪ ಸೆಟ್ಟರು ಕೆರೂರು.
೫-೦೦ ,, ಗುರುಲಿಂಗಪ್ಪನವರು ಅಂಕಲಕೋಟಿ, ಹಾವೇರಿ.

ಈ ಧನಸಹಾಯದ ಪಟ್ಟಿಯನ್ನು ಮುಂದುವರೆಸಬೇಕೆಂದು ತೀರ್ಮಾನಿಸಲಾಯಿತು.

ಈ ಸದ್ಧರ್ಮ ದೀಪಿಕೆಯ ಪ್ರಚಾರಕ್ಕಾಗಿ ಒಂದು ಕಮೀಟಿ ಇರಬೇಕೆಂದೂ, ಅದಕ್ಕೆ ತಾತ್ಕಾಲಿಕವಾಗಿ ಈ ಕೆಳಗೆ ಕಂಡಂತೆ ಮೆಂಬರುಗಳು ಇರಬೇಕೆಂದೂ ತೀರ್ಮಾನಿಸಲಾಯಿತು.

| | |
|---|---|
| ಶ್ರೀ ನಿ. ಜ. ಸಚ್ಚಿದಾನಂದ ಸ್ವಾಮಿಗಳು ಆನಂದಪುರ | ಅಧ್ಯಕ್ಷರು |
| ಶ್ರೀ ಗುರುಸಿದ್ಧಸ್ವಾಮಿಗಳು ಬಣ್ಣದಮಠ ಶಿರ್ಸಿ | ಕಾರ್ಯದರ್ಶಿಗಳು |
| ಶ್ರೀ ಶಿವಲಿಂಗಸ್ವಾಮಿಗಳು ಹುಕ್ಕೇರಿಮಠ ಹಾವೇರಿ | ಸಹಾಯಕ ಕಾರ್ಯದರ್ಶಿ |
| ಶ್ರೀ ಪುಟ್ಟಸ್ವಾಮಯ್ಯ ಸಂತೆಮರಳ್ಳಿ ಪಟೇಲರು | ಸದಸ್ಯರು |
| ಶ್ರೀ ಜಯಬಸವ ರಾಜದೇವರು ಮೈಸೂರು | ,, |
| ಶ್ರೀ ಬಾದಾಮಿ ನಂಜಪ್ಪನವರು ಮೈಸೂರು | ,, |
| ಶ್ರೀ ತಾಳ್ಯದ ಪುಟ್ಟಸ್ವಾಮಯ್ಯನವರು | ,, |
| ಶ್ರೀ ಮಾದಪ್ಪ ಇಂಜನಿಯರ್ ಮೈಸೂರು | ,, |

-ಹೀಗೆ ಕಮಿಟಿಯು ಹಲವಾರು ನಿರ್ಣಯಗಳ ನಂತರ ಶುಭಾಶಯಗಳೊಡನೆ ಸಭೆ ಮುಕ್ತಾಯಗೊಂಡಿತು.

(೭)

ಬರಬರುತ್ತ ಶ್ರೀ ಚನ್ನಮಲ್ಲಿಕಾರ್ಜುನರ ಶರಣರ ಅವಿಶ್ರಾಂತ ಶ್ರಮದ ಅರಿವು ಸಮಾಜಕ್ಕೆ ಉಂಟಾಗತೊಡಗಿತು. ಬ್ಯಾಡಿಗಿ ವಿರಕ್ತಮಠದ ಶ್ರೀ ನಿ. ಪ್ರ. ಚನ್ನಬಸವ ಸ್ವಾಮಿಗಳ ಬೆಂಬಲವೂ ಶರಣರಿಗೆ ವಿಶೇಷವಾಗಿ ದೊರೆಯತೊಡಗಿತು. ಈ ಎಲ್ಲ ಕಾರಣಗಳಿಂದ ಮತ್ತು ತಮ್ಮ ಅನೇಕ ವರ್ಷಗಳ ನಿವೃತ್ತಿ ವೇತನ ಒಮ್ಮೆಲೆ ಇವರ ಕೈಸೇರಿದುದರ ಫಲವಾಗಿ ೧೯೫೨ ನೆಯ ಇಸ್ವಿಯಲ್ಲಿ ಅದೇ ಬಾದಾಮಿ ನಂಜಪ್ಪನವರ ಛತ್ರದ ಕೆಳಭಾಗದ ಕೊಠಡಿಯಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿ ತಮ್ಮ ನಿಡುಗಾಲದ ಬಯಕೆಯನ್ನು ಈಡೇರಿಸಿಕೊಂಡರು. ಅದಕ್ಕೆ 'ಸಿದ್ಧೇಶ್ವರ ಪ್ರಿಂಟಿಂಗ್ ಪ್ರೆಸ್' ಎಂದು ನಾಮಕರಣಮಾಡಿ ತೃಪ್ತಿಯ ನಿಟ್ಟುಸಿರು ಬಿಟ್ಟರು. ಸಿದ್ಧೇಶ್ವರ ಮುದ್ರಣಾಲಯ ಮಾಡಿದ ಮೇಲೆ ಆ ಉತ್ತರ ವಯಸ್ಸಿನಲ್ಲಿ. ಕೃಶಾಂಗದಲ್ಲಿ ವಿಕೃತಾಂಗದಲ್ಲಿ ಪ್ರೆಸ್ಸುಗಳಿಗೆ ತಿರುಗಾಡುವ, ಅಲ್ಲಿಂದ ತಮ್ಮ ಪುಸ್ತಕಗಳನ್ನು ಸಾಗಿಸುವ ಶ್ರಮತಪ್ಪಿದುದು ಶಿವನೇ ತಮ್ಮ ಕಷ್ಟವನ್ನು ನೋಡಲಾರದೆ ಅನುಕೂಲ ಮಾಡಿಕೊಟ್ಟನೆಂದು ಅವರು ಪದೇ ಪದೇ ಹೇಳುತ್ತಿದ್ದುದುಂಟು.

ಶರಣರು ತಮ್ಮ ವಾಮಕ್ಷೇಮ, ಹಾನಿವೃದ್ಧಿ, ಮಾನಾಪಮಾನ ಎಲ್ಲವನ್ನೂ ಶಿವನಿಗೇ ಒಪ್ಪಿಸಿ ತಾವು ಶಿವನೆಂಬ ಬಳ್ಳಿಯ ಒಂದು ಕಾಯಿಯಾಗಿ ಬೆಳೆಯಬಿಚ್ಛಿಸು

ತ್ತಿದ್ದವರು. ಮತ್ತು ಹಾಗೆಯೇ ಬೆಳೆದವರೂ ಕೂಡ. ಈಗ ಶರಣರ ಸಂಶೋಧನಾ ಕಾರ್ಯಗಳಿಗೆ ಬಹಳ ಬಿಡುವು ಸಿಕ್ಕಿತು. ನಗರದ ದೊಡ್ಡ ದೊಡ್ಡ ಗ್ರಂಥಾಲಯಗಳಿಗೆ ಹೋಗುವುದು, ಮುಖ್ಯವಾಗಿ ಪ್ರಾಚ್ಯ ಸಂಶೋಧನಾಲಯ (ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್) ಕ್ಕೆ ಶಾಸನದ ಇಲಾಖೆಗೆ ಹೋಗಿ ಅಲ್ಲಿ ತಮಗೆ ಬೇಕಾದ ಅನೇಕ ಗ್ರಂಥಗಳನ್ನು ಓದುವುದು ಮತ್ತು ಅವುಗಳಿಂದ ಟಿಪ್ಪಣಿಗಳನ್ನು ಮಾಡಿಕೊಂಡು ಬರುವುದು ಅವ್ಯಾಹತವಾಗಿ ಸಾಗಿತು. ರಾತ್ರಿಯೆಲ್ಲ ತಮ್ಮ ಗ್ರಂಥರಚನಾ ಕಾರ್ಯ ಮತ್ತು ಸದ್ಧರ್ಮ ದೀಪಿಕೆಗೆ ಲೇಖನಗಳನ್ನು ಹೊಂದಿಸುವ, ಸಂವಿಧಾನಗೊಳಿಸುವ, ಸಂಪಾದಿಸುವ ಕಾರ್ಯವೂ ನಡೆದುವು. ಇವರ ಈ ತರದ ಶ್ರಮವನ್ನು ನೋಡಿದ ಆಗಿನ ಪ್ರಾಚ್ಯ ಸಂಶೋಧನಾಲಯದ ಡೈರೆಕ್ಟರವರಾದ ಶ್ರೀಮಾನ್ ಹೆಚ್. ದೇವೀರಪ್ಪನವರು ಶರಣರಿಗೆ "ಸ್ವಾಮಿ, ನಿಮ್ಮ ಈಗಿನ ಶ್ರಮವನ್ನು ನೋಡಲಾರೆ. ಈ ಉತ್ತರ ವಯಸ್ಸಿನಲ್ಲಿ ನೀವು ಹಳೇ ಅಗ್ರಹಾರದಿಂದ ನನ್ನ ಈ ಸಂಸ್ಥೆಯವರೆಗೆ ನಡೆದುಕೊಂಡು ಬರುವುದು, ಇಲ್ಲಿ ಕುಳಿತು ಗ್ರಂಥಾವಲೋಕನ ಮಾಡುವುದೂ ತುಂಬಾ ಶ್ರಮಸಾಧ್ಯವಾದ ಕಾರ್ಯ. ದಯವಿಟ್ಟು ನಿಮಗೆ ಬೇಕಾಗುವ ಪುಸ್ತಕಗಳಾವುವೆಂಬುದನ್ನು ಒಂದು ಚೀಟಿ ಬರೆದು ಕಳಿಸಿದರೆ ನಾನೇ ಆ ಪುಸ್ತಕಗಳನ್ನೆಲ್ಲ ನಿಮ್ಮಲ್ಲಿಗೆ ಕಳಿಸಿಕೊಡುವ ಏರ್ಪಾಡು ಮಾಡುತ್ತೇನೆ" ಎಂದು ತಿಳಿಸಿದರು. ಅದರಂತೆ ಶರಣರು ತಮಗೆ ಬೇಕಾದ ಗ್ರಂಥಗಳನ್ನೆಲ್ಲ ತರಿಸಿಕೊಂಡು ಓಡಾಡುವ ಶ್ರಮವನ್ನು ಕಡಿಮೆಮಾಡಿಕೊಂಡರು. ಅವರ ಜೀವಿತದ ಗುಟ್ಟು ಬಲ್ಲವರಿಗೆ ಬೆಲ್ಲದ ರುಚಿ. ಕರ್ತವ್ಯ ! ಕರ್ತವ್ಯ ! ಕರ್ತವ್ಯದಲ್ಲಿಯೇ ತಮ್ಮನ್ನು ಸಂಪೂರ್ಣ ಕರಗಿಸಿಕೊಂಡಿದ್ದರು. ಅವರ ಕರ್ತವ್ಯಗಳೆಲ್ಲ ಶಿವನ ಕೆಲಸವೆಂದೇ ಅವರು ಹೇಳುತ್ತಿದ್ದರು. ಶಿವಪೂಜೆ, ಪ್ರಸಾದ ಸ್ವೀಕಾರ ಕೂಡ ಶಿವನ ಕರ್ತವ್ಯವೇ ಅವರಿಗೆ. ಇಂಥ ಆದರ್ಶ ಪುರುಷರ, ಕ್ರಿಯಾಶೀಲರ, ಸತ್ಸಂಕಲ್ಪಭರಿತರ ಯಾವ ಕಾರ್ಯಗಳು ತಾನೆ ಯಶಸ್ವಿಯಾಗಲಾರವು ? ಶಿವಭಾವಾಪನ್ನಗೊಂಡ ಅವರ ಮನಸ್ಸಿಗೆ ಅನುಗುಣವಾಗಿಯೇ ಎಲ್ಲ ಕಾರ್ಯಗಳೂ ನಡೆದು ಹೋಗುತ್ತಿದ್ದುವು. ಅವರು ತಮಗೆ ಹೊಲ ಗದ್ದೆಗಳಿಂದಲಾಗಲಿ, ನಿವೃತ್ತಿ ವೇತನದಿಂದಲಾಗಲಿ ಬಂದ ಹಣವನ್ನೆಲ್ಲ ಚಿಕ್ಕ ಚಿಕ್ಕ ಶಿವಾನುಭಾವ ಪ್ರಚಾರ ಸಾಧಕಗಳಾದ ಗ್ರಂಥಪ್ರಕಟನೆಗೇ ವಿನಿಯೋಗಿಸಿ ಬಿಡುತ್ತಿದ್ದರು. ಆ ಗ್ರಂಥಗಳು ಮಾರಾಟವಾಗಲಿ ಆಗದೆ ಇರಲಿ, ಮುದ್ರಣ ಮಾಡಿಸಿ ದುಂಡಗೆ ಹಾಕುವುದು ಅವರ ಕರ್ತವ್ಯವಾಗಿತ್ತು. ಅವುಗಳ ಬೆಲೆಯಾದರೋ ತೀರಾ ಕಡಿಮೆ ಇರುತ್ತಿತ್ತು. ಒಮ್ಮೊಮ್ಮೆ ವಿದ್ಯಾರ್ಥಿನಿಲಯಗಳಿಗೆ ಆ ಪುಸ್ತಕಗಳನ್ನು ಹೊರಿಸಿಕೊಂಡು ಹೋಗಿ ವಿದ್ಯಾರ್ಥಿಗಳಿಗೆ ಹಂಚಿಯೂ ಬರುತ್ತಿದ್ದರು. ದುಡ್ಡು ಬರದಿದ್ದರೂ ಚಿಂತೆಯಿಲ್ಲ; ಶಿವನ ಕೆಲಸವಾದರೂ ಆಯಿತಲ್ಲ ಎನ್ನುತ್ತಿದ್ದರು. ದುಡ್ಡು ಬಂದರೂ ಶಿವನ ಕಾರ್ಯ, ಬರದಿದ್ದರೂ ಶಿವನ ಕಾರ್ಯ. 'ಅಲ್ಲಿ ಉಂಬರೆ ಕೂಡಲ ಸಂಗ ಇಲ್ಲಿ ಉಂಬರೆ ಕೂಡಲ ಸಂಗ ಏಕೋಭಾವ' ಎಂಬ ಬಸವಣ್ಣನವರ ನುಡಿಯಂತೆ ಅವರ ಚರ್ಯಾಕಾಂಡ.

ಶರಣರು ಮಾನಾಪಮಾನಗಳನ್ನು ಸಮನಾಗಿ ಕಾಣುತ್ತಿದ್ದರು. ಮೈಸೂರಿನಲ್ಲಿ ಅವರ ಆಚಾರ ವಿಚಾರಗಳಿಗೆ, ಕರ್ತವ್ಯನಿಷ್ಠೆಗೆ, ಸಮಾಜ ಪ್ರೇಮಕ್ಕೆ ಜ್ಞಾನ ವಿಜ್ಞಾನ

ಗಳಿಗೆ ಮುಗ್ಧರಾಗಿ ಅನೇಕ ಜನಗಳು ಬಂದು ಅವರ ಪ್ರಶಂಸೆ ಮಾಡುತ್ತಿದ್ದರು ಶರಣರು ಮುಖಭಾವದಿಂದಾಗಲಿ, ಮಾತಿನಿಂದಾಗಲಿ ಇನ್ನಾವ ರೀತಿಯಿಂದಲಾಗಲಿ ಮುಖಸ್ತುತಿ ಸಂಜನಿತ ಹರ್ಷವನ್ನು ವ್ಯಕ್ತಪಡಿಸುತ್ತಿದ್ದಿಲ್ಲ. "ಆಯಿತು, ಆಯಿತು, ಎಲ್ಲಾ ಶಿವನ ಇಚ್ಛೆ" ಎನ್ನುತ್ತ ಮಾತಿನ ಜಾಡನ್ನೇ ಬದಲಾಯಿಸಿ ಅನ್ಯಪ್ರಸಂಗ ಹೊರಟುಬಿಡುತ್ತಿದ್ದರು. ಬೀದಿಯಲ್ಲಿ ಜನ ಇವರ ವೇಷ ಭೂಷಣಗಳಿಗೆ ಹಾಸ್ಯಮಾಡುತ್ತಿದ್ದುದೂ ಉಂಟು. ಒಮ್ಮೆ ಒಂದು ಪ್ರಸಂಗ ನಡೆಯಿತು. ಶರಣರು ಪೇಟೆಯ ಕಡೆಗೆ ಹೊರಟರು. ನಾನೂ ಜೊತೆಯಲ್ಲಿದ್ದೆ. ಕೆಲವು ಹುಡುಗರು ಇವರನ್ನು ಕಂಡು ನಗುತ್ತ 'ಕುರುಡ, ಚೊಂಚ' ಎಂದು ಹಾಸ್ಯಮಾಡಿದರು. ಶರಣರು ಅವರನ್ನು ಕಂಡು ನಗುತ್ತ "ನೀವೆಲ್ಲ ಒಳ್ಳೆಯ ಮಕ್ಕಳು. ಏಕೆಂದರೆ ನನ್ನ ಕಣ್ಣು ಕುರುಡು ಇದೆ ಅದಕ್ಕೆ ಕುರುಡ ಎನ್ನುತ್ತೀರಿ. ಕೈ ಸೊಟ್ಟಾಗಿದೆ ಚೊಂಚ ಎನ್ನುತ್ತೀರಿ. ನೀವು ಸುಳ್ಳು ಹೇಳುತ್ತಲೇ ಇಲ್ಲ ಇದ್ದುದನ್ನು ಇದ್ದಂತೆಯೇ ಆಡುತ್ತೀರಿ" ಎಂದರು. ನಾನು ಹುಡುಗರನ್ನು ಬೆದರಿಸ ಹೋದೆ. ಆಗ ಶರಣರು ಬೇಡ ಬೇಡ. ಅನ್ನಲಿ ಬಿಡು ಸತ್ಯವನ್ನೇ ಅನ್ನುತ್ತಿದ್ದಾರೆ. ಹೀಗೆ ಎನ್ನುತ್ತಿರುವಂತೆ ಒಳಗಿನಿಂದ ಆ ಹುಡುಗರ ತಂದೆ ಬಂದು ಆ ಎಲ್ಲ ಹುಡುಗರಿಗೆ ಕೆನ್ನೆಯ ಮೇಲೆ ಎರಡೆರಡು ಬಾರಿಸಿಬಿಟ್ಟರು. ಶರಣರು ಅವರನ್ನು ತಡೆದು ಅಳುತ್ತಿರುವ ಹುಡುಗರಿಗೆ ಎರಡಾಣೆ ಪೆಪ್ಪರ್‌ಮೆಂಟ್ ತರಿಸಿಕೊಟ್ಟು ಸಮಾಧಾನಮಾಡಿ ಹೊರಟರು. ದಾರಿಯುದ್ದಕ್ಕೆ ನನ್ನೆದುರಿಗೆ– "ನಾವು ಆ ಹುಡುಗರನ್ನು ಗದರಿಸುವುದಾಗಲಿ, ಹೊಡೆಯುವುದಾಗಲಿ, ಅವರೊಡನೆ ಜಗಳವಾಡುವುದಾಗಲಿ ಕೂಡದು. ನಾವು ಹಾಗೆ ಮಾಡಿದರೆ ನಾಳೆಯ ದಿನ ಇನ್ನೂ ಹೆಚ್ಚು ಮಾಡುತ್ತಾರೆ. ಅವರಿಗೇ ಪಶ್ಚಾತ್ತಾಪವಾಗುವಂತೆ ನಾವು ಅವರೊಡನೆ ಹೇಗೆ ವರ್ತಿಸಬೇಕೋ ಹಾಗೆ ವರ್ತಿಸಬೇಕು" ಎನ್ನುತ್ತ ನಡೆದರು.

ಮತ್ತೊಮ್ಮೆ ಮೈಸೂರಿನ ನರಸಿಂಹ ರಾಜಾಮೋಹಲ್ಲಾದಲ್ಲಿ ಒಬ್ಬ ಶೈವ ವಿದ್ವಾಂಸರಿದ್ದರು. ಅವರ ಹೆಸರು ಕರ್ಣಾಕರ್ಣಿಕೆಯಾಗಿ ಶರಣರಿಗೆ ಗೊತ್ತಾಗಿತ್ತು. ಅವರನ್ನು ಕಂಡು ಮಾತನಾಡಿ ಬರಬೇಕು ಎಂದು ಶರಣರು ಹೊರಟರು. ನನ್ನನ್ನೂ ಜೊತೆಯಲ್ಲಿ ಕರೆದರು. ಹೋದೆವು. ಅವರ ಮನೆ ಹುಡುಕಿ ಒಳಗೆ ಪ್ರವೇಶಮಾಡಿದೆವು. ಅವರು ಪ್ರೀತಿಯಿಂದ ಚಾಪೆಹಾಸಿ ಕುಳ್ಳಿರಿಸಿದರು. "ಶರಣರು ನಿಮ್ಮ ಹೆಸರು ಕೇಳಿದ್ದೆವು ನಿಮ್ಮೊಡನೆ ಮಾತನಾಡಿಕೊಂಡು ಹೋಗೋಣವೆಂದು ಬಂದೆವು" ಎನ್ನುತ್ತಿದ್ದಂತೆ ನಾನು ಶರಣರ ಪರಿಚಯವನ್ನೂ ಆ ಶೈವ ವಿದ್ವಾಂಸರಿಗೆ ಮಾಡಿಕೊಟ್ಟೆ. ಅವರೂ ಶರಣರ ಹೆಸರು ಕೇಳಿದ್ದರು. ಆದರೆ ಮುಖತಃ ಭೇಟಿಯಿರಲಿಲ್ಲ. ಸರಿ ಇಬ್ಬರಿಗೂ ಇಷ್ಟಲಿಂಗದ ವಿಚಾರವಾಗಿ ಚರ್ಚೆ ಪ್ರಾರಂಭವಾಯಿತು. ಶೈವಾಚಾರ್ಯರು ಬಹಳಷ್ಟು ತಮ್ಮ ಪೌರುಷವನ್ನು ಕೊಚ್ಚಿಕೊಂಡು ಶರಣರ ವಾದವನ್ನು ಖಂಡಿಸಿ ಅಧಿಕಾರ ವಾಣಿಯಿಂದ ಇಷ್ಟಲಿಂಗಕ್ಕೆ ಕಂಥೆಯನ್ನು ಧರಿಸುವ ವಿಚಾರವನ್ನೇ ಹಿಯ್ಯಾಳಿಸಿ ಮಾತನಾಡತೊಡಗಿದರು. ಶರಣರು ಅವರು ಹೇಳುವುದನ್ನೆಲ್ಲ ಸದ್ದುಗದ್ದಲವಿಲ್ಲದೆ ಕೇಳುತ್ತ "ಆಯಿತು. ಆಯಿತು..." ಇಷ್ಟನ್ನೇ ಹೇಳುತ್ತ ಮುಗುಳುನಗೆ ನಗುತ್ತ ಕುಳಿತುಬಿಟ್ಟರು. ಶೈವಾಚಾರ್ಯನು ಬಾಯಿಗೆ ಬಂದಂತೆ ಹೇಳಿ ಹೇಳಿ ತನ್ನದೆಲ್ಲ ಮುಗಿಸಿಬಿಟ್ಟನು. ಶರಣರು

ಇವರೊಡನೆ ಚರ್ಚೆಮಾಡಿ ಫಲವಿಲ್ಲವೆಂದು ಹೇಳಿ ಸ್ವಲ್ಪ ಸಮಯದ ನಂತರ "ಬರುತ್ತೇವೆ. ನಿಮ್ಮನ್ನು ಕಂಡದ್ದು ಸಂತೋಷ" ಎಂದು ಹೇಳಿ ಹೊರಟುಬಂದರು. ಆದರೆ ಪಾರಿಯುದ್ದಕ್ಕೂ ಹೊಟ್ಟೆ ಹುಣ್ಣಾಗುವಂತೆ ನಕ್ಕು ಬಿಟ್ಟರು. ನಾನು ಶರಣರು ಅಷ್ಟೊಂದು ನಗುತ್ತಾರೆಂದು ತಿಳಿದಿರಲೇ ಇಲ್ಲ. ಅವತ್ತಿನ ಅವರ ನಗುವಿನಷ್ಟು ನಗುವನ್ನು ಎಂದೂ ಕಂಡಿರಲಿಲ್ಲ. ಹೀಗೆ ತಮ್ಮನ್ನು ಅಲ್ಲಗಳೆದು ಮಾತನಾಡಿದರೂ ಎಷ್ಟೋ ಸಂದರ್ಭದಲ್ಲಿ 'ಆಯಿತು ಆಯಿತು' ಎನ್ನುತ್ತ ಎದ್ದುಬಿಡುತ್ತಿದ್ದರಲ್ಲದೆ ಎದುರು ಹಳಿಯುವ ಯಾವ ಹವ್ಯಾಸಕ್ಕೂ ಶರಣರು ಮನಸ್ಸು ಮಾಡದಿದ್ದುದು ಅವರ ತಾಳ್ಮೆಗೊಂದು ದೊಡ್ಡ ಜೀವಂತ ನಿದರ್ಶನವಾಗಿತ್ತು.

(೮)

೧೯೫೧ ನೆಯ ಇಸ್ವಿಯಲ್ಲಿ ನಾನು ಪಂಡಿತ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ನನ್ನ ಕರ್ತವ್ಯಕ್ಕಾಗಿ ಹೊರಟು ಹೋದ ಮೇಲೆ ಶರಣರ ಸಹವಾಸದಿಂದ ದೂರ ಎಸೆಯಲ್ಪಟ್ಟ ನಾನು ಅವರನ್ನು ಮೈಸೂರಿಗೇನಾದರೂ ಕಾರ್ಯನಿಮಿತ್ತ ಹೋದರೆ ನೋಡಿಕೊಂಡು ಬರುವುದಷ್ಟೇ ಆಯಿತು. ಕೊನೆಗೆ ೧೯೬೧ ನೆಯ ಇಸ್ವಿಯಲ್ಲಿ ನನಗೆ ಒಂದು ಕಾಗದ ಬರೆದರು. ಹಿಂದೆ ನನ್ನ ಹೆಸರಿಗೆ ಮಾಡಿದ್ದ ಎರಡು ಎಕರೆ ಗದ್ದೆಯ ವಿಚಾರವಾಗಿ ಅವರು ತಿಳಿಸಿದ್ದುದು ಹೀಗೆ. ನಮ್ಮ ಎರಡೂ ಮನೆ ಮತ್ತು ಗದ್ದೆ, ಹೊಲಗಳನ್ನು ಗುರುಲಿಂಗ ಜಂಗಮ ಸೇವೆಗಾಗಿ ದಾನಮಾಡಿ ಆಯಿತು. ನಿನ್ನ ಹೆಸರಿನಿಂದ ಇರುವ ಗದ್ದೆಯನ್ನು ನೀನೂ ಮಾಡಿಸಲಿಲ್ಲ. ಅದನ್ನು ಬಿಟ್ಟು ಕೊಡುವ ಏರ್ಪಾಡು ಮಾಡಿದರೆ ಅದನ್ನೂ ಕೂಡ ಈಗ ಗುರುಲಿಂಗ ಜಂಗಮಕ್ಕೆ ಅದನ್ನು ಅರ್ಪಿಸಬೇಕಾಗಿದೆ...ಇತ್ಯಾದಿ. ನಾನು ಆ ಪತ್ರ ನೋಡಿ ಗದ್ದೆಯನ್ನು ಬಿಡುಗಡೆ ಮಾಡಿಕೊಡುವ ಪತ್ರವನ್ನು ನಮ್ಮ ತಾಲೂಕಿನ ಸಬ್‌ರಜಿಸ್ಟ್ರಾರರವರ ಮುಖಾಂತರ ಮಾಡಿಕೊಂಡು ಮೈಸೂರಿಗೆ ಬಂದೆನು. ಆಗ ಶರಣರು ಇರಲಿಲ್ಲ. ಅವರ ಟಪಾಲುಗಳನ್ನು ಹಾಕುವ ಬಾಗಿಲು ಸಂದಿಯಲ್ಲಿ ಹಾಕಿ ಹೊರಟು ಹೋದೆನು. ಆದರೆ ಅವರಿಗೆ ನಾನು ಹಾಕಿ ಹೋದ ಕಾಗದ ಸಿಕ್ಕಹಾಗೆ ಇಲ್ಲ. ಮುಂದೆ ನಾನು ಇನ್ನೊಮ್ಮೆ ಅವರ ದರ್ಶನಾಶೀರ್ವಾದ ಮಾಡಿಕೊಳ್ಳಬೇಕೆಂದು ಇಚ್ಛಿಸುವ ಹೊತ್ತಿಗಾಗಲೇ ಅವರು ಲಿಂಗೈಕ್ಯರಾದರೆಂಬ ಸುದ್ದಿ ಬಂದು ಮಮ್ಮಲ ಮರುಗಿದೆ. ಅವರ ಗುರುಲಿಂಗ ಜಂಗಮಕ್ಕೆ ಅರ್ಪಿಸಬೇಕೆಂದಿದ್ದ ಮನೀಷೆಯನ್ನು ಈಡೇರಿಸಿದೆ. ನನ್ನ ಹೆಸರಿಗಿರುವ ಎರಡೆಕರೆ ಗದ್ದೆಯನ್ನು ಶಿರಾಳಕೊಪ್ಪದ ವಿರಕ್ತಮಠದ ಶ್ರೀ ನಿ. ಪ್ರ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಾದಕ್ಕರ್ಪಿಸಿ ಅದಕ್ಕೆ ಬೇಕಾಗುವ ಕಾಗದ ಪತ್ರಗಳನ್ನು ಮಾಡಿಸಿಕೊಟ್ಟೆ.

ಹೀಗೆ ನನ್ನ ಜೀವನದಲ್ಲಿ ಬಾಲ್ಯದಿಂದಲೂ ವಾತ್ಸಲ್ಯದಿಂದ ಕಂಡು ನನ್ನ ಉತ್ಕರ್ಷವನ್ನು ಕಂಡು ಹಿರಿಹಿರಿ ಹಿಗ್ಗುತ್ತಿದ್ದ ಶರಣರನ್ನು ನಾನು ನನ್ನ ದೃಷ್ಟಿಗೆ ಕಂಡಂತೆ ಈ ಮೇಲೆ ವಿವರಿಸಿದ್ದೇನೆ. ಆ ಮಹಾಚೇತನದ ಯೋಗ್ಯತೆಯನ್ನು ನಾನು ಪರಿಚಯ ಮಾಡಿಕೊಡಲಸಮರ್ಥ. ಆದರೂ ನನ್ನ ದೃಷ್ಟಿಗೆ ಅವರು ಹೇಗೆ ಕಂಡರು ಎಂಬುದೇ ಇಲ್ಲಿನ ನನ್ನ ವಿವರಣೆ, ವಿಶ್ಲೇಷಣೆ. ನನಗೆ ಗೊತ್ತಿದ್ದ ಅವರ ಜೀವನಾನುಭವದ

ಅನೇಕ ಘಟನೆಗಳನ್ನು ವಿವರಿಸಿದ್ದೇನೆ. ಎಷ್ಟರ ಮಟ್ಟಿಗೆ ಅವು ಶರಣ ಜೀವನದ ಸಾರ್ಥಕ್ಯಕ್ಕೆ ಸಾಧಕಗಳೋ ಏನೋ. ಅಂತೂ ಮಹಾಚೇತನದ ಪರಿಚಯವನ್ನು ಇದ್ದಕ್ಕಿದ್ದಂತೆ ಲೋಕಕ್ಕೆ ತಿಳಿಸಬೇಕಾದುದು ಕರ್ತವ್ಯವಲ್ಲವೆ? ಈ ಲೇಖನದಲ್ಲಿ ನನ್ನ ಜೀವನದ ಕೆಲವು ಸಂಗತಿಗಳು ನೆಯ್ದುಕೊಂಡಿವೆ. ಇದಕ್ಕೆ ಕಾರಣ ಸ್ವಪ್ರತಿಷ್ಠೆಯಲ್ಲಿ ಅವರ ಹತ್ತಿರವೇ ಇದ್ದು ಅವರ ನಡೆನುಡಿಗಳನ್ನು ಲೋಕಕ್ಕೆ ಇದ್ದುದನ್ನು ಇದ್ದ ಹಾಗೆಯೇ ಹೇಳಲು ಈ ತಂತ್ರವನ್ನು ಬಳಸುವುದು ಅನಿವಾರ್ಯವಾಯಿತು. ನಮ್ಮ ನೆನಪಿನಲ್ಲಿರುವ ಅನೇಕ ಅಂಶಗಳು ಹಾರಿಹೋಗದ ಮುನ್ನ ಅವನ್ನು ಗ್ರಂಥಸ್ಥಗೊಳಿಸುವುದು ಶ್ರೀ ಚನ್ನಮಲ್ಲಪ್ಪನವರ ಯಥಾರ್ಥ ಜೀವನವನ್ನು ಹೇಳಬೇಕೆಂಬ ಮೂಲೋದ್ದೇಶದವು.

# ನನ್ನ ಗುರುವರ್ಯರು

**ಲಿಂ. ಡಿ. ಎಸ್. ಗುರುಬಸವಪ್ಪ**

ಕೈ. ಶ್ರೀ ಚನ್ನಮಲ್ಲಪ್ಪನವರ ತಂದೆಯವರಾದ ನೂರೊಂದಪ್ಪನವರು ಧಾರವಾಡ ಜಿಲ್ಲೆಯ ಹಾವೇರಿ ಪಟ್ಟಣದ ಒಳ್ಳೆ ಕೋರಿಶೆಟ್ಟರ ಮನೆತನಕ್ಕೆ ಸೇರಿದವರು. ಇವರು ಶಿವಮೊಗ್ಗ ಜಿಲ್ಲೆಯ ಪುರಾತನ ಸ್ಥಳವಾದ ಸಿರಿಯಾಳಕೊಪ್ಪದಲ್ಲಿ ಶಾಲಾ ಉಪಾಧ್ಯಾಯರ ಕೆಲಸವನ್ನು ಕೈಕೊಂಡಾಗ ಕುಟುಂಬ ಸಹಿತ ೧೯ನೇ ಶತಮಾನದ ಉತ್ತರಾರ್ಧದಲ್ಲಿ ಅಲ್ಲಿಗೆ ಬಂದು ನೆಲಸಿದರೆಂದು ತಿಳಿದುಬಂದಿದೆ. ಈ ನೂರೊಂದಪ್ಪನವರಿಗೆ ಶ್ರೀ ಚನ್ನಮಲ್ಲಪ್ಪನವರು ಮೊದಲನೆಯ ಪುತ್ರರಾಗಿ ಸುಮಾರು ೧೮೭೪_೭೫ ನೆಯ ಇಸವಿಯಲ್ಲಿ ಜನಿಸಿರಬಹುದು. (ಖಚಿತವಾದ ಇವರ ಜನ್ಮ ದಿನಾಂಕ ತಿಳಿದಿಲ್ಲ.) ಇವರ ಬಾಲ್ಯ ವಿದ್ಯಾಭ್ಯಾಸವು ಶಿರಿಯಾಳಕೊಪ್ಪದಲ್ಲಿಯೇ ನಡೆದು ಅಲ್ಲಿ ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ನಂತರ ಅಪ್ಪರ್ ಸೆಕೆಂಡರಿ ಪರೀಕ್ಷೆಯನ್ನು ಪ್ರಾಯಶಃ ಶಿವಮೊಗ್ಗಾದಲ್ಲಿ ಓದಿ ಮುಗಿಸಿರಬಹುದು. ಇವರು ಕಾರಣಾಂತರಗಳಿಂದ ಅಂಗವಿಕಲರಾಗಿದ್ದು, ಸುಮಾರು ನಾಲ್ಕುವರೆ ಅಡಿ ಎತ್ತರ ಉಳ್ಳವರೂ ಮತ್ತು ಕೃಶ ಶರೀರವುಳ್ಳವರೂ ಒಂದು ಕಣ್ಣಿನಲ್ಲಿ ದೃಷ್ಟಿಹೀನರೂ ಆಗಿದ್ದರು.

ಮುಂದೆ ಪಂಡಿತ ಪರೀಕ್ಷೆಗೂ ಸಹ ಓದಲೂ ಪ್ರಯತ್ನ ಮಾಡಿರಬಹುದು. ಇವರು ಇಂಗ್ಲೀಷು ಲೋವರ್ ಸೆಕೆಂಡರಿ ಪರೀಕ್ಷೆಯನ್ನು ಸ್ವಯಂ ಅಭ್ಯಾಸದಿಂದ ಓದಿ ಅದನ್ನು ಉತ್ತಮ ರೀತಿಯಲ್ಲಿ ತೇರ್ಗಡೆ ಹೊಂದಿದರು. ಸಂಸ್ಕೃತದಲ್ಲಿಯೂ ಸಹ ಅಸಾಧಾರಣ ಪಾಂಡಿತ್ಯವನ್ನು ಸಂಪಾದಿಸಿದರು. ಇಂಗ್ಲೀಷು ಭಾಷಾ ಜ್ಞಾನವನ್ನು ಸಹ ಅಭಿವೃದ್ಧಿಪಡಿಸಿಕೊಂಡು ಬಿ.ಎ., ಎಂ.ಎ. ಪದವೀಧರರಿಗೆ ಸರಿಸಮಾನರಾಗಿದ್ದರು. ವೀರಶೈವಾಗಮಗಳು ವೇದಾಂತ ವಿಚಾರಗಳು ವ್ಯವಹಾರಿಕ ಪರಿಜ್ಞಾನವು ಇವರ ಕರತಲಾಮಲಕವಾಗಿದ್ದವು.

ಶ್ರೀ ಚನ್ನಮಲ್ಲಪ್ಪನವರು ತಮ್ಮ ವಿದ್ಯಾಭ್ಯಾಸವನ್ನು ಪೂರೈಸಿಕೊಂಡು ತಮ್ಮ ತಂದೆಯವರು ಕೆಲಸ ಮಾಡುತ್ತಿದ್ದ ಶಿರಿಯಾಳಕೊಪ್ಪದ ಸ್ಕೂಲಿನಲ್ಲಿಯೇ ೧೯೦೦ರ ಹಿಂದೆಯೇ ಉಪಾಧ್ಯಾಯರಾಗಿ ಸೇರಿದರು. ತಮ್ಮ ವಿದ್ಯಾ ಪ್ರತಿಭೆಯಿಂದ ಬಹಳ ದಕ್ಷರೆಂದು ಖ್ಯಾತಿಗಳಿಸಿದರು. ಶಿರಿಯಾಳಕೊಪ್ಪದ ಮತ್ತು ಆ ಪ್ರಾಂತದ ಎಲ್ಲಾ ತರಹದ ಅಭಿವೃದ್ಧಿ ಕಾರ್ಯಗಳಲ್ಲಿ ಭಾಗಿಯಾಗುತ್ತಿದ್ದರು. ಆ ಪ್ರದೇಶದಲ್ಲಿ ಹೇರಳವಾಗಿರುವ ಅನೇಕ ಶಿಲಾಶಾಸನಗಳನ್ನೂ ಪುರಾತನ ದೇವಾಲಯಗಳನ್ನು ಸಂದರ್ಶಿಸಿ, ಅಭ್ಯಸಿಸಿ ಅವುಗಳಲ್ಲಿರುವ ಮಹತ್ವದ ಅಂಶಗಳನ್ನು ಪ್ರಕಾಶಪಡಿಸಿದರು.

ಶ್ರೀ ಚನ್ನಮಲ್ಲಪ್ಪನವರಿಗೆ ಮೂರು ಮದುವೆಯಾಗಿ, ಎರಡನೆಯವರಿಗೆ ಒಬ್ಬ ಮಗನಿದ್ದೂ ಆತನೂ ಸಹ ಬಾಲ್ಯದಲ್ಲಿಯೇ ೧೯೧೦ ರಲ್ಲಿಯೇ ತೀರಿಕೊಂಡನು. ಅವರ

ಪತ್ನಿಯರೆಲ್ಲರೂ ಅಕಾಲದಲ್ಲಿ ಶಿವಾಧೀನರಾದರು. ಇವರಿಗೆ ಸಿದ್ಧಲಿಂಗಪ್ಪನೆಂಬ ಒಬ್ಬ ತಮ್ಮನಿದ್ದನೆಂದೂ ಆತನೂ ಸಹ ಶಿರಿಯಾಳಕೊಪ್ಪದ ಸ್ಕೂಲಿನಲ್ಲಿಯೇ ಉಪಾಧ್ಯಾಯ ನಾಗಿದ್ದನೆಂದೂ ತಿಳಿದುಬಂದಿದೆ. ಹೀಗೆ ಇವರಿಗೆ ನಡುವಯಸ್ಸಿನಲ್ಲಿಯೇ ಸಂಸಾರಿಕ ಜೀವನದಲ್ಲಿ ನಿರಾಶೆಯುಂಟಾಗಿ ಇನ್ನು ಶಾಲಾ ಉಪಾಧ್ಯಾಯರಾಗಿರುವಾಗಲೇ ವೀರ ಶೈವ ಧರ್ಮವು ಈ ಶತಮಾನದ ಆದಿಯಲ್ಲಿ ಗ್ಲಾನಿ ಹೊಂದಿದಾಗ ಸಮಾಜವನ್ನು ಹೊಡೆದೆಬ್ಬಿಸಿ, ಎಚ್ಚರಿಸಿ ಮಹಾಶಿವಯೋಗಮಂದಿರವನ್ನು ಸ್ಥಾಪಿಸಿ ಸಮಾಜದ ಪುನ ರುಜ್ಜೀವನಕ್ಕೋಸ್ಕರ ತಮ್ಮ ಇಡೀ ಜೀವನವನ್ನೇ ಸವೆಸಿದ ಮಹಾನುಭಾವರಾದ ಹಾನಗಲ್ ಲಿಂ. ಷ. ಬ್ರ. ಶ್ರೀ ಶ್ರೀ ಶ್ರೀ ಕುಮಾರ ಸ್ವಾಮಿಗಳ ಪ್ರಭಾವಕ್ಕೊಳಗಾಗಿ ಅವರಿಂದ ಅನುಗ್ರಹ ಪಡೆದರು. ಅಲ್ಲಿಂದ ತಮ್ಮ ಉಪಾಧ್ಯಾಯ ವೃತ್ತಿಯ ಜೊತೆಗೆ ವೀರಶೈವ ಧರ್ಮ ಜಾಗ್ರತಿ, ಸಮಾಜೋದ್ಧಾರಕ ಕೆಲಸ ಮುಂತಾದವುಗಳಲ್ಲಿ ಆಸಕ್ತ ರಾದರು. ತಾವೇ ಸ್ವಯಂ ಪಾಕ ಮಾಡಿಕೊಂಡು ದಿನಕ್ಕೊಂದೇ ಊಟದಿಂದ ಕಾಲ ಹಾಕುತ್ತಿದ್ದರು. ಮಹಾ ವೈರಾಗಿಗಳಾಗಿದ್ದರು. ಈ ಶತಮಾನದ ಒಂದು-ಎರಡನೇ ದಶಕಗಳಲ್ಲಿ ಪ್ರಾರಂಭವಾದ ಸಹಕಾರ ಚಳವಳಿಯಲ್ಲಿ ಭಾಗವಹಿಸಿ, ಶಿರಿಯಾಳಕೊಪ್ಪ ದಲ್ಲಿ ಒಂದು ಸಹಕಾರ ಸಂಘವನ್ನು ಸ್ಥಾಪಿಸಿ ಅದರ ಮುಖ್ಯ ಸಂಚಾಲಕರಾಗಿ ಕೆಲಸ ಮಾಡಿ, ಜನಸಾಮಾನ್ಯರಿಗೆ ತಮ್ಮ ಅಮೋಘವಾದ ಸೇವೆಯನ್ನು ಸಲ್ಲಿಸಿದರು. ಇವರ ಮೂರ್ತಿ ಚಿಕ್ಕದಾಗಿದ್ದರೂ ಕೀರ್ತಿ, ಪ್ರತಿಭೆ ವಾಗ್ಝರಿಗಳು ಬಹಳ ಅಪ್ರತಿಮಕವಾಗಿ ದ್ದವು. ಎಂತಹ ದೊಡ್ಡ ಸಭೆಯಾಗಿದ್ದರೂ, ಇವರ ಭಾಷಣಗಳನ್ನು ಜನರು ತದೇಕ ಚಿತ್ತದಿಂದ ಕೇಳಿ ಆನಂದಿಸುತ್ತಿದ್ದರು. ಚನ್ನಮಲ್ಲಪ್ಪ ಮಾಸ್ತರೆಂಬ ಇವರ ಹೆಸರು ಮನೆಮಾತಾಗಿತ್ತು. ಹಳ್ಳಿ ಪಟ್ಟಣಗಳ ಜನಸಾಮಾನ್ಯರ ಎಲ್ಲಾ ಸಮಸ್ಯೆಗಳಿಗೆ ಇವರಲ್ಲಿ ಪರಿಹಾರ ಸಿಗುತ್ತಿದ್ದಿತು. ಆ ಕಾಲದಲ್ಲಿ ವರ್ಷಕ್ಕೊಮ್ಮೆ ದಸರಾ ಕಾಲದಲ್ಲಿ ಸಹಕಾರ ಸಂಘಗಳ ಸಭೆಯು ಮೈಸೂರಿನಲ್ಲಿ ನಡೆಯುತ್ತಿದ್ದಿತು. ಆ ಸಭೆಗೆ ಎಲ್ಲಾ ಸಹಕಾರ ಸಂಘಗಳಿಂದ ಚುನಾಯಿತ ಪ್ರತಿನಿಧಿಗಳನ್ನು ಕಳುಹಿಸುವಂತೆ, ಒಂದು ವರ್ಷದ ಸಭೆಗೆ ಶಿರಿಯಾಳಕೊಪ್ಪದ ಸಂಘದಿಂದ ಶ್ರೀ ಚನ್ನಮಲ್ಲಪ್ಪನವರನ್ನು ಚುನಾಯಿಸಿ ಕಳುಹಿಸಲ್ಪ ಟ್ಟಿದ್ದರು. ಆ ಸಭೆಗೆ ದಿವಂಗತರಾದ ಆಗಿನ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರು ಅಧ್ಯಕ್ಷರಾಗಿದ್ದರು. ಸಹಕಾರಿ ತತ್ವದ ಒಂದು ಮಹತ್ತರ ವಾದ ವಿಷಯದ ಮೇಲೆ ಶ್ರೀ ಚನ್ನಮಲ್ಲಪ್ಪನವರು ಒಂದು ಅಮೋಘವಾದ ಮತ್ತು ಪಾಂಡಿತ್ಯ ಪೂರ್ಣವಾದ ಭಾಷಣವನ್ನು ಯಾವ ಪೂರ್ವ ಸಿದ್ಧತೆಯಿಲ್ಲದೆ ಆ ಸಭೆಯಲ್ಲಿ ಮಾಡಿದರು. ಅದೃಶ್ಯರಾಗಿಯೂ ಸಭಿಕರೆಲ್ಲರೂ ಇವರ ಭಾಷಣವನ್ನು ತದೇಕಚಿತ್ತ ದಿಂದ ಕೇಳಿ ಹರ್ಷಗೊಂಡರು. ಅಧ್ಯಕ್ಷತೆ ವಹಿಸಿದ್ದ ಶ್ರೀಮದ್ಯುವರಾಜರು ಈ ಚನ್ನ ಮಲ್ಲಪ್ಪನವರನ್ನು ಸಭೆ ವಿಸರ್ಜನೆಯಾದನಂತರ ತಮ್ಮನ್ನು ಬಂದು ನೋಡಲು ತಮ್ಮ ಪರಿವಾರದವರ ಮೂಲಕ ಹೇಳಿಕಳಿಸಿದರು. ಸಭೆ ಮುಗಿದಮೇಲೆ ಈ ವಾಮನ ಮೂರ್ತಿಯವರು ಶ್ರೀ ಮದ್ಯುವರಾಜರನ್ನು ಸಮೀಪಿಸಲು ಶ್ರಮಪಟ್ಟರಾದರೂ ಅವರ ದರ್ಶನ ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗಲಿಲ್ಲ. ಇದರಿಂದ ಅವರು ಸ್ವಲ್ಪವೂ ನಿರಾಶ ರಾಗದೆ ಅಧ್ಯಕ್ಷರ ಭೇಟಿಯಾಗದಿದ್ದರೆ ನಮಗೇನು ನಷ್ಟವಿಲ್ಲವೆಂದು ಅಲ್ಲಿಗೆ ತೃಪ್ತ

ರಾದರು. ಈ ದರ್ಶನದಿಂದ ಅವರಿಗೆ ಇನ್ನು ಯಾವ ಸುದೈವವು ಕಾದಿತ್ತೊ ತಿಳಿಯದು. ಇನ್ಯಾರಾದರಾಗಿದ್ದರೆ, ವಿಶ್ವಪ್ರಯತ್ನ ಮಾಡಿ ದರ್ಶನ ಪಡೆದುಕೊಂಡು ಜೊತೆಗೆ ಆರ್ಥಿಕ ಮುಂತಾಗಿ ಲಾಭವನ್ನು ಹೊಂದುತ್ತಿದ್ದರು. ಇಂತಹ ವೈರಾಗ್ಯ ಮೂರ್ತಿ ಶ್ರೀ ಚನ್ನಮಲ್ಲಪ್ಪನವರು.

ಶ್ರೀಯುತರ ಹೆಸರನ್ನು ನಾನು ಹಳ್ಳಿಯಲ್ಲಿ ವಾಸಿಸುತ್ತಿರುವಾಗಲೇ ಕೇಳಿದ್ದರೂ ನಾನು ೧೯೧೭ ರಲ್ಲಿ ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಮೂಡಿ ಸ್ಕೂಲಿನಿಂದ ತೇರ್ಗಡೆ ಹೊಂದಿದ ಮೇಲೆ ಒಬ್ಬ ಉಪಾಧ್ಯಾಯನ ಕೆಲಸಕ್ಕಾಗಿ ನನ್ನ ಸೋದರ ಮಾವನ ಸಂಗಡ ಒಂದು ದಿನ ಅವರ ದರ್ಶನ ಪಡೆದೆನು. ಆಗ ಅವರು ನನಗೆ ಒಂದು ಕಾಗದವನ್ನು ಮೇಲ್ಪಟ್ಟ ಅಧಿಕಾರಿಗಳಿಗೆ ಬರೆಯುವುದಕ್ಕೆ ಹೇಳಿದರು. ಅವರ ಹೇಳಿಕೆಯಂತೆ ಕಾಗದ ಬರೆದು ಅವರಿಗೆ ಕೊಟ್ಟಾಗ ಅದನ್ನು ನೋಡಿ ಅದರಲ್ಲಿ ಒಂದೂ ತಪ್ಪಿಲ್ಲದಿದ್ದನ್ನು ಕಂಡು ಈತನಿಗೆ ಉಪಾಧ್ಯಾಯನ ಕೆಲಸಕ್ಕಾಗಿ, ತಾವು ಹೆಡ್ಮಾಸ್ತ್ರರಾಗಿದ್ದ ಶಿರಿಯಾಳಕೊಪ್ಪದ ಆಗಿನ ಕಾಲದ ಎ. ವ್ಹಿ. ಸ್ಕೂಲಿನಲ್ಲಿ ಇಂಗ್ಲೀಷು ಲೋವರ್ ಸೆಕೆಂಡರಿ ಪರೀಕ್ಷೆಗೆ ಓದಿಸಲು ನಮ್ಮ ಮಾವನವರಿಗೆ ಸಲಹೆ ಮಾಡಿದರು. ಅವರ ಸಲಹೆಯಂತೆ ಕೇವಲ ೧೫ ತಿಂಗಳಲ್ಲಿಯೇ ಇಂಗ್ಲೀಷು ಅಭ್ಯಾಸ ಮಾಡಿ ಇಂಗ್ಲೀಷು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಮುಂದೆ ಶಿವಮೊಗ್ಗಾ ಹೈಸ್ಕೂಲ್ ಬೆಂಗಳೂರು ಕೊಲೆಜಿಯೇಟ್ ಹೈಸ್ಕೂಲ್, ಸೆಂಟ್ರಲ್ ಕಾಲೇಜ್ ಮುಂತಾದ ಸಂಸ್ಥೆಗಳಲ್ಲಿ ನನ್ನ ಅಭ್ಯಾಸವನ್ನು ಪೂರೈಸಿ ಸರ್ಕಾರಿ ನೌಕರಿಗೆ ಸೇರಿ ಜೀವನ ಸಾರ್ಥಕ ಮಾಡಿಕೊಂಡಿದ್ದಕ್ಕೆಲ್ಲಾ ಶ್ರೀಯುತರೇ ಕಾರಣಪುರುಷರೆಂದು ಹೇಳಬಯಸುತ್ತೇನೆ. ಇವರಲ್ಲಿಯೇ ನಾನು ಅಲ್ಪಸ್ವಲ್ಪ ಸಂಸ್ಕೃತ ಭಾಷೆಯನ್ನೂ ಅಭ್ಯಾಸ ಪ್ರಾರಂಭ ಮಾಡಿದ್ದುದು.

ಶ್ರೀಯುತರ ಪಾಂಡಿತ್ಯವನ್ನು ಬಲ್ಲ ವಿದ್ಯಾ ಇಲಾಖೆಯ ಮೇಲಧಿಕಾರಿಗಳೆಲ್ಲಾ ಇವರ ಸ್ಕೂಲನ್ನು ತನಿಖೆಗೋಸ್ಕರ ಭೇಟಿ ಮಾಡಿದಾಗ ಶ್ರೀಯುತರು ತಮ್ಮ ಪಾಠ ಪ್ರವಚನವನ್ನು ಯಾವಾಗ ಪರೀಕ್ಷೆಗೆ ತೆಗೆದುಕೊಳ್ಳುತ್ತೀರೆಂದು ಕೇಳಿದಾಗ, ನಿಮ್ಮ ಯೋಗ್ಯತೆಯನ್ನು ಪರೀಕ್ಷೆ ಮಾಡುವ ಸಾಮರ್ಥ್ಯವನ್ನು ನಾವುಗಳು ಇನ್ನೂ ಪಡೆದಿಲ್ಲ ಎಂದು ಹೇಳಿ ಸಮಾಧಾನಮಾಡುತ್ತಿದ್ದರಂತೆ.

ಸುಮಾರು ೧೯೨೪ರಲ್ಲಿ ಚಿತ್ರದುರ್ಗದ ಬೃಹನ್ಮಠಾಧ್ಯಕ್ಷರಾಗಿದ್ದ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಶಿರಿಯಾಳಕೊಪ್ಪಕ್ಕೆ ಬಿಜಯಂಗೈಸಿದಾಗ ಒಂದು ವೀರಶೈವ ಧರ್ಮದ ಜಿಜ್ಞಾಸೆಯಲ್ಲಿ ಶ್ರೀ ಮಹಾಸ್ವಾಮಿಗಳಿಗೂ ಶ್ರೀ ಚನ್ನಮಲ್ಲಪ್ಪನವರಿಗೂ ಭಿನ್ನಾಭಿಪ್ರಾಯವುಂಟಾಗಿ ಶ್ರೀಯುತರು ಮಹಾಸ್ವಾಮಿಗಳಲ್ಲಿ ತಮ್ಮ ನಿಲುವನ್ನೇ ಸಮರ್ಥಿಸಿಕೊಂಡು ಅವರಿಗೆ ಸಮಾಧಾನವನ್ನುಂಟು ಮಾಡಿದರು.

ಸುಮಾರು ೧೯೨೪–೨೫ ರಲ್ಲಿ ಇವರು ನಿವೃತ್ತಿವೇತನವನ್ನು ಹೊಂದಲು ಅರ್ಹರಾದಾಗ (ಎಂದರೆ ತಮ್ಮ ೫೫ನೇ ವಯಸ್ಸಿನಲ್ಲಿಯೇ) ಶಿರಿಯಾಳಕೊಪ್ಪದ ಹೆಡ್ಮಾಸ್ಟರ್ ಹುದ್ದೆಯಿಂದ ಮಾಹೆಯಾನ ೨೫ ರೂ. ಗಳ ನಿವೃತ್ತಿವೇತನದ ಮೇಲೆ ಕೆಲಸದಿಂದ ನಿವೃತ್ತರಾದರು. ತದನಂತರ ತಮ್ಮ ಪೂರ್ವಜರ ಹುಟ್ಟೂರಾದ ಹಾವೇರಿ ಪಟ್ಟಣಕ್ಕೆ ಹೋಗಿ ನೆಲಿಸಿ ಅಲ್ಲಿಂದಲೆ ಶ್ರೀ ಶ್ರೀ ಷ. ಬ್ರ. ಶ್ರೀಮನ್ನಿರಂಜನ ಹಾನಗಲ್ ಕುಮಾರ

ಸ್ವಾಮಿಗಳ ಆದೇಶದಂತೆ, "ಸದ್ಧರ್ಮದೀಪಿಕೆ" ಎಂಬ ಒಂದು ಮಾಸಿಕ ಧರ್ಮ ಪತ್ರಿಕೆಯನ್ನು ಹೊರಡಿಸಿ ವೀರಶೈವ ಧರ್ಮದ ಪ್ರಾಚೀನ ಗ್ರಂಥಗಳ ಪರಿಶೋಧನ ಮತ್ತು ಪ್ರಚಾರ ಕಾರ್ಯದಲ್ಲಿ ನಿರತರಾದರು. ಶಿವಾನುಭವ ಶಾಸ್ತ್ರವನ್ನು ಸಿರಿಯಾಳಕೊಪ್ಪಕ್ಕೆ ೮-೧೦ ಮೈಲಿರುವ ಕೈ. ಶ್ರೀ ಕಬ್ಬೂರ ಶರಣರಿಂದ ಆಳವಾಗಿ ಅಭ್ಯಾಸ ಮಾಡಿದ್ದರು. ಎಲ್ಲಾ ವೀರಶೈವಾಗಮಗಳೆಲ್ಲವೂ ಮತ್ತು ಗ್ರಂಥಗಳೂ ಸಹ ಇವರಿಗೆ ಕರತಲಾಮಕಗಳಾಗಿದ್ದವು.

ಶ್ರೀ ಚನ್ನಮಲ್ಲಪ್ಪನವರು ಉಪಾಧ್ಯಾಯ ವೃತ್ತಿಯಿಂದ ನಿವೃತ್ತರಾದ ನಂತರ ಶ್ರೀ "ಚನ್ನಮಲ್ಲಿಕಾರ್ಜುನ"ರೆಂಬ ನಾಮಧೇಯದಿಂದ ತಮ್ಮ ಧರ್ಮ ಪ್ರಸಾರ ಕಾರ್ಯದಲ್ಲಿ ಪ್ರವೃತ್ತರಾಗಿದ್ದರು. ಹೀಗೆ ಹೆಸರನ್ನು ಬದಲಾಯಿಸಿದಾಗ ಆ ವಿಷಯವನ್ನು ಸರ್ಕಾರದ ಗೆಜೆಟ್ಟಿನಲ್ಲಿ ಪ್ರಸಿದ್ಧಪಡಿಸಿ ಖಜಾನೆ ಅಧಿಕಾರಿಗಳಿಗೆ ತಿಳಿಸಿದರೆ ಮಾತ್ರ ನಿವೃತ್ತಿ ವೇತನವನ್ನು ಬದಲಿ ಹೆಸರಿನಲ್ಲಿ ಕೊಡುತ್ತಾರೆ. ಈ ಕ್ರಮವನ್ನು ಕೈಕೊಳ್ಳಲು ಅನಾಸಕ್ತಿಯಿಂದಲೊ ಬೇರೆ ಕಾರಣದಿಂದಲೇ ಇವರು ವರ್ಷಾನುಗಟ್ಟಲೆ ನಿವೃತ್ತಿ ವೇತನವನ್ನು ಖಜಾನೆಯಿಂದ ಪಡೆದಿರಲಿಲ್ಲ. ಅವರ ವೈರಾಗ್ಯ ಜೀವನಕ್ಕೆ ಈ ಹೆಚ್ಚಿನ ಹಣದ ಅವಶ್ಯಕತೆಯೂ ಇರಲಿಲ್ಲ. ಈ ವಿಷಯವು ಈ ಲೇಖಕನಿಗೆ ತಿಳಿದ ಮೇಲೆ, ಹೆಸರು ಬದಲಾವಣೆಗೆ ನಡೆಸಬೇಕಾದ ಕ್ರಮವನ್ನನುಸರಿಸಿ ಸರ್ಕಾರದ ಗೆಜೆಟ್ಟಿನಲ್ಲಿ ಅದನ್ನು ಪ್ರಸಿದ್ಧಪಡಿಸಿ ನಂತರ ಹಿಂದಿನ ನಿವೃತ್ತಿ ವೇತನವನ್ನೆಲ್ಲಾ ಪಡೆದಹ್ನಾಯಿತು. ಈ ಹಣದಿಂದ ಅವರು ತಮ್ಮ ಧರ್ಮ ಗ್ರಂಥ ಪ್ರಸಾರಕ್ಕಾಗಿ ಒಂದು ಅಚ್ಚುಕೂಟವನ್ನು ಸಂಪಾದಿಸಿಕೊಂಡರು.

ಶ್ರೀಯುತರು ಭಾರತ ದೇಶದಲ್ಲಿರುವ ಅನೇಕ ವೇದಾಂತ ಗ್ರಂಥಗಳನ್ನು ಅಭ್ಯಾಸ ಮಾಡಿದ್ದಲ್ಲದೆ, ಜರ್ಮನಿ ದೇಶದ ಒಬ್ಬ ವೇದಾಂತಿಯ ಸಂಗಡ ಕ್ರಮವಾಗಿ ಪತ್ರವ್ಯವಹಾರವನ್ನಿಟ್ಟುಕೊಂಡಿದ್ದರು. ಆದರೆ ಎರಡನೇ ಮಹಾಯುದ್ಧದಿಂದ ಉಂಟಾದ ಪರಿಸ್ಥಿತಿಯಿಂದ ಆತನ ಸಂಪರ್ಕ ಕಡಿದುಹೋಗಿರಬೇಕು. ತದನಂತರ ಇವರು ತಮ್ಮ ಕಾರ್ಯಕ್ಷೇತ್ರವನ್ನು ಮತ್ತು ಮುದ್ರಣಾಲಯವನ್ನು ಮೈಸೂರು ರಾಜಧಾನಿಗೆ ವರ್ಗಾಯಿಸಿಕೊಂಡು ಅಲ್ಲಿ ತಮ್ಮ ಧರ್ಮ ಗ್ರಂಥಗಳ ಬಗ್ಗೆ ಅರಮನೆ ಮತ್ತು ಗುರುಮನೆ (ಶ್ರೀ ಶ್ರೀ ಸುತ್ತೂರು ಸಿಂಹಾಸನಾಧೀಶ್ವರರ) ಅನುಗ್ರಹ ಮತ್ತು ಆಶೀರ್ವಾದಗಳಿಗೂ ಪಾತ್ರರಾಗಿದ್ದರು. ಅಲ್ಲಿಂದಲೇ ತಮ್ಮ "ಸದ್ಧರ್ಮ ದೀಪಿಕೆ" ಎಂಬ ಮಾಸಿಕ ಪ್ರಕಟನೆಯನ್ನು ಹೊರಡಿಸುತ್ತಿದ್ದರು. ಇವರು ಮೈಸೂರಿನ ಓರಿಯಂಟಲ್ ಸಂಶೋಧನಾ ಸಂಸ್ಥೆಯಲ್ಲಿರುವ ಎಲ್ಲಾ ಗ್ರಂಥಗಳನ್ನು ಮತ್ತು ಹಸ್ತಪ್ರತಿಗಳನ್ನು ಅಭ್ಯಾಸ ಮಾಡಿ ವಿಮರ್ಶಾತ್ಮಕವಾದ ವಿಷಯಗಳನ್ನು ತಮ್ಮ ಮಾಸಿಕವಾಗಿದ್ದ "ಸದ್ಧರ್ಮ ದೀಪಿಕೆ"ಯಲ್ಲಿ ಪ್ರಕಟಿಸುತ್ತಿದ್ದರು. ಅವರಿಗೆ ಈ ಸಂಶೋಧನಾ ಸಂಸ್ಥೆಯ ನಿರ್ದೇಶಕರಾಗಿದ್ದ ಶ್ರೀ ಎಚ್. ದೇವೀರಪ್ಪನವರು ಮತ್ತು ಆಗ ಪಂಡಿತ ಪರೀಕ್ಷೆಯ ವಿದ್ಯಾರ್ಥಿಗಳಾಗಿ ಶ್ರೀ ಎರೆಸೀಮೆ ಚನ್ನಪ್ಪನವರು ಬಹಳವಾಗಿ ಬೆಂಬಲ ನೀಡುತ್ತಿದ್ದರು. ಈಗಲೂ ಈ ಮಹನೀಯರೇ ಈ ಚನ್ನಮಲ್ಲಿಕಾರ್ಜುನರ ಸ್ಮರಣ ಸಂಚಿಕೆಯನ್ನು ಪ್ರಸಿದ್ಧಪಡಿಸಲು ಕಾರಣಪುರುಷರಾಗಿದ್ದರು.

ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಅಗಾಧ ಪಾಂಡಿತ್ಯದಿಂದಲೂ ಆಳವಾದ ಪರಿ

ಶೋಧನೆಯಿಂದಲೂ, ಮಹಾದೇವಿಯಕ್ಕನ ಸರಗಳೆ ಶ್ರೀ ರೇವಣಸಿದ್ಧೇಶ್ವರ ಚರಿತ್ರೆ (ಇದಕ್ಕೆ ಸರಕಾರದ ಬಹುಮಾನ ದೊರೆತಿದೆ) ಗಳನ್ನು ವಿಮರ್ಶೆಮಾಡಿ, ತಾವೇ ಪ್ರಕಟ ಪಡಿಸಿದರು. ಇವುಗಳಲ್ಲಿ ಒಂದೆರಡು ಮೈಸೂರು ವಿಶ್ವವಿದ್ಯಾನಿಲಯದ ತರಗತಿಗಳಿಗೆ ಪಠ್ಯಪುಸ್ತಕವಾಗಿಯೂ ನಿಯತವಾಗಿದ್ದವು.

ಇವರ ವೈರಾಗ್ಯ ಜೀವನದ ಬಗ್ಗೆ ಒಂದೆರಡು ನಿದರ್ಶನಗಳನ್ನು ಹೇಳಬಹುದು. ಇವರು ಶಿರಿಯಾಳಕೊಪ್ಪದ ಸುತ್ತಮುತ್ತಲಿನಲ್ಲಿ ಕೆಲವು ಜಮೀನುಗಳನ್ನು ಕೊಂಡು ಅವುಗಳಿಂದ ಬಂದ ದವಸವನ್ನು ತಮ್ಮ ಮನೆಯಲ್ಲಿಟ್ಟು ಹೋಗುವಂತೆ ರೈತರಿಗೆ ಹೇಳುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಈ ದವಸವು ವರ್ಷಾನುಗಟ್ಟಲೇ ಹಾಗೆಯೇ ಇರುತ್ತಿತ್ತು. ಯಾರೋ ಇವರ ಹಿತಚಿಂತಕರು ಇದನ್ನು ಮಾರಿ ಇವರಿಗೆ ಹಣ ಸಲ್ಲಿಸುತ್ತಿದ್ದರು. ಇವರ ಪುಸ್ತಕ ಭಂಡಾರವೆಲ್ಲಾ ಈ ದವಸದ ರಾಸಿಯ ಮೇಲೆಯೇ ಇರುತ್ತಿದ್ದಿತು. ಕಾರಣ ಕೇಳಿದರೆ ಈ ಪುಸ್ತಕಗಳನ್ನು ಇಲಿ, ಹೆಗ್ಗಣಗಳು ಮುಟ್ಟಬೇಕಾದರೆ ಮೊದಲು ದವಸ ತಿಂದು ಇನ್ನು ತೃಪ್ತಿಯಾಗದಿದ್ದಲ್ಲಿ ಮಾತ್ರ ಪುಸ್ತಕಗಳ ತಂಟೆಗೆ ಬರುತ್ತವೆ. ದವಸವೇ ಯಥೇಚ್ಛವಾಗಿರುವಾಗ, ಅವು ಪುಸ್ತಕ ಭಂಡಾರದ ತಂಟೆಗೆ ಬರುವುದಿಲ್ಲವೆಂಬುದು ಅವರ ವಾದ.

ಶ್ರೀ ಚನ್ನಮಲ್ಲಿಕಾರ್ಜುನರು ಮೈಸೂರಿನಲ್ಲಿರುವ ತರುಣದಲ್ಲಿ ಎರಡನೇ ಮಹಾಯುದ್ಧದ ಪರಿಣಾಮವಾಗಿ, ಪಡಿತರ ಪದ್ಧತಿ ಜಾರಿಯಲ್ಲಿದ್ದಿತು. ಇವರು ದಿನದಲ್ಲಿ ಒಂದೇ ಸಾರಿ ಸ್ನಾನ ಪೂಜಾ ಅನುಷ್ಠಾನ ಆಹಾರ ಪ್ರಸವನ್ನು ಅನುಸರಿಸುತ್ತಿದ್ದರೆಂದು ಹಿಂದೆಯೇ ಹೇಳಿಬೆಯಷ್ಟೇ. ಒಂದು ದಿನ ನಾನು ಅವರು ಭೇಟಿಯಾಗಿ ಪಡಿತರದ ವಿಷಯದಲ್ಲಿ ಕಾರ್ಡು ಮಾಡಿಸಿದ್ದೀರಾ ಎಂಬುದಾಗಿ ಅವರನ್ನು ಕೇಳಿದಾಗ– ಈ ಪಡಿತರದ ವಿಷಯವೇ ತಮಗೆ ಗೊತ್ತಿಲ್ಲವೆಂದೂ, ಮಾರುಕಟ್ಟೆಯಲ್ಲಿ ಅಕ್ಕಿ ವಗೈರೆಗಳು ಬೇಕಾದಷ್ಟು ಬೇಕಾದಾಗ ಸಿಕ್ಕದಿರುವಾಗ, ಸುಲಭವಾಗಿ ಸಿಕ್ಕುವ ಹೆಸರುಕಾಳು, ಬೇಳೆ ಮುಂತಾದ ಧಾನ್ಯಗಳನ್ನು ಬೇಯಿಸಿ ಪಕ್ವಾನ್ನ ಮಾಡಿಕೊಂಡು ಶಿವಾರ್ಪಣೆ ಮಾಡುತ್ತಿರುವುದಾಗಿ ತಿಳಿಸಿದರು. ಇದರಿಂದ ತಮಗೆ ಯಾವ ತೊಂದರೆಯೂ ಸಂಭವಿಸಿಲ್ಲವೆಂದೂ ಹೇಳಿದರು.ಆದರೂ ನಾನು ಅವರಿಗೋಸ್ಕರ ಒಂದು ಪಡಿತರಕಾರ್ಡನ್ನು ಅವರ ಹೆಸರಿನಲ್ಲಿ ಮಾಡಿಸಿಕೊಟ್ಟರೂ ಅದರ ಉಪಯೋಗವನ್ನು ಮಾಡಿಕೊಂಡರೆಂಬುವನ್ನು ಹೇಳಲಾರೆ.

ಶ್ರೀ ಚನ್ನಮಲ್ಲಿಕಾರ್ಜುನರವರು ತಮ್ಮ ಜೀವಿತ ಕಾಲದಲ್ಲಿಯೇ ಶಿರಿಯಾಳಕೊಪ್ಪದಲ್ಲಿ ಶ್ರೀ ಸಿದ್ಧೇಶ್ವರ ಪ್ರಸಾದ ನಿಲಯವೆಂಬ ಒಂದು ಉಚಿತ ವಿದ್ಯಾರ್ಥಿ ವಸತಿಯನ್ನು ಏರ್ಪಡಿಸಿ ತಮ್ಮ ಸ್ವಂತವಾಗಿದ್ದ ವಿಶಾಲವಾದ ಮನೆಯನ್ನೆ ಅದಕ್ಕೆ ಕೊಟ್ಟಿದ್ದರು. ೧೯೭೨ನೇ ಜನವರಿ ಎರಡರಂದು (ತಮ್ಮ ೮೮ನೇ ವಯಸ್ಸಿನಲ್ಲಿ) ಶಿರಿಯಾಳಕೊಪ್ಪದಲ್ಲಿ ಶಿವಾಧೀನರಾಗುವುದಕ್ಕೆ ಮುನ್ನ ತಮ್ಮ ವಿಶಿಷ್ಟ ಆಸ್ತಿ–ಪಾಸ್ತಿಗಳನ್ನು ಬೆಂಗಳೂರಿನ ಶ್ರೀ ಸರ್ಪಭೂಷಣಮಠ ಮತ್ತು ಶಿರಿಯಾಳಕೊಪ್ಪದ ಶ್ರೀ ವಿರಕ್ತಮಠಗಳ ಅಧ್ಯಕ್ಷರಾದ ಷ. ಬ್ರ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ನೇತೃತ್ವದಲ್ಲಿ ಒಂದು ಟ್ರಸ್ಟ ಮಾಡಿ ಆ ಟ್ರಸ್ಟಿನ ಕಮಿಟಿ ಮೆಂಬರುಗಳು ಟ್ರಸ್ಟ ಪತ್ರದ ಕರಾರುಗಳ ಪ್ರಕಾರ ವಾರ್ಷಿಕ ಆದಾಯವನ್ನು ವಿನಿಯೋಗಿಸಬೇಕೆಂದು ಈಶ್ವರ ಪ್ರೇರಣೆಯಿಂದ ವಿಧಾಯ ಮಾಡಿ, ಈಶ್ವರನ ಶರೀರವನ್ನು ತ್ಯಾಗಮಾಡಿ ಪರಮಾತ್ಮನಲ್ಲಿ ಐಕ್ಯರಾದರು.

# ಪುಣ್ಯಜೀವಿ ಚನ್ನಮಲ್ಲಪ್ಪ ಮಾಸ್ತರರು

ಪ್ರೊ. ಸ. ಸ. ಮಾಳವಾಡ

೧೯ನೆಯ ಶತಕದ ಉತ್ತರಾರ್ಧದಲ್ಲಿ ಜನಿಸಿದ ಕೆಲವು ಪುಣ್ಯಜೀವಿಗಳು ವೀರಶೈವ ಧರ್ಮ, ಸಾಹಿತ್ಯ ಸಂಸ್ಕೃತಿಗಳಿಗೆ ಮಹತ್ತರವಾದ ಸೇವೆ ಸಲ್ಲಿಸಿದರು. ಅವರು ಅಂದು ಹಚ್ಚಿದ ಸಣ್ಣ ಸೊಡರು ಈಗ ವೀರಶೈವ ಸಾಹಿತ್ಯ ಸಂಶೋಧನೆ ಪ್ರಕಟನೆಗಳ ದಿಸೆಯಲ್ಲಿ ದೊಡ್ಡ ಬೆಳಕಾಗಿ ಪರಿಣಮಿಸಿದೆ. ಇಂತಹ ಪುಣ್ಯಜೀವಿಗಳಲ್ಲಿ ಶಿರಾಳಕೊಪ್ಪದ ಚನ್ನ ಮಲ್ಲಪ್ಪ ಮಾಸ್ತರರು ಒಬ್ಬರಾಗಿದ್ದಾರೆ.

ಭಾರತ ದೇಶದ ಸ್ವಾತಂತ್ರ್ಯ, ಕರ್ನಾಟಕ ಏಕೀಕರಣ, ವಿಶ್ವವಿದ್ಯಾಲಯ ಅನುದಾನ ಆಯೋಗ ರಚನೆಗಳಿಂದಾಗಿ ಈಗ ವೀರಶೈವ ಸಾಹಿತ್ಯ ಸಂಶೋಧನೆ, ಪ್ರಕಟನೆಗಳಿಗೆ ಹೆಚ್ಚಿನ ಅವಕಾಶ ಅನುಕೂಲತೆಗಳು ಒದಗಿಬರುವಂತಾಗಿದೆ. ಹೆಚ್ಚಿನ ಸಾಮಗ್ರಿ ಬೆಳಕಿಗೆ ಬಂದಿದೆ. ಕಾರ್ಯಕರ್ತರ ಸಂಖ್ಯೆ ಹೆಚ್ಚಿದೆ. ಕೈಕೊಂಡ ಕಾರ್ಯಕ್ಕಾಗಿ ಪ್ರಸಿದ್ಧಿ ಪ್ರಶಸ್ತಿ ಸತ್ಕಾರಗಳು ದೊರೆಯುವ ಸಂದರ್ಭಗಳಿವೆ. ಅಂತೆಯೆ ದೊಡ್ಡ ಗಾತ್ರದ ಆಕರ್ಷಕ ಪ್ರಕಟನೆಗಳು ಬರುವುದು ಸಾಧ್ಯವಾಗಿದೆ. ಆದರೆ ಇಂತಹ ಅನುಕೂಲತೆಯಿಲ್ಲದ ವಿಷಮ ಪರಿಸ್ಥಿತಿಯಲ್ಲಿ ಬಡತನ, ತೊಡಕು, ಅನಾದರ ಕಷ್ಟಗಳನ್ನು ಎದುರಿಸಿಯೂ ವೀರಶೈವ ಸಾಹಿತ್ಯದ ವ್ಯಾಸಂಗ, ಪ್ರಕಟನೆಗಳಿಗಾಗಿ ಮುಂದೆ ಬಂದು ನಿಷ್ಠುರ ತಪಸ್ಸನ್ನು ಕೈಕೊಂಡವರಲ್ಲಿ ವಚನಪಿತಾಮಹ ಹಳಕಟ್ಟಿ ಮತ್ತು ಚನ್ನಮಲ್ಲಪ್ಪ ಮಾಸ್ತರ ಇವರು ಪ್ರಮುಖರಾಗಿದ್ದಾರೆ.

'ಶಿವಾನುಭವ' 'ಸದ್ಧರ್ಮ ದೀಪಿಕೆ'ಗಳಂತಹ ಪತ್ರಿಕೆಗಳನ್ನು ಅವರು ಆಗ ನಡೆಸಿಕೊಂಡು ಬಂದುದು ಸಾಹಸವೆನ್ನಬೇಕು. ಆ ಪತ್ರಿಕೆಗಳ ಮೂಲಕ ವೀರಶೈವ ಸಾಹಿತ್ಯದ ಬಗೆಗೆ ಮಹತ್ವಪೂರ್ಣ ಜಾಗೃತಿ ನಮ್ಮ ನಾಡಿನಲ್ಲಿ ತಲೆದೋರುವಂತಾಯಿತು. ಅವರಿಂದಾಗಿ ವೀರಶೈವ ಸಾಹಿತ್ಯದ ವ್ಯಾಸಂಗಕ್ಕೆ ಹೊಸ ಕ್ಷಿತಿಜವು ಒದಗಿತು. ಹೆಚ್ಚಿನ ಸಂಶೋಧನೆಗೆ ಪ್ರಚೋದನೆ ದೊರೆಯಿತು. ಈ ದೃಷ್ಟಿಯಿಂದ ಈ ಇಬ್ಬರೂ ಪುಣ್ಯಜೀವಿಗಳು ವೀರಶೈವರಿಗೆ ನಿತ್ಯ ಸ್ಮರಣೀಯರಾಗಿದ್ದಾರೆ.

'ಸದ್ಧರ್ಮ ದೀಪಿಕೆ'ಯ ಹಳೆಯ ಪ್ರತಿಗಳನ್ನು ನೋಡಬೇಕು. ಆ ಪತ್ರಿಕೆಯ ಪುಟಗಳ ಸಂಖ್ಯೆ, ಹೊದಿಕೆಯ ಪುಟ, ಬಳಸಿದ ಕಾಗದ, ಮುದ್ರಣದ ರೀತಿ– ಇವೆಲ್ಲವೂ ಚನ್ನಮಲ್ಲಿಕಾರ್ಜುನರ ಕಷ್ಟ ಕಾರ್ಪಣ್ಯಗಳನ್ನು ಎತ್ತಿ ಹೇಳುವಂತೆ ಬಡವಾಗಿವೆ. ಆದರೆ ವ್ಯಾಸಂಗ ಪ್ರಚೋದಕ, ಮತ್ತು ವೀರಶೈವ ಸಮಾಜ ಪ್ರವರ್ಧಕ ಲೇಖನಗಳಿಂದ ಆ ಸಂಚಿಕೆಗಳು ಕೂಡಿವೆ. ಚನ್ನಮಲ್ಲಿಕಾರ್ಜುನರ ವೀರಶೈವ ನಿಷ್ಠೆ ಮತ್ತು ಅವರ ಕಷ್ಟ ಕಾರ್ಪಣ್ಯಗಳ ನಡುವೆ ಸದಾ ಪಂದ್ಯಾಟವೇ ನಡೆದಿತ್ತು ಆದರೆ ಈ ಪಂದ್ಯಾಟವಲ್ಲಿ ಅವರ

ನಿಷ್ಠೆಗೇ ಗೆಲುವು ದೊರೆಯಿತೆಂಬ ಸಂಗತಿಯನ್ನು ನಾವು ಸ್ಮರಣೆಯಲ್ಲಿಟ್ಟುಕೊಳ್ಳಬೇಕಾಗಿದೆ. ಈ ಪತ್ರಿಕೆಯನ್ನು ಅವರು ೧೯೩೧ ರಿಂದ ೧೯೬೨ರ ವರೆಗೆ ನಡೆಸಿದರು. ಹಲವಾರು ಮಹತ್ವದ ಲೇಖನಗಳನ್ನು ಪ್ರಕಟಿಸಿದರು. ಹೆಚ್ಚು ಲೇಖನಗಳನ್ನು ಅವರೇ ಸ್ವತಃ ಬರೆದರು. ಪತ್ರಿಕೆಯ ಮೂಲಕ ಕೆಲವು ಗ್ರಂಥಗಳ ಪ್ರಕಟನೆಯೂ ಸಾಧ್ಯವಾಯಿತು.

೧೯೩೭ರ ಆರಂಭದಲ್ಲಿ ನಾನು ಪ್ರಥಮತಃ ಚನ್ನಮಲ್ಲಪ್ಪ ಮಾಸ್ತರರನ್ನು ಕಂಡೆ. ಅದಕ್ಕೆ ಪೂರ್ವದಲ್ಲಿ ಅವರ ಲೇಖನಗಳ ಪರಿಚಯ ನನಗೆ ಆಗಿತ್ತು ಅವರ ಲೇಖನಗಳಿಂದ ನನ್ನ ವ್ಯಾಸಂಗಕ್ಕೆ ನಾನು ಪ್ರಯೋಜನವನ್ನು ಪಡೆದುಕೊಂಡಿದ್ದೆ. ಆ ವರುಷ ನಾನು ಶಿರಾಳಕೊಪ್ಪ ಕರ್ಣಾಟಕ ಸಂಘದ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಯಾಗಿ ಹೋದೆ. ನನ್ನನ್ನು ಆಮಂತ್ರಿಸುವುದಕ್ಕೆ ಚನ್ನಮಲ್ಲಪ್ಪ ಮಾಸ್ತರರ ಸೂಚನೆಯೂ ಕಾರಣವಾಗಿರಬೇಕು.

ಶಿರಾಳಕೊಪ್ಪಕ್ಕೆ ಹೋದ ನಾನು ಅವರನ್ನು ಅವರ ವಾಸಸ್ಥಾನದಲ್ಲಿ ಮತ್ತೆ ಸಭೆಯಲ್ಲಿ ಕಂಡೆ. ತೀರ ಸಾದಾ ಅಚ್ಚುಕಟ್ಟಾಗಿಲ್ಲದ ವೇಷ. ವಿದ್ರೂಪಗೊಂಡ ಅವಯವಗಳು. ಕಣ್ಣಿನ ಕುರುಡು. ದುರ್ವಿಧಿಯು ಅವರಿಗೆ ಅಂಟಿಕೊಂಡು ಅವರನ್ನು ಅಟ್ಟಿಸಿಕೊಂಡು ಕಾಡುತ್ತಿರುವ ಚಿತ್ರವದು ಆದರೆ ದುರ್ವಿಧಿಯ ಆಟವನ್ನು ಧೀರತನದಿಂದ ಎದುರಿಸಿದ ಕೆಚ್ಚೆದೆ, ಧೀರ ಮನಸ್ಸು ಅವರವಾಗಿದ್ದವು. ವೀರಶೈವ ಸಾಹಿತ್ಯಕ್ಕೆ ಸಮಾಜಕ್ಕೆ ಸತತ ಸೇವೆ ಸಲ್ಲಿಸುವ ದಾಸೋಹ ಭಾವದ ಪ್ರತೀಕದಂತಿದ್ದರು ಚನ್ನಮಲ್ಲಪ್ಪ ಮಾಸ್ತರರು. ಹೊರಗಿನ ವೇಷ, ದೇಹ ಸೌಷ್ಟವ, ಜಾಣತನದ ಮಾತುಗಾರಿಕೆಗಳಿಂದ ಕೂಡಿರುವವರಲ್ಲಿ ಕಂಡುಬಾರದ ಸಂಸ್ಕೃತಿ ಅವರಲ್ಲಿ ಮನೆ ಮಾಡಿದಂತಿತ್ತು. ಮನೆಯಲ್ಲಿ ಸ್ವಂತಕ್ಕಾಗಿ ದುಡಿಯುತ್ತಿದ್ದರು. ಸಾಹಿತ್ಯ, ಸಮಾಜ ಸೇವೆಯ ವ್ರತವನ್ನು ಕೈಕೊಂಡಿದ್ದರು. ಶಿರಾಳಕೊಪ್ಪ ಕರ್ಣಾಟಕ ಸಂಘಕ್ಕಾಗಿಯೂ ಮನಮುಟ್ಟಿ ದುಡಿಯುತ್ತಿದ್ದರು. ನಾನು ಆಗ ಕಂಡ ಅವರ ಮನೆಯು ಮುಂದೆ 'ಸಿದ್ಧೇಶ್ವರ ನಿಲಯ'ವೆಂಬ ಹೆಸರಿನಿಂದ ವಿದ್ಯಾರ್ಥಿ ನಿಲಯವಾಗಿ ಮಾರ್ಪಟ್ಟಿತು. ತಮ್ಮದೆಲ್ಲವನ್ನು ಮಾಸ್ತರರು ಸಮಾಜಕ್ಕಾಗಿ ಬಿಟ್ಟು ಹೋದರು. ಜೀವಿಸುತ್ತಿರುವಾಗಲೂ ಸಮಾಜದ ಬಗೆಗೆ ಕಳಕಳಿ. ಕಾಯವಿದ್ದಾಗ ಕಾಯಕ ನಿಷ್ಠೆ ಕಾಯವಳಿದ ನಂತರವೂ ಸಮಾಜದ ಬಗೆಗೆ ತಮ್ಮ ಸೇವೆಯು ಮುಂದುವರೆಯಿತೆಂಬುದು ಅವರ ಯೋಜನೆ.

ಚನ್ನಮಲ್ಲಪ್ಪ ಮಾಸ್ತರರ ವ್ಯಾಸಂಗವು ವೀರಶೈವ ವಾಙ್ಮಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಪ್ರಾಕ್ತನ ವಿಮರ್ಶೆಯ ಬಗೆಗೂ ಅವರಿಗೆ ಆಸ್ಥೆಯಿತ್ತು. ಮೈಸೂರು ಶಾಸನ ಇಲಾಖೆಯ ಡೈರೆಕ್ಟರ್ ಎಂ. ಶೇಷಾದ್ರಿ ಅವರು ಮಾಸ್ತರರ ರೇವಣಸಿದ್ಧ ಚರಿತ್ರೆಯನ್ನು ವಿಮರ್ಶಿಸುತ್ತ ಹೀಗೆ ಹೇಳಿದ್ದಾರೆ.

"ಸದ್ಧರ್ಮ ದೀಪಿಕೆ"ಯ ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಈ ಗ್ರಂಥದಲ್ಲಿ ರೇವಣಸಿದ್ಧರ ಚರಿತ್ರೆಯನ್ನು ಬೆಳಕಿಗೆ ತಂದು, ಅದು ಎಲ್ಲರಿಗೂ ತಿಳಿಯುವಂತೆ ಸುಲಭವಾದ ಶೈಲಿಯಲ್ಲಿ ಪ್ರಕಟಿಸಿ ನಮ್ಮ ಮುಂದೆ ಇಟ್ಟಿದ್ದಾರೆ. ಅವರು ಈ ಗ್ರಂಥವನ್ನು ಬರೆಯುವ ಮುನ್ನ ಪ್ರಾಕ್ತನ ಇಲಾಖೆಯ ಪುಸ್ತಕ ಭಾಂಡಾರದ ಶಾಸ

ಸದ ಪುಸ್ತಕಗಳನ್ನೆಲ್ಲಾ ಕೂಲಂಕಷವಾಗಿ ವ್ಯಾಸಂಗ ಮಾಡಿ, ಪರೀಕ್ಷಿಸಿ ರೇವಣಸಿದ್ಧರ ಜೀವನಕ್ಕೆ ಸಂಬಂಧಿಸಿದ ಅನೇಕ ಉಪಯುಕ್ತವಾದ ವಿಷಯಗಳನ್ನು ಸಂಗ್ರಹಿಸಿದ್ದಾರೆ.

ಒಂದು ಗ್ರಂಥದ ಉಪಯುಕ್ತತೆಯಾಗಲಿ, ಅಥವಾ ಮಹತ್ವವಾಗಲಿ ಗ್ರಂಥಕರ್ತರ ಅಭಿಪ್ರಾಯಗಳು ಇತರ ಬರೆಹಗಾರರ ಅಭಿಪ್ರಾಯಗಳಿಗೆ ಸರಿ ಹೋಗುವುವೇ ಅಥವಾ ವಿರುದ್ಧವಾಗಿವೆಯೇ ಇವುಗಳ ಮೇಲೆ ನಿಲ್ಲಲಾರದು.........ಈ ಗ್ರಂಥವನ್ನು ರಚಿಸಲು ಶ್ರಮಿಸಿದ ಶ್ರೀ ಚನ್ನಮಲ್ಲಿಕಾರ್ಜುನರು ಅಭಿನಂದನಾರ್ಹರು.

–ಎಂ. ಶೇಷಾದ್ರಿ (೧೯೫೮)

ಮಾಸ್ತರರು ಶಾಸನಗಳ ವ್ಯಾಸಂಗವನ್ನು ಕೈಕೊಂಡು ಅವುಗಳನ್ನು ಕುರಿತ ಲೇಖನಗಳನ್ನು "ಸದ್ಧರ್ಮ ದೀಪಿಕೆ"ಯಲ್ಲಿ ಪ್ರಕಟಿಸಿದ್ದಾರೆ. ಶ್ರೀ ರೇವಣಸಿದ್ಧರ ಚರಿತ್ರೆ, ಶ್ರೀ ಬಸವೇಶ್ವರನ ಕಾಲ, ಎಂಬ ತಮ್ಮ ಎರಡು ಕೃತಿಗಳಲ್ಲಿ ಶಾಸನಗಳನ್ನು ವಿಪುಲವಾಗಿ ಬಳಸಿದ್ದಾರೆ.

ಪರಶಿವನ ಅವತಾರವೆಂದು ಭಾವಿಸಲಾದ ಬಸವಣ್ಣನವರು ಪೂಜಾರ್ಹ ವ್ಯಕ್ತಿಯೇನೋ ಅಹುದು. ಆದರೆ ಅಂತಹ ವ್ಯಕ್ತಿಯ ಬಾಳನ್ನು ಮಾಸ್ತರರು ಸಂಶೋಧನೆಗೆ ವಿಮರ್ಶೆಗೆ ಒಡ್ಡಿ ಅವರ ಕಾಲ ನಿರ್ಣಯವನ್ನು ಕುರಿತು ಅನೇಕ ವರುಷಗಳ ಹಿಂದೆಯೇ ಗ್ರಂಥ ರಚಿಸುವ ಸಾಹಸ ಕೈಕೊಂಡರು. ಅವರಲ್ಲಿಯ ನಿರ್ಣಯಗಳ ಬಗೆಗೆ ಎಂ. ಶೇಷಾದ್ರಿ ಅವರು ಹೇಳಿದ ಅಂಶಗಳನ್ನು ನಾವು ಗಮನಿಸುವುದು ಒಳ್ಳೆಯದು. ಆ ಗ್ರಂಥದಲ್ಲಿಯ ನಿರ್ಣಯಗಳು ಬಸವಣ್ಣನವರ ಜೀವನದ ಬಗೆಗೆ ಹೆಚ್ಚಿನ ವ್ಯಾಸಂಗಕ್ಕೆ ಪ್ರಚೋದನೆಯನ್ನು ಒದಗಿಸಿದ ಸಂಗತಿಯು ಮಹತ್ವದ್ದಾಗಿದೆ.

ಹಲಸಂಗಿ ಚನ್ನಮಲ್ಲಪ್ಪನಂತೆ ಈ ಚನ್ನಮಲ್ಲಪ್ಪನೂ ಒಬ್ಬ "ಜ್ಞಾನಭಿಕ್ಷು" ಸಂಸಾರದ ತಾಪತ್ರಯ, ಉಚ್ಚ ಶಿಕ್ಷಣದ ಅಭಾವ, ಅನಾನುಕೂಲ ಪರಿಸ್ಥಿತಿ ಇರುವಾಗಲೂ ಈ ಇಬ್ಬರು ಚನ್ನಮಲ್ಲಪ್ಪ ಅವರು ತೋರಿದ ಜ್ಞಾನಾರ್ಜನೆಯ ಹಂಬಲವು ಅತ್ಯಂತ ಪ್ರಶಂಸನೀಯವಾದುದು. ಈ ಗುಂಪಿಗೆ ಸೇರುವ ಆಧುನಿಕ ಕರ್ಣಾಟಕದ ಇನ್ನೊಬ್ಬ ವ್ಯಕ್ತಿ ಉತ್ತಂಗಿ ಚನ್ನಪ್ಪ ಬಹುಶಃ ಈ ಹೆಸರಿನಲ್ಲಿಯೇ ಏನೋ ವಿಶೇಷವಿದ್ದಂತಿದೆ. ಇಂದಿನ ತರುಣ ಮತ್ತು ಪ್ರೌಢ ವ್ಯಾಸಂಗಿಗಳು ವ್ಯಾಸಂಗ ರಂಗದಲ್ಲಿದ್ದರೂ ರಾಜಕಾರಣ ಮಾಡಿಯೇ ಪ್ರತಿಷ್ಠೆ ಪಡೆಯಬೇಕೆನ್ನುವವರು ಈ ಚನ್ನಪ್ಪತ್ರಯದ ಮಾದರಿಯನ್ನು ಅನುಸರಿಸುವುದಾದರೆ ಕನ್ನಡದ ಭಾಗ್ಯ ತೆರೆದಂತಾಗುವುದು. ಈ ದೃಷ್ಟಿಯಿಂದ ಚನ್ನಮಲ್ಲಪ್ಪ ಮಾಸ್ತರರ ಸ್ಮರಣೆಯು ಈಗ ಅತ್ಯಂತ ಆವಶ್ಯಕವೆನಿಸಿದೆ.

ಸಂಶೋಧನೆಯ ಬಗೆಗೆ ಚನ್ನಮಲ್ಲಪ್ಪ ಮಾಸ್ತರರಿಗೆ ಆಸಕ್ತಿ ಬಹಳವಾಗಿತ್ತು. ಬಾಲ್ಯದಲ್ಲಿ ವ್ಯವಹಾರದ ಕಡೆಗೆ ಅವರ ಒಲವು ಇತ್ತಂತೆ. ಅವರು ಹುಟ್ಟಿದ್ದು ವ್ಯಾಪಾರಸ್ಥರ ಮನೆತನದಲ್ಲಿ. ತಂದೆ ನೂರಂದಪ್ಪ ಕೋರಿ ಅವರು ಹಾವೇರಿಯವರು. ಕಳೆದ ಶತಕದ ಉತ್ತರಾರ್ಧದಲ್ಲಿ ಹಾವೇರಿ ತೊರೆದು ಶಿರಾಳಕೊಪ್ಪಕ್ಕೆ ಹೋಗಿ ನೆಲೆಸಿದರು. ಅಲ್ಲಿ ಶಾಲೆಯ ಉಪಾಧ್ಯಾಯರಾದರು.

ಬಾಲ್ಯದಲ್ಲಿ ಕಂಡು ಬಂದಿದ್ದ ವ್ಯವಹಾರದ ಒಲವು ವಸ್ತು ಸಂಗ್ರಹದ ದೃಷ್ಟಿಯಾಗಿತ್ತು. ಅದು ಮುಂದೆ ಸಾಹಿತ್ಯ ಪ್ರಾಕ್ತನ ವಸ್ತುಗಳ ಸಂಗ್ರಹ ದೃಷ್ಟಿಯಾಗಿ ಪರಿಣಮಿಸಿತು. ಉಪಾಧ್ಯಾಯನ ಮಗ ಮಾಸ್ತರಿಕೆ ಉದ್ಯೋಗವನ್ನೇ ಕೈಕೊಂಡರು. ಕೋರೀಶೆಟ್ಟಿ ಬಸವಣ್ಣನವರ ಪರಮ ಭಕ್ತನಾದ ತಾಡವಾಲೆಯ ಗ್ರಂಥ, ಪುರಾತನ ವಸ್ತು ಸಂಗ್ರಹಿಸುವ ದೃಷ್ಟಿ ಬೆಳೆದುಬಂದಿತು. ಶಿರಾಳಕೊಪ್ಪಕ್ಕೆ ಹತ್ತಿರವಾಗಿದ್ದ ಬಳ್ಳಿಗಾವಿಯು ಪ್ರಾಕ್ತನ ವಿಷಯದಲ್ಲಿ ಆಸಕ್ತಿಯುಳ್ಳವರಿಗೆ ದೊಡ್ಡ ಭಾಂಡಾರ. ಬಳ್ಳಿಗಾವಿಯ ಬಗೆಗೆ ಮಾಸ್ತರರಿಗೆ ಬಹಳ ಆಸಕ್ತಿ. ಶಿರಾಳಕೊಪ್ಪಕ್ಕೆ ಹೋದಾಗ ನಾನು ಬಳ್ಳಿಗಾವಿ, ಉಡುತಡಿಗಳಿಗೆ ಭೆಟ್ಟಿಕೊಡಬೇಕೆಂದು ನನಗೆ ಹೇಳಿದರು. ಕರ್ಣಾಟಕ ಸಂಘದ ಸ್ನೇಹಿತರು ಅದಕ್ಕೆ ಅನುಕೂಲತೆ ಒದಗಿಸಿದರು. ಬಳ್ಳಿಗಾವಿಯ ದರ್ಶನದಿಂದ ನಾನು ಪ್ರಭಾವಿತನಾದೆ. ಮುಂದೆ ನಾನು ಬಳ್ಳಿಗಾವಿಯ ಬಗೆಗೆ ಮಹತ್ವದ ಲೇಖನ ಬರೆದೆ. ಉಡುತಡಿಯ ಪಯಣದಿಂದಾಗಿ ಅಕ್ಕಮಹಾದೇವಿಯ ಬಗೆಗೂ ಬರೆದೆ. ನನ್ನ ಆ ಲೇಖನಗಳು ಆಗ 'ಶಿವಾನುಭವ'ದಲ್ಲಿ ಪ್ರಕಟವಾದವು. ಚನ್ನಪ್ಪತ್ರ್ಯಯರೊಂದಿಗೆ ಹಳಕಟ್ಟಿಯವರೊಂದಿಗೆ ನಾನು ಪಡೆದ ಸಂಪರ್ಕವು ನನಗೆ ಬಹಳ ಪ್ರಯೋಜನಕಾರಿಯಾಗಿ ಪರಿಣಮಿಸಿತೆಂಬ ಸಂಗತಿಯನ್ನು ನಾನಿಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ.

ಶಿರಾಳಕೊಪ್ಪದ ಮನೆಯಲ್ಲಿ ಮಾಸ್ತರರು ಹಳೆಯ ತಾಡವಾಲೆಯ ಗ್ರಂಥ, ವೀರಶೈವ ವಾಙ್ಮಯದ ಪ್ರಕಟಿತ ಕೃತಿಗಳನ್ನು ಸಂಗ್ರಹಿಸಿ ಇಟ್ಟಿದ್ದರು. ಸತತವೂ ಕೆಲಸದಲ್ಲಿ ತೊಡಗಿರುತ್ತಿದ್ದರು. ಭಕ್ತಿಭಾವವು ಅವರ ಬಾಳಿಗೆ ಆಧಾರವಾಗಿತ್ತು. ಅನ್ವೇಷಣೆಯು ಅವರ ಬಾಳಿನ ಗುರಿಯಾಗಿತ್ತು.

ಅವರು ಸಂಪಾದಿಸಿ ಪ್ರಕಟಿಸಿದ (೧೯೩೩) "ಪುರಾತನ ದೇವಿಯರ ತ್ರಿವಿಧಿ" ಎಂಬ ಚಿಕ್ಕ ಪುಸ್ತಕದ ಜೀರ್ಣವಾದ ಒಂದು ಪ್ರತಿ ನನ್ನ ಸಂಗ್ರಹದಲ್ಲಿದೆ. ಅದರಲ್ಲಿ ಅವರು ಬರೆದ ಮಾತುಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಿ ಹೇಳಲಾಗುತ್ತಿದೆ :

"ಶಿರಾಳಕೊಪ್ಪದಲ್ಲಿ ಹಳೆಯ ಪ್ರತಿಗಳನ್ನು ಓದುತ್ತಿದ್ದಾಗ ಈ ಪುಸ್ತಕದೊಳಗಿನ ತ್ರಿವಿಧಿಯ ಪದಗಳು ಕೆಲವು ದೊರೆತವು. ದೇವಿಯರ ವಿಷಯವಾಗಿ ಪೂರ್ವಿಕರು ಹೀಗೆ ಬರೆದಿಟ್ಟಿರುವರಲ್ಲವೇ ಎಂಬ ಸಂತೋಷವುಂಟಾಯಿತು. ಆ ಪದ್ಯಗಳಿಗೆ ಕೊನೆಯಿಲ್ಲದಿದ್ದುದರಿಂದ ಇನ್ನೂ...ಹುಡುಕಬೇಕೆಂಬ ಯೋಚನೆಯುಂಟಾಯಿತು...ಚಿಕ್ಕಕಬ್ಬೂರಲ್ಲಿ ಇದ್ದ ಒಂದು ಪ್ರತಿಯಲ್ಲಿ ಈ ಪದ್ಯಗಳು ದೊರೆತವು...... ಇನ್ನೊಂದು ಪ್ರತಿಯನ್ನು ನೋಡಬೇಕೆಂಬ ಆಸೆಯು ಹುಟ್ಟಿತು.....ಚಿತ್ರದುರ್ಗದಲ್ಲಿ ಓಲೆಯ ಪ್ರತಿಗಳನ್ನು ನೋಡುತ್ತಿದ್ದಾಗ ಅಲ್ಲಿ ಒಂದು ಓಲೆಯ ಪ್ರತಿಯು ಸಾಂಗವಾಗಿದ್ದುದು ದೊರಕಿತು. ಅದರ ಸಹಾಯದಿಂದ ಪದ್ಯಗಳನ್ನು ಸರಿಪಡಿಸಿಕೊಂಡದ್ದಾಯಿತು......ಈ ದೇವಿಯರ ವಿಷಯಕವಾದ ಸಂಗತಿಗಳನ್ನು ದೊರಕಿಸುವ ಬಗೆ ಹೇಗೆ ? ಎಂಬ ಯೋಚನೆಯು ಅನಂತರ ಉಂಟಾಯಿತು. ಮತಗ್ರಂಥಗಳನ್ನು ಎಂದರೆ ವೀರಶೈವಾಮೃತ ಪುರಾಣ, ರಾಘವಾಂಕ ಕಾವ್ಯ, ಮಹಾದೇವಿಯಕ್ಕನ ಪುರಾಣ ಪ್ರೌಢರಾಯನ ಕಾವ್ಯ, ಬಸವರಾಜ ವಿಜಯ, ಚನ್ನಬಸವೇಶ ವಿಜಯ, ಶರಣ ಲೀಲಾಮೃತ, ಭಾವಚಿಂತಾರತ್ನ, ಸಿಂಗಿರಾಜ ಪುರಾಣ, ಪುರಾತನರ ಚರಿತ್ರೆ, ದೀಪದ ಕವಿ,

ಗಣಸಹಸ್ರನಾಮ ಮೊದಲಾದವುಗಳನ್ನು ಓದುವಾಗ ಅಲ್ಲಲ್ಲಿ ಈ ತ್ರಿವಿಧಿಯಲ್ಲಿ ಕಂಡವರ ವಿಷಯಗಳನ್ನು **ಸಂಗ್ರಹಿಸಿ** ಈ ಪುಸ್ತಕವನ್ನು ಸಿದ್ಧಪಡಿಸಿದ್ದಾಗಿದೆ". ಮೇಲ್ಕಂಡ ಮಾತುಗಳಿಂದ ಚನ್ನಮಲ್ಲಪ್ಪ ಮಾಸ್ತರರು ಅನ್ವೇಷಣೆಯ ಬಗೆಗೆ ತೋರುತ್ತಿದ್ದ ಶ್ರದ್ಧೆ ಪರಿಶ್ರಮಗಳ ಪರಿಚಯವುಂಟಾಗುವಂತಿದೆ. 'ದೇವಿಯರ ತ್ರಿವಿಧಿ' ಎಂಬುದು ಸುಮಾರು ೫೦ ಪುಟಗಳ ಚಿಕ್ಕ ಕೃತಿ ಅದನ್ನು ಸಿದ್ಧಗೊಳಿಸಲು ಅವರು ಪಟ್ಟ ಶ್ರಮ ಪ್ರಶಂಸನೀಯ. ಅದರಲ್ಲಿ ೫೩ ಪುರಾತನ ದೇವಿಯರನ್ನು ಕುರಿತು ಪದ್ಯಗಳಿವೆ. ಆ ಎಲ್ಲ ಪದ್ಯಗಳಿಗೆ ಮಾಸ್ತರರು ಭಾವಾರ್ಥ, ಶಬ್ದಾರ್ಥ, ವಿವರಣೆಗಳನ್ನು ಒದಗಿಸಿದ್ದಾರೆ. ಪಾಲ್ಕುರಿಕೆ ಸೋಮೇಶ್ವರ ಪುರಾಣದಿಂದ ಸಂಗ್ರಹಿಸಿದ ಹೆಚ್ಚಿನ ವಿಷಯಗಳನ್ನು ಕೊನೆಗೆ ಕೊಟ್ಟಿದ್ದಾರೆ. ಈ ಚಿಕ್ಕ ಪುಸ್ತಕವನ್ನು ೧೯೩೩ ರಲ್ಲಿ ಪ್ರಕಟಿಸಬೇಕಾದಾಗಲೂ ಒಬ್ಬ ದಾತೃಗಳ ನೆರವನ್ನು ಕೋರಬೇಕಾಯಿತು. ಆರಂಭದಲ್ಲಿ ದಾತೃಗಳ ಸಂಕ್ಷಿಪ್ತ ಚರಿತ್ರೆಯಿದೆ. ೧೧ ಪುಟಗಳ ಪ್ರಸ್ತಾವನೆಯಲ್ಲಿ ಪುರಾತನ ದೇವಿಯರನ್ನು ಕುರಿತು ಉಪಯುಕ್ತ ವಿಷಯವಿದೆ. ಶಿವಭಕ್ತಿಯಲ್ಲಿ ಪ್ರಸಿದ್ಧಿ ಹೊಂದಿದ ಇನ್ನುಳಿದ ದೇವಿಯರನ್ನು ಕುರಿತ 'ಪುಸ್ತಕವು ಯಾವಾಗ ಪ್ರಕಟವಾಗುವದೋ' ಎಂಬ ಹಂಬಲವು ಅಲ್ಲಿ ವ್ಯಕ್ತವಾಗಿದೆ. ಸದಾ ಸರ್ವತ್ರ ಶಿವಭಾವನೆಯನ್ನು ಅನುಭವಿಸಿದ 'ದೇವಿ'ಯರನ್ನು ಕುರಿತು ಮಾಸ್ತರರ ಭಕ್ತಿ ನಿರ್ಭರತೆಯು ಅಲ್ಲಿ ಹೊರಹೊಮ್ಮಿಬಂದಿದೆ. ಸಣ್ಣ ಪುಟ್ಟ ಸಂಗತಿಗಳಲ್ಲಿಯೂ ವ್ಯಕ್ತಿಯ ಹಿರಿಮೆ ವ್ಯಕ್ತವಾಗುವುದುಂಟು. ಈ ಚಿಕ್ಕ ಪುಸ್ತಕದ ವಾಚನದಿಂದ 'ಶಿವಭಕ್ತಿಯು ನೆಲೆಗೊಳ್ಳುವುದಾದರೆ ಅದೇ ಸದ್ಭಾಗ್ಯ' ಎಂಬುದು ಮಾಸ್ತರರ ನಂಬುಗೆಯಾಗಿದೆ. ಪುಸ್ತಕದ ರಚನೆ ಪ್ರಕಟನೆಗಳು ಅವರ ಪಾಲಿಗೆ ಹಣ ಗಳಿಸುವ ಪ್ರತಿಷ್ಠೆ ತರುವ ಸಾಧನಗಳಾಗಿರಲಿಲ್ಲ. ಶಿವಭಕ್ತಿಯು ಜನರಲ್ಲಿ ನೆಲೆಸಲಿ ಎಂಬ ಉದ್ದೇಶದಿಂದ ಪುಸ್ತಕ ಬರೆಯುವ ಅತಿವಿರಳ ಗುಂಪಿಗೆ ಸೇರಿದವರು ಚನ್ನಮಲ್ಲಪ್ಪ ಮಾಸ್ತರರು.

೩೦ ವರುಷ ಪತ್ರಿಕೆ ನಡೆಸಿದ ಅವರು ತಮ್ಮ ಹೆಸರಿನ ಪ್ರಚಾರವನ್ನು ಎಂದೂ ಮಾಡಿಕೊಳ್ಳಲಿಲ್ಲ. "ಸದ್ಧರ್ಮ ದೀಪಿಕೆ ಗ್ರಂಥಮಾಲೆ"ಯ ಪುಸ್ತಕಗಳು ಎಂದು ಮಾತ್ರ ಹೇಳಿದರಲ್ಲದೆ ಗ್ರಂಥಕರ್ತರಾದ ತಮ್ಮ ಹೆಸರನ್ನು ಅವರು ಮುದ್ರಿಸಲಿಲ್ಲ. ಹೀಗೆ ಅವರು ಬರೆದ ಗ್ರಂಥಗಳ ಪಟ್ಟಿಯೂ ಕೂಡ ಈಗ ಸುಲಭವಾಗಿ ದೊರೆಯುವಂತಿಲ್ಲ. ಬೇರೆಯವರು ಬರೆದ ಇಲ್ಲವೆ ಇತರರ ನೆರವಿನಿಂದ ರಚಿತವಾದ ಗ್ರಂಥಗಳಿಗೆಲ್ಲ ತಮ್ಮ ಹೆಸರನ್ನು ಹಾಕಿ ದೊಡ್ಡವರೆಂದೆನಿಸಿಕೊಳ್ಳುವ ಕಾಲವಿದು ! ಇಂತಹ ಕಾಲದಲ್ಲಿ ಚನ್ನಮಲ್ಲಿಕಾರ್ಜುನರ ನಿರಹಂಕಾರವು ನಮಗೆ ಆದರ್ಶವಾಗಬೇಕಾಗಿದೆ. ಅವರ ಭಕ್ತಿ, ಸಮರ್ಪಣಾಭಾವ, ವ್ಯಾಸಂಗ ನಿಷ್ಠೆಗಳನ್ನು ನಾವು ರೂಢಿಸಿಕೊಳ್ಳುವಲ್ಲಿ ಸಮಾಜದ, ನಾಡಿನ ಹಿತವಿದೆ.

ಅವರಿಗೆ ವ್ಯಾಸಂಗನಿಷ್ಠೆಯು ಬಾಲ್ಯದಿಂದಲೂ ರೂಢಿಯಾಗಿತ್ತು. ಲೋವರ್ ಸೆಕೆಂಡರಿ ಪರೀಕ್ಷೆಗೆ ಓದುತ್ತಿರುವಾಗಲೆ ಅವರು ಪಡೆದಿದ್ದ ವಿದ್ಯುತ್‌ನ್ನು ಮೇಲಧಿಕಾರಿಗಳು ಮೆಚ್ಚಿಕೊಂಡರಂತೆ. ಆ ಪರೀಕ್ಷೆಯು ಮುಗಿಯುವುದಕ್ಕೆ ಮೊದಲೆ ಅವರನ್ನು ಉಪಾಧ್ಯಾಯರನ್ನಾಗಿ ನೇಮಕ ಮಾಡಲಾಯಿತಂತೆ. ನಂತರ ಅವರು ಆ ಪರೀಕ್ಷೆ

ಯನ್ನು ಮುಗಿಸಿ ಅಪ್ಪರ್ ಸೆಕೆಂಡರಿ ಪರೀಕ್ಷೆಗಾಗಿ ಓದಿ ಅದರಲ್ಲಿ ತೇರ್ಗಡೆ ಹೊಂದಿದರು. ಅವರು ಪಡೆದ ಶಿಕ್ಷಣವು ಇದಿಷ್ಟು ಮಾತ್ರ. ಇಂದು ಉಚ್ಚಪದವಿಗಳನ್ನು ಪಡೆದವರಲ್ಲಿ ಕಂಡುಬರದ ವಿದ್ಯಾರ್ಹತೆಯು ಅವರದಾಗಿತ್ತು. ನಿಷ್ಠೆ ಪರಿಶ್ರಮಗಳಿಂದ ಏನನ್ನೂ ಸಾಧಿಸಬಹುದೆಂಬುದಕ್ಕೆ ಅವರು ಉದಾಹರಣೆಯಾಗಿದ್ದಾರೆ.

ಚನ್ನಮಲ್ಲಪ್ಪ ಮಾಸ್ತರರು ಸಾಂಸಾರಿಕ ಜೀವನದಲ್ಲಿಯೂ ದುರ್ವಿಧಿಯನ್ನು ಎದುರಿಸಬೇಕಾಯಿತು. ಮೂರು ಸಲ ಮದುವೆಯಾದರೂ ಮೂವರು ಪತ್ನಿಯರೂ ಅಕಾಲ ಮರಣಕ್ಕೆ ತುತ್ತಾದರು. ಮಾಸ್ತರರು ಒಂಟಿಗರಾಗಿಯೇ ಬಾಳನ್ನು ಸಾಗಿಸ ಬೇಕಾಯಿತು. ವ್ಯವಹಾರದಲ್ಲಿ ನಿಷ್ಠುರತೆಯಿಲ್ಲದ ಮೂಲಕ ಅವರು ಗಳಿಸಿದ ಎಲ್ಲ ಹಣವೂ ಅವರ ಪಾಲಿಗೆ ಉಳಿಯದಂತಾಯಿತು. ಇವರು ಸಿದ್ಧೇಶ್ವರ ವಚನಗಳನ್ನು ಸಂಪಾದಿಸಿ ಪ್ರಕಟಿಸಿದ ಸವಿನೆನಹಿಗಾಗಿ ತಮ್ಮ ಮನೆಯನ್ನು 'ಶ್ರೀ ಸಿದ್ಧೇಶ್ವರ ನಿಲಯ' ವೆಂದು ಕರೆದರು. ಅದನ್ನೇ ವಿದ್ಯಾರ್ಥಿ ನಿಲಯಕ್ಕಾಗಿ ಕೊಟ್ಟುಬಿಟ್ಟರು. ಇದರಿಂದಲೂ ಅವರಿಗೆ ಸಮಾಜದ ಬಗೆಗೆ ಇದ್ದ ಕಳಕಳಿಯನ್ನು ನಾವು ಕಂಡುಕೊಳ್ಳುತ್ತೇವೆ. ಇರುವಷ್ಟು ಕಾಲ ತನು–ಮನ–ಧನಗಳನ್ನು ಸಮಾಜಕ್ಕಾಗಿ ವಿನಿಯೋಗಿಸಿದರು. ದೇಹವಳಿದ ಮೇಲೆಯೂ ಸಮಾಜ ಸೇವೆಯು ಮುಂದುವರಿಯುವ ಯೋಜನೆ ಕೈಕೊಂಡರು.

ಅಚ್ಚ ಶಿವಾನುಭಾವಿಯಾದ ಚನ್ನಮಲ್ಲಪ್ಪ ಮಾಸ್ತರರಲ್ಲಿ ಮಾಸ್ತರರ ದೃಷ್ಟಿ ಯಂತೂ ಇದ್ದೇ ಇತ್ತು. ಪ್ರತಿಯೊಂದು ಸಂಗತಿಯು ಸ್ಪಷ್ಟವಾಗುವಂತೆ ವಿವರಿಸುವ ಕ್ರಮ ಅವರದಾಗಿತ್ತು. ಹಲವಾರು ವಚನಗಳಿಗೆ ಅರ್ಥ, ಟಿಪ್ಪಣೆಗಳನ್ನು ಅವರು ಒದಗಿಸಿದ್ದಾರೆ. ಅಲ್ಲದೆ ಅವರಲ್ಲಿ ವೈಜ್ಞಾನಿಕ ಮತ್ತು ಸಂಶೋಧಕ ದೃಷ್ಟಿಗಳು ಅಳ ವಟ್ಟಿದ್ದವು. ರೇವಣಸಿದ್ಧ, ಬಸವೇಶ್ವರರನ್ನು ಕುರಿತು ಅವರು ಬರೆದ ಗ್ರಂಥಗಳಿಂದ ಈ ಮಾತು ಸ್ಪಷ್ಟವಾಗುತ್ತಿದೆ. ಅವರ ಬೃಹತ್ ಗ್ರಂಥ 'ಪಂಚಾಚಾರ್ಯರ ಚರಿತ್ರೆ' (ಮೊದಲನೆಯ ಸಂಪುಟ). ಇದನ್ನು ರಚಿಸಿದಾಗ ಅವರಿಗೆ ೮೪ ವರುಷ ವಯಸ್ಸು. ೫೦೦ ಪುಟಗಳನ್ನು ಮಿಕ್ಕಿದ ಈ ಕೃತಿಯಲ್ಲಿ ಶ್ರೀ ರೇವಣಸಿದ್ಧರ ಚರಿತ್ರೆಯಿದೆ. ನಾನಾ ಪ್ರದೇಶಗಳಲ್ಲಿ ಸಂಚರಿಸಿ ಶಾಸನ, ಪುರಾಣ, ವಚನ, ಚರಿತ್ರೆ, ಐತಿಹ್ಯಗಳಿಂದ ಸಾಮಗ್ರಿ ಯನ್ನು ಸಂಗ್ರಹಿಸಿ ಪಂಡಿತರೊಂದಿಗೆ ವಿಚಾರ ವಿನಿಮಯಮಾಡಿ ಪರಿಶ್ರಮಪೂರ್ವಕ ವಾಗಿ ಈ ಗ್ರಂಥವನ್ನು ಸಿದ್ಧಗೊಳಿಸಲಾಗಿದೆ. ಇಂತಹ ಒಟ್ಟು ಎಂಟು ಗ್ರಂಥಗಳನ್ನು ರಚಿಸಿ ಪಂಚಾಚಾರ್ಯರ ಬಗೆಗೆ ಒಂದು ವಿಶ್ವಕೋಶವನ್ನೇ ಒದಗಿಸುವ ಯೋಜನೆ ಅವರದಾಗಿತ್ತು. ಇದರಲ್ಲಿ ಸಂಗ್ರಹಿಸಲಾದ ವಿಷಯ ಅದನ್ನು ವಿಶ್ಲೇಷಿಸಿದ ಬಗೆ ಶ್ಲಾಘನೀಯವಾಗಿದೆ. ಹೀಗಿದ್ದರೂ ಅವರು ಈ ಕೃತಿಯನ್ನು ವಿನಮ್ರಪೂರ್ವಕವಾಗಿ ಜನತೆಯ ಮುಂದೆ ಇಟ್ಟಿದ್ದಾರೆ. "ಈ ಗ್ರಂಥ ಲೇಖಕನಿಗೆ ತಿಳಿದಷ್ಟು ವಿಷಯಗಳನ್ನು ಮಾತ್ರ ಪ್ರಕಟಿಸಿ ಮುಂದಿನ ಚರಿತ್ರ ಶೋಧಕರಿಗೆ ಈ ದಿಸೆಯಲ್ಲಿ ಪ್ರಯತ್ನಿಸಲು ಪ್ರಾರ್ಥನೆ" ಎಂದಿದ್ದಾರೆ. ಅಲ್ಲದೆ "ವೀರಶೈವ ಚರಿತ್ರೆಯು ಇನ್ನೂ ಬಹಳ ಇರುತ್ತದೆ. ಈ ಕೆಲಸವನ್ನು ವೀರಶೈವ ಸಮಾಜದ ದೃಷ್ಟಿಯುಳ್ಳವರು ದೀರ್ಘಪ್ರಯತ್ನ ವಿಶೇಷ ಧನದ ಖರ್ಚಿನಿಂದ ನಡೆಯಿಸಬೇಕಾಗಿದೆ" ಎಂದು ಹೇಳಿದ್ದಾರೆ.

ಶ್ರೀ ರೇವಣಸಿದ್ಧ ಬಸವೇಶ್ವರರ ಚರಿತ್ರ ಶೋಧನೆಗೆ ಚನ್ನಮಲ್ಲಪ್ಪ ಮಾಸ್ತರರು

ಏಕಾಂಗವೀರರಾಗಿ ಒದಗಿಸಿದ ಸಾಮಗ್ರಿಯು ಬೆರಗುಗೊಳಿಸುವಂತಹದಾಗಿದೆ. ವಿವಿಧ ಅನುಕೂಲತೆಗಳನ್ನು ಪಡೆದ ಇಂದಿನ ವಿದ್ವಾಂಸರು ಸಂಸ್ಥೆಗಳು ಚನ್ನಮಲ್ಲಪ್ಪನವರು ಒದಗಿಸಿದ ಸಾಮಗ್ರಿಯನ್ನು ಇನ್ನೂ ಪೂರ್ತಿಯಾಗಿ ಬಳಸಿಕೊಂಡಂತಿಲ್ಲ. ಈ ಮಾತು ಮಾಸ್ತರರ ಹಿರಿಮೆಯನ್ನು ಎತ್ತಿ ಹೇಳುವಂತೆ ನಡೆದಿರುವ ನಡೆಯುತ್ತಿರುವ ಕಾರ್ಯವು ಅಸಮರ್ಪಕವೆಂಬುದನ್ನೂ ಸೂಚಿಸುವಂತಿದೆ. ಪೂಜ್ಯ ಚನ್ನಮಲ್ಲಪ್ಪ ಮಾಸ್ತರರ ಕಾರ್ಯವನ್ನು ಮುಂದುವರಿಸುವ ದಿಸೆಯಲ್ಲಿ ನಾವು ಸಾಗಬೇಕಾಗಿದೆ.

ಸಮಾಜದಿಂದ ತಾವು ಪಡೆದುದಕ್ಕಿಂತ ಹೆಚ್ಚಾಗಿ ಸಮಾಜಕ್ಕೆ ಕೊಟ್ಟ ಹಿರಿಮೆ ಚನ್ನಮಲ್ಲಪ್ಪ ಮಾಸ್ತರರದಾಗಿದೆ. ಅಂತೆಯೆ ಅವರ ಬಾಳು ಸ್ಫೂರ್ತಿದಾಯಕವಾಗಿದೆ.

# ನಮ್ಮ ಮೆಚ್ಚಿನ ಮಾಸ್ತರ

ಡಾ. ಜ. ಮುರುಳಸಿದ್ಧಯ್ಯ

## ಮಾಸ್ತರ ವ್ಯಕ್ತಿತ್ವ

ಶ್ರೀ 'ಸದ್ಧರ್ಮ ದೀಪಿಕೆ'ಯೆಂಬ ವೀರಶೈವ ಮಾಸಪತ್ರಿಕೆಯ ಸಂಪಾದಕರಾಗಿ ಕಾಲುಶತಕಕ್ಕೂ ಹೆಚ್ಚಾಗಿ ಶ್ರಮಿಸಿ ಲಿಂಗೈಕ್ಯರಾದ ಶ್ರೀ ಚನ್ನಮಲ್ಲಿಕಾರ್ಜುನ ಮಾಸ್ತರ ಶಿರಾಳಕೊಪ್ಪ ಇವರು ಇಪ್ಪತ್ತನೆಯ ಶತಕದ ವೀರಶೈವ ಗಣ್ಯರಲ್ಲಿ ಓರ್ವರೆನಿಸಿರುವರು.

ಈ ಶತಕದಲ್ಲಿ ವೀರಶೈವ ಸಂಸ್ಕೃತಿಗೆ ಕಾಣಿಕೆ ಸಲ್ಲಿಸಿದ ಪ್ರಮುಖರೆಂದರೆ ಶ್ರೀಮಹಾ ಸಂಸ್ಥಾನಾಧೀಶರೂ ಅಲ್ಲ. ಮಹಾವಿದ್ವಾಂಸರೂ ಅಲ್ಲ. ತ್ರಿಮೂರ್ತಿಗಳು ಮಾತ್ರ. ವೀರಶೈವಕ್ಕೆ ಮೂರು ಕಣ್ಣುಗಳಾಗಿದ್ದು, ಸರ್ವರಿಗೂ ಮುಕ್ಕಣ್ಣ ಸ್ವರೂಪವಾಗಿ ಮಾನ್ಯರೆನಿಸಿದವರೆಂದರೆ; ಶಿವಶರಣರ ಸಂಸ್ಕೃತಿಯ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮೀಸಲಾಗಿಟ್ಟು,ಇಡೀ ವಚನಶಾಸ್ತ್ರವನ್ನು ಹೊರತಂದು, ವಿಮರ್ಶಿಸಿ,ಶ್ರಮಿಸಿ ಮಹಾನು ಭಾವರಾಗಿ, ಲಿಂಗೈಕ್ಯರಾದ 'ಶಿವಾನುಭವ' ಪತ್ರಿಕಾ (ಮಾಸಿಕ) ಸಂಪಾದಕರಾಗಿ, ೧೨ ನೆಯ ಶತಕದ ಶಿವಶರಣರ ಧಾರ್ಮಿಕ ಚಟುವಟಿಕೆಗಳನ್ನೆಲ್ಲಾ ಪ್ರಕಟಿಸಿ, ವಿನೂತನ ಕ್ರಾಂತಿಯೆಸಗಿದ ಸದ್ಗ್ರಸ್ಥ, ಶಿವಶರಣ ರಾವ್‌ಬಹದ್ದೂರ್ ವಚನಶಾಸ್ತ್ರ ಪಿತಾಮಹ ಡಾಕ್ಟರ್ ಶ್ರೀ ಫಕೀರಪ್ಪ ಗುರುಬಸಪ್ಪ ಹಳಕಟ್ಟಿ ಬಿಜಾಪುರ ಇವರು ಮತ್ತು 'ಶರಣ ಸಂದೇಶ' ಪತ್ರಿಕೆ (ವಾರ ಪತ್ರಿಕೆ) ಸಂಪಾದಕರಾಗಿ ತಮ್ಮದೇ ಆದ ಉದಾತ್ತ ಸಂಶೋಧನಾತ್ಮಕ ಗ್ರಂಥ ಹಾಗೂ ಬೋಧೆಗಳಿಂದ ಶರಣರ ಕ್ರಾಂತಿಯನ್ನು ಬೆಳಗಿಸಿ ನೈಷ್ಠಿಕ ಬ್ರಹ್ಮಚಾರಿಗಳಾಗಿ ಬಾಳಿ ಲಿಂಗೈಕ್ಯರಾದ ಶ್ರೀ ಹರ್ಡೇಕರ್ ಮಂಜಪ್ಪನವರು ಆಲಮಟ್ಟಿ ಇವರು ಹಾಗೂ 'ಸದ್ಧರ್ಮ ದೀಪಿಕೆಯ' ಸಂಪಾದಕರಾಗಿ ವಿಶಿಷ್ಟ ರೀತಿಯ ವಿಮರ್ಶೆಗಳಿಂದಲೂ ಸುಮಾರು ೫೦ಕ್ಕೂ ಮಿಗಿಲಾದ ಗ್ರಂಥ ಸಂಪಾದನೆಯಿಂದಲೂ ಸದ್ಧರ್ಮವನ್ನು ಮೆರೆಯಿಸಿದ ಗೃಹಸ್ಥರಾಗಿ ಶಾಲಾ ಮಾಸ್ತರರಾಗಿದ್ದು, ಬಳಿಕ ನೈಷ್ಠಿಕರಾಗಿ ಸ್ವಯಂಪಾಕಿಗಳಾಗಿದ್ದ ಲಿಂಗೈಕ್ಯ ಶ್ರೀ ಚನ್ನಮಲ್ಲಿಕಾರ್ಜುನ ಮಾಸ್ತರರು. ಈ ತ್ರ್ಯಕ್ಷರೇ ಈ ಶತಕದ ಸಂಸ್ಕೃತಿ ರಕ್ಷಕರಲ್ಲಿ ಬಹು ಪ್ರಮುಖರು. ವಾಙ್ಮಯ ಸೇವೆಯಲ್ಲಿ ಅವಿಸ್ಮರಣೀಯರಾದ ಧರ್ಮವೀರರು ಎನಿಸಿರುವರು.

## ಸ್ಮಾರಕ ಎಂತಿರಬೇಕು ?

ಇಂಥವರ ಸ್ಮಾರಕಗಳು ಉನ್ನತ ಮಟ್ಟದಲ್ಲಿ ಜರುಗಬೇಕಾದುದು ಅವಶ್ಯವಿದೆ. ಲಿಂಗೈಕ್ಯ ಗ. ಸ. ಹಾಲಪ್ಪನವರು ಸತತ ಪರಿಶ್ರಮದಿಂದಾಗಿ ಹರ್ಡೇಕರ್ ಮಂಜಪ್ಪನವರ ಸ್ಮಾರಕವಾಗಿ ಅವರ ಲೇಖನ-ವಿಮರ್ಶೆ ಮತ್ತು ಸಮಗ್ರ ಕೃತಿಗಳನ್ನೊಳಗೊಂಡ ವಿಶಿಷ್ಟ ರೀತಿಯ ಬೃಹತ್ ಸಂಪುಟವೊಂದನ್ನು ರಚಿಸಿ ಸಮರ್ಪಿಸಿರುವುದು ದಿಟಕ್ಕೂ

ವೀರಶೈವ ಸಮಾಜಕ್ಕೂ ಘನತೆಗೂ ಭೂಷಣವೆನಿಸಿ ಮಕುಟಪ್ರಾಯವಾಗಿ ಆದರ್ಶ ಸ್ಮಾರಕವೆನಿಸಿರುತ್ತದೆ.

ವಚನಶಾಸ್ತ್ರ ಪಿತಾಮಹರೆನಿಸಿ ಬಾಳಿಹೋದ ಶ್ರೀ ಹಳಕಟ್ಟಿ ಇವರ ಬಗ್ಗೆ ಇಂತಹ ಮಹಾಸ್ಮಾರಕದ ಬೃಹತ್ತಾದ ಐದು ಸಂಪುಟಗಳಾದರೂ ರಚಿತವಾಗಿ ಸಮರ್ಪಿಸಿದಲ್ಲಿ ವೀರಶೈವರು ಅವರ ಋಣವನ್ನು ತೀರಿಸಿ ಗೌರವಿಸಿದಂತಾಗುತ್ತದೆ. ಲೇಖನದಲ್ಲಿ, ಸಂಪಾದನೆಯಲ್ಲಿ ಅವರಲ್ಲಿದ್ದ ಪ್ರಾಮಾಣಿಕತೆ, ಪರಿಶುದ್ಧತೆಗಳು ಸರ್ವರಿಗೂ ಸದಾ ಆದರ್ಶಗಳಾಗಿವೆ. ಅವರ ಯಾವತ್ತೂ ಲೇಖನಗಳು–ವಿಮರ್ಶೆಗಳು–ಕೃತಿಗಳು ಇವೆಲ್ಲವು ಗಳೂ ಇದ್ದಕ್ಕಿದ್ದಹಾಗೆ ಪ್ರಕಟಮಾಡಿ (ಐದು ಸಂಪುಟಗಳಲ್ಲಿ) ವೀರಶೈವ ಸಮಾಜವು ತನ್ನ ಹೆಚ್ಚಳವನ್ನು ಕಾಪಾಡಿಕೊಳ್ಳಬೇಕಾಗಿದೆ. ಈ ಕಾರ್ಯವನ್ನೂ ಅಖಿಲ ಭಾರತ ವೀರಶೈವ ಮಹಾಸಭೆಯು ವತಿಯಿಂದ ಭಾಷಾಂತರ ಕಾರ್ಯದೊಂದಿಗೆ ಕೈಕೊಳ್ಳ ಬಹುದಾಗಿದೆ.

ಪ್ರಕೃತ ಶ್ರೀ ಮಾಸ್ತರರ ಸ್ಮಾರಕ ಸಂಪುಟವನ್ನು ರಚಿಸಲುದ್ಯೋಗಿಸಿರುವುದು ಸ್ತುತ್ಯ ಕಾರ್ಯವೇ ಹೌದು. ಆದರೆ ಈ ಸಂಪುಟ ಕೇವಲ ಅವರ ವೈಯಕ್ತಿಕ ಪರಿ ಚಯದ ಲೇಖನಗಳಿಗೆ ಮಾತ್ರ ಮೀಸಲಾಗಿ, ಗಾತ್ರವಾಗಿ ಹೊರಬಂದಲ್ಲಿ ಮಾತ್ರ ಅವರಿಗೆ ಎಸಗಿದ ಅಪಚಾರವೆಂದೇ ಭಾವಿಸಬೇಕಾಗುತ್ತದೆ. ಹಾಗಾಗಲು ಅವಕಾಶ ನೀಡಲಾರ ರೆಂದೂ ನಂಬಿರುತ್ತೇವೆ. ಅವರ ಸಾರತರ ವಿಮರ್ಶೆ–ಸೂಚನೆ–ಅನುಭವ–ಆದರ್ಶ ಗಳನ್ನೊಳಗೊಂಡು ಅವರು ಸಂಪಾದಿಸಿರುವ ಸಮಗ್ರ ಗ್ರಂಥಗಳನ್ನೂ ಯಥಾವತ್ತಾಗಿ ಮೈಗೂಡಿಸಿಕೊಂಡು ವಿಶಿಷ್ಟ ರೀತಿಯಲ್ಲಿ ಮಹಾಸಂಪುಟವಾಗಿ ಇಲ್ಲವೆ ಬೃಹತ್ತಾದ ಎರಡು ಸಂಪುಟಗಳಲ್ಲಿ ಹೊರತಂದರೆ ಮಾತ್ರ ಸಮಾಜವು ಅವರ ಋಣವನ್ನು ತೀರಿಸಿ ದಂತಾಗುತ್ತದೆ. ಅಸ್ತು.

## ಮಾಸ್ತರರಿಗೆ ಮಾರುಹೋದುದು

ನಾವು ಈ ತ್ರ್ಯಕ್ಷತ್ರಯರಲ್ಲಿ ಓರ್ವರಾದ ಲಿಂ. ಚನ್ನಮಲ್ಲಿಕಾರ್ಜುನ ಮಾಸ್ತರ ರನ್ನು ಬಹುಕಾಲದಿಂದ ಚೆನ್ನಾಗಿ ಬಲ್ಲೆವಾದರೂ ಅವರ ವೈಯಕ್ತಿಕ ಚರಿತ್ರೆ ಅಷ್ಟಾಗಿ ಪರಿಚಯವಿಲ್ಲ. ಅವರ ಧ್ಯೇಯ–ಧೋರಣೆ, ಅವರ ವಿಮರ್ಶೆ, ಗ್ರಂಥ ಸಂಪಾದನೆ, ಎಲ್ಲಕ್ಕೂ ಮಿಗಿಲಾಗಿ ಸಂಸ್ಕೃತಿಯಲ್ಲಿ ಅವರಿಗಿದ್ದ ಅಪಾರವಾದ ಶ್ರದ್ಧೆ–ಆದರ, ಅಮು ದ್ರಿತ ಓಲೆ ಹಸ್ತಪ್ರತಿಗಳ ಬಗ್ಗೆ ಅವರಿಗಿದ್ದ ಕಳಕಳಿ, ಆ ಬಗ್ಗೆ ರಾಶಿರಾಶಿಯಾಗಿ ಸಂಗ್ರಹಿ ಸಿಟ್ಟುಕೊಂಡಿದ್ದ ಓಲೆಗಳ ಕಟ್ಟುಗಳ ರಾಶಿ ಮತ್ತು ಆಗಾಗ ಸಮಾಜಕ್ಕೆ ಕೊಡುತ್ತಿದ್ದ ಸೂಕ್ತ ಎಚ್ಚರಕ್ಕಾಗಿ ನಾವು ಅವರಿಗೆ ಮಾರುಹೋಗಿದ್ದೆವು.

ಇಲ್ಲಿ ಅವರ ಹೃದಯವನ್ನು ಅರಿತುಕೊಳ್ಳಲು ಪ್ರಮುಖವಾಗಿ ಕೆಲ ವಿಚಾರ ಗಳನ್ನು ತೋರುಗೈಯಾಗಿ ಮಂಡಿಸುವೆವು.

## ಕಂಡುಬಂದ ಆದರ್ಶಗಳು

೧) ಸದ್ಧರ್ಮ ದೀಪಿಕೆಯನ್ನು ೧೯೩೩ ರಿಂದ ೨೫ ವರ್ಷಕ್ಕೂ ಮಿಕ್ಕು ನಡೆಸಿ ದವರು. ಮೊದಮೊದಲಿಗೆ ಹಾವೇರಿಯಲ್ಲಿ ಶಿವಲಿಂಗವಿಜಯ ಮುದ್ರಣಾಲಯದಲ್ಲಿ

ಕೆಲಸಕ್ಕೆ ಸೇರಿ ಅಲ್ಲಿಂದಲೇ ಈ ಪತ್ರಿಕೆಯನ್ನಾರಂಭಿಸಿದರು. ೮ ವರ್ಷಗಳ ನಂತರ ಆ ಮುದ್ರಣಾಲಯವನ್ನು ಶಿವಯೋಗಮಂದಿರಕ್ಕೆ ಸಾಗಿಸಬೇಕೆಂಬ ಯೋಚನೆ ಬಂದಿತು. ಆಗ ಇವರ ಮನಸ್ಸಿನ ಮೇಲೆ ಆದ ಆಘಾತ ಆ ವೇದನೆ ಅಸದಳ. ಆ ಸನ್ನಿವೇಶದಲ್ಲಿ "ಶಿವನೇ ಈ ಪತ್ರಿಕೆಯನ್ನು ನನ್ನೊಳಗೆ ಪ್ರೇರಿಸಿ ಹೊರಡಿಸಿರುವನೆಂಬ ಭಕ್ತಿಭಾವನೆಯಿಂದ ಈ ಪತ್ರಿಕೆಯು ಪ್ರಕಾಶಕನು 'ಶ್ರೀ ಚನ್ನಮಲ್ಲಿಕಾರ್ಜುನ' ಎಂದು ಆ ಮಹಾದೇವನ ಭಾವನೆಯಲ್ಲಿ ಬರೆಯಲ್ಪಟ್ಟಿತೇ ವಿನಾ ಒಂದು ಶ್ರೀಕಾರದ ಗೌರವವೂ ಸೇವಕನಾದ ನನಗೆ ಬೇಕೆಂದಲ್ಲ. (ಸಂಚಿಕೆ ೪೭. ಪು. ೪)" ಎಂದು ನಿವೇದಿಸಿಕೊಂಡರು. ಇನ್ನೇನು ಪತ್ರಿಕೆ ನಿಂತುಹೋಗುತ್ತದೆಂದು ತಿಳಿದು, ಹೇಗೋ ಆ ಯೋಜನೆ ಕಾರ್ಯಗತವಾಗಲಿಲ್ಲ. ಅಂತೂ ಒಳ್ಳೆಯದೇ ಆಯಿತು ಇವರ ಪಾಲಿಗೆ ಮಾತ್ರ. ಈ ನಿವೇದನೆ ಅವರ ಧಾರ್ಮಿಕಾಸಕ್ತಿಗೆ ಸಾಕ್ಷಿರೂಪವಾಗಿದೆ.

## ಮಾಸ್ತರ ಧ್ಯೇಯಗಳು

೨) ಈ ಮಾಸಪತ್ರಿಕೆಯನ್ನು ಹೊರಡಿಸುವ ಪ್ರಾರಂಭದಲ್ಲಿ (೧೯೩೩) "ವೀರಶೈವಮತವು ಹಿಂದೂಮತದ ಸಾರವಾದ ಭಾಗವಾಗಿದೆ ಎಂದೂ ವೇದ, ಉಪನಿಷತ್ತು, ಆಗಮ ಮೊದಲಾದವುಗಳ ಆಧಾರವನ್ನೂ ತೋರಿಸಿ ಈ ಪತ್ರಿಕೆಯಲ್ಲಿ ಲೇಖನಗಳು ಬರೆಯಲ್ಪಡುವವೆಂದು ಪ್ರಕಟಮಾಡಿ, ಆ ಉದ್ದೇಶವನ್ನು ಸಾಧಿಸಿಕೊಂಡೇ ಬಂದಿದೆ ಈ ಪತ್ರಿಕೆ. (ಸಂ. ೪೭, ೪೮. ಪು. ೧, ೨, ೩)" ಎಂದು ಘನತೆಯಿಂದ ತಮಗಿದ್ದ ಧ್ಯೇಯವನ್ನು ನಿವೇದಿಸಿಕೊಂಡಿರುವರು.

## ಆಶೋತ್ತರಗಳು

೩) "ವೀರಶೈವ ಸಮಾಜದ ಮುಖ್ಯವಾದ ಮೂಲಾಭಿಪ್ರಾಯಗಳು ಇಡೀ ಜಗತ್ತಿಗೇನೇ ಮಾನ್ಯವಾಗುವಂತಿರುವುದರಿಂದ, ವೀರಶೈವರು ತಮ್ಮ ಜನಾಂಗದ ಉಪಯೋಗಕ್ಕಾಗಿ ಹೆಚ್ಚು ಕೆಲಸಮಾಡುವಂತಹದೊಂದು ಮುದ್ರಾಲಯ, ಧರ್ಮ ಗ್ರಂಥಗಳು, ಮಾಸಪತ್ರಗಳು, ವಾರಪತ್ರಗಳೇ ಮೊದಲಾದುವನ್ನೂ ಸದ್ಯ, ಇಂಗ್ಲಿಷ್, ಕನ್ನಡ, ಹಿಂದೀ ಭಾಷೆಗಳಲ್ಲಿ ಪ್ರಕಟಿಸುವ ಏರ್ಪಾಡು, ವೀರಶೈವರು ರಚಿಸಿದ ಸಂಸ್ಕೃತ ಗ್ರಂಥಗಳ ಪ್ರಕಟನೆಗಳ ಏರ್ಪಾಡು, ವೀರಶೈವ ಇತಿಹಾಸ ಸಂಶೋಧನೆ. ಇವುಗಳಿಗಾಗಿ ಒಂದು ದೊಡ್ಡ ನಿಧಿಯನ್ನು ಏರ್ಪಡಿಸಿ, ಕಾರ್ಯವು ನಡೆಯುವಂತೆ ಮಾಡಿ ಸುಖವಂತರಾಗಿ ಬಾಳಲೆಂದು ಮಹಾದೇವನನ್ನು ಪ್ರಾರ್ಥಿಸುವ, ತಮ್ಮಗಳ ವಿಧೇಯ ಸೇವಕ– ಚನ್ನಮಲ್ಲಿಕಾರ್ಜುನ (ಸಂ. ೪೭, ೪೮–ಪು. ೪)" ಎಂಬೀ ಬರವಣಿಗೆಯಿಂದ ಅವರ ಹಂಬಲ, ಆಶೋತ್ತರಗಳೇನಿದ್ದುವೆಂಬುದನ್ನೂ ಅವು ಎಷ್ಟು ಘನತಮಗಳೆಂಬುದನ್ನೂ ತೋರಿಸುತ್ತವೆ.

ಈ ಇವರ ಆಶೋತ್ತರಗಳು, ಕಳಕಳಿ, ಇನ್ನೂ ಆಶೋತ್ತರಗಳಿಗಾಗಿಯೇ ಉಳಿದಿವೆ. ಕಳಕಳಿಯಾಗಿಯೇ ಉಳಿದಿದೆ. ವೀರಶೈವರಲ್ಲಿ ಜನಬಲವಿದೆ. ಶ್ರೀಮಂತರಿದ್ದಾರೆ. ಶ್ರೀಮಂತ ಜಗದ್ಗುರುಗಳಿದ್ದಾರೆ. ಸಾಕಷ್ಟು ಪ್ರಚಾರಮಾಡುವ ಮನವುಳ್ಳ

ಸುಸಂಸ್ಕೃತರೂ ಇದ್ದಾರೆ. ಆದರೆ, ಶ್ರೀಮಂತರ ಮತ್ತು ಶ್ರೀಮಂತ ಸಿಂಹಾಸನಾಧೀಶರ ಸಾಂಸ್ಕೃತಿಕ ಸಾಕ್ಷಿಕ ದೃಷ್ಟಿ, ಸಾಮಾಜಿಕ ಅನಾದರದಿಂದಾಗಿ ಸಂಸ್ಕೃತಿ ಪ್ರಸಾರ ಹಿಂದು ಳಿದು ಹೋಗುತ್ತಾ ಇದೆ. ಚನ್ನಮಲ್ಲಿಕಾರ್ಜುನರ ಹಂಬಲ ಸಮಾಜದ ಹಂಬಲ ವಾಗಿದೆ. ಇನ್ನೂ ಹಂಬಲವಾಗಿಯೇ ಉಳಿದಿದೆ. ಈ ಅನಾದರ ಮನೋಭಾವ ವೀರಶೈವ ಸಮಾಜದ, ಸಂಸ್ಕೃತಿಯ ದೌರ್ಭಾಗ್ಯವೆನ್ನದೇ ವಿಧಿಯಿಲ್ಲ. ಶ್ರೀಮಂತರೂ ಶ್ರೀಮಂತ ಸಿಂಹಾಸನಾಧೀಶರೂ ದೇಹಪೋಷಣೆಗೆ, ಬಾಹ್ಯಾಡಂಬರಕ್ಕೆ ಇತ್ತಿರುವ ಆಸಕ್ತಿ, ಸಂಸ್ಕೃತಿಗೆ ಇವರು ತೋರುತ್ತಿರುವ ಅನಾದರ ಇವುಗಳಿಂದಾಗಿ ೨೦ನೆಯ ಶತ ಕದ ವೀರಶೈವ ಚರಿತ್ರೆಯಲ್ಲಿ ಸಮಾಜಘಾತುಕರಾಗಿ ಶಾಶ್ವತವಾಗಿ ನಿಲ್ಲುವರೆಂಬುದ ನ್ನಾರೂ ಮರೆಯುವಂತಿಲ್ಲ.

## ವಿದ್ವಾಂಸರೊಂದಿಗೆ ಸಂಭಾಷಣೆ

೪) ಮೈಸೂರು ಮಹಾರಾಜ ಕಾಲೇಜಿನ ಕನ್ನಡ ಪ್ರೊಫೆಸರರಾಗಿದ್ದ ದಿ. ಸನ್ಮಾನ್ಯ ಶ್ರೀ ಟಿ. ಎಸ್. ವೆಂಕಣ್ಣನವರೊಡನೆ ಒಮ್ಮೆ ಮಾಸ್ತರರು ಭೇಟಿಯಾಗಿದ್ದರು. ಆಗ ಪ್ರೊ.ರವರು "ನೀವು ಸ್ವತಂತ್ರವಾಗಿ ಈಗ ಬೇಕಾದ ಪುಸ್ತಕಗಳನ್ನು ಪ್ರಕಟಿಸು ತ್ತಿದ್ದೀರಲ್ಲವೇ ?" ಎಂದು ಪ್ರಶ್ನೆಗೈದರು. ಮಾಸ್ತರರು "ಮೈಸೂರು ಸರ್ಕಾರದ ಉದ್ಯೋಗದಿಂದ ವಿಶ್ರಾಂತಿಯನ್ನು ಪಡೆದು ಈಗ ಮನಬಂದ ಪುಸ್ತಕಗಳನ್ನು ಪ್ರಕಟಿ ಸುತ್ತಿರುವೆನು. 'ಶಿವನ ಸೇವೆ' ಎಂಬ ಮಹದಾನಂದದಲ್ಲಿ ಇರುವೆನು" ಎಂದರು. ಆಗ ವೆಂಕಣ್ಣಯ್ಯನವರೂ "ನಮಗೂ ಅದೇ ಬಯಕೆ ಇರುವುದಾಗಿಯೂ, ರಾಜಕೀಯ ವೃತ್ತಿಯಿಂದ ವಿಶ್ರಾಂತಿ ಪಡೆಯುವುದು ಇನ್ನೂ ೪-೫ ವರ್ಷಗಳಿರುವುದಾಗಿಯೂ ಆಮೇಲೆ ತಾವೂ ಈ ಕೆಲಸವನ್ನು ಕೈಕೊಳ್ಳುವುದಾಗಿಯೂ ಹೇಳಿದರು. (ಸಂ. ೪೭-೪೮ ಪು. ೫)"

ಈ ಈರ್ವರ ಘನತರ ಸಂಭಾಷಣೆಯ ಹಿನ್ನೆಲೆಯಲ್ಲಿ ಯಾವ ಆಶೆ ಆಮಿಷಗಳೂ ಇಲ್ಲ. ಕೇವಲ ಸಾಂಸ್ಕೃತಿಕ ಹಂಬಲ. ಇದು ತಾನೇ ವ್ಯಕ್ತಿಯಲ್ಲಿ ಕಾಣಬೇಕಾದ ಮುಖ್ಯಾಂಶ. 'ಶಿವನ ಸೇವೆ' ಎಂಬ ಮಾತಿನಿಂದ ನಾವು ಕಾಣುವುದು ಅವರಿಗಿದ್ದ ಸಾಂಸ್ಕೃತಿಕಾದರಾಭಿಮಾನಗಳು.

## ಸಂಸ್ಕೃತದ ಬಗ್ಗೆ ಇದ್ದ ನಿಲವು

೫) ಮತ್ತೊಮ್ಮೆ "ಕಲಕತ್ತೆ ಸರ್ವವಿಶ್ವವಿದ್ಯಾ ನಿಲಯದವರು ಇದುವರೆಗೂ ಮುದ್ರಣವಾಗದಿರುವ ಸಂಸ್ಕೃತ ಕೈಬರೆಹದ ಪ್ರತಿಗಳನ್ನು ಒಂದು ಲಕ್ಷ ರೂಪಾಯಿ ಗಿಂತಲೂ ಹೆಚ್ಚು ವೆಚ್ಚಮಾಡಿ ಕೂಡಿಸಿ ಇಟ್ಟಿರುವುಗಳನ್ನು ಪ್ರಕಟಪಡಿಸುವುದಕ್ಕಾಗಿ ಯೋಚಿಸುತ್ತಿದ್ದೇವೆ. ಪ್ರಸಿದ್ಧವಾದ ಸಂಸ್ಕೃತ ಜ್ಞಾನ ಸಂಘವು ಈ ಯೋಜನೆಯನ್ನು ಆಲೋಚಿಸುವುದಕ್ಕಾಗಿ ಏರ್ಪಡಿಸಲ್ಪಟ್ಟಿದೆ. ಸಂಸ್ಕೃತ ಪ್ರೌಢ ವಿದ್ಯಾಲಯದ ಅಧ್ಯ ಕ್ಷರೂ ಸಹ ಇವಕ್ಕೆ ಅನುಕೂಲವಾಗಿ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಪ್ರಕಟವಾದ ಗ್ರಂಥಮಾಲೆ 'ಅಶುತೋಷ ಮುಖರ್ಜಿ ಸಂಸ್ಕೃತ ಗ್ರಂಥಮಾಲೆ' ಎಂಬ ಹೆಸರಿನ

ಬೇಕೆಂದೂ ನಿಶ್ಚಯಿಸಲ್ಪಟ್ಟಿದೆ. ದಿವಂಗತರಾದ ಸರ್ ಆಶುತೋಷ ಮುಖರ್ಜಿಯವರು ಬಂಗಾಳದಲ್ಲಿ ಸಂಸ್ಕೃತ ಅಭ್ಯಾಸವನ್ನು ಮುಂದಕ್ಕೆ ತಂದವರಾಗಿದ್ದರಿಂದ ಅವರ ಗೌರವಾರ್ಥವಾಗಿ ಈ ಹೆಸರು ಇಡಲ್ಪಡುತ್ತದೆ" ಎಂದು ಪ್ರೊ. ಸೋಫಿಯಾ ವಾಡಿಯಾರವರು ತಮ್ಮ ಮಾಸಿಕ ಪತ್ರಿಕೆ P. E. N. ನಲ್ಲಿ ಪ್ರಕಟಿಸಿದರು.

ಈ ಪ್ರಕಟಣೆಯನ್ನು ಕಂಡು ಮಾಸ್ತರರು ಸಂತಸಪಟ್ಟು, ತಮ್ಮ ಸಮಾಜದಲ್ಲಿ ಮೂಲೆಗುಂಪಾಗಿ ಹೋಗುತ್ತಿರುವ ಅಮುದ್ರಿತ ಸಂಸ್ಕೃತ ಗ್ರಂಥಗಳನ್ನೂ ಪ್ರಕಟಿಸಬೇಕೆಂದು ಸಮಾಜ ಬಂಧುಗಳಲ್ಲಿ "ವೀರಶೈವವೇ ! ನಿನ್ನ ಸಂಸ್ಕೃತ ಗ್ರಂಥ ಭಂಡಾರವನ್ನು ನೋಡಿ ಕೇಳುವವರೇ ದಿಕ್ಕಿಲ್ಲವೆಂದು ಅಳಬೇಕಲ್ಲವೇ ? ಉದಾರವಾದ ಮತವೆಂದು ಹೇಳುತ್ತಿರುವ ವೀರಶೈವರೆಲ್ಲರೂ ಉದಾರ ಭಾವದಿಂದ ಸಂಸ್ಕೃತ ಗ್ರಂಥಗಳನ್ನು ಮುದ್ರಿಸಿ ಜಗತ್ತಿಗೆಲ್ಲಾ ಪ್ರಕಟವಾಗುವಂತೆ ಪ್ರಯತ್ನಮಾಡುವ ಉದಾರತೆಯನ್ನು ವಹಿಸಿ ಉದಾರಿಗಳು ಎಂಬ ಹೆಸರನ್ನು ಶಾಶ್ವತವಾಗಿ ಹೊಂದಬಾರದೇ ?" ಎಂದು ಮಾರ್ಮಿಕವಾಗಿ ತಮ್ಮ ಅಳಲನ್ನು ತೋಡಿಕೊಂಡರು. (ಸು. ೪೫-೪೬. ಪು. ೯, ೧೦, ೧೧).

೬) ಇನ್ನೊಮ್ಮೆ ತಿರುವಾಂಕೂರು ಸಂಸ್ಥಾನದ ದಿವಾನರಾದ ಶ್ರೀಮಾನ್ ಸರ್. ಸಿ. ಪಿ. ರಾಮಸ್ವಾಮಿ ಅಯ್ಯರ್ ಅವರು ೧೯೩೮ ನೆಯ ಫೆಬ್ರುವರಿ ೧೪ ರಲ್ಲಿ ತಿರುವನಂತಪುರದಲ್ಲಿ ನಡೆದ ಪಂಡಿತ ಪರಿಷತ್ತನ್ನು ಉದ್ಘಾಟಿಸುತ್ತಾ "ಜನರಿಗೆ ಆಧುನಿಕ ಶಾಸ್ತ್ರ (Science) ವನ್ನೂ ಪೂರ್ವಿಕರ ಶಾಸ್ತ್ರವನ್ನೂ ಚೇತರಿಸಿಕೊಳ್ಳುವಂತೆ ಮಾಡುವುದಕ್ಕೂ ಪೂರ್ವಿಕರ ಜ್ಞಾನವನ್ನು ಉದ್ಧರಿಸುವುದಕ್ಕೂ ಸಂಸ್ಕೃತ ಭಾಷೆಯಿಂದ ಸಾಧ್ಯವಿದೆ ಎಂಬುದನ್ನು ಜನರಿಗೆ ತಿಳಿಯುವಂತೆ ಮಾಡುವ ಬಹಳ ಕೆಲಸವು ಪರಿಷತ್ತಿನ ತಲೆಯ ಮೇಲೆ ಬಿದ್ದಿರುವುದು. (ಸಂ. ೪೪. ಪು. ೧, ೨)." ಎಂದು ತಿಳಿಸಿದ ಸಂದರ್ಭವನ್ನು ಉಲ್ಲೇಖಿಸುತ್ತಾ, ಮಾಸ್ತರರು, "ಈ ಅಭಿಪ್ರಾಯದಲ್ಲಿ ಬಹಳವಾಗಿ ತಿಳಿಯಬೇಕಾದ ಸಂಗತಿಗಳಿವೆ. ಈಗಿನ ಶಾಸ್ತ್ರದಲ್ಲಿ (Science) ಪ್ರಾಪಂಚಿಕ ವಸ್ತುಗಳ ವಿಷಯವಿದೆಯೇ ಹೊರತು ಜೀವ (Soul) ನ ವಿಷಯಗಳನ್ನು ತಿಳಿಯುವ ಸಂಗತಿಗಳು ಹೆಚ್ಚಾಗಿಲ್ಲ. ಭೌತಿಕ ಶಾಸ್ತ್ರದಲ್ಲಿ ಪ್ರತಿಯೊಂದು ವಿಷಯಕ್ಕೂ ಪ್ರಯೋಗಗಳನ್ನು ಕೊಟ್ಟು ಹೇಗೆ ಸಿದ್ಧಮಾಡಿ ತೋರಿಸುವರೋ ಹಾಗೆ ಜೀವ (Soul) ನ ವಿಷಯಕ್ಕೆ, ಅದರ ಇರುವಿಕೆ ಮತ್ತು ಚಲನ ವಲನಗಳನ್ನು ತೋರಿಸಲು ಪ್ರಯೋಗ (Experiment) ಗಳನ್ನು ಮಾಡಿ ಸಿದ್ಧಮಾಡಿ ತೋರಿಸುವಷ್ಟು ಸಂಗತಿಗಳು ಹೊರಬೀಳಬೇಕಾಗಿವೆ. ಇದು ಸಂಸ್ಕೃತ ಗ್ರಂಥಗಳ ಸಹಾಯದಿಂದಲೇ ಆಗಬೇಕಾಗಿದೆ. ಇದಕ್ಕೆ ವೇದಾಂತ ಸಾಹಿತ್ಯದ ಶರಣು ಹೋಗಬೇಕು.

ವೀರಶೈವರು ಸಂಸ್ಕೃತ ಗ್ರಂಥಗಳನ್ನು ಕೈಬರಹದಲ್ಲಿ ಬಹಳವಾಗಿ ಉಂಟಾಗಿದ್ದಾಗ್ಯೂ ಅವುಗಳ ಮುದ್ರಣಕ್ಕೆ ಯಾವ ಪ್ರಯತ್ನವನ್ನೂ ಮಾಡಿಲ್ಲ. ಈಗ ಮುದ್ರಣವಾಗಿರುವ ಗ್ರಂಥಗಳನ್ನು ಎಣಿಸಲಿಕ್ಕೆ ಕೈಬೆರಳುಗಳೇ ಸಾಕಾಗಿರುವವು.

ಇವರ ಧರ್ಮ ಗ್ರಂಥಗಳನ್ನು ನೋಡಿದರೆ ಈಗಿನ ಶಾಸ್ತ್ರಕಾರರ ಅಭಿಪ್ರಾಯಕ್ಕೆ ಅನುಸಾರವಾಗಿಯೇ ಜೀವ, ಆತ್ಮ, ಬ್ರಹ್ಮ, ಶಿವ ಇವರ ಇರುವಿಕೆಯು ಅಭಿಪ್ರಾಯವು ಹೊಂದಿಸಲ್ಪಟ್ಟು ಇರುತ್ತದೆ ಎಂದು ತಿಳಿಯುತ್ತದೆ. ಈಗಿನ ಶಾಸ್ತ್ರಕ್ಕೂ ಪೂರ್ವದ ಶಾಸ್ತ್ರಕ್ಕೂ ಭಿನ್ನವಿಲ್ಲ ಎಂಬುದನ್ನು ತೋರಿಸುವಿಕೆಯು ವೀರಶೈವ ಮತದ ಅಭಿಪ್ರಾಯವೇ ಆಗಿದೆ. ಹೀಗಿದ್ದರೂ ವೀರಶೈವರು ತಮ್ಮ ಸಂಸ್ಕೃತ ಗ್ರಂಥಗಳನ್ನು ಹೊರಗೆಡಹಲಾರದೆ, ಇಡೀ ಜಗತ್ತಿನ ಜನರಿಗೆ ತಮ್ಮ ಧರ್ಮದ ನಿಜಸ್ಥಿತಿಯನ್ನು ತೋರಿಸಲಾರದೆ ಬಿಟ್ಟಿರುವುದು, ಬಹಳ ವಿಷಾದಪಡತಕ್ಕ ಅಂಶವಾಗಿದೆ.

ಸಂಸ್ಕೃತ ಗ್ರಂಥಗಳ ಪ್ರಚಾರಕ್ಕೂ ಇಂಗ್ಲೀಷ್, ಹಿಂದೀ ಮೊದಲಾದ ಭಾಷೆಗಳಲ್ಲಿ ಧರ್ಮ ಗ್ರಂಥಗಳು ಸಿದ್ಧವಾಗಲಿಕ್ಕೂ, ವೀರಶೈವರು ಮಾಡಬೇಕಾದ ಪ್ರಯತ್ನದ ಒಂದು ದೊಡ್ಡ ಕೆಲಸವು ಅಶ್ರದ್ಧೆ ಮಾಡಲ್ಪಟ್ಟು ಇರುತ್ತದೆ. ಇನ್ನು ಮುಂದಾದರೂ ವೀರಶೈವರ ಮುಂದಾಳುಗಳು ಇದಕ್ಕೆ ಮುಖ್ಯ ಗಮನವನ್ನು ಕೊಡಬೇಕೆಂದು ಪ್ರಾರ್ಥನೆ (ಸಂ. ೪೪. ಪು. ೧, ೨)." ಎಂದು ತಮ್ಮ ಅಳಲನ್ನೂ ಸಂಸ್ಕೃತ ಭಾಷೆಯ ಮಹತ್ವವೇನೆಂಬುದನ್ನೂ ತೋರಿ ಸೂಚಿಸಿರುವರು. ಈ ಅಳಲಿನ ಮತ್ತು ಸೂಚನೆಯ ಹಿಂದೆ ಅವರ ಹಂಬಲವೇನಿತ್ತು ? ಅವರ ಧ್ಯೇಯೋದ್ದೇಶವೇನಿತ್ತು ? ಎಂಬುದು ಅರಿಯ ಬರುವುದಲ್ಲದೆ ಮಾಸ್ತರರ ಉಲ್ಲೇಖಗಳು ಎಷ್ಟು ದೂರದೃಷ್ಟಿಯುಳ್ಳವುಗಳಾಗಿವೆ ಎಂಬುದನ್ನು ಪ್ರಾಜ್ಞರೇ ತಿಳಿಯಬಹುದಾಗಿದೆ. ಮೂಲೆಗುಂಪಾಗಿ ಬಿದ್ದಿರುವ ಅಮುದ್ರಿತ ವೀರಶೈವ ಸಂಸ್ಕೃತ ಗ್ರಂಥಗಳ ಮಹತ್ವವನ್ನರಿತು ಅವರಿತ್ತಿರುವ ಸೂಚನೆಗಳೂ ತ್ರಿಕಾಲಾಬಾಧಿತ ಸತ್ಯಗಳಾಗಿ ಮಾರ್ಗದರ್ಶನಗಳಾಗಿವೆ. ಸಂಸ್ಕೃತವೊಂದನ್ನಾಶ್ರಯಿಸುವುದರಿಂದಲೇ ಧರ್ಮವನ್ನು ದಶದಿಕ್ಕುಗಳಲ್ಲಿ ಹರಿಯಿಸಲೂ ಮತ್ತು ಅರಿಯಲೂ ಸಾಧ್ಯ ಎಂಬ ಅವರ ಅರಿವು ಇಂದಾದರೂ ಸಮಾಜದಲ್ಲಿ ಮೂಡಿಬಂದು ಮಂಗಲವಾಗಲಿ ಎಂದು ನಾವೂ ದನಿಗೂಡಿಸುತ್ತೇವೆ.

## ಸಮಾಜದ ಬಗ್ಗೆ ಇದ್ದ ಆಸಕ್ತಿ

೭) ಹೀಗೆಯೇ ಬಂಗಾಳದವರು ಬಂಗಾಳಾ ವಿಶ್ವವಿದ್ಯಾನಿಲಯವೊಂದನ್ನು ತೆರೆಯಬೇಕೆಂದು ಪ್ರಕಟಿಸಿದಾಗ, ಆ ಪ್ರಕಟನೆ ನೋಡಿ ಶ್ರೀ ಮಾಸ್ತರರು ಪೂರ್ವ ಸಂಸ್ಕೃತಿ ಮತ್ತು ಜ್ಞಾನವನ್ನು ಉಳಿಸುವುದಕ್ಕಾಗಿ ಬಂಗಾಳಾ ದೇಶದವರು ಈ ರೀತಿ ಪ್ರಯತ್ನ ಪಡುತ್ತಾ ಇರುವಲ್ಲಿ, 'ವೀರಶೈವರು ತಮ್ಮ ಪೂರ್ವಸಂಸ್ಕೃತಿಯನ್ನೂ ಶ್ರೇಷ್ಠವಾದ ಜ್ಞಾನವನ್ನೂ ಉಳಿಸುವುದಕ್ಕೆ ಏನು ಪ್ರಯತ್ನಮಾಡುತ್ತಿರುವರು ?' ಎಂದು ಪ್ರಶ್ನಿಸಿ, 'ಹಿಂದೂ ದೇಶದ ಉತ್ತರಭಾಗದಲ್ಲಿ ಬಂಗಾಳಿಗಳು ಮುಂದಾಗಿರುವಂತೆ ದಕ್ಷಿಣದಲ್ಲಿ ವೀರಶೈವರು ಮುಂದಾಳುಗಳಾಗಿ ಇರತಕ್ಕ ಶಕ್ತಿಯು ಈ ವೀರಶೈವರಲ್ಲಿ ಇದ್ದರೂ ಅವರ ಆಲೋಚನೆಗಳೂ ಕಾರ್ಯಗಳೂ, ಬಹಳ ಸಂಕುಚಿತ ಭಾವನೆಯಲ್ಲಿ ಇರುವುದಕ್ಕಾಗಿ ಬಹಳ ವಿಷಾದಿಸಬೇಕಾಗಿದೆ.'

ಬಂಗಾಳಿಯರಂತೆ ಎಂದು ವೀರಶೈವರು ತಮ್ಮ ಮುಂದಾಳುತನವನ್ನು ಸ್ಥಿರಗೊಳಿಸಲೆಳಸುವರೋ ಆಗ ದಕ್ಷಿಣ ಹಿಂದೂಸ್ಥಾನವೇ ಶುಭಾಶ್ವಾಸನದ ಸ್ಥಿತಿಯನ್ನು

ಹೊಂದುವುದೆಂಬುದನ್ನು ವೀರಶೈವರು ಇನ್ನು ಮುಂದಾದರೂ ಯೋಚಿಸಲಿ. (ಸಂ. ೪೫–೪೬. ಪು. ೧೦, ೧೧)." ಎಂದು ಸಮಾಜಕ್ಕೆ ಇತ್ತ ಸಕಾಲಿಕ ಎಚ್ಚರವೂ,

೮) ಹಾಗೆಯೇ ೧೯೩೮ರಲ್ಲಿ ಹುಬ್ಬಳ್ಳಿಯಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆ ಸೇರಲಿದೆಯೆಂದು ಸುದ್ದಿ ತಿಳಿದಾಗ–"ಇಲ್ಲಿಗೆ ೩೪ ವರ್ಷಕ್ಕೆ ೧೨ ಮಹಾಸಭೆಗಳು ಜರುಗಿವೆ. ಉದ್ಯೋಗವಿಲ್ಲದೆ ತೊಂದರೆಪಡುವವರೇ ಬಹಳ. ಇದಕ್ಕೆಲ್ಲಾ ಸಂಘಗಳನ್ನು ಏರ್ಪಡಿಸಿಕೊಂಡು ಒಮ್ಮುಖವಾಗಿ ಮುಂದಕ್ಕೆ ಹೋಗುವ ಯೋಜನೆಯಾಗಬೇಕು. ಇಂತಹ ಘಟನೆಗಳ ಯೋಜನೆ ವೀರಶೈವರಿಗೆ ಎಂದಿಗೆ ಬರುವುದೋ? ಈ ವರ್ಷದ ಮಹಾಸಭೆಯು ಬರೀ ಮಾತಿನಲ್ಲಿಯೇ ತೀರಿಹೋಗದೆ ಕಾರ್ಯಕಾರಿಯಾಗಿ ವೀರಶೈವರು ಯಾವಾಗಲೂ ಹುಬ್ಬಳ್ಳಿಯನ್ನು ನೆನೆಸುವಂತೆ ಪರಿಣಾಮವಾಗುವ ಏರ್ಪಾಡುಗಳನ್ನು ಮಾಡಿ ಯಶಸ್ಸು ಪಡೆಯಲೆಂದು ನಾವು ಆಶಿಸುತ್ತೇವೆ." "ವೀರಶೈವರ ವ್ಯಾಪಾರ ಕುಗ್ಗುತ್ತಾ ಇದೆ. ವೀರಶೈವರ ವ್ಯವಸಾಯ ಕುಗ್ಗುತ್ತಾ ಇದೆ. ಗುರು-ವಿರಕ್ತರ ಕಲಹ ಅಳಿಯಬೇಕು" ಇತ್ಯಾದಿ ಸಮಾಜದ ಶ್ರೇಯೋಭಿವೃದ್ಧಿಗಾಗಿ, ಧರ್ಮಕ್ಕಾಗಿ, ಸಂಸ್ಕೃತಿಗಾಗಿ ಸದಾ ಹಂಬಲಿಸುತ್ತಿದ್ದ ಮಹಾಚೇತನ ಶ್ರೀ ಮಾಸ್ತರರಾಗಿದ್ದರು. (ಸಂ. ೪೫–೪೬. ಪು. ೫, ೬, ೭, ೮).

## ಕಾರ್ಯತತ್ಪರತೆ

ಕೇವಲ ಹಂಬಲ ಸೂಚನೆಗಳಲ್ಲೇ ಕಾಲಕಳೆಯದೆ ತಾವೂ ಸತತವಾಗಿ ಸಂಶೋಧನಾ ಕಾರ್ಯತತ್ಪರರಾಗಿ ಸುಮಾರು ೫೦ ಕ್ಕೂ ಮಿಗಿಲಾದ ಮಹತ್ವದ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನು ಸಂಪಾದಿಸಿಯೂ ವಿವರಣೆ ನೀಡಿಯೂ ಪ್ರಕಟಿಸಿ ಮಹೋಪಕಾರವೆಸಗಿರುವರು.

ಇವರು ಅಷ್ಟಾಗಿ ಅಂಗಸೌಕರ್ಯವಿಲ್ಲದವರಾಗಿದ್ದರೂ ಸಹ ಇಷ್ಟೆಲ್ಲಾ ಆದರ್ಶ ಕಾರ್ಯಗಳನ್ನು ಇವರು ಸಾಧಿಸಿ ಸಾಹಸಗೈದಿರುವುದನ್ನು ನಾವು ನೆನೆದಾಗ "ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್" ಎಂಬಂತೆ ಆ ಮಹಾದೇವನ ಅನುಗ್ರಹಬಲದಿಂದಲೇ ಸಾಗಿವೆ ಎನ್ನಲೇಬೇಕು.

ಇವರು ಕೇವಲ ವ್ಯಕ್ತಿಯಾಗಿರದೆ ಸಾಂಘಿಕ ಶಕ್ತಿಯೆನಿಸಿದ್ದರೆನ್ನಲಡ್ಡಿಯಿಲ್ಲ. ವಚನಶಾಸ್ತ್ರದಲ್ಲಿ ಅಪಾರವಾದ ಶ್ರದ್ಧೆ, ಸಂಸ್ಕೃತ ವಿಷಯದಲ್ಲಿ ಅಮಿತಗೌರವ ಭಾವನೆ, ಅಮುದ್ರಿತ ಹಸ್ತಪ್ರತಿಗಳ ರಕ್ಷಣೆ ಮತ್ತು ಪ್ರಕಟಣೆಗಳ ಬಗ್ಗೆ ಇಟ್ಟಿದ್ದ ದೂರದೃಷ್ಟಿ, ಸಮಾಜದ ಹಿತಚಿಂತನೆಗಳ ಬಗ್ಗೆ ಇದ್ದ ಆಸಕ್ತಿ ಹಾಗೂ ನಿರಂತರ ದುಡಿಮೆ ಇವುಗಳಿಂದಾಗಿ ಶ್ರೀ ಮಾಸ್ತರರು ನನ್ನ ಮೆಚ್ಚಿನ ಮಾಸ್ತರರಾಗಿರುವರು.

ದೇಹಬಲ, ದೃಷ್ಟಿಬಲ ಕುಗ್ಗಿದ್ದರೂ ತಮ್ಮ 'ಸದ್ಧರ್ಮ ದೀಪಿಕೆಯನ್ನು' ಎಂದಿಗೂ ಕುಂದದಂತೆ ಮೈಸೂರಲ್ಲಿ ಶ್ರೀ ನಿ. ಬ್ರ. ಶ್ರೀ ಸುತ್ತೂರು ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳವರ ಸಹಾಯ ಸಹಕಾರದಿಂದ ನಡೆಸುತ್ತಿದ್ದರು. ಶ್ರೀ ಮಾಸ್ತರವರ ಧರ್ಮನಿಷ್ಠೆ, ಗತಕಾಲದ ಗಂಭೀರ ಸಂಸ್ಕೃತಿ, ಸಾಹಿತ್ಯನಿಷ್ಠೆ, ಮಾನವೀಯತೆ ಇಂದಿನ ಕಾಲದ ನವನಾಗರಿಕರಿಗೆ ಹಿಡಿಸಲಾರದು. ಆದರೆ ಶ್ರೀ ಮಾಸ್ತರನ್ನು ಸಮಾಜದ ಕಲೆ

ಗಾರರು ಎಂದೂ ಗೌರವಿಸುವರು. ಮಾಸ್ತರವರ ಆದರ್ಶ ನಮಗೆ ಕೈದೀಪಿಗೆಯಾಗಬೇಕು, ಅದಕ್ಕೆ ಶಿವನ ಅನುಗ್ರಹಬೇಕು.

ಈ ಲೇಖನವನ್ನು ಸಿದ್ಧಪಡಿಸಲು ಬಹುಮಟ್ಟಿಗೆ ಸಹಾಯ ಮಾಡಿದ್ದಾರೆ. ಪ್ರಾಚ್ಯ ವಿದ್ಯಾಲಯದಲ್ಲಿ ಸೀನಿಯರ್ ಅಸಿಸ್ಟಂಟ್ ಆಗಿರುವ ಶ್ರೀ ಎಂ. ಎಸ್. ಬಸವರಾಜಯ್ಯನವರು ಶ್ರೀ ಮಾಸ್ತರರನ್ನು ನಾನು ನನ್ನ ವಿದ್ಯಾರ್ಥಿ ದೆಶೆಯಲ್ಲಿ ಮೈಸೂರಿನ ಕ್ಯಾತನಹಳ್ಳಿ ಸಂಸ್ಕೃತ ಪಾಠಶಾಲೆಯಲ್ಲಿ ನೋಡುತ್ತಿದ್ದೆ ಅಷ್ಟೆ. ಆದ್ದರಿಂದ ಈ ಲೇಖನಕ್ಕೆ ಕೆಲವು ಮಾಹಿತಿ ಒದಗಿಸಿ ಅದನ್ನು ಪೂರ್ಣಗೊಳಿಸಿದ ಶ್ರೀ ಬಸವರಾಜಯ್ಯನವರಿಗೆ ನನ್ನ ಕೃತಜ್ಞತೆಗಳು. ಶ್ರೀ ಬಸವರಾಜಯ್ಯನವರಲ್ಲಿ ವೀರಶೈವಕ್ಕೆ ಸಂಬಂಧಿಸಿದ್ದು ಸುಮಾರು ಸರಸಿದೆ. ಅದನ್ನು ಅವರು ಶೋಧಿಸಿ ಜಾಗ್ರತ ಪ್ರಕಟಿಸುವುದುತ್ತಮ. ಸಾವಧಾನದಿಂದ ಆ ಕೆಲಸ ಆಗಬೇಕು.

# ನಾನು ಕಂಡ ಶ್ರೀ ಚನ್ನಮಲ್ಲಿಕಾರ್ಜುನರು

ಲಿಂ. ಓ. ಎನ್. ಲಿಂಗಣ್ಣಯ್ಯ

ಲಿಂಗೈಕ್ಯ ಶ್ರೀ ಚನ್ನಮಲ್ಲಿಕಾರ್ಜುನರು ಈ ಶತಮಾನದ ಕನ್ನಡ ಇತಿಹಾಸ ಸಂಶೋಧನೆಯಲ್ಲಿ ಮತ್ತು ವಿಮರ್ಶೆಯಲ್ಲಿ ಪ್ರಸಿದ್ಧರಾಗಿದ್ದ ವಿದ್ವಾಂಸರೂ ಒಬ್ಬರಾಗಿದ್ದರು. ಅವರು ಅಚ್ಚ ಶಿವಭಕ್ತರು; ಶಿವಧರ್ಮನಿಷ್ಠರು; ಸಹೃದಯರು; ಸರಳರು ಮತ್ತು ಸಂಪನ್ನರು. ಅವರ ಪ್ರತ್ಯಕ್ಷ ಪರಿಚಯ ನನಗಿರಲಿಲ್ಲ. ನಾನು ಮೊಟ್ಟಮೊದಲು ಅವರನ್ನು ನೋಡಿದ ಕಾಲದಲ್ಲಿ ಅವರು ನನಗಿಂತ ವಯಸ್ಸಿನಲ್ಲಿ ಹಿರಿಯರೆಂದುಕೊಂಡೆನು. ಅವರು ಹಿರಿಯರೆಂಬುದರಲ್ಲಿ ಸಂಶಯವಿಲ್ಲ ! ಬ್ಯಾಡಗಿ ಶ್ರೀ ಮುಪ್ಪಿನಮಠದ ಶ್ರೀ ಚನ್ನಬಸವಸ್ವಾಮಿಗಳು ಶ್ರೀ ಚನ್ನಮಲ್ಲಿಕಾರ್ಜುನರ ಸಾಹಿತ್ಯ ಪರಿಪೋಷಕರಾಗಿದ್ದರು. ಈ ವಿರಕ್ತರು ಬಹಳ ಕಾಲ ಬೆಂಗಳೂರಲ್ಲಿಯೇ ಇದ್ದರು. ಈ ಸ್ವಾಮಿಗಳ ಜೊತೆಯಲ್ಲಿ ಶ್ರೀ ಮಲ್ಲಿಕಾರ್ಜುನರನ್ನು ನಾನು ೧೯೪೦ ರ ಸುಮಾರಿನಲ್ಲಿ ಶ್ರೀ ಸರ್ಪಭೂಷಣ ಮಠದಲ್ಲಿ ನಡೆದ ಯಾವುದೋ ಸಮಾರಂಭದಲ್ಲಿ ನೋಡಿದ್ದೆನು. ಅವರು ಆ ವೇಳೆಗಾಗಲೇ ವಿದ್ವಾಂಸರೆಂದು ಪ್ರಸಿದ್ಧರಾಗಿದ್ದರು. ಅವರನ್ನು ಶಿರಾಳಕೊಪ್ಪದ ಮಾಸ್ತರ ಎಂದು ಉತ್ತರ ಕರ್ನಾಟಕದ ಜನ ಪ್ರೀತಿಯಿಂದ ಕರೆಯುತ್ತಿದ್ದರು. ಕುಂಪಣಿ ಕರ್ನಾಟಕದಲ್ಲಿ ಅವರು ಹೆಚ್ಚು ಪರಿಚಿತರಾಗಿದ್ದರು. ಕಿರಿಯ ವಯಸ್ಸಿನ ನನಗೆ ಅವರಲ್ಲಿ ತುಂಬ ಗೌರವವಿತ್ತಾದರೂ ಅವರ ಸಹಯೋಗ ಜೀವನ ನನಗೆ ಲಭಿಸಿರಲಿಲ್ಲ. ಅವರನ್ನು ನಾನು ಅನಂತರ ಅನೇಕ ಸಭೆ ಸಮಾರಂಭಗಳಲ್ಲಿ ನೋಡಿದ್ದೆನು.

ಐವತ್ತು ವರ್ಷದ ಹಿಂದಿನ ಒಬ್ಬ ಕನ್ನಡ ಉಪಾಧ್ಯಾಯನಂತೆ ಅವರು ಉಡುಪು ಧರಿಸುತ್ತಿದ್ದರು. ಅವರು ವೃತ್ತಿಯಲ್ಲಿ ಉಪಾಧ್ಯಾಯರೂ ಆಗಿದ್ದರು; ಪ್ರವೃತ್ತಿಯಲ್ಲಿ ಲೇಖಕರಾಗಿದ್ದರು. ಅವರು ಬಹಳಕಾಲ ಸದ್ಧರ್ಮ ದೀಪಿಕಾ ಪತ್ರಿಕೆಯ ಸಂಪಾದಕರೂ ಆಗಿದ್ದರು. ಆ ಪತ್ರಿಕೆಯ ಹಲವಾರು ಸಂಚಿಕೆಗಳನ್ನು ನಾನು ಆಗಾಗ ಓದಿದ್ದೆನು. ಅವರೊಬ್ಬ ದೊಡ್ಡ ಪಂಡಿತರೆಂದು ತಿಳಿದಿದ್ದೆನು. ಶ್ರೀ ಉತ್ತಂಗಿ ಚನ್ನಪ್ಪನವರಂತೆ ಮತ್ತು ಮಂಜೇಶ್ವರದ ಗೋವಿಂದ ಪೈಗಳಂತೆ ಶ್ರೀ ಚನ್ನಮಲ್ಲಿಕಾರ್ಜುನರು ಸಾಹಿತ್ಯ ಸಂಶೋಧನೆಯಲ್ಲಿ ಬಲ್ಲಿದರೆಂದು ಹೆಸರಾಗಿದ್ದರು. ಅವರು ಶರಣರ ನಾಡಿನಲ್ಲಿ ಹುಟ್ಟಿ ಶರಣರ ಪರಿಸರದಲ್ಲಿಯೇ ಜೀವನವನ್ನು ರೂಪಿಸಿಕೊಂಡ ಉತ್ತಮ ವ್ಯಕ್ತಿಯಾಗಿದ್ದರು. ಆ ಶರಣ ಧರ್ಮದ ಶಕ್ತಿಯೇ ಆ ವ್ಯಕ್ತಿಯಲ್ಲಿ ಮೈದಾಳಿತ್ತು. ನನಗ ಅವರ ಪ್ರತ್ಯಕ್ಷ ಪರಿಚಯ ೧೯೫೭ ರಲ್ಲಿ ಮೈಸೂರಿನಲ್ಲಿ ಅವರ ನಿವಾಸದಲ್ಲಿಯೇ ಆಯಿತು. ನನ್ನ ಜೀವನದಲ್ಲಿ ಅದೊಂದು ಚಿರಸ್ಮರಣೀಯ ದಿನ ! ಆಗ ಅವರ ಐತಿಹಾಸಿಕ ಪ್ರಸಿದ್ಧವಾದ 'ಶ್ರೀ ರೇವಣಸಿದ್ಧರು' ಎಂಬ ಗ್ರಂಥ ಪ್ರಕಟವಾಗಿತ್ತು. ಆಗ ನಾನು ಹುಣಸೂರಿನಲ್ಲಿ ಅಮಲ್ದಾರ್ ಆಗಿದ್ದೆನು. ನಾನು ಯಾವುದೋ ಒಂದು ಭಾನುವಾರ ದಿನ ಮೈಸೂರಿಗೆ

ಬಂದಿದ್ದಾಗ ಶ್ರೀ ಚನ್ನಮಲ್ಲಿಕಾರ್ಜುನರನ್ನು ಕಾಣಲು ಅವಕಾಶವಾಯಿತು. ಆಗ ಅವರು ಮೈಸೂರಿನಲ್ಲಿ ಹಳೆಯ ಅಗ್ರಹಾರದಲ್ಲಿ ನಾಡುಹೆಂಚಿನ ಮನೆಯೊಂದರಲ್ಲಿ ವಾಸವಾಗಿದ್ದರು. ಮಧ್ಯಾಹ್ನ ಸುಮಾರು ಎರಡು ಘಂಟೆ ಸಮಯ. ನನ್ನ ಮಿತ್ರರೊಬ್ಬರು ಚನ್ನಮಲ್ಲಿಕಾರ್ಜುನರ ಮನೆಯನ್ನು ತೋರಿಸಿದರು. ನಾನು ಆ ಮನೆಯ ಮುಂದೆ ನಿಂತು ವಿಚಾರಿಸಿದಾಗ ಪಕ್ಕದ ಮನೆಯ ಗೃಹಸ್ಥರೊಬ್ಬರು ತಿಳಿಸಿದಂತೆ, ಬಲಗಡೆಯ ಮೆಟ್ಟಲು ಹತ್ತಿ ಆ ಮನೆಯ ಅಟ್ಟದ ಮೇಲ್ಗಡೆಗೆ ಹೋದೆನು. ಮಧ್ಯವಯಸ್ಸು ಮೀರಿದ್ದ ಹಿರಿಯರೊಬ್ಬರು ಆರಾಮಾಸನದಲ್ಲಿ ಕುಳಿತು ಯಾವುದೋ ಗ್ರಂಥವನ್ನು ಅವಲೋಕಿಸುತ್ತಿದ್ದರು. ಉಟ್ಟ ಪಂಚೆ, ತೊಟ್ಟ ತುಂಡು ತೋಳಂಗಿ, ಬೋಳು ತಲೆ, ಕೆಳಗಡೆ ಹರಡಿದ್ದ ಓಲೆಯ ಕಟ್ಟುಗಳು, ಕರಡು ಅಚ್ಚಿನ ಹಾಳೆಗಳು, ಅಲ್ಲಲ್ಲಿ ಜೋಡಿಸಿದ್ದ ಪುಸ್ತಕಗಳು, ನೆಲದಮೇಲೆ ಹರವಿದ್ದ ಒಪ್ಪವಿಲ್ಲದ ಹಾಸುಗೆ ಹೊದಿಕೆ, ಎದುರುಗಡೆ ಗೂಟಕ್ಕೆ ನೇತು ಹಾಕಿದ್ದ ಕೋಟು, ಅದರ ಪಕ್ಕದಲ್ಲಿರಿಸಿದ್ದ ರುಮಾಲು–ಇವು ಅವರ ನಿರಾಡಂಬರದ ಜೀವನದ ಸಂಕೇತಗಳಂತಿದ್ದುವು. ಆ ಸರಸ್ವತಿಯ ಕುಟೀರದಲ್ಲಿ ಲಕ್ಷ್ಮೀದೇವಿಗೆ ಮನ್ನಣೆಯುಂಟೆ ! ಅದೊಂದು ಅಧ್ಯಾತ್ಮ ಶ್ರೀ ವಿಹಾರ! ಅವರು ನನ್ನನ್ನು ಕಂಡು ಶರಣಾರ್ಥಿ ! ಬನ್ನಿ ! ಎಂದು ಅಕ್ಕರೆಯಿಂದ ಸ್ವಾಗತಿಸಿದರು. ನನ್ನ ಪರಿಚಯ ಅವರಿಗಿರಲಿಲ್ಲವೆನಿಸಿತು. ನಾನೂ 'ಶರಣಾರ್ಥಿ !' ಎಂದು ಅವರು ತೋರಿಸಿದ ಕಾಲುಮಣೆಯ ಮೇಲೆ ಕುಳಿತೆನು.

"ಹೊಸ ಪರಿಚಯ; ತಾವು ಯಾರು ? ಇಷ್ಟು ದೂರ ಬಂದಿರಿ ?" ಎಂದರು.

"ನನ್ನ ಹೆಸರು ಓ. ಎನ್. ಲಿಂಗಣ್ಣಯ್ಯ. ನಾನು ಹುಣಸೂರಿನಲ್ಲಿ ಅಮಲ್ದಾರ್ ಆಗಿದ್ದೇನೆ. ತಮ್ಮನ್ನು ಅನೇಕ ಸಾರಿ ಬ್ಯಾಡಗಿ ಸ್ವಾಮಿಗಳ ಸಂಗಡ ನೋಡಿದ್ದೇನೆ. 'ಶ್ರೀ ರೇವಣಸಿದ್ಧರು' ಎಂಬ ನಿಮ್ಮ ಗ್ರಂಥ ಪ್ರಕಟವಾಗಿರುವ ವಿಚಾರವನ್ನು ಪತ್ರಿಕೆಗಳಲ್ಲಿ ಓದಿದೆನು. ನನಗೊಂದು ಪ್ರತಿ ಬೇಕಾಗಿದೆ."

"ನಿಮ್ಮ ಹೆಸರನ್ನು ಕೇಳಿದ್ದೇನೆ. ನೀವು ಸರ್ಕಾರಿ ಅಧಿಕಾರದಲ್ಲಿದ್ದುಕೊಂಡು ಸಾಹಿತ್ಯ ಸೇವೆ ಮಾಡುತ್ತಿರುವುದು ಹೆಚ್ಚು ! ಧಾರವಾಡ ಲಿಂಗಾಯತ ವಿದ್ಯಾವರ್ಧಕ ಸಂಸ್ಥೆಯ ವಿಶೇಷ ಸಂಚಿಕೆಯಲ್ಲಿ 'ಶ್ರೀ ರೇಣುಕ ಸಾಹಿತ್ಯ' ಎಂಬ ನಿಮ್ಮ ಲೇಖನವನ್ನು ಓದಿದ್ದೇನೆ. ನಿಮ್ಮ 'ಆತ್ಮಜ್ಞಾನಿ ಅಲ್ಲಮಪ್ರಭು' ಮತ್ತು 'ವೈರಾಗ್ಯ ನಿಧಿ ಅಕ್ಕಮಹಾದೇವಿ' ಗ್ರಂಥಗಳೂ ತುಂಬ ಚೆನ್ನಾಗಿ ಬಂದಿವೆ. ನಿಮ್ಮ ಶೈಲಿ ಬಹಳ ಸ್ವಾರಸ್ಯವಾಗಿದೆ."

"ನೀವು ಹಿರಿಯರು; ಸಾಧಕರು; ಅನುಭಾವಿಗಳು. ಸಂಶೋಧಕರು. ನೀವೆಲ್ಲಿ ! ನನ್ನಂಥ ಅಪರಿಪಕ್ವ ಲೇಖಕನೆಲ್ಲಿ ! ಇದು ನಿಮ್ಮ ನಿರ್ಮಾತ್ಸರ್ಯ ಮನೋಭಾವ; ಅಷ್ಟೆ."

"ನಿಮ್ಮ ಸಾಹಿತ್ಯ ಶಕ್ತಿಯನ್ನು ಯಾರಾದರೂ ಮೆಚ್ಚಲೇಬೇಕು. ನೀವು 'ಶ್ರೀ ರೇವಣಸಿದ್ಧರು' ಗ್ರಂಥವನ್ನು ಓದಿರುತ್ತೀರಾ !"

"ಇಲ್ಲ, ಅದನ್ನು ಕೊಂಡುಕೊಳ್ಳಲು ಇಲ್ಲಿಗೆ ಬಂದೆ."

"ಅಷ್ಟೊಂದು ಕುತೂಹಲಕ್ಕೆ ಕಾರಣವೇನು ? ನನಗೆ ತಿಳಿದವ್ವನ್ನು ನಾನು ಅದರಲ್ಲಿ ಬರೆದಿರುತ್ತೇನೆ."

"ರೇಣುಕರು ಶಿವಲಿಂಗೋದ್ಭವರೆಂದು ಕೇಳಿದ್ದೇನೆ. ಪಂಡಿತ ಕಾಶೀನಾಥಶಾಸ್ತ್ರಿಗಳು ಈ ವಿಚಾರದಲ್ಲಿ ಒಂದೆರಡು ಗ್ರಂಥಗಳನ್ನೂ ಬರೆದಿರುತ್ತಾರೆ. ಪಂಚಾಚಾರ್ಯರು ವೀರಶೈವ ಮತವನ್ನು ಸಂಸ್ಥಾಪಿಸಲು ಭೂಲೋಕದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಯುಗ ಯುಗದಲ್ಲಿಯೂ ಶಿವಲಿಂಗಗಳಿಂದ ಉದಯವಾದರೆಂಬ ವಿಚಾರವನ್ನು ಅವರು ಚಿತ್ರಪಟಗಳ ಮೂಲಕವಾಗಿಯೂ, ಪಂಚಾಚಾರ್ಯಪ್ರಭಾಪತ್ರಿಕೆಯ ಮೂಲಕವಾಗಿಯೂ ಪ್ರಚಾರಮಾಡುತ್ತಿದ್ದಾರೆ. ಪಂಚಾಚಾರ್ಯರು ಲಿಂಗೋದ್ಭವರೆಂಬ ವಿಚಾರ ಶಿವಾಗಮಂಗಳಲ್ಲಿಯೂ ಉಕ್ತವಾಗಿದೆ. ಅದರಿಂದ ಈ ವಿಚಾರದಲ್ಲಿ ತಮ್ಮ ಸಂಶೋಧನೆಯನ್ನೂ ಅಭಿಪ್ರಾಯವನ್ನೂ ತಿಳಿಯಲು ನನಗೆ ತುಂಬ ಆಸಕ್ತಿ ಇದೆ. ಇದೇ ನನ್ನ ಕುತೂಹಲಕ್ಕೆ ಕಾರಣ."

"ನಿಮ್ಮ ಅಭಿಪ್ರಾಯವೇನು? ಈ ವಿಜ್ಞಾನ ಯುಗದಲ್ಲಿ ನಿಮ್ಮಂಥ ಆಧುನಿಕ ವಿದ್ಯಾವಂತರು ಇದನ್ನು ನಂಬುತ್ತೀರಾ!"

"ಪಂಚಾಚಾರ್ಯರು ಲಿಂಗೋದ್ಭವರೆಂಬಂತೆಯೇ, ಬಸವಣ್ಣನವರು 'ಶೂನ್ಯಸಿಂಹಾಸನ'ವನ್ನು ರಚಿಸಿದರು ಎಂಬ ವಿಚಾರವೂ ನನಗೆ ಅಷ್ಟೇ ಕುತೂಹಲಕಾರಿಯಾಗಿದೆ."

"ನಿಮ್ಮ ಮಾತನ್ನು ನಾನು ಒಪ್ಪುತ್ತೇನೆ. ಪಂಚಾಚಾರ್ಯರು ಪುರಾಣಪುರುಷರು; ಅವರು ಐತಿಹಾಸಿಕ ವ್ಯಕ್ತಿಗಳಲ್ಲ. ಅವರು ವೀರಶೈವ ಮತಸ್ಥಾಪಕರೆಂಬುದನ್ನು ನಂಬಲು ಶಾಸನಗಳ ಆಧಾರವಿಲ್ಲ. ಅಲ್ಲದೆ, ಪ್ರಾಚೀನ ಸಾಹಿತ್ಯದ ಸಾಕ್ಷಿಯೂ ಇಲ್ಲ. ಶಿವಾಗಮಗಳ ಕಾಲವೂ ನಿರ್ಧರವಾಗಿಲ್ಲ. ಹನ್ನೆರಡನೆಯ ಶತಮಾನದ ರೇವಣಸಿದ್ಧರ ವಿಚಾರವಾಗಿ ನಾನು ಸಂಶೋಧನೆ ಮಾಡಿ, ಈ ಗ್ರಂಥವನ್ನು ಬರೆದಿರುತ್ತೇನೆ. ಸಿದ್ಧಾಂತ ಶಿಖಾಮಣಿಯಾಗಲಿ, ಹರಿಹರ ಮೊದಲಾದ ಕವಿಗಳು ರೇವಣಸಿದ್ಧರ ವಿಚಾರವಾಗಿ ಬರೆದಿರುವ ಕಾವ್ಯವಾಗಲಿ ಬಸವಣ್ಣನವರಿಗಿಂತ ಈಚಿನವು. ಇವುಗಳಲ್ಲಿ ಉತ್ಪ್ರೇಕ್ಷೆ ತುಂಬಿದೆ."

"ನಾನು ಸಿದ್ಧಾಂತ ಶಿಖಾಮಣಿಯನ್ನು ಓದಿಲ್ಲ. ನಿಮ್ಮ ಗ್ರಂಥವನ್ನೂ ಓದಿಲ್ಲ. ಹರಿಹರ ಮತ್ತು ಇತರ ಕವಿಗಳ ಕಾವ್ಯಗಳನ್ನು ಓದಿ, ಪಂಚಾಚಾರ್ಯರು ಲಿಂಗೋದ್ಭವರೆಂದು ನಂಬಿರುತ್ತೇನೆ."

"ದಯವಿಟ್ಟು ಸಿದ್ಧಾಂತ ಶಿಖಾಮಣಿಯನ್ನೂ, ಈ ನನ್ನ ಗ್ರಂಥವನ್ನೂ ಓದಿ ರೇವಣಸಿದ್ಧರ ವಿಚಾರವಾಗಿ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ."

"ಶೂನ್ಯಸಿಂಹಾಸನದ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು?" ಎಂದೆನು.

"ಬಸವಣ್ಣನವರು ಶೂನ್ಯಸಿಂಹಾಸನವನ್ನು ರಚಿಸಿದರೆಂಬ ವಿಚಾರ ಐತಿಹಾಸಿಕ ಪ್ರಸಿದ್ಧವಾದುದು. ಶರಣರ ವಚನಗಳಲ್ಲಿ ಇದರ ತತ್ತ್ವಾರ್ಥವನ್ನು ಅರಿಯಬಹುದು."

"ಎಂದರೆ, ಇದು ಇತಿಹಾಸ ಪ್ರಸಿದ್ಧವಾದುದೇ? ಅಥವಾ, ತಾತ್ವಿಕವಾದುದೇ? ಅದು ದೆಹಲಿ ಬಾದಷಹನ ರಕ್ಷಣೆಯಲ್ಲಿತ್ತೇ?"

"ಇದು ಇತಿಹಾಸ ಪ್ರಸಿದ್ಧವಾದುದೆಂಬುದನ್ನು 'ನಿರಂಜನವಂಶರತ್ನಾಕರ' ಗ್ರಂಥ ದೃಢಪಡಿಸುತ್ತದೆ."

"ನಾನು ಆ ಗ್ರಂಥವನ್ನೂ ನೋಡಿಲ್ಲ. ಆದರೂ ಶೂನ್ಯ ಸಿಂಹಾಸನ 'ಕಲ್ಪನಾ ಸೃಷ್ಟಿ'ಯೆಂಬುದು ನನ್ನ ನಂಬುಗೆ."

"ನೀವು ಸಾವಧಾನವಾಗಿ ವಚನ ಸಾಹಿತ್ಯವನ್ನು ಅಧ್ಯಯನಮಾಡಿ ನಿಮ್ಮ ಅಭಿಪ್ರಾಯವನ್ನು ರೂಪಿಸಿಕೊಳ್ಳಬಹುದು. ನಾವು ಯಾವಾಗಲೂ ಎಲ್ಲ ವಿಚಾರಗಳನ್ನೂ ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸಬೇಕು. ಇದೇ ಸಂಶೋಧನೆಯ ಜೀವಾಳ."

"ಸಂತೋಷ. ನಾನು ಮತ್ತೊಮ್ಮೆ ತಮ್ಮನ್ನು ಕಂಡು ಮಾತನಾಡುತ್ತೇನೆ. ಆಗ ನನ್ನ ಖಚಿತವಾದ ಅಭಿಪ್ರಾಯವನ್ನು ತಿಳಿಸುತ್ತೇನೆ."

ಎಂದು ಹೇಳಿ, ನಾನು ಹೊರಡಲು ಸಿದ್ಧನಾದೆ. ಶ್ರೀ ಚನ್ನಮಲ್ಲಿಕಾರ್ಜುನರು ಎಂಟು ರೂಪಾಯಿ ಬೆಲೆಯಿದ್ದ "ಶ್ರೀ ರೇವಣಸಿದ್ಧರು" ಗ್ರಂಥವನ್ನು ನನಗೆ ಆರು ರೂಪಾಯಿಗೆ ಕೊಟ್ಟರು. ಅವರು ನನ್ನನ್ನು ವಿಶ್ವಾಸದಿಂದ ಬೀಳ್ಕೊಟ್ಟರು. ಒಂದೆರಡು ತಿಂಗಳಾದಮೇಲೆ, ನಾನು ಬೆಂಗಳೂರಿಗೆ ಹೋಗಿದ್ದಾಗ ಬ್ಯಾಡಗಿ ವಿರಕ್ತರ ಶಿಷ್ಯರೊಬ್ಬರ ಭೆಟ್ಟಿಯಾಯಿತು. ನಾನು ಮೈಸೂರಿನಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರನ್ನು ಕಂಡಿದ್ದೆನೆಂಬ ವಿಚಾರವನ್ನು ಅವರು ನನಗೆ ತಿಳಿಸಿದರು. ಶ್ರೀ ಚನ್ನಮಲ್ಲಿಕಾರ್ಜುನರೇ ಈ ವಿಷಯವನ್ನು ಬ್ಯಾಡಗಿ ಶ್ರೀಗಳಿಗೆ ತಿಳಿಸಿದ್ದರಂತೆ. ನಾನು ಶ್ರೀ ಚನ್ನಮಲ್ಲಿಕಾರ್ಜುನರನ್ನು ಕಂಡು ೧೬ ವರ್ಷವಾಯಿತು. ಪುನಃ ಅವರನ್ನು ನೋಡಿ ಮಾತನಾಡುವ ಅವಕಾಶ ನನಗೆ ಲಭಿಸಲಿಲ್ಲ. ಶ್ರೀ ಚನ್ನಮಲ್ಲಿಕಾರ್ಜುನರ ಅಭಿಪ್ರಾಯಗಳನ್ನೆಲ್ಲ ನಾನು ಒಪ್ಪಲಾರೆನಾದರೂ, ಅವರೊಬ್ಬ ಸಹೃದಯಿ; ಕರ್ಮಯೋಗಿ; ಸಾಹಿತ್ಯ ಶಿವಯೋಗಿ; ನಿರಾಡಂಬರ ವ್ಯಕ್ತಿ; ಶಿವಾನುಭಾವಿ ಎಂಬುದನ್ನು ನಾನು ಮನಗಂಡೆನು. 'ಶ್ರೀ ರೇವಣಸಿದ್ಧರು' ಗ್ರಂಥವನ್ನು ನಾನು ಆಮೂಲಾಗ್ರವಾಗಿ ಅಧ್ಯಯನ ಮಾಡಿದೆನು. ಸಿದ್ಧಾಂತ ಶಿಖಾಮಣಿಯನ್ನೂ ಓದಿದೆನು. ಈ ಶತಮಾನದಲ್ಲಿಯೇ ಶ್ರೀ ಚನ್ನಮಲ್ಲಿಕಾರ್ಜುನರು ವೀರಶೈವ ಸಂಶೋಧಕರಲ್ಲಿ ಮಾರ್ಗದರ್ಶಕರಾಗಿದ್ದಾರೆ; ಅಗ್ರಗಣ್ಯರಾಗಿದ್ದಾರೆ. ಸಮಾಜ ಅವರ ವ್ಯಕ್ತಿವೈಭವವನ್ನು ಅವರಿದ್ದಾಗಲೇ ಅರಿಯದೇ ಇದ್ದುದು ದುರದೃಷ್ಟಕರ. ಈಗಲಾದರೂ, "ಶ್ರೀ ಚನ್ನಮಲ್ಲಿಕಾರ್ಜುನ ಸಂಸ್ಮರಣ ಗ್ರಂಥ ಸಂಪಾದನಾ ಸಮಿತಿ"ಯವರು ಈ ಸಂಸ್ಮರಣ ಸಂಪುಟದ ಮೂಲಕ ಆ ವಿದ್ವಾಂಸರ ಸಾಹಿತ್ಯಾತ್ಮಶಕ್ತಿಯನ್ನು ಬೆಳಗಿಸಿ ಸಮಾಜದ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ. ಈ ಲೇಖನದಲ್ಲಿ ಪ್ರಾಸಂಗಿಕವಾಗಿ ನನ್ನ ವಿಚಾರಗಳನ್ನು ಉಲ್ಲೇಖಿಸಬೇಕಾಗಿಬಂದುದು ಅನಿವಾರ್ಯವೇ ಹೊರತು, ಆತ್ಮಪ್ರಶಂಸೆಯೆಂದು ಸಹೃದಯರು ಭಾವಿಸಬಾರದೆಂದು ವಿನಂತಿ.

# ವೀರಶೈವ ಶಿವಶರಣ ಸಾಹಿತಿ ಲಿಂ. ಕೋರಿ ಚನ್ನಮಲ್ಲಪ್ಪ

**ಎಸ್. ಎಸ್. ಭೂಸರಡ್ಡಿ**

ತಾ. ೨-೨-೬೨ ರಂದು ಶಿರಾಳಕೊಪ್ಪದಲ್ಲಿ ವೀರಶೈವ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟವಾದ ಸ್ಥಾನಗಳಿಸಿದ ವೀರಶೈವ ತತ್ವಸಿದ್ಧಾಂತ ಶಿಖಾಮಣಿ ಶ್ರೇಷ್ಠ ಶಿವಶರಣ ಶ್ರೀ ಚನ್ನಮಲ್ಲಪ್ಪ ಕೋರಿಯವರು ಲಿಂಗೈಕ್ಯರಾದ ದಾರುಣ ವಾರ್ತೆಯನ್ನು ಕೇಳಿ ಬರ ಸಿಡುಲು ಬಡಿದಂತಾಯಿತು. ಇದೇ ತಿಂಗಳಲ್ಲಿ ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ನಡೆದ ಶಿವಯೋಗ ಮಂದಿರದಲ್ಲಿ ಜರಗುವ ಶಿವಾನುಭವ ಕಾರ್ಯಕ್ರಮಗಳಲ್ಲಿ ಇವರ ಪ್ರವಚನ ಕೇಳಲು ಆತುರರಾದ ಶಿವಾನುಭವ ರಸಿಕ ಚಿತ್ತಗಳಿಗೆ ಕರಾಳ ಕತ್ತಲೆ ಕವಿದಂತಾಯಿತು. ವೀರಶೈವ ಸಮಾಜದ ನವೋದಯದ ನವಮನ್ವಂತರ ಪುನರುತ್ಥಾನದ ಸುವರ್ಣಮಯ ಸಂಧಿಕಾಲದಲ್ಲಿ ಒಬ್ಬರಾದಮೇಲೊಬ್ಬರು ವೀರಶೈವ ಶ್ರೇಷ್ಠ ಪಂಡಿತರು ಕಾಲಪುರುಷನ ಕ್ರೂರ ಕೈಚಳಕದಲ್ಲಿ ಕರಗುತ್ತಿರುವದು ಸಮಾಜದ ದುರ್ದೈವವೆಂದೇ ತಿಳಿಯಬೇಕಾಗಿದೆ. ಲಿಂ. ಚನ್ನಮಲ್ಲಪ್ಪನವರ ಅಗಲುವಿಕೆಯಿಂದ ನಾಡಿಗೆ, ನುಡಿಗೆ ಹಾಗೂ ಸಮಾಜಕ್ಕಾದ ಹಾನಿಯನ್ನು ವರ್ಣಿಸಲಸದಳವಾಗಿದೆ. ತಮ್ಮ ತನುಮನಧನಗಳನ್ನೇ ಮೀಸಲಿರಿಸಿ ಸಮಾಜದ ಸರ್ವಾಂಗ ಸುಂದರ ಸರ್ವತೋಮುಖ ಪ್ರಗತಿಗಾಗಿ ಪರಿಪರಿಯಿಂದ ಪರಿಶ್ರಮಿಸಿದ ಈ ಶರಣ ಶ್ರೇಷ್ಠ ಮಹಿಮಾನ್ವಿತ ಉತ್ತುಂಗ ವ್ಯಕ್ತಿತ್ವದ ಹಿರಿಮೆಯನ್ನು ನೆನಿಸಿಕೊಂಡರೆ ಕಣ್ಣೀರು ಧಾರಾಕಾರವಾಗಿ ಸುರಿಯುತ್ತವೆ. ಇವರ ಅಪಾರ ಅನುಭವದ ಅಗಲಳತೆಯನ್ನಾಗಲೀ ವೈಚಾರಿಕ ವಿಚಾರವಾಹಿನಿಯ ವಿಸ್ತರತೆಯನ್ನಾಗಲೀ ಅಳೆಯುವ ಶಕ್ತಿ ಸಾಮರ್ಥ್ಯ ಯಾವ ಸಮಕಾಲೀನ ಸಮಾಜ ಸೇವಕನಿಗೂ ಸಾಧ್ಯವಿಲ್ಲವೆಂದು ಸಾರಿ ಸಾರಿ ಹೇಳಬಹುದು.

ನೆಲದಮರೆಯ ನಿಧಾನದಂತೆ ತಿಲದಮರೆಯ ತೈಲದಂತೆ ಎಲೆಯಮರೆಯ ಹೂವಿನಂತೆ ತೆರೆಯಮರೆಯಲ್ಲಿ ಸದ್ದು ಗದ್ದಲವಿಲ್ಲದೆ ಅಪೂರ್ವ ಶಾಂತಿಯುತ ಕ್ರಾಂತಿಯನ್ನು ಮಾಡಿದ ಪುಣ್ಯಪುರುಷ ಲಿಂ. ಚನ್ನಮಲ್ಲಪ್ಪನವರ ಸಂಶೋಧನಾತ್ಮಕ ವಿಮರ್ಶಾತ್ಮಕ ಸಾಹಿತ್ಯ ಸೇವೆಯನ್ನು ಸಮಕಾಲೀನ ಆಧುನಿಕ ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡುವವರಲ್ಲಿ ಸಂದೇಹವೇ ಇಲ್ಲ. ಇಂದು ಪರಿಷ್ಕರಿಸಿ ಸಂಶೋಧಿಸಿದ ಪ್ರಕಟಿಸಲ್ಪಟ್ಟ ವೀರಶೈವ ಉದ್ಗ್ರಂಥಗಳಲ್ಲಿ ತಾಳಗರಿ ಓಲೆ ದೊರಕಿಸಿ ಕೊಟ್ಟವರ ಹೆಸರುಗಳಲ್ಲಿ ಮುನ್ನುಡಿಗಳಲ್ಲಿ ಲಿಂ. ಚನ್ನಮಲ್ಲಪ್ಪನವರ ಹೆಸರನ್ನು ಸ್ಮರಿಸಿದ ವಿಷಯವನ್ನು ತಿಳಿದಾಗ ಹಿಂದಿನ ಹಳೆಯ ಗ್ರಂಥ ಸಂಗ್ರಹವನ್ನು ಸಂಗ್ರಹಿಸಲು ಇವರು ಪಟ್ಟ ಶ್ರಮದ ಅರ್ಥ ಓದುಗರಿಗೆ ತಿಳಿಯದೆ ಇರಲಾರದು. ಹುಳ ಹತ್ತಿ ಜಗುಲಿಗಳ ಮೇಲೆಯೇ ಹಾಳಾಗುತ್ತಿರುವ ನಮ್ಮ ಪುರಾತನರ ಅನೇಕ ಗ್ರಂಥರಾಶಿಗಳನ್ನು ಸಂಗ್ರಹಿಸಿ ಅನಂತ ಶಿವಶರಣರ ವಚನಗಳನ್ನು ಸಂಶೋಧಿಸಿ ಪ್ರಕಟಿಸುವ ಕಾರ್ಯದಲ್ಲಿ ತಮ್ಮ

ಜೀವನದ ಬಹುಭಾಗವನ್ನು ಕಳೆದಿದ್ದಾರೆ.

ಕೇವಲ ಅಪ್ಪರ್ ಸೆಕೆಂಡರಿ ಪರೀಕ್ಷೆ ಪಾಸಾದ ಲಿಂ. ಚನ್ನಮಲ್ಲಪ್ಪನವರು ಸ್ವಂತ ಅಭ್ಯಾಸಬಲದಿಂದ ಸಂಸ್ಕೃತದ ವೇದಾಗಮ ಉಪನಿಷತ್ತುಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಗೀತೆಯು ಇವರ ನಾಲಿಗೆಯ ಮೇಲೆ ಕುಣಿಯುತ್ತಿತ್ತು. ಇಂಗ್ಲೀಷ ದಲ್ಲಿಯ ಶಾಸ್ತ್ರೀಯ ಸಾಹಿತ್ಯ ಗ್ರಂಥಗಳ ಪರಿಚಯ ಮಾಡಿಕೊಂಡಿದ್ದರು. ತಾಡ ಓಲೆಗಳ ಪ್ರತಿಗಳನ್ನು ಓದುವವರಲ್ಲಿ ಪರಿಪೂರ್ಣ ಜ್ಞಾನ ಪಡೆದವರಾಗಿದ್ದರು. ವೀರಶೈವ ತತ್ತ್ವಜ್ಞಾನ ಇವರಿಗೆ ಅಂಗೈಯ ನೆಲ್ಲಿಕಾಯಿ. ವೀರಶೈವ ಸಾಹಿತ್ಯದ ಪ್ರಕಾಂಡ ಜ್ಞಾನ ಪಡೆದವರಾಗಿ ಗಡುಚಾದ ಕ್ಲಿಷ್ಟವಾದ ವಿಷಯಗಳ ಮೇಲೆ ಲೀಲಾಜಾಲವಾಗಿ ವಿವೇಚನೆ ಮಾಡಿ ಸಣ್ಣ ಮಕ್ಕಳಿಗೂ ತಿಳಿಯುವಂತೆ ಪ್ರತಿಪಾದಿಸುವ ಪ್ರಗಲ್ಭ ಪಾಂಡಿತ್ಯ, ಜಾಣ್ಮೆ ಇವರಿಗೆ ಕರತಲಾಮಲಕವಾಗಿತ್ತು. ಅಚಲವಾದ ಲಿಂಗತತ್ತ್ವನಿಷ್ಠಾಪರರಾದ ಈ ಪುಣ್ಯಪುರುಷನ ಜೀವನದ ಪದರು ಪದರುಗಳನ್ನು ಬಿಚ್ಚಿ ನೋಡಿದಾಗ ಶಿವಯೋಗ ಸಿದ್ಧಿಯ ಅಪೂರ್ವ ಫಲಪ್ರಾಪ್ತಿಯ ನಿಚ್ಚಳ ನಿದರ್ಶನವನ್ನು ಕಂಡುಕೊಳ್ಳಬಹುದಾ ಗಿತ್ತು. ನೀನೊಲಿದರೆ ಕೊರಡು ಕೊನರುವದಯ್ಯ ಬರಡು ಹಯನವಹುದಯ್ಯ ಎಂದ ಮಹಾನುಭಾವ ಅಣ್ಣ ಬಸವಣ್ಣನವರ ಮುತ್ತಿನಂತಹ ಮಾತಿನ ಮಹತಿಯನ್ನು ಈ ಮಹಾವ್ಯಕ್ತಿಯು ತನ್ನ ನಿತ್ಯ ನಡೆನುಡಿಗಳಲ್ಲಿ ಚಾಚೂ ತಪ್ಪದೆ ಅನುಸರಿಸಿಕೊಂಡು ಬಂದಿದ್ದರು. ಇದೆಲ್ಲವೂ ಶಿವನ ಕರುಣೆಯೆಂದು ಬಹು ನಯ ವಿನಯಗಳಿಂದ ಶರಣರ ಬದುಕಿನ ಎತ್ತರವನ್ನು ಪ್ರತಿಪಾದಿಸುತ್ತಿದ್ದರು.

ಒಂದು ಕಣ್ಣಿಲ್ಲ; ಒಂದು ಕೈ ಸೊಟ್ಟು ಎತ್ತರದಲ್ಲಿ ಎದ್ದು ಕಾಣುವ ವ್ಯಕ್ತಿಯೂ ಅಲ್ಲ. ಆದರೆ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದಾಗಿತ್ತು. ಎಂತಹ ಅನಾ ರೋಗ್ಯದ ವಿಷಮ ಪರಿಸ್ಥಿತಿಯಲ್ಲಿಯೂ ಕೂಡ ೮೨ ವರುಷ ವಯಸ್ಸಾಗಿದ್ದರೂ ಸಹ ಬಹು ಶ್ರದ್ಧೆ, ನಿಷ್ಠೆ, ಭಯಭಕ್ತಿಯಿಂದ ನಿಯಮ ನಿತ್ಯದಿಂದ ಲಿಂಗಪೂಜೆಯನ್ನು ಚಾಚೂ ತಪ್ಪದೇ ಮಾಡಿಕೊಳ್ಳುತ್ತಿದ್ದರು. ಇವರ ವೇಷಭೂಷಣಗಳು ಬಹು ಸರಳ ಸಾದಾ ತರಗತಿಗಳಾಗಿದ್ದವು. ಯಾರು ಏನೇ ಅನ್ನಲಿ—ಅದಕ್ಕವರು ಲಕ್ಷ್ಯಗೊಡುವವರೇ ಅಲ್ಲ. ಸದಾ ಪರಮಾತ್ಮನ ಧ್ಯಾನವೇ ಧ್ಯಾನ, ಶರಣರ ಜೀವನದ ಅಭ್ಯಾಸವೇ ಅಭ್ಯಾಸ. ಅಂತೆಯೇ ಇವರ ಹೃದಯದಿಂದ ಹೊರಹೊಮ್ಮಿದ ಮಾತುಗಳೆಲ್ಲವೂ ಮುತ್ತಿನ ಹಾರ; ಸ್ಫಟಿಕದ ಸಲಾಕೆ ಜ್ಯೋತಿರ್ಲಿಂಗ, ಲಿಂಗ ಮೆಚ್ಚಿ ಅಹುದಹುದೆನ್ನು ವಂಥವುಗಳಾಗಿದ್ದವು.

ಲಿಂಗದ ಆಕಾರದ ಮೇಲೆ ನೀಡುವ ಇವರ ದೃಷ್ಟಾಂತ ಶಾಸ್ತ್ರೀಯ ಶೋಧಗಳ ಆಧಾರದ ಮೇಲೆ ವೇದಾಗಮಗಳ ಸಂದರ್ಭೋಚಿತ ಉದಾಹರಣೆ ಪಾಂಡಿತ್ಯಪೂರ್ಣ ಪ್ರತಿಭಾಪಶಾಲಿ ಪ್ರವಚನಗಳು ಪ್ರಭಾವಪೂರ್ಣವಾಗಿದ್ದವು. ವೀರಶೈವ ಧರ್ಮ ವಿಶ್ವ ಮಾನ್ಯ ಧರ್ಮವೆಂದು ಅಧಿಕಾರವಾಣಿಯಿಂದ ಹೇಳುವ ಶಕ್ತಿ ಸಾಮರ್ಥ್ಯ ಇವರ ದಾಗಿತ್ತು.

ಧಾರವಾಡ ಮುರುಘಾಮಠದಲ್ಲಿ ಚಿತ್ರದುರ್ಗದ ಬೃಹನ್ಮಠದಲ್ಲಿ, ಈ ಪುಣ್ಯಪುರು ಷರ ಪ್ರವಚನ ಕೇಳುವ, ಸೇವೆಮಾಡುವ ಭಾಗ್ಯ ನನ್ನದಾಗಿತ್ತು. ಸರ್ವಾಂಗಸುಂದರ

ಶ್ರೇಷ್ಠ ಸಂಸಾರ ಸಾಗಿಸುವದೇ ಶಿವಾನುಭವವೆಂದು ಮೊಗ್ಗೆಯ ಮಾಯಿದೇವರ ವಿಚಾರ ಧಾರೆಯನ್ನು ಶ್ಲೋಕಗಳನ್ನು ಹಿಂಜಿ ಹಿಂಜಿ ತಮ್ಮ ಮಾಗಿದ ಅಪಾರ ಅನುಭವದ ಅಮೃತ ಸದೃಶ ಪ್ರಸಾದವಾಣಿಯನ್ನು ಪ್ರತ್ಯಕ್ಷ ಕೇಳಿದವರೆ ಇವರ ವ್ಯಕ್ತಿತ್ವದ ಅರ್ಥ ಮಾಡಿಕೊಳ್ಳಬಲ್ಲರು.

ಶ್ರೀ ಚನ್ನಮಲ್ಲಿಕಾರ್ಜುನ, ಇದು ಇವರ ಕಾವ್ಯನಾಮವಾಗಿತ್ತು. ಇವರ ಪೂರ್ಣ ಹೆಸರು ಚನ್ನಮಲ್ಲಪ್ಪ ನೂರೊಂದಪ್ಪ ಕೋರಿ. ಕ್ರಿ. ಶ. ೧೮೮೦ನೆಯ ಇಸ್ವಿಯಲ್ಲಿ ಶಿವ ಮೊಗ್ಗಾ ಜಿಲ್ಲೆಯ ಶಿರಾಳಕೊಪ್ಪದಲ್ಲಿ ಇವರ ಜನ್ಮವಾಯಿತು. ಅಖಂಡ ಮೂವತ್ತೈದು ವರ್ಷಗಳ ವರೆಗೆ ಅಲ್ಲಿಯೇ ಶಿಕ್ಷಕರಾಗಿ ಪರಮ ಪವಿತ್ರವಾದ ಶಿಕ್ಷಣ ಕ್ಷೇತ್ರದಲ್ಲಿ ಅಮೂಲ್ಯ ಸೇವೆ ಸಲ್ಲಿಸಿದರು. ಇವರ ಅನೇಕ ಶಿಷ್ಯಶ್ರೇಷ್ಠರು ಮೈಸೂರ ಸರಕಾರದಲ್ಲಿ ಉಚ್ಚದರ್ಜೆಯ ಸ್ಥಾನವನ್ನು ಅಲಂಕರಿಸಿದ್ದಾರೆ. ಶಿಕ್ಷಕ ವೃತ್ತಿಯಿಂದ ನಿವೃತ್ತಿಹೊಂದಿ ವಿಶ್ರಾಂತಿ ಬಯಸದೆ ಹಾವೇರಿಯ ಸದಾಶಿವ ಹುಕ್ಕೇರಿ ಮಠದಲ್ಲಿ ನೆಲೆಸಿ ಶರಣ ಸಾಹಿತ್ಯದ ಹಿರಿಮೆಯನ್ನು, ಸೊಬಗನ್ನು ಪ್ರಸಾರ ಮಾಡುವ ಕಾರ್ಯದಲ್ಲಿ ತಲ್ಲೀನರಾದರು. ಚಿಕ್ಕ ಚಿಕ್ಕ ಪುಸ್ತಕಗಳನ್ನು ಸುಲಭವಾದ ಸರಳವಾದ ಶೈಲಿಯಲ್ಲಿ ಬರೆದು ಮಮತೆಯ ಮುದ್ದು ಮಕ್ಕಳ ಮನಸ್ಸಿಗೆ ಹಿಡಿಯುವಂತೆ ಸುಂದರವಾಗಿ ಪ್ರಕಟಿಸಿದರು.

ವೀರಶೈವ ಸಾಹಿತ್ಯ ಸಾಗರದ ಆಳವಾದ ಅಭ್ಯಾಸಮಾಡಿ, ತುಲನಾತ್ಮಕ ವಿಮರ್ಶಾತ್ಮಕ ವೈಚಾರಿಕ ಶಾಸ್ತ್ರೀಯ ದೃಷ್ಟಿಯಿಂದ ಅನೇಕ ಪ್ರೌಢ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಿದರು. ಅಪ್ರಕಟಿತ ಅಮೂಲ್ಯ ಶರಣ ಸಾಹಿತ್ಯವನ್ನು ಪ್ರಕಟಿಸಲು ತಮ್ಮ ಸಂಪಾದಕತ್ವದಲ್ಲಿ **ಸದ್ಧರ್ಮದೀಪಿಕೆ** ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಅದರಲ್ಲಿ ಶರಣರ ವಚನಗಳ ನಿಶ್ಚಿತವಾದ ನಿರ್ದಿಷ್ಟವಾದ ಸಮರ್ಪಕ ಸವಿಸ್ತಾರ ವಿವರಣೆಗಳನ್ನು ನೀಡಿ ಅಭ್ಯಾಸಿಗಳಿಗೆ–ಸುಲಭ ಮಾಡಿಕೊಡುತ್ತಿದ್ದರು. ಅನೇಕ ಸಂಶೋಧಕ ಬಿಡಿಲೇಖನಗಳನ್ನು ಪ್ರಕಟಿಸಿದರು. ತಾವು ಕಂಡ ಸತ್ಯವನ್ನು ಬಿಚ್ಚು ಮಾತುಗಳಲ್ಲಿ ಸ್ಪಷ್ಟವಾಗಿ ಸಂದರ್ಭಾನುಸಾರ ನಾಡನ್ನು ಸುತ್ತಿ, ಮಠ ಮಾನ್ಯಗಳಲ್ಲಿ ತಮ್ಮ ಪರಿಣಾಮಕಾರಿ ಭಾಷಣಗಳ ಮುಖಾಂತರ ಶರಣರ ನಿತ್ಯ ಸತ್ಯ ಉಚ್ಚ ತತ್ವಗಳ ಮಹತ್ವವನ್ನು ಸಭಿಕರಿಗೆ ಮನಂಬುಗುವಂತೆ ತಿಳಿಸುತ್ತಿದ್ದರು. ಹೊಗಳಿಕೆಗೆ ಹಿಗ್ಗುವವರೂ ಅಲ್ಲ; ತೆಗಳಿಕೆಗೆ ತಗ್ಗುವವರೂ ಅಲ್ಲ. ಬೇಡುವಾತ ಭಕ್ತನಲ್ಲವೆಂದು ಯಾರ ಸಹಾಯವನ್ನೂ ಅಪೇಕ್ಷಿಸಲಿಲ್ಲ. ಎಲ್ಲವೂ ಶಿವನಕೃಪೆ, ಆತನ ಇಚ್ಛೆಯಂತೆ ಸದಾ ಕಾಯಕದಲ್ಲಿಯೇ ನಿರತನಾಗಿರುವದೇ–ನನ್ನ ಕರ್ತವ್ಯವಾಗಿದೆ ಎಂದು ಹೇಳುತ್ತಿದ್ದರು. ಇಂತಹ ತತ್ವಜ್ಞಾನಿ, ಗುಣಪೂಜಕ ನಿಗರ್ವ ನಾಗರಿಕಶಿರೋಮಣಿಯನ್ನು ಕಳೆದುಕೊಂಡು ನಾಡು ಬಡವಾಗಿದೆ. ಸಮಾಜ ಪರದೇಶಿಯಾಗಿದೆ.

ನಮ್ಮ ಜೀವನದ ಕೊನೆಯ ಹಂತದಲ್ಲಿ ತಮ್ಮ ಸರ್ವಸ್ವವನ್ನೆಲ್ಲ ಸಮಾಜಕ್ಕೆ ಧಾರೆ ಎರೆದು ತಮ್ಮ ಜನ್ಮಭೂಮಿ ಶಿರಾಳಕೊಪ್ಪದಲ್ಲಿ ಸಿದ್ಧೇಶ್ವರ ಟ್ರಸ್ಟ ನಿರ್ಮಿಸುವ ವಿಚಾರಗಳನ್ನು ಅಲ್ಲಿಯ ಸಮಾಜಾಭಿಮಾನಿಗಳಿಗೆ ತಿಳಿಸಿ, ತಾವು ಕೈಕೊಂಡ ಕಾರ್ಯಗಳನ್ನು ಮುಂದುವರಿಸುವ ಹೊಣೆ ಹೊರಿಸಿಹೋದ ಮಹಾ ತ್ಯಾಗಿಯ ಹೆಸರು ಚಿರಸ್ಮರಣೀಯವಾಗುವಂತೆ, ಟ್ರಸ್ಟು ಕಾರ್ಯಪ್ರವೃತ್ತರಾಗುವರೆಂದು ಆಶಿಸುತ್ತೇನೆ. ಸಮಾಜದ ಶ್ರೇಷ್ಠ

ಸಾಹಿತಿಗಳಲ್ಲಿ ಒಂದು ಆಣಿ ಮುತ್ತಿನಂತಿದ್ದ ಶ್ರೀ ಚನ್ನಮಲ್ಲಪ್ಪನವರ ಅಮರ ಆತ್ಮಕ್ಕೆ ಆ ಶಿವನು ಅಖಂಡ ಚಿರಶಾಂತಿಯನ್ನು ದಯಪಾಲಿಸಲೆಂದು ಅನನ್ಯ ಭಾವದಿಂದ ಪ್ರಾರ್ಥಿಸುವೆ. ಅವರ ಸಂಸ್ಮರಣೀಯ ಕಾರ್ಯವನ್ನು ನಾಡಿನ ಸಮಾಜ ಬಾಂಧವರು ಮುಂದುವರಿಸಬೇಕಾಗಿದೆ.*

---

* ಈ ಲೇಖನ ಶ್ರೀ ಚೆನ್ನಮಲ್ಲಿಕಾರ್ಜುನರು ಲಿಂಗೈಕ್ಯರಾದ ತರುಣದಲ್ಲಿಯೇ ಅಂದರೆ ೩೧-೩-೧೯೬೨ನೆಯ ದಿನಾಂಕ ಸಾವಧಾನ ಪತ್ರಿಕೆಯ ೬ನೇಪುಟದಲ್ಲಿ ಅಲ್ಪಸ್ವಲ್ಪವ್ಯತ್ಯಾಸದೊಡನೆ ಪ್ರಕಟಗೊಂಡಿದೆ. ಅಲ್ಲಿ ಸ್ವಲ್ಪ ಸಂಕ್ಷೇಪ; ಇಲ್ಲ ಸ್ವಲ್ಪ ವಿಸ್ತೃತ. ಆದ್ದರಿಂದ ನಾವು ನಮ್ಮಲ್ಲಿದ್ದ ಸಾವಧಾನ ಪತ್ರಿಕೆಯ ಲೇಖನ ಪ್ರಕಟಿಸುವುದನ್ನು ಕೈಬಿಟ್ಟಿದ್ದೇವೆ. ಅಲ್ಲಿನ ಶಿರೋನಾಮೆ "ಪುಣ್ಯಜೀವಿ ಲಿಂ. ಕೋರಿ ಚನ್ನಮಲ್ಲಪ್ಪನವರು" ಎಂದು ಇದೆ. (ಸಂ.)

# ಲಿಂಗೈಕ್ಯ ಚನ್ನಮಲ್ಲಿಕಾರ್ಜುನ ಮಾಸ್ತರ

**ಎನ್. ಬಸವಾರಾಧ್ಯ**

ಸುಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ನಾನು ಚನ್ನಮಲ್ಲಿಕಾರ್ಜುನ ಅವರನ್ನು ಮೈಸೂರಿನ ಅವರ ಮನೆಯಲ್ಲಿ ಮೊದಲಬಾರಿಗೆ ಕಂಡದ್ದು ಆ ಸಮಯದಲ್ಲಿ. ಮನೆಯೂ ಅಚ್ಚುಕೂಟವೂ ಗ್ರಂಥ ಭಂಡಾರವೂ ಎಲ್ಲಾ ಒಂದೇಕಡೆ ನೆಲೆಗೊಂಡಿದ್ದವು.

ಮೂರ್ತಿ ಚಿಕ್ಕದಾದರೂ ಕೀರ್ತಿ ಹಿರಿದಾದ ವ್ಯಕ್ತಿ ಚನ್ನಮಲ್ಲಿಕಾರ್ಜುನ ಅವರು. ಸದ್ಧರ್ಮದೀಪಿಕೆಯ ಮೂಲಕ ಅವರ ಹೆಸರನ್ನು ಕೇಳಿದ್ದ ನಾನು ಅವರನ್ನು ಕಂಡಾಗ ಅಮಿತಾನಂದಗೊಂಡೆ. ಏಕೆಂದರೆ ಆ ಇಳಿವಯಸ್ಸಿನಲ್ಲಿಯೂ ಅವರು ದಿನನಿತ್ಯದ ತಮ್ಮ ಎಲ್ಲ ಕಾರ್ಯಗಳನ್ನು ತಾವೇ ಮಾಡಿಕೊಂಡು ಅಚ್ಚುಕೂಟದ ಕಾರ್ಯವನ್ನು ನಿರ್ವಹಿಸುವುದರ ಜೊತೆಗೆ ತಮ್ಮ ಬರವಣಿಗೆಯ ಕೆಲಸವನ್ನೂ ಮಾಡುತ್ತಿದ್ದರು. ಅವರು ಶಿವಾನುಭವಿಯಾಗಿ, ಕಾಯಕ ಕಲಿಯಾಗಿ ಕರ್ಮಯೋಗಿಯಾಗಿ ಅಮರರಾಗಿದ್ದಾರೆ.

ಚನ್ನಮಲ್ಲಿಕಾರ್ಜುನ ಮಾಸ್ತರರು ವೀರಶೈವ ಸಾಹಿತ್ಯವನ್ನು, ಅದರಲ್ಲೂ ವಚನ ಸಾಹಿತ್ಯವನ್ನು, ಆಳವಾಗಿ ಅಭ್ಯಸಿಸಿದ್ದರು. ಸದ್ಧರ್ಮದೀಪಿಕೆಯಲ್ಲಿ ಅವರು ಬರೆಯುತ್ತಿದ್ದ ಹಲವಾರು ಲೇಖನಗಳೇ ಇದಕ್ಕೆ ಸಾಕ್ಷಿಯಾಗಿವೆ. ಕನ್ನಡ ಸಾಹಿತ್ಯ, ವೀರಶೈವ ಸಾಹಿತ್ಯ, ವಚನ ಸಾಹಿತ್ಯ-ಇವುಗಳ ತ್ರಿವೇಣೀ ಸಂಗಮವನ್ನು ಸದ್ಧರ್ಮದೀಪಿಕೆಯಲ್ಲಿ ಕಾಣಬಹುದಾಗಿದೆ.

ಚೆನ್ನಮಲ್ಲಿಕಾರ್ಜುನ ಮಾಸ್ತರು ಹಲವಾರು ಬಿಡಿ ಲೇಖನಗಳ ಜೊತೆಗೆ ನುಲಿಯ ಚಂದಯ್ಯನ ಶಾರದ, ಶರಣೆಯರ ತ್ರಿವಿಧಿ, ಕೋಳೂರು ಕೊಡಗೂಸಿನ ರಗಳೆ, ಉಡುತಡಿಯ ಮಹಾದೇವಿಯಕ್ಕನ ರಗಳೆಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅಕ್ಕನ ವಚನಗಳ ಟೀಕೆ, ಕನ್ನಡ ಶಿವಯೋಗ ಪ್ರದೀಪಿಕೆಗಳನ್ನೂ ಅಚ್ಚು ಹಾಕಿಸಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾದುದು, ಮಹತ್ತರವಾದುದು ಅವರ 'ಶ್ರೀ ಬಸವೇಶ್ವರನ ಕಾಲವಿಚಾರ' ಎಂಬ ಗ್ರಂಥ. ಇದು ಒಂದು ಸಂಶೋಧನಾತ್ಮಕ ಕೃತಿ. ಹಲವಾರು ವರ್ಷಗಳ ಅವಿರತ ವ್ಯಾಸಂಗದಿಂದ ಹೊರಬಂದಿರುವ ಈ ಕೃತಿ ವಿದ್ವಾಂಸರ ಗಮನವನ್ನು ಸೆಳೆದಿದೆ, ಮೆಚ್ಚುಗೆಯನ್ನು ಪಡೆದಿದೆ.

ಕೋಳೂರು ಕೊಡಗೂಸಿನ ರಗಳೆಯನ್ನು ಕ್ರಿ. ಶ. ೧೯೩೧ ರಲ್ಲಿ ಪ್ರಕಟಿಸಿದ್ದಾರೆ. ಈ ಪುಟ್ಟ ರಗಳೆಗೆ ಒಂದು ಉಪಯುಕ್ತವಾದ ಮುನ್ನುಡಿಯನ್ನೂ ವಿಸ್ತಾರವಾದ ಅರ್ಥಕೋಶವನ್ನೂ ಕೊಟ್ಟು ಗ್ರಂಥ ಚಿಕ್ಕದಾದರೂ ಅದಕ್ಕೆ ಮೇಲ್ಮೆಯುಂಟಾಗುವಂತೆ ಮಾಡಿ

ದ್ದಾರೆ. ಈ ರಗಳೆಯನ್ನು ಮೊದಲಸಲ ಪ್ರಕಟಿಸಿದ ಕೀರ್ತಿ ಶ್ರೀಯುತರಿಗೆ ಸಲ್ಲತಕ್ಕದ್ದಾಗಿದೆ.

ಹರಿಹರನ ರಗಳೆಗಳಲ್ಲಿ ಉಡುತಡಿಯ ಮಹಾದೇವಿಯಕ್ಕನ ರಗಳೆ ಮುಖ್ಯವಾದುದು. ಮಹಾದೇವಿಯಕ್ಕನ ಅತ್ಯಂತ ಸಮೀಪವರ್ತಿಯಾಗಿದ್ದ ಹರಿಹರನು ನಿಜ ಸಂಗತಿಗಳನ್ನು ಈ ರಗಳೆಯಲ್ಲಿ ನಿರೂಪಿಸಿದ್ದಾನೆ. ಕಲ್ಯಾಣದ ಅನುಭವ ಮಂಟಪದಲ್ಲಿ ಮಹಾಮಹಿಮರಾದ ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಬಸವಣ್ಣನೇ ಮೊದಲಾದವರನ್ನು ಸಂಧಿಸಿ ಆಧ್ಯಾತ್ಮಿಕ ಚರ್ಚೆಯನ್ನು ನಡೆಸಿ ದಿಗಂಬರವನ್ನೇ ದಿವ್ಯಾಂಬರವನ್ನಾಗಿ ಮಾಡಿಕೊಂಡು ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತ ಶ್ರೀಶೈಲದತ್ತ ನಡೆದು ಅಲ್ಲಿಯ ಕದಳಿಯಲ್ಲಿ ಐಕ್ಯಳಾದ ಮಹಾಸಾಧ್ವಿ. ಇಂತಹ ಮಹಾಮಹಿಮಳ ಚರಿತ್ರೆಯನ್ನು ಸಂಪಾದಿಸಿ ಮೊದಲಬಾರಿಗೆ ಪ್ರಕಟಿಸಿ ನಾಡಿನ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ ಶ್ರೀ ಚೆನ್ನಮಲ್ಲಿಕಾರ್ಜುನ ಮಾಸ್ತರು. ಹಲವಾರು ಪ್ರತಿಗಳ ಆಧಾರದಿಂದ ವಿಪುಲ ಪಾಠಾಂತರಗಳೊಂದಿಗೆ ಕವಿಕಾವ್ಯವಿಚಾರ ಅರ್ಥಕೋಶಗಳೊಂದಿಗೆ ಕ್ರಿ. ಶ. ೧೯೩೩ ರಲ್ಲಿ ಪ್ರಕಟವಾಗಿರುವ ಈ ಕೃತಿ ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯಾಗಿದೆ.

ಚನ್ನಮಲ್ಲಿಕಾರ್ಜುನ ಅವರ ಕೀರ್ತಿಗೆ ಕಳಸವಿಟ್ಟಂತಿರುವ ಕೃತಿ ಶ್ರೀ ಬಸವೇಶ್ವರನ ಕಾಲ. ಕ್ರಿ.ಶ. ೧೯೫೦ ರಲ್ಲಿ ಪ್ರಕಟವಾಗಿರುವ ಈ ಕೃತಿಯಲ್ಲಿ ಬಸವಣ್ಣನವರನ್ನು ಕುರಿತು ಅಂದಿನವರೆಗೆ ಉಪಲಬ್ಧವಿದ್ದ ಎಲ್ಲ ಮಾಹಿತಿಗಳೂ ಇವೆ. ಈ ಗ್ರಂಥ ರಚನೆಗಾಗಿ ಅವರು ಶಾಸ್ತ್ರಪುರಾಣೇತಿಹಾಸಗಳನ್ನೂ, ಪ್ರಚಲಿತ ದಂತಕತೆಗಳನ್ನೂ, ಸ್ಥಳ ಪುರಾಣಗಳನ್ನೂ, ಅಸಂಖ್ಯಾತ ಶಾಸನಗಳನ್ನೂ, ಲೆಕ್ಕವಿಲ್ಲದಷ್ಟು ಗ್ರಂಥಗಳನ್ನೂ ಅಭ್ಯಾಸ ಮಾಡಿದ್ದಾರೆ. ಚನ್ನಮಲ್ಲಿಕಾರ್ಜುನರ ತೀರ್ಮಾನಗಳನ್ನು ವಿದ್ವಾಂಸರು ಒಪ್ಪಲಿ ಬಿಡಲಿ, ಅವರ ಅಪಾರವಾದ ಶ್ರಮ, ಬಹುಕಾಲದ ವ್ಯಾಸಂಗ, ಪರಿಶ್ರಮ ಈ ಗ್ರಂಥದ ಪ್ರತಿ ಪುಟದಲ್ಲಿಯೂ ಎದ್ದು ಕಾಣುತ್ತದೆ. ಈ ಗ್ರಂಥದ ಬಗೆಗೆ ಪ್ರೊ. ಶಿ. ಶಿ. ಬಸವನಾಳರು ಹೇಳಿರುವ ಮಾತುಗಳು ಉಲ್ಲೇಖನಾರ್ಹವಾಗಿವೆ.

"ಸದ್ಧರ್ಮದೀಪಿಕೆಯ ಸಂಪಾದಕರಾದ ಶ್ರೀ ಚನ್ನಮಕಾರ್ಜುನ ಅವರು ಬರೆದ 'ಬಸವೇಶ್ವರನ ಕಾಲ' ಎಂಬ ಗ್ರಂಥವನ್ನು ಆದ್ಯಂತವಾಗಿ ಓದಿದ್ದೇನೆ. ಬಸವೇಶ್ವರನ ಜೀವಿತಕಾಲ, ತಾಯಿ ತಂದೆಗಳು, ಅವರ ಶಿಕ್ಷಣ ಮುಂತಾದ ವಿಷಯಗಳ ಮೇಲೆ ಈ ಗ್ರಂಥದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಹೊಸ ಬೆಳಕು ಹಾಕಿದ್ದಾರೆಂದು ಹೇಳಲು ನನಗೆ ತುಂಬ ಸತೋಷವೆನಿಸುತ್ತದೆ.

ಈ ಗ್ರಂಥದಲ್ಲಿ ಗ್ರಂಥಕರ್ತರು ಅನುಸರಿಸಿದ ವಾದಸರಣಿ ಶಾಸ್ತ್ರಶುದ್ಧವೂ ತರ್ಕಬದ್ಧವೂ ಆಗಿದೆ. ಬಸವಣ್ಣನವರ ಬಗೆಗೆ ಶಾಸನಾಧಾರಗಳೂ ಸಾಕಷ್ಟು ದೊರೆಯುವುದಿಲ್ಲವೆಂದು ಇದುವರೆಗೆ ಪಂಡಿತರಲ್ಲಿದ್ದ ಅಭಿಪ್ರಾಯಕ್ಕೆ ಈ ಗ್ರಂಥದಿಂದ ಸರಿಯಾದ ಉತ್ತರ ದೊರೆಯುವುದೆಂಬಲ್ಲಿ ಸಂದೇಹವಿಲ್ಲ. ಬಸನಣ್ಣನವರ ಜೀವಿತಕಾಲವು ಕ್ರಿ. ಶ. ೧೧೦೬ ರಿಂದ ಕ್ರಿ. ಶ. ೧೧೬೭ರ ವರೆಗೆ ಎಂದು ಶ್ರೀ ಮಲ್ಲಿಕಾರ್ಜುನರು ಸಿದ್ಧಮಾಡಿದು

ದನ್ನು ನಾನು ಅನುಮೋದಿಸುತ್ತೇನೆ. ಮಣಿಗವಳ್ಳಿ (ಮನಗೋಳಿ) ಶಾಸನವು ಬಸವಣ್ಣನವರಿಗೆ ಸಂಬಂಧಿಸಿದುದಲ್ಲವೆಂಬ ಅಭಿಪ್ರಾಯ ನಿರಾಧಾರವಾದುದೆಂದು ಸಿದ್ಧಿಸಲು ಶ್ರೀ ಚನ್ನಮಲ್ಲಿಕಾರ್ಜುನರು ಕೈಕೊಂಡ ವಿಚಾರಸರಣಿ ಬಹು ಸಮಂಜಸವಾಗಿದೆ, ಅವರ ಸಂಶೋಧನಶಕ್ತಿಯನ್ನೂ ಚೆನ್ನಾಗಿ ಪ್ರದರ್ಶಿಸುತ್ತದೆ."

ಸುಮಾರು ನಾಲ್ಕೈದು ದಶಕಗಳಕಾಲ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂವರ್ಧನೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದ ಧೀಮಂತರು ಶ್ರೀ ಚನ್ನಮಲ್ಲಿಕಾರ್ಜುನ ಅವರು. ಲೌಕಿಕವಾದ ಯಾವ ಆಸೆ ಆಮಿಷಗಳಿಗೂ ಬಲಿಯಾಗದೆ ಸತ್ಯಶುದ್ಧ ಕಾಯಕವನ್ನು ಕೈಕೊಂಡು ನಿತ್ಯರಾದ ಶ್ರೀ ಚನ್ನಮಲ್ಲಿಕಾರ್ಜುನರು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

# ಶರಣ ಚನ್ನಮಲ್ಲಿಕಾರ್ಜುನರ ಸಾಹಿತ್ಯಸೇವೆ

**ಬಿ. ನಂಜುಂಡಪ್ಪ, ಕನಕಪುರ**

ಧರ್ಮ ಪ್ರಸಾರದ ಹಿನ್ನೆಲೆಯಲ್ಲಿ ಪ್ರಾಚೀನ ವೀರಶೈವ ಗ್ರಂಥಗಳನ್ನು ಪ್ರಕಟ ಪಡಿಸುವುದು, ವಿಮರ್ಶಿಸುವುದು ಮತ್ತು ವೃತ್ತಪತ್ರದ ಮೂಲಕ ವಿಚಾರ ಪ್ರಬೋಧ ಮಾಡುವುದು–ಈ ಬಗೆಯ ಸಾಹಿತ್ಯ ಸೇವೆಯಲ್ಲಿ ತೊಡಗಿದವರು ಶ್ರೀ ಚನ್ನಮಲ್ಲಿಕಾರ್ಜು ನರು. ಜನಮನದಲ್ಲಿನ ಧಾರ್ಮಿಕ ಮನೋಭಾವನೆಯನ್ನು ವೃದ್ಧಿಪಡಿಸಿ, ತನ್ಮೂಲಕ ಮಹಾದೇವನ ಸೇವೆ ಮಾಡುವ ಸಂಕಲ್ಪ ಅವರದು.

ಶ್ರೀ ಚನ್ನಮಲ್ಲಪ್ಪ ನೂರೊಂದಪ್ಪ ಕೋರಿ ಅವರು ಶಿರಾಳಕೊಪ್ಪದ ಸರ್ಕಾರಿ ಶಾಲೆಯೊಂದರಲ್ಲಿ ಮುಖ್ಯೋಪಾಧ್ಯಾಯರಾಗಿದ್ದು ನಿವೃತ್ತರಾದವರು. ಆದರ್ಶ ಅಧ್ಯಾಪಕರೆಂದು ಹೆಸರು ಗಳಿಸಿದವರು. 'ಶ್ರೀ ಚನ್ನಮಲ್ಲಿಕಾರ್ಜುನ'[1] ಎಂಬ ನಾಮಾಂಕಿತದಿಂದ 'ಸದ್ಧರ್ಮ ದೀಪಿಕೆ' ಮಾಸ ಪತ್ರಿಕೆಯ ಸಂಪಾದಕ ವೃತ್ತಿಯನ್ನು ಕೈಕೊಂಡರು.

ಶ್ರೀ ಚನ್ನಮಲ್ಲಿಕಾರ್ಜನರು ಕನ್ನಡ ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸಿದ್ದರು. ತಕ್ಕಮಟ್ಟಿನ ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳ ಪರಿಚಯವೂ ಅವರಿಗಿತ್ತು. ಆ ಭಾಷೆಗಳ ಉಪಯೋಗವನ್ನು ಅವರು ಯಶಸ್ವಿಯಾಗಿ ಪಡೆದರು. ಅವರು ತಮ್ಮ ಉದ್ದೇಶವನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ಸಾರ್ಥಕಪಡಿಸಿಕೊಂಡರು. ಒಂದನೆಯದು ಪ್ರಾಚೀನ ವೀರಶೈವ ಗ್ರಂಥ ಸಂಶೋಧನೆ ಎರಡನೆಯದು ಮಾಸಪತ್ರಿಕೆಯನ್ನು ಹೊರಡಿಸುವದು.

## ಮುದ್ರಣ ಮಂದಿರ ಸ್ಥಾಪನೆ

ಈ ಉದ್ದೇಶವನ್ನು ಗಮನದಲ್ಲಿಟ್ಟು ಶ್ರೀ ಚನ್ನಮಲ್ಲಿಕಾರ್ಜುನರು ಆ ಕಾರ್ಯವನ್ನು ಯಶಸ್ವಿಯಾಗಿಸುವ ಸಲುವಾಗಿ ಹಾವೇರಿಯಲ್ಲಿ ೧೯೩೨ ರಲ್ಲಿ ಶ್ರೀ ಶಿವಲಿಂಗ ವಿಜಯ ಮುದ್ರಣ ಮಂದಿರವನ್ನು ಸ್ಥಾಪಿಸಿದರು. ತನ್ಮೂಲಕ ಪ್ರಾಚೀನ ಓಲೆಯಕಟ್ಟುಗಳಲ್ಲಿ ಅಡಗಿ ಮೂಲೆಗೆ ಬಿದ್ದಿದ್ದ ಕೆಲವು ಪುಟ್ಟ ಪುಟ್ಟ ಧಾರ್ಮಿಕ ಪುಸ್ತಿಕೆಗಳನ್ನು ಮೊದಲು ಅಚ್ಚುಮಾಡಿ ಪ್ರಕಟಿಸಿದರು. ಅವು ಚಿಕ್ಕವಾದರೂ ಮಹತ್ವವಾದವು, ಸುಲಭ ಗ್ರಾಹ್ಯವಾದವು. ಬೆಲೆಯಂತೂ ಬಹಳ ಕಡಿಮೆ (೬ ಪೈ, ೧ ಆಣೆ, ೨ಆಣೆ).

## "ಸದ್ಧರ್ಮದೀಪಿಕೆ" ಮಾಸಪತ್ರಿಕೆ ಪ್ರಕಟನೆ

ಮುದ್ರಣ ಮಂದಿರ ಸ್ಥಾಪಿತವಾದ ಒಂದು ವರ್ಷದ ಮೇಲೆ "ಸದ್ಧರ್ಮದೀಪಿಕೆ"

---

1 'ಸದ್ಧರ್ಮದೀಪಿಕೆ' ಸಂಚಿಕೆ ೪೭-೪೮ ರಲ್ಲಿ ಹೀಗೆ ಹೇಳಿದ್ದಾರೆ: "ಶಿವನೇ ಈ ಪತ್ರಿಕೆಯನ್ನು ನನ್ನೊಳಗೆ ಪ್ರೇರಿಸಿ ಹೊರಡಿಸುವನೆಂಬ ಭಕ್ತಿಭಾವನೆಯಿಂದ ಈ ಪತ್ರಿಕೆಯ ಪ್ರಕಾಶಕನು 'ಶ್ರೀ ಚನ್ನಮಲ್ಲಿಕಾರ್ಜುನ' ಎಂದು ಆ ಮಹಾದೇವನ ಭಾವನೆಯಲ್ಲಿ ಬರೆಯಲ್ಪಟ್ಟಿತ್ತೇ ವಿನಾ ಒಂದು ಶ್ರೀಕಾರದ ಗೌರವವು ಸೇವಕನಾದ ನನಗೆ ಬೇಕೆಂದಲ್ಲ."

ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಪತ್ರಿಕೆಯ ಉದ್ದೇಶವನ್ನು ಅದರ ಮುಖಪುಟದಲ್ಲಿ ಈ ರೀತಿ ಪ್ರಕಟಿಸಿದರು. "ಶ್ರೀಮನ್ ನಿರಂಜನವರ್ಯ ಹಾನಗಲ್ ಸದಾಶಿವ ಸ್ವಾಮಿಗಳವರ ಸ್ಮಾರಕ ಪತ್ರವಿದು. ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿ ತೋರಿದ ತತ್ವಗಳನ್ನು ಪ್ರಕಟಿಸುವ ಪತ್ರವಿದು. ಹಿಂದೂ ಧರ್ಮದ ಮುಖ್ಯ ವಿಷಯಗಳ ಸಾರವನ್ನು ಪ್ರಕಾಶಿಸುವ ಪತ್ರವಿದು." ಈ ಪತ್ರಿಕೆಯ ಪ್ರಕಟನೆಗೆ ಹಾವೇರಿ ಹುಕ್ಕೇರಿಮಠದ ಶ್ರೀ ನಿ. ಪ್ರ. ಶಿವಬಸವಸ್ವಾಮಿಗಳು ವಿಶೇಷ ಪ್ರೋತ್ಸಾಹ ವಿತ್ತರು.

'ಸದ್ಧರ್ಮದೀಪಿಕೆ'ಯಲ್ಲಿ, ಹೆಸರೇ ಸೂಚಿಸುವಂತೆ, ಮುಖ್ಯವಾಗಿ, ಧಾರ್ಮಿಕ ಲೇಖನಗಳು ಪ್ರಕಟವಾಗುತ್ತಿದ್ದವು. ಅವುಗಳು ಬಹುಮಟ್ಟಿಗೆ ಸಂಶೋಧನಾತ್ಮಕವಾದವು. ಅಲ್ಲಲ್ಲಿ ನಡೆಯುವ ಧಾರ್ಮಿಕ ಸಭೆ ಸಮ್ಮೇಳನಗಳ ವರದಿಗಳು, ವಿಮರ್ಶೆ, ಪ್ರಚಲಿತ ವಿಷಯಗಳ ಸಂಕ್ಷೇಪ ಟಿಪ್ಪಣಿಗಳು, ಪ್ರಾಚೀನ ತಾಳೆಯೋಲೆ ಗ್ರಂಥಗಳ ಪರಿಚಯ–ಇವು ಮುಖ್ಯವಾಗಿ ಪ್ರಕಟಗೊಳ್ಳುತ್ತಿದ್ದವು. ಕೆಲವು ಬೃಹದ್ಗ್ರಂಥಗಳೂ ಭಾಗಶಃ ಮಾಸಪತ್ರಿಕೆಯ ಸಂಚಿಕೆಗಳಲ್ಲಿ ಅಚ್ಚಾಗಿ ಪೂರ್ಣಗೊಳ್ಳುತ್ತಿದ್ದವು. ಆ ವ್ಯವಸ್ಥೆಯಿಂದ ಗ್ರಂಥಪ್ರಕಟನೆಯ ಕೆಲಸವೂ ಹಗುರವಾಗುತ್ತಿತ್ತು.

### ಪತ್ರಿಕಾಪ್ರಕಟನೆಯ ತೊಡಕುಗಳು ಮತ್ತು ನಿವಾರಣೆ

ಮಾಸಪತ್ರಿಕೆ, ಸಂಶೋಧನೆ ಮತ್ತು ಪ್ರಕಟನೆಯ ಕಾರ್ಯಗಳಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಅನೇಕ ತೊಡಕುಗಳನ್ನು ಎದುರಿಸಬೇಕಾಯಿತು. ಪತ್ರಿಕೆಯ ವಾರ್ಷಿಕ ವರ್ಗಣಿ ಬಹಳ ಕಡಿಮೆಯಿತ್ತು. ಖರ್ಚು ಹೆಚ್ಚು. ಪತ್ರಿಕೆ ಸುಸೂತ್ರವಾಗಿ ಸಾಗಲು ಬೇಕಾದ ಆರ್ಥಿಕ ಬಲವಾಗಲೀ, ತಪ್ಪದೆ ಹಣ ಪಾವತಿ ಮಾಡುವ ಹೆಚ್ಚು ಚಂದಾದಾರರಾಗಲೀ ಇರಲಿಲ್ಲ. 'ಸದ್ಧರ್ಮದೀಪಿಕೆ' ಪ್ರಾರಂಭವಾದ ಎಂಟು ವರ್ಷಗಳ ಮೇಲೆ ಸಂಪಾದಕರು ಗ್ರಾಹಕರಲ್ಲಿ ಈ ರೀತಿ ಮನವಿ ಮಾಡಿಕೊಂಡರು. "ಇಷ್ಟುಹೊತ್ತಿಗೆ ೮೯ನೆಯ ಸಂಚಿಕೆಯಾಗಬೇಕಾಗಿದ್ದಿತು. ಅದರ ಬದಲಾಗಿ ೪೪ನೆಯ ಸಂಚಿಕೆಯು ಪೂರ್ತಿಯಾಗಿರುತ್ತದೆ. ಈ ಮುದ್ರಣಾಲಯದಲ್ಲಿ ಕೆಲಸಮಾಡಿ, ಅದೇ ಶಿವನ ಕಾಯಕವೆಂದು ಬಗೆದು ಅದರ ಉತ್ಪತ್ತಿಯನ್ನೇ ಮೈಸೂರು ಸರಕಾರದ ಕೆಲಸದಲ್ಲಿನ ವಿಶ್ರಾಂತಿಯ ಸಂಬಳದ ಉತ್ಪತ್ತಿ ಮುಂತಾದವುಗಳ ಜೊತೆಯಲ್ಲಿ ಕೂಡಿಸಿಕೊಂಡು ಇದುವರೆವಿಗೂ ಮಾಸಪತ್ರಿಕೆಯ ಕೆಲಸವನ್ನೂ ಸಾಗಿಸುತ್ತಾ ಬಂದುದಾಯಿತು. ಚಂದಾದಾರರ ಸಂಖ್ಯೆ ಸುಮಾರು ೩೦೦ ಇರುವುದಾಗಿಯೂ, ಪತ್ರಿಕಾ ಪ್ರಚಾರದ ಕೆಲಸವನ್ನು ಯಾರಾದರೂ ಅಭಿಮಾನಿಗಳು ವಹಿಸಿಕೊಂಡು ಮಾಸಪತ್ರಿಕೆಯ ಮುದ್ರಣಕ್ಕಾಗಿ ತಿಂಗಳೊಂದಕ್ಕೆ ೫೦–೬೦ ರೂಪಾಯಿಗಳನ್ನು ಮಾತ್ರ ಕೊಟ್ಟು ಉಳಿದ ಹಣವನ್ನು ಲಾಭಮಾಡಿಕೊಳ್ಳಬಹುದೆಂದೂ ಒಂದೆರಡು ಸಾರಿ ಪತ್ರಿಕೆಯಲ್ಲಿ ಪ್ರಕಟಿಸಿದಾಗ್ಯೂ, ಅಂತಹ ಅಭಿಮಾನಿಗಳಾರೂ ಮುಂದೆ ಬರಲಿಲ್ಲ. ಪ್ರಕಾಶಕನೇ ಪ್ರಚಾರಕ್ಕೆ ಹೊರಡುವುದಾದರೆ ಗ್ರಂಥಗಳನ್ನು ಹೆಚ್ಚಿಗೆ ಸಿದ್ಧಪಡಿಸುವ ಕೆಲಸವು ನಿಂತುಹೋಗುವುದೆಂಬ ಭೀತಿಯಿಂದ ಹೊರಡಲೂ ಇಲ್ಲ. ಮೇಲಾಗಿ ಯಾರಿಗೂ ನೋವಾಗದಂತೆ ಎಂದರೆ ಮನಸ್ಸಿಗೆ ಅಸಮಾಧಾನವುಂಟಾಗದಂತೆ ಶಿವನ ಕೃಪೆಯಿಂದ ಬರುವ ದ್ರವ್ಯದಿಂದಲೇ ಇದನ್ನು ಸಾಗಿಸ

ಬೇಕೆಂಬ ಸಂಕಲ್ಪದಿಂದ ಒದಗಿದಷ್ಟು ಅನುಕೂಲತೆಯಿಂದ ಸಾಗಿಸುತ್ತಲೇ ಬಂದಿದೆ. ೩೦೦ ಚಂದಾದಾರರಿದ್ದರೂ ೪ನೆಯ ವರ್ಷದ ಪತ್ರಿಕೆಗಳ ಬಗ್ಗೆ ಚಂದಾ ವೊಬಲಗು ಸುಮಾರು ೧೫–೨೦ ಮಹನೀಯರಿಂದ ಮಾತ್ರವೇ ಬಂದಿದೆ. ಇಂತಹ ಸಂದರ್ಭದಲ್ಲಿ ಬೇರೆ ಉತ್ಪತ್ತಿಯು ದೊರಕದ ವಿನಾ ಪತ್ರಿಕೆಯನ್ನು ನಡೆಸಲು ಸಾಧ್ಯವಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ ಇದೆ. ಇಂತಹ ಉತ್ಪತ್ತಿಯು ಕಡಿಮೆಯಾಗುವ ಸಂಭವವೂ ತೋರಿದುದರಿಂದಲೇ ಹೋದ ವರುಷದಿಂದಲೂ ಪ್ರತಿ ಮಾಸಪತ್ರಿಕೆಯಲ್ಲಿ ಈ ಮಾಸಪತ್ರಿಕೆಯನ್ನು ಉಳಿಸುವುದು ಚಂದಾದಾರರ ಕೈಯಲ್ಲಿ ಇದೆ ಎಂದು ಪ್ರಕಟಿಸುತ್ತಾ ಬಂದರೂ ಅವರಿಂದಲೂ ಉತ್ತೇಜನವೇನೂ ದೊರೆಯಲಿಲ್ಲ......"[1] ಈ ತೊಡಕುಗಳಿಂದ ಪತ್ರಿಕೆ ಕಾಲಕ್ಕೆ ಸರಿಯಾಗಿ ಪ್ರಕಟವಾಗುವುದೂ ಕಷ್ಟಕರವಾಗಿತ್ತು.

ಈ ರೀತಿ 'ಸದ್ಧರ್ಮದೀಪಿಕೆ' ಬೆಳೆದುಬಂದ ದಾರಿ ಅಷ್ಟು ಸುಗಮವಾಗಿರಲಿಲ್ಲ. ವಿಜಾಪುರ ಜಿಲ್ಲೆಯ ಶಿವಯೋಗ ಮಂದಿರದ ಟ್ರಸ್ಟ್ ಕಮಿಟಿಯವರು ಶಿವಲಿಂಗ ವಿಜಯ ಮುದ್ರಾಲಯವನ್ನೂ, 'ಸದ್ಧರ್ಮದೀಪಿಕೆ' ಮಾಸಪತ್ರಿಕೆಯನ್ನೂ ತಾವೇ ನಡೆಸುವರೆಂದು ಆಶಾಕಿರಣ ಮೂಡಿತ್ತು. ಆದರೆ ಅದೂ ಮಾಯವಾಯಿತು. ಆ ಸಂದರ್ಭದಲ್ಲಿ (೧೯೪೪ ನವೆಂಬರ್) ಶ್ರೀ ಚನ್ನಮಲ್ಲಿಕಾರ್ಜುನರು ಹೀಗೆ ಬರೆದರು : "ಧರ್ಮಕ್ಕೆ ಯಾವಾಗಲೂ ಕರ್ಮದ ಬಾಧೆಯಿರುವಂತೆ ನನಗೆ ಶಿವಯೋಗ ಮಂದಿರದಲ್ಲಿ ಆಗ ಅವಕಾಶವು ಸಿಕ್ಕುವುದಕ್ಕೆ ಅಲ್ಲಿ ಹಣದ ಕೊರತೆಯಿಂದ ವಿಶ್ವಾಸಿ ಸಂಘ (Trust Committee) ದ ಅನುಮತಿಯು ದೊರೆಯದೆ ಹೋಯಿತು......ಆಗ ಮೂಲೆಯಲ್ಲಿ ನರಳುತ್ತಿದ್ದ ನಾನು ಧರ್ಮ ಕರ್ಮ ಸಂಯೋಗದಿಂದ ಮೈಸೂರಿನಲ್ಲಿ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳವರ ಪರಮ ಕರುಣಾಬಲದಿಂದ ಚೇತರಿಸಿಕೊಂಡೇಳಲಿಕ್ಕೆ ಪ್ರಾರಂಭಿಸಿದೆನು. ಚೇತರಿಸುವ ಚೆಚ್ಚರದಲ್ಲಿ ಈಗಿನ ಜಾಗತಿಕ ಮಹಾಯುದ್ಧ, ಮೈಸೂರು ದೇಶದ ವಿದ್ಯುಚ್ಛಕ್ತಿಯ ಪ್ರಧಾನ ಕಾರ್ಯಾಲಯದ ಅಪಘಾತ ಮುಂತಾದ ಕಾರಣಗಳಿಂದ ಕಾಗದಗಳ ನಿರ್ಮಾಣಕ್ಕೆ ಕೊರತೆ ಬಂದು ನನ್ನ ಆಹಾರವಾದ ಕಾಗದಗಳಲ್ಲದೆ ಮತ್ತೆ ಗಟ್ಟಿಯಾದ ಪೆಟ್ಟನ್ನು ತಿಂದು ಮಲಗಿದೆನು. ಇಂತಹ ತೊಂದರೆಯಲ್ಲಿಯೂ ಮೈಸೂರು ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟರಾದ ಮ. ರಾ. ಕೆ. ಸಿ. ಸುಬ್ಬಣ್ಣನವರು ನನ್ನ ಪ್ರಕಟನೆಗಾಗಿ ವೀರಶೈವ ಸಮಾಜ ಬಾಂಧವರಲ್ಲಿ ವಿನಯ ಪೂರ್ವಕವಾದ ವಿನಂತಿಯನ್ನು ಪ್ರಸಿದ್ಧ ಪತ್ರಿಕೆಯ ಮೂಲಕ ಪ್ರಕಟಿಸಿದುದರ ಬಲದಿಂದಲೂ ಸುತ್ತೂರು ವೀರಸಿಂಹಾಸನ ಮಠದ ಸ್ವಾಮಿಗಳ ಆಶ್ರಯದ ಬಲದಿಂದಲೂ. ಮೆಹರ್ಬಾನ್ ಮೈಸೂರು ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರ್‌ರವರ ಸಹಾನುಭೂತಿಯ ಬಲದಿಂದಲೂ ನಾನು ಹೊರಬೀಳುವುದಕ್ಕೆ ಮೈಸೂರಿನ ರಾಜಕೀಯಾಜ್ಞೆ, ಸರಬರಾಜು ಇಲಾಖೆಯ ಮುದ್ರಣದ ಕಾಗದಗಳು ದೊರೆತ ಬಲದಿಂದಲೂ ನಾನು ಮೆಲ್ಲಮೆಲ್ಲನೆ ಎದ್ದು ಈಗ ಕಣ್ ಬಿಟ್ಟು ನೋಡುವಲ್ಲಿ ನನಗೆ ಮಹಾ ವಿಭವವು

1 'ಸದ್ಧರ್ಮದೀಪಿಕೆ' ಸಂಚಿಕೆ ೪೭–೪೮

ತೋರಿಬರುತ್ತಲಿದೆ."[1] ಆ ಬಳಿಕ ಪತ್ರಿಕೆ ಕೆಲವು ವರ್ಷ ಹೆಚ್ಚು ತೊಂದರೆಯಿಲ್ಲದೆ ನಡೆಯಿತು.

ಈ ಮಧ್ಯೆ ಅಂಚೆ ಇಲಾಖೆಯ ಅಪ್ಪಣೆ ಬರುವುದು ಸಾವಕಾಶವಾಗಿ ಪತ್ರಿಕೆ ಆರು ತಿಂಗಳ ಕಾಲ ಹೊರಡಲಿಲ್ಲ. ಮತ್ತೆ ಕಂಟಕಗಳೊದಗಿದವು. ಸಂಪಾದಕರು ಮತ್ತೆ ಮೊರೆಯಿಟ್ಟರು "ಈಗ ಪ್ರಕಾಶನಿಗೆ ೭೫ ವರ್ಷ...ಇದು ಶಿವನ ಸೇವೆ. ಪ್ರಕಾಶಕನು ಶಿವನ ಸೇವಕನು ಎಂದು ಕೆಲಸ ಮಾಡಿದರೂ ಈ ಸೇವೆಯಿಂದಲೂ ವಿರಾಮವನ್ನು ಪಡೆಯಬೇಕೆಂದು ಬೋಧಿಸುವ ತೊಂದರೆಗಳು ಒದಗುತ್ತಲಿವೆ. ಕೆಲಸ ಮಾಡುತ್ತಿದ್ದ ಒಂದು ಕಣ್ಣಿಗೆ ಪರೆ ಬಂದು ಲೇಖನಗಳು ನಿಧಾನವಾಗಿ ಬರೆಯಲ್ಪಡುತ್ತಲಿವೆ. ಈ ದೆಸೆಯಿಂದ ಬರೆಯುವವರು ಮುಂತಾದವರನ್ನು ಹೆಚ್ಚಾಗಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಈ ಪತ್ರಿಕೆಯ ಚಂದಾದಾರರ ಹಣ ಸಹಾಯವು ಬಹಳ ಕಡಿಮೆಯಾಗಿ ಇದೆ.[2]

೧೯೪೫ ರಿಂದಾಚೆಗೆ ೬೪ನೆಯ ಸಂಚಿಕೆಯಿಂದ ಪತ್ರಿಕೆ ತನ್ನ ಕಾಲು ಬಲದಮೇಲೆ ನಿಲ್ಲಬೇಕಾಯಿತು.

## ಪ್ರಾಚೀನ ಗ್ರಂಥ ಸಂಗ್ರಹಣೆ ಮತ್ತು ಸಂಶೋಧನೆ

ಶ್ರೀ ಚನ್ನಮಲ್ಲಿಕಾರ್ಜುನರು ಸಂಶೋಧನಾ ಕಾರ್ಯದಲ್ಲಿ ಬಹಳ ಉತ್ಸಾಹವುಳ್ಳವರು. ಅವರ ಭಂಡಾರದಲ್ಲಿ ಸಾವಿರಾರು ಓಲೆ ಕಟ್ಟುಗಳೂ ಕಾಗದ ಪ್ರತಿಗಳೂ ಸಂಗ್ರಹವಾಗಿದ್ದವು. ಪತ್ರಿಕೆಗಾಗಿ ಲೇಖನಗಳನ್ನು ಸಿದ್ಧಪಡಿಸುವುದು–ಸಂಗ್ರಹಿಸುವುದು, ಅದರ ಅಚ್ಚಿನ ಮತ್ತು ಪ್ರಕಟನೆಯ ಕೆಲಸ–ಇವುಗಳಿಗೆ ಗಮನಕೊಟ್ಟು, ಉಳಿದ ಕಾಲವನ್ನೆಲ್ಲಾ ಗ್ರಂಥ ಸಂಶೋಧನೆಗಾಗಿಯೇ ಮೀಸಲಾಗಿಡುತ್ತಿದ್ದರು.

ವಚನಶಾಸ್ತ್ರ ಪಿತಾಮಹರಾದ ಲಿಂ. ಫ. ಗು. ಹಳಕಟ್ಟಿಯವರ ಮಾರ್ಗವನ್ನನುಸರಿಸಿ, ಅನೇಕ ಸಣ್ಣ ಪುಟ್ಟ ಪುಸ್ತಿಕೆಗಳನ್ನೂ ಬೃಹದ್ಗ್ರಂಥಗಳನ್ನೂ ಮುದ್ರಣಮಾಡಿ ಬೆಳಕಿಗೆ ತಂದರು. ಈ ಕೆಲಸ ಸುಲಭ ಸಾಧ್ಯವಾದುದಲ್ಲ. ಒಂದೇ ಗ್ರಂಥದ ಹಲವು ಪ್ರತಿಗಳನ್ನು ಹುಡುಕುವುದು, ಅಪೂರ್ಣವಾದ ಮತ್ತು ಹುಳುತಿಂದ ಪ್ರತಿಗಳನ್ನು ಗುರ್ತಿಸುವುದು, ಹೇರಳವಾದ ಪಾಠಾಂತರಗಳನ್ನೂ ಗೊತ್ತುಪಡಿಸುವುದು—ಇವು ಶ್ರಮದಾಯಕವಾದವು. ಇವುಗಳಲ್ಲದೆ, ಅಚ್ಚಿನ ಸಲಕರಣೆಗಳ ಅಭಾವ, ಕಾಗದದ ಮುಗ್ಗಟ್ಟು ಹಣದ ಕೊರತೆ–ಇವುಗಳಿಂದಾದ ತೊಂದರೆ ತಪ್ಪುತ್ತಿರಲಿಲ್ಲ.

ಸಂಶೋಧನೆಗೆ ಸಾಕಷ್ಟು ವಿದ್ವತ್ತೂ, ಶಾಂತಿ ಸಹನೆಯೂ, ಶ್ರದ್ಧೆಯೂ ನಿಷ್ಠೆಯೂ ಬೇಕು. ಸಂದರ್ಭಾನುಸಾರವಾಗಿ ಅನ್ಯರ ಸಹಾಯ ಸೌಲಭ್ಯಗಳೂ ಬೇಕು. ಇವೆಲ್ಲ ಗುಣಗಳನ್ನು ಅಳವಡಿಸಿಕೊಂಡ ಅವರು ತಮ್ಮ ಕಾರ್ಯವನ್ನು ನಿಷ್ಠೆಯಿಂದ ನಡೆಸುತ್ತಾ ಬಂದರು. ಅಂಗವಿಕಲತೆಯ ತೊಂದರೆಯಿದ್ದರೂ ಅದನ್ನು ಲೆಕ್ಕಿಸದೆ ಆ ಕೆಲಸವಲ್ಲಿ ಬಹಳ ಉತ್ಸಾಹದಿಂದ ತೊಡಗುತ್ತಿದ್ದರು. ಅಚ್ಚಿನ ಕರಡು ತಿದ್ದುವ ಕೆಲಸದಲ್ಲಿ, ಅಸ್ತವ್ಯಸ್ತವಾಗಿದ್ದ ಓಲೆಗಳನ್ನು ಅವಲೋಕಿಸುವುದರಲ್ಲಿ ೭೫ರ ವಯೋಧರ್ಮದಂತೆ ಕಣ್ಣು ಪರೆ ಬಂದಿದ್ದರಿಂದ, ಮತ್ತಾರನ್ನೂ ಆ ಕೆಲಸಕ್ಕೆ ನೇಮಿಸಿಕೊಳ್ಳುವಷ್ಟು

---

1 ಸದ್ಧರ್ಮದೀಪಿಕೆ ನವಂಬರ್ ೧೯೪೪

2 ,, ಸಂ. ೧೨೦-೧೨೧

ಶಕ್ತಿ ಇಲ್ಲದ್ದರಿಂದ ತೊಂದರೆಯುಂಟಾಗುತ್ತಿತ್ತು. ಆದರೂ ಅವರ ಕರ್ತವ್ಯನಿಷ್ಠೆ ಕುಂದುತ್ತಿರಲಿಲ್ಲ.

ಗ್ರಂಥಪಾಠವನ್ನು ಗೊತ್ತುಮಾಡುವುದರಲ್ಲಿ ಬಹಳ ಎಚ್ಚರಿಕೆ ವಹಿಸುತ್ತಿದ್ದರು. ಪುರಾಣಗಳಿಗಿಂತಲೂ ತಾಮ್ರಪಟಗಳಿಗೆ, ಶಾಸನಗಳಿಗೆ, ಚಾರಿತ್ರಿಕಾಂಶಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದರು. ಸಂದೇಹಬಂದ ಕಡೆಗಳಲ್ಲಿ ಎಲ್ಲ ಮೂಲಗಳಿಂದ ವಿಷಯ ಸಂಗ್ರಹ ಮಾಡುತ್ತಿದ್ದರು. 'ಸದ್ಧರ್ಮದೀಪಿಕೆ'ಯಲ್ಲಿ ಪ್ರಕಟವಾದ ತಮ್ಮ ಸಂಶೋಧನಾತ್ಮಕ ವಿಷಯಗಳ ಮೇಲಿನ ಟೀಕೆಗಳಿಗೆ ತಮಗೆ ತಿಳಿದಷ್ಟುಮಟ್ಟಿಗೆ ಸಮಾಧಾನ ಕೊಡುತ್ತಿದ್ದರು. ಹಾಗೆ ಕೊಡುತ್ತಿದ್ದ ಸಮಾಧಾನವಾದರೂ ಸರಳವಾಗಿ ವಿನಮ್ರ ಭಾವದಲ್ಲಿರುತ್ತಿತ್ತು. ಆವೇಶಪೂರಿತವಾಗಲೀ ಕೆರಳಿಸುವಂತಾಗಲೀ ಇರುತ್ತಿರಲಿಲ್ಲ.

ವೀರಶೈವ-ಧರ್ಮದ ಸಾಮಾನ್ಯ ಸ್ವರೂಪವನ್ನು ಕೇವಲ ಅಕ್ಷರಮಾತ್ರ ಬಲ್ಲ ಸಾಮಾನ್ಯರಿಗೂ ಸುಲಭಗ್ರಾಹ್ಯವಾಗಿರುವಂತೆ ಪರಿಚಯ ಮಾಡಿಕೊಡುವ ಉದ್ದೇಶದಿಂದ 'ವೀರಶೈವ' ಎಂಬ ಸುಲಭ ಬೆಲೆಯ ಪುಸ್ತಕವನ್ನು ರಚಿಸಿ ಪ್ರಕಟಿಸಿದರು. ಅಕ್ಕಮಹಾದೇವಿಯವರ ವಚನಗಳಿಗೆ ಅರ್ಥ ಬರೆದು ಪ್ರಕಟಿಸಿದರು. ಬಸವಲಿಂಗ ಶರಣರ 'ಗುರುಕರುಣ ತ್ರಿವಿಧಿ'ಗೆ ಉಪಯುಕ್ತವಾದ ಟಿಪ್ಪಣಿಗಳನ್ನು ಬರೆದು ಪ್ರಕಟಿಸಿದರು. 'ಬಸವೇಶ್ವರನ ಕಾಲ' ಮತ್ತು 'ರೇವಣಸಿದ್ಧರು' ಎಂಬ ಸಂಶೋಧನಾತ್ಮಕ ಗ್ರಂಥಗಳನ್ನು ರಚಿಸಿ ಅಚ್ಚುಮಾಡಿದರು. ಮಗ್ಗೆಯ ಮಾಯಿದೇವರ ಗ್ರಂಥಗಳನ್ನೂ, 'ಸಿದ್ಧೇಶ್ವರ ವಚನ'ವನ್ನೂ 'ಸಕಲ ಪುರಾತನರ ವಚನ' ಮುಂತಾದ ಗ್ರಂಥಗಳನ್ನೂ ಅಚ್ಚು ಮಾಡಿದರು.

ಸಂಶೋಧನಾ ಕಾರ್ಯದಲ್ಲಿ ಅಭಿಪ್ರಾಯ ಭೇದಗಳಿರುವುದು ಸಹಜವಾದರೂ ಶ್ರೀ ಚನ್ನಮಲ್ಲಿಕಾರ್ಜುನರ ಸಂಶೋಧನಾದೃಷ್ಟಿ ಮಹತ್ತರವಾದುದೆಂದು ಭಾವಿಸಬಹುದಾಗಿದೆ.

ಅವರ ಸಂಶೋಧನೆಯನ್ನು ಕುರಿತು ಬರೆದಿರುವ ಒಂದೆರಡು ಅಭಿಪ್ರಾಯಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ನಿವೃತ್ತ ಹೈಕೋರ್ಟ್ ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪನವರು 'ರೇವಣಸಿದ್ಧರು' ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ ಹೀಗೆ ತಿಳಿಸಿದ್ದಾರೆ :

"ಶ್ರೀ ಚನ್ನಮಲ್ಲಿಕಾರ್ಜುನರು ಅಣ್ಣ ಬಸವ, ಸಿದ್ಧರೇವಣರ ವಿಚಾರವಾಗಿ ಬರೆದಿರುವ ಗ್ರಂಥಗಳನ್ನು ಓದಿದವರಿಗೆ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬುದು ಅರಿವಾಗದಿರದು. ಚಾರಿತ್ರಿಕ ವಿಷಯಗಳು ಕಾಲಗರ್ಭದಲ್ಲಿ ಅಡಗಿಹೋಗಿವೆ. ಬೆಟ್ಟವನ್ನಗೆವ ಉಕ್ಕಿನುಳಿಯಂತೆ ಇವನ್ನು ಅತಿ ಕಷ್ಟದಿಂದ ಹೊರಹೊಮ್ಮಿಸಬೇಕು. ಶ್ರೀ ಚನ್ನಮಲ್ಲಿಕಾರ್ಜುನರು ಇಂತಹ ವಿಷಯಗಳನ್ನು ಹೊರಗೆಡವಲು ತಮ್ಮ ಜೀವನವನ್ನೇ ಸವೆದಿದ್ದಾರೆ. ಈ ವಿಷಯಗಳ ಆಧಾರದಿಂದ ಅವರು ತೆಗೆದಿರುವ ಸಿದ್ಧಾಂತಗಳ ಮೇಲೆ ಭಿನ್ನಾಭಿಪ್ರಾಯವುಳ್ಳವರೂ ಸಹ ಅಮೂಲ್ಯವಾದ ಅನೇಕ ವಿಷಯಗಳ ಸಂಗ್ರಹಣೆಗಾಗಿ ಅವರಿಗೆ ಋಣಿಯಾಗಬೇಕಾಗಿದೆ. ಅವರು ತೆಗೆದಿರುವ ಸಿದ್ಧಾಂತಗಳನ್ನು ಒಪ್ಪದವರಿಗಂತೂ ಅವರ ಈ ಗ್ರಂಥವು ಅಮೂಲ್ಯವಾದ ಭಂಡಾರ."

ನುರಿತ ಲೇಖಕರಾದ ಅಥಣಿಯ ಶ್ರೀ ಮೋಟಗಿ ಮಲ್ಲಿಕಾರ್ಜುನರು ಹೀಗೆ ಹೇಳಿದ್ದಾರೆ : "ಮಾನವೋನ್ನತಿಗಾಗಿ, ಇಡೀ ತಮ್ಮ ಜೀವಮಾನವನ್ನೇ ಧಾರೆಯಾಗಿ ಎರೆದು ಅವಿಶ್ರಾಂತ ಶ್ರಮವಹಿಸುತ್ತಿರುವ ಮೈಸೂರಿನ ಸದ್ಧರ್ಮದೀಪಿಕೆಯ ಪ್ರಕಾಶಕರಾದ ಶ್ರೀ ಚನ್ನಮಲ್ಲಿಕಾರ್ಜುನರ ವಿಷಯ—

"ವಿನಯದಲ್ಲಿ ವಿಲೀನಗೊಂಡು ಪರಿಶೋಭಿಸುವ ವಿದ್ವತ್ಪೂರ್ಣತೆಯೂ, ವಿಭೂಷಣದಲ್ಲಿ ರೂಪುಗೊಂಡ ಸುಕೋಮಲ ಸದ್ಗುಣವೂ, ಸೌಜನ್ಯದಲ್ಲಿ ಸಮಗೊಂಡ ಅವಿರಳ ಸಾರಳ್ಯ—ಈ ತ್ರಿವೇಣೀ ಸಂಗಮದಿಂದ ಪುಟಗೊಂಡು ಹೊರಹೊರಟ ಇವರ ಪರತತ್ವ ವಿಚಾರದ ಕ್ರಾಂತಿಯ ಕಿಡಿಗಳು ಬುದ್ಧಿಯೋಗಕ್ಕೆ ಮೀರಿದ ಒಳ್ಳೇ ಕರ್ಮ ಕೌಶಲದಲ್ಲಿ ರೂಪುಗೊಳ್ಳುತ್ತವೆ."

"ಮತ್ತು ನೂತನ ವಿನೂತನವಾಗಿಯೂ, ಪ್ರಾಚ್ಯಕ್ಕೆ ಅತಿಪ್ರಾಚ್ಯವಾಗಿಯೂ ತೋರಿ, ಸತ್ಯದ ಬೆಳಕಿನಲ್ಲಿ ಕೊನೆಗೊಳ್ಳುವ ಇವರ ಪ್ರತಿಯೊಂದು ವಿಚಾರಗಳು ಒಳ್ಳೆ ಬೆಲೆಯುಳ್ಳವುಗಳಾಗಿವೆ."

"ಅದರಂತೆ ಈ ಮಹನೀಯರ ದಿವ್ಯಜೀವನದ ಪ್ರತಿಯೊಂದು ಆಯುಷ್ಯದ ಕ್ಷಣವೂ ಬಹು ಬೆಲೆಯುಳ್ಳದಾಗಿದೆ. ಇವರ ಸಾಹಸದ ಪ್ರಯತ್ನ ಭಗೀರಥ ಪ್ರಯತ್ನ; ಇವರ ಸಾಹಿತ್ಯದ ಪ್ರಸಾರ ಜ್ಞಾನ, ಸಾಹಿತ್ಯಪ್ರಸಾರ, ಇವರ ಅಮೋಘ ಬರಹದ ಕೃತಿಗಳು ಅಮರ ಕೃತಿಗಳು—ಒಟ್ಟಿನಲ್ಲಿ ಇವರದು ಶರಣ ಜೀವನ, ಅಲ್ಲಿ ಆ ಅನುಭವದ ಮೂಸೆಯಲ್ಲಿ ಬೆಂದುಬಂದ ಕೇವಲ ಅಪರಂಜಿ ಚಿನ್ನದಂತೆ ಇವರ ಬದುಕು" ಎಂದು ಹೇಳಬಹುದು."[1]

**ಶಿರಾಳಕೊಪ್ಪದಲ್ಲಿ ಉಚಿತ ವಿದ್ಯಾರ್ಥಿ ನಿಲಯ ಸ್ಥಾಪನೆ**

ಹಳ್ಳಿಯ ಬಡಹುಡುಗರ ವಿದ್ಯಾಭ್ಯಾಸಕ್ಕಾಗಿ ಸೌಲಭ್ಯವನ್ನು ಕಲ್ಪಿಸಲು ಶ್ರೀಯುತರು ೧೯೪೦ ರಲ್ಲಿ ತಮ್ಮ ಸ್ವಯಾರ್ಜಿತವಾದ ಆಸ್ತಿಯನ್ನೆಲ್ಲಾ ಮಾರಿ ತಮ್ಮ ಹುಟ್ಟೂರಾದ ಶಿರಾಳಕೊಪ್ಪದಲ್ಲಿ "ಸಿದ್ಧೇಶ್ವರ ನಿಲಯ" ಎಂಬ ಪ್ರಸಾದ ನಿಲಯವನ್ನು ಕಟ್ಟಿಸಿ, ಮಕ್ಕಳಿಗೆ ಉಚಿತ ಪ್ರಸಾದ ಮತ್ತು ವಸತಿಗಳನ್ನು ಕಲ್ಪಿಸಿದರು. ಆ ನಿಲಯದ ವ್ಯವಸ್ಥೆಯನ್ನು ಸುಲಲಿತವಾಗಿ ನಡೆಸುವ ಸಲುವಾಗಿ ಒಂದು ಟ್ರಸ್ಟನ್ನು ಏರ್ಪಡಿಸಿದರು. ಅಲ್ಲದೆ, ಶ್ರೀಯುತರು ಆಗಾಗ್ಗೆ ಅದರ ಆದಾಯವೆಚ್ಚಗಳನ್ನು ಪರಿಶೀಲಿಸಿ ಉಚಿತ ಸಲಹೆಗಳನ್ನೀಯುತ್ತಿದ್ದರು. ಇದು ಅವರ ನಿಸ್ಸ್ವಾರ್ಥಜೀವನದ ದ್ಯೋತಕವಾಗಿದೆ.

**ವ್ಯಕ್ತಿತ್ವ**

ಶ್ರೀ ಚನ್ನಮಲ್ಲಿಕಾರ್ಜುನರ ಜೀವನದ ಎಲ್ಲಾ ಘಟನೆಗಳೂ ಅವರ ಆದರ್ಶ ವ್ಯಕ್ತಿತ್ವವನ್ನು ಮೂಡಿಸಿವೆ. ತಾವು ಮಾಡುವ ಎಲ್ಲಾ ಕಾರ್ಯಗಳೂ ಪರಮಾತ್ಮನ ಸೇವೆ ಎಂದು ಭಾವಿಸಿದ್ದವರು ಅವರು.

ಸರಳ ಜೀವಿಗಳು, ಉಡುಪು ನಡೆವಳಿಕೆ ಎಲ್ಲವೂ ಅತಿ ಸರಳ. ಎತ್ತರವಲ್ಲದ ಕೃಶವಾದ ಶರೀರ. ಅಂಗವಿಲತೆಯುಳ್ಳವರಾದರೂ ಮಹತ್ತರ ಧ್ಯೇಯವುಳ್ಳವರು.

---

1 ಸದ್ಧರ್ಮದೀಪಿಕೆ- ಸಂಚಿಕೆ ೬೫ (೧೯೫೧)- ಪುಟ ೩೨

ಹಸನ್ಮುಖಿಗಳು, ವಿನಯ ಸಂಪನ್ನರು, ಮೃದುಭಾಷಿಗಳು, ಉದಾರ ಪ್ರವೃತ್ತಿಯವರು, ಎಲ್ಲವೂ ಶಿವಾಧೀನವೆನ್ನುವವರು, ಶಾಂತ ಸ್ವಭಾವದವರು. ಅತೃಪ್ತಿ ಎಂಬುದನ್ನು ಕಂಡವರಲ್ಲ. ಅಪಾರ ಕಷ್ಟಸಹಿಷ್ಣುತೆಯುಳ್ಳವರು.

ಧಾರ್ಮಿಕ ಪ್ರವೃತ್ತಿ ಅವರ ಜೀವನದಲ್ಲಿ ಹಾಸು ಹೊಕ್ಕಾಗಿತ್ತು. ಧರ್ಮ ಪ್ರಸಾರಕ್ಕಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಮಹಾಮಹಿಮರಾದ ಹಾನಗಲ್ಲು ಶ್ರೀ ನಿ. ಪ್ರ ಸದಾಶಿವಸ್ವಾಮಿಗಳವರಿಂದ ಅನುಗ್ರಹೀತರಾಗಿದ್ದು ಮಹಾ ಗುರು ಭಕ್ತಿಸಂಪನ್ನರು ಸಂತತ ಸೇವೆಯಿಂದ ಗುರುಕೃಪೆಗೆ ಪಾತ್ರರಾಗಿ, ಧರ್ಮದ ನಿಜ ಸ್ವರೂಪವನ್ನು ಅರಿತವರು. ಅರಿತು ಆಚರಿಸಿದವರು. ಲಿಂಗಪೂಜೆ ಗುರುಜಂಗಮ ಸೇವೆಯಲ್ಲಿ ಬಹಳ ನಿಷ್ಠೆಯುಳ್ಳವರು. ಅತಿಥಿಗಳನ್ನು ಪೂಜ್ಯಭಾವದಿಂದ ಕಾಣುತ್ತಿದ್ದರು. ವೀರಶೈವ ಧರ್ಮದ ಮತ್ತು ಹಿಂದೂ ಧರ್ಮದ ಅನೇಕಾನೇಕ ಗ್ರಂಥಗಳನ್ನು ವ್ಯಾಸಂಗ ಮಾಡಿದ್ದರು. ಶರಣರ ತತ್ವಗಳನ್ನು ಜನಪ್ರಿಯಗೊಳಿಸುವ ಪ್ರಯತ್ನದಲ್ಲಿ ಅವಿಶ್ರಾಂತವಾಗಿ ದುಡಿದರು.

ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲ ತತ್ತ್ವವಿಚಾರಗಳ ಪೂರ್ಣ ಅನುಭವವುಳ್ಳವರಾಗಿದ್ದು, ಅವುಗಳನ್ನು ಸಾಮಾನ್ಯರಿಗೂ ಸುಲಭವಾಗಿ ತಿಳಿಯುವಂತಹ ಸರಳ ಭಾಷೆಯಲ್ಲಿ ನಿರೂಪಿಸುತ್ತಿದ್ದರು. ಯಾವ ವಿಷಯವನ್ನಾದರೂ ಆಧಾರಸಹಿತ ಸ್ಫುಟಪಡಿಸುತ್ತಿದ್ದರು.

ಲಿಂಗಪೂಜೆಯಷ್ಟೇ ಪಾದೋದಕ ಪ್ರಸಾದಗಳಲ್ಲಿ ಅವರು ತುಂಬಾ ನಿಷ್ಠೆಯುಳ್ಳವರು. ಶಿವಾನುಭವಗೋಷ್ಠಿಗಳಲ್ಲಿ ಭಾಗವಹಿಸುವುದೆಂದರೆ ಅವರಿಗೆ ಬಹಳ ಆನಂದ. ಬಸವಾದಿ ಪ್ರಮಥರ ಪ್ರಸಾದದಾಣೆಯಲ್ಲಿ ಅಚಲ ನಂಬಿಕೆಯುಳ್ಳವರು. ಗೋಷ್ಠಿಯಲ್ಲಿ ಭಾಗವಹಿಸಿ ತಮ್ಮ ವಿಚಾರಪೂರಿತ ಅನುಭವಗಳಿಂದ ಶ್ರೋತೃಗಳನ್ನು ತಣಿಸುತ್ತಿದ್ದರು.

ಶ್ರೀ ಚನ್ನಮಲ್ಲಿಕಾರ್ಜುನರು ಅತ್ಯುತ್ತಮ ಭಾಷಣಕಾರರು. ಅಷ್ಟೇ ಉತ್ತಮ ಲೇಖಕರೂ ಆಗಿದ್ದರು. ಅವರದು ತಿಳಿಯಾದ ಭಾಷೆ, ಮೃದುವಾದ ಶೈಲಿ. ಪಂಡಿತರನ್ನೂ ಪಾಮರರನ್ನೂ ತಲೆದೂಗಿಸುವಂತೆ ವಿಷಯಗಳನ್ನು ಪ್ರತಿಪಾದಿಸುತ್ತಿದ್ದರು. ನಿಷ್ಪಕ್ಷಪಾತವಾದ ದೃಷ್ಟಿಕೋನವುಳ್ಳವರು.

ಒಟ್ಟಿನಲ್ಲಿ, ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಜೀವನದ ಸಾರ್ಥಕತೆಯನ್ನು ಸಾಧಿಸಿದ್ದವರು. ವಯಸ್ಸಿಗೆ ಮೀರಿದ ದುಡಿಮೆ, ನಿಷ್ಕಲ್ಮಷ ಸರಳ ಹೃದಯ, ಸತ್ಯ ಸಂಶೋಧನಾಪ್ರವೃತ್ತಿ, ಧರ್ಮ ಪ್ರಚಾರ ಮನೋಭಾವ, ಅಚಲ ದೈವಭಕ್ತಿ, ನಿಷ್ಠೆ–ಇವು ಅವರ ಚಿರಂತನವಾದ ಹಿರಿಯ ವ್ಯಕ್ತಿತ್ವವನ್ನು ಮೂಡಿಸಿವೆ. ಶರಣ ಸಂಪ್ರದಾಯದ ಆದರ್ಶವ್ಯಕ್ತಿಯನ್ನಾಗಿಸಿವೆ. ಅವರ ಈ ಸದ್ಗುಣಗಳೇ ಅವರ ಸಾಹಿತ್ಯ ಸೇವೆಯ ಹಿನ್ನೆಲೆಯಾಗಿವೆ.

# ಶ್ರೀ ಚನ್ನಮಲ್ಲಿಕಾರ್ಜುನರು ವ್ಯಕ್ತಿಯಲ್ಲ–ಶಕ್ತಿ

ಎಸ್. ಭೀಮಪ್ಪ, ಶಿರಾಳಕೊಪ್ಪ

ಬಳ್ಳಿಗಾವೆಯ ಪ್ರಾಂತ ಶಿವಶರಣರು ಸಗ್ಗವ ಹಳಿದು ಬಂದು ನೆಲಸಿದ ಸುಂದರ ಪ್ರಾಂತವಾಗಿದೆ. ಅಕ್ಕಮಹಾದೇವಿಯ ಜನ್ಮಸ್ಥಳವಾದ ಉಡುತಡಿ, ಅಲ್ಲಮಪ್ರಭುವಿನ ಬಳ್ಳಿಗಾವಿ, ಅನಿಮಿಷಾರ್ಯರ ಅನಿಮಿಷಾರಣ್ಯ (ಮಾಳಗೊಂಡನಕೊಪ್ಪ, ಮುಕ್ತಾಯಕ್ಕ ಅಜಗಣ್ಣರ ಸಮಾಧಿಯಿರುವ ಮುಕ್ತಿಗೆ ಸತ್ಯಕ್ಕ, ದೊಸೆಪಿಡ್ಡವ್ವೆ, ಮಹಾಕಾಳಯ್ಯ, ಹಾವಿನಹಾಳ ಕಲ್ಲಯ್ಯ, ಜಂಭುಕೇಶ್ವರ, ಮೂಕಮಲ್ಲವ್ವೆಯರ ಹಿರಿಯ ಜಂಬೂರು, ಪ್ರಭು ಮಾಯೆಯರು ಸಂವಾದ ನಡೆಸಿದ ಬಂದಳಿಕೆ, ಇಕ್ಕದ ಮಾರಯ್ಯನ ಶಿವಪಾದ, ಏಕಾಂತರಾಮಯ್ಯನ ಕಾನಹಳ್ಳಿ ಪ್ರಭುವಿನ ತೊಗರ್ಸಿ, ಶಿವಳ್ಳಿ ಸುಕ್ಷೇತ್ರಗಳು ಬಳ್ಳಿಗಾವಿ ಪ್ರಾಂತದ ಶಿರಿಯಾಳಕೊಪ್ಪದ ಸುತ್ತಮುತ್ತ ನಾಲ್ಕಾರು ಮೈಲುಗಳ ಅಂತರದಲ್ಲಿರುವ ಶರಣ ಶರಣೆಯರ ಪವಿತ್ರ ಪಾದಧೂಳಿಯಿಂದ ಪಾವನವಾಗಿರುವ ಪುಣ್ಯಕ್ಷೇತ್ರಗಳಾಗಿ ವಿರಾಜಿಸುತ್ತಿವೆ. ಐತಿಹಾಸಿಕವಾಗಿ ದಕ್ಷಿಣ ಹಿಂದೂಸ್ಥಾನದಲ್ಲಿಯೇ ಪ್ರಪ್ರಥಮ ದೇವಾಲಯವೆಂದು ನೆಗಳ್ತೆವೆತ್ತಿರುವ ಶ್ರೀ ಪ್ರಣವೇಶ್ವರ ದೇವಾಲಯವು ಸುಮಾರು ಮೂರುಸಾವಿರ ವರ್ಷಗಳ ಪ್ರಾಚೀನತೆಯನ್ನು ಹೇಳುತ್ತಿರುವ ಮಹೋನ್ನತ ಅವಶೇಷವಾಗಿದೆ. ಕುಂತಳಶಾತಕರ್ಣಿ ಮತ್ತು ಕದಂಬರ ಮೂಲ ನೆಲೆಯಾಗಿದ್ದ ಸ್ಥಾನ ಕುಂದೂರಿನ (ತಾಳಗುಂದದ) ಅಧಿಪತಿ ಶ್ರೀ ಪ್ರಣವೇಶ್ವರನು ಕರ್ನಾಟಕದ ಅಧಿದೇವತೆಯಾಗಿ ಒಂದಾನೊಂದು ಕಾಲದಲ್ಲಿ ವೈಭವಯುತನಾಗಿ ಮೆರೆದಿದ್ದಾನೆ. ಬಳ್ಳಿಗಾವಿ ಅನಾದಿರಾಜಧಾನಿ, ಪಟ್ಟಣಗಳ ತವರುಮನೆ, ಪಂಚವಿದ್ಯಾಪೀಠಗಳ ನೆಲೆಯಾಗಿ ಸುಸಂಸ್ಕೃತರ ವಾಸಸ್ಥಾನವೆನಿಸಿ, ಕದಂಬ, ಗಂಗ, ಚಾಲುಕ್ಯ, ಹೊಯ್ಸಳ, ಕಾಲಚೂರ್ಯ, ಯಾದವ, ವಿಜಯನಗರ ಮತ್ತು ಮೈಸೂರರಸರ ಬೆಳ್ಗೊಡೆಯ ನೆರಳಿನಲ್ಲಿ ಪ್ರಗತಿ ಹೊಂದಿದ ಶಿಲ್ಪಕಲಾ ವೈಭವದ ಸುಕ್ಷೇತ್ರವಾಗಿ ವಿರಾಜಿಸುತ್ತಿದೆ. ಪುಣ್ಯಕ್ಷೇತ್ರ ಬಂದಳಿಕೆಯಂತೂ ಭವ್ಯವಾದ ಶಿಲ್ಪಕಲಾ ವೈಭವದಿಂದ ಕುಂತಳಕಾಂತೆಯ ವಿಲೋಲಕುಂತಳದಂತೆ ಮೆರೆದು ಇಂದು ಪುರಾತನ ಭವ್ಯತೆಯನ್ನು ತನ್ನ ಅಳಿದುಳಿದ ಅವಶೇಷಗಳಿಂದ ತೋರಿಸುತ್ತಿದೆ.

ಇಂತಹ ಹಿನ್ನೆಲೆಯ ನಾಡಿನಲ್ಲಿ ಹುಟ್ಟಿ ಬೆಳೆದು ಐತಿಹಾಸಿಕ ಶರಣ ಶರಣೆಯರ ಸುಕ್ಷೇತ್ರಗಳಿಗೆ ಪುನರ್‌ಜೀವನವನ್ನಿತ್ತು ವೀರಶೈವ ಧರ್ಮದಲ್ಲಿ ಅತೀವ ಜಾಗೃತಿಯನ್ನುಂಟುಮಾಡಿದ ಮಹಾನುಭಾವರಾದ ಶ್ರೀ ಚನ್ನಮಲ್ಲಪ್ಪನವರು ಈ ಭಾಗದ ಪುಣ್ಯಜ್ಯೋತಿಯಾಗಿ ಬೆಳಗಿ ಆಗಿನ ಕಾಲದ ಆಧ್ಯಾತ್ಮಿಕ ಹೊಂಗಿರಣವಾಗಿ ಕಂಗೊಳಿಸಿದ ಶಿವಾನುಭಾವಿಗಳಾಗಿದ್ದಾರೆ.

## ಜನನ–ಬಾಲ್ಯ–ವಿದ್ಯಾಭ್ಯಾಸ

ಶ್ರೀ ಚನ್ನಮಲ್ಲಿಕಾರ್ಜುನರ ತಂದೆಯವರಾದ ನೂರೊಂದಪ್ಪನವರು ಹಾವೇರಿಯವರು. ಕಾರಣಾಂತರಗಳಿಂದ ಹಾವೇರಿಯನ್ನು ತ್ಯಜಿಸಿ, ಶಿರಾಳಕೊಪ್ಪಕ್ಕೆ ಬಂದು ನೆಲಸಿದ್ದರು. ಆಗಿನ ಕಾಲದಲ್ಲಿ ನೂರೊಂದಪ್ಪನವರು ಕೂಲಿಮಠದಲ್ಲಿ ಅಯ್ಯನವರಾಗಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವಷ್ಟು ಪರಿಣತರಾಗಿದ್ದರು. ಶಿರಾಳಕೊಪ್ಪದಲ್ಲಿ ತಮ್ಮದೇ ಆದ ಶಾಲೆಯನ್ನು ನಡೆಯಿಸುತ್ತಿದ್ದರು. ಇವರು ಅತ್ಯಂತ ಗುರುದೈವಭಕ್ತರಾಗಿದ್ದರು. ತ್ರಿಕಾಲಲಿಂಗ ಪೂಜೆಯಿಲ್ಲದೆ ಪ್ರಸಾದವನ್ನೇ ಸ್ವೀಕರಿಸುತ್ತಿರಲಿಲ್ಲ. ಕಠೋರ ವ್ರತೋಪಾಸಕರಾಗಿದ್ದು ಶಿವಾಚಾರ ಸಂಪನ್ನರಾಗಿದ್ದರು. ಇವರಿಗೆ ಕ್ರಿ. ಶ. ೧೮೮೦ರಲ್ಲಿ ತಮ್ಮ ಭಕ್ತಿಗೆ ಒಲಿದುಬಂದ ಶಿವಪ್ರಸಾದವೋ ಎಂಬಂತೆ ಒಂದು ಪುತ್ರರತ್ನ ಜನನವಾಯಿತು. ಶ್ರೀ ಚನ್ನಮಲ್ಲಿಕಾರ್ಜುನನ ವರಪ್ರಸಾದದಿಂದ ಸಂಜನಿಸಿದ ಈ ಮಗುವಿಗೆ ಚನ್ನಮಲ್ಲಿಕಾರ್ಜುನ (ಚನ್ನಮಲ್ಲಪ್ಪ) ಎಂದು ನಾಮಕರಣ ಮಾಡಿದರು. ಉದಯರವಿಯಂತೆ ಮುದ್ದುಮುದ್ದಾಗಿ ಬೆಳೆಯುತ್ತಿದ್ದ ಬಾಲಕನ ಬಾಲಲೀಲೆಗಳನ್ನು ನೋಡಿ, ತಂದೆ ತಾಯಿಯರಿಗೆ ಅತ್ಯಂತ ಆನಂದವಾಗುತ್ತಿತ್ತು. ಮನೆಗೆ ಬಂದ ಗುರುಲಿಂಗ ಜಂಗಮರು ಮಗು ಮುಂದೆ ಬಂದು ಉದ್ದಾಮ ಪಂಡಿತನಾಗುತ್ತಾನೆಂದು ಭವಿಷ್ಯ ಹೇಳಿ ಮಗುವನ್ನು ಆಶೀರ್ವದಿಸಿ ಹೋಗುತ್ತಿದ್ದರು. ಮೂರು ವರ್ಷದ ಮಗುವಾದಾಗ ನೂರೊಂದಪ್ಪನವರು ವಿವಿಧ ರೀತಿಯಲ್ಲಿ ಮಗುವಿನ ಮನಸ್ಸಿನ ಮೇಲೆ ವೀರಶೈವ ಶಿಷ್ಟಾಚಾರಗಳ ಮುದ್ರೆಯನ್ನೊತ್ತಲು ಪ್ರಾರಂಭಿಸಿದ್ದರು. ಐದನೆಯ ವರ್ಷದಲ್ಲಿ ಆಗಿನ ಪದ್ಧತಿಯಂತೆ ಶ್ರೀ ಗಣೇಶ ಮತ್ತು ಸರಸ್ವತಿಯರ ಪೂಜೆ ನಡೆಸಿ, ಅಕ್ಷರಾಭ್ಯಾಸಕ್ಕೆ ಪ್ರಾರಂಭಿಸಿದರು. "ಬೆಳೆಯು ಸಿರಿಯನ್ನು ಮೊಳಕೆಯಲ್ಲಿ ನೋಡು" ಎಂಬಂತೆ ಚಿಕ್ಕ ಮಗು ಚನ್ನಮಲ್ಲಿಕಾರ್ಜುನ ಸೂಕ್ಷ್ಮಗ್ರಾಹಿಯಾಗಿ ತಂದೆಯವರು ಹೇಳಿಕೊಟ್ಟ ಸಕಲ ಪಾಠಗಳನ್ನೂ ಅತಿ ಶೀಘ್ರವಾಗಿ ತಂದೆಯವರಿಗೆ ಒಪ್ಪಿಸುತ್ತಿದ್ದನು. ನೂರೊಂದಪ್ಪನವರು ಮಗನನ್ನು ಅಪ್ಪರ್ ಸೆಕೆಂಡರಿ ಪರೀಕ್ಷೆಗೆ ಕೂಡಿಸಿದರು. ಚನ್ನಮಲ್ಲಿಕಾರ್ಜುನ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ಮೊದಲನೆಯ ಶ್ರೇಣಿಯಲ್ಲಿ ತೇರ್ಗಡೆಯಾದನು. ಅತಿ ಚಿಕ್ಕ ವಯಸ್ಸಿನಲ್ಲಿ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಚನ್ನಮಲ್ಲಪ್ಪನವರಿಗೆ ಶಿಕ್ಷಕ ವೃತ್ತಿ ಸುಲಭವಾಗಿ ದೊರೆಯಿತು. ಆಂಗ್ಲೋವರ್ನಾಕ್ಯುಲರ್ ಶಾಲೆಯಲ್ಲಿ ಕನ್ನಡ ಬೋಧಿಸುವ ಗುರುವಾಗಿ ವೃತ್ತಿಯನ್ನು ಪ್ರಾರಂಭಿಸಿದರು. ಚಿಕ್ಕ ವಯಸ್ಸಿನಲ್ಲಿಯೇ ಸಂಸ್ಕೃತಾಭ್ಯಾಸವನ್ನೂ ಮಾಡಿ ಒಳ್ಳೆಯ ಪಾಂಡಿತ್ಯವನ್ನೂ ಸಂಪಾದನೆ ಮಾಡಿದರು. ಇಂಗ್ಲೀಷ್ ಭಾಷಾಜ್ಞಾನವನ್ನು ಮಾಡಿಕೊಳ್ಳಬೇಕೆಂಬ ಆಕಾಂಕ್ಷೆ ದಿನೇ ದಿನೇ ಪ್ರಬಲವಾಗತೊಡಗಿತು. ಆಗ ತಾವಿದ್ದ ಶಾಲೆಯಲ್ಲಿಯೇ ಇಂಗ್ಲೀಷ್ ಬೋಧಕರಾಗಿದ್ದ ಶ್ರೀ ಕೃಷ್ಣಪ್ಪನಾಯಿಕ್ ಮತ್ತು ರಾಘವೇಂದ್ರರಾಯರ ಹತ್ತಿರ ಇಂಗ್ಲೀಷನ್ನು ಅಭ್ಯಾಸ ಮಾಡಿ, ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ದಿನೇ ದಿನೇ ಇಂಗ್ಲೀಷ್ ಭಾಷಾಜ್ಞಾನವನ್ನು ಅಭಿವೃದ್ಧಿಪಡಿಸಿಕೊಂಡರು.

## ಆದರ್ಶ ಉಪಾಧ್ಯಾಯ

ಕ್ರಿ. ಶ. ೧೮೯೫ ರಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಶಿಕ್ಷಕರಾಗಿ ಶಿಕ್ಷಣ ಇಲಾಖೆಗೆ ಸೇರಿದರು. ಮಕ್ಕಳ ಹಿತದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡು ಅವರ ಶೈಕ್ಷಣಿಕ ಪ್ರಗತಿಗೆ ಹೆಚ್ಚು ಶ್ರಮವಹಿಸಿ ದುಡಿದ ಆದರ್ಶ ಉಪಾಧ್ಯಾಯರಲ್ಲಿ ಇವರು ಅಗ್ರಗಣ್ಯರೆನಿಸಿ ಆ ಕಾಲವಲ್ಲಿ ಕೀರ್ತಿತರಾದರು. ಶಿರಾಳಕೊಪ್ಪ ಮತ್ತು ಸುತ್ತಮುತ್ತಣ ಗ್ರಾಮಗಳಲ್ಲಿ ಈಗಿರುವ ಅತಿ ವೃದ್ಧ ಜನಾಂಗವೆಲ್ಲ ಚನ್ನಮಲ್ಲಪ್ಪನವರ ಶಿಷ್ಯರೇ ಆಗಿದ್ದಾರೆ. ಈಗಲೂ ಅವರ ಶಿಷ್ಯವರ್ಗದವರ ಉದ್ಗಾರ–"ಚನ್ನಮಲ್ಲಪ್ಪ ಮೇಷ್ಟ್ರು ಒಮ್ಮೆ ಶಾಲೆಯಲ್ಲಿ ಪಾಠ ಹೇಳಿದರೆ ಸಾಕು ಮನೆಯಲ್ಲಿ ನಾವು ಕಷ್ಟಪಟ್ಟು ಓದುವ ಅವಶ್ಯಕತೆಯೇ ಇರುತ್ತಿರಲಿಲ್ಲ" ಎಂಬುದಾಗಿ ಇರುತ್ತದೆ. ಅವರು ಪಾಠ ಹೇಳುವುದನ್ನು ಸ್ಮರಿಸಿಕೊಂಡು, ಈಗಲೂ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಿಸುತ್ತಿದ್ದಾರೆ, ಅವರ ಶಿಷ್ಯವರ್ಗದವರು. ಉಪಾಧ್ಯಾಯರಾದವರಿಗೆ ಇದಕ್ಕಿಂತ ಹೆಚ್ಚಿನ ಗೌರವ ಇನ್ನಾವುದಿದೆ? ಮಕ್ಕಳ ಹೃದಯದಲ್ಲಿ ಚಿರಸ್ಥಾಯಿಯಾಗಿ ನಿಂತಿರುವ ಶ್ರೀ ಚನ್ನಮಲ್ಲಪ್ಪನವರು ಈಗ ಕೊಡುತ್ತಿರುವ ರಾಷ್ಟ್ರಪ್ರಶಸ್ತಿಯನ್ನು ಪಡೆದಿದ್ದರೂ, ಜನಮನದ ಹೃದಯದಲ್ಲಿ ಅಪೂರ್ವವಾದ ಶಾಶ್ವತ ಪ್ರಶಸ್ತಿಗಳಿಸಿದ ಹುಟ್ಟು ಬೋಧಕರಾಗಿದ್ದರು. ಗಣಿತ, ಭೂಗೋಳ, ಚರಿತ್ರೆ ಪಾಠಗಳನ್ನು ಸರಳವಾದ ಆಕರ್ಷಕ ಶೈಲಿಯಲ್ಲಿ ಬೋಧಿಸುತ್ತಿದ್ದ ಚನ್ನಮಲ್ಲಪ್ಪನವರು ಕನ್ನಡ ಪಾಠಮಾಡುವುದರಲ್ಲಂತೂ, ಅತ್ಯಂತ ಖ್ಯಾತಿವಂತ ಉಪಾಧ್ಯಾಯರೆನಿಸಿದ್ದರು. ಕೆಲವು ಕಾಲ ಶಾಲಾ ಮುಖ್ಯೋಪಾಧ್ಯಾಯರಾಗಿಯೂ ಕಾರ್ಯಮಾಡಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ನೂರಕ್ಕೆ ೮೫–೯೦ರಷ್ಟು ಫಲಿತಾಂಶವನ್ನು ಪ್ರತಿವರ್ಷ ಉಂಟು ಮಾಡುವುದಕ್ಕೆ ಶ್ರಮಿಸುತ್ತಿದ್ದರಂತೆ. ಈ ಬಗ್ಗೆ ಅವರ ಶಿಷ್ಯರಲ್ಲೊಬ್ಬರು ಈ ರೀತಿ ಹೇಳುತ್ತಿದ್ದರು—"ನಮ್ಮ ಗುರುಗಳಾದ ಚನ್ನಮಲ್ಲಪ್ಪನವರು ನೋಡಲು ಕುಳ್ಳರು. ಒಂದು ಕೈ ಸ್ವಲ್ಪ ಅದುವು, ಆದರೂ ತರಗತಿಗೆ ಕನ್ನಡ ಪಾಠಕ್ಕೆ ಬಂದರೆಂದರೆ, ಎಂತಹ ದಡ್ಡರೂ ಮನೆಯಲ್ಲಿ ಓದುತ್ತಿರಲಿಲ್ಲ. ಇಂಗ್ಲೀಷ್, ಆರೋಗ್ಯ ಎರಡು ವಿಷಯಗಳನ್ನುಳಿದು ಉಳಿದ ಎಲ್ಲಾ ವಿಷಯಗಳನ್ನೂ ಬೋಧಿಸುತ್ತಿದ್ದ ಅವರ ಬೋಧನ ವಿಧಾನ, ಅನ್ಯಾದೃಶ್ಯವಾಗಿತ್ತು. ಲೋಯರ್ ಸೆಕೆಂಡರಿ ಪರೀಕ್ಷೆ ಹತ್ತಿರಬಂದಿತೆಂದರೆ ಅವರಿಗೇ ಪರೀಕ್ಷೆ ಬಂದಂತಾಗುತ್ತಿತ್ತು. ಹಗಲು, ರಾತ್ರಿ ವಿದ್ಯಾರ್ಥಿಗಳನ್ನೆಲ್ಲ ಕೂಡಿಸಿಕೊಂಡು ಪಾಠ ಓದಿಸುವುದೇ ಅವರ ಕಾರ್ಯವಾಗಿರುತ್ತಿತ್ತು. ಹೀಗಾಗಿ ಅವರು ಯಾವಾಗಲೂ ನೂರಕ್ಕೆ ೮೫-೯೦ ಕ್ಕಿಂತ ಕಡಿಮೆ ಫಲಿತಾಂಶವನ್ನು ಶಾಲೆಗೆ ಎಂದೂ ತಂದುಕೊಡಲಿಲ್ಲ. ಅವರ ಈ ರೀತಿಯ ಪರಿಶ್ರಮವನ್ನು ಎಲ್ಲರೂ ಬಾಯ್ತುಂಬ ಹೊಗಳಿ ಗೌರವ ಸಮರ್ಪಿಸುತ್ತಿದ್ದರು. ಊರ ಜನವೆಲ್ಲ ಅವರನ್ನು ಕಂಡು ಬಹಳ ಹೆದರುತ್ತಿದ್ದರು. ದಾರಿಯಲ್ಲಿ ಅವರನ್ನು ಕಂಡು ದೂರ ಸರಿದು ಓರೆಯಾಗಿ ಹೋಗುತ್ತಿದ್ದರು."

ವಿದ್ಯಾರ್ಥಿಗಳಿಗೆ ಚನ್ನಮಲ್ಲಪ್ಪ ಮಾಸ್ತರರ ಪಾಠವೆಂದರೆ ಬಹಳ ಅಚ್ಚುಮೆಚ್ಚು; ಅವರು ಬಹಳ ಶಿಸ್ತಿನವರು. ಮಕ್ಕಳ ಶೀಲದ ಕಡೆಗೆ ಹೆಚ್ಚು ಗಮನ ನೀಡುವ

ನಿಷ್ಠಾವಾದಿ; ನಿಷ್ಠುರವಾದಿ; ವಜ್ರಹೃದಯರೂ ಕೂಡ ಆಗುತ್ತಿದ್ದರು. ತಮ್ಮ ನೈತಿಕ ನಡವಳಿಕೆಯಿಂದ ಮಕ್ಕಳಲ್ಲಿ ಆದರ್ಶವನ್ನು ಪ್ರತಿಬಿಂಬಿಸುವ ಶ್ರೇಷ್ಠ ಉಪಾಧ್ಯಾಯರಾಗಿದ್ದರು. ಅವರು ಸ್ವಯಂ ವಿದ್ವಾಂಸರಾಗಿ, ಘನ ಪಂಡಿತರೆನ್ನಿಸಿಕೊಂಡಿದ್ದರು. ಅವಿಶ್ರಾಂತವಾಗಿ ತಮ್ಮ ವೃತ್ತಿಯಲ್ಲಿ ದುಡಿಯುತ್ತಿದ್ದ ಅವರು ಮಕ್ಕಳ ಮನೋಧರ್ಮಕ್ಕನುಗುಣವಾಗಿ ಅವರಿಗೆ ಮಾರ್ಗದರ್ಶನ ಮಾಡುತ್ತಿದ್ದುದರಿಂದಲೇ ಅವರ ಬೋಧೆ ಪರಿಣಾಮಕಾರಿಯಾಗಿ ಮಕ್ಕಳಲ್ಲಿ ಶಿಸ್ತು, ಶೀಲ, ಸತತಾಭ್ಯಾಸಪ್ರಯತ್ನಗಳು ಕುದುರಿ ಬರುತ್ತಿದ್ದವು. ಹೀಗೆ ದೀರ್ಘಕಾಲ ಅಪೃತ್ತಿಯನ್ನು ಮಾಡಿ ಕ್ರಿ. ಶ. ೧೯೩೦ ರ ಸುಮಾರಿಗೆ ನಿವೃತ್ತರಾದರು. ಶಿರಾಳಕೊಪ್ಪದ ಶಾಲೆಯಲ್ಲಿಯೇ ಪ್ರಥಮತಃ ಕೆಲಸಕ್ಕೆ ಸೇರಿ, ಅಲ್ಲಿಯೇ ದೀರ್ಘಕಾಲ .ಕೆಲಸಮಾಡಿ ಅಲ್ಲಿಯೇ ನಿವೃತ್ತರಾದುದು ಇವರ ಜನಪ್ರಿಯ ಕಾರ್ಯನಿರ್ವಹಣೆಯ ದ್ಯೋತಕವಾಗಿದೆ.

## ಸಾಹಿತ್ಯ ಹಾಗು ಧಾರ್ಮಿಕ ಕಾರ್ಯಗಳು

ಚನ್ನಮಲ್ಲಪ್ಪನವರು ಹುಟ್ಟು ಆಧ್ಯಾತ್ಮಿಕ ಒಲವಿನವರು, ಸಾಹಿತ್ಯ ಪ್ರೇಮಿಗಳು. ಮುಖ್ಯವಾಗಿ ವೀರಶೈವ ಸಾಹಿತ್ಯ ಪ್ರಗತಿಗಾಗಿ ಬಹಳ ಶ್ರಮಿಸಿದ್ದಾರೆ. ೧೯೦೮ ರಲ್ಲಿ ಬಾದಾಮಿಯ ಬಳಿಯಲ್ಲಿ ಹಾನಗಲ್ಲು ಕುಮಾರಸ್ವಾಮಿಗಳವರಿಂದ ಸ್ಥಾಪಿತವಾದ ಶಿವಯೋಗಮಂದಿರದ ಸ್ಥಾಪನೆಯ ಕಾರ್ಯದಲ್ಲಿ ಅತ್ಯಂತ ಶ್ರದ್ಧೆಯಿಂದ ದುಡಿದಿದ್ದಾರೆ. ಕುಮಾರಸ್ವಾಮಿಗಳವರ ಪರಮ ಭಕ್ತರಾಗಿದ್ದ ಇವರು ಅವರ ಸಲಹೆಯಂತೆ ವೀರಶೈವ ಮತಬೋಧಕದ ಬಗೆಗೆ ಹೆಚ್ಚಿನ ಸಂಶೋಧನೆ ನಡೆಸಿ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತಂದ ಕೀರ್ತಿ ಇವರಿಗೆ ಸಲ್ಲಬೇಕು. ೧೦೮ ಪೂಜೆಯನ್ನು ನಡೆಸುವ ಕಾರ್ಯದಲ್ಲಿ ಮುಂದಾಳುಗಳಾಗಿ ದುಡಿದು ಜನತೆಯಲ್ಲಿ ಗುರುವಿನ ಮಹತಿಯನ್ನು ತೋರಿಸಿಕೊಟ್ಟಿದ್ದಾರೆ. ಶಿರಾಳಕೊಪ್ಪದ ಶ್ರೀ ರುದ್ರಮುನಿಸ್ವಾಮಿಗಳವರ ನೇತೃತ್ವದಲ್ಲಿ ಶರಣತತ್ತ್ವದ ಮಹತ್ವದ ಪ್ರಸಾರಕ್ಕಾಗಿ ಅನೇಕ ಮಹತ್ವದ ಸಭೆಗಳು ವಿರಕ್ತಮಠದಲ್ಲಿ ಇವರ ಪರಿಶ್ರಮದಿಂದಲೇ ಜರಗುತ್ತಿದ್ದವು. ೧೯೧೫ ರಲ್ಲಿ ಶ್ರಾವಣ ಮಾಸದ ಕಾರ್ಯಕ್ರಮಗಳು ವಿರಕ್ತಮಠದಲ್ಲಿ ಸಕ್ರಮವಾಗಿ ನಡೆದು ಮುಂದೆ ಪ್ರತಿವರ್ಷವೂ ತಪ್ಪದಂತೆ ಆ ಕಾರ್ಯಕ್ರಮಗಳನ್ನು ಯಥಾಸಾಂಗವಾಗಿ ತಾವು ಶಿರಾಳಕೊಪ್ಪವನ್ನು ಬಿಡುವವರೆಗೂ ನಡೆಯಿಸಿಕೊಂಡು ಬಂದರು. ಕೆಲವುಸಲ ತಾವೇ ಪುರಾಣ, ಪ್ರವಚನ ಮತ್ತು ವ್ಯಾಖ್ಯಾನಗಳನ್ನು ಮಾಡುತ್ತಿದ್ದರು. ಅನೇಕ ಪ್ರೌಢ ವಿಷಯಗಳ ಮೇಲೆ ಅವರು ಕೊಡುತ್ತಿದ್ದ ಆಗಿನ ಉಪನ್ಯಾಸಗಳ ವೈಖರಿಯನ್ನು ನೋಡಿ, ಕೇಳಿ ಸಂತೋಷಪಡುತ್ತಿದ್ದ ಜನ ಈಗಲೂ ಶಿರಾಳಕೊಪ್ಪ ಮತ್ತು ಸುತ್ತಮುತ್ತಣ ಗ್ರಾಮಗಳಲ್ಲಿದ್ದಾರೆ. ೧೯೦೦ ರಲ್ಲಿ ಹದಿಮೂರು ಮಂಟಪಗಳ ಪೂಜೆಯೆಂಬ ಒಂದು ಪೂಜಾಕಾರ್ಯವನ್ನು ಇವರೇ ಮುಂದಾಳಾಗಿ ನಿಂತು ಮಾಡಿಸಿದ ಸಂದರ್ಭದಲ್ಲಿ ಇವರು ಜನಮನದಲ್ಲಿ ಉಂಟುಮಾಡಿದ ಧಾರ್ಮಿಕ ಜಾಗೃತಿ ಬಹಳ ಮಹತ್ವದ್ದಾಗಿತ್ತೆಂದು ಇಂದಿಗೂ ನೆನೆಸಿಕೊಳ್ಳುವ ವೃದ್ಧರು ಊರಲ್ಲಿದ್ದಾರೆ.

೧೯೨೫ ನೆಯ ಇಸ್ವಿಯಲ್ಲಿ ಪರಳಿಯ ವ್ಯಾಜ್ಯದಲ್ಲಿ ಭಾಗವಹಿಸಿದ್ದ ಹಾನಗಲ್ಲು ಕುಮಾರ ಸ್ವಾಮಿಗಳವರು ಶ್ರೀ ಚನ್ನಮಲ್ಲಿಕಾರ್ಜುನರ ಸಹಾಯ ಸಹಕಾರಗಳನ್ನು ವಿಶೇಷವಾಗಿ ಪಡೆದರು. ಆ ವ್ಯಾಜ್ಯದಲ್ಲಿ ಪ್ರತಿವಾದಿಗಳನ್ನು ಇವರು ವಾದದಲ್ಲಿ ಸೋಲಿಸಿದುದು ಇವರ ಆಳವಾದ ದಾರ್ಶನಿಕ ಜ್ಞಾನಕ್ಕೆ ಹಿಡಿದ ಕನ್ನಡಿಯಂತೆ.

ಇವರು ಶಿರಾಳಕೊಪ್ಪದಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದಾಗ ಅನೇಕ ಪ್ರಾಚೀನ ತಾಡವಾಲೆ ಗ್ರಂಥಗಳು, ಹಸ್ತಪ್ರತಿಗಳನ್ನು ಸಂಗ್ರಹಿಸಲು ಬಹಳವಾಗಿ ಶ್ರಮಿಸಿದರು. ಬಿಡುವಾದಾಗಲ್ಲೆಲ್ಲ ಹಳ್ಳಿ-ಪಳ್ಳಿಗಳನ್ನು ಮಠ-ಮಾನ್ಯಗಳನ್ನು ಸುತ್ತಿ ಅಲ್ಲಿ ಹುಳುಗಳಿಗೆ ಆಹಾರವಾಗಿ ಬಿದ್ದಿದ್ದ ಗ್ರಂಥಗಳನ್ನೆಲ್ಲ ಸಂಗ್ರಹಿಸಿ ತಂದು ತಮ್ಮ ಮನೆಯಲ್ಲಿ ತುಂಬಿಟ್ಟಿದ್ದರು. ರಾತ್ರಿಯೆಲ್ಲಾ ಅವುಗಳ ಅಧ್ಯಯನ ಮಾಡುವುದು ಶುದ್ಧ ಪ್ರತಿಗಳನ್ನು ತಯಾರಿಸುವುದೇ ಮೊದಲಾದ ಚಟುವಟಿಕೆಯಲ್ಲಿರುತ್ತಿದ್ದರು. ಆಗಿನ ಇವರ ಈ ಪರಿಶ್ರಮದ ಫಲವೇ ಮುಂದೆ ಇವರು 'ಸದ್ಧರ್ಮದೀಪಿಕೆ' ಎಂಬ ಹೆಸರಿನ ಹಾನಗಲ್ಲು ಕುಮಾರಸ್ವಾಮಿಗಳವರ ಸ್ಮಾರಕ ಮಾಸಪತ್ರವನ್ನು ಹಾವೇರಿಯಿಂದ ಹೊರಡಿಸುತ್ತಿದ್ದಾಗಿನ ಯಶಸ್ಸಿನ ಗುಟ್ಟಾಗಿದೆ. ಇವರು ಸಂಗ್ರಹಿಸಿದ ಪ್ರಾಚೀನ ಗ್ರಂಥಗಳ ಸಂಖ್ಯೆ ಅಪಾರವಾಗಿತ್ತು. ಸುಮಾರು ೩೦ ವರ್ಷಗಳ ಕಾಲದ ಪತ್ರಿಕಾ ಜೀವನ ಅಖಂಡವಾಗಿ ಹಾವೇರಿ ಮೈಸೂರುಗಳ ಮೂಲಕ ನಡೆದು ಅನೇಕ ಮಹತ್ವದ ಗ್ರಂಥಗಳ ಮತ್ತು ಲೇಖನಗಳ ಪ್ರಕಟನೆ ಇವರಿಂದಾದುದು ವೀರಶೈವ ಸಮಾಜದ ಭಾಗ್ಯ ವಿಶೇಷವೆನ್ನಬೇಕು. ಇವರ ಪತ್ರಿಕೆಯು ಮುಖ್ಯವಾಗಿ ಧರ್ಮ, ಸಾಹಿತ್ಯ ಸಂಶೋಧನೆಗೆ ಸಂಬಂಧಿಸಿದ ವಿಷಯಗಳಿಗೆ ಮೀಸಲಾಗಿತ್ತು. ಈ ಉದ್ದೇಶವಿಟ್ಟುಕೊಂಡು ಒಂದು ಪತ್ರಿಕೆ ಕನ್ನಡ ನಾಡಿನಲ್ಲಿ ಮೂವತ್ತು ವರ್ಷ ಬದುಕುವುದೂ ಒಂದು ಭಾಗ್ಯವಿಶೇಷವೇ ಅಲ್ಲವೆ ? ಪತ್ರಿಕಾಜೀವನದಲ್ಲಿ ಚನ್ನಮಲ್ಲಪ್ಪನವರು ಅನೇಕ ಕಹಿಗಳನ್ನುಂಡರೂ ತಮ್ಮ ಸಂಕಲ್ಪದಿಂದ ವಿಮುಖರು ಮಾತ್ರ ಆಗಲಿಲ್ಲ. ನಿರಾಶೆ, ಅವಮಾನ ಪ್ರಸಂಗಗಳು ಇವರನ್ನು ಕಾಡದಿರಲಿಲ್ಲ. ಆದರೆ ಅಂಥ ಸಂದರ್ಭದಲ್ಲಿ ಅವನ್ನೆದುರಿಸುವ ಇವರ ತಾಳ್ಮೆ ಅದ್ಭುತವಾಗಿತ್ತು. ಅವರ ಪತ್ರಿಕೆ ಅವರ ಏಕಾಂಗ ಸಾಹಸದ ಫಲವೇ ಆಗಿತ್ತು. 'ಸುಖದುಃಖೇ ಸಮೇಕೃತ್ವಾಲಾಭಾಲಾಭೌಜಯಾಜಯೌ...' ಎಂಬ ಗೀತೋಕ್ತಿ ಇವರಿಗೆ ತುಂಬಾ ಅನ್ವಯಿಸುತ್ತಿತ್ತು.

"ದುಃಖೇಷ್ವನುದ್ವಿಗ್ನಮನಾಃ ಸುಖೇಷುವಿಗತಸ್ಪೃಹಃ
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥"

–ಎಂಬ ಈ ಗೀತೆಯ ನುಡಿಯಂತೆ ಇವರದು ಮುನಿ ಸದೃಶ ವ್ಯಕ್ತಿತ್ವವಾಗಿತ್ತು. ಅಂತೆಯೇ ಇವರ ಸಂಕಲ್ಪಕ್ಕೆ ಎಂದೂ ಚ್ಯುತಿಯೆಂಬುದೇ ಇರುತ್ತಿರಲಿಲ್ಲ. ಮಹಾತಪಸ್ವಿ ಹಾನಗಲ್ಲು ಕುಮಾರಸ್ವಾಮಿಗಳವರ ದಿವ್ಯಾನುಗ್ರಹಕ್ಕೆ ಪಾತ್ರರಾಗಿ ಅವರ ಪರಿಶುದ್ಧಾಂತಃಕರಣದ ತೇಜಸ್ಸಿನಿಂದ ತಮ್ಮ ಅಂತಃಕರಣವನ್ನು ಬೆಳಕಾಗಿಸಿಕೊಂಡ ಇವರಿಗೆ ಗುರ್ವಾನುಗ್ರಹ ವಜ್ರಕವಚವಾಗಿತ್ತೆಂಬುದನ್ನು ನಂಬಲೇಬೇಕಾಗುತ್ತದೆ. ಶಿವಾಚಾರ

ಸಂಪನ್ನತೆಯಲ್ಲಿ ಅಗ್ರಗಣ್ಯರಾಗಿದ್ದ ಇವರು ತಮ್ಮ ಷಾಮಕ್ಷೇಮ, ಹಾನಿವೃದ್ಧಿ, ಮಾನಾಪಮಾನಗಳನ್ನೆಲ್ಲ ಶಿವನ ತಲೆಗೇ ಕಟ್ಟಿ ಸದಾ ಕಾಯಕನಿರತರಾದ್ದರಿಂದ ಇವರಿಗೆ ಶಿವನ ರಕ್ಷಣೆಯೂ ಇತ್ತು. ಎಂತಹ ಕಷ್ಟಕಾಲದಲ್ಲೂ ಅನಾರೋಗ್ಯದಲ್ಲೂ ಇವರ ಲಿಂಗ ಪೂಜಾನಿಷ್ಠೆ, ಜಂಗಮದಾಸೋಹಾದಿಗಳಿಗೆ ಚ್ಯುತಿ ತಂದುಕೊಳ್ಳಲಿಲ್ಲವಾಗಿ 'ಧರ್ಮೋ ರಕ್ಷತಿ ರಕ್ಷಿತಃ' ಎಂಬುಕ್ತಿ ಇವರ ಜೀವನಕ್ಕೆ ಅನ್ವರ್ಥವಾಗಿತ್ತೆಂಬುದನ್ನು ನಾನು ನೋಡಿ ಅನುಭವಿಸಿದ್ದೇನೆ.

ಚನ್ನಮಲ್ಲಿಕಾರ್ಜುನರು ವ್ಯವಹಾರ ಕುಶಲರು, ಕರ್ತವ್ಯನಿಷ್ಠರು ಅಂತೆಯೇ ಅಲ್ಪ ಸ್ವಲ್ಪ ಧನ ಸಂಗ್ರಹಣೆಯನ್ನೂ ಮಾಡಿದ್ದರು. ಜೊತೆಗೆ ಮನೆಗಳು, ಗದ್ದೆ, ಹೊಲ ಮೊದಲಾದ ಪಿತ್ರಾರ್ಜಿತ ಸೊತ್ತೂ ಇತ್ತು. ಈ ಆಸ್ತಿಯನ್ನೆಲ್ಲ ಅವರು ಈಶ್ವರ ಪ್ರಸಾದವೆಂದೇ ಹೇಳುತ್ತಿದ್ದುದುಂಟು. ತಾವು ಏನನ್ನೂ ಇಟ್ಟುಕೊಳ್ಳದೆ ಸಮಸ್ತ ಆಸ್ತಿ ಯನ್ನು ೧೯೪೧ ರಲ್ಲಿ 'ಸಿದ್ಧೇಶ್ವರ ನಿಲಯ' ಎಂಬ ಹೆಸರಿನ ವಿದ್ಯಾರ್ಥಿ ಮಂದಿರಕ್ಕೆ ದಾನವಾಗಿ ಕೊಟ್ಟು ಅದರ ಕಾರ್ಯಕಲಾಪಗಳೆಲ್ಲ ಯಥಾಸಾಂಗವಾಗಿ ನಡೆದುಕೊಂಡು ಬರುವಂತೆ ಒಂದು ಧರ್ಮದರ್ಶಿಗಳ ಸಮಿತಿ(ಟ್ರಸ್ಟ್)ಯನ್ನು ಮಾಡಿ, ಅವರು ಲಿಂಗೈಕ್ಯ ರಾಗುವವರೆಗೆ ಅಂದರೆ ೧೯೬೨ರ ವರೆಗೆ ತಾವೇ ಅಧ್ಯಕ್ಷರಾಗಿದ್ದು ಅನೇಕ ವಿದ್ಯಾರ್ಥಿ ಗಳಿಗೆ ಉಚಿತ ಅಶನವಸತಿಯ ಸೌಕರ್ಯವೊದಗಿಸಿ ಮಹೋಪಕಾರ ಮಾಡಿದರು. ಇವರು ಕೊನೆಯುಸಿರನ್ನು ಅದೇ ಸಿದ್ಧೇಶ್ವರ ನಿಲಯದಲ್ಲೇ ಎಳೆದು ಆ ತಾವು ದಾನವಾಗಿ ಕೊಟ್ಟ ಮನೆಯನ್ನು ಪವಿತ್ರಗೊಳಿಸಿದರು. ಸುಮಾರು ಎಂಬತ್ತೆರಡು ವರ್ಷಗಳು ತುಂಬು ಜೀವನ ನಡೆಸಿದ ಚನ್ನಮಲ್ಲಿಕಾರ್ಜುನರು ಪೂಜ್ಯ ಗುರುಗಳಾಗಿ, ಪ್ರಕಾಶಕ ರಾಗಿ, ಪತ್ರಿಕೋದ್ಯಮಿಗಳಾಗಿ, ಲೇಖಕರಾಗಿ, ವಾಗ್ಮಿಗಳಾಗಿ, ಧರ್ಮ ಬೋಧಕರಾಗಿ, ಸಂಶೋಧಕರಾಗಿ, ಸಮಾಜಕ್ಕಾಗಿಯೇ ಜನಾಂಗಕ್ಕಾಗಿಯೇ, ರಾಷ್ಟ್ರಕ್ಕಾಗಿಯೇ ತಮ್ಮ ಬಾಳನ್ನು ಮುಡಿಪುಗೊಳಿಸಿ ಸಾರ್ಥಕಬಾಳನ್ನು ಬಾಳಿ, 'ಸುಫಲಭರಿತ ಪಾದಪದಂತೆ' ಕೃತಕೃತ್ಯರಾದ್ದರಿಂದಲೇ 'ಅವರೊಂದು ವ್ಯಕ್ತಿಯಲ್ಲ ಶಕ್ತಿ' ಎನ್ನಬೇಕಾಯಿತು.

## ಮಹಾಶಕ್ತಿಗೊಂದು ಸ್ಮಾರಕ

ಶಿರಾಳಕೊಪ್ಪದಲ್ಲಿ ಜನಿಸಿ 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂಬಂತೆ ಕೊನೆಗೆ ಇಲ್ಲಿಗೇ ಬಂದು ಮಾತೃಭೂಮಿಯ ಮಡಿಲಲ್ಲಿ ಮಲಗಿ ಇಲ್ಲಿಯೇ ತಮ್ಮ ಕೊನೆಯುಸಿರೆಳೆದು ಶಿವಸಾಯುಜ್ಯಪಡೆದು ತಮ್ಮ ಸರ್ವಸ್ವವನ್ನು ಸಮಾಜೋ ದ್ಧಾರಕ್ಕೆ ಧಾರೆಯೆರೆದು, ಸತತ ಧರ್ಮದ ಉದ್ಧಾರಕ್ಕಾಗಿ ದುಡಿದ ಮಹಾಚೇತನರಾದ ಶ್ರೀ ಚನ್ನಮಲ್ಲಿಕಾರ್ಜುನರಿಗೆ ಒಂದು ಭವ್ಯ ಸ್ಮಾರಕವನ್ನು ನಿರ್ಮಿಸುವುದು ಶಿರಾಳ ಕೊಪ್ಪದ ನಾಗರಿಕರ ಪ್ರಮುಖ ಕರ್ತವ್ಯಗಳಲ್ಲೊಂದು. ಚನ್ನಮಲ್ಲಿಕಾರ್ಜುನ ಅಗಾಧ ರಾಷ್ಟ್ರಸೇವೆ ಶಿರಾಳಕೊಪ್ಪಕ್ಕೇ ಕೀರ್ತಿ ಕಲಶವನ್ನಿಟ್ಟಹಾಗೆ. ಅವರು ಶಿವೈಕ್ಯರಾದಾಗ

ಸೇರಿದ ಸಂತಾಪ ಸೂಚಕ ಸಭೆಯಲ್ಲಿ ಅವರಿಗೊಂದು ಯೋಗ್ಯ ಸ್ಮಾರಕ ಮಾಡಬೇಕೆಂದು ನಮ್ಮೂರಿನ ಹಿರಿಯ ಕಾರ್ಯಕರ್ತರು ಘೋಷಿಸಿದ ಘೋಷಣೆ ಘೋಷಣೆಯಾಗಿಯೇ ಉಳಿದಿದೆ. ಅವರನ್ನು ಸಮಾಧಿ ಮಾಡಿದ ಸ್ಥಳವಾವುದೆಂಬುದನ್ನು ಗುರುತಿಸಲಾರದಷ್ಟು ನಿರಾಸಕ್ತರಾಗಿದ್ದೇವೆ. ಶ್ರೀ ಚನ್ನಮಲ್ಲಿಕಾರ್ಜುನರೇ ಸ್ಥಾಪಿಸಿದ ಧರ್ಮದರ್ಶಿಗಳ ಸಮಿತಿ ಇದೆ. ಅವರು ಬಿಟ್ಟುಹೋದ ಆಸ್ತಿ ಇದೆ. ಇದರ ಬಲದ ಮೇಲೆ ಅವರಿಗೊಂದು ಯೋಗ್ಯ ಸ್ಮಾರಕವನ್ನು ಮಾಡುವುದು ಕಷ್ಟವೇನೂ ಆಗಲಾರದು. ಅವರ ಗ್ರಂಥಗಳು ಪುನರ್ಮುದ್ರಣಗೊಳ್ಳಬೇಕು. ಇದೆಲ್ಲ ಸಿದ್ಧೇಶ್ವರ ನಿಲಯದ ಧರ್ಮದರ್ಶಿಗಳ ಆದ್ಯ ಕರ್ತವ್ಯವಾಗಿದೆಯೆಂಬುದನ್ನು ಈ ಸಂದರ್ಭದಲ್ಲಿ ಸೂಚಿಸದಿರಲಾರೆನು.

ಪ್ರಕೃತ ಅವರ ಸಮಗ್ರ ಜೀವನದ ನಾನಾ ಮುಖಗಳನ್ನು ಚಿತ್ರಿಸುವ ಸಂಸ್ಮರಣ ಗ್ರಂಥವೊಂದನ್ನು ಹೊರತರಲು ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿರಾಳಕೊಪ್ಪ ವಿರಕ್ತಮಠ, ಬೆಂಗಳೂರು ಸರ್ಪಭೂಷಣ ಮಠಾಧ್ಯಕ್ಷರಾದ ಶಿವಕುಮಾರ ಮಹಾಸ್ವಾಮಿಗಳವರು ಪ್ರಯತ್ನಿಸುತ್ತಿರುವುದು ಶ್ಲ್ಯಾಘನೀಯ. ಈ ಕಾರ್ಯವನ್ನು ಶ್ರೀ ಚನ್ನಮಲ್ಲಿಕಾರ್ಜುನರ ನಿಕಟವರ್ತಿಗಳಾಗಿ ಅನೇಕ ವರ್ಷಗಳು ಕಳೆದ ಪ್ರಸಿದ್ಧ ಸಂಶೋಧಕರೆಂದು ಕೀರ್ತಿತರಾದ ಹೆಚ್. ದೇವೀರಪ್ಪನವರು ಮತ್ತು ಬಾಲ್ಯಾರಭ್ಯ ಶ್ರೀ ಚನ್ನಮಲ್ಲಿಕಾರ್ಜುನರಲ್ಲಿ ಒಡನಾಡಿದ ಪಂಡಿತ ಚನ್ನಪ್ಪ ಎರೇಸೀಮೆ ಇವರಿಗೆ ವಹಿಸಿರುವುದು ಸಮಯೋಚಿತವೂ ಶ್ಲ್ಯಾಘವೂ ಆದ ವಿಚಾರ. ಸದರಿ ಸಂಸ್ಮರಣ ಸಂಚಿಕೆಯು ಶಿರಾಳಕೊಪ್ಪದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರ ಸ್ಮಾರಕೋತ್ಸವದ ಸಂದರ್ಭದಲ್ಲಿ ಬಿಡುಗಡೆಯಾಗುವುದರ ಮೂಲಕ ಕರ್ನಾಟಕದ ಜನತೆಗೆ ಒನಕುಸುಮುದಂತಿದ್ದ ಈ ಮಹಾಶಕ್ತಿಯ ಪರಿಚಯ ಮಾಡಿಕೊಳ್ಳುವುದೊಳ್ಳೆಯದೆಂದು ಸೂಚಿಸಿ ನನ್ನ, ಈ ಕಿರುನುಡಿ ಸೇವೆಯನ್ನು ಶ್ರೀ ಚನ್ನಮಲ್ಲಿಕಾರ್ಜುನರ ಮಹಾಚೈತನ್ಯಕ್ಕೆ ಸಮರ್ಪಿಸುತ್ತಿದ್ದೇನೆ.

# ಅನುಭಾವಿ ಶ್ರೀ ಚನ್ನಮಲ್ಲಪ್ಪನವರು

**ಚ. ಸುಂದರೇಶನ್ ಬೆಂಗಳೂರು**

'ಚೆನ್ನಮಲ್ಲಪ್ಪ'-ಎಂಬ ಹೆಸರಿನ ಇಬ್ಬರು ಮಹನೀಯರು ಕನ್ನಡ ಲೋಕದಲ್ಲಿ ಜ್ಯೋತಿರ್ಮಯರಾಗಿ ಬಾಳಿ ಬೆಳಗಿರುವರು. ಒಬ್ಬರು ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹಲಸಂಗಿ ಗ್ರಾಮದವರು. ಇವರು ಜೀವಿತಕಾಲ ೧೯೦೩ ರಿಂದ ೧೯೫೩ರ ವರೆಗೆ. 'ಮಧುರಚೆನ್ನ' ಎಂಬ ಕಾವ್ಯನಾಮದಿಂದ ಇವರು ಸುಪ್ರಸಿದ್ಧರಾಗಿದ್ದಾರೆ. ಮತ್ತೊಬ್ಬ ಮಹಾನುಭಾವಿಗಳೆಂದರೆ ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದ ಚನ್ನಮಲ್ಲಪ್ಪನವರು. ಇವರು ಸುಮಾರು ಎಂಬತ್ತೆಂಟು ವರ್ಷ ಬದುಕಿದ್ದರೆಂದು ತಿಳಿಯುವುದು, ೨-೨-೧೯೬೨ ರಂದು ಇವರು ಲಿಂಗೈಕ್ಯರಾದರು.

ಉತ್ತರ ಕರ್ನಾಟಕದ ಗೆಳೆಯರ ಬಳಗದಲ್ಲಿ ಬೆರೆದು ಬೆಳೆದ ಹಲಸಂಗಿಯ ಚನ್ನಮಲ್ಲಪ್ಪನವರು ಸಾಹಿತ್ಯದ ಮಾಧುರ್ಯ, ಅನುಭಾವದ ಸೌಂದರ್ಯಗಳಿಂದ ಪರಿಣತರಾದ ಮಧುರ ಚೆನ್ನರು. ಉತ್ತರ ಹಾಗೂ ದಕ್ಷಿಣ ಕರ್ನಾಟಕಗಳೆರಡರ ಸಂಪರ್ಕ, ಪರಿಸರದಲ್ಲಿ ಬಾಳಿ, ಕೀರ್ತಿ-ವಾರ್ತೆಗಳಿಗೆ ಎಳಸದೆ ಶರಣತತ್ತ್ವಕ್ಕೆ ಸುಂದರ ಸಾಕ್ಷಿಯಾಗಿ ಬದುಕನ್ನು ನಡೆಸಿದವರು ಶಿರಾಳಕೊಪ್ಪದ ಚನ್ನಮಲ್ಲಪ್ಪನವರು. ಇವರ ಕಾವ್ಯನಾಮ 'ಶ್ರೀ ಚನ್ನಮಲ್ಲಿಕಾರ್ಜುನ' ಎಂದು. ಅಧ್ಯಾತ್ಮವನ್ನೇ ತಮ್ಮ ಜೀವನದ ಪರಮ ಪುರುಷಾರ್ಥವಾಗಿ ಪರಿಭಾವಿಸಿ ಪ್ರಬುದ್ಧರಾದ ಇವರಿಬ್ಬರ ಬದುಕು ಸಾರ್ಥಕ; ಸತ್ಯಪೂರ್ಣ!

ಶಿರಾಳಕೊಪ್ಪದ ಶ್ರೀ ಚನ್ನಮಲ್ಲಪ್ಪನವರ ದರ್ಶನ-ಆಶೀರ್ವಾದಗಳನ್ನು ಪಡೆಯುವ ಸೌಭಾಗ್ಯ ನನ್ನ ಜೀವನದ ಸುಕೃತಗಳಲ್ಲಿ ಒಂದಾಗಿತ್ತು ಎಂಬುದನ್ನು ಹೃತ್ಪೂರ್ವಕ ತಿಳಿಸಲು ಮಹದಾನಂದವಾಗುತ್ತಿದೆ. ಆ ಪುಣ್ಯವಿಶೇಷವೇ ಪ್ರಕೃತ ಲೇಖನ ಸೇವೆಗೆ ಕಾರಣವಾಗಿದೆ.

ಚನ್ನಮಲ್ಲಪ್ಪನವರ ಪೂರ್ವಜರು ಹಾವೇರಿಯವರು. ಕೋರಿಶೆಟ್ಟಿ ಮನೆತನದವರು. ಚನ್ನಮಲ್ಲಪ್ಪನವರ ತಂದೆಯ ಹೆಸರು ನೂರೊಂದಪ್ಪ ಇವರು ಶಾಲಾಶಿಕ್ಷಕರಾಗಿದ್ದರು. ನಡೆ-ನುಡಿಯಲ್ಲಿ ಹದುಳಿಗರು; ಸಾಹಸಿಗಳು. ಧರ್ಮಾಚಾರಪ್ರಿಯರು ಶಾಲಾ ಉಪಾಧ್ಯಾಯರಾದ ತಂದೆ ನೂರೊಂದಪ್ಪನವರ ಮಾರ್ಗದರ್ಶನದಲ್ಲಿ ಮುನ್ನಡೆದರು ಚನ್ನಮಲ್ಲಪ್ಪನವರು. ತಂದೆಗೆ ಸಹಾಯಕರಾಗಿ, ಓದು-ಬರೆಹದಲ್ಲಿ ತುಂಬು ಶ್ರದ್ಧೆವಹಿಸಿ ಪ್ರಗತಿ ಪಡೆದರು. ಎಲ್ಲರ ಪ್ರೀತಿಗೆ ಪಾತ್ರರಾದರು. ಚಿಕ್ಕಂದಿನಲ್ಲಿಯೇ ಶಿವಶರಣರ ಪದ-ಪದ್ಯಗಳ ಬಗೆಗೆ ವಿಶೇಷ ಒಲವು ಇವರಿಗಿತ್ತು. ಸಂಸ್ಕಾರಬಲದಿಂದ

ಮುಂದೆ ಚನ್ನಮಲ್ಲಪ್ಪನವರು ತಂದೆಯಂತೆಯೇ ಶಾಲಾಶಿಕ್ಷಕರಾದರು. ಇವರ ಗೃಹಸ್ಥ ಜೀವನ ಮಧುರವೇನಲ್ಲ. ಅಷ್ಟೇಕೆ, ಚನ್ನಮಲ್ಲಪ್ಪನವರ ಸಮಗ್ರ ಜೀವನವೇ ದೇವನು ಅರೆದು ಒರೆದು ನೋಡಿದ ಬದುಕಾಗಿದೆ. ಇವರು ಮೊದಲು ಲಗ್ನವಾದ ಮಡದಿ ಅಲ್ಪ ಕಾಲದಲ್ಲಿಯೇ ಇಲ್ಲವಾದರು. ಮರುಮದುವೆಯೂ ಸಫಲವಾಗಲಿಲ್ಲ. ತಮ್ಮ ಮೊದಲ ಪತ್ನಿಗೆ ಜನಿಸಿದ್ದ ಶಂಕರನೆಂಬ ನಾಲ್ಕು ವರ್ಷದ ಮಗು ಸಹ ದೇವನ ವಶ ವಾದ ಬಳಿಕ ಚನ್ನಮಲ್ಲಪ್ಪನವರ ಗೃಹಸ್ಥಜೀವನ ಕೊನೆಯನ್ನು ಕಂಡಂತಾಯಿತು. ಶಿವಸಂಬಂಧದ ಸಂಸಾರವೇ ಮುಂದಿನ ಅವರ ಆದರ್ಶವಾಯಿತು. ಅಂತಹ ಮಂಗಲ ಮಯ ಪರಿಸರವನ್ನು ಗುರುಕಾರುಣ್ಯ-ಸ್ವಪ್ರಯತ್ನಗಳಿಂದ ಇವರು ನಿರ್ಮಿಸಿಕೊಂಡು ನಿಡುಗಾಲ ಬಾಳಿದರು. ಇಂತಹ ಎಡರು, ತೊಡರುಗಳು ಬಂದರೂ ಶಿವನನ್ನೇ ನಂಬಿ ಮುನ್ನಡೆದರು. ಶಾಲಾ ಮಾಸ್ತರರಾಗಿ, ಪತ್ರಿಕಾ ಸಂಪಾದಕರಾಗಿ, ಸಂಶೋಧಕ ಸಾಹಿತಿಗಳಾಗಿ, ಪ್ರವಚನಕಾರರಾಗಿ, ಎಲ್ಲಕ್ಕೂ ಹೆಚ್ಚಿನದಾಗಿ ಶಿವಾನುಭಾವಿಗಳಾಗಿ ಶ್ರೀ ಚನ್ನಮಲ್ಲಪ್ಪನವರು ಉನ್ನತಮಟ್ಟದ ಜೀವನದರ್ಶನವನ್ನು ಕಾಣಿಸಿದ್ದಾರೆ.

ಶಾಲಾ ಶಿಕ್ಷಕರಾಗಿದ್ದಾಗ ಆ ಅವಧಿಯಲ್ಲಿ ಕರ್ತವ್ಯನಿಷ್ಠೆಯ ಜೊತೆಗೆ ಬಿಡುವಿನ ವೇಳೆಯಲ್ಲಿ ಧಾರ್ಮಿಕ ವಿಚಾರಗಳ ಪ್ರಸಾರಕಾರ್ಯವನ್ನು ಚನ್ನಮಲ್ಲಪ್ಪನವರು ಕೈಗೊಂಡಿದ್ದರು. ಧಾರ್ಮಿಕ ಶೋಧನೆ–ಭೋಧನೆ ಪ್ರಗತಿ ಪಥದಲ್ಲಿದ್ದು ಸುತ್ತಣ ಜನರಿಗೆ ಇವರ ಕಾರ್ಯಸಾಧನೆಗಳು ಮನವರಿಕೆ ಆಗಲು ತೊಡಗಿದವು. ಇಂಥ ಸಂದರ್ಭದಲ್ಲಿ ಶಿವ ಮೊಗ್ಗೆಯ ಕಡೆಗೆ ಸಹಜವಾಗಿ ದಯಮಾಡಿಸಿದ ಹಾನಗಲ್ಲಿನ ಶ್ರೀ ಕುಮಾರಸ್ವಾಮಿ ಗಳವರಿಗೆ ಚನ್ನಮಲ್ಲಪ್ಪನವರ ಧರ್ಮಪ್ರಸಾರಕಾರ್ಯದ ವಿಚಾರ ತಿಳಿದುಬಂತು. ಕಾರಣಿಕ ಕುಮಾರಯೋಗಿಗಳವರ ದೃಕ್‌ದೀಕ್ಷೆ,* ಅನುಗ್ರಹದೀಕ್ಷೆಗೆ ಪಾತ್ರರಾಗುವ ಪುಣ್ಯ ಪರಮಾತ್ಮನಿಂದ ತಾನೇ ತಾನಾಗಿಯೇ ಚನ್ನಮಲ್ಲಪ್ಪನವರಿಗೆ ಪ್ರಾಪ್ತವಾಯಿತು. ಜನ

---

* "ನನ್ನ ಬಾಲ್ಯದಲ್ಲಿ ಸಿಡುಬಿನಿಂದ ಕಣ್ಣಿನಲ್ಲಿ ಹೂ ಬಿದ್ದಿತು ಮುಂದೆ ಉಪಾಧ್ಯಾಯ ವೃತ್ತಿಯನ್ನು ಮಾಡುವಾಗ ಅದೇ ಕಣ್ಣಿಗೇ ರೋಗ ಬಂದಿತು. ಬಾವು ಬಂದು ಬಹಳ ಬಾಧೆ ಯುಂಟಾಯಿತು. ಶ್ರೀಗಳವರು ಶಿರಿಯಾಳಕೊಪ್ಪಕ್ಕೆ ದಯಮಾಡಿಸಿ ನನ್ನ ಯೋಗ ಕ್ಷೇಮವನ್ನು ವಿಚಾರಿಸಿದರು. ನನ್ನ ನೇತ್ರಬಾಧೆಯನ್ನು ಸನ್ನಿಧಿಯವರಲ್ಲಿ ಅರಿಕೆ ಮಾಡಿಕೊಂಡೆ. ಒಂದು ಕಣ್ಣಿನ ಈ ರೋಗವು ಇನ್ನೊಂದು ನೆಟ್ಟಗಿರುವ ಕಣ್ಣಿಗೂ ಬಂದು ಅದೂ ಹೋಗುತ್ತದೆ- ಎಂಬ ಜನರು ಹೇಳುವ ಮಾತನ್ನು ವಿಜ್ಞಾಪಿಸಿಕೊಂಡೆ. 'ನೋಡೋಣ, ಅದು ಹೇಗೆ ಹೋಗುತ್ತದೆ. ಯೋಚನೆ ಮಾಡುವುದು ಬೇಡ. ಶಿವನ ಸೇವೆಯನ್ನು ಮನ ಮುಟ್ಟಿ ಮಾಡಬೇಕು'-ಎಂದು ಅಪ್ಪಣೆ ಕೊಡಿಸಿ ಒಂದು ಕ್ಷಣ ನನ್ನ ಮೇಲೆ ದಿವ್ಯದೃಷ್ಟಿ ಹಾಕಿದರು. ಶ್ರೀಗಳವರು ಈ ಮಾತನ್ನು ಅಪ್ಪಣೆ ಕೊಡಿಸಿ ಸುಮಾರು ಮೂವತ್ತೆರಡು ವರ್ಷಗಳಾದರೂ ನನ್ನ ಇನ್ನೊಂದು ಕಣ್ಣು ಇನ್ನೂ ಚೆನ್ನಾಗಿಯೇ ಇದೆ."

—ಶ್ರೀ ಚನ್ನಮಲ್ಲಿಕಾರ್ಜುನ ಮೈಸೂರು

'ಬೆಳಗು' ಸ್ಮಾರಕ ಗ್ರಂಥ ಪುಟ: ೧೭೪ ವರ್ಷ (೧೯೬೦)

ಮಲ್ಲಪ್ಪನವರ ಆಧ್ಯಾತ್ಮಿಕ ಪ್ರಜ್ಞೆ-ಪ್ರತಿಭೆ ಪರಿಪೂರ್ಣವಾಗಿ ವಿಕಸಿತವಾಗಲು ಹಾನಗಲ್ಲಿನ ಶ್ರೀ ಕುಮಾರಸ್ವಾಮಿಗಳವರ ದಿವ್ಯ ಅನುಗ್ರಹವೇ ಮೂಲಕಾರಣ. ಅಂತೆಯೇ ಶ್ರೀ ಕುಮಾರಸ್ವಾಮಿಗಳವರನ್ನು ತಮ್ಮ ಆರಾಧ್ಯಮೂರ್ತಿಯಾಗಿ ನಂಬಿ ತುಂಬಿ ಬಾಳಿದವರು ಚನ್ನಮಲ್ಲಪ್ಪನವರು. ಹಾನ್ಗಲ್ಲಿನ ಶ್ರೀ ಕುಮಾರಸ್ವಾಮಿಗಳವರ ನೆನಹಿನಲ್ಲಿ 'ಸದ್ಧರ್ಮದೀಪಿಕೆ'–ಎಂಬ ಮಾಸಪತ್ರಿಕೆಯನ್ನು ಸು. ಮೂವತ್ತು ವರ್ಷಗಳ ಕಾಲ ಪ್ರಕಟಿಸಿ, ಪತ್ರಿಕಾವ್ಯವಸಾಯ ಮಾಡಿದ ತುಂಬು ಸಾಹಸಿಗರಿವರು. ಕಡುಬಡವರಾದ ಶ್ರೀ ಚನ್ನಮಲ್ಲಪ್ಪನವರ ಚಿಂತನೆಗಳು ಶ್ರೀಮಂತವಾಗಿದ್ದವು. ಇವರ ಧರ್ಮಪ್ರಸಾರ ಸಂಶೋಧನ ಜೀವನಕ್ಕೆ ನೆರವು ನೀಡಿದ ಮತ್ತೊಬ್ಬ ಮಹಿಮರೆಂದರೆ, ಹಾನ್ಗಲ್ಲಿನ ಶ್ರೀ ಕುಮಾರಸ್ವಾಮಿಗಳವರ ಕಾರ್ಯಸಾಧನೆಗಳನ್ನು ಸಂತತ ಸಫಲಗೊಳಿಸುವುದರಲ್ಲಿ ಸಂಕಲ್ಪ ತಾಳಿದ್ದ ಹಾವೇರಿಯ ಶ್ರೀ ಶಿವಬಸವಸ್ವಾಮಿಗಳವರು. ಈ ಮಹಾಮಹಿಮರು ಒದಗಿಸಿದ 'ಶಿವಲಿಂಗ ವಿಜಯ ಮುದ್ರಣಾಲಯ' ಹಾಗೂ ಆಶೀರ್ವದಿಸಿ ನೀಡಿದ ಎರಡು ರೂಪಾಯಿ ಮೂಲಧನದಿಂದ 'ಸದ್ಧರ್ಮದೀಪಿಕೆ' ಎಂಬ ಮಾಸಪತ್ರಿಕೆ ಮೂವತ್ತು ವರ್ಷಗಳ ಕಾಲ ಸಂತತವಾಗಿ ನಡೆದಿದೆಯೆಂದರೆ ಇದು ಅದ್ಭುತ ಘಟನೆಯಲ್ಲದೆ ಮತ್ತೇನು ! ನಿಜಕ್ಕೂ ಇದು ಉಭಯ ಶಿವಯೋಗಿಗಳವರ ವಿಶೇಷ ಅನುಗ್ರಹ, ಲೀಲಾಸಂಭ್ರಮವೇ ಸರಿ !!

'ಸದ್ಧರ್ಮದೀಪಿಕೆ' ಸಂಚಿಕೆಗಳಲ್ಲಿ ಪ್ರಕಟವಾದ ಕೆಲವೊಂದು ಸಾಹಿತ್ಯ ಕೃತಿರೂಪದಲ್ಲಿ 'ಸದ್ಧರ್ಮ ಗ್ರಂಥಮಾಲೆ'ಯ ಮುಖಾಂತರ ಪ್ರತ್ಯೇಕವಾಗಿ ಪ್ರಕಟವಾಗಿದೆ. ಮತ್ತೆ ಅಪೂರ್ವವಾದ ಎಷ್ಟೋ ಸಾಹಿತ್ಯ ಈ ಸಂಚಿಕೆಗಳಲ್ಲಿಯೇ ಹುದುಗಿದೆ. ಈ 'ಸದ್ಧರ್ಮದೀಪಿಕೆ' ಸಂಚಿಕೆಗಳ ಮೂಲಕವೇ 'ಕನ್ನಡ ಶಿವಯೋಗಪ್ರದೀಪಿಕೆ', 'ಉದ್ಧರಣೆಯ ವಾರ್ಧಕ', 'ಕರಸ್ಥಲದ ನಾಗಲಿಂಗಯ್ಯನ ತ್ರಿವಿಧಿ', 'ಶಿವಪೂಜಾ ವಿಧಾನ'— ಇತ್ಯಾದಿ ಸಾಹಿತ್ಯ ಪ್ರಕಟವಾಗಿದೆ. ಇದಲ್ಲದೆ ಈ ಪತ್ರಿಕೆಯ ಮೂಲಕ ಅಂದಂದು ಪ್ರಕಟವಾದ ಸದ್ಗ್ರಂಥಗಳ ಪರಿಚಯಾತ್ಮಕ ವಿಮರ್ಶೆಯನ್ನು ಸಂಪಾದಕರು ಒದಗಿಸಿದ್ದಾರೆ. ಉಪಲಬ್ಧ ತಾಡವೋಲೆ, ಪುರಾತನರ ಹಸ್ತಪ್ರತಿಗಳ ಪರಿಚಯ ರೂಪದ ಬರೆಹಗಳೂ ಈ ಪತ್ರಿಕೆಯಲ್ಲಿ ಬಂದಿವೆ. ಪ್ರಕಾಶಕರ ಪ್ರವಾಸದ ಟಿಪ್ಪಣಿಗಳು, ದೇಶಭಕ್ತಿಪರ ವಿಚಾರಗಳೂ ಶಿಲಾಶಾಸನದ ವಿವರಗಳೂ ಅಲ್ಲಲ್ಲಿ ಮೂಡಿಬಂದಿವೆ. ವೀರಶೈವ ಮಠಗಳ, ಶಿವಾನುಭವ ಕಾರ್ಯಕ್ರಮಗಳ ವರದಿಗಳು, ನಾಡು-ನುಡಿಗೆ ಸಂಬಂಧಿಸಿದ ವಿಚಾರಗಳು ಸಮುಚಿತವಾಗಿ ಈ ಸಂಚಿಕೆಗಳಲ್ಲಿ ಕಂಡುಬಂದಿವೆ. ಶಿವಶರಣರ ವಚನಗಳ ತಾತ್ಪರ್ಯಸೂಚಕ ಟಿಪ್ಪಣೆಗಳು, ವಿಶೇಷಾರ್ಥ ವಿವರಣೆ ಸಹ ಕಂಡುಬರುತ್ತಿವೆ. ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದ ಉದಾತ್ತ ವಿಚಾರಗಳು ಇಲ್ಲಿ ಹೊಮ್ಮಿ ಹೊಳೆದಿವೆ. ಸುದೀರ್ಘಕಾಲ ಪ್ರಕಟವಾದ 'ಸದ್ಧರ್ಮದೀಪಿಕೆ'ಯ ಸಂಚಿಕೆಗಳು ಪ್ರೌಢ ಅಭ್ಯಾಸಿಗಳ ಪರಿಶೀಲನೆಗೆ ಇಂದು ದೊರಕುತ್ತಿಲ್ಲ. ಇದು ಸತ್ಯಸಂಗತಿ ಇದ್ದಾಗ ಬೆಲೆಯಿಲ್ಲ; ಇಲ್ಲದಾಗ ಪರಿತಾಪ ! ಕನ್ನಡಿಗರ ಅನಾದರ ಕುರಿತು ಎಷ್ಟೆಂದು ಚಿಂತಿಸುವುದು !!

'ಸದ್ಧರ್ಮಗ್ರಂಥಮಾಲೆ'ಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಸುಮಾರು ಐವತ್ತು ಕೃತಿಗಳನ್ನು ಪ್ರಕಟಿಸಿರುತ್ತಾರೆ. ಸ್ತೋತ್ರ, ರಗಳೆ, ತ್ರಿಪದಿ, ಷಟ್ಪದಿ, ಶತಕ, ಹಸುಗೆ, ಗದ್ಯ, ಚರಿತ್ರೆ —ಮುಂತಾದ ಪ್ರಕಾರಗಳಲ್ಲಿ ಪುರಾತನರು ರಚಿಸಿದ್ದ ಸಾಹಿತ್ಯವನ್ನು ಪರಿಶೋಧಿಸಿ, ಸಂಸ್ಕರಿಸಿ ಚನ್ನಮಲ್ಲಪ್ಪನವರು ಪ್ರಕಟಿಸಿರುತ್ತಾರೆ. 'ಶ್ರೀ ಬಸವೇಶ್ವರನ ಕಾಲ, 'ರೇವಣಸಿದ್ಧರು'– ಎಂಬೀ ಮಹತ್ತ್ವದ ಸಂಶೋಧನ ಗ್ರಂಥಗಳನ್ನು ಹಾಗೂ 'ವೀರಶೈವ' ಎಂಬ ಸ್ವಾನುಭಾವ ವಿವರಣೆಯ ವೀರಶೈವರ ಕೈಪಿಡಿಸ್ವರೂಪದ ಸ್ವತಂತ್ರ ಗ್ರಂಥವನ್ನು ಶ್ರೀ ಚನ್ನಮಲ್ಲಿಕಾರ್ಜುನರು ವಿರಚಿಸಿ ಬೆಳಕಿಗೆ ತಂದಿರುವರು. ಕನ್ನಡ-ಸಂಸ್ಕೃತ ಉಭಯಭಾಷೆಗಳಲ್ಲಿ ಪಾಂಡಿತ್ಯ ಇವರಿಗಿತ್ತು; ಆಂಗ್ಲ ಭಾಷಾ ಪರಿಜ್ಞಾನವನ್ನೂ ಪಡೆದಿದ್ದರು.

ತಮ್ಮ ಜನ್ಮಭೂಮಿಯ ಋಣವನ್ನು ತೀರಿಸಲೆಂದೋ ಶ್ರೀ ಚನ್ನಮಲ್ಲಪ್ಪನವರು ತಮ್ಮ ಭಾಗದ ಮನೆ, ಗದ್ದೆಗಳನ್ನು ದಾನ ಮಾಡಿ, ಇದರ ಉತ್ಪನ್ನದಿಂದ ವಿದ್ಯಾರ್ಥಿನಿಲಯವೊಂದನ್ನು ಇವರು ಸ್ಥಾಪಿಸಿರುತ್ತಾರೆ. 'ಶ್ರೀ ಸಿದ್ಧೇಶ್ವರ ನಿಲಯ' ಎಂದು ಇದಕ್ಕೆ ಹೆಸರಿಟ್ಟಿದ್ದಾರೆ. ಧರ್ಮಬೋಧಪರ ಗ್ರಂಥ ಭಂಡಾರವನ್ನೂ ಈ ವಿದ್ಯಾರ್ಥಿನಿಲಯಕ್ಕೆ ಒದಗಿಸಿದ್ದಾರೆ. ಮಾಯಿದೇವರ ಶತಕತ್ರಯ, ಶೂನ್ಯಸಂಪಾದನೆ ಮುಂತಾದ ಸದ್‌ಗ್ರಂಥಗಳನ್ನು ಕುರಿತು ಪ್ರವಚನ ಮಾಡಲು ಪಂಡಿತರನ್ನು ನೇಮಕ ಮಾಡಬೇಕೆಂದು ಪತ್ರದಲ್ಲಿ* ಬರೆದಿರುತ್ತಾರೆ. ಶಾಲಾಮಕ್ಕಳ ಅಭಿವೃದ್ಧಿಯ ಬಗೆಗೆ ಚನ್ನಮಲ್ಲಪ್ಪನವರು ಎಂತಹ ಆಸ್ಥೆ, ಅನುಕಂಪ ತಾಳಿದ್ದರು ಎಂಬುದಕ್ಕೂ, ವಿದ್ಯಾರ್ಥಿಗಳು ಧರ್ಮಜಿಜ್ಞಾಸುಗಳಾಗಬೇಕು ಎಂಬ ಅವರ ತೀವ್ರ ಹಂಬಲವನ್ನು ಮನಗಾಣುವುದಕ್ಕೂ ಈ ಶ್ರೀ ಸಿದ್ಧೇಶ್ವರ ನಿಲಯದ ಸ್ಥಾಪನೆ ಹಾಗೂ ಗೊತ್ತು-ಗುರಿಗಳು ಸಹಾಯಕವಾಗಿವೆ. ಈವರೆಗೂ ಶ್ರೀ ಚನ್ನಮಲ್ಲಪ್ಪನವರ ಅಪೂರ್ವವಾದ ಜೀವನ-ಸಾಧನೆಗಳ ರೂಪ-ರೇಷೆಗಳನ್ನು ಮನಗಂಡೆವು. ಇನ್ನು ಶ್ರೀ ಚನ್ನಮಲ್ಲಪ್ಪನವರ ಬರೆಹದ ಶೈಲಿ, ಸ್ವಾನುಭಾವದ ಅರ್ಥ ವಿವರಣೆಯ ಬಗೆಗೆ ಒಂದೆರಡು ನಿದರ್ಶನಗಳನ್ನು ಮನಗಾಣಿಸುವುದು ಈ ಲೇಖನದ ಮುಂದಿನ ಪ್ರಮುಖ ವಿಷಯವಾಗಿದೆ.

### ಚನ್ನಮಲ್ಲಪ್ಪನವರ ಸರಳ ಸುಂದರ ಗದ್ಯಶೈಲಿ :

ಲಿಂಗಪೂಜೆಯ ಉದ್ದೇಶ :

"ಲಿಂಗಪೂಜೆಯ ಮಾಡುವುದು ಏತಕಯ್ಯಾ ? ತನ್ನ ತಾನರಿವುದಕ್ಕೆ"–ಎಂದು ಶ್ರೀ ಬಸವೇಶ್ವರನ ವಚನವಿದೆ. ಆ ಪ್ರಕಾರ ಲಿಂಗ ಪೂಜೆ ಮಾಡುವವರು ಸ್ವಸ್ವರೂಪವನ್ನು ತಿಳಿದು ಅನುಸಂಧಾನ ಮಾಡುವುದಕ್ಕೆ ಪ್ರಯತ್ನಪಡುವುದೇ ಬಹಳ ಉತ್ತಮ

* ವಿಶ್ವಸ್ಥ ಸಮಿತಿ ಪತ್ರ (Turst deed) ವಿವರಗಳಿಗೆ ನೋಡಿ :
ಸದ್ಧರ್ಮದೀಪಿಕೆ ಸಂಚಿಕೆ ೬೦-೬೧. ಪುಟ: ೨೫

ವಾದುದು. 'ಲಿಂಗರೂಪಂ ಜಗದ್ರೂಪಂ'- ಎಂಬ ಆಗಮದ ಹೇಳಿಕೆಯ ಪ್ರಕಾರ ಲಿಂಗವು ಜಗತ್ತಿನ ರೂಪವಾಗಿ ಹೇಗೆ ಇದೆ ಎಂದು ತಿಳಿದು ಆಚರಿಸುವುದೂ ಲಿಂಗ ಪೂಜೆಯಲ್ಲಿ ಸೇರಿದ ವಿಷಯವೇ ಆಗಿದೆ. ಇವನ್ನೆಲ್ಲಾ ಯೋಚಿಸಿ ಲಿಂಗಪೂಜೆ ಮಾಡು ವುದನ್ನು ಕಲಿಯಬೇಕು. ಈಗ ಪೂಜೆ ಮಾಡುವವರಲ್ಲಿ ಅನೇಕರು ಬರಿಯ ಹೊರಗಿನ ಅರ್ಚನೆ ಉಪಚಾರ ಇವುಗಳಿಗೆ ಮಾತ್ರ ಗಮನ ಕೊಡುತ್ತಾರೆ. ಆಡಂಬರದಿಂದ ಇವು ಗಳನ್ನು ಮಾಡುತ್ತಾರೆ. ಇಷ್ಟೇ ಮಾಡುವುದರಿಂದ ವೀರಶೈವ ಧರ್ಮದ ಶಿವಪೂಜೆ ಯಾಗುವುದಿಲ್ಲ. ತಾನೊಬ್ಬನು ಬೇರೆ, ಲಿಂಗವು ಬೇರೆ ಎಂಬ ಭಾವನೆಯೇ ಈಗ ಹೆಚ್ಚಾಗಿರುತ್ತದೆ. ಈ ಭಿನ್ನಭಾವನೆಯು ಸರಿಯಾದುದಲ್ಲ. ಅಂಗ ಲಿಂಗ 'ಸಂಗ' (ಸಮರಸ) ಆಗುವ ವಿಧಾನದ ಶಿವಪೂಜೆಯನ್ನೇ ಎಲ್ಲರೂ ಮಾಡಬೇಕು. ಈ ಕಡೆಗೆ ವೀರಶೈವರ ಗಮನವು ಹೆಚ್ಚು ಹೆಚ್ಚಾಗಿ ಬೀಳಬೇಕಾಗಿದೆ.*

## ೧. ಸ್ವಾನುಭಾವದ ಅರ್ಥ ವಿವರಣೆ

ಮಾಘ ಮಾಸವು ಪೋಗೆ । ಮೇಗೆ ಬಂದಿತು ಚೈತ್ರ
ಬೇಗ ಮಾಮರನು-ತಳಿರೇರೆ ಅದ ಕಂಡು
ಕೂಗಿ ಕರೆಯಿತ್ತು ಕಲಕಂಠ.

"ತಾತ್ಪರ್ಯ-ಚಾಂದ್ರಮಾನ ಗಣನೆಯ ಮೇರೆಗೆ ವರ್ಷದಲ್ಲಿನ ಮಾಘ ಮಾಸವು ಕಳೆಯಲು, ಮಾವಿನ ಮರವು ಚಿಗುರನ್ನು ಪಡೆಯಲು ಅದನ್ನು ನೋಡಿ ಕೋಗಿಲೆಯು ಧ್ವನಿಮಾಡತೊಡಗಿತು. (ವಸಂತ ಕಾಲದವರೆಗೂ ಕೂಗಲಾರದೆ ಇದ್ದ ಕೋಗಿಲೆಗಳು ಆ ವಸಂತದಲ್ಲಿ ಕೂಗುವುದು ಸ್ವಭಾವ).

ಟಿಪ್ಪಣಿ: ಮಾಘ ಮಾಸದಲ್ಲಿ ಹಣ್ಣೆಲೆಗಳು ಉದುರುತ್ತವೆ. ಚೈತ್ರ ಮಾಸದಲ್ಲಿ ಮಾವಿನಮರವು ಚಿಗುರುತ್ತದೆ. ಆಗ ಹೊಸ ಎಲೆಗಳು ಕಾಣುತ್ತವೆ. ಜೀವಭಾವವೆಂಬ ಹಣ್ಣೆಲೆ ಉದುರಿಹೋಗಿ ಮಹಾವೃಕ್ಷವೆಂಬ ಬ್ರಹ್ಮರೂಪದ ಪಿಂಡಾಂಡದಲ್ಲಿ (ಬ್ರಹ್ಮಾಂಡ ದಲ್ಲಿ ಸಹ) ಬ್ರಹ್ಮಭಾವವೆಂಬ ತಿಳಿಬುದ್ಧಿ (ಚಿಗುರು) ಹುಟ್ಟಲಾಗಿ ಕೋಗಿಲೆಯಂತೆ ಕಪ್ಪು ಕಂಠದ ಶಿವನ ರೂಪಾದ ಕಪ್ಪು ಬಣ್ಣದ ಲಿಂಗವು (ತನ್ನ ಸ್ವರೂಪವನ್ನು ಪಡೆದು) ಮಾತನಾಡಲಾರಂಭಿಸಿತು ಎಂಬ ಪಾರಮಾರ್ಥಿಕ ಭಾವಾರ್ಥವೂ ಇಲ್ಲಿ ಇದೆ. ಮಹ ನೀಯರು ಈ ಪದ್ಯದ ಚೈತ್ರಮಾಸವನ್ನೇ ಅಕ್ಕಮಹಾದೇವಿಯ ಜನನ ಕಾಲವೆಂದು ಗೊತ್ತುಪಡಿಸಿದ್ದಾರೆ. ಆದರೆ ಅದು ಜೀವಭಾವವು ಹೋಗಿ, ಶಿವಭಾವವು ಬಂದು ದೀಕ್ಷೆಯ ಕಾಲವೆಂದು ತಿಳಿಯುತ್ತದೆ. ಗುರುವಿನ ಶಿಶುವಾಗಿ ಜನನದ ಕಾಲವಿದು."†

---

* ಸದ್ಧರ್ಮದೀಪಿಕೆ : ಸಂಚಿಕೆ ೧೪೪.

† ಯೋಗಾಂಗ ತ್ರಿವಿಧಿ : ಸದ್ಧರ್ಮದೀಪಿಕೆ ಗ್ರಂಥಮಾಲೆ ೩ ಪುಟ ೩-೪ (೧೯೪೯)

೨

ಮೂಲಾಧಾರದ ಬೇರ ಮೆಟ್ಟಿ, ಭ್ರೂಮಂಡಲವನೇರಿದೆ.
ಆಧಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ.
ವೈರಾಗ್ಯದ ಸೋಪಾನದಿಂದ ಶ್ರೀ ಪರ್ವತವನೇರಿದೆ.
ಕೈವಿಡಿದು ಕರೆದುಕೊಳ್ಳಾ ಚನ್ನಮಲ್ಲಿಕಾರ್ಜುನಾ !

"ತಾತ್ಪರ್ಯ: ಮೂಲಾಧಾರದ ಪ್ರಾಣವಾಯುವನ್ನು ರೇಚಿಸಿದಂತೆ(ವಿಶ್ವಾಸಮಾಡದಂತೆ) ತಡೆದು ಕುಂಭಕಮಾಡಿ (ಗುದಕ್ಕೂ ಮೂಗಿಗೂ ನರಗಳ ಸಂಬಂಧವಿರುವುದರಿಂದ ಮೂಗಿನ ಉಚ್ಛ್ವಾಸ ವಾಯುವನ್ನು ತಡೆದು–ಎಂದೂ ಅರ್ಥ ಮಾಡಲಿಕ್ಕೆ ಬರುತ್ತದೆ) ಹುಬ್ಬುಗಳ ಮಧ್ಯೆ ಇರುವ ಆಜ್ಞಾಚಕ್ರದ ಸ್ಥಾನವನ್ನು ಏರಿದೆನು. ಆಧಾರದ ಬೇರನ್ನು ಹಿಡಿದು ಅಧೋಕುಂಡಲಿಯಿಂದ ಐಕ್ಯಸ್ಥಾನದ ಭ್ರೂಮಧ್ಯದ ಮೂಲಕ ಊರ್ಧ್ವಕುಂಡಲಿಗೆ ಏರಿದೆನು. ವೈರಾಗ್ಯವೆಂಬ ಮೆಟ್ಟಲಿನಿಂದ ಶ್ರೀಗಿರಿ (ಅದೂ ಭ್ರೂಮಧ್ಯಸ್ಥಾನ)ಯನ್ನು ಹತ್ತಿದೆ. ಕೈ ಹಿಡಿದು ತೆಗೆದುಕೋ ಶ್ರೀ ಚನ್ನಮಲ್ಲಿಕಾರ್ಜುನನೇ !

ಟಿಪ್ಪಣಿ: ಅಕ್ಕನು ಯೋಗಸಾಧನೆಯನ್ನು ಮಾಡುತ್ತಿದ್ದು ಆ ಸಂಬಂಧದಲ್ಲಿ ನುಡಿದ ವಚನವಿದು."*

## ೩. ಅನುವಾದ ಪ್ರತಿಭೆ

ಏನೆನಲುಂಟು ಭಕ್ತಿಯ ಮಹಾತ್ಮತೆಯಂ 'ಶ್ರುತಿಶಾಸ್ತ್ರಪಂಕ್ತಿಯೋ
ಗೇನ ಪರಾ' ಎನುತ್ತಮಳ ಭಕ್ತಿಯ ವೈಭವಮಂ ಪೊಗಳ್ದು ಸ-
ನ್ಮಾನಿಸಿತಾಗಿ ಯೋಗಪದದಿಂದುಪರಿಷ್ಠವೆನಿಪ್ಪ ಭಕ್ತಿ ಸೌ-
ಖ್ಯಾನುಭವೈಕ ನಿಷ್ಕಳಪದಕ್ಕೆಣೆ ಯಾವ ಪದಂ ಸಿವಾಧವಾ ॥

"ಭಕ್ತಿಯ ಘನತೆಯನ್ನು ಏನೆಂದು ಹೇಳಲಿಕ್ಕೆ ಬರುತ್ತದೆ? ಎಷ್ಟು ಹೇಳಿದರೂ ಮುಗಿಯುವುದಿಲ್ಲ. ವೇದ ಮತ್ತು ಶಾಸ್ತ್ರಗಳ ಸಮೂಹವು ಯೋಗಕ್ಕಿಂತಲೂ ಶ್ರೇಷ್ಠವಾದುದು–ಎಂಬುದಾಗಿ ನಿರ್ಮಲವಾದ ಶುದ್ಧ ಭಕ್ತಿಯ ಸಂಪತ್ತನ್ನು ಹೊಗಳಿ ಅದಕ್ಕೆ ಒಳ್ಳೆಯ ಗೌರವವನ್ನು ಕೊಟ್ಟಿರುತ್ತದೆ. ಯೋಗದ (ಮಂತ್ರಯೋಗಾದಿ ನಾಲ್ಕು ಯೋಗ) ಪದವಿಗಿಂತ ಮೇಲಾದುದು ಎನಿಸಿಕೊಂಡಿರುವ ಭಕ್ತಿ ಪದವಿಯ ಸುಖವನ್ನು ಅನುಭವಿಸುವುದಕ್ಕೆ ಮುಖ್ಯವಾದ (ಭಕ್ತಿಸುಖವೊಂದನ್ನೇ ಕೊಡುವ) ನಿಷ್ಕಲ ಪದವಿಗೆ (ಅವ್ಯಕ್ತ ಚೈತನ್ಯ ಪರವಸ್ತುವಿನ ಸಮರಸ ಸ್ಥಿತಿ) ಸರಿಯಾದ ಪದವಿಯು ಯಾವುದಿದೆ?

ಟಿಪ್ಪಣಿ: ಧ್ಯಾನಿಸುವ ಮಂತ್ರಯೋಗ, ವಾಯುವನ್ನು ನಿಲ್ಲಿಸುವ ಪ್ರಾಣಾಯಾಮ, ಲಯಯೋಗ, ಸಮಾಧಿಯನ್ನು ಸಾಧಿಸುವ ಅಷ್ಟಾಂಗ ಹಠಯೋಗ, ನೇತ್ರ

---

* ಅಕ್ಕಮಹಾದೇವಿ ವಚನಾರ್ಥ: ಸದ್ಧರ್ಮದೀಪಿಕೆ ಗ್ರಂಥಮಾಲೆ-೨ ಪುಟ ಸಂಖ್ಯೆ ೬೧.

ಗಳಿಂದ ಜ್ಯೋತಿಪ್ರಕಾಶವನ್ನು ಕಾಣುವ ರಾಜಯೋಗ, ಇವುಗಳಿಗಿಂತಲೂ ಕಾರಣ ತನುವಿನಲ್ಲಿ (ಭಾವ) ಹೊಂದುವ ಆನಂದದ ಭಕ್ತಿಪದವೇ ಅತ್ಯಂತ ಶ್ರೇಷ್ಠವೆಂಬ ಭಾವ."†

–ಈ ಪರಿಯಲ್ಲಿ ಶ್ರೀ ಚನ್ನಮಲ್ಲಪ್ಪನವರು ಗಹನವಾದ ತತ್ತ್ವಗಳಿಗೂ ಸರಳವಾದ ಮಾತುಗಳ ಮೂಲಕವೇ ಶಾಸ್ತ್ರಾನುಸಾರವೂ ಸುಂದರವೂ ಆದ ಅರ್ಥವಿವರಣೆಯನ್ನು ನೀಡಿರುವರು. ಬೆಡಗಿನ ವಚನಗಳಿಗೂ ಸ್ವಾನುಭಾವದ ನೆಲೆಯಿಂದ ಅರ್ಥೈಸಿರುವರು. ಈ ಬಗೆಯ ಅಗಾಧ ಸಾಮರ್ಥ್ಯಕ್ಕೆ ಮೂಲ ಕಾರಣ ಶ್ರೀ ಗುರುವಿನ ಅನುಗ್ರಹ ಹಾಗೂ ಈ ಶರಣರ ನಿಜಾಚರಣ ಶೀಲಸಂಪನ್ನತೆ ಎಂದೆನ್ನಬಹುದು.

'ವಚನ ಪಿತಾಮಹ' ಫ. ಗು. ಹಳಕಟ್ಟಿಯವರಿಗೆ ವಾಙ್ಮಯ ಪರಿಶೋಧನ ಕಾರ್ಯದಲ್ಲಿ ಯಾರು ಮೂಲತಃ ಆಶೀರ್ವದಿಸಿ, ದೈವೀಸ್ಫೂರ್ತಿಯನ್ನು ಕರುಣಿಸಿರುವರೋ ಅದೇ ಮಹಿಮರಾದ ಹಾನಗಲ್ಲಿನ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳವರೇ ಚನ್ನಮಲ್ಲಪ್ಪನವರಿಗೂ ಅನುಗ್ರಹ ಗುರುಗಳಾಗಿ ಮಾರ್ಗದರ್ಶನ ನೀಡಿರುವುದು ಮನನೀಯ ಸಂಗತಿ. ಶ್ರೀ ಫ. ಗು. ಹಳಕಟ್ಟಿಯವರ ಹೆಸರು ಜನಜೀವನ, ಸಾಹಿತ್ಯದಲ್ಲಿ ಇಂದು ವಿಶ್ರುತವಿದೆ. ಆದರೆ ಕನ್ನಡ, ಮುಖ್ಯವಾಗಿ ವೀರಶೈವ ಸಮಾಜ, ಸಾಹಿತ್ಯಕ್ಕೆ ತಮ್ಮನ್ನೇ ಚಂದನದಂತೆ ಅರ್ಪಿಸಿಕೊಂಡು ಸ್ವಾನುಭಾವದ ಸೌರಭವನ್ನು ಎಲ್ಲೆಡೆ ಪಸರಿಸಿದ ಶ್ರೀ ಚನ್ನಮಲ್ಲಪ್ಪನವರ ಹೆಸರು ಇಂದಿಗೂ ಮರೆಯಾಗಿರುವುದು ವಿಷಾದಕರ. ಆ ಕಾರಣ ಈ ಮಹನೀಯರ ಬಗೆಗೆ ಸಂಸ್ಮರಣ ಗ್ರಂಥವನ್ನು ಪ್ರಕಟಿಸುವ ವಿಚಾರ ತುಂಬಾ ಒಳ್ಳೆಯದು. ಇದು ಈಗಾಗಲೇ ಆಗಬೇಕಾಗಿದ್ದ ಕಾರ್ಯ.

ಶ್ರೀ ಫ. ಗು. ಹಳಕಟ್ಟಿ, ಶ್ರೀ ಮಧುರಚನ್ನ, ಶ್ರೀ ಚನ್ನಮಲ್ಲಿಕಾರ್ಜುನ–ಈ ಒಬ್ಬೊಬ್ಬರ ಸೇವೆಯೂ ತಮ್ಮದೇ ಆದ ನಿಲವಿನಿಂದ ಪ್ರಭಾವಪೂರ್ಣವಾಗಿದೆ. ವಿಶ್ವವಿದ್ಯಾನಿಲಯಗಳು ಒಳಗೊಂಡಿರುವ ಸಂಶೋಧನ ಕೇಂದ್ರಗಳ ಮಹತ್ತ್ವದ ಮಣಿಹವನ್ನು ಮೀರಿಸುವಂತೆ ಈ ಪುಣ್ಯಪುರುಷರ ಕಾರ್ಯಸಾಧನೆಗಳ ವ್ಯಾಪ್ತಿ-ದೀಪ್ತಿಯಿದೆ.

ಇನ್ನಾದರೂ ನಾಡಿನ ಬಾಂಧವರು ಶ್ರೀ ಚನ್ನಮಲ್ಲಪ್ಪನವರ ಅಲಭ್ಯ ಕೃತಿಗಳ ಪುನರ್ಮುದ್ರಣ, ಪ್ರಸಾರ ಹಾಗೂ ಅವರು ಪ್ರಕಟಿಸಿದ್ದ 'ಸದ್ಧರ್ಮದೀಪಿಕೆ' ಸಂಚಿಕೆಗಳ ಸಂರಕ್ಷಣ ಕಾರ್ಯದತ್ತ ಜಾಗ್ರತರಾಗಲಿ. 'ನೂತನ ಪುರಾತನ' ಶ್ರೀ ಚನ್ನಮಲ್ಲಪ್ಪನವರ ಜೀವನ ದರ್ಶನ ನಮ್ಮೆಲ್ಲರ ಬಾಳಿಗೆ ಮಂಗಳ ರಕ್ಷೆಯಾಗಲಿ.

---

† ಮೊಗ್ಗೆಯ ಮಾಯಿದೇವ ಪ್ರಭುವಾಣಿ : ಶ್ರೀ ಚನ್ನಮಲ್ಲಿಕಾರ್ಜುನ. ಪ್ರ. ಶ್ರೀ ಮುರುಘಾಮಠ, ಧಾರವಾಡ. ಪುಟಸಂಖ್ಯೆ ೮೧ (೧೯೬೨)

# ಕಾಯಕಯೋಗಿ ಶ್ರೀ ಚನ್ನಮಲ್ಲಿಕಾರ್ಜುನರು

## ನೋಟಗಿ ಮಲ್ಲಿಕಾರ್ಜುನ, ಅಥಣಿ

ವಿಪುಲವಾದ ಈ ಪೃಥ್ವೀ ತಲದಲ್ಲಿ ಮಾನವ ಜೀವನದ ವಿಕಾಸಕ್ಕಾಗಿ ಯುಗ ಯುಗಾಂತರದಿಂದಲೂ ಅನೇಕ ಮಹಾನ್ ದ್ರಷ್ಟಾರರು ಆಗಿಹೋಗಿದ್ದಾರೆ. ಅವರೆಲ್ಲರೂ ಜನಕೋಟಿಯ ಹೃದಯ ಹೃದಯವನ್ನೂ ಪ್ರವೇಶಿಸಿ, ಅಜ್ಞಾನಾಂಧಕಾರವನ್ನು ತೊಲಗಿಸಿ ಅಲ್ಲಿ ಜ್ಞಾನಗಂಗೆಯನ್ನು ಓತಪ್ರೋತವಾಗಿ ಹರಿಯಿಸಿದ್ದಾರೆ.ಈ ಮಹಾತ್ಮರು ವಿಶ್ವಮಾನವತೆಯ ತತ್ವಪ್ರತಿಷ್ಠಾಪನೆಗಾಗಿ ತಮ್ಮ ಆತ್ಮಾರ್ಪಣವನ್ನೇ ಗೈದಿದ್ದಾರೆ. ಇಂತಹ ವಿಶ್ವಧರ್ಮ ಪ್ರತಿಷ್ಠಾಪಕರೂ ಪ್ರತಿಪಾದಕರೂ ಆದ ಮಹಾಪುರುಷರ ಶ್ರೇಣಿಯಲ್ಲಿ ಶ್ರೀ ಬಸವಾದಿ ಪ್ರಮಥರ ಸ್ಥಾನವು ಬಹಳ ಮಹತ್ವಪೂರ್ಣವಾದುದು. ಶಿವಶರಣರು ಮರ್ತ್ಯದ ಮಾನವರನ್ನು ಅಮೃತತ್ವದೆಡೆಗೆ ಕರೆದೊಯ್ಯಲು ಈ ಧರೆಗೆ ಬಂದವರು. ಮಹಾಗುರಿಯ ಬಳಿಗೆ ಸಾಗಿಸಲು ನಿಂದವರು. ಇಡಿಯ ಮಾನವ ಕುಲವನ್ನೇ ದೇವ ಕುಲವನ್ನಾಗಿ ಮಾರ್ಪಡಿಸಲು ಪ್ರಯತ್ನಿಸಿದವರು. ಅಂತೆಯೇ ಶಿವಶರಣರು ದಿವ್ಯ ಜೀವರತ್ನ ಜ್ಯೋತಿಗಳಾಗಿ ನಿತ್ಯವೂ ಲೋಕಕ್ಕೆ ಬೆಳಕನ್ನು ನೀಡುತ್ತಲಿರುವರು. ಮಾನವ ಕುಲಕ್ಕೆ ಕಲಂಕ ಪ್ರಾಯವಾಗಿ ಬಹುಕಾಲದಿಂದ ನಮ್ಮೀ ಭಾರತ ದೇಶದ ಜನತೆಯ ಆತ್ಮೋನ್ನತಿಗೆ ಆತಂಕವಾಗಿ ಅಡ್ಡಿಯನ್ನೊಡ್ಡುತ್ತಲಿದ್ದ, ಆ ಕಲುಷಿತ ವರ್ಣಾಶ್ರಮ ಧರ್ಮದ ಕಟ್ಟಳೆಯನ್ನೇ ಹರಿದೊಗೆದು, ಸ್ತ್ರೀ-ಪುರುಷ ಭೇದವಿಲ್ಲದೆ ಸರ್ವರಿಗೂ ಆತ್ಮ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟ ಶ್ರೇಯಸ್ಸು ನಮ್ಮೀ ಬಸವಾದಿ ಪ್ರಮಥರಿಗೇ ಸಲ್ಲಬೇಕು. ಈ ದೃಷ್ಟಿಯಿಂದ ಲೋಕದ ಮಹಾಪುರುಷರಲ್ಲಿ ಶಿವಶರಣರ ಸ್ಥಾನವು ಶ್ರೇಷ್ಠವಾಗಿದೆ; ಹಿರಿದಾಗಿದೆ. ಇಂತಹ ಮಹಾನುಭಾವಿಗಳಾದ ಶಿವಶರಣರ ತತ್ವಾನುಯಾಯಿಗಳಲ್ಲಿ ಶಿರಾಳಕೊಪ್ಪದ ಶ್ರೀ ಚನ್ನಮಲ್ಲಿಕಾರ್ಜುನರು ಒಬ್ಬರು. ಇವರು ಇದೇ ಇಪ್ಪತ್ತನೇ ಶತಮಾನದಲ್ಲಿ ನಮ್ಮ ಸಮಕಾಲದಲ್ಲಿ ಆಗಿಹೋದವರು. ಪತ್ರಿಕಾ ಪ್ರಪಂಚದಲ್ಲಿದ್ದು ವೀರಶೈವ ಧರ್ಮೋನ್ನತಿಗಾಗಿ, ಶಿವಶರಣರ ವಚನ ವಾಙ್ಮಯ ಪ್ರಕಟನೆ ಹಾಗೂ ಪ್ರಸಾರಕ್ಕಾಗಿ ಹಗಲಿರುಳೂ ಹಂಬಲಿಸುತ್ತ, ಕಾರ್ಯತತ್ಪರರಾಗಿ ದೇಹವನ್ನು ಚಂದನದಂತೆ ತೇಯಿದು ಸವಿಸಿ ಸೌಗಂಧವನ್ನು ಬೀರಿದವರು. ಅಂತೆಯೇ ಶ್ರೀ ಚನ್ನಮಲ್ಲಿಕಾರ್ಜುನರ ದಿವ್ಯ ಜೀವನವು ಇಂದು ನಮ್ಮಗಳಿಗೆ ಆದರ್ಶಪ್ರಾಯವಾಗಿದೆ.

ಇವರು ಮೈಸೂರು ಪ್ರಾಂತಕ್ಕೆ ಸೇರಿದ "ಶಿರಾಳಕೊಪ್ಪ" ಊರಿನವರು. ಮೈಸೂರು ಸರ್ಕಾರದ ಕನ್ನಡ ಶಾಲೆಯಲ್ಲಿ ಕೆಲವು ಕಾಲ ಶಿಕ್ಷಕರಾಗಿ ದುಡಿದು ನಿವೃತ್ತ

ರಾದರು. ಇವರಿಗೆ ಕನ್ನಡ-ಸಂಸ್ಕೃತ ಮತ್ತು ಇಂಗ್ಲೀಷ ಭಾಷೆಗಳಲ್ಲಿ ತುಂಬಾ ಪಾಂಡಿತ್ಯ ವಿತ್ತು. ಹಾಗೆಯೇ ಕರ್ನಾಟಕದ ವಿಖ್ಯಾತ ಶಿವಾನುಭಾವಿಗಳೂ, ನೈತಿಕಾಚರಣೆಯಲ್ಲಿ ಮುಕುಟಪ್ರಾಯರೂ, ಹೆಸರಾಂತ ಸಾಹಿತಿಗಳೂ ಎನಿಸಿದ್ದರು. ಶ್ರೀ ಹಾನಗಲ್ಲ ಸ್ವಾಮಿ ಗಳವರಲ್ಲಿ ಅನುಭಾವವನ್ನು ಪಡೆದುಕೊಂಡ ಹಲವರಲ್ಲಿ ಇವರೇ ಅಗ್ರಗಣ್ಯರು. ಈ ಮೊದಲೇ ಸುಮಾರು ೨೫ ವರ್ಷಗಳ ದೀರ್ಘಕಾಲದವರೆಗೆ ಪತ್ರಿಕಾವ್ಯವಸಾಯವನ್ನು ಕೈಗೊಂಡು ತಮ್ಮ "ಸದ್ಧರ್ಮದೀಪಿಕೆ"ಯ ಮುಖಾಂತರ ನಾಡಿನಲ್ಲೆಲ್ಲ ತಮ್ಮ ಅಪಾರ ವಾದ ಧರ್ಮಜ್ಞಾನವನ್ನು ಬಿತ್ತರಿಸಿ, ಕನ್ನಡಿಗರ ಚಿರಪರಿಚಿತ ವ್ಯಕ್ತಿಗಳೆನಿಸಿದರು. ಇವರನ್ನರಿಯದ ಕನ್ನಡಾಭಿಮಾನಿ ಓರ್ವನೂ ಇಲ್ಲವೆಂದೇ ನಾವು ಧಾರಾಳವಾಗಿ ಹೇಳ ಬಹುದು.

ಏಕೆಂದರೆ ಇವರ "ಕನ್ನಡ ಶಿವಯೋಗ ಪ್ರದೀಪಿಕೆ" (ಎಂಟುನೂರು ವರ್ಷಗಳಿಂದ ಅರ್ಥವಾಗದೆ ಇದ್ದ) "ಅಕ್ಕಮಹಾದೇವಿಯ ವಚನಾರ್ಥ" "ಯೋಗಾಂಗ ತ್ರಿವಿಧಿ" "ಶ್ರೀ ಬಸವೇಶ್ವರನ ಕಾಲ" "ಶ್ರೀ ರೇವಣಸಿದ್ಧರು" ಈ ಮೊದಲಾದ ಅನೇಕ ಧರ್ಮ ಗ್ರಂಥರತ್ನಗಳ ಪ್ರಕಟನೆಯಿಂದ ಇವರನ್ನು ನಾವು ಸಹಜವಾಗಿ ತಿಳಿಯಬಹುದಾಗಿದೆ.

ಶ್ರೀ ಕೋರಿ ಚನ್ನಮಲ್ಲಿಕಾರ್ಜುನಪ್ಪನವರು ಅತ್ಯಂತ ಸರಳ ಸಾದಾ ಜೀವಿಗಳಾ ಗಿದ್ದರು. ಅವರ ಶರೀರವು ನೋಡಲಿಕ್ಕೆ ಅಷ್ಟು ಅಂದವಾಗಿರಲಿಲ್ಲ. ಒಂದು ಕಣ್ಣಿಲ್ಲ, ಒಂದು ಕೈಯಿಲ್ಲ, ನಿಲವಿನಲ್ಲಿಯೂ ತೀರ ಕಿರಿಯರಾಗಿದ್ದರು. ಆದರೆ ಅವರ ಕಿರಿದಾದ ತಲೆಯಲ್ಲಿ ತುಂಬಿದ ಜ್ಞಾನವು ಮಾತ್ರ ಅತ್ಯಂತ ಹಿರಿದಾಗಿ ಎಲ್ಲರನ್ನೂ ಬೆರಗುಗೊಳಿಸು ವಂತಿತ್ತು. ಇವರಲ್ಲಿ ಕೂಲಂಕಷವಾದ ವಿಮರ್ಶ ಶಕ್ತಿಯು ಜನ್ಮತಃ ಹುದುಗಿಕೊಂಡಿತ್ತು. ಅಂತೆಯೇ ಇವರು ಯಾವದೇ ವಿಷಯವನ್ನು ವಿಮರ್ಶೆಗೆ ತೆಗೆದುಕೊಂಡಾಗ, ಅದನ್ನು ಅನುಭಾವದ ಒರೆಗಲ್ಲಿಗೆ ಹಚ್ಚಿ ನೋಡದೆ ಬಿಡುತ್ತಿರಲಿಲ್ಲ. ಆ ವಿಷಯವನ್ನು ಚೆನ್ನಾಗಿ ಚರ್ವಿತಚರ್ವಣಮಾಡಿ ಅರೆದು ಕುಡಿಸುತ್ತಿದ್ದರು. ಆಮೇಲೆ ಅದರ ಸವಿ ಯನ್ನು ಜನತೆಗೆ ಹೀಗಿದೆ ಎಂದು ಅರುಹುತ್ತಿದ್ದರು. ನಮ್ಮ ಸಮಕಾಲದಲ್ಲಿ ಇಂತಹ ವಿಮರ್ಶ ವಿಚಕ್ಷಣರೆನಿಸಿದ ಮಹಾನುಭಾವಿಗಳನ್ನು ಕಾಣುವುದೇ ದುರ್ಲಭವೆಂದು ಹೇಳ ಬೇಕು. ಸುಮಾರು ೨೦ ವರ್ಷಗಳಿಂದಲೂ ಪಿತೃಸಮಾನರಾದ ಶ್ರೀ ಚನ್ನಮಲ್ಲಿಕಾರ್ಜುನ ರನ್ನು ನಾವು ಚೆನ್ನಾಗಿ ಬಲ್ಲೆವು. ಪತ್ರಿಕೆಯ ವಿಷಯವಾಗಿ ಅವರಿಂದ ಬರೆದ ಓಲೆಗಳು ನಮಗೆ ಆಗಾಗ ಬರುತ್ತಿದ್ದವು. "ಎಲ್ಲಾ ಪುರಾತನರ ವಚನಗಳು" ಎಂಬೀ ಪ್ರಾಚೀನ ತಾಳೇಗರಿ ಓಲೆಯ ಪ್ರತಿ ಒಂದು, ನಮ್ಮ ಅಥಣಿಯಲ್ಲಿನ ಶ್ರೀ ಮೋಟಗಿ ಮಠದಲ್ಲಿ ಇದ್ದುದನ್ನು ತಮ್ಮ "ಸದ್ಧರ್ಮದೀಪಿಕೆ" ಕಾರ್ಯಾಲಯಕ್ಕೆ ಕಳಿಸಿಕೊಡುವಂತೆ ನಮಗೆ ಪತ್ರವನ್ನೂ ಕೂಡ ಶ್ರೀ ಚನ್ನಮಲ್ಲಿಕಾರ್ಜುನರು ಬರೆದಿದ್ದರು. ಅವರ ಹಸ್ತಾಕ್ಷರ ಗಳನ್ನು ನೋಡಲಿಚ್ಛಿಸುವವರು ನಮ್ಮಲ್ಲಿ ಆ ಓಲೆಯಲ್ಲಿನ "ಕನ್ನಡ" ಲಿಪಿಯನ್ನು ಕಂಡು ದರ್ಶಿಸಬಹುದು. ಒಟ್ಟಾರೆ ಅವರ ಓಲೆಯಲ್ಲಿನ ಒಂದೊಂದು ಶಬ್ದ, ಒಂದೊಂದು

ಅಮೃತಬಿಂದುವೆಂದು ಹೇಳಬಹುದು. ಅವರ ಶರೀರವ ಪ್ರತಿ ರೋಮರಂಧ್ರದಿಂದ ಶಿವಶರಣ ವಾಙ್ಮಯದ ಸ್ಫುರಣವಾಗುತ್ತಲಿತ್ತು. ಆ ಸ್ಫುರಣದಿಂದ ಸಮಾಜಕ್ಕೆ ಅಮೃತಸೇಚನೆಯಾಗುತ್ತಲಿತ್ತು. ಕೊನೆಯ ಉಸಿರಿನವರೆಗೂ ಕಾಯಕ ದುರಂಧರರಾಗಿ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಸಾಹಿತ್ಯಿಕ ಹೀಗೆ ಹಲವಂದದಲ್ಲಿ ಸೇವೆ ಸಲ್ಲಿಸುತ್ತಲೇ ಬಂದರು. ಇಂತಹ ದಿವ್ಯ ಜೀವನಪಥದಲ್ಲಿ ಸಾಗಿಹೋದ ಶ್ರೀ ಚನ್ನಮಲ್ಲಿಕಾರ್ಜುನರಂತಹ ಮಹಾನುಭಾವಿಗಳು ನಿಷ್ಕಾಮ ಕಾಯಕ ಯೋಗಿಗಳು ಇಂದು ನಮಗೆ ಸಿಕ್ಕಬಹುದೇ? ಎಂಬುದು ಮಾನವಸಮಾಜದ ಎದುರಿಗೆ ನಿಂತುಕೇಳುವ ಪ್ರಶ್ನೆಯಾಗಿದೆ. ಏಕೆಂದರೆ ಇಂದಿನ ಯುಗ ಬರಿಯ ಮಾತಿನ ಯುಗ. ನುಡಿಯಂತೆ ನಡೆಯಿಲ್ಲ; ನಡೆಯಂತೆ ನುಡಿಯಿಲ್ಲ. ನಡೆಯಬೇಕಾದ ಸದಾಚರಣೆಯಂತೂ ಮೊದಲೇ ಇಲ್ಲ. ಆದ್ದರಿಂದಲೇ ಇಂದಿನ ಜಗತ್ತು ಅಶಾಂತಿಯ ಆಗರವಾಗಿವೆ. ಮಾನವ ಸಮಾಜಕ್ಕೆ ಆತ್ಮೋನ್ನತಿಗಾಗಿ ಬೇಕಾಗಿದ್ದ ಧಾರ್ಮಿಕ ಹಿನ್ನೆಲೆಯೇ ಇಂದು ಅಳಿದುಹೋಗಿದೆ. ಪ್ರತಿಯೊಂದು ವ್ಯಕ್ತಿ ಸ್ವಾರ್ಥದ ಅಗ್ನಿಕುಂಡವನ್ನು ನಿರ್ಮಿಸುತ್ತಲಿದ್ದಾನೆ. ಅದರಿಂದ ಜಗತ್ತು ವಿನಾಶದ ರಕ್ಕಸನ ದವಡೆಗೆ ತುತ್ತಾಗಿದೆ. ಈ ಕಾರ್ಗತ್ತಲೆಯಲ್ಲಿ ಗೊತ್ತುಗುರಿಯಿಲ್ಲದೆ ಸಿಕ್ಕಿಬಿದ್ದ ಜಗತ್ತಿಗೆ, ಒಂದೇ ಒಂದು ನಿವಾರಣೋಪಾಯವೆಂದರೆ ಶಿವಶರಣರ ಸದ್ಧರ್ಮಯುಕ್ತ ಕಾಯಕ ಮಾರ್ಗ ! ನಿಸ್ವಾರ್ಥದೊಡನೆ ಪರಹಿತಾರ್ಥ ಸಾಧಿಸುತ್ತ ಧಾರ್ಮಿಕ ಹಿನ್ನೆಲೆಯಲ್ಲಿ "ಪರೋಪಕಾರಾಯಮಿದಂ ಪುಣ್ಯ ಶರೀರಂ" ಎಂಬೀ ಆರ್ಯೋಕ್ತಿಗನುಸಾರವಾಗಿ ಮನುಕುಲವು ಸಾಗಿದಾಗ ಅಂದೇ ಶಾಂತಿ ಲಭಿಸಬಹುದು. ಅಲ್ಲಿನವರೆಗೆ ಈ ಅಶಾಂತಿ ಜಗತ್ತಿಗೆ ಅನಿವಾರ್ಯ.

ಆದರೆ ಇಷ್ಟೇ ಸದಾವಕಾಲದಲ್ಲಿಯೂ ಸತ್ಯ ಪ್ರತಿಷ್ಠಿತವಾಗಬೇಕು. ಇದುವೇ ನಮ್ಮ ವಿಚಾರ ಮತ್ತು ಹೆಬ್ಬಯಕೆ. ಸಮಾಜ ಬಂಧುಗಳು ಶ್ರೀ ಚನ್ನಮಲ್ಲಿಕಾರ್ಜುನರಂತಹ ವ್ಯಕ್ತಿಗಳನ್ನು ಅವರ ಜೀವಿತ ಕಾಲದಲ್ಲಿಯೇ ಅರ್ಥಮಾಡಿಕೊಳ್ಳಬೇಕು. ಸತ್ಯ ಇದು ಕಾಲಪ್ರವಾಹದ ಸುಳಿಯಿಂದ ಆದರ ಗರ್ಭವಲ್ಲಡಗಿವರೂ, ಅದು ಎಂದಿಲ್ಲಾದರೊಂದು ದಿವಸ ಪ್ರಸ್ಫುಟವಾಗಿ ಪ್ರಜ್ವಲಿಸಿ ಪ್ರಕಾಶಮಾನವಾಗಿ ಬೆಳಗುವುದು ನಿಶ್ಚಯ. ಅದುವೇ ಬಹುಕಾಲ ಬಾಳಬಲ್ಲದು. ಶಾಶ್ವತವಾಗಿ ನಿಲ್ಲಬಲ್ಲದು.

ಹರಿಹರ ಮಹಾಕವಿಯು ತನ್ನ ಅಳಿಯನಾದ ರಾಘವಾಂಕನಿಗೆ–ಸತ್ತು ಹುಟ್ಟುವ ನರರಿಗಾಗಿ ನಿನ್ನ ನಾಲಿಗೆಯನ್ನು ಬಳಸದಿರು. ಆದರೆ ಶಿವಶರಣರ ಅಮರ ಜೀವನವನ್ನು ಬಣ್ಣಿಸಲು ಮಾತ್ರ ಮರೆಯದಿರು. ಇದನ್ನು ಕುರಿತು—

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ
ತನ ತನಗಿಂದ್ರ ಚಂದ್ರ ರವಿ ಕರ್ಣದ ಧೀಚಿ ಬಲೀಂದ್ರರೆಂದು ನೀ ॥
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಪರ್ನಿಶಂ ।
ನೆನೆ ಪೊಗಳರ್ಚಿಸೆಮ್ಮ ಘನ ಸೊಂಪಿನ ಹಂಪೆಯಾಳ್ದನಂ ।"

ಹೀಗೆ ಹೇಳುತ್ತಾನೆ. ಆದ್ದರಿಂದ ಈ ಹರಿಹರ ಮಹಾಕವಿಯು ಉದಾತ್ತ ವಿಚಾರವು ಈ ನಮ್ಮ ಮಹಾನುಭಾವರಾದ ಶಿವಶರಣ ಚನ್ನಮಲ್ಲಿಕಾರ್ಜುನರ ವಿಷಯವನ್ನು ವಿದಿತಪಡಿಸಲು ನಮಗೆ ಕಾರಣವಾಗಿದೆಯೆಂದರೆ ತಪ್ಪಾಗಲಿಕ್ಕಿಲ್ಲವಷ್ಟೇ !

ಒಂದು ಸಮಯದಲ್ಲಿ ಭಕ್ತಿಭಂಡಾರಿ ಶ್ರೀ ಬಸವಣ್ಣನವರು ತಮ್ಮ ವಚನಾಮೃತವಲ್ಲಿ–'ಮಾನವನು ಸುಲಭ ಮಾರ್ಗದಲ್ಲಿ ಸಹಜವಾಗಿ ಮುಕ್ತಿಯನ್ನೆದುವುದಕ್ಕೆ ಮೊದಲ ಕಾರಣವಾದುದು ಶರಣರ ಸಂಗವು.' ಇದುವೇ ಶರಣ ಜೀವನದ ಪ್ರಥಮ ಸೋಪಾನ.

"ಮಡಕೆಯ ಮಾಡುವರೇ ಮಣ್ಣೇ ಮೊದಲು
ತೊಡಗಿಯ ಮಾಡುವರೇ ಹೊನ್ನೇ ಮೊದಲು
ಶಿವಪಥವನರಿವಡೆ ಗುರುಪಥವೇ ಮೊದಲು
ಕೂಡಲಸಂಗಮದೇವನರಿವಡೆ ಶರಣರ ಸಂಗವೇ ಮೊದಲು ॥"

ಎಂದು ಹೇಳಿರುತ್ತಾರೆ. ಆದ್ದರಿಂದ ಇಂತಹ ಶಿವಶರಣರ ವಿಶಾಲ ಜೀವನದ ಮಂಗಲಮಯ ಉದಾತ್ತ ವಿಚಾರಗಳು ಇಂದು ನಮಗೆ ಬೇಕಾದುದು ಅನಿವಾರ್ಯ.

೧. ಮಾನವನ ಜೀವನ ವೃತ್ತಿಯಲ್ಲಿ ಸುತ್ತಿ ಸುಳಿಯುವ ಪಾಶವೀವೃತ್ತಿಯು ಇಂದು ಉಳಿಯದೆ ಅಳಿಯಬೇಕು. ಹೃದಯಭೂಮಿ ಹಸನಾಗಬೇಕು.

೨. ಈ ಧರಾಮಂಡಲದಲ್ಲಿ ದೈವಿಕ ಭಾವನೆಯು ಜನಜನಿತವಾಗಿ ಜೀವಕೋಟಿಯಲ್ಲಿ ಒಡಮೂಡಿ ಬರಬೇಕು. ಧಾರ್ಮಿಕ ಬೀಜಗಳ ಬಿತ್ತನೆಯಾಗಬೇಕು.

೩. ಶಿವಶರಣರ ವಚನ ವಾಙ್ಮಯ ಬೆಳೆದು ಹುಲುಸಾಗಬೇಕು. ವೀರಶೈವ ಧರ್ಮ ವಿಶ್ವಧರ್ಮವಾಗಬೇಕು. ವಿಶ್ವಬಂಧುತ್ವ ರೂಪದಲ್ಲಿ ನಿತ್ಯವೂ ಅದರ ಪ್ರಸಾರವಾಗಬೇಕು.

೪. ಸತ್ಯದ ಸುಧೆಯು ಸುರಿದು ಜೀವನದ ಪುನರುತ್ಥಾಪನೆಯಾಗಬೇಕು. ಶಿವಶಕ್ತಿಯಾವಿಷ್ಕಾರದಿಂದ ಸೃಷ್ಟಿಯು ಮೇಲೆ ದೇವರಾಜ್ಯವಾಗಬೇಕು.

ಹೀಗೆ ಶ್ರೀ ಚನ್ನಮಲ್ಲಿಕಾರ್ಜುನರ ಭಾವಮಂದಿರದ ನಾಲ್ಕು ನಿಟ್ಟುಗಳಿವು. ಈ ಸಕಲ ಪ್ರಪಂಚದಲ್ಲಿ ಇವರ ವಿಚಾರದಂತೆ ಮಹಾಕ್ರಾಂತಿಯಾದಾಗ ಮಾತ್ರ, ಅವರ ಭಾವಮಂದಿರದ ರಚನೆಯು ಮೇಲು ಚಪ್ಪರದೊಂದಿಗೆ ಮುಗಿದಂತೆ. ಇದಿಷ್ಟು ಇವರ ಸಂಕ್ಷೇಪ ವಿಚಾರ.

ಇನ್ನು ಇವರ ಜೀವನವು ಸಹಜ ಸರಳವಾದುದು! ಸೌಜನ್ಯದಿಂದ ಸುಂದರವಾಗಿ ವಿಜಯಯುತವಾದುದು. ಸರ್ವಜ್ಞನ ಅಭಿಪ್ರಾಯದಂತೆ "ಆಡದೆ ಮಾಡುನವರು ರೂಢಿಯೊಳಗುತ್ತಮರು" ಎನ್ನುವ ಹಾಗೆ ಏನೊಂದು ಸದ್ದುಗದ್ದಲವಿಲ್ಲದೆ ಕಾರ್ಯ ಮಾಡುವ ಸ್ವಭಾವ ಇವರದು. ಆಡಂಬರದ ಬಾಳಿನಿಂದ ಆದರ್ಶ ಜೀವನ ಜ್ಯೋತಿಯನ್ನು ಬೆಳಗಿಸಲಾಗುವುದಿಲ್ಲ. ನಿರಾಡಂಬರ ಜೀವನದಿಂದ ಮೊದಲು ನಡೆಯನ್ನೇ

ಪ್ರಧಾನವಾಗಿಟ್ಟುಕೊಂಡು ಆಮೇಲೆ ನುಡಿಯಬೇಕು. ಅನುಭವದಲ್ಲಿ ಬೆರೆಯಬೇಕು. ಅಮೃತ ರಸಪಾನಮಾಡಬೇಕು. ಅಂತೆಯೇ ಆ ಸತ್ವಲಾಮೃತವನ್ನು ಜಗದ ಜೀವಿಗಳಿಗೆ ಕುಡಿಸಬೇಕು–ಎಂಬುದೇ ಇವರ ರೀತಿ-ನೀತಿಗಳ ರಹಸ್ಯವಾಗಿತ್ತು. ಹಾಗೆಯೇ ಅವರ ಜೀವನ ನೌಕೆ ಸಾಗಿತ್ತು.

ಇದು ಅಲ್ಲದೆ ಇವರು ನಿತ್ಯವೂ ಲಿಂಗಪೂಜಾನಿಷ್ಟರಾಗಿ ಶಿವಾನಂದ ಶಾಂತಿ ಸುಖ ವನ್ನು ಅನುಭವಿಸುವವರಾಗಿದ್ದರು. ಶ್ರೀ ಚನ್ನಮಲ್ಲಿಕಾರ್ಜುನರು ದಿವ್ಯಜೀವನಪಥ ದಲ್ಲಿ ನಡೆಯುವವರು. ಅವರು ನುಡಿದಂತೆ ನಡೆಯುವವರು. ನಡೆಯಿಲ್ಲದೆ ತ್ರಿಕಾಲ ದಲ್ಲೂ ನುಡಿಯಲಾರರು.

ಈ ನಡೆ ನುಡಿ ಮಹತಿಯನ್ನು ಕುರಿತು ಶ್ರೀ ಬಸವೇಶ್ವರರು :

"ಭಕ್ತಿ ಸುಭಾಷೆಯ ನುಡಿಯ ವರ್ತಿಸಿ ನುಡಿವೆ
ನುಡಿದಂತೆ ನಡೆವೆ, ನಡೆಯೊಳಗೆ ನುಡಿಯ ಪೂರೈಸುವೆ
ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ
ಒಂದು ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು
ಹೋಗು ಕೂಡಲಸಂಗಮದೇವಾ"

ಹೀಗೆ ಬಹು ಮಾರ್ಮಿಕವಾಗಿಯೂ ಹೃದಯಂಗಮವಾಗಿಯೂ ಮನಂಬುಗುವ ರೀತಿಯಲ್ಲಿ ನಿರ್ದೇಶ ಮಾಡಿದ್ದಾರೆ ಅಣ್ಣನವರು. ಅದರಂತೆ ನಡೆ-ನುಡಿ ಒಂದಾಗಿ ಕಾಯಕರೂಪದಿಂದ ಕಾರ್ಯೋನ್ಮುಖರಾದವರು ನಮ್ಮ ಶ್ರೀ ಚನ್ನಮಲ್ಲಿಕಾರ್ಜುನನ ಶರಣರು. ಕೇವಲ ಉದರ ಪೋಷಣೆಗಾಗಿ ಅಲ್ಲ. ನಮ್ಮ ನಿಮ್ಮಗಳಿಗಾಗಿ ಮಾತ್ರ ದುಡಿದರು. ಇಂದಿನ ಕಾಲದಲ್ಲಿ ನಾವು ಅದೆಷ್ಟೋ ಜನರು ಪತ್ರಿಕಾವೃತ್ತಿಯನ್ನು ಕೈಗೊಂಡುದನ್ನು ಕಾಣುತ್ತೇವೆ. ಆದರೆ ಇಂತಹ ಉದಾತ್ತ ಧ್ಯೇಯವನ್ನಿಟ್ಟು ಸಾಗಿ ದವರು ಸಿಕ್ಕುವುದು ದುರ್ಲಭ.

ಇಂದು ನಾವು ನೂರಾರು ಗ್ರಂಥಗಳನ್ನು ಬರೆದ ಮಾತ್ರಕ್ಕೆ ಜ್ಞಾನಿಗಳಾಗಲಿಲ್ಲ. ಒಂದು ಜ್ಞಾನಿಗಳಾದರೂ ಅನುಭವವಿಲ್ಲದ ಆ ಜ್ಞಾನವು ದೇಹವಿಲ್ಲದ ಪ್ರಾಣದಂತೆ ವ್ಯರ್ಥವೇ ಸರಿ! ಆದುದರಿಂದ ಲಿಂಗಾಂಗ ಸಾಮರಸ್ಯ ಜ್ಞಾನಕ್ಕೆ ಅನುಭವದ ಬೆಳಕು ಅನಿವಾರ್ಯ.

ಶ್ರೀ ಚನ್ನಮಲ್ಲಿಕಾರ್ಜುನರು ಶಿವಾನುಭವಿಗಳಾಗಿ ತುಂಬು ಜೀವನವನ್ನು ಸಾಗಿ ಸುತ್ತ ಬಂದರು. ಇಂಥ ಪುಣ್ಯಜೀವಿಗಳು ಈ ನಮ್ಮ ಕನ್ನಡ ನಾಡಿನಲ್ಲಿ ಇನ್ನೂ ಹೆಚ್ಚಾಗಿ ಇರಬೇಕಾಗಿತ್ತು. ಆದರೆ ನಮ್ಮ ದುರ್ಭಾಗ್ಯಕ್ಕಾಗಿ ಇಲ್ಲವೆಂದೇ ತಿಳಿಯಬಹು ದಾಗಿದೆ. ಏಕೆಂದರೆ ವಚನಕಾರರು ಹೇಳುವಂತೆ "ಸಾವಿರಕ್ಕೆ ಒಬ್ಬ ಸತ್ಯವಂತ! ಲಕ್ಷಕ್ಕೆ ಒಬ್ಬ ಶಿವಭಕ್ತ! ಕೋಟಿಗೊಬ್ಬ ಶರಣ!" ಹೀಗೆ ಎಂದಿರುವಾಗ ಇಂಥ ಪುಣ್ಯಾತ್ಮರಾದ ಶಿವಶರಣರು ನಮಗೆ ಸಿಕ್ಕಬಹುದೇ ?

ಇನ್ನು ಇವರ ಆಚಾರ ಸದಾಚಾರ! ವಿಚಾರ ನಿರ್ಮಲ ವಿಚಾರ! ಸಂಶೋಧನೆ ಸತ್ಯಸಂಶೋಧನೆ! ಇವರು ವಾಸಿಸುವ ನಿಲಯ ಕೇವಲ ಶಾಂತಿ ನಿಲಯ! ಇವರ ಸಾಹಿತ್ಯ ಜ್ಞಾನಾನುಭವ ಸಾಹಿತ್ಯ! ಇವರ ಕೃತಿ ಸಾಹಸ ದೈವದೃತಿ ಸಾಹಸ! ಹೀಗೆ ಒಂದಲ್ಲ ಎರಡಲ್ಲ ಅಸಂಖ್ಯ ಗುಣವರ್ಣನೆಯು ನಮ್ಮ ಬುದ್ಧಿಗೆ ನಿಲುಕದ ವಿಷಯುವಾಗಿದೆ.

ಇವರ "ಶ್ರೀ ಬಸವೇಶ್ವರನ ಕಾಲ" ಎಂಬ ಗ್ರಂಥವನ್ನು ಕುರಿತು ಬರೆಯಲಾದ ಕೆಲವು ವಿದ್ವಾಂಸರ ಅಭಿಪ್ರಾಯಗಳು ಈ ಕೆಳಗಿನಂತೆ ಇವೆ.

"......ಅನೇಕ ಉದ್ಗ್ರಂಥಗಳು ಬೆಳಕನ್ನು ಕಂಡದ್ದು ಇವರಿಂದ. ಎಪ್ಪತ್ತರ ಪ್ರಾಯವಾದರೂ ಇಪ್ಪತ್ತು ವರುಷದ ಯುವಕರಿಗಿರುವ ಉತ್ಸಾಹ ಇವರಿಗಿದೆ. ಇವರು ಆಡುವ ಮಾತುಗಳು, ಬರೆಯುವ ಲೇಖನಗಳು ಇವರ ಸ್ವಂತ ಅನುಭಾವದ ಹೊಳಪನ್ನು ತಳೆದಿರುತ್ತವೆ. ಈ ಇಳಿ ವಯಸ್ಸಿನಲ್ಲಿಯೂ ಇವರಲ್ಲಿ ಸೇವೆಯ ಆಶೆ ಕವಲೊಡೆಯುತ್ತಲೇ ಇದೆ. ಆಡಂಬರವಿಲ್ಲದೆ ಸದ್ದು ಗದ್ದಲವಿಲ್ಲದೆ ಕೆಲಸಮಾಡುವ ಸ್ವಭಾವ ಇವರದು..........."

ದಿ. ೨೨-೪-೧೯೪೯ — **ಹೆಚ್. ದೇವೀರಪ್ಪನವರು, ಮೈಸೂರು**

"........ಈ ಗ್ರಂಥದಲ್ಲಿ ಗ್ರಂಥಕರ್ತರು ಅನುಸರಿಸಿದ ವಾದಸರಣಿ ಶಾಸ್ತ್ರ ಶುದ್ಧವೂ ತರ್ಕಬದ್ಧವೂ ಆಗಿದೆ. ಬಸವಣ್ಣನವರ ಬಗೆಗೆ ಶಾಸನಾಧಾರಗಳು ಸಾಕಷ್ಟು ದೊರೆಯುವುದಿಲ್ಲವೆಂದು ಇದುವರೆಗೆ ಪಂಡಿತರಲ್ಲಿದ್ದ ಅಭಿಪ್ರಾಯಕ್ಕೆ ಈ ಗ್ರಂಥದಿಂದ ಸರಿಯಾದ ಉತ್ತರ ದೊರೆಯುವುದೆಂಬಲ್ಲಿ ಸಂದೇಹವಿಲ್ಲ........"

ದಿ. ೨೨-೪-೧೯೪೯ — **ಶ್ರೀ ಶಿ. ಶಿ. ಬಸವನಾಳ, ಧಾರವಾಡ**

"ಶ್ರೀ ಚನ್ನಮಲ್ಲಿಕಾರ್ಜುನರ "ಬಸವಣ್ಣನವರ ಕಾಲ" ಎಂಬ ಗ್ರಂಥವು ವಿಮರ್ಶಾತ್ಮಕವಾದುದಾಗಿದೆ. ಬಸವೇಶ್ವರನ ಕಾಲ ಒಂದೇ ಅಲ್ಲದೆ ಬಸವೇಶ್ವರನ

---

ಟೀಪು :– ಶ್ರೀ ಚನ್ನಮಲ್ಲಿಕಾರ್ಜುನರು ಮೊದಲು "ಸದ್ಧರ್ಮದೀಪಿಕೆ" ಮಾಸ ಪತ್ರಿಕೆಯನ್ನು ಹಾವೇರಿಯಲ್ಲಿ ಲಿಂ॥ ಶ್ರೀ ಶಿವಬಸವಸ್ವಾಮಿಗಳವರ ಆಶ್ರಯದಲ್ಲಿ ಹೊರಡಿಸುತ್ತಿದ್ದು, ಇತ್ತೀಚೆಗೆ ಅದನ್ನು ಮೈಸೂರಿನಿಂದ ಪ್ರಕಟಿಸುತ್ತಿದ್ದರು. "ಸದ್ಧರ್ಮದೀಪಿಕೆ" ಧರ್ಮಜಾಗ್ರತಿಯ ಪ್ರತೀಕವಾಗಿತ್ತು. ವಚನ ವಾಙ್ಮಯ ಪ್ರಸಾರದ ದ್ಯೋತಕವಾಗಿ "ಸರ್ವ ಪುರಾತನರ ವಚನಗಳು" ಈ ಪತ್ರಿಕೆಯಲ್ಲಿ ಕೆಲವು ಪ್ರಕಟವಾಗುತ್ತಲಿದ್ದವು. ಈ ಎಲ್ಲ ಪುರಾತನರ ವಚನಗಳ ಕಟ್ಟಿನಲ್ಲಿ ವಚನಗಳು ಈಗ ಧಾರವಾಡದ "ಕರ್ನಾಟಕದ ವಿಶ್ವವಿದ್ಯಾಲಯ"ದಿಂದ ಡಾ. ಆರ್. ಸಿ. ಹಿರೇಮಠ ಎಂ.ಎ. ಅವರ ಸಂಪಾದಕತ್ವದಲ್ಲಿ "ಸಕಲ ಪುರಾತನರ ವಚನಗಳು" ಎಂಬೀ ಶಿರೋನಾಮೆಯಿಂದ ಇದೀಗ ಪ್ರಕಟವಾಗಿ ಹೊರ ಬಂದಿದೆ. ಡಾ. ಆರ್. ಸಿ. ಹಿರೇಮಠ ಅವರಿಂದ ನಮ್ಮೀ ಬಸವಾದಿ ಶರಣರ ದಿವ್ಯ ವಚನ ವಾಙ್ಮಯವು ಹೊರ ಬಂದು "ವೀರಶೈವ ಸಮಾಜ"ಕ್ಕೆ ಅಷ್ಟೇ ಏಕೆ ಇಡಿಯ ಭಾರತಕ್ಕೆ ಮಹದುಪಕಾರವಾಗಿದೆ. — ಲೇ.

ಜನನದಿಂದ ಅವನು ಲಿಂಗೈಕ್ಯವಾಗುವವರೆಗಿನ ಅನೇಕ ವಿಷಯಗಳು ಅವರ ವಿವೇಚನೆಗೊಳಗಾಗಿವೆ. ಅವರ ವಿವೇಚನೆಯು ಭಿನ್ನಾಭಿಪ್ರಾಯಗಳಿಗೆ ಅವಕಾಶವಿರುವ ಸಂಗತಿಗಳ ಮೇಲೆ ಹೊಸ ದೃಷ್ಟಿಯನ್ನು ಬೀರಿದೆ..."

**—ಮ. ರಾ. ಟಿ. ಎನ್. ಮಲ್ಲಪ್ಪನವರು ಜಡ್ಜ,**
ಮೈಸೂರು ಹೈಕೋರ್ಟ ಬೆಂಗಳೂರು

ಇದಕ್ಕೆ ಮೈಸೂರು ಸಂಸ್ಥಾನದ ಆರ್ಕಿಯಾ ಲಾಜಿಕಲ್ ಇಲಾಖೆಯ ನಿವೃತ್ತ ಅಸಿಸ್ಟೆಂಟ್ ಡೈರೆಕ್ಟರರಾದ ಆರ್. ರಾಮರಾವರವರು ಮುದ್ದಾದ ಮುನ್ನುಡಿ ಬರೆದಿದ್ದಾರೆ. ಹೀಗೆ ಅನೇಕಾನೇಕ ವಿದ್ವಾಂಸರ ಮನ್ನಣೆಗೆ ಪಾತ್ರರಾದವರು ಶ್ರೀ ಚನ್ನಮಲ್ಲಿಕಾರ್ಜುನರು. ಇವರ ಪ್ರತಿಯೊಂದು ವಿಚಾರಗಳು ಸರ್ವಕಾಲದಲ್ಲಿಯೂ ಶಿವನಾಮಸ್ಮರಣೆಯ ಪಡಿಯಚ್ಚಿನಲ್ಲಿ ಹಾಯ್ದು ಹೊರಗೆ ಬರತಕ್ಕಂಥವುಗಳಾಗಿವೆ. ಇಂತಹ ಮಹನೀಯರನ್ನು ಹೆತ್ತ ಆ ಕನ್ನಡಮ್ಮನೇ ಧನ್ಯಳು. ಆದರೆ ಇಂದಿನ ಇಂಥ ವಿಪನ್ನಾವಸ್ಥೆಯಲ್ಲಿ ಈ ಭೂಮಿಯ ಮೇಲೆ ಏನೋ ಅಲ್ಲಿಗೊಬ್ಬರು ಇಲ್ಲಿಗೊಬ್ಬರು ಹೀಗೆ ಅಕಲ್ಪವಾಗಿ ಕಂಡು ಬರುತ್ತಲಿದ್ದಾರೆ. ಇದು ನಮ್ಮ ದುರ್ಭಾಗ್ಯ !

ಆ ಪುರಾತನರ ವಚನ:

"ಹೆಣ್ಣಿಗಾಗಿ ಸತ್ತವರು ಕೋಟಿ
ಮಣ್ಣಿಗಾಗಿ ಸತ್ತವರು ಕೋಟಿ
ಹೊನ್ನಿಗಾಗಿ ಸತ್ತವರು ಕೋಟಿ
ಗುಹೇಶ್ವರಾ ನಿನಗಾಗಿ ಸತ್ತವರನೊಬ್ಬರನೂ ಕಾಣೆ"

ಹೀಗೆ ಅಲ್ಲಮಪ್ರಭುದೇವರ ಅಮರವಾಣಿಯಂತೆ ಇಂದಿನ ಕಾಲದಲ್ಲಿ ಹಿರಿಯರೆನಿಸಿಕೊಂಡವರು, ಪಂಡಿತರೆನಿಸಿಕೊಂಡವರು, ಪೂಜ್ಯರೆನಿಕೊಂಡವರು ಅಸಂಖ್ಯಾತರಿರಬಹುದು. ಆದರೆ ಇವರಂತೆ ತ್ಯಾಗಪೂರ್ಣವಾದ ಪುರಾತನರ ಪ್ರವೃತ್ತಿ ಮಾರ್ಗವನ್ನು ಅನುಸರಿಸಿದವರು ಅತಿ ವಿರಳ.

ಇದಕ್ಕೆ ಇವರಲ್ಲಿ ನೆಲೆಗೊಂಡಿದ್ದ ಅನುಭೂತಿ, ಸ್ಥೈರ್ಯಗಳೇ ಸಾಕ್ಷ್ಯವಾಗಿವೆ. ಶ್ರೀ ಬಸವೇಶ್ವರರು : "ಸಮುದ್ರದ ಮೇಲೆ ಹಾಸುಗಂಬಳಿನಿಕ್ಕಿ ಸುಲಭವಾಗಿ ಹಾಯ್ದು ಹೋಗಬಹುದು. ಆದರೆ ಶರಣ ಜೀವನ ಮಾರ್ಗವನ್ನು ಅನುಸರಿಸುವದು ಬಲು ಕಠಿಣ" ಎಂದು ಹೇಳಿದ್ದಾರೆ.

ಅದರಂತೆ ಈ ಧರೆಯಮೇಲೆ ಅಸಂಖ್ಯ ದೇಹಧಾರಿಗಳೂ ಇದ್ದಾರೆ. ಆದರೆ ಇಡೀ ಆಯುಷ್ಯದ ಪ್ರತಿಕ್ಷಣಗಳನ್ನು ಪರಮ ಶರಣಾಗತಿಯ ಮಾರ್ಗದಿಂದ ರಸನಿಮಿಷಗಳನ್ನಾಗಿ ಮಾರ್ಪಡಿಸಿ, ಈ ಹೃದಯಮಂದಿರದಲ್ಲಿ ದಿವ್ಯ ಶಾಂತಿನಿಲಯವನ್ನು ಸ್ಥಾಪಿಸಿ, ಆತ್ಮನ ಅತುಲ ತೇಜಸ್ಸಿನಿಂದ ಅನಿರ್ವಚನೀಯನಲ್ಲಿ ನಿಂತು, ನಿಗೂಢ ಪರತತ್ವದಲ್ಲಿ ಎರಕ ಹೊಯ್ದಿರುವ ಸೃಷ್ಟಿಲೀಲಾವೈಭವವನ್ನು ಕಂಡು ಹರ್ಷಿಸುವವರು ಈಗ ಉಂಟೇ ? ಇದು ಸುಲಭ ಸಾಧ್ಯವೇ ? ಇಲ್ಲ ! ಇಲ್ಲ !! ಅದು ಬಲು ದುಸ್ತರ

ವಾದುದು. ಈ ಮಹಂತ ಶರಣಬಾಳಿನ ಕ್ರಮವನ್ನು ಅನುಸರಿಸಲು ಮಹಾತ್ಮರಿಗೆ ಜಡವಾಗಿರುವಾಗ ಸಾಮಾನ್ಯ ದೇಹಧಾರಿಗಳಿಗೆ ಇದು ಎಂತು ಸಾಧ್ಯ ?

ಅನಂತ ಜೀವಕೋಟಿಯಲ್ಲಿ ಮಾನವನ ಜೀವನವು ಶ್ರೇಷ್ಠತಮವಾದುದು. ಮಾನವನು ಮೋಕ್ಷವನ್ನು ಪಡೆಯಲು ಅರ್ಹನಾದಂತೆ ಬೇರೆ ಯಾವ ಪ್ರಾಣಿಗೂ ಯೋಗ್ಯತೆ ಇಲ್ಲ. ಮಾನವನ ಚರಮ ಜೀವನ ದಿವ್ಯ ಜೀವನ. ತನ್ನ ತಾನರಿದವನೇ ಶರಣ. ಮರವೆಯೇ ಭವಬಂಧನಕ್ಕೆ ಕಾರಣ. ಅರಿವೇ ಮುಕ್ತಿ. ಮರವೆಯೇ ಬಂಧನ. ಈ ತೆರನಾದ ಅನುಭವವನ್ನು ನುಡಿದು ನಡೆದು ತೋರಿದರು ನಮ್ಮ ಶ್ರೀ ಚನ್ನಮಲ್ಲಿಕಾರ್ಜುನರು.

ಈ ಶಿವಾನುಭವದಲ್ಲಿ ಉಂಟಾಗುವ ಕೆಲವು ಗೋಪ್ಯವಾದ ವಿಷಯಗಳನ್ನು ಮತ್ತು ಅದರ ನೆಲೆ-ಕಲೆಗಳನ್ನು ಕುರಿತು, ಶಿವಾನುಭಾವಿಗಳಾದ ಶ್ರೀಮಾನ್ ಸಿದ್ಧರಾಮಪ್ಪನವರು ಪಾವಟೆ ಇವರು "ವೀರಶೈವ ತತ್ವಪ್ರಕಾಶ" ಈ ಗ್ರಂಥದಲ್ಲಿ ತಮ್ಮ "ವೀರಶೈವ ಧರ್ಮ ಮತವು" ಎಂಬೀ ಉದಾತ್ತವಾದ ಲೇಖನದಲ್ಲಿ: "ಶಿವಾನುಭಾವವು ಒಂದಾನೊಂದು ಪುಣ್ಯ ನಿಮಿಷದಲ್ಲಿ ನನ್ನ ಹೃದಯದ ಕಾಮಕ್ರೋಧಾದಿಗಳು ಒಪ್ಪಚ್ಚಿ ಸರಿದುವೆಂದರೆ ಮೇಘ ಮಂಡಲದಲ್ಲಿಯ ಮಿಂಚಿನಂತೆ ಹೊಳೆಯಬಹುದು; ನಾನದನ್ನು ನೆನಸಬಹುದು.

ವಸಂತಕಾಲದಲ್ಲಿ ವಾಸಿಸಿದ ಮಲ್ಲಿಗೆ ಹೂವನ್ನು, ಸ್ವಾದಿಸಿದ ಮಾವಿನ ಹಣ್ಣನ್ನು ಚಳಿಗಾಲದಲ್ಲಿ ನಾನು ನೆನಸಬಹುದು. ಇವುಗಳ ಅನುಭವವನ್ನು ಹೇಳಬಹುದು. ಶಿವಾನುಭವವು ಹೀಗಲ್ಲ–"ಅನು" ಎಡೆಬಿಡದೆ "ಭಾವ" ಎಂದರೆ ಆಗಿರುವಿಕೆ ಅಥವಾ ಸಂಗತವಾಗಿರುವಿಕೆ ಎಂಬರ್ಥ. ಶಿವಾನುಭಾವವೆಂದರೆ ಹೃದಯವು ಅತ್ಯಂತ ನಿರ್ಮಲವಾದುದರಿಂದ ಎಡೆಬಿಡದೆ ತನ್ನ ಶಿವತ್ವವು ಸೂಸಿ ಹರಿದು ಗಂಗೆಯು ತನ್ನ ಓಘದಿಂದ ಎಲ್ಲವನ್ನು ಪವಿತ್ರಿಸುವಂತೆ ನಮ್ಮ ಇರುವನ್ನೇ ಶಿವಮಯವನ್ನಾಗಿ ಮಾಡುವದೆಂಬರ್ಥ. ಹೀಗೆ ಶಿವಾನುಭವದ ವಿಚಾರಗಳನ್ನು ನೀಡಿದ್ದಾರೆ. ಆದ್ದರಿಂದ ಅಪಾರ ಶಿವಯೋಗಾನುಭವಜ್ಞಾನವನ್ನು ಶಿವಾನುಭವಿಗಳಿಂದ ಶಿವಾನುಭವಿಗಳೇ ತಿಳಿಯಲು ಸಮರ್ಥರು; ಮತ್ತು ಅರ್ಹರು.

ಮಾನವನನಿಗೆ ತನ್ನ ಮೂಢಕಲ್ಪನೆಗಳನ್ನು ಕಳೆದುಕೊಳ್ಳಲು, ಆ ಪುರಾತನರ ಅಮಿತ ಅಮೃತೋಕ್ತಿಗಳಿರಲಾಗಿ, ಇವರು (ಜನರು) ಈ ಅಜ್ಞಾನವನ್ನು ಕಳೆದು ಕೊಳ್ಳಬಾರದೇಕೆ ? ಈ ಪ್ರಪಂಚದ ಅನಂತ ತೊಡರುಗಳನ್ನು ತೊಡೆದು ಹಾಕಿ ದಾಟಿ

---

ಟೀಪು :— ವ್ಯಕ್ತಿಯ ಜೀವಿತ ಕಾಲದಲ್ಲಿಯೇ ಅವನ ಘನತೆ ಗೌರವಗಳನ್ನು ತಿಳಿದುಕೊಳ್ಳದೇ ಸತ್ತ ಮೇಲೆ ಸ್ಮಾರಕವನ್ನು ರಚಿಸುವುದು ಸಮಾಜದ ಅಂಧತನವೇ ಸರಿ. ಸಮಾಜದಲ್ಲಿನ ಈ ಅಂಧತನ ಅಳಿಯುವವರೆಗೆ ಅಶಾಂತಿ ಅಪರಿಹಾರ್ಯ. (—ಲೇ.)

ಹೋಗಲು, ಈಶ್ವರ ಚೈತನ್ಯವು ನಮ್ಮ ಹೃನ್ಮಂದಿರದಲ್ಲಿ ಇರುವಾಗ ಆ ಪ್ರಚ್ಛನ್ನ ಪುರುಷನಿಂದುಂಟಾದ ಅಮಿತಸುಜ್ಞಾನಮಯ ಅನಂತ ವಿದ್ಯುತ್ ಕಿರಣಗಳನ್ನು ನಾವು ಪಡೆಯಬಾರದೇಕೆ ?

ಈ ಮೊದಲಾದ ಅನೇಕ ಒಳವಿಚಾರಗಳು ಸಹಾಯ ವಸ್ತುಗಳಾಗಿ ಚನ್ನಮಲ್ಲಿಕಾರ್ಜುನರ ಭಾವಮಂದಿರದ ನಾಲ್ಕು ನಿಟ್ಟುಗಳಿಗೆ ಮೂಲಾಧಾರವಾಗಿರಬಹುದೇ ? ಹೀಗೆ ಅನಿಸುತ್ತಿದೆ.

ಒಟ್ಟಿನಮೇಲೆ ಇವರ ಅಮರ ಜೀವನದ ನೆನಹು ನಮಗೆ ತೋರಿದಾಗ ಒಮ್ಮೆಲೇ ಅಂದಿನ ಬಸವಾದಿ ಪ್ರಮಥರ ಶರಣಜೀವನವನ್ನು ಸ್ಮರಣೆಗೆ ತಂದುಕೊಡುತ್ತಲಿದೆ.

ಇವರು ತಮ್ಮ ತುಂಬು ಜೀವನದುದ್ದಕ್ಕೂ ನಡೆದು ತೋರಿಸಿದ ಕಾಯಕಪಥದ ಫಲವಾಗಿ ಶತಕೃತಿರತ್ನಗಳು ಬೆಳಕನ್ನು ಕಂಡಿವೆ. ಆದರೂ ಒಬ್ಬ ತರುಣನಿಗೆ ಇರಲಾರದ ನವಜೀವನದ ಉತ್ಸಾಹದಲ್ಲಿ ತಮ್ಮ ಕಾಯಕವಾದ ಪತ್ರಿಕಾಧರ್ಮದ ಜ್ಞಾನಪ್ರಸಾರ ಕಾರ್ಯವನ್ನು ಕೈಗೊಂಡಿದ್ದರು. ಇದೀಗ ಇವರು ೮೪ ರ ಅಂಚಿನಲ್ಲಿ ಕಾಲಿಟ್ಟಿದ್ದರು. ಅವರಿಗೆ ಶಿವನ ಕರೆ ಬಂದಿತು. ಅದನ್ನು ಮೀರಲು ಎಂತು ತಾನೇ ಸಾಧ್ಯ ? ಶರಣಪುಂಗವರಾದ ಶ್ರೀ ಚನ್ನಮಲ್ಲಿಕಾರ್ಜುನರು ೧೯೬೨ ರ ಮಾರ್ಚ (೩) ಮೂರರಂದು ಶಿರಾಳಕೊಪ್ಪದಿಂದ ಶಿವನಾಮ ಸ್ಮರಣೆಗೈಯ್ಯುತ್ತ ದೇವಲೋಕಕ್ಕೆ ಸಾಗಿಹೋದರು. ಶ್ರೀ ಚನ್ನಮಲ್ಲಿಕಾರ್ಜುನರವರು ಲಿಂಗೈಕ್ಯರಾದ ಈ ದಾರುಣ ವಾರ್ತೆಯನ್ನು ಕೇಳಿದೊಡನೆ ಕನ್ನಡನಾಡಿನ ಬಂಧುಗಳಿಗೆಲ್ಲ ಸಿಡಿಲು ಬಡಿದಂತಾಯಿತು. ನಾಡಜನತೆಯು ತಂದೆಯನ್ನು ಕಳೆದುಕೊಂಡು ಕಣ್ಣೀರು ಕರೆಯುವಂತೆ ಕಣ್ಣೀರು ಸುರಿಸುತ್ತ ಶೋಕಸಾಗರದಲ್ಲಿ ಮುಳುಗಿಹೋಗಿದೆ.

ಶ್ರೀ ಚನ್ನಮಲ್ಲಿಕಾರ್ಜುನರ ಪೂರ್ಣ ಶರಣಜೀವನವು ಪೂರ್ತಿಯಾಯಿತು ! ಧನ್ಯವಾಯಿತು ! ಸರ್ವಮಾನ್ಯವಾಯಿತು ! ಪರಮಾತ್ಮಜ್ಯೋತಿಯಾಯಿತು ! ಅಂತೆಯೇ ಅವರಲ್ಲಿ ಅಂದಿನ ಶರಣರ ಧ್ಯೇಯ ಧೃತಿ ಸಾಹಸ ಮೊದಲಾದ ರೂಪರೇಷೆಗಳು ಪ್ರಣೀತಸ್ವರೂಪದಲ್ಲಿ ಮೈದಾಳಿ ನಿಂತಿದ್ದುವು. ಆ ಭಾನುವಿನ ಉದಯಾಸ್ತಮಾನದ ಹೊಂಗಿರಣಗಳಂತೆ ಅವರ ಮಾನಸ ವಿಚಾರತರಂಗಳು ಮಂದರಶ್ಮಿಗಳಾಗಿ ಹೊರಸೂಸುತ್ತಲಿದ್ದುವು. ಅವರ ಆದರ್ಶಜೀವನದ ಕಾಂತಿಕಿರಣಗಳು ಮುಂಬರುವ ಮಕ್ಕಳ ಬಾಳಿನಲ್ಲಿ ಮೂಡಿಬರಲಿ. ಭವಿತವ್ಯಯು ಉಜ್ವಲವಾಗಲಿ. ಬದುಕು ಬಂಗಾರವಾಗಲಿ.

ಇದು ಈ ಪುಣ್ಯಜೀವಿ ಶ್ರೀ ಚನ್ನಮಲ್ಲಿಕಾರ್ಜುನರ ಆ ದಿವ್ಯಜೀವನದ ಅಪಾರ ಸಾಗರದೊಳಗಿನ ಒಂದು ಕಣಮಾತ್ರ; ಅಷ್ಟು ಅವರ ವಿಚಾರಕಿರಣಗಳನ್ನು ನಾವು ಎತ್ತಿ ಹೊರಸೂಸುವ ಕಿರು ಸಾಹಸಗೆಯ್ದಿದ್ದೇವೆ.

# ಶ್ರೀ ಚನ್ನಮಲ್ಲಿಕಾರ್ಜುನರು

## (ಶರಣರ ವಿಲಾಸ ಗೀತೆ)

---

### ಕನ್ನಡ ಕವಿ ಕಾಳಿದಾಸ

"ಶಿರಿಯ್ಯಾಳಕೊಪ್ಪ"ದಲಿ ಜನಿಸಿರಲು ಧರ್ಮಸಿಂಧು
"ಶ್ರೀ ಚನ್ನಮಲ್ಲಿಕಾರ್ಜುನ" ಶರಣ ಬಂಧು!
ಧಾರುಣಿಯ ಜೀವನದಿ ಮಹಂತ ಬಾಳಿನಲಿ ನಿಂದು
ಹರನ ಕರೆ ಬರಲು ತಂದೆ ನಡೆದೆಯಿಂದು! ॥೧॥

ಶಿವನ ಆಣತಿಯಂತೆ ಧರೆಗಿಳಿದು ಬರಲಾಗಿ
ಶಿವಧರ್ಮ ಸೇವೆಗೆಯ್ಯಲೆಂದು!
"ಸದ್ಧರ್ಮದೀಪಿಕೆ" ಧರ್ಮಪತ್ರ ನಡೆಸಲಾಗಿ
ಶರಣ ವಾಙ್ಮಯ ಲತೆ ಪಲ್ಲವಿಸಿ ತಂದು! ॥೨॥

ವರುಷ ಎಂಭತ್ತುನಾಲ್ಕು ಸಂದಿರಲು ತುಂಬ ವೃದ್ಧಾಪ್ಯಕಾಲ
ಸಂಶೋಧನೆಯಾಯ್ತು "ಶ್ರೀ ಬಸವೇಶ್ವರನ ಕಾಲ"
ಇಂತು ಅಮಿತ ಕೃತಿರತ್ನಗಳು ತವಪುಣ್ಯಫಲವೆನಲು
ಸಫಲಮಾಯ್ತು ಬದುಕಿನಾ ಪ್ರತಿ ಕ್ಷಣಕಾಲ! ॥೩॥

"ಹಾವೇರಿ"ಯೊಳು ನೀನುಸುರಲ್ಕೆ ಕಡೆಯ ಹೃದಯವಾಣಿ!
ಆಲಿಸಿದ ಕವಿ ಕೇಳುವ ತವಸರಸವಾಣಿ!
"ದೇಹಪ್ರಾಣಗಳಾ ವಿಯೋಗಕಾಲವೇನೋ" ಎಂದು!
ನೀನುಡಿಯಲದುವೆ ನುಡಿ ಸತ್ಯವಾಯ್ತಿಂದು! ॥೪॥

ಬರುತಲಿದೆ ಜೀವರಾಶಿ ಶತಕೋಟಿ ಸಂದು ಸಂದು!
ಬಿಡುವಿಲ್ಲ ಕಾಲಚಕ್ರಕೆ ಎಂದೆಂದು!
ಹರಿದು ಬಿಸುಟುವರಾರೊ! ಈ ಭವದ ಮಾಲೆಯನ್ನು
ಕಾಣೆಲಾರೆನೀ ವಿಪುಲ ಪೃಥ್ವೀ ತಲದಿ! ॥೫॥

ಕಾಲ ಗತಿಸವುದು ! ದೇಹ ಅಳಿಯುವುವು ! ಧಾತ್ರಿಯಲ್ಲಿ !
ಸಲೆ ಜನನ-ಮರಣಂಗಳು ಸಾಗಿಹವು ಇಲ್ಲಿ !
ಮೃತ್ಯುವನು ಜಯಿಸುವಾ ಜೀವಿಗಳು ಕೋಟಿಗೊಂದು !
ಭವವ ಕೋಟಲೆಯು ಕಳೆಯಲೆಂದು ಬಂದು ! ॥೬॥

"ಕೊಲುವೆನೆಂಬ ಭಾಷೆ ಸಲೆ ಶಿವನದಾಗಿರಲು"
ಗೆಲುವೆನೆಂಬ ಭಾಷೆ ಭಕ್ತನದಾಗಿ !
ಸಹಜ ಸದ್ಭಕ್ತನೆನಿಸಿ ನೀ ಶಿವನ ಸೋಲಿಸಿರಲು
ಯಶೋದುಂದುಭಿ ಮೊಳಗೆ ಕೈಲಾಸದಲ್ಲಿ ! ॥೭॥

ಅನುಭಾವದಂಚಿನಲಿ ಹೃದಯವೇದನೆಯಲಿ ನಿಂತು
ಸಮಾಜ ನಾಡಿಯ ಮಿಡಿದು ಜಾಗೃತಗೆಯ್ದು !
ವಿಶ್ವಧರ್ಮ ಪ್ರಗತಿಗಾಗಿ ನಿನ್ನಂತೆ ಕಾಯ ತೆಯ್ದುವರಾರು !
ತವ ದಿವ್ಯ ಜೀವನವೆ ಸಾರ್ಥಕ್ಯವಲ್ತೆ ? ॥೮॥

ಹಣ್ಣಾದೆ ಸಣ್ಣಾದೆ ! ಸಮಾಜದಾ ಕಣ್ಣಾದೆ !
ಸಲೆ ಸುಡುವ ಸುಣ್ಣದೊಲು ಕಾಯ ಬೆಂದು !
ಆವ ವ್ಯಕ್ತಿ ಯಾವ ಸಂಸ್ಥೆ ಗೆಯ್ದಿಹುದಿವರ ಕಾರ್ಯ !
ಬಲ್ಲಹರು ಹೇಳಿರಿದು ದೇವಕಾರ್ಯ ! ॥೯॥

ಗುರು-ಲಿಂಗ-ಜಂಗಮಕೆ ತನು-ಮನ-ಧನ ನೀಡುತಲಿ
"ಲಿಂಗಭೋಗೋಪಭೋಗಿ"ಯಾಗಲಾಗಿ !
ಮೇದಿನಿಯ ಜನತತಿಗೆ ಶಾಂತಿಸುಖ ಕೋರುತಲಿ
ನಿತ್ಯ ಬೆಳಕಾದೆ ಅಮೃತಾತ್ಮನಾಗಿ ! ॥೧೦॥

ಜೇಂಗೊಡವ ತುಂಬಿಟ್ಟೆ ಸಮಾಜಶಿಶು ಸೇವಿಸಲೆಂದು
ಅನುಭಾವ ಪೀಯೂಷ ಧಾರೆಯಾಗಿ ಸುರಿದು !
ಹಾಲುಹೊಳೆ ಹರಿಬಿಟ್ಟೆ ಸಕ್ಕರೆಯ ಮಳಲು ಬೆರಸಿ
ಮುಕ್ತಾಫಲ ಸವಿಯುವುವು ಕಂದಮ್ಮಗಳಿಂದು ! ॥೧೧॥

"ರುದ್ರಕಡಲವನು ಕಂಬಳಿಯು ಹಾಸಿ ದಾಂಟಬಹುದು" !
ಆದಡಂ ಶರಣ ಮಾರ್ಗಮಿದು ದುಸ್ತರವಲ್ತೆ ?
ನವಚೇತನವನೀಯುತ್ತೆ ನವಯುಗದೊಳಿರ್ದೊಡಂ
ತವಹೃದಯ ಪ್ರಾಚೀನ ಶಿವಶರಣರದಲ್ತೆ ? ॥೧೨॥

ಶರಣ ಭೂಮಿಗೆ ಬಂದು ನಿಂದು! ದೇವಭೂಮಿಗೆ ಸಾಗಿ ಹೋದೆ!
ಮುಕ್ತಿಮಾಲೆಯ ಪಿಡಿದು ಪರಶಿವನಡಿಯ ಸೇರ್ದೆ!
ಇಂದು ತವಭೂತಲದ ವಾಸ ಮುಕ್ತಾಯವಾಯಿತೇನೋ ?
ಆತ್ಮಜ್ಯೋತಿಯನಿರಿಸಿ ಜಗಕೆ ನೀ ನಂದಾದೀಪವಾದೆ! ॥೧೩॥

ಭೂದೇವಿ ಹರ್ಷಿಪಳು! ತವ ಅಮೃತ ಬಾಳನು ಕಂಡು!
ಮಹಾಲಕ್ಷ್ಮಿ ಬೀರುವಳು ಮಂದಹಾಸ!
ವಾಗ್ದೇವಿ ಕುಣಿಯುವಳು! ವಾಣಿ ಮೌಕ್ತಿಕ ಕಂಡು!
ಗೀತ ಪಾಡಿದನು "ಕನ್ನಡ ಕವಿ ಕಾಳಿದಾಸ" ॥೧೪॥

---

ಟಿಪ್ಪಣಿ—ಪೂಜ್ಯ ಶ್ರೀ ಚೆನ್ನಮಲ್ಲಿಕಾರ್ಜುನರು ಪರಮಪೂಜ್ಯ ಶ್ರೀ ಶಿವಬಸವಸ್ವಾಮಿಗಳವರ ೧೬ನೆಯ ಪುಣ್ಯತಿಥಿ ಕಾಲಕ್ಕೆ ಹಾವೇರಿಗೆ ಬಂದಿದ್ದರು. ಪಿತೃ ಸಮಾನರಾದ ಅವರಲ್ಲಿ "ಕನ್ನಡ ಕವಿ ಕಾಳಿದಾಸ"ನಿಗೆ ತುಂಬಾ ಪ್ರೀತಿ. ಆಗ ಅವರಿಗೆ ಪ್ರಸಾದದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ಕೈಕಾಲಿಗೆ ಶುರುವಾಗಿತ್ತು. ಮೂರು ದಿನಗಳವರಗೆ ಅವರು ನಿರಾಹಾರಿಗಳಾಗಿದ್ದರು. ಹಾಸಿಗೆ ಹಿಡಿದಿದ್ದರು. ಕವಿಯು ಅವರ ಯೋಗಕ್ಷೇಮವನ್ನು ವಿಚಾರಿಸುತ್ತ "ತಮ್ಮ ಪ್ರಕೃತಿಯನ್ನು ಸ್ವಲ್ಪಸಂಬಾಳಿಸಿರಿ" ಎಂದು ಎನ್ನುತ್ತ ಬಳಿಯಲ್ಲಿಯೇ ಕುಳಿತಿದ್ದಾನೆ. ದೇಹಾವಸಾನಕಾಲದ ಮುನ್ಸೂಚನೆ ಏನೋ ಎನ್ನುವಂತೆ ಅವರು—"ಪ್ರಕೃತಿಯನ್ನು ಸಂಬಾಳಿಸುತ್ತಲೇ ಬಂದಿದ್ದಾಗಿದೆ. ಆದರೂ ಶಿವನ ಅಪ್ಪಣೆಯಲ್ಲಿ ಹೀಗಾಗಬೇಕೆಂದಿದ್ದರೆ–ದೇಹಕ್ಕೂ ಪ್ರಾಣಕ್ಕೂ ವಿಯೋಗವಾಗುವ ಕಾಲ ಬಂದಿದೆಯೆಂದು ಭಾವಿಸಬೇಕು" ಎಂದು ಹೇಳಿದರು. ಅದರಂತೆ ಪೂಜ್ಯರು ಅಲ್ಪಾವಧಿಯಲ್ಲಿ ಲಿಂಗೈಕ್ಯರಾಗಬೇಕಾದರೆ "ಶರಣರ ಸಾವು ಮರಣದಲ್ಲಿ ನೋಡು" ಎಂಬೀ ಪುರಾತನರ ಉಕ್ತಿಯು ಸತ್ಯವಲ್ಲವೇ ?

—"ಕನ್ನಡ ಕವಿ ಕಾಳಿದಾಸ"

# ಶ್ರೀ ಚನ್ನಮಲ್ಲಿಕಾರ್ಜುನ ಅವರಿಗೆ ಸನ್ಮಾನ ಪತ್ರ

[ಮಳವಳ್ಳಿ ತಾಲೂಕು ಹಲಗೂರು ವೀರಶೈವ ಸಮಾಜದವರು ೨೦-೮-೧೯೫೯ ರಲ್ಲಿ ಅರ್ಪಿಸಿದ ಸನ್ಮಾನ ಪತ್ರದ ಯಥಾನಕಲು ಕೆಳಗಿನಂತಿದೆ.] (ಸಂಚಿಕೆ ೧೫೩)

"ಶ್ರೀಮಜ್ಜಗದ್ಗುರು ಭವತ್ಪಾದಾಚಾರ್ಯ ರೇಣುಕಾಚಾರ್ಯ ಪ್ರಸೀದತು"
ಮೈಸೂರು 'ಸದ್ಧರ್ಮದೀಪಿಕೆ'ಯ ಸಂಪಾದಕರಾದ ಶರಣ
ಶ್ರೀ ಚನ್ನಮಲ್ಲಿಕಾರ್ಜುನರವರಿಗೆ
ಮಳವಳ್ಳಿ ತಾಲೂಕು ಹಲಗೂರು ವೀರಶೈವ ಸಮಾಜವು ಸಮರ್ಪಿಸಿದ ಸನ್ಮಾನ ಪತ್ರ.

ವೀರಶೈವ ಸಮಾಜ ಸೇವಾನಿಷ್ಠರೇ,

ಹಲಗವರು ತನ್ನ ಹುಟ್ಟಿನಿಂದ ಹರಗುರು ಭಕ್ತಿಯ ಕೇಂದ್ರವೆನಿಸಿದೆ. ಶ್ರೀಮದ್ಭಗವತ್ಪಾದ ಜಗದ್ಗುರು ರೇಣುಕ ಪೂರ್ಣ ಕೃಪೆಗೆ, ತರುವಾಯ ಸತ್ಯಶರಣ ಸಿದ್ಧಪ್ಪಾಜಿಯವರ ತಪಃಪ್ರಭಾವಕ್ಕೆ ಮುಂದೆ ಧನಗೂರು ವೀರಸಿಂಹಾಸನಾಧೀಶ್ವರ ಉಭಯ ಕವಿತಾ ವಿಶಾರದ ಷಡಕ್ಷರ ಮಹಾದೇವನ ಕರುಣೆಗೆ ಇತ್ತೀಚೆಗೆ ಸಿದ್ಧನಹಳ್ಳಿಯ ಗವಿಯ ಶಿವರುದ್ರ ಶಿವಯೋಗಿಗಳ ಆಶೀರ್ವಾದಕ್ಕೆ ಕುರುಹಾಗಿ ಈ ಊರು ಶೋಭಿಸಿದೆ. ಪ್ರಾಚೀನತಮ ಸೋಮೇಶ್ವರ, ವೀರಭದ್ರ, ನಂದಿಕೇಶ್ವರ ಮುಂತಾದ ಶಿವದೇವಾಲಯಗಳು ಇಲ್ಲುಂಟು. ಹೀಗೆ ಸಂಪ್ರದಾಯಸ್ಥ ಶೈವ ಮತ್ತು ವೀರಶೈವ ಜನತೆಯ ಆಗರವೆನಿಸಿದ ಈ ಊರಿಗೆ ಅಕ್ಕರೆಯಿಂದ ತಮ್ಮನ್ನು ಬರಮಾಡಿಕೊಂಡು ಇಲ್ಲಿನ ಪ್ರಾಚೀನತಮ ಬೃಹನ್ಮಠದಲ್ಲಿ ಗೌರವಿಸಲು ಅವಕಾಶ ದೊರಕಿಮುದು ನಮಗೊಂದು ಭಾಗ್ಯ. ಸಂಪ್ರದಾಯದಂತೆ ವರ್ತಮಾನ ವಿಕಾರಿ ಸಂವತ್ಸರ ಶ್ರಾವಣ ಮಾಸದ ಈ ಶುಭ ಸಮಯದಲ್ಲಿ ನಮ್ಮ ಶ್ರೀ ಮಠದಲ್ಲಿ ನಡೆಯುತ್ತಿರುವ ಪುರಾಣ ಪ್ರವಚನ ಕಾರ್‍ಯದ ವಿಶೇಷ ಕಾರ್ಯಕ್ರಮವಾಗಿ ತಮಗೆ ಈ ಸನ್ಮಾನ ಪತ್ರವನ್ನು ಸಮರ್ಪಿಸುತ್ತಿರುವ ಈ ದಿನ ಸುದಿನ.

ಶರಣರೇ,

ತಾವು ಸಕಾಲದಲ್ಲಿ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡು ಹಲವಾರು ಮಂದಿ ಬಾಲಕ ಬಾಲಿಕೆಯರಿಗೆ ಜ್ಞಾನ ದಾನಮಾಡಿ ಉಪಾರ್ಜಿತ ದ್ರವ್ಯದಿಂದ ಹಾವೇರಿಯಲ್ಲಿ 'ಸದ್ಧರ್ಮದೀಪಿಕೆ'ಯನ್ನು ಬೆಳಕಿಗೆ ತಂದಿರಿ. ಆ ಕಾಲಕ್ಕೆ ತಮಗೆ ನೆರವು ನೀಡಿದ ಹಾನಗಲ್ಲು ಶ್ರೀ ಕುಮಾರ ಶಿವಯೋಗಿಗಳವರನ್ನು ನಾವು ಮನಸಾರ ಅಭಿನಂದಿಸುತ್ತೇವೆ. ಮುಂದೆ ಶಿವಧರ್ಮದ ಹಳೆಯ ಕಡತಗಳನ್ನು ಹಳ್ಳಿಹಳ್ಳಿಗಳಲ್ಲಿ ತಿರುಗಿ ಸಂಪಾದಿಸಿದಿರಿ, ಸಂಶೋಧಿಸಿದಿರಿ, ಪ್ರಕಟಿಸಿದಿರಿ. ತಾವು ಪ್ರಚಾರಗೊಳಿಸಿದ ಸಿದ್ಧೇಶ್ವರ ವಚನ

ಗಳು, ಮಹಾದೇವಿಯಕ್ಕನ ವಚನಗಳು, ಬಸವೇಶ್ವರನ ಕಾಲನಿರ್ಣಯ, ಶತಕತ್ರಯ ಶ್ರೀ ರೇವಣಸಿದ್ಧರು ಮೊದಲಾದ ಹತ್ತಾರು ಗ್ರಂಥಗಳನ್ನು ಸಮಾಜವು ಪ್ರೀತಿಯಿಂದ ಸ್ವಾಗತಿಸಿದೆ.

ಕನ್ನಡ ಸಾಹಿತ್ಯ ಸಂಶೋಧಕರಾದ ಸರ್ವಶ್ರೀ ಹಾಲಭಾವಿ, ಹರ್ಡೇಕರ್, ಬಸವ ನಾಳ, ನರಸಿಂಹಾಚಾರ್, ಸಾಲತೊರೆ, ಹಳಕಟ್ಟಿ, ಶ್ರೀನಿವಾಸಮೂರ್ತಿ, ದಿವಾಕರ ಮೊದಲಾದವರ ಸಾಲಿನಲ್ಲಿ ನಿಲ್ಲಲು ಯೋಗ್ಯರಾದ ತಮ್ಮನ್ನು ಹೃತ್ಪೂರ್ವಕವಾಗಿ ಪ್ರೀತಿಸಿ ಈ ಸನ್ಮಾನ ಪತ್ರವನ್ನು ತಮಗೆ ಸಲ್ಲಿಸಲು ನಮಗೆ ಹೆಮ್ಮೆ. ತಮ್ಮ ಇದೇ ಜೀವನದಲ್ಲಿ ತನುಮನಧನಗಳನ್ನು ಸಮಾಜ ಸ್ವರೂಪ ಮಹಾದೇವನಡಿಗೆ ನಿರ್ವಂಚನೆ ಯಿಂದ ಅರ್ಪಿಸಿ ಸತ್ಯಶುದ್ಧ ಕಾಯಕ ನಿಷ್ಠರಾಗಿ ನಿಂತ ತಮ್ಮನ್ನು ಗೌರವಿಸುವುದಕ್ಕಿಂತ ಮಿಗಿಲಾದ ಕರ್ತವ್ಯವು ಮತ್ತೊಂದಿಲ್ಲ. ಮುಂದೆಯೂ ತಮ್ಮಿಂದ ನಮ್ಮ ಭವ್ಯ ಸಮಾ ಜಕ್ಕೆ ಇತೋಪ್ಯತಿಶಯ ಸೇವಾಬಲ ಕೂಡಿಬರುವಂತೆ ಪರಮೇಶ್ವರನು ಅನುಗ್ರಹಿಸ ಲೆಂದೂ ಆ ಫಲವನ್ನು ಸಾವಧಾನದಿಂದ ಅನುಭವಿಸುವ ಶಕ್ತಿಯು ಸಮಾಜಕ್ಕೆ ಇರ ಲೆಂದೂ ಹೃತ್ಪೂರ್ವಕ ಹಾರೈಸಿ, ಅಭಿನಂದನಾಪೂರ್ವಕ ಈ ಸನ್ಮಾನ ಪತ್ರಿಕೆಯನ್ನು ತಮ್ಮ ಕೈಗೆ ನಾವು ಕೊಡುತ್ತೇವೆ.

ಬೃಹನ್ಮಠ ಹಲಗೂರು
೩೦-೮-೧೯೫೫

ಇಂತು ತಮ್ಮ ಒಲವಿನ
ವೀರಶೈವ ಮಂಡಳಿ.

# ಶಿವಯೋಗ ಮಂದಿರದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರಿಗೆ ಸನ್ಮಾನ ಸಮಾರಂಭ

ಶ್ರೀ ಶಿವಯೋಗ ಮಂದಿರದಲ್ಲಿ ೧೯೬೦ ನೇ ಇಸ್ವಿ ಫೆಬ್ರುವರಿ ೧೯ ಮತ್ತು ೨೦ ನೆಯ ತಾರೀಖುಗಳಂದು ವಿಜೃಂಭಣೆಯಿಂದ ಸಂಸ್ಥೆಯ ೫೦ ನೆಯ ವರ್ಷದ ಹಬ್ಬ (ಸುವರ್ಣ ಮಹೋತ್ಸವ)ವು ಆಚರಿಸ್ಪಟ್ಟಿತು. ಚಿತ್ರದುರ್ಗ ಜಗದ್ಗುರು ಜಯವಿಭವ ಜಗದ್ಗುರುಗಳಿಂದ ಉದ್ಘಾಟಕವಾದ ಈ ಸಭೆಯ ಅಧ್ಯಕ್ಷತೆಯನ್ನು ಹುಬ್ಬಳ್ಳಿ ಮೂರು ಸಾವಿರಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಸ್ವಾಮಿಗಳು ವಹಿಸಿದ್ದರು. ಧಾರವಾಡ ಮುರುಘಾಮಠದ ಮೃತ್ಯುಂಜಯಸ್ವಾಮಿಗಳೇ ಮೊದಲಾಗಿ ಅನೇಕ ಹರಗುರು ಚರಪಟ್ಟಾಧ್ಯಕ್ಷ ಸ್ವಾಮಿಗಳವರಿಂದ ಕಿಕ್ಕಿರಿದು ತುಂಬಿದ್ದ ಮಹಾ ಸಭೆಯಲ್ಲಿ ಶಿವಯೋಗ ಮಂದಿರವು ಸಾಧಿಸಿದ ಸಾಧನೆ ಅದರ ಮಹತ್ವದ ಬಗೆಗೆ ಅನೇಕ ವಿದ್ವಾಂಸರ ಉಪನ್ಯಾಸಗಳು ಜರುಗಿದವು. ತಾ. ೨೦–೨–೬೦ ಶಿವಾನುಭವ ಗೋಷ್ಠಿಯೂ ಅನೇಕ ಅನುಭಾವಿಗಳಿಂದ ನಡೆಯಿತು ಆ ಸಮಯದಲ್ಲಿ ಶ್ರೀ ಚನ್ನ ಮಲ್ಲಿಕಾರ್ಜುನ ಸಂಪಾದಕರು; ಸದ್ಧರ್ಮದೀಪಿಕೆ ಅವರಿಗೆ. ಹುಬ್ಬಳ್ಳಿ ಮೂರು ಸಾವಿರ ಮಠದ ಜಗದ್ಗುರುಗಳಿಂದ ಉಡುಗೊರೆ ಮೊದಲಾದವುಗಳೊಡನೆ ಪ್ರಶಸ್ತಿಗಳು ಹಂಚಲ್ಪಟ್ಟವು. ಇದೇ ಸಮಯದಲ್ಲಿ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾ ಸ್ವಾಮಿಗಳು ನಿಡುಮಾಮಿಡಿ, ಶ್ರೀ ಪಂ. ಪುಟ್ಟರಾಜ ಗವಾಯಿಗಳು. ವೀರಶೈವ ಪುಣ್ಯಾಶ್ರಮ ಗದಗ. ಶ್ರೀ ಗಾಯನ ಸುಧಾಕರ ಬಸವರಾಜ ರಾಜಗುರು ಧಾರವಾಡ, ಶ್ರೀ ಪಂ. ಗಂಗಾಧರ ಶಾಸ್ತ್ರಿಗಳು ಭಕ್ತರಾಗಿ-ಇವರೇ ಮೊದಲಾದವರಿಗೂ ಪ್ರಶಸ್ತಿಗಳು ಕೊಡಲ್ಪಟ್ಟವು.

(ಸಂ. ೧೫೭.)

# ಶಿದ್ಧೇಶ್ವರ ನಿಲಯು ಶಿರಾಳಕೊಪ್ಪ

[ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಆಸ್ತಿಯ ಕೆಲವು ಭಾಗವನ್ನು ಸಿದ್ಧೇಶ್ವರ ನಿಲಯದ ಉತ್ತರೋತ್ತರ ಅಭಿವೃದ್ಧಿಗೆ ದಾನಮಾಡಿದರಷ್ಟೆ. ಆ ಸಿದ್ಧೇಶ್ವರ ನಿಲಯಕ್ಕೆ ಸಂಬಂಧಿಸಿದಂತೆ ಸದ್ಧರ್ಮದೀಪಿಕೆಯಲ್ಲಿ ಅವರು ಪ್ರಕಟಿಸಿದ ಎರಡು ಪ್ರಕಟನೆಗಳನ್ನು ಮಾತ್ರ ಈ ಕೆಳಗೆ ಸಂಕ್ಷಿಪ್ತವಾಗಿ ಕೊಟ್ಟಿದೆ.]

(೧)

ವಿದ್ಯಾರ್ಜನೆಗೆ ವಿದ್ಯಾರ್ಥಿ ನಿಲಯಗಳು ಅತ್ಯಂತ ಅವಶ್ಯಕ ಮೈಸೂರು ದೇಶದ ಶಿವಮೊಗ್ಗ ಡಿಸ್ಟ್ರಿಗೆ ಸೇರಿದ ನಮ್ಮ ಶಿರಾಳಕೊಪ್ಪದಲ್ಲಿ ಒಂದು ಮಾಧ್ಯಮಿಕ ಶಾಲೆ ಇದ್ದು ಈ ಶಾಲೆಗೆ ಸುಮಾರು ೮-೧೦ ಮೈಲು ದೂರ ಪ್ರದೇಶಗಳಿಂದಲೂ ಸಹ ವಿದ್ಯಾರ್ಥಿಗಳು ಬಂದು ವಿದ್ಯಾಭ್ಯಾಸವನ್ನು ಮುಂದುವರಿಸಲು ಅನೇಕರಿಗೆ ಊಟದ ವ್ಯವಸ್ಥೆ ಇಲ್ಲದೆ ಬಹಳ ತೊಂದರೆಯಾಗಿದ್ದಿತು. ಅನೇಕ ವರ್ಷಗಳ ಕಾಲ ಈ ಶಿರಾಳ ಕೊಪ್ಪದ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದು ನಿವೃತ್ತರಾಗಿರುವ ಶ್ರೀ ಕೋರಿ ಚನ್ನಮಲ್ಲಪ್ಪನವರು ಮನನೊಂದು ಇದನ್ನು ನಿವಾರಿಸಲು ತಮ್ಮ ಸ್ವಯಾರ್ಜಿತ ಆಸ್ತಿ ಸುಮಾರು ಎಂಟು ಸಾವಿರ ರೂಪಾಯಿ ಬೆಲೆಬಾಳುವುದನ್ನು ಉದಾರ ಹೃದಯ ದಿಂದ ಐದು ಜನ ಟ್ರಸ್ಟಿಗಳ ನೇಮಕಮಾಡಿ ಪತ್ರ ಬರೆದು ರಿಜಿಸ್ಟರ್ ಮಾಡಿಸಿ 'ಶ್ರೀ ಸಿದ್ಧೇಶ್ವರ ನಿಲಯ' ಎಂಬುದನ್ನು ಏರ್ಪಡಿಸಿ ಅದಕ್ಕಾಗಿ ಬಿಟ್ಟು ಕೊಟ್ಟಿರುತ್ತಾರೆ.

ಈ ಮಹೋಪಕಾರ ಕಾರ್ಯವನ್ನು ಗಮನಿಸಿ ಈ ಊರಿನ ಮತ್ತು ಈ ಪ್ರಾಂತದ ಕೆಲ ಮಹನಿಯರು ಸದರಿ ಸಿದ್ಧೇಶ್ವರ ನಿಲಯವನ್ನು ಪ್ರಾರಂಭಿಸಲು ತಾ. ೧೧-೧೨-೪೧ ರಲ್ಲಿ ಸೂರಣಗಿ ಸಂಗಪ್ಪನವರು ಮುನಸಿಪಲ್ ವೈಸ್ ಪ್ರೆಸಿಡೆಂಟ್ ಇವರ ಅಧ್ಯಕ್ಷತೆ ಯಲ್ಲಿ ಸಭೆ ಸೇರಿ ಈ ನಿಲಯದ ಸಂಚಾಲನೆಯ ಬಗ್ಗೆ ಈ ಕೆಳಗೆ ಕಂಡ ಒಂದು ಸಮಿತಿ ಯನ್ನು ಏರ್ಪಡಿಸಿದರು.

(೧) ಶ್ರೀ ಟಿ. ಗುರುಶಾಂತಪ್ಪನವರು

(೨) ಶ್ರೀ ಕೆ. ಬಂಗಾರಪ್ಪನವರು

(೩) ಶ್ರೀ ಪಟೇಲ್ ಶಿವಾಜಿಗೌಡರು

ಈ ಸಮಿತಿಯವರು ಈ ಊರಿನ ಬತ್ತದ ಯಂತ್ರಗಳು (Rice-mills), ಮಂಡಿಗಳು, ಮುಂತಾದವುಗಳಿಂದ ಚೀಲಕ್ಕೆ ಒಂದು ಹಿಡಿಯಂತೆ ಪತ್ತೆಯ ರೂಪ ದಲ್ಲಿಯೂ, ಮತ್ತು ರೈತರೇ ಮೊದಲಾದವರಿಂದ ಧನಧಾನ್ಯದ ರೂಪದಲ್ಲಿಯೂ ಸಹಾಯ ತೆಗೆದುಕೊಂಡು ವಿದ್ಯಾರ್ಥಿಗಳಿಗೆ ಭೋಜನಾದಿ ಸೌಕರ್ಯಗಳನ್ನೊದಗಿಸ

ಬೇಕೆಂದು ನಿರ್ಧರಿಸಿದರು. ಇದರ ಫಲವಾಗಿ ೧೮-೧-೪೨ ರಿಂದ ಮಾಧ್ಯಮಿಕ ಶಾಲೆಗೆ ಹಳ್ಳಿಯಿಂದ ಬರುವ ೫೫ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಕಾಲದ ಉಪಾಹಾರವಾಗಿ ಮೊಸರನ್ನವನ್ನು ಬೇಸಿಗೆ ರಜಾ ಪ್ರಾರಂಭವಾಗುವವರೆಗೂ ಕೊಡಲಾಯಿತು.

೧೯೪೨ ನೆಯ ಸಾಲಿನಲ್ಲಿ ಹಳ್ಳಿಗಳಲ್ಲಿ ಸಮಿತಿಯವರು ಸುಮಾರು ೫೦೦ ರೂ. ಬೆಲೆಬಾಳುವ ಬತ್ತ ಸಂಗ್ರಹಿಸಿದುದರ ಬಲದಿಂದಲೂ, ನಿಲಯದ ಆಶ್ರಯ ಬಯಸಿದ ವಿದ್ಯಾರ್ಥಿಗಳಿಂದ ತಿಂಗಳಿಗೆ ೧ ರಿಂದ ೩ ರೂಪಾಯಿವರೆಗೆ ಶುಲ್ಕ ವಸೂಲು ಮಾಡಿದುದರ ಬಲದಿಂದಲೂ, ತಾ. ೪-೫-೪೨ ರಿಂದ ಗ್ರಾಮಾಂತರದ ಮಕ್ಕಳಿಗೆ ಭೋಜನದ ಏರ್ಪಾಡಾಯಿತು. ಮೊದಲು ೧೫ ಜನ ವಿದ್ಯಾರ್ಥಿಗಳು ಸೇರಿದರು ಬರಬರುತ್ತ ಆ ಸಂಖ್ಯೆ ೨೪ಕ್ಕೆ ಮುಟ್ಟಿತು. ಇದಲ್ಲದೆ ೩೦ ಜನ ವಿದ್ಯಾರ್ಥಿಗಳಿಗೆ ಮಧ್ಯಾಹ್ನಾತ್ಪರ ತಿಂಡಿಗೂ ಏರ್ಪಾಡಾಯಿತು.

ಕೆಲವು ತಿಂಗಳುಗಳ ತರುವಾಯ ಮೇಲ್ಕಂಡ ಮೂವರು ಸಮಿತಿ ಸದಸ್ಯರೂ ಕಾಂಗ್ರೆಸ್‌ಗೆ ಸೇರಿದವರೆಂಬ ಕಾರಣದಿಂದ ಸೆರೆಮನೆ ಹೋದರು. ಆದರೂ ೧೯೪೨ರ ಬೇಸಿಗೆವರೆಗೆ ನಿಲಯದ ಭೋಜನ ವ್ಯವಸ್ಥೆ ಸುಲಲಿತವಾಗಿಯೇ ನಡೆಯಿತು.

೧೯೪೩-೪೪ ನೆಯ ಸಾಲಿನಲ್ಲಿ ೧೨ ಜನ ವಿದ್ಯಾರ್ಥಿಗಳು ವಿದ್ಯಾರ್ಥಿ ನಿಲಯದಲ್ಲಿದ್ದರು. ಅವರಿಗೆ ಬೆಳಿಗ್ಗೆ ರಾತ್ರಿ ಎರಡು ಹೊತ್ತು ಭೋಜನವಲ್ಲದೆ ಮಧ್ಯಾಹ್ನದಲ್ಲಿ ಮೊಸರನ್ನದ ಏರ್ಪಾಡನ್ನು ಮಾಡಲಾಗಿದ್ದಿತು.

೧೯೪೪-೪೫ ನೇ ಸಾಲಿನಲ್ಲಿ ೧೫ ಜನ ವಿದ್ಯಾರ್ಥಿಗಳು ಈ ನಿಲಯದಲ್ಲಿದ್ದರು. ೧೪೪೨ ರಲ್ಲಿ ಭೋಜನದ ಏರ್ಪಾಡು ಪ್ರಾರಂಭವಾದ ಮೇಲೆ ೧೮-೫-೪೨ರಲ್ಲಿ ಮ. ರಾ. ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪ ಗೌಡರವರ ಅಧ್ಯಕ್ಷತೆಯಲ್ಲಿ ಇಲ್ಲಿನ ಮತ್ತು ಈ ಪ್ರಾಂತದ ಮಹನಿಯರ ಸಭೆ ಸೇರಿದ್ದಿತು. ಈ ವಿದ್ಯಾರ್ಥಿ ನಿಲಯವನ್ನು ಸುಗಮವಾಗಿ ನಡೆಸಲು ಅಧಿಕಾರಿವರ್ಗ ಹಂಗಾಮಿ ಸಮಿತಿ, ದರ ನಿರ್ಧಾರಕರ ಸಮಿತಿ, ಬೋರ್ಡ್ ಆಫ್ ವಿಜಿಟರ್ಸ್ ಆರೋಗ್ಯ ಸಮಿತಿ ಏರ್ಪಾಡು ನಡೆಯಿತು.

(ಸಂಚಿಕೆ ೬೦-೬೧)

(೨)

## ಶ್ರೀ ಸಿದ್ಧೇಶ್ವರ ನಿಲಯ ಶಿರಾಳಕೊಪ್ಪ

ಶಿವಮೊಗ್ಗ ಜಿಲ್ಲಾ ಶಿರಾಳಕೊಪ್ಪದಲ್ಲಿ ೧೨ ವರ್ಷಗಳಿಂದಲೂ 'ಶ್ರೀ ಸಿದ್ಧೇಶ್ವರ ನಿಲಯ'ವೆಂಬ ವಿದ್ಯಾರ್ಥಿ ನಿಲಯವು ನಡೆಯುತ್ತಾ ಇದೆ. ಇದನ್ನು ನಡೆಯಿಸಲು ಶ್ರೀ ಚನ್ನಮಲ್ಲಿಕಾರ್ಜುನರವರು ಕೆಲವು ಮನೆ ಮತ್ತು ಗದ್ದೆಗಳನ್ನು ಕೊಟ್ಟು ೧೯೪೦ ರಲ್ಲಿ ಟ್ರಸ್ಟ್ ಡೀಡ್ ಮಾಡಿದ್ದಾರೆ. ಅವರ ಅಧ್ಯಕ್ಷತೆಯಲ್ಲಿ ಒಂದು ಟ್ರಸ್ಟ ಕಮೀಟಿ ಏರ್ಪಾಡಾಗಿದೆ. ಈ ಟ್ರಸ್ಟ್ ಕಮಿಟಿಯ ಮೆಂಬರರುಗಳಲ್ಲಿ ಬದಲಾವಣೆಯಾಗಿ ಈಗಿನ ಕಮಿಟಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರೇ ಅಧ್ಯಕ್ಷರಾಗಿ, ಎಣ್ಣೆ ವೀರಪ್ಪ

ನವರು ಸೆಕ್ರೆಟರಿಗಳಾಗಿ, ಟಿ. ಗುರುಶಾಂತಪ್ಪನವರು, ಮಂಚಿಕೊಪ್ಪದ ಮಠದ ಹಾಲಯ್ಯನವರು, ಬಿಸಲಹಳ್ಳಿ ಪಟೇಲ್ ಮಹಾದೇವಪ್ಪನವರು ಮೆಂಬರರುಗಳಾಗಿದ್ದಾರೆ. ಇದನ್ನು ನಡೆಸಿಕೊಂಡು ಹೋಗುವ ವ್ಯವಸ್ಥೆ ಮಾಡುವುದಕ್ಕೆ ಒಂದು ಕಾರ್ಯನಿರ್ವಾಹಕ ಸಮಿತಿ ಇರಬೇಕೆಂದೂ, ಈ ಸಮಿತಿಯು ವರ್ಷಕ್ಕೊಮ್ಮೆ ರಚಿತವಾಗಬೇಕೆಂದೂ, ಈ ಸಮಿತಿಯವರು ತಾವು ನಡೆಸಿದ ಜಮಾ ಖರ್ಚು ಲೆಖ್ಖವನ್ನು ಟ್ರಸ್ಟ್ ಕಮಿಟಿಯವರಿಗೆ ತಿಳಿಸಬೇಕೆಂದು ಏರ್ಪಾಡಾಗಿದೆ. ಜಾತ್ಯತೀತವಾದ ಶಿವಾದ್ವೈತ ಧರ್ಮಬೋಧೆಯ ವೀರಶೈವವನ್ನು ಪ್ರಚಾರಪಡಿಸುವುದಕ್ಕಾಗಿ ಆ ಸಂಬಂಧದ ಪುಸ್ತಕಗಳನ್ನುಳ್ಳ ಒಂದು ಪುಸ್ತಕ ಭಾಂಡಾರವೂ ಇರಬೇಕು. ಆ ಸಂಬಂಧದ ಗ್ರಂಥಗಳೆಂದರೆ ಮೊಗ್ಗೆಯ ಮಾಯಿದೇವರ ಶತಕತ್ರಯ, ಅನುಭವ ಸೂತ್ರ, ದೀಕ್ಷಾಬೋಧೆ, ಶೂನ್ಯ ಸಂಪಾದನೆ ಮೊದಲಾದ ಗ್ರಂಥಗಳು. ಅವನ್ನು ಪ್ರವಚನ ಮಾಡುವವರೂ ಅಲ್ಲಿ ಇರಬಹುದು. ಆ ಗ್ರಂಥಗಳನ್ನು ಅಭ್ಯಾಸ ಮಾಡುವ ಯಾವುದಾದರೂ ಶಾಲೆಯ ಅಥವಾ ಸ್ವಂತವಾಗಿ ಓದುವ ವಿದ್ಯಾರ್ಥಿಗಳಿಗೆ ಪ್ರಾಮುಖ್ಯತೆ ಕೊಟ್ಟು ನಿಲಯದಲ್ಲಿ ಸೇರಿಸಲನುಕೂಲತೆಯಿರಬೇಕು. ಅಲ್ಲದೆ ಶಿರಾಳಕೊಪ್ಪದ ಮಿಡಲ್‌ಸ್ಕೂಲ್ ಮತ್ತು ಹೈಸ್ಕೂಲ್ ವಿದ್ಯಾರ್ಥಿಗಳು ಈ ನಿಬಂಧನೆಗಳಿಗೊಳಪಟ್ಟವರನ್ನು ಇಲ್ಲಿ ಸೇರಿಸಬೇಕು. ಈ ನಿಲಯವು ಯಾವ ಶಾಲೆಗೂ ಸೇರಿದ್ದಾಗಿರದೆ ಸ್ವತಂತ್ರವಾಗಿರಬೇಕು. ಇತ್ಯಾದಿ ನಿಬಂಧನೆಗಳೇ ಏರ್ಪಡಿಸಲ್ಪಟ್ಟಿವೆ, ಕಾರ್ಯನಿರ್ವಾಹಕ ಸಮಿತಿ ಮೇಲೆ ಕಂಡ ಎಲ್ಲಾ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ಟ್ರಸ್ಟ್ ಕಮಿಟಿಯವರಿಗೆ ಸಹಾಯಕರಾಗಿ ಕೆಲಸಮಾಡಿ, ಈ ನಿಲಯವನ್ನು ಅಭಿವೃದ್ಧಿಪಡಿಸುವ ಕಾರ್ಯತತ್ಪರರಾಗಬೇಕೆಂದು ಗೊತ್ತುಮಾಡಲಾಗಿದೆ. ಇಂತಹ ಏರ್ಪಾಡು ಮಾಡದೆ ಇದ್ದ, ಕಾರ್ಯನಿರ್ವಾಹಕ ಸಮಿತಿಯವರನ್ನು ಬದಲಾಯಿಸಿ ಸರಿಪಡಿಸುವ ಅಧಿಕಾರವು ಟ್ರಸ್ಟ್ ಕಮಿಟಿಗೆ ಇರುತ್ತದೆ. ಈ ರೀತಿಯಾಗಿ ಮಾಡಿದ ಏರ್ಪಾಡಿನಿಂದ ಸ್ಥಲ ಪರಸ್ಥಲದ ಶಾಲಾವಿದ್ಯೆಯನ್ನು, ಧಾರ್ಮಿಕ ಆಚರಣೆಗಳನ್ನು ವಿದ್ಯಾರ್ಥಿಗಳು ಅಭ್ಯಾಸ ಮಾಡಲು ಈ ನಿಲಯದಿಂದ ಅನುಕೂಲವಿದೆ. ಇದನ್ನು ಅಭಿವೃದ್ಧಿಗೊಳಿಸಲು ಸರ್ವರೂ ಸಹಾಯ ಮಾಡಬೇಕಾಗಿ ಪ್ರಾರ್ಥಿಸುತ್ತೇನೆ.

(ತಾರೀಖು-ನಮೂದಿಸಿಲ್ಲ.) (ಸಂಚಿಕೆ ೧೨೪-೧೨೫)

# ಶಿರಾಳಕೊಪ್ಪದ ಮಠದ ಉತ್ತರಾಧಿಕಾರ

[ತಾ. ೧೨-೧೧-೫೯ನೆಯ ಗುರುವಾರ ಪ್ರಾತಃಕಾಲ ವೇದಾಂತಾಚಾರ್ಯ ಶ್ರೀ ಶಿವ ಕುಮಾರ ದೇವರಿಗೆ ಶಿರಾಳಕೊಪ್ಪದ ವಿರಕ್ತಮಠದ ನಿರಾಭಾರಿಚರಪಟ್ಟಾಧಿಕಾರ ಮಹೋತ್ಸವ ನಡೆಯುವ ಸಂದರ್ಭದಲ್ಲಿ ನಡೆದ ಕಾರ್ಯಕ್ರಮಗಳ ವಿವರ ಈ ಕೆಳಗಿನಂತೆ ಇವೆ. ಆಗ ಸದ್ಧರ್ಮದೀಪಿಕೆಯು ವಿಶೇಷ ಸಂಚಿಕೆಯನ್ನು ಪ್ರಕಟಿಸಲಾಗಿತ್ತು.]

## ಸದ್ಧರ್ಮದೀಪಿಕೆ ವಿಶೇಷ ಪತ್ರಿಕೆ ಸಂಚಿಕೆ ೧೫೫

ಶ್ರೀಮನ್ಮಹಾರಾಜ ನಿ. ಜಗದ್ಗುರು ಶ್ರೀ ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳವರು-ಚಿನ್ಮೂಲಾದ್ರಿ ಬೃಹನ್ಮಠ ಮಹಾಸಂಸ್ಥಾನ ಚಿತ್ರದುರ್ಗ.

ಈ ಮಹಾಪೂಜ್ಯರ ಪಂಚಕಲಶಯುಕ್ತ ರಜತದ ಅಡ್ಡಪಲ್ಲಕ್ಕಿ ಮಹೋತ್ಸವವು ದಿನಾಂಕ ೧೧-೧೧-೧೯೫೯ ರಲ್ಲಿ ಪ್ರಾತಃಕಾಲ ನಡೆದು ಈ ಮಹಾಸ್ವಾಮಿಗಳವರ ನೇತೃತ್ವದಲ್ಲಿ-ಶಿರಾಳಕೊಪ್ಪದ ವಿರಕ್ತಮಠದ ನಿರಾಭಾರಿ ಚರಪಟ್ಟಾಧಿಕಾರ ಸಮಾರಂಭ.

ಶ್ರೀ ನಿ. ಪ್ರ. ಶಂಕರಸ್ವಾಮಿಗಳು ನಂದವೇರಿಮಠ. ಶ್ರೀ ನಿ. ಪ್ರ. ರುದ್ರಸ್ವಾಮಿಗಳು ವಿರಕ್ತಮಠ ಶಿರಾಳಕೊಪ್ಪ ಇವರಿಂದ ಎಂ. ಎ. ಪದವೀಧರರೂ, ವೇದಾಂತಾಚಾರ್ಯರೂ, ನಂದವೇರಿಮಠದ ಉತ್ತರಾಧಿಕಾರಿಗಳಾಗಲಿರುವವರೂ ಆದ ಶ್ರೀ ಶಿವ ಕುಮಾರ ದೇವರಿಗೆ ದಿನಾಂಕ ೧೨-೧೧-೫೯ನೆಯ ಗುರುವಾರ ಪ್ರಾತಃಕಾಲ ೭-೨೦ ರಿಂದ ೮-೨೦ರ ವರೆಗೆ (ವಿಕಾರಿ ಸಂವತ್ಸರದ ಕಾರ್ತಿಕ ಶುದ್ಧ ೧೨ ಘಟಿ ೦-೫೯ ರಿಂದ ೨-೨೪) ಸಲ್ಲುವ ತುಲಾ ಲಗ್ನ ಶುಭಾಂಶದಲ್ಲಿ ಶಿರಾಳಕೊಪ್ಪದ ವಿರಕ್ತಮಠದ ಚರ ಪಟ್ಟಾಧಿಕಾರ (ಷಟ್‌ಸ್ಥಲ ಬ್ರಹ್ಮೋಪದೇಶ ಮುಂತಾದ ಸಂಸ್ಕಾರಗಳು) ನಡೆಯುತ್ತವೆ.

ಈ ಸಮಾರಂಭಕ್ಕೆ ಅ. ಭಾ. ಶಿವಾನುಭ ಸಂಸ್ಥೆಯ ಸಂಸ್ಥಾಪಕರೂ, ಸಂಚಾಲಕರೂ ಆದ ತ್ರಿವಿಧ ದಾಸೋಹ ಮೂರ್ತಿ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ ಅವರು ತಮ್ಮ ಚರತಿಂಥಿಣಿಯೊಡನೆ ದಯಮಾಡಿಸುತ್ತಾರೆ. (ಇತ್ಯಾದಿ.)

ಶ್ರೀ ಪೊಳಲ್, ಸಿರಿಪೊಳಲ್ ಎಂಬ ಹೆಸರುಗಳಿಂದ ಶಾಸನಗಳಲ್ಲಿ ಕರೆಯಲ್ಪಟ್ಟು ಸಾವಿರಾರು ವರ್ಷಗಳಿಂದ ಪ್ರಖ್ಯಾತವಾದ ಈ ಶಿರಾಳಕೊಪ್ಪದ ಕೋರಿ ಟೊಪ್ಪಿಗೆಮಠ ವಿರಕ್ತಮಠದಲ್ಲಿ ಬಹು ಪೂರ್ವರಿಂದಲೂ ಶಿವಾನುಭಾವ ವಿದ್ಯಾಪಾರಂಗತರಾದ ಸ್ವಾಮಿಗಳು ಇರುತ್ತಿದ್ದು ಈ ಸ್ಥಾನಕ್ಕೆ ಈಗ ಪ್ರಖ್ಯಾತ ವಿದ್ವಾಂಸರಾದ ಶಿವಕುಮಾರ ಸ್ವಾಮಿಗಳು ಉತ್ತರಾಧಿಕಾರವಹಿಸಲಿರುವುದು ಬಹಳ ಆನಂದದಾಯಕ ಸಂಗತಿಯಾಗಿದೆ. ಈ

ಆನಂದದ ಭರದಲ್ಲಿ 'ಶೂನ್ಯ ಸಿಂಹಾಸನಿರ್ಮಾಣ' ಎಂಬ ಹೆಸರಿನ ಪೂರ್ವಿಕರು ಬರೆದ ಪುಸ್ತಕವನ್ನು ಮುದ್ರಣಮಾಡಿ ಶ್ರೀ ಸಿದ್ಧೇಶ್ವರ ನಿಲಯದ ಪರವಾಗಿ ಮಹಾಪೂಜ್ಯರಾದ ಜಗದ್ಗುರುಗಳ ಸನ್ನಿಧಿಯಲ್ಲಿ ಕಾಣಿಕೆಯಾಗಿ ಅರ್ಪಿಸಲು ಸಂಕಲ್ಪಿಸಿಕೊಂಡಿದ್ದೇನೆ.

—ಪ್ರಕಾಶಕ (ಸಂ. ೧೫೫)

## ಶಿರಾಳಕೊಪ್ಪದ ಮಠದ ಶಾಸನ

[ಶಿರಾಳಕೊಪ್ಪದ ಮಠದಲ್ಲಿರುವ ಶಾಸನವನ್ನು ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಸದ್ಧರ್ಮದೀಪಿಕೆ ಸಂಚಿಕೆ ೫೬–೫೭ ರಲ್ಲಿ ಪ್ರಕಟಿಸಿದ್ದಾರೆ. ಅದರ ವಿವರವನ್ನು ಮಠದ ವಿಷಯದಲ್ಲಿ ಬರೆದುದನ್ನು ಈ ಕೆಳಗೆ ಕೊಟ್ಟಿದೆ.]

"ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರಿಗಾಸಿದ್ಧೇಂದ್ರರ ಚರಮೂರ್ತಿಗಳಾದ ಕೋರಿ ಟೊಪ್ಪಿಗೆ ಚನ್ನಮಲ್ಲದೇವರಿಗೆ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೭೨೫ನೆಯ ರುಧಿರೋದ್ಗಾರಿ ಸಂವತ್ಸರ ಮಾಘ ಶುದ್ಧ ೧ ಸ್ಥಿರವಾದ ಸ್ಥಲ ಪರಸ್ಥಲ ದೈವದವರು ಭಕ್ತಿಯಿಂದ ಶಿಲಾಸ್ಥಾಪನಮಾಡಿ ನಮಸ್ಕಾರ ಮಾಡಿದ್ದು" (ಇದಿಷ್ಟು ಶಾಸನ).

ಈ ಶಾಸನದ ಕಾಲದಿಂದೀಚೆಗೆ ನಾಲ್ಕು ಜನರು ಮಠಕ್ಕೆ ಸ್ವಾಮಿಗಳಾಗಿದ್ದಾರೆ. ಇವರಿಗೆ ಒಡೆಯರೆಂದು ಕರೆಯುವ ರೂಢಿಯೂ ಇದ್ದಿತು, ಎಂದು ಗೊತ್ತಾಗಿದೆ. ಮೂರನೆಯವರಾದ ಸ್ವಾಮಿಗಳು ಬಹಳ ವಿದ್ಯಾವಂತರಾಗಿದ್ದರು. ಈ ಮಠದಲ್ಲಿ ಓಲೆಯ ಪುಸ್ತಕಗಳು ಯಥೇಚ್ಛವಾಗಿದ್ದವು. ಶಿವಯೋಗ ಮಂದಿರಕ್ಕೆ ಇಲ್ಲಿಂದ ಅನೇಕ ಪುಸ್ತಕಗಳನ್ನು ತೆಗೆದುಕೊಂಡು ಹೋಗಿದ್ದಾರೆ. 'ಸಂಸ್ಕೃತ ಶತಕತ್ರಯ' (ಮೊಗ್ಗೆಯ ಮಾಯಿದೇವ ವಿರಚಿತ) ಮುಂತಾದವು ಇಲ್ಲಿನ ಓಲೆಯ ಭಾಂಡಾರದಲ್ಲಿ ಇದ್ದುವು. ಈ ಮಠದ ಸ್ವಾಮಿಗಳು ಇನ್ನುಮುಂದೂ ಶ್ರೀ ಮನ್ಮಹಾರಾಜರವರ ಜಯಘೋಷಣೆ ಮಾಡುತ್ತ ಅವರ ಉನ್ನತಿಯನ್ನೆ ಬಯಸತಕ್ಕವರಾಗಿದ್ದಾರೆ ಎಂಬುದು ಅವರ ಅಪ್ಪಣೆಯಿಂದ ತಿಳಿದುಬಂದಿದೆ. ಶ್ರೀಮಾನ್ ಬಾಳರಾಜ ಅರಸಿನವರು ಶಿವಮೊಗ್ಗ ಜಿಲ್ಲಾಧಿಕಾರಿಗಳಾಗಿ ಬಂದಾಗ ಈ ಮಠದ ಮೂಲ ಸಂಗತಿಗಳನ್ನೆಲ್ಲ ವಿಚಾರಿಸಿ ಮಠಕ್ಕೆ ಉಂಟಾಗಿದ್ದ ಸ್ಥಲ ಸಂಬಂಧವಾದ ಅನೇಕ ತೊಂದರೆಗಳನ್ನು ನಿವಾರಣೆ ಮಾಡಿ, ಸ್ವಾಮಿಗಳಲ್ಲಿ ಭಕ್ತಿಯನ್ನು ತೋರಿಸಿ ಮಠಕ್ಕೆ ಬಂದು ಬಹಳ ಸಂತೋಷಪಟ್ಟರು.

(ಸಂಚಿಕೆ ೫೬-೫೭)

## ಶ್ರೀ ಚನ್ನಮಲ್ಲಿಕಾರ್ಜುನರ ಜಮಾ ಖರ್ಚಿನ ಮಾದರಿ

[ಶ್ರೀ ಚ. ರವರು ಕಾಸು ಕಾಸಿನ ಲೆಖ್ಖವನ್ನೂ ಇಡುತ್ತಿದ್ದರು. ಅದಕ್ಕಾಗಿ ದೊಡ್ಡ ಪುಸ್ತಕವನ್ನೇನೂ ಇಡುತ್ತಿರಲಿಲ್ಲ. ಕ್ರೌನ್ ಅಷ್ಟದಳಾಕಾರದಲ್ಲಿ ಬಿಳಿಯ ಹಾಳೆಯ ಪುಸ್ತಕವೊಂದನ್ನು ತಾವೇ ಹೊಲಿದು ಅದಕ್ಕೆ ಮರೆ ಹಾಳೆ ಹಾಕಿ ಅತಿ ಚಿಕ್ಕ ಅಕ್ಷರಗಳಲ್ಲಿ ಎಲ್ಲವನ್ನೂ ಬರೆದಿಡುವುದು ಅವರ ದಿನಚರಿಗಳಲ್ಲಿ ಒಂದಾಗಿತ್ತು. ಅವರ ಲೆಖ್ಖದ ಮಾದರಿಯನ್ನು ಈ ಕೆಳಗೆ ಕೊಡಲಾಗಿದೆ. ಇದಕ್ಕೆ ಆಧಾರ: ಅವರು ಕ್ರಿ. ಶ. ೧೯೩೧ನೆಯ ಇಸ್ವಿ ಮತ್ತು ೩೨ನೆಯ ಇಸ್ವಿಗಳ ಲೆಖ್ಖದ ಎರಡು ಪುಸ್ತಕಗಳು.]

(ಪುಟ ೧)

ಶಿವಲಿಂಗ ವಿಜಯ ಮುದ್ರಣಾಲಯ

ಪ್ರಾರಂಭ: ಪ್ರಜೋತ್ಪತ್ತಿ ಸಂವತ್ಸರ ಚೈತ್ರ ಶುದ್ಧ ೧. ಯುಗಾದಿ ತಾ. ೨೦-೩-೩೧.

| ಜಮಾ | ಖರ್ಚು | ವಿವರ |
|---|---|---|
| ೨ | | ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹಾವೇರಿ ಇವರಿಂದ ಜಮಾ ಪ್ರೆಸ್ಸಿನ ಕೆಲಸ ಆರಂಭಿಸುವ ಬಗ್ಗೆ ಎಂತ ಆಶೀರ್ವಾದಪೂರ್ವಕವಾಗಿ ಕೊಟ್ಟದ್ದು. |
| ೨ | | ಸ್ವಂತ ಖಾತೆ ಜಮಾ ನಗದು. |
| ೬।। | | ಗುರುಮೂರ್ತಿಶಾಸ್ತ್ರಿಗಳು ಕಜ್ಜರಿ ಇವರ ಹಸ್ತೆ-ರಾಚಪ್ಪ ಅಗಸಾಲಿ ಇವರ ಖಾತೇಕ್ಕೆ ಜಮಾ ಕಾಗದಗಡ್ಡೆ ರಂಜಿತ ಹಾಳೆಗಳು ದ. ೬।।. |
| | ೪ | ರಾಚಪ್ಪ ಅಗಸಾಲಿ ಇವರ ಖಾತೆಕ್ಕೆ ಖರ್ಚು ಹಸ್ತೆ ಕಜ್ಜರಿ ಗುರುಮೂರ್ತಿಶಾಸ್ತ್ರಿಗಳು ಕಾಗದದ ಗಡ್ಡೆಯ ಬಗ್ಗೆ. |
| | ೬।। | ಮುದ್ರಣಾಲಯದ ಖಾತೆ ಖರ್ಚು ಕಾಗದದ ಗಡ್ಡೆ ರಂಜಿತ. |
| ೧ | | ಶ್ರೀ ಮ. ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿ ಮಠ ಇವರಿಂದ ಜಮಾ ನಗದು. |
| ೫ | | ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿ ಮಠ ಇವರಿಂದ ಜಮಾ ನಗದು. ೨೫-೩-೩೧. |
| ೫ | | ಸ್ವಂತ ಖಾತೆ ಜಮಾ ನಗದು. ೨೬-೩-೩೧. |
| | ೪। | ಮುದ್ರಣಾಲಯದ ಖಾತೆಗೆ ಖರ್ಚು ಕಾಗದಗಡ್ಡೆ ಎರಡು ದರ ೨= ಎರಡು ಸಲ ತಂದದ್ದು. |
| | । | ವಿರುಪಾಕ್ಷಯ್ಯ ಈತನಿಗೆ ನಗದು ಕೊಟ್ಟದ್ದು. |
| ೨೦।। | ೧೫ | |

(ಪುಟ ೨)

| ಜಮಾ | ಖರ್ಚು | ವಿವರ |
|---|---|---|
| ೨೧॥ | ೧೫ | ಹಿಂದಿನ ಜುಮ್ಲಾ– |
| | ೨= | ಸಾದಿಲ್ವಾರ್ ಖರ್ಚು–ಬೀಗ ಸ್ಪ್ಯಾನರ್ ಮಸಿ, ನಿಬ್, ಸೋಡಾ<br>। ॥ । ಮೈದಾ<br>ಗಡಿಯಾರ ರಿಪೇರಿ ಸೀಮೆಯೆಣ್ಣೆ ಎರಡು ಸಾರೆ ಪೋಸ್ಟೇಜು<br>≡ ≡ ಕಾರ್ಡು ಕವರು<br>॥≡ |
| | = | ಸ್ವಂತ ಖರ್ಚು ಬೆಣ್ಣೆಯ ಬಗ್ಗೆ ೨೬-೩-೩೧ |
| ೩ | | ಮುದ್ರಾಲಯ ಖಾತೆಗೆ ಜಮಾ ಚನಬಸಪ್ಪ, ಬಸವಣ್ಣೆಪ್ಪ ಮುಗದೂರು ಸಾಕಿನ ಹಾವೇರಿ ಇವರಿಂದ ಜಮಾ ಮುದ್ರಣ ಮಾಡಿಕೊಟ್ಟ ಬಗ್ಗೆ ೧-೪-೩೧ |
| ೨೪॥ | ೧೭। | |
| ೧೨। | | ಖರ್ಚು ವಜಾ |
| ೭। | | ಶಿಲ್ಕು |
| | | **ತಾ. ೨–೪–೩೧ರ ಲಾಗಾಯಿತು** |
| ೭। | | ಈ ದಿನದ ಶ್ರೀ ಶುಲ್ಕು |
| | । | ವಿರುಪಾಕ್ಷಯ್ಯನವರಿಗೆ ನಗದು ಕಂಪೋಜಿಟರು. |
| | ೨॥ | ಮುದ್ರಾಲಯದ ಖಾತೆಗೆ ಖರ್ಚು ಕಾಗದ ಗಡ್ಡೆ ೧ |
| | ॥= | ಸಾದಿಲ್ವಾರ್ ಖಾತೆಗೆ ಖರ್ಚು ಬೀಗ ೧, ಪಾಟಲಾಕು ಎರಡು ಜೊತೆ ಮಳೆ ಸಹಾ ವಗೈರೆ ಶೀಸ ವಗೈರೆ = |
| | =೬ | ಸ್ವಂತ ಖಾತೆ ಖರ್ಚು ಕ್ಷೌರದ ಬಗ್ಗೆ. |
| | ≡೬ | ಸಾದಿಲ್ವಾರ್ ಖಾತೆಖರ್ಚು ಸೀಮೆಯೆಣ್ಣೆ ಚಿಲ್ಲರ ಕೂಲಿ ವಗೈರೆ<br>=೩ =೩ |
| ೭। | ೩।= | |
| ೩।= | | |
| ೩।।।= | | ಜಾತಾ ಶಿಲ್ಕು |

(ಪುಟ ೩) **ತಾ. ೯-೪-೩೧ರ ಲಾಗಾಯಿತು**

| ಜಮಾ | ಖರ್ಚು | ವಿವರ- |
|---|---|---|
| ೩\|\|\| = | | ಶಿಲ್ಕು. |
| | \|=೬ | ಸಾದಿಲ್ವಾರ್ ಖಾತೆ ಖರ್ಚು-ಲ್ಯಾಟನ್ನಿನ ಗ್ಲಾಸು, ಸೀಮೆಯೆಣ್ಣೆ<br>\| =೬ |
| ೧\|\| | | ಕರ್ಜಗಿ ಸಾಲಿಖಾನಿ ಗುರುಸಿದ್ದಪ್ಪನವರಿಂದ ಕಾರ್ಡು ಪ್ರಿಂಟುಮಾಡಿ ಬಂದದ್ದು ಮುದ್ರಾಲಯ ಖಾತೆ ಜಮಾ ೧೪-೪-೩೧ |
| ೪ | | ಶಿರಾಳಕೊಪ್ಪದ ಮುದುಕಯ್ಯನವರಿಂದ ಜಮಾ—ಲಗ್ನಪತ್ರಿಕೆ ಪ್ರಿಂಟು ಮಾಡಿಕೊಟ್ಟ ಬಗ್ಗೆ ಮುದ್ರಾಲಯ ಖಾತೆ ಜಮಾ— |
| ೫ | | ಶಿವಲಿಂಗವಿಜಯ ಮುದ್ರಣಾಲಯದ ಭಂಡವಾಳದ ಖಾತೆ ಜಮಾ-ಆಲೂರ ಲಿಂಗಪ್ಪಣ್ಣನವರ ಹಸ್ತೆ ಜಮಾ ಅವರೇ ಧರ್ಮಾರ್ಥವಾಗಿ ಕೊಟ್ಟಿದ್ದು— |
| | -೬ | ಸಾದಿಲ್ವಾರ್ ಖಾತೆ ಖರ್ಚು ಚಿಲ್ಲರೆ ಮಲ್ಲಯ್ಯನಿಗೆ ಇತರ<br>- ೦೬ |
| ೧೪\|= | \|\| | |
| ೧೩\|\|\| = | | ಶಿಲ್ಕು. |
| | | **ತಾ. ೧೬-೪-೩೧ರ ಲಾಗಾಯಿತು** |
| | ೧ | ಹುಬ್ಬಳ್ಳಿ ಸೋಮಶೇಖರ ಶಾಸ್ತ್ರಿಗಳ ಖಾತೆ ಖರ್ಚು ಲೆಡ್ಸ್ ಕಳುಹಿಸುವ ಬಗ್ಗೆ ಕೊಟ್ಟಿದು. |
| | \|\| = | ಸಾದಿಲ್ವಾರ್ ಖಾತೆ ಖರ್ಚು—ಮರೆದು ೨, ಬ್ರಷ್ ೧,<br>\| ≡<br>ಬೋಲ್ಟ್ ೧ ಮಳೆ ೯ ದೀಪದ ಪೆಟ್ಟಿಗೆ ೧<br>- ೦೯ ೩ |
| ೧ | | ಹುಬ್ಬಳ್ಳಿ ಸೋಮಶೇಖರ ಶಾಸ್ತ್ರಿ ಖಾತೆ ಜಮಾ—ಲೆಡ್ಸ್ ಕಳಿಸಿದ್ದು ಬಂದು ಮುಟ್ಟಿದ್ದರಿಂದ— Sagar Brothers Printing works Hubli |
| | ೧ | ಮುದ್ರಾಲಯದ ಸಾದಿಲ್ವಾರ ಖಾತೆ ಖರ್ಚು ಲೆಡ್ಸ್ ತರಿಸಿದ ಬಗ್ಗೆ |
| | ೪\|\| | ಹೆಚ್ಚಾಗಿ ಮಳೆ ಬಂದು ತಗಡು ಹಾರಿದ್ದು ೧೮-೪-೩೧ ವಾಲಿಯವರ ಮಠದ ರಿಪೇರಿ ಖಾತೆ ಖರ್ಚು.<br>ಡಾಂಬ್ರ ಯೆಣ್ಣೆ, ಮಳೆ ಸೇರು ೩, ವಾಯ್ಸರ್, ಕೂಲಿ ಆಳು<br>\|\|= \|\|- ೧- ೧=<br>ಬಡಗಿ ಕೂಲಿ ತಗಡು ಹಾಕಿಸಿದ್ದು<br>೧ |
| ೧೪\|\|\| = | ೨= | |

ಮೇಲಿನ ಈ ವಿಷಯವನ್ನು ಗಮನಿಸಿದರೆ ಶ್ರೀ ಜ. ರವರು ಲೆಕ್ಕವಿಡುವುದರಲ್ಲಿ ಕಾಸು ಕಾಸನ್ನು ಲಕ್ಷ್ಯದಲ್ಲಿಟ್ಟು ಬರೆದಿಡುತ್ತಿದ್ದರೆಂಬುದು ವೇದ್ಯವಾಗುವ ಅಂಶ. ತಮ್ಮ ಶಿವಪೂಜೆಗೆ ಮತ್ತು ಪ್ರಸಾದಕ್ಕಾಗಿ ಸಾಮಾನು ತಂದರೆ ಅದನ್ನು ಶಿವಾರ್ಪಿತ ಖಾತೆ ಖರ್ಚು ಎಂದು ಬರೆದಿಡುತ್ತಿದ್ದುದು ಅವರ ಜಮಾ ಖರ್ಚಿನ ಪುಸ್ತಕದಿಂದ ವೇದ್ಯವಾಗುವುದು ಕೆಲವು ಕಡೆ ತಾರೀಖು ನಮೂದಿಸುತ್ತಿದ್ದರು. ಪ್ರೆಸ್ಸಿನ ಪ್ರಾರಂಭದಲ್ಲಿ ಅವರ ವ್ಯವಹಾರ ಎಷ್ಟು ಅಲ್ಪವಾಗಿತ್ತೆಂಬುದೂ, ಅದಕ್ಕಾಗಿ ಭಂಡವಾಳವು ಅಲ್ಪ ಅಲ್ಪವಾಗಿ ಸಾರ್ವಜನಿಕರಿಂದ ಹೇಗೆ ಬರುತ್ತಿತ್ತೆಂಬುದೂ ತಿಳಿಯುವುದರ ಜೊತೆಗೆ ತಾ. ೨೦-೩-೩೧ ರಿಂದ ೧೬-೪-೩೧ರ ವರೆಗೆ ಅವರ ವ್ಯವಹಾರ ಸಮೀಕ್ಷೆಯನ್ನು ಮೇಲಿನ ಲೆಖ್ಖ ನಮಗೆ ಒದಗಿಸಿಕೊಡುತ್ತದೆ. ಹೀಗೆ ಚಿಕ್ಕದಾಗಿ ಪ್ರಾರಂಭಗೊಂಡ ಅವರ ಮುದ್ರಣಾಲಯದ ವ್ಯವಹಾರ ಉತ್ತರೋತ್ತರ ಬೃಹತ್ತಾಗಿ ಬೆಳೆದು ಏಳೆಂಟು ಜನ ಕೆಲಸಗಾರರಿಂದ ಹಾವೇರಿಯಲ್ಲಿ ನಡೆಯುತ್ತಿತ್ತು. ಮೈಸೂರಿಗೆ ಹೋದ ಮೇಲೆ ಒಬ್ಬ ಚಿಕ್ಕ ಹುಡುಗನನ್ನು ಮಾತ್ರ ಇಟ್ಟುಕೊಂಡು ನಾಲ್ಕೈದು ವರ್ಷ ಕೆಲಸ ಸಾಗಿಸಿದರು. ಅಲ್ಲಿ ಸ್ವತಂತ್ರ ಪ್ರೆಸ್ ಒಂದನ್ನು ಸಿದ್ಧೇಶ್ವರ ಪ್ರೆಸ್ ಎಂದು ಮಾಡಿಕೊಂಡ ಮೇಲೆ ೨-೩ ಜನ ಹಂಗಾಮಿ ಕೆಲಸಗಾರರನ್ನು ನೇಮಿಸಿಕೊಂಡಿದ್ದರು.

# ಶ್ರೀ ಚನ್ನಮಲ್ಲಿಕಾರ್ಜುನರ ಒಂದು ಪತ್ರದ ಮಾದರಿ

[ಶ್ರೀ ಜ. ರವರ ಜೀವಿತದ ಮುಖ್ಯ ಧ್ಯೇಯ. ವೀರಶೈವ ಸಂಸ್ಕೃತಿ, ಸಾಹಿತ್ಯ. ಧರ್ಮ ರಕ್ಷಣೆ ಪ್ರಸರಣೆ ಪೋಷಣೆಗೆ ಸಂಬಂಧಿಸಿರುವುದೇ ಆಗಿತ್ತು. ಏಕದ್ವಿಷಯಕವಾದ ಒಂದು ಪತ್ರವನ್ನು ಹಾನಗಲ್ಲು ಮಠದ ಆಗಿನ ಸ್ವಾಮಿಗಳವರಾದ ಶ್ರೀ ನಿ. ಪ್ರ. ಸದಾಶಿವಸ್ವಾಮಿಗಳವರಿಗೆ ಬರೆದುದರ ಮಾದರಿಯನ್ನು ಈ ಕೆಳಗೆ ಅವಲೋಕಿಸಬಹುದು.]

(ಪತ್ರದ ಯಥಾನಕಲು)

ಶ್ರೀ ನಿ. ಜ. ಸದಾಶಿವಸ್ವಾಮಿಗಳವರು ಜಡೇ ಹಾನಗಲ್ಲು ಸಂಸ್ಥಾನಮಠ ಇವರ ದಿವ್ಯವಾದ ಸನ್ನಿಧಿಯಲ್ಲಿ.

ಸೇವಕ ಶ್ರೀ ಚನ್ನಮಲ್ಲಿಕಾರ್ಜುನನ ಸಾಷ್ಟಾಂಗ ಬಿನ್ನಹಂಗಳು. ಈವರೆವಿಗೆ ಪಾದ ಕೃಪೆಯಿಂದ ಕ್ಷೇಮ. ಸನ್ನಿಧಾನದ ‖ ‖ ಆನಂದ ವೈಭವಂಗಳಿಗೆ ಆಶೀರ್ವಾದ ಪತ್ರವನ್ನು ಬರೆಸುತ್ತಿರಬೇಕೆಂದು ಬೇಡುತ್ತೇನೆ.

ಸನ್ನಿಧಾನದ ಆಶೀರ್ವಾದ ಪತ್ರ ತಲುಪಿತು. ಈಗ ಮತ್ತೊಂದು ಲೇಖನವು "ವೀರಶೈವದಲ್ಲಿ ನವೀನ ಏರ್ಪಾಡು ಎಂಬ ವಿಷಯದಲ್ಲಿ ಪ್ರಕಟವಾದುದನ್ನು ಕಳುಹಿಸಿದ್ದೇನೆ. ಹೀಗೆಯೇ ಲೇಖನಗಳು ಬೆಳೆದರೆ ಜಂಗಮದ ವಿಷಯವು ಚೆನ್ನಾಗಿ ಪ್ರಕಟವಾಗುವುದು; ಈ ಲೇಖನಕ್ಕೆ ಅವರು ಏನು ಬರೆಯುವರೋ ನೋಡೋಣ.

ಸಂಸ್ಕೃತ ಶತಕತ್ರಯ ಸುಮಾರು ೫೨೦ ಶ್ಲೋಕಗಳು ಉಳ್ಳದ್ದು ಕಲ್ಯಾಣ ದಾಪ್ಪಯನು ರಚಿಸಿದಂತೆ ಅದರಲ್ಲಿ ಬರೆಯಲ್ಪಟ್ಟಿದೆ. ಬಹುಶಃ ಮೊಗ್ಗೆಯ ಮಾಯಿದೇವರೇ ಆಗಿರಬೇಕು. ಅವರ ಕನ್ನಡ ಶತಕತ್ರಯದ ಅಭಿಪ್ರಾಯವೇ ಅದರಲ್ಲಿ ಬಂದಿರುವುದು. ಒಂದೊಂದು ಕನ್ನಡ ಪದ್ಯಕ್ಕೆ ಸಂಸ್ಕೃತ ಶ್ಲೋಕಗಳು ೧-೨-೩ ಈ ರೀತಿಯಲ್ಲಿ ೫೦೦ ಚಿಲ್ಲರೆ ಶ್ಲೋಕಗಳಾಗಿವೆ. ಆದರೆ ಅದಕ್ಕೂ ಶತಕತ್ರಯ ಎಂತ ಹೆಸರು ಇದೆ.

ವೀರಶೈವ ತತ್ವವನ್ನು ಸಂಸ್ಕೃತದಲ್ಲಿ ತಿಳಿಯಬೇಕೆಂಬುವವರಿಗೆ ಈ ಪುಸ್ತಕದ ಉಪಯೋಗವು ಬಹಳ. ಇದನ್ನು ಕಾಶಿ, ಕಲಕತ್ತಾ ಪರೀಕ್ಷೆಗಳಿಗೆ ಟೆಕ್ಸ್ಟ(ಪಠ್ಯಪುಸ್ತಕ) ಆಗಿ ಇಡಿಸಲಿಕ್ಕೆ ಬರುವಂತೆ ಇದೆ. ಕನ್ನಡ ಲಿಪಿಯಲ್ಲಿ ಯಾವ ಸಂಸ್ಕೃತ ಗ್ರಂಥವನ್ನು ಅಚ್ಚು ಹಾಕಿದರೂ ಕನ್ನಡಿಗರಿಗೆ ಅದರ ಬೆಲೆ ತಿಳಿಯದು. ಸಂಸ್ಕೃತದಲ್ಲಿ ಅಚ್ಚಾದ ಕ್ರಿಯಾಸಾರವನ್ನು ಜರ್ಮನಿ ಸ್ಕ್ರೋಡರ್ ಎಂಬ ಪಂಡಿತನು ತನಗೆ ಕಳುಹಿಸಿಕೊಡಲು ನನ್ನನ್ನು ಕೇಳಿದನು. ಈ ಕಾರಣದ ದೆಸೆಯಿಂದ ಅದನ್ನು ದೇವನಾಗರಿ ಲಿಪಿಯಲ್ಲಿ

ಮುದ್ರಿಸಬೇಕಾಗಿದೆ. ಈಗ ಒಳ್ಳೆಯ ಕಾಗದವೂ ಸಿಕ್ಕುತ್ತದೆ. ಇಲ್ಲಿ ಆ ಲಿಪಿಯಲ್ಲಿ ಮುದ್ರಣ ಮಾಡುವವರೂ ಇದ್ದಾರೆ. ಮೂಲವನ್ನು ಮಾತ್ರ ಕೆಲವು ಟಿಪ್ಪಣಿಗಳೊಡನೆ ಮುದ್ರಿಸಬೇಕಾಗಿದೆ. ಸುಮಾರು ಐದು ನೂರು ರೂಪಾಯಿಗಳು ಖರ್ಚಾಗಬಹುದು. ಈ ಪುಸ್ತಕವನ್ನು ಮುದ್ರಿಸಲು ತಾವು ಸಹಾಯ ಮಾಡಿದರೆ ತಮ್ಮ ಕೀರ್ತಿಯು ಉಳಿಯುವುದು. ತಮ್ಮ ಫೋಟೋ ಸಹ ಪುಸ್ತಕದಲ್ಲಿ ಹಾಕಿಸಬಹುದು. ಒಂದು ರೂಪಾಯಿಗೆ ಒಂದರಂತೆ ಬೆಲೆಯಿಟ್ಟರೂ ಐದು ನೂರು ಪ್ರತಿಗಳನ್ನು ತಮಗೆ ಅರ್ಪಿಸುವುದರಿಂದ ತಮ್ಮ ದ್ರವ್ಯವೂ ಅವುಗಳ ಖರ್ಚಿನಿಂದ ದೊರೆಯಬಹುದು. ಈಗ ಆ ಪ್ರತಿ ಎತ್ತಿ ಬರೆದಿಟ್ಟು ಆಗಿದೆ. ಇಲ್ಲಿ ಲೈಬ್ರರಿ ಪಂಡಿತರ ಸಹಾಯದಿಂದ ಅದಕ್ಕೆ ಟಿಪ್ಪಣೆಯನ್ನೂ ಬರೆಯುತ್ತೇವೆ. ದಯವಿಟ್ಟು ಈ ಬಗ್ಗೆ ತಮ್ಮ ಒಪ್ಪಿಗೆಯನ್ನು ಬರೆಸೋಣಾಗಬೇಕಾಗಿ ಬೇಡುತ್ತೇನೆ.

ಶ್ರೀ ನಿರಂಜನ ನವಲುಗುಂದ ಶ್ರೀ "..."ಯವರು ಇಲ್ಲಿಗೆ ಬಿಜಯಂಗೈಸಿದ್ದರು. ನನ್ನಿಂದ ಹೀರೆಯಕಾಯಿ, ಸೌತೇಕಾಯಿ, ಭಕ್ತಿಬೇಕೆಂದಪೇಕ್ಷಿಸಿದರು ನಾನೂ ಅರ್ಪಿಸಿದೆ. ಇನ್ನು ಮೇಲೆ ವಿಶ್ರಾಂತಿ ತೆಗೆದುಕೊಂಡು ಸುಮ್ಮನೆ ಇರಿ ಎಂದು ಅಪ್ಪಣೆ ಮಾಡಿದರು. ಸಮಾಜ ಸೇವೆಯನ್ನು ಶಕ್ತಿಯುಳ್ಳವರೆವಿಗೂ ಮಾಡದೆ ಇದ್ದರೆ ಮನಸ್ಸಿಗೆ ಸಮಾಧಾನವಾಗುವುದಿಲ್ಲ. ಎಂಬ ಹೃದಯದ ಧ್ಯೇಯವನ್ನು ಅವರಿಗೆ ಬಿನ್ನವಿಸಿದೆನು. ನಡೆದ ಸಂಗತಿಯನ್ನು ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಂಡಿದ್ದೇನೆ. ಕೃಪಾಪೂರ್ಣವಿರಲಿ. ಇಂತೀ ಸಾಷ್ಟಾಂಗ ಬಿನ್ನಹಂಗಳು.

'ಶತಕತ್ರಯದ' ವಿಷಯದಲ್ಲಿ ಸಾಧ್ಯವಾದಷ್ಟು ಬೇಗನೆ ಬರೆಸೋಣಾಗಬೇಕಾಗಿ ಬೇಡುತ್ತೇನೆ. ಇಂತೀ ಸಾಷ್ಟಾಂಗ ಬಿನ್ನಹಂಗಳು.

೨೦–೧–೪೯

(ಸಹಿ ಇಲ್ಲ)

# ಕವಿ ಶ್ರೀ ಚೆನ್ನಮಲ್ಲಿಕಾರ್ಜುನರು

ಶ್ರೀ ಚೆನ್ನಮಲ್ಲಿಕಾರ್ಜುನರು ಪದ್ಯಗಳನ್ನೂ ಬರೆಯುತ್ತಿದ್ದುದುಂಟು. ಆದರೆ ಅವರು ಬರೆದ ಪದ್ಯಗಳು ಕೇವಲ ಕಂದಪದ್ಯಗಳು. ಮೈಸೂರಿನಿಂದ ತಮ್ಮ ಪತ್ರಿಕೆ ಹೊರಡುವಾಗ ಸಾಮಾನ್ಯವಾಗಿ ಪ್ರತಿ ಸಂಚಿಕೆಯ ಮೇಲು ಹೊದಿಕೆಯ ಪ್ರಥಮ ಪುಟದ ಮೇಲೆ ಒಂದೊಂದು ಕಂದಪದ್ಯ ಇದ್ದೇ ಇರುತ್ತಿತ್ತು. ಒಮ್ಮೊಮ್ಮೆ ಎರಡು ಪದ್ಯಗಳೂ ಇರುತ್ತಿದ್ದವು. ಈ ಕೆಳಗೆ ಕೆಲವು ಪದ್ಯಗಳನ್ನು ಮಾದರಿಗಾಗಿ ಕೊಟ್ಟಿದ್ದೇವೆ. ಪದ್ಯದ ಮುಂದಿರುವ ಸಂಖ್ಯೆ ಆಯಾಯ ಸಂಚಿಕೆಯ ನಂಬರನ್ನು ಸೂಚಿಸುತ್ತದೆ. ಒಮ್ಮೊಮ್ಮೆ ಯಾರಾದರೂ ಶರಣ ಮಾರ್ಗಾನುಗಾಮಿಗಳಾಗಿದ್ದರೆ ಅವರ ವಿಷಯವಾಗಿಯೂ ಒಂದೊಂದು ಕಂದ ಪದ್ಯವನ್ನು ಬರೆಯುತ್ತಿದ್ದುದು ಕಂಡುಬಂದಿದೆ. ಬೆಳಗಾವಿಯ ಚೆನ್ನಮ್ಮ ವೀರಪ್ಪ ಉಪ್ಪಿನ ಎಂಬುವರು ಲಿಂಗೈಕ್ಯರಾದಾಗ ಅವರ ಸಂಕ್ಷೇಪ ಜೀವನ ಚರಿತ್ರೆಯೊಡನೆ ಸಂ. ೧೩ ರಲ್ಲಿ ಹೀಗೆ ಒಂದು ಕಂದಪದ್ಯ ಹೇಳಿದ್ದಾರೆ. ಆ ಪದ್ಯವನ್ನೇ ಮೊದಲು ಬರೆದಿವೆ: ಒಮ್ಮೊಮ್ಮೆ ರಾಷ್ಟ್ರ ನಾಯಕರ ವಿಷಯವಾಗಿಯೂ ಪದ್ಯ ಬರೆದುದು ಕಂಡುಬರುತ್ತದೆ. (ಪದ್ಯ ಮುಂದಿನ ಸಂಖ್ಯೆಗಳು ಸಂಚಿಕೆಯನ್ನು ಸೂಚಿಸುತ್ತವೆ.)

ವರ ವೀರಣ ಪತ್ನಿಯು ತಾಂ ।
ಸಿರಿ ಸಂಪದಮಂ ಪೊಂದಿದ‌ರ್ಾ ಚೆನ್ನಮ್ಮಾಂ ।
ವರ ಗುರುವಿನ ವರದಿಂದಲಿ ।
ಉರೆಮೆರೆದಳ್ ಆತ್ಮಶಾಂತಿಯದಾಗಲ್ ॥

ಸದ್ಧರ್ಮದೀಪಿಕೆಯ ಮುಖಪುಟದ ಮೇಲಿನ ಪದ್ಯಗಳು :

ಅನ್ನ ವಿಷವಾಗಿ ಕೊಲ್ವುದು ।
ತನ್ನವರೊಳು ವೈರಹುಟ್ಟಿ ಹಗೆಯಾಗಿರ್ಪರ್ ।
ಹೊನ್ನು ಮಣ್ಣಾಗಿ ಕೆಡುವುದು ।
ಪನ್ನಗಧರ ಶಿವನ ಕರುಣೆ ತಪ್ಪಿದ ಬಳಿಕಂ ॥ (ಸಂ. ೫೬-೫೭)

ಅನುಪಮ ಸದ್ವಯ ನನಘಂ
ಘನತೇಜನು ಚಿತ್‌ಸಹಿತನು ಪಾಲಿಸುಗನಿಶಂ ।
ವಿನುತ ಜಯಚಾಮಭೂಪನ ।
ಬನದದಿ ಸಕಲ ಜನರುಮಂ ಜಗಮುಂ ಕೃಪೆಯಿಂ ॥ (ಸಂ. ೫೩)

ಕನ್ನಡ ನಾಡೊಳು ಧರ್ಮದ- ।
ಬಿನ್ನಣವಮಂ ಬೀರಿ ಜೀವೋನ್ನತಿಯುಂ ।
ಸಮ್ಮತದಿಂ ಗೆಯ್ದಾಗಳು ।
ಸಮ್ಮುದವೀಯಲಿ ಸುಧರ್ಮ ದೀಪಿಕೆ ಘನದಿಂ ॥ (ಸಂ. ೫೩)

ರಂಜನೆಯೊಂದರಮಹಿಮಂ ।
ಅಂಜನ ಲೇಪವನೆ ಪೊರ್ದದಿಪ್ಪಾಮಹಿಮಂ ।
ರಂಜಿತ ಜಂಗಮಂ ಪಾಲಿಕೆ ।
ರಂಜಿತ ಜಯಚಾಮರಾಜನೃಪನಂ ಜವರಂ ॥ (ಸಂ. ೬೦-೬೧)

ಅವನಲೀಲಾಮಾತ್ರದಿ ।
ತ್ರೀವಿಜಗಂ ಹರಣರಾಶಿಯುಂ ಪೊಂದೀರ್ಕಂ ।
ಆವಿನುತ ಮಹಾದೇವನು ।
ಕಾವುಗೆ ಜಯಚಾಮರಾಜನವನಂಜನಮಂ । (ಸಂ. ೬೨-೬೩)

ಸರ್ವಂ ಶುದ್ಧಂ ಭದ್ರಂ ।
ಸರ್ವಂ ಸ್ವಾತಂತ್ರ್ಯ ಪರಮ ಕರುಣಾಪೂರ್ಣಂ ।
ಪರ್ವಿಸಲುರೆ ಸ್ವತಂತ್ರವ ।
ನುರ್ವಿಗೆ ಜಯಚಾಮರಾಜಗಂ ಜನತತಿಗಂ ॥ (ಸಂ. ೬೪-೬೫)

ಲೋಕದಿ ಧರ್ಮವು ತಪ್ಪೆ ವಿ- ।
ವೇಕವನೊದಗಿಸಲಶಾಂತಿ ಪೆರ್ಚಿರೆಯಾಗಳ್
ವ್ಯಾಕುಲದೆ ಜನತೆ ಬೇಡಲು ।
ರಕ್ಷಿಸುಗನಘಂ ಜಯಚಾಮರಾಜ ನೃಪನಂಜಗವಂ ॥ (ಸಂ. ೬೬-೬೭)

ಜಗಮಂ ಪಾಲಿಪಮತ್ತಾ ।
ಜಗಮಂ ಶಾಂತಿಯಲಿರಿಸುವ ಕೌಶಲಮಂ ತಾಂ ।
ಮಿಗಿಲೆನಿಸೆ ಪಡೆವದೇವಂ ।
ಮಿಗೆ ಸಲಹಲಿ ಸರ್ವರ ಜಯಚಾಮೇಶನುಮಂ ॥ (ಸಂ. ೬೮-೬೯)

ಲೀಲಾಮಾತ್ರದಿ ಜಗಮಂ ।
ಲೋಲತೆಯಿಂದಂಸೃಜಿಸುತೆ ಮತ್ತಾಜಗಮಂ ।
ಪಾಲಿಸಿ ಲಯಿಸುವ ಮಹಿಮಂ ।
ಪಾಲಿಕೆ ಜಯಚಾಮರಾಜನಂ ಸರ್ವರುಮಂ ॥ (ಸಂ. ೭೦-೭೧)

ದೇವಂ ಮಹಿಮಾಗಾರಂ ।
ಓವುಗೆ ಜಗಮಂ ಜನವನತಿಕರುಣದಿಂದಂ ।
ತೀವಿದವರ್ಧಂತಿಗಳಂ ।
ಉರ್ವಿಸಿ ಜಯಚಾಮರಾಜ ಭೂಪತಿವರನಂ (ಸಂ. ೭೨-೭೩)

ಶಾಂತಿಯೆ ಪರಮನಲಕ್ಷಣ- ।
ಶಾಂತಿಯುತರಿಹದಿ ಸುಖದೊಳು ಮೆರೆವರುಸತತಂ ।
ಶಾಂತಿಯ ಮೂಲನು ಪೊರೆಯಲಿ ।
ಶಾಂತದಿ ಜಯಚಾಮರಾಜನಂ ಜನಗಣಮಂ ॥ (ಸಂ. ೭೪-೭೫)

ದೇವಂ ನಿಚ್ಚಲತೇಜಂ
ಕಾವುಗೆ ಜನವನತಿ ಶಾಂತತೆಯ ನಿತ್ತೀಗಳ್ ।
ಶ್ರೀವಿಜಯ ಚಾಮನೃಪನುಮ- ।
ನೀವುತೆ ಚಿರಾಯುವನಂತೆಯಾರೋಗ್ಯಮುಮಂ ॥ (ಸಂ. ೭೬)

ಓ ! ಲೀಲೆಯ ಮಾಮಹಿಮನೆ ।
ಕಾಲನಕರ್ಮದ ಭಯವನು ಪಿಂಗಿಸಿದವನೇ ।
ಲೋಲನೆ ಸತ್ಯದ ಶೀಲನೆ ।
ಪಾಲಿಸು ಜಯಚಾಮರಾಜ ನೃಪನಂ ಜನಮಂ ॥ (ಸಂ. ೭೯-೮೦)

ಈಶಂ ಸಿದ್ಧೇಶಂ ಸುಖ
ಕೋಶಂ ಸುಸ್ಥಿರಹೃದಯ ದಧೀಶಂ ಮೇಣ್ ।
ಪಾಶಹರಂ ಪಾಲಿಸಲೀ- ।
ದೇಶದ ಚಾಮೇಶನ ಸಲೆ ದಯೆಯಿಂ ದನಿಶಂ ॥ (ಸಂ. ೯೩-೯೪)

ಭಾರತದ ಗೌರ್ನರ್ ಜನರಲ್ ಆಗಿದ್ದ ಚಕ್ರವರ್ತಿ ರಾಜಗೋಪಾಲಾಚಾರ್ಯರನ್ನು ಕುರಿತು. (ಸಂಚಿಕೆ ೭೪-೭೫)

ಪಾಲಿಸುವಂ ಗೋಪಾಲಂ
ಆಲಿಗೆ ಕಾಣಿಸದೆ ರಾಜಗೋಪಾಲಂ ನೀಂ ।
ಲೋಲತೆಯಿಂ ಪ್ರತ್ಯಕ್ಷದಿ
ಪಾಲಿಪೆ ಭಾರತವ ಜಗಕೆ ಇದು ಬಹುಚೋದ್ಯಂ ॥

ದೇಶವು ಸ್ವಾತಂತ್ರ್ಯತೆಯಿಂ ।
ಕೋಶದ ವೃದ್ಧಿಯನು ಪಡೆದು ನಾಗರಿಕತೆಯಿಂ ।
ದಾ ಸುಖಮಿರಲೇರ್ಪಡಿಸಲು ।
ಕೇಶವ ನೀನು ಮೊದಲಿಗನಾಳ್ವರ ಪಿರಿಯಂ ॥

ಕನ್ನಡ ದೇಶದಿ ಕಲಿಯುತೆ ।
ಕನ್ನಡದಭಿಮಾನಿಯಾಗಿ ಕರ್ನಾಟಕವಮಂ ।
ಉನ್ನತಗೊಳಿಸಲು ಕೂಡಿಸೆ ।
ಸನ್ನುತಯುಶವಮಂ ಪಡೆದು ವಿರಾಜಿಪೆ ನೀನೈ ॥

ಒಲವಿಂದಲಿ ಮೈಸೂರಿನ ।
ನೆಲನಾಳ್ವಂ ಜಯಚಾಮರಾಜ ಭೂಪತಿಯು ನೀಂ ।
ನಲವಿಂ ಘನತೆಯ ಪೆರ್ಚಿಸಿ ।
ಇಳೆಯಲಿ ಶೋಭಿಸುಗೆ ಚಕ್ರವರ್ತಿಯು ಮುದದಿಂ ॥

ಬಲು ಮಹಿಮ ಗಾಂಧಿಯಿಂದಲಿ ।
ಸಲೆ ರಾಜ್ಯಭಾರ ಸೂತ್ರವನುರೆತಿಳಿದಿಹೆಯೈ ।
ಕಲಿತನದಿ ಪಾಲಿಸು ಸುಖದಿ- ।
ನೊಲವಿನ ಭಾರತ ಜನನಿಯನೀಶ್ವರ ಕೃಪೆಯಿಂ ॥

# ನಿರಂಜನ ಸ್ವಾಮಿಗಳಲ್ಲಿ ಬೆಳೆದುಬಂದ ಸಮಯಭೇದ*

## ಶ್ರೀ ಚನ್ನಮಲ್ಲಿಕಾರ್ಜುನ ಭಾಷಣ

---

ಶ್ರೀ ಎಸ್. ಎಸ್. ಭೂಸರೆಡ್ಡಿ

(೧)

ನಿರಂಜನ ಪದದಿಂದಲೇ ಇವರು ರಂಜನ ಬಾಹಿರರೆಂದೂ ಲೌಕಿಕರಂತೆ ಪ್ರಪಂಚದಲ್ಲಿ ನೆಲೆಯಾಗಿರುವ ಅರಿಷಡ್ವರ್ಗಗಳಿಗೂ ಮಾಯಾಪಾಶಕ್ಕೂ ಒಳಗಾಗತಕ್ಕವರಲ್ಲವೆಂದೂ ಸ್ಪಷ್ಟವಾಗಿಯೇ ಇದೆ. ಇಂಥ ನಿರಂಜನ ಸ್ವಾಮಿಗಳಲ್ಲಿ ಮುರುಘಸಮಯ, ಕುಮಾರಸಮಯ, ಚೀಲಾಳಸಮಯ, ಕೆಂಪಿನಸಮಯಗಳೆಂದು ನಾಲ್ಕು ಸಮಯ ಭೇದಗಳಿರುವುದಾಗಿಯೂ, ಪ್ರತಿ ಸಮಯದವರೂ, ಇತರ ಸಮಯದ ಸ್ವಾಮಿಗಳವರ ದರ್ಶನಕ್ಕೂ ಇತರ ಸಂಸರ್ಗಗಳಿಗೂ, ಸಹಿಸದಿರುವ ಅಥವಾ ತಿರಸ್ಕರಿಸುವ ಪದ್ಧತಿ ಇದೆಯೆಂದು ತಿಳಿಯುತ್ತೇನೆ. ಆದರೆ ಆ ಸಮಯ ಭೇದಗಳು ವೀರಶೈವ ಮತ ವಿಷಯಗಳನ್ನು ವಿಶೇಷವಾಗಿ ತಿಳಿಸುತ್ತಿರುವ ಆಗಮಗಳಲ್ಲಿಯಾಗಲಿ, ಅದರಿಂದೀಚೆಗಿನ ಕಾಲದಲ್ಲಿ ರಚಿತವಾದ ಪುರಾಣಗಳಲ್ಲಿಯಾಗಲಿ ಉಕ್ತವಾದಂತೆ ಇದುವರೆಗೂ ತಿಳಿದಿಲ್ಲ. ಆದರೆ ಒಬ್ಬ ಗುರುವಿನ ಕರಸಂಜಾತರಾದ ನಾಲ್ವರು ಶಿಷ್ಯರು ಮೇಲ್ಕಂಡ ಸಮಯ ನಾಮಧೇಯರು. ಪರಸ್ಪರ ಆಗ್ರಹದಿಂದ ಬೇರೆ ಬೇರೆ ಪ್ರಾಂತಗಳಲ್ಲಿ ವಾಸವಾಗಿದ್ದು ಸ್ವಪ್ರತಿಷ್ಠೆಯನ್ನು ಆಯಾಯ ಪ್ರಾಂತಗಳಲ್ಲಿ ಬೀರಿದರೆಂದು ಕಿಂವದಂತಿಯಿದೆ. ತದನುಸಾರವಾಗಿಯೇ ಅವರ ಅನುಯಾಯಿಗಳು, ಸ್ವಪ್ರತಿಷ್ಠಾಪುರಸ್ಸರವಾದ ಈ ಅಭಿಮಾನವನ್ನು ವಹಿಸಬೇಕಾಗಿ ಬಂದಿರಬಹುದು ಎಂದು ಊಹಿಸಬೇಕಾಗಿದೆ.

(೨)

ಈಗಿನ ನಿರಂಜನ ಸ್ವಾಮಿಗಳು ಐಕ್ಯಮತ್ಯದಿಂದಿರುವುದಕ್ಕೆ ಇನ್ನೊಂದು ದೊಡ್ಡ ವಿಘ್ನವಿರುವುದು. ಅದೇನೆಂದರೆ–ಈ ಪರಶಿವಸ್ವರೂಪಿಗಳಾದ ಮಹಾಸ್ವಾಮಿಗಳವರ ಮಹಿಮೆಯನ್ನು ತಿಳಿದು ಪೂರ್ವದ ರಾಜರೂ ಮಹಾತ್ಮರೂ ಇವರನ್ನು ಜಗದ್ಗುರು

---

* ಬಳ್ಳಾರಿಯಲ್ಲಿ ಕ್ರಿ. ಶ. ೧೯೦೯ರ ಡಿಸೆಂಬರ್ ತಿಂಗಳಲ್ಲಿ ನಡೆದ ೫ನೆಯ ಅಖಿಲ ಭಾರತ ವೀರಶೈವ ಮಹಾ ಸಭೆಯಲ್ಲಿ ಲಿಂಗೈಕ್ಯ ಚನ್ನಮಲ್ಲಿಕಾರ್ಜುನರು ಭಾಗವಹಿಸಿ, ನಿರಂಜನ ಸ್ವಾಮಿಗಳಲ್ಲಿ ಬೆಳೆದು ಬಂದ ಸಮಯಭೇದದ ಬಗೆಗೆ ಮಾಡಿದ ಈ ಭಾಷಣವನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರೊಫೆಸರ್ ಆದ ಶ್ರೀಮಾನ್ ಎಸ್. ಎಸ್. ಭೂಸರೆಡ್ಡಿ ಎಂ.ಎ.ಬಿ.ಇಡಿ. ಅವರು ಸಂಗ್ರಹಿಸಿ ಕಳಿಸಿ ಮಹೋಪಕಾರ ಮಾಡಿದ್ದಾರೆ. ಅವರಿಗೆ ಧನ್ಯವಾದಗಳು. —ಸಂ.

ಗಳೆಂದು ಕರೆದರು. ಆ ಕಾಲದಲ್ಲಿ ದಕ್ಷಿಣ ಇಂಡಿಯಾದಲ್ಲಿ ಅನೇಕ ಪಾಳೆಯಪಟ್ಟುಗಳು ಇದ್ದುದರಿಂದಲೂ, ಒಂದೊಂದು ಪಾಳೆಯಪಟ್ಟಿನವರಿಗೆ ಇನ್ನೊಂದು ಪಾಳೆಯ ಪಟ್ಟಿನವರೊಡನೆ ಪರಸ್ಪರ ಮಧುರ ಸಂಬಂಧಗಳಿಲ್ಲದುದರಿಂದ ಮೇಲ್ಕಂಡ ನಾಲ್ವರು ಮಹಾಸ್ವಾಮಿಗಳವರು ಯಾವ ಯಾವ ಪ್ರಾಂತದಲ್ಲಿದ್ದರೋ ಅಲ್ಲೆಲ್ಲಾ ಅವರೇ ಜಗದ್ಗುರುಗಳಾದರು. ಆಗ ಈ ಸ್ವಾಮಿಗಳಿಗೆ ಭೇಟಿಗವಕಾಶವಿಲ್ಲವೆಂದು ಊಹಿಸಬಹುದಾದ್ದರಿಂದ ಅವರ ಸಮಯ ಪದ್ಧತಿಯೂ 'ಜಗದ್ಗುರು' ಬಿರುದೂ ನಿರಾತಂಕವಾಗಿ ವಾಗಿ ನಡೆದುಕೊಂಡುಬಂದಿತು. ಈಗ ಒಂದೇ ಭಾಗವಾದ ಚಕ್ರಾಧಿಪತ್ಯದ ಆಳ್ವಿಕೆಯಲ್ಲಿ ಈ ನಾಲ್ವರು ಮಹಾಸ್ವಾಮಿಗಳವರೂ ತಮ್ಮ ತಮ್ಮ ಜಗದ್ಗುರು ಪದವಿಯನ್ನು ಸ್ಥಿರಗೊಳಿಸಿಕೊಂಡಿರುವುದಕ್ಕೆ ಸಂಕೋಚಪಟ್ಟುಕೊಳ್ಳಬೇಕಾಗಿರುವುದು.

(೩)

ಅಗ್ರಗಣ್ಯರಾದ ಈಗಿನ ನಿರಂಜನ ಸ್ವಾಮಿಗಳು ಭೇದಬುದ್ಧಿಯನ್ನು ಅಲ್ಪಮಾತ್ರ ಇಟ್ಟುಕೊಂಡರೆ, ಅವರ ಅನುಗ್ರಹಕ್ಕೆ ಪಾತ್ರರಾದವರೂ, ತದನುಯಾಯಿಗಳೂ, ಶಿಷ್ಯರು, ಆಶೀರ್ವಾದಕ್ಕೆ ಪಾತ್ರರಾದವರು ಕೊಂಚ ಕೊಂಚವಾಗಿಯೂ, ಭೇದವನ್ನು ಇಟ್ಟುಕೊಳ್ಳುವರು. ಇದರಿಂದ ಐಕ್ಯಮತ್ಯಕ್ಕೆ ವಿಘ್ನವುಂಟಾಗಿರುವುದು. ಈಗಿನ ವೀರಶೈವ ಸಾಮಾನ್ಯ ಜನರು ಬಹುತರವಾಗಿ ಅಲ್ಪವಿದ್ಯೆಯುವರಾಗಿದ್ದರಿಂದ ಐಕ್ಯಮತ್ಯದಿಂದುಂಟಾಗುವ ಮಹತ್ವಗಳನ್ನು ಗಣಿಸದೆ ಅಥವಾ ಅವುಗಳ ಅಂಕುರವನ್ನಾದರೂ ಯೋಚಿಸದೆ ಬೇಧಬುದ್ಧಿಯೊಂದೇ ಸ್ವಪ್ರತಿಷ್ಠೆಯ ಉಪಾಯವೆಂದರಿತಿರುವರು. ಇಂಥಾ ಕಾಲದಲ್ಲಿ ಕಿಂಚಿದ್ಭೇದವೇ ಮಹದ್ಭೇದವಾಗಿ ಪರಿಣಮಿಸುವುದು. ಆದ್ದರಿಂದ ಆಯಾ ಸ್ವಾಮಿಗಳವರ ಪಂಥವನ್ನೇ ನಡೆಸಬೇಕೆಂದು ಅನೇಕರು ಕುತೂಹಲಪಡುವರು. ಇದರಿಂದ ಮತಸಾಮಾನ್ಯದ ಕಾರ್ಯಗಳಿಗೆ ವಿಘ್ನ ಬರುವುದು.

(೪)

ಜಗದ್ಗುರು ಬಿರುದನ್ನು ಉಳಿದ ಮೂವರು ಸ್ವಾಮಿಗಳಿಂದಲೂ ಹೊಂದಬೇಕೆಂದುಯಾರಾದರೂ ಸ್ವಾಮಿಗಳು ಯೋಚಿಸುವುದಾದರೆ, ಅಂಥ ಶಕ್ತಿಯನ್ನು ಸ್ಥಿರ ಪ್ರಯತ್ನವೆಂದು ಕೊಂಡಾಡಬಹುದು. ಆದರೆ ಆ ಬಿರುದನ್ನು ಆ ಮಹಾಸ್ವಾಮಿಗಳು ಸ್ಥಿರಪಡಿಸಿಕೊಳ್ಳಲಾರರೆಂದು ಖಚಿತವಾಗಿ ಊಹಿಸಬೇಕಾಗಿದೆ. 'ಜಗದ್ಗುರು' ಎಂಬಲ್ಲಿ ಜಗತ್ತಿಗೆ ಪ್ರಪಂಚವೆಂದು ಧಾರಾಳವಾದ ಅರ್ಥವನ್ನು ಮಾಡಬೇಕೆ ಹೊರತು ವೀರಶೈವ ಜಗತ್ತೆಂದು ಅರ್ಥ ಮಾಡಲಾಗುವುದಿಲ್ಲ. (ಹಾಗೆ ಮಾಡುವ ಪಕ್ಷಕ್ಕೆ ತನ್ನ ಮನೆಯನ್ನು ಜಗತ್ತೆಂದು ಭಾವಿಸಿದರೆ ಪ್ರತಿ ಮನೆ ಯಜಮಾನನೂ ತನ್ನ ಮನೆಯ ಜಗದ್ಗುರುವಾಗುವನು). ಈಗ ಪ್ರಪಂಚದಲ್ಲಿಯಾದರೋ ಅನೇಕ ಮತಗಳಿರುವುವು. ಆ ಮತಗಳೆಲ್ಲವನ್ನೂ ಖಂಡಿಸಿ, ಸಿದ್ಧಾಂತಪಡಿಸಿ,ಈ ಮತವನ್ನು ಎಲ್ಲ ಕಡೆಯಲ್ಲೂ ಹರಡುವಂತಹ ಅಘಟಿತ ಘಟನಾಶಕ್ತಿಯು ಆ ಮಹಾಸ್ವಾಮಿಗಳಲ್ಲಿ ಬರಬೇಕಾಗುವುದು. ಈಗಿನ ಸ್ಥಿತಿಯೇ ಮುಂದೂ ಇನ್ನು ನೆಲೆಗೊಳ್ಳುವುದಾದರೆ,ಪರಮೇಶ್ವರನೇ ತನ್ನ ನಾಲ್ವರು ಅವ

ತಾರಿಗಳನ್ನು ಭೂಲೋಕಕ್ಕೆ ಕಳುಹಿಸಿ, ಅವರ ಮೂಲಕ ಈ ಪ್ರಪಂಚದಲ್ಲಿ ಬೇಧವನ್ನು ಹುಟ್ಟಿಸಿ, ಜನರ ಏಳಿಗೆಯನ್ನು ಇಂಥ ನಾಗರಿಕ ಕಾಲದಲ್ಲಿಯೂ ಹಾಳುಮಾಡುತ್ತಿರುವ ನೆಂದು ಭಾವಿಸಬೇಕಾಗಿದೆ.

(೫)

ವೀರಶೈವ ಮತದ ಆಚಾರವೆಂಬುದು ಕತ್ತಿಯ ಬಾಯಲ್ಲಿನ ಜೇನುತುಪ್ಪವಂತಿರುವುದು ಎಂಬ ವಾಕ್ಯವು ಮತಗ್ರಂಥಗಳಲ್ಲಿ ಘಂಟಾಘೋಷವಾಗಿರುವುದು. ಅಷ್ಟು ಕಷ್ಟವಾದ ಒಂದೆರಡು ಸಂಗತಿಗಳನ್ನು ಇಲ್ಲಿ ಹೇಳುತ್ತೇನೆ.

ನಕರ್ಷೇದ್ಧರಣೀಂ ವೀರಶೈವ ದೀಕ್ಷಾ ಸುಯೋಜಿತಃ ॥
ನಖಾತೇನ್ನಖನೇತ್ತ್ವಾಪೆ ನಚ್ಛೇದೇ ನ್ನೈವ ಬಂಧಯೇತ್ ।
ನವಹೇಚ್ಛಿರಸಾಭಾರಂ ನಕಾಷ್ಠ ನೇತರಂ ಲಘುಃ ॥

(ಪಾ. ಆ. ಪಂಚಮ ಪ. ೬೫)

ನಸ್ಪರ್ಶಯೇಚ್ಚ ನೋಪೇಕ್ಷೇತ್ ಸ್ತ್ಯಾದಿಭಿವರ್ಯಾಂಸಲೋಲಪೈಃ ।
ಶಿವದೀಕ್ಷಾ ಶ್ರಿತೋಲಿಂಗೀ ನೈವಾಲಿಂಗಿನಮರ್ಚಯೇತ್ ॥
ಸೇವಾಪೇಕ್ಷೇತ ತತ್ಪೂಜಾಮರ್ಚಯೇ ದೇವ ಲಿಂಗನಂ ।
ಪೂಜ್ಯಪೂಜಕ ಕರ್ಮೇಷು ಯದಾ ಯೋಗ್ಯಾ ಅಲಿಂಗಿನಂ

(ಪಾ. ಆ. ಪಂ. ಪಟಲ-೬೭)

—ಈ ಕಾಲದಲ್ಲಿ ನಿಜವಾದ ವೀರಶೈವರೆಂಬುವರು ಈ ನಿರಂಜನ ಸ್ವಾಮಿಗಳು ಮತ್ತು ಅವರ ಅನುಗ್ರಹಕ್ಕೆ ಪಾತ್ರರಾದ ಪಟ್ಟಚರಮೂರ್ತಿಗಳು ಮುಂತಾದವರೇ ಹೊರತು ಜೀವನಕ್ಕಾಗಿ ಒಂದು ಉದ್ಯೋಗವನ್ನು ನಡೆಸುವವರಲ್ಲ. ಮಿಕ್ಕವರು ಈ ಮತದ ಅನುವಿಡಿದು ವೈದಿಕ ವ್ಯವಹಾರ ಕರ್ಮಗಳೆರಡನ್ನೂ ನಡೆಸಬೇಕಾಗಿದೆ. ಆದ್ದರಿಂದ ಈ ನಿರಂಜನ ಸ್ವಾಮಿಗಳು ಆಗಮೋಕ್ತವಾಗಿರುವ ಪರಶಿವನ ಅಪ್ಪಣೆಯನ್ನು ಪಾಲಿಸಬೇಕಾದುದು ಅವರ ಕರ್ತವ್ಯವಾಗಿದೆ. ಅಂಥಾ ಅಪ್ಪಣೆಗಳಾವುವೆಂದರೆ—

ಯ ಇಚ್ಛೇನ್ಮಮಸಾರೂಪ್ಯಂ ಸೋರ್ಚಯೇತ್ ಶಿವಯೋಗಿನಂ ।

(ಪಾ. ಆ. ಪ. ೧-೫೦)

ಅರ್ಚಯೇಜ್ಜಂಗಮಂ ಧನ್ಯಂ ಸಂಧ್ಯಾಯಾಂ ಗೃಹಮಾಗತಂ ।
ಸಾಕ್ಷಾತ್ ಮದ್ರೂಪಮೀಶಾನೀ ಶಯನಾಶನ ಭೋಜನೈಃ ॥

(ಅದೇ ಪ. ೪-೮೭)

ನ ಕಾರ್ಯಕಲಹೋದೇವೀ ಅನ್ಯೋನ್ಯಂ ಶಿವಯೋಗಿಭಿಃ ।
ನಪೈಶೂನ್ಯಂ ನಮಾತ್ಸರ್ಯಂ ನದ್ರೋಹಂ ನಾಪಿಪೀಡನಂ ॥

(ಅದೇ ಪ. ೪-೯೦)

(೬)

ವೀರಶೈವ ಮಂಡಲಿಗೆ ಪರಶಿವ ಸ್ವರೂಪಿಗಳಾದ ಎಲ್ಲ ಸ್ವಾಮಿಗಳವರೂ ಸಮಾನರಾದ್ದರಿಂದ ಅವರವರು ಆಯಾಯ ಪ್ರಾಂತದಲ್ಲಿ 'ಜಗದ್ಗುರು' ಎಂಬ ಬಿರುದನ್ನು ಧರಿಸುವುದಕ್ಕೆ ಆಯಾ ಸರಕಾರದವರೂ ಕೂಡ ಅನುಮತಿಸಿರುವುದರಿಂದಲೂ, ಭಕ್ತವೃಂದವೂ ಅದೇ ಭಾವನೆಯಿಂದ ಆರಾಧಿಸುತ್ತಿರುವುದರಿಂದಲೂ, ಪ್ರತಿಯೊಬ್ಬರೂ ಜಗದ್ಗುರು ಬಿರುದನ್ನು ಆಯಾ ಪ್ರಾಂತಿಕವೆಂದು ಭಾವಿಸಿಕೊಂಡು ರಾಜರು ರಾಜರನ್ನು ಪ್ರೀತಿಸುವಂತೆ ಒಬ್ಬೊಬ್ಬರು ಪ್ರೀತಿಪೂರ್ವಕವಾಗಿ ಸಂಸರ್ಗಗಳನ್ನು ನಡೆಸಿ ಐಕ್ಯಮತ್ಯವನ್ನು ಹೊಂದುವ ಪಕ್ಷದಲ್ಲಿ ಭಕ್ತಕೋಟಿಯು ಉದ್ಧಾರವಾಗುವುದು ಮತ್ತು ಪರಶಿವನ ಅಪ್ಪಣೆಯನ್ನು ಅವರು ನೆರವೇರಿಸಿದಂತಾಗುವುದು.

(೭)

ಆದುದರಿಂದ ಈಗಿನ ನಿರಂಜನ ಸ್ವಾಮಿಗಳವರು ಆಗ್ರಹದಿಂದುಂಟಾದ ಭೇದವನ್ನು ತೊರೆದು ಭಕ್ತವೃಂದದ ಆಗ್ರಹ ಶಾಂತಿಗಾದರೂ ಪೂರ್ಣಕೃಪೆಗೂಡಿ ಐಕ್ಯಮತ್ಯವನ್ನು ಹೊಂದುವ ಬಗೆಗೆ ಮಹಾಸ್ವಾಮಿಗಳವರ ಸನ್ನಿಧಿಗೆ ಕೆಲ ಮಹನೀಯರನ್ನು (ಡೆಪ್ಯುಟೇಷನ್) ಕಳುಹಿಸುವುದರ ಮೂಲಕ ಅವರಿಗೆ ದಂಡ ಪ್ರಣಾಮಪುರಸ್ಸರವಾಗಿ ವಿಜ್ಞಾಪಿಸಿಕೊಳ್ಳಬೇಕೆಂದು ಬೇಡಿಕೊಂಡು ನನ್ನ ಭಾಷಣ ಮುಗಿಸುತ್ತೇನೆ. (ಕೈ ಚಪ್ಪಾಳೆ)

(ಕೆ. ಚನ್ನಮಲ್ಲಪ್ಪ ಶಾಲಾ ಹೆಡ್‌ಮಾಸ್ಟರ್
ಶಿರಾಳಕೊಪ್ಪ ಜಿಲ್ಲಾ ಶಿವಮೊಗ್ಗ)

# ಧರ್ಮ*

ಪ್ರತಿ ಮನುಷ್ಯನೂ ತನ್ನ ಜೀವದ ತೊಡಕನ್ನು ಬಿಡಿಸುವುದಕ್ಕಾಗಿ ಜೀವಮಾನವ ಕೆಲವು ಕಾಲವನ್ನಾದರೂ ಉಪಯೋಗಿಸಬೇಕೆಂತಲೂ ಅದಕ್ಕೆ ಧರ್ಮಜ್ಞಾನರನ್ನು ಮಾಡಿಕೊಂಡು ಧರ್ಮವನ್ನು ಅನುಸರಿಸಬೇಕೆಂತಲೂ ಈ ಮೊದಲು ತಿಳಿಸಿದೆ. ಧರ್ಮವನ್ನು ಅನುಸರಿಸಿ ವಿರತಿಭಾವವನ್ನು ಹೊಂದಿ, ಮೋಕ್ಷ ಮಾರ್ಗವನ್ನು ಚಿಂತಿಸ ಬೇಕೆಂದು ವೇದಾಂತಿಗಳ ಮಾತು. ಈಶ್ವರಸಂಕಲ್ಪದಿಂದ ಜನತ್ಸೃಷ್ಟಿಯಾಗಿ, ಅದು ನಡೆದುಕೊಂಡು ಬರುತ್ತಿರುವಾಗ್ಗೆ ವಿರತಿಭಾವದಿಂದಿರುವುದಕ್ಕೆ ಹೇಗಾಗುವುದೆಂದೂ, ಒಂದು ವೇಳೆ ಇದ್ದರೂ, ಈಶ್ವರಸಂಕಲ್ಪಕ್ಕೆ ವಿರುದ್ಧವಾದುದೆಂದೂ ಯೋಚನೆ ಬರುವುದು. ಹೀಗಾದ ಮೇಲೆ ವ್ಯಾವಹಾರಿಕ ರೀತಿಯಿಂದ, ಈಶ್ವರಸಂಕಲ್ಪದಿಂದ ಉತ್ಪನ್ನವಾದ ಈ ಪ್ರಪಂಚದಲ್ಲಿ ಮನುಷ್ಯನು ಮಾಡತಕ್ಕ ಕೆಲಸವೇನೆಂಬುದನ್ನು ಯೋಚಿಸಿ ನೋಡಬೇಕು. ಈ ರೀತಿಯಲ್ಲಿ ಮನುಷ್ಯನ ಕೆಲಸದ ಸಾರಭೂತವಾದ ಅಂಶಕ್ಕೆ 'ಪುರುಷಾರ್ಥ'ವೆಂದು ಹೆಸರು, ಧರ್ಮಾರ್ಥಕಾಮ ಮೋಕ್ಷಗಳೆಂದು ಪುರುಷಾ ರ್ಥಗಳು ನಾಲ್ಕೆಂಟು. ಈಶ್ವರಸಂಕಲ್ಪದಿಂದ ನಾನು ಪ್ರಪಂಚವನ್ನು ನಡೆಸುತ್ತೇನೆ. ಎಂದರೆ ಪ್ರಪಂಚದಲ್ಲಿ ಇರುತ್ತೇನೆ ಎಂದು ಯೋಚಿಸುವ ಮನುಷ್ಯನೂ ಕೂಡಾ ಈ ನಾಲ್ಕೇ ಪುರುಷಾರ್ಥಗಳಿಗೆ ಒಳಗಾಗಿರುವನು. ವ್ಯಾವಹಾರಿಕ ರೀತಿಯಿಂದ ಯೋಚನೆ ಮಾಡಿದರೂ 'ಧರ್ಮ'ವೆಂಬ ಪುರುಷಾರ್ಥವನ್ನೇ ಮೊದಲು ಸಾಧಿಸಬೇಕೆಂಬುದು ವ್ಯಕ್ತವಾಗುವುದು. ಆದರೆ ಈ ವ್ಯಾವಹಾರಿಕ ದೃಷ್ಟಿಯಿಂದ ಯೋಚಿಸಿದರೆ ಮನುಷ್ಯನಿಗೆ ಧರ್ಮದಿಂದ ಮೋಕ್ಷಸೋಪಾನವನ್ನೆ ತೋರಿಸದೆ, ಮಧ್ಯೆ ಅರ್ಥಕಾಮಗಳೆಂಬ ಎರಡು ಸೋಪಾನಗಳನ್ನು ತೋರಿಸಿರುವುದು, ಈ ಜಗತ್ತನ್ನು ಕಡೆಗಣಿಸುವವನ ನಡೆ ಸುವಿಕೆಯು ಇಚ್ಛಾ ಸಂಪೂರ್ತಿಯೆಂಬ ಪಾಶಕ್ಕೆ ಸಿಕ್ಕಿಸುವುದಕ್ಕೆ ಅವಕಾಶ ಕಲಿಸಲ್ಪಟ್ಟಿರು

---

* ಲಿಂಗೈಕ್ಯ ಶ್ರೀ ಚನ್ನಮಲ್ಲಿಕಾರ್ಜುನರು ಧಾರವಾಡದಿಂದ ಪ್ರಕಟವಾಗುತ್ತಿದ್ದ 'ವೀರಶೈವ ಧರ್ಮತರಂಗಿಣೀ' ಮಾಸಪತ್ರಿಕೆಯ ಮೊದಲ ಸಂಪುಟದ ೮-೯-೧೦ ನೆಯ ಸಂಚಿಕೆಗಳಲ್ಲಿ ಪ್ರಕಟಿಸಲು ಕಳಿಸಿದ 'ಧರ್ಮ' ಎಂಬ ಶಿರೋನಾಮೆಯ ಲೇಖನದಲ್ಲಿ ಕ್ರಿ.ಶ.ಪು. ೯೧೧ ರಲ್ಲಿ ಪ್ರಕಟವಾದ ಒಂದು ಸಂಚಿಕೆಯ ಲೇಖನ ಮಾತ್ರ ನಮಗೆ ಶ್ರೀ ಎಸ್. ಎಸ್. ಭೂಸರೆಡ್ಡಿ ಎಂ.ಎ.ಬಿ. ಇಡೀ ಕರ್ನಾಟಕ ವಿ. ವಿ. ಧಾರವಾಡ ಅವರಿಂದ ಒದಗಿದೆ. ಅವರಿಗೆ ನಮ್ಮ ಧನ್ಯವಾದಗಳು. (ನಾವು ಸಿಕ್ಕಷ್ಟನ್ನು ಮಾತ್ರ ಪ್ರಕಟಿಸಿದ್ದೇವೆ. ಪೂರ್ಣ ಲೇಖನಸಿಕ್ಕಿದ್ದರೆ ಚೆನ್ನಾಗಿತ್ತು. ಇದು ಪ್ರಾರಂಭದ ಲೇಖನವಂತೂ ಅಲ್ಲ) (—ಸಂ.)

ವುದು. ಅಜ್ಞಾನಿಯು ಮಾಡುವ ಹೇಯವಾದ ಕೆಲಸವಾದರೂ, ಅಲ್ಪಜ್ಞನು ಮಾಡುವ ಕುತ್ಸಿತ ಕೆಲಸವಾದರೂ, ಜ್ಞಾನಿಯು ಮಾಡುವ ಪುಣ್ಯ ಕೆಲಸವಾದರೂ ಈ ನಾಲ್ಕು ಪುರುಷಾರ್ಥಗಳಲ್ಲಿ ಒಂದರ ಸಾಧನೆಯಾಗಿರುತ್ತದೆ.

ಯಾವ ಮನುಷ್ಯನಾದರೂ ಪುರುಷಾರ್ಥವನ್ನು ನಡೆಸುತ್ತಾನೆ ಎಂಬುದರಿಂದ ಎಲ್ಲರಿಗೂ ನಾಲ್ಕನೆಯ ಪುರುಷಾರ್ಥವಾದ ಮೋಕ್ಷವು ದೊರೆವುದೆಂದೂ ಸರ್ವ ಸಾಮಾನ್ಯವಾಗಿ ಎಲ್ಲರೂ ಭಾವಿಸಬಹುದಾದರೂ, ಪುರುಷಾರ್ಥಗಳನ್ನು ಮನುಷ್ಯನಿಗಾಗಿ ಏರ್ಪಡಿಸಿರುವುದರಲ್ಲಿ ಜಾಣತನವಿರುವುದು. ಮೊದಲು ಧರ್ಮವನ್ನು ಸಾಧಿಸ ಹೇಳಿ, ಅನಂತರ ಅರ್ಥಕಾಮುಗಳನ್ನು ಸಂಪಾದಿಸ ಹೇಳುತ್ತಾರೆ. ನಿಜವಾದ ಧರ್ಮದ ಜ್ಞಾನವು ಮನುಷ್ಯನಿಗೆ ತಲೆದೋರಿದ ಮೇಲೆ ಮಿಕ್ಕ ಎರಡು ಪುರುಷಾರ್ಥಗಳು ನಾಲ್ಕನೆಯ ಪುರುಷಾರ್ಥದ ಭೋಗ್ಯತೆಗೆ ತಕ್ಕಂತೆ ತಲೆದೋರುವುವು. ಹಿಂದೂ ಧರ್ಮವು ಮನುಷ್ಯನನ್ನು ಅನ್ಯಾಯದ ಪಥಕ್ಕೆ ಬೀಳದಂತೆ ಬಹಳ ಬಿಗಿಯಾದ ಪಾಶದಿಂದ ಜಿಗಿದು ಹಿಡಿದು ನಿಲ್ಲಿಸಿರುವುದು. ಯಾರ ಮತ ಪ್ರಕಾರವಾಗಿಯಾದರೂ ಮನುಷ್ಯನ ಶ್ರೇಷ್ಠವಾದ ಧರ್ಮಯಾವುದೆಂಬುದನ್ನು ಮೊದಲು ಗೊತ್ತು ಹಿಡಿಯಬೇಕು. ಆ ಧರ್ಮದಲ್ಲಿ ವರ್ತಿಸಬೇಕು. ಆದರೆ ಇಂಥ ಗಹನವಾದ ಕೆಲಸವು ಮಹಾಜ್ಞಾನಿಗಳಲ್ಲದೆ ಇತರರಿಗೆ ಅಸಾಧ್ಯವಾಗಿರುವುದರಿಂದ ಯಾರಾದರೂ ಭಗವದ್ಗೀತೆಯಲ್ಲಿ ಹೇಳಿರುವಂತೆ 'ಸ್ವಧರ್ಮೇ ನಿಧನಂ ಶ್ರೇಯಃ' ಈ ಉಕ್ತಿಯನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡು ಸ್ವಧರ್ಮವನ್ನನುಸರಿಸಬೇಕು. ಈ ಧರ್ಮವೆಂಬ ಪುರುಷಾರ್ಥವನ್ನು ಸಾಧಿಸಿದ ಬಳಿಕ ಮಿಕ್ಕ ಪುರುಷಾರ್ಥಗಳು ಸಾಧ್ಯವೆಂದು ನಿರ್ಧರವಾಗಿ ತಿಳಿದುಕೊಂಡಿರಬೇಕು. ಹಾಗಿಲ್ಲದೆ ಧರ್ಮವನ್ನು ಬಿಟ್ಟು ಎರಡನೆಯ ಅಥವಾ ಮೂರನೆಯದಾದ ಕಾಮಪುರುಷಾರ್ಥ ಸಾಧನೆಯನ್ನು ಒಬ್ಬ ಮನುಷ್ಯನು ಮಾಡಿದನೆಂದು ಯೋಚಿಸೋಣ. ಅದೂ ಪುರುಷಾರ್ಥವೇ ಆದ್ದರಿಂದ ಮೋಕ್ಷವು ಏಕೆ ಆಗಬಾರದು ? ಪ್ರಶ್ನೆ ಮಾಡಬಹುದು. ಧರ್ಮವೆಂಬುದು ನ್ಯಾಯುಬದ್ಧವಾದ ಮಾರ್ಗವೇ ತಿಳಿಯದೆ ಅರ್ಥವನ್ನು ಸಂಪಾದನೆ ಮಾಡಿದರೆ ಅದು ಸಿದ್ಧಿಯುಳ್ಳದು ಹೇಗಾಗುವುದು ? ಮೊದಲ ಪುರುಷಾರ್ಥದ ಎಂದರೆ ಧರ್ಮದ ಅನುಸರಣೆಯು ಆಗುವವರೆಗೂ ಮಿಕ್ಕವು ಪುರುಷಾರ್ಥಗಳು ಸಿದ್ಧಿಸಲಾರವು. ಜಾಣನಾದವನು ಬಹುಬೇಗ ದ್ರವ್ಯವನ್ನು ಸಂಪಾದಿಸಲಿಚ್ಛಿಸುವಂತೆ ಜ್ಞಾನಿಯಾದವನು ಬಹುಬೇಗ ಮೋಕ್ಷವನ್ನು ಹೊಂದಬೇಕೆಂದು ಯೋಚಿಸಬೇಕಾಗಿರುವುದು. ಆದ್ದರಿಂದಲೇ ಪುರುಷಾರ್ಥಗಳನ್ನು ಕ್ರಮವಾಗಿ ಸಂಪಾದಿಸಬೇಕೆಂದು ತಿಳಿದು ಪ್ರತಿ ಮನುಷ್ಯನೂ ಪ್ರಯತ್ನ ಮಾಡಬೇಕು. ಹಾಗಲ್ಲದೆ ಎರಡನೆಯದಾದ ಅರ್ಥವನ್ನೇ ಮೂರನೆಯದಾದ ಕಾಯಕವನ್ನೇ ಸಾಧಿಸಿದರೆ ಶಾಲೆಯನ್ನು ತಪ್ಪಿಸಿಕೊಂಡು ಎರಡನೆಯ ಮಗ್ಗಿಯನ್ನು ಕಲಿಯದ ಹುಡುಗನು ಮೂರನೆಯ ಮಗ್ಗಿಯನ್ನು ಕಲಿತ ನಂತರ ಪುನಃ ಎರಡನೆಯ ಮಗ್ಗಿಯನ್ನು ಕಲಿಯಬೇಕಾದಂತೆ ಆಗುವುದು. ಧರ್ಮವಿಲ್ಲದ ಅರ್ಥವನ್ನು ಸಂಪಾದಿಸಿ "ಅನ್ಯಾಯೇ

ಪಾರ್ಜಿತಂ ವಿಕ್ತಂ ಅನೌಚಿತ್ಯೇ ವಿನಶ್ಯತಿ" ಎಂಬುಕ್ತಿಯ ಪ್ರಕಾರ ಅನ್ಯಾಯದಿಂದ ಹಣವನ್ನು ಗಳಿಸಿ ಅಯೋಗ್ಯ ಕಾರ್ಯದಲ್ಲಿ ಹಾಳು ಮಾಡಿಕೊಂಡು ಬಳಿಕ ನ್ಯಾಯಾರ್ಜಿತ ಧನವನ್ನು ಸಂಗ್ರಹಿಸಬೇಕಾಗುವುದು. ಈ ಎಲ್ಲ ಕಾರಣಗಳ ಮೂಲ ವ್ಯಾವಹಾರಿಕ ದೃಷ್ಟಿಯಿಂದ ಆಲೋಚಿಸಿದರೂ ವೇದಾಂತ ದೃಷ್ಟಿಯಿಂದ ಆಲೋಚಿಸಿದರೂ "ಧರ್ಮವನ್ನು ಸಂಪಾದಿಸುವುದು ಮನುಷ್ಯನ ಮೊದಲನೆಯ ಕರ್ತವ್ಯವು" ಎಂಬ ಕಾರ್ಯದ ಬೀಜವನ್ನು ಸಕಲರೂ ತಮ್ಮ ಮನಸ್ಸಿನಲ್ಲಿ ಬಿತ್ತಿಕೊಳ್ಳಬೇಕು.*

* ೧೯೧೧ ರಲ್ಲಿನ ಶ್ರೀ ಚನ್ನಮಲ್ಲಿಕಾರ್ಜುನರ ಭಾಷೆ, ಭಾವ, ಯೋಚನೆಗಳನ್ನು ತಿಳಿಯಲು ಯಥಾವತ್ತಾಗಿ ಪ್ರತಿಮಾಡಿ ಪ್ರಕಟಿಸುವ ಈ ಲೇಖನದ ಸಹಾಯಕಾರಿ ಈ ಲೇಖನ ಮುಂದಿನ ಬೆಳವಣಿಗೆ ಇಲ್ಲ. (—ಸಂ.)

## ೨

# ಸಂಶೋಧನೆ

* ಶ್ರೀ ಚನ್ನಮಲ್ಲಿಕಾರ್ಜುನರ ಎರಡು ಮಹತ್ವದ ಸಂಶೋಧನ ಗ್ರಂಥಗಳ ಸ್ಥೂಲ ಪರಿಚಯ ಮತ್ತು ಅವರ ಕೆಲವು ಸಂಶೋಧನಾತ್ಮಕ ಲೇಖನಗಳು.
* ಶ್ರೀ ಚನ್ನಮಲ್ಲಿಕಾರ್ಜುನರ ಅನುಭವ, ಪಾಂಡಿತ್ಯ, ಬಹುಶ್ರುತತ್ವ ಮತ್ತು ಆಧುನಿಕತೆ ಈ ಲೇಖನದಲ್ಲಿ ಲಕ್ಷಿಸಬಹುದು.

# ಶ್ರೀ ಚನ್ನಮಲ್ಲಿಕಾರ್ಜುನರವರ ಎರಡು ಮಹತ್ವದ ಸಂಶೋಧನ ಗ್ರಂಥಗಳು

ಶ್ರೀ ಚನ್ನಮಲ್ಲಿಕಾರ್ಜುನರ ಮುಖ್ಯ ಉದ್ದೇಶವು ಕರ್ನಾಟಕ ರಾಜ್ಯದ ಶ್ರೀಸಾಮಾನ್ಯನಲ್ಲಿ ವಿಶೇಷತಃ ವೀರಶೈವ ಜನತೆಯ ಹೃದಯದಲ್ಲಿ ಸದ್ಧರ್ಮದ ದೀಪಿಕೆಯನ್ನು ಬೆಳಗಿಸವುದಾಗಿದ್ದಿತು. ಅವರೇ 'ಬಸವೇಶ್ವರನ ಕಾಲ'ದ ಪೀಠಿಕೆಯಲ್ಲಿ, ತಮ್ಮ ಗಮನವು ಸಂಶೋಧನೆಯತ್ತ ಹರಿದುದೇಕೆಂಬುದನ್ನು ಹೀಗೆ ಹೇಳಿಕೊಂಡಿದ್ದಾರೆ: "ಶಿವಾನುಭವ ಮಾಸಪತ್ರಿಕೆಯ ಸಂಪಾದಕರವರು ಧರ್ಮದ ವಿಷಯವು ಎಷ್ಟು ಮುಖ್ಯವೋ ಐತಿಹಾಸಿಕ ವಿಷಯವೂ ಅಷ್ಟೇ ಮುಖ್ಯವೆಂದು ಅನೇಕ ವಿಷಯುಗಳನ್ನು ಪ್ರಕಟಿಸುತ್ತಿದ್ದರು. ಈ ಇತಿಹಾಸದ ಭ್ರಾಂತಿ ನಮಗೇಕೆ ? ಪ್ರಭುಸ್ವಾಮಿಯು ಹೇಗಾದರೂ ಇರಲಿ. ಬಸವೇಶ್ವರನು ಯಾವ ಇಸವಿಯದವ ಇದ್ದರೇನು ? ರೇವಣಸಿದ್ಧರು ಯಾವ ಕಾಲದಿಂದ ಇದ್ದರೆ ತಾನೆ ಏನು ? ಪೂರ್ವಿಕ ಮಹನೀಯರುಗಳಿಂದ ಬೋಧಿಸಲ್ಪಟ್ಟ ವಿಷಯುಗಳು ನಮ್ಮನ್ನು ಅಂಟಿಕೊಂಡಿರುವುದರಿಂದ ಆ ವಿಷಯುಗಳನ್ನು ಪರಿಶೀಲಿಸುವುದು ಉತ್ತಮವೆಂಬ ಯೋಚನೆಯು ಇದ್ದಿತು. ಆದರೆ ಈಚೆಗೆ ಬಸವೇಶ್ವರನ ಕಾಲದ ವಿಷಯುವಾಗಿ ಶರಣ ಸಾಹಿತ್ಯ, ಶಿವಾನುಭವ, ಕರ್ಣಾಟಕ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ಣಾಟಕ ಈ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಭಿನ್ನ ಭಿನ್ನ ಅಭಿಪ್ರಾಯಗಳನ್ನು ನೋಡಿ ಈ ಅನೇಕ ವಿಧವ ಹಾವದಲ್ಲಿ ನಾವೂ ಪಾಲುಗಾರರಾಗಿ ಪ್ರವೇಶಿಸಲೇಬೇಕೆಂಬ ಯೋಚನೆಯುಂಟಾಗಿ ಈ ಕೆಳಗೆ ಕಂಡಂತೆ ಪರಿಶೋಧಿಸಿಮುದಾಗಿದೆ. ಇದರಿಂದ ಬಸವೇಶ್ವರನ ಚರಿತ್ರೆಗೆ ಹೊಸಬೆಳಕೂ ಬಿದ್ದಂತಾಗಿದೆ."

ಈ ಮಾತುಗಳು 'ಶ್ರೀ ರೇವಣಸಿದ್ಧರು' ಎಂಬ ಗ್ರಂಥಕ್ಕೂ ಅನ್ವಯುವಾಗುವುದು. ವೀರಶೈವ ಸಾಹಿತ್ಯ ಸಂಸ್ಕೃತಿ, ಸಿದ್ಧಾಂತಗಳನ್ನು ಕುರಿತ ಪ್ರಮಾಣ ಭೂತ ಗ್ರಂಥಗಳು ವೀರಶೈವರಿಗಷ್ಟೇ ಅಲ್ಲ, ದಕ್ಷಿಣ ಭಾರತದ ಧಾರ್ಮಿಕ ಪರಂಪರೆಯನ್ನು ಅಧ್ಯಯನ ಮಾಡಲೆಳಸುವರೆಲ್ಲರಿಗೂ ಅತ್ಯವಶ್ಯವಾಗಿ ಬೇಕಾಗಿದ್ದುವು. ಮೊದಲನೆಯ ವೀರಶೈವ ಮಹಾಸಭೆಯು (ಕ್ರಿ. ಶ. ೧೯೦೪) ಈ ಸಂಬಂಧವ ಕೆಲಸ ಆದಷ್ಟು ಬೇಗ ನಡೆಯಬೇಕಾದುದೆಂದು ನಿರ್ಣಯಿಸಿತ್ತು. ಆದರೆ, ೧೯೫೪ರ ವರೆಗೆ, ಸುಮಾರು ಐವತ್ತು ವರ್ಷಗಳ ಅವಧಿಯಲ್ಲಿ ಬಸವಣ್ಣನವರನ್ನು ಕುರಿತ ಒಂದೆರಡು ಗ್ರಂಥಗಳು ಪ್ರಕಟವಾದುವೇ ಹೊರತು ಇತರ ಮಹಾಪುರುಷರ ಮೇಲೆ, ಒಂದಾದರೂ ಸರಿಯಾದ ಗ್ರಂಥ ಹೊರಬರಲಿಲ್ಲ. ಶ್ರೀ ಚನ್ನಮಲ್ಲಿಕಾರ್ಜುನ ಅವರು ಈ ಎರಡು ಉದ್ಗ್ರಂಥಗಳನ್ನು ರಚಿಸಿ ಸಮಾಜದ ಬಹುದಿನದ ಬಯಕೆಯನ್ನು ಈಡೇರಿಸಿಕೊಟ್ಟರು.

ಈ ಎರಡು ಗ್ರಂಥಗಳಲ್ಲಿ ಏನಿದೆ ಎಂಬುದನ್ನು ಸಂಕ್ಷೇಪವಾಗಿ ಹೇಳಿ ಅವುಗಳ ಇಂದಿನ ಮೌಲ್ಯವನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಿದೆ.

## ಬಸವೇಶ್ವರನ ಕಾಲ

ಡೆಮಿ ಅಷ್ಟಾಕಾರದ ೧೯೫ ಪುಟಗಳ ಈ ಗ್ರಂಥದ ಮೊದಲ ೩೫ ಪುಟಗಳಲ್ಲಿ 'ಆರಂಭದ ಮಾತಿನ ಮಾಲೆ' ಗ್ರಂಥಪ್ರಕಟನೆಗೆ ಧನಸಹಾಯ ಮಾಡಿದವರ ತೀರ್ಥರೂಪರಾದ 'ಮಾಗಾವಿ ಸಿದ್ದಪ್ಪನವರ ಚರಿತೆ', ಪ್ರಸ್ತುತ ಕ್ಷೇತ್ರದಲ್ಲಿ ಕೆಲಸಮಾಡಿರುವ ಕೆಲವು ವಿದ್ವಾಂಸರ ಮುನ್ನುಡಿಗಳು ಅಭಿಪ್ರಾಯಗಳು, ಇವೆ. ಉಳಿದ ೧೬೫ ಪುಟಗಳಲ್ಲಿ ಪ್ರಸಕ್ತ ವಿಷಯದ ಪ್ರತಿಪಾದನೆ.

ಸಿಂದಗಿ ಸಿದ್ದಪ್ಪನವರ 'ಬಸವೇಶ್ವರ ಚರಿತ್ರೆ,' ಎಂ. ಆರ್. ಶ್ರೀನಿವಾಸಮೂರ್ತಿ ಅವರ 'ಭಕ್ತಿ ಭಂಡಾರಿ ಬಸವಣ್ಣನವರು', ಹರ್ಡೇಕರ್ ಮಂಜಪ್ಪನವರ 'ಬಸವ ಚರಿತ್ರೆ', ಡಾ. ಜೆ. ಎಫ್. ಫ್ಲೀಟ್ ಅವರು 'ಎಪಿಗ್ರಾಫಿಯಾ ಇಂಡಿಕಾ'ದ ಪಂಚಮ ಸಂಪುಟದಲ್ಲಿ ಬಸವಣ್ಣನವರ ಬಗೆಗೆ ಬರೆದಿರುವ ಲೇಖನ, ಆರ್. ಸಿ. ಸಿ. ಕಾರ್ ಅವರ 'ಮಾನೋಗ್ರಾಫ್ ಆನ್ ಲಿಂಗಾಯತ್ಸ್' ಎಂಬ ಗ್ರಂಥ, ಇ. ಥರ್ಸ್ಟನ್ ಅವರು 'ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯದಲ್ಲಿ' ಬರೆದಿರುವ ಈ ಸಂಬಂಧದ ಲೇಖನ,—ಈ ಮುಂತಾದ ಆಧುನಿಕ ಸಂಶೋಧನ ಗ್ರಂಥಗಳನ್ನು ಈ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರಕಟವಾಗಿರುವ ಮತ್ತು ಪ್ರಕಟವಾಗದೆ ಇರುವ ಎಲ್ಲಾ ವೀರಶೈವ ಗ್ರಂಥಗಳು ಮತ್ತು ಶಾಸನಗಳನ್ನೂ ಅಧ್ಯಯನ ಮಾಡಿ ಈ ಗ್ರಂಥವನ್ನು ರಚಿಸಲಾಗಿದೆ.

೧. ಬಸವೇಶ್ವರನ ಕಡೆಗಾಲ, ೨. ಬಸವೇಶ್ವರನ ಪ್ರಾಬಲ್ಯ, ೩. ಬಸವೇಶ್ವರನ ವಿದ್ಯಾಭ್ಯಾಸ, ೪. ಬಸವೇಶ್ವರನ ಜನನ, ೫. ಬಸವೇಶ್ವರನ ವಿಷಯದ ಲೇಖನದ ವಿಮರ್ಶೆ, ೬. ಈ ಶೋಧದ ಕೊನೆಯ ಟಿಪ್ಪಣಿಗಳು—ಹೀಗೆ ಆರು ಪ್ರಕರಣಗಳಲ್ಲಿ ಒಟ್ಟು ೬೫ ಅಂಶಗಳನ್ನು ಕುರಿತು ವಿವೇಚಿಸಲಾಗಿದೆ.

ಆದರೆ, ಇತ್ತೀಚೆಗೆ ನಡೆದಿರುವ ಸಂಶೋಧನೆಯಿಂದ ಈ ಗ್ರಂಥಕರ್ತರ ಕೆಲವು ತೀರ್ಮಾನಗಳು ಹಳಸಲಾಗಿವೆ. ಅವುಗಳಲ್ಲಿ ಮುಖ್ಯವಾದುವು;

೧. ಬಸವಣ್ಣನವರ ಜನ್ಮಸ್ಥಳವು ಬಿಜಾಪುರ ಜಿಲ್ಲೆಯ ಮಣಿಗವಳ್ಳಿ; ಅವರ ತಾಯಿತಂದೆಗಳು ಕಸ್ಯಪಗೋತ್ರದ ಚಂದೆಮರಸ ಚಂದ್ರಾಂಬೆಯರೆಂಬ ಬ್ರಾಹ್ಮಣ ದಂಪತಿಗಳು; ಬಸವಣ್ಣನವರು ಹುಟ್ಟಿದುದು ಕ್ರಿ. ಶ. ೧೧೦೬ ರಲ್ಲಿ. ಬಾಗೆವಾಡಿಯ ಮಾದರಸ ಮಾದರಾಂಬೆಯರು ಇವರನ್ನು ಸಾಕಿದವರು. ಮಾದರಸನೇ ಇವರ ವಿದ್ಯಾಗುರು. ಕಪ್ಪಡಿಯ ಸಂಗಮೇಶ್ವರನು ಆತ್ಮ ವಿದ್ಯಾಗುರು.

೨. ಬಸವಣ್ಣನವರು ವೀರಶೈವ ದೀಕ್ಷೆ (ಪುನರ್ಜನ್ಮ) ಪಡೆದ ಮೇಲೆ ೬೬ ವರ್ಷ ಜೀವಿಸಿದ್ದರು.

೩. ಶಾಸನೋಕ್ತನಾದ ಕಸಪಯ್ಯನಾಯಕನೂ ಬಸವಣ್ಣನವರೂ ಅಭಿನ್ನರು. –ಬಸವಣ್ಣನವರ ವೃತ್ತಾಂತವನ್ನು ಪ್ರಧಾನವಾಗಿಯೋ ಆನುಷಂಗಿಕವಾಗಿಯೋ ನಿರೂಪಿಸುವ ಯಾವ ವೀರಶೈವ ಗ್ರಂಥವಲ್ಲಿಯೂ ಜೈನ ಗ್ರಂಥಗಳಲ್ಲಿಯೂ ಅನೇಕಾನೇಕ ಅನೈತಿಹಾಸಿಕ ಅಂಶಗಳಿರುವುದೇನೋ ದಿಟ. ಆದರೆ ಅವುಗಳಲ್ಲಿ ಅಷ್ಟೇ ಪ್ರಮಾಣದಲ್ಲಿ ಸತ್ಯಸಂಗತಿಗಳೂ ಸೇರಿಕೊಂಡಿರುತ್ತವೆ. ಅವುಗಳಲ್ಲಿ ಹೇಳಿರುವ ವಿಷಯಗಳೆಲ್ಲಪೂ ನೂರಕ್ಕೆ ನೂರೂ ಕಾಲ್ಪನಿಕ ಎಂದೆನ್ನುವಂತಿಲ್ಲ. ಆದರೆ ಒಂದರಲ್ಲಾದರೂ ಬಸವೇಶ್ವರನ ತಂದೆತಾಯಿಗಳು ಮಣಿಗವಳ್ಳಿಯ ಚಂದಿಮರಸ ಚಂದ್ರಾಂಬೆಯರೆಂದು ಹೇಳಿಲ್ಲ. ವೀರಶೈವ ಗ್ರಂಥಗಳ ಅಂತರಂಗವನ್ನರಿಯದ ಡಾ. ಜೆ. ಎಫ್. ಫ್ಲೀಟ್ ಅವರು ಮೊದಲು ಈ ಊಹೆಯನ್ನು ಮಾಡಿದವರು. ಅವರ ಹರಿಹರ ದೇವನ 'ಬಸವರಾಜದೇವರ ರಗಳೆ'ಯನ್ನು ನೋಡಿರಲಿಲ್ಲ. ಅರ್ಜುನವಾಡದ ಶಿಲಾಶಾಸನವನ್ನೂ ನೋಡಿರಲಿಲ್ಲ. ಇಂತಹ ಇತರ ಎಷ್ಟೋ ಗ್ರಂಥಗಳನ್ನು ನೋಡಿರಲಿಲ್ಲ. ಆದುದರಿಂದ ಅವರ ನಿರೀಕ್ಷೆಯನ್ನಾಗಲಿ, ಅವರ ತೀರ್ಮಾನವನ್ನು ಪುಷ್ಟೀಕರಿಸುತ್ತಿರುವ ಶ್ರೀ ಜ. ಅವರ ವಾದವನ್ನಾಗಲಿ ಈಗ ಅಂಗೀಕರಿಸುವುದು ಯುಕ್ತವಲ್ಲ.

ಬಸವಣ್ಣನವರೇ ಶಾಸನೋಕ್ತ ಕಸಪಯ್ಯನಾಯಕ ಎಂದು ನಿರ್ಣಯಿಸುವುದು ಕೂಡ ಸಾಧುವಲ್ಲ. ಮಹಾಪುರುಷರು ರಾಜಕೀಯ ಕ್ಷೇತ್ರದಲ್ಲಿ ಒಂದು ಹೆಸರನ್ನೂ ಧಾರ್ಮಿಕ ಕ್ಷೇತ್ರದಲ್ಲಿ ಮತ್ತೊಂದು ಹೆಸರನ್ನೂ ಇಟ್ಟುಕೊಂಡಿರುವುದಕ್ಕೆ ನಮ್ಮ ನಾಡಿನ ಇತಿಹಾಸದಲ್ಲಿ ಉದಾಹರಣೆಗಳಿಲ್ಲ.

ಆದರೂ, ಶ್ರೀ ಜ. ಅವರ ಕೆಲವು ನಿರ್ಣಯಗಳು ಇಂದಿಗೂ ಪರಿಶೀಲನಾರ್ಹವಾಗಿವೆ. ಅವುಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು: ಅಧಿಕಾರ ತ್ಯಾಗ ಮಾಡಿ ಕಲ್ಯಾಣ ಪಟ್ಟಣವನ್ನು ಬಿಟ್ಟು ಹೊರಟ ಬಸವಣ್ಣನವರು ಕೊಡೆಯಕಲ್ ಎಂಬ ಸ್ಥಳಕ್ಕೆ ಹೋಗಿ ಅಲ್ಲಿ ಕೆಲವುದಿನ, ಅಲ್ಲಿಂದ ಮುಂದೆ ಸಂನ್ಯಾಸ ಸಂಗಮೇಶ್ವರದಲ್ಲಿ ಕೆಲವು ದಿನ ಉಳಿದು ಕಡೆಗೆ ಕೂಡಲ ಸಂಗಮಕ್ಕೆ ಹೋಗಿ ನಿಜೈಕ್ಯರಾಗಿರಬೇಕು. ಕೊಡೆಯ ಕಲ್ಲು ಎಂಬ ಗ್ರಾಮಕ್ಕೆ ಕಡೆಯ ಕಲ್ಯಾಣ ಎಂದೂ ಕರೆಯಲಾಗುತ್ತಿದೆ.

–ಈ ಊಹೆ ನಿರಾಧಾರವಲ್ಲವೆಂದು ತೋರುತ್ತದೆ. ತುರುಗಾಹಿರಾಮಣ್ಣನು ತನ್ನ ಒಂದು ವಚನದಲ್ಲಿ, "ಬಂದಿತ್ತು ದಿನ. ಬಸವಣ್ಣ ಕಲ್ಲಿಗೆ; ಚನ್ನಬಸವಣ್ಣ ಉಳುವೆಯಲ್ಲಿಗೆ; ಪ್ರಭು ಅಕ್ಕ ಕದಳಿ ದ್ವಾರಕ್ಕೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ"– ಈ ವಾಕ್ಯವಿದೆ. ಶರಣರು ಕಲ್ಯಾಣ ಪಟ್ಟಣವನ್ನು ಬಿಟ್ಟ ಸಂದರ್ಭವನ್ನು ಈ ವಾಕ್ಯ ಸೂಚಿಸುತ್ತಿದೆಯೇನೊ. ಇಲ್ಲಿ ನಮ್ಮ ಗಮನವನ್ನು ಸೆಳೆಯುವುದು 'ಬಸವಣ್ಣ ಕಲ್ಲಿಗ' ಎಂಬ ಮಾತು. 'ಕೊಡೆಯ ಕಲ್' ಎಂಬುದೇ 'ಕಲ್ಲು' ಆಗಿ ಸಂಕ್ಷೇಪಗೊಂಡಿರಬಹುದು.

ಗ್ರಂಥದ ೩ನೆಯ ಭಾಗವು, ಬಸವೇಶ್ವರನ ವಿಷಯವಾಗಿ ಆ ತನಕ ಬಂದಿದ್ದ ಕೆಲವು ಆಕ್ಷೇಪಾರ್ಹ ಲೇಖನಗಳ ವಿಮರ್ಶೆಯನ್ನೊಳಗೊಂಡಿರುವುದರಿಂದ ಬಹು ಮುಖ್ಯವಾದುದು. ನಾಲ್ವರು ಸುಪ್ರಸಿದ್ಧ ವಿದ್ವಾಂಸರು ಬಸವಣ್ಣನವರ ಜೀವನ

ಕಾಲಾದಿಗಳ ವಿಷಯವಾಗಿ ವ್ಯಕ್ತಪಡಿಸಿರುವ ಅಭಿಪ್ರಾಯಗಳೂ ಅವುಗಳ ಖಂಡನೆಯೂ ಅದರಲ್ಲಿ ಸೇರಿರುತ್ತವೆ. ಆ ಲೇಖನಗಳಲ್ಲಿರುವ ವಿಷಯಗಳನ್ನು ಇಲ್ಲಿ ಸಂಗ್ರಹಿಸಿಕೊಟ್ಟಿದೆ.

೧. ಬಸವಣ್ಣನವರು ಮಂತ್ರಿಯಾಗಿದ್ದು ಸಿಂದ ಬಿಜ್ಜಳನಲ್ಲಿ; ಕಲಚೂರಿ ವಂಶದ ಬಿಜ್ಜಳನಲ್ಲಿ ಅಲ್ಲ. ಸಿಂದ ವಂಶದ ಬಿಜ್ಜಳನು (೧೧೬೯–೧೧೮೭) ಕೆಲಕಾಲ ಮಂಗಳ ವಾಡದಲ್ಲಿ ಮಾಂಡಲಿಕನಾಗಿದ್ದ. ಬಸವಣ್ಣನವರ "ಅರಸು ವಿಚಾರ ಸಿರಿಯು ಸಿಂಗಾರ ಸ್ಥಿರವಲ್ಲ ಮಾನವ. ಕಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ..." ಈ ವಚನದಿಂದ ಅವರು ಕಲ್ಯಾಣ ಪಟ್ಟಣವು ಹಾಳಾದ ಮೇಲೆಯೂ ಜೀವಿಸಿದ್ದಿರಬೇಕು. ಚಾಲುಕ್ಯ ರಾಜ್ಯ ಹಾಳಾದುದು ಕ್ರಿ. ಶ. ೧೨೦೦ ರಲ್ಲಿ. ಆದುದರಿಂದ ಬಸವಣ್ಣನವರ ಐಕ್ಯದ ಕಾಲವು ಕ್ರಿ. ಶ. ೧೨೦೦ ಅಥವಾ ಅದಕ್ಕೂ ಮುಂದೆ ಹೋಗಬೇಕು (ಡಾ. ಎಸ್. ಶ್ರೀಕಂಠಶಾಸ್ತ್ರಿಗಳು, ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ, Oct-Nov. ೧೯೩೮).

೨. ಡಾಕ್ಟರ್ ಚಿಲಕೂರು ನಾರಾಯಣರಾಯರು ಎಂಬುವರು ವೀರಶೈವ ವಾಙ್ಮಯಾವತಾರ ಎಂಬ ಲೇಖನ(ಪ್ರಬುದ್ಧ ಕರ್ಣಾಟಕ, ೮೨)ದಲ್ಲಿ–"ಬಸವಣ್ಣನು ಬಿಜ್ಜಳನ ಮರಣಾನಂತರವೂ ಅನೇಕ ವರ್ಷಗಳ ಕಾಲ ಜೀವಿಸಿದ್ದನೆಂದೂ ಆತನು "ಬಿಜ್ಜಳನ ರಾಜ್ಯವನ್ನು ಬಿಟ್ಟು ಪ್ರಚ್ಛನ್ನವಾಗಿ ಹೋಗಿ ಬಲ್ಲಾಳನಾಸ್ಥಾನವನ್ನು ಸೇರಿದನೆಂದೂ ಬಿಜ್ಜಳನ ವಂಶವು ಸಂಪೂರ್ಣವಾಗಿ ನಾಶವನ್ನು ಹೊಂದಿದವರೆಗೂ ಬಲ್ಲಾಳನಿಗೆ ಸಹಾಯಮಾಡಿ ತನ್ನ ಹಗೆ ತೀರಿಸಿಕೊಂಡನೆಂದೂ ಅವನು ವೃದ್ಧಾಪ್ಯದ ವರೆಗೂ ಜೀವಿಸಿದ್ದನೆಂದೂ ನಾನೂ ಊಹಿಸುತ್ತೇನೆ" ಎಂದು ಪ್ರತಿಪಾದಿಸಿದರಲ್ಲದೆ ವೀರಶೈವರ ವಚನಗಳೆಲ್ಲವೂ ಇತ್ತೀಚಿನ ಸೃಷ್ಟಿ ಎಂದು ಸಾರಿದ್ದರು. ಹಡಗಲಿ ತಾಲೂಕು ಓರುವಾಯಿ ಗ್ರಾಮದಲ್ಲಿರುವ ಬೆಣಕಪ್ಪನ ಆಲಯದಲ್ಲಿರುವ ಒಂದು ಶಾಸನ (ಕ್ರಿ. ಶ. ೧೨೦೬)ವಲ್ಲಿ ಉಕ್ತನಾಗಿರುವ ಬಸವಣ್ಣ ದಂಡನಾಯಕನೂ ಕಲ್ಯಾಣದ ಬಸವಣ್ಣ ನವರೂ ಅಭಿನ್ನರೆಂಬುದು ರಾಯರ ಗ್ರಹಿಕೆ. ಆ ಶಾಸನವೇ ಅವರು ಕೊಟ್ಟಿರುವ ಮುಖ್ಯ ಆಧಾರ.

೩. ಕಪಟ್ರಾಳ್ ಕೃಷ್ಣರಾಯ ಎಂಬುವರು ಜಗಳೂರು ತಾಲ್ಲೂಕಿನ ಕಲ್ಲೇ ದೇವರಪುರದಲ್ಲಿರುವ ಒಂದು ಶಾಸನದ ಕೆಲವು ಪಂಙ್ತ್ತಿಗಳನ್ನು ಉಲ್ಲೇಖಿಸಿ ಬಸವೇ ಶ್ವರನು ನಾಥ ಪಂಥದ ಅನುಯಾಯಿ ಎಂದರು (ಪ್ರಬುದ್ಧಕರ್ಣಾಟಕ XXIV–೧).

೪. ಡಾಕ್ಟರ್ ಅ. ವೆಂಕಟಸುಬ್ಬಯ್ಯನವರು;

೧) ಬಸವಣ್ಣನವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿಲ್ಲ.

೨) ಬಸವಣ್ಣನವರು ಸುಮಾರು ದೃಢವಾಗಿಯೇ ಬಿಜ್ಜಳನ ಕಾಲದಲ್ಲಿ ಎಂದರೆ ೧೧೫೬–೬೭ ರಲ್ಲಿ ಇರಲಿಲ್ಲ. ಅವರು ಕ್ರಿ.ಶ. ಸುಮಾರು ೧೨೦೦ ಕ್ಕಿಂತ ಹಿಂದೆ ಇದ್ದಂತೆ ತೋರುವುದಿಲ್ಲ.

ಈ ನಾಲ್ವರ ವಿತಂಡವಾದಗಳನ್ನೂ ಬೇರೆ ಬೇರೆ ವೀರಶೈವ ವಿದ್ವಾಂಸರು ಸಾಧಾ ರವಾಗಿ ಖಂಡಿಸಿ ತಮ್ಮ ನಿಲುವನ್ನು ತರ್ಕಬದ್ಧವಾಗಿ ಪ್ರತಿಪಾದಿಸಿದ್ದರು. ಶ್ರೀ ಚ.

ಅವರು ಮತ್ತೊಮ್ಮೆ ಇನ್ನಷ್ಟು ಆಧಾರಗಳನ್ನು ಕೊಟ್ಟು ವಿರೋಧಿಗಳ ಬಾಯಿ ಮುಚ್ಚಿಸಿ ಸತ್ಯಾಂಶವೇನೆಂಬುದನ್ನು ಬಿತ್ತರಿಸಿರುವರು. ಬಸವೇಶ್ವರನ ಪ್ರಭಾವವನ್ನು ಬೆಳೆಸಲು ಇಂತಹ ಪ್ರಭೃತಿಗಳೂ ಕಾರಣರೆಂದು ಇವರ ಅಭಿಪ್ರಾಯ.

ಒಟ್ಟು ೧೬೫ ಅಂಶಗಳನ್ನು ಕುರಿತು ವಿವೇಚಿಸಲಾಗಿದೆಯೆಂದು ಈ ಲೇಖನದ ಆದಿಯಲ್ಲಿಯೇ ಸೂಚಿಸಿದೆ. ಸಂಶೋಧಕರು ಈ ಅಂಶಗಳೆಲ್ಲವನ್ನೂ ಗಮನದಲ್ಲಿಟ್ಟು ಕೊಂಡು ಅಣ್ಣನವರ ಶ್ರೀಪಾದದಿಂದ ಪವಿತ್ರಗೊಂಡಿರುವ ಕ್ಷೇತ್ರಗಳಿಗೆ ಹೋಗಿ ಅಲ್ಲಿಯ ಅವಶೇಷಗಳನ್ನು ಪರೀಕ್ಷಿಸಿ ಸಂಬಂಧಪಟ್ಟ ಇತರ ಮಾಹಿತಿಗಳನ್ನೂ ಸಂಗ್ರಹಿ ಸಿದರೆ ಪ್ರಯೋಜನವುಂಟು. ಇಂತಹ ಸುಕ್ಷೇತ್ರಗಳು ಅನೇಕ ವೇಳೆ ಶಾಸನಗಳಿಗಿಂತ ಗ್ರಂಥಗಳಿಗಿಂತ ವಿಶ್ವಾಸಾರ್ಹ ಸಂಗತಿಗಳನ್ನು ಹೇಳಬಲ್ಲುವು. ಉದಾಹರಣೆಗೆ ಉಳವಿ ಮಹಾಮನೆಗಳ ವಿಚಾರ 'ಬಸವಪುರಾಣ'ಗಳಲ್ಲಿ ಇಲ್ಲ; 'ಪ್ರಭುಲಿಂಗಲೀಲೆ'ಯಲ್ಲಿಯೂ ಇಲ್ಲ; ಇತ್ತೀಚಿನ ಶರಣಲೀಲಾಮೃತವೇ ಮುಂತಾದ ಗ್ರಂಥಗಳಲ್ಲಿ ವಿವರವಾಗಿ ದೊರೆ ಯುತ್ತದೆ. ಆ ಕ್ಷೇತ್ರವು ಚನ್ನಬಸವಣ್ಣನವರು ಲಿಂಗೈಕ್ಯರಾದ ಪವಿತ್ರಕ್ಷೇತ್ರವೆಂಬುದ ರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಇಂತಹ ಅನೇಕ ಮಹತ್ವದ ಅಂಶಗಳು ಕ್ಷೇತ್ರಪರಿ ಶೀಲನೆಯಿಂದ ಬೆಳಕಿಗೆ ಬರುವುದು ಸಾಧ್ಯವಿದೆ.

ಶ್ರೀ ಚ. ಅವರು ಈ ಗ್ರಂಥರಚನೆಗಾಗಿ ಬಳಸಿಕೊಂಡ ಮೂಲಸಾಮಗ್ರಿಯಲ್ಲಿ ಅನೇಕ ಕಳಪೆಗಳೂ ಇವೆ. ಸಂಶೋಧಕರು ಅವರನ್ನು ಗಮನಿಸದೆ ಇಂದಿಗೂ ನಿಲ್ಲಬಲ್ಲ ಸಾಕ್ಷ್ಯಾಧಾರಗಳನ್ನು ಉಚಿತವರಿತು ಬಳಸಿಕೊಂಡು ಸಮಗ್ರವೂ ಅಧಿಕೃತವೂ ಆದ ಮತ್ತೊಂದು ಬಸವಚರಿತ್ರೆಯನ್ನು ರಚಿಸಬಹುದು.

## ಶ್ರೀ ರೇವಣಸಿದ್ಧರು

'ವೀರಶೈವ ಪಂಚಾಚಾರ್ಯರ ಚರಿತ್ರೆ–ಶ್ರೀ ರೇವಣಸಿದ್ಧರು' ಸದ್ಧರ್ಮದೀಪಿಕೆ' ಗ್ರಂಥಮಾಲೆಯ ೮ನೆಯ ಪುಷ್ಪ. "ಮೊದಲನೆಯ ವೀರಶೈವ ಮಹಾಸಭೆಯ ಕಾಲ (ಕ್ರಿ.ಶ. ೧೯೦೪) ದಿಂದಲೂ ಶ್ರೀ ರೇವಣಸಿದ್ಧೇಶ್ವರರ ಚರಿತ್ರೆಯು ಆಗಬೇಕೆಂದು ಸಮಾಜವು ಬಯಸುತ್ತಿದ್ದಂತೆ ಆದ ಪುಸ್ತಕವಿದು." ಇದರ ರಚನೆಯು ಆಗಲೇಬೇಕೆಂದು ಪ್ರೇರಣೆ ಪ್ರೋತ್ಸಾಹಗಳನ್ನೂ ಈ ಸಂಬಂಧದ ಕೆಲಸಕ್ಕೆ, ಎಂದರೆ ಮಾಹಿತಿ ಸಂಗ್ರಹಕ್ಕೆ ಎಲ್ಲಾ ಬಗೆಯ ಸೌಕರ್ಯಗಳನ್ನೂ ಒದಗಿಸಿದವರು ಲಿಂಗೈಕ್ಯ ಶ್ರೀಮನ್ನಿರಂಜನ ಚನ್ನ ಬಸವಸ್ವಾಮಿಗಳು, ಮುಪ್ಪಿನಸ್ವಾಮಿ ವಿರಕ್ತಮಠ ಬ್ಯಾಡಗಿ ಅವರು. ಅವರೇ ಪ್ರಕಾಶ ಕರು ಕೂಡ.

ಡೆಮಿ ಅಷ್ಟದಳ ೫೬೪ ಪುಟಗಳ ಹೆಬ್ಬೊತ್ತಿಗೆಯಿದು. ಮೊದಲ ೨೦ ಪುಟಗಳಲ್ಲಿ ಮೈಸೂರು ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಸರ್ವಶ್ರೀ ಟಿ. ಎನ್. ಮಲ್ಲಪ್ಪ ಅವರ ವಿದ್ವತ್‌ಪೂರ್ಣ ವಿಚಾರ ಪ್ರಚೋದನ ಮುನ್ನುಡಿಯೂ ಸಂಬಂಧಪಟ್ಟ ಇತರ ಸಂಶೋಧಕರ ಅಭಿಪ್ರಾಯಗಳೂ ಇದೆ. ಮುಂದಿನ ೨೪ ಪುಟ

ಗಳು ವಿವರಣಾತ್ಮಕವಾದ ವಿಷಯಾನುಕ್ರಮಣಿಕೆಗೆ ಮೀಸಲು. ಉಳಿದ ೫೨೦ ಪುಟಗಳಲ್ಲಿ ಪ್ರಸಕ್ತ ವಿಷಯದ ಪ್ರತಿಪಾದನೆ ಇದೆ. ಇದರ 'ಆರಂಭ ಭಾಗ'ವು ಗ್ರಂಥಕ್ಕೆ ಪೀಠಿಕಾರೂಪದಲ್ಲಿದ್ದು ಗ್ರಂಥರಚನೆಯ ಉದ್ದೇಶ, ಚರಿತ್ರೆಯೂ ಪುರಾಣವೂ, ಶ್ರೀ ಚರಿತ್ರೆಯ ಆಧಾರ (ಪುರಾಣಗಳು, ಕಾವ್ಯಗಳು, ಗ್ರಂಥಗಳು ಶಾಸನಗಳು ಮೊದಲಾದುವುಗಳು), ಆಚಾರ್ಯರು ಲಿಂಗೋದ್ಭವರು–ಈ ವಿಷಯಗಳನ್ನು ಒಳಗೊಂಡಿದೆ. ಈ ಭಾಗಕ್ಕೆ ನಾವು 'ಗ್ರಂಥಕರ್ತರ ಪ್ರಸ್ತಾವನೆ' ಎಂದು ಕರೆಯಬಹುದು. ಇದಿರುವುದು ೧೩ ಪುಟಗಳಷ್ಟು ಮಾತ್ರ.

ವಾಸ್ತವವಾಗಿ ಗ್ರಂಥಾರಂಭವಾಗುವುದು ೧೩ನೆಯ ಪುಟದಿಂದ ಮುಂದೆ. ೫೦೭ ಪುಟಗಳಷ್ಟು ಸುದೀರ್ಘವಾದ ಈ ಭಾಗದಲ್ಲಿ ಶ್ರೀ ರೇವಣಸಿದ್ಧರ ಜೀವನ ಸಾಧನೆ ಸಿದ್ಧಿ ಮುಂತಾದುವನ್ನು ನಿರೂಪಿಸಲಾಗಿದೆ. ಅವರ ಅನುಪಮ ವ್ಯಕ್ತಿತ್ವದ ಚಿತ್ರಣವು ಒಟ್ಟು ೭೫ ಅಂಶ (ಶೀರ್ಷಿಕೆ)ಗಳಲ್ಲಿ ಪ್ರಕಟಗೊಂಡಿದೆ. ಅಲ್ಲಿ ಏನೇನು ಹೇಳಿದೆ ಎಂಬುದನ್ನು ವಿವರವಾಗಿ ಗ್ರಹಿಸಲು ಮೂಲಗ್ರಂಥವನ್ನೇ ನೋಡಬೇಕು. ಆದರೆ ಆ 'ಅಂಶ'ಗಳು ಯಾವುವು ಎಂಬುದನ್ನಾದರೂ ಇಲ್ಲಿ ಉಲ್ಲೇಖಿಸದಿದ್ದರೆ ಗ್ರಂಥಕರ್ತರಿಗೆ ಅನ್ಯಾಯ ಮಾಡಿದಂತಾಗುತ್ತದೆ; ಗ್ರಂಥದ ಮಹತ್ವವೆಷ್ಟೆಂಬುದರ ಅರಿವೂ ಆಗುವುದಿಲ್ಲ. ಆದುದರಿಂದ ಅವುಗಳ ಪಟ್ಟಿಯನ್ನು ಮಾತ್ರ ಮುಂದೆ ಕೊಟ್ಟಿರುತ್ತದೆ.

೧. ರೇವಣಸಿದ್ಧರ ವಿಷಯದ ಗ್ರಂಥಗಳು
೨. ಆಚಗೊಂಡನ ಗದ್ದೆ
೩. ನವನಾಥರೂ ರೇವಣನಾಥನೂ
೪. ಬಿಯಾಳಿ ಸಿದ್ಧ ಮತ್ತು ೭೦೦ ನರಭಕ್ಷಕ
೫. ಸಿರಿಯಾದೇವಿಯೊಡನೆ ಯಾತ್ರೆಮಾಡಿದುದು
೬. ರೇಣಾವಿಯಲ್ಲಿ ರೇವಣಸಿದ್ಧರು
೭. ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಜನನ
೮. ಅಗಸ್ತ್ಯರೊಡನೆ ಸಂಭಾಷಣೆ
೯. ಸಿದ್ಧಾಂತಶಿಖಾಮಣಿ ಎಂಬ ಸಂಸ್ಕೃತ ಗ್ರಂಥದ ಕಾಲ
೧೦. ಚೋಳ ಮಂಡಲ ದೇಶಾಟನ
೧೧. ಪೊನ್ನಾಂಬಲದಲ್ಲಿ ಗೀತಾನರ್ತನೆ
೧೨. ಕಂಚಿ ಅರುಳಾಳ್ ಪೆರುಮಾಳ್
೧೩. ಮಾಸೂರಿಗೆ ಹೋದುದು
೧೪. ದೋಸೆಯ ಪಿಟ್ಟವ್ವೆಗೆ ಸಹಾಯ
೧೫. ಬಿಜ್ಜಳನ ಗರ್ವಹರಣ
೧೬. ಗಾಣದ ಕಲ್ಲಿಸೆಟ್ಟಿಯಲ್ಲಿ ಕೆಲಸ
೧೭. ಸೂಳೆ ಮಾಯಿದೇವಿಯ ಮನೆಯಲ್ಲಿ

೪೯. ಕಂಚಿ ಅರುಳಾಳ್ ಪೆರುಮಾಳು
೫೦. ಶಿವಗಂಗೆಯಲ್ಲಿ ವೀರಶೈವರ ವೈಶಿಷ್ಟ್ಯ
೫೧. ರೇಣುಕ ಲೀಲಾವಿಲಾಸ ವಿಜಯ (ಶ್ರೀ ಭೀಲುಶಾದ್ರಿ ಮಹಾಪುರಾಣ)
೫೨. ಶ್ರೀ ರೇವಣರು ಆಚಾರ್ಯರಾದುದು
೫೩. ಬಾಳೆಹಳ್ಳಿಯಲ್ಲಿ ಸಿಂಹಾಸನ
೫೪. ಸ್ವಾಯಂಭುವಾಗಮ
೫೫. ರುದ್ರಮುನೀಶ್ವರನ ಅಧಿಕಾರ, ಅಂತ್ಯಕಾಲ ಮುಂತಾದುವು
೫೬. ವೀರಶೈವರ ಬಗೆಗಳು
೫೭. ಶ್ರೀ ರೇವಣರಿಂದ ವೀರಶೈವ ಧರ್ಮ ಪ್ರಸಾರ
೫೮. ಯಾದವರಾಜರು ಶಿಲಾಹಾರರು ಮುಂತಾದವರಿಂದ ಪೂಜಿತರಾದುದು
೫೯. ಚತುರಾಚಾರ್ಯ ಪ್ರಬಂಧ
೬೦ ಕೊಲ್ಲಿಪಾಕೆಯ ಮಹಾತ್ಮೆ
೬೧. ಕುಲನು ಪಾಕುಲು ಮಹಾತ್ಮ್ಯಮು
೬೨. ಶ್ರೀ ರೇವಣರ ಹೆಸರಿರುವ ಶಾಸನಗಳು
೬೩. ಅಮುಗೆದೇವನ ಶಾಸನ
೬೪. ಶ್ರೀ ರೇವಣಸಿದ್ಧರು ಕುರುಬರ ಗುರು
೬೫. ಸೊನ್ನಲಾಪುರದ ಸಿದ್ಧರಾಮೇಶ್ವರದೇವರ ಚರಿತ್ರೆ
೬೬. ಹೂಲಿಯಿಂದ ಅಗಸ್ತ್ಯಮುನಿಯ ವಿಷಯದಲ್ಲಿ ಬಂದ ಪತ್ರ
೬೭. ಶಿವಗಂಗೆಯಲ್ಲಿ ಶ್ರೀ ರೇಣುಕರು ಮಾಡಿದ ಸಾಹಸ ಕಾರ್ಯ
೬೮. ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನ
೬೯. ಶ್ರೀ ಮಂಜೇಶ್ವರ ಗೋವಿಂದ ಪೈ ಅವರ ಶೋಧನೆ
೭೦. ಸುಜ್ಞಾನಬೋಧೆ (ಗುರುಚಿತ್ತಾರಾಧ್ಯರ ವಿಷಯ)
೭೧. ಶ್ರೀ ಕಪಟರಾಳ ಕೃಷ್ಣರಾಯರ ಕಲ್ಪನೆಯ ವಿಕಾಸ
೭೨. ಶ್ರೀ ಕಾಶೀನಾಥ ಶಾಸ್ತ್ರಿಗಳ ಗ್ರಂಥಗಳು
೭೩. 'ರೇಣುಕ ವಿಜಯ'ದ ಇತಿಹಾಸ
೭೪. ಶ್ರೀ ರೇವಣರ ಸಂಬಂಧದ ಕ್ಷೇತ್ರಗಳು
೭೫. ವಿವಿಧ ವಿಷಯಗಳು.

ಈ ಪಟ್ಟಿಯನ್ನು ನೋಡಿದರೆ ಮಾನ್ಯ ಲೇಖಕರು ಶ್ರೀ ರೇಣುಕ-ರೇವಣಸಿದ್ಧರ ಸಮಗ್ರ ಚರಿತ್ರೆಯನ್ನು ನಿರ್ಮಿಸಲು ಎಷ್ಟು ಶ್ರಮಪಟ್ಟಿರುವರೆಂಬುದರ ಅರಿವಾಗುತ್ತದೆ. ನನಗೆ ತಿಳಿದ ಮಟ್ಟಿಗೆ ಇವರಿಗಿಂತ ಮೊದಲು ಆಧುನಿಕರಾರೂ ಈ ಸಿದ್ಧಕುಲ ಚಕ್ರವರ್ತಿಯನ್ನು ಕುರಿತು ಸಾಧಾರವಾಗಿ ರಚಿಸಲು ಪ್ರಯತ್ನವನ್ನೇ ಮಾಡಲಿಲ್ಲ (ಮತ್ತೆ ಇಂತಹ ಇನ್ನೊಂದು ಪ್ರಯತ್ನ ನಡೆದುದೂ ಇಲ್ಲ). ಆದುದರಿಂದ ಶ್ರೀ ಚ.

ಅವರು ಈ ಸಂಬಂಧವಲ್ಲಿ ವಿವಿಧ ರೂಪಗಳಲ್ಲಿರುವ ಸಾಮಗ್ರಿಯೆಲ್ಲವನ್ನೂ ಸಾಧ್ಯವಿದ್ದ ಮಟ್ಟಿಗೆ ಕಲೆ ಹಾಕಿರುವರು ಆಧುನಿಕ ವಿದ್ವಾಂಸರ ಸಂಶೋಧನ ಪ್ರಬಂಧಗಳನ್ನೂ ಇತಿಹಾಸಕಾರರು ಬರೆದಿರುವ ಗೆಜೆಟಿಯರ್‌ಗಳನ್ನೂ ನೋಡಿ ವಿಷಯ ಸಂಗ್ರಹ ಮಾಡಿದ್ದಾರೆ.

ಕರ್ನಾಟಕ, ಕೇರಳ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಲ್ಲಿ ಹಲ ವಾರು ಸ್ಥಳಗಳಲ್ಲಿ ರೇವಣಸಿದ್ಧರ ಗವಿಗಳಿವೆ, ಮೂರ್ತಿಗಳಿವೆ; ಅವರ ಪವಾಡದ ಕುರುಹುಗಳಿವೆ; ರೇಣುಕರಿಂದ ಉಪದೇಶ ಪಡೆದವರೆನ್ನಲಾದ ಅಗಸ್ತ್ಯ(ಜಡೆಮುನಿ)ರ ವಿಗ್ರಹಗಳಿವೆ. ಇವರನ್ನು ಕುರಿತ ಪುರಾಣಗಳಿವೆ; ಇವರ ವೃತ್ತಾಂತವನ್ನು ಪ್ರಾಸಂಗಿಕ ವಾಗಿ ಹೇಳುವ ಕೃತಿಗಳಿವೆ; ದಂತಕಥೆ, ಸ್ಥಲಮಾಹಾತ್ಮ್ಯಗಳಿವೆ, ಇವರನ್ನು ಸ್ಮರಿಸಿರುವ ಇಲ್ಲವೇ ಇವರ ಜೀವನದಲ್ಲಿ ನಡೆದ ಒಂದೆರಡು ಘಟನೆಗಳನ್ನು ಚಿತ್ರಿಸುವ ಶಿಲಾಶಾಸನ ಗಳಿವೆ. ರಾಮಾಯಣ, ಭಾರತ ಶಿವಪುರಾಣ, ಭಾಗವತಾದಿ ಪೌರಾಣಿಕ ಗ್ರಂಥಗಳ ಕೆಲಕೆಲವು ಭಾಗಗಳು ಭರತಖಂಡದ ನೂರಾರು ಕ್ಷೇತ್ರ ಮಾಹಾತ್ಮ್ಯಗಳಲ್ಲಿಯೂ ಸ್ಥಲ ಪುರಾಣಗಳಲ್ಲಿಯೂ ನೆಯ್ದುಕೊಂಡಿರುವಂತೆ ರೇವಣಸಿದ್ಧರ ಪ್ರಸ್ತಾಪಗಳು ದಕ್ಷಿಣ ಭಾರತದಲ್ಲೆಲ್ಲಾ ಗಮನಾರ್ಹ ಪ್ರಮಾಣದಲ್ಲಿ ದೊರೆಯುತ್ತಿವೆ. ಇವುಗಳಲ್ಲಿ ಬರುವ ಎಲ್ಲಾ ಸಂಗತಿಗಳೂ ವಿಶ್ವಾಸಾರ್ಹವಲ್ಲದಿರಬಹುದು. ಐತಿಹಾಸಿಕ ಮಹಾಪುರುಷರನ್ನು ಕುರಿತು ಪ್ರಪ್ರಥಮವಾಗಿ ರಚಿಸಲ್ಪಡುವ ಗ್ರಂಥಗಳಲ್ಲಿ ಇಂತಹ ನ್ಯೂನ್ಯತೆಗಳು ಇದ್ದೇ ಇರುತ್ತವೆ. ಮುಂದೆ ಬರುವ ಗ್ರಂಥಕರ್ತರು ಸೂಕ್ತ ಕಾರಣ, ಪ್ರಮಾಣಗಳನ್ನು ಕೊಟ್ಟು ಅಂತಹ ನ್ಯೂನ್ಯತೆಗಳನ್ನು ಸರಿಪಡಿಸಬಹುದು, ಇಲ್ಲವೆ 'ಅಸಂಗತ'ಗಳನ್ನು ಕಸಿ ಮಾಡಲೂ ಬಹುದು.

ಆದುದರಿಂದ ಈ ಗ್ರಂಥದಲ್ಲಿರುವ ಅತ್ಯಂತ ಗಮನಾರ್ಹವಾದ ಅಂಶಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿಕೊಟ್ಟಿದೆ.

೧. ೧೬ನೆಯ ಶತಮಾನ(ಸುಮಾರು ಕ್ರಿ. ಶ. ೧೫೫೦)ದ್ದ ಬೊಮ್ಮರಸನು 'ರೇವಣಸಿದ್ಧೇಶ್ವರ ಪುರಾಣ'ವನ್ನು ಆರಂಭಿಸುತ್ತ ಈಶಾನ್ಯ ಶಿವಗುರುಗಳು ಸಂಸ್ಕೃತ ದಲ್ಲಿ ಬರೆದಿರುವ "ರೇವಣಾಸಿದ್ಧೇಂದ್ರ ದೇಶಿಕನ ಪರಮಲೀಲಾಕಥನ"ವನ್ನೂ ೧೨ನೆಯ ಶತಮಾನದಲ್ಲಿದ್ದ ಹಂಪೆಯ ಹರಿಹರದೇವನ 'ರೇವಣಸಿದ್ಧೇಶ್ವರ ರಗಳೆ'ಯನ್ನೂ ನೋಡಿ ಅರಿದು "ಒರೆವೆಂ ವಿಲಾಸ ಮಿಗಲೀ ಕಾವ್ಯವ ರಸಜ್ಞ ಸಂಸೇವ್ಯವ ಕವಿ ಶ್ರಾವ್ಯವ" ಎಂದಿದ್ದಾನೆ. ಆತನು ಈಗ ನಮಗೆ ಉಪಲಭ್ಯವಿಲ್ಲದಿರುವ ರೇವಣಸಿದ್ಧ ಚಾರಿತ್ರವನ್ನೂ ಹರಿಹರನ ಕೃತಿಯನ್ನೂ ಆಧರಿಸಿ ತನ್ನ ಕೃತಿಯ ಕಟ್ಟಿರುವನೆಂದಾ ಯಿತು. ಆದುದರಿಂದ ಬೊಮ್ಮರಸನು ನಿರೂಪಿಸಿರುವ ಸಂಗತಿಗಳು ಮಾತ್ರ ವಿಶ್ವಾ ಸಾರ್ಹವಾದುವು.

೨. ಆಚಾರ್ಯರು "ಲಿಂಗೋದ್ಭವರು" ಎಂಬುದು ವೀರಶೈವರ ಸಾಂಕೇತಿಕ ಭಾವನೆಯೇ ವಿನಾ ಚಾರಿತ್ರಿಕ ಸತ್ಯವಲ್ಲ.

೩. 'ಶ್ರೀಕರಭಾಷ್ಯ' ಎಂಬ ಗ್ರಂಥವು ೧೨ನೆಯ ಶತಮಾನದಲ್ಲಿದ್ದ ಶ್ರೀಪತಿ ಪಂಡಿತನು ರಚಿಸಿದುದಲ್ಲ. ಅದನ್ನು ಸಂಪಾದಿಸಿ ಪ್ರಕಟಿಸಿರುವ ಸಿ. ಹಯವದನ ರಾಯರೇ ಹೇಳಿರುವಂತೆ ೧೪ನೆಯ ಶತಮಾನದಲ್ಲಿ ಶ್ರೀಪತಿ ಪಂಡಿತನ ಹೆಸರಿನಲ್ಲಿ ರಚಿತವಾದುದು.

೪. 'ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತ ಗ್ರಂಥವು ಕೂಡ ೧೪ನೆಯ ಶತಮಾನದಲ್ಲಿ ಬರೆಯಲ್ಪಟ್ಟಿತು. ಅದರ ಕರ್ತೃ ರೇವಣಸಿದ್ಧರಲ್ಲ. ಶ್ರೀ ಕಾಶೀನಾಥ ಶಾಸ್ತ್ರಿಗಳು ಅದರಲ್ಲಿದ್ದ ಶ್ಲೋಕಗಳಲ್ಲಿ ಕೆಲವನ್ನು ತೆಗೆದುಹಾಕಿ ತಮ್ಮ ವಾದಕ್ಕೆ ಅನುಕೂಲವಾಗಿ ಕೆಲವು ಶ್ಲೋಕಗಳನ್ನು ಬರೆದು ಸೇರಿಸಿ, ಕೆಲವು ಶ್ಲೋಕಗಳನ್ನು ವಿರೂಪಗೊಳಿಸಿ 'ಭಾವಪ್ರಕಾಶ' ಎಂಬ ಕನ್ನಡ ವ್ಯಾಖ್ಯಾನದೊಂದಿಗೆ ಅಚ್ಚುಹಾಕಿಸಿದ್ದಾರೆ. ಗ್ರಂಥ ಸಂಪಾದಕನ ಧರ್ಮಕ್ಕೆ ವಿರೋಧವಾಗಿ ಇವರು ವರ್ತಿಸಿರುವರು.

೫. ಶ್ರೀ ರೇಣುಕ-ರೇವಣಸಿದ್ಧರ ಹೆಸರು ಹಲವು ಕೃತಿಗಳಲ್ಲಿ, ಪುರಾಣ ದಂತ ಕಥೆಗಳಲ್ಲಿ ಶಾಸನಗಳಲ್ಲಿ ಕ್ಷೇತ್ರ ಮಾಹಾತ್ಮ್ಯಗಳಲ್ಲಿ ಕಾಣಿಸಿಕೊಂಡಿದೆ. 'ಆದರೆ ಐವರು ಆಚಾರ್ಯ'ರಲ್ಲಿ ಕಾಲಗಣನೆಯಿಂದ ಮೊದಲನೆಯವರಾದ ಶ್ರೀ ರೇಣುಕ-ರೇವಣ ಸಿದ್ಧರು ಸಿರಿವಾಳ ಶಾಸನ(ಕ್ರಿ. ಶ. ೧೧೮೭)ದಲ್ಲಿ ಹೊಗಳಲ್ಪಟ್ಟಿರುವವರು, ಶ್ರೀ ಮರುಳ ಸಿದ್ಧರಿಗೆ ದೀಕ್ಷೆ ಕೊಟ್ಟವರು, ಸಿದ್ಧರಾಮರ ಜನನದ ಬಗಗೆ ಭವಿಷ್ಯ ನುಡಿದವರು, ಹಾವಿನಹಾಳ ಕಲ್ಲಿದೇವನಿಗೆ ರುದ್ರಮುನಿಯಿಂದ ದೀಕ್ಷೆ ಕೊಡಿಸಿದವರು. ಇವರ ಜೀವಮಾನಾವಧಿಯು ಕ್ರಿ. ಶ. ೧೧೨೦ ರಿಂದ ಕ್ರಿ. ಶ. ೧೨೨೭.

## ಮಹತ್ತರವಾದ ಉಪಕಾರ

ಶ್ರೀ ಚನ್ನಮಲ್ಲಿಕಾರ್ಜುನ ಅವರು ಸಾಹಿತ್ಯ ಸಂಸ್ಕೃತಿಗಳ ನಿಜವಾದ ಅಭಿಮಾನಿಗಳಿಗೆ, ಎಂದೆಂದೂ ಮರೆಯಬಾರದ ಮರೆಯಲಾಗದ ಒಂದು ಮಹತ್ತರವಾದ ಉಪಕಾರ ಮಾಡಿದರು. ಅದಾವುದೆಂದರೆ 'ಪಂಚಾಚಾರ್ಯ ಪ್ರಭಾ' ಪತ್ರಿಕೆಯ ಸಂಪಾದಕರೂ 'ವೀರಶೈವತತ್ವ' 'ಪಂಚಾಚಾರ್ಯ ಪ್ರಾಚೀನತ್ವ' ಎಂಬ ಪುಸ್ತಕಗಳ ಲೇಖಕರೂ ಆಗಿದ್ದ ಲಿಂ. ಕಾಶೀನಾಥ ಶಾಸ್ತ್ರಿಗಳು ಕನ್ನಡ ಸಂಸ್ಕೃತಿಯ ಇತಿಹಾಸದಲ್ಲಿ ಮುಖ್ಯವಾಗಿ ವೀರಶೈವ ಸಮಾಜದಲ್ಲಿ ಎಬ್ಬಿಸಿದ 'ಭಾರಿ ಗೊಂದಲ'ವನ್ನು ಸತ್ಯದ ಒರೆಗಲ್ಲಿಗೆ ತಿಕ್ಕಿ ತೋರಿಸಿಕೊಟ್ಟುದು; ೧೯೧೫ ರಲ್ಲಿ ಶ್ರೀ ಯಳಂದೂರು ಶ್ರೀಕಂಠಶಾಸ್ತ್ರಿ ಎಂಬವರೊಬ್ಬರು ಸಂಸ್ಕೃತದಲ್ಲಿ ರಚಿಸಿದ 'ಶ್ರೀಮದ್ರೇಣುಕ ದೇಶಿಕೇಂದ್ರವಿಜಯ' ಎಂಬ ಚಂಪೂ ಗ್ರಂಥವನ್ನು ಪ್ರಕ್ಷೇಪಗೊಳಿಸಿ ವಿರೂಪಗೊಳಿಸಿ ಆ ಗ್ರಂಥವು ೧೦ನೆಯ ಶತಮಾನದಲ್ಲಿದ್ದ ಸಿದ್ಧನಾಥ ಶಿವಾಚಾರ್ಯ ಎಂಬ ಕಾಲ್ಪನಿಕ ಕವಿಯಿಂದ ರಚಿಸಲ್ಪಟ್ಟಿತೆಂದು ಹೇಳಿ ಅಚ್ಚುಹಾಕಿಸಿ ಪ್ರಕಟ ಮಾಡಿದರೆಂಬುದನ್ನು ಪ್ರಮಾಣಪೂರ್ವಕವಾಗಿ ತೋರಿಸಿಕೊಟ್ಟದ್ದು. ಈ ವಿಷಯವನ್ನು ಬಿಡಿಸಿ ಬಿತ್ತರಿಸಿ ಟಿಪ್ಪಣಿ ಸಮೇತ ನಿರೂಪಿಸುವುದೇ ಸೂಕ್ತವೆಂದೆನ್ನಿಸುತ್ತದೆ. ಆದರೆ ಸತ್ತ ಹಾವನ್ನು ಹೊಡೆಯುವುದರಿಂದ ಏನು ಪ್ರಯೋ

ಜನ ? ಇಂತಹ ಅಹಿತ ಪ್ರಸಂಗವನ್ನು ಮರೆತುಬಿಡುವುದೇ ಲೇಸು. ಶ್ರೀ ಚನ್ನ ಮಲ್ಲಿಕಾರ್ಜುನರು ಈ ಗ್ರಂಥದ ಬಗೆ ಬಹು ದೀರ್ಘವಾಗಿ ಚರ್ಚಿಸಿ ಕಡೆಯಲ್ಲಿ, "ಮುದ್ರಣ ಪ್ರತಿ(ರೇಣುಕ ವಿಜಯ ಚಂಪೂ)ಯು ಕಲ್ಪಿತವೆಂದೂ ನವೀನವಾದುದೆಂದೂ ಹೇಳಲಭ್ಯಂತರವೇನೂ ಇಲ್ಲ. ಇನ್ನು ಮುಂದಾದರೂ ಇದು ಸಾವಿರ ವರ್ಷದ್ದೆಂದು ಹೇಳುವ ಕಲ್ಪಿತಕ್ಕೆ ಬೀಳದಿರುವುದು ಸಮಾಜಕ್ಕೆ ಹಿತಕರವಾಗಿ ಪರಿಣಮಿಸುವುದು. ಸದ್ಯ ಈ ವಿಮರ್ಶೆಗೆ ಪುನರ್ವಿಮರ್ಶೆ ಬರುವವರೆಗೂ ಇಷ್ಟಕ್ಕೇ ಮುಗಿಸಿಬಿಡೋಣ" ಎಂದಿದ್ದಾರೆ. ಈ ಭಾಗ ಮಾತ್ರ ೧೯೫೭ಕ್ಕೆ ಮುಂಚೆ 'ರೇಣುಕವಿಜಯ ಚಂಪೂವಿಮರ್ಶೆ' ಎಂಬ ಹೆಸರಿನಿಂದ ಪ್ರಕಟವಾಗಿತ್ತು.

'ಶ್ರೀ ರೇವಣಸಿದ್ಧರು' ಪ್ರಕಟವಾಗಿ (೧೯೫೮) ಇಂದಿಗೆ ಹದಿನೆಂಟು ವರ್ಷಗಳಾದುವು. ಪುನರ್ವಿಮರ್ಶೆ ಇನ್ನೂ ಬಂದಿಲ್ಲ; ಬರುವುದಿಲ್ಲ.

ಒಟ್ಟಿನಲ್ಲಿ ಈ ಕೃತಿಯು ಶ್ರೀ ಚನ್ನಮಲ್ಲಿಕಾರ್ಜುನರು ವೀರಶೈವ ಧರ್ಮದ ನಿಜವಾದ ಇತಿಹಾಸದ ಬೆಳವಣಿಗೆಗೆ ನೀಡಿರುವ ಅಮೂಲ್ಯ ಕೊಡುಗೆ ಎಂಬುದರಲ್ಲಿ ಸಂದೇಹವಿಲ್ಲ. ಮಾನ್ಯ ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿರುವಂತೆ "ಈ ಗ್ರಂಥವು ಆಚಾರ್ಯರ ವಿಷಯದಲ್ಲಿ ಹುಟ್ಟಿರುವ ಒಂದು ವಿಶ್ವಕೋಶವೆನ್ನಲಡ್ಡಿಯಿಲ್ಲ. ಆಚಾರ್ಯರ ವಿಷಯವಾಗಿ ಹೆಚ್ಚಿನ ಸಂಶೋಧನೆ ನಡೆಸಬೇಕೆಂಬ ಯಾವ ವಿದ್ವಾಂಸರಾದರೂ ಈ ಗ್ರಂಥವನ್ನು ತಿರುವಿಹಾಕಲೇಬೇಕು."

# ಅಪ್ಪಯ್ಯ ದೇವರಸರು
## (ಮಾವನೂರು ಶಾಸನ)

---

[ಹಾಸನ ಜಿಲ್ಲಾ ಹೊಳೆನರಸಿಪುರ ತಾಲೂಕು ಮಾವನೂರಿನ ಶಾಸನವನ್ನು ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಸಂಚಿಕೆ ೧೪೩ ಮತ್ತು ೧೪೪ ರಲ್ಲಿ ಪ್ರಕಟಿಸಿ ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ಹೇಗೆ ವ್ಯಕ್ತಪಡಿಸಿದ್ದಾರೆಂಬುದು ಕೆಳಗಿನ ಈ ಬರವಣಿಗೆಯಿಂದ ವ್ಯಕ್ತಪಡುತ್ತದೆ. ಸರ್ವಪುರಾತನರ ವಚನದ ಕಟ್ಟಿನಲ್ಲಿ ಸೇರಿದ 'ಅಪ್ಪಿದೇವಯ್ಯಗಳ ವಚನ' ಎಂಬ ಒಂದು ವಚನವನ್ನು ಬರೆದ ಅಪ್ಪಿದೇವರಾರು ? ಎಂಬ ಬಗೆಗೆ ಸಂಶೋಧನೆ ಈ ಕೆಳಗೆ ಇದೆ.]

**E. P. C. Hassan District (Supplementary)**

ಶ್ರೀಗುರು ಶರಣು. ಓಂನಮಃಶಿವಾಯ.
ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯನಗ...ಭ ಮೂಲಸ್ತ ಭಾಯ ಶಂಭವೇ ॥
ಓಂ ನಮೋಸ್ತು ಮಹೇಶಾಯ ಶಿವಾಯಾಶಿವಪಾರಿಣೇ ।
ಬ್ರಹ್ಮ ವಿಷ್ಣ್ವಿಂದ್ರವಂದ್ಯಾಯ ಸಿ...ಯ 'ಸಂ'(ಶಂ?)ಭವೇ ।
ನಮಶ್ಶಿವಾಯ ಸರ್ವಕಲ್ಯಾಣ ಹೇತವೇ ।
ದುಃಖಾಂತ ಕರ್ತ್ರೇ ಲೋಕೇ'ಸ'(ಶ?) ಕರುಣಾಭೂಷಣಾಯತೇ ।
...ಕೋಟ್ಯಾಯಷಾ ಕೋಟಿ ಕೋಟಿ ಜಿಹ್ವೇನ ಸರ್ವದಾ ।
ತೇನಾಪಿ 'ಸತ್ತು' (ಶಕ್ತೋ?) ನೋವಕ್ತುಂ ಶಂಭೋರ್ಮಾಹಾತ್ಮ್ಯ ಮಪ್ಯಣು ।
ಜಡೆಮುಡಿಯೊಳ್ ಸುರಾಪಗೆಯನಾಂತ ಮಹೇಶ್ವರನೊಲ್ದ ಶೈವ ಸಂ ।
ಗಡಿಗನ ಪುಣ್ಯಪೋಷಕನ ವೀರಗುಣೌಘನ ಮರ್ತ್ಯಲೋಕದೊಳು ।
ನಡೆವ ಶಶಾಂಕ 'ಸೇ'(ಶೇ?)ಖರನ ಸರ್ವಸಮ್ಯಕನ ಚಕರುಮಾವನೂ- ।
ರೊಡೆಯರೆನಿಪ್ಪ ದೇವರಸನುಂನತಶೀಲ ವಿಳಾವಿಭೂಷಣಂ ॥

**ಗದ್ಯ :** ಅದೆಂತೆಂದಡೆ, ಸ್ವಸ್ತಿ ಸಮಸ್ತ ಸಮುದ್ರ ಮುದ್ರಿತಮಪ್ಪ ಧರಾಕಾಂತೆಯ ಶಿರಃಕಂಜದಂತೆ ಪುರತ್ರಯವಿಪಿನದಹನ ದಾವಾನಳನ ಸುಕೃತ ಸರ್ವಸ್ವದ ಗವಸಣಿಗೆಯಂತೆ ಸಕಳಭಕ್ತರ ಪುಣ್ಯಸಾಲೆಯಂತೆ ಮುಕ್ತ್ಯಂಗನೆಯ ತಾಯ್ಮನೆಯಂತೆ, ಧರ್ಮಾರ್ಥಕಾಮಮೋಕ್ಷಂಗಳಪ್ಪ ಚತುರ್ವಿಧ ಪುರುಷಾರ್ಥಂಗಳ ಜನ್ಮಕ್ಷೇತ್ರದಂತೆ ಮೆರೆವ ಶ್ರೀ ಪರ್ವತದ ಮೇಲೆ, ಮೂಜಗಕ್ಕೆ ಸೋಜಿಗಮಪ್ಪೋಜೆಯಿಂರಾಜಿಸುವ

ರಾಜೇಂದ್ರ ಚೂಡಾಮಣಿಯ ಮನುಮಥ ಮತ್ತೇಭ 'ಮಿ'(ಮೃ?)ಗಾಧಿಪನ ಕೀನಾಶ ಬಳಬಳಾಹಕ ಮಹಾಬಳನ, ಶಾರ್ದೂಲ ದೈತ್ಯಧ್ವಾಂತ ಪ್ರದ್ಯೋತನನ ದರ್ಪಿಷ್ಟ ಕುಂಜರಾಸುರನ, ಮರಾಳ ಹರುಷ ವಿಳಯ ಜಳದಗರ್ಜನನ, ಸುರಸರಿತ್ಸಮುದ್ಭೂತ ಲೋಲಕರ ಕಲ್ಲೋಲಮಾಲಾಸಂಘಟ್ಟಿತ ಜಟಾಜಾಳನ, ಲೋಕಾಲೋಕ ಚೇತನಕರ ವಾತಪಿತ್ಥಬ್ರಾತನೂತನಾಭರಣನ, ಶ್ರೀ ಪರ್ವತಾಧೀಶ್ವರನಪ್ಪ ಮಲ್ಲಿಕಾರ್ಜುನನ, ಕಾರುಣ್ಯಕಾಂತಿಯು ಮಂತಳೆವಂತೆ, ದಕ್ಷಿಣಾದಿಶಾಭಾಗದೊಳು ಮೆರೆವ ಶಿವರ (ಶಿವಪುರ?)ವೆಂಬ ಮಹಾಗ್ರಾಮದೊಳು ಶಿವನಿಯಾಮಸ್ಥರಪ್ಪ ಧರಾಮರರ ಪುಣ್ಯೋದರದೊಳು ಜನಿಯಿಸಿ, ಪೂರ್ವವಾಸನಾ ಸಂಬಂಧದಿಂ ಪರ್ವತೈಯವೆಂಬ ನಾಮಮಂತಳೆದು ಶಯಿ(ಶೈ?)ಶವಲೀಲೆಯುಂ ಪತ್ತುವಿಟ್ಟು, ಸಕಲಪ್ರಪಂಚತೆಯುಂ ಮುತ್ತುವಂತೆ ತನಗೆ ಗುರುಪ್ರಾಪ್ತಿಯಪ್ಪುದರಿಂದ ಮುನ್ನವೇ ಪೂರ್ವವಾಸನಾನುಬಂಧದಿಂದುರ್ಬಿಕೊರ್ವಿ ಪರ್ವತವನೇರಿ, ಶ್ರೀ ಮಲ್ಲಿಕಾರ್ಜುನನಂ ಸ್ತುತಿಮುಕ್ತಿಪತ್ತಿಪರಿದು ನೆರೆದಾಲಿಂಗಿಸಿ, ತನ್ನ ಚಿತ್ತಮನೀಸಾಂಘ್ರಿಯೊಳು ಸೆರೆಯಿಟ್ಟು, ತನ್ನ ಬರಿದೇಹಮಂ ಜನ್ಮಭೂಮಿಗಂ 'ಶ್ರೀ ಪರ್ವತಕ್ಕೆಡೆಯಾಡುತಿರ್ಪ' ನೇಹಮಂ ಕಂಡು ಶ್ರೀ ಮಲ್ಲಿಕಾರ್ಜುನಂ ಗುರುಕಾರುಣ್ಯಂ ಮಾಡಲುವೇಡಿ, ನಂದೀಶ್ವರನಂ ಕರೆದು, ನಿನ್ನ ನಾಮದೊಳೆನ್ನ ನಾಮಮಂ ಬೆರಸಿ, ನಂದೀಶ್ವರ ದೇವರ ಮಲ್ಲೈಯ್ಯನೆಂಬ ಪೆಸರನಾಂತುಪೋಗಿ, ನಿಮ್ಮ ಮಗ ಪರ್ವತಯ್ಯಂಗುಪದೇಶಮಾಡೆಂದು ಬೆಸಸೆ, ತದನು'ನ್ನೆ'(ಜ್ಞೆ)ಯುಂ ಕೈಕೊಂಡು ಬರುತ್ತಿರಲಿತ್ತಲಭವಂ ಮುಂಜಾವದೊಳು ಸ್ವಪ್ನಾವಸ್ಥೆಯೊಳಿಪ್ಪ ಪರ್ವತಯ್ಯನ ಮನವ ಕೊನೆಯಿಂ ಮೆಟ್ಟಿ, ಎನ್ನರೂಪಿಂ ಮಾಹೇಶ್ವರನೆನ್ನಾಜ್ಞೆಯಿಂದ ಬಂಪಪನಾತನಿಂ ಗುರುಕಾರುಣ್ಯ ಬಡೆವುದೆಂದು ಬೆಸಸೆ 'ಮಯಿ'(ಮೈ)ಮುರಿದೆದ್ದು ಮಹೋತ್ಸವದಿಂ ಸಕಳ ಮಾಹೇಶ್ವರರ್ವೆರಸಿ ಗಂಗೇಶ್ವರಕೆಪೋಗಿ ಬಂದ ಮಲ್ಲೈಯ್ಯಂಗಳಂ ಕಂಡು, ಶಿವಂ ಪೇಳ್ದಕುರುಪಂ ತಿಳಿದು, ಆ ಮಲ್ಲೈಯ್ಯಂಗಳ ಕೈಯಿಂ ಗುರುಕಾರುಣ್ಯಂ ಬಡೆದು ಶಾಂತಿಯುಂ ತಳೆದ ನಿರ್ಮಳ ಜ್ಯೋತಿಯಂತಿಪ್ಪ ಪರ್ವತೈಯ್ಯನ ಗುಣಂಗಳಂ ಪೊಗಳ್ದಡನಂತಗತರ್ಕ್ಯವೆನಿಸಿ ಮೆರೆವುತ್ತೆ, ಭಕ್ತನೆಂದರಿವಡಿರಿದಂತೆ ಮರುಗುತುಂ, ನಿಂದಿಸಿವರ ಮೇಲೆ ನೇಹವಗಳಿಸುತುಂ, ಮೆರೆವುತ್ತಿರೆಯಿರೆ ಶಿವನ ಉಭಯ ನೇತ್ರದಿಂ ಚಂದ್ರ ಸೂರ್ಯರೊಗೆದಂತೆ ಪರ್ವತೈಯನು ಭಯಪಪ ಕಾರುಣ್ಯ ಕಟಾಕ್ಷದಿಂದುದಯಿಸಿದ ಅಪ್ಪಯ್ಯ ದೇವರಸರಂ ಕಂಡು ಕಾರುಣ್ಯಂ ಮಾಡಲು ಬೇಡಿ ಚಂದ್ರಂಗೆ ಬೆಳುದಿಂಗಳಂ ಬೆಳುದಿಂಗಳಿಂಗೆ ಪರಿಮಳಮಂ, ಪರಿಮಳಕ್ಕೆ ಸವಿಯುಂ, ಸವಿಗೆ ರೂಪಂ, ರೂಪಿಂಗೆ ಸೌಂದರ್ಯಮಂ ಕೊಡುವಂತೆ ಉಪದೇಶಂ ಮಾಡಿ ಕೈಕೊಂಡ ಅಪ್ಪಯ್ಯ ದೇವರಸರು ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ, ಶಾಂತಿ ಸಾಕಾರವೆತ್ತಂತೆ, ಪರಮಾರ್ಥಂ ಶರೀರವಡೆದಂತೆ, ಭಕ್ತಿಜ್ಞಾನಂ ಸಂಸಾರವಂಸವೆವಂತೆ ಮರೆವುತ್ತೆ, ಲೋಭವಡಿಯಿಡದ ಕರಪಲ್ಲವಂಗಳ, ಅನೃತವಂಕುರಿಸದ, ರಸನಾಪ್ರದೇಶದ, ಸಂಸ್ಕೃತಿ ಸರಸವಾಡದ ಚರಿತ,

ಶುದ್ಧಿಯು, ಕಾಮನಡಾಮರಕೊಳಸೋಗೆವ ಮನದ ಬಿನದದ, ಮಾಯೆಯಾಜ್ಞೆಯ
ಮುಲ್ಲಂಘಿಸಿದ ಚಿತ್ತವೃತ್ತಿಯು, ಶಬ್ದ, ಸ್ಪರುಶ, ರೂಪು, ರಸ; ಗಂಧಾದಿಭೋಗಕ್ಕೆಳ
ಸದ, ಕರುಣಾವಳಿಯ ಮಹಿಮರೆನಿಸುವ ಅಪ್ಪಯ್ಯ ದೇವರಸರು ತಿಲಮಧ್ಯದೊಳಿರ್ಪ
ತೈಲದಂತೆ ಕಾಷ್ಠಮಧ್ಯದೊಳಿಪ್ಪ ಅಗ್ನಿಯಂತೆ, ಜಗಮಧ್ಯದೊಳಿಪ್ಪ ಕಮಲದಂತೆ,
ತಾವು ಮಾನುಷಚರಿತರಪ್ಪುದರಿಂ ಸಂಪಾದಮಂ ಸೋಂಕದೆ, ಅಣೋರಣೀಯಾನ್
ಮಹತೋಮಹೀಯಾನ್ ಎಂಬ ಶ್ರುತಿವುಂಟಾಗಿ ಇರುಹೆ ಮೊದಲಾದ ಪರಮಾಣುವಿನ
ನೋವಂ ಸೈರಿಸದೆ, ಉತ್ಸಾಹಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯುಳ್ಳ ಶಿವನಭಕ್ತರಪ್ಪ
ದರಿಂ, ಉಭಯತನುವಿಂದನಂತವಾದ್ಯದಿಂ ಶಿವನಂ ಕೇಳಿಸುತಂ ಅನವರತಂ ಶಿವನೊಳ
ವಿರಳಂಪೂಜೆಯಂಮಾಡುತಂ ಮೂಲೋಕಮಂ ತೀವಿದಶೈವಕೀರ್ತಿಯಂ ಕಳೆದಪ್ಪಯ್ಯ
ದೇವರಸರು ಸುಖದೊಳುರೆಯಿರೆ ಶಿವಶರಣು.

ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಸಮಸ್ತ ಪೃಥ್ವೀವಲ್ಲಭಂ, ಭಯುಲೋ
ಭದುರ್ಲಭಂ, ಮಹಾರಾಜಾಧಿರಾಜ ಪರಮೇಶ್ವರಂ ದ್ವಾರಾವತೀ ಪುರವರಾಧೀಶ್ವರಂ
ಯಾದವ ಕುಲಾಚರದ್ಯುಮಣಿ, ಸರ್ವಜ್ಞ ಚೂಡಾಮಣಿ, ಮಲೆರಾಜ, ಮಲೆಪರೊಳು
ಗಂಡಭೇರುಂಡ, ಕದನ ಪ್ರಚಂಡ ರಿಪುತಿಮಿರ ಮಾರ್ತಾಂಡ ನೇಕಾಂಗವೀರ, ರಣರಂಗ
ಧೀರ, ಶನಿವಾರಸಿದ್ಧಿ, ಸುರಮಂತ್ರಿಬುದ್ಧಿ, ಗಿರಿದುರ್ಗಮಲ್ಲ ಚಲದಂಕರಾಮ, ಸಂಗ್ರಾಮ
ಭೀಮ, ವೈರೀಭಕಂಠೀರವ, ಮಗಧರಾಜ್ಯ ನಿರ್ಮೂಳನ ಚೌಳರಾಜ್ಯ ಪ್ರತಿಷ್ಠಾಚಾರ್ಯ,
ಪಾಂಡ್ಯ ರಾಜ್ಯಸಮುದ್ಧರಣ, ನಿಸ್ಸಂಕ ಪ್ರತಾಪ ಚಕ್ರವರ್ತಿ ಹೊಯಿಸಣ ಶ್ರೀ ವೀರ
ನಾರಸಿಂಹದೇವರಸರು ಸಕವರುಷ ೧೨೦ಳ ವಿಷು ಸಂವತ್ಸರ ಮಾಘ ಬಹುಳ ೧ಳ
ಆದಿತ್ಯವಾರ ಶಿವರಾತ್ರೆಯಲು ಸೀಗೆನಾಡೊಳ ಗಣತವನಿಧಿಯನು ಕ ಎಲುವಳ್ಳಿಗಳು
ಸಹಿತ ಪ್ರಸಿದ್ಧ ಸೀಮಾಸಮನ್ವಿತವಾಗಿ ಶ್ರೀಮತ್ಪರಮಮಾಹೇಶ್ವರರುಮಪ್ಪ ಮಾವ
ನೂರು ಹಿರಿಯರೊಡೆಯರೆನಿಪ ದೇವರಸೈಯ್ಯಂಗಳ ಹೆಸರಲಿ ಅವರ ತಮ್ಮಂದಿರು
ಚಿಕ್ಕವೊಡೆಯರೆನಿಪ ಅಪ್ಪರಸೈಯಂಗಳು ಮಾವನೂರಲ್ಲಿಯೇ ಪ್ರತಿಷ್ಠೆ ಮಾಡಿವ
ಅಪ್ಪೇಶ್ವರ ದೇವರು ಇಂತೀ ದೇವೇಶ್ವರ ದೇವರ ಅಪ್ಪೇಶ್ವರ ದೇವರ, ಆ ಅಪ್ಪರಸ
ಯ್ಯಂಗಳ ಅರಸಿಯರಪ್ಪ ದೇವೌವ್ವೆಯರು ಆ ಅಪ್ಪರಸೈಯ್ಯಂಗಳ ಹೆಸರಲಿ ಶ್ರೀಕಾರ್ಯ
ಅಮೃತಪಡಿ ಅಂಗಭೋಗ ಪಂಚುಪರ್ಗ ಗುರುಪರ್ವ ಖಂಡಸ್ಫಟಿಕ ಜೀರ್ಣೋದ್ಧಾರ
ಕೆಯೂ, ಆ ಪರಿಚಾರಕ ಜೀವಿತ ವರ್ಗಕ್ಕೆಯೂ ಆ ಚಂದ್ರಾರ್ಕತಾರಂಬರಂ ಸಲು
ವಂತಾಗಿ—

ಆ ತವನಿಧಿತೆರುವ ಸಿದ್ಧಾಯ ಅಭ್ಯಾಗತ ಹೊಂಗೆಗಣ ಮೂರರ ಕಿರುಕುಳ...
ಣಕಳು ಕುಡಳ, ವಿಳಿ, ಕುಳು, ನೂಲಕಳುಪು, ತುಪ್ಪ, ಧವಳಾರವ ಬಂಡಿ, ಹೊಗೆವೆರೆ,
ಮಗ್ಗವೆರೆ, ಪೂ'ಬ್ರ್ಯಾ'(ವಾ?)ಯು, ಅಪೂರ್ಬಾಯು, ಅಳಿವನ್ಯಾಯು, ಒಳಗಾಯಿ
ತೆಲ್ಲಂ ಕಾರುಣ್ಯವಂಮಾಡಿ, ಆ ಅಪ್ಪರಾಸೈಯ್ಯಂಗಳ ಅರಸಿಯರು ದೇವವ್ವೆಯರಿಗೆ ಆ
ಶ್ರೀ ವೀರನಾರಸಿಂಹ ದೇವರಸರು ಆ ತವನಿಧಿಯನು ಸರ್ಬನಮಸ್ಯವಾಗಿ, ಧಾರಾ

ಪೂರ್ವಕಂ ಮಾಡಿಕೊಟ್ಟರು.ಆ ದೇವಾವ್ವೆಗಳು ತಾವು ಆ ತವನಿಧಿಯನ್ನು ಶ್ರೀ ದೇವೇಶ್ವರ ಅಪ್ಪೇಶ್ವರ ಪುರವಾದ ತವನಿಧಿಯ ಶಿವಪುರದೆಂದು ಹೆಸರಿಟ್ಟು, ಆ ಶಿವಪುರವನು ನಿಯೋಗ ನಿವೃತ್ತಿ ೪೦ ಮಾಡಿ, ಶ್ರೀ ದೇವೇಶ್ವರ ಅಪ್ಪೇಶ್ವರ ದೇವರ ಅಮೃತಪಡಿಗೆ ವೃತ್ತಿ ೧೧, ಉಳಿದ ವೃತ್ತಿ ೩೦ ನೂ. ಆ ದೇವರ ಸರ್ವ ನಿಯೋಗಿಗಳಹ ಉಪಮನ್ಯು 'ಬ್ರಿ'(ಭೃ)ಗು ಸದೃಶರಹ ಶಿವಸಂಸ್ಕಾರಸಂಪನ್ನರಪ್ಪ ಪರಮಮಾಹೇಶ್ವರರುಗಳಿಗೆ ಯೋಗವೃತ್ತಿಯಾಗಿ ಧಾರಾಪೂರ್ವಕಂ ಮಾಡಿಕೊಟ್ಟರು.

(ಈ ಶಾಸನಕ್ಕೆ ಶ್ರೀ ಚನ್ನಮಲ್ಲಿಕಾರ್ಜುನರ ಪ್ರತಿಕ್ರಿಯೆ)

ಈ ಶಾಸನವಲ್ಲಿ ಮಾವನೂರಿನ ದೇವರಸರು ಭೂಲೋಕದಲ್ಲಿ ನಡೆಯುವ ಶಿವನೆಂದು ಹೇಳಲ್ಪಟ್ಟಿದ್ದಾನೆ. ವೀರಶೈವರು ಲಿಂಗರೂಪವಾಗಿ ನಡೆಯುತ್ತಾರೆ, ಎಂಬ ಭಾವನೆ ಇಲ್ಲಿ ಬಂದಿರುವುದರಿಂದ ಇವರು ವೀರಶೈವರೆಂದು ತಿಳಿಯಲು ಯಾವ ಸಂಶಯವೂ ಬರಲಾರದು. ಇವರು ಮಾವನೂರಿನ ಒಡೆಯರು ಎನಿಸಿಕೊಂಡಿದ್ದಾರೆ. ಈ ಮಾವನೂರಿಗೆ ಶಿವಪುರವೆಂದು ಹೇಳಿರುವುದರಿಂದ ಇದು ಬರಿಯ ವೀರಶೈವರ ವಾಸಕ್ಕಾಗಿ ನಿರ್ಮಿಸಲ್ಪಟ್ಟುದು ಎಂದು ತಿಳಿಯಬರುತ್ತದೆ. ಇದು ಬಸವೇಶ್ವರನ ಕಾಲದಲ್ಲಿ ಘಟ್ಟಿವಾಳಯ್ಯನವರು ಇದ್ದ ಊರೆಂದೂ, ಇವರ ಲಿಂಗವನ್ನು ಮಾವನೂರಿನಲ್ಲಿಯೇ ಕಸಿದುಕೊಂಡರೆಂದೂ, ಗುಂಡನ್ನು ಕರಗಿಸಿ ಘಟ್ಟಿವಾಳಯ್ಯನವರು ಲಿಂಗವನ್ನು ಧರಿಸಿದರೆಂದೂ ತಿಳಿದುಬಂದಿದೆ. (ವೀರಶೈವಾಮೃತ ಪುರಾಣ ಕಾಂ-೮, ಸಂ. ೩)

ಇಲ್ಲಿಂದ ಪರ್ವತಯ್ಯ ಎಂಬೊಬ್ಬ ಬ್ರಾಹ್ಮಣನು ಶ್ರೀಶೈಲ ಪರ್ವತಕ್ಕೆ ಆಗಿಂದಾಗ್ಗೆ ಹೋಗಿಬರುತ್ತಿದ್ದನು. ವೀರಶೈವರಲ್ಲಿನ ಗುರುತ್ವವನ್ನು ಹೊಂದಲಿಕ್ಕೆ ತಕ್ಕ ಲಕ್ಷಣಗಳೂ ಇವನಲ್ಲಿದ್ದವು. ಇವನು ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ಬೇಡಿಕೊಂಡ ಪ್ರಕಾರ ಗಂಗೇಶ್ವರಕ್ಕೆ ಹೋಗಿ, ಬಂದ ಸುದೀಶ್ವರ ದೇವರ ಮಲ್ಲೈಯ್ಯ ಎಂಬ ಮಾಹೇಶ್ವರರಿಂದ ಗುರುಕಾರುಣ್ಯ(ವೀರಶೈವ ದೀಕ್ಷೆ)ಯನ್ನು ಪಡೆದರು. ಅಪ್ಪಯ್ಯದೇವರಸರು ಮೇಲ್ಕಂಡ ಪರ್ವತಯ್ಯನನ್ನು ಬೇಡಿಕೊಂಡರು. ಆ ಪ್ರಕಾರ ಅವರಿಗೆ ದೀಕ್ಷೆ (ಅನುಗ್ರಹೋಪದೇಶ) ಮಾಡಿದರು. ಈ ಅಪ್ಪಯ್ಯ ದೇವರಸರು ಸಂಸಾರಕ್ಕೆ ಸೋಂಕದೆ ಸಂಸಾರದ ಸರಸವೇ ಇಲ್ಲದ ನಡೆವಳಿಕೆಯುಳ್ಳವರಾಗಿ ಉತ್ತಮ ಶಿವಭಕ್ತರಾಗಿ ಮೆರೆಯುತ್ತಿದ್ದರು.

ಹೊಯ್ಸಳ ದೇಶದ ರಾಜರಾದ ವೀರನರಸಿಂಹ ದೇವರಸರು ಎಂಬುವವರು ಶಕವರುಷ ೧೨೦೪ (ಕ್ರಿ. ಶ. ೧೨೮೨) ಶಿವರಾತ್ರಿಯ ದಿನದಲ್ಲಿ ಪರಮ ಮಾಹೇಶ್ವರರಾದ ಹಿರಿಯೊಡೆಯರು ಎನಿಸಿಕೊಂಡ ದೇವರಸಯ್ಯಗಳ ಹೆಸರಿನಲ್ಲಿ ಅವರ ತಮ್ಮಂದಿರಾದ ಚಿಕ್ಕೊಡೆಯರೆನಿಸಿಕೊಂಡ ಅಪ್ಪಯ್ಯ ದೇವರಸರು ಪ್ರತಿಷ್ಠೆಮಾಡಿದ ದೇವೇಶ್ವರ ದೇವರು ಆ ಅಪ್ಪೇಶ್ವರ ದೇವರ ಹೆಂಡತಿ ದೇವಮ್ವೆಯರು ಪ್ರತಿಷ್ಠಾಪಿಸಿದ ಅಪ್ಪೇಶ್ವರ ದೇವರು ಈ ಎರಡು ದೇವಸ್ಥಾನಗಳಿಗೆ ಪೂಜಾವಿನಿಯೋಗಾದಿಗಳು ಕೆಲಸ ಮಾಡುವವರಿಗೆ ಜೀವನ ವೃತ್ತಿಗಳು ನಡೆಯುವ ಹಾಗೆ ತವನಿಧಿ ಸೀಮೆಯನ್ನು ಕಂದಾಯ

ಒಂದೂ ಇಲ್ಲದ ಹಾಗೆ ಸರ್ವನಮಸ್ಯವಾಗಿ ಅಪ್ಪಯ್ಯದೇವರ ಸರಪತ್ನಿ ದೇವವ್ವೆಯರಿಗೆ ಬಿಟ್ಟುಕೊಟ್ಟರು. ಆ ದೇವವ್ವೆಯರು ಆತನ ವಿಧಿಯ ಸೀಮೆಯಲ್ಲ ಶ್ರೀ ದೇವೇಶ್ವರ, ಅಪ್ಪೇಶ್ವರ ಪುರವನ್ನಾಗಿ ಮಾಡಿ, ಶಿವಪುರವೆಂದು ಹೆಸರಿಟ್ಟು, ಅದರಲ್ಲಿ ೪೦ ನಿಯೋಗ ವೃತ್ತಿಗಳನ್ನಾಗಿ ವಿಂಗಡಿಸಿ, ಆ ಪೈಕಿ ಹತ್ತು ವೃತ್ತಿಗಳನ್ನೂ ದೇವೇಶ್ವರ ಅಪ್ಪೇಶ್ವರ ದೇವರ ಅಮೃತಪಡಿಗೆ ಕೊಟ್ಟರು. ಉಳಿದ ಮೂವತ್ತೂ ವೃತ್ತಿಗಳನ್ನೂ ಆ ದೇವರ ಸರ್ವನಿಯೋಗಗಳಾದ ಉಪಮನ್ಯು ಭೃಗಮುನಿ ಸಮಾನರಾದ ಶಿವಸಂಸ್ಕಾರ ಸಂಪನ್ನ ರಾದ ಪರಮ ಮಾಹೇಶ್ವರರಿಗೆ ನಿಯೋಗ ವೃತ್ತಿಯಾಗಿ ಬಿಟ್ಟುಕೊಟ್ಟರು.

ಈ ವಿಷಯಗಳೆಲ್ಲವೂ ಈ ಶಾಸನದಿಂದ ಹೊರಬೀಳುತ್ತವೆ. ಇವರಲ್ಲಿ ವೀರ ಶೈವರು ಆರಿಸಬೇಕಾದ ಚಾರಿತ್ರಿಕಾಂಶಗಳು ಕೆಲವು ಇವೆ. ಸರ್ವಪುರಾತನರ ವಚನ ಗಳಲ್ಲಿ (೯೦೦ ವಚನಗಳ ಕಟ್ಟು) ಅಪ್ಪಿದೇವಯ್ಯಗಳ ವಚನ ಎಂಬುದಾಗಿ ಒಂದು ವಚನ ವಿದೆ. ಅದು ಹೀಗೆ:

"ಹೊನ್ನು ಹೆಣ್ಣು ಮಣ್ಣು ಬಿಡಿಸದ ಗುರುವಿನುಪದೇಶವನೊಲ್ಲೆ; ರೋಷ ಹರುಷವ ಕೆಡಿಸದ ಲಿಂಗವ ಪೂಜಿಸೆ; ತಾಮಸ ಭ್ರಮೆಯನಳಿಯದ ಜಂಗಮಕ್ಕೆ ದಾಸೋಹವ ಮಾಡೆ; ಪರಮಾನಂದವಲ್ಲದ ಪಾದೋದಕವ ಕೊಳ್ಳೆ; ಪರಿಣಾಮವಲ್ಲದ ಪ್ರಸಾದವನುಣ್ಣೆ; ಆನೆಂಬುದಳಿಯದೆ ಈಶ್ವ- ರಿಯ (ವಿಭೂತಿಯ) ಧರಿಸೆ; ವರದ ಮಹಾಲಿಂಗನೊಲ್ಲನೆಂದೆಂಬೆ."

—ಈ ವಚನವನ್ನು ಹೇಳಿದ ಅಪ್ಪಿದೇವಯ್ಯಗಳು ಈ ಶಾಸನದಲ್ಲಿ ಕಂಡ ಅಪ್ಪಯ್ಯ ದೇವರಸರಾಗಿರಬೇಕು, ಎಂದು ತರ್ಕಿಸಲಿಕ್ಕೆ ಅವಕಾಶವಿದೆ. (೧) ಇವರ ಗುರು ಪರ್ವತಯ್ಯನವರ ಲಕ್ಷಣವನ್ನೋದಿದಾಗ "ಸಕಲ ಪ್ರಪಂಚಕೆಯುಂ ಲಘುತರಂ ಮಾಡಿ ತಾಂ ಗುರುವೆ ಪೆಕ್ಸುದರಿಂ" ಎಂಬ ಪದಗಳಿಂದ ಇವರು ವೀರಶೈವ ದೀಕ್ಷೆ ಹೊಂದು ವುದಕ್ಕಿಂತ ಮುಂಚೆಯೇ ಪ್ರಪಂಚವನ್ನು ತೃಣಾವಾಗ್ಗಣಿಸಿ, ಗೌರವವನ್ನು ಸಂಪಾದಿಸಿ ದ್ದರು. ಆಮೇಲೆ ವೀರಶೈವ ದೀಕ್ಷೆವಹಿಸಿ, ಗುರುಗಳಾದರು ಎಂದು ಗೊತ್ತಾಗುವುದ ರಿಂದ ವಚನದಲ್ಲಿ ಹೇಳಿದ ಗುರುಗಳ ಲಕ್ಷಣವು ಸರಿಹೋಗುತ್ತದೆ. ವಚನದಲ್ಲಿ ಕಂಡಂತೆ 'ಗುರುವಿನುಪದೇಶವನೊಲ್ಲೆ' ಎಂಬ ವಾಕ್ಯದಲ್ಲಿರುವ ಉಪದೇಶ ಎಂಬ ಪದವು ಶಾಸನ ದಲ್ಲಿಯೂ ಬಂದಿದೆ. 'ಅಪ್ಪಯ್ಯದೇವರಸರಂ ಉಪದೇಶಂಮಾಡೆ' ಎಂಬಲ್ಲಿ ಉಪದೇಶ ಪದವು ಶಾಸನದಲ್ಲಿಯೂ ಬಂದಿದೆ. (೨) ಅಪ್ಪಯ್ಯದೇವರಸ, ಅಪ್ಪಿದೇವಯ್ಯ ಈ ಎರಡು ಹೆಸರೂ ಒಂದೇ ಎಂಬುದಕ್ಕೆ ಈ ಎರಡು ಹೆಸರುಗಳ ಮುಂದುಗಡೆಯಲ್ಲಿಯೂ 'ದೇವ' ಎಂಬ ಶಬ್ದವಿದೆ. (೩) ವಚನದಲ್ಲಿ ಕಂಡ 'ರೋಷ ಹರುಷವ ಕೆಡಿಸದ ಲಿಂಗವನೊಲ್ಲೆ' ಎಂಬ ಹೇಳಿಕೆಯ ಪ್ರಕಾ ಅಪ್ಪಯ್ಯದೇವರಸರು ಇದ್ದರೆಂಬುದಕ್ಕೆ 'ಶಬ್ದ, ಸ್ಪರುಶ, ರೂಪು, ರಸ, ಗಂಧಾದಿ ಭೋಗಕ್ಕೆಳಸದ ಕರಣಾವಳಿಯ' 'ಉಭಯ ತನುವಿನಿಂದ ಅನಂತ ವಾದ್ಯಗಳ ಕೇಳಿಸುತಂ' 'ಅನವರತಂ ಅವಿರಳ ಲಿಂಗ ಪೂಜೆಯ

ಮಾಡುತಂ' ಎಂಬ ಹೇಳಿಕೆಗಳು ಸರಿಗೂಡುತ್ತವೆ. (೪) ಇವರು ಯಾವಾಗಲೂ, ವಿರಳವಿಲ್ಲದ ಲಿಂಗಪೂಜೆಯನ್ನು ಮಾಡುತ್ತಿದ್ದುದನ್ನು ತಿಳಿದರೆ ವೀರಶೈವರಲ್ಲಿನ ಆರು ಸ್ಥಳ (ಷಟ್‌ಸ್ಥಳ) ಗಳಲ್ಲಿನ ಐಕ್ಯಸ್ಥಳದ ಆಚರಣೆಯಲ್ಲಿದ್ದರು ಎಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಅಪ್ಪಿದೇವಯ್ಯಗಳ ವಚನದಲ್ಲಿಯೂ 'ಆನೆಂಬುದಳಿಯದೆ, ಈಶ್ವರಿಯ ಧರಿಸೆ,' ಎಂಬ ಮಾತಿನ ಪ್ರಕಾರವಿರುವುದೇ ೬. ಐಕ್ಯಸ್ಥಲಾಚರಣೆಯಾಗಿದೆ.

ಇವೇ ಮುಂತಾದ ಕಾರಣಗಳಿಂದ ಈ ಶಾಸನದಲ್ಲಿ ಕಂಡ ಅಪ್ಪಯ್ಯದೇವರಸರೇ ಸರ್ವಪುರಾತನರ ವಚನಗಳ ಕಟ್ಟಿನಲ್ಲಿ ಸೇರಿದ "ಅಪ್ಪಿದೇವಯ್ಯಗಳ ವಚನ" ಎಂಬುದನ್ನೂ ಹೇಳಿದ ಅಪ್ಪಿದೇವಯ್ಯಗಳೆಂದು ಸಿದ್ಧವಾಗುತ್ತದೆ. (ಸಂ. ೧೪೩)

ಈ ಶಾಸನದ ಕಾಲ ಕ್ರಿ. ಶ. ೧೨೮೨. ಅಷ್ಟರೊಳಗೆ ಅಪ್ಪಿದೇವಯ್ಯಗಳು ಶಿವೈಕ್ಯರಾಗಿದ್ದರು, ಎಂದು ನಿಶ್ಚಯಿಸಲಿಕ್ಕೆ ಅನುಮಾನವಾರಿಗೂ ಬರಲಾರದು. ಕ್ರಿ.ಶ. ಸು. ೧೨೫೦ ರಲ್ಲಿ ಇವರು ಬದುಕಿದ್ದರೆಂದು ಧಾರಾಳವಾಗಿ ಹೇಳಬಹುದು. ಈ ಕಾಲದಲ್ಲಿ ಬರೆದ ಅವರ ವಚನವು ೯೦೦ ವಚನಗಳ ಕಟ್ಟಿನಲ್ಲಿ ಸೇರಿದುದನ್ನು ನೋಡಿದರೆ ಆಗ ಈ ವಚನವನ್ನು ಶೇಖರಿಸಿದವರಾರು ? ಯಾವ ಸ್ಥಳದಲ್ಲಿ ಯಾರಿಂದ ಈ ಶೇಖರಣೆ ನಡೆದು ವಚನಗಳ ಕಟ್ಟು ಹೊರಬಿದ್ದಿತೆಂಬುದು ಈಗ ಶೋಧಿಸತಕ್ಕ ಮುಖ್ಯಾಂಶವಾಗಿದೆ. ಕ್ರಿ. ಶ. ೧೨೦೯ ರಲ್ಲಿ ಶ್ರೀ ರುದ್ರಮುನಿಸ್ವಾಮಿಗಳು ಶ್ರೀಶೈಲದಲ್ಲಿದ್ದು ತಮ್ಮ ಕಾಲಜ್ಞಾನವನ್ನು ಬರೆದುಮುಗಿಸಿರುವುದರಿಂದ ಬಸವೇಶ್ವರನ ಅಂತ್ಯದ ಕ್ರಿ. ಶ. ಸು. ೧೧೬೭ರ ತರುವಾಯ ಕ್ರಿ. ಶ. ೧೨೦೨ರ ವರೆವಿಗೂ ಶ್ರೀಶೈಲದಲ್ಲಿ ವಚನಗಳ ಶೇಖರಣೆಯನ್ನು ಮಾಡುವ ಅಧಿಪತ್ಯವನ್ನು ಅವರೇವಹಿಸಿದ್ದರೆಂದು ತಿಳಿಯಲಿಕ್ಕೆ ಬರುತ್ತದೆ. ಅವರ ತರುವಾಯ ಈ ಶಾಸನದಲ್ಲಿ ಕಂಡ ಪರ್ವತಯ್ಯನವರು ಶ್ರೀಶೈಲಕ್ಕೆ ಆಗಾಗ ಹೋಗಿಬರುತ್ತಿದ್ದುದು, ಅವರು ಬ್ರಾಹ್ಮಣರ ಮಗನಾಗಿದ್ದರೂ ಶ್ರೀಶೈಲದ ಸಂಬಂಧವಿಟ್ಟುಕೊಂಡ ನಂದೀಶ್ವರದೇವರ 'ಮಲಯ್ಯ' (ಮಲ್ಲಯ್ಯ ?) ಇವರಿಂದ ವೀರಶೈವ ದೀಕ್ಷೆಯನ್ನು ಹೊಂದಿರುವುದು ತಿಳಿಯಬರುವುದರಿಂದ ಬಸವೇಶ್ವರನ ಕಾಲದಲ್ಲಿ ಇದ್ದಂತೆ ಬ್ರಾಹ್ಮಣರು ಮುಂತಾದವರಿಗೆ ಲಿಂಗಧಾರಣೆ ಮಾಡುವ ಪದ್ಧತಿಯು ಕ್ರಿ.ಶ. ೧೨೫೦ರ ವರೆವಿಗೂ ಶ್ರೀಶೈಲದಲ್ಲಿ ನಡೆಯುತ್ತಿದ್ದಿತೆಂದು ತಿಳಿಯಬರುವುದಲ್ಲದೆ ವಚನಗಳನ್ನು ಶೇಖರಿಸುವ ಕಾರ್ಯವು ಅಲ್ಲಿಯೇ ನಡೆಯುತ್ತಿದ್ದಿತೆಂದು ಊಹಿಸಲಿಕ್ಕೂ ಅವಕಾಶವಾಗಿದೆ. ಶ್ರೀ ರುದ್ರಮುನೀಶ್ವರರ ತರುವಾಯ ಮುಕ್ತಿಮುನಿ ಎಂಬುವರಿಗೆ ಶ್ರೀಶೈಲದಲ್ಲಿ ಪಟ್ಟವಾಯಿತೆಂದು ತಿಳಿಯಬರುವುದರಿಂದ ಅವರ ಮುಂದಾಳುತನದಲ್ಲಿ ಈ ವಚನಗಳ ಶೇಖರಣೆ ನಡೆದಿರಬೇಕು.

ಈ ಶಾಸನದಲ್ಲಿ ದೇವಪ್ಪೆಯರು ಮೂವತ್ತೂ ನಿಯೋಗವೃತ್ತಿಗಳನ್ನೂ ಉಪಮನ್ಯು ಭೃಗುಮುನಿಗಳಿಗೆ ಸಮಾನರಾದ ಶಿವಸಂಸ್ಕಾರದಿಂದ ಕೂಡಿದ ಪರಮ ಮಾಹೇಶ್ವರರಿಗೆ ಕೊಟ್ಟಿರುವುದನ್ನು ವಿಮರ್ಶಿಸುವುದಾದರೆ ಭೃಗುಮುನಿಗೆ ವಿಶ್ವಾರಾಧ್ಯರು ಉಪದೇಶಮಾಡಿದರೆಂದೂ, ಉಪಮನ್ಯುವಿಗೆ ಶ್ರೀ ರೇವಣಸಿದ್ಧರು ಉಪದೇಶಮಾಡಿದ

ರೆಂದೂ ವೀರಶೈವ ಗ್ರಂಥಗಳಿಂದ ತಿಳಿದುಬರುವ ಈ ಮುನಿಗಳೇ ಈ ಶಾಸನದಲ್ಲಿ ಹೇಳಲ್ಪಟ್ಟಿದ್ದಾರೆಂದು ತಿಳಿಯಲವಕಾಶವಿದೆ. ಇವರು ಶಿವಸಂಸ್ಕಾರದಿಂದ ಕೂಡಿದವ ರೆಂಬುದು ಪರಮ ಮಾಹೇಶ್ವರರಾದ ಮೂವತ್ತೂ ವೃತ್ತಿವಂತರಿಗೆ ಕೊಟ್ಟ ವಿಶೇಷಣ ದಿಂದ ತಿಳಿದುಬರುತ್ತದೆ. ಕಂಚಿಯಲ್ಲಿ ಈಗಲೂ ಉಪಮನ್ಯು ಶಿವಾಚಾರ್ಯರಮಠವಿದೆ. ಅದು ವೀರಶೈವಮಠ. ಅಲ್ಲಿ ಭೃಗುಮುನಿಯ ದೇವಸ್ಥಾನವೂ ತೀರ್ಥವೂ ಇದೆ. ಇವರಿಬ್ಬರಿಗೂ ಶಿವಸಂಸ್ಕಾರವು ಕಂಚಿಯಲ್ಲಿ ಮಾಡಲ್ಪಟ್ಟಿದೆ. ಈ ಕಂಚಿಯಲ್ಲಿ ವಿಶ್ವಾ ರಾಧ್ಯರು ರೇವಣಸಿದ್ಧರು ಇದ್ದುದಕ್ಕೆ ವೀರಶೈವಗ್ರಂಥಗಳಲ್ಲಿನ ಹೇಳಿಕೆ ದೊರೆಯು ತ್ತದೆ. ಅವರು ಕಂಚಿಯಲ್ಲಿ ಇದ್ದುದು ಕ್ರಿ.ಶ.ಸು. ೧೨೦೦ ಕ್ಕಿಂತ ಪೂರ್ವವೇ ಎಂದು ತಿಳಿದು ಬರುವುದರಿಂದ ಆ ಕಾಲಕ್ಕೂ ಈ ಶಾಸನದ ಕಾಲಕ್ಕೂ ಸುಮಾರು ೮೦ ವರ್ಷ ಗಳ ಅಂತರವಿರುವುದರಿಂದ ಅವರ ಪ್ರಸಿದ್ಧಿ ಚೆನ್ನಾಗಿ ವ್ಯಾಪಿಸಿ, ಈ ಶಾಸನದಲ್ಲಿ ಅವ ರಿಬ್ಬರೇ ಬರೆಯಲ್ಪಟ್ಟಿದ್ದಾರೆ, ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಪೂರ್ವದ ಭೃಗು, ಉಪಮನ್ಯೂ ಈ ಹೆಸರಿನ ಋಷಿಗಳು ಇದ್ದಾಗ್ಯೂ ಅವರು ಪರಮಶೈವರು ಎಂದು ಕರೆಯಲ್ಪಟ್ಟಿದ್ದಾರೆಯೇ ಹೊರತು ವೀರಶೈವರ ಬಳಕೆಯಲ್ಲಿರುವ 'ಶಿವಸಂಸ್ಕಾರ ಸಂಪನ್ನರು' ಎಂಬ ವಿಶೇಷಣದಿಂದ ಎಲ್ಲಿಯೂ ಕರೆಯಲ್ಪಟ್ಟಿಲ್ಲ. ಈ ಕಾರಣಗಳಿಂದ ಕಂಚಿಯ ಭೃಗು ಉಪಮಾನ್ಯೂಗಳೇ ಈ ಶಾಸನದಲ್ಲಿ ಹೇಳಲ್ಪಟ್ಟಿದ್ದಾರೆಂದು ದೃಢೀ ಕರಿಸಲಿಕ್ಕೆ ಬರುತ್ತದೆ.

ಈ ಶಾಸನಗಳಲ್ಲಿ ಇರುವ ಪರಮಮಾಹೇಶ್ವರರು ಎಂಬ ಪದಗಳನ್ನು ವೀರಶೈವ ರಿಗೆ ಉಪಯೋಗಿಸಿರುವ ಪದ್ಧತಿಯು ಮೊಗ್ಗೆಯ ಮಾಯಿದೇವರ ಶತಕತ್ರಯದಲ್ಲಿ ಕಂಡುಬರುತ್ತದೆ. ಈ ಪದವನ್ನು ಪಾಶುಪತ ಮತದಲ್ಲಿ ಹೆಚ್ಚಾಗಿ ಬಳಕೆಯಲ್ಲಿಟ್ಟು ಕೊಂಡಿದ್ದರು. ಅವರಲ್ಲಿ ವೀರಮಾಹೇಶ್ವರ, ಪರಮಮಾಹೇಶ್ವರ ಎಂದು ಕರೆಯಲ್ಪ ಡುವವರೇ ಈಗ ವೀರಶೈವ ಎಂದು ಕರೆಯಲ್ಪಡುತ್ತಾರೆ. ಆದುದರಿಂದ ಪೂರ್ವದ ಪಾಶುಪತ ಧರ್ಮಕ್ಕೆ ಸೇರಿದ ಪಾಶುಪತ ವ್ರತವೇ ಕೆಲವು ಸಂಸ್ಕಾರದಿಂದ ವೀರಶೈವ ಧರ್ಮವಾಗಿದೆಯೆಂದು ತಿಳಿಯಲಿಕ್ಕೆ ಬರುತ್ತದೆ. "ಬಾರದು ಬಾರದು ಪಶುಪತಿ ಬ್ರತವು" ಎಂದು ವೀರಶೈವರಿಗಾಗಿ ಬಸವೇಶ್ವರನೂ ತನ್ನ ವಚನದಲ್ಲಿ ಹೇಳಿದ್ದಾನೆ. ಆದುದರಿಂದ ಪಾಶುಪತ ವ್ರತವೇ ಈಗ ವೀರಶೈವ ಎಂದು ಕರೆಯಿಸಿಕೊಳ್ಳಲ್ಪಡುತ್ತದೆ ಎಂದು ನಿರ್ಣಯಿಸಲಿಕ್ಕೆ ಬರುತ್ತದೆ. (ಸಂ. ೧೪೪)

# ಚಂಪಾರಣ್ಯ ಮಠಗಳು

[ಶ್ರೀ ಮಲ್ಲಿಕಾರ್ಜುನವರು ಮಾಡಿದ ಇನ್ನೊಂದು ಶಾಸನ ಸಮೀಕ್ಷೆ. ಈ ಶಾಸನ ಶಿವಮೊಗ್ಗ ಜಿಲ್ಲಾ ಶಾಸನಗಳು ಎಂಬ ಪುಸ್ತಕ ನಂ. ೮ ರಲ್ಲಿರುವ ಸಾಗರ ತಾಲೂಕು ಶಾಸನ ನಂ. ೧೧೧ ನೆಯದು. ಇದರ ಪೂರ್ಣ ಪಾಠಕ್ಕೆ ಶ್ರೀ ಜ. ರವರ ಪ್ರತಿಕ್ರಿಯೆಯನ್ನು ಈ ಲೇಖನದಲ್ಲಿ ಕಾಣಬಹುದು. ಶ್ರೀ ಜ. ಅವರು ಇಂಥ ನೂರಾರು ಲೇಖನಗಳನ್ನು ತಮ್ಮ ಸ. ದೀಪಿಕೆಯಲ್ಲಿ ಪ್ರಕಟಿಸಿದ್ದಾರೆ. ಪ್ರಕೃತ ಈ ಗ್ರಂಥದಲ್ಲಿ ನಾವು ಮಾದರಿಗಾಗಿ ಮಹತ್ವದ ಕೆಲವನ್ನು ಮಾತ್ರ ಆರಿಸಿಕೊಂಡಿದ್ದೇವೆ. —ಸಂ.]

"ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೬೩೪ ನೆಯ ನಂದನ ಸಂವತ್ಸರ ಜ್ಯೇಷ್ಠ ಬಹುಳ ಸಪ್ತಮಿಯು ಸ್ಥಿರವಾರದಲೂ ಶ್ರೀಮತು ಸಜ್ಜನ ಸದಾಚಾರ ಸಂಪನ್ನರಾದ ದ್ಯಾವಾಪೃಥಿವೀ ಮಹಾಮಹತ್ತಿನ...... ವೆಂಕಟಪ್ಪ ನಾಯಕರ ಭಕ್ತ ಆನಂದಪುರದ ಚಂಪಕಾಸರಸಿ ಮಹತ್ತಿನ ಧರ್ಮ ಸಿಂಹಾಸನ.........ಮಹಂತ ದೇವರು ತಮ್ಮ ಭಕ್ತಿಯಲು ಇದೇ ಆನಂದಪುರದ ಚಂಪಕಾಸರಸಿ ಮಹತ್ತಿನಮಠ ಧರ್ಮಕ್ಕೆ ನಮಸ್ಕಾರ ಮಾಡಿಕೊಟ್ಟ ಪತ್ರದ ಹಣವಿನಲ್ಲಿ ವಿಶ್ವನಾಥಪೂರದ ಅಗ್ರಹಾರದ ಮಹಾಜನಂಗಳ ಕಮ್ಯಕ್ರಯಕ್ಕೆ ತೆಗೆದುಕೊಂಡು ಹರಕಾಳ ಸೀಮೆ ಒಳಗಣ.........ಗ್ರಾಮಕೆ ಪ್ರತಿನಾಮ ಬಸವರಾಜಪುರದ ಗ್ರಾಮಕೆ ಶ್ರೀಮತು ಕೆಳದಿ ಬಸವಪ್ಪನಾಯಕರು ಬರೆಸಿಕೊಟ್ಟ ನಿರೂಪ ಪ್ರಮಾಣ ರಾಮ...... ರಗ ೨೬೬।।। ಇನ್ನೂರ ಅರವತ್ತು ಆರು ವರಹ......ಮುಪಾಗದ ಗಾಮಕ್ಕೆ ನಿರ್ವಿಘ್ನ ಮಸ್ತು ಶ್ರೀ"

ಈ ಶಾಸನ ಸಾಗರ ತಾಲೂಕ್ ಆನಂದಪುರದ ಚಂಪಕಾಸರಸಿಯ ಮಹತ್ತಿನ ಧರ್ಮ ಸಿಂಹಾಸನ......ಮಹಂತ ದೇವರು ಚಂಪಕಾಸರಸಿ ಮಹಂತಿನಮಠ ಇವರ ಧರ್ಮಕ್ಕೆ ಕೆಳದಿಯ ಬಸವಪ್ಪನಾಯಕರು ಬಸವರಾಜಪುರವೆಂಬ ಗ್ರಾಮವನ್ನು ವೆಂಕಟಪ್ಪನಾಯಕರ ಭಕ್ತಿಯಲ್ಲಿ ಬರೆಸಿಕೊಟ್ಟಿದ್ದಾರೆ. ಈ ಗ್ರಾಮವು ೨೬೬।।। ವರವ ಕಂದಾಯ ಉಳ್ಳದ್ದಾಗಿದೆ. ಶಾ. ಶ. ೧೬೩೪ ನೆಯ ನಂದನ ಸವತ್ಸರ (ಕ್ರಿ.ಶ. ೧೭೧೨)ದಲ್ಲಿ ಬಸವರಾಜಪುರವು ಹರತಾಳ ಸೀಮೆಯೊಳಗೆ ಇದ್ದಿತೆಂದೂ, ಅದಕ್ಕಿಂತ ಪೂರ್ವದಲ್ಲಿ ಈ ಗ್ರಾಮಕ್ಕೆ ಬೇರೆ ಹೆಸರು ಇದ್ದಿತೆಂದೂ ಈ ಶಾಸನದಿಂದ ಕಳೆಯು ಬರುತ್ತದೆ. ಇದನ್ನು ವಿಶ್ವನಾಥಪುರದ ಅಗ್ರಹಾರದ ಮಹಾಜನಂಗಳಿಂದ ಕ್ರಯಕ್ಕೆ ತೆಗೆದುಕೊಂಡು ಚಂಪಕಾಸರಸಿಯ ಮಹಂತಿನಮಠ ಸ್ವಾಮಿಗಳಿಗೆ ಧರ್ಮಕ್ಕೆ ಕೊಟ್ಟ

ದ್ದಾರೆ. 'ಪುರ' ಎಂಬ ಹೆಸರು ವೀರಶೈವರು ಮಾತ್ರ ಇರತಕ್ಕ ಗ್ರಾಮಕ್ಕೆ ಕೊಡಲ್ಪಡುತ್ತಿದ್ದಿತು. ಅಗ್ರಹಾರ ಎಂಬ ಹೆಸರು ಬರಿಯ ಬ್ರಾಹ್ಮಣರಿಗೆ ಸೇರಿದುದಕ್ಕೆ ಕೊಡಲ್ಪಡುತ್ತಿದ್ದಿತು. ಎಂಬುದು ಚಾರಿತ್ರಿಕಾಂಶಗಳಿಂದ ಗೊತ್ತಾಗಿದೆ. ಈ ಧರ್ಮವನ್ನು ಕೊಡುವಾಗ ವಿಶ್ವನಾಥಪುರವು ಅಗ್ರಹಾರವಾಗಿತ್ತೆಂದೂ, ಅಲ್ಲಿನ ಮಹಾಜನಗಳಿಂದ ಕೊಂಡುಕೊಂಡು ವೀರಶೈವರಪುರವನ್ನಾಗಿ ಏರ್ಪಡಿಸಿದರೆಂದೂ ತಿಳಿಯಲಿಕ್ಕೆ ಬರುತ್ತದೆ.

ಕ್ರಿ. ಶ. ೧೭ನೆಯ ಶತಕಕ್ಕೆ ಮುಂಚೆ ಚಂಪಕಾಸರಸಿಯು ಬಹಳ ಪ್ರಸಿದ್ಧವಾಗಿದ್ದಿತೆಂಬುವಕ್ಕೆ ಅನುಮಾನವಿಲ್ಲ. ಏಕೆಂದರೆ ಅಲ್ಲಿನ ಮಹಂತಿನ ಮಠಕ್ಕೆ ಒಂದು ಗ್ರಾಮವನ್ನೇ ಕೊಟ್ಟಿದ್ದಾರೆ.

ಶ್ರೀ ಶಿವಪ್ಪದೇವರು ಮಾದಕುಂಟೆ ಇವರಲ್ಲಿದ್ದ ಶ್ರೀ ಜಿ. ವಿ. ರುದ್ರಪ್ಪನವರು ಸಾಹೂಕಾರರು ಬೆಂಗಳೂರು ಇದರ ಮೂಲಕ ದೊರಕಿದ 'ಮಠಸ್ಥಲ' ಎಂಬ ಪ್ರತಿಯಲ್ಲ ಹೀಗೆ ಬರೆಯಲ್ಪಟ್ಟಿದೆ. (ಸದ್ಧರ್ಮದೀಪಿಕೆ ಸಂ. ೧೨೪–೧೨೫ರಲ್ಲಿ ಪ್ರಕಟವಾಗಿದೆ)

ಶ್ರೀಮತ್ ಪಡಿವಿಡಿ ರುದ್ರಮುನಿಸ್ವಾಮಿಯವರೇ ವೀರಸಿಂಹಾಸನಕ್ಕೆ ಕರ್ತೃಗಳಾಗಿ ಅವರು ನಿರ್ಮಿಸಿದ ಮುಖ್ಯ ಶಿಷ್ಯರುಗಳ ವಂಶಾವಳಿ......ಇನ್ನು ಮಠದ ಸಿಂಹಾಸನದ ಕ್ರಮವೆಂತೆಂದಡೆ— ಕೇದಾರ ಮಠವೇ ವೀರಸಿಂಹಾಸನಕ್ಕೆ ಆದಿ. ಉಜನೀಪುರ ಮಠವೇ ಧರ್ಮಸಿಂಹಾಸನಕ್ಕೆ ಆದಿ. ಶ್ರೀಶೈಲ ಪರ್ವತ ಮಠವೇ ದೇವಸಿಂಹಾಸನಕ್ಕೆ ಆದಿ. ಚಂಪಾರ (ಣ್ಯ?) ಮಠವೇ ಶೂನ್ಯಸಿಂಹಾಸನಕ್ಕೆ ಆದಿ. ಇದಕ್ಕೆ ಆಚಾರ್ಯರು ರೇವಣಸಿದ್ಧ, ಮರುಳುಸಿದ್ಧ, ಪಂಡಿತಾರಾಧ್ಯ, ಏಕೋರಾಮರು. (ಹೀಗೆ ನಾಲ್ವರು) ವೀರಸಿಂಹಾಸನಕ್ಕೆ ಶ್ರೀ ರೇವಣಸಿದ್ಧ ದೇವರು. ದೇವಸಿಂಹಾಸನಕ್ಕೆ ಪಂಡಿತಾರಾಧ್ಯರು. ಧರ್ಮಸಿಂಹಾಸನಕ್ಕೆ ಮರುಳಾರಾಧ್ಯರು. ಶೂನ್ಯ ಸಿಂಹಾಸನಕ್ಕೆ ಏಕೋರಾಮತಂದೆಗಳು. ಇಂತಪ್ಪ ಚತುರಾಚಾರ್ಯರ ಮಧ್ಯದಲ್ಲಿ ರುದ್ರಮೂನಿಸ್ವಾಮಿಯವರೇ ವಿಶ್ವಾಚಾರ್ಯರಾಗಿ, ಪಟ್ಟಾಧಿಕಾರವುಳ್ಳವರೇ ಆಗಿ, ಇಹಲೋಕದಲ್ಲಿ ಗೋಪ್ಯರಾಗಿ ಸಂಚರಿಸುತಿಹರೆಂದು ಆಗಮೋಕ್ತವಾಗಿ ಚತುಚಾರ್ಯಪುರಾಣೋಕ್ತವಾಗಿ ಇಹುದು.

ಹೀಗೆ ಬರೆಯಲ್ಪಟ್ಟ 'ಮಠಸ್ಥಾಲದ' ಹೇಳಿಕೆಯಿಂದ ವೀರಸಿಂಹಾಸನ, ಧರ್ಮಸಿಂಹಾಸನ, ದೇವಸಿಂಹಾಸನ, ಶೂನ್ಯಸಿಂಹಾಸನ–ಹೀಗೆ ನಾಲ್ಕು ಸಿಂಹಾಸನಗಳು ಏರ್ಪಟ್ಟುದು ತಿಳಿದುಬರುತ್ತದೆ. ಮೇಲೆ ಕಂಡ ರೇವಣಸಿದ್ಧ ದೇವರು. ವೀರಸಿಂಹಾಸನಕ್ಕೂ, ಪಂಡಿತಾರಾಧ್ಯರು ದೇವಸಿಂಹಾಸನಕ್ಕೂ. ಏಕೋರಾಮರು ಅಥವಾ ಏಕೋರಾಮ ತಂದೆಗಳು ಶೂನ್ಯ ಸಿಂಹಾಸನಕ್ಕೂ ಆಚಾರ್ಯರಾದರು. ಈ ಆಚಾರ್ಯರಿಗೆ ಕೇದಾರ, ಉಜ್ಜನಿಪುರ, ಶ್ರೀಶೈಲ ಚಂಪಾರಣ್ಯ ಈ ನಾಲ್ಕು ಮಠಗಳೇ ಆದಿ ಸ್ಥಾನಗಳಾವುವು. ಈ ಚತುರಾಚಾರ್ಯರ ಮಧ್ಯದಲ್ಲಿ ರುದ್ರಮುನಿಸ್ವಾಮಿಯವರೇ ವಿಶ್ವಾಚಾರ್ಯ

ರಾಗಿ ಪಟ್ಟಾಧಿಕಾರವುಳ್ಳವರೇ ಆಗಿ ಇಹಲೋಕದಲ್ಲಿ ಸಂಚರಿಸುತ್ತಿರುವರು. ಈ ಸಂಗತಿಗಳೂ ಈ ಮಠಸ್ಥಲದ ಬರಹದಿಂದ ತಿಳಿಯಬರುವುದರಿಂದ ಚಾರಿತ್ರಿಕಾಂಶಗಳನ್ನು ಈ ರೀತಿಗೊತ್ತುಮಾಡಬಹುದಾಗಿದೆ.

ಶ್ರೀ ರುದ್ರಮುನಿಗಳು ವಿಶ್ವಾಚಾರ್ಯರಾಗಿ ಇಹಲೋಕದಲ್ಲಿ ಸಂಚರಿಸುವರು. ಎಂದು ಹೇಳಲ್ಪಟ್ಟಿರುವುದರಿಂದ ವಿಶ್ವಾರಾಧ್ಯರು ಶಿವೈಕ್ಯರಾದ ಮೇಲೆ ಶ್ರೀ ರುದ್ರ ಮುನೀಶ್ವರ ನಾಲ್ಕು ಜನ ಆಚಾರ್ಯರಿಗೆ ಮುಖ್ಯರಾದ ಪಟ್ಟಾಧಿಕಾರಿಗಳಾದರೆಂದೂ, ವಿಶ್ವಾರಾಧ್ಯರ ಗುರುತ್ವವು ಇವರಿಗೆ ದೊರೆಯಿತೆಂದೂ ತಿಳಿಯಲಿಕ್ಕೆ ಬರುತ್ತದೆ.

ಏಕೋರಾಮುರಾಧ್ಯರಿಗೆ ಮೊದಲನೆಯದಾಗಿ ಕೊಡಲ್ಪಟ್ಟ ಚಂಪಾರಣ್ಯ ಮಠವು ಅವರ ಶೂನ್ಯ ಸಿಂಹಾಸನದ ಆದಿಯಾದುದರಿಂದ ಆನಂದಪುರದ ಚಂಪಕಾಸರಸಿಯನ್ನು ಹೇಳುವ ಮೇಲಿನ ಶಾಸನದಲ್ಲಿ ಮಹಾಮಹಂತಿನ ಧರ್ಮಸಿಂಹಾಸನ ಎಂಬ ಪದಗಳಿರುವುದರಿಂದ ಚಂಪಾರಣ್ಯದ ಶೂನ್ಯ ಸಿಂಹಾಸನವೇ ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಎಂದು ತಿಳಿಯಬೇಕಾಗಿದೆ. ಪಂಚಬ್ರಹ್ಮೋದಯ ಭಾಷ್ಯದಲ್ಲಿ ಶೂನ್ಯಸಿಂಹಾಸನದ ಮೇಲೆ ಏಕೋರಾಮರನ್ನು ಕೂಡಿಸಿ, ಅವರಿಗೆ ಮದುವೆ ಮಾಡಿದರು. ಎಂಬ ಸಂಗತಿಯನ್ನು ಶೋಧಿಸಲಿಕ್ಕೆ ಹೋದರೆ ಅದು ಕಲ್ಯಾಣಪಟ್ಟಣದ ಶೂನ್ಯಸಿಂಹಾಸನದ ಮೇಲೇ ಅಥವಾ ಚಂಪಾರಣ್ಯದ ಶೂನ್ಯಸಿಂಹಾನದ ಮೇಲೋ ಎಂಬರ್ಥವು ಬರುತ್ತದೆ. ಕಲ್ಯಾಣಪಟ್ಟಣದ ಶೂನ್ಯಸಿಂಹಾಸನದ ಮೇಲೆ ಮದುವೆ ಮಾಡಿಸಿ ಆ ಮೇಲೆ ಚಂಪಾರಣ್ಯದ ಸಿಂಹಾಸನ ಮಠದ ಆಧಿಪತ್ಯವನ್ನು ಕೊಟ್ಟಿರಬಹುದು ಎಂಬ ಅನುಮಾನವೂ ಬರುತ್ತದೆ. ಇದನ್ನು ಇನ್ನೂ ಶೋಧಿಸಬೇಕಾಗಿದೆ. ಏಕೋರಾಮರನ್ನು ಶೂನ್ಯ ಸಿಂಹಾಸನದ ಮೇಲೆ ಕೂಡಿಸಿದಾಗ ಶೂನ್ಯ ಸಿಂಹಾಸನವು ಒಂದು ಆಚಾರ್ಯರ ಪೀಠವಾಗಿ ಪರಿಣಮಿಸಿ ಇದೆ. ಈ ಶಾಸನದಲ್ಲಿ ಮಹಾಮಂತಿನ ಧರ್ಮಸಿಂಹಾಸನ ಎಂದು ಹೇಳಲ್ಪಟ್ಟಿರುವುದರಿಂದ ಮಹಾಮಹಂತಿನ ಮಠ ಅದಕ್ಕೆ ಸೇರಿದ ಮಹಂತಿನ ಮಠಗಳು. ಇವು ಚಂಪಾರಣ್ಯಮಠದ ಶೂನ್ಯ ಸಿಂಹಾಸನದ ಕಾಲದಿಂದಲೇ ಪ್ರಾರಂಭವಾದುವೆಂದು ತಿಳಿಯಬೇಕಾಗಿದೆ. ಈ ಆನಂದಪುರದ ಕಲ್ಯಾಣದ ಪ್ರಭುಪೀಠದ ಪರಂಪರೆಯವರಾದ ಸ್ವಾಮಿಗಳಿಗೂ ಈ ಮಹಂತಿನ ಮಠದ ಸ್ವಾಮಿಗಳಿಗೂ, ದ್ವೇಷ ಭಾವವಿದ್ದುದೂ ಗೊತ್ತಾಗಿದೆ. ಈಗಲೂ ಪಾದೋದಕವನ್ನು ಸ್ವಾಮಿಗಳಿಂದ ಪಡೆಯುವುದಕ್ಕೆ ಮುಂಚೆ "ಮಹಾಮಹಂತಿನ ಶ್ರೀ ಪಾದಪದ್ಮಗಳಿಗೆ ಶರಣು ಶರಣಾರ್ಥಿ" ಎಂದು ಪಾದೋದಕ ತೆಗೆದುಕೊಳ್ಳುವವರು ಪ್ರಾರ್ಥಿಸುವ ಪದ್ಧತಿ ಇದೆ. ಈ ದೆಸೆಯಿಂದ ಏಕೋರಾಮಯರು ಶೂನ್ಯ (ಮಹಾಮಹಂತಿನ ಧರ್ಮ) ಸಿಂಹಾಸನದ ಆಚಾರ್ಯರಾದ ಮೇಲೆ ಮಹಾಮಹಂತಿನ ಆದಳಿತವು ಬೆಳೆಯಿತೆಂದು ನಿರ್ಧರಿಸಬೇಕಾಗಿದೆ. ಒಟ್ಟಿನಲ್ಲಿ ಕಲ್ಯಾಣದ ಶೂನ್ಯ ಸಿಂಹಾಸನದ ಪ್ರಾಬಲ್ಯವು ಕುಂದಿದ ಮೇಲೆ ಈ ಏಕೋರಾಮರ ಶೂನ್ಯಸಿಂಹಾಸನವು ನಿರ್ಮಾಣವಾಗಿದೆ.

ಮೇಲೆ ಕಂಡ ನಾಲ್ವರು ಆಚಾರ್ಯರಿಗೆ ರುದ್ರಮುನೀಶ್ವರರು ಗುರುವಾಗಿ, ಗುಪ್ತವಾಗಿ ಸಂಚರಿಸಿದ ವಿಷಯವನ್ನು ಯೋಚಿಸಿದರೆ ರುದ್ರಮುನೀಶ್ವರರು ಕೊಕಟನೂರು (ಕುಕನೂರು) ಎಂಬಲ್ಲಿ ಗವಿಯಲ್ಲಿ ಗುಪ್ತವಾಗಿ ಇದ್ದುದನ್ನು ಜ್ಞಾಪಕಕ್ಕೆ ತರುತ್ತದೆ. ಈ ದೆಸೆಯಿಂದ ಈ ರುದ್ರಮುನೀಶ್ವರರ ಅಂತ್ಯಕಾಲದಲ್ಲಿ ಈ ಕಾರ್ಯವು ನಡೆದಿದೆ ಎಂದು ತಿಳಿಯಲನುಮಾನವೇನೂ ಇಲ್ಲ. ಕ್ರಿ. ಶ. ೧೨೧೦ರ ಸುಮಾರಿನಲ್ಲಿ ಕಂಚಿಯಲ್ಲಿ ಸೇರಿದ ಸಭೆಯಲ್ಲಿ ರುದ್ರಮುನೀಶ್ವರರು ಇದ್ದರೆಂದೂ ಅಲ್ಲಿ ನಡೆದ ತೀರ್ಮಾನದ ಗ್ರಂಥಕ್ಕೆ ರುದ್ರಭಾರತ ಅಥವಾ ಬ್ರಹ್ಮಾಂಡ ಪುರಾಣ ಎಂಬ ಹೆಸರಿನ ಮೇಲೆ ಗೊತ್ತಾಗುತ್ತದೆ. ಕ್ರಿ. ಶ. ೦೨೦೦ ರ ಎಡಬಲ ಈ ಕಾರ್ಯವು ನಡೆದಿರಬೇಕು. ರುದ್ರಮುನೀಶ್ವರರು ಕಲ್ಯಾಣದ ಪ್ರಭುಪೀಠದ ಅಧಿಕಾರವನ್ನು ಬಿಟ್ಟುಕೊಟ್ಟು ನಾಲ್ಕು ಜನ ಆಚಾರ್ಯರ ಮುಖ್ಯ ಪಟ್ಟಾಧಿಕಾರಿಗಳಾದರೂ ಗುಪ್ತವಾಗಿ ಸಂಚರಿಸಲಿಕ್ಕೆ ಆಗಿನ ರಾಜಕೀಯ ವಿಪ್ಲವವೇ ಕಾರಣವಾಗಿರಬೇಕು. (ರುದ್ರಮುನಿಗೆ ಸಹಾಯ ಮಾಡಿದ ಕರಚ್ಯುರಾಜನಾದ ಸೋವಿದೇವನ ಪರಂಪರೆಯವರ ಅಧಿಕಾರವು ತಪ್ಪಿಹೋದುದೇ ಕಾರಣವಾಗಿರಬೇಕು.) ಅದಿಲ್ಲದಿದ್ದರೆ ರುದ್ರಮುನೀಶ್ವರರಿಗೆ ಲೌಕಿಕ ಕಾರ್ಯಗಳಲ್ಲಿ ವೈರಾಗ್ಯ ಬಂದಿರಬೇಕು. ಈ ವಿಷಯವನ್ನು ಇನ್ನೂ ಶೋಧಿಸಬೇಕಾಗಿದೆ.

ಶ್ರೀ ರೇವಣರು ಕ್ರಿ. ಶ. ೧೨೧೭ರ ವರೆಗೂ ಬದುಕಿದ್ದರೆಂದೂ ಕೊಲ್ಲಿಪಾಕಿಯಲ್ಲಿ ಶಿವಾಧೀನರಾದರೆಂದೂ, ಪಂಚಾಚಾರ್ಯರ ಚರಿತ್ರೆ ಮೊದಲನೆಯ ಭಾಗವು ಹೇಳುತ್ತದೆ. ಶ್ರೀ ರೇವಣರು ಕೇದಾರಕ್ಕೆ ಹೋಗಿದ್ದರೆಂಬ ಜನಜನನಿತ ಸುದ್ದಿಯು ವೃದ್ಧಮಹನಿಯರಿಂದ ತಿಳಿದು ಬಂದಿದೆ. ದ್ರಾಕ್ಷಾರಾಮ ಕ್ಷೇತ್ರಕ್ಕೂ ಕೇದಾರವೆಂಬ ಹೆಸರು ಬಂದಿದೆ. ಇವುಗಳಲ್ಲಿ ಯಾವ ಕೇದಾರವೆಂಬುದನ್ನು ಶೋಧಿಸಬೇಕಾಗಿದೆ. ಕ್ರಿ. ಶ. ೧೧೮೭ರ ಸಿರಿವಾಳ ಶಾಸನದಲ್ಲಿ ಇರುವ ರೇವಣಸಿದ್ಧರ ಕೆಲಸದಲ್ಲಿ ಈ ವಿಷಯ ಯಾವುದೂ ಹೇಳಲ್ಪಟ್ಟಿಲ್ಲವಾದುದರಿಂದ ಆಮೇಲೆ ಈ ಕಾರ್ಯವು ನಡೆಯಿತೆಂದು ತಿಳಿಯಬೇಕಾಗಿದೆ. (ಹೀಗೆ ಚಂಪಾರಣ್ಯ ಮಠದ ಪ್ರಾಮುಖ್ಯತೆಯು ಮೇಲೆ ಕಂಡ ಮಠಸ್ಥಳದ ಪ್ರತಿಯಿಂದ ಗೊತ್ತಾಗುತ್ತದೆ.)

ಈ ಚಂಪಾರಣ್ಯ ಮಠವೇ ಶಾಸನದಲ್ಲಿ ಚಂಪಕಾ'ಸ' (ಸ?) ರಸಿಮಠವೆಂದೂ ನಿರ್ಣಯಿಸಲಿಕ್ಕೆ ಬರುತ್ತದೆ. ಏಕೆಂದರೆ—ಶಿವಮೊಗ್ಗ ಜಿಲ್ಲೆಯಲ್ಲಿನ ಆನಂದಪುರಕ್ಕೆ ಸುಮಾರು ೨೫ ಮೈಲುಗಳ ದೂರ ಅರಣ್ಯವಿದ್ದಿತೆಂದೂ ಅಲ್ಲಿಂದ ರಾಕ್ಷಸರು ಧಾರವಾಡ ಜಿಲ್ಲೆಯ ಮಾಸೂರಿನ ಹೊಳೆಯವರೆವಿಗೂ ಹೋಗಿ ಅಲ್ಲಿ ಅರಳಿಮರದ ಹತ್ತಿರ ರಾತ್ರಿ ಅಡಗಿಕೊಂಡಿದ್ದು ಜನರಿಗೆ ತೊಂದರೆ ಕೊಡುತ್ತಿದ್ದರೆಂದೂ ಅವರನ್ನು ಶ್ರೀ ರೇವಣರು ಸಂಹರಿಸಿ ಅವರ ರಕ್ತದಿಂದ ಬಿಸಿಯಾರಿಸಿ ಕತ್ತಿ ಮತ್ತು ಕಠಾರಿಗಳನ್ನು ಮಾಡಿಸಿದರೆಂದೂ ಶ್ರೀ ರೇವಣಸಿದ್ಧರು ಎಂಬ ಪುಸ್ತಕದಲ್ಲಿ ಈಗಾಗಲೆ ಪ್ರಕಟವಾಗಿದೆ. ಅವಕ್ಕೆ ತಕ್ಕಂತೆ ಸಾಗರ ತಾಲೂಕಿನ ಶಾಸನ ೧೮೯೦ರಲ್ಲಿ ಚಾಲುಕ್ಯ ಜಗದೇಕ ಮಲ್ಲರ

ಕಾಲದಲ್ಲಿ (ಕ್ರಿ. ಶ. ೧೧ನೆಯ ಶತಮಾನ) ಅಂಧಕಾಸುರ ಎಂಬ ಗ್ರಾಮವಿದ್ದಿತೆಂದೂ, ಅದಕ್ಕೆ ೧೨ ಗ್ರಾಮಗಳು ಸೇರಿದ್ದುವೆಂದೂ, ಅವನ್ನೇ ಅಗ್ರಹಾರ ಮಾಡಿಕೊಟ್ಟನೆಂದೂ ಉಲ್ಲೇಖವಿದೆ. ಇಲ್ಲಿ ಕಂಡ ಜಗದೇಕಮಲ್ಲನೇ ಚಾಲುಕ್ಯನೇ ಚಾಲುಕ್ಯರ ೧ನೆಯ ಜಯಸಿಂಹನಾಗಿದ್ದಾನೆ. ಇದು ಶಾಲಿವಾಹನ ಶಕ ೯೬೪ನೆಯ ಚಿತ್ರಭಾನು ಸಂವತ್ಸರದ (ಕ್ರಿ. ಶ. ೧೦೪೨)ಲ್ಲಿ ಹುಟ್ಟಿದೆ. ಇದರಿಂದ ಆ ಪ್ರಾಂತ್ಯದಲ್ಲಿ ಆ ಕಾಲದಲ್ಲಿ ಅಸುರರ ಗ್ರಾಮವಿದ್ದಿತೆಂದು ತಿಳಿಯಲವಕಾಶವಾಗಿದೆ. ಇಲ್ಲಿ ಅಸುರರೆಂದಡೆ ದೇವತೆಗಳೊಡನೆ ಯುದ್ಧ ಮಾಡಿದ ರಾಕ್ಷಸರೆಂದು ತಿಳಿಯಬಾರದು. ಕ್ರಿ. ಶ. ೧೨ನೆಯ ಶತಮಾನದ ದೊಂಕನಿಗೆ ಗೋಮುಖಾಸುರ ಎಂದೂ, ವೀರಶೈವರಲ್ಲಿ ಪ್ರಚಲಿತವಾಗಿರುವ ಸ್ವಾಯಂಭುವಾಗಮದ ೮–೯–೧೦ನೆಯ ಪಟಲಗಳಲ್ಲಿ ಹೇಳಲ್ಪಟ್ಟಿದೆ. ಈ ಪುಸ್ತಕದಲ್ಲಿ ಕಲ್ಯಾಣದ ಶೂನ್ಯ ಸಿಂಹಾಸನದ ಮತ್ತು ಅಲ್ಲಮಪ್ರಭುಸ್ವಾಮಿಗಳವರ ವಿಷಯದ ಉಲ್ಲೇಖವಿದೆ. ಈ ನಮೂನೆಯ ಅಸುರರ ಕಾಟವನ್ನೇ ಶ್ರೀ ರೇವಣರು ಪರಿಹರಿಸಿದ್ದಾರೆ. ಹೀಗೆ ಶ್ರೀ ರೇವಣರ ಪ್ರಾಬಲ್ಯವು ಈ ಪ್ರಾಂತ್ಯದಲ್ಲಿ ಇದ್ದಿತೆಂದು ಗೊತ್ತಾಗುವುದರಿಂದ ಅವರ ಬಲದಿಂದಲೇ ಮೇಲೆ ಕಂಡ ಕಾರ್ಯಗಳು ನಡೆದಿವೆ ಎಂದು ತಿಳಿಯಬೇಕಾಗಿದೆ.

ಈ ಚಂಪಾರಣ್ಯಮಠವು ಬೆಂಗಳೂರು ಜಿಲ್ಲಾ ಶಿವಗಂಗೆಯ ಸಮೀಪದಲ್ಲಿರಬಹುದೆಂದು ಈ ಮೊದಲು ಊಹಿಸಲಾಗಿದ್ದಿತು. ಹರದನಹಳ್ಳಿಯಾಗಿರಬಹುದೆಂದೂ ಊಹಿಸಲ್ಪಟ್ಟಿದ್ದಿತು. ಇದಲ್ಲದೆ ಚಿತ್ರದುರ್ಗದಲ್ಲಿ ಚಂಪಕ ಸಿದ್ಧೇಶ್ವರ ಎಂಬ ದೇವಾಲಯವಿರುವುದರಿಂದ ಅಲ್ಲಿ ಚಂಪಾರಣ್ಯ ಮಠವಿರಬಹುದೆಂದೂ ಊಹಿಸಲಿಕ್ಕೆ ಬರುತ್ತದೆ. ಆದರೆ ಈ ಮೂರು ಊಹೆಗಳೂ ಸರಿಯಲ್ಲವೆಂದೂ ಚಂಪಕಾ'ನ'(ಸ?)ರಸಿಯಲ್ಲಿ ಮಹಂತಿನ ಧರ್ಮ ಸಿಂಹಾಸನ ಇದ್ದಿತೆಂದು ಮೇಲೆ ಹೇಳಿದ ನಂ. ೧೧೧ನೆಯ ಶಾಸನದಿಂದ ಸ್ಪಷ್ಟವಾಗಿ ತಿಳಿಯಬರುವುದರಿಂದ ಇದೇ ಚಂಪಾರಣ್ಯಮಠವೆಂದೂ ತಿಳಿಯಲಿಕ್ಕೆ ಬರುತ್ತದೆ. ಚರಿತ್ರೆಯ ಶೋಧಕರು ಇನ್ನೂ ಪರಿಶೀಲಿಸಿ ನೋಡಲಿ.

ಕಾಶೀ ಪೀಠದ ವಿಶ್ವಾರಾಧ್ಯರಿಗೆ ವಿಶ್ವನಾಥ ಎಂದು ಕರೆದಿರುವುದು ಕೆರೆಯ ಪದ್ಮರಸ ದೀಕ್ಷಾಬೋಧೆ ಎಂಬ ಗ್ರಂಥದಿಂದ ತಿಳಿಯಬರುತ್ತದೆ. ಮೇಲಿನ ೧೧೧ನೆಯ ಶಾಸನದಲ್ಲಿ ವಿಶ್ವನಾಥಪುರ ಎಂಬುದು ಅವನ ಹೆಸರಿನ ಸ್ಮರಣೆಯಲ್ಲಿ ಕಟ್ಟಲ್ಪಟ್ಟದ್ದಾಗಿರಬೇಕು. ಈ ದೆಸೆಯಿಂದಲೂ ಚಂಪಕಾಸರಸಿ ವಿಶ್ವನಾಥಪುರ ಇವು ಕ್ರಿ. ಶ. ೧೨ನೆಯ ಶತಮಾನದ ಕೊನೆಯಲ್ಲಿ ನಿರ್ಮಿಸಲ್ಪಟ್ಟವುಗಳೆಂದೂ ತಿಳಿಯಲಿಕ್ಕೆ ಬರುವಂತೆ ಆಗಿದೆ. ವಿಶ್ವಾರಾಧ್ಯರು ಐಕ್ಯರಾದಮೇಲೆ ಈ ಚಂಪಾರಣ್ಯ ಸಿಂಹಾಸನ ಮಠವು ಆಯಿತೆಂದು ಮೇಲೆ ವಿವರಿಸಲ್ಪಟ್ಟಿರುವುದರಿಂದ ಶಾಸನದಲ್ಲಿ ಕಂಡ ವಿಶ್ವನಾಥಪುರವು ವಿಶ್ವಾರಾಧ್ಯರ ಸ್ಮರಣೆಗಾಗಿಯೇ ಆಯಿತೆಂದು ತಿಳಿಯಲನುಮಾನವುಬಾರದು. ಸುಜ್ಞಾನಬೋಧೆಯೆಂಬ ಗುರುಚಿತ್ತಾರಾಧ್ಯರ ಮಹಿಮೆಯನ್ನು ಹೊಗಳುವ ಗ್ರಂಥದಲ್ಲಿ ಮಲ್ಲಶಾರ್ಯ ಎಂಬ ಪೂರ್ವದ ಹೆಸರುಳ್ಳ ಗುರುಚಿತ್ತಾರಾಧ್ಯರಿಗೆ ಅನುಗ್ರಹ ಮಾಡುವುದ

ಕ್ಕಾಗಿ ಶ್ರೀಶೈಲದಲ್ಲಿ ಶ್ರೀ ರೇವಣಸಿದ್ಧರಿಂದ ದೀಕ್ಷೆ ಹೊಂದಿದ ಶ್ರೀ ನಿರಂಜನ ಗಣೇಶ್ವರನು ಶ್ರೀಶೈಲದಿಂದ ಬಂದನೆಂದು ಹೇಳಲ್ಪಟ್ಟಿದೆ. ಹಳೆಬೀಡು ಪ್ರಾಂತದಲ್ಲಿನ ಈಗಿನ ಹುಲಿಕಲ್ ಸಮೀಪದಲ್ಲಿಗೆ ಶ್ರೀ ನಿರಂಜನ ಗಣೇಶ್ವರನು ಬಂದನು. ಈ ನಿರಂಜನ ಗಣೇಶ್ವರನೇ ಶಿವಯೋಗ ಪ್ರದೀಪಿಕೆಯನ್ನು ಬರೆದ ಚನ್ನಸದಾಶಿವಯೋಗಿ ಎಂಬುದನ್ನು ಪಂಚಾಚಾರ್ಯರ ಚರಿತ್ರೆಯ ಮೊದಲ ಭಾಗದಲ್ಲಿ ತೋರಿಸಿ ಇದೆ. ಈ ನಿರಂಜನ ಗಣೇಶ್ವರನು ಶ್ರೀಶೈಲದಿಂದ ಬರುವಾಗ ಚಂಪಾರಣ್ಯವನ್ನು ದಾಟಿ ಬಂದನೆಂದು ತಿಳಿಯುವುದರಿಂದ ಆ ಕಾಲದಲ್ಲಿಯೇ ಚಂಪಾರಣ್ಯ ಮಠವು ಪ್ರಸಿದ್ಧಿಯಾಗಿದ್ದಿತೆಂದು ವ್ಯಕ್ತವಾಗುತ್ತದೆ. ಈ ಕಾಲವು ಸುಮಾರು ಕ್ರಿ. ಶ. ೧೨೧೫ ಎಂದು ಮೇಲ್ಕಂಡ ಚರಿತ್ರೆಯಲ್ಲಿ ೭೦ನೆಯ ಪ್ರಕರಣದಲ್ಲಿ ತೋರಿಸಿ ಇದೆ. ಆ ವರ್ಷಕ್ಕಿಂತ ಪೂರ್ವದಲ್ಲಿ ಸಿಗಿವಾಳ ಶಾಸನವ ಕಾಲವಾದ ಕ್ರಿ. ಶ. ೧೧೬೭ರ ತರುವಾಯ ಈ ಚಂಪಾರಣ್ಯ ಮಠವು ನಿರ್ಮಿಸಲ್ಪಟ್ಟಿತೆಂದು ತಿಳಿಯಬೇಕಾಗಿದೆ. ಶ್ರೀಶೈಲದಿಂದ ಹಳೆಬೀಡಿಗೆ ಬರುವಾಗ ಮಾರ್ಗದಲ್ಲಿ ಇದೇ ಚಂಪಾರಣ್ಯವು ಇದ್ದುದು ನಿಜವೆಂದು ತಿಳಿಯುತ್ತದೆ.

ಶ್ರೀ ರೇವಣರು, ಮರುಳಸಿದ್ಧರು, ಏಕೋರಾಮರು, ಪಂಡಿತಾರಾಧ್ಯರು ಈ ನಾಲ್ವರು ಆಚಾರ್ಯರು ಮೊದಲು ಏರ್ಪಾಡಾಗಿದ್ದು, ಕೆಲವು ವರ್ಷಗಳ ನಂತರ ವಿಶ್ವಾರಾಧ್ಯರು ಈ ನಾಲ್ವರಾಚಾರ್ಯರಿಗೆ ಗುರುಗಳಾದರೆಂದೂ ಇವರೈವರೂ ರುದ್ರಮುನೀಶ್ವರರನ್ನು ಶೂನ್ಯ ಪೀಠದ ಓಂಕಾರ ಕಲಶಮೂರ್ತಿಗಳನ್ನಾಗಿ ಏರ್ಪಡಿಸಿಕೊಂಡಿದ್ದರೆಂದೂ ಇದುವರೆಗೆ ತಿಳಿದುಬಂದ ಸಂಗತಿಯಾಗಿದೆ. ಮೇಲೆ ಕಂಡ ಮಠಸ್ಥಲ ಮತ್ತು ಶಾಸನಗಳಿಂದ ಚಂಪಾರಣ್ಯ ಶೂನ್ಯ ಸಿಂಹಾಸನವು (ಮಹಾಮಹಂತಿನ ಧರ್ಮ ಶಿಂಹಾಸನವು) ಮತ್ತು ಉಳಿದ ಮೇಲೆ ಕಂಡ ಮೂರು ಸಿಂಹಾಸನಗಳು ವಿಶ್ವಾರಾಧ್ಯರ ತರುವಾಯ ಏರ್ಪಾಡಾಗಿ, ಈ ನಾಲ್ಕು ಸಿಂಹಾಸನಗಳಿಗೆ ರುದ್ರಮುನೀಶ್ವರರೇ ಮುಖ್ಯ ಪಟ್ಟಾಧಿಕಾರಿಗಳಾಗಿ ಸಮಾಜದ ಆಡಳಿತವನ್ನು ನಡೆಸುತ್ತಿದ್ದರು ಎಂದು ವ್ಯಕ್ತವಾಗುವುದು. ಈ ವಿಷಯವನ್ನು ಸಮಾಜದವರು ಇನ್ನು ಚೆನ್ನಾಗಿ ಪರಿಶೋಧಿಸಿ ನಿರ್ಣಯಿಸಬೇಕಾಗಿದೆ.

ವೀರಶೈವ ಸಮಾಜದ ರಚನೆಯನ್ನು (ಆಚಾರ್ಯರ ವಿಷಯವೇ ಮೊದಲಾದುವನ್ನು) ಹೇಳುವ ಆಗಮುಗಳಲ್ಲಿ ಪಾಶುಪತ್ಯಾಗಮು, ಸುಪ್ರಭೇದಾಗಮು—ಎಂಬಿವು ಮುಖ್ಯವಾದುವುಗಳಾಗಿವೆ. ಈ ಎರಡರಲ್ಲಿ ಪಾಶುಪತ್ಯಾಗಮುವು ಮೊದಲು ಹುಟ್ಟಿದುದು. ಇದರಲ್ಲಿ ಆಚಾರ್ಯರುಗಳಿಗೆ ರೇವಣಸಿದ್ಧ, ಮರುಳಸಿದ್ಧ, ವಿಶ್ವಾರಾಧ್ಯ ಈ ರೀತಿ ಹೆಸರುಗಳಿವೆ. ಇದರ ತರುವಾಯ ಹುಟ್ಟಿದ ಸುಪ್ರಭೇದಾಗಮುದಲ್ಲಿ ಐದು ಜನ ಆಚಾರ್ಯರು ರೇವಣಾರಾಧ್ಯ, ಮರುಳಾರಾಧ್ಯ, ಪಂಡಿತಾರಾಧ್ಯ, ಏಕೋರಾಮಾರಾಧ್ಯ ಎಂಬುದಾಗಿ ಕರೆಯಲ್ಪಟ್ಟು ಎಲ್ಲರೂ ಆರಾಧ್ಯರಾಗಿದ್ದಾರೆ. ಈ ಆಗಮುದಲ್ಲಿ ಇವರೆಲ್ಲರೂ ಮಹಾಂತರು ಎಂದು ಹೇಳಲ್ಪಟ್ಟಿದ್ದಾರೆ. ಸುಪ್ರಭೇದಾಗಮುವು ಹುಟ್ಟುವ ಹೊತ್ತಿನೊಳಗಾಗಿ, ಮಹಾಮಹಂತಿನ ಧರ್ಮ ಸಿಂಹಾಸನವು ಹುಟ್ಟಿತೆಂದು ತಿಳಿಯಲಿಕ್ಕೆ

ಬರುವಂತಾಗಿದೆ. ಈ ರೀತಿಯಲ್ಲಿ ಚಂಪಾರಣ್ಯ ಮಠವು ವೀರಶೈವರ ಮೂಲವನ್ನು ತಿಳಿಸುವ ಒಂದು ಸಾಧನೆಯಾಗಿದೆ, ಎಂದು ನಿರ್ಧರಿಸಬೇಕಾಗಿದೆ.

ಮೇಲ್ಕಂಡ ನಾಲ್ಕು ಸಿಂಹಾಸನಗಳಲ್ಲಿ ದೇವಸಿಂಹಾಸನವು ಶ್ರೀಪತಿ ಪಂಡಿತರದು ಎಂಬುದಾಗಿ ಮೇಲ್ಕಂಡ ಮಠಸ್ಥಲದಲ್ಲಿ ಇದೆ. ಇವರು ಶ್ರೀಪತಿ ಪಂಡಿತರೋ ಅಥವಾ ಪಂಡಿತಾರಾಧ್ಯರೋ ಎಂಬುದನ್ನು ಇನ್ನೂ ಶೋಧಿಸಬೇಕಾಗಿದೆ. ಮೇಲೆ ಪಂಡಿತಾ ರಾಧ್ಯರಿಗೆ ಎಂದು ಬರೆದಿರುವುದು ನಮ್ಮ ಊಹೆಯಾಗಿದೆ.

ಕ್ರಿ. ಶ. ೧೨೧೫ ರಲ್ಲಿ ಕಂಚಿಯಲ್ಲಾದ ನಿರ್ಣಯದಿಂದ ರುದ್ರಭಾರತವು ಹುಟ್ಟಿದೆ ಯೆಂದು ಹಿಂದೆ ಹೇಳಲಾಗಿದ್ದಿತು. ಇಲ್ಲಿ ಮೇಲೆ ಕ್ರಿ. ಶ. ಸು. ೧೨೧೦ ಎಂಬುದನ್ನು ಬದಲಾಯಿಸಿಕೊಳ್ಳಬೇಕು.

ಈ ಚಂಪಕಾನರಸಿಮಠವನ್ನು ಆನಂದಪುರದ ಸಮೀಪದಲ್ಲಿ ಈ ಪ್ರಕಾಶಕನು ನೋಡಿದ್ದಾನೆ. ಹಳೇಪೈಕದವರ ಮನೆಗೆ ಸೇರಿದ ಕಾನಿನಲ್ಲಿ (ಅರಣ್ಯದಲ್ಲಿ) ಇದೆ. ಮಠವು ನೆಲಸಮವಾಗಿದೆ. ಮಠದ ಮುಂಭಾಗದ ಮಗ್ಗುಲಲ್ಲಿಯೇ ಸಿಹಿ ನೀರಿನ ದಿವ್ಯವಾದ ಕೊಳ ಈಗಲೂ ಕಂಗೊಳಿಸುತ್ತಿದೆ. ಮುಂಭಾಗದಲ್ಲಿ ಶಿಲಾಲಿಪಿಯೂ ಇದೆ. ಶ್ರೀಶೈಲದಲ್ಲಿ ಅನೇಕ ಮಠಗಳು ನಿರ್ನಾಮವಾದಹಾಗೆ ಈ ಮಠವೂ ನಿರ್ನಾಮ ವಾಗಿದೆ. ಕಾಲಚಕ್ರದ ಲೀಲೆ. ಮಾಡುವುದೇನು ?

ಶ್ರೀ ಏಕೋರಾಮರ ವಿಷಯದ ವಿಮರ್ಶೆಗಾಗಿಯೇ ಈ ಲೇಖನವು ಬರೆಯಲ್ಪ ಟ್ಟಿದೆ. "ಕಾಶಿ ಪೀಠದ ವಿಷಯ" ಎಂಬ ಭಾಗದಲ್ಲಿ ವಿಶ್ವಾರಾಧ್ಯರ ವಿಷಯದ ವಿಮರ್ಶೆ ನಡೆದಿದೆ. ಒಟ್ಟಿನಲ್ಲಿ ಆಚಾರ್ಯರುಗಳ ಚರಿತ್ರೆಯನ್ನೂ ಶೋಧಿಸುವವರಿಗೆ ವಿಮರ್ಶೆ ಗೋಸ್ಕರವಾಗಿ ಆಗಾಗ ತಿಳಿದುಬಂದ ವಿಷಯಗಳನ್ನು ಹಾಗೆಯೇ ಪ್ರಕಟಿಸಲಾಗಿದೆ. ಹೀಗೆ ಸಿಕ್ಕುವ ಎಲ್ಲ ಲೇಖನಗಳ ವಿಮರ್ಶೆಯಿಂದ ನಿಜ ಚರಿತ್ರೆಯನ್ನೂ ಸಮಾಜವು ಕಂಡುಹಿಡಿಯಲಿಕ್ಕೆ ಬರುತ್ತದೆ. ಆ ಬಗ್ಗೆ ಪ್ರಕಾಶಕನ ಒಪ್ಪಿಗೆಯೂ ಇದೆ. ಒಟ್ಟಿನಲ್ಲಿ ನಿಜಾಂಶವು ಕೊನೆಯಲ್ಲಿ ಹೊರಗೆ ಬರಲಿ ಎಂಬುದೇ ಪ್ರಕಾಶಕನ ಉದ್ದೇಶವಾಗಿದೆ.

(ಸಂಚಿಕೆ–೧೫೧)

# ಓರ್ವಾಯಿ ಶಾಸನ
## (ಕ್ರಿ. ಶ. ೧೨೧೭ ?)

[ಬಳ್ಳಾರಿ ಜಿಲ್ಲಾ, ಅದೇ ತಾಲೂಕು ಓರ್ವಾಯಿ ಗ್ರಾಮದ ಬೆನಕಪ್ಪ ದೇವ ಸ್ಥಾನದ ಮುಂಭಾಗದಲ್ಲಿರುವ ಈ ಶಾಸನವನ್ನು ಶ್ರೀ ಚ. ರವರು ಪ್ರಕಟಿಸಿ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿರುವ ಅಂಶ ಈ ಕೆಳಗೆ ಇದೆ.]

"ಸ್ವಸ್ತಿಶ್ರೀಮತು ಯಾದವನಾರಾಯಣಂ ಪ್ರತಾಪ ಚಕ್ರವರ್ತಿ ಹೊಯ್ಸಳ ವೀರಬಲ್ಲಾಳದೇವರಾಜ್ಯ ಸಮುದ್ಧರಣ ಬಸವಣ ದಂಡನಾಯಕ ಗುಣಪ್ರಭಾವ ವೆಂತೆಂದಡೆ—

ವೃತ್ತ : ನುಡಿವಂ ಸತ್ಯವಚೋಕ್ತಿಯಂ ಸಕಳಧರ್ಮ್ಮಂವ್ಯಾಪ್ತಿಯಿಂದರ್ಥಮಂ,
ಪಡೆವಂ ವಿಪ್ರಸುರಾದಿ ಶಿಷ್ಟ ಜನತಾ ಸಂತುಷ್ಟಿ ಯಾಗಲ್ಕೆ ತಾಂ,
ಕುಡುವಂ ದ್ರವ್ಯಮನೀಗುಣಾಶ್ರಯಮುಮಂ ಲೋಕಂಬ
'ಬಾ'(ಲಾ?)ಪ್ಪೆಂಬಿನಂ,
ಪಡೆದಂ ಸದ್ಗುಣಿದಂಡನಾಥ ಬಸವಂ ಪ್ರಖ್ಯಾತಿಯಂ ಕೀರ್ತಿಯಂ

ಕಂದ : ಕಲಿಯುಮ್ನೃಡದಂಡನಾಥರ
ಲಲಿತಾತ್ಮಜನೆಂದೊಡೊಪ್ಪುಗುಂ ಕಲಿತನಮುಂ
ಸಲೆ ಸತ್ಯಾಮೃತವಾಕ್ಯಂ
ಕುಲತಿಲಕಂ ಬಸವದಂಡನಾಥಾಧಿಪನೊಳ್.

ಶ್ರೀಮದೀಶ್ವರ ಸಂವತ್ಸರ ಶ್ರಾವಣ ಬಹುಳ ಅಮಾವಾಸ್ಯೆ ಶುಕ್ರವಾರ ಸೂರ್ಯ ಗ್ರಹಣದಂದು ಶ್ರೀ ವಿನಾಯಕ ದೇವರ್ಗ್ಗಾರಣಧವಳೆ ಬಸವಚಮೂಪಂ ಧಾರಪೂರ್ಬಕಂ ಮಾಡಿಕೊಟ್ಟ ಕೆಯಿತೆಂಕವೊಲದಲ್ಲಿ ಚಿಕ್ಕಡ್ಡದಾರಿಯಿಂ ಬಡಗಲಿಖ್ಖಡಗಲಾಗಿ ಹಿರಿಯ ಕೋಲ ೨ । ಇಂತಿನಿತು ಹಿರಿಯ ಕೋಲ ಮತ್ತರುಗಳ ಊರ ಪಿಂತಣ ತೋಟ ೧ ಇಂತೀ ವಿನಾಯಕ ದೇವಸ್ಥಾನಮಂ ಭೀಮರಾಶಿ ಗುರುಗಳ ದೀಕ್ಷೆಯಮಗಂ ಚೀಲ ರಾಶಿಗುರುಗಳ್ಗೆ ದೇವ ಬ್ರಾಹ್ಮಣಪಾದಾರಾಧಕನಪ್ಪ ಬಲಿಯೋಜಸೆಟ್ಟಿ ಧಾರಾಪೂರ್ಬ ಕಂಮಾಡಿ, ಚೀಲರಾಶಿಗೆ ಕೊಟ್ಟನು. ಕುರಿಗೋಡ ಕಂಪಿಲೆಯ ಸ್ಥಳವುಂ ವಾ ಯೋ ಹರೇತಿವಸುಂ ಧರಾಂ ಷಷ್ಟಿರ್ವರ್ಷ ಸಹಸ್ರಾಣಿ ಇಷ್ಟಾಯಾಂ ಜಾಯಿತೇ ಜಾಯಿತೇ ಕ್ರಿಮಿಃ (South Indian Inss Vol. IX Part I Page 35:-ನವಸಂದೇಶ ಪತ್ರಿಕೆಯಲ್ಲಿ ೨೬-೫-೫೪ ರಲ್ಲಿ ಪ್ರಕಟವಾದುದು.)

## ಪ್ರತಿಕ್ರಿಯೆ

ಈ ಶಾಸನದಲ್ಲಿ ಹೇಳಲ್ಪಟ್ಟ ದಂಡನಾಥ ಬಸವಣ್ಣನು ಕಲ್ಯಾಣದ ಕಲಚುರ್ಯ ಚಕ್ರವರ್ತಿ ಬಿಜ್ಜಳ ಮಹಾರಾಜನಲ್ಲಿ ಮಹಾಪ್ರಧಾನವಾಗಿ ಕೆಲಸ ಮಾಡಿದ ವೀರಶೈವ ಮಹೋತೋದ್ಧಾರಕ ಬಸವಣ್ಣನಲ್ಲ. ಇದರಲ್ಲಿನ ಕಂದ ಪದ್ಯದಲ್ಲಿ ಈ ಬಸವಣ್ಣ ದಂಡನಾಥನು ಅಮೃತದಂಡನಾಥನ ಮಗನೆಂದು ಹೇಳಲ್ಪಟ್ಟಿದೆ. ಆ ಕಂದ ಪದ್ಯದ ಅನ್ವಯಾನುಸಾರ ಅರ್ಥ ಇದು : ಕಲಿಯಾದ ಅಮೃತ ದಂಡನಾಥರ ಮನೋಹರ ನಾದ ಮಗನು ಇವನೆಂದರೆ ಒಪ್ಪುತ್ತದೆ. ಏಕೆಂದರೆ ಈ ಬಸವಣ್ಣನಲ್ಲಿ ಕಲಿತನವಿದೆ ಸತ್ಯವುಳ್ಳ (ನಿಜ ಹೇಳುವುದು) ಅಮೃತಸ್ವರೂಪವಾದ ವಾಕ್ಯವು ಚೆನ್ನಾಗಿದೆ. ಇವನು ಕುಲತಿಲಕನು.

ಕಲಿಯಾದ ಅಮೃತ ದಂಡನಾಥನ ಹೆಸರಿಗೆ ತಕ್ಕಂತೆ ಕಲಿತನವೂ ಸತ್ಯವಾಕ್ಯವೆಂಬ ಅಮೃತವೂ ಇವನಲ್ಲಿ ಇರುವುದರಿಂದ ಇವನು ಅಮೃತ ದಂಡನಾಥನ ಮಗ ಎಂದು ಕರೆಯುವುದಕ್ಕೆ ಅನ್ವರ್ಥಕರೂಪದಲ್ಲಿ ಇದ್ದಾನೆ ಎಂದು ವರ್ಣಿತನಾಗಿದ್ದಾನೆ. ಕಲ್ಯಾಣದ ಬಸವೇಶ್ವರನು ಅಮೃತದಂಡನಾಥನ ಮಗನೂ ಅಲ್ಲ. ಆ ಅನ್ವರ್ಥಕನಾಮದವನೂ ಅಲ್ಲ. ಇದಲ್ಲದೆ ಈ ಶಾಸನದ ಬಸವಣ್ಣನು ತನ್ನ ಕುಲಕ್ಕೆ ತಿಲಕನಾಗಿದ್ದಾನೆ. ಕಲ್ಯಾಣದ ಬಸವೇಶ್ವರನು ತನ್ನ ಪೂರ್ವ ಕುಲವನ್ನು ತ್ಯಜಿಸಿದವನು. ಈ ಕಾರಣಗಳಿಂದ ಇವನು ಪ್ರತ್ಯೇಕನು, ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ.

ಈ ಓರ್ವಾಯಿ ಬೆನಕಪ್ಪನ ಶಾಸನದ ವಿಷಯವಾಗಿ ಕೆಲವು ಸಂಗತಿಗಳು 'ಬಸ ವೇಶ್ವರನ ಕಾಲ' ಎಂಬ ಪುಸ್ತಕದ ೯೬ ಮತ್ತು ೧೧೧-೧೩ ಪುಟಗಳಲ್ಲಿ ಹೇಳಲ್ಪಟ್ಟಿವೆ. ಅಲ್ಲಿಯೂ ಓರುವಾಯಿ ಶಾಸನದ ಬಸವಣ್ಣನು ವೀರಶೈವ ಬಸವಣ್ಣನಲ್ಲ ಎಂಬುದನ್ನು ತೋರಿಸಿ ಇದೆ.

ಈ 'ಬಸವೇಶ್ವರನ ಕಾಲ' ಎಂಬ ಪ್ರಸಕ್ತದಿಂದ ನಿರ್ಧರವಾದಂತೆ ಕ್ರಿ.ಶ. ೧೧೦೬ ರಲ್ಲಿ ಹುಟ್ಟಿದ ವೀರಶೈವ ಪೂಜ್ಯನಾದ ಬಸವೇಶ್ವರನು ಕ್ರಿ. ಶ. ೧೨೧೭ ರಲ್ಲಿ ದಂಡನಾಥ ನಾಗಿ ಇದ್ದನೆಂದು ಹೇಳುವುದು ಅಸಂಭವ. ಏಕೆಂದರೆ ಅವನಿಗೆ ಆಗ ೧೧೧ ವರ್ಷ ವಯಸ್ಸಾಗುತ್ತದೆ. ಕ್ರಿ. ಶ. ೧೧೪೨ರ ಮುನಗೋಳಿ ಶಾಸನ(ಮಣಿಗವಳ್ಳಿ ಶಾಸನ) ದಂತೆ ಸದಾಚಾರವುಳ್ಳವನು ಲಕ್ಷಣವು ಇಲ್ಲಿ ತೋರುವುದಿಲ್ಲ. ಇವನು ಕಲಿ, ಸತ್ಯ ವಂತ, ತನ್ನ ಕುಲಕ್ಕೆ ತಿಲಕ ಎಂಬ ಮೂರು ಗುಣಗಳು ಇಲ್ಲಿ ಹೇಳಲ್ಪಟ್ಟಿರುವುದರಿಂದ ಗುಣತ್ರಯಾತೀತನಾದ ಬಸವೇಶ್ವರನಿಗೆ ಈ ಶಾಸನವು ಸ್ವಲ್ಪವಾದರೂ ಸಂಬಂಧಿಸ ಲಾರದು.

ಈ ಶಾಸನದ ವೃತ್ತದಲ್ಲಿ ಈ ಬಸವಣ್ಣನು 'ವಿಪ್ರಸುರಾದಿ ಶಿಷ್ಟಜನತಾ ಸಂತುಷ್ಟಿ ಯಾಗಲ್ಕೆ ತಾಂಕುಡುವಂ ದ್ರವ್ಯವನು' ಎಂದಿದೆ ಮತ್ತು 'ಸಕಲ ಧರ್ಮ ವ್ಯಾಪ್ತಿಯಿಂ ದರ್ಥಮುಂ' ಎಂದಿದೆ.

ಮಣಿಗವಳ್ಳಿ ಶಾಸನದಲ್ಲಿ 'ಪರಹಿತದೊಳ್ ಪರಾಕ್ರಮದೊಳೂರ್ಜಿತಶಕ್ತಿಯೊಳ್ ಮಹೇಶ್ವರ ಪದ ಭಕ್ತಿಯೊಳ್ ತನಗೆ ಪಾಸಟಿಯಾರ್ ಪರರೆಂಬ ಹೆಮ್ಮೆಯೊಳ್ ನೆರೆದು' ಎಂಬುದಾಗಿ ಬಸವೇಶ್ವರನು ವರ್ಣಿತನಾಗಿದ್ದಾನೆ. 'ಸದಾಚಾರತೆಯಿಂ ಜಸಮಂ ಬಸವಂ ನಿಮಿರ್ತಿ' ಎಂದೂ, 'ಉರ್ವೀಚಕ್ರನುತಗುಣಾಬ್ಧಿ' ಎಂದೂ ಹೊಗಳಲ್ಪಟ್ಟಿದ್ದಾನೆ. ಬಸವೇಶ್ವರನ ಭಕ್ತಿಯ ಪ್ರಾಧಾನ್ಯತೆಯು ಜಗತ್ಪ್ರಸಿದ್ಧವಾಗಿದೆ. ಭಕ್ತಿವಂತನೆಂಬ ವಿಷಯವು ಮಣಿಗವಳ್ಳಿಯ ಶಾಸನದಿಂದ ತಿಳಿಯುವಂತೆ ಓರ್ವಾಯಿಯ ಶಾಸನದಿಂದ ತಿಳಿಯುವುದಿಲ್ಲ. ಧರ್ಮಾದಿ ವ್ಯಾಪನೆಯಿಂದ ದ್ರವ್ಯವನ್ನು ಪಡೆದವನು ಎಂದರೆ ಧರ್ಮದಿಂದ ಧನವನ್ನು ಗಳಿಸುವವನು ಎಂದು ಓರ್ವಾಯಿ ಶಾಸನದ ಬಸವಣ್ಣನು ಹೇಳಲ್ಪಟ್ಟಿದ್ದಾನೆಯೇ ಹೊರತು ಧರ್ಮದಲ್ಲಿ ಆಚರಿಸುತ್ತಾನೆ ಎಂದು ಕೂಡ ಹೇಳಲ್ಪಟ್ಟಿಲ್ಲ. ಮುನಗವಳ್ಳಿ ಬಸವಣ್ಣನಿಗೆ ಭೂಮಂಡಲವು ನುತಿಸುವ ಗುಣಗಳ ಸಾಗರನು ಎಂದು ಕರೆದರೆ ಓರ್ವಾಯಿ ಶಾಸನದ ಬಸವಣ್ಣನು ಕೆಲವೇ ಗುಣಗಳುಳ್ಳವನಾಗಿ ಕಂಡುಬರುತ್ತಾನೆ.

ಬಳ್ಳಿಗಾವೆಯ ಶಾಸನದಲ್ಲಿ (ಕ್ರಿ. ಶ. ೧೧೬೧ ಅನವಟ್ಟಿಗೆ ಹೋಗುವ ರಸ್ತೆಯ ಪಕ್ಕದಲ್ಲಿ ಇರುವುದು) "ನಿಜೇಷ್ಟ ವಿಶಿಷ್ಟ ಜನಕ್ಕೆ ಸತ್ಕುಲ ಪ್ರಸವಜನಕ್ಕೆ ಕಸಪಯ್ಯನ ನಿರೀಕ್ಷಣ ಮಾತ್ರದಿಂದ ಕಸವು ಬಂಗಾರವಾಗುತ್ತದೆ" ಎಂಬ ವಾಕ್ಯವನ್ನು ವಿವರಿಸುವಾಗ ಇಷ್ಟವಿಶಿಷ್ಟರು ಇಷ್ಟಲಿಂಗವಂತರೆಂದೂ ಸತ್ಕುಲಪ್ರಸವರು ಬ್ರಾಹ್ಮಣರೆಂದೂ ಅರ್ಥವನ್ನು ಬರೆದು ಇಬ್ಬರಿಗೂ ಕಸಪಯ್ಯನು ಸಹಾಯ ಮಾಡುತ್ತಿದ್ದನೆಂದು ತೋರಿಸಿ ಇದೆ. ('ಬಸವೇಶ್ವರನ ಕಾಲ' ಎಂಬ ಗ್ರಂಥದ ಪುಟ ೧೦೭) ಈ ಓರ್ವಾಯಿ ಶಾಸನದ ಬಸವಣ್ಣನೂ ವಿಪ್ರಸುರಾದಿ ಶಿಷ್ಟಜನತಾ ಸಂತುಷ್ಟಿಯಾಗಲು ದಾನವನ್ನು ಕೊಡುವವನೆಂದೂ ಮೇಲೆ ಹೇಳಿರುವುದರಲ್ಲಿ ವಿಪ್ರ ಎಂದರೆ ಬ್ರಾಹ್ಮಣರೆಂದೂ, ಸುರರು ಎಂಬಲ್ಲಿ ರುದ್ರದೇವ, ಅಮುಗಿದೇವ, ರೇಣುಕದೇವರು, ಪ್ರಭುದೇವರು ಮುಂತಾಗಿ 'ದೇವ' ಎಂಬ ಮುಂದಿನ ಪದವುಳ್ಳ ಹೆಸರುಗಳಿಂದ ವೀರಶೈವರು ಕರೆಯಲ್ಪಡುವುದರಿಂದ ಆ ಪದವು ವೀರಶೈವರಿಗಾಗಿ ಉಪಯೋಗಿಸಲ್ಪಟ್ಟಿರುವುದೆಂದೂ, ತಿಳಿಯುವುದಾದರೆ ಈ ಬಸವಣ್ಣನೂ ಇಬ್ಬರಿಗೂ ದಾನ ಮಾಡುತ್ತಿದ್ದನೆಂದೂ ತಿಳಿಯಬಹುದಾಗಿದೆ. ಆ ಕಾಲದಲ್ಲಿ ಬ್ರಾಹ್ಮಣರೂ ವೀರಶೈವರೂ ಸಮಾಜದಲ್ಲಿ ಬಹಳ ಮುಖ್ಯರೆಂದು ತಿಳಿಯುವಂತೆ ಆಗಿದ್ದರೆಂದೂ ಯೋಚಿಸಬೇಕಾಗಿದೆ. ಇದೊಂದು ಹೋಲಿಕೆಯಿಂದಲೇ ಇಬ್ಬರು ಬಸವಣ್ಣಗಳೂ ಒಂದೇ ವ್ಯಕ್ತಿ ಎಂದು ಯೋಚಿಸುವುದು ಸರಿಯಾಗಿಲ್ಲ. ಅಮೃತ ದಂಡನಾಥನ ಮಗನು ಓರ್ವಾಯಿ ಶಾಸನದ ಬಸವಣ್ಣನಾದರೆ 'ಹುರ್ವಿವ'-ಎಂಬ ಅಡ್ಡ ಹೆಸರುಳ್ಳ ಗೋವರ್ಧನನ ಮಗ ಹುಳಿಧನೆಂಬುವನ ಮಗನಾದ ಚಂದಿಮರಸನ ಮಗನೆಂದು ಮಣಿಗವಳ್ಳಿಯ ಬಸವೇಶ್ವರನು ಹೇಳಲ್ಪಟ್ಟಿದ್ದಾನೆ. ಈ ಎಲ್ಲ ಕಾರಣಗಳಿಂದ ಕಲ್ಯಾಣದ ಬಸವೇಶ್ವರನೇ ಬೇರೆ ಓರ್ವಾಯಿ ಶಾಸನದ ಬಸವಣ್ಣನೇ ಬೇರೆ ಎಂಬುದನ್ನು ಚೆನ್ನಾಗಿ ತಿಳಿಯಲಿಕ್ಕೆ ಬರುವಂತೆ ಇದೆ. (ಸಂಚಿಕೆ ೧೨೩)

# ಓರ್ವಾಯಿ ಶಾಸನದ ಬಸವದಂಡನಾಥನು ಕಲ್ಯಾಣದ ಬಸವೇಶ್ವರನೇನು ?

ಹೊಯ್ಸಳ ರಾಜ್ಯದ ವೀರಬಲ್ಲಾಳನ ಕಾಲದಲ್ಲಿ (ಕ್ರಿ. ಶ. ೧೨೨೦) ಈಶ್ವರ ಸಂವತ್ಸರದಲ್ಲಿ ಬರೆಯಲ್ಪಟ್ಟ ಬಳ್ಳಾರಿ ಜಿಲ್ಲಾ ಓರ್ವಾಯಿ ಗ್ರಾಮದ ಬೆನಕಪ್ಪನ ಗುಡಿಯಲ್ಲಿನ ಶಾಸನದಲ್ಲಿ ಕಂಡ ದಂಡನಾಥ ಬಸವಣ್ಣನೇ ಎಂದು ಪ್ರಕಟಿಸಲಾರಂಭವಾಗಿದೆ. (ನವಸಂದೇಶ ೧೭–೬–೫೪ ಮುಂತಾದುವು)

ಈ ಶಾಸನದ ಪೂರ್ಣಪ್ರತಿಯನ್ನು ಸದ್ಧರ್ಮದೀಪಿಕೆಯ ೧೨೩ನೆಯ ಸಂಚಿಕೆಯಲ್ಲಿ ಕೊಡಲಾಗಿದೆ. ಈ ಶಾಸನದಲ್ಲಿನ ಕಂದಪದ್ಯದಲ್ಲಿ "ಕಲಿಯಮೃತದಂಡನಾಥರ ಲಲಿತಾತ್ಮಜನೆಂದೊಡೊಪ್ಪಗುಂ" ಎಂಬುದಾಗಿ ಬಸವಣ್ಣನು ಹೊಗಳಲ್ಪಟ್ಟಿದ್ದಾನೆ. ಅಮೃತದಂಡನಾಥರ ಮಗನೆಂಬ ಅಭಿಪ್ರಾಯಕ್ಕೆ ಒಪ್ಪದೆ 'ಅಮೃತದಂಡನಾಥ' ಎಂಬ ವ್ಯಕ್ತಿಯೊಬ್ಬನಿರುವುದು ಸಂಶಯವೆಂದೂ ಮಗನೆಂಬ ಅಭಿಪ್ರಾಯವು ಅದರಿಂದ ಆಗುವುದಿಲ್ಲವೆಂದೂ ಸತ್ಯವಾಕ್ಯವೆಂಬ ಅಮೃತರೂಪ ಎಂದು ತಿಳಿಯಬೇಕೆಂದೂ ಇದು ಕಲ್ಯಾಣದ ಬಸವೇಶ್ವರನಿಗೆ ಅನ್ವಯವಾಗುವುದೆಂದೂ ಕಲಚುರ್ಯ ರಾಜ್ಯದಿಂದ ಗಡಿಪಾರಾದ ಮೇಲೆ ೫೦ ವರ್ಷಗಳ ತರುವಾಯ ಆಕಸ್ಮಿಕವಾಗಿ ಓರ್ವಾಯಿ ಶಾಸನದಲ್ಲಿ ಕಲ್ಯಾಣದ ಬಸವೇಶ್ವರನೇ ಕಾಣಿಸಿಕೊಂಡಿದ್ದಾನೆ ಎಂದೂ ಪ್ರತಿಪಾದಿಸಲ್ಪಟ್ಟಿದೆ.

ಇದಕ್ಕೆ ಸಮಾಧಾನವೀರೀತಿ : ವೀರಬಲ್ಲಾಳರಾಯನ ರಾಜ್ಯದಲ್ಲಿ 'ಅಮೃತದಂಡನಾಥ' ಎಂಬುವನು ಅಧಿಕಾರಿಯಾಗಿದ್ದುದು ನಿಜ ಎಂದು ತಿಳಿದುಬರುವಂತೆ ಇವನು ಕಡೂರು ಡಿಸ್ಟ್ರಿಕ್ಟಿನ ಶಾಸನದ ಪುಸ್ತಕದಲ್ಲಿ (E. P. Car : VI) ಕಡೂರು ತಾಲೂಕು ೩೬ನೆಯದಾದ ವಕ್ಕಲುಗೆರೆ ಶಾಸನದಲ್ಲಿ ವರ್ಣಿತನಾಗಿದ್ದಾನೆ. ಅಲ್ಲಿ ಹೀಗೆ ಇದೆ—

ಕಂದ ॥ ಎಸೆವೀ ಹರಿಯಮಸೆಟ್ಟಿಗೆ ।
ಮಿಸುಗುವ ಸುರ್ಗವ್ವೆಗೊಗೆದರಮೃತ ಚಮೂನಾ- ।
ಥಸಮೇತಂ ಕಲ್ಲಯ್ಯಂ
ಮಸಣಯ್ಯಂ ಬಸವಯ್ಯನೆಂಬ ನಾಲ್ವರ್ ತನಯರ್ ॥

ವೃತ್ತ ॥ ಎಸೆವೀಬಲ್ಲಾಳವಾಣೀಪತಿಗೆ ಮೀಸುಪನಾಲ್ಕುಂ ಮೊಗಂ ವೀರಬಲ್ಲಾ ।
ಳಸರೋಜಾಕ್ಷಂಗೆ ನಾಲ್ಕುಂ ಭುಜಂ ತುಜ ರಯಸಾಭಾಬಲ್ಲಾಳ ಭೂಭೃತ್ ।
ವಸುಧಾಚಕ್ರಕ್ಕೆ ನಾಲ್ಕು ಜಳಧಿ ಅಮೃತದಂಡಾಧಿಪಂ ಮಂತ್ರಿಕಲ್ಲಂ ।
ಮಸಣಯ್ಯಂ ದಂಡನಾಥಂ ಬಸವನುರುವಚೋವೀರಗಾಂಭೀರ್ಯದಿಂದಂ ॥

ಕಂದ ॥ ತನ್ನೆಸೆವ ಜನ್ಮಭೂಮಿಜ
ಗನುತಮಾ ಲೊಕ್ಕಗುಂಡಿ ಪೃಥ್ವಿಗೆ ಸಲೆಯೊ- ।
ಳ್ಪಿಂನೆಗಳ್ದನಲ್ಲಿ ಪುಟ್ಟಿದ
ಹೊನ್ನಂತಿರೆ ತೊಳಗುವಮೃತ ದಂಡಾಧಿಪಂ

(ಈ ಶಾಸನದ ಕಾಲ ಶಾ. ಶ. ೧೧೨೭; ಕ್ರಿ. ಶ. ೧೨೦೫)

ಇವುಗಳನ್ನು ನೋಡಿದರೆ ಮೇಲೆ ಕಂಡ ಓರ್ವಾಯಿ ಶಾಸನದ ಕಾಲದಲ್ಲಿ ಅಮೃತದಂಡಾಧೀಶನಿದ್ದನೆಂದೂ ಓರ್ವಾಯಿ ಶಾಸನದಲ್ಲಿ ಹೇಳಲ್ಪಟ್ಟ ವೀರಬಲ್ಲಾಳನ ಕಾಲದಲ್ಲಿಯೇ ಅವನಿದ್ದುದು ನಿಜ ಎಂದೂ ವ್ಯಕ್ತವಾಗುತ್ತದೆ. ಇದಲ್ಲದೆ ಕಡೂರು ತಾಲೂಕಿನ ೪೫ನೆಯ ಶಾಸನದಲ್ಲಿಯೂ ಅಮೃತದಂಡನಾಥನ ಹೆಸರಿದೆ. ಈ ದೆಸೆಯಿಂದ ಓರ್ವಾಯಿ ಶಾಸನದಲ್ಲಿ ಕಂಡ ಅಮೃತದಂಡನಾಥ ಎಂಬವನೊಬ್ಬನು ಇದ್ದನೆಂದು ನಿರ್ಧಾರ ಮಾಡಲಾತಂಕವೇನೂ ಇಲ್ಲ.

ಈ ಅಮೃತದಂಡನಾಥನು ನಾಲ್ವರು ಸಹೋದರರಲ್ಲಿ ಹಿರಿಯನು. ಇವನ ತಮ್ಮಂದಿರು ಕಲ್ಲಯ್ಯ (ಕಲಿದೇವ ಎಂದು ಇನ್ನೊಂದು ಶಾಸನ) ಮಸಣಯ್ಯ ಮತ್ತು ಬಸವಯ್ಯ ಎಂಬುವರು ಮೂವರಿದ್ದರು. ಇವರಲ್ಲಿ ಬಸವಯ್ಯನೇ ಬಸವದಂಡನಾಥ ನೆಂಬ ಹೆಸರುಳ್ಳವನು. ಇವನು ವಚನದಿಂದಲೂ ವೀರತ್ವದಿಂದಲೂ ಗಾಂಭೀರ್ಯ ದಿಂದಲೂ ಕೂಡಿದವನು ಎಂಬುದು ಮೇಲಿನ ಶಾಸನದಿಂದ ವ್ಯಕ್ತವಾಗುತ್ತದೆ. ಈ ನಾಲ್ವರೂ ವೀರಬಲ್ಲಾಳನೆಂಬ ಬ್ರಹ್ಮನಿಗೆ ನಾಲ್ಕು ಮುಖದಂತೆಯೂ, ಆ ವೀರ ಬಲ್ಲಾಳನೆಂಬ ಕೃಷ್ಣನಿಗೆ ನಾಲ್ಕು ಭುಜದಂತೆಯೂ ವೀರಬಲ್ಲಾಳನೆಂಬ ರಾಜನ ರಾಜ್ಯ ವೆಂಬ ಚಕ್ರಕ್ಕೆ ನಾಲ್ಕು ಸಮುದ್ರಗಳಂತೆಯೂ ಇದ್ದರು ಎಂಬುದರಿಂದ ಅವರಲ್ಲಿನ ಬಸವದಂಡನಾಥನೂ, ವೀರಬಲ್ಲಾಳನಿಗೆ ಮುಖ್ಯ ಸಹಾಯಕನಾಗಿದ್ದನೆಂದು ನಂಬಲನು ಮಾನವೇನೂ ಇಲ್ಲ.

ಓರ್ವಾಯಿ ಶಾಸನದಲ್ಲಿ 'ಕಲಿತನಮುಂಸಲೆ ಸತ್ಯಾಮೃತವಾಕ್ಯಂ ಕುಲತಿಳಕಂ ಬಸವದಂಡನಾಥಾಧಿಪನೊಳ್ ಒಪ್ಪುಗುಂ' ಎಂದು ಹೇಳಿದಂತೆಯೇ ಮೇಲಿನ ಶಾಸನವೂ 'ಉರುವಚೋವೀರ ಗಾಂಭೀರ್ಯದಿಂದಂ' ಕೂಡಿದವನೆಂದು ಹೇಳುತ್ತದೆ.

ಈ ಕಾರಣಗಳಿಂದ ಓರ್ವಾಯಿ ಶಾಸನದ ಬಸವದಂಡನಾಥನೇ ಈ ಪಕ್ಕಲುಗೆರೆ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ ಎಂದೂ, ಈ ಎರಡೂ ಶಾಸನಗಳಲ್ಲಿ ಹೇಳಲ್ಪಟ್ಟ ವ್ಯಕ್ತಿ ಯೊಬ್ಬನೇ ಎಂದು ನಿರ್ಧರಿಸಲಿಕ್ಕೆ ಬರುವಂತೆ ಇದೆ.

ಇದಲ್ಲದೆ ಈ ಬಸವದಂಡನಾಥನು ಮೇಲೆ ಕಂಡ ಶಾಸನದ ಪುಸ್ತಕದಲ್ಲಿ ತರಿಕೆರೆ ತಾಲ್ಲೂಕು ೪೫ನೆಯ ಅಮೃತಾಪುರದ ಶಾಸನದಲ್ಲಿ ಈ ಬಸವದಂಡನಾಥನು ಹೇಳಲ್ಪ ಟ್ಟಿದ್ದಾನೆ. ಅಲ್ಲಿ ಅವನ ವರ್ಣನೆ ದೊರೆಯುತ್ತದೆ. ಅದು ಹೀಗೆ ಇದೆ—

ಬಸವದಂಡೇಶ ಚೂಡಾಮಣಿ ಧವಳಂ ಗಂಡಭೇರುಂಡನೊಲ್ದ
ರ್ಥಿಸಿ ಬಂದಂಗಾಂತು ನಿಂದಂಗಗಿದು ಶರಣಮೆಂದಂಗೆ
ಭೂಚಕ್ರದೊಳ್ ಮಾ- ।
ನಸರೂಪಿಂದಿರ್ದ ಚಿಂತಾಮಣಿ ನೃಪಸಚಿವಾಕಾರದಿಂದಿರ್ದ
ವಿದ್ಯಾಧರೇಂದ್ರಂ ।
ತಸಮುದ್ಯದ್ ವಹ್ನಿನಣ್ಪಿಂದಮಿತನಣುಗನಾಗಿರ್ದ ವಿದ್ಯಾಧರೇಂದ್ರಂ ।
ಕಳದೊಳ್ ಕಟ್ಟಂಕನೊಳ್ ಬಂದಡಸಿದ ಬಯಲೊಳ್ ಬಾಸೆಯೊಳ್
ಕೋಟಿಯೊಳ್ದೋ ।
ರ್ವಳದೋಳ್‌ತಳ್ತಾಂಕೆಯೊಳ್ ಕೈದೆಗೆಯದ ಭರದೊಳ್
ಪೂಣ್ಕೆಯೊಳ್‌ನಚ್ಚಿನಾಳ್ ಮಾ
ರ್ಬಳದೊಳ್ ಕಣ್ಣುಳ್ಳುವಾಳ್ ಹೊಯ್ಸಳನ ಕಟದೊಳ್ ತಾನೆ
ಸಂವಗ್ವದಾಳ-
ಗ್ಗಳದಾಳ್ ಬಲ್ಲಾಳ ದೇವಂಗಮಿತನೆ ಬಸವಂ ದಂಡನಾಥತ್ರಿಣೇತ್ರಂ ।
ಬಸವಂ ಬಲ್ಲಾಳ ದೇವಂಗಮಿತನೆ ಬಲದೊಳ್‌ತೋಳ್ಗೆ
ಸಂದಿರ್ದಕೂರ್ಬಾಳ್ ।
ಬಸವಂ ಬಲ್ಲಾಳನಾಸ್ಥಾನಯಿಕೆಗಮಿತನೆದೀಪಂ ಪಾದೀಪಕ್ಕೆ ತೇಜಂ ।
ಬಸವಂ ಬಲ್ಲಾಳ ರಾಜ್ಯಕ್ಕಮಿತನೆಮುಖಮುಂತಾ ಮುಖಶ್ರೀಗೆನೇತ್ರಂ ।
ಬಸವಂ ಮುಖ್ಯ ಪ್ರಭಾವಕ್ಕರಿವರೆನೆಮತ್ತಾರುವಂ ಪೇಳಮಿಂಟೆ !

ಕಂದ ॥ ಮೂವರು ಮನುಜಾತರಿಗೈ- ।
ರಾವತದಿಂದಮೃತ ಕಿರಣನಿಂ ಕೌಸ್ತುಭದಿಂ ।
ದೇವಾವನಿಜ ಮೆಸೆವವೊ- ।
ಲೀವ ಸುಧಾ ಕಳದೊಳೆಸೆವ ನಮಿಕಚಮೂಪಂ ॥

(ಶಾಸನ ಕಾಲ ಕ್ರಿ. ಶ. ೧೧೯೬)

—ಮೇಲೆ ಕಂಡ ಅಮೃತ ದಂಡನಾಥನು ಲೊಕ್ಕೂಗುಂಡಿಯಲ್ಲಿ ಹುಟ್ಟಿದನೆಂಬುದು ಮೇಲಿನ ಶಾಸನದಿಂದ ತಿಳಿದುಬರುತ್ತದೆ. ಲೊಕ್ಕಗುಂಡಿಯು ಈಗಿನ ಲೊಕ್ಕುಂಡಿ ಅಥವಾ ಲಕ್ಕುಂಡಿ ಎಂದು ಕರೆಯಲ್ಪಡುವ ಗ್ರಾಮವಾಗಿರಬೇಕು. ಇದು ಓರ್ವಾಯಿ ಯಿರುವ ಬಳ್ಳಾರಿ ಜಿಲ್ಲೆಗೆ ಸಮೀಪದಲ್ಲಿರಬೇಕು. ಆಗ ಲಕ್ಕುಂಡಿ ಮತ್ತು ಓರ್ವಾಯಿ ಈ ಪ್ರಾಂತವೆಲ್ಲವೂ ವೀರಬಲ್ಲಾಳನಿಗೆ ಸೇರಿಸಬೇಕು. ಅಮೃತದಂಡನಾಥನ ಸಹೋದರ ಬಸವನೂ, ಈ ಪ್ರಾಂತದ ಅಧಿಕಾರಿಯಾಗಿರಬೇಕು. ಅದುದರಿಂದ ಓರ್ವಾಯಿ ಯಲ್ಲಿ ತನ್ನ ಹೆಸರಿನ ಒಂದು ಶಾಸನವನ್ನು ಬರೆಯಿಸಿದ್ದಾನೆ ಎಂಬುದು ವ್ಯಕ್ತ ವಾಗುವುದು.

ಓರ್ವಾಯಿ ಶಾಸನದ ಈ ಬಸವದಂಡನಾಥನು ಹೊಯ್ಸಳ ರಾಜ್ಯಕ್ಕೆ ಚಿರಪರಿಚಿತವಾಗಿ ಇದ್ದನೆಂದೂ ಆಕಸ್ಮಿಕವಾಗಿ ಕಂಡವನಲ್ಲ ಎಂದೂ ತನ್ನ ಮೂವರು ಸಹೋದರರೂ ಆ ರಾಜ್ಯದ ಉನ್ನತಿಗಾಗಿ ಕಾಣಿಸಿಕೊಂಡ ಕಲ್ಯಾಣದ ಬಸವಣ್ಣನಲ್ಲವೆಂದೂ ಚೆನ್ನಾಗಿ ವ್ಯಕ್ತವಾಗುತ್ತದೆ.

ಇನ್ನು ಓರ್ವಾಯಿಯ ಶಾಸನದಲ್ಲಿ "ಕಲಿಯಮೃತ ದಂಡನಾಥರ ಲಲಿತಾತ್ಮಜನೆಂದೊಡೊಪ್ಪುಗುಂ" ಎಂದರೆ, "ಅಮೃತನ ಮನೋಹರನಾದ ಮಗನೆಂದರೆ ಒಪ್ಪುತ್ತದೆ" ಎಂದು ಹೇಳಲಿಕ್ಕೆ ಕಾರಣವೇನು ? ಎಂದು ಯೋಚಿಸುವುದಾದರೆ, ಅಮೃತ ದಂಡನಾಥನ ಸಹೋದರರಲ್ಲಿ ಬಸವದಂಡನಾಥನು ಕಿರಿಯವನು (ಆದುದರಿಂದಲೇ ಅವನ ಹೆಸರು ಕಡೆಯಲ್ಲಿ ಬಂದಿದೆ) ಇವನು ತಮ್ಮನಾಗಿದ್ದರೂ ಕೂಡ ಕಲಿತನ, ಸತ್ಯವಾಕ್ಕು ಮುಂತಾದವುಗಳಲ್ಲಿ ಅವನ ಮಗನೇ (ಅವನ ಗಾಂಭೀರ್ಯ ಉಳ್ಳವನೇ" "ಅಮೃತದಂಡನಾಥನ ಪ್ರತಿರೂಪನೇ" ಎಂದರೂ ಒಪ್ಪುತ್ತದೆ, ಎಂಬ ಅಭಿಪ್ರಾಯದಲ್ಲಿ ಹೇಳಿದ್ದಾರೆ ಎಂದು ತಿಳಿಯಬೇಕಾಗುತ್ತದೆ.

ಈತನ ವಿಷಯಗಳನ್ನೆಲ್ಲ ತಿಳಿಯದವರು ಬಸವದಂಡಾಧೀಶನು ಅಮೃತದಂಡನಾಥನ ಮಗನೆಂದು, ಓರ್ವಾಯಿಯ ಶಾಸನದ ದೆಸೆಯಿಂದ ಹೇಳಬಹುದು. ಬಸವ ದಂಡನಾಥನೂ ಹಿರಿಯಣ್ಣನನ್ನು ತಂದೆ ಎಂದು ಗೌರವಿಸಿ ಶಾಸನವನ್ನು ಬರೆಯಿಸಿರಬಹುದು.

ತರಿಕೆರೆಯ ೪೫ನೆಯ ಶಾಸನದಲ್ಲಿ 'ರಣಧವಳಂ' ಎಂದು ಕಾಣುತ್ತಿರುವುದು 'ರಣಧವಳಂ' ಆಗಬೇಕು. ಶಾಸನದಲ್ಲಿ ಒಂದು ಅಕ್ಷರವು ಕಾಣುತ್ತಿರಲಾರದು. ವೃತ್ತದ ಛಂದಸ್ಸಿಗೂ ಹಾಗೆ ಮಾಡಿದರೆ ಬರಿಬರುತ್ತದೆ. ಬಸವದಂಡನಾಥನು 'ರಣಧವಳಂ ಅಮಿತನಣುಗಂ' (ಅಮೃತನ ಮಗನು) ಎಂಬ ವಿಷಯಗಳೂ ಓರ್ವಾಯಿಯ ಶಾಸನದಂತೆ ಅಲ್ಲಿ ಇವೆ.

ಇದೇ ತರಿಕೆರೆ ತಾಲ್ಲೂಕು ಅಮೃತಾಪುರದಲ್ಲಿನ ನಂ. ೪೬ ನೆಯ ಶಾಸನದಲ್ಲಿ ಖಾಣ ಬಸವಯ್ಯನ ಮಗ ಅಮಿತಯ್ಯನು ಭಾವ ಸಂವತ್ಸರದಲ್ಲಿ (ಕ್ರಿ. ಶ. ೧೨೧೪) ವಿಜಯ ದಶಮಿ ಹಬ್ಬದ ದಿನ ಗುಜ್ಜರೊಡನೆ ಹೊಯ್ದಾಡಿ ಮಡಿದ ವಿಷಯವಿದೆ. ಈ ಬಸವಯ್ಯನು ಯಾರು ? ಎಂಬುದು ಶೋಧನೀಯವಾಗಿದೆ. ಆಗ ಬಸವಯ್ಯ ಎಂದು ಹೆಸರಿಡುವುದು ಬಹಳ ಪ್ರಬಲಕ್ಕೆ ಬಂದಿದ್ದಿತೆಂಬುದನ್ನು ತಿಳಿಯಬೇಕಾಗಿದೆ.

ಈ ಎಲ್ಲ ಕಾರಣಗಳಿಂದ ಓರ್ವಾಯಿ ಬಸವಣ್ಣನು ಕಲ್ಯಾಣದ ಬಸವನಲ್ಲ ಎಂಬುದು ಸ್ಪಷ್ಟ. ವೀರಶೈವ ಸಮಾಜವು ಧಾರ್ಮಿಕ ಸಹಜ ಸಂಗತಿಗಳನ್ನು ತಿಳಿದು ಶಾಂತಿಯಿಂದಿರುವುದು ಅವಶ್ಯಕವಾಗಿದೆ. (ಸಂಚಿಕೆ ೧೨೩)

# ಶಿರಾಳಕೊಪ್ಪದ ಶಾಸನ

(ಶಿರಾಳಕೊಪ್ಪದ ಹಳೆಯೂರು ಮಾಸ್ತಿಹೊಂಡದ ಪೂರ್ವದಡದಲ್ಲಿ ಬಿದ್ದಿರುವ ಕಲ್ಲು)

ಈ ಕಲ್ಲು ಸುಮಾರು ಎರಡು ಮೊಳ ಉದ್ದ ಒಂದು ಮೊಳಕ್ಕಿಂತ ಸ್ವಲ್ಪ ಹೆಚ್ಚು ಅಗಲ ಇದೆ. ಕೆಳಗೆ ನೆಟ್ಟಿದ್ದು ಕೀಳಲ್ಪಟ್ಟಿರುವುದರಿಂದ ಅದರ ಅಳತೆಯೂ ಒಂದು ಮೊಳಕ್ಕೆ ಸ್ವಲ್ಪ ಹೆಚ್ಚು ಉದ್ದ ಇರುವುದಾಗಿ ಅಳತೆಯಾಗಿದೆ. –ಈ ಕಲ್ಲಿನ ಮೇಲ್ಭಾಗ ದಲ್ಲಿ ಗೋಪುರವಿದೆ. ಮಾಸ್ತಿ ಕಲ್ಲುಗಳಂತೆ ಕೈ ಕೆತ್ತಲ್ಪಟ್ಟಿದೆ. ಗಂಡಹೆಂಡಿರ ಚಿತ್ರ ಗಳಿವೆ. ಅದರ ಬರವಣಿಗೆ ಹೀಗಿದೆ—

ಸಾಲು (೧) ದುರ್ಮುಖಿ ಸಂವ ಫಾಲ್ಗುಣ ಬ ೨ ಬು. (೨) ಶ್ರೀಮಹಾ(?) ಪೊಣಗುಂದರಿಯಲ್ಲ-ಳ(?) ಗಾಉ (೩) ಡನ ಮಗಸಾ(?)ಯಿ ಗೌಡನು ಬಳಿ (೪) ಗಾವೆಯ ಕೊಪಳದಿಸ್ವರ್ಗಸ್ತನಾ (೫) ದ ಆತನ ಹೆಂಡತಿ ಸಾ(?)ಯಕ್ಕ (೬) ಮನ ದಂಮು ಸಮಾಧಿಯ ಮಾ (೭) ಡ್ಸಿಕೊಂಡಳು.

—ಇದು ಒಂದು ಮಾಸ್ತಿಯ ಕಲ್ಲು ಎಂಬುದು ಎಲ್ಲರಿಗೂ ಗೊತ್ತಾಗುವ ಸಂಗತಿ ಯಾಗಿದೆ. ಈ ಕಲ್ಲಿನಲ್ಲಿ ಕಾಣುವ ಪೊಣಗುಂದ ಎಂಬ ಊರು ಚರಿತ್ರೆಕಾರರು ಹುಡು ಕುವ ಒಳಗುಂದ ಎಂಬ ಊರು ಇದೋ ಏನೋ ಎಂಬುದನ್ನು ಶೋಧಿಸಿ ನೋಡ ಬೇಕಾಗಿದೆ. ಶಿರಾಳಕೊಪ್ಪಕ್ಕೆ 'ಸಿರಿವೊಳಲ್' 'ಶ್ರೀಪೊಳಲು' ಎಂದು ಕರೆದಿರುವುದು ಇಲ್ಲಿನ ಇತರ ಶಾಸನಗಳಿಂದ ವ್ಯಕ್ತವಾಗಿದೆ. ಈ ಶಾಸನದಿಂದ ಈ ಊರಿಗೆ 'ಬಳಿ ಗಾವೆಯ ಕೊಪಳ' ಎಂಬ ಹೆಸರೂ ಇರುವುದಾಗಿ ತಿಳಿಯಬರುತ್ತದೆ. ಗಂಡನು ಸತ್ತಾಗ ಹೆಂಡತಿಯನ್ನು ಚಿತೆಯಲ್ಲಿ ಸುಡುವುದು 'ಸಹಗಮನ' ಎನಿಸಿಕೊಳ್ಳುತ್ತದೆ. ಆದರೆ ಇಲ್ಲಿ ಗಂಡನು ಸತ್ತಾಗ ಹೆಂಡತಿಯೂ ಸಮಾಧಿಯನ್ನು ಮಾಡಿಸಿಕೊಂಡಿದ್ದಾಳೆ. ಆದು ದರಿಂದ ಈಕೆಯ ನೆನಪಿಗೆ ಮಾಸ್ತಿಕಲ್ಲು ನೆಡಲ್ಪಟ್ಟಿದೆ. ಈ ಕಲ್ಲು ನೆಟ್ಟಿರುವ ಹೊಂಡಕ್ಕೆ ಮಾಸ್ತಿಹೊಂಡ ಎಂಬ ಹೆಸರೂ ಇದೆ. ಮಾಸ್ತಿಕಲ್ಲುಗಳು ಇಂತಹವರಿಗಾಗಿಯೇ ನಡೆ ಸಲ್ಪಟ್ಟಿವೆಯೋ ಏನೋ ಶೋಧಿಸಲಾಗಿದೆ. ಈ ಕಲ್ಲಿನಲ್ಲಿನ 'ಕೊಪಳ' ಶಬ್ದವು 'ಕೊಪಣ' ಎಂದೂ ತಿಳಿಯಲಿಕ್ಕೆ ಬರುತ್ತದೆ. ಚರಿತ್ರೆಕಾರರು ಹುಡುಕುವ 'ಕೊಪಣ' ಎಂಬ ಊರು ಇದೇ ಇರಬಹುದೇ ? ಎಂಬುದನ್ನು ಶೋಧಿಸಬೇಕಾಗಿದೆ. ಇದರಲ್ಲಿ ಕಂಡ ಬಳಿಗಾವೆಯು ಬನವಾಸಿ ೧೨೦೦೦ಕ್ಕೆ ರಾಜಧಾನಿಯಾದ ಬಳಿಗಾವೆ (ಬಲಿಪುರ) ಆಗಿದೆ. ಅದರ ಮಗ್ಗುಲಲ್ಲಿಯೇ ಶಿರಾಳಕೊಪ್ಪ ಇದೆ. ಇದು ಪೂರ್ವದಿಂದಲೂ ಪ್ರಸಿದ್ಧಿಯಾದುದೆಂದು ಈಗ ತಿಳಿಯಬೇಕಾಗಿದೆ. ಈ ಬಳ್ಳಿಗಾವೆಗೆ ಸುಮಾರು ೩೦ ಮೈಲು ದೂರದಲ್ಲಿ ಬ್ಯಾಡಿಗಿಯ ಸಮೀಪದಲ್ಲಿ ಉಕ್ಕುಂದ ಎಂಬ ಗ್ರಾಮವಿದೆ. ಬಳ

ಗುಂದ ಎಂಬುದು ಇವೇ ಆಗಿರಬೇಕು. ಆಲೂರಿನ ಗೌಡನ ಮಗನೇ ಕೊಪಳದಲ್ಲಿ (ಶಿರಾಳಕೊಪ್ಪದಲ್ಲಿ) ಸ್ವರ್ಗಸ್ಥನಾದವನಾಗಿರಬೇಕು. (ಈ ಶಾಸನದಲ್ಲಿ ೨ನೆಯ ಸಾಲಿನಲ್ಲಿನ ಹಾ ಎಂಬಕ್ಷರ ಮತ್ತು ಳ ಎಂಬ ಅಕ್ಷರ ಮೂರನೆಯ ಸಾಲಿನಲ್ಲಿನ ಬಳಿ ಎಂಬ ಅರ್ಥ ಶಬ್ದದಲ್ಲಿನ 'ಳಿ' ಎಂಬ ಅಕ್ಷರ ಇವು ಪೂರ್ವಕಾಲದ ಹಾ ಮತ್ತು ಳ ಇವುಗಳನ್ನು ತೋರಿಸುವುದರಿಂದ ಈ ಶಾಸನವು ಪ್ರಾಚೀನ ಕಾಲದ್ದೆಂದು ತಿಳಿಯಲಿಕ್ಕೆ ಬರುವಂತೆ ಆಗಿದೆ) ಚರಿತ್ರೆಕಾರರು ಇನ್ನೂ ಶೋಧಿಸಿ ನೋಡಲಿ.

ಶ್ರೀ ಸ್ವಾಮಿಕನ್ನು ಪಿಳ್ಳೆಯವರ ಕಾಲಮಾನ ಪುಸ್ತಕ (Indian Ephemeris) ಪ್ರಕಾರ ದುರ್ಮುಖಿ ಸಂವತ್ಸರ ಫಾಲ್ಗುಣ ಬಹುಳ ೨ ಬುಧವಾರವು ಕ್ರಿ. ಶ. ೧೧೭೭ ನೆಯ ಫೆಬ್ರುವರಿ ೧೬ನೆಯ ಬುಧವಾರವಾಗುತ್ತದೆ. ಆ ದಿನದಲ್ಲಿ ಈ ಶಾಸನವು ಹುಟ್ಟಿತೆಂದು ಹೇಳಬಹುದಲ್ಲವೆ ?* (ಸಂಚಿಕೆ ೧೪೪)

* ಈ ಶಾಸನವನ್ನು ಶ್ರೀ ಚನ್ನಮಲ್ಲಿಕಾರ್ಜುನರು ೧೮-೫-೧೯೪೪ ರಲ್ಲಿ ಶಿರಾಳಕೊಪ್ಪದ ಎಣ್ಣೆ ಚನ್ನಪ್ಪನವರೊಡನೆ ಹೋಗಿ ನೋಡಿ ಓದಿಕೊಂಡು ಬಂದುದೆಂದು ತಿಳಿಸಿರುತ್ತಾರೆ.

# ಬಿಜ್ಜಿಗ ಶಿರಚ್ಛೇದಕ

[ಹುಲ್ಲೂರು ಶ್ರೀನಿವಾಸ ಜೋಯಿಸರು ಪ್ರಕಟಿಸಿದ ಈ ಶಿರೋನಾಮೆಯ ಶಾಸನಪ್ಥ ಲೇಖನಕ್ಕೆ ಶ್ರೀ ಚನ್ನಮಲ್ಲಿಕಾರ್ಜುನರ ಪ್ರತಿಕ್ರಿಯೆ ಇರುವುದನ್ನು ಈ ಕೆಳಗೆ ಅವಲೋಕಿಸಬಹುದು]

ಈ ವಿಷಯ ಒಂದು ಲೇಖನವನ್ನು ಹುಲ್ಲೂರ ಶ್ರೀನಿವಾಸ ಜೋಯಿಸರು ಚಿತ್ರದುರ್ಗ ಇವರು ಹೊರಗೆಡವಿರುತ್ತಾರೆ. ಆ ಪ್ರಕಾರ "ಕದನ ಕಂಠೀರವ ಮಾರ್ಕೋಲ ಭೈರವ, ಕರವಾಳ ಮಲ್ಲ, ವೈರಿಪೃಕ್ಸಲ್ಲ ಹಾಳಾಹಳಸಕ್ತಿಗ, ಬಿಜ್ಜಿಗ ಶಿರಚ್ಛೇದಕ, ಭೂಚಕ್ರ ಶತ್ರ, ಅಯ್ಯನ ಚಕ್ರ, ವಿಕ್ರಮೊ......ಮುಂತಾದ ಪ್ರಶಸ್ತಿಗಳಿಂದ ಒಬ್ಬನು ಗುಪ್ತ ವಂಶದ ಮೊದಲನೆಯ ವಿಕ್ರಮಾದಿತ್ಯನ ವಿಷಯದ ತರುವಾಯ ವರ್ಣಿಸಲ್ಪಟ್ಟಿದ್ದಾನೆ. ಎಂತಲೂ—

"ಚರಿತಂ ಭಾವಿಪಡೆ ಅವಿರಾಜ ಚರಿ...ಜನಕನುಂ, ಗುತ್ತಿಕ್ಷಿತಿಂ, ಮಂಡಳೇಶ್ವರ ಚೂಡಾಮಣಿ,"

ಎಂದು ಮುಂತಾಗಿ ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕು ತೊಂಜಾಪುರದ ಮಲ್ಲಿಕಾರ್ಜುನ ನಿಲಯದ ಮುಂಭಾಗದಲ್ಲಿರುವ ಶಿಲಾಶಾಸನದಲ್ಲಿ (South Indian Inseriptions Vol IX-217) ಆತನ ವರ್ಣನೆಯಿರುವುದರಿಂದ ಆತನ ಗುಪ್ತ ವಂಶದ ಹಿರಿಯ ವಿಕ್ರಮಾದಿತ್ಯನ ಹಿರಿಯ ಮಗನಾದ 'ಕಿಲ್ಲರಸ' ಆಗಿದ್ದಾನೆ ಎಂತಲೂ, ಕಿಲ್ಲವೆಂಡಗ, (ಕೋಟನಕಲ್ಲು ಶಾಸನ R. I. I. Vol IX 245 ೨೭–೧೧–೧೧೭೮) ಎಂಬ ಹೆಸರುಗಳು ಬಹುಶಃ ತಪ್ಪು ಓದುಗಳೆಂತಲೂ ಅವು ಮಲ್ಲರಸ, ಮಲ್ಲವೆಡಂಗ ಆಗಿರಬೇಕೆಂತಲೂ ಇದನ್ನು ಒಪ್ಪಿದರೆ ಇವನೇ ಮಲ್ಲದೇವ ಎಂಬುದು ಸ್ಪಷ್ಟ ಎಂತಲೂ ಅವರು ಅಭಿಪ್ರಾಯಪಟ್ಟಿದ್ದಾರೆ.

ಬಿಜ್ಜಳ ಶಿರಚ್ಛೇದನ ಮಾಡಿದವರು ಜಗದೇವ ಮತ್ತು ಮಲ್ಲಿಬೊಮ್ಮಯ್ಯಗಳೆಂದು ಗ್ರಂಥಗಳು ಸಾರುತ್ತಲಿವೆ. ಇವುಗಳಲ್ಲಿ ಮಲ್ಲಿದೇವಯ್ಯ ಎಂಬ ಒಬ್ಬನನ್ನು ಗುರ್ತಿಸಿದರೆ ಬೊಮ್ಮಯ್ಯನೆಂಬುವನು ಮತ್ತೊಬ್ಬನು. ಹೀಗೆ ಮೂವರು ಜನರೆಂದು ಯೋಚಿಸಬೇಕಾಗುತ್ತದೆ. ನಿಡುಗಲ್ ಚೋಳರಲ್ಲಿ ಮಲ್ಲಿದೇವನ ಮಗ ಬೊಮ್ಮಯ್ಯನೆಂಬುವನು ಇರುವದು ಚಾರಿತ್ರಿಕಾಂಶಗಳಿಂದ ವ್ಯಕ್ತವಾಗುತ್ತದೆ. ಗುಪ್ತವಂಶದ ಕಿಲ್ಲರಸನಿಗೆ, ಮೊಲ್ಲೆಬೊಮ್ಮಣ್ಣ ಎಂದು ತಿಳಿಯಬೇಕೆಂದು ಶ್ರೀ ಜೋಯಿಸರು ಅಭಿಪ್ರಾಯಪಡುತ್ತಾರೆ. ಈ ಕಿಲ್ಲರಸನಿಗೆ ಮೊಲ್ಲೆಬೊಮ್ಮಣ್ಣ (ಮಲ್ಲಿದೇವ ಎಂಬ ಹೆಸರಿನ ಮುಂದೆ ಬೊಮ್ಮಣ್ಣ) ಎಂಬ ಹೆಸರೇಕೆ ಬಂದಿತೆಂಬುದು ಇನ್ನೂ ಶೋಧನೀ

ವಾಗಿ ಉಳಿಯುತ್ತದೆ. ಚಾಲುಕ್ಯರ ನಾಲ್ಕನೆಯ ಸೋಮೇಶ್ವರನಿಗೆ ರಾಜ್ಯವನ್ನು ಕೊಡಿಸಲು ಬೊಮ್ಮಯ್ಯನು ಸಹಾಯ ಮಾಡಿದನೆಂದು ತಿಳಿಯುತ್ತದೆ. ಆ ಬೊಮ್ಮಯ್ಯನು ಕ್ರಿ. ಶ. ೧೧೮೧ರ ಸುಮಾರಿನಲ್ಲಿ ಇದ್ದವನಾಗುತ್ತಾನೆ. ಬಿಜ್ಜಳನಿಗೆ ವೈರಿಯೂ ಆಗುತ್ತಾನೆ. ಮೇಲೆ ಕಂಡ ದೇವನು ೨೭-೧೧-೧೧೭೮ರ ತರುವಾಯ ಬಾಳಿದವನಲ್ಲ. ಇವೆಲ್ಲ ಚಾರಿತ್ರಿಕಾಂಶಗಳನ್ನು ಇನ್ನೂ ಶೋಧಿಸಬೇಕಾಗಿದೆ. ಮೊದಲು ಊಹಿಸಿದ ಪ್ರಕಾರ ನಿಡುಗಲ್ ಚೋಳರ ಮಲ್ಲಿದೇವನ ಮಗ ಬೊಮ್ಮಯ್ಯನನ್ನು ಇನ್ನು ಈ ವಿಷಯದಲ್ಲಿ ನೆನಪಿನಲ್ಲಿಟ್ಟಿರಬೇಕಾಗಿದೆ. ಈ ಮಲ್ಲಿಬೊಮ್ಮಯ್ಯನು ಬಿಜ್ಜಳನಿಂದ ಮೂಲೆಗೊತ್ತಲ್ಪಟ್ಟ ಮೂರನೆಯ ತೈಲಪನಲ್ಲಿ ಅಧಿಕಾರಿಯಾಗಿದ್ದಂತೆ ತಿಳಿಯುತ್ತದೆ. ತಂದೆ 'ಗುತ್ತಿಕ್ಷಿತೀಶಂ' ಎಂಬಲ್ಲಿ ಗುಪ್ತವಂಶದ ರಾಜ ಎಂದು ಯೋಚಿಸಿ ಬಳ್ಳಾರಿ ಪ್ರಾಂತದ ಗುತ್ತಿಯ ರಾಜ ಎಂದೂ ಯೋಚಿಸಲಿಕ್ಕೆ ಬರುತ್ತದೆ.

(ಸಂಚಿಕೆ ೧೦೧-೧೦೨)

## ಮುದ್ರಣವಾದ ಕರ್ನಾಟಕ ಕವಿಚರಿತ್ರೆಗೆ ಸಿಕ್ಕದ ವೀರಶೈವ ಕವಿಗಳು

ಸುರುಚಿರ ಕಾಳಿದಾಸವರ ಭೋಜಮಹೀಶರು ಸುರ್ದ ಗ್ರಂಥದಾ-।
ಉರುತರ ಭಾವಕೋರದೆ ಬುಧವ್ರಜವಾತ್ಮದಿ ಚಿಂತಿಸುತ್ತಿದೇ ।
ಭರದಿರಸಜ್ಞಸಾರ ಮಹೇಶ್ವರ ಪುಂಗವ ರುದ್ರಮೂರ್ತಿತಾಂ ।
ಪರತರ ಟೀಕೆವೇಳ್ದ ಸವದತ್ತಿ ಪುರಾಧಿಪನೇಂ ಕೃಪಾಬ್ಧಿಯೋ ॥

--ಈ ಪದ್ಯವು ಒಂದು ಬರೆಹದ ಪ್ರತಿಯಲ್ಲಿ ದೊರಕುತ್ತದೆ. ಇದರಲ್ಲಿ ಕಂಡ ಮಹೇಶ್ವರ ಶ್ರೇಷ್ಠನಾದ 'ಸವದತ್ತಿ ರುದ್ರಮೂರ್ತಿ' ಯು ಕಾಳಿದಾಸ, ಭೋಜರಾಜ ಇವರ ಗ್ರಂಥಗಳಿಗೆ ಬರೆದ ಟೀಕೆಯು ಪುಸ್ತಕವು ನಮ್ಮ ಹಸ್ತಗತವಾಗಿಲ್ಲ. ಈ ಕವಿ ಉತ್ತಮ ಕವಿಯೆಂದು ಈ ಮೇಲಿನ ಪದ್ಯದಿಂದಲೇ ವ್ಯಕ್ತವಾಗುತ್ತದೆ. ಈ ಕವಿಯ ಗ್ರಂಥಗಳು ಯಾರಲ್ಲಿಯಾದರೂ ಇದ್ದರೆ ದಯವಿಟ್ಟು ನಮಗೆ ತಿಳಿಸಬೇಕಾಗಿ ಕೋರುತ್ತೇವೆ.

ತುರುವೆಕೆರೆಯ ವಿರಕ್ತಮಠದ ಕರ್ತೃಗಳಾಗಿ ಒಬ್ಬರು ರುದ್ರಾಖ್ಯರು ಕಲ್ಯಾಣದ ಕಡೆಯ ಚರಮೂರ್ತಿಗಳಾದ ರಾ। ರಾಚೋಟಿಸ್ವಾಮಿಗಳವರ ಚರಣಸೇವಾ ಪಾತ್ರರಾಗಿ ಇದ್ದಂತೆ ತಿಳಿಯುತ್ತದೆ, ಇವರು ಶಕವರುಷ ೧೭೫೦ರಲ್ಲಿ ಇದ್ದರು. ಸುಭಾಷಿತ ಮೊದಲಾದವುಗಳನ್ನು ಬರೆದಿದ್ದಾರೆ.

# ಅಭಿನವ ಕೇಶಿರಾಜ (ವೀರಶೈವ ಕವಿ ?)
# 'ಕವಿಜಿಹ್ವಾ ಬಂಧನ' ಎಂಬ ಗ್ರಂಥದ ಕರ್ತೃ

ವೀರಶೈವರು ತಮ್ಮ ಗ್ರಂಥಗಳಲ್ಲಿ 'ಕೇಶಿರಾಜ' ಎಂಬ ಕವಿಯನ್ನು ಸ್ತುತಿಸಿದ್ದಾರೆ. ಈ ಕೇಶಿರಾಜನು ಶಬ್ದಮಣಿದರ್ಪಣವನ್ನು ರಚಿಸಿದ ಕೇಶಿರಾಜನೇ ಎಂದೂ ಇವನು ವೀರಶೈವನಾಗಿರಬಹುದೆಂದೂ ಕೆಲವರು ಊಹಿಸುತ್ತಾರೆ. ಕನ್ನಡದಲ್ಲಿ 'ಕವಿಜಿಹ್ವಾಬಂಧನ' ಎಂಬ ಗ್ರಂಥವು ಪೂರ್ವದಲ್ಲಿ ಇದ್ದಿತೆಂಬುದು ಈಗ ಗೊತ್ತಾಗಿದೆ. ಈ ಗ್ರಂಥದ ಪ್ರಾರಂಭದಲ್ಲಿ ಕವಿಯು ತನ್ನ ಇಷ್ಟ ದೇವತಾ ಪ್ರಾರ್ಥನೆಯನ್ನು ಹೀಗೆ ಮಾಡಿರುತ್ತಾನೆ.

ಶ್ರೀ ಮದ್ಗಂಗಾತರಂಗಾಂಕಿತ ಕಪಿಲ ಜಟಾಜೂಟಿ ಭಾರಾವತಂಸಂ ।
ವಾಮಾಂಗಾಲಿಂಗಸಂಗ ಪ್ರಕರ ಗಿರಿಸುತಾಲೋಲ ಲೀಲಾಸು (ಸ್ವ ?)ತಂತ್ರಂ ।
ಕಾಮಂನಿರ್ನಾಮ ಭೀಮೋಜ್ವಲಿತ ಚಟುಳ ಭಾಳ ಪ್ರತಾಪಾಗ್ನಿನೇತ್ರಂ ।
ಪ್ರೇಮಂ ಪರ್ವಿರ್ತೆ 'ಮೆ' (ಯೆ?) ಮ್ಮೊಳು ಡುಗಣೆಗೋಡೆಯಂ ಕಲ್ಲಿನಾಥಾಖ್ಯ
ಲಿಂಗಂ ॥

—ಹೀಗೆ ಆರಂಭಿಸಿ ಮುಂದೆ...

ಸ್ತುತಿಸಲ್ ಕವಿವರರೆಲ್ಲರ್ ।
ಪ್ರತಿಯಿಲ್ಲದ ತೆರದಿ ಸರ್ವಲ...(ಕ್ಷಣ?) ಮಂ ಭಾ-।
ರತಿವರದಿಂದಂ ತನ್ನಯ-।
ಪತಿಗುಸುರ್ದಂ ಈ ಶ್ವರಾಂತ ಸತ್ಕವಿರಾಯಂ ॥೭॥

ಕವಿಜಿಹ್ವಾಬಂಧನಮಂ ।
ಭುವನಜನಂಗಳಿಗೆ ಪೇಳ್ದ ಲಕ್ಷಣಮಂ ಪದ್-!
ವಿವರದಿ ಬಲ್ಲರು ಮೆಚ್ಚಲ್ ।
ಪ್ರವರಗುಣಂ ರತ್ನವರದನೀಶ ಕವೀಶಂ ॥೮॥

ಲಕ್ಷಣ ಶಿಕ್ಷಾಚಾರ್ಯ ಸು-।
ಲಕ್ಷಣ ಕೇಶವನ ಶಬ್ದಮಣಿದರ್ಪಣಮಂ ।
ಈಕ್ಷಿಸಿ ಶಿಕ್ಷಸಲೀಶ್ವರೆ-।
ಸಾಕ್ಷಾದಭಿನವ ಸುಕೇಶಿರಾಜಂ ಪುಸಿಯೇ ॥೯॥

ಸಕ್ಕಜಗನ್ನಡಗವಿಕೆಯು-।
ಸಿಕ್ಕುಗಳಂ ಬಿಡಿಸಿ ಸರ್ವ ಲಕ್ಷಣಗಳುಮಂ ।
ಚಕ್ಕನೆಯ ರಿವಂತುಸುರ್ದಜ
ಗಕ್ಕಭಿನವ ಕೇಶಿರಾಜ ನಾಮ ಕವಿ ಶಂ ॥೧೦॥

ವೃತ್ತ॥ ಕವಿತಾರಂ 'ಬ' (ಭ)ಕ್ಕೆ ಬೀಜಂ ಕವಿ ಮುಖಮುಕುರಂ ಕಾವ್ಯಂ ಕಾಂತಾ ವಿಲಾಸಂ ।
ಕವಿತಾ ಸನ್ಮಾರ್ಗವರ್ಗಂ ಕವಿಜನ ವದನಂ ಕಾವ್ಯದೀಪ ಪ್ರಕಾಶಂ ।
ಕವಿತಾಯುಕ್ತ ಪ್ರಯುಕ್ತಂ ಸ್ಫುರಣ ಭರಣವಾಣೀ ನಟೀ ನೃತ್ಯರಂಗಂ ।
ಭುವಜನಕ್ಕಪ್ಪಂತು ಸುರ್ದಂ ಕವಿವರ ನಳನಾಮೋಜ್ವಲಂ ಕೇಶಿರಾಜಂ ॥೧೧॥

ಸುಧೆಯನೊ ಸರ್ವಮೋಹನದ ಕಾಣಗಳಿಂಪನೊಡರ್ಚ ನುಣ್ಣ ನಣ್ಣ-।
ಮೃದುರತಿ ಬಿನ್ನಣಂ ನವರಸಂಗಳ ಮನ್ಮಥ ತಂತ್ರ ಭಾವದೊಳ್ ।
ಚದುರತೆ ಯಚ್ಚ ಗನ್ನಡಗಳೊಳ್ ನುಡಿ ತಪ್ಪದಿನಿರ್ಕಲಂಕೃತಂ ।
ಸದಕವಿ ಎಂಬರಲ್ಲದೊಡೆ ಹಾಸ್ಯಪದಂ ಕವಿ ಎಂಬರೆಲ್ಲರುಂ ॥೧೨॥

—ಈ ಪದ್ಯಗಳಿರುವುವು. ಇವುಗಳನ್ನು ನೋಡಿದರೆ–

'ಕವಿಜಿಹ್ವಾನಬಂಧನ' ಎಂಬ ಛಂದಸ್ಸಿನ ಗ್ರಂಥವನ್ನು ಕನ್ನಡದಲ್ಲಿ ರಚಿಸಿದವನು ಈಶ್ವರ ಕವಿಯೆಂದೂ, ಇವನಿಗೆ 'ಅಭಿನವ ಕೇಶಿರಾಜ' ಎಂಬ ನಾಮವೂ ಇದ್ದಿತೆಂದೂ ತಿಳಿದು ಬರುತ್ತದೆ.

ಇವನು ಉದ್ದಾಮ ಕವಿ ಎಂಬುದು ಮೇಲಿನ ಇವನ ಗ್ರಂಥಗಳಿಂದ ತಿಳಿದು ಬರುತ್ತದೆ. ಕಂದ ಪದ್ಯಗಳಿಗೆ ಆರನೆಯ ಸ್ಥಲದಲ್ಲಿ ಜಗಣ ಅಥವಾ ನಗಣವನ್ನೇ ಉಪಯೋಗಿಸಿ ಇದ್ದಾನೆ. ಇವನು ಪದ ಕವಿಯ ಲಕ್ಷಣವನ್ನು ಹೇಳಿರುವುದು ಮನೋಹರವಾಗಿದೆ.

ಇವನು ಶಬ್ದಮಣಿದರ್ಪಣಕಾರನಾದ ಕೇಶಿರಾಜನ ಹೆಸರನ್ನು ಹೇಳಿರುವುದರಿಂದ ಅವನ ತರುವಾಯದವನೆಂದೂ, ಉಡುಗಣಿಯನಲ್ಲಿ ನಾಥಲಿಂಗವನ್ನು ಸ್ತುತಿಸಿ ಇರುವುದರಿಂದ ಶಿವಶರಣರ ಅಕ್ಕಳಾದ ಶ್ರೀ ಮಹಾದೇವಿಯಕ್ಕನವರು ಇದ್ದ ಉಡುತಡಿ ಗ್ರಾಮ ಎಂದರೆ ಮೈಸೂರು ದೇಶದ ಶಿವಮೊಗ್ಗ ಜಿಲ್ಲಾ ಶಿಕಾರಿಪುರ ತಾಲೂಕಿನಲ್ಲಿ ಇರುವ ಉಡುಗಣಿ ಗ್ರಾಮ ಅಥವಾ ಆ ಪ್ರಾಂತದಲ್ಲಿ ಇದ್ದವನೆಂದೂ ಬಸವೇಶ್ವರನ ಕಾಲದಲ್ಲಿ ಕೊಂಡಗೂಳಿ ಕೇಶಿರಾಜಯ್ಯನು ಈ ಉಡುಗಣಿಯ ಸಮೀಪದ ಬಳ್ಳಿಗಾವೆಯಲ್ಲಿ ದಂಡನಾಯಕನಾಗಿ ಆಳುತ್ತ ಇದ್ದುದರಿಂದ ಸುಮಾರು ಇವನ ಕಾಲದಲ್ಲಿ ಎಂದರೆ (ಸುಮಾರು ಕ್ರಿ. ಶ. ೧೧೬೫ರಲ್ಲಿ) ಇದ್ದಿರಬಹುದೆಂದುಕೋರುತ್ತದೆ. (ಉಡುಗಣಿಯಲ್ಲಿ ಕಲ್ಲಪ್ಪನ ಗುಡಿ ಇರುವುದೂ ನಿಜ)

ಇವನೇ ವೀರಶೈವರ ಕಾವ್ಯಗಳಲ್ಲಿ ಸ್ತುತಿಸಲ್ಪಟ್ಟ ಕೇಶಿರಾಜ, ಈಶ್ವರ ಕವಿ, ನಳ ಆಗಿರಬೇಕು. ಇವನು ವೀರಶೈವನೂ ಆಗಿರಬೇಕು ಅಲ್ಲವೆ ? ಸಾಹಿತ್ಯ ಶೋಧಕರು ಈ ವಿಷಯವನ್ನು ಶೋಧಿಸಲಿ. ಕೇಶಿರಾಜ ಎಂಬ ಶರಣರ ವಿಷಯದ ಭಾಮಿನಿಷಟ್ಪದಿ ರೂಪದ ಕಥೆಯೊಂದು ಸಿಕ್ಕಿರುತ್ತದೆ. ಅದು ಹೀಗೆ ಇದೆ—

ಕೇಶಿರಾಜನ ಕಥೆ (ಭಾ. ಷ. ಯಲ್ಲಿ)

ಕೇಶಿರಾಜಗಳೆಂಬ ಶರಣರು ।
ದೇಶ ಸೀಮೆಯನಾಳುತಿರ್ದರು ।
ಭಾಷೆ ಪಾಲಿಪಳಪ್ಪ ಸತಿಯಳ ಸಹಿತ ಮುದದಿಂದ ॥(ಸೂಚನಾ ಪದ್ಯ)

ಈಶ ಗುರುಜಂಗಮಾರ್ಚನೆಯನು ।
ಲೇಸುಪರಿಯಲಿ ಮಾಡಿ ನೀಡುತ ।
ಸೂಸಲೀಯದೆ ತನುಮನಂಗಳ ಶಿವನಿರ್ಪಿಸುತ ।
ಮೂರು ಲಿಂಗದಿ ಮಾಟಕೂಟದಿ ।
ನಾರಿ ಪುರುಷರು ಸುಖದೊಳಿರುತಿರೆ ।
ಏರಿಯುಂಡಣದೊಳಗೆ ನಡೆದಳು ರಾಜಬೀದಿಯಲಿ ॥೧॥

ಪೋಗುತಿರೆ ಶೃಂಗಾರ ತೋಟಕೆ ।
ಸಾಗಿಶೈವರು ಪುಷ್ಪತರುತಿರೆ ।
ಕೂಗಿ ಕರೆದರೆ ಬರಲು ಕೇಳ್ದಳದೇನು ವಸ್ತುಗಳು ।
ತೂಗುಮಂಚದ ಕೇಶಿರಾಜನ ।
ಭಾಗಧರೆಕೇಳೆನ್ನ ಜನನಿಯೆ ।
ಸಾಗಿ ಬಂದವು ಶಿವನ ಪೂಜೆಗೆ ಪುಷ್ಪಮಾಲೆಗಳು ॥೨॥

ಆಶೆ ಬೀಳುತ ತೆಗೆದುಕೊಂಡಳು ।
ಲೇಸುಲೇಸುಗಳೆನುತ ಮನದೊಳು
ಭೂಷಣಂಗಳ ಮಾಡಿಕೊಳುತಲಿ ಮೂಸಿನೋಡಿದಳು ।
ರೋಷದಲಿ ಘುಡಘುಡಿಸಿ ಶೈವನು ।
ಆಶಯಂಗಳನಳಿದು ಮನದೊಳು ।
ನಾಸಿಕಂಗಳತೊರೆದು ಬಿಸುಟಿದ ನಿಮಿಷ ಮಾತ್ರದಲಿ ॥೩॥

ಬೊಬ್ಬೆದೊಂಬಿಗಳಾಗೆ ಶೈವನ ।
ದಬ್ಬು ಹೆಚಗುಡಿಕಟ್ಟು ಎನುತಲಿ ।
ಅಬ್ಬರಸಿಯರ ಸಿಂಗೆ ಪೇಳ್ದರು ಅವನು ಮಾಡಿದುದ ।
.............................. ॥೪॥

ಹಿಂದೆವಹಿಲದಿ ಬರುತಲಾಕ್ಷಣ ।
ಅಂದಣಂಗಳನಿಳಿದುಭೋಗದಿ ।
ಬೆಂದು ಹೋಯಿತು ನಿನ್ನ ದೊರೆತನ ವಿದನು ಬೆದರದಲೆ ।
ಇಂದು ನಾಸಿಕ ಕೊರೆದು ಬಿಸುಟಿದ ।
ಸಂದುಹೋಯಿತು ಶರೀರವೆಲ್ಲವು ।
ಎಂದಳಾಕ್ಷಣ ಅರಸು ಕೋಪಿಸಿ ಕರೆಸಿ ಕೊರೆದವನ ॥೫॥

ಏನು ಕಾರಣ ಕೊರೆದು ಬಿಸುಟಿದೆ ।
ನೀನು ಬೆದರದೆ ಹೇಳು ಎನಲಿಕೆ ।
ಜ್ಞಾನಿ ಶ್ರೀಗುರು ಕೇಶಿರಾಜನೆ ಕೇಳಪರಾಧವ ।
ಭಾನು ರವಿ ಶಶಿ ತೇಜ ಲಿಂಗಕೆ
ನಾನು ಪುಷ್ಪವ ತರುತಲಿರ್ದೆನು ।
ಸೀನು ನೆಗಡೆಗಳಾಗುತಿಹ ನಾಸಿಕಕ್ಕೆ ತೋರಿದಳು ॥೬॥

ಶಿರವು ಹೋದರೆ ಹೋಗಲೆನುತಲಿ ।
ಕೊರೆದು ಬಿಸುಟದೆ ನಾಸಿಕಂಗಳ ।
ಬರಿಯ ಮಾತಿನ್ನೇಕೆ ಭೂಪನೆ ಹೊಡಸುಕಂಧರವ ॥
ಸರಸದಲಿ ಸತಿಯಳನು ನಿಲ್ಲಿಸಿ ।
ಕರವು ತೆಗೆಯಿತು ಮೂಗು ಮೂಸಿತು ।
ಕರವು ಕೊಯ್ಯದೆ ಮೂಗ ಕೊಯ್ದುದು ಹೆಚ್ಚು ನಿನ್ನಯದು ॥೭॥

ಹಸ್ತಗಳ ಕೊರೆ ಕೊರೆಭೂ ಎನುತಿರೆ ।
ಸ್ವಸ್ಥಲವಾಗಲು ಮೂಗು ಕರಗಳು ।
ಮಸ್ತಕವ ಹೊಡೆಹೊಡೆಯೊ ಎನಲಿಕೆ ಹೊಡೆವ ಸಮಯದಲಿ ॥
ಹಸ್ತಿ ಚರ್ಮಾಂಬರನು ಮೆಚ್ಚುತ ।
ಭಕ್ತಿ ಭಾವಕೆ ಭಾಳನೇತ್ರನು
ಪುಷ್ಪಕದಿ ಕೊಂಡೊಯ್ದ ಕಥೆಯನು ಕೇಳಿ ರಾಗದಲಿ ॥೮॥

— ಈ ಕೇಶಿರಾಜರು ಕೊಂಡಗುಳಿಯ ಕೇಶಿರಾಜರಾಗಿರಬಹುದೇ ಅಲ್ಲದಿದ್ದರೆ ಇನ್ನಾರಾಗಿರಬಹುದು ? (ಸಂಚಿಕೆ ೨೯-೩೦)

# ದೇವರದಾಸಿಮಯ್ಯನವರ ಮೇಲೆ ಬಸವೇಶ್ವರನ ಆಕ್ಷೇಪಣೆ

ಪ್ರಸಿದ್ಧ ವಚನಕಾರರಾದ ದೇವರದಾಸಿಮಯ್ಯನವರು ಅನೇಕ ವಚನಗಳನ್ನು ನುಡಿದು ಮಾನವರನ್ನು ಉದ್ಧರಿಸಲು ಬಹಳ ಪ್ರಯತ್ನಿಸಿದ್ದಾರೆ. ಆ ಬಗೆಗೆ ವೀರಶೈವ ಸಮಾಜವು ಮತ್ತು ಅವರ ವಚನಗಳ ಅನುಭಾವಿಗಳು ಬಹಳವಾಗಿ ಅವರ ಉಪಕಾರ ವನ್ನು ಸ್ಮರಣೆ ಮಾಡಬೇಕಾಗಿದೆ. ಕಲ್ಯಾಣದಲ್ಲಿ ಕಲಚುರ್ಯ ಚಕ್ರವರ್ತಿಯಾಗಿ ಪ್ರಸಿದ್ಧ ನಾದ ಬಿಜ್ಜಳ ರಾಜನಲ್ಲಿ ಮಹಾಪ್ರಧಾನನಾಗಿದ್ದ ಬಸವೇಶ್ವರನು ಈ ದೇವರ ದಾಸಿ ಮಯ್ಯನವರನ್ನು ಹೊಗಳಿದ್ದಾನೆ ಎಂದೂ ಶ್ರೀ ಬಸವೇಶ್ವರನಿಗಿಂತ ಒಂದುನೂರು ವರ್ಷಗಳ ಪೂರ್ವದಲ್ಲಿ ದೇವರದಾಸಿಮಯ್ಯನಿದ್ದನೆಂದು ಈಗ ಪ್ರಚಾರವು ಹೆಚ್ಚಾಗಿ ನಡೆಯುತ್ತ ಇದೆ. ಆದರೆ ಶ್ರೀ ಬಸವೇಶ್ವರನು ದೇವರ ದಾಸಿಮಯ್ಯನವರ ಎಲ್ಲಾ ವಿಷಯಗಳನ್ನು ಒಪ್ಪಿಕೊಂಡಿಲ್ಲ. ಈ ಸಂಗತಿಯನ್ನು ಶ್ರೀ ಬಸವೇಶ್ವರನ ವಸಚ ಗಳಿಂದಲೇ ನಾವು ಕಾಣಬಹುದಾಗಿದೆ. ಉದಾಹರಣೆಗಾಗಿ ಕೆಲವು ವಚನಗಳನ್ನು ಇಲ್ಲಿ ಕೊಡಲಾಗಿದೆ.

ಹೊಸ ಪದ್ಧತಿಯ ಬಸವೇಶ್ವರನ ವಚನ

೫೭೧ ನೆಯದರಲ್ಲಿ–'ನಿಮ್ಮ ಪೂಜಿಸಿ ದಾಸನಕುಲದೇಸಿವಡೆಯಿತ್ತು... ನೀನೆಬಲಿದ ಹೊಲೆಯನೆ ಮೇರೆಯುಂಟೆ ?'–ಎಂದಿದೆ. ವೀರಶೈವರು ಕುಲಛಲಾದಿಗಳಿಲ್ಲದವರೆಂದು ಶಿವಶರಣರು ಹೇಳುವುದು ಪ್ರಸಿದ್ಧಿಯಾಗಿದೆ. ಇಲ್ಲಿ ದಾಸಿಮಯ್ಯನವರು ಶಿವನಿಗೆ ವಸ್ತ್ರವನ್ನು ಕೊಟ್ಟುದರಿಂದ ಅವನ ಕುಲವು (ದೇವಾಂಗ ಕುಲವು) ಭೂಷಣವಾಯಿತು ಎಂಬ ಅಭಿಪ್ರಾಯವು ಹೊರಬೀಳುತ್ತದೆ. ಇಂತಹ ಕುಲ ಭ್ರಮೆಗೆ ಬಸವೇಶ್ವರನು ಸಿಕ್ಕಿದವನಲ್ಲ.

೭೪೪ ನೆಯ ವಚನದಲ್ಲಿ—"ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟು ದಿಲ್ಲ"–ಎಂದಿದೆ ಮತ್ತು ಇದೇ ವಚನದಲ್ಲಿ "ಸಿಂಧು ಮರಾಳ ತನ್ನ ಕೊಟ್ಟನು"– ಎಂದಿದೆ. ವೀರಶೈವರಲ್ಲಿ ಮೊದಲು ಭಕ್ತಸ್ಥಲವನ್ನು ಹೊಂದಿದಾಗಲೇ ತನ್ನ ಸ್ಥೂಲ ವನ್ನು ಇಷ್ಟಲಿಂಗಕ್ಕೂ ಸೂಕ್ಷ್ಮತನುವನ್ನು ಪ್ರಾಣಲಿಂಗಕ್ಕೂ ಕಾರಣತನುವನ್ನೂ ಭಾವ ಲಿಂಗಕ್ಕೂ ಕೊಡಬೇಕು ಎಂದು ಆಚರಣೆ ಇದೆ. ಹೀಗೆ ಮೂರು ತನುಗಳನ್ನು ಕೊಟ್ಟು ದರಿಂದ ಅವನು ತನ್ನನ್ನೇ ಶಿವನಿಗೆ ಕೊಟ್ಟವನಾಗುತ್ತಾನೆ. ಈ ಆಚರಣೆ ದೇವರ ದಾಸಿಮಯ್ಯನವರಲ್ಲಿ ಇರಲಿಲ್ಲವೆಂದೂ, ವಸ್ತ್ರವನ್ನು ಮಾತ್ರ ಕೊಟ್ಟನೆಂದೂ ಬಸವೇಶ್ವ ರನ ಆಕ್ಷೇಪಣೆ ಇದ್ದಂತೆ ಸ್ಪಷ್ಟವಾಗುತ್ತದೆ.

**೭೮೫ನೆಯುದರಲ್ಲಿ**—"ದಾಸನಂತೆ ತವನಿಧಿಯ ಬೇಡುವವನಲ್ಲ...ಅಂಜದಿರು ಅವರಂದದವನಾನಲ್ಲ"–ಎಂದಿದೆ. ಶ್ರೀ ದೇವಗ ದಾಸಿಮಯ್ಯನವರು ತಮ್ಮ ಸಮು

ಕಾಲೀನರಾದ ಶ್ರೀ ಶಂಕರ ದಾಸಿಮಯ್ಯನವರೊಡನೆ ಅಹಂಕಾರದಿಂದ ಮಾತನಾಡಿ ತಮ್ಮಲ್ಲಿ ಆಹಾರಧಾನ್ಯ (ಬತ್ತ) ಹೆಚ್ಚಾಗಿ ಇದೆ ಕೊಡುತ್ತೇನೆ ಎಂದು ಹೇಳಿದುದಕ್ಕೆ ಶ್ರೀ ಶಂಕರ ದಾಸಿಮಯ್ಯನವರು 'ಶಿವಶರಣರನ್ನು ಬಡವರೆಂದು ಇವರು ತಿಳಿದಿದ್ದಾರೆ' ಎಂದು ನೊಂದುಕೊಂಡರೆಂದೂ ಕೆಲವು ದಿವಸಗಳ ಮೇಲೆ ದೇವರ ದಾಸಿಮಯ್ಯನವರಲ್ಲಿ ಬತ್ತವು ಇಲ್ಲದಂತಾಗಲು ಅವರ ಪತ್ನಿಯಾದ ದುಗ್ಗಳವ್ವೆಯು ಅವರಿಗೆ ಪ್ರೇರಿಸಿದ ಪ್ರಕಾರ ಶಂಕರ ದಾಸಿಮಯ್ಯನವರಲ್ಲಿಗೆ ಹೋಗಿ ಬತ್ತದ ತವನಿಧಿಯನ್ನು ಬೇಡಿಕೊಂಡರೆಂತಲೂ, ಆಮೇಲೆ ದೇವರ ದಾಸಿಮಯ್ಯನವರಲ್ಲಿ ಬತ್ತವು ಯಾವಾಗಲೂ ಇರುವಂತೆ ಆಯಿತೆಂದೂ ಗ್ರಂಥಗಳ ಹೇಳಿಕೆಯಿದೆ. ತವನಿಧಿ ಎಂದರೆ ಒಂದು ವಸ್ತುವು ಇಲ್ಲದಂತಾಗದೆ ಅದು ಖರ್ಚಾಗುತ್ತ ಬಂದಹಾಗೆಲ್ಲಾ ಮತ್ತೆ ಮತ್ತೆ ಕೂಡುತ್ತ ಬಂದು ಯಾವಾಗಲೂ ಇರುವಂತೆ ಆಗುವುದು. ಇಲ್ಲಿ ಬತ್ತದ ತವನಿಧಿಯು ಹೇಳಲ್ಪಟ್ಟಿದೆ. ಇದರಂತೆ ಹಣದ ತವನಿಧಿ. ಉದಾಹರಣೆಗೆ ಒಬ್ಬರಲ್ಲಿ ಹಣವಿದ್ದು ಅದು ಖರ್ಚಾಗುತ್ತ ಬಂದರೂ ಮತ್ತೆ ಮತ್ತೆ ಹಣವು ಬಂದು ಸೇರಿ, ಯಾವಾಗಲೂ ಹಣವಿರುವಂತಾಗಿ, ಎಂದೂ ಸ್ವಲ್ಪ ಕಾಲವೂ ಹಣವಿಲ್ಲದಂತೆ ಆಗದೆ ಇರುವುದೇ ಹಣದ ತವನಿಧಿಯನ್ನು ಶ್ರೀ ಬಸವೇಶ್ವರನು ಬೇಡುವವನಲ್ಲವೆಂಬುದು ಈ ವಚನದಿಂದ ಸ್ಪಷ್ಟವಾಗುತ್ತದೆ. ಇದೂ ಒಂದು ಆಕ್ಷೇಪಣೆ ಎಂದು ಭಾವಿಸಲಿಕ್ಕೆ ಅನುಮಾನವು ಆರಿಗೂ ಬಾರದು.

**೬೮೭ ನೆಯದರಲ್ಲಿ**—"ದಾಸನ ವಸ್ತ್ರವ ಬೇಡುವುದೊಂದು ಗರುವತನವೆ ?... ಕೋಡಗನ ಹುಲ್ಲಲ್ಲಿ ಮುಸುಕಿಟ್ಟಂತೆ ಕೂಡಲಸಂಗಮದೇವಾ ನಿಮ್ಮ ಪರಿ"—ಎಂದಿದೆ. ಇದರಿಂದ ಬಸವೇಶ್ವರನು ಶಿವನನ್ನು ಕುರಿತು "ನೀನು ಒಂದೊಂದು ವಸ್ತುವನ್ನು ಬೇಡುವುದು ದೊಡ್ಡಸ್ತಿಕೆಯಲ್ಲ" ಎಂದು ಕೇಳಿಕೊಂಡಂತೆ ಆಗಿದೆ. ಇದರಿಂದ ಭಕ್ತನು ತಾನು ತನ್ನದು ಎಂಬಿವುಗಳನ್ನು ಪೂರ್ಣವಾಗಿ ಶಿವನಿಗೆ ಒಪ್ಪಿಸಬೇಕೆಂಬ ಆಚರಣೆಯನ್ನೇ ಶ್ರೀ ಬಸವೇಶ್ವರನು ದೃಢವಾಗಿ ಆಚರಿಸಿದ್ದಾನೆ. ಈ ವಿಧದಲ್ಲಿಯೂ, ಶ್ರೀ ದೇವರ ದಾಸಿಮಯ್ಯನವರ ಮೇಲೆ ಆಕ್ಷೇಪಣೆ ಇದೆ. ದೇವರ ದಾಸಿಮಯ್ಯನವರು ವೀರಶೈವರ ಆಚರಣೆಯಲ್ಲಿ ಹೀಗೆ ಆಕ್ಷೇಪಣೆ ಇದ್ದಾಗ್ಯೂ, ಅವರ ವಚನಗಳನ್ನು ನೋಡಿದರೆ, ಅವರು ಸಂಪೂರ್ಣವಾದ ವೀರಶೈವಾಚರಣೆಯಲ್ಲಿದ್ದಂತೆ ವ್ಯಕ್ತವಾಗುತ್ತದೆ.

ದೇವರ ದಾಸಿಮಯ್ಯನವರಿದ್ದುದು ಚಾಲುಕ್ಯರ ೨ನೆಯ ಜಯಸಿಂಹನ ಕಾಲದಲ್ಲಿ ಎಂದೂ ಆತನ ಹೆಂಡತಿ ಸುಗ್ಗಲೆ ಎಂದೂ ಚಾರಿತ್ರಿಕವಾಗಿ ತಿಳಿದುಬರುತ್ತದೆ.

ಈಗ ಕೆಲವರು ಪ್ರಚಾರ ಪಡಿಸುತ್ತಿರುವಂತೆ ಚಾಲುಕ್ಯರ ೧ನೆಯ ಜಯಸಿಂಗನ ಕಾಲದಲ್ಲಿ (ಕ್ರಿ. ಶ. ಸು. ೧೦೪೦) ಶ್ರೀ ದೇವರ ದಾಸಿಮಯ್ಯನವರು ಇರಲಿಲ್ಲವೆಂದು ತಿಳಿಯಬೇಕಾಗಿದೆ. ಏಕೆಂದರೆ ಒಂದನೆಯ ಜಯಸಿಂಹನ ರಾಣಿ ದೇವಳದೇವಿ ಎಂಬಾಕೆ ಇದ್ದಳೆಂದು ಶ್ರೀಶೈಲದಲ್ಲಿನ ಶಾಸನದಿಂದ ತಿಳಿದುಬರುತ್ತದೆ. ಈ ದೆಸೆಯಿಂದ ಚಾಲುಕ್ಯರ ೨ ನೆಯ ಜಯಸಿಂಹನ ಕಾಲದಲ್ಲಿ ಎಂದರೆ ಕ್ರಿ. ಶ. ೧೧೩೮

ರಿಂದ ೧೧೪೯ರ ಸುಮಾರಿನಲ್ಲಿ ಇವರು ಇದ್ದಂತೆ ವ್ಯಕ್ತವಾಗುತ್ತದೆ. ಶ್ರೀ ಬಸವೇಶ್ವರನೂ, ಕ್ರಿ. ಶ. ೧೧೪೨ರಲ್ಲಿ ಪ್ರಖ್ಯಾತನಾಗಿ ಇದ್ದಂತೆ ಮಣಿಗವಳ್ಳಿಯ ಶಾಸನದಿಂದ ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ಹೇಳಲ್ಪಟ್ಟ ಬಸವೇಶ್ವರನ ಸದಾಚಾರ ಹರಡುವಿಕೆಯ ಕಾರ್ಯವನ್ನೇ ಶ್ರೀ ಬಸವೇಶ್ವರನ ಅಕ್ಕ ನಾಗಲಾಂಬಿಕೆ ತನ್ನ ವಚನದಲ್ಲಿ ಹೊಗಳಿದ್ದಾಳೆ. ಸದಾಚಾರದ ಬೆಳವಿಗೆಯನ್ನು ಮಾಡಿದನೆಂದು ಹೇಳಿದ್ದಾಳೆ. ಹೀಗೆ ಶ್ರೀ ಬಸವೇಶ್ವರನಿಗೂ ಶ್ರೀ ದೇವರ ದಾಸಿಮಯ್ಯನಿಗೂ ಸಮಕಾಲೀನತ್ವವೇ ಗೊತ್ತಾಗುತ್ತದೆ. ಈ ಇಬ್ಬರ ಪರಸ್ಪರ ಸಮ್ಮೇಲನವು ವೀರಶೈವರ ಅನೇಕ ಗ್ರಂಥಗಳಿಂದಲೂ ವ್ಯಕ್ತವಾಗುತ್ತದೆ.

ಈ ಕಾರಣಗಳ ದೆಸೆಯಿಂದ ಬಸವೇಶ್ವರನೂ ದೇವರ ದಾಸಿಮಯ್ಯನೂ ಒಬ್ಬರಿಗೊಬ್ಬರು ಮಿಳಿತರಾಗುವುದಕ್ಕೆ ಮುಂಚೆಯೇ ಶ್ರೀ ಬಸವೇಶ್ವರನು ಮೇಲ್ಕಂಡ ವಚನಗಳನ್ನು ನುಡಿದನೆಂದವ ಇಬ್ಬರೂ ಮಿಳಿತರಾಗಿ ಶಿವಾನುಭಾವ ಮಂಟಪದಲ್ಲಿ ಸಹವರ್ತಿಗಳಾದ ಮೇಲೆ ಶ್ರೀ ದೇವರ ದಾಸಿಮಯ್ಯನವರು ಶಿವಶರಣರ ಆಚರಣೆಗಳನ್ನು ಚೆನ್ನಾಗಿ ತಿಳಿದುಕೊಂಡು ಆಮೇಲೆ ತಮ್ಮ ವಚನಗಳನ್ನು ಬರೆದರೆಂದೂ ನಿರ್ಣಯಿಸಬೇಕಾಗುತ್ತದೆ.

ಈ ಶೋಧನೆಯ ಕಡೆಗೆ ವೀರಶೈವ ಸಮಾಜದ ಗಮನವು ಬೀಳಲಿ. ಇನ್ನೂ ಕೆಲವುಕಾಲ ಶೋಧನೆಮಾಡಿ ನಿರ್ಧರಿಸುವವರಾಗಲಿ. ಶ್ರೀ ಬಸವೇಶ್ವರನೂ, ದೇವರ ದಾಸಿಮಯ್ಯನೂ ಸಮಕಾಲದವರಲ್ಲವೆನ್ನುವವರು ತಮ್ಮ ವಿಮರ್ಶಾತ್ಮಕ ಲೇಖನಗಳನ್ನು ಈಗಿನಿಂದಲೇ ಪ್ರಚಾರ ಮಾಡುವವರಾಗಲಿ.

(ಸಂಚಿಕೆ–೧೪೧)

# ವಚನಧರ್ಮ ಅರ್ಥಾತ್ ಲಿಂಗವಂತಧರ್ಮ ಎಂದು ಮತ್ತು ಯಾರಿಂದ ಉಗಮವಾಯಿತು ?

[ಮೇಲ್ಕಂಡ ಶಿರೋನಾಮೆಯ ಲೇಖನವೊಂದು ಬಳ್ಳಾರಿಯ ನವಸಂದೇಶ ಪತ್ರಿಕೆಯಿಂದ ಪ್ರಕಟವಾಯಿತು. ಈ ಲೇಖನದ ಬಗೆಗೆ ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಸೂಕ್ತ ವಿಮರ್ಶೆ ಮಾಡಿ, ಇದರಲ್ಲಿರುವ ವಾದವಿವಾದಗಳಿಗೆ ತಮ್ಮ ಸಮಾಧಾನವೇನೆಂಬುದನ್ನು ತಿಳಿಸಿದ್ದನ್ನು ಈ ಲೇಖನದಲ್ಲಿ ಕಾಣಬಹುದು.]

ನವಸಂದೇಶದಲ್ಲಿ ಪ್ರಕಟವಾದ ಲೇಖನದ ಸಾರಾಂಶ :

ಅ) ಕೆಲವರು 'ಅ' ವರ್ಗ "ಲಿಂಗವಂತ ಧರ್ಮ ಅನಾದಿ ಕಾಲದ್ದೆಂದೂ ಅದನ್ನೂ ಪಂಚಪೀಠಾಚಾರ್ಯರು ಸ್ಥಾಪಿಸಿದರೆಂತಲೂ ಹೇಳುತ್ತಾ ಅದಕ್ಕೆ ಆಧಾರವಾಗಿ ಸಿದ್ಧಾಂತ ಶಿಖಾಮಣಿ, ಶ್ರೀ ಕರಭಾಷ್ಯ, ನೀಲಕಂಠಭಾಷ್ಯ ಮುಂತಾದ ಗ್ರಂಥಗಳನ್ನು ಉದಾಹರಿಸಿರುತ್ತಾರೆ. ಅತಿ ಪುರಾತನ ಕಾಲದಲ್ಲಿ ಶೈವವು ಉತ್ಕ್ರಾಂತಿ ಹೊಂದಿ ವೀರಶೈವದಲ್ಲಿ ಪರಿಪೂರ್ಣತೆ ಹೊಂದಿದೆ ಎಂತಲೂ ಹೇಳಿ, ಇದಕ್ಕೆ ಆಧಾರವಾಗಿ ವೇದಾಗಮೋಪನಿಷತ್ತುಗಳಲ್ಲಿ ಬರುವ 'ಲಿಂಗ' ಶಬ್ದವನ್ನು ರುದ್ರ, ಶಿವ ಶಬ್ದಗಳನ್ನು ಉದಾಹರಿಸುತ್ತಾರೆ."

ಬ) ಬೇರೆ ಕೆಲವರು 'ಬ' ವರ್ಗ "ವಚನ ಧರ್ಮವು ದೇವರದಾಸಿಮಯ್ಯನಿಂದಲೇ ಉಗಮವಾಯಿತು. ಆತನಿಂದಲೇ ಇಷ್ಟಲಿಂಗಧಾರಣ ಕ್ರಮವೂ ಅಷ್ಟಾವರಣ ಷಟ್‌ಸ್ಥಲ ವಿಚಾರಗಳು ಪ್ರತಿಪಾದಿಸಲ್ಪಟ್ಟವು. ಬಸವೇಶ್ವರನ ಕಾಲದಲ್ಲಿ ವಚನಧರ್ಮವು ದಾರ್ಶನಿಕ ವ್ಯವಸ್ಥೆ ಪಡೆಯಿತು. ಈ ಧರ್ಮದಲ್ಲಿರುವ ಎಲ್ಲ ಸಂಸ್ಕೃತ ಗ್ರಂಥಗಳು ೧೨ ನೆಯ ಶತಮಾನದಿಂದೀಚೆಗೆ ಬರೆಯಲ್ಪಟ್ಟವುಗಳು"

ಅವರ್ಗದವರು ಐತಿಹಾಸಿಕವಾಗಿ ಉದಾಹರಿಸಿರುವ ಮಹೆಂಜೋದಾರೋ ಅವಶೇಷಗಳಿಂದ ಆರ್ಯರು ಭರತಖಂಡಕ್ಕೆ ಬರುವುದಕ್ಕಿಂತ ಮುಂಚೆ ಅತಿ ಶ್ರೇಷ್ಠವಾದ ದ್ರಾವಿಡ ಸಂಸ್ಕೃತಿ ಇತ್ತೆಂದು ತಿಳಿದುಬರುತ್ತದೆ. ಈ ಅವಶೇಷಗಳಲ್ಲಿ 'ಲಿಂಗ' ನಂದಿ ವಿಗ್ರಹಗಳಲ್ಲಿ ದೊರೆತಿರುವುದರಿಂದಲೂ, ಈಜಿಪ್ತ, ಗ್ರೀಸ್, ಬೇಬಿಲೋನಿಯಾ, ಬ್ರಿಟನ್ನದ ಡ್ರೂಯಿಡ್ಸ್ (ದ್ರಾವಿಡ), ಆಸ್ಟೀರಿಯಾ-ಮುಂತಾದ ದೇಶಗಳಲ್ಲಿ ಈ ಲಿಂಗಮೂರ್ತಿಗಳು ದೊರೆಯುತ್ತಿರುವುದರಿಂದ ಲಿಂಗಪೂಜೆಯು ಆರ್ಯರಿಗಿಂತ ಮೊದಲೇ ವಿಶ್ವವ್ಯಾಪ್ತಿ ಹೊಂದಿತ್ತೆಂದು ತಿಳಿಯದಿರಲಾರದು. ಲಿಂಗಾರಾಧನೆಯು ವೇದೋಕ್ತವೆಂದು 'ಅ' ವರ್ಗದವರು ತಿಳಿದುಕೊಂಡರೆ ಮಹೆಂಜೋದಾರೋ ಅವ

ಶೇಷಗಳು ಸುಳ್ಳಾಗಿಬಿಡುವುವು. (ಆರ್ಯಗಿಂತಲೂ ಮುಂಚೆ ಲಿಂಗಾರಾಧನೆ ಇದ್ದುದರಿಂದ ಆರ್ಯರ ಕಾಲದಲ್ಲಿ ಉದ್ಭವಿಸಿದ ವೇದಗಳಿಗಿಂತಲೂ ಮುಂಚೆಯೇ ಈ ಆಚರಣೆ ರೂಢಿಯಲ್ಲಿದ್ದಂತೆ ತಿಳಿಯಬೇಕೆಂದು ಇದರ ತಾತ್ಪರ್ಯ ?)

ಆರ್ಯರು ಭಾರತಕ್ಕೆ ಬಂದ ಮೇಲೆ ದ್ರಾವಿಡರ ಸಂಸ್ಕೃತಿ ಮತ್ತು ನಾಗರಿಕತೆಯಿಂದ ಅವರ ಕಣ್ಣು ಕುಕ್ಕಿಹೋದವು. ಆರ್ಯರಿಂದ ದ್ರಾವಿಡರು ಯುದ್ಧಗಳಲ್ಲಿ ಜಯಿಸಲ್ಪಟ್ಟರು. ಆಮೇಲೆ ಆರ್ಯರು ಸೋತ ದ್ರಾವಿಡರನ್ನು ಸಂತೈಸಲು ದ್ರಾವಿಡ ಸಂಸ್ಕೃತಿಯನ್ನು, ದ್ರಾವಿಡ ಧರ್ಮವನ್ನು ಅಳವಡಿಸಿಕೊಂಡರು. ಆಗ ದ್ರಾವಿಡರ ಪ್ರತ್ಯೇಕತೆಯು ನಾಶವಾಯಿತು. ಆರ್ಯ ಧರ್ಮದಲ್ಲಿಯೇ ಶೈವ, ವೈಷ್ಣವ, ಶಾಕ್ತೇಯ, ಗಾಣಪತ್ಯ ಮುಂತಾದ ಧರ್ಮಗಳು ಉಗಮಗೊಂಡವು.

'ಬ' ವರ್ಗದವರು ಹೇಳುತ್ತಿರುವ ವಚನ ಧರ್ಮವು (ಅಷ್ಟಾವರಣ ಷಟ್‌ಸ್ಥಳ, ಪಂಚಾಚಾರ, ದೇವರ ಪೂಜೆಯನ್ನು ಅನ್ಯರಿಂದ ಮಾಡಿಸದೆ ತಾವೇ ಮಾಡುವುದು, ಮೇಲು ಕೀಳುಗಳಿಲ್ಲದಿರುವಿಕೆ, ಆಧ್ಯಾತ್ಮದಲ್ಲಿ ಸ್ತ್ರೀ ಸಮಾನತೆ, ನರಕ ಸ್ವರ್ಗಗಳು ಬೇರಿಲ್ಲ–ಇವೇ ಮೊದಲಾದ ಆಚರಣೆಗಳುಳ್ಳದ್ದು) ವೇದಾಗಮೋಪನಿಷತ್ತುಗಳಲ್ಲಿ ವಿದ್ಯುಚ್ಛಕ್ತಿಯ ಬೆಳಕಿನಿಂದ ಹುಡುಕಿದರೂ ಕಾಣಿಸುವುದಿಲ್ಲ. ಆದರೆ ಇವುಗಳಲ್ಲಿಯ ಕೆಲವು ತತ್ತ್ವಗಳು ಶೈವರಲ್ಲಿ ವೇದಾಗಮಗಳಲ್ಲಿ ಕಾಣಬಹುದು. ಲಿಂಗವು ಅನಾದಿ ಕಾಲದ್ದು. ಪಾದೋದಕ, ಪ್ರಸಾದ, ಮಂತ್ರ, ರುದ್ರಾಕ್ಷಿ, ಭಸ್ಮ-ಇವು ಎಲ್ಲಾ ಶೈವಪಂಥಗಳಲ್ಲಿ ಕಾಣಬರುತ್ತವೆ. ಜಂಗಮ ಎಂದರೆ Freternity ಅಥವಾ Brother hwod ಎಂದರೆ ಸರ್ವ ಸಮಾನತೆ ಎಂದು ಸಿ. ಜಿ. ಬ್ರೌನ್‌ಸಾಹೇಬರು Jangam Literature ಎಂಬ ಗ್ರಂಥದಲ್ಲಿ ವ್ಯಾಖ್ಯಾನಮಾಡಿರುವರು. ಈ ಗ್ರಂಥದಲ್ಲಿ ಜಂಗಮ ಶಬ್ದವು ವೇದಾಗಮೋಪನಿಷತ್ತುಗಳಲ್ಲಿ ಇತರ ಶೈವ ಪಂಥಗಳಲ್ಲಿ ಕಾಣಬರುವುದಿಲ್ಲ.

ಇಷ್ಟಲಿಂಗೋಪಾಸನೆಯು ಇತರ ಶೈವ ಪಂಥಗಳಲ್ಲಿ ಇರುವುದಿಲ್ಲ. ಸ್ಥಾವರ ಲಿಂಗೋಪಾಸನೆಯು ಮಾತ್ರ ಕಂಡುಬರುತ್ತದೆ. ದೇವರ ದಾಸಿಮಯ್ಯನ ಕಾಲದಲ್ಲಿ ಮತ್ತು ಅವನಿಗೆ ಮುಂಚೆ ಕಾಳಾಮುಖ, ಲಕುಳೀಶ, ಪಾಶುಪತ, ಶುದ್ಧ ಶೈವ ಮೊದಲಾದ ಶೈವ ಪಂಥಗಳಿದ್ದವು. ದೇವರದಾಸಿಮಯ್ಯನಿಗೆ ಶ್ರೀಶೈಲವಲ್ಲಿ ಆ ಕ್ಷೇತ್ರಾಧಿಪತಿಗಳಾದ ಚಂದ್ರಗುಂಡ ಶಿವಾಚಾರ್ಯರಿಂದ ಅನುಗ್ರಹ ಅಥವಾ ಉಪದೇಶವಾಯಿತೆಂದು ಅವರ ಸ್ಮಾರಕ ಉದ್ಗ್ರಂಥದಲ್ಲಿ ಹೇಳಲಾಗಿದೆ. ಚಂದ್ರಗುಂಡರು ಕಾಳಾಮುಖರಿರಬೇಕು. ಏಕೆಂದರೆ ಅವರ ತರುವಾಯ ಅವರು ಪೀಠಕ್ಕೆ ಬಂದ ಕಾಶಿವಿಲಾಸ ಕ್ರಿಯಾಶಕ್ತಿಯವರು ಕಾಳಾಮುಖರೆಂದು ಅದೇ ಗ್ರಂಥದ ೨ ನೆಯ ಭಾಗದ ಒಂದು ಲೇಖನದಲ್ಲಿ ಉಲ್ಲೇಖವಾಗಿದೆ. ಚಂದ್ರಗುಂಡರು ಅಷ್ಟಾವರಣದ ವೀರಶೈವರಾಗಿದ್ದರೆ

ದಾಸಿಮಯ್ಯನಿಗೆ ಬರೇ ಉಪದೇಶ ಮಾಡದೆ ಇಷ್ಟಲಿಂಗ ದೀಕ್ಷೆಯನ್ನು ಕೂಡಾ ಮಾಡುತ್ತಿದ್ದರು.

ಇನ್ನು 'ಬ' ವರ್ಗದವರು ಹೇಳುತ್ತಿರುವಂತೆ ವೀರಶೈವ ಸಂಸ್ಕೃತ ಗ್ರಂಥಗಳು ೧೨ ನೆಯ ಶತಮಾನದಿಂದಿಚೀಗೆ ಬರೆಯಲ್ಪಟ್ಟವೆಂದು ಅನೇಕರು ಸಿದ್ಧಾಂತ ಮಾಡಿರುವರು. ಶ್ರೀ ಕರಭಾಷ್ಯವನ್ನು ತರ್ಜುಮೆ ಮಾಡುವ ಶ್ರೀ ಹಯವದನರಾಯರು ಅದು ೧೪-೧೫ ನೆಯ ಶತಮಾನದ ಗ್ರಂಥವೆಂದು ಹೇಳಿದ್ದಾರೆ. ಈ ಸಂಗತಿಯನ್ನು ಅವರ್ಗದವರು ಸಪ್ರಮಾಣವಾಗಿ ಅಲ್ಲಗಳೆಯುವುದು ಆಗಿಲ್ಲ. 'ಶಿವಸುರ' ಎಂಬುವರು ಆ ಭಾಷ್ಯವು ೧೯ ನೆಯ ಶತಮಾನದಲ್ಲಿ (ಕ್ರಿ. ಶ. ೧೮೯೩) ಆದ ಗ್ರಂಥವೆಂದು ಒಂದು ಲೇಖನವನ್ನೇ ಪ್ರಕಟಿಸಿರುವರು. ಆದರೂ ಅವರೂ ಇದಕ್ಕಾಗಿ ಹೇಳುವ ಕಾರಣಗಳನ್ನು ಅಲ್ಲಗಳೆಯುವುದು ಈವರೆವಿಗೆ ಯಾರಿಂದಲೂ ಆಗಿಲ್ಲ. ಸಿದ್ಧಾಂತ ಶಿಖಾಮಣಿ ಮತ್ತು ನೀಲಕಂಠ ಭಾಷ್ಯ ೧೩-೧೪ ನೆಯ ಶತಮಾನಗಳ ಗ್ರಂಥಗಳೆಂದು ಅನೇಕರು ಶಾಸ್ತ್ರೀಯವಾಗಿ ಸಿದ್ಧಪಡಿಸಿರುವುದನ್ನು ಅಲ್ಲಗಳೆಯಲು ಶಕ್ಯವಾಗಿಲ್ಲ.

ರೇವಣಸಿದ್ಧನು ನಿರ್ಲಜ್ಜ ಶಾಂತಿಮಯ್ಯನಿಂದ ಇಷ್ಟಲಿಂಗಧಾರಣೆ ಮಾಡಿಕೊಂಡನು ಬಾಳೆಹಳ್ಳಿ ಪೀಠವು ರುದ್ರಮುನಿಯಿಂದ ಸ್ಥಾಪಿತವಾಯಿತು. ಕಾಶೀಪೀಠ, ಶ್ರೀಶೈಲ, ಕೇದಾರಪೀಠಗಳ ಕ್ಷೇತ್ರಾಧಿಪತಿಗಳು ಬಸವನ ಕಾಲದಲ್ಲಿ ಇಷ್ಟಲಿಂಗಧಾರಿಗಳಾದರು.- ವೀರಶೈವದ ವಿಜೃಂಭಣೆಯಿಂದ ಕಾಳಾಮುಖ ಮುಂತಾದ ಶೈತಪಂಥಗಳು ಹೇಳಹೆಸರಿಲ್ಲದಂತಾದವು.

ಆದರೆ ಬಸವನ ಕಾಲದಲ್ಲಿ ಮೂರ್ತಿಭಜಿಸದ ಅಷ್ಟಾವರಣಾಂತರ್ಗತ ವೀರಶೈವದ ಕುರುಹುಗಳೆಲ್ಲವೂ ದೇವರ ದಾಸಿಮಯ್ಯನ ವಚನಗಳಲ್ಲಿ ಬಂದಿರುವುವು. ಅವನು ಜಯಸಿಂಹನ ಹೆಂಡತಿ ಮುಂತಾದ ಸಾವಿರಾರು ಜನರಿಗೆ ಇಷ್ಟಲಿಂಗ ದೀಕ್ಷೆಯನ್ನು ಕೊಟ್ಟರು.

ಇಷ್ಟೆಲ್ಲಾ ಕಾರಣಗಳಿಂದ ದೇವರ ದಾಸಿಮಯ್ಯನಿಂದಲ್ಲದೆ ಮತ್ಯಾರಿಂದ ಮತ್ತು ಯಾವಾಗ ಶೈವವು ಉತ್ಕ್ರಾಂತಿಯಾಗಿ ವೀರಶೈವವಾಗಿ ಮಾರ್ಪಟ್ಟಿತು ? ಈ ಅಭಿಪ್ರಾಯದ ಒಂದು ಲೇಖನವು ಪ್ರಕಟವಾಗಿರುವುದನ್ನು ತೋರಿಸಿ 'ಧರ್ಮಾಭಿಮಾನಿ' ಎಂಬುವರು ಈ ರೀತಿ ಹೇಳುತ್ತಾರೆ. "ವೀರಶೈವವು ಶಿವಶರಣರಿಂದಲೇ ಉಗಮವಾಯಿತೆನ್ನಲಿಕ್ಕೆ ಈಗ ರೂಢಿಯಲ್ಲಿದ್ದ ಸಂಗತಿಗಳೇ ಸಾಕ್ಷಿ. ವೀರಶೈವರ ಆರನೆಯ ಸ್ಥಲಕ್ಕೆ ಆರಂಭಕ್ಕೆ ಮೊದಲನೆಯ ಸಾರೆ ಬಸವಾದಿ ಪ್ರಮಥರಿಂದ ಆರಿಸಲ್ಪಟ್ಟವರೆಂದರೆ ಅಲ್ಲಮ ಪ್ರಭುಗಳು. ಇವರೇ ಈತನ ವಿರಕ್ತರ ಮುಖ್ಯ ಪುರುಷರು. ಅಂದ ಮೇಲೆ ಶಿವಶರಣರಾದ ಪ್ರಥಮರಿಂದಲೇ ವೀರಶೈವ ದಾರ್ಶನಿಕ ವ್ಯವಸ್ಥೆಯು ಶಿವಾನುಭವ ಮಂಟಪದಿಂದಲಾಗಿ ಈಗಲೂ ರೂಢಿಯಲ್ಲಿದೆ."

(ಸಂಚಿಕೆ-೧೨೨)

## ಶ್ರೀ ಚರವರ ವಿಮರ್ಶೆ

ಇದನ್ನೆಲ್ಲ ಓದುವ ಮಹನೀಯರಿಗೆ ವೀರಶೈವವು ದೇವರ ದಾಸಿಮಯ್ಯನಿಂದ ಆರಂಭವಾಯಿತೆಂದು ನವಸಂದೇಶ ಪತ್ರಿಕೆಯೂ, ಅಲ್ಲಮಪ್ರಭುಸ್ವಾಮಿಗಳಿಂದ ಆರಂಭ ವಾಯಿತೆಂದು ಧರ್ಮಾಭಿಮಾನಿ ಎಂಬುವರೂ ಅಭಿಪ್ರಾಯವುಳ್ಳವರಾಗಿರುವರೆಂಬುದು ಚೆನ್ನಾಗಿ ತಿಳಿಯದೆ ಇರದು. ನಾವು ಸಂಕ್ಷಿಪ್ತವಾಗಿ ಕೆಲವು ಸಂಗತಿಗಳನ್ನೂ ಇಲ್ಲಿ ತಿಳಿಸದೆದ್ದರೆ ನಿರ್ವಾಹವಿಲ್ಲವೆಂದೆನಿಸುತ್ತದೆ.

ಈಗ ವೀರಶೈವರಲ್ಲಿ ರೂಢಿಯಲ್ಲಿರುವ ಆಚರಣೆಯು ಶ್ರೀ ಅಲ್ಲಮಪ್ರಭು ಸ್ವಾಮಿ ಗಳವರ ಕಾಲದ ಶಿವಾನುಭವಮಂಟಪದ ಕಾಲದಿಂದಲೇ ಉಗಮವಾಗಿ ಪ್ರಸಾರವಾಗಿದೆ. ದೇವರ ದಾಸಿಮಯ್ಯನು ೧ನೆಯ ಜಯಸಿಂಹನ ಕಾಲದಲ್ಲಿ (ಕ್ರಿ. ಶ. ೧೪೪೦) ಇದ್ದ ನೆಂದು ಡಾ. ಫ್ಲೀಟರವರು ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿಲ್ಲ. ದೇವರ ದಾಸಿಮಯ್ಯನು ಸಮಕಾಲೀನನಾಗಿ ಇದ್ದಂತೆ ಶಾಸನಗಳ ಆಧಾರವೂ ಗ್ರಂಥಾಧಾರವೂ ದೊರಕುತ್ತವೆ. ಚಾಲುಕ್ಯ ಚಕ್ರವರ್ತಿ ೨ನೆಯ ಜಗದೇಕಮಲ್ಲ (ಕ್ರಿ.ಶ. ೧೧೩=-೫೦) ಇವನೇ ೨ನೆಯ ಜಯಸಿಂಹ. ಆಗಲೇ ದೇವರ ದಾಸಿಮಯ್ಯನಿದ್ದುದು. ಈ ಮುಂತಾದ ವಿಷಯಗಳು ನನ್ನ ಶೋಧನೆಯಲ್ಲಿ ಕಂಡುಬಂದಿವೆ. ಪಂಚಾಚಾರ್ಯರ ಚರಿತ್ರೆಯನ್ನು ಬರೆಯುವಲ್ಲಿ ಏಕೋರಾಮಾರಾಧ್ಯರ ಚರಿತ್ರೆಯಲ್ಲಿ ಈ ವಿಷಯವನ್ನು ಚೆನ್ನಾಗಿ ವಿವ ರಿಸಬೇಕೆಂದಿದ್ದೇನೆ. ಅದು ಪ್ರಕಟವಾಗುವವರೆಗೂ ಸುಮ್ಮನಿರಬೇಕೆಂದು ನಾನೆಷ್ಟು ಬಯಸಿದರೂ ಸಮಾಜನಲ್ಲಿನ ವಿಚಾರ ವಿಮರ್ಶೆಗಳು ಹೆಚ್ಚು ಬಲವಾಗಿ ಇರುವುದ ರಿಂದ. ಅವು ಈಗಲೇ ಬರೆಯಬೇಕೆಂದು ಲೇಖನಿಯನ್ನು ಸೆಳೆಯುತ್ತಲಿವೆ. ೨ನೆಯ ಜಯಸಿಂಹನ ಹೆಂಡತಿಯು ಪಂಪಾದೇವಿ ಅರ್ಥಾತ್ ಸುಗ್ಗಲೆ ಎಂಬುವಳಿದ್ದಳೆಂದು ಶಾಸನವೂ ಇದೆ. ಸಮಾಜವು ದೊಡ್ಡ ಗಲಭೆಗೆ ಹೋಗದೆ ಆಚಾರ್ಯರ ನಿಜವಾದ ಐತಿ ಹಾಸಿಕಾಂಶಗಳನ್ನೂ ಗ್ರಹಿಸುವುದರ ಕಡೆಗೆ ಈಗ ತಮ್ಮ ಗಮನವನ್ನು ಕೊಡಬೇಕಾಗಿದೆ.

ಆದರೆ ಈಗಿನ ವೀರಶೈವರ ನಡೆಯಂತೆ ಆಚರಣೆಯುಳ್ಳವರು ಬಹಳ ಪೂರ್ವ ದಿಂದಲೂ ಇದ್ದರೆಂಬುದಕ್ಕೆ ಪುರಾಣ ಮೊದಲಾದವುಗಳಲ್ಲಿ ಆಧಾರಗಳು ದೊರಕುತ್ತವೆ. ಹರಪ್ಪ ಮಹೆಂಜೋದಾರೊ ಪಟ್ಟಣಗಳಲ್ಲಿಯೂ ಈಗಿನ ವೀರಶೈವರು ಧರಿಸುತ್ತಿರುವ ಮಾದರಿಯ ಇಷ್ಟಲಿಂಗಗಳು ಸಿಕ್ಕಿರುತ್ತವೆ. ಬಸವೇಶ್ವರನು ಧಾರ್ಮಿಕ ಸ್ಥಿತಿಗೆ ಭಿನ್ನ ವಾಗಿ ತನ್ನದೇ ಒಂದು ಪದ್ಧತಿಯೆಂದು ಧಾರ್ಮಿಕ ಸೀಯೋಲ್ಲಂಘನೆ ಮಾಡಿ ಬೋಧಿ ಸಿಲ್ಲ. ಉಪನಿಷತ್ತುಗಳಲ್ಲಿ ಜಂಗಮರ ಹೊರತಾಗಿ ಏಳರ ಪೂಜ್ಯ ಭಾವವು ತೋರಿಸ ಲ್ಪಟ್ಟಿದೆ. ಆದರೆ ಜಂಗಮದ ಬದಲಾಗಿ, ಸ್ವಯಯೋಗಿ, ಬ್ರಹ್ಮಯೋಗಿ, ಪರ ಯೋಗಿ ಎಂಬವರ ಪೂಜ್ಯಭಾವವು ಹೇಳಲ್ಪಟ್ಟಿದೆ. ವೀರಶೈವರೂ ಸ್ವಯ, ಚರ, ಪರ ಎಂಬ ಜಂಗಮರಲ್ಲಿ ೩ ರೂಪಗಳನ್ನು ತಿಳಿಯುವುದರಿಂದಲೂ ಇವರಿಗೆ ಶಿವ ಯೋಗಿ ಎಂದು ಕರೆಯುವುದರಿಂದಲೂ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಯೋಗಿಗಳೇ ವೀರಶೈವರ ಜಂಗಮರೆಂದು ತಿಳಿಯಲನುಮಾನವಿಲ್ಲ.

ಆದರೆ ಈಗ ಎಲ್ಲರೂ ನಂಬುತ್ತಿರುವ ಐವರಾಚಾರ್ಯರು. ಕ್ರಿ. ಶ. ೧೨ನೆಯ ಶತಮಾನಕ್ಕೆ ಪೂರ್ವದಲ್ಲಿ ಇದ್ದರೆಂದು ವೀರಶೈವ ಸಮಾಜವು ತಿಳಿಯುವುದು ಸರಿಯಲ್ಲ. ಅತಿ ಪೂರ್ವದ ಕಾಲದಲ್ಲಿ ಈ ಧರ್ಮದ ಗುರುಗಳು ಯಾರಿದ್ದರು ? ಅವರ ಆಚರಣೆಗಳಿಗೂ, ಈಗಿನವರ ಆಚರಣೆಗಳಿಗೂ ಅಲ್ಪಸ್ವಲ್ಪ ಬದಲಾವಣೆಗಳಿದ್ದರೆ ಅವುಗಳೇನು? ಎಂಬುದನ್ನು ಶೋಧನೆ ಮಾಡುವುದು ಅತ್ಯವಶ್ಯಕವಾಗಿದೆ. ಈಗಿನ ವೀರಶೈವರು ಸುಮ್ಮನೆ ವಾದಕ್ಕೆ ಹೋಗದೆ ಪಂಚಾಚಾರ್ಯರು ಮತ್ತು ಬಸವಣ್ಣನವರ ಚರಿತ್ರೆಯ ಐತಿಹಾಸಿಕಾಂಶಗಳನ್ನು ಚೆನ್ನಾಗಿ ಗ್ರಹಿಸುವುದಕ್ಕೆ ಪ್ರಯತ್ನಮಾಡಿದ ಮೇಲೆ ತಮ್ಮ ಧರ್ಮದ ಪೂರ್ವದ ಉಗಮ, ಅದರ ಶ್ರೇಷ್ಠತೆ ಮುಂತಾದವುಗಳನ್ನು ಚೆನ್ನಾಗಿ ತಿಳಿದು ಆನಂದಿಸಬೇಕಾಗಿದೆ. (ಸಂಚಿಕೆ–೧೨೩)

# ಬಣಜಿಗರ ಉತ್ಪತ್ತಿ*

[ಶ್ರೀ ಚನ್ನಮಲ್ಲಿಕಾರ್ಜುನರು ವೀರಶೈವರಲ್ಲಿ ಅನೇಕ ವೃತ್ತಿಗಳಲ್ಲಿರುವ ಜನರುಗಳ ಮೂಲವೃತ್ತಾಂತಗಳನ್ನು ಸಂಗ್ರಹಿಸಿ ಪ್ರಕಟಿಸುವುದರಲ್ಲಿ ವಿಶೇಷಾಸಕ್ತಿ ತೋರುತ್ತಿದ್ದರು. ಪಂಚಮಿ ಸೆಟ್ಟಿಗಳ ವಿಸ್ತೀರ್ಣ (ಸಂ. ೧೪೭,೧೪೮,೧೪೯) ಕೋರಿಸೆಟ್ಟಿ(?) ಇತ್ಯಾದಿ ಲೇಖನಗಳು ಪ್ರಕಟಗೊಂಡಿವೆ. ಅವರ ಆ ರೀತಿಯ ಬರವಣಿಗೆಗಳನ್ನೆಲ್ಲ ಸಂಗ್ರಹಿಸಬೇಕಾದುದವಶ್ಯಕವಾದರೂ ಪ್ರಕೃತ ಸಂದರ್ಭದಲ್ಲಿ ಗ್ರಂಥಗಾತ್ರ ಭಯದಿಂದ 'ಬಣಜಿಗರ ಉತ್ಪತ್ತಿ' ಎಂಬ ಒಂದು ಪ್ರಾಚೀನ ಬರವಣಿಗೆಗೆ ಅವರ ಪ್ರತಿಕ್ರಿಯಾ ರೂಪದ ವಿಷಯವನ್ನಿಲ್ಲಿ ಮಾದರಿಗಾಗಿ ಕೊಡುತ್ತೇವೆ]

ಬಣಜಿಗರು ಹುಟ್ಟಿದುದನ್ನು ವಾಕುಲತಂತ್ರ (ವಾಕುಲಾಗಮ) ಹೇಳುತ್ತದೆ. ಹೇಗೆಂದರೆ ಶ್ರೀ ಮನ್ಮಹಾದೇವನು ಮಹಾದೇವ ಸೆಟ್ಟಿಯಾಗಿ ಬ್ರಹ್ಮಾಂಡವ ತೂಗಿದನು. ಬಸವೇಶ್ವರಸ್ವಾಮಿಗಳು ಕೋರಿಸೆಟ್ಟಿಯಾಗಿ ಮೂರುಲೋಕವ ತೂಗಿದರು. ಎಂಟುಮೂಲೆ, ನಾಲ್ಕು ದಿಕ್ಕು, ಭಾವಾಗಮದ ಹಸುಬೆಯಲಿ 'ಬಸವದಂಡ' ಎಂಬ ಹಸುಬೆಯು ಸೆಟ್ಟಿಯಾಗಿ ಪುಣ್ಯದ ಸರಕನ್ನು ತೂಗಿದನು. ಇವನ ಸಂಪ್ರದಾಯವಿಡಿದು ಪರಶಿವ ಪೃಥ್ವೀಸೆಟ್ಟಿ.

## ಸಂಗಮುಸೆಟ್ಟಿಯ ವಿಚಾರ–ವೀರಶೈವಾಚಾರ

ಮತ್ತಂ ಶಿವನ ಸಂಪ್ರದಾಯವಿಡಿದು ಪರಬ್ರಹ್ಮಸೆಟ್ಟಿ ಗುತ್ತಿಗೆಯ ಸಂಗಮ ಸೆಟ್ಟಿಯು ಗದ್ದುಗೆ (ವ್ಯಾಪಾರಕ್ಕಾಗಿ ಕೂಡುವ ಸ್ಥಳ), ಬಹುಧಾನ್ಯದ ಭೂಸಾರದ ವಾಣಿಜ್ಯ ಕರ್ಮವ ನಿರ್ಮಿಸಿಕೊಟ್ಟನು. ಆ ಪರ್ಯಾಯವೆಂತೆಂದೊಡೆ: ಭೂಸಾರ (ಭೂಮಿಯ ಸಾರಾಯ, ಉತ್ಪತ್ತಿಯ ಸಾರಾಯ) ಆಚಾರಲಿಂಗದ ಮುಖವ ಮುಂದು ಮಾಡಿಕೊಂಡು ಸಂಸಾರಿಯಾದ. ಬ್ರಹ್ಮಚರ್ಯ ಯೋಗವೇ ಭೂಸಾರದ ಉದ್ಯೋಗ. ಅನಂತಕೋಟಿ ಜೀವರಾಶಿಗಳ ಹುಟ್ಟಿಸುವ ಭವಾಂಡ, ಅಜಾಂಡ, ಅಜಭವಾಂಡಗಳೆಂಬ ಸಾಗರ ತೆರೆಯಂತೆ ಹೋಗುವುದಕ್ಕೆ ಬಾಹುದಕ್ಕೆ ತಡೆಯಿಲ್ಲದ ಗ್ರಾಹಕರ ಹಸ್ತದಲ್ಲಿನ ಬ್ರಹ್ಮವನರಿತು, ಬ್ರಹ್ಮಾನಂದದ ರಸದ ದ್ರವ್ಯ ಕಾಂಚನವಂ ಕೊಂಡು ನಾಮರೂಪು ಕ್ರಿಯಂಗಳಳಿವೆಂಬ ನಾಮಧಾರಣೆಯಂ ಮಾಡಿ, ಧರ್ಮ, ಅರ್ಥ, ಕಾಮ, ಮೋಕ್ಷ,

* ಯಕ್ಕುಂಡಿ ವಿರಕ್ತಮಠದಲ್ಲಿ ದೊರೆತ ಒಂದು ಬರೆಹದ ಪ್ರತಿಯಿಂದ ಪ್ರಕೃತಲೇಖನ ಪ್ರಕಟಿಸಿದಂತೆ ಶ್ರೀ ಚ.ರವರೇ ಹೇಳಿಕೊಂಡಿದ್ದಾರೆ.

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ, ಉದಯ ಅಸ್ತಮಾನ, ಅಭಿಮಾನವೆಂಬ ಮೂರು ತೆರದ ಮಾನದಲಿ ಅಳೆದುಕೊಡುವುದೇ ಭೂಸಾರ, ಸಂಸಾರ, ನಿಸ್ಸಾರವು.

ಈ ಪ್ರಕಾರವಾಗಿ ಆದಿಯಲ್ಲಿ ಮಹಾದೇವಸೆಟ್ಟಿ, ಅನಾದಿಯಲ್ಲಿ ಬಸವೇಶ್ವರಸೆಟ್ಟಿ ಇವರು ಹಸುಬೆಸೆಟ್ಟಿ, ಜಂಗಮಸೆಟ್ಟಿಯರು. ಜಂಗಮಸೆಟ್ಟಿ ಭೂಸಾರಿಯಾದ. ಹೀಗೆ ಗುತ್ತಿಗೆಸೆಟ್ಟಿ, ಜಂಗಮಸೆಟ್ಟಿಗಳ ಉತ್ಪತ್ತಿಯು.

ಮುಂದೆ ಇವರ ಸಂಪ್ರದಾಯದಿಂದ ಈಶ್ವರನ ಪಂಚಮುಖದಲ್ಲಿ ವಾಣಿಜರು ಉತ್ಪತ್ತಿಯಾಗಿಹರು. ಅದೆಂತೆಂದೊಡೆ: ವಾಣಿ, ವಾಕ್ಯ (ಲಾಕ್ಕು), ವಚನ, ಸುಬುದ್ಧಿ, ಭಾಷೆಗಳೆಂಬ ಈ ಐದು ವಾಣಿಜನ ಬಾಯಲ್ಲಿ (ಮುಖದಲ್ಲಿ) ವಾಣಿಜರು ಉತ್ಪತ್ತಿಯಾದರು. ವಾಣಿಜನೇ ರುದ್ರನು. ಇವರಿಗೆ ಕೆಳಗೆ ಬರೆದ ಪ್ರಕಾರ ವಿವರವು: ಸದ್ಯೋಜಾತ ಮುಖದಿಂದ ಹಸುಹಯಸೆಟ್ಟಿ ಜನಿಸಿದನು. ವಾಮದೇವ ಮುಖದಿಂದ ಓಲೇಸೆಟ್ಟಿ ಉದ್ಭವಿಸಿದನು. ಅಘೋರ ಮುಖದಿಂದ ಸಂಗಮಸೆಟ್ಟಿ ಹುಟ್ಟಿದನು. ತತ್ಪುರುಷ ಮುಖದಿಂದ ಭೂಸಾರಸೆಟ್ಟಿ ಹುಟ್ಟಿದನು. ಈಶಾನ್ಯ ಮುಖದಿಂದ ಭಾರಾಮಾರ್ಗಸೆಟ್ಟಿ ಉದಿಸಿದನು. ಇವರ ಕೇಣಿಯ ವಿವರ: ೭೨ ಕೇಣಿಯ ಸರಕಿನ ವ್ಯಾಪಾರ ಹಸುಬೆಯ ಸೆಟ್ಟಿಗೆ, ೧೮ ಕೇಣಿಯ ಸರಕಿನ ವ್ಯಾಪಾರ ಓಲೆಯಸೆಟ್ಟಿಗೆ, ೧೦೮ ಕೇಣಿಯ ಸರಕಿನ ವ್ಯಾಪಾರ ಸಂಗಮಸೆಟ್ಟಿಗೆ, ೧೨ ಕೇಣಿಯ ಜೀನಸಿನ (ಧಾನ್ಯದ) ವ್ಯಾಪಾರ ಭೂಸಾರಸೆಟ್ಟಿಗೆ, ೩೦೦ ಕೇಣಿಯ ಜಿನಸಿನ ವ್ಯಾಪಾರ ಭಾರಾಮಾರ್ಗಸೆಟ್ಟಿಗೆ—ಈ ಪ್ರಕಾರ ಇವರ ವ್ಯಾಪಾರವು. ಇದಲ್ಲದೆ ಇನ್ನೊಂದು ಪ್ರಕಾರ ಬಣಜಿಗರ ಉತ್ಪತ್ತಿ, ವಾಕುಳ ತಂತ್ರದ ಉತ್ತರಭಾಗದಲ್ಲಿ ಹೇಳುವುದು: ಹಸುಬೆಯಸೆಟ್ಟಿ, ಗುತ್ತಗುಡಿಸೆಟ್ಟಿ, ನಾಡನಾಳುವಸೆಟ್ಟಿ, ಮಿಂಡಗುದ್ದಲಿಸೆಟ್ಟಿ, ಕೋರಿಸೆಟ್ಟಿ—ಈ ಪ್ರಕಾರ ಐದುಸೆಟ್ಟಿಗಳೆಂಬುವರ ಉತ್ಪತ್ತಿ. ಇವರ ವ್ಯವಹಾರ ಗೂಡಾರ, ಗೂಟ, ಹಗ್ಗ, ಕೊಡಲಿ, ಅಡ್ಡಗೋಲು, ದಬ್ಬಣ ಮೊದಲಾದುವೆಲ್ಲವಂ ಪೇಳುತ್ತಿದ್ದೀತು. ಇವರು ಚತುರಾಶ್ರಮದ ಒಳಗಿನವರಲ್ಲ. ಅತಿವರ್ಣಾಶ್ರಮದವರೆಂದೂ, ವೀರಶೈವರೆಂದೂ ಅಥರ್ವವೇದದ ಉತ್ತರಭಾಗದೊಳು ಸಿದ್ಧಾಂತವು. ಶ್ವೇತಾಶ್ವತರೋಪನಿಷತ್, ವಾತುಳೋತ್ತರಾಗಮ, ಸ್ಕಂದಪುರಾಣ, ಕಂದರ ಸಂಹಿತೆ, ಇದಲ್ಲದೆ ವ್ಯಾಸೋಕ್ತ ಬ್ರಹ್ಮಾಂಡ ಪುರಾಣ ಇವು ಸಾಕ್ಷಿ ಗ್ರಂಥಗಳಾಗಿವೆ.

ತಥಾ ಶಿವಕುಲೇಜಾಕಾ ಗೋತ್ರಂ ನಂದೀಶಮೂರ್ತಿನಃ ।
ಪ್ರವರಂ ವೀರಶೈವಶ್ಚ ಶಾಖಾಯಾ ಪ್ರಮಥಾನ್ವಿತಾ ॥
ವೀರಶೈವಾಚಾರ ಭಕ್ತಾಃ ಪಂಚಸೂತಕ ವರ್ಜಿತಾಃ ।
ಅಥವಾ ಕಲ್ಪತೋಮಸ್ತು ಸಪಾಪೀ ಶಿವಘಾತಕಃ ॥

—ಎಂದುದಾಗಿ ಎಲ್ಲ ಆಶ್ರಮದವರಿಗೆ ಶ್ರೇಷ್ಠರೆಂಬುವ ಕಾರಣ ಕನ್ನಡದಲ್ಲಿ ಸೆಟ್ಟರೆಂಬುವರು ಈ ಬಣಜಿಗರು. ವರ್ಷಕ್ಕೆ ಮೂರು ವೇಳೆ ದೀಕ್ಷಿತರಾಗಬೇಕು. ಇಲ್ಲವೆ ವರ್ಷಕ್ಕೆ

ಒಂದು ವೇಳೆಯಾದರೂ ದೀಕ್ಷಿತರಾಗಬೇಕು. ಅಥವಾ ಜನ್ಮಾಂತ್ಯದೊಳಗೆ ಮೂರು ವೇಳೆ ಅಥವಾ ಜನ್ಮಾಂತ್ಯದೊಳಗೆ ಒಂದುವೇಳೆಯಾದರೂ ದೀಕ್ಷಿತರಾಗಬೇಕು. ಆಚಾರದಲ್ಲಿ ಒಂದಕ್ಕೂ ನಿಲುಕದಿದ್ದರೆ, ವೀರಶೈವರಲ್ಲ; ಅವಿಚಾರಿಗಳು. ದೀಕ್ಷಾವಿಧಾನೋಕ್ತಿ ವೀರಶೈವ ದೀಕ್ಷಾ ಆದರೆ ಬಣಜಿಗರು ಶ್ರೇಷ್ಠರೆಂಬುವುದು.

ಮತ್ತಂವಾಕುಳತಂತ್ರದ ಉತ್ತರ ಭಾಗದಲ್ಲಿ 'ಪಂಚಮಸಾಲಿ' ಉದಯ ಹೇಳುವುದು ಅದರ ಸಾರಾಂಶ : ಆದಿಯಲ್ಲಿ ಸದಾಶಿವನು ಲಿಂಗಾಂಗ ಸಾಮರಸ್ಯ ಭಾವದಿಂದ ತನ್ನ ಪಂಚಮುಖದಲ್ಲಿ ಪಂಚಾಚಾರ್ಯರ ನಿರ್ಮಿಸಿ ತನ್ನ ಶಕ್ತಿಯರಾದ ಗೌರಾಂಬೆ, ಗಂಗಾಂಬೆಯರಿಂದ ಪಂಚಶೈವರ ಉತ್ಪತ್ತಿಮಾಡಿ ಪಂಚಾಚಾರ್ಯರ ಕಡೆಯಿಂದ ಸ್ಥಾವರವನುಳಿದು ಮೂರೇಳು ಇಪ್ಪತ್ತೊಂದು ಪೂಜೆಯಿಂದ ದೀಕ್ಷಾಗೆಯಿಸಿ ಪಂಚಮಸಾಲಿಯವರು ಉದಯಿಸಿದರು.

ಆ ಸದಾಶಿವನ ಪಂಚಮುಖದಲ್ಲಿ ಪಂಚಾಕ್ಷರಿ ಮಂತ್ರೋದಯವಾಯಿತು. ಅಲ್ಲಿಂದ ಪಂಚಾರಾಧ್ಯರುದಿಸಿ ಆ ಪ್ರಭು ನಿರುಕ್ತಿಯಿಂದ ಲಿಂಗಧಾರಣೆಕರಾಗಿ ವೀರಶೈವಾಚಾರದ ಆಚರಣೆಯಿಂ ನಡೆದು ಪಂಚಾಚಾರ್ಯರಾದರು. ಒಬ್ಬೊಬ್ಬರಲ್ಲಿ ಒಂದೇ ಅಕ್ಷರ. ಈ ಐವರು ಆಚಾರ್ಯರೂ ಕೂಡಿದಾಗ್ಗೆ ಪಂಚಾಕ್ಷರಿಯಾಯಿತ್ತು. ಏಕ ಕಾಲಕ್ಕೆ ಐವರು ಒಂದೇ ಜಾಗದಲ್ಲಿ ಕೂಡೋಣೆಲ್ಲವೆಂದು ಕಾರ್ಯಕಾರಣಗಳಲ್ಲಿ ಪಂಚಾಕ್ಷರಲಿಖಿಸಿ, ಪಂಚಕಲಶ ಸ್ಥಾಪನದಲ್ಲಿ ಪಂಚಾಚಾರ್ಯರೇ ಬಂದರೆಂದು ಭಾವಿಸಿ ಕ್ರಿಯಸ್ಥ ಆಚಾರ ವಿಧಾನೋಕ್ತ ನಡೆಸುವುದು ಇದರ ಸಾರ. ದೀಕ್ಷಾವಿಧಿಯಲ್ಲಿ, ವೀರಶೈವ ಸಿದ್ಧಾಂತದಲ್ಲಿ ನೋಡುವುದು ಅಥರ್ವಣವೇದ. ಉತ್ತರ ಭಾಗದ ಸಾರವೀರಶೈವಾಮೃತ ಪುರಾಣದಲ್ಲಿ ಹೇಳುವುದು. (ಇಲ್ಲಿ ಎರಡು ಪದ್ಯಗಳಿವೆ.)

ಇವರ ಪುತ್ರಗಂ ತಂದು ವಿರಕ್ತನಾದರೂ, ಪಟ್ಟವಾದರೂ, ಚರಂತಿಯಾದರೂ, ದೇಶಿಕನಾದರೂ ಯೋಗ್ಯನಹನು ಇವರಲ್ಲಿ ದೊರೆಯದಿದ್ದರೆ ಹಿಂದುಮುಂದು ಸೋಸಿ ಪಂಚಮನತಂದು ಜಂಗಮನಮಾಡುವುದು.

(ಈ ವಿಷಯದ ಬಗೆಗೆ ಶ್ರೀ ಚನ್ನಮಲ್ಲಿಕಾರ್ಜುನರ ಪ್ರತಿಕ್ರಿಯೆ)

ಮೇಲಿನ ಲೇಖನದಿಂದ ಮೊದಲು ಮಹಾದೇವಸೆಟ್ಟಿ, ಬಸವೇಶ್ವರಸೆಟ್ಟಿ–ಇವರ–ಸಂಪ್ರದಾಯವಾಗಿ ಹಸುಬೆಯಸೆಟ್ಟಿ, ಸಂಗಮಸೆಟ್ಟಿ–ಎಂಬವರು ಉದಯಿಸಿದರೆಂದೂ ಇವರ ಸಂಪ್ರದಾಯವಾಗಿ ಪಂಚವಾಣಿಜರು ಉತ್ಪತ್ತಿಯಾದರೆಂದೂ ಸ್ಪಷ್ಟಪಡುತ್ತದೆ. ಈ ಹಿಂದೆ ವಾಣಿಜೋತ್ಪತ್ತಿಗ್ರಂಥ ಮತ್ತು ಇತರ ಲೇಖನಗಳನ್ನು ವಿಮರ್ಶೆ ಮಾಡಿದಾಗ ಬಸವೇಶ್ವರನೇ ಈ ಸೆಟ್ಟಿಗಳ ಮೂಲನೆಂದು ತರ್ಕಿಸಿ ಹೇಳಲಾಗಿದ್ದಿತು. ಈಗ ಅದು ನಿಜವೆಂದು ವ್ಯಕ್ತವಾಗಿದೆ. ಪಂಚವಾಣಿಜರ ಉತ್ಪತ್ತಿಗೆ ಆಂಧ್ರದೇಶದ ಗೋಮುಖನ ಸಂಹಾರವೇ ಕಾರಣವೆಂದು ಎಲ್ಲಾ ಆಧಾರಗಳಿಂದಲೂ ಸಿದ್ಧವಾಗಿದೆ. ಚಾರಿತ್ರಿಕಾಂಶವಾಗಿ ವೆಲನಾಡುಗೊಂಕ II ಎಂಬುವನೇ ಈ ಗೋಮುಖಾಸುರನೆಂದೂ ಇವನನ್ನು ಸಂಹಾರ ಮಾಡಿದವನು ಕೊಲ್ಲಾಪುರದ ವಿಜಯಾದಿತ್ಯನೆಂದೂ ಈ ಹಿಂದೆ

ತರ್ಕಿಸಲ್ಪಟ್ಟಿದೆ. ತೆಲಗು ಭಾಷೆಯಲ್ಲಿ ಪ್ರಕಟವಾದ ಕಾಕತೀಯ ಸಂಚಿಕೆ ಎಂಬ ಗ್ರಂಥದಲ್ಲಿ "ಕ್ರಿ. ಶ. ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಕಾಕತೀಯ ರುದ್ರನು ವೆಲನಾಡು ರಾಜ್ಯದ ಮೇಲೆ ದಂಡೆತ್ತಿ ಹೋಗಲಿಕ್ಕೆ ಪ್ರಯತ್ನಪಡುತ್ತಿದ್ದನು. ಆತನು ವೆಲನಾಡು ರಾಜ್ಯ ವಿಜಯಕ್ಕೆ ವಿಜಯರಾಜನನ್ನು ನೇಮಿಸಿಕೊಂಡನು" ಎಂಬ ಸಂಗತಿ ತಿಳಿದುಬಂದಿರುವುದರಿಂದ ಇಲ್ಲಿ ಕಂಡ ವಿಜಯರಾಜನೇ ಕೊಲ್ಲಾಪುರದ ವಿಜಯಾರ್ಕ. (ವಿಜಯಾದಿತ್ಯ ಅಥವಾ ವಿಕ್ರಮಾದಿತ್ಯ) ಎಂದು ತಿಳಿಯಲಿಕ್ಕೆ ಬರುವಂತಾಗಿದೆ. ಈ ವಿಜಯಾದಿತ್ಯನಿಗೆ "ಅಯ್ಯನಸಿಂಗ" ಎಂಬ ಬಿರುದು ಅಥವಾ ಹೆಸರು ಇದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಈ ಅಯ್ಯನಸಿಂಗ ಹೆಸರನ್ನೇ ಪಂಚವಕ್ರ ಗಣೇಶ್ವರ ಎಂದು ವೀರಶೈವರು ಕರೆದಿದ್ದಾರೆ. ಇವನ ವಿಷಯವಾಗಿ "ಗಣೇಶವಿಕ್ರಮಂದ್ಯಪ್ಟ್ವಾ" ಎಂಬ ಪದಗಳು ಸ್ವಾಯಂಭುವಾಗಮದಲ್ಲಿ ಇವೆ. ಇದರಿಂದ ಇವನು ಐಹೊಳೆಯಲ್ಲಿ ಯುದ್ಧಮಾಡಿ ಗೋಮುಖನನ್ನು ಸಂಹರಿಸಿದ ಮೇಲೆಯೇ ಇವನಿಗೆ ವಿಕ್ರಮಾದಿತ್ಯ ಎಂಬ ಹೆಸರು ಬಂದಿತೆಂದು ಸ್ಪಷ್ಟವಾಗುತ್ತದೆ. ಮೇಲೆ ಕಂಡ ತೆಲಗು ಪ್ರತಿಯಲ್ಲಿನ ವಿಜಯರಾಜ ಎಂಬ ಹೆಸರು ವಿಜಯಾದಿತ್ಯ ಎಂಬ ಹೆಸರನ್ನು ಗುರುತಿಸುತ್ತದೆ. ಈ ಕಾರಣಗಳಿಂದ ಇವನೇ ಪಂಚವಕ್ರನೆಂಬ ಈ ಮೊದಲಿನ ಊಹೆಯು ನಿಜವಾದುದೆಂದು ಈಗ ತಿಳಿಯಬೇಕಾಗಿದೆ.

ಪಂಚಾಸ್ಯಗಣವರನೇ ಈ ವಿಜಯಾದಿತ್ಯನೆಂದು ಇವನ ಮಕ್ಕಳಾದ ಅಥವಾ ಮೊಮ್ಮಕ್ಕಳಾದ ಐದು ಜನರಿಗೆ ಪಂಚಾಚಾರ್ಯರು ದೀಕ್ಷೆ ಮಾಡಿದ್ದಾರೆಂದೂ, ಗ್ರಂಥಗಳಿಂದ ಸ್ಪಷ್ಟವಾಗಿದೆ. ಗುರುಮಲ್ಲಿಕಾರ್ಜುನ ಪಂಡಿತಾರಾಧ್ಯ ಅವರ ಶಿಷ್ಯನಾದ ಪಾಲ್ಕುರಿಕೆ ಸೋಮನಾರಾಧ್ಯ ಇವರಿಬ್ಬರೂ ಆ ರುದ್ರದೇವನ ಸಮಕಾಲೀನರೆಂದು ರುದ್ರದೇವನ ರಾಜಧಾನಿಯು ಹನುಮಕೊಂಡವಾಗಿತ್ತೆಂದೂ ಮೇಲೆ ಕಂಡ ಕಾಕತೀಯ ಸಂಚಿಕೆಯಿಂದ ಗೊತ್ತಾಗುತ್ತದೆ. ಈ ರುದ್ರದೇವನು ಪೂರ್ವದವನಾದ ಎರಡನೆಯ ಪ್ರೋಲರಾಜನು (ವರಂಗಲ್) ಪಟ್ಟಣವನ್ನು ಪ್ರತಿಷ್ಠಾಪಿಸಿದನು. ಆ ಪಟ್ಟಣದಲ್ಲಿ ಸ್ವಯಂಭುಲಿಂಗವೆಂಬ ದೇವಾಲಯವನ್ನು ನಿರ್ಮಿಸಿದನು. ಆ ದೇವಾಲಯದ ಶಾಸನದಲ್ಲಿ ಉಪಮನ್ಯೂ ಎಂಬ ಋಷಿಯು ರುದ್ರದೇವನ ತಮ್ಮನಾದ ಮಹಾದೇವರಸನಿಗೆ ಸಹಾಯ ಮಾಡಿದನೆಂದು ಆ ಸಂಚಿಕೆಯಲ್ಲಿ ಹೇಳಲ್ಪಟ್ಟಿದೆ. ಕಂಚಿಯಲ್ಲಿದ್ದ ವಿಶ್ವಾರಾಧ್ಯರಿಗೆ ಉಪಮನ್ಯು ಋಷಿಯು ಶಿಷ್ಯನಾಗಿದ್ದನೆಂದು ಆಧಾರ ಸಿಕ್ಕಿರುವುದರಿಂದ ಈ ಉಪಮನ್ಯೂವಿನ ಸಮಕಾಲೀನರಾದ ವಿಶ್ವಾರಾಧ್ಯರೂ ಆಗ ಇದ್ದರೆಂದು ಮೇಲೆ ಕಂಡ ವಿಜಯಾದಿತ್ಯ ರಾಜನನ್ನು ಅಧಿಕಾರಕ್ಕೆ ನೇಮಿಸಿಕೊಂಡ ಓರುಗಲ್ಲ ರುದ್ರದೇವನ ತಮ್ಮನಾದ ಮಹಾದೇವರಸನನ್ನು ವಿಜಯಾದಿತ್ಯನು ಪ್ರಾರ್ಥಿಸಿಕೊಂಡು ಅವನ ಸಹಾಯದಿಂದ ಪಂಚಾಚಾರ್ಯರನ್ನು ಕರೆದುಕೊಂಡುಹೋಗಿ ತನ್ನ ಸಂಬಂಧದ ಪಂಚಮುಗೌರವರಿಗೆ ವೀರಶೈವ ದೀಕ್ಷೆ ಮಾಡಿಸಿದನೆಂದು ಚಾರಿತ್ರಿಕವಾಗಿ ತಿಳಿಯಲಿಕ್ಕೆ ಬರುವಂತೆ ಆಗಿದೆ. ಈ ಮಹಾದೇವರಸನು ಭೂಲೋಕದ ಮಹಾದೇವ ಎಂದು ಭಾವಿಸಲ್ಪಟ್ಟಿ

ರುವುದು ಇತಿಹಾಸ ಲೇಖನಗಳಿಂದ ದೊರೆಯುತ್ತದೆ. ಈ ಮಹಾದೇವರಸನು ಕ್ರಿ.ಶ. ೧೧೯೮ ರಲ್ಲಿ ಯುದ್ಧದಲ್ಲಿ ಹತನಾದನೆಂದು ತಿಳಿಯುವುದರಿಂದ (ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಸಾಹಿತ್ಯಾವಲೋಕನ ಎಂಬ ಪುಸ್ತಕ) ಆದಕ್ಕಿಂತ ಮುಂಚೆಯೇ ಪಂಚಾಸ್ಯ ಗಣವರನ ಮಕ್ಕಳಿಗೆ ವೀರಶೈವ ದೀಕ್ಷೆಯಾಗಿದೆಯೆಂದು ತಿಳಿಯಬಹುದಾಗಿದೆ.

ಹಾರಟಿಗೆಯ ಶಿಲಾಶಾಸನದಲ್ಲಿಯೂ ಬಸವೇಶ್ವರನ ವಚನದಲ್ಲಿಯೂ ಮಹಾದೇವಸೆಟ್ಟಿಯ ಹೆಸರಿದೆ. ವೀರಭದ್ರವಿಜಯ ಪುರಾಣದಲ್ಲಿ ಮಹಾದೇವಸೆಟ್ಟಿ ಎಂಬುವನಿಗೆ ನಾಗಲಾಂಬಿಕೆ ಎಂಬ ಕೂಸು ಹುಟ್ಟಿದ ಸುಮಾರು ೧೫ ದಿನಗಳ ತರುವಾಯ ಬಸವೇಶ್ವರನು ಹುಟ್ಟಿದನೆಂದೂ ಆ ಕೂಸಿಗೆ ತಾಯಿಯ ಹಾಲು ಇಲ್ಲದಂತಾಗಿ ನಾಗಲಾಂಬಿಕೆಯೆಂಬ ಕೂಸು ಕುಡಿಯುತ್ತಿದ್ದ ತಾಯಿ ಮೊಲೆಹಾಲನ್ನೇ ಬಸವೇಶ್ವರ ಎಂಬ ಆ ಕೂಸು ಕುಡಿಯಿತೆಂದೂ ಹೇಳಲ್ಪಟ್ಟಿದೆ. ಹೀಗೆ ಮಹಾದೇವಸೆಟ್ಟಿಯು ಇತಿಹಾಸಕ್ಕೆ ಸಿಕ್ಕುತ್ತಾನೆ. ಇನ್ನೂ ಈ ವಿಷಯವನ್ನು ಶೋಧಿಸಬೇಕಾಗಿದೆ.

ಕ್ರಿ. ಶ. ೧೧೬೩ರ ಸುಮಾರಿನಲ್ಲಿ ರಾಜೇಂದ್ರ ಚೋಡ ಎಂಬುವನು ಹೊಸದಾಗಿ ವೆಲನಾಟ ರಾಜ್ಯಕ್ಕೆ ರಾಜನಾಗುತ್ತಾನೆ. ಇವನ ಹಿಂದೆ ಆಳಿದವನೇ ಐವಳ್ಳಿಯಲ್ಲಿ ಸಂಹರಿಸಲ್ಪಟ್ಟ ಗೋಮುಖಾಸುರನೆಂದು ತಿಳಿಯಬೇಕಾಗಿದೆ. ಇವನೇ ಎರಡನೇ ಗೊಂಕ ಎಂದು ಹೇಳಲ್ಪಟ್ಟಿದ್ದಾನೆ. ಇವನು ಸಂಹಾರವಾದಮೇಲೆ ಪಂಚಮರ ದೀಕ್ಷೆಯಾದ ಕಾಲವು ಶಿರಿವಾಳ ಶಾಸನದ ಕಾಲ ಕ್ರಿ. ಶ. ೧೧೮೭ಕ್ಕೆ ಸುಮಾರು ಇಪ್ಪತ್ತೈದು ವರ್ಷಗಳಾಗಿರಬೇಕು. ಇಷ್ಟರೊಳಗೆ ಪಂಚಾಸ್ಯ ಗಣವರನಿಗೆ ಇಬ್ಬರು ಹೆಂಡಿರಲ್ಲಿ ಐದೈದು ಮಕ್ಕಳು ಹುಟ್ಟಿದ್ದಾರೆಂದೂ ಅವರಿಗೆ ಪಂಚಾಚಾರ್ಯರು ವೀರಶೈವ ದೀಕ್ಷೆ ಮಾಡಿದರೆಂದೂ ನಂಬಲವಕಾಶವಾಗಿದೆ.

ಮೇಲಿನ ಯಕ್ಕುಂಡಿ ಪ್ರತಿಯಲ್ಲಿ ಸದಾಶಿವನಿಂದ ಪಂಚಾಚಾರ್ಯರುದಯಿಸಿ, ಆ ಸದಾಶಿವನ ಗಂಗೆ-ಗೌರಿ ಎಂಬ ಇಬ್ಬರು ಪತ್ನಿಯರಲ್ಲಿ ಒಬ್ಬೊಬ್ಬರಿಗೆ ಐದೈದು ಮಕ್ಕಳಂತೆ ಅವರು ಐದು ಪಂಚಮರು, ಐದು ಗೌರವರು (ಸೆಟ್ಟಿಗಳು) ಎಂದು ಕರೆಯಲ್ಪಟ್ಟರು ಎಂದು ಹೇಳಿರುವುದನ್ನು ಇತಿಹಾಸಕ್ಕೆ ತಿರುಗಿಸುವುದಾದರೆ ಸದಾಶಿವನೇ ಪಂಚವಕ್ತ್ರ ಗಣೇಶ್ವರ ಅವನ ಹೆಂಡತಿ ಗೌರಿಯೇ ಬಲಿದೇವಿ—ಈಕೆಗೆ ಸರ್ವಮಂಗಳೆ ಎಂಬ ಹೆಸರಿನಿಂದ ಕೆಲವು ಗ್ರಂಥಗಳು ಕರೆದಿವೆ—ಪಾತಾಳದಿಂದ (ನಾಗರ ಖಂಡದಿಂದ) ಮದುವೆಯಾಗಿ ತಂದ ನಾಗಕನ್ಯೆ ಅಥವಾ ಗಂಗಾಂಬಿಕೆ ಎರಡನೆಯ ಹೆಂಡತಿಯೆಂದು ತಿಳಿಯಲು ಬರುತ್ತದೆ. ಈ ಪಂಚಾಸ್ಯಗಣವರನು (ಕೊಲ್ಲಾಪುರದ ರಾಜನಾದ ವಿಕ್ರಮಾದಿತ್ಯನು) ತನ್ನ ರಾಜ್ಯಾಧಿಕಾರವನ್ನು ಬಿಟ್ಟ ಮೇಲೆ (ಕ್ರಿ. ಶ. ಸು. ೧೧೫೭) ಕಾಕತೀಯರುದ್ರರಾಜನಲ್ಲಿ ಸೇನಾನಿಯಾಗಿ ಸೇರಿದನೆಂದೂ ಆಮೇಲೆ ತನ್ನ ಆಪ್ತ ಮಂತ್ರಿಯಾದ ಕಲ್ಲಣನೊಡನೆ ನಾಗರಖಂಡಕ್ಕೆ ಹೋಗಿದ್ದನೆಂದೂ ಕ್ರಿ. ಶ. ಸು. ೧೧೬೫ ರಲ್ಲಿ ನಾಗರಖಂಡಕ್ಕೆ ಬಳ್ಳಿಗಾವೆಗೆ ಅತಿ ಸಮೀಪವಾದ ಸೊರಬ ತಾಲೂಕು ಕುಬಟೂರಿನಲ್ಲಿರುವ ಕೋಟಿಲಿಂಗ ದೇವಾಲಯ ಮುಂತಾದವುಗಳ ದರ್ಶನಕ್ಕೆ ಹೋಗಿದ್ದನೆಂದು ತಿಳಿಯಬರುವ ಶಾಸನದ

ಆಧಾರದಿಂದ ನಿರ್ಧರಿಸಬೇಕಾಗಿದೆ. ಆಮೇಲೆ ಸುಮಾರು ೨೫ ವರ್ಷಗಳ ತರುವಾಯ ಕ್ರಿ. ಶ. ೧೧೯೦ರ ಸುಮಾರಿನಲ್ಲಿ ಐವಳ್ಳಿಯಲ್ಲಿ ಪಂಚಮುಗೌರವರಿಗೆ ಪಂಚಾಚಾರ್ಯರಿಂದ ದೀಕ್ಷೆಯಾಯಿತೆಂದು ತಿಳಿಯಬೇಕಾಗಿದೆ. ಕ್ರಿ. ಶ. ೧೨ನೆಯ ಶತಮಾನದ ಕೊನೆಯ ದಶಕದಲ್ಲಿ ಕೆಲಸಗಳಾಗಿರುವುವೆಂದು ಡಿ. ಕೆ. ಭೀಮಸೇನರಾಯರು ಎಂ.ಎ. ಇವರು ಶೋಧನೆ ಮಾಡಿರುವುದು ಇದಕ್ಕೂ ಅನ್ವಯಿಸುತ್ತದೆ.

ಗೋಮುಖಾಸುರ ಎಂಬ ಹೆಸರಿನಲ್ಲಿ ಸಂಕುಚಿತವಾಗಿ ಗೋ ಎಂಬ ಅಕ್ಷರ ಬಿಟ್ಟು ಉಳಿಯುವ 'ಮುಖಾಸುರ' ಎಂದು ಕೆಲವರು ಕರೆದಿದ್ದಾರೆ. ಪಂಚಾಸ್ಯಗಣವರನ ಮಗನಿಗೆ ಮುಖಾರಿ ಎಂದು ಕರೆದಿರುವುದು ಗೋಮುಖಾರಿ ಎಂಬ ಪದದ ಸಂಕುಚಿತ ನಾಮವಾಗಿರಬೇಕು. ಕೊಲ್ಲಾಪುರದ ವಿಕ್ರಮಾದಿತ್ಯರಾಜನ ತಂದೆಗೂ ಅಯ್ಯನಸಿಂಗ ಎಂಬ ಬಿರುದಿದೆ. ಇವನ ಮಗ ಗೋಮುಖನನ್ನು ಸಂಹರಿಸಿರುವುದರಿಂದ ಮುಖಾರಿಯೂ ಆಗುತ್ತಾನೆ (ಗೋಮುಖನಿಗೆ ಮೂಕಾಸುರ ಎಂದು ಕರೆದಿದ್ದಾರೆ). ಪಂಚಮು ಗೌರವರು ಪಂಚಾಸ್ಯಗಣವರನ ಮಕ್ಕಳೆಂದು; ಕೆಲವು ಗ್ರಂಥಗಳಲ್ಲಿಯೂ, ಮಗನ ಮಕ್ಕಳೆಂದು ಕೆಲವು ಗ್ರಂಥಗಳಲ್ಲಿಯೂ ಹೇಳಿರುವುದನ್ನು ಇನ್ನೂ ಪರಿಶೀಲಿಸಿ ಮಕ್ಕಳೇ ಅಥವಾ ಮೊಮ್ಮಕ್ಕಳೇ ಎಂಬುದನ್ನು ನಿರ್ಧರಿಸಬೇಕಾಗಿದೆ.

ಶ್ರೀ ರುದ್ರನಮಕದ ಏಕಾದಶಾನುವಾಕದಲ್ಲಿ 'ವಾಣಿಜಾಯ' ಎಂಬ ಪದವಿರುವುದೇ ರುದ್ರನು ವಾಣಿಜನು ಎಂಬ ಮೇಲಿನ ಹೇಳಿಕೆಗೆ ಪ್ರಮಾಣವಾಗಿದೆ. ಸದಾಶಿವ ತತ್ತ್ವದ ದೆಸೆಯಿಂದೆ ನಮಶ್ಶಿವಾಯ ಎಂಬ ಐದಕ್ಷರ ಮಂತ್ರವು ಉದಯವಾಗಿದೆ ಎಂಬುದು ಪ್ರಸಿದ್ಧ ವಿಷಯವಾಗಿದೆ. ಈ ಮಂತ್ರದಲ್ಲಿ ಒಂದೊಂದು ಅಕ್ಷರವನ್ನೂ ಒಬ್ಬೊಬ್ಬ ಆಚಾರ್ಯರಿಗೆ ಹಂಚಿ ಕೊಟ್ಟುದರ ದೆಸೆಯಿಂದ ಸದಾಶಿವನ ಪಂಚಮುಖದಿಂದ ಪಂಚಾಚಾರ್ಯರು ಹುಟ್ಟಿದರೆಂಬುವು ಪೂರ್ವದವರ ಮೌಢ್ಯ ನಂಬಿಕೆ. ಅದರಂತೆಯೇ ಮೇಲೆ ಹೇಳಲ್ಪಟ್ಟಿದೆ. ಈಶ್ವರನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ್ಯ–ಎಂಬ ಐದು ಮುಖಗಳೇ ಮೇಲೆ ಕಂಡ ಪಂಚಾಕ್ಷರಿ ಮಂತ್ರವೆಂದು ಗ್ರಂಥಗಳು ಸಾರಿಹೇಳುತ್ತವೆ. ಇವೇ ಐದು ಮುಖಗಳನ್ನೇ ಮೇಲೆ ಹೇಳಿದ್ದಾರೆ. ಈ ಮುಖಗಳಿಗೆ ಪಂಚಬ್ರಹ್ಮ ಎಂತಲೂ ಕರೆದಿದ್ದಾರೆ. ಪಂಚಬ್ರಹ್ಮಮಂತ್ರವೆಂದರೆ ಪಂಚಾಕ್ಷರಿ ಮಂತ್ರವೇ ಆಗಿದೆ. ಈ ಪಂಚಾಕ್ಷರಿ ಮಂತ್ರದ ಜೊತೆಗೆ ಓಂಕಾರ ಸೇರಿದಡೆ, ಷಡಕ್ಷರ ಮಂತ್ರವಾಗುತ್ತದೆ. ಈ ಷಡಕ್ಷರ ಮಂತ್ರಕ್ಕೆ ಮೂಲ ಪಂಚಾಕ್ಷರಿ ಎಂತಲೂ ಕರೆಯುತ್ತಾರೆ. ಷಡ್‌ಬ್ರಹ್ಮ ಎಂಬ ಹೆಸರೂ ಇದೆ. ಈ ಷಟ್‌ಬ್ರಹ್ಮಾನುಸಂಧಾನವೇ ಲಿಂಗಾನುಸಂಧಾನವೂ ಆಗಿದೆ (ಷಡಕ್ಷರ ಮಂತ್ರ ರೂಪವೇ ಲಿಂಗರೂಪ). ಆದುದರಿಂದಲೇ ವೀರಶೈವರ ಆಚರಣೆಯು ಶ್ರೇಷ್ಠವು. ಇವರು ಶ್ರೇಷ್ಠರು ಆಗಿದ್ದಾರೆ.

ಕಲಚುರ್ಯ ಬಿಜ್ಜಳನ ಕಡೆಗಾಲದಲ್ಲಿ ಕೊಲ್ಲಾಪುರದ ರಾಜನ ಕಡೆಯಿಂದ ಬಸವೇಶ್ವರನು ಬಿಜ್ಜಳನಿಗೆ ವಿರೋಧವನ್ನು ಮಾಡಿಸಿದನೆಂದು ಜೈನ ಗ್ರಂಥಗಳು ಹೇಳುತ್ತವೆ. ವೀರಶೈವರ ಲೇಖನಗಳಿಂದ ಬಸವೇಶ್ವರನು ಕೊಲ್ಲಾಪುರದಲ್ಲಿ ತನ್ನ ಕಡೆಗಾಲದಲ್ಲಿ

ಇದ್ದುದು ಗೊತ್ತಾಗುತ್ತದೆ. ಕಾಕತೀಯ ಮೊದಲನೆಯ ರುದ್ರರಾಜನ ಅಧಿಕಾರದ ಆರಂಭ ಕಾಲದಲ್ಲಿ (ಕ್ರಿ. ಶ. ಸು. ೧೧೬೧) ಬಸವೇಶ್ವರನು ಕಾಕತೀಯ ರಾಜ್ಯದ ಪಶ್ಚಿಮ ಭಾಗದಲ್ಲಿ ವೀರಶೈವ ಧರ್ಮವನ್ನು ಹರಡಿದನೆಂದು ಚಾರಿತ್ರಿಕ ಲೇಖನಗಳು ದೊರಕುತ್ತವೆ. ಕಾಕತೀಯ ಮೊದಲನೆಯ ರುಧ್ರನು ಕೊಲ್ಲಾಪುರದ ವಿಜಯಾದಿತ್ಯ ನನ್ನು ವೇಲನಾಟಿ ರಾಜ್ಯದ ಜಯಕ್ಕಾಗಿ ನೇಮಿಸಿಕೊಂಡುದು ಮೇಲೆ ಹೇಳಲ್ಪಟ್ಟಿದೆ. ಈ ಕಾರಣಗಳಿಂದ ಕೊಲ್ಲಾಪುರದ ರಾಜರು, ಓರುಗಲ್ಲಿನ ಕಾಕತೀಯ ರಾಜರು ಪ್ರೇಮ ಭಾವವುಳ್ಳವರಾಗಿದ್ದರೆಂದೂ, ಕಾಕತೀಯ ಮಹಾದೇವರಸನು ಕೊಲ್ಲಾಪುರದ ವಿಜ ಯಾದಿತ್ಯನು (ವಿಕ್ರಮ) ಇಬ್ಬರೂ ಕೂಡಿ ಎರಡನೆಯ ಗೊಂಕ (ಗೋಮುಖಾಸುರ) ನನ್ನು ಸಂಹರಿಸಿದರೆಂದು ನಿರ್ಧರಿಸಲಿಕ್ಕೆ ಬರುತ್ತದೆ. ಈ ಇಬ್ಬರೂ ರಾಜರು ಬಸವೇ ಶ್ವರನಲ್ಲಿ ಭಕ್ತಿಯುಳ್ಳವರು. ಆ ಕಾಲದಲ್ಲಿಯೇ (ಕ್ರಿ.ಶ.ಸು. ೧೧೬೧) ಆ ರಾಜ್ಯಗಳ ಲ್ಲಿದ್ದ ಬಣಜಿಗರು ವೀರಶೈವರಾಗಿ ಪರಿವರ್ತಿಸಿದ್ದಾರೆ. ಈ ಲೇಖನಗಳಲ್ಲಿ ಕಂಡ ಬಣಜಿ ಗರ ವರ್ತನೆಗೆ ಅನುಸಾರವಾದ ವರ್ಣನೆಗಳುಳ್ಳ ಬಣಜಿಗರು ಬಸವೇಶ್ವರನಿಗಿಂತಲೂ ಮುಂಚೆ ಇದ್ದರೆಂಬುದಕ್ಕೆ ಶಿಲಾಶಾಸನಗಳ ಆಧಾರವೂ ದೊರಕುತ್ತದೆ.

ಬಸವೇಶ್ವರನು ಕಾಶ್ಮೀರರಾಜನ ಅರಮನೆಯಿಂದ ವೀರಶೈವರನ್ನು ಕರೆದು ಕೊಂಡು ಬಂದುದು ವೀರಶೈವ ಗ್ರಂಥಗಳಿಂದ ಗೊತ್ತಾಗುತ್ತದೆ. ಬಸವೇಶ್ವರನ ಕಾಲದಲ್ಲಿ ತಕ್ಕಡಿಯಿಂದ ತೂಗುವ ಸೆಟ್ಟರು (ಇವರೇ ಹಸುಬೆಯ ಸೆಟ್ಟರು), ಸೇರಿನಿಂದ ಧಾನ್ಯಗಳನ್ನು ಅಳತೆಮಾಡುವ ಸೆಟ್ಟರು (ಇವರೇ ಸಂಗಮಸೆಟ್ಟರು)-ಎಂದು ಎರಡು ವಿಧದ ಸೆಟ್ಟರು ಮಾತ್ರ ಇದ್ದರೆಂದೂ, ಸ್ವಲ್ಪಕಾಲದ ತರುವಾಯ ಕ್ರಿ. ಶ. ಸು. ೧೧೯೦ ರಲ್ಲಿ ಪಂಚಾಸ್ಯಗಣವರನ ಪುತ್ರರಿಗೆ ಅಥವಾ ಪೌತ್ರರಿಗೆ ದೀಕ್ಷೆಮಾಡಿದಾಗ ಏರ್ಪಡಿಸ ಲ್ಪಟ್ಟ ಪಂಚಗೌರವರು (ಐವರು ಸೆಟ್ಟರು)-ಹೀಗೆ ಬಣಜಿಗರ ಕುಲವು ಬಂದಿತೆಂದು ನಿರ್ಧರಿಸುವಲ್ಲಿ ಯಾರಿಗೂ ಅನುಮಾನವು ಬರಲಾರದು.

ಬಸವೇಶ್ವರನ ವಚನಗಳಲ್ಲಿ, ಪ್ರಭುದೇವರ ವಚನಗಳಲ್ಲಿ ಪಂಚಮ ಗೌರವರ ಸುದ್ದಿಯೇ ಇಲ್ಲ. ಆ ಸಾಂಕೇತಿಕ ಪದಗಳೂ ಇಲ್ಲ. ಮೂರನೆಯ ಕುಲೋತ್ತುಂಗ ಚೋಳನ ಕಾಲದಲ್ಲಿ (ಕ್ರಿ. ಶ. ಸು. ೧೧೭೮-೧೨೧೮) ಕಂಚಿಯಲ್ಲಿ ಎಲ್ಲಾ ರಾಜರೂ, ಎಲ್ಲಾ ಧರ್ಮದವರೂ ಜಗಳವಿಲ್ಲದೆ ಇರಬೇಕೆಂಬ ಒಂದು ದೊಡ್ಡ ಪ್ರಯತ್ನ ನಡೆ ಯಿತು. ಅಲ್ಲಿ ಆದ ಧಾರ್ಮಿಕ ತೀರ್ಮಾನಗಳ ಬಗೆಗೆ ಒಂದು ಗ್ರಂಥವು ಬರೆಯಲ್ಪ ಟ್ಟಿತು. (ಕ್ರಿ. ಶ. ಸು. ೧೨೧೦-೧೨೧೨). ಆ ಗ್ರಂಥಕ್ಕೆ 'ರುದ್ರಭಾರತ' ಅಥವಾ ಬ್ರಹ್ಮಾಂಡ ಪುರಾಣ ಎಂಬ ಹೆಸರಿದೆ. ಇದರಲ್ಲಿ ಎಲ್ಲ ಜಾತಿಗಳ ವಿವರವೂ ಹೇಳಲ್ಪ ಟ್ಟಿದೆ. ಈ ಪಂಚಮ ಗೌರವರ ಲೇಖನಗಳಲ್ಲಿ ರುದ್ರನಿಂದ ವಾಣಿಜರ ಉತ್ಪತ್ತಿ ಎಂದು ಹೇಳಿದಂತೆ ರುದ್ರನಿಂದ ಪಂಚಮರ ಉತ್ಪತ್ತಿಯಾಯಿತು, ಎಂದು ಹೇಳಲ್ಪಟ್ಟಿದೆ. ಈ ರುದ್ರಭಾರತದಲ್ಲಿ ಪ್ರಭುದೇವರು ಸಿದ್ಧರಾಮೇಶ್ವರನಿಗೆ ಬೋಧಿಸಿದ ಮಂತ್ರಗೋಪ್ಯದ ಪದ್ಯಗಳ ಭಾಗಗಳು ಸೇರಿಕೊಂಡಿವೆ. ಆದುದರಿಂದ ಅಲ್ಲಮಪ್ರಭು ಮತ್ತು ಬಸವೇಶ್ವರರ

ತರುವಾಯ (ಕ್ರಿ. ಶ. ೧೨೧೦ರ ಒಳಗೆ) ಈ ಪಂಚಮ ಗೌರವರು ಉದಯವಾದರೆಂದು ಸಿದ್ಧವಾಗುತ್ತದೆ. ಮೇಲೆ ಹೇಳಿದಂತೆ ಕ್ರಿ.ಶ.ಸು. ೧೧೯೦ರ ಎಡಬಲ ಎಂದು ನಿರ್ಣಯಿಸುವುದೇ ಸರಿಯಾದುದಾಗಿದೆ.

ಈ ಬಣಜಿಗರ ಮತ್ತು ಪಂಚಮರ ಸಂಬಂಧದ ಲೇಖನಗಳಲ್ಲಿ ಪಂಚಾಚಾರ್ಯರ ಗ್ರಂಥಗಳಲ್ಲಿ ಪಂಚಾಚಾರ್ಯರಿಗೆ ಹೇಳಲ್ಪಟ್ಟಂತೆ ಯುಗಯುಗಗಳ ಹೆಸರಿಲ್ಲದೆ ಕಲಿಯುಗದಲ್ಲಿ ಪಂಚಮ ಗೌರವರು ಉತ್ಪತ್ತಿಯಾದರೆಂದು ಹೇಳಲ್ಪಟ್ಟಿದೆ. ಈ ಕಲಿಯುಗದ ಪಂಚಮ ಗೌರವರಿಗೆ ಕಲಿಯುಗದ ಪಂಚಾಚಾರ್ಯರಾದ ಶ್ರೀ ರೇವಣಸಿದ್ಧರು, ಮರುಳಸಿದ್ಧರು, ಏಕೋರಾಮರು, ಪಂಡಿತಾರಾಧ್ಯರು, ವಿಶ್ವಾರಾಧ್ಯರು ವೀರಶೈವ ದೀಕ್ಷೆ ಮಾಡಿದರೆಂದು ಈ ಲೇಖನಗಳಲ್ಲಿ ಹೇಳಲ್ಪಟ್ಟಿದೆ. ಕ್ರಿ. ಶ. ೧೧೮೭ರಲ್ಲಿ ಸಿರಿವಾಳದಲ್ಲಿ ಶ್ರೀ ರೇಣುಕಾಚಾರ್ಯರ ವಿಷಯವನ್ನು ವಿವರಿಸಿದ ಶಾಸನವೂ ಹೊರಬಿದ್ದಿದೆ. ಈ ಶಾಸನದಲ್ಲಿ ಶ್ರೀ ರೇವಣರ ಪುರಾಣ ಮೊದಲಾದ ಗ್ರಂಥಗಳಲ್ಲಿ ಹೇಳಲ್ಪಟ್ಟ ಕೆಲಸಗಳೂ ವಿವರಿಸಲ್ಪಟ್ಟಿವೆ. ಆದುದರಿಂದ ಈ ಕಾಲದ ಸುಮಾರಿನಲ್ಲಿಯೇ ಪಂಚಮ ಗೌರವರಿಗೆ ಪಂಚಾಚಾರ್ಯರಿಂದ ದೀಕ್ಷೆಯಾಯಿತೆಂದು ತಿಳಿಯುವಲ್ಲಿ ಯಾವ ಅನುಮಾನವೂ ಬರಲಾರದು.

ಹೀಗೆ ಪಂಚಮ ಗೌರವರ ವಿವರಣವು ಇಲ್ಲಿಗೆ ಮುಗಿಯುತ್ತದೆ.

**ಟಿಪ್ಪಣಿ:** ನಡೆದುದನ್ನು ನಡೆದಂತೆ ಹೇಳುವ ಲೇಖನಗಳಿವು. ಇವುಗಳಲ್ಲಿ ಯುಗಯುಗಗಳ ಮಾತಾಗಲಿ, ಉತ್ಪ್ರೇಕ್ಷೆ ಅಲಂಕಾರಗಳಾಗಲಿ ಇಲ್ಲವೆಂದು ತಿಳಿಯಬಹುದಾಗಿದೆ. ಇದ್ದುದನ್ನು ಇದ್ದಂತೆ ಪ್ರಕಟಿಸಬೇಕೆನ್ನುವವನು ಇದರ ಪ್ರಕಾಶಕನು. ಇದು ಸಮಾಜದ ಇತಿಹಾಸದಲ್ಲಿ ಒಂದು ಮುಖ್ಯವಾದ ಘಟನೆಯಾಗಿದೆ. ಪಂಚಮ ಗೌರವರಿಂದಲೇ ಸಮಾಜವು ಬಹಳಮಟ್ಟಿಗೆ ತುಂಬಿಕೊಂಡು ಹೋಗಿದೆ. ಅವರು ತಮ್ಮ ಪೂರ್ವಜರ ವೃತ್ತಾಂತವನ್ನೂ ಆಚಾರವನ್ನೂ ಸರಿಯಾಗಿ ತಿಳಿದುಕೊಂಡು ತಮ್ಮ ಸಂಸ್ಕೃತಿಯ ಮೇಲೆ ಅಭಿಮಾನವಿಟ್ಟು ಅದನ್ನು ಪ್ರಕಾಶಪಡಿಸುವವರಾಗಲಿ, ಎಂದು ಹಾರೈಸುವ

ಸಮಾಜದ ದಾಸಾನುದಾಸರ ದಾಸನಾದ
ಶ್ರೀ ಚನ್ನಮಲ್ಲಿಕಾರ್ಜುನ

# ಈಗಿನ ವೀರಶೈವದ ಹಿನ್ನೆಲೆಯು ಪಾಶುಪತವ್ರತ

ಶಿವಧರ್ಮ ಮುಖ್ಯವಾದುದೆನಿಸಿಕೊಂಡ ಈಗಿನ ವೀರಶೈವಾಚರಣೆಗಳು ಸಾವಿರಾರು ವರ್ಷಗಳ ಹಿಂದೆ ಪಾಶುಪತವ್ರತದಲ್ಲಿ ಇದ್ದುವೆಂಬ ಬಗ್ಗೆ ಕೆಲಕೆಲವು ಲೇಖನಗಳು ಕಂಡುಬರುತ್ತವೆ.

ಹರಪ್ರಿಯನೆಂಬುವನೊಬ್ಬನು ಶ್ವೇತನೆಂಬುವವನಿಗೆ ಶಿವಭಕ್ತನ ಪೂಜೆಯಿಂದ ಆಗುವ ಫಲಗಳನ್ನು ವಿವರಿಸುತ್ತಾನೆ. "ಲಿಂಗಾಂಗ ಸಂಬಂಧಿಯಾಗಿಯೂ ಸಕಲೋಪನಿಷತ್ತುಗಳ ಅರ್ಥವನ್ನು ತಿಳಿದವನಾಗಿಯೂ, ಶಿವಧ್ಯಾನದಲ್ಲಿ ಆಸಕ್ತನಾಗಿಯೂ ವಿಭೂತಿಯಿಂದ ಲೇಪಿಸಲ್ಪಟ್ಟ ಸರ್ವಾವಯುವಗಳುಳ್ಳವನಾಗಿಯೂ ಶ್ರೀ ರುದ್ರಾಧ್ಯಯನ ಪರಾಯಣನಾಗಿಯೂ, ರುದ್ರಾಕ್ಷಮಾಲಿಕಾಲಂಕೃತನಾಗಿಯೂ, ಪಾಶುಪತ ವ್ರತವನ್ನು ಹಿಡಿದವನಾಗಿಯೂ, ಅತಿವರ್ಣಾಶ್ರಮಿಯಾಗಿಯೂ ಇರುವ ಸಾನಂದನೆಂಬ ಮುನಿಯನ್ನು ನಿನ್ನ ಪುತ್ರರೊಡನೆ ಪೂಜಿಸು. ಆತನ ಅನುಗ್ರಹದಿಂದ ನಿನ್ನ ಮಗನು ರೋಗರಹಿತನಾಗುವನು. ಪಾಪನಿವಾರಣೆಗೋಸ್ಕರ ಶಿವಭಕ್ತನ ಪೂಜೆಯಿಂದ ಭೋಗ ಮೋಕ್ಷಗಳು ಸಿದ್ಧಿಸುತ್ತವೆ. ಬೇರೆ ಕರ್ಮಗಳನ್ನಾಚರಿಸುವುದರಿಂದ ನಿನ್ನ ಮಗನ ರೋಗ ಹೋಗುವುದಿಲ್ಲ ಎಂದು ಹೇಳುತ್ತಾನೆ (ಈ ವಿಷಯ ಪುರಾಣೋಕ್ತವಾದುದು).

ಮುಂಬೈಯಲ್ಲಿ ಮುದ್ರಿತವಾದ 'ಉಪನಿಷತ್ ಸಮುಚ್ಚಯಃ' ಎಂಬ ಪುಸ್ತಕದಲ್ಲಿ 'ಪಾಶುಪತ ಬ್ರಹ್ಮೋಪನಿಷತ್' ಎಂಬುದಾಗಿ ಒಂದು ಇದೆ. ಅದನ್ನು ಬ್ರಹ್ಮಪುತ್ರನಾದ ವೈಶ್ರವಣನಿಗೆ ಸ್ವಯಂಭು ಬ್ರಹ್ಮನು ಹೇಳುತ್ತಾನೆ. ಅದರಲ್ಲಿ ಹೀಗೆ ಇದೆ:

"ಮನುಷ್ಯರಿಗೆ ಒಳಗಿನ ಸೂರ್ಯನು ತಿಳಿದಿಲ್ಲ. ಹೊರಗಿನ ಜಗತ್ತಿನ ಸೂರ್ಯನು ಪ್ರಕಾಶಿಸುತ್ತಾನೆ, ಎಂದು ತಿಳಿದು ಆ ಸೂರ್ಯನ ಪ್ರಾರ್ಥನೆ ಮಾಡುವವರಾಗಿ ಪಂಡಿತರು ಆಚರಿಸುತ್ತಾರೆ. ಪಶುಗಳನ್ನು ಕೊಲ್ಲುವ ವಾಜಪೇಯ ಯಾಗವನ್ನು ಇಂದ್ರನನ್ನು ದೇವನನ್ನಾಗಿ ತಿಳಿದು ಮಾಡುತ್ತಾರೆ. ಅಹಿಂಸೆಯೆಂಬುದು ಧರ್ಮಯಾಗ, ಇದಕ್ಕೆ ಪರಮಾತ್ಮನಾದ ಪಶುಪತಿ ದೇವನು. ಪರಮಹಂಸನು ಈ ಯಾಗವನ್ನು ಮಾಡುವವನು. ಬ್ರಹ್ಮೋಪನಿಷತ್ತಿನಲ್ಲಿ ಹೇಳಲ್ಪಟ್ಟ ಬ್ರಹ್ಮವನ್ನು ಸ್ವಾಧ್ಯಾಯದಿಂದ ಕೂಡಿದವರಾದ ಬ್ರಾಹ್ಮಣರು ಆಚರಿಸುತ್ತಾರೆ. ಅಶ್ವಮೇಧ ಯಾಗವು ರಾಜರಿಗೆ

ಬ್ರಹ್ಮಚರ್ಯವಾಗಿದೆ. ಎಲ್ಲರಿಗೂ ಮೊದಲು ಹೇಳಲ್ಪಟ್ಟ ಬ್ರಹ್ಮಯಜ್ಞ ಕ್ರಮವು (ಅಹಿಂಸಾಧರ್ಮಯಾಗ) ಕ್ರಮವಾಗಿ ಹೇಳಲ್ಪಟ್ಟ ಮೋಕ್ಷದ ರೀತಿಯುಳ್ಳುದಾಗಿದೆ."

ಪಶುಪತಿಯಾದ ಶಿವನು ಎಲ್ಲರಲ್ಲಿ ಎಲ್ಲದರ ಸಾಕ್ಷಿಯಾಗಿ ಯಾವಾಗಲೂ ಇರುತ್ತಾನೆ. ಅವನಿಂದ ಮನಸ್ಸು ಪ್ರೇರಿತವಾಗಿ ವಿಷಯಗಳ ಕಡೆಗೆ ಹೋಗುತ್ತದೆ. ಪ್ರಾಣವು ಚೇಷ್ಟಿಸುತ್ತದೆ; ವಾಕ್ಕು ಮಾತಾಡುತ್ತದೆ; ಕಣ್ಣು ನೋಡುತ್ತದೆ. ಇದರಂತೆ ಉಳಿದ ಇಂದ್ರಿಯಗಳು ಕೆಲಸಮಾಡುತ್ತವೆ. ಹೀಗೆ ಪ್ರವರ್ತನವಾಗುವುದು ಮಾಯೆಯಿಂದ; ಸ್ವಭಾವವಾಗಿ ಅಲ್ಲ. ಕಿವಿಯು ಆತ್ಮನಲ್ಲಿ ಲೀನವಾದರೆ ಪುರುಷನಾದ ಶಿವನು ಕಿವಿಯೊಡನೆ ಪ್ರವೇಶಿಸಿ ಕೇಳುವ ಲಕ್ಷಣವನ್ನುಂಟುಮಾಡುತ್ತಾನೆ. ಇದರಂತೆ ಮನಸ್ಸು, ಪ್ರಾಣ, ಉಳಿದ ಇಂದ್ರಿಯಗಳಿಗೂ ಮಾಡುತ್ತಾನೆ. ಇದನ್ನು ತಿಳಿದವರಿಗಾಗಲಿ, ತಿಳಿಯದವರಿಗಾಗಲಿ ಸ್ವಯಂ ಜೋತಿಪ್ರಕಾಶವು ಒಳಗೆ ಇದ್ದೇ ಇದೆ. ಮಾಡದೆ ತಾನಾಗಿ ಉಂಟಾದ ವಿಷಯಗಳಿಗೂ ಕೂಡ ಅಂತರಂಗದಲ್ಲಿ ಸ್ವಯಂ ಪ್ರಕಾಶವು ಸ್ವಾತ್ಮನಿಂದಲೇ ಉಂಟಾಗುತ್ತದೆ. ತರ್ಕದಲ್ಲಿ ಹೇಳಲ್ಪಟ್ಟ ಪ್ರಮಾಣಗಳಿಲ್ಲದೆ ಯಾವನು ಯಾವನು ಬ್ರಹ್ಮನನ್ನು ತಿಳಿಯುತ್ತಾನೋ ಅವನೇ ಬ್ರಹ್ಮವಿತ್ (ಬ್ರಹ್ಮವನ್ನು ತಿಳಿದವನು) ಅಂತರಾತ್ಮನು ಪರಂಜ್ಯೋತಿಯು. ಮಾಯೆಯೂ ಮಹತ್ತಮವಾದುದು. ಹೀಗಿದ್ದರೂ ಪರಂಜ್ಯೋತಿಯಲ್ಲಿ ಮಾಯೆಯು ಹೇಗೆ ಹುಟ್ಟಿತೆಂದು ಕೇಳುವುದಾದರೆ, ಸ್ವಪ್ರಕಾಶ ಸಂಸಿದ್ಧವಾದ ಚಿದ್ಘನನಲ್ಲಿ ತನ್ನ ಅನುಭವದಿಂದಾಗಲಿ. ತರ್ಕವಲ್ಲಿನ ಪ್ರಮಾಣಗಳಿಂದಲಾಗಲಿ, ಮಾಯೆಯು ಸಂಭವಿಸುವುದಿಲ್ಲ. ವ್ಯಾವಹಾರಿಕ ದೃಷ್ಟಿಯಿಂದ ವಿದ್ಯಾ ಅವಿದ್ಯಾ ಎಂಬ ಮಾಯೆಯೇ ಹೊರತು ಬೇರೆ ಇಲ್ಲ. ಹೀಗೆ ತಿಳಿದವನಿಗೆ ಜೀವವೂ ಇಲ್ಲ; ಜಾತಿಯೂ ಇಲ್ಲ; ಆಶ್ರಮವೂ ಇಲ್ಲ; ಅವನಿಗೆ ಬ್ರಹ್ಮವೂ ಇಲ್ಲ; ಧರ್ಮಾಧರ್ಮಗಳೂ ಇಲ್ಲ. ಯಾವಾಗ ಸರ್ವವೂ ಬ್ರಹ್ಮಾತ್ಮಕವಾಗಿರುವುದೋ ಆಗದು: ಖಾದಿಗಳಿಲ್ಲವೇ ಇಲ್ಲ. "ಬ್ರಹ್ಮೈ ವೇದಮಮೃತಂ ತತ್ಪುರಸ್ತಾತ್ ಬ್ರಹ್ಮಾನಂದಂ ಪರಮಂ ಚೈವ ಪಶ್ಚಾತ್" ಹೀಗೆ ಬ್ರಹ್ಮವು ಮೊದಲು 'ಅಮೃತ' ಎಂದೂ ಆಮೇಲೆ 'ಪರಮ' ಎಂದೂ ತಿಳಿಯಬೇಕು. ದೋಷಗಳನ್ನು ಕಳೆದವರು ತಮ್ಮ ಶರೀರದಲ್ಲಿ ಸರ್ವಂ ಜ್ಯೋತಿ ಸ್ವರೂಪವನ್ನು ಪಾರಮಾರ್ಥಿಕವಾಗಿ ತಿಳಿಯುತ್ತಾರೆ. ಇತರರು ಮಾಯೆಯಿಂದ ಕೂಡಿದವರಾಗಿ ತಿಳಿಯುವುದಿಲ್ಲ. ಈ ರೀತಿ ಸ್ವರೂಪಜ್ಞಾನಿಯಾದವನಿಗೆ ಎಲ್ಲಿಗೂ ಹೋಗಬೇಕಾದ ಅವಶ್ಯಕತೆಯಿಲ್ಲ. (ಕ್ಷೇತ್ರ ತೀರ್ಥಯಾತ್ರಾದಿಗಳಿಲ್ಲ ?) ಆಕಾಶವು ಸಂಪೂರ್ಣವಾಗಿದ್ದು ಅದು ಎಲ್ಲಿಗೂ ಹೋಗಬೇಕಾದ್ದಿಲ್ಲ. ಸಮ್ಯಕ್‌ಜ್ಞಾನಿಗಳಿಗೆ ಸ್ವರೂಪವೇ ಸಕಲವೂ ಆಗಿದೆ. ಒಟ್ಟಿನಲ್ಲಿ-'ಬ್ರಹ್ಮವಿದ್ ವಸತಿ ಜ್ಞಾನಾತ್ ಸರ್ವಂ ಬ್ರಹ್ಮಾತ್ಮನ್ಯೈವತು'-ಎಂಬ ಈ ಉಪನಿಷತ್ತಿನ ಶ್ಲೋಕದ ಸಾರವನ್ನೇ ಈ ಉಪನಿಷತ್ತು ವಿವರಿಸುತ್ತದೆ.

ವೀರಶೈವರು ತಿಳಿದಿರುವುದೇನು ? ಸರ್ವವೂ ಲಿಂಗ; ಪಾಶುಪತ ಬ್ರಹ್ಮಿಗಳು ತಿಳಿದಿರುವುದೇನು ? ಸರ್ವಬ್ರಹ್ಮ-ಈ ಉಪನಿಷತ್ತಿನಲ್ಲಿ ಬ್ರಹ್ಮಸಾಧನೆಗೆ ಹಂಸಮಂತ್ರ

ವನ್ನು ಹೇಳಿ, ಅದೇ ಪ್ರಮಾಣವೆಂದಿದ್ದಾರೆ. ವೀರಶೈವರು ಸಾಧನೆಗೆ ಮೂಲ ಪ್ರಣವವನ್ನೂ ಹೇಳಿ ಅದನ್ನೇ ಲಿಂಗವೆಂದು ತಿಳಿದಿದ್ದಾರೆ.

ಇದನ್ನೆಲ್ಲ ನೋಡಿದರೆ, ಇವರಲ್ಲಿನ ಪಾಶುಪತ ವ್ರತವೇ ಕೆಲವು ಮಾರ್ಪಾಡುಗಳಿಂದ ವೀರಶೈವವಾಗಿ ಪರಿಣಮಿಸಿದೆ–ಎಂದು ತಿಳಿಯಲು ಆತಂಕವೇನೂ ಇಲ್ಲವೆಂದು ತೋರುತ್ತದೆ.

ಬಸವೇಶ್ವರನು ತನ್ನ ಒಂದು ವಚನದಲ್ಲಿ ಈ ರೀತಿ ಹೇಳಿದ್ದಾನೆ—

"ಬಾರದು ಬಾರದು ಭಕ್ತಂಗೆ ಪರಧನ ಪರಸ್ತ್ರೀ;
ಬಾರದು ಬಾರದು ವಿಷಯಿಗೆ ಪಶುಪತ ವ್ರತವು;
ಬಾರದು ಬಾರದು ಭವಭಾರಿಗೆ ಕೂಡಲಸಂಗಮದೇವನೊಕ್ಕುದ
ಕೇಳಬಾರದು."

ವೀರಶೈವ ಪದವನ್ನು ತನ್ನ ಅನುಯಾಯಿಗಳಿಗಾಗಿ ಉಪಯೋಗಿಸದೆ ಇದ್ದ ಬಸವಣ್ಣ ತನ್ನ ಈ ವಚನದಲ್ಲಿ 'ಪಶುಪತವ್ರತ' ಎಂಬುದನ್ನು ಉಪಯೋಗಿಸಿರುವುದನ್ನು ನೋಡಿದರೆ, ಈ ಪಾಶುಪತವ್ರತ ಧರ್ಮವನ್ನೇ ಬಸವೇಶ್ವರನು ಎತ್ತಿಹಿಡಿದಂತೆ ವ್ಯಕ್ತವಾಗುತ್ತದೆ. ಮೇಲೆ ಕಂಡ ಉಪನಿಷತ್ತಿನಲ್ಲಿ ವಿಷಯಗಳು ಸ್ವಯಂ ಪ್ರಕಾಶವಾಗುವ ರೀತಿಯು ವಿವರಿಸಲ್ಪಟ್ಟಿದೆ. ಬಸವೇಶ್ವರನು ವಿಷಯಾಭಿಮುಖನಿಗೆ ಪಾಶುಪತವ್ರತವು ಬರುವುದಿಲ್ಲವೆಂದು ಹೇಳುತ್ತಾನೆ. ಹೀಗೆ ಉಪನಿಷತ್ತಿನ ಅಭಿಪ್ರಾಯವನ್ನೇ ಬಸವೇಶ್ವರನ ವಚನವೂ ಸಮರ್ಥಿಸುತ್ತದೆ.

ಮೇಲಿನ ಉಪನಿಷತ್ತಿನಲ್ಲಿ ಬ್ರಹ್ಮಾನಂದದ ಉತ್ತರದಲ್ಲಿ ಆ ಬ್ರಹ್ಮವು 'ಪರಮ' ಎಂದು ಹೇಳಲ್ಪಟ್ಟಿದೆ. ಈ ಪರಮ ಎಂಬ ಪದವನ್ನು ಕೂಡಿಸಿಕೊಂಡು 'ಪರಮಶೈವ' ಪರಮ ಮಾಹೇಶ್ವರ ಈ ರೀತಿವ್ರತಿಗಳನ್ನು ಕರೆಯುತ್ತಿದ್ದರೆಂದು ತಿಳಿಯಲಿಕ್ಕೆ ಬರುತ್ತದೆ. ಪುರಾಣಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ, 'ಪರಮಶೈವ' ಇದರ ವಿವರವನ್ನು ನೋಡಬೇಕಾಗಿದೆ. ಇದಲ್ಲದೆ ಕೆಲವು ಶಾಸನಗಳಲ್ಲಿಯೂ, ವೀರಮಾಹೇಶ್ವರ ಪದವನ್ನು ನೋಡಬಹುದಾಗಿದೆ. ಚನ್ನಪಟ್ಟಣ ತಾಲೂಕು ಬೇವೂರು ಶಾಸನ ೨೮೪ ರಲ್ಲಿ (E. C. IX Bangalore Suppliment) ಹೆಗ್ಗಡೆ ಶಂಕ(ರ?)ಯ್ಯನು ಪರಮ ಮಾಹೇಶ್ವರನೆಂದು ಹೇಳಲ್ಪಟ್ಟಿದ್ದಾನೆ. ಇನ್ನೂ ಇವೆ. ವೀರಶೈವರು ಪರಮ ಮಾಹೇಶ್ವರರೆಂದು ಮೊಗ್ಗೆಯ ಮಾಯಿದೇವರೂ ತಮ್ಮ ಶತಕತ್ರಯದಲ್ಲಿ ಹೇಳಿದ್ದಾರೆ. ಪಶು-ಪಾಶ-ಪತಿ ಈ ಮೂರನ್ನು ವಿವರಿಸಿದ ಗ್ರಂಥಗಳೂ ದೊರೆಯುತ್ತವೆ. ಶ್ರೀ ರುದ್ರತತ್ತ್ವ ಎಂಬ ಗ್ರಂಥವೊಂದು ಈ ಧರ್ಮದವರೇ ರಚಿಸಿದ್ದು, ಅದರಲ್ಲಿ ಕೂಸಿಗೆ

೧೧ನೆಯ ದಿನದಲ್ಲಿ ಲಿಂಗಧಾರಣೆ ಮಾಡಬೇಕೆಂದಿದೆ. ಇದಲ್ಲದೆ ಸೋಮಶಂಭು, ಅಘೋರ ಶಿವಾಚಾರ್ಯ ಮುಂತಾದ ಈ ವರ್ತನದವರ ಹೆಸರುಗಳೂ ದೊರಕುತ್ತವೆ.

ಈ ಪಾಶುಪತವ್ರತಿಗಳು ಬ್ರಾಹ್ಮಣಾದಿ ಜಾತಿಗಳಿಗೆ ಸೇರಿದವರಲ್ಲ. ಅತಿವರ್ಣಾಶ್ರಮಿಗಳು. ಶ್ರೀ ಕಪಟರಾಳರವರು ಪೂರ್ವದಲ್ಲಿ ಜಾತಿಗಳಿಗೆ ಸಿಲುಕದ ಪ್ರಾಚೀನ ಶೈವವೊಂದಿತ್ತೆಂದು ಕಂಡುಹಿಡಿದಿದ್ದಾರೆ. ಅಂತಹ ಲಿಂಗಧಾರಿಗಳು ಅನೇಕ ವಿಧವಾಗಿ ಇದ್ದರೆಂಬ ಅಭಿಪ್ರಾಯವೇ ಈ ಲೇಖಕನಿಗೂ ಬಂದಿದೆ. ಲಿಂಗಿಗಳೆಲ್ಲ ಪಾಷಂಡಿಗಳೆಂದು ಅಮರಕೋಶ(ಕ್ರಿ. ಶ. ಸು. ೨೦೦೦ ವರ್ಷದ ಹಿಂದಿನದು)ವು ಹೇಳುತ್ತದೆ.

ಶಿವಧರ್ಮವು ಭಾರತದಲ್ಲಿ ಕ್ರಿ. ಶ. ಪೂರ್ವ ೫–೬ ಸಾವಿರ ವರ್ಷಗಳಿಂದಲೂ ಇದೆ. ಲಿಂಗಧಾರಿಗಳು ಅಷ್ಟು ಪೂರ್ವದಿಂದಲೂ ಇದ್ದರೆಂದು ಡಾ. ಮಾರ್ಷಲ್‌ರವರು ಕಂಡುಹಿಡಿದು ಪ್ರಕಟಿಸಿದ್ದಾರೆ. ಮೇಲೆ ಕಂಡ ಪರಮಶೈವರು ಉಪನಿಷತ್ ಕಾಲದಲ್ಲಿಯೂ ಇದ್ದರು. ಜಾತಿ ಕುಲಗಳೇ ಮೊದಲಾದ ಪಂಥಗಳಿಗೆ ಸೇರದೆ ಇದ್ದುದರಿಂದ ಪುರಾಣಗಳಲ್ಲಿ ಶಿವಭಕ್ತರು ಎಂದು ಕರೆಯಲ್ಪಟ್ಟಿದ್ದಾರೆ. (ಪರಕುಲದವರು ಬರೆದ ಶಾಸನಗಳು ಸಿಕ್ಕುತ್ತವೆ.)

'ಅಹಂಬ್ರಹ್ಮಾಸ್ಮಿ' ಎಂದು ಹೇಳುವ ಶುದ್ಧಾದ್ವೈತಿಗಳೂ ಸಹ ಕರ್ಮಗಳನ್ನು ಮಾಡಬೇಕೆಂದೂ, ವರ್ಣಾಶ್ರಮಗಳನ್ನೂ ಸೂತಕಗಳನ್ನೂ ಆಚರಿಸಬೇಕೆಂದೂ, ತಿಳಿದುಕೊಂಡವರು ಮೇಲೆ ಕಂಡ ಉಪನಿಷತ್ತಿನಲ್ಲಿ ಹೇಳಿದ–

"ಬ್ರಹ್ಮವಿದ್ ಜ್ಞಾನಸಂಪನ್ನಃ ಪ್ರತೀತಮಖಿಲಂ ಜಗತ್ ।
ಪಶ್ಯನ್ನಪಿ ಸದಾನ್ನೈವ ಪಶ್ಯತಿ ಸ್ವಾತ್ಮನಃ ಪೃಥಕ್ ॥"

"ಬ್ರಹ್ಮವನ್ನು ತಿಳಿದ ಜ್ಞಾನದಿಂದ ಕೂಡಿದವನು ಮನೋಹರವಾದ ಎಲ್ಲಾ ಜಗತ್ತನ್ನೂ ಯಾವಾಗಲೂ ನೋಡುತ್ತಿದ್ದರೂ, ತನಗಿಂತ ಪ್ರತ್ಯೇಕವಾಗಿ ಅದನ್ನು ತಿಳಿಯುವುದಿಲ್ಲ" ಎಂಬುದನ್ನು ಚೆನ್ನಾಗಿ ಗ್ರಹಿಸಿ, ಸರ್ವವೂ ಬ್ರಹ್ಮವೇ, ಸ್ವಯವೇ ಎಂದು ತಿಳಿಯಬೇಕು. ಹೆಂಡತಿ ಮಕ್ಕಳ ದುಃಖ ಮೊದಲಾದವುಗಳುಂಟೆಂದೂ, ದೇಹವು ಮಿಥ್ಯೆಯೆಂದು ಹೇಳುವವರು ದುಃಖಾದಿಗಳಿಂದ ಕೂಡಿದ ಪ್ರಪಂಚದಲ್ಲಿ ನಾನು ತೊಂದರೆಪಡುವೆನೆಂದು ಅದನ್ನು ತಪ್ಪಿಸಿಕೊಳ್ಳುವ ಪ್ರಯತ್ನಕ್ಕಿಂತಲೂ, ಸರ್ವವೂ ಬ್ರಹ್ಮ ಎಂಬ ಬ್ರಹ್ಮಾನಂದದಲ್ಲಿ ಸರ್ವದಾಸುಖದಲ್ಲಿ ಇದ್ದು ದೇಹೇಂದ್ರಿಯಗಳನ್ನು ಪಾರಮಾರ್ಥಿಕವಾಗಿ ತಿರುಗಿಸಿಕೊಂಡಿರುವುದು ಉತ್ತಮವಲ್ಲವೇ ? ಉಪನಿಷತ್ತುಗಳನ್ನು ವೇದಾಂತವೆಂದೂ, ಈಶ್ವರನ ಆಜ್ಞೆಯೆಂದೂ ನಂಬುವವರು ಈ ಉಪನಿಷತ್ತು ಈಶ್ವರನ ಆಜ್ಞೆಯೆಂದು ಭಾವಿಸಿ, ಅದಕ್ಕೆ ತಪ್ಪಿ ನಡೆದರೆ ತಮಗೆ ಈಶ್ವರನು ಶಿಕ್ಷಿಸುವನೆಂದು ಏಕೆ ತಿಳಿಯಬಾರದು ? ಈಗಿನ ವಿಜ್ಞಾನಶಾಸ್ತ್ರ (Science)

ಎಲ್ಲವೂ ಒಂದೇ ಅಣುವಿನಿಂದ ಆಗಿದೆ ಎಂದು ಶೋಧಿಸಿ ಹೇಳುತ್ತಿರುವುದು, ಈ ಉಪನಿಷತ್ತಿನ ಅಭಿಪ್ರಾಯವೇ ಅಲ್ಲವೆ ?

ಈ ಉಪನಿಷತ್ತಿನಲ್ಲಿ ಆತ್ಮನು ಮಾಡುವ ಕೆಲಸ-ಬ್ರಹ್ಮಜ್ಞಾನದಕಾರ್ಯ, ಆತ್ಮನಿಷ್ಠರಾದ ಯೋಗಿಗಳ, ಲಕ್ಷಣ, ಬ್ರಹ್ಮಜ್ಞಾನಿಯ ಲಕ್ಷಣ–ಇವುಗಳೂ ವಿಂಗಡಿಸಿ ತೋರಿಸಲ್ಪಟ್ಟಿವೆ.

ಯೋಗಿನಾಮಾತ್ಮ ನಿಷ್ಠಾನಾಂ ಮಾಯಾಸ್ವಾತ್ಮನಿಕಲ್ಪಿತಾ- ।
ಸಾಕ್ಷಿರೂಪತಯಾ ಭಾತಿ ಬ್ರಹ್ಮನೇನ ಬಾಧಿತಾ ॥

ಈ ಪ್ರಕಾರ ತಿಳಿಯುವುದಾದರೆ ಆತ್ಮನಿಷ್ಠರಾದ ಯೋಗಿಗಳಿಗೆ ಮಾಯೆಯು ಆತ್ಮನಲ್ಲಿ ಕಲ್ಪಿತವಾಗಿ ಸಾಕ್ಷಿರೂಪವಾಗಿ ತೋರುತ್ತದೆ. ಅಣುಬ್ರಹ್ಮಜ್ಞಾನದಿಂದ ಬಾಧಿಸಲ್ಪಡುತ್ತದೆ (ನಿವಾರಿಸಲ್ಪಡುತ್ತದೆ). ಹೀಗೆ ಹೇಳಿ ಬ್ರಹ್ಮಜ್ಞಾನಿಗೆ ಜಗತ್ತೆಲ್ಲವೂ ಬ್ರಹ್ಮ ಎಂದು ಮೇಲಿನ ಶ್ಲೋಕವನ್ನು ಹೇಳಿದ್ದಾರೆ. ವೀರಶೈವರೂ ಕೂಡ ಶಕ್ತಿ ಸಹಿತನಾಗಿ ಶಿವನು ಇದ್ದರೂ ಶಕ್ತಿಯನ್ನು ಲೀನಮಾಡಿಕೊಂಡ ಶಿವನೇ ಅನುಷ್ಠಾನದಲ್ಲಿ ಇರಬೇಕೆಂದು ತಿಳಿದವರು ಬ್ರಹ್ಮವೇ ಲಿಂಗ ಎಂದು ತಿಳಿದವರು.

ಈ ಎಲ್ಲ ಕಾರಣಗಳಿಂದ ವೀರಶೈವರ ಹಿನ್ನೆಲೆ ಪಾಶುಪತವ್ರತವೆಂದು ಗ್ರಹಿಸುವುದು ಸೂಕ್ತವೆಂದು ತೋರುತ್ತದೆ.

(ಸಂಚಿಕೆ ೧೩೩)

# ಕಾಶ್ಮೀರದ ಲಕುಲೀಶ ಕರ್ನಾಟಕದಲ್ಲಿ

"ಉತ್ತರ ಕರ್ನಾಟಕ ಮತ್ತು ಕೊಲ್ಲಾಪುರದ ಶಾಸನಗಳು" ಎಂಬ ಪುಸ್ತಕದಲ್ಲಿ ಜಗದೇಕಮಲ್ಲನ (ಕಲ್ಯಾಣಪುರ) ೧೦ನೆಯ ವರ್ಷದ ಶಾಸನ-ಪ್ರಭವ ಸಂವತ್ಸರ (ಕ್ರಿ. ಶ. ೧೧೪೮) ಎಂಬುದೊಂದು ಶಾಸನವು ಪ್ರಕಟಿತವಾಗಿದೆ.

"ಕುಮಾರಂ ಬಿಜ್ಜಳ ದೇವರಸರ ಪತ್ಥಳಿ ಸಹಿತಂ ಪಡೆದು ಬರೆದ ಶಾಸನ, ಲಕುಳೀಶಪದ ಪ್ರಕ್ಷಾಳನಂ ಮಾಡಿ"–ಎಂದು ಲಿಪಿಯಲ್ಲಿ ಇದೆ ಮತ್ತು ಲಕುಲೀಶನ ವಿಷಯುವಾಗಿ ಈ ಸಂಗತಿಗಳು ಗೊತ್ತಾಗುತ್ತವೆ. "ಕಾಶ್ಮೀರದಿಂದ ವಿಜಯಾಪುರಕ್ಕೆ ಬಂದಾಗ ಅಲ್ಲಿ ಕಾಶ್ಮೀರ ಮುನೀಂದ್ರ ಎಂಬ ಹೆಸರಿನವನಿದ್ದನು. ಅವರ ಶಿಷ್ಯ ಕಾಲಭೈರವದೇವ. ಅವರ ಶಿಷ್ಯ ಅಖಿಳ·ಯೋಗೀಶ್ವರದೇವ, ಅವರ ಶಿಷ್ಯ ಪರೇಶ್ವರದೇವರು, ಅವರ ಶಿಷ್ಯ ಯೋಗೀಶ್ವರದೇವರು, ಅವರ ಶಿಷ್ಯ ಲಕುಲೀಶದೇವರು" ಎಂದು ಹೇಳಲ್ಪಟ್ಟಿರುವುದರಿಂದ ಕೊನೆಯಲ್ಲಿ ಹೇಳಲ್ಪಟ್ಟ ಈ ಲಕುಲೀಶದೇವರ ಕಾಲುತೊಳೆದು ಕುಮಾರ ಬಿಜ್ಜನಿಗೆ 'ಪತ್ಥಳಿ' ಎಂದರೆ ಉಡುಗೊರೆ ಸಹಿತವಾಗಿ ಅಧಿಕಾರ ಹೊಂದಿದುವನ್ನು ಬರೆದ ಶಾಸನವು ಇದು ಎಂದು ತಿಳಿಯಲಿಕ್ಕೆ ಬರುತ್ತದೆ.

ಕಾಶ್ಮೀರದ ಕಡೆಯಿಂದ ಜಯರಥನು ಬಂದು, ಬಸವೇಶ್ವರನ ಧರ್ಮ ವಿಚಾರಗಳನ್ನು ತಿಳಿದುಕೊಂಡು ಕಾಶ್ಮೀರಕ್ಕೆ ಹೋದನು ಎಂಬುದಾಗಿ ಸದ್ಧರ್ಮದೀಪಿಕೆ ಸಂಚಿಕೆ ೧೪೮ ರಲ್ಲಿ (ಪುಟ ೧೩) "ಕಾಶ್ಮೀರ ದೇಶದಲ್ಲಿ ವೀರಶೈವ ಧರ್ಮ ಪ್ರಸಾರ" ಎಂಬ ಶಿರೋಲೇಖದಲ್ಲಿ ಕಾಶ್ಮೀರ ದೇಶದ ಶೋಧನೆಯು ಪ್ರಕಟನೆಗಳ ಸಂಕ್ಷಿಪ್ತ ವಿಮರ್ಶೆ ಎಂಬ ಪುಸ್ತಕದಿಂದ ಪ್ರಕಟವಾದುದನ್ನು ತೋರಿಸಿ ಇರುವುದು ಸರಿಯಾಗಿದೆ ಎಂದು ಈ ಶಾಸನದಿಂದ ನಿರ್ಧರಿಸಲಿಕ್ಕೆ ಬರುತ್ತದೆ.

ಈ ಶಾಸನದಲ್ಲಿ ಕುಮಾರ ಬಿಜ್ಜಲದೇವನು ಕಲ್ಯಾಣದ ಬಸವೇಶ್ವರನೊಡನೆ ಬಾಳಿದ ಕಲಚುರ್ಯ ಬಿಜ್ಜಳನೇ ಆಗಿದ್ದಾನೆ. ಈ ಶಾಸನ ಕಾಲದ ಜಗದೇಕಮಲ್ಲನೇ "ಕಾಶ್ಮೀರ ದೇಶದಲ್ಲಿ ವೀರಶೈವ ಧರ್ಮ ಪ್ರಸಾರ" ಎಂಬ ಲೇಖನದಲ್ಲಿ ಹೇಳಿದ ೨ನೆಯ ಜಯಸಿಂಹನಾಗಿದ್ದಾನೆ. ಇದು ಜಯಸಿಂಹನ ರಾಜ್ಯಭಾರದ ಕಡೆಯ ವರ್ಷ. ಇವನು ಲಕುಲೀಶದೇವನನ್ನು ಪೂಜ್ಯನನ್ನಾಗಿ ಭಾವಿಸಿ, ಬಿಜ್ಜಳನಿಗೆ ಅಧಿಕಾರ ಕೊಟ್ಟು ಉಡುಗರೆ ಮಾಡಿದ್ದಾನೆ. ಬಿಜ್ಜಳನು ಕಲಚುರ್ಯ ಪೆರ್ಮಾಡಿ II ಎಂಬುವನ ಮಗನೆಂದು ಕೆಲವು ಕಡೆ ಹೇಳಲ್ಪಟ್ಟಿದೆ. ಈ ಪೆರ್ಮಾಡಿಯು ಈ ಜಗದೇಕಮಲ್ಲನ (ಜಯಸಿಂಹ II) ಕೈಕೆಳಗೆ ಅಧಿಕಾರದಲ್ಲಿದ್ದವನು. ಬಿಜ್ಜಳನು ಆಗ ತರುಣನಾಗಿದ್ದನು. ಈ ಬಿಜ್ಜಳನನ್ನು ಬಸವೇಶ್ವರನು ಮೊದಲು ಸಾಕಿದನೆಂಬ ಅಂಶವೂ, ಬಿಜ್ಜಳನೂ ಬಸವೇಶ್ವರನೂ ಸಹವರ್ತನದಲ್ಲಿ ಬೆಳೆದರೆಂಬ ಅಂಶವೂ "ಬಸವೇಶ್ವರನ ಕಾಲ" ಎಂಬ

ಪುಸ್ತಕದಲ್ಲಿ ವಿವರಿಸಲ್ಪಟ್ಟಿದೆ. ಇದರಲ್ಲಿ ಮೈಲಾರ ಚಮೂಪನ ಹೆಸರಿದೆ. ಅವನು ಬಿಜ್ಜಳದೇವನ ನೃಪಾಮಾತ್ಯ (ರಾಜಮಂತ್ರಿ) ಆಗಿದ್ದಾನೆ. ಈ ಮೈಲಾರ ಚಮೂಪನು ತರ್ದೇವಾಡಿಯನ್ನು (ವಿಜಾಪುರ ಸೀಮೆಯನ್ನು) ಆಳುತ್ತಿದ್ದನು. ಈ ದೆಸೆಯಿಂದ ಬಿಜ್ಜಳನು ಆಗಲೇ ಪ್ರಬಲನಾಗಿದ್ದನೆಂದು ವ್ಯಕ್ತವಾಗುತ್ತದೆ. ಇದಲ್ಲದೆ ಪರಮ ಮಹೇಶ್ವರ ಹೆಗ್ಗಡೆ ಬಮ್ಮರಸರ ಹೆಸರು ಈ ಶಾಸನದಲ್ಲಿ ಇದೆ. ಪರಮ ಮಹೇಶ್ವರ ವರ್ಗದವರು ಆ ಕಾಲಕ್ಕಿದ್ದರೆಂದೂ ತಿಳಿಯಲಿಕ್ಕೆ ಬರುತ್ತದೆ. ಪರಮ ಮಹೇಶ್ವರ ಅಥವಾ ಮಹಾಮಹೇಶ್ವರ ಎಂಬ ಪದವನ್ನು ವೀರಶೈವ ಗ್ರಂಥಗಳಲ್ಲಿ ನೋಡಬಹುದಾಗಿದೆ. ಲಕುಲೀಶ ಪಂಥವವರಲ್ಲಿ ಪರಮ ಮಹೇಶ್ವರರೂ ಇದ್ದರೆಂದು ಶಾಸನದಿಂದ ವ್ಯಕ್ತಪಡುತ್ತದೆ. ಒಟ್ಟಿನಲ್ಲಿ ವಿಜಾಪುರದ ರಾಜ್ಯಾಧಿಕಾರವು ಬಿಜ್ಜಳನ ಕೈಯ್ಯಲ್ಲಿ ಕ್ರಿ.ಶ.೧೧೪೮ರಲ್ಲಿ ಇದ್ದಿತೆಂದೂ, ಅದೇ ಕಾಲದಲ್ಲಿಯೇ ಬಸವೇಶ್ವರನಿದ್ದನೆಂದೂ, ಕಾಶ್ಮೀರದ ಲಕುಲೀಶದೇವರು ಬಿಜಾಪುರದಲ್ಲಿದ್ದರೆಂದೂ ತಿಳಿಯಲಿಕ್ಕೆ ಅವಕಾಶವಾಗಿದೆ. ಈ ದೆಸೆಯಿಂದ ಕಾಶ್ಮೀರದಿಂದ ಬಂದ ಜಯರಥನು ಬಸವೇಶ್ವರನ ಧಾರ್ಮಿಕ ವಿಚಾರಗಳನ್ನು ಕಾಶ್ಮೀರಕ್ಕೆ ತೆಗೆದುಕೊಂಡು ಹೋದನೆಂದೂ, ಅನುಮಾನವಿಲ್ಲದೆ ನಿರ್ಧರಿಸಲಿಕ್ಕೆ ಬರುತ್ತದೆ ಮತ್ತು ಕ್ರಿ. ಶ. ೧೧೪೮ರ ಸುಮಾರಿನಲ್ಲಿ ಬಿಜಾಪುರ ಪ್ರಾಂತದಲ್ಲಿ ಲಕುಲೀಶ ಗುರುಗಳ ಪ್ರಾಬಲ್ಯವಿದ್ದಿತೆಂದು ತಿಳಿಯಲೇಬೇಕಾಗಿದೆ. ಈಗ ಲಕುಲೀಶರು ಇಲ್ಲ. ಈ ಲಕುಲೀಶ ಪಂಥದವರೂ ಮುಂದೆ ವೀರಶೈವರಾದರೆಂದು ಈ ವಿಷಯಗಳಿಂದ ನಿರ್ಧರಿಸಬಹುದಲ್ಲವೆ ?

ಈ ಜಯಸಿಂಹ II ಎಂಬುವನೇ ಸುಗ್ಗಲೆಯ ಗಂಡನೆಂದೂ, ಇವನ ಕಾಲದಲ್ಲಿಯೇ ದೇವರ ದಾಸಿಮಯ್ಯನವರಿದ್ದರೆಂದೂ ಈ ಮಾಸಪತ್ರಿಕೆಯಲ್ಲಿ ಆಗಾಗ ಪ್ರಕಟಿಸಲ್ಪಡುವುದರ ಕಡೆಗೆ ಗಮನವನ್ನು ಈಗ ಸೆಳೆಯಬಹುದಲ್ಲವೆ ?

(ಸಂಚಿಕೆ ೧೫೩)

# ಲಾಕುಳ ಶೈವ ಗುರುಗಳೇ ಈಗಿನ ವೀರಶೈವ ಗುರುಗಳೇನು ?

[ನವಸಂದೇಶ-ಶ್ರೀ ಕಪಟರಾಳು ಕೃಷ್ಣರಾಯರು ೨೬-೪-೫೫ ರಲ್ಲಿ 'ವಿಚಾರಾತ್ಮಕ ಲೇಖನ' ಎಂಬುದಾಗಿ ಕೆಲವು ಸಂಗತಿಗಳನ್ನು ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಲಾಕುಳ ಶೈವ ಗುರುಗಳೇ ವೀರಶೈವ ಗುರುಗಳೆಂದು ಸ್ಥಾಪಿಸಲಿಕ್ಕೆ ಹೋಗಿದ್ದಾರೆ. ಈ ಬಗೆಗೆ ಅವರು ಹೇಳುವ ಕೆಲವು ಅಂಶಗಳನ್ನು ಇಲ್ಲಿ ಕೊಡಲಾಗಿದೆ. ವೀರಶೈವದ ಬಗೆಗೆ ತಪ್ಪುಕಲ್ಪನೆಗಳನ್ನು ಬಿತ್ತರಿಸುವ ಇತರರಿಗೆ ಶ್ರೀ ಚ. ರವರು ಹೇಗೆ ಉತ್ತರಿಸುತ್ತಿದ್ದರೆಂಬುದಕ್ಕೆ ಇಲ್ಲಿ ಸೂಕ್ತ ತಿಳುವಳಿಕೆ ನಮಗೆ ಗೋಚರವಾಗುವುದು]

ಶಾಸನಗಳಲ್ಲಿ ಶೈವರಲ್ಲಿ ಎರಡು ಪಂಗಡಗಳನ್ನು ಹೇಳಲಾಗಿದೆ. (೧) ಪ್ರಾಚೀನ ಶೈವರು-ಸ್ಥಾವರ ಲಿಂಗೋಪಾಸಕರು (೨) ಲಾಕುಳ ಶೈವರು ಇವರಲ್ಲಿ ಸ್ಥಾನಪತಿಗಳು, ಸ್ಥಾನಿಕರು, ತಪೋಧನರು, ಸ್ಥಾನಾಚಾರ್ಯರು ದೇಗುಲ ಆಳುವವರು, ಒಡೆಯರು, ಪೂಜಾರಿಗಳು-ಈ ಎಲ್ಲ ಶಬ್ದಗಳನ್ನು ಒಂದೇ ವಿಶಿಷ್ಟ ಜನಾಂಗಕ್ಕೆ ಬಳಸಲಾಗಿದೆ. ಈ ವರ್ಗದವರು ದೇವಾಲಯಕ್ಕೆ ಕೊಡಲ್ಪಟ್ಟ ದತ್ತಿಯನ್ನು ಪರಿಗ್ರಹಿಸುವವರು, ಇವರು ಪೂಜ್ಯ ಜನಾಂಗವೂ, ಗುರುಗಳೂ ಆಗಿದ್ದಾರೆ. ದೇವಾಲಯಕ್ಕೆ ದತ್ತಿಯನ್ನು ಬಿಡುವವರು ಬೇರೊಂದು ಪಂಗಡ. ಇವರು ಭಕ್ತಿ ವರ್ಗದವರು. ಇವರಿಗೆ ಮಾಹೇಶ್ವರ, ಗಣಾವತಾರ, ಶಿವಧರ್ಮದೀಪದ ಶಿವಾಚಾರಕ್ಕೆ ಸದುಭಕ್ತ, ಶಿವಧರ್ಮನಿರ್ಮಳ, ಶಿವಪಾದಭೃಂಗ, ಪರಚರಣ ಕಮಲಭೃಂಗ ಮುಂತಾದ ವಿಶೇಷಣಗಳಿವೆ. ಈ ಸಾಂಪ್ರದಾಯಿಕ ವಿಶೇಷಣಗಳು ಮಾಹೇಶ್ವರರಲ್ಲಿ ಸಾಮಾನ್ಯವಾದಾಗ್ಯೂ, ಸ್ಥಾನಪತಿಗಳಿಗೆ ಬಳಸಿರುವ ವಿಶೇಷ ಲಕ್ಷಣವುಳ್ಳವುಗಳಾಗಿವೆ. ಏಕ್ಕೋಟಿ ಸಮಯ ಚಕ್ರವರ್ತಿ, ಸಪ್ತಾಹತ್ತರಿ ಸ್ಥಾನಾಚಾರ್ಯರು, ಕಾಳಾಮುಖಿವ್ರತಾನ್ವಯರು, ಅಸಂಖ್ಯಾತರು ಹಾಗಣಂಗಳು, ಲಿಂಗಿಗಳ ಒಡೆಯರು, ಗೊರವರ್, ಜೀಯರ್-ಮುಂತಾಗಿ ಶಾಸನಗಳಲ್ಲಿ ಬರುತ್ತವೆ. ಈ ಮಾಹೇಶ್ವರರಲ್ಲಿ ಎರಡು ಧಾರ್ಮಿಕ ವರ್ಗಗಳು. ೧) ಸ್ಥಾನಾಚಾರ್ಯರು-ಗುರುಗಳು ೨) ಉಳಿದವರು ಭಕ್ತರು ಇವೇ ಈಗಿನ ವೀರಶೈವ ಗುರುವರ್ಗ ಮತ್ತು ಭಕ್ತ ವರ್ಗದಲ್ಲಿ ಪರಿವರ್ತನೆಯಾಗಿದೆ.

ಸ್ಥಾನಾಚಾರ್ಯರಲ್ಲಿ ಕೆಲವರಿಗೆ ಯತಿಮುನಿ ಮುಂತಾದ ವಿಶೇಷಣಗಳಿವೆ. ಸ್ಥಾನಾಚಾರ್ಯರು ಎಲ್ಲರೂ ಯತಿಮುನಿಗಳಲ್ಲ. ಬಹುತರವಾಗಿ ಇವರ ತಂದೆ, ತಾಯಿ, ಪುತ್ರ ಕಳತ್ರ ಮುಂತಾದವರ ಹೆಸರುಗಳೂ ಬಂದಿರುವುದರಿಂದ ಈ ಸ್ಥಾನಾಚಾರ್ಯರಲ್ಲಿ ಸಂಸಾರಿಗಳೂ, ಗೃಹಸ್ಥಾಶ್ರಮಿಗಳೂ ಇದ್ದುದು ಕಂಡುಬರುತ್ತದೆ.

ಹೀಗೆ ಹೇಳಿ ಮೇಲೆ ಕಂಡಂತೆ ಆಚಾರ್ಯರಿಗೆ ಉಪಯೋಗಿಸಿದ ಪದಗಳುಳ್ಳ ಕೆಲವು ಶಾಸನಗಳನ್ನು ಎ. ಬಿ. ೧೦೨೮ ರ ಮೊದಲ್ಗೊಂಡು ೧೬೮೫ ರ ವರೆವಿಗೂ ಇರತಕ್ಕವುಗಳನ್ನು ತೋರಿಸಿರುತ್ತಾರೆ.

ಇವರು ಹೇಳುವಂತೆ ಲಾಕುಳ ಗುರುಗಳು ಕ್ರಿ. ಶ. ೧೦೨೮ ರ ಸುಮಾರಿನಿಂದಲೂ ಇದ್ದರು ಎಂದು ಹೇಳಲಿಕ್ಕೆ ಯಾವ ಅಭ್ಯಂತರವೇನೂ ಇಲ್ಲ. ಆದರೆ ಇವರಲ್ಲಿ ಇರುವುದೇ ಈಗಿನ ವೀರಶೈವ ಗುರುವರ್ಗ ಮತ್ತು ಭಕ್ತ ವರ್ಗವಲ್ಲಿ ಪರಿವರ್ತನೆಯಾಗಿದೆ. ಎಂದು ಕಪಟರಾಳ್ ಅವರು ಭಾವಿಸಿರುವುದು ಸರಿಯಲ್ಲ. ಏಕೆಂದರೆ ವೀರಶೈವರಲ್ಲಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳಿದ್ದು, ಅವುಗಳ ಉಲ್ಲೇಖವು ಯಾವ ಶಾಸನದಲ್ಲೂ ಇಲ್ಲ. ಈಗ ಕಾಳಾಮುಖರು ಯಾರು ಇಲ್ಲ. (Extinct-) ಇದರಿಂದ ಕಾಳಾಮುಖರು ವೀರಶೈವರಾದರೂ ಕಾಳಾಮುಖ ಪದ್ಧತಿಯನ್ನನುಸರಿಸಿ ಇವರ ಆಚಾರ ವಿಚಾರಗಳಿಲ್ಲ. ಈ ವೀರಶೈವಾಚಾರವು ಕಾಳಾಮುಖರಿಗಿಂತ ಉತ್ತಮವಾಗಿದ್ದುದರಿಂದ ಇವರೊಳಗೆ ಅವರು ಬಂದು ಸೇರಿದವರು ಎಂದು ತಿಳಿಯಬೇಕಾಗಿದೆ. ೧೨ ನೆಯ ಶತಮಾನಕ್ಕಿಂತಲೂ ಮುಂಚೆ ಲಿಂಗಿಗಳು ಎಂಬ ಪದಗಳನ್ನು ಶಾಸನಗಳಲ್ಲಿ ನೋಡಬಹುದು. ಅವರು ಲಿಂಗಧಾರಿಗಳು ಆಗಿರಬಹುದು. ಆದರೆ ಲಿಂಗಿಗಳೆನಿಸಿಕೊಂಡ ವೀರಶೈವರು ಧರಿಸಿರುವ ಲಿಂಗಕ್ಕೂ ಕಾಳಾಮುಖರು ಧರಿಸಿರುವ ಲಿಂಗಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ವೀರಶೈವರ ಲಿಂಗವು ಲಿಂಗಾಂಗ ಸಾಮರಸ್ಯವುಳ್ಳದ್ದು. ಕಾಳಾಮುಖರ ಲಿಂಗವು ಮನುಷ್ಯರಿಗಿಂತ ಭಿನ್ನವಾಗಿ ಪೂಜ್ಯವೆನಿಸಿಕೊಂಡುದು. ಈ ವ್ಯತ್ಯಾಸವು ಶ್ರೀ ಕಪಟರಾಳರವರಿಗೆ ತಿಳಿದಿಲ್ಲವೆಂದು ತೋರುತ್ತದೆ. 'ಲಿಂಗ' ಎಂದರೆ ಎಲ್ಲವೂ ಒಂದೇ ಅಲ್ಲ. ಇಂತಹ ಸೂಕ್ಷ್ಮ ವಿಷಯಗಳನ್ನೆಲ್ಲ ಅವರು ಶೋಧಿಸಿ ತಮ್ಮ ಬರವಣಿಗೆಯನ್ನು ಮುಂದುಮಾಡಿದ್ದರೆ ಚೆನ್ನಾಗಿರುತ್ತಿತ್ತು.

ಬಸವೇಶ್ವರನು ನಾಥ ಪಂಗಡದವನೆಂದು ಪ್ರಕಟಿಸಿ ಪೇಚ್ಚಾದರು. ಶ್ರೀ ಚಿಲಕೂರಿ ನಾರಾಯಣರಾಯರ ಅಭಿಪ್ರಾಯದಂತೆ ಓರ್ವಾಯಿಯ ಶಾಸನದ ಬಸವಣ್ಣನು ಕಲ್ಯಾಣದ ಬಸವಣ್ಣನೆಂದು ಹೇಳತೊಡಗಿ ಅದನ್ನು ಸಿದ್ಧಮಾಡಲಾರದಾದರು. ಇಂತಹ ಅಲ್ಲಸಲ್ಲದ ಬರವಣಿಗೆಗಳನ್ನು ಬರೆಯುವುದು ಈಗಲೂ ಸಲ್ಲದು.

ವೀರಶೈವ ಸಮಾಜವು ಇಂಥವರ ಲೇಖನಗಳನ್ನು ನಂಬಿ, ೧೦-೧೧ ನೆಯ ಶತಮಾನದ ಲಾಕುಳ ವೀರಶೈವರಾಗುವುದು ಉತ್ತಮವಲ್ಲ. ಸಮಾಜವು ತಮ್ಮ ಚರಿತ್ರೆಯನ್ನು ತಾವೇ ಸಿದ್ಧಪಡಿಸಿಕೊಂಡಿದ್ದರೆ ಇಂತಹ ಅಭಿಪ್ರಾಯಗಳಿಗೆ ಅವಕಾಶವಿರುತ್ತಿರಲಿಲ್ಲ. ರಾ. ಬ. ಹಳಕಟ್ಟಿಯವರು ಪ್ರಕಟಿಸುತ್ತಿರುವ ಚಾರಿತ್ರಿಕಾಂಶಗಳಿಂದಲೂ, ಸದ್ಧರ್ಮದೀಪಿಕೆಯಲ್ಲಿ ಪ್ರಕಟವಾಗುತ್ತಿರುವ ಸಂಗತಿಗಳೇ ಮೊದಲಾದವುಗಳಿಂದಲೂ ಶೋಧಿಸಿ ತಮ್ಮ ಚರಿತ್ರೆಯನ್ನು ನಿಷ್ಕರ್ಷೆ ಮಾಡಿಕೊಂಡಿರುವುದು ಮೇಲು. ಚಾರಿತ್ರಿ

ಕಾಂಶದಲ್ಲಿ ಒಂದು ವೇಳೆ ತಪ್ಪಾಗಿ ಇದ್ದರೆ ಮತ್ತೊಂದು ವೇಳೆ ಅದನ್ನು ಶೋಧಿಸಿ ಸರಿಪಡಿಸಿ ಕೊಳ್ಳಲಿಕ್ಕೆ ಬರುತ್ತದೆ. ಆದುದರಿಂದ ಚಾರಿತ್ರಿಕವಾಗಿ ಯಾರು ಏನನ್ನು ಬರೆದರೂ, ಸಮಾಜವು ಸಮಾಧಾನದಿಂದ ಪರಿಶೀಲಿಸಿ ನಿಜಾಂಶವನ್ನು ತಿಳಿಯುವವರಾಗಲಿ, ಎಂದು ಸಮಾಜವನ್ನು ಪ್ರಾರ್ಥಿಸಬೇಕಾಗಿದೆ.

**ಟಿಪ್ಪಣಿ:** "ಜಾತಿಯಿಂದ ಜಂಗಮರ ಪೂರ್ವಜರು ಕಾಳಾಮುಖರು. ಲಾಕುಳ ಶೈವ ಗುರುಗಳ ಸಂಸ್ಥೆಗಳು ಈಗಿನ ಗುರುವರ್ಗದ ಸಂಸ್ಥೆಗಳು. ಈ ಲಾಕುಳ ಶೈವ ಗುರುಗಳ ಪರಂಪರೆಯು ೧೫ ನೆಯ ಶತಮಾನದವರೆವಿಗೆ ನಡೆದು ಬಂದಿದೆ." ಈ ವಿಷಯವೂ ಅವರ ಲೇಖನದಲ್ಲಿ ಇದೆ. ಇದರ ಪ್ರಕಾರ ಕಾಳಾಮುಖರ ಜಾತಿ ಜಂಗಮರು ಈಗಿನ ಜಂಗಮರು ಎಂದು ಇವರು ತಿಳಿದುಕೊಂಡಂತೆ ತೋರುತ್ತದೆ. ಇದಂತೂ ಶುದ್ಧ ತಪ್ಪಾದ ವಿಚಾರ. ಕಾಳಾಮುಖ ಜಂಗಮಕ್ಕೂ ವೀರಶೈವ ಜಂಗಮಕ್ಕೂ ವಿಶೇಷ ಅಂತರವಿದೆ. ವೀರಶೈವರ ಜಂಗಮ ನಿರಂಜನ, ನಿರ್ಮಾಯ ಎಂದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಪರವಸ್ತುವಿನ ಲಕ್ಷಣವುಳ್ಳದ್ದು. ಜಾತಿವಿರಹಿತವಾದುದು. ಇದನ್ನು ಕಪಟರಾಳರು ಚೆನ್ನಾಗಿ ಯೋಚಿಸಲಿ.

(ಸಂಚಿಕೆ ೧೩೧)

# ಸಿದ್ಧಾಂತ ಶಿಖಾಮಣಿ ಎಂಬ ಸಂಸ್ಕೃತ ಗ್ರಂಥದ ಕಾಲ

ಡಾ. ಕಪಟರಾಳು ಕೃಷ್ಣರಾಯರು 'ಸಿದ್ಧಾಂತ ಶಿಖಾಮಣಿ' ಎಂಬುದು ವೀರ ಶೈವರ ಪ್ರಾಚೀನ ಗ್ರಂಥವೆಂದೂ, ಅದನ್ನನುಸರಿಸಿ ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆದಿರುವನೆಂದೂ ತಿಳಿದಿರುವುದನ್ನು ಹಿಂದಿನ ಪ್ರಕರಣದಲ್ಲಿ ತೋರಿಸಿರುತ್ತದೆ.

ಈಗ ಪ್ರಚಲಿತವಾಗಿರುವ 'ಶ್ರೀ ಕಾಶೀನಾಥ ಗ್ರಂಥಮಾಲಾ' ಕ್ರಮಸಂಖ್ಯೆ ೩೦ನೆಯ ಪುಷ್ಪವಾಗಿ ಶ್ರೀ ಕಾಶೀನಾಥ ಶಾಸ್ತ್ರಿಗಳಿಂದ ಪ್ರಕಟಿಸಲ್ಪಟ್ಟಿರುವ 'ಸಿದ್ಧಾಂತ ಶಿಖಾಮಣಿ' ಯನ್ನು ನೋಡಿ, ಅವರು (ಕಪಟರಾಳು ಕೃಷ್ಣರಾಯರು) ಹಾಗೆ ತಿಳಿದಿರಬೇಕು. ಈ ಗ್ರಂಥಕ್ಕೆ ಶ್ರೀ ಕಾಶೀನಾಥ ಶಾಸ್ತ್ರಿಗಳು 'ಭಾವಪ್ರಕಾಶ' ಎಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ಸಿದ್ಧಾಂತ ಶಿಖಾಮಣಿ ಮತ್ತು ಭಾವ ಪ್ರಕಾಶ ವ್ಯಾಖ್ಯಾನದ ವಿಷಯವಾಗಿ ದಿನಾಂಕ ೬-೪-೧೯೩೯ ರಲ್ಲಿಯೇ ಸದ್ಧರ್ಮದೀಪಿಕೆ ಮಾಸಪತ್ರದಲ್ಲಿ ಪ್ರಕಟಿಸಲು ಒಂದು ಪತ್ರ ಬಂದಿದ್ದಿತು.* ಮುಂದೆ ಕಾಲಾಂತರದಲ್ಲಿ ಮಾನ್ಯ ಪ್ರಮಾಣ ಭೂತವಾಗಿ ಈ ಗ್ರಂಥವು ಪರಿಣಮಿಸಬಹುದಾಗಿದೆ ಎಂದು ಅಂದೇ ಅವರು ಶಂಕಿಸಿದ್ದಾರೆ. ಈಗ ಹಾಗೆಯೇ ಆಗಿದೆ. ಆ ಪತ್ರವು ಹೀಗೆ ಇದೆ.

ಶ್ರೀ ಗುರು ಸಿದ್ಧಲಿಂಗಸ್ಸಮರ್ಥ:

ಸ್ವತಃ ಕಾಶೀನಾಥ ಶಾಸ್ತ್ರಿಗಳಿಂದಲೇ ಭಾವಪ್ರಕಾಶ ವ್ಯಾಖ್ಯಾನವು ಬರೆಯಲ್ಪಟ್ಟು ಅವರ ಸದ್ಯದ ವಾತಾವರಣಾನುಸಾರವಾದ ಅಭಿಪ್ರಾಯಗಳನ್ನು ಪ್ರಚುರಪಡಿಸಲು ಬಹುಮುದ್ದಾಗಿ ರಮ್ಯವಾಗುವಂತೆ ಪ್ರಿಂಟುಮಾಡಿಸಿ ಬಿಕರಿಗೆ ಸಿದ್ಧವಾದ ಕಾಶೀನಾಥ ಗ್ರಂಥಮಾಲಾ (ತ್ರಿಂಶತ್ ಪುಷ್ಪವು) ಸಿದ್ಧಾಂತ ಶಿಖಾಮಣಿಯು ನನ್ನ ಕೈಸೇರಿ ೧೫-೨೦ ದಿವಸಗಳಾದುವು. ಈ ಹಿಂದೆ ೧೯೦೫ ರಲ್ಲಿ ವಾರದ ಅವರು ೧೯೧೪ ನೇ ಸಾಲಿನಲ್ಲಿ ಎಸ್. ಆರ್. ಕರಿಬಸವ ಶಾಸ್ತ್ರಿಗಳು ಪ್ರಿಂಟುಮಾಡಿಸಿರುವ ಪ್ರತಿಗೂ ಈ ಪ್ರತಿಗೂ ಪರಿಶೀಲಿಸಿ ನೋಡುವಲ್ಲಿ ಹಿಂದೆ ಪ್ರಿಂಟಾಗಿರುವ ಪ್ರತಿಗಳ ೨ ನೇ ಪರಿಚ್ಛೇದ ದಲ್ಲಿರುವ

"ತೇಷು ಪ್ರಮಥವರ್ಗೇಷು ಸೃಷ್ಟೇಷು ಪರಮಾತ್ಮನಾ ।
ರೇಣುಕೋ ದಾರುಕಶ್ಚೇತಿ ದ್ವಾವಭೂತಾಂ ಶಿವಪ್ರಿಯೌ ॥೨೯॥

ಸರ್ವವಿದ್ಯಾ ವಿಶೇಷಜ್ಞಾ ಸರ್ವಕಾರ್ಯ ವಿಚಕ್ಷಣೌ ।
ಮಾಯಾಮಲ ವಿನಿರ್ಮುಕ್ತೌ ಮಹಿಮಾತಿಶಯೋಜ್ವಲೌ । ॥೩೦॥

---

* ಈ ಪತ್ರ ಕಳುಹಿಸಿದವರು ಸಖರಾಯಪಟ್ಟಣದ ಶ್ರೀ ( )ಗಳವರು.

ಆತ್ಮಾನಂದ ಪರಿಸ್ಫೂರ್ತಿರಸಾಸ್ವಾದನ ಲಂಪಟೌ ।
ಶಿವತತ್ತ್ವ ಪರಿಜ್ಞಾನ ತಿರಸ್ಕೃತ ಭವಾಮ ಯೌ ॥ ॥೩೦॥
ನಾನಾಪಥ ಮಹಾಶೈವ ತಂತ್ರ ನಿರ್ವಾಹ ತತ್ಪರೌ ।
ವೇದಾಂತಸಾರ ಸರ್ವವಿವೇಚನ ವಿಚಕ್ಷಣೌ ॥ ॥೩೨॥
ನಿತ್ಯಸಿದ್ಧೌ ನಿರಾತಂಕೌ ನಿರಂಕುಶ ಪರಾಕ್ರಮೌ ।
ತಾದೃಶೌ ತೌ ಮಹಾಭಾಗೌ ಸಂವೀಕ್ಷ್ಯ ಪರಮೇಶ್ವರಃ ॥ ॥೩೩॥
ಸಮರ್ಥೌ ಸರ್ವಕಾರ್ಯೇಷು ವಿಶ್ವಾಸಂಪರಮಾಶ್ರಿತೌ ।
ಅಂತಃಪುರ ದ್ವಾರಪಾಲೌ ನಿರ್ಮಮೇ ನಿಯತೌ ವಿಭುಃ ॥ ॥೩೪॥
ಗಣೇಶ್ವರೌ ರೇಣುಕದಾರುಕಾವು ಭೌವಿಶ್ವಾಸಭೂತೌ ನವಚಂದ್ರ ಮೌಳೇಃ ।
ಅಂತಃಪುರದ್ವಾರಗತೌ ಸದಾ ತೌ ವಿತೇನತುರ್ವಿಶ್ವಪತೇಸ್ತು ಸೇವಾಂ ॥"

—ಇಷ್ಟು ಶ್ಲೋಕಗಳನ್ನು ತೆಗೆದುಹಾಕಿ ಸವರಿ ಪರಿಚ್ಛೇದದ ಕೊನೆಯಲ್ಲಿ

"ಸೃಷ್ಟ ಪ್ರಮಥವರ್ಗೇಷು ವರ್ಣಾಶ್ರಮ ಪರಿಕ್ರಮಾನ್ ।
ಅಪಾಕೃತ ಸದಾಚಾರಾನುದಿಶಥ ಪ್ರಭುಃ"

—ಎಂಬುದೊಂದು ಹೊಸ ಶ್ಲೋಕವನ್ನು ಸೇರಿಸಿದ್ದಾರೆ. ಇದೇ ರೀತಿ ಪೂರ್ವದಲ್ಲಿ ಪ್ರಿಂಟಾಗಿರುವ ಪ್ರತಿಗಳ ಮೂರನೇ ಪರಿಚ್ಛೇದದಲ್ಲಿ—

"ಪ್ರಸಾದಂ ಸುಲಭಂ ದಾತುಮಾಹೂಯೇಶ್ವಂ ಸಮಾದಿಶಕ್ ॥

—ಎಂದು ಸೇರಿಸಿದ್ದಾರೆ ಮತ್ತು

"ಶಂಭೋರಾಹ್ವಾನ ಸಂತೋಷ ಸಂಭ್ರಮೇಣ್ಯೈವ ದಾರುಕಂ ।
ಉಲ್ಲಂಘ್ಯ ಪಾರ್ಶ್ವಮಗಮಲ್ಲೋಕನಾಥಸ್ಯ ರೇಣುಕಃ" ॥೬೭॥

—ಈ ಶ್ಲೋಕದಿಂದ

"ಇತಿಸಂಪ್ರಾರ್ಥಿತೋ ದೇವೋ ರೇಣುಕೇನ ಮಹೇಶ್ವರಃ
ಮಾಂ ಭೃಷೀರ್ಮಮ ಭಕ್ತಾನಾಂ ಕುತೋಭೀತಿರಿದೇಷ್ಯತಿ" ॥೮೨॥

ಈ ಶ್ಲೋಕದವರೆವಿಗೆ ೧೬ ಶ್ಲೋಕಗಳನ್ನೂ ತೆಗೆದುಹಾಕಿದ್ದಾರೆ. ಮತ್ತು ೪ನೇ ಪರಿಚ್ಛೇದ ೧೧ನೇ ಶ್ಲೋಕದಲ್ಲಿ—

"ಕೇನ ಕಿಂಚಿತ್ಕಾರಣೇನಾಹಂ ಶಿವಲಿಂಗಾದಿ ಹಾ ಭವಂ"

ಎಂದಿರುವುದನ್ನು ಬದಲಾಯಿಸಿ—

"ಶಿವಾದೇಶಾನುಸಾರೇಣ ಶಿವಲಿಂಗಾದಿ ಹಾ ಭವ"

ಎಂದು ಪರಿವರ್ತಿಸಿದ್ದಾರೆ. ಇದಲ್ಲದೆ ಸದರ ಗ್ರಂಥದ ೯ನೆಯ ಪರಿಚ್ಛೇದ ೨೯ನೆಯ ಶ್ಲೋಕದ ತಮ್ಮ ಭಾವಪ್ರಕಾಶ ವ್ಯಾಖ್ಯಾನದಲ್ಲಿ "ವೀರಶೈವ ಬ್ರಾಹ್ಮಣ, ವೀರಶೈವ ಕ್ಷತ್ರಿಯ, ವೀರಶೈವ ವೈಶ್ಯರು—ತಮ್ಮ ತಮ್ಮ ಜಾತಿಯ ಮನೆಗಳಲ್ಲಿಯೇ ಭೋಜನ ಮಾಡಬೇಕಲ್ಲದೆ ಇತರರ ಮನೆಗಳಲ್ಲಿ ಮಾಡಬಾರದು" ವೀರಶೈವ ಕ್ಷತ್ರಿಯ ವೈಶ್ಯರು

ವೀರಶೈವ ಬ್ರಾಹ್ಮಣರಲ್ಲಿ ಭೋಜನಮಾಡಬೇಕಲ್ಲದೆ ವೀರಶೈವ ಬ್ರಾಹ್ಮಣರು ವೀರ ಶೈವ ಕ್ಷತ್ರಿಯ ವೈಶ್ಯರಲ್ಲಿ ಭೋಜನ ಮಾಡಬಾರದು, ವಗೈರೆ ಮತಸಿದ್ಧಾಂತಕ್ಕೆ ಹೊರ್ತಾದ ಅನುಭವಕ್ಕೆ ವಿರೋಧ ಬರುವಂಥ ತಮ್ಮ ದುರಭಿಪ್ರಾಯುಗಳನ್ನು ಸೇರಿಸಿ ಬರೆದಿದ್ದಾರೆ. ಇದು ಭಕ್ತಮಾರ್ಗ ಕ್ರಿಯಾಸ್ಥಳದಲ್ಲಿ ಕಂಡುಬರುತ್ತದೆ. ಮತ್ತು ತ್ರಿವಿಧ ಸಂಪತ್ತಿ ಸ್ಥಲದಲ್ಲಿ ಬಂದಿರುವ ಚರಲಿಂಗಕ್ಕೆ ಗುರುಸ್ಥಲದ ಚರಮೂರ್ತಿ ಎಂದೂ ಇದೇ ರೀತಿ ಜಂಗಮ ಮಾಹಾತ್ಮ್ಯ ಸ್ಥಲದಲ್ಲಿಯೂ ಜಂಗಮರೆಂದರೆ ಗುರುಸ್ಥಲದ ಚರ ಮೂರ್ತಿಗಳೆಂದೂ ಬರೆದಿರುವರು.

ಹೀಗೆ ಉದ್ಗ್ರಂಥಗಳಲ್ಲಿರುವ ಮೂಲ ಶ್ಲೋಕಗಳನ್ನು ತೆಗೆದುಹಾಕಿ ತಮ್ಮ ತಮ್ಮ ಅಭಿಪ್ರಾಯಕ್ಕೆ ಅನುಕೂಲವಾಗುವಂತೆ ಹೊಸ ಶ್ಲೋಕಗಳನ್ನೂ ಸೇರಿಸಿ ಸನಾತನ ಮತ ಪದ್ಧತಿಗೂ ಅನುಭವಕ್ಕೂ ಸಹ ಸರಿಬಾರದಿರುವಂಥ ವಿಷಯುಗಳನ್ನು ವ್ಯಾಖ್ಯಾನ ರೂಪದಿಂದ ಪ್ರಕಟಿಸುತ್ತ ಇದ್ದಾರೆ. ಇವರ ಈ ಬದಲಾವಣೆ ಈವಾಗ ಮಾನ್ಯವಾಗ ದಿದ್ದರೂ ಕಾಲಾಂತರದಲ್ಲಿ ಮಾನ್ಯ ಪ್ರಮಾಣಭೂತವಾಗಿ ಪರಿಣಮಿಸಬಹುದಾಗಿದೆ. ಆದ್ದರಿಂದ ಪರಮಪೂಜ್ಯಪಾದದ ಪ್ರಸಾದ ವಾಣಿಯಿಂದ ಹೊರಹೊಮ್ಮಿದ ಶಾಸ್ತ್ರ ಶಿಷ್ಟಾಚಾರ ಸಂಮತವಾದ ವಚನೋಪದೇಶಗಳನ್ನು ಬಹಳಲ್ಲ ಸ್ವಲ್ಪವಾದರೂ ಕೇಳಿದ್ದು ಈವಾಗ ಈ ಚಳುವಳಿಕಾರರು ಪ್ರಸಾರ ಮಾಡುತ್ತಿರುವ ಶಾಸ್ತ್ರ ಶಿಷ್ಟಾ ಚಾರಕ್ಕೆ ಸಮ್ಮತವಲ್ಲದ ವಿಚಾರಗಳನ್ನು ಕಣ್ಮುಟ್ಟ ನೋಡಿಯೂ ಕೈಸಾರಿದಷ್ಟು ಉದ್ಯಮಪರನಾಗದಿದ್ದರೆ ಆ ದ್ರೋಹವು ನನ್ನಪದರಿಗೆ ಇದ್ದದ್ದೆಂದೇ ಭಾವಿಸಿ ಇದನ್ನು ನಿಮಗೆ ತಿಳಿಸಿದ್ದಾಗಿದೆ.

ಶ್ರೀ ಸದಾಶಿವ ಶಿವಾಚಾರ್ಯರು ಶ್ರೀಗುರು ಕುಮಾರಾಶ್ರಮ
ಗಿರಿಯಾಪುರ

ಈ ಗ್ರಂಥದ ಒಂದು ಪ್ರತಿಯು ತೆಲುಗು ಲಿಪಿಯಲ್ಲಿ ಮದ್ರಾಸಿನಲ್ಲಿ ಮುದ್ರಿಸಲ್ಪ ಟ್ಟಿದೆ. ಓಲೆಯಲ್ಲಿಯೂ ಈ ಪ್ರತಿಗಳಿವೆ. ಆ ಪ್ರಕಾರ ೧ನೆಯ ಪರಿಚ್ಛೇದ ೧೩ನೆಯ ಶ್ಲೋಕದಿಂದ ಗ್ರಂಥಕರ್ತನ ವಿಷಯುವು ಹೇಳಲ್ಪಡುತ್ತವೆ. ಅದರ ಪಾ ರಂಭವು ಹೀಗೆ:

ಕಶ್ಚಿದಾಚಾರ ಸಿದ್ಧಾನಾಮಗ್ರಣೀಃ ಶಿವಯೋಗಿನಾಂ ।
ಶಿವಯೋಗೀತಿ ವಿಖ್ಯಾತಃ ಶಿವಜ್ಞಾನ ಮಹೋದಧಿಃ ॥

—ಇಲ್ಲಿಂದ ೩೦ನೆಯ ಶ್ಲೋಕದವರೆವಿಗೆ ಈ ಗ್ರಂಥಕರ್ತನ ಮತ್ತು ಗ್ರಂಥದ ವಿಷಯುವು ಹೇಳಲ್ಪಟ್ಟಿದೆ. ಮೇಲೆ ಕಂಡ ಪ್ರತಿಗಳಲ್ಲಿ ಈ ಹದಿಮೂರನೆಯ ಶ್ಲೋಕದ ಸಂಸ್ಕೃತ ವ್ಯಾಖ್ಯಾನವಿದೆ. ಈ ವ್ಯಾಖ್ಯಾನವನ್ನು ರಚಿಸಿದವರಾರೆಂಬುದು ಆ ಪ್ರತಿಗಳಿಂದ ತಿಳಿದು ಬರುವುದಿಲ್ಲವಾದುದರಿಂದ ಬಹುಶಃ ಗ್ರಂಥವನ್ನೇ ರಚಿಸಿದವನು ಬರೆದಿರಬೇಕೆಂದು ತೋರುತ್ತದೆ.

ಆ ವ್ಯಾಖ್ಯಾನದಲ್ಲಿ ಮೇಲೆ ಕಂಡ ಶ್ಲೋಕಕ್ಕೆ "ಶಿವಯೋಗಿನಾಂ ಮಧ್ಯೇ । ಅಗ್ರಣೀಃ ಶ್ರೇಷ್ಠಃ । ಶಿವಜ್ಞಾನ ಮಹೋದಧಿಃ ಶಿವಜ್ಞಾನ ಸಮುದ್ರಃ । ಕಶ್ಚಿತ್

ರೇವಣಸಿದ್ಧೇಶ್ವರ ದೃಷ್ಟಿಗರ್ಭ ಸಂಭೂತಃ ಸಿದ್ಧರಾಮೇಶ್ವರಃ । ಆಚಾರ ಸಿದ್ಧಾನಾಂ ಸದಾಚಾರ ಸಂಪನ್ನಾನಾಂ ವಂಶೇ । ಶಿವಯೋಗೀತಿ ವಿಖ್ಯಾತಃ ಆಸೀತ್ ಇತ್ಯರ್ಥಃ" ಎಂದು ಬರೆಯಲ್ಪಟ್ಟಿದೆ. ಇಲ್ಲಿ 'ಕಶ್ಚಿತ್' ಶಬ್ದಕ್ಕೆ ಸಿದ್ಧರಾಮೇಶ್ವರನು ಎಂದು ಇರುವುದನ್ನು ಶ್ರೀ ಕಾಶೀನಾಥಶಾಸ್ತ್ರಿಗಳು ಒಪ್ಪದೆ, 'ಕಶ್ಚಿತ್' ಪದವನ್ನೇ ಕೈಬಿಟ್ಟು ಅದರ ಬದಲಾಗಿ 'ಆಶೀಕ್' ಪದವನ್ನು ಸೇರಿಸಿ ಆ ಶ್ಲೋಕವನ್ನು ಪ್ರಕಟಿಸಿದ್ದಾರೆ. ಮತ್ತು ಈ ಶ್ಲೋಕದಲ್ಲಿ ಹೇಳಲ್ಪಟ್ಟವನು 'ಶಿವಯೋಗಿ ಶಿವಾಚಾರ್ಯ' ಎಂದು ತಮ್ಮ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

ಬೊಮ್ಮರಸನು ತನ್ನ ಗ್ರಂಥದ ೧೨ನೆಯ ಸಂಧಿಯಲ್ಲಿ ಚಾಮಲದೇವಿಯನ್ನು ಕಂಡಾಗ ಮುದ್ದುಗೌಡನ ಅರ್ಧಾಂಗಿಯ ಉದರದಲ್ಲಿ ಪರಮಶಿವಯೋಗಿಯು ಹುಟ್ಟು ವನೆಂದು ಹೇಳುತ್ತಾನೆ. ಹೆಸರನ್ನು ಹೇಳಿಲ್ಲ (ಪದ್ಯ–೯) ಸುಗ್ಗಲಾದೇವಿಯನ್ನು ಕಂಡಾಗ ಒಂದೆರಡು ತಿಂಗಳಿನ ಮೇಲೆ ಶಿವಯೋಗಿ ಕುಲ ಲಲಾಮನಾದ ಸಿದ್ಧರಾಮನು ಹುಟ್ಟುವನೆಂದು ಎಚ್ಚರಿಸುತ್ತಾನೆ. (ಪದ್ಯ–೧೪) ಇವುಗಳಿಂದ 'ಶಿವಯೋಗಿ' ಎಂಬ ಪದವನ್ನು ಸಿದ್ಧರಾಮನಿಗಾಗಿ ಉಪಯೋಗಿಸುತ್ತಿದ್ದುದೂ, ಅದೇ ಪದ್ಧತಿಯಲ್ಲಿ ಮೇಲಿನ ಶ್ಲೋಕವೂ ಅದರ ಸಂಸ್ಕೃತ ವ್ಯಾಖ್ಯಾನವೂ ಬರೆಯಲ್ಪಟ್ಟಿದೆ, ಎಂಬುದೂ ವ್ಯಕ್ತವಾಗುತ್ತದೆ. ಆ ಪ್ರಕಾರ ತಿಳಿದರೆ "ಸಿದ್ಧರಾಮನ ವಂಶದಲ್ಲಿ 'ಮುದ್ದುದೇವ' ಎಂಬುವವನಿದ್ದನು. ಅವನಮಗ ಶಾಂತಸ್ವಭಾವದ ಸಿದ್ಧನಾಥ ಎಂಬುವವನಿದ್ದನು. ಈ ಆಚಾರ್ಯನ ಮಗನು 'ಶಿವಯೋಗಿ' ಈ ಶಿವಯೋಗಿಯು ಶೈವತಂತ್ರಗಳನ್ನು ನೋಡಿ ಪೂರ್ವದಲ್ಲಿ ಶಿವನಿಂದ ಹೆಂಡತಿಯಾದ ಪಾರ್ವತಿಗೆ ಮತ್ತು ಮಗನಾದ ಷಣ್ಮುಖನಿಗೆ ಹೇಳಲ್ಪಟ್ಟು ಆ ಸಂಪ್ರದಾಯ ಸಿದ್ಧನಾದ ರೇಣುಕ ಮಹಾತ್ಮನಿಂದ ಅಗಸ್ತ್ಯನಿಗೆ ಬೋಧಿಸಲ್ಪಟ್ಟುದನ್ನು ಮತ್ತೆ ಭೂಮಿಯಲ್ಲಿ ೧೦೧ ಸ್ಥಲಗಳಿಂದ ಕೂಡಿದ ವೀರಶೈವ ಮಹಾತಂತ್ರವನ್ನು ಲೋಕದವರ ಅನುಗ್ರಹಾರ್ಥವಾಗಿ ಸಂಗ್ರಹದಿಂದ ಪ್ರಕಟಿಸಿದನು." ಎಂಬ ವಿಷಯುವು ಕವಿಯ ವಿಷಯ ಮತ್ತು ಗ್ರಂಥ ವಿಷಯವಾಗಿ ಹೇಳಲ್ಪಟ್ಟಿದೆ.

ಈ ಕಥೆಯನ್ನು ಕೇಳಿದರೆ ಕೈಲಾಸದ ರೇಣುಕನೂ ಅಗಸ್ತ್ಯನೂ ಬೇರೆ, ಈ ಭೂಲೋಕದ ರೇವಣಸಿದ್ಧನೂ ಅಗಸ್ತ್ಯನೂ ಬೇರೆ ಎಂಬುದು ಸ್ಪಷ್ಟವಾಗುತ್ತದೆ.

ಕಾಶೀನಾಥ ಶಾಸ್ತ್ರಿಗಳ 'ಸಿದ್ಧಾಂತ ಶಿಖಾಮಣಿ'ಯ ೧೯ನೆಯ ಶ್ಲೋಕದಲ್ಲಿ 'ಯಸ್ಯಾಚಾರ್ಯ ಕುಲಾಜ್ಜಾತಾ' ಎಂಬುದರ ಬದಲಾಗಿ 'ಯದಾಚಾರ್ಯ ಕುಲೇಜಾತಾ' ಎಂದು ಮಾಡಲ್ಪಟ್ಟುದೇನೂ ವಿಶೇಷವಲ್ಲ. 'ಭಾವ ಪ್ರಕಾಶ' ಎಂಬ ತಮ್ಮ ವ್ಯಾಖ್ಯಾನ ದಲ್ಲಿ ಶಿವಯೋಗಿ ಶಿವಾಚಾರ್ಯನ ವಂಶದಲ್ಲಿ ಮುದ್ದದೇವ ಶಿವಾಚಾರ್ಯನು ಜನಿಸಿದ್ದನು. ಅವನಿಗೆ ಸಿದ್ಧನಾಥ ಶಿವಾಚಾರ್ಯನೆಂಬ ಮಗನು ಹುಟ್ಟಿದನು. ಎಂದು ಬರೆದಿರುವುದು ಪೂರ್ವಿಕರ ಅಭಿಪ್ರಾಯಕ್ಕೆ ವಿರೋಧವಾಗಿದೆ. ಇದೇ ಸಿದ್ಧಾಂತ ಶಿಖಾಮಣಿಯ ೪ನೆಯ ಪರಿಚ್ಛೇದದಲ್ಲಿ 'ಕೇನಚಿತ್ ಕಾರಣೇನಾಹಂ ಶಿವಲಿಂಗಾದಿಹಾಭವಂ' ಎಂಬು

ದಾಗಿ ಬದಲಾಯಿಸಲ್ಪಟ್ಟಿರುವುದಲ್ಲದೆ 'ಖಂಡಯನ್ ಜೈನ ಚಾರ್ವಾಕ ಬೌದ್ಧಾದೀನಾಂ ದುರಾಗಮಾನ್' ಎಂಬ ಅರ್ಧಶ್ಲೋಕವು ಕೈಬಿಡಲ್ಪಟ್ಟಿದೆ. ಮತ್ತು ಮೇಲಿನ ಲೇಖನ ದಲ್ಲಿ ಹೇಳಲ್ಪಟ್ಟಂತೆ ಅನೇಕ ಬದಲಾವಣೆಗಳಾಗಿವೆ.

ಪೂರ್ವದ ಗ್ರಂಥಗಳನ್ನು ಪ್ರಕಟಿಸುವವರಿಗೆ ಒಂದು ಪ್ರಾರ್ಥನೆ. "ದಯವಿಟ್ಟು ಇದ್ದುದನ್ನು ಇದ್ದಂತೆ ಪ್ರಕಟಿಸಿರಿ" ಗ್ರಂಥ ರಚಿಸಿದವನ ಅಭಿಪ್ರಾಯಕ್ಕೆ ವಿರುದ್ಧ ಬಾರ ದಂತೆ ಅಕ್ಷರಸ್ಖಾಲಿತ್ಯಗಳೂ ವ್ಯಾಕರಣ ದೋಷಗಳೂ ಇದ್ದರೆ ಅವು ಬರೆದವರ ತಪ್ಪು ಗಳಾದುದರಿಂದ ಅವನ್ನು ತಿದ್ದಬಹುದು. ಹೀಗೆ ಪ್ರಕಟಿಸುವವರೇ ಜನೋಪಕಾರಿ ಗಳು. ತಮ್ಮ ಸ್ವಂತ ಅಭಿಪ್ರಾಯವು ಗ್ರಂಥದ ಅಭಿಪ್ರಾಯಕ್ಕೆ ಭಿನ್ನವಾಗಿದ್ದರೆ, ಅದನ್ನು ತಮ್ಮ ಪ್ರಕಟನಾ ಗ್ರಂಥವ ಮೊದಲಲ್ಲಿಯೋ ಕಡೆಯಲ್ಲಿಯೋ ಅವಶ್ಯಕವಾಗಿ ಬರೆಯಲಿ. ಹೀಗಾದರೆ ಮಾತ್ರ ನಾವು ಪೂರ್ವದವರ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಗ್ರಹಿಸಲನುಕೂಲವಾಗುತ್ತದೆ.

ಶ್ರೀ ಪಂಡಿತ ಕಾಶೀನಾಥ ಶಾಸ್ತ್ರಿಗಳು 'ಪಂಚಾಚಾರ್ಯರ ಪ್ರಾಚೀನತ್ವ' ಎಂಬು ದಾಗಿ ಒಂದು ಪುಸ್ತಕವನ್ನೂ ಪ್ರಸಿದ್ಧಿಸಿರುತ್ತಾರೆ. (ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್– ೧೯೪೮) ಇದರಲ್ಲಿ ಈ ಗ್ರಂಥಕರ್ತನ 'ಶಿವಯೋಗಿ ಶಿವಾಚಾರ್ಯ'ನ ವಿಷಯವಾಗಿ ಒಂದು ಲೇಖನವನ್ನೂ ಬರೆದಿರುತ್ತಾರೆ. (ಪುಟ ೧೩೩–೧೩೫) ಈತನು ಎರಡುಸಾವಿರ ವರ್ಷಗಳ ಪೂರ್ವದಲ್ಲಿದ್ದನು, ಎಂದು ಅಭಿಪ್ರಾಯಪಟ್ಟಿದ್ದಾರೆ. ಹಾಗೆ ಹೇಳುವುದಕ್ಕೆ ಈ ಕಾರಣಗಳನ್ನು ತೋರಿಸಿದ್ದಾರೆ.

೧) ಅಥಾತೋ ಬ್ರಹ್ಮಜಿಜ್ಞಾಸಾ (ಶ್ರೀಕರ ಭಾಷ್ಯ–೧–೧–೧) ಈ ಬ್ರಹ್ಮ ಸೂತ್ರಕ್ಕೆ ವ್ಯಾಖ್ಯಾನವನ್ನು ಬರೆಯುವಾಗ "ರೇಣುಕ ಭಗವತ್ಪಾದಾಚಾರ್ಯೇಣಾಪಿ... ಇತ್ಯಂತೇನ ಸಿದ್ಧಾಂತ ಶಿಖಾಮಣೌ ತಸ್ಯೈವೋಪದೇಶಾತ್" ಎಂದಿದೆ. ಹೀಗೆ ಹೇಳಿ ಶ್ರೀಪತಿ ಪಂಡಿತರ ಕಾಲವು ೧೧ನೆಯ ಶತಮಾನವೆಂದು ತೋರಿಸುತ್ತಾರೆ. ಅದು ಸರಿ ಯಲ್ಲ. ಶ್ರೀಪತಿ ಪಂಡಿತರು ೧೨ನೆಯ ಶತಮಾನದವರೆಂಬುವನ್ನು ಅವರ ವಿಷಯುಕ ವಾದ ಪ್ರಕರಣದಲ್ಲಿ ತೋರಿಸಿದೆ. ಆ ಕಾಲದವರು ಅವರಾದರೂ, ಅವರಿಂದ ಭಾಷ್ಯವು ಬರೆಯಲ್ಪಡಲಿಲ್ಲವೆಂದೂ ಆ ಭಾಷ್ಯವು ೧೪ನೆಯ ಶತಮಾನದಲ್ಲಿ ರಚಿತವಾದುದೆಂದೂ ಅದನ್ನು ಪ್ರಕಾಶಪಡಿಸಿದ ಶ್ರೀ ಹಯವದನರಾಯರು ಹೇಳಿದ್ದಾರೆ. (ಶ್ರೀಕರ ಭಾಷ್ಯದ ಇಂಗ್ಲೀಷ್ ಮುನ್ನುಡಿ)

ಇದು ತಪ್ಪೆಂದು ಶ್ರೀ ಕಾಶೀನಾಥ ಶಾಸ್ತ್ರಿಗಳು ಅವರಿಗೆ ಬರೆದಾಗ್ಯೂ ಅವರು ೧೪ನೆಯ ಶತಮಾನವೇ ಖಂಡಿತವೆಂದು ತಿಳಿಸಿದ್ದಾರೆ. ಇದಲ್ಲದೆ 'ಶಿವಸುತ' ಎಂಬ ಪರ್ಯಾಯನಾಮದಿಂದ ಈಗ ಮದರಾಸು ಪ್ರಾಂತದಲ್ಲಿ ಜಡ್ಜ್ ಆಗಿರುವ ಶ್ರೀ ಹರಪನ ಹಳ್ಳಿ ಸದಾಶಿವಯ್ಯನವರು ಆ ಗ್ರಂಥವು ಸುಮಾರು ೧೦೦೮ ವರ್ಷಗಳಿಂದೀಚೆಗೆ ಶ್ರೀಪತಿ ಪಂಡಿತರ ಹೆಸರಿನಲ್ಲಿ ರಚಿಸಲ್ಪಟ್ಟುದೆಂದು ಬರೆದಿರುತ್ತಾರೆ. (ಸಾಹಿತ್ಯ ಸಮಿತಿ ಪತ್ರಿಕೆ–ಧಾರವಾಡ)

ಹೀಗೆ ಆ ಗ್ರಂಥದ ವಿಷಯದಲ್ಲಿ ೧೨ನೆಯ ಶತಮಾನದ ಶ್ರೀಪತಿ ಪಂಡಿತರ ಕಾಲದ ಖಂಡನೆ ಇರುವುದರಿಂದ ಆ ಖಂಡನೆಯನ್ನು ಬಗೆಹರಿಸುವವರೆಗೂ ಅದರ ಪ್ರಾಚೀನತೆಯನ್ನು ತೋರಿಸುವುದು ಸರಿಯಾಗಿಲ್ಲ.

೨) ಶ್ರೀಕಂಠ ಭಾಷ್ಯದಲ್ಲಿ ಶ್ರೀಕಂಠ ಶಿವಾಚಾರ್ಯರು "ಅವಿಭಾಗೇನ ದೃಷ್ಟತ್ವಾತ್" (೪-೪-೪) ಎಂಬ ಸೂತ್ರಕ್ಕೆ ಸಿದ್ಧಾಂತ ಶಿಖಾಮಣಿಯಲ್ಲಿನ ೯ನೆಯ ಪರಿಚ್ಛೇದದ "ಮುಕ್ತಃ ಶಿವಸಮೋಭವೇತ್" ಎಂಬ ವಾಕ್ಯವನ್ನು ತೆಗೆದುಕೊಂಡಿದ್ದಾರೆ, ಎಂದು ತೋರಿಸುತ್ತಾರೆ. ಶ್ರೀಕಂಠರು ೧೨ನೆಯ ಶತಮಾನದಲ್ಲಿದ್ದುದು ನಿಜ. ಆ ಕಾಲದಲ್ಲಿಯೇ ಅವರ ಭಾಷ್ಯವು ರಚಿಸಲ್ಪಟ್ಟುದೂ ನಿಜ. ಆದರೆ ಅವರು ಸಿದ್ಧಾಂತ ಶಿಖಾಮಣಿಯಿಂದ ಈ ವಾಕ್ಯವನ್ನು ತೆಗೆದುಕೊಂಡಿರುವುದಾಗಿ ಹೇಳಿಲ್ಲ. ಮತ್ತೂ ಬೇರೆ ಕಡೆಯಲ್ಲಿಯೂ ಉದಾಹರಿಸಿಲ್ಲ. ಅವರ ಶಿವಾದ್ವೈತವು ಸಾಕಾರ ಶಿವನನ್ನು ನಂಬಿದುದೆಂದೂ, ವೀರಶೈವರ ಶಿವಾದ್ವೈತವು ನಿರಾಕಾರ ಶಿವನನ್ನು ಅವಲಂಬಿಸಿದುದೆಂದೂ, ಸದ್ಧರ್ಮದೀಪಿಕೆಯಲ್ಲಿ ಪ್ರಕಟಿಸಿ ಇದೆ. (ಸಂ. ೬೪-೬೫) ಅವರು 'ಮುಕ್ತನಾದವನು ಶಿವನ ಸಮನಾಗುತ್ತಾನೆ' ಎಂದು ಹೇಳಿದರೆ ಇವರು 'ಶಿವನೇ ಆಗುತ್ತಾನೆ' ಎಂದು ಹೇಳುವರು.

ಅವರ ಅಭಿಪ್ರಾಯದ ಧರ್ಮದ ನಡತೆಯು ೧೨ನೆಯ ಶತಮಾನದ ಮುಂಚೆಯೇ ಇದ್ದಿತು. ಅದರಲ್ಲಿನ ಅನೇಕ ಅಭಿಪ್ರಾಯಗಳು ವೀರಶೈವ ಶಿವಾದ್ವೈತಕ್ಕೆ ಅನುಕೂಲವಾಗಿವೆ. ಆ ಪುಸ್ತಕದಿಂದ ಅಥವಾ ಆ ರೀತಿ ಹೇಳುವ ಇತರ ಧರ್ಮಗ್ರಂಥಗಳಿಂದ 'ಸಿದ್ಧಾಂತ ಶಿಖಾಮಣಿ' ಗ್ರಂಥಕರ್ತನು ತೆಗೆದುಕೊಂಡಿದ್ದಾನೆ ಎಂದು ನಿರ್ಣಯಿಸಬೇಕಾಗಿದೆ. (ಮೊದಲೇ ಇದರಲ್ಲಿ ಹೇಳಲ್ಪಟ್ಟುದಲ್ಲ.)

೩) ಈ ಗ್ರಂಥದ ೧ನೆಯ ಪರಿಚ್ಛೇದದಲ್ಲಿ (ಶ್ಲೋಕ-೨೩) "ಬೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತಾಂಶುಮಾಲಿನಾ" ಎಂದಿರುವುದರಿಂದ ಬೌದ್ಧಮತ ಪ್ರಾಬಲ್ಯವಿದ್ದಾಗ (ಸುಮಾರು ೧೦೦೦ ವರ್ಷ) ಈ ಗ್ರಂಥವು ರಚಿತವಾದುದೆಂದು ನಿರ್ಧರಿಸುತ್ತಾರೆ. ಇದೂ ಸರಿಯಲ್ಲ. ಕ್ರಿ. ಶ. ಸು. ೧೪೫೦ ರಲ್ಲಿ ರಚಿಸಲ್ಪಟ್ಟ ಪಂಚ ಬ್ರಹ್ಮೋದಯ ಭಾಷ್ಯದಲ್ಲಿ (೨ನೆಯ ಅಧ್ಯಾಯದ ಆರಂಭದಲ್ಲಿ) ಈ ಶ್ಲೋಕವಿದೆ—

ಬುದ್ಧಯಾಮಿನಿಮಾರ್ತಾಂಡ ಜಿನಜೀಮೂತ ಮಾರುತಃ ।
ಯಸ್ಯೈಕ ಪಂಡಿತಾರಾಧ್ಯ ಫಾಲಸೋಮೇಶಪಾತುವಃ ॥

—ಇದರಲ್ಲಿಯೂ ಬೌದ್ಧ ಜೈನರ ವಿರೋಧಿ ಎಂದಿದೆ. ಅದಮಾತ್ರಕ್ಕೆ ಈ ಗ್ರಂಥವು ೨೦೦೦ ವರ್ಷ ಪೂರ್ವದ್ದೆಂದು ಹೇಗೆ ತಿಳಿಯಲಾಗುವುದಿಲ್ಲವೋ ಹಾಗೆ ಸಿದ್ಧಾಂತ ಶಿಖಾಮಣಿಯ ಕಾಲವನ್ನೂ ತಿಳಿಯಲಾಗುವುದಿಲ್ಲ.

೪) ಈ ಗ್ರಂಥದ ೪ನೆಯ ಪರಿಚ್ಛೇದದಲ್ಲಿ "ರೇಣುಕಾಚಾರ್ಯರು ಸೋಮೇಶ್ವರ ಲಿಂಗದಿಂದ ಅವತಾರ" ಎಂದು ಹೇಳಿದೆ. ಇದರಿಂದ ಆ ಗ್ರಂಥವು ೨೦೦೦ ವರ್ಷ

ದಷ್ಟು ಪ್ರಾಚೀನವೆಂಬ ಅವರ ನಿದರ್ಶನವು ಸಿದ್ಧವಾಗುವುದಿಲ್ಲ. ಆ ದೇವಾಲಯವೇ ೧೦೦೦ ವರ್ಷದ್ದು ಎಂಬುದನ್ನು ಹಿಂದಿನ ಪ್ರಕರಣದಲ್ಲಿ ತೋರಿಸಿ ಇದೆ.ಅದೆಷ್ಟು ವರ್ಷದ್ದಾದರೂ ಈದಿನ ಒಬ್ಬರು "ಸೋಮೇಶ್ವರ ಲಿಂಗದಿಂದ ಜನನ" ಎಂಬುವನ್ನು ಬರೆಯಬಹುದು. ಆ ಬರಹದ ಪ್ರಾಚೀನತೆ ಉಳಿಯಿತೆಲ್ಲಿಂದ ?

೫) ಈ ಗ್ರಂಥದ ೫ನೆಯ ಪರಿಚ್ಛೇದದಿಂದ ೨೦ನೆಯ ಪರಿಚ್ಛೇದದವರೆಗೆ 'ವೀರಶೈವ ಸಿದ್ಧಾಂತವು' ಹೇಳಲ್ಪಟ್ಟಿದೆ, ಎಂಬುದೊಂದು ಕಾರಣ. ಈ ದಿವಸವೂ ಒಬ್ಬರು ಹೇಳಬಹುದು. ಇದರಿಂದ ಪ್ರಾಚೀನತೆ ಬರುವುದಿಲ್ಲ.

೬) ಈ ಗ್ರಂಥದ ೨೧ನೆಯ ಪರಿಚ್ಛೇದದಲ್ಲಿ ವಿಭೀಷಣಾಭೀಷ್ಟವರ ಪ್ರಧಾನ ವಿಷಯವಿದೆ ಎಂದು ತೋರಿಸಿದ್ದಾರೆ. ವಿಭೀಷಣ ವಿರುಪಾಕ್ಷಸಿದ್ಧ ಇವರಿಗೆ ಉಪಮಾನೋಪಮೇಯಗಳನ್ನು ಕಲ್ಪಿಸಿ ಹರೀಶ್ವರನು ಹೇಳಿದ ಪೌರಾಣಿಕ ನಮೂನೆಯ ರಗಳೆಯ ತೊಡಕು ಇದು. ವಿರೂಪಾಕ್ಷಸಿದ್ಧನು ಗೋರಕ್ಷನ ಸಮಕಾಲೀನನಾಗಿ (೧೨ನೆಯ ಶತಮಾನದವನು) ನಿದರ್ಶನಕ್ಕೆ ಬಂದಿದ್ದಾನೆ. ಆದರೂ ಅವನು ೧೦೦೦ ವರ್ಷದ ಹಿಂದಿನವರೆಂದು ಅವನ ವಿಷಯವನ್ನು ಇಂದು ಬರೆಯುಬಹುದು. ಆದುದರಿಂದ ಈ ಗ್ರಂಥದ ಪ್ರಾಚೀನತ್ವವು ನಿಂತುಕೊಳ್ಳುವುದಿಲ್ಲ. ಈ ಕಾರಣದಿಂದ ಈ ಗ್ರಂಥದ ಪ್ರಾಚೀನತೆ ೨೦೦೦ ವರ್ಷವೆಂಬುವುದು ಬರಿಯ ಕಲ್ಪನೆ; ನಿಜವಲ್ಲ.

ಈ ಗ್ರಂಥದ ಪ್ರಕಾರ ಆದ್ಯ ಅಗಸ್ತ್ಯರಿಗೆ ಷಣ್ಮುಖನಿಂದ ಮೊದಲು ಬೋಧಿಸಲ್ಪಟ್ಟುದು 'ಶಿವಧರ್ಮೋತ್ತರ' ಎಂಬ ಗ್ರಂಥವೆಂದು ತಿಳಿಯಲಿಕ್ಕೆ ಬರುತ್ತದೆ. ಅದು ಇನ್ನೂ ಅಚ್ಚಾಗಿಲ್ಲ. ಅದು ೧೨ನೆಯ ಶತಮಾನಕ್ಕೆ ಮುಂಚೆಯೇ ಹುಟ್ಟಿದುದು. ಇದರ ಉದಾಹರಣೆಯು ಕೆರೆಯ ಪದ್ಮರಸನ ದೀಕ್ಷಾಬೋಧೆಯಲ್ಲಿದೆ.ಅದರಲ್ಲಿ ಸಿದ್ಧಾಂತ ಶಿಖಾಮಣಿಯ ಹೆಸರಿಲ್ಲ. ಅದರ ತರುವಾಯ ರೇವಣಸಿದ್ಧರು ಅಗಸ್ತ್ಯರಿಗೆ ಬೋಧೆ ಮಾಡಿದ ಈ ಸಿದ್ಧಾಂತ ಶಿಖಾಮಣಿ ಗ್ರಂಥವು ಸೊಲ್ಲಾಪುರದ ಸಿದ್ಧರಾಮುನಿಗೆ ವಂಶದ ಶಿವಯೋಗಿಯಿಂದ ರಚಿಸಲ್ಪಟ್ಟುದಾಗಿದೆ. (ಈ ಶ್ರೀ ಸಿದ್ಧರಾಮುನಿಗೆ ಹೆಸರು ಹೇಳದೆ ಬರಿಯ 'ಶಿವಯೋಗಿ' ಪದವನ್ನು ಉಪಯೋಗಿಸಿರುವುದು ಅನೇಕ ಗ್ರಂಥಗಳಲ್ಲಿ ಕಾಣ ಬರುತ್ತದೆ.) ಈ ಸಿದ್ಧರಾಮನ ಕಾಲವು ಕ್ರಿ. ಶ. ೧೨ನೆಯ ಶತಮಾನ.

ಈ ಸಿದ್ಧಾಂತ ಶಿಖಾಮಣಿಯನ್ನು ನೋಡಿ "ಪಂಚಬ್ರಹ್ಮೋದಯ ಭಾಷ್ಯ" ಎಂಬ ಗ್ರಂಥ ಹುಟ್ಟಿದೆ. ಅದರಲ್ಲಿ ರೇವಣಸಿದ್ಧರ ವಿಷಯವನ್ನು ಬರೆಯುವಾಗ "ಸಿದ್ಧಾಂತ ಶಿಖಾಮಣೌ" ಎಂದು ಸ್ಪಷ್ಟವಾಗಿ ಹೇಳಿ, ದಾರುಕನನ್ನು ದಾಟಿದ ತಪ್ಪಿಗಾಗಿ ರೇವಣಸಿದ್ಧರು ಭೂಲೋಕಕ್ಕೆ ಬಂದುದೇ ಮುಂತಾದುದನ್ನು ವಿವರಿಸುವ ಶ್ಲೋಕಗಳು ಹೇಳಲ್ಪಟ್ಟಿವೆ. ಇವು ಕಾಶೀನಾಥಶಾಸ್ತ್ರಿಗಳದಲ್ಲದ ಸಿದ್ಧಾಂತ ಶಿಖಾಮಣಿ ಪ್ರತಿಗಳಲ್ಲಿ ಇವೆ.

ಈ ವಿಷಯವನ್ನು ಮೊದಲು ಹೇಳಿದ ಹರೀಶ್ವರನ ರಗಳೆಯನ್ನು ನೋಡಿದ ಮೇಲೆ ಸಿದ್ಧಾಂತ ಶಿಖಾಮಣಿಯು ರಚಿಸಲ್ಪಟ್ಟಿದೆ. ಅಗಸ್ತ್ಯನಿಗೆ ಬೋಧಿಸಿದುದೆಂದು

ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲ್ಪಟ್ಟ ೧೦೧ ಸ್ಥಲಗಳ ವಿಚಾರ ರಗಳೆಯಲ್ಲಿಲ್ಲ. ಆದ್ದರಿಂದಲೇ ಹರೀಶ್ವರನ ರೇ. ಸಿ. ರಗಳೆಯು ಹುಟ್ಟಿದ ಮೇಲೆಯೇ ಸಿದ್ಧಾಂತ ಶಿಖಾಮಣಿಯು ಹುಟ್ಟಿದ್ದೆಂದು ಸ್ಪಷ್ಟವಾಗುವುದು.

ಪಂಚಬ್ರಹ್ಮೋದಯ ಭಾಷ್ಯದ ಕಾಲವು ಕ್ರಿ. ಶ. ೧೪೫೦. ಆದ್ದರಿಂದ ಸಿದ್ಧಾಂತ ಶಿಖಾಮಣಿಯು ಹರೀಶ್ವರನ ಕಾಲ (ಕ್ರಿ.ಶ.ಸು. ೧೨೨೦) ಮತ್ತು ಪಂ. ಬ್ರ. ಭಾಷ್ಯದ ಕಾಲ ೧೪೫೦ ಈ ಎರಡರ ಮಧ್ಯೇ ಎಂದರೆ ೧೪ನೆಯ ಶತಮಾನದಲ್ಲಿ ಹುಟ್ಟಿದುದೆಂದು ತಿಳಿಯಲಿಕ್ಕೆ ಬರುವಂತಾಗಿದೆ ಮತ್ತು ರೇವಣಸಿದ್ಧರ ಕೃಪಾದೃಷ್ಟಿಯಿಂದ ಸಂಜನಿಸಿದ ಸಿದ್ಧರಾಮ ಶಿವಯೋಗಿಯ ವಂಶದವರೇ ಇದನ್ನು ರಚಿಸಿದವರೆಂಬುದೂ ಸಿದ್ಧಪಡುತ್ತದೆ.

ಮೇಲೆ ವಿಮರ್ಶಿಸಲ್ಪಟ್ಟ ಸಿದ್ಧಾಂತ ಶಿಖಾಮಣಿಯಲ್ಲದೆ 'ಪೂರ್ವಾರ್ಧ ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತ ಗ್ರಂಥವೊಂದು ಬರೆಹದ ಪ್ರತಿಯಲ್ಲಿ ದೊರಕಿದೆ. ಅದು ಪೂರ್ಣವಾಗಿಲ್ಲ. ಒಂದು ಸ್ಥಲವನ್ನು ಹೇಳಿ ಆ ಸಂಬಂಧದ ಕಥೆಯನ್ನು ಬೋಧಿಸುವ ನಮೂನೆಯಲ್ಲಿ ಅದು ಇರುತ್ತದೆ. ಪೂರ್ತಿ ಸಿಕ್ಕಿಲ್ಲವಾದುದರಿಂದ ಅದರ ವಿಷಯದಲ್ಲಿ ಈಗ ಏನನ್ನೂ ಹೇಳುವಂತಿಲ್ಲ. ಬಹುಶಃ ಮಹಾಭಾರತ ಮೊದಲಾದವುಗಳು ಕಥೆಗಳನ್ನು ಹೇಳಿ ಆ ಮೂಲಕ ತತ್ತ್ವವನ್ನು ಬೋಧಿಸುವಂತೆ ಕಥೆಗಳ ಮೂಲಕ ತತ್ತ್ವಗಳನ್ನು ಬೋಧಿಸುವ ಗ್ರಂಥವಾಗಿ ಇದು ರಚಿತವಾಗಿರಬೇಕು. ಇಂತಹ ಗ್ರಂಥವು ಪೂರ್ತಿಯಾಗಿ ಸಿಕ್ಕಿಲ್ಲವೆಂದು ವ್ಯಸನಪಡುವವರೂ ಅದು ಎಲ್ಲಿದೆ ? ಎಂದು ಹುಡುಕುವವರೂ ಈಗ ಯಾರು ? ಈಗ ಸಿಕ್ಕಿರುವ ಗ್ರಂಥಗಳೇ ಎಣ್ಣೆ ಬೆಣ್ಣೆ ಕಾಣವು.

(ಸಂಚಿಕೆ ೮೫-೮೬)

# ಸಿದ್ಧಾಂತ ಶಿಖಾಮಣಿಯ ಕಾಲ

"ಆಂಧ್ರ ಸಿದ್ಧಾಂತ ಶಿಖಾಮಣಿ" ಎಂಬ ಶಿರೋಲೇಖವುಳ್ಳ ಒಂದು ಲೇಖನವನ್ನು ಬಳ್ಳಾರಿ ನವಸಂದೇಶ ಪತ್ರಿಕೆ ೧೧-೧೧-೧೯೫೯ರಲ್ಲಿ ಶ್ರೀ ಶಿವಸುತ ಎಂಬುವರು ಪ್ರಕಟಿಸಿದ್ದಾರೆ. ಅದರಲ್ಲಿ ಮೊದಲು ಇರತಕ್ಕ ವಿಷಯವಿದು:

೧೯೫೯ರ ಎಪ್ರಿಲ್ ತಿಂಗಳಲ್ಲಿ ನೆಲ್ಲೂರು ಪಟ್ಟಣದಲ್ಲಿ ನಡೆದ ಆಂಧ್ರರಾಷ್ಟ್ರ ವೀರಶೈವ (ಜಂಗಮ) ಮಹಾಸಭೆಯಲ್ಲಿ ಪ್ರಸಿದ್ಧರಾದ ಶರಣ ಪಂಡಿತ ಭಂಡಾರು ತಮ್ಮಯ್ಯನವರು ಸಿದ್ಧಾಂತ ಶಿಖಾಮಣಿ ಗ್ರಂಥವು ಆಂಧ್ರಭಾಷೆಯಲ್ಲಿ ಪ್ರಕಟಿಸಲ್ಪಡಬೇಕೆಂದು ಉದ್ದೇಶಿಸಿದ ಅನಂತಪುರದ ಶ್ರೀಶೈಲಸಂಘದವರು ಆ ಗ್ರಂಥಪ್ರಕಟನೆಗೆ ಮೂಲಾಧಾರವಾಗಿ ಕಾಶೀನಾಥ ಶಾಸ್ತ್ರಿಗಳು ಪ್ರಕಟಿಸಿದ ಸಿದ್ಧಾಂತ ಶಿಖಾಮಣಿಯನ್ನಿಟ್ಟುಕೊಂಡಿರುವಲ್ಲಿ ಅದು ದೋಷ ಭೂಯಿಷ್ಠವಾಗಿದ್ದು, ಮೂಲಪ್ರತಿಯನ್ನು ಅನುಸರಿಸಿಲ್ಲ ಎಂಬ ಕಾರಣದಿಂದ ಮುದ್ರಿಸದೆ ನಿಲ್ಲಿಸಿದುದಕ್ಕಾಗಿ ತೃಪ್ತಿಪಟ್ಟುಕೊಂಡು ಸಿದ್ಧಾಂತ ಶಿಖಾಮಣಿಯ ಕೈಬರಹದ ಪ್ರತಿಗಳನ್ನು ಶೇಖರಣೆ ಮಾಡಬೇಕೆಂದು ಆ ಮಹಾಸಭೆಯಲ್ಲಿ ತೀರ್ಮಾನಮಾಡುವುದಕ್ಕೆ ಕಾರಣರಾದರು. ಆಮೇಲೆ ಶಿವಸುತರು ಶ್ರೀ ಭಂಡಾರು ತಮ್ಮಯ್ಯನವರೊಡನೆ, ಓಲೆಯ ಪ್ರತಿಗಳ ಶೇಖರಣೆ ಮಾಡುವುದಕ್ಕೆ ಪ್ರಯತ್ನಿಸಿದರು. ಅನೇಕ ಪ್ರತಿಗಳು ಆಂಧ್ರ ದೇಶದಲ್ಲಿ ಸಿಕ್ಕುವುಗಳನ್ನು ನೋಡಿದಾಗ ಅವುಗಳಲ್ಲಿ ಶ್ರೀ ರೇಣುಕಾಚಾರ್ಯರು ಲಂಕೆಗೆ ಹೋಗಿ ವಿಭೀಷಣನ ಪ್ರಾರ್ಥನೆಯ ಮೇರೆಗೆ ಮೂರುಕೋಟಿ ಲಿಂಗಗಳನ್ನು ಸ್ಥಾಪಿಸಿದ ಪ್ರಕರಣವು ಯಾವುದೊಂದರಲ್ಲಿಯೂ ಇರಲಿಲ್ಲ. ಈ ವಿಷಯವನ್ನು ಆಂಧ್ರ ಮತ್ತು ಕನ್ನಡದೇಶದ ಪಂಡಿತರ ಮುಂದೆ ಮಂಡಿಸಿರಲಾಗಿ, ಆಂಧ್ರ ಪಂಡಿತರು ಈ ಪ್ರಕರಣವು ಮೂಲಪ್ರತಿಗಳಲ್ಲಿ ಇಲ್ಲವಾಗಿ ಅಭಿಪ್ರಾಯಪಟ್ಟಿರುತ್ತಾರೆ. ಕನ್ನಡ ದೇಶದ ಪಂಡಿತಾರಾಧ್ಯರ ಅಭಿಪ್ರಾಯವು ಶ್ರೀ ಶಿವಸುತರಿಗೆ ತಿಳಿದಿಲ್ಲ. ಇನ್ನು ಮೇಲಾದರೂ ಬಳ್ಳಾರಿ ನವಸಂದೇಶ ಪತ್ರಿಕೆಗೆ ತಿಳಿಸಬೇಕೆಂದು ಕನ್ನಡ ಪಂಡಿತರನ್ನು ಕೋರಿರುತ್ತಾರೆ.

ಮದರಾಸು ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಗ್ರಂಥಾಲಯದಲ್ಲಿ ಸಿದ್ಧಾಂತ ಶಿಖಾಮಣಿಯ ಆಂಧ್ರಾನುವಾದ ಗ್ರಂಥವೊಂದು ಎಂ. ಎಸ್. ಆರ್. ೫೫೦ ಇರುವುದು ಶಿವಸುತರಿಗೆ ಗೊತ್ತಾಗಿ ಆ ಗ್ರಂಥಾಲಯದ ಅಧಿಕಾರಿಗಳಿಗೆ ೬೦ ರೂ. ಕಳಿಸಿ ಆ ಪ್ರತಿಯ ಅಧಿಕೃತ ನಕಲೊಂದನ್ನು ತರಿಸಿಕೊಂಡಿದ್ದಾರೆ. ಶಿವಸುತರು ಪ್ರಕಟಿಸಿದ ಲೇಖನದ ಮುಂದಿನ ವಿಷಯಗಳ ಯಥಾ ನಕಲನ್ನು ಇಲ್ಲಿ ಕೊಡಲಾಗಿದೆ.

ಈ ಅನುವಾದ ಗ್ರಂಥವನ್ನು ರಚಿಸಿದವನು "ಚೆನ್ನಾ ಪ್ರಗ್ಗಡ ನಾಗೇಶ್ವರ ಕವಿ" ಎಂಬೋರ್ವ ಆಂಧ್ರ ಆರಾಧ್ಯ ಬ್ರಾಹ್ಮಣಕವಿ, ಆತ್ರೇಯ ಗೋತ್ರದವನು. ಮಲ್ಲಂಪಲ್ಲಿ ಶಿವರಾಯುಲಿಂಗನೆಂಬ ಶಿವಯೋಗಿಯು ಈತನಗುರು. ಗ್ರಂಥಾರಂಭದಲ್ಲಿ ಈ ಕವಿಯು ತನ್ನ ಗುರುಧ್ಯಾನಮಾಡಿ, ಗಣಪತಿ, ವೀರಭದ್ರ, ಭೃಂಗೀಶರರನ್ನು ಸ್ತುತಿಸಿ, ಬಸವೇಶ್ವರ, ಅಲ್ಲಮಪ್ರಭುಗಳನ್ನೂ ಭಕ್ತಿಪೂರ್ವಕ ಸ್ಮರಿಸಿ ಪಾಲ್ಕುರಿಕೆ ಸೋಮನಾಥರನ್ನು "ವೀರಶೈವಾಚಾರ ವಿದ್ಯಾಪ್ರಮಾಣ ಪಾರೀಣ"ನೆಂದು "ನಿರ್ಮಲ ವೀರಶೈವ ಮಾರ್ಗ ಪ್ರತಿಷ್ಠಾಸಮಾನ್ವಿತ ಯಶ"ನೆಂದು ವೆಗ್ಗಳವಾಗಿ ಹೊಗಳಿರುವನು. ತರುವಾಯ ಶೈವ ಯೋಗಪೀಠಗಳಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ವಿಭು, ಮಲ್ಲಿಕಾರ್ಜುನ ಪಂಡಿತನೆಂಬ ನಾಲ್ಕುಜನ ಗುರುಗಳು ಆಗಿದ್ದರೆಂದು ತನ್ನ ಗುರುವಾದ ಮಲ್ಲರಪಲ್ಲಿ ರಾಮಲಿಂಗಯೋಗಿಯು ಏಕೋರಾಮ ಗುರುವಿನ ವಂಶಸ್ಥನೆಂದೂ, ಹರಿತಗೋತ್ರದವನೆಂದೂ ಹೇಳಿ, ಆ ರಾಮಲಿಂಗಯೋಗಿಯು ತನ್ನನ್ನು ಕರೆದು ವೀರಶೈವಾಚಾರ ವಿಸ್ತಾರಮಾರ್ಗ ಸಿದ್ಧಾಂತ ಶಿಖಾಮಣಿ ಎಂಬುದೊಂದು ಗ್ರಂಥವಿರುವುದು. (ಧಾರ್ಮಿಕ ವಿಚಾರಗಳಲ್ಲಿ ?) ಅದು ತತ್ತ್ವದ ಖಣಿ, ನಮಗೆ ಅದಕ್ಕಿಂತ ಬೇರೆ ಗ್ರಂಥವಿಲ್ಲ. ಕಾರಣ ಅದನ್ನು ತೆಲಗು ಭಾಷೆಯಲ್ಲಿ ಭಾಷಾಂತರಿಸಬೇಕೆಂದು ತನಗೆ ಆಜ್ಞಾಪಿಸಿದನೆಂದು ಹೇಳಿಕೊಂಡಿರುವನು. ಶಂಕರನು ಗಾನಪ್ರಿಯನಾದುದರಿಂದ ದ್ವಿಪದವು ಗಾನಾನುಭವರಸ ಗೌರವವನ್ನು ಪಡೆದಿರುವುದರಿಂದ ಸಿದ್ಧಾಂತ ಶಿಖಾಮಣಿಯನ್ನು ಆಂಧ್ರ ದ್ವಿಪದ ಕಾವ್ಯ ರೂಪವಾಗಿ ಅನುವಾದ ಮಾಡುವುದಾಗಿ ಹೇಳಿ, ರೇಣುಕಾಗಸ್ತ್ಯ ಸಂವಾದದಿಂದ ತನ್ನ ಕಾವ್ಯವನ್ನು ಪ್ರಾರಂಭಿಸಿ, ಶ್ರೀ ರೇಣುಕಾಚಾರ್ಯರು ತಮ್ಮ ಉಪದೇಶವನ್ನು, ಸಮಾಪ್ತಿಗೊಳಿಸಿ ಅಗಸ್ತ್ಯನು ಆಶ್ಚರ್ಯಗೊಳ್ಳುವಂತೆ ಅದೃಶ್ಯರಾದ ಘಟನೆಗಳನ್ನು ವರ್ಣಿಸಿ, ಈ ಗ್ರಂಥದ ಪ್ರಾಶಸ್ತ್ಯವನ್ನು ನಿರೂಪಿಸಿ, 'ಅಸಂಖ್ಯಾತ ಪ್ರಮಥ ಗಣೇಭ್ಯೋನಮಃ' ಎಂದು ಪ್ರಮಥ ಗಣಂಗಳನ್ನು ಸ್ಮರಿಸಿ, ಗ್ರಂಥವನ್ನು ಮುಕ್ತಾಯಗೊಳಿಸಿರುವನು. ವಿಭೀಷಣನ ಸೊಲ್ಲೇ ಇದರಲ್ಲಿ ಇಲ್ಲ.

ಈ ಕವಿಯು 'ಗಣಸೌಜನ್ಯಾಖ್ಯಾನ'ವೆಂಬ ಶತಕವೊಂದನ್ನು ಬರೆದಿದ್ದು ಅದರ ಹಸ್ತಪ್ರತಿಯೊಂದು ಮದ್ರಾಸು ಓರಿಯಂಟಲ್ ಗ್ರಂಥಾಲಯದಲ್ಲಿರುವುದು. ಅದರ ಅಧಿಕೃತ ನಕಲೊಂದನ್ನು ತರಿಸಿಕೊಳ್ಳಲಿಕ್ಕೆ ಹಣಕಟ್ಟಿದೆ. ವೀರಶೈವ ಷಟ್‌ಸ್ಥಲ ಸಿದ್ಧಾಂತದಂತಹ ಅತಿಗಹನವಾದ ವಿಷಯವು ಈ ಕಾವ್ಯದಲ್ಲಿ ಸುಲಿದ ಬಾಳೆಯಹಣ್ಣಿನಂದದಿ, ಬಹು ಸರಳ ಶೈಲಿಯಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ಈ ಗ್ರಂಥ ಸಾಮಾನ್ಯರಿಗೂ ಅರ್ಥವಾಗುವಂತಹ ಮೃದು ಮಧುರವಾದ ಮಂಜುಳಭಾಷೆಯಲ್ಲಿ ಸಿದ್ಧಾಂತ ಪ್ರತಿಪಾದನೆಮಾಡಿದುದಾಗಿದೆ. ಕವಿಯು ಶಿವಶರಣರ ಪರಂಪರೆಯನ್ನನುಸರಿಸಿದ್ದಾನೆ.

ಈ ಗ್ರಂಥದ ಇನ್ನೊಂದು ಹಸ್ತಪ್ರತಿಯು ನಿಜೈಕ್ಯ ಶ್ರೀ ಜಗದ್ಗುರು ಕಾಶೀ ಪೀಠಾಧ್ಯಕ್ಷ ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳಿಗೆ ದೊರಕಿದ್ದಿತು. ಅವರು ಈ ಗ್ರಂಥದ ರಾಮಣೀಯಕವನ್ನು ಬಹುವಿಧವಾಗಿ ಹೊಗಳಿ ಇದನ್ನು ಮುದ್ರಣಗೊಳಿಸಿ

ಪ್ರಚಾರಮಾಡಬೇಕೆಂದು ಸಂಕಲ್ಪಿಸಿದ್ದರು. ಅವರ ಸಂಕಲ್ಪವು ಈಡೇರಲಿಲ್ಲ. ಸಿದ್ಧಾಂತ ಶಿಖಾಮಣಿಯನ್ನು ತೆಲುಗುದೇಶದಲ್ಲಿ ಪ್ರಸಾರಮಾಡಲು ತಮ್ಮ ಆಸಕ್ತಿಯನ್ನು ವ್ಯಕ್ತ ಗೊಳಿಸಿರುವ ಶ್ರೀಶೈಲ ವೀರಶೈವ ಸಂಘದವರು ಈ ಗ್ರಂಥವನ್ನು ಪ್ರಕಟಿಸುವ ಕಾರ್ಯ ವನ್ನು ಕೈಗೊಂಡರೆ ಆಂಧ್ರಲೋಕಕ್ಕೆ ದೊಡ್ಡ ಉಪಕಾರ ಮಾಡಿದಂತಾಗುವುದು.

ಮೂಲಸಿದ್ಧಾಂತ ಶಿಖಾಮಣಿಯ ನಿರ್ದುಷ್ಟ ಮತ್ತು ಅಧಿಕೃತ ಪ್ರತಿಯನ್ನು ತಯಾರುಮಾಡುವ ಕಾರ್ಯಕ್ಕೆ ಈ ತೆಲುಗು ಗ್ರಂಥವು ತುಂಬಾ ಸಹಾಯಕಾರಿಯಾಗಿರುತ್ತ ದೆಂಬುದನ್ನು ಬೇರೆಹೇಳಬೇಕಾಗಿಲ್ಲ.

ಸಿದ್ಧಾಂತ ಶಿಖಾಮಣಿಯ ಕಾಲವನ್ನು ನಿರ್ಣೈಸಲಿಕ್ಕೆ ಸಹ ಈ ಗ್ರಂಥವು ಉಪ ಯೋಗವಾಗುತ್ತದೆ. ಮೂಲಸಿದ್ಧಾಂತ ಶಿಖಾಮಣಿಯು ಕಾಕತೀಯ ಯುಗದ ಅನಂತರದಲ್ಲಿ ಅಂದರೆ ಕ್ರಿ. ಶ. ೧೩ನೆಯ ಶತಮಾನದ ಅಂತ್ಯಭಾಗದಲ್ಲಿ ವಿದ್ಯಾಧರನ "ಪ್ರತಾಪರುದ್ರೀಯ" ಎಂಬ ಲಕ್ಷಣಗ್ರಂಥದ ತರುವಾಯ ರಚಿತವಾಗಿರಬೇಕೆಂದು ಈ ಲೇಖಕನ ಅಭಿಪ್ರಾಯ. ಇದಕ್ಕೆ ಭಿನ್ನಾಭಿಪ್ರಾಯವುಳ್ಳವರು ತಮ್ಮ ಅಭಿಪ್ರಾಯವನ್ನು ಪ್ರಕಟನಾರ್ಥವಾಗಿ ನವಸಂದೇಶಕ್ಕೆ ಕಳಿಸಬಹುದು. —ಶಿವಸುತ.

ಈ ಸಿದ್ಧಾಂತ ಶಿಖಾಮಣಿಯ ಕಾಲವನ್ನು ಗೊತ್ತುಮಾಡಲಿಕ್ಕೆ ಅದೇ ಗ್ರಂಥ ದೊಳಗಿನ ಕೆಲವು ವಿಷಯಗಳು ಸಹಾಯಮಾಡುತ್ತವೆ. ಅವುಗಳಲ್ಲಿ ಒಂದನ್ನುಮಾತ್ರ ಇಲ್ಲಿ ಕೊಡಲಾಗಿದೆ. ಮದರಾಸಿನಲ್ಲಿ ಪ್ರಕಟವಾದ ಈ ಸಿದ್ಧಾಂತ ಶಿಖಾಮಣಿಯ ಗ್ರಂಥದ ಮೊದಲನೆಯ ಶ್ಲೋಕವು— "ಶ್ರೀನಾಥಃ ಸೋಮಮೂರ್ತಿರ್ಜಯತೇ ಪರ ಶಿವಸ್ತ್ರ್ಯಂಬಕಸ್ತಾರ ರೂಪಃ"—ಎಂದು ಆರಂಭವಾಗುತ್ತದೆ. ಇದರಿಂದ ಶ್ರೀನಾಥ, ಪರಶಿವ, ಎಂಬೆರಡು ಪದಗಳು ಒಬ್ಬರಿಗೆ ಹೇಳಲ್ಪಟ್ಟವೆಂದು ಸ್ಪಷ್ಟವಾಗಿ ತಿಳಿಯು ತ್ತದೆ. ಪರಶಿವನಿಗೆ ಶ್ರೀನಾಥ ಎಂದು ಭಾರತೀಯ ಧರ್ಮಗ್ರಂಥಕಾರರು ಕರೆದಿಲ್ಲ. ಶ್ರೀ ಎಂಬ ಲಕ್ಷ್ಮಿಗೆ ಒಡೆಯನಾದ ವಿಷ್ಣುವೇ ಶ್ರೀನಾಥನೆಂದು ಅರ್ಥಮಾಡುತ್ತಾರೆ. ಹಾಗಾದರೆ, ವಿಷ್ಣು ಮತ್ತು ಶಿವ ಇಬ್ಬರೂ ಒಂದೇ ಎಂದು ಕವಿಯ ಅಭಿಪ್ರಾಯವಿದೆ ಎಂದೂ ತಿಳಿಯಲಾಗುವುದಿಲ್ಲ. ಸಿದ್ಧಾಂತ ಶಿಖಾಮಣಿಯಲ್ಲಿ ಶಿವನೂ ವಿಷ್ಣುವೂ ಒಂದೇ ಎಂದು ಎಲ್ಲಿಯೂ ಹೇಳಿಲ್ಲ. "ತೃಣೀಕೃತ ಬ್ರಹ್ಮ ವಿಷ್ಣುಃ" ಎಂದು ರೇಣುಕರಿ ಗಾಗಿ ವೀರಮಾಹೇಶ್ವರ ತಂತ್ರವು ಹೇಳುತ್ತದೆ. ಈ ದೆಸೆಯಿಂದ ಶ್ರೀನಾಥ ಎಂಬು ವರು ಒಬ್ಬರೆಂದೂ, ಅವರು ಪರಶಿವ ರೂಪರೆಂದೂ ಅರ್ಥಮಾಡಿರುವುದು ಸಹಜ ವಾಗಿದೆ. ಹೀಗೆ ಇಲ್ಲಿ ಕಾಣುವ ಶ್ರೀನಾಥ ಎಂಬುವರೇ ಶಿವಯೋಗಿಯ ಗುರು ಗಳೆಂದು ಐತಿಹಾಸಿಕವಾಗಿ ತಿಳಿಯಲಿಕ್ಕೆ ಬರುವಂತೆ ಆಗಿದೆ, "ಶ್ರೀನಾಥ ಕವಿ ಅಥವಾ ಶ್ರೀನಾಥ ಮಹಾಕವಿ" ಎಂಬುವರೊಬ್ಬರಿದ್ದರೆಂದೂ, ಅವರಿಗೆ ವಿಜಯನಗರದ ದೇವ ರಾಯನು ಬಹುವಾಗಿ ಸನ್ಮಾನಿಸಿ, ಕನಕಾಭಿಷೇಕ ಮಾಡಿದನೆಂದೂ ಗೊತ್ತಾಗುತ್ತದೆ. ಇವನು ಆಂಧ್ರಕವಿತ್ವದಲ್ಲಿ ಅಸದೃಶ ಶಕ್ತಿಯುಳ್ಳವನು. ಮತ್ತು ಶೃಂಗಾರ ನೈಷಧೀಯ

ವನ್ನು ಸಂಸ್ಕೃತದಲ್ಲಿ ಬರೆದು ದಿಗಂತ ವಿಖ್ಯಾತನಾದವನು. ಕರ್ನಾಟಕ ಚಕ್ರವರ್ತಿ ಪ್ರೌಢದೇವರಾಯನಿಂದ 'ಕವಿ ಸಾರ್ವಭೌಮ' ಎಂಬ ಬಿರುದು ಪಡೆದವನು. ಕನ್ನಡ ರಾಜ್ಯವನ್ನೂ ಕನ್ನಡ ರಾಜ್ಯಲಕ್ಷ್ಮಿಯನ್ನೂ ಕನ್ನಡ ಭಾಷೆಯನ್ನೂ ಸ್ತುತಿಸಿದವನು. 'ಕಾಶೀಖಂಡ' ಎಂಬ ಗ್ರಂಥವನ್ನು ರಚಿಸಿದವನು. ಈ ಮುಂತಾದ ವಿಷಯಗಳು "ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯವಲೋಕನ" ಎಂಬ ಶ್ರೀ ಡಿ. ಕೆ. ಭೀಮಸೇನ ರಾಯರು ಬರೆದ ಪುಸ್ತಕದಿಂದ ಗೊತ್ತಾಗುತ್ತದೆ. ಈ ಕವಿ ಓರಂಗಲ್ ರಾಜನಾದ ಎರಡನೆಯ ಪ್ರತಾಪರುದ್ರದೇವನ ಸಭೆಯಲ್ಲಿಯೂ ಇರುತ್ತಿದ್ದನು. ಅಲ್ಲಿ ಶ್ರೀನಾಥ ಮಹಾಕವಿ ಎಂದು ಹೊಗಳಲ್ಪಟ್ಟವನು. (ಇವನು ತ್ರಿಕಾಲ ಶಿವಪೂಜೆ ಮಾಡುತ್ತಿದ್ದ ನೆಂದೂ ಕಾಶೀಖಂಡವಲ್ಲಿ ಇದೆ) ಆದುದರಿಂದ ಈ ಶ್ರೀನಾಥ ಕವಿಯು ಶಿವಯೋಗಿಯ ಗುರುವೆಂದು ಧಾರಾಳವಾಗಿ ಊಹಿಸಬಹುದಾಗಿದೆ. ಈ ಕಾರಣಗಳಿಂದ ಈ ಸಿದ್ಧಾಂತ ಶಿಖಾಮಣಿಯನ್ನು ಬರೆದ ಶಿವಯೋಗಿಯು ಕ್ರಿ.ಶ. ೧೩೦೦ರ ತರುವಾಯದ ಕಾಲದವ ನೆಂದು ವ್ಯಕ್ತವಾಗುತ್ತದೆ, ಇದನ್ನು ಇತಿಹಾಸ ಶೋಧಕರು ಇನ್ನೂ ಶೋಧಿಸಲಿ.

ಇವಲ್ಲದೆ ಇತರ ಗ್ರಂಥಗಳ ಹೇಳಿಕೆಯಿಂದಲೂ ಈ ಸಿದ್ಧಾಂತ ಶಿಖಾಮಣಿ ಗ್ರಂಥದ ಕಾಲವನ್ನು ತಿಳಿಯಬರುವಂತಿದೆ. ಕೈಲಾಸದ ರೇಣುಕನು ಶಿವನ ಸಭೆಯಲ್ಲಿ ದಾರುಕನನ್ನು ದಾಟಿಹೋದ ತಪ್ಪಿಗಾಗಿ ಶಿವನ ಆಗ್ರಹದ ದೆಸೆಯಿಂದ ಭೂಲೋಕಕ್ಕೆ ಬಂದು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ಹುಟ್ಟಿಬಂದನೆಂಮ ಹೇಳುವುದರಲ್ಲಿ ಹಂಪೆಯ ಹರೀಶ್ವರ ಕವಿಯೇ ಮೊದಲಿನವನು. ಅವನಿಗಿಂತ ಮುಂಚೆ ಹೇಳಿದವರು ಯಾರೂ ಇಲ್ಲ. ಅದೇ ವಿಷಯವನ್ನು ಸಿದ್ಧಾಂತ ಶಿಖಾಮಣಿ ಹೇಳುವುದರಿಂದ ಹರೀಶ್ವರನ ಕಾಲದ ತರುವಾಯ ಈಗ್ರಂಥವು ಹುಟ್ಟಿದುದೆಂದು ಚೆನ್ನಾಗಿ ತಿಳಿಯುತ್ತದೆ.

ಶಾಸನಗಳ ವಿಚಾರವನ್ನು ತಿಳಿಯಲಿಕ್ಕೆ ಹೋದಾಗ ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯವು ೧೦೦೦ ವರ್ಷಗಳ ಕಾಲದ್ದೆಂದು ಮೆ॥ ರೈಸ್‌ಸಾಹೇಬರು ಅಭಿಪ್ರಾಯ ಪಟ್ಟಿದ್ದಾರೆ. ಆ ದೇವಾಲಯದ ಲಿಂಗದ ವಿಷಯವು ಈ ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿರುವುದರಿಂದ ಇದರ ರಚನೆಯ ಕಾಲವು ಈಚಿನದೆಂದು ಸ್ಪಷ್ಟಪಡುತ್ತದೆ.

ಹೀಗೆ ಈ ಗ್ರಂಥದಿಂದಲೂ, ಇತರ ಗ್ರಂಥಗಳಿಂದಲೂ, ಸಿದ್ಧಾಂತ ಶಿಖಾಮಣಿಯ ಕಾಲವನ್ನು ಚಾರಿತ್ರಿಕವಾಗಿ ಗೊತ್ತುಮಾಡಲು ಶೋಧಕರು ಪ್ರಯತ್ನಿಸಲಿ.

(ಸಂಚಿಕೆ ೧೫೭)

# ಚಾರಿತ್ರಿಕ ಲೇಖನಗಳು

[ಶ್ರೀ ಚನ್ನಮಲ್ಲಿಕಾರ್ಜುನರು ತಾವು ಸಂಶೋಧಿಸಿದ ಅನೇಕ ಚಾರಿತ್ರಿಕಾಂಶಗಳನ್ನು ಒಂದು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂಬಭಿಪ್ರಾಯವುಳ್ಳವರಾಗಿದ್ದರು (ಸ. ದೀ. ೧೨೯. ಪ್ರತ್ಯೇಕ ಪು. ೧). ಆದರೆ ಅವರ ಆ ಸಂಕಲ್ಪಕಾರ್ಯ ರೂಪಕ್ಕೆ ಬರಲಿಲ್ಲ. ಅವರು ಪ್ರಕಟಿಸಬೇಕೆಂದಿದ್ದ ೧೧೫ ಚಾರಿತ್ರಿಕಾಂಶಗಳ ಟಿಪ್ಪಣಿ ರೂಪದ ಅಂಶಗಳು ಈ ಲೇಖನದಲ್ಲಿ ಒಳಗೊಂಡಿವೆ. ಸದ್ಧರ್ಮದೀಪಿಕೆ ಸಂ. ೧೨೯, ೧೩೧, ೧೩೨, ೧೩೩, ೧೩೪, ೧೩೫, ೧೩೯, ೧೪೪—ಇವುಗಳಲ್ಲಿ ಆ ಅಂಶಗಳು ಪ್ರಕಟವಾಗಿವೆ.]

## ೧) ಬಾಚರಸ

ಬಸವೇಶ್ವರನು ಬಾಚರಸನೇ ತನ್ನ ಬಾಹು ಎಂದು ತಿಳಿದುಕೊಂಡು ನಡೆಯುತ್ತಿದ್ದನೆಂದು ಗ್ರಂಥಗಳಿಂದ ತಿಳಿದುಬರುತ್ತದೆ. ಸಿಂಧು ವಂಶದ ಬಾಚಿಭೂಪ ಅಥವಾ ಬಾಚರಸನು ಕ್ರಿ.ಶ.೧೧೩೨ ರಲ್ಲಿ ಇದ್ದಂತೆ South Indian Inscriptions (ದಕ್ಷಿಣ ಭಾರತದ ಶಾಸನಗಳು) ಎಂಬ ಪುಸ್ತಕದ ೯ನೆಯ ಸಂಪುಟದ ೨೨೫ನೆಯ ಶಾಸನದಿಂದ ತಿಳಿದುಬರುತ್ತದೆ. ಸಿಂಧು ವಂಶದ ರಾಜರಿಗೂ ಕಲಚೂರ್ಯ ರಾಜರಿಗೂ ಸಂಬಂಧವಿದ್ದುದು ಗ್ರಂಥಗಳಿಂದಲೂ ಚಾರಿತ್ರಿಕಾಂಶಗಳಿಂದಲೂ ಇದುವರೆಗೆ ತಿಳಿದುಬಂದಿದೆ.

## ೨) ವಿಕ್ರಮಾದಿತ್ಯ

ಈತನಿಗೆ ರೇವಣಸಿದ್ಧರು ಕತ್ತಿಯನ್ನು ಕೊಟ್ಟರೆಂದು ಗ್ರಂಥಗಳು ಹೇಳುತ್ತಿವೆ. ಬಿಜ್ಜಳನು ಮಾಸೂರಿನ ಕತ್ತಿಯನ್ನು ಅಪೇಕ್ಷಿಸಿ ಸಾವಿರಾರು ಕನ್ನೆಯರ ಬಲಿಯನ್ನು ಕೊಟ್ಟು ಕತ್ತಿಯನ್ನು ಪಡೆಯಲು ಯತ್ನಿಸಿದಾಗ ರೇವಣಸಿದ್ಧರು ಕನ್ನೆಯರ ಬಲಿಯನ್ನು ನಿಲ್ಲಿಸಿದರೆಂದೂ ಆ ಕತ್ತಿಯನ್ನು ಒದಗಿಸಿಕೊಡಲು ಪ್ರಯತ್ನಿಸಿದಾಗ ಅದರ ಆರ್ಭಟವನ್ನು ನೋಡಿ ಹೆದರಿ, ತನಗೆ ಬೇಡವೆಂದು ಹೇಳಿದನೆಂದೂ ಆಮೇಲೆ ಆ ಕತ್ತಿಯನ್ನು ಶ್ರೀ ರೇವಣರು ಜಯಂತೀಪುರ(ಬಳಿಗಾವೆ)ದಲ್ಲಿ ವಿಕ್ರಮಾದಿತ್ಯನಿಗೆ ಕೊಟ್ಟರೆಂತಲೂ ಗ್ರಂಥಗಳಿಂದ ತಿಳಿದುಬರುತ್ತದೆ. ಬಳ್ಳಿಗಾವೆಯಲ್ಲಿ ವಿಕ್ರಮಾದಿತ್ಯದೇವನು ದುರ್ಮುಖಿ ಸಂವತ್ಸರದಲ್ಲಿ ಕ್ರಿ. ಶ. ೧೧೭೭ ರಲ್ಲಿ ಇದ್ದಂತೆ ಶಿಕಾರಿಪುರ ತಾಲೂಕು ೨೦೬ನೆಯ (ಬಳ್ಳಿಗಾವೆಯ ಕಲ್ಲೇಶ್ವರ ದೇವಾಲಯದಲ್ಲಿಯದು) ಶಾಸನದಿಂದ (EP Car VII) ತಿಳಿದುಬರುತ್ತದೆ. ಇದರಲ್ಲಿ 'ರಾಯಮು...' ಎಂಬ ಪದವಿರುವುದರಿಂದ ಆಗ ಪ್ರಸಿದ್ಧ ಬಿಜ್ಜಳನ ಮಗ ೨ನೆಯ ಅಳಿಯ ಬಿಜ್ಜಳನೂ (ಸೋವಿದೇವನೂ) ಇದ್ದಂತೆ ತಿಳಿದುಬರುತ್ತದೆ. ಸಾಗರ ತಾಲೂಕು (EP Car VIII) ೧೧೪ನೆಯ ಶಾಸನದಿಂದ

ಗುತ್ತರಾಜ ವಿಕ್ರಮಾದಿತ್ಯನು ಸಾಂತಾರ ಸಿಂಗಿದೇವನು ಸಂಕಲಿಗೆ ೧೦೦೦ವನ್ನು ಆಳುತ್ತಿದ್ದಾಗ ಅವನ ಮೇಲೆ ದಂಡೆತ್ತಿ ಹೋದಂತೆ ತಿಳಿದುಬರುತ್ತದೆ. ಇವರ ಕಾಲ ಕ್ರಿ. ಶ. ೧೧೬೬. ಈ ವಿಕ್ರಮಾದಿತ್ಯನೇ ಜಯಂತಿಯಲ್ಲಿ ಇದ್ದವನು. ಕ್ರಿ. ಶ. ೧೧೬೬; ೧೧೭೭ರ ಕಾಲದಲ್ಲಿ ಇದ್ದವನು. ಈ ಕಾಲದ ಸುಮಾರಿನಲ್ಲಿಯೇ ರೇವಣರು ವಿಕ್ರಮಾದಿತ್ಯನಿಗೆ ಈ ಕತ್ತಿಯನ್ನು ಕೊಟ್ಟರೆಂತಲೂ ತಿಳಿದುಬರುತ್ತದೆ.

೩) **ಸಿಂಗಿದೇವ**

ಮೇಲೆ ಕಂಡ ಸಿಂಗಿದೇವನ ಅಣ್ಣನೇ ಜಗದ್ದೇವರಸ. ಬಸವೇಶ್ವರನು ಸಿಂಗಿದೇವನನ್ನು ಬಂಧನದಲ್ಲಿ ಇಟ್ಟಂತೆಯೂ ಅವನು ಶಿವನಲ್ಲಿ ಭಕ್ತಿಯನ್ನು ತೋರಿಸಿದ ಮೇಲೆ ಬಿಟ್ಟಂತೆಯೂ ಗ್ರಂಥಗಳಿಂದ ತಿಳಿದುಬರುತ್ತದೆ. ಇವನೇ ಸಾಂತಾರ ಸಿಂಗಿದೇವ. ಇವನ ಕಾಲ ಕ್ರಿ. ಶ. ೧೧೬೬ (ಮೇಲೆ ತೋರಿಸಿದ ಶಾಸನ).

೪) **ಜಗದ್ದೇವರಸ**

ಇವನೇ ಸಾಂತಾರ ಕುಲದವನು. ಸಿಂಗಿದೇವನ ಅಣ್ಣ. ಜಗದೇವಮಲ್ಲಿ ಬೊಮ್ಮಣ್ಣಗಳು ಬಿಜ್ಜಳನನ್ನು ವಧೆ ಮಾಡಿದರೆಂದು ಗ್ರಂಥಗಳು ಹೇಳುತ್ತವೆ. ಇವರಲ್ಲಿನ ಮೊದಲನೆಯ ಜಗದೇವನೇ ಜಗದ್ದೇವರಸ. ಈತನ ಕಾಲ ಕ್ರಿ. ಶ. ೧೧೬೬ ಎಂಬುದು ಮೇಲಿನ ಶಾಸನದಿಂದ ಗೊತ್ತಾಗುತ್ತದೆ.

೫) **ಮಾದಿರಾಜ**

ಇವನು ಬಸವೇಶ್ವರನ ತಂದೆ ಎಂದು ಗ್ರಂಥಗಳು ಹೇಳುತ್ತವೆ. ಮನಗೋಳಿ ಶಾಸನದಲ್ಲಿ 'ಮಾದಿರಾಜಪ್ರಭು' ಎಂದು ಕರೆಯಲ್ಪಟ್ಟಿದ್ದಾನೆ. ಈ ಮಾದಿರಾಜ ಪ್ರಭುವು ಕ್ರಿ. ಶ. ೧೧೬೫ ರಲ್ಲಿ ಇದ್ದ ಹಾಗೆ E. P. India ಎಂಬ ಪುಸ್ತಕದ ೨೪೨ ನೆಯ ಪುಟದಿಂದ ಗೊತ್ತಾಗುತ್ತದೆ. ಅಲ್ಲಿ ಅಗ್ರಹಾರದ ಪ್ರಭು ಎಂದೂ ಇದೆ. ಕಲಚುರ್ಯ ಸಂಕಮನ ಕಾಲದಲ್ಲಿ ಕ್ರಿ. ಶ. ೧೧೭೭ ರಲ್ಲಿ ಈ ಮಾದಿರಾಜನ ಮಗನಾದ ಈಶ್ವರದೇವನು ಇದ್ದಂತೆ ವ್ಯಕ್ತವಾಗುತ್ತದೆ (ಅದೇ ಪುಸ್ತಕ B ಪು. ೨೫). ಇವುಗಳಿಂದ ಮಾದಿರಾಜನಿಗೆ ಮಕ್ಕಳಿದ್ದರೆಂದು ತಿಳಿದುಬರುತ್ತದೆ. ಬಸವೇಶ್ವರನಿಗೆ ಚಿಕ್ಕ ವಯುಸ್ಸಿನಲ್ಲಿಯೇ (೪–೬ ವರ್ಷ) ತಂದೆ ತೀರಿಹೋದನೆಂದು ಹರೀಶ್ವರ ಕವಿ ಹೇಳುತ್ತಾನೆ. ಮಾದಿರಾಜನಿಗೆ ಮಕ್ಕಳಿಲ್ಲದುದರಿಂದ ನಂದಿಯನೋಂಪಿಯನ್ನು ಮಾಡಿ ಮಗನನ್ನು ಮಾದಲಾಂಬಿಕೆ ಪಡೆದಳೆಂದು ಬಸವ ಪುರಾಣ ಹೇಳುತ್ತದೆ. ಇವರಿಂದ ಪುರಾಣದ ಹೇಳಿಕೆಗಿಂತಲೂ, ಹರೀಶ್ವರನ ಹೇಳಿಕೆಯನ್ನೇ ನಿಜವೆಂದು ನಂಬಬೇಕಾಗಿ ದೃಢಪಡುತ್ತದೆ. ಈ ಮಾದಿರಾಜನು ಬಸವೇಶ್ವರನನ್ನು ಸಾಕಿದ ತಂದೆ.

೬) **ರೇಚರಸ**

ಶಿಕಾರಿಪುರ ತಾಲ್ಲೂಕು ೧೯೭ನೆಯ ಶಾಸನದಲ್ಲಿ (EP Car VII) ಹೇಳಲ್ಪಟ್ಟಿದ್ದಾನೆ. ಬಿಜ್ಜಳನಿಗೂ ಇವನ ಕುಟುಂಬದವರಿಗೂ ರಾಜ್ಯವನ್ನು ಪಡೆಯುವುದರಲ್ಲಿ

ಇವನು ಮುಖ್ಯ ಭಾಗವನ್ನು ವಹಿಸಿದ್ದನು. ರೇಚರಸ ಅಥವಾ ರೇಚಿದಂಡನಾಥ ಎಂಬ ಈತನು ಕಳಚುರಿ ಚಕ್ರವರ್ತಿಗಳಿಂದ ಅನೇಕ ರಾಜ್ಯಗಳನ್ನು ಪಡೆದಿದ್ದನೆಂದೂ-ನಾಗರ ಖಂಡವನ್ನು ಪಡೆಯಬೇಕೆಂಬ ಅಪೇಕ್ಷೆಯನ್ನು ತೋರಿಸಲು ಅದೂ ಸಹ ಇವನಿಗೆ ಕೊಡಲ್ಪಟ್ಟಿದ್ದಿತೆಂದೂ ಅದು ಬನವಾಸೆ ರಾಜ್ಯ ಲಕ್ಷ್ಮಿಗೆ ಕಮಲದೋಪಾದಿಯಲ್ಲಿ ಇದ್ದಿತೆಂದೂ ಮೇಲೆ ಕಂಡ ಪುಸ್ತಕದ ಮುನ್ನುಡಿ ಪುಟ ೩೦ ರಲ್ಲಿ ಬರೆಯಲ್ಪಟ್ಟಿದೆ. ಇವನು ಚನ್ನಬಸವಣ್ಣನವರ ಜೊತೆಯಲ್ಲಿ ಉತ್ತರಕನ್ನಡ ಜಿಲ್ಲೆಯಲ್ಲಿನ ಉಳುವೆಗೂ ಹೋಗಿದ್ದನು. ಅಲ್ಲಿ ಒಬ್ಬ ಭಕ್ತನಿಗೆ ಬಿಳೀ ವೀಳ್ಯದೆಲೆ ಕೊಡುವ ಬದಲಾಗಿ ಕರೀ ವೀಳ್ಯದೆಲೆ ಕೊಟ್ಟನೆಂಬ ಕಾರಣದಿಂದ ಉಳುವೆಯಿಂದ ವಾಪಸು ಕಳುಹಿಸಲ್ಪಟ್ಟನೆಂದು ಗ್ರಂಥಗಳು ಹೇಳುತ್ತವೆ. ಹಾಗೆ ವಾಪಸು ಬಂದ ಮೇಲೆಯೂ ಕಲಚುರ್ಯ ರಾಜರಿಗೆ ರಾಜ್ಯ ಪ್ರಾಪ್ತಿಗೆ ಅನುಕೂಲಕಾರ್ಯಗಳನ್ನು ಮಾಡಿದ್ದಾನೆ ಎಂದು ವ್ಯಕ್ತವಾಗುತ್ತದೆ. ಶಾಸನ ಕಾಲ ಕ್ರಿ. ಶ. ೧೧೮೨ AD. (?).

೭) **ರುದ್ರಮುನಿ**

ಈತನು ಪಂಚಾಚಾರ್ಯರಲ್ಲಿ ಮೊದಲನೆಯವನೆನಿಸಿಕೊಂಡ ಶ್ರೀ ರೇವಣಸಿದ್ಧರ ಮಗನು. ಈ ರುದ್ರಮುನಿಯು ಬರೆದ ಕಾಲಜ್ಞಾನವು "ದುಂದುಭಿ ಸಂವತ್ಸರ ಜ್ಯೇಷ್ಠ ಶುದ್ಧ ೫ ಸೋಮವಾರದ ದಿವಸ ಶ್ರೀಶೈಲದಲ್ಲಿ ಉದ್ಭವಿಸಿತು" ಎಂದು ಉ. ವಿ. ಒ ೧ ಎಂಬ ನಾಲ್ಕು ಬರೆಹದ ಪ್ರತಿಗಳಲ್ಲಿ ಬರೆಯಲ್ಪಟ್ಟಿರುವುದಾಗಿ ಕಾಲಜ್ಞಾನ ಸಂಗ್ರಹ ಭಾಗ ೧ ಎಂಬ ಪುಸ್ತಕವು ಹೇಳುತ್ತಿದೆ. ಶ್ರೀ ಸ್ವಾಮಿ ಕನ್ನುಪಿಳ್ಳೆಯವರು ರಚಿಸಿದ Ephemeris (ಕಾಲಮಾನರ ಪುಸ್ತಕ) VI ರಲ್ಲಿ ದುಂದುಭಿ ಸಂವತ್ಸರ ಜ್ಯೇಷ್ಠ ಶುದ್ಧ ಪಂಚಮಿ ಸೋಮವಾರ ಕ್ರಿ. ಶ. ೧೨೦೨ ನೆಯ ಮೇ ೨೭ ರಲ್ಲಿ ಎಂದು ಪ್ರಕಟಿಸಿದ್ದಾರೆ. ಇದರಿಂದ ರುದ್ರಮುನಿಯು ಈ ಕಾಲದಲ್ಲಿ ಶ್ರೀಶೈಲದಲ್ಲಿ ಇದ್ದಂತೆ ಸ್ಪಷ್ಟವಾಗಿ ತಿಳಿದು ಬರುತ್ತದೆ.

೮) **ಅನಂತಪಾಲ ಚಕ್ರವರ್ತಿ**

ಈತನು ಶಿಲಾಹಾರ ರಾಜನ ಪರವಾಗಿ ಆಳಿಕೆಯವನಾಗಿ (Governor) ಕಾಶ್ಮೀರಕ್ಕೆ ಕಳುಹಿಸಲ್ಪಟ್ಟಿದ್ದಾನೆ. ಅದು ಕ್ರಿ. ಶ. ೧೧೪೫. ಅನಂತಪಾಲನ ಆಶ್ರಯದಲ್ಲಿ ಶ್ರೀಪತಿ ಪಂಡಿತನಿದ್ದನೆಂದೂ, ಅವನು ತನ್ನ ಶ್ರೀಕರಭಾಷ್ಯವು ಈಗ್ಗೆ ಒಂದು ಶತಮಾನವಲ್ಲಿ ಶ್ರೀ ರೇವಣರನ್ನು ಸ್ತುತಿಸಿದ್ದಾನೆ ಎಂದೂ ಕೆಲವರ ಹೇಳಿಕೆ. ಶ್ರೀಕರ ಭಾಷ್ಯವು ಈಗ್ಗೆ ಒಂದು ಶತಮಾನದ ಹಿಂದಿನದೆಂದು 'ಶಿವಸುತ' ಎಂಬುವರು ಪ್ರಕಟಿಸಿದ್ದಾರೆ.

೯) **ರಾಮಮುರಾರಿ ಸೋವಿದೇವ**

ಇವನು ಪ್ರಸಿದ್ಧ ಕಲಚುರ್ಯ ಚಕ್ರವರ್ತಿಯಾದ ಬಿಜ್ಜಳನ ಮಗ ಇವನು ಮೋದಿಗನೂರಿನಲ್ಲಿ ಇದ್ದಂತೆ ಶಾಸನವಿದೆ. ಇವನು ಮಾಸೂರಿನ ಕೆರೆಯಲ್ಲಿ ಹೂಳಿದ್ದ ಕತ್ತಿ

ಯನ್ನು ಶ್ರೀ ರೇವಣರಿಂದ ಪಡೆಯಲು ಪ್ರಯತ್ನಿಸಿದವನು. ಈಗ 'ಮದಗಕೆರೆ' ಕರೆಯಲ್ಪಡುವುದರ ಪೂರ್ವ ತುದಿಯ ಭಾಗದಲ್ಲಿ ಕತ್ತಿಯನ್ನು ತೆಗೆದುಕೊಟ್ಟನೆಂದು ವೃದ್ಧರು ತೋರಿಸುತ್ತಾರೆ. ಈ ಊರಿಗೆ ಮದಗಮಾಸೂರು ಎಂದು ಕರೆಯುತ್ತಾರೆ. ಇದಕ್ಕೆ ಮಾದಿಗಮಾಸೂರು ಎಂದು ಜೈನ ಕವಿ ಕರೆದಿದ್ದಾನೆ. ಇಲ್ಲಿ 'ಮದಗ' ಎಂಬ ಪೂರ್ವದ ಊರೇ 'ಮೋದಿಗನೂರು' ಆಗಿರಬೇಕು ಅಥವಾ ಅದರ ಸಮೀಪದಲ್ಲಿ ರಾಣೆಬೆನ್ನೂರು ತಾಲೂಕಿನಲ್ಲಿರುವ 'ಮುದೇನೂರು' ಮೋದಿಗನೂರು ಆಗಿರಬೇಕು. ಇದರ ಸಮೀಪದಲ್ಲಿ ಕೊಪ್ಪ, ಶೀಲವಂತನಕೊಪ್ಪ ಗ್ರಾಮವಿದೆ. ಅದಕ್ಕೆ ಸ್ವಲ್ಪ ದೂರ ದಲ್ಲಿಯೇ ಬಿಜ್ಜಳನು ಹುಟ್ಟಿದ ಸ್ಥಳವೆಂದು ಗುರುತಿಸಲ್ಪಟ್ಟ 'ಮೇದೂರು' ಇದೆ. ಒಟ್ಟಿನಲ್ಲಿ ಶ್ರೀ ರೇವಣರು ಕತ್ತಿಯನ್ನು ತೆಗೆದುದು ಇದೇ ಮಾಸೂರು ಎಂದು ನಿರ್ಧರಿ ಸಲಿಕ್ಕೆ ಬರುತ್ತದೆ. ಇಲ್ಲಿಗೆ ಜಯಂತಿಪುರ (ಬಳ್ಳಿಗಾವೆ) ಸುಮಾರು ೧೨ ಮೈಲು.

### ೧೦) ಬುದ್ಧರಾಜ

ವೀರಶೈವಾಚಾರ್ಯರಾದ ಪಂಡಿತಾರಾಧ್ಯರಲ್ಲಿ ಮೊದಲು ಭಕ್ತಿಯುಳ್ಳವನಾಗಿ ಅನಂತರ ವಿರಸವನ್ನು ಈತನು ದ್ರಾಕ್ಷಾರಾಮದಲ್ಲಿ ಶಾ. ಶಕ ೧೦೮೭ ರಲ್ಲಿ (ಕ್ರಿ. ಶ. ೧೧೬೫ ರಲ್ಲಿ ಇದ್ದನೆಂದು ದ್ರಾಕ್ಷಾರಾಮ ಶಾಸನವು ಹೇಳುತ್ತದೆ. (Cholas Vol. II Part II, Page 656) ಕೊಂಡಪಡಮಟ್ಟಿ ಬುದ್ಧರಾಜನೆಂದು ಅಲ್ಲಿ ಕರೆಯಲ್ಪ ಟ್ಟಿದ್ದಾನೆ.

*ಈ ಗುರುತು ಹಾಕಿದ ಸಂಖ್ಯೆಗಳು ಈ ಮೊದಲು ಹೇಳಲ್ಪಟ್ಟವುಗಳು. ಅದೇ ಕ್ರಮಸಂಖ್ಯೆಯನ್ನು ಅವಕ್ಕೆ ಕೊಟ್ಟು ಹೆಚ್ಚಿನ ವಿಷಯವನ್ನು ಇಲ್ಲಿ ಹೇಳಲಾಗಿದೆ.

### *೩) ಸಿಂಗಿದೇವ

ಅಣ್ಣಮನತಮ್ಮ ಸಿಂಗಿದೇವನನೆಂದೂ, ಸಾಂತಾರ ಅಥವಾ ಶಾಂತಕುಲದವ ನೆಂದೂ (ಜೈನ) ಶಿಕಾರಿಪುರ ತಾಲೂಕು ೧೦೩ನೆಯ ಶಾಸನ A. D. ೧೧೫೦ ರಲ್ಲಿ ಇವನ ವಿಷಯಗಳು ಇವೆ. ಆವಾಗ ಇವನ ಅಣ್ಣ ಜಗದೇವನು ಸೇತುವಿನಲ್ಲಿ ಇದ್ದನು, (ಸಾಗರ ತಾಲೂಕಿನಲ್ಲಿ ಸೇತು ಎಂಬ ಗ್ರಾಮವಿದ್ದಿತು.)

### *೫) ಮಾದಿರಾಜ (ಮಾದರಸ)

ಇವನು ಬಾಗೇವಾಡಿ ರಾಜನೆಂದು ಗ್ರಂಥಗಳ ಹೇಳಿಕೆ. ಮಣಿಗವಳ್ಳಿ ಶಾಸನ (A. D. ೧೧೪೨ ರಲ್ಲಿ) ಇವನು 'ಪುರಪ್ರಭು' ಎಂದು ಹೇಳಲ್ಪಟ್ಟಿದ್ದಾನೆ. ಮಣಿಗ ವಳ್ಳಿಗೂ ಬಾಗೇವಾಡಿಗೂ ೧೦-೧೨ ಮೈಲು ದೂರ. ಆದುದರಿಂದ ಈ ಮಾದಿರಾಜನೇ ಬಸವೇಶ್ವರನ ಸಂಬಂಧದ ಮಾದರಸ ಎಂದು ನಿರ್ಣಯ. ಇವನದು ಹಾರೀತ ಗೋತ್ರ; ಚಾಲುಕ್ಯರ ಕುಲಗುರು. ಅದೇ ಶಾಸನದ ಪ್ರಕಾರ ಬಸವಣ್ಣನವರದು ಕಾಶ್ಯಪ ಗೋತ್ರ.

*೬) **ರೇಚರಸ**

ಕಲಚೂರ್ಯಕುಲದ ಉಪಪ್ರಧಾನ (?) (Councillor) ಆದ ಈ ರೇಚರಸನು ಹೊಯಿಸಲ ಬಲ್ಲಾಳನ ಆಶ್ರಯದಲ್ಲಿ ಇದ್ದು ಆ ರಾಜನಿಂದ ಕತ್ತಿಯನ್ನು ಪಡೆದನು. ಅದನ್ನು ಅರಸೀಕೆರೆಯ ಜೈನರಿಗೆ ಕೊಟ್ಟನು. ಅಲ್ಲಿ ಸಹಸ್ರ ಕೂಟ ಜೈನಪ್ರಕ್ರಿಯೆ ಯನ್ನು ಪ್ರತಿಷ್ಠಾಪಿಸಿದನು. ಇದರಿಂದ ಈ ರೇಚರಸನು ಅರಸೀಕೆರೆ ವಾಸಿಯಾದ ಜೈನನೆಂದು ವ್ಯಕ್ತವಾಗುತ್ತದೆ. ಅರಸೀಕೆರೆಯ ಜೈನರನ್ನು ರಕ್ಷಿಸಿದನು. ಇವನ ಕಾಲ ದಲ್ಲಿ ಅರಸಿಕೆರೆಯು ಒಳ್ಳೆಯ ಅಭಿವೃದ್ಧಿ ಸ್ಥಿತಿಯಲ್ಲಿದ್ದಿತು. (A.D. ೧೨೨೦) ಅರಸೀ ಕೆರೆಯ ೭೭ನೆಯ ಶಾಸನ (EC V) (Hoysalar Vamsa by Cotho Page ೧೪೭) ಈತನು ವಚನಗಳನ್ನು ಬರೆದಿದ್ದಾನೆ. ಅವುಗಳ ಅಂಕಿತ ನಿಃಕಳಂಕ ಕೂಡಲ ಚನ್ನಸಂಗಮದೇವಾ. South Indian Inscriptions IX ನೆಯ ಸಂಪುಟ ೧ನೆಯ ಭಾಗದ ೨೫೦ನೆಯ ಶಾಸನದಿಂದ ಇವನು ಕ್ರಿ. ಶ. ೧೧೪೮ರಲ್ಲಿ ಪಿಂಡವಾಡಿ ೧೦೦೦ ಕವಿಕಾಳ ೧೨ ಇವುಗಳನ್ನು ಆಳುತ್ತಿದ್ದನೆಂದು ತಿಳಿಯುತ್ತದೆ. ವೀರಶೈವಾಮೃತ ಮಹಾಪುರಾಣದಲ್ಲಿ ರೇಚರಸನಿಗೆ 'ಬರವಣಿಗೆಯ ಬಸವನಂ ಇರಿಯಲು ಆ ವೆಂಗಿ ರಾಜ ನಂತ್ರಿವಿದ ಹಡಪದರೇಚಣ್ಣ' ಎಂದಿದೆ.

*೭) **ರುದ್ರಮುನಿ**

ಕಲಚುರಿ ಚಕ್ರವರ್ತಿ ಭುಜಬಲ ಮಲ್ಲದೇವನ ಹತ್ತನೆಯ ವರ್ಷವಾದ ಪಾರ್ಥಿವ ಸಂವತ್ಸರದಲ್ಲಿ (A·D· ೧೧೬೬) ದಾಸಿರಾಜನು ರುದ್ರಶಕ್ತಿಮುನಿಪನಿಗೆ ದಾನಮಾಡಿ ದ್ದಾನೆ. ಇಲ್ಲವೆ ರುದ್ರಶಕ್ತಿಮುನಿಪನ ವರ್ಣನೆ 'ಅರೆವೆಣಾಕೃತಿಯಿಂ' ಎಂದು ಆರಂಭವಾಗಿ ಆತನು ಮದುವೆಯಾಗದಿದ್ದವನು ಎಂಬುದನ್ನು ಚೆನ್ನಾಗಿ ತೋರಿಸುತ್ತದೆ. ಶ್ರೀರೇವಣರು ತಮ್ಮ ಮಗನಾದ ರುದ್ರಮುನಿಗೆ ಕಲ್ಯಾಣದಲ್ಲಿ ವಿರಕ್ತಪಟ್ಟವನ್ನು ಕಟ್ಟಿ ದ್ದರೂ ಅದಕ್ಕೆ ಒಪ್ಪದೆ ಬಿಡಿಸಿ ಕರೆದುಕೊಂಡು ಹೋದರೆಂದು ನಿರಂಜನ ವಂಶರತ್ನಾ ಕರವು ಹೇಳುತ್ತದೆ. ಅದನ್ನು ನಿಜವೆಂದು ತೋರಿಸುವುದಕ್ಕೆ ಇದು ಉದಾಹರಣೆ ಯಾಗಿದೆ. ಬಿಜ್ಜಳನ ಕೈಕೆಳಗೆ ಸುಂಕವೆರ್ಗಡೆಯಾಗಿ ದಾಸಿಮಯ್ಯ ನಾಯಕನಿದ್ದಾನೆ. ಇವನೇ ದಾಸಿರಾಜ. (Inss in the north Karnatak & Kolhapura State By KG Kandanagar Page 41.)

*೨) **ವಿಕ್ರಮಾದಿತ್ಯ**

ಇಲ್ಲಿ ಹೇಳಲ್ಪಟ್ಟವನು ಗುತ್ತರಸ ವಿಕ್ರಮಾದಿತ್ಯನಾಗಿದ್ದಾನೆ. ಇವನು EP. Car VIII 174 AD. 1177 ರಲ್ಲಿ ಹೇಳಲ್ಪಟ್ಟಿದ್ದಾನೆ.

*೯) **ರಾಮಮುರಾರಿ ಸೋವಿದೇವ**

ಬಿಜ್ಜಳಚರಿತೆ VI-43ರಲ್ಲಿ 'ಮಾದಿಗಮಾಸೂರು ಕೆರೆಯಲ್ಲಿ ಸುರಗಿ ಇರುವುದೆಂದು ಹೇಳಿದ' ಎಂದು ಇರುವುದರಿಂದ ಶ್ರೀ ರೇಣುಕರು ಸೋವಿದೇವನಿಗಾಗಿ ಕತ್ತಿಯನ್ನು

ತೆಗೆಯಲಿಕ್ಕೆ ಹೋದುದು ಈಗ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿರುವ ಮಾಸೂರೇ ಹೊರತು ಮತ್ತೊಂದಲ್ಲ. ಇವನು ಶಕ ೧೦ ಚೈತ್ರ ಶುದ್ಧ ಸೋಮವಾರ ಮೋದಿಗನೂರು ಕುಪ್ಪದಲ್ಲಿ ಇದ್ದಂತೆ ಸುನ್ನಾಳು ಕಲ್ಲಪ್ಪನ ಗುಡಿಯ ಶಾಸನವು ಹೇಳುತ್ತದೆ. ಹಿಂದೆ ಹೇಳಿದ ಶೀಲವಂತನ ಕೊಪ್ಪಕ್ಕೆ 'ಕೊಪ್ಪ' ಎಂದು ಕರೆಯುವ ವಾಡಿಕೆ. ಈ ಸೋವಿದೇವನು ಒಂದಳಿಕೆ ನೆಲೆವೀಡಿನಲ್ಲಿ ಇದ್ದನೆಂದು ಶಾಸನವಿದೆ. (EP. Car-VII ಪುಟ 562) ಒಂದಳಿಕೆ ಗ್ರಾಮವು ಮಾಸೂರಿಗೆ ೬-೭ ಮೈಲು ದೂರದಲ್ಲಿ ಇದೆ. ಶಾಸನದ ಕಾಲದಲ್ಲಿಯೇ ಮಾಸೂರಿನಲ್ಲಿ ಕತ್ತಿಯನ್ನು ತೆಗೆಯುವ ಕೆಲಸ ನಡೆದಿರಬೇಕು.

*೮) **ಅನಂತಪಾಲಗುರ್ಜರ** (Chol as Vol II, Part II-47, 48, 63)

ಇವನು ಚಾಲುಕ್ಯ ವಿಮರ್ಶ ೫೧ನೆಯ ವರ್ಷ A. D. ೧೧೨೬-೨೭ ರಲ್ಲಿ ಮಾರ್ಕಾಪುರ ತ್ರಿಪುರಾಂತಕಂ ಎಂಬಲ್ಲಿ ಒಂದು ಕನ್ನಡ ಭಾಷೆಯ ಶಾಸನವನ್ನು ಬರೆಯಿಸಿದ್ದಾನೆ. (ನಂ. ೩೬೮) ಅದರಲ್ಲಿ ಮಹಾಪ್ರಧಾನ ಅನಂತಪಾಲ ದಂಡರಸ ಎಂದು ಹೆಸರಿಸಲ್ಪಟ್ಟಿದ್ದಾನೆ. ತೆಲುಗಿನ ಶಾಸನಗಳೇ ಬಹಳ ಬಹಳವಾಗಿ ಇರುವ ಕರ್ನೂಲ ಜಿಲ್ಲೆಯಲ್ಲಿ ಇವನು ಕನ್ನಡ ಶಾಸನವನ್ನು ಬರೆಯಿಸಿರುವುದನ್ನು ನೋಡಿದರೆ ಕನ್ನಡದ ಅಭಿಮಾನಿಯುವನೆಂದು ಚೆನ್ನಾಗಿ ವ್ಯಕ್ತವಾಗುತ್ತದೆ.

೧೧) **ಶ್ರೀಪತಿಪಂಡಿತ**

ಶಿವಾನುಭವ XX—೧೦-೧೧-೧೯೪೬ ಜುಲೈ ಅಗಷ್ಟ ಸಂಚಿಕೆಯಲ್ಲಿ ನಾಗಲಿಂಗ ಕವಿಯು 'ಗುಪ್ತಾಭ್ಯುದಯ' ಎಂಬ ತೆಲಗು ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಶ್ರೀಪತಿಯ ವಂಶಾವಳಿ ಇದೆ. ಶ್ರೀಪತಿಯ ಮಗನೇ ಕರ್ಣ. ಇವನ ಮಗ ಮಲ್ಲಿಕಾರ್ಜುನ. (ಇವನೇ ಬಸವೇಶ್ವರನ ಸಮಕಾಲೀನನಾದ ಮಲ್ಲಿಕಾರ್ಜುನ ಜಂಗಮ) ಇವನ ಮಗ ಪಂಡಿತ. ಅನಂತರಾಜನ ಶಾಸನದಲ್ಲಿಯೂ ಶ್ರೀಪತಿಯ ವಿಷಯವಿದೆ. ಈ ಶ್ರೀಪತಿಯ ಪವಾಡದ ಉಲ್ಲೇಖವು ಬೇಜವಾಡದ ಮಲ್ಲೇಶ್ವರ ದೇವಾಲಯದ ಶಾಸನದಲ್ಲಿ ಇದೆ. (೯೦ನೆಯದು) ಇದರಲ್ಲಿ ಕಂಡ ಶಕೆಯು ೨ನೇ ಚಾಲುಕ್ಯ ಪುಲಿಕೇಶಿಯ ಪಟ್ಟಾರಂಭ್ರದ ಶಕೆ. (ಕ್ರಿ. ಶ. ೬೧೧ ರಿಂದ ಆರಂಭ.)

ಪಶ್ಚಿಮ ಚಾಲುಕ್ಯರ 'ಕುಮಾರಪಾಲ' ಗ್ರಂಥಗಳಲ್ಲಿ ಹೇಳಲ್ಪಟ್ಟ ಫಾಲಗುರ್ಜರ A. D. ೧೧೪೩-೧೧೭೩) ಇವನ ಕಾಲದಲ್ಲಿ ಶ್ರೀಪತಿಪಂಡಿತನು ತನ್ನ ಬನ್ನಿಯಮರದ ಪವಾಡವನ್ನು ಮಾಡಿದನು. ಶ್ರೀಕರಭಾಷ್ಯದ ಕಾಲ ಎಂಬ ಲೇಖನವನ್ನು ಬರೆಯುವಾಗ ಶ್ರೀಕಂಠಶಾಸ್ತ್ರಿ ಎಂ.ಎ. ಎಂಬುವರು ಶ್ರೀಪತಿ ಪಂಡಿತನ ಗುರು ಏಣೀಕಾಮುಸಿದ್ಧ ಎಂದು ಬರೆದಿದ್ದಾರೆ. (Anals of the Bhandarkar orriental Research Vol. XIV Part II Page 1509-9 Para)

೧೨) **ಗೋಕರ್ಣ (೧)**

ಮೇಲೆ ಕಂಡ ಶಿವಾನುಭವದಲ್ಲಿ ಹೇಳಿದ ಪ್ರಕಾರ ಶ್ರೀಪತಿಯು ಮಗ ಗೋಕರ್ಣ. ಈತನು ಒಬ್ಬ ಹೊಲೆಯನನ್ನು ದ್ವಿಜನನ್ನಾಗಿ ಮಾಡಿದನೆಂದು ತಿಳಿದುಬರುತ್ತದೆ. (ಅದೇ ಶಿವಾನುಭವ) ಆ ಕಾರ್ಯವು ವೀರಶೈವ ಧರ್ಮದವರಿಗೆ ಬಹಳ ಸುಲಭವಾದುದು. ಆದುದರಿಂದ ಇವನು ವೀರಶೈವ ಧರ್ಮವನ್ನು ಸ್ವೀಕರಿಸಿರಬೇಕೆಂದು ತರ್ಕಿಸಲವಕಾಶ ವಿದೆ. ಈ ಗೋಕರ್ಣವನ್ನು ಗೋಕರ್ಣ ಪಂಡಿತಾರಾಧ್ಯ ಎಂದು ಕರೆದು ಶ್ರೀಶೈಲದಲ್ಲಿ ಪರ್ವತಪೀಠದ ಆಚಾರ್ಯನನ್ನಾಗಿ ಮಾಡಿದಂತೆ ಶ್ರೀಶೈಲಪರ್ವತ ಪುರಾಣವು ಹೇಳುತ್ತದೆ.

**ಗೋಕರ್ಣ (೨)**

ಕಬ್ಬಿನ ಸಿರಿಪೂರ ಸಿದ್ಧನಾಥದೇವರ ಆರಾಧಕ ಲಾಕುಳ ಸಮಯದ ವಿದ್ಯಾ ಭರಣಿದೇವನ ಶಿಷ್ಯ ಗೋಕರ್ಣ. ಇವನ ಶಿಷ್ಯ ಸರ್ವೇಶ್ವರದೇವ. ಇವನೇ ಕೋಟೀಶ್ವರ ಇವನು ತಿಳವಳ್ಳಿ ೧೦೦೦ದೊಳಗಿನವನು. ಯಾದವರ ಸಿಂಘಣನ ಪಸಾಯಿತ ಕಲಿದೇವ ಠಾಣರನು ದಾನ ಕೊಡುತ್ತಾನೆ. (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ. XXXIII No. )

೧೩) **ಗೌತಮಾಚಾರ್ಯ**

ಗೌತಮಮುನಿ, ಗೌತಮಶಕ್ತಿಮುನಿಪ ಎಂಬ ಹೆಸರುಗಳೂ ಉಂಟು. ಇವನು ಶಿವಮೊಗ್ಗ ಜಿಲ್ಲಾ ಶಿಕಾರಿಪುರ ತಾಲೂಕಿನ ಬೆಳಗಾವಿ (ಬಳ್ಳಿಗಾವೆ)ಯಲ್ಲಿ ಕೇದಾರೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿದ್ದನು. ಇವನ ಶಿಷ್ಯ ವಾಮಶಕ್ತಿ ಮುನಿಪ. ಕಸಪಯ್ಯನ ಹೇಳಿಕೆಯ ಮೇರೆಗೆ ಇವರಿಗೆ ಬಿಜ್ಜಳನು ಬೆಳಗಾವಿಯಲ್ಲಿದ್ದಾಗ ದಾನ ಮಾಡಿದನು. (ಬಳ್ಳಿಗಾವೆಗೆ ಕೇದಾರತೀರ್ಥ ಎಂದೂ ಹೆಸರಿದ್ದಿತು) ಆಂಧ್ರ ಸಾಹಿತ್ಯ ಪತ್ರಿಕೆಯಲ್ಲಿಯೂ ಈ ವಿಷಯವಿದೆ. ಈ ಗೌತಮಾಚಾರ್ಯನಿಗೆ ವೀರಶೈವ ದೀಕ್ಷೆ ಮಾಡಿದ್ದಾರೆ. ಈತನು ಶಿಷ್ಯನಾದ ವಾಮಶಕ್ತಿಮುನಿಗೆ ಎಲ್ಲವನ್ನೂ ವಹಿಸಿ ಪೂರ್ವ ದೇಶಕ್ಕೆ ಹೋದನೆಂದೂ ತಿಳಿದುಬರುತ್ತದೆ. ಈತನು ಸಾಂಕರ ಮಂಡಲೇಶ್ವರನಾದ ಶ್ರೀರಾಮ ಭೂಪಾಲನ ಗುರುವಾಗಿದ್ದನು. (A.D. 1151 EP. Car. VIII SK ೧೦೩) ಜಗದೇಕಮಲ್ಲನ ೧೩ನೇ ವರ್ಷದ (A.D. 1150) ಶಿಕಾರಿಪುರ ತಾಲೂಕು (EP. Car. VIII) ಶಾಸನದ ಪ್ರಕಾರ ಬೊಮ್ಮರಸ ದಂಡನಾಯಕನು ಗೌತಮಾ ಚಾರ್ಯನ ಕಾಲಂಕರ್ಚಿ ದಾನಮಾಡಿದನೆಂದು ತಿಳಿದುಬರುತ್ತದೆ. ಇವನು ಕಾಳಾಮುಖರ ಮೂವರ ಕೋಣೆಯ ಸಂತತಿಯವನು. ಈ ಕಾಳಾಮುಖರಲ್ಲಿ ಲಿಂಗಿಗಳು ಜಂಗಮರು ಇದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಏಕೋರಾಮರು ಗೌತಮಮುನಿಗೆ ಬೋಧಿಸಿದರೆಂದು ಗ್ರಂಥಗಳ ಹೇಳಿಕೆ. ಈ ಗೌತಮ ಮುನಿಗೇ ಅವರು ಬೋಧಿಸಿರ ಬೇಕು. ಇದರ ದೆಸೆಯಿಂದಲೂ ಕೇದಾರಪೀಠ ಎಂಬ ಸಂಕೇತವು ಬಂದಿರಬಹುದು. ಓಂಕಾರ ಅನಿಮಿಷರು ಓಮುವತ್ಕೇದಾರದ ಸ್ಯೆರಿಭಾ ಕೃತಿಯ ಲಿಂಗದಿಂದ ಉತ್ಪತ್ತಿ ಎಂದು ಗ್ರಂಥಗಳ ಹೇಳಿಕೆ. ಏಕೋರಾಮರು ಆ ಕೇದಾರದಲ್ಲಿ ಇದ್ದುದನ್ನು ಇನ್ನೂ ಶೋಧಿಸಬೇಕು.

೧೪) **ಚಾಲುಕ್ಯ ವಿಷ್ಣುವರ್ಧನ ಮಹಾರಾಜ, ದೇವಬಲ್ಲಾಣ ವೀರಪೆರುಮಾಳ್, ಪ್ರತಾಪಚೋಳ** (ಭಲ್ಲನೃಪತಿ)

ಇವನ ಕಾಲದಲ್ಲಿ ತೆಲ್ಲಿಗರು (ಗಾಣಿಗರು) ಶಕೆ ೧೧೧೯ರಲ್ಲಿ (ಕ್ರಿ. ಶ. ೧೧೮೭) ಕೆಲವೊಂದು ಕಲಹದ ಮೂಲಕ ಇವರಲ್ಲಿ ಒಡಕುಗಳಾಗಿ ಒಂದು ಪಂಗಡದವರು ದಕ್ಷಿಣ ದೇಶದ ನೆಲ್ಲೂರಿಗೆ ಬೇಜವಾಡವನ್ನು ಬಿಟ್ಟುಹೋದರು. ಈ ಭಲ್ಲನರೇಂದ್ರನ ಬೇರೆ ಎರಡು ಶಾಸನಗಳು ಕೃಷ್ಣಾ ಜಿಲ್ಲೆಯ ಪೆದ್ದಕಲ್ಲೆಪಲ್ಲಿ ಎಂಬ ಗ್ರಾಮದಲ್ಲಿದ್ದು ಅವುಗಳಲ್ಲೊಂದರ ವರುಷ ೧೧೫೪. (ಶಿವಾನುಭವ XX 10-11) ಇವನ ಒಂದು ಶಾಸನದಲ್ಲಿ ಶ್ರೀಪತಿಯ ಉಲ್ಲೇಖವಿದೆ.

೧೫) **ಪಂಡಿತಾರಾಧ್ಯ** (ಪಂಚಾಚಾರ್ಯರಲ್ಲಿ ಒಬ್ಬನು)

ಮೋಚಿರಾಜು ವೀರಣಾಮಾತ್ಯ (ವೀರಣಾರಾಧ್ಯ) ಇವನು 'ಮಮವಂಶ ಪುರಾಣ' ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಪಂಡಿತಾರಾಧ್ಯ ದೇಶಿಕನು ಬೇಜವಾಡದ ತೆಲ್ಲಿಗರ ಗುರುವಾಗಿದ್ದನು, ಎಂದು ವರ್ಣಿಸಿದ್ದಾನೆ. ಭಲ್ಲಾಣನ ಶಿಲಾ ಶಾಸನದಿಂದ ಅವನು ಬಸವೇಶ್ವರನ ಕಾಲದಲ್ಲಿಯೂ ಇರಬಹುದೆಂದು ಊಹಿಸಲು ಆಸ್ಪದವಿದೆ. (ಶಿವಾನುಭವ XX 10-11) ವೀರಣಾಮಾತ್ಯನು 'ಬಿಲ್ಲಾಳನ ಚರಿತ್ರೆ' ಎಂಬ ಕಾವ್ಯವನ್ನೂ ಬರೆದಿದ್ದಾನೆ. 'ದಾಮುಮೊಗ್ಗಣ್' ಎಂಬುವನು ಆಶ್ರಯವಿತ್ತನು. ಈ ವೀರಣಾರ್ಯನ ಮಗನೇ ಗುಪ್ತಾಭ್ಯುದಯವನ್ನು ಬರೆದ ನಾಗಲಿಂಗ. ಇವರು ಪಂಡಿತಾರಾಧ್ಯನ ವಂಶದವರು. ನಾಗಲಿಂಗನು 'ಪಟ್ಟಾಭಿರಾಮ ವಿಲಾಸಮು' ಎಂಬ ಕಾವ್ಯವನ್ನು ಬರೆದಿದ್ದಾನೆ. ಇವನು ವೀರಣಾಮಾತ್ಯನ ಮಗ. ಈ ವೀರಣಾಮಾತ್ಯನು 'ಶಂಭುಲಿಂಗ'ನ ಮೊಮ್ಮಗ. ಈ ಶಂಭುಲಿಂಗನು 'ದಾಮುಮೊಗ್ಗಣ' ಎಂಬುವನ ಗುರುವು. (ಅದೇ ಪತ್ರಿಕೆ). ಪಂಡಿತಾರಾಧ್ಯರ ವಚನಮುದ್ರಿಕೆ "ಗುರುಸಿದ್ಧ ಮಲ್ಲು".

೧೬) **ವಿಭೂತಿ ಗೌರಯ್ಯ**

ಕರ್ನೂಲು ಜಿಲ್ಲೆಯಲ್ಲಿ ಪಾಸೆಂ ಎಂಬ ಗ್ರಾಮವಿದ್ದು ಅಲ್ಲಿಯ ಪಾಣಿಕೇಶ್ವರ ಸ್ವಾಮಿಯ ದೇವಾಲಯದ ಮುಖಮಂಟಪದ ಕಂಬದ ಮೇಲೆ ಒಂದು ಶಾಸನವಿದೆ. ಅದರಲ್ಲಿ ವಿಭೂತಿ ಗೌರಯ್ಯನು ತಾನು ವರೇಂಗಲ (ಓರುಗಲ್) ಹತ್ತಿರವಿರುವ ಮಾಚಿರಾಜುಪಳ್ಳಿ ಎಂಬೂರಿನವನಿದ್ದು ಶ್ರೀಶೈಲದಲ್ಲಿ ವಾಸಮಾಡುತ್ತಿರುವೆನೆಂದೂ ತಾನು ಪಂಡಿತಾರಾಧ್ಯರ ಸೇವಕನೆಂದೂ ಭಕ್ತಿಪೂರ್ವಕವಾಗಿ ಹೇಳಿಕೊಂಡಿದ್ದಾನೆ. (ಶಿವಾನುಭವ XX-11).

(ಇಲ್ಲಿ ಪಂಡಿತಾರಾಧ್ಯನು ಶ್ರೀಪತಿಪಂಡಿತಾರಾಧ್ಯನಿರಬೇಕು, ಎಂದು ಸಂಪಾದಕರು ಊಹಿಸಿದ್ದಾರೆ. ಆದರೆ ಆಚಾರ್ಯರಾದ ಪಂಡಿತಾರಾಧ್ಯರ ಶಿಷ್ಯನಾಗಿ ಈ ಗೌರಯ್ಯನು ಇದ್ದುದು ಗ್ರಂಥಗಳಿಂದ ತಿಳಿದುಬರುತ್ತದೆ. ಕರ್ನೂಲು ಡಿಸ್ಟ್ರಿಕ್ಟಿನಲ್ಲಿ ಇನ್ನೂ ಇವನ ಶಾಸನಗಳಿವೆ. (ಮದರಾಸು ರಿಪೋರ್ಟ್ ೧೯೨೬–೫೨).

೧೭) **ಶ್ರೀ ಗಿರಿಯಯ್ಯ**

ಕೊಂಡುವೀಡು ಪಟ್ಟಣವು ಕ್ರಿ. ಶ. ೧೩೨೮ ರ ಮುಂದೆ ಒಬ್ಬ ರೆಡ್ಡಿ ಅರಸು ಮನೆತನದವನ ರಾಜಧಾನಿಯಾಗಿತ್ತು. ಅದರಲ್ಲಿ ದಾಮುಂಪಾಟ ಚನ್ನಮನೇನಿಂಗಾರು ಎಂಬ ರಾಜನು ಅಲ್ಲಿಯ ವಿಶ್ವೇಶ್ವರ ದೇವಾಲಯುವ ಗೋಪುರಕ್ಕಿದ್ದ ಕಲ್ಲಿನ ತೊಲೆ ಯನ್ನು ತನ್ನ ಗುರುವಾದ ಶ್ರೀ ಗಿರಿಯ ಅಯ್ಯಂಗಾರು ಇವನ ಸ್ಮರಣಾರ್ಥವಾಗಿ ಶಕೆ ೧೩೨೭ ಎಂದರೆ ಕ್ರಿ. ಶ. ೧೪೦೫ ರಲ್ಲಿ ದಾನಕೊಟ್ಟಿದ್ದರ ಬರಹವು ಅದರ ಮೇಲೆ ಇದೆ. ಶ್ರೀಗಿರಿಯಯ್ಯನ ಗುರುವು ಪಂಡಿತಾರಾಧ್ಯನ ವಂಶದವರೆಂದು ಇದರಲ್ಲಿ ಹೇಳಿದೆ.

(ಶಿವಾನುಭವ XX-೧೧, ೧೯೪೭)

೧೮) **ಹರ ದತ್ತಾಚಾರ್ಯ**

ಗಿರೀಶ ಶೃತಿ ಸೂಕ್ತಮಾಲಾ ಗ್ರಂಥವನ್ನು ಮಾಡಿದವನು.

(ಮದರಾಸು ರಿಪೋರ್ಟ-೧೯೦೦-೬೨)

೧೯) **ಕೊಂಡಗುಳಿ ಕೇಶಿರಾಜ**

ಇವನು ಕಲಚೂರ್ಯ ಪೇರ್ಮಾಡಿಯ ಆಶ್ರಯದಲ್ಲಿ ಇದ್ದನು. ಇವನು ಬಂಗಾ ರದ ಉಂಗುರವನ್ನಿಟ್ಟುಕೊಂಡು ರಾಜನಿಗೆ ಕೈಮುಗಿಯುತ್ತಿದ್ದನು. ಇದಕ್ಕಾಗಿ ಇವ ನನ್ನು ಕೆಲಸದಿಂದ ತೆಗೆದುಹಾಕಲು, ಬಸವೇಶ್ವರನು ಬೇರೆಕಡೆಯಲ್ಲಿ ಅವನಿಗೆ ಕೆಲಸ ವನ್ನು ಕೊಡಿಸಿದನು. ಒಂದು ಶಾಸನ (AD. ೧೧೨೮) ದಲ್ಲಿ ಇವನ ಹೆಸರಿದೆ. ಕಸ ಪಯ್ಯನ ವರ್ಣನೆಯಿದೆ. ಶಿವಭಕ್ತರ ವರ್ಣನೆಯಿದೆ. ಕೇಶವದಂಡನಾಯಕ ಎಂದು ಕರೆಯಲ್ಪಟ್ಟಿದ್ದಾನೆ. ಬಳ್ಳಿಗಾವೆಯ ಹತ್ತಿರವಿರುವ ವಡ್ಡಗೇರಿ ಎಂಬ ಗ್ರಾಮಕ್ಕೆ ಪೂರ್ವದಲ್ಲಿ ಕೇಶವಪುರ ಎಂದು ಹೆಸರಿತ್ತಂತೆ. ಈ ಕೇಶವ ದಂಡನಾಯಕನೇ ಕೊಂಡು ಗುಳಿ ಕೇಶಿರಾಜನೆಂದು ಹೇಳಲವಕಾಶವಿದೆ. ಮಹಾಪ್ರಧಾನ ಕೇಶಿಮಯ್ಯನು ಕೊಲ್ಲಿ ಪಾಕೆ ನಾಡನ್ನಾಳುತ್ತಿದ್ದನು. (SII. IX Part I-241 AD-೧೧೪೩) ಬಾಗವಾಡಿ ಯಿಂದ ಉತ್ತರಕ್ಕೆ ೧೦-೧೫ ಮೈಲು ದೂರದಲ್ಲಿ ಕೊಂಡಗುಳಿ ಎಂಬ ಗ್ರಾಮವಿದೆ.

೨೦) **ಶಿಲಾಹಾರ ವಿಜಯಾದಿತ್ಯ (ಕೊಲ್ಲಾಪುರದ ವಿಕ್ರಮಾದಿತ್ಯ)**

ಕಲಚೂರಿ ಬಿಜ್ಜಳನ ಆಳ್ವಿಕೆಯಲ್ಲಿ ಇವನು ಕೊಲ್ಲಾಪುರ ಅಥವಾ ಸಿದ್ಧಗಿರಿಯಲ್ಲಿ ಪ್ರಸಿದ್ಧನಾದವನು. ಇವನ ವಂಶದಲ್ಲಿ ಇವನಿಗಿಂತ ಪೂರ್ವದಲ್ಲಿ ಮಾರಸಿಂಗ ಎಂಬು ವನು ಪ್ರಸಿದ್ಧನಾಗಿದ್ದನು. ಈ ಮಾರಸಿಂಗನ ಮಗನೇ ಬಲಿಯುವಟ್ಟದ ರಟ್ಟರಿಗೆ ಬೀಸುವ ಕಲ್ಲಿನಂತಿದ್ದ ಭೋಜ. ಈ ಭೋಜನ ತಮ್ಮನೇ ಗಂಡರಾದಿತ್ಯ. ಇವನ ಹಿರಿಯ ಮಗನೇ ಮೇಲೆ ಕಂಡ ವಿಜಯಾದಿತ್ಯ (ವಿಜಯದೇವ) ಮಹಾಮಂಡಲೇಶ್ವರ. ಇವನು ಕೆಲವು ಕಾಲ ಮಾಳವಾಡದಲ್ಲಿ ವಾಸಿಸುತ್ತಿದ್ದನು. ಇವನಿಗೆ ಅಯ್ಯಣಸಿಂಗ, ಕಲಿಯುಗದ ವಿಕ್ರಮಾದಿತ್ಯ ಎಂಬ ಬಿರುದುಗಳಿದ್ದವು. ರೇವಣಸಿದ್ಧರು ಸಿದ್ಧಗಿರಿಯಲ್ಲಿ ವಿಕ್ರಮಾದಿತ್ಯನನ್ನು ಕಂಡರೆಂದು ವೀರಶೈವ ಪ್ರದೀಪಿಕೆ ಗ್ರಂಥ ಹೇಳುವುದು. ಇವನ

ವಿಷಯವು (ಮೈಸೂರು ಶಾಸನ ಇಲಾಖೆಯ ರಿಪೋರ್ಟ್ ೧೯೧೬ ಪುಟ ೧೮) ಎಪಿಗ್ರಾಫಿಯಾ ಇಂಡಿಕಾ ವಾಲ್ಯೂಮ್ III, ಪುಟ ೨೦೮ ರಲ್ಲಿ ಇದೆ. ಅಯ್ಯಣಸಿಂಗ ಎಂಬ ಹೆಸರನ್ನೇ ಪಂಚವಕ್ತ್ರ ಗಣೇಶ್ವರ ಎಂಬುದಾಗಿ ಸಂಸ್ಕೃತಕ್ಕೆ ತಿರುಗಿಸಿ ವೀರಶೈವ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ, ಎಂದು ನಂಬಲಿಕ್ಕೆ ಅವಕಾಶವಿದೆ. ಈತನ ವಿಷಯಗಳನ್ನು ಕ್ರಿ. ಶ. ೧೧೬೫ ರಲ್ಲಿ ಬರೆದ ಒಂದು ಬಸ್ತಿಯ ನವರಂಗದ ಶಾಸನವು ಹೇಳುತ್ತದೆ. ಈ ಬಸ್ತಿಯನ್ನು ವಿಜಯಾದಿತ್ಯನ ಸೇನಾಪತಿ ಕಾಳಣನು ಆ ವರ್ಷ ಕಟ್ಟಿಸಿದನು. ಇವನ ವಂಶಕ್ಕೆ ಕರ್ಹಾಡದ ಶಿಲಾಹಾರ ವಂಶ ಎಂದು ತಿಳಿಯುತ್ತಾರೆ. ಇವನಿಗೆ ವಿಜಯದೇವ, ವಿಜಯಾರ್ಕ ಮುಂತಾದ ಹೆಸರುಗಳು ಇದ್ದುದಾಗಿ ತಿಳಿದು ಬಂದಿದೆ. ಈ ವಿಕ್ರಮಾದಿತ್ಯನ ಮಗಳನ್ನು ಶ್ರೀ ರೇವಣರು ಮದುವೆಯಾದರೆಂದೂ ಸಿದ್ಧಗಿರಿಯಲ್ಲಿ ವೀರಶೈವ ಉಪಗೋತ್ರಗಳು ರಚನೆಯಾದುವೆಂದೂ ವೀರಶೈವ ಪ್ರದೀಪಿಕೆ ಎಂಬ ಗ್ರಂಥವು ಹೇಳುತ್ತದೆ.

೨೧) **ನುಕ್ಕಮಲ್ಲ (ದೇವಾಲಯ)**

ಇದು ಶ್ರೀಶೈಲದಲ್ಲಿನ ಒಂದು ದೇವಾಲಯ. ಶ್ರೀಶೈಲದ ಪಶ್ಚಿಮ ದಿಕ್ಕಿನ ದಕ್ಷಿಣ ಭಾಗದ ಕಡೆಗೆ ೬ ಮೈಲು ದೂರದಲ್ಲಿ ಇರುತ್ತದೆ. ನೀಲಗಳ ಚಕ್ರವರ್ತಿ (ಶ್ರೀ ರೇವಣರು ಲಿಂಗೈಕ್ಯರಾಗುವ ಕಾಲದಲ್ಲಿ ಕೊಲ್ಲಿಪಾಕದಲ್ಲಿ ದೊರೆಯಾಗಿ ವಿಶ್ರಾಂತಿಯಲ್ಲಿದ್ದವನು) ಇವರೇನಲ್ಲ ಸಿದ್ಧ. ಇವನ ಹೆಂಡತಿ ನುಕ್ಕಮ. ಈಕೆಯು ತನ್ನ ಹೆಸರಿನಲ್ಲಿ 'ನುಕ್ಕಮಲ್ಲ' ಎಂಬ ದೇವಸ್ಥಾನವನ್ನು ಕಟ್ಟಿಸಿದ್ದಾಳೆ. (Madras Presidency Inss II-Srisailam) 'ನುಕ್ಕ' ಎಂಬುದು ಆಕೆಯ ಹೆಸರು 'ಮಲ್ಲ' ಎಂಬುದು ಮಲ್ಲಿಕಾರ್ಜುನ ಎಂಬ ಹೆಸರಿನ ಸಂಕುಚಿತ ರೂಪ, ಎಂದು ತಿಳಿಯಬೇಕಾಗಿದೆ.

೨೨) **ಸೆಂಗೇನಿಮಿಂಡನ್ (ಮೆರೆಮಿಂಡದೇವ) ಅತ್ತಿನಮಲ್ಲ, ಸಂಭುವರಾಯ**

ಈತನ ಹೆಸರಿರುವ ಶಾಸನವು ಕಂಚಿ (Canjeevoram)ಯ ಏಕಾಮ್ರನಾಥನ ಗುಡಿಯಲ್ಲಿ ಇದೆ. (South Indian Inseription Vol. III Part II Page 207 and 208, AD 1205) ಇವನೇ ವೀರಶೈವ ಗ್ರಂಥಗಳಲ್ಲಿ ಕಂಡುಬರುವ ಮೆರೆಮಿಂಡದೇವ ಆಗಿರಬೇಕು. ಇವನ ವಿಷಯ ಮದ್ರಾಸ್ ಇನ್‌ಸ್ಕ್ರಿಪ್ಶನ್ ವಾಲ್ಯೂಮ್ II ಪಾರ್ಟ್ ೨ ರಲ್ಲಿಯೂ ಇದೆ. ಇವನ ವಚನಮುದ್ರಿಕೆ "ಐಘಟದೂರ ರಾಮೇಶ್ವರ ಲಿಂಗ" ಎಂದಿದೆ.

೨೩) **ಸಿಯಾಗಂಗ ಅಮರಾಬ್ಬರಣ ಯಾನೆ ತಿರುನಯ್ಯಾನಂ ಉಡಿಯಾರ್**

ಈತನ ಕಾಲದಲ್ಲಿ ತಮಿಳು ವ್ಯಾಕರಣ 'ನನ್ನೂಳ್' ಎಂಬುದು ರಚಿಸಲ್ಪಟ್ಟಿತು. (ಕ್ರಿ. ಶ. ೧೨೦೫).

೨೪) **ಅಲಗಯ್ಯ (ಅಲ್ಲಯ್ಯ)**

ಕುಲೋತ್ತುಂಗ ಚೋಳ III (ವೀರರಾಜೇಂದ್ರ ಚೋಳ) ಇವನ ೩೩ ನೆಯ ವರ್ಷ ಕ್ರಿ. ೧೨೧೧; ೨೭ನೆಯ ವರ್ಷ ೧೨೦೫—ಈ ಕಾಲದಲ್ಲಿ ಇದ್ದವನು. ಈ

ಚೋಳಪಿಳ್ಳೆ ಅಥವಾ ಅಲಗಯ್ಯ ಪಿಳ್ಳೆ ಮಾನೆ ಎಡ್ರಿಲಿ ಚೋಳ ಸಂಬವರಾಯ ಸಂಗೇನಿ ಅಮರಪ್ಪಯ್ಯನ್ ಎಂಬುವನ ಮಗ. ಇವನ ಶಾಸನ ಕಂಚಿಯ ಅರುಳಾಳ ಪೆರುಮಾಳ್ ದೇವಸ್ಥಾನದಲ್ಲಿ ಇದೆ. ಕೊಲ್ಲಿಪಾಕೆ ಮಾಹಾತ್ಮೆಯಲ್ಲಿ ಅಲ್ಲಯ್ಯ ಎಂಬುವನ ಹೆಸರು ಬಂದಿದೆ. ಅವನು ಲಿಂಗವಂತನಾದನು. ಅವನೇ ಇವನಾಗಿರಬೇಕೇನು? ಈ ಸಂಗೇನಿ ವಂಶದ ಮಿಂಡನ್ ಎಂಬುವನೇ ಪೆರೆಮಿಂಡದೇವನಾದರೆ ಈ ಅರುಳಾಳ್ ಪೆರುಮಾಳ್ ದೇವಾಲಯವು ಶ್ರೀ ರೇವಣರು ಒಂದೆ ಮಹಿಮೆಯನ್ನು ತೋರಿಸಿದ ಸ್ಥಳವಾದುದರಿಂದ ಇವನೇ ಅಲ್ಲಯ್ಯನೆಂದು ನಿರ್ಧರಿಸಬೇಕಾಗಿದೆ. ಇವನು ವೀರ ರಾಜೇಂದ್ರ ಚೋಳನ ಆಶ್ರಯದಲ್ಲಿ ಒಬ್ಬ ಅಧಿಕಾರಿಯಾಗಿದ್ದನು. (ಮದರಾಸು ಶಾಸನದ ವರದಿ ನಂ-೩೬-೧೮೯೩)

೨೫) ವೇಮ

i) ಕೊಂಡವೀಡು ಪಟ್ಟಣದ ವಿಶ್ವೇಶ್ವರ ದೇವಾಲಯದ ಒಂದು ಕಂಬದ ಮೇಲೆ ಪೆದ್ದಕೋಮಟಿ ವೇಮ ಎಂಬ ಹೆಸರಿನ ರಡ್ಡಿ ಕುಲದ ರಾಜನು ಕ್ರಿ.ಶ. ೧೪೦೮ ರಲ್ಲಿ ಶ್ರೀ ಗಿರಿಗೆ ದಾನಕೊಟ್ಟಿದ್ದರ ಉಲ್ಲೇಖವಿದೆ. ಈ ರಾಜನು 'ಶೃಂಗಾರ ದೀಪಿಕಾ' ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ.

ii) **ವೇಮ (೨) ವೇಮರೆಡ್ಡಿ :** ಕೇತಿಮರೆಡ್ಡಿ, ಶಕ ೧೩೧೩ (ಕ್ರಿ. ಶ. ೧೩೯೧) ಪೀಠಾಪುರಂ ೬೬. ಇನ್‌ಸ್ಕ್ರಿಪ್ಷನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ ವಾಲ್ಯೂಮ್ ನಂ. II ಪುಟ ೭೧೯.

iii) **ವೇಮ (೩) ಅನ್ನವೇಮ :** ಇವನ ತಂದೆ ಅನ್ನಯ್ಯರೆಡ್ಡಿ ಎಂಬುದಾಗಿ ಶಾ. ಶ. ೧೨೯೯ ರ ಶಾಸನದಲ್ಲಿ ಹೇಳಲ್ಪಟ್ಟಿದೆ. ಮತ್ತೊಂದು ಶಾಸನ ಶಕ ೧೨೯೮ ಕ್ರಿ. ಶ. ೧೩೭೭) ಇದರಲ್ಲಿ ಅನ್ನಯ್ಯನು ವೇಮನ್ ತಂದೆಯಲ್ಲ, ಆದರೆ ಅವರ ವೇಮನ ಚಿಕ್ಕಪ್ಪನು. ಅನ್ನಯ್ಯರೆಡ್ಡಿಯು ವೇಮನನ ಮೇಲೆ ಪ್ರೀತಿಯಿಟ್ಟವರ ದೆಸೆಯಿಂದ ವೇಮನು ಅನ್ನಯ್ಯನನ್ನು ತಂದೆಯೆಂದು ಕರೆದಿದ್ದಾನೆ, ಎಂದು ಹೇಳಲ್ಪಟ್ಟಿದೆ. ವೇಮನೂ ಸರ್ವಜ್ಞನೂ ಕೂಡಿ ಮಾತನಾಡಿದರೆಂದು ಜನವಾರ್ತೆ. ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲೂಕು ಅಬ್ಬಲೂರಿನಲ್ಲಿ ಹುಟ್ಟಿ ಬೆಳೆದ ಸರ್ವಜ್ಞನು ಈ ಅನ್ನವೇಮನ ಸಮಕಾಲೀನವಾಗಿರಬೇಕು.

iv) **ವೇಮ-(೪)** ಅಡ್ಡಂಕಿಯಲ್ಲಿದ್ದ ಕೋಮಟ ಪ್ರೋಲನ ಮಗ ವೇಮ. (ಕ್ರಿ. ಶ. ೧೩೪೫) ಪ್ರೋಲನ ಹೆಂಡತಿ ಅನ್ನಮಾಂಬಾ. ಈ ವೇಮನು ಐದುಜನ ಸಹೋದರರಲ್ಲಿ ಒಬ್ಬ. (ಪೀಠಾಪುರಂ ೬೬. Inscription Madras Presidency Vol. No. II Page-879)

೨೬) **ಸಂಕಗಾವುಂಡ (ಶಂಖಪಾಲ)**

ಇವನೇ ಅಬಲೂರಿನಲ್ಲಿ ಏಕಾಂತ ರಾಮಯ್ಯನು ಮಾಡಿದ ಶಿರಸ್ಸನ್ನು ಕತ್ತರಿಸಿಕೊಂಡು ಪವಾಡ ಮಾಡಿದ ಮೇಲೆ ವೀರಶೈವ ಮತಕ್ಕೆ ಸೇರಲೊಡಂಬಟ್ಟ ಜೈನನಾದ

ಶಂಖಪಾಲ. ಇವನು ಬಿಜ್ಜಳನಿಗೆ ವೀರಶೈವನಾಗುವ ವಿಷಯಕ್ಕೆ ಕಲ್ಯಾಣಕ್ಕೆ ಪತ್ರ ಬರೆದಿದ್ದನೆಂದು ಗ್ರಂಥಗಳ ಹೇಳಿಕೆ. ಈ ಕಲ್ಯಾಣವು ಪ್ರಥಮ ಕಲ್ಯಾಣವೆನಿಸಿಕೊಂಡ ಬಳ್ಳಿಗಾವಿಯೇ ಆಗಿರಬೇಕು. ಅಬಲೂರು ಬಳ್ಳಿಗಾವಿಗೆ ಸುಮಾರು ೧೦–೧೩ ಮೈಲು ದೂರದಲ್ಲಿದೆ. ಇವನು ದೇಶಾಧಿಕಾರಿ ಕಸಪಯ್ಯನೊಡನೆ ಕ್ರಿ.ಶ. ೧೧೬೦ ರಲ್ಲಿ ಇದ್ದಂತೆ ಸೊರಬದ ತಾಲೂಕು ೩೪೬ನೆಯ ಶಾಸನ (Ep. Car. VIII) ಹೇಳುತ್ತದೆ. ಕಸಪಯ್ಯನೇ ಬಸವೇಶ್ವರನೆಂದು 'ಬಸವೇಶ್ವರನಕಾಲ' ಎಂಬ ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ.

## ೨೭) ಮಂತ್ರಿಮಲ್ಲಯ್ಯ (ಕಲಚೂರ್ಯ ಭಿಲ್ಲಮನ ಮಂತ್ರಿ)

'ಭಿಲ್ಲಮರಾಯನ ಸಾಂಗತ್ಯ' ಎಂಬುದು ವೀರಶೈವ ಮಠಗಳಲ್ಲಿ ಸಿಕ್ಕುವ ಒಂದು ಗ್ರಂಥ. ಇದರಲ್ಲಿ ಭಿಲ್ಲಮರಾಯನ ಗುರು, ಜಾತ ಒಡೆಯರು, ಮಂತ್ರಿಮಲ್ಲಯ್ಯ ಎಂದು ಇದೆ. ಈ ಜಾತ ಗುರುಗಳೇ ಶ್ರೀಶೈಲದಲ್ಲಿ ರೇವಣಸಿದ್ಧರ ಹಿಂಬಾಲಕರಾಗಿ ಇದ್ದ ದೇವರಜಾತ ಭಿಕ್ಷಾವರ್ತಿ ಮುನಿಗಳೆಂಬ ತರ್ಕವಿದೆ. ಮೇಲೆ ಕಂಡ ಕಲಚೂರ್ಯ ಭಿಲ್ಲಮನ ಮಂತ್ರಿ ಮಲ್ಲಯ್ಯನು ಶಿಕಾರಿಪುರದ ಶಾಸನ ಶಕ ೧೧೯೧ (ಕ್ರಿ. ಶ. ೧೧೬೯) ರಲ್ಲಿ ಹೇಳಲ್ಪಟ್ಟಿದ್ದಾನೆ. (Historical Ins-of Southern India) ಮುತ್ತಿಗೆ ಶಾಸನದಲ್ಲಿಯೂ ಇವರ ಹೆಸರುಗಳಿವೆ. (ಕ್ರಿ. ಶ. ೧೧೮೭) ಈ ಭಿಲ್ಲಮನು ವೀರಶೈವರು ಪಠಣೆಯಲ್ಲಿಟ್ಟುಕೊಂಡ ಗಣಾಷ್ಟಕದಲ್ಲಿಯೂ ಸೇರಿಸಲ್ಪಟ್ಟಿದ್ದಾನೆ.

## ೨೮) ಬೊಪ್ಪ

ಕಲಚೂರಿ ಸಂಕಮನ ಕಾಲ, ಶಿಕಾರಿಪುರ ತಾಲೂಕು ೧೯೭ ನೆಯ ಶಾಸನದಲ್ಲಿ (Ep. Car. VII) "ಇರೆ ರೇಚಕ್ ದಂಡಾಧೀಶ್ವರಂ ಜಿನೇಶ್ವರ ಪದಾಭಿವಂದನೆಗೆಂದೊಪ್ಪಿದೆ ಬಂದಂ ಮಾಗುಡಿಗಾದರದಿಂ ಶ್ರೀ ಬೊಪ್ಪಂ" ಎಂಬ ವಾಕ್ಯವಿದೆ. ಇದರಲ್ಲಿ ಕಂಡ ರೇಚಣದಂಡಾಧೀಶ್ವರನೇ ರೇಚರಸ. ಬಸವೇಶ್ವರಾದಿಗಳು ಕಲ್ಯಾಣವನ್ನು ಬಿಟ್ಟುಹೋದ ಮೇಲೆ ಈ ರೇಚರಸನು ಜಿನೇಶ್ವರನಲ್ಲಿಯೂ ಭಕ್ತಿಯಿಟ್ಟಂತೆ ತೋರುತ್ತದೆ. ಕ್ರಿ. ಶ. ೧೨೨೦ ರಲ್ಲಿ ಅರಸಿಕೆರೆಯ ೨೬೫ ಜೈನರಿಗೂ ಸಹಾಯ ಮಾಡಿ ಮೂರ್ತಿಸ್ಥಾಪನೆ ಮಾಡಿಸಿದ್ದಾನೆ. ಇವನ ಕೈಕೆಳಗೆ ಬೊಪ್ಪನೆಂಬುವನು ಕ್ರಿ. ಶ. ೧೧೯೨ ರಲ್ಲಿ ಅಧಿಕಾರಿಯಾಗಿದ್ದಾನೆ. ಇವನ ಹೆಸರು ಶ್ರೀ ರೇವಣರು ಮಾಸೂರಿನಲ್ಲಿ ತಿಗಣೆಗಳನ್ನು ನಾಶಮಾಡಿದ ಸಂದರ್ಭದಲ್ಲಿ ಗ್ರಂಥಗಳಲ್ಲಿ ಬಂದುದರಿಂದ ಶ್ರೀ ರೇವಣರು ಶಿಕಾರಿಪುರಕ್ಕೆ ಒಂಬತ್ತು ಮೈಲು ದೂರದಲ್ಲಿ ಇರುವ ಮಾಸೂರಿನಲ್ಲಿಯೇ ತ್ರೈಗುಣ್ಯಕ್ಕೆ ಸೇರಿದ ಒರಟಿದ ನಾಶ ಮತ್ತು ಕತ್ತಿಗಳನ್ನು ತಯಾರಿಸಿದರೆಂದು ನಂಬಬೇಕಾಗಿದೆ. ಸುರಗೀಹಳ್ಳಿ (ಕತ್ತಿಯನ್ನು ತಯಾರಿಸಿದ ಸ್ಥಳ) ಕಿಟ್ಟದಹಳ್ಳಿ (ಕಬ್ಬಿಣದ ಕಿಟ್ಟವನ್ನು ಬಿಸಾಡಿದ ಸ್ಥಳ) ಇವುಗಳು ಶಿಕಾರಿಪುರ ತಾಲೂಕಿನಲ್ಲಿಯೇ ಇದೆ. ಚಿಕ್ಕಮಾಗಡಿ ಎಂಬುದು ಶಿಕಾರಿಪುರ ತಾಲೂಕಿಗೂ ಹಿರೇಮಾಗಡಿ ಎಂಬುದು ಸೊರಬ ತಾಲೂಕಿಗೂ ಸೇರಿದುವಾಗಿ ಈಗಲೂ ಇವೆ.

೨೯) **ಸಿಂಗಾಧಿಪ** (ವಶಿಷ್ಠ ಚರ್ಯೆಯುವನು)–(ಸಿಂಗಮುನಿ ಮಂತ್ರಿ)

ಇವನು ವಶಿಷ್ಠ ಚರ್ಯೆಯಲ್ಲಿದ್ದನು. ಇವನು ಉಪಮನ್ಯುವಿಗೆ ಬೋಧಿಸಿದನು. (ಒಂಗೋಲ್ ೧೩ನೆಯ ಶಾಸನ) ಶ್ರೀ ರೇವಣರು ವಶಿಷ್ಠರಿಗೆ ಬೋಧಿಸಿದರೆಂದು ಗ್ರಂಥ ಗಳ ಹೇಳಿಕೆ. ೧೨ನೆಯ ಶತಮಾನದಲ್ಲೂ ವಶಿಷ್ಠ ಎಂಬ ಉಪನಾಮಕರು ಇದ್ದರೆಂದು ಗೊತ್ತಾಗುತ್ತದೆ.

೩೦) **ಉಪಮನ್ಯು**

ವಸಿಷ್ಠಚರ್ಯೆಯಲ್ಲಿದ್ದ ಸಿಂಗಮುನಿ ಮಂತ್ರಿಯಿಂದ ಉಪಮನ್ಯುವಿಗೆ ಬೋಧೆ ಯಾಯಿತೆಂದು ಒಂಗೋಲ್ ೧೩ನೆಯ ಶಾಸನವಿದೆ. ಐವಳ್ಳಿ(ಅಯ್ಯಾವಳಿ, ಐಹೊಳೆ) ಯಲ್ಲಿ ಪೊಗ್ಗೆಯ ಮಾಯಿದೇವರ ಪೂರ್ವ ವಂಶಜರಲ್ಲಿ ಉಪಮನ್ಯು ಇದ್ದಾನೆ ಎಂದು ಗೊತ್ತಾಗುತ್ತದೆ. ಶ್ರೀ ರೇವಣರು ಉಪಮನ್ಯುವಿಗೆ ಬೋಧಿಸಿದರೆಂದು ಗ್ರಂಥಗಳ ಹೇಳಿಕೆ. ಹೀಗೆ ೧೨ನೆಯ ಶತಮಾನದಲ್ಲಿಯೂ ಉಪಮನ್ಯು ಎಂಬುವರಿದ್ದರೆಂದು ತಿಳಿಯುತ್ತದೆ.

೩೧) **ವೆಲನಾಡುಗೊಂಕ** II

ವೆಲನಾಡು ಎಂಬುದು ಆಂಧ್ರ ದೇಶವೆಂದು ಈಗಿನ ಚರಿತ್ರೆಕಾರರು ಒಪ್ಪುತ್ತಾರೆ. ಆಂಧ್ರ ದೇಶದ ರಾಜನಾದ ಗೋಮುಖಾಸುರನು ವೀರಗಂಧರ್ವರಾಜನ ಮಗಳಾದ ಬಲಿದೇವಿಯನ್ನು ಮೋಹಿಸಿ ಆಕೆಯನ್ನು ಮದುವೆ ಮಾಡಿಕೊಡದಿರಲು ಯುದ್ಧಮಾಡಿ ಆ ರಾಜನನ್ನು ಸೆರೆಯಲ್ಲಿಟ್ಟನೆಂದೂ ಪಂಚವಕ್ತ್ರ ಗಣೇಶ್ವರನು ಅವನನ್ನು ಕೊಂದು ಆ ರಾಜನನ್ನು ಸೆರೆಬಿಡಿಸಿ ಬಲಿದೇವಿಯನ್ನು ಮದುವೆಯಾದನೆಂದೂ ಅವನ ವಂಶಜರೇ ಈಗಿನ ಪಂಚಮರೆಂದೂ ವೀರಶೈವ ಗ್ರಂಥಗಳು ಹೇಳುತ್ತವೆ. ಆ ಗ್ರಂಥಗಳಲ್ಲಿ ಕಾಣುವ ಗೋಮುಖಾಸುರನೇ ಈ ಗೊಂಕ. ವೆಲನಾಡಿನಲ್ಲಿ ಆಳಿವವರಲ್ಲಿ ಗೊಂಕ ಎಂಬುವರು ೩–೪ ಜನರಿದ್ದಾರೆ. ಅವರಲ್ಲಿ ಈ ಎರಡನೇ ಗೊಂಕನೇ ಬಹುಪತ್ನೀಕ ನೆಂದೂ ಕಾಮುಕನೆಂದೂ ಚರಿತ್ರೆಕಾರರು ಹೇಳುತ್ತಾರೆ. ಇವನೇ ಬಲಿದೇವಿಯನ್ನು ಮೋಹಿಸಿರಬೇಕು. ಇವನನ್ನು ಸಂಹರಿಸಿದವನು ಶಿಲಾಹಾರ ವಂಶದ ಅಯ್ಯನಸಿಂಗ ಎಂಬ ಬಿರುದುಳ್ಳ ಕಲಿಯುಗದ ವಿಕ್ರಮಾದಿತ್ಯ, (ಕೊಲ್ಲಾಪುರದ ವಿಕ್ರಮಾದಿತ್ಯ) ಎಂದು ತರ್ಕಿಸಲವಕಾಶವಿದೆ. ಅಯ್ಯಣಸಿಂಗ ಎಂಬ ಹೆಸರನ್ನೇ ಪಂಚವಕ್ತ್ರ ಗಣೇಶ್ವರ ಎಂದು ಸಂಸ್ಕೃತಕ್ಕೆ ತಿರುಗಿಸಿದಂತೆ ಗೊಂಕ ಎಂಬ ಹೆಸರನ್ನು ಗೋಮುಖ ಎಂಬುದಾಗಿ ತಿರುಗಿಸಿ ದ್ದಾರೆ. ಇವನ ಆಳ್ವಿಕೆಯ ನಾಲ್ಕನೆಯ ವರ್ಷದ ಶಾಸನವು (ಕ್ರಿ. ಶ. ೧೧೩೬) Indian Antiquary Vol No. IX Part III Page 33-34 ಆಗಿದೆ. ಅದೇ ಕಾಲದಲ್ಲಿ ಅಯ್ಯನಸಿಂಗನೂ ಕ್ರಿ. ಶ. ೧೧೪೩ ರಿಂದ ರಾಜ್ಯವಾಳಿದಂತೆ ತಿಳಿದು ಬರುತ್ತದೆ. ಹೀಗೆ ಇಬ್ಬರ ಕಾಲವೂ ಕೂಡಿ ಬರುತ್ತದೆ. ೧ನೆಯ ಗೊಂಕರಾಜನು

ಕರ್ನೂಲು ಜಿಲ್ಲೆಯ ಮಾರ್ಕ್ಯಾಪುರ ತಾಲ್ಲೂಕು ೩೬೯ನೆಯ ಶಾಸನದಲ್ಲಿ ಕಾಣುತ್ತಾನೆ. (ಅವನ ಕಾಲ ಕ್ರಿ. ಶ. ೧೧೦೬). ಈ ಎರಡನೆಯ ಗೊಂಕ (ಇವನ ಹೆಂಡತಿ ಸಬ್ಬಾಂಬಾ ಸರ್ವಮಂಗಳೆ ?) ಕ್ರಿ. ಶ. ೧೧೫೩-೫೪ ರಲ್ಲಿಯೂ ರಾಜ್ಯವಾಳುತ್ತಿದ್ದನು. (SII Vol V-130 ಮತ್ತು 134) ಇವನ ಮಗ ರಾಜೇಂದ್ರಚೋಡನು ಕ್ರಿ. ಶ. ೧೧೬೩ರಲ್ಲಿ ಕಾಣುತ್ತಾನೆ. (ಮಾರ್ಕಾಪುರ ತಾಲೂಕು ಶಾಸನ ೩೫೭). ಈ ರಾಜೇಂದ್ರಚೋಡನು ಕ್ರಿ. ಶ. ೧೧೬೧ ರಲ್ಲಿಯೂ ರಾಜ್ಯವಾಳಿದಂತೆ ತಿಳಿಯಬರುತ್ತವೆ. (SII X 148) ಗೊಂಕ II ಕ್ರಿ. ಶ. I153-57-Cholas Vol. No. II Part II ಪುಟ 626 Note 18) ಇವರಿಂದ ಕ್ರಿ. ಶ. ೧೧೫೭ ರಲ್ಲಿ ಇವನ ಅಂತ್ಯ ಎಂದೂ ಆ ಸುಮಾರಿನಲ್ಲಿಯೇ ಐಹೊಳೆ ವೀರಗಂಧರ್ವನ ಮಗಳು ಬಲಿದೇವಿಯ ಮದುವೆಯಾಗಿರಬೇಕೆಂದೂ ತಿಳಿಯಲವಕಾಶವಿದೆ. ಗೋಮುಖಾಸುರನಿಗೆ ಕರೆಬಾಸುರ ಎಂದೂ ಆ ಅಸುರನ ವಧೆಯಿಂದ ಮುಂದೆ ಪಂಚ ಪಂಚಮರು, ಪಂಚಗೌರವರು ಉತ್ಪತ್ತಿಯಾದರೆಂದೂ ವೀರಶೈವ ಗ್ರಂಥಗಳು ಹೇಳುತ್ತವೆ.

## ೩೨) ದೇವಳದೇವಿ

೧ನೆಯ ಜಗದೇಕಮಲ್ಲದೇವನ (೧ನೆಯ ಜಯಸಿಂಹರಾಜನ) ಹೆಂಡತಿ ದೇವಳಾದೇವಿ ಎಂದು ಇದ್ದಳು. ಈಕೆ ಪತಿಯೊಡನೆ ಶ್ರೀಶೈಲಕ್ಕೆ ಬಂದಿದ್ದಳು (೧೦೩೬ ಕ್ರಿ.ಶ.). (South Indian Inscription Vol No. IX Part I No 119) ತ್ರಿಲೋಕ ಪಂಡಿತ ಸಿದ್ದಯ್ಯನಿಗೆ ದಾನ ಮಾಡಿದಳು. ಆಗ ಜಗದೇಕಮಲ್ಲನು ಪೊಟ್ಟಲಕೆರೆ ನೆಲೆವೀಡಿನಲ್ಲಿ ಇದ್ದನು.

## ೩೩) ಮೈಳಲದೇವಿ

ತ್ರೈಲೋಕ್ಯಮಲ್ಲನೂ ಅವನ ಹೆಂಡತಿ ಮೈಳಲದೇವಿಯೂ ಶ್ರೀಶೈಲದಲ್ಲಿ ಗಂಗಾರಾಶಿ ಭಟ್ಟಾರಕರ ಶಿಷ್ಯ ಸುರೇಶ್ವರ ಪಂಡಿತ ದೇವರಿಗೆ ವತ್ತಿ ಕೊಟ್ಟಿದ್ದಾರೆ. ಸರ್ವನಮಸ್ಯವಾಗಿ ಸಿರಿಪುರ, ಕುರಕುಂದೆ, ದುದ್ದಿಯಾಲ ಇವುಗಳನ್ನು ಕೊಟ್ಟಿದ್ದಾರೆ ಕ್ರಿ. ಶ. ೧೦೫೭. (South Indian Inscription Vol No. IX Part I No. 12 )

## ೩೪) ಜಗದೇಕಮಲ್ಲ (೨ನೆಯ ಜಯಸಿಂಹ)

ಇವನು ಚಾಲುಕ್ಯ ದೊರೆ; ಕ್ರಿ. ಶ. ೧೧೩೮ ರಿಂದ ೧೧೫೧ರ ವರೆವಿಗೆ ಆಳಿದವನು. ಇವನ ಹೆಂಡತಿ ಸುಗ್ಗಲೆ ಎಂತ ಇದ್ದಳು. ಪಂಪಾದೇವಿ ಎಂದು ಒಂದು ಶಾಸನದಲ್ಲಿ ಹೇಳಿದೆ. ಈ ಸುಗ್ಗಲೆ ಎಂಬುದು ಸುಗ್ರೀವ ಎಂಬ ಪದದಿಂದ ಹುಟ್ಟಿದ ಶಬ್ದ. ಸುಗ್ರೀವನು ಹಂಪೆಯಲ್ಲಿ ಇದ್ದವನು. ಆದ್ದರಿಂದ ಸುಗ್ಗಲೆ ಎಂಬುವನ್ನು ಸಂಸ್ಕೃತದಲ್ಲಿ ಪಂಪಾದೇವಿ ಎಂದು ಹೇಳಿರಬೇಕು. ಇವನು ಪೊಟ್ಟಲಕೆರೆಯಲ್ಲಿ ಇದ್ದುದಕ್ಕೆ ಶಾಸನಗಳಿವೆ. ದೇವರ ದಾಸಿಮಯ್ಯನು ಸುಗ್ಗಲೆಯ ಭಕ್ತಿಯಲ್ಲಿ ಇದ್ದುದು ಈ

ಸುಗ್ಗಲೆಯು ಕಾಲದಲ್ಲಿ. ಡಾ. ಫ್ಲೀಟ್ ಅವರು ೧ನೆಯ ಜಯಸಿಂಹನ ಹೆಂಡತಿ ಸುಗ್ಗಲೆ ಎಂದು ಬರೆಯುತ್ತಾರೆ. ಅದಕ್ಕೆ ಆಧಾರವಿಲ್ಲ. ಅವನ ಹೆಂಡತಿ ದೇವಳದೇವಿ ಎಂಬು ದನ್ನು ಹಿಂದೆ ತೋರಿಸಿ ಇದೆ. ಈ ಎರಡನೆಯ ಜಯಸಿಂಹನ ಹೆಂಡತಿ ಮುಂತಾದ ವಿಷಯವೂ, ಚಿಮ್ಮಣ ದಂಡನಾಥನ ವಿಷಯವೂ (ಜೈನ) ಸೊರಬ ತಾಲ್ಲೂಕು (E.P. Car VIII) ೧೨೫ನೆಯ ಶಾಸನ (ಕ್ರಿ. ಶ. ೧೧೪೩) ಮತ್ತು ೮೬ನೆಯ ಶಾಸನ(ಕ್ರಿ. ಶ. ೧೧೫೦)ಗಳಲ್ಲಿ ಹೇಳಲ್ಪಟ್ಟಿದೆ.

### ೩೫) ಭಾಸ್ಕರರಾಯ (ಭಾಸ್ಕರ ಚವುೂಪತಿ)

ವೀರಶೈವಾಚಾರ್ಯರಾದ ಶ್ರೀ ಏಕೋರಾಮರು ಭಾಸ್ಕರನ ಸಭೆಯಲ್ಲಿ 'ವ್ಯಾಸ' ಎಂಬುವನೊಡನೆ ವಾದಿಸಿದರೆಂದೂ ಗ್ರಂಥಗಳು ಹೇಳುತ್ತವೆ. ಈ ರಾಜನ ಕಾಲ ಕ್ರಿ. ಶ. ೧೨ನೆಯ ಶತಮಾನ.

### ೩೬) ಚಾಲುಕ್ಯ ಪುಲಿಕೇಶಿ II

ಉತ್ತರ ಭಾರತದ ಶ್ರೀ ಹರ್ಷನೊಡನೆ ಯುದ್ಧ ಮಾಡಿದ ಚಾಲುಕ್ಯರ ಪುಲಿಕೇಶಿ ಎಂಬ ರಾಜನ ಪಟ್ಟವು ಕ್ರಿ. ಶ. ೬೧೦ ರಲ್ಲಿ ಆಗಿದೆ. ಇವನು ಆ ವರ್ಷದಿಂದ ತನ್ನ ಶಕೆಯನ್ನು ಆರಂಭಿಸಿರಬೇಕು. ಶ್ರೀಪತಿ ಪಂಡಿತನ ಶಾಸನದ ವಿಷಯದಲ್ಲಿ (ಬೇಜವಾಡ ೯೦) ಕಂಡ ಸಂಖ್ಯೆಯು ಈ ಶಕೆಯದೇ ಆಗಿರಬೇಕು. ಶಾಲಿವಾಹನ ಶಕೆ ಅಥವಾ ವಿಕ್ರಮ ಶಕೆ ಎಂದು ಆ ಶಾಸನದಲ್ಲಿ ಇಲ್ಲ.

### ೩೭) ಶಿವಲೆಂಕ ಮಂಚಣ್ಣ

ಶ್ರೀಪತಿ ಪಂಡಿತ, ಆಚಾರ್ಯರಾದ ಪಂಡಿತಾರಾಧ್ಯರ ಸಮಕಾಲೀನನು ಇವನು ಕಾಶಿಗೆ ಹೋಗಿ ಅಲ್ಲಿನ ಪಂಡಿತರಲ್ಲಿ ವಾದಿಸಿ ವೀರಶೈವ ಮತದ ಶ್ರೇಷ್ಠತೆಯನ್ನು ತೋರಿಸಿದನು. ಶಂಭು ಎಂಬುದಾಗಿ ಹೆಸರಿನ ಕಡೆಯ ಭಾಗದಲ್ಲಿ ಉಪಪದವುಳ್ಳವರ ಗುಂಪಿನಲ್ಲಿ ಪ್ರಸಿದ್ಧನಾದ ಸೋಮಶಂಭುವಿನ ಮಗನ ಮಗನಾದ ಇವನು ವಚನ ಗಳನ್ನು ಬರೆದಿದ್ದಾನೆ. ಇವನನ್ನೇ ಶ್ರೀಶೈಲದ ಪಂಡಿತಾರಾಧ್ಯನೆಂದು ಕೆಲವರು ಗ್ರಂಥ ಬರೆದಿದ್ದಾರೆ.

### ೩೮) ಪಂಚಾಚಾರ್ಯರು

ಒಂದು ಪ್ರತಿ ಕೋರಿ ಕಾಗದದ್ದು ಇದ್ದು ಇದರಲ್ಲಿ ಪಂಚಾಚಾರ್ಯರ ನಿರ್ಣಯ ಎಂದು ಬರೆದಿದ್ದರ ಕೆಳಗೆ "ಕೊಲ್ಲಿಪಾಕಿ ಸೋಮೇಶ್ವರ ಲಿಂಗದ ಗರ್ಭದಲ್ಲಿ ರೇವಣ ಸಿದ್ಧೇಶ್ವರನು ಹುಟ್ಟಿದನು. ಸೊನ್ನಲಾಪುರ ಸಿದ್ಧರಾಮಲಿಂಗ ಗರ್ಭದಲ್ಲಿ ಮರುಳ ಸಿದ್ಧೇಶ್ವರನು ಪುಟ್ಟಿದನು. ರಾಮಲಿಂಗ ಗರ್ಭದಲ್ಲಿ ಏಕೋರಾಮದೇವರು ಹುಟ್ಟಿ ದರು. ಅಮರಗುಂಡದ ಮಲ್ಲಿಕಾರ್ಜುನಲಿಂಗ ಗರ್ಭದಲ್ಲಿ ಪಂಡಿತಾರಾಧ್ಯರು ಪುಟ್ಟಿದರು. ರೇವಣಸಿದ್ಧೇಶ್ವರರು ಪ್ರಥಮಾಚಾರ್ಯರು ಘನಲಿಂಗ ಚರಮೂರ್ತಿ" ಈ ರೀತಿ ಇದೆ.

ಚನ್ನಬಸವಣ್ಣನವರು ಉಳುವೆಗೆ ಹೋಗುವಾಗ ಮರುಳ ಶಂಕರದೇವರು ಕಲ್ಯಾಣದಲ್ಲಿ ಇದ್ದಾರೆ. ಪಂಡಿತಾರಾಧ್ಯರ ಶಿಷ್ಯರು ಆರಾಧ್ಯದೇವರು ಶ್ರೀಶೈಲಕ್ಕೆ ಹೋಗಿದ್ದ ಪ್ರಸ್ತಾಪವಿದೆ. (ಕಾಲಜ್ಞಾನ ವಚನಗಳು ಎಂಬ ಶ್ರೀ ಪಿ. ಜಿ. ಹಳಕಟ್ಟಿಯವರು ಪ್ರಕಟಿಸಿದ ಪುಸ್ತಕದಲ್ಲಿ ಚನ್ನಬಸವರಾಜದೇವರು ಉಳುವೆಗೆ ಚಿತ್ತೈಸಿದ ಪ್ರಸ್ತಾವದ ವಚನ.)

ರುದ್ರಮುನಿಯು ಶ್ರೀಶೈಲದಲ್ಲಿ ಚನ್ನಬಸವಣ್ಣನವರ ತತ್ತ್ವಪ್ರಚಾರಕ್ಕೆ ಬಂದುದನ್ನು ರುದ್ರಮುನಿದೇವರ ಕಾಲಜ್ಞಾನ ಹೇಳುತ್ತದೆ. ಇವರ ಕಾಲ ಕ್ರಿ. ಶ. ೧೨೦೨ ನೆಯ ಇಸ್ವಿ.

ಇನ್ನೊಂದು ಕಾಲಜ್ಞಾನದಲ್ಲಿ 'ನಾಲ್ಕು ಮಠಗಳ ಆಚಾರ್ಯರು' ಎಂತ ನಮೂದಿಸಿದೆ. (ಒಂದು ಬರೆಹದ ಪ್ರತಿ ಮಠಸ್ಥಲದಲ್ಲಿ ಚಂಪಾರಾಮ, ಕಾಶಿ, ಉಜ್ಜಯಿನಿ, ಕೊಲ್ಲಿಪಾಕ ಇವರು ನಾಲ್ವರು ಗುರುಕಲಶಾಧಿಕಾರಿಗಳು. ನಿರಧಿಕರಣ ದೀಕ್ಷೆ ಮಾಡುವಾಗ ಇವರೇ ಋತ್ವಿಜರು ಎಂದು ಹೇಳಿದೆ.) ಅದೇ ಸಂಧಿ ೭ ರಲ್ಲಿ ಮರುಳಸಿದ್ಧೇಶ್ವರನಿಗೆ ಸಿದ್ಧವಟಿ ಮಂದಿರದ ಸಿದ್ಧೇಶ್ವರನಲ್ಲಿ ಐಕ್ಯ. ರೇವಣಾಚಾರ್ಯರಿಗೆ ಕೊಲ್ಲಿಪಾಕಿಯಲ್ಲಿ, ಏಕೋರಾಮಾರಾಧ್ಯರಿಗೆ ದ್ರಾಕ್ಷಾಪುರ ರಾಮನಾಥನಲ್ಲಿ, ಪಂಡಿತಾರಾಧ್ಯನಿದಿರೊಳ್ ಭದ್ರವಾಗಿರುವ ಅಮರಗುಂಡದ ಮಲ್ಲಿಕಾರ್ಜುನ ಕುಕ್ಷಿಯೊಳ್, ವಿಶ್ವನಾಥಾರ್ಯರ ಗ್ರದನತಪ್ರವ(?) ನೆನಿಪ್ಪ ವಿಶ್ವೇಶ್ವರನಲ್ಲಿ ಐಕ್ಯ ಎಂದು ಬರೆದಿದೆ. ಚತುರಾಚಾರ್ಯರ ಪುರಾಣ VIನೆಯ ಕಾಂಡ ೧ನೆಯ ಸಂಧಿಯಲ್ಲಿ ಘನಲಿಂಗ, ಅತೀತ, ಸುವಿಭಕ್ತ, ಮಹಂತ-ಇವೇ ಆಚಾರ್ಯರ ನಾಲ್ಕು ಭೇದವೆಂದು ಹೇಳಿದೆ.

Annals of the Bhandarkar Oriental Research Institute Vol. XIX Part II ನಲ್ಲಿ "೫ನೆಯದಾದ ಕಾಶಿ ವಿಶ್ವಾರಾಧ್ಯನ ಮಠವು ೧೩ನೆಯ ಶತಮಾನದಿಂದ ಬಂದಿದೆ. ಮಾರ್ಕಾಪುರದ ಶಾಸನ(ಮಾರ್ಚ ೨೫-೧೨೬೧ನೆಯ ಕ್ರಿ.ಶ.)ದಲ್ಲಿ ನಮೂದಾದ ಗೋಳಕಿ ಮಠದ ವಿಶ್ವೇಶ್ವರ ಶಂಭುವೇ ಬಹುಶಃ ವಿಶ್ವಾರಾಧ್ಯನಾಗಿರಬೇಕು. ಈ ವಿಶ್ವೇಶ್ವರನು ಕಾಕತೀಯ ಗಣಪತಿ, ರುದ್ರಮಾಂಬಾ, ಪ್ರತಾಪರುದ್ರ II ಇವನ ಸಮಕಾಲೀನನು. ಎಲ್ಲಾ ಐದೂ ಮಠಗಳು ಒಂದೇ ಕಾಲದಲ್ಲಿ ಸ್ಥಾಪಿಸಲ್ಪಟ್ಟುವೆಂದು ಹೇಳುವುದು ಚಾರಿತ್ರಿಕವಲ್ಲ" ಎಂಬ ಅಭಿಪ್ರಾಯವಿದೆ. ಶ್ರೀ ಎಸ್. ಶ್ರೀಕಂಠಶಾಸ್ತ್ರಿಗಳು ಎಂ.ಎ. ಅವರು ಬರೆದಿರುತ್ತಾರೆ. ಇದರಿಂದ ಕ್ರಿ. ಶ. ೧೩ನೆಯ ಶತಮಾನದಲ್ಲಿ ಕಾಶಿಯ ಮಠಸ್ಥಾಪನೆಯೆಂದಾಗುತ್ತದೆ. ಆದರೆ ಹೂಲಿಯಲ್ಲಿ ಕ್ರಿ. ಶ. ೧೧೬೦ರ ಸುಮಾರಿನಲ್ಲಿ ಇದ್ದ ಜ್ಞಾನಶಕ್ತಿಮುನಿಯೇ ಸಿದ್ಧನಂದೀಶ್ವರ (ಸಿದ್ಧನಂಜೇಶ) ಎಂಬ ಮೂರನೆಯ ಗುರುವೆಂದು ಈಗ ಗುರುತಿಸಲ್ಪಟ್ಟಿರುವುದರಿಂದ ಮೇಲಿನದು ಚಾರಿತ್ರಿಕ ಅಂಶವಾಗಿ ನಿಲ್ಲಲಾರದು.

೩೮) **ಕುಲೋತ್ತುಂಗ ಕದಂಬ (ಕದಂಬ ಚೋಳ?)**

ಇವನು ರಾಜಾಧಿರಾಜ II ಇವನ ಕಾಲದಲ್ಲಿ ಇದ್ದವನು. Epigraphia Indica IX, ಪುಟ ೨೧೧ರ ಪ್ರಕಾರ ಕ್ರಿ. ಶ. ೧೧೬೨ರ ಡಿಸೆಂಬರ್‌ದ ಶಾಸನವಿದೆ.

೩೯) **ವೆಲನಾಡ ಚೋಳ** (Velanadu Chief)

ಈ ರಾಜನ ಸಭೆಯಲ್ಲಿ ಪಂಡಿತಾರಾಧ್ಯರು ವಾದ ಮಾಡಿದರೆಂದು ಗ್ರಂಥಗಳ ಹೇಳಿಕೆ. (Velenadu chief Cholas Vol II Part II 46, 571, 63, 72, 83, ·23.)

೪೦) **ಸೋಮೇಶ್ವರ ಪಂಡಿತ (ಸೋಮೇಶ್ವರ ಮುನಿಪಣ್ಣ)**

ಈತನು ಕುಕನೂರಿನಲ್ಲಿ ಕಾಳಿಕಾ ದೇವಾಲಯದ ಸ್ಥಾನಾಚಾರ್ಯನಾಗಿದ್ದನು. ಸೂಡಿ ನಗರದಾಚಾರ್ಯ ಎಂದೂ ಕರೆಯಲ್ಪಟ್ಟಿದ್ದಾನೆ. 'ನಿರೀಶ್ವರ ಸಾಂಖ್ಯಮಂ ನಿರ್ಮೂಲಮಂ ಮಾಡಿದಂ' 'ನವಲಿಂಗ ಮಹಿಮಾನ್ವಿತಂ' ಎಂದು ಹೇಳಲ್ಪಟ್ಟಿದ್ದಾನೆ. ಈತನಿಗೆ ಈಶ್ವರಸೆಟ್ಟಿ ದಾನವನ್ನು ಕೊಡುತ್ತಾನೆ. (ಕ್ರಿ. ಶ. ೧೧೫೦ ಕುಕನೂರು ಶಾಸನ) ಕುಕನೂರಿಗೆ ಆಗ ಕುಂತಳನಗರ ಎಂದು ಹೆಸರಿದ್ದಿತಾಗಿ ತಿಳಿದುಬರುತ್ತದೆ. (ನಿಜಾಮು ಇಲಾಖಾ ಶಾಸನ ನಂ. ೫೨.)

ಇಲ್ಲಿ ಮುನಿಪರಿಗೂ 'ಅಣ್ಣ' ಎಂಬ ಪದಪ್ರಯೋಗವಿದೆ. ಈ ಸೋಮೇಶ್ವರನ ಶಿಷ್ಯ ಮುನಿವಿಗ್ರಹ. ಇವನ ಶಿಷ್ಯ ಕಳೇಶ್ವರ. ಈ ಕಳೇಶ್ವರನು 'ರಾಜರಾಜಗುರು'. 'ಸಿದ್ಧಾಂತಿ' ಎಂದು ಹೇಳಲ್ಪಟ್ಟಿದ್ದಾನೆ. 'ಶಿವಾಗಮಗಳನೋದಿದವನು' 'ಶಿವಯೋಗಿ ಜನಸ್ತುತನಾಗಂ' 'ಶೈವ ಸಿದ್ಧಾಂತಮನಪ್ಪುತೆಯ್ದುಂ' ಎಂದೂ ಸ್ತುತಿಯಿದೆ. ನಿಂದಾನ್ವಯಕ್ಕೆ (ಸಿಂದ ವಂಶದ ರಾಜರಿಗೆ) ಶಿಕ್ಷಾಚಾರ್ಯ, ದೀಕ್ಷಾಚಾರ್ಯನಾಗಿದ್ದನು.

೪೧) **ಜ್ಞಾನಶಕ್ತಿ ಪಂಡಿತ**

ಪೂವಲ್ಲಿ(ಹೂಲಿ)ಯ ಚರಪಟ್ಟದಲ್ಲಿದ್ದವನು. (ಶಾ. ಶಕ ೧೦೬೦–೧೦೭೬, ಕ್ರಿ. ಶ. ೧೧೦೬–೧೧೬೪) ಇವರ ಕಾಲದಲ್ಲಿ ದಾಸಿರಾಜನು ಕಲಚುರ್ಯರ ಪರವಾಗಿ ಪೂವಲ್ಲಿಯಲ್ಲಿ ಅಧಿಕಾರಿಯಾಗಿದ್ದನು. (ಆಗ ಹೂಲಿ ಮಠವು ವೀರಶೈವಕ್ಕೆ ತಿರುಗಿದಂತೆ ತಿಳಿದುಬರುತ್ತದೆ.) ಹೂಲಿಯಲ್ಲಿನ ಜ್ಞಾನಶಕ್ತಿಮುನಿಯೇ ಸಿದ್ಧನಂದೀಶ್ವರ-(ಸಿದ್ಧನಂಜ) ವಿಷವನುಂಡನೆಂದೂ, ಇವನೇ ಸತ್ಯ ಶಿವಯೋಗಿಯೆಂದೂ ಹೂಲಿಯವರು ಬರೆಯಿಸಿದ ಚರಿತ್ರೆಯಿಂದ ತಿಳಿದುಬರುತ್ತದೆ. ಕಾಶಿ ಪೀಠದ ಮೂರನೆಯವರೇ ಇವರಾಗುತ್ತಾರೆ. (ಗುರುರಾಜ ಚರಿತ್ರೆ ನೋಡಿ) ಈ ದಾಸಿರಾಜನೇ ರುದ್ರಮುನಿಯನ್ನು ಹೊಗಳಿ ಶಾಸನ ಬರೆಯಿಸಿದನು.

೪೨) **ಜಡೆಮುನಿ**

ಹೊಸಕೋಟೆ ತಾಲೂಕು (EP Car IX ಬೆಂಗಳೂರು ಡಿಸ್ಟ್ರಿಕ್ಟ್) ೧೨೩ನೆಯ ಶಾಸನವಲ್ಲಿ "ಗುಬ್ಬಿ ಹೋಬಳಿ ಬಯಿರತ್ತಿ ಗ್ರಾಮಕ್ಕೆ ಉತ್ತರ ಜಡೆಮುನಿಯಪ್ಪನ

ಬಂಡೆಯ ಮೇಲೆ" ಎಂಬ ಶಿರೋಲೇಖವಿದೆ. ಈ ಶಾಸನದಲ್ಲಿ ಶ್ರೀ ರೇವಣರ ಹೆಸರಿದೆ. ರೇವಣಸಿದ್ಧೇಶ್ವರ ಬೆಟ್ಟ (ಬೆಂಗಳೂರು ಡಿಸ್ಟ್ರಿಕ್ಟ್-ರಾಮನಗರ ರೈಲ್ವೆ ನಿಲ್ದಾಣಕ್ಕೆ ೬-೭ ಮೈಲು ದೂರದ ಅವ್ವೇರಹಳ್ಳಿಯಲ್ಲಿರುವುದು). ಇದರ ಸಮೀಪದ ಒಂದು ಗುಡ್ಡದಲ್ಲಿ ಈ ಜಡೆಮುನಿಯ ಒಂದು ವಿಗ್ರಹವು ರೇವಣಸಿದ್ಧ ದೇವಾಲಯದ ಮುಂದುಗಡೆ ಇದೆ. ರೇವಣಸಿದ್ಧರನ್ನಾಶ್ರಯಿಸಿದ ಅಗಸ್ತ್ಯನಿವನೇ ಎಂದು ಅಲ್ಲಿನ ವೃದ್ಧರ ಹೇಳಿಕೆ. ರೇಣುಕ ವಿಜಯ ಕನ್ನಡ ಚಂಪೂ ಗ್ರಂಥ (ಇನ್ನೂ ಅಚ್ಚಾಗಿಲ್ಲ)–ಇದರಿಂದ ನೆಲಮನೆ-ಮೇಲೆ ಕಂಡ ಅವ್ವೇರಹಳ್ಳಿ ಸಮೀಪದಲ್ಲಿ ಇದೆ. ಇಲ್ಲಿ ರೇವಣರು ಅಗಸ್ತ್ಯರನ್ನು ಕಂಡಂತೆ ಗೊತ್ತಾಗುತ್ತದೆ.

೪೪) **ಮುಸಕುಂದಮುನಿ**

ಮೇಲೆ ಹೇಳಿದ ಜಡೆಮುನಿ ಬಂಡೆಯ ಮೇಲೆ "ಮುಸಕುಂದಮುನಿಯ ಪಿತಾಮಹ ರೇವಣಸಿದ್ಧ" ಎಂದಿದೆ. ಮುಸಕುಂದನು ಕೊಲ್ಲಿಪಾಕಿಯಲ್ಲಿ ಇಂದ್ರನಿಗೆ ಸಹಾಯ ಮಾಡಿದನು. (Ancient India Cholas Page 91) ಈ ಮುಸಕುಂದನೇ ಬಂಡೆಯ ಮೇಲಿನ ಲೇಖದ ಮುಸಕುಂದನಾಗಿರಬಹುದೇ ?

೪೫) **ಅಗಸ್ತ್ಯ (ಅಗಸ್ತಿ ಜೀಯರ್)**

"ಪೊಸಮುಟದ ಚೋಳ ಪಂಡಿತರ ಶಿಷ್ಯ ರಗಸ್ತಿ ಜೀಯರ ಕಾಲಂಕರ್ಚಿ" ಎಂದು ಕುಕನೂರು ಶಾಸನದಲ್ಲಿ ಇದೆ. (ನಿಜಾಮ ಇಲಾಖಾ ಶಾಸನ ನಂ. ೫೧, ಕ್ರಿ.ಶ. ೧೦೦೫)

೪೬) **ದಾಸಿರಾಜ**

"ಹರಿದೇವಯ್ಯ ದಂಡನಾಯಕರ ಮಗ ರಾಜಾಧ್ಯಕ್ಷ ಸುಂಕವೆರ್ಗಡೆ ದಾಸಿಮಯ್ಯ ನಾಯಕ" ಎಂದು ಹೇಳಲ್ಪಟ್ಟಿದ್ದಾನೆ. (ಬಿಜ್ಜಳದೇವ ಭುಜಬಲಮಲ್ಲದೇವ ವರ್ಷದ ೧೧ನೆಯ ಪಾರ್ಥಿವ–ಕ್ರಿ. ಶ. ೧೧೬೬) ಇವನು ರುದ್ರಶಕ್ತಿ ಮುನಿಪನಿಗೆ (ರುದ್ರ ಮುನಿಗೆ) ದತ್ತಿ ಕೊಡುತ್ತಾನೆ. "ಕೊಟ್ಟನು ದಾರತೆಯಿಂ ದಾಸಿರಾಜನೂರ್ಜಿತತೇಜಂ" ಎಂದು ಶಾಸನ. (Mss of the nothern Karnataka & Kolhapur State By K. G. Kundanagar)

೪೭) **ಸುಂದರಚೋಳ**

ರಾಜಕೇಸರಿವರ್ಮ ಸುಂದರಚೋಳ ಪರಾಂತಕ II ಮತ್ತು

೪೮) **ವಲ್ಲಭಚೋಳ**

ಇಬ್ಬರಿಗೂ ಯುದ್ಧ. (ಮಹಾವಂಶ ಅಧ್ಯಾಯ IV)

೪೯) **ರಾಜಾಧಿರಾಜ** II (ಚೋಳ)

ಇವನ ರಾಜ್ಯ ಪಟ್ಟವು ಕ್ರಿ. ಶ. ೧೧೬೩ನೆಯ ಫೆಬ್ರುವರಿ ೨೫ ಮತ್ತು ಮಾರ್ಚ್ ೨೦ರ ನಡುವೆ ಆಗಿದೆ. (Cholas Vol II Part II ಪುಟ ೬೫೮) ಇವನು ರಾಜ ರಾಜ II ಇವನ ತರುವಾಯ ಆಳಿದವನು.

೫೦) **ವಿಕ್ರಮ ಚೋಳನ ಮಗ ರಾಜರಾಜ II**

(ಕುಂಭಕೋಣ ತಾ. ೧೫೬ನೆಯ ಶಾಸನದ ಪ್ರಕಾರ ಕ್ರಿ. ಶ. ೧೧೪೬–೧೧೭೮) ವಿಕ್ರಮನ ಸೊಸೆಯು ಮಗಳು ಸುಂದರೀದೇವಿಯನ್ನು ಶ್ರೀ ರೇವಣರಿಗೆ ಮದುವೆ ಮಾಡಿದರೆಂದು ರೇವಣಸಿದ್ಧೇಶ್ವರ ಪುರಾಣದ ಹೇಳಿಕೆ. ವಿಕ್ರಮಚೋಳನ ಮಗ ರಾಜ ರಾಜ II ಎಂದು ಇತಿಹಾಸಕಾರರ ಹೇಳಿಕೆ. (Raja raja II Probably relates to Vıkrama Chola as his Son M.E.A. 1913 August 2, Page 107, Para 36) ಇವನು ಕ್ರಿ. ಶ. ೧೧೪೬ ರಿಂದ ಆಳಿದ್ದಾನೆ. ಮೇಲೆ ಕಂಡಂತೆ ರಾಜಾಧಿರಾಜ II ಎಂಬುವನಿಗೆ ಕ್ರಿ. ಶ. ೧೧೬೩ ರಲ್ಲಿ ಪಟ್ಟವನ್ನು ಕಟ್ಟಿದರೂ ಇವನು ತನ್ನ ೩೭ನೆಯ ವರ್ಷದ(ಕ್ರಿ. ಶ. ೧೧೮೩)ದಲ್ಲಿ ಬರೆಯಿಸಿದ್ದಾನೆ. (ನೆಲ್ಲೂರು ಡಿಸ್ಟ್ರಿಕ್ಟ್ ನೆಲ್ಲೂರು ತಾಲೂಕು-೫೦೨) (ಮೊದಲು ಜೈನ ದೇವಾಲಯವಾಗಿದ್ದುದು ಆಗ ಕರಿಕಾಲ ಚೋಳ ದೇವಾಲಯವಾಯಿತು, ಅಲ್ಲಿ ಶಾಸನವಿದೆ;) Anciant India Cholas Page 124 ಕುಲೋತ್ತುಂಗ ರಾಜೇಂದ್ರನು ಮುಂದಿನ ರಾಜನಾಗಬೇಕಾಗಿತ್ತು ಎಂದು ಹೇಳಿ ಅದೇ ಪುಸ್ತಕದ ಪುಟ ೧೫೩ ರಲ್ಲಿ ಕುಲೋತ್ತುಂಗ ರಾಜಕೇಸರಿವರ್ಮ ತ್ರಿಭುವನ ಚಕ್ರವರ್ತಿ ವಿಕ್ರಮನ ಮಗ ಕುಲೋತ್ತುಂಗ II ಈತನು ತನ್ನ ತಂದೆಯ ರಾಜ್ಯವನ್ನು ಹೊಂದಿದ್ದನು. ಅವನ ಕೊನೆಯ ವರ್ಷ ೧೪ನೆಯದಾದರೂ ರಾಜ್ಯಾಧಿಕಾರ ವಹಿಸಿದ ಸರಿಯಾದ ದಿನ ಗೊತ್ತಾಗಿಲ್ಲ ಎಂದು ಹೇಳಲ್ಪಟ್ಟಿದೆ. ಕುಲೋತ್ತುಂಗ ಎಂಬ ಹೆಸರಿನಿಂದ ಯುವರಾಜನು ರಾಜ್ಯಭಾರ ಮಾಡುವ ಪದ್ಧತಿಯಿತ್ತು ಎಂದು ತಿಳಿಯುಬರುವುದರಿಂದ ಈ ಕುಲೋತ್ತುಂಗ ರಾಜೇಂದ್ರ ಎಂಬುವನೇ ಮುಂದೆ ರಾಜರಾಜ II ಆಗಿ ಕ್ರಿ. ಶ. ೧೧೪೬ ರಿಂದ ಆಳಿದ್ದಾನೆ. ಆದುದರಿಂದ ಇವನಿಗೆ ರಾಜೇಂದ್ರಚೋಳ ಎಂದು ಕರೆಯುವ ರೂಢಿ. ಮೇಲೆ ಕಂಡ ದೇವಾಲಯದ ಹೆಸರಿನ ದೆಸೆಯಿಂದ ಇವನಿಗೆ 'ಕರಿಕಾಲಚೋಳ' ಎಂಬ ಹೆಸರೂ ಇರಬೇಕೆಂದು ತಿಳಿಯಲಿಕ್ಕೆ ಬರುತ್ತದೆ.

೫೧) **ಕುಮಾರಪಾಲ (ಘಾಲಗುರ್ಜರರಾಯ)**

ಪಶ್ಚಿಮ ಚಾಲುಕ್ಯ ರಾಜರಲ್ಲಿಯ ಕುಮಾರಪಾಲನೇ ಘಾಲಗುರ್ಜರರಾಯ ಎಂದು ಗ್ರಂಥಗಳಲ್ಲಿ ಹೇಳಲ್ಪಟ್ಟಿದ್ದಾರೆ. (ಇವನ ಕಾಲ ಕ್ರಿ.ಶ. ೧೧೪೩–೧೧೭೩) ಈ ರಾಜನ ಕಾಲದಲ್ಲಿಯೇ ಪತಿಪಂಡಿತನು ಬನ್ನಿಯ ಮರದ ಪವಾಡವನ್ನು ಮಾಡಿದುದು.

೫೨) **ಕಾಡವ ಪಲ್ಲವರಾಯ**

ಈತನ ಕಾಲದಲ್ಲಿ ಅನಿಮಿಷಾಚಾರ್ಯರೆಂಬುವರನ್ನು ಮುಖ್ಯ ಗುರುಗಳನ್ನಾಗಿ, (ಕಾಶಿ ಪೀಠವನ್ನಾಗಿ) ಏರ್ಪಡಿಸಿಕೊಂಡು ಉಳಿದ ಆಚಾರ್ಯರು ಕೆಲಸ ಮಾಡಿದಂತೆ ಪಾಕುಲೋತ್ತರ ಅಥವಾ ನೀಲಕಂಠ ವಿಜಯ ಪುರಾಣವು ಹೇಳುತ್ತದೆ ಮತ್ತು ಈ ರೀತಿ ಹೇಳುವ 'ಶೈವ ರತ್ನಾಕರ' ಎಂಬ ಗ್ರಂಥವೂ ಇದೆ. ಈತನು ರಾಜರಾಜ II ಎಂಬುವನ ಆಶ್ರಯದಲ್ಲಿ (Royal Secretary) ಆತನ ೨೭ನೆಯ ಆಳ್ವಿಕೆಯ

ವರ್ಷ (ಕ್ರಿ. ಶ. ೧೧೭೨ MER 2nd August 1913) ದಲ್ಲಿ ಇದ್ದನು ಮತ್ತು (No. 530 of Appendix) ಇದಲ್ಲದೆ ಈತನು ಕೊಂಡಮಂಡಲಗೊಂಡ ಪಲ್ಲ ವಾಂಡಗು ಯಾನೆ ಕಾಡವರಾಯ ಎಂಬುವರ ಮಗ. ಕ್ರಿ. ಶ. ೧೧೮೬ ರಲ್ಲಿಯೂ ಇದ್ದಾನೆ. (Cholas Vol II Part II Page 769) ಈ ಕಾಡವರಾಯರ ವಂಶದ ನಾಲ್ಕು ಸಂತತಿಯವರಾದ 'ವೀರಶೇಖರ' ಎಂಬ ಕೊನೆಯ ಪದದೊಡನೆ ಸೇರಿದ ಹೆಸ ರುಳ್ಳವರನ್ನು ಹೊಗಳುವ ತಮಿಳು ಭಾಷೆಯ ಪ್ರಶಸ್ತಿಯು ತಿರುವಣ್ಣೈ ನಲ್ಲೂರಿನ ಶಾಸನದಲ್ಲಿ ಇದೆ. (74 of 1918-462 of 1921 ARE)

೫೩) **ಪಲ್ಲವ ಮಲ್ಲಿದೇವ**

ಈತನು ಶ್ರೀಮನ್ಮಹಾಮಂಡಲೇಶ್ವರ ಪರಮೇಶ್ವರ ಪರಮವಂಶೋದ್ಭವ ಪಲ್ಲವ ಕುಲತಿಲಕ ಕಾಂಚೀಪುರವರಾಧೀಶ್ವರ ಮುಕ್ಕಂಟ ಕಾಡುಪೆಟ್ಟ ವಂಶಾವತಾರ (ವೃಷಭಲಾಂಛನ) ಎಂಬ ಬಿರುದುಗಳಿಂದ ಕೂಡಿಕೊಂಡಿದ್ದಾನೆ. (ಕ್ರಿ. ಶ. ೧೨೧೮-೧೯ Nellore Inscriptions Part I Darsi-69) ಕಂಚಿಯ ಪಲ್ಲವರಾಯನೆಂಬು ವನು ಎಲ್ಲಾ ರಾಜರೂ ಎಲ್ಲಾ ಮತದವರೂ ಐಕ್ಯಮತ್ಯದಿಂದಿರಬೇಕು ಎಂಬ ಅಭಿ ಪ್ರಾಯದಿಂದ ವೀರರಾಜೇಂದ್ರ ಚೋಳನ (Kulottunga III) ಆಶ್ರಯದಲ್ಲಿ ಒಂದು ದೊಡ್ಡ ಸಭೆಯನ್ನು ಕೂಡಿಸಿದ್ದನು. ಅದಕ್ಕೆ ರುದ್ರಮುನಿಯು ಹೋಗಿದ್ದ ನೆಂದು ಊಹೆ ಬರುತ್ತದೆ. ವೀರಶೈವರಲ್ಲಿ ಪ್ರಚಲಿತವಾಗಿರುವ ರುದ್ರಭಾರತ ಎಂಬ ಗ್ರಂಥವು ಆ ಸಭೆಯ ತೀರ್ಮಾನವಾದಮೇಲೆ ಹುಟ್ಟಿದುದು. ಆ ಪಲ್ಲವರಾಯನು ಇವನೋ ಬೇರೊಬ್ಬನೋ ಶೋಧಿಸಬೇಕಾಗಿದೆ.

೫೪) **ಕಲಚುರ್ಯರಾಜರ ಗುರುಗಳು ಕಾಳಾಮುಖ ಗುರುಗಳು**

ಕಲಚುರ್ಯರಾಜರ (ಬಿಜ್ಜಳನೇ ಮೊದಲಾದವರ) ಗುರುಗಳು ಕಾಳಾಮುಖ ಗುರು ಗಳೆಂದು ಶಾಸದಿಂದ ಗೊತ್ತಾಗುತ್ತದೆ. ಕುಕನೂರು ಮಾಯಾ ದೇವಾಲಯದಲ್ಲಿ ಚಾಲುಕ್ಯ ವಂಶದ ವಿವರ, ಕಾಳಾಮುಖ ಗುರುಗಳ ವಂಶ, ಕಲಚುರ್ಯರ ವಂಶ–ಇವು ಗಳ ವಿವರವಿರುತ್ತದೆ. (ನಿಜಾಮ ಇಲಾಖಾ ಶಾಸನ ಸಂ. ೫೨)

೫೫) **ವ್ಯಾಸರಾಶಿ ಪಂಡಿತ**

ಕರ್ನೂಲು ಡಿಸ್ಟ್ರಿಕ್ಟ್ ಮಾರ್ಕಾಪುರಂ ತಾಲೂಕು ತ್ರಿಪುರಾಂತಕಂ ಎಂಬೂರಿನಲ್ಲಿ ಆವೂರಿನ ತ್ರಿಪುರಾಂತಕಂ ದೇವಾಲಯ ಸ್ಥಾನಪತಿಯಾಗಿ 'ವ್ಯಾಸರಾಶಿ ಪಂಡಿತ' ಎಂಬು ವನಿದ್ದಾನೆ. (ಕ್ರಿ. ಶ. ೧೦೭೭ South Indian Inscriptions Vol No. X No. 196) ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮದೇವರು ಮುವನೂರು ಭಾಸ್ಕರರಾಯನ ಸಭೆಯಲ್ಲಿ 'ವ್ಯಾಸ' ಎಂಬವನೊಡನೆ ವಾದಿಸಿದರೆಂದು ಗ್ರಂಥಗಳ ಹೇಳಿಕೆ ಸಂಸ್ಕೃತದಲ್ಲಿ ಬಸವ ಪುರಾಣವನ್ನು ಬರೆದ ಕವಿಯು ತಾನು 'ವ್ಯಾಸ'ನೆಂದು ಹೇಳಿಕೊಂಡಿದ್ದಾನೆ. ಆ ಕಾಲದಲ್ಲಿ 'ವ್ಯಾಸ' ಎಂಬ ಹೆಸರಿನವರು ಇದ್ದರೆಂದು

ಯೋಚಿಸಬಹುದಾಗಿದೆ. ಮುದನೂರಿಗೆ ಸ್ವಲ್ಪ ದೂರದಲ್ಲಿಯೇ ತ್ರಿಪುರಾಂತಕಂ ಇರುವುದಾಗಿ ತಿಳಿಯುವುದರಿಂದಲೂ ಇವನು ಸ್ಥಾನಪತಿಯಾಗಿ ವಿದ್ಯಾವಂತನಾದುದ ರಿಂದಲೂ ಇವನನ್ನೇ ವಾದಕ್ಕಾಗಿ ಕರೆದುಕೊಂಡು ಬಂದಿರಬಹುದೆಂದೂ ತರ್ಕಿಸಬಹು ದಾಗಿದೆ. ಏಕೋರಾಮ ತಂದೆಗಳ ಪುರಾಣದಲ್ಲಿ ತಿರುಮಲೆಗೆ ಅಯೋಧ್ಯೆಯಿಂದ ಬಂದ ವ್ಯಾಸನೊಡನೆ ವಾದಿಸಿ ಮೂರುಸಾರೆ ಏಕೋರಾಮರು ಗೆದ್ದರೆಂದಿದೆ.

೫೬) **ಸಾರಂಗಧರ**

ಇವನಿಂದ ಸಾರಂಗಪುರವು ದಾನ ಮಾಡಲ್ಪಟ್ಟಿತು. ಈ ಶಾಸನದಲ್ಲಿ ಕಾಕತೀಯ ಪ್ರೋಲ ಅವನ ಮಗ ಮಹಾದೇವ, ಅವನ ಮಗ ಗಣಪತಿ–ಇವರ ಹೆಸರಿದೆ. (Nellore Ins-Part I Copper Plate 17, A.D.S. 1254)

೫೭) **ದೂರ್ವಾಸ ಮುನೀಂದ್ರನ ವಂಶ ಗಗನ ಶಿವಾಚಾರ್ಯ**

New Imperial Series Vol-L-III. i.e. South Indian Ins Vol. VII No. 314 Page 165.

೫೮) **ದ್ರೋಣ**

ಕುಂಡ್ರೂರಿಪುರ ಶಿವದ್ವಿಜಕುಲ ಕುಂತ್ರೂರ ಪುರಾಧಿಪತಿ ಕಾಮಭೂಪತಿಯ ಮಗ ದ್ರೋಣ. ಇವನ ಮಗ ಮಲ್ಲದೇವ. ಈ ಮಲ್ಲದೇವನು ವಿಕ್ರಮಚೋಡ ದೇವನ ಮಂತ್ರಿ. (South Indian Inss Vol. X No.174 A.D. 1170) ಈ ಕಾಲದಲ್ಲಿ ದ್ರೋಣ ಎಂಬುವರಿದ್ದರು.

೫೯) **ಪಲ್ಲಕೇತ**

ಪಲ್ಲವರಾಜ ಮಹಾಮಂಡಲೇಶ್ವರ ಪಲ್ಲಕೇತನು ಕಾಡುಲೆಟ್ಟ ವಂಶದಲ್ಲಿ ಹುಟ್ಟಿ ದವನು. ವೆಂಗಿವಂಶದ ಚಾಲುಕ್ಯರಾಜನ ಅಧೀನನು. ಇವನ ಶಾಸನದಲ್ಲಿ ಶ್ರೀಪತಿಯ ಪವಾಡವಿದೆ. (Madras Preridency Vol. II Bezwad 90-Ep.Indica 910.)

೬೦) **ನೆಲ್ಲಸಿದ್ಧ** II **(ನೀಲಗಳ ಚಕ್ರವರ್ತಿ)**

'ಕುಲನುಪಾಕುಲು ಮಾಹಾತ್ಮ್ಯಮು' ಎಂಬ ತೆಲುಗು ಗ್ರಂಥದಲ್ಲಿ ನೀಲಗಳ ಚಕ್ರವರ್ತಿಯ ಭಕ್ತಿಯಲ್ಲಿ ಕೊಲ್ಲಿಪಾಕೆಯಲ್ಲಿ ಶ್ರೀ ರೇವಣರು ಇದ್ದರೆಂದು ಹೇಳಲ್ಪ ಟ್ಟಿದೆ. ಈ ನೀಲಗಳನ್ನು ರಾಜ್ಯಭಾರ ಮಾಡಲಿಷ್ಟವಿಲ್ಲದೆ ಬಿಟ್ಟುಕೊಟ್ಟನೆಂದು ಅಲ್ಲಿ ಇದೆ. ಶ್ರೀಶೈಲದಲ್ಲಿ ಧ್ವಜಸ್ತಂಭವನ್ನು ಸ್ಥಾಪಿಸಿದನೆಂದೂ ಇದೆ. ಕೊಲ್ಲಿಪಾಕೆ ಇದ್ದುದು ನೆಲ್ಲೂರು ಪ್ರಾಂತ. ನೆಲ್ಲೂರಿನಲ್ಲಿ ತೆಲುಗು ಚೋಡರು ಪ್ರಸಿದ್ಧರಾಗಿ ಆಳಿ ದ್ದಾರೆ. ಅವರ ಚರಿತ್ರೆಯನ್ನು ನೋಡಿದಲ್ಲಿ ಮನ್ಮಸಿದ್ಧ ಎಂಬ ರಾಜನು ಮೊದ ಲ್ಗೊಂಡು ಹೆಸರಿನ ಮುಂದೆ 'ಸಿದ್ಧ' ಪದವುಳ್ಳ ರಾಜರು ಸಿಕ್ಕುತ್ತಾರೆ. ಅವರಲ್ಲಿ ನಲ್ಲ

ಸಿದ್ಧ II ಎಂಬುವನು ತನಗೆ ರಾಜ್ಯಭಾರವು ಬೇಡವೆಂದು ಬಿಟ್ಟುಬಿಟ್ಟಿದ್ದಾನೆ. ತಮ್ಮನಾದ 'ತಮ್ಮುಸಿದ್ಧ' ಎಂಬುವನಿಗೆ ದೊರೆತನವನ್ನು ಕೊಟ್ಟಿದ್ದಾನೆ. ಶ್ರೀಶೈಲದಲ್ಲಿ ಧ್ವಜಸ್ತಂಭ ಎಂಬ ಹೆಸರಿನ ಕಂಬವೂ ಇದೆ. ಈ ದೆಸೆಯಿಂದ ಇವನೇ ನೀಲಗಳ ಚಕ್ರವರ್ತಿ ಎಂದು ಗುರುತಿಸಿದುದಾಗಿದೆ. ಶ್ರೀ ರೇವಣನು ಈ ರಾಜರಲ್ಲಿ ತಮ್ಮ ಕರುಣೆಯನ್ನು ಬೀರಿದ ಮೇಲೆಯೇ ಇವನು 'ಸಿದ್ಧ' ಎಂಬ ಪದವನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಂಡಿದ್ದಾರೆಂದು ನಂಬಲವಕಾಶವಿದೆ. ಇವನ ಹೆಂಡತಿ 'ನುಕ್ಕಮ'. ಈಕೆಯು 'ನುಕ್ಕಮಲ್ಲ' ಎಂಬ ದೇವಾಲಯವನ್ನು ಮಾಡಿಸಿದ್ದಾಳೆ. Topographical List of the Inss of the Madras Precidency ಎಂಬ ಪುಸ್ತಕದಲ್ಲಿ ಈ ನಲ್ಲಸಿದ್ಧನ ವಂಶದ ಪೂರ್ವಜರ, ಇವನ ತಮ್ಮ ತಮುಸಿದ್ಧನ ಶಾಸನಗಳು ಬಹಳವಾಗಿ ಸಿಕ್ಕುತ್ತವೆ. ಕ್ರಿ.ಶ. ೧೧೮೭ ರಲ್ಲಿ ಮನ್ಮ ಸಿದ್ಧೀಶ್ವರ ದೇವಾಲಯವನು ನಲ್ಲಸಿದ್ಧರಸನು ಕಟ್ಟಿಸಿದನು. (ನೆಲ್ಲೂರಿನ ೫೫೭ನೆಯ ಶಾಸನ). ಇವನು ೧ನೆಯ ನಲ್ಲಸಿದ್ಧನು. ಆದರೆ ನೀಲಗಳ ಚಕ್ರವರ್ತಿಯೆಂದು ಗುರುತಿಸಲ್ಪಟ್ಟವನು ೨ನೆಯ ನಲ್ಲಸಿದ್ಧರಸನಾಗಿದ್ದಾನೆ. ನೀಲಗಳ ಚಕ್ರವರ್ತಿ ಇಹಲೋಕವನ್ನು ಬಿಟ್ಟು ಒಂದು ಎರಡು ವರ್ಷಗಳಾದ ಮೇಲೆ ಶ್ರೀ ರೇವಣರು ಲಿಂಗೈಕ್ಯರಾಗುತ್ತಾರೆ. (ಕುಲನುಪಾಕುಲು ಮಾಹಾತ್ಮ್ಯಮು) ಈ ನಲ್ಲಸಿದ್ಧ II ನ ತರುವಾಯ ವಿರ್ರಸಿದ್ಧಣ್ಣದೇವ (ವೀರಸಿದ್ಧ) ನರರಕ್ಷಕ (Protector) ನಾಗಿ ಗೊಲ್ಲಪುಂಡಿ ಬಿಜ್ಜಪ್ಪ ನಾಯಕನ ತಮ್ಮ ಬೊಮ್ಮಿನಾಯಕನು ಕ್ರಿ.ಶ. ೧೫೧೭ ರಲ್ಲಿ ದಾನಕೊಡುತ್ತಾನೆ. (ನೆಲ್ಲೂರು ಡಿಸ್ಟ್ರಿಕ್ಟ್ ಆತ್ಮಕೂರು ತಾಲೂಕು ಮಹಿಮಾಲೂರು ಶಾಸನ ನಂ-೩೯) ಆದುದರಿಂದ ಈ ವರ್ಷಕ್ಕೆ ಮುಂಚೆಯೇ ನಲ್ಲಸಿದ್ಧ II ಗತಿಸಿರಬೇಕು. ಈ ದೆಸೆಯಿಂದ ಶ್ರೀ ರೇವಣರು ಕ್ರಿ.ಶ.ಸು. ೧೨೧೭ರಲ್ಲಿ ಲಿಂಗೈಕ್ಯರಾಗಿರಬೇಕೆಂದು ನಿರ್ಣಯಿಸಲಿಕ್ಕೆ ಬರುತ್ತದೆ.

## ೬೧) ತಿರುಕಾಲದೇವ

ಇವನು ತಿರುಕಾಲತ್ತಿದೇವನ ಮಾವನು. ತಿರುಕಾಲತ್ತಿದೇವನು (ದೇವನಂದನ) ಮಾವನಿಗೆ ಪುಣ್ಯ ಬರಲೆಂದು ಕಂಚಿಯಲ್ಲಿ ದೇವಾಲಯವನ್ನು ಕಟ್ಟಿಸುತ್ತಾನೆ. (ದೇವನಂದನನು ಮರುಳುಸಿದ್ಧರಿಗೆ ಕೊಲ್ಲಿಪಾಕೆಯಲ್ಲಿ ಗುರುತ್ವಬಂದಾಗ ನೀಲಗಳನ ತರುವಾಯ ಅಲ್ಲಿ ಆಳಿದವನು–ಕೊಲ್ಲಿಪಾಕೆ ಮಹಾತ್ಮೆ) ಆತ್ಮಕೂರು ತಾಲೂಕು ಅನ್ನವಾಸಮುದ್ರದ ಶಾಸನ ನಂ. ೭ ಕ್ರಿ.ಶ. ೧೨೪೬. ಇದರಲ್ಲಿ ತಿರುಕಾಲದೇವನ ಹೆಸರಿದೆ. ಕ್ರಿ. ಶ. ೧೨೪೦ ರಷ್ಟಕ್ಕೆ ತೀರಿಕೊಂಡಿದ್ದಾನೆ. ಆದುದರಿಂದ ಕ್ರಿ. ಶ. ೧೨೨೭ ರಿಂದ ಮುಂದೆ ಆಳಿದ ದೇವನಂದನನು ಇವನೇ ಆಗಿರಬಹುದು. (ದಾರ್ಸಿ ೧೦ನೆಯ ಶತಮಾನದಲ್ಲಿ ಪ್ರತಾಪರುದ್ರ ದೇವನಿಗೆ ಪ್ರತಾಪರುದ್ರ ಎಂದು ಹೆಸರನ್ನು ಬಿಟ್ಟು, ದೇವರಾಜ ಮಹಾರಾಜ ಎಂತ ಕರೆದಿದ್ದಾರೆ. (Nellore Inss Part I.) ಅವರಂತೆ ಇಲ್ಲನದೇವನಿಗೆ ದೇವನಂದನ ಎಂದು ಗ್ರಂಥಗಳಲ್ಲಿ ಕರೆದಿರಬಹುದು.

## ೬೨) ಜನಮೇಜಯ ಶಕೆ

ಈ ಹೆಸರಿನ ಶಕೆಯ ಪಣ್ಣವತಿ (೯೬) ಸಂವತ್ಸರದಲ್ಲಿ ಬರೆದ ಶಾಸನಗಳಿವೆ. ಈ ವಿಧದ ಶಾಸನಗಳು ವಿಜಯ ಪಾಂಡ್ಯನ ಕಾಲದಲ್ಲಿ ಆದುವುಗಳೆಂದು ರೈಸ್‌ಸಾಹೇಬರು (ಮೈಸೂರು ಶಾಸನ ಇಲಾಖಾ ಮುಖ್ಯಾಧಿಕಾರಿಗಳಾಗಿ ಇದ್ದವರು) ಅಭಿಪ್ರಾಯಪಡುತ್ತಾರೆ. ವಿಜಯಪಾಂಡ್ಯನು ಕಲಚುರಿಯ ಆಹವಮಲ್ಲನೊಡನೆ ದೇಶಯಾತ್ರೆ ಮಾಡಿದ್ದಾನೆ. ಕ್ರಿ. ಶ. ೧೧೮೦-೮೧ ರಲ್ಲಿ ಇವರ ಹೆಸರುಳ್ಳ ಶಿಲಾಶಾಸನ ಕನ್ನಡದಲ್ಲಿ ಇವೆ. (Madras Dist General Copper Plates No. 229. to Tographical lint of the Inss of the Madras Precidency Vol. II) ಆ ಕಾಲದಲ್ಲಿ ಪೂರ್ವದವರ ಹೆಸರಿಟ್ಟುಕೊಂಡು ಕೆಲವು ಶಾಸನಗಳು ಹುಟ್ಟಿದ ಉದಾಹರಣೆಗಳಿವೆ. ಯುಧಿಷ್ಠಿರ (ಧರ್ಮರಾಯ) ಶಕೆಯ ಶಾಸನವಿರುವುದಾಗಿ ತಿಳಿದುಬಂದಿದೆ. ಚಾಲುಕ್ಯ ವಿಕ್ರಮ ಶಕಕ್ಕೆ (ಕ್ರಿ.ಶ. ೧೦೭೬ ಕ್ಕೆ) ಈ ಜನಮೇಜಯ ಶಾಸನಸಂಖ್ಯೆಯನ್ನು ಸೇರಿಸಿದರೆ ೧೧೭೨ ಆಗುತ್ತದೆ. ಆಗ ವಿಜಯಪಾಂಡ್ಯನಿದ್ದನೆಂಬುದು ಸ್ಪಷ್ಟವಾಗುತ್ತದೆ. ಈ ವಿಜಯಪಾಂಡ್ಯನು ಜನಮೇಜಯ ಶಕೆಯೆಂದು ನಮೂದಿಸಿ ಶಾಸನ ಬರೆಯಿಸಿದ್ದಾನೆ, ಎಂದು ನಂಬಲಿಕ್ಕೆ ಅವಕಾಶವಿದೆ.

## ೬೩) ವೀರಭದ್ರರಾಯ ಮಹಾರಾಯ

(A Seion of Genapatis of Warrangal) ಅದ್ದಂಕಿ ಸೀಮೆಯಲ್ಲಿ ಕಾಕೊಳ್ಳಿ ನಾರಾಯಣ ಪಂಡಿತನಿಗೆ ಸೋಮವಾರ ಪಾಡುಗ್ರಾಮವನ್ನು ದತ್ತಿಕೊಟ್ಟನು. (ಗಣಪತಿ ರಾಜನ ೨೩ನೆಯ ವರ್ಷ(?) ಕ್ರಿ.ಶ. ೧೨೨೪)

## ೬೪) ತೆಲುಗು ಜೊಮ್ಮಯ್ಯ (ತೆಲುಗು ಬೊಮ್ಮಯ್ಯ)

ಈತನು ಕ್ರಿ. ಶ. ೧೧೨೮ ರಲ್ಲಿ ಆಳಹತ್ತಿದ ಪೆರ್ಮಾಡಿ ರಾಯನ ಕಾಲದಲ್ಲಿ ಪ್ರಸಿದ್ಧನಾದವನು. ವೀರಶೈವ ಪರಂಪರೆಗೆ ಹೊಂದಿದವನು (ಶಿವಾನುಭವ xvi-೬) ಇವನು ಬಸವೇಶ್ವರನ ಸಮಕಾಲೀನನು. ಬಸವ ಪುರಾಣದಲ್ಲಿ ಇವನ ಹೆಸರು ಬಂದಿದೆ.

## ೬೫) ಬಾಹೂರು ಬೊಮ್ಮಯ್ಯ

ಈತನು ಕ್ರಿ. ಶ. ೧೧೨೮ ರಲ್ಲಿ ಆಳಹತ್ತಿದ ಪೆರ್ಮಾಡಿ ರಾಯನ ಕಾಲದಲ್ಲಿ ಪ್ರಸಿದ್ಧನಾದವನು. ವೀರಶೈವ ಪರಂಪರೆಗೆ ಹೊಂದಿದವನು. ಇವನು ಬಸವೇಶ್ವರನ ಸಮಕಾಲೀನನು. (ಶಿವಾನುಭವ xvi ೬) ಬಸವಪುರಾಣದಲ್ಲಿ ಇವನ ಹೆಸರು ಬಂದಿದೆ.

## ೬೬) ಇಳೆಹಾಳ ಬ್ರಹ್ಮಯ್ಯ

ಈತನು ಕ್ರಿ.ಶ. ೧೧೨೮ ರಲ್ಲಿ ಆಳಹತ್ತಿದ ಪೆರ್ಮಾಡಿರಾಯನ ಕಾಲದಲ್ಲಿ ಪ್ರಸಿದ್ಧನಾದವನು. ವೀರಶೈವ ಪರಂಪರೆಗೆ ಹೊಂದಿದವನು. (ಶಿವಾನುಭವ xvi-೬) ಇವನು ಬಸವೇಶ್ವರನ ಸಮಕಾಲೀನನು. ಬಸವಪುರಾಣದಲ್ಲಿ ಇವನ ಹೆಸರು ಬಂದಿದೆ. ಮೇಲೆ

ಕಂಡ ಪೆರ್ಮಾಡಿರಾಯನು ಕ್ರಿ. ಶ. ೧೧೬೪ರ ವರೆವಿಗೂ ಆಳುತ್ತಿದ್ದನೆಂದು ತಿಳಿಯ ಬಂದಿದೆ.

೬೭) **ಹಾವಿನಹಾಳ ಕಲ್ಲಯ್ಯ**

ಇವನು ತನ್ನನ್ನು ಕಚ್ಚಿ ಸತ್ತಹಾವನ್ನು ಬದುಕಿಸಿದವನು. ಇವನಿಗೆ ಶ್ರೀ ರೇವಣ ಸಿದ್ಧರ ಮಗ ರುದ್ರಮುನಿಯಿಂದ ಮಾರ್ಗಶೈವದೀಕ್ಷೆಯಾಯಿತು. ಮಾರ್ಗಶೈವರು ಲಿಂಗಧಾರಿಗಳು. ಆಮೇಲೆ ಸೊಲ್ಲಾಪುರದ ಸಿದ್ಧರಾಮೇಶ್ವರರಿಂದ ಅನುಗ್ರಹವಾಯಿತು. ಸೊಲ್ಲಾಪುರದಲ್ಲಿಯೇ ಇವನ ಸಮಾಧಿಯಿದೆ. ಇವನು ವಚನಗಳನ್ನು ಹೇಳಿದ್ದಾನೆ. ಮುದ್ರಿಕೆ: "ಮಹಾಲಿಂಗ ಕಲ್ಲೇಶ್ವರಾ" ಇವನ ವಿಷಯವಾಗಿ ಶಿಲಾಶಾಸನವಿದೆ. (ಕ್ರಿ.ಶ. ೧೧೭೬) ಬಸವೇಶ್ವರನು ಬಿಜ್ಜಳನಿಂದ ಆಕ್ಷೇಪಿಸಲ್ಪಟ್ಟು ಮತ್ತಿಗಟ್ಟಕ್ಕೆ (ಶಿವಮೊಗ್ಗ ಡಿಸ್ಟ್ರಿಕ್ಟ್ ಹೊನ್ನಾಳಿ ತಾಲೂಕು) ಹೋದಾಗ ಹಾವಿನಹಾಳು ಕಲ್ಲಯ್ಯನು ಜೊತೆಯಲ್ಲಿ ಇದ್ದನು. (ವೀರಶೈವಾಮೃತ ಪ್ರಮಾಣ-ಕಾಂಡ VIII) ಶಾಸನದಲ್ಲಿ ಇವನು ಕಲಿದೇವ ಎಂದು ಕರೆಯಲ್ಪಟ್ಟಿದ್ದಾನೆ (ಪಂಚಾಚಾರ್ಯ ಚರಿತ್ರೆ I-೪೨ನೆಯ ಪ್ರಕರಣ ನೋಡಿ).

೬೮) **ಏಕಾಂತದ ರಾಮಯ್ಯ**

ಈತನು ಧಾರವಾಡ ಜಿಲ್ಲಾ ಹಿರೇಕೆರೂರು ತಾಲೂಕು ಅಬಲೂರಿನಲ್ಲಿ ಜೈನ ರೊಡನೆ ವಾದಿಸಿ ವೀರಶೈವ ಮತವು ಶ್ರೇಷ್ಠವೆಂದು ತೋರಿಸಿದವನು. ಬಿಜ್ಜಳನು (ಕಲಚುರ್ಯ ಚಕ್ರವರ್ತಿ) ಮಹಾಮಂಡಲೇಶ್ವರನಾಗಿದ್ದಾಗ ಜೈನರ ಮತ್ತು ಏಕಾಂತ ರಾಮಯ್ಯನ ವಿವಾದವನ್ನು ತೀರ್ಮಾನಿಸಿ ಹೊಸದಾಗಿ ಕಟ್ಟಿಸಿದ ವೀರಸೋಮನಾಥ ದೇವಾಲಯಕ್ಕೆ ದತ್ತಿಯನ್ನು ಕೊಟ್ಟನು. (Ep. Indica V-245) ಈ ಸಂಬಂಧದ ಶಾಸನದಿಂದ ಕ್ರಿ. ಶ. ೧೧೫೫ರ ಸುಮಾರಿನಲ್ಲಿಯೇ ಈ ವಿವಾದವು ನಡೆದಿರುವುದೆಂದು ವ್ಯಕ್ತವಾಗುತ್ತದೆ.

*೫) **ಮಾದಿರಾಜ–ಮಾದಲಾಂಬಿಕೆ**

(ಹಿಂದೆ ೫ನೆಯ ನಂಬರಿನ ವಿಷಯವನ್ನು ಗಮನಿಸಿರಿ) ಇವರು ಬಸವೇಶ್ವರನ ತಂದೆ ತಾಯಿಗಳಲ್ಲ. (Ep. Indica V-242) ಆದರೆ ಬಸವೇಶ್ವರನಿಗೆ ಸುಮಾರು ೭–೮ ವರ್ಷ ವಯಸ್ಸಾದಾಗಿನಿಂದಲೂ ಸಾಕಿದವನು. (ಹರಿಹರನ ರಗಳೆ) ಮಾದಿ ರಾಜನು ಹಾರೀತಪಗೋತ್ರದವನು. (ಮಾನಗೋಳಿ ಶಾಸನ) ಬಸವೇಶ್ವರನು ಕಾಶ್ಯಪ ಗೋತ್ರದವನು.

೬೯) **ಬಂದಳಿಕೆ**

ಇದು ಶಿವಮೊಗ್ಗಾ ಜಿಲ್ಲಾ ಶಿಕಾರಿಪುರ ತಾಲೂಕಿನ ಒಂದು ಗ್ರಾಮ. ಸೋವಿ ದೇವನ ನೆಲೆವೀಡಾಗಿತ್ತು (Ep·Car·VII-562) ನಾಗರಖಂಡ ಎಪ್ಪತ್ತು ಎಂಬ ಪ್ರಾಂತದಲ್ಲಿ ಮುಖ್ಯವಾದ ಊರು. ಇಲ್ಲಿಂವಲೇ ಹಿರೇಕೆರೂರು ತಾಲೂಕಿನಲ್ಲಿ

(ಮೊದಲು ಕೋಡ ತಾಲೂಕು) ಇರುವ ಮಾಸೂರಿಗೆ ಶ್ರೀ ರೇವಣರಿಂದ ಕತ್ತಿಯನ್ನು ಪಡೆಯಲಿಕ್ಕೆ ಇಲ್ಲಿಂವಲೇ ಸೋವಿದೇವನು ಹೋಗಿರುವಂತೆ ಊಹೆ. ಈ ಸೋವಿ ದೇವನು ಪ್ರಸಿದ್ಧನಾದ ಕಲಚುರ್ಯ ಚಕ್ರವರ್ತಿ ಕಲ್ಯಾಣದ ಬಿಜ್ಜಳನ ಮಗನು. ಇವನಿಗೆ ಅಳಿಯ ಬಿಜ್ಜಳ, ೨ನೆಯ ಬಿಜ್ಜಳ, ರಾಯಮುರಾರಿ, (ರಾಯಮುರಾರಿ ಸೋವಿದೇವ) ಎಂದೂ ಕರೆಯುತ್ತಿದ್ದರು.

೭೦) **ಬಸವೇಶ್ವರ**

"ಸಂಗಮೇಶ್ವರನ ಪುತ್ರಂ ಬಸವಯ್ಯ" ಎಂದು ಹೇಳಲ್ಪಟ್ಟಿದ್ದಾನೆ. (ಪಾಲಿ ಸಂಸ್ಕೃತ–ಹಳೆಗನ್ನಡ ಶಾಸನಗಳು Dr Fleet ಸಂಖ್ಯೆ–೧೧೦) ಬಸವೇಶ್ವರನ ವಚನ ಗಳ ಅಂಕಿತ–'ಕೂಡಲಸಂಗಮದೇವ' ಎಂತ ಇದೆ. ಈ ಶಾಸನದಲ್ಲಿ ಹೇಳಲ್ಪಟ್ಟ ಬಸವಯ್ಯನು ವಚನಗಳನ್ನು ಹೇಳಿದ ಬಸವಣ್ಣನೇ ಆಗಿರಬೇಕು. ಅಬಲೂರು ಶಾಸನ ದಲ್ಲಿ ಕಂಡ ಬಸವಣ್ಣನು ಕಾಶ್ಯಪ ಗೋತ್ರದವನು (ಪ್ರಬುದ್ಧ ಕರ್ನಾಟಕ–೮೨) ಇದ ರಿಂದ ಏಕಾಂತರಾಮಯ್ಯನ ಮತ್ತು ಜೈನರ ವಿವಾದ ತೀರ್ಮಾನ ಕಾಲದಲ್ಲಿ ಬಸವೇಶ್ವರ ನಿದ್ದನು, ಎಂಬ ಗ್ರಂಥಗಳ ಹೇಳಿಕೆ. ಗ್ರಂಥಗಳಲ್ಲಿಯೂ ಸಂಗಮೇಶ್ವರನ ಮಗ ಎಂದು ಹೇಳಲ್ಪಟ್ಟಿದ್ದಾನೆ. ಇವನು ಕಲ್ಯಾಣದಲ್ಲಿ ಆಳುತ್ತಿದ್ದ ಕಲಚುರಿ ಬಿಜ್ಜಳನಲ್ಲಿ ಕರಣಿಕ ಉದ್ಯೋಗದಿಂದ ಪ್ರಾರಂಭಿಸಿ, ಪ್ರಧಾನ (ಮುಖ್ಯಮಂತ್ರಿ) ಆಗುವವರೆವಿಗೂ ಅಧಿಕಾರ ಮಾಡಿದವನು. ಇವನ ಕಾಲ ಕ್ರಿ. ಶ. ೧೧೦೬ ರಿಂದ ೧೧೬೮. (ಬಸವೇಶ್ವರನ ಕಾಲ ಎಂಬ ಗ್ರಂಥವನ್ನು ನೋಡಿರಿ).

೭೧) **ಕೂಸು ಬಸವಣ್ಣ**

ಈತನು ಬೆಂಗಳೂರು ಡಿಸ್ಟ್ರಿಕ್ಟ್ ಶಿವಗಂಗೆಯಲ್ಲಿ ಬೆಟ್ಟದ ಮೇಲೆ ದೀಪಮಾಲೆಯ (ಕಂಬ) ನಿಲ್ಲಿಸಿದನು ಮತ್ತು ಬಯಿರಪ್ಪದೇವರ ದೇವಾಲಯ ಕಟ್ಟಿಸಿದನು. "ಕೋಲಾರದ ಹೆಗ್ಗಡೆ ಮಾಚಿಮಯನ ಹೊಲ್ಲವೆಯ ಪುತ್ರ ಶ್ರೀ ನಾರಸಿಂಗದೇವರು 'ಕೂಸು ಬಸವಣ್ಣ' ಎಂದು ಕರೆಯಲ್ಪಟ್ಟಿದ್ದಾನೆ. ಶಿವಗಂಗೆಯಲ್ಲಿ 'ಕೂಸು ಬಸವಣ್ಣ' ಎಂದೂ ಕರೆಯಲ್ಪ ಟ್ಟಿದ್ದಾನೆ. ಶಿವಗಂಗೆಯಲ್ಲಿ ರೇವಣಸಿದ್ಧರು ಅಗ್ನಿಸ್ತಂಭ, ಜಲಸ್ತಂಭ ಎಂದು ಎರಡು ಕಂಬಗಳನ್ನು ಸ್ಥಾಪಿಸಿದರೆಂದು ಗ್ರಂಥಗಳ ಹೇಳಿಕೆ. ಈ ಕೂಸು ಬಸವಣ್ಣ ನಿಲ್ಲಿಸಿದ ದೀಪಮಾಲೆಯ ಕಂಬಗಳೇ ಆ ಅಗ್ನಿಸ್ತಂಭ, ಜಲಸ್ತಂಭಗಳು (EP Car-IX Supp-liment ೧೧೯ನೆಯ ಶಾಸನ) ಕಂಬದ ಕೆಳಗಡೆ ಇವನ ಹೆಸರಿದೆ.

೭೨) **ಕೆಂಚಸೋಮಣ್ಣನಾಯಕ**

ಇವನು ಬೆಂಗಳೂರು ಡಿಸ್ಟ್ರಿಕ್ಟಿನ ದೇವಗೊಂಡನ ಹಳ್ಳಿಯನ್ನು ಶಿವಪುರವಾಗಿ ಎಂದರೆ ಕೇವಲ ವೀರಶೈವರು ಮಾತ್ರವೇ ಇರುವ ಊರಾಗಿ ಏರ್ಪಡಿಸಿದನು. (ಶಿವ ಗಂಗೆಯಲ್ಲಿ ಒಂದು ಆರಾಧನೆಯ ಕಾಲದಲ್ಲಿ ೧೨೦೦೦ ಒಡೆಯರು ಸೇರಿದ್ದರೆಂದು ಗೊತ್ತಾಗಿದೆ. ಇದಕ್ಕೆ ಕಾರಣನಾದವನು ಇವನು( ಆ ಪುರವನ್ನು ಸಿದ್ಧರಾಮೇಶ್ವರನಿಗೆ

ದತ್ತಿಯಾಗಿ ಕೊಟ್ಟನು. (EP Car-IX Supplement ಕ್ರಿ. ಶ. ೧೨೦೮ ಪ್ರಭವ ನಾಮ ಸಂವತ್ಸರ) ಈ ಶಾಸನದಂತೆ ಒಡೆಯರ ಸಂಖ್ಯೆ ಈ ಪ್ರಾಂತದಲ್ಲಿ ಹೆಚ್ಚಾಗುವಂತೆ ಮಾಡಲಿಕ್ಕೆ ಕಾರಣರಾದವರು ರುದ್ರಮುನಿ ಮತ್ತು ರೇವಣಸಿದ್ಧರು. ಈ ಶಾಸನವಲ್ಲಿ ಕಂಡ ಸಿದ್ಧರಾಮೇಶ್ವರ ದೇವರು ಸೊಲ್ಲಾಪುರದ ಸಿದ್ಧರಾಮೇಶ್ವರನ ತರುವಾಯ ದವರು.

**೭೩) ವೀರಗಂಗಹೊಯ್ಸಳ**

ಇವನು "ಕಲಕಾಡುಗೊಂಡ ಭುಜಬಲ ವೀರಗಂಗಪ್ರತಾಪ ಹೊಯ್ಸಳದೇವರು" ಎಂದು ಕರೆಯಲ್ಪಟ್ಟು ರಾಜ್ಯಭಾರ ಮಾಡಿದವನು (EP Car-IX Suppliment) (ಚನ್ನಪಟ್ಟಣ ತಾಲೂಕು (Revised) ಶಾಸನ ಸಂಖ್ಯೆ ೩೦೦. ಕ್ರಿ. ಶ. ೧೧೭೨) ಇವನು ಶ್ರೀ ರೇವಣರಿಗೆ ಶಿವಗಂಗೆಯಲ್ಲಿ ಸಮಾಜೋದ್ಧಾರ ಕಾರ್ಯಕ್ಕೆ ನೆರವಾಗಿದ್ದವನು. ಅಗ್ನಿಸ್ತಂಭ, ಜಲಸ್ತಂಭಗಳನ್ನು ಕಟ್ಟಿಸಿದ ಕೂಸು ಬಸವಣ್ಣನು ಇವನ ಆಶ್ರಯದಲ್ಲಿ ಇದ್ದವನು.

**೭೪) ನೀಲಕಂಠ (ಶ್ರೀಕಂಠ)**

ಈತನು ವ್ಯಾಸಕ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾನೆ. ಈತನಿಗೆ ಶ್ರೀಕಂಠ ಎಂಬ ಮತ್ತೊಂದು ಹೆಸರು ಇರುವುದು, ಈತನ ಭಾಷ್ಯದ ಕೊನೆಯ ಶ್ಲೋಕ ದಿಂದ ತಿಳಿದು ಬರುವುದು. 'ಶಿವಾದ್ವೈತ ಆಫ್ ಶ್ರೀಕಂಠ' ಎಂದು ಇಂಗ್ಲೀಷಿನಲ್ಲಿ ಒಂದು ಪುಸ್ತಕವೂ ರಚಿತವಾಗಿದೆ. ಈ ಶಿವಾದ್ವೈತದಲ್ಲಿ ಶಿವನು ಒಬ್ಬನೇ ದೇವ ಎಂದು ಹೇಳಲ್ಪಟ್ಟಿದೆ. ಆದರೆ ಆ ಶಿವನು ಪಾರ್ವತೀ ಪತಿಯು ಆದುದರಿಂದ ಶಿವಾದ್ವೈತವು ಸಗುಣ ಶಿವನ ಸಂಬಂಧದ ಅದ್ವೈತದ ಬೋಧೆಯೆಂದು ತಿಳಿಯಬೇಕಾಗಿದೆ. ವೀರ ಶೈವರ ಶಿವಾದ್ವೈತವು ನಿರ್ಗುಣ, ನಿರಾಕಾರ, ನಿರಂಜನನಾದ ಶಿವನ ವಿಷಯದ ಅನು ಭಾವವನ್ನು ಬೋಧಿಸುತ್ತದೆ. ನೀಲಕಂಠ ಭಾಷ್ಯದ ಕಾಲವು ಕ್ರಿ. ಶ. ೧೧೭೦ ಎಂದು ಬೆಂಗಳೂರಿನ ಮಿಥಿಕ್ ಸೊಸೈಟಿ ಜರ್ನಲ್ ೧೯೩೪ ಹೇಳುತ್ತದೆ. ಆದರೆ ಮೇಲೆ ಕಂಡ ಇಂಗ್ಲೀಷ್ ಪುಸ್ತಕದಿಂದ ಕ್ರಿ. ಶ. ಸು. ೧೧೧೯ರಲ್ಲಿ ಇವನು ಇದ್ದನೆಂದು ತಿಳಿಯುತ್ತದೆ.

**೭೫) ಭಾಸ್ಕರಾಚಾರ್ಯ**

ಇವನ ಜನನ ಕ್ರಿ. ಶ. ೧೧೧೪ ಸಿದ್ಧಾಂತ ಶಿರೋಮಣಿ ಎಂಬ ಗ್ರಂಥವನ್ನು ಕ್ರಿ.ಶ. ೧೧೫೦ರಲ್ಲಿ ಬರೆದನು. (ಮಿಥಿಕ್ ಸೊಸೈಟಿ ಜರ್ನಲ್ ಮೇಲಿನದರ ಪ್ರಕಾರ)

**೭೬) ವಿಕ್ರಮಪಾಂಡ್ಯ ಮತ್ತು ಕುಲಶೇಖರಪಾಂಡ್ಯ**

ಇವರಿಬ್ಬರಿಗೂ ದಕ್ಷಿಣಭಾರತದಲ್ಲಿ ದೊಡ್ಡ ಯುದ್ಧವಾಯಿತು. ಕುಲಶೇಖರನು ಶ್ರೀ ವಲ್ಲಭಮಾರವರ್ಮನ ಮಗ. ತಿನ್ನವೆಲ್ಲಿ ಡಿಸ್ಟ್ರಿಕ್ಟ್‌ನಲ್ಲಿ ಕ್ರಿ. ಶ. ೧೧೬೯ರಲ್ಲಿ ಶ್ರೀ ವಲ್ಲಭನ ೩೭ನೆಯ ವರ್ಷದ ಆಳ್ವಿಕೆಯ ಶಾಸನವಿದೆ. ಕ್ರಿ. ಶ. ೧೧೬೭–೬೮ರಲ್ಲಿ ನಡೆದ ಯುದ್ಧದಲ್ಲಿ ಕುಲಶೇಖರನು ಅನೇಕ ಕಡೆಗಳಲ್ಲಿ ಸೋತು ಚೋಳದೇಶಕ್ಕೆ ಓಡಿ

ಹೋದನು. ಈ ಕುಲಶೇಖರನ ತಂಗಿ ಅಥವಾ ಮಾರವರ್ಮಕುಲಶೇಖರನ ಮಗಳು ಕುಲಶೇಖರಿ ಎಂಬಾಕೆಯನ್ನು ಪ್ರಸಿದ್ಧನಾದ ರಾಜರಾಜ II (ವಿಕ್ರಮ ಚೋಳನ ಮಗ ರಾಜೇಂದ್ರ ಚೋಳ)ನು ಮದುವೆಯಾಗಿದ್ದಾನೆ. ಈ ಕುಲಶೇಖರಿಯ ಮಗಳು ಸೌಂದರೀದೇವಿಯನ್ನೇ ಶ್ರೀ ರೇವಣರು ತಂಜಾವೂರಿನಲ್ಲಿ ಮದುವೆಯಾಗಿದ್ದಾರೆ. (ಇವರ ಮದುವೆಯನ್ನು ಬೊಮ್ಮರಸನ ರೇವಣಸಿದ್ಧೇಶ್ವರ ಪುರಾಣ ಹೇಳುತ್ತದೆ.) ಈ ಸುಂದರೀದೇವಿಯ ಮಗನೇ ಕಲ್ಯಾಣದ ತ್ರಿಪುರಾಂತಕ ಕೆರೆಯ ಏರಿಯಲ್ಲಿ ಹೂಳಿಟ್ಟ ಪಿಂಡವು ಬೆಳೆದು ಪ್ರಸಿದ್ಧನಾದ ರುದ್ರಮುನಿಯಾದ. ಮೇಲೆ ಕಂಡ ಕುಲಶೇಖರನು ಓಡಿಹೋದಮೇಲೆ ಮಥುರೆಯಲ್ಲಿ ಪರಾಕ್ರಮಪಾಂಡ್ಯನಿಗೆ ಕ್ರಿ.ಶ. ೧೧೬೭ರ ಮಾರ್ಚ್‌ನಲ್ಲಿ ಪಟ್ಟವಾಯಿತು.

## ೨೭) ಶಿವಗುರು (ಶಿವದೇವ)

ಈತನು ವೀರಶೈವರ ಆಚಾರ್ಯ. ಶ್ರೀ ರೇವಣಸಿದ್ಧರ ತರುವಾಯ ಪ್ರಸಿದ್ಧಿಗೆ ಬಂದವನು. ಕಾಕತೀಯ ಗಣಪತಿರಾಯನ ರಾಜ್ಯದಲ್ಲಿಯೂ ಪೂಜ್ಯನಾಗಿದ್ದನು. ಗಂಗಾವರಂ ಶಾಸನದಲ್ಲಿ ಈತನ ಹೆಸರು ಮತ್ತು ಈತನ ಶಿಷ್ಯನಾದ ಶಾಂತ ಶಿವಗುರು ಎಂಬಾತನ ಹೆಸರೂ ಬಂದಿದೆ. (Nellore Inss-Part I-28. AD-1254)

## ೨೮) ಮೂರುಜಾವದ ದೇವರು

ಈತನು ಏಕಾಂತ ರಾಮಯ್ಯನಿಗೆ ಅಬಲೂರಿನಲ್ಲಿ ಶಂಖಪಾಲ (ಸಂಕಗಾವುಂಡ)ನ ಸಂಗಡ ವಾದ ಮಾಡುವಲ್ಲಿ ಸಹಾಯ ಮಾಡಿದವನು. ಯಾದವರ ಸಿಂಗಣದೇವನ ೧೫ನೆಯ ವರ್ಷದ (ಕ್ರಿ.ಶ. ೧೨೨೪) ಶಾಸನದಲ್ಲಿ (ಕೋಡ ತಾಲೂಕಿನದು) ಈತನ ಹೆಸರು ಬಂದಿದೆ. (ಅಬಲೂರಿನ ಸಮೀಪದಲ್ಲಿಯೇ ಕೋಡ ಎಂಬ ಊರಿದೆ. ಈಗ ಅದು ಧಾರವಾಡ ಜಿಲ್ಲಾ ಹಿರೇಕೆರೂರು ತಾಲೂಕಿಗೆ ಸೇರಿದೆ) (ಪ್ರಾಚೀನ ಪುಸ್ತಕ ಭಾಂಡಾರದ ಡೈರೆಕ್ಟರ್ ಶ್ರೀ ದೇವೀರಪ್ಪನವರ ಟಿಪ್ಪಣಿ ಪುಸ್ತಕದಿಂದ.)

## ೨೯) ಭಾಸ್ಕರ ಮಂತ್ರಿ

ಈತನು 'ನೆಲ್ಲೂರು ಶಾಸನಗಳು' ಎಂಬ ಪುಸ್ತಕದಲ್ಲಿ ಉತ್ತರ ಆರ್ಕಾಟು ೪೯೮ನೆಯ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕೊಲ್ಲಿಪಾಕೆಯ ಮಾಹಾತ್ಮ್ಯೆಯಲ್ಲಿ ನೀಲಗಳ ಚಕ್ರವರ್ತಿ (Nallasiddha II) ಯ ತರುವಾಯ ದೇವನಂದನನು ಆಳುತ್ತಿದ್ದನೆಂದೂ ಆಗ ಮರುಳಸಿದ್ಧರು ಕೊಲ್ಲಪಾಕೆಯಲ್ಲಿ ಧರ್ಮಗುರುಗಳಾಗಿದ್ದರೆಂದೂ ಹೇಳಲ್ಪಟ್ಟಿದೆ. ಈ ದೇವನಂದನ ಮಂತ್ರಿ ಭಾಸ್ಕರ ಎಂದೂ ಆ ಪುಸ್ತಕವು ಹೇಳುತ್ತದೆ. ಆ ಭಾಸ್ಕರ ಮಂತ್ರಿಯೇ ಈತನಾಗಿದ್ದಾನೆಂದು ತರ್ಕಿಸಲಿಕ್ಕೆ ಅವಕಾಶವಿದೆ.

## ೩೦) ಕಾಲಪ್ರಿಯ (ಕಲಾಪ್ರಿಯ)

ಈ ಹೆಸರಿನ ಒಂದು ಮಠವಿದೆ. ಇದು ಒಂದು ಶಿವಾಲಯದ ಹೆಸರೆಂದೂ ಉಜ್ಜಯಿನಿ ಮಹಾಕಾಳ ಎಂಬ ಹೆಸರಿನಂತೆ ಇದು ಇರುವುದೆಂದೂ ತಿಳಿದುಬಂದಿದೆ.

## ೮೧) ಭೈರಪ್ಪನಾಯಕ (ಭೈರಣನಾಯಕ)

ಈತನು ನೀಲಗಳ ಚಕ್ರವರ್ತಿ (Nallasiddha II) ಎಂಬುವನ ನಂಟನು. ಕಾಶೀಪೀಠದ ವಿಶ್ವಾರಾಧ್ಯದ ತರುವಾಯನ ಕಂಚಿಯಲ್ಲಿನ ಪಂಡಿತಾರಾಧ್ಯರಿಗೆ ಭಕ್ತಿ ಚಿನ್ಹವನ್ನು ಮಾಡಿದವನು. ಈ ಕಂಚಿ ಪಂಡಿತಾರಾಧ್ಯರು ಕಾಶೀವಿಶ್ವನಾಥಯ್ಯಗಳಿಂದ ದೀಕ್ಷೆ ಹೊಂದಿದವರು. ನೆಲ್ಲೂರು ಡಿಸ್ಟ್ರಿಕ್ಟಿನ ರಾಪೂರು ೩೭ನೆಯ ಶಾಸನದಲ್ಲಿ (ಕ್ರಿ. ಶ. ೧೨೧೭-೧೮) ಈತನು ಹೇಳಲ್ಪಟ್ಟಿದ್ದಾನೆ. ಇವನಿಗೆ ಭೈರಣ್ಣೊಡೆಯನೆಂದು ಗ್ರಂಥ ದಲ್ಲಿನ ಹೆಸರು.

## ೮೨) ಸೋಮುವಳ್ಳಿಯ ಚಿಕ್ಕವೀರಣ್ಣೊಡೆಯ (ಚಿಕ್ಕವೀರಯ್ಯ)

ಈತನು 'ಪರಮ ಮೂಲಜ್ಞಾನಪ್ರಶಸ್ತಿ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಬಸವೇಶ್ವರನ ಕೃಪೆವೆರಸಿದ ಪಂಡಿತಾರಾಧ್ಯರ ಕರಕಮಲದೊಳುದಯಿಸಿದ ಕಾಶೀ ವಿಶ್ವ ನಾಥಯ್ಯಗಳ ಶಿಶುಗಳ ಶಿಶು, ಶಿವನಂಕಾರಯ್ಯಗಳ ಶಿಶು, "ಚಿಕ್ಕವೀರಯ್ಯ" ಎಂಬು ದಾಗಿ ತನ್ನ ವಿಷಯವನ್ನು ಹೇಳಿಕೊಂಡಿದ್ದಾನೆ. ಇವನ ಹೇಳಿಕೆಯಿಂದ ಕಾಶೀ ವಿಶ್ವಾ ರಾಧ್ಯರು ಶ್ರೀಶೈಲ ಪಂಡಿತಾರಾಧ್ಯರಿಂದ ಅನುಗ್ರಹ ಹೊಂದಿದ್ದರೆಂದು ವ್ಯಕ್ತ ವಾಗುವುದು.

## ೮೩) ಸೂರದಮುನಿ (ಸೂರದನಾರಾಯಣ ನಾಗದೇವ)

ಇವನು ವೇದಗಳನ್ನು ಓದಿದವನು, ("ಯೋಗ ವಿದಾಂತರ" ಎಂಬ ಖ್ಯಾತಿ ಯುಳ್ಳವನು) ಯಾಜ್ಞವಲ್ಕ್ಯ ಗೋತ್ರದವನು ಇವನು. ರಾಜೇಂದ್ರಚೋಡದೇವನ ಶತ್ರುಗಳನ್ನು ಓಡಿಸಿದವನು. ಇವನು ಕಾಶ್ಯಹೆಗ್ಗಡೆಯ ಮಗ. (South Indian Inscriptions Book No. 10.) ಈ ಪುಸ್ತಕದಲ್ಲಿ Imperial Cholas ಎಂಬ ಭಾಗ ಶಿರುಪುರ ಶಾಸನ ನಂ-೧೭೯, ಕ್ರಿ. ಶ. ೧೧೭೨ ಮತ್ತು ನಂ-೧೭೬ ಕ್ರಿ. ಶ. ೧೧೭೧ ಇವುಗಳಲ್ಲಿ ಹೇಳಲ್ಪಟ್ಟಿದ್ದಾನೆ. ಶ್ರೀಶೈಲದ ಪಂಡಿತಾರಾಧ್ಯರಿಗೆ ಕಣ್ಣು ಕೀಳಿ ಸಿದ ವೆಲನಾಡು ಚೋಳನೇ ಮೇಲೆ ಕಂಡ ರಾಜೇಂದ್ರ ಚೋಡನಾಗಿರಬೇಕು. ಈ ರಾಜೇಂದ್ರ ಚೋಳನಿಗೆ ಈತನು ಪ್ರೀತಿಪಾತ್ರನೆಂದು ತಿಳಿದುಬರುತ್ತದೆ.

## *೩೧) ವೆಲನಾಡುಗೊಂಕ II

### (ಹಿಂದೆ ಇದೇ ಸಂಖ್ಯೆಯ ವಿಷಯವನ್ನು ನೋಡಿ)

ಮೇಲೆ ಕಂಡ ಶಾಸನ ಪುಸ್ತಕದಲ್ಲಿ ನಂ-೧೩೧, ಕ್ರಿ. ಶ. ೧೧೫೩ರಲ್ಲಿ ವೆಲನಾಡು ಗೊಂಕನ ಹೆಸರಿದೆ. ನಂ-೧೩೪, ಕ್ರಿ. ಶ. ೧೧೫೪. ಕುಲೋತ್ತುಂಗಚೋಡ ಗೊಂಕ ರಾಜನಮಂತ್ರಿ 'ಈಶಾನಪೆರ್ಗಡೆ' ಎಂತ ಇದೆ. ನಂ-೧೪೧ ಕುಲೋತ್ತುಂಗ ಚೋಡ ಗೊಂಕನ ವರ್ತಕ ಪೋವಿಸೆಟ್ಟಿ ಎಂತ ಇದೆ. ನಂ-೧೫೧ ಕುಲೋತ್ತುಂಗ ಚೋಡನ ಹೆಂಡತಿ 'ಕಾಮಿದೇವಿ' ಎಂತ ಇದೆ. ಕ್ರಿ. ಶ. ೧೧೬೧. ಈ ಕುಲೋತ್ತುಂಗ ಚೋಡ ಗೊಂಕನು ವೆಲನಾಡಗೊಂಕ IIನಿಗಿಂತ ಭಿನ್ನನಲ್ಲವೆಂದು ತಿಳಿಯಬೇಕಾಗಿದೆ. ಮೇಲಿನ

ಶಾಸನಗಳಿಂದ ಇವನು ಕ್ರಿ. ಶ. ೧೧೬೦ರವರೆವಿಗೂ ಜೀವಿಸಿದ್ದಂತೆ ತಿಳಿಯಬೇಕಾಗಿರುವುದರಿಂದ ಇವನ ಅಂತ್ಯವು ಕ್ರಿ. ಶ. ಸು. ೧೧೬೦ ಆಗಿರಬೇಕು.

೮೪) **ಸಿಂಧಬಲ್ಲಾಳ**

ಇವನು ಬಳ್ಳಾರಿಯಲ್ಲಿ ಸಿಂದ ಪಾಳೆಯಗಾರ. (Sindha Chief) ಸ್ಥಳಿಕ ಅಧಿಕಾರಿಯಾಗಿ ಆಳುತ್ತಿದ್ದನು. Historical Inscriptions of Southern India ಕ್ರಿ. ಶ. ೧೧೪೭. ಇದರಲ್ಲಿ ಹೇಳಲ್ಪಟ್ಟಿದ್ದಾನೆ. ಇವನು ಚಾಲುಕ್ಯ ಜಗದೇಕಮಲ್ಲ II (೨ನೆಯ ಜಯಸಿಂಹ)ನ ಕೈಕೆಳಗೆ ಆಳುತ್ತಿದ್ದನು. ಸಿಂಧರಾಜ ಈಶ್ವರ I ಎಂಬುವನು ಕ್ರಿ. ಶ. ೧೧೮೦ರಲ್ಲಿ ಆಳುತ್ತಿದ್ದನು, (ಅದೇ ಪುಸ್ತಕ) ಓರುಗಲ್ಲಿನ ಪ್ರತಾಪರುದ್ರ I ಎಂಬುವನು ಕ್ರಿ. ಶ. ೧೧೬೧-೧೧೯೯ರವರೆಗೆ ರಾಜ್ಯವಾಳಿದನು. ಅದಕ್ಕೆ ಮುಂಚೆ ಇವನು ರಾಜರಾಜ II ಚೋಳನ (ವಿಕ್ರಮನ ಮಗ) ಅಧೀನನಾಗಿ ಕೆಲಸ ಮಾಡುತ್ತಿದ್ದನು. ಈ ಪ್ರತಾಪರುದ್ರ Iನ ಮಗನಾದ ವೀರಭದ್ರರಾಜನ ಭಕ್ತಿಯಲ್ಲಿ ಶ್ರೀ ರೇವಣರು ತೇಕಲ್ಲಿನಲ್ಲಿ ವೀರಭದ್ರ ಪ್ರತಿಮೆಯ ಪ್ರತಿಷ್ಠೆಯನ್ನು ಮಾಡಿಸಿದರು. ಕ್ರಿ. ಶ. ೧೧೪೮ (ರಾಜರಾಜ II ಚೋಳನ ೨ನೆಯ ವರ್ಷದ ಆಳಿಕೆ) ಆಗ ಬಲ್ಲಾಳನು ಹೆಂಡತಿ ಸಹಿತ ಹೋಗಿದ್ದನು. ಆ ಬಲ್ಲಾಳನೇ ಮೇಲೆ ಕಂಡ ಸಿಂದ ಪಾಳೆಯಗಾರನೆಂದು ತರ್ಕಿಸಲವಕಾಶವಿದೆ. ಪ್ರಸಿದ್ಧ ಕಲಚೂರಿ ಚಕ್ರವರ್ತಿ ಬಿಜ್ಜಳನ ಹೆಣ್ಣು ಮಕ್ಕಳನ್ನು ಸಿಂದವಂಶದ ಚಾವುಂಡರಾಯನಿಗೆ ಮದುವೆ ಮಾಡಿದ್ದಾರೆ. (ನಿಜಾಮು ಇಲಾಖಾ ಶಾಸನ ನಂ. ೩೬).

೮೫) **ಮಾರವರ್ಮ ಶ್ರೀವಲ್ಲಭ**

(ಇವನು ಪಾಂಡ್ಯ ದೇಶದಲ್ಲಿ ಅಧಿಕಾರಕ್ಕೆ ಬಂದುದು ಕ್ರಿ. ಶ. ೧೧೬೦) ಇವನ ಮಗ ಕುಲಶೇಖರನು ಚೋಳರ ಅಧೀನದಲ್ಲಿ ಕೆಲಸ ಮಾಡುತ್ತಿದ್ದನು. (Historical Inscriptions of South India) ಈ ಕುಲಶೇಖರನ ತಂಗಿ ಕುಲಶೇಖರಿಯನ್ನು ಚೋಳರಾಜರಲ್ಲಿ ಪ್ರಸಿದ್ಧನಾದ ವಿಕ್ರಮ ಚೋಳನ ಮಗ ರಾಜರಾಜ II ಎಂಬುವನು ಮದುವೆಯಾಗಿದ್ದನು. ಈ ದಂಪತಿಗಳ ಮಗಳು ಸೌಂದರೀ (ಸೌಂದರನಾಚಿ) ಎಂಬುವಳನ್ನೇ ಶ್ರೀ ರೇವಣರು ಮದುವೆಯಾಗಿದ್ದಾರೆ. (ಬೊಮ್ಮರಸರ ಶ್ರೀ ರೇವಣಸಿದ್ಧ ಪುರಾಣ).

೮೬) **ಕೇರಳ ವೀರರವಿವರ್ಮ**

ಇವನು ಮಾರವರ್ಮ ಶ್ರೀ ವಲ್ಲಭಪಾಂಡ್ಯನ ಅಧೀನನಾಗಿದ್ದನು. ಕೇರಳದಲ್ಲಿ ರಾಜ್ಯಭಾರ ನಡೆಸುತ್ತಿದ್ದನು. ಕ್ರಿ. ಶ. ೧೧೬೦ (Historical Ins. of South India)

೮೭) **ಕನ್ನಾದೇವಿ**

ಕಲ್ಲರಸನ ಪತ್ನಿಯಾದ ಈಕೆಯನ್ನು ಶ್ರೀ ರೇವಣರು ಶ್ರೀಶೈಲದಲ್ಲಿದ್ದಾಗ ಚೌಡದಾನಪುರಕ್ಕೆ ಕಳುಹಿಸಿದರು. (ಚೌಡದಾನಪುರದ ಶಾಸನ ಕ್ರಿ. ಶ. ೧೧೯೧) ಪಂಜಾ

ಚಾರ್ಯರ ಚರಿತ್ರೆ ಮೊದಲನೆಯ ಭಾಗ ಪುಟ ೩೨೮–ಚೌಡದಾನಪುರದಲ್ಲಿ ದೇವಾಲಯ ವನ್ನು ಕಟ್ಟಿಸಲು ಶ್ರೀ ರೇವಣರು ಕನ್ನಮ್ಮರಸಿಗೆ ಅನುಕೂಲಮಾಡಿಕೊಟ್ಟರು.

೮೮) **ಕಲ್ಲರಸ = ಕಲ್ಲಣ = ಕಾಳಣ**

ಇವನು ಶಿಲಾಹಾರ ವಿಜಯಾದಿತ್ಯದ ಸೇನಾಧಿಪತಿ (General) ವಿಜಯಾದಿತ್ಯನು ಈ ಹಿಂದೆ ಹೇಳಲ್ಪಟ್ಟ ಸಂಖ್ಯೆ ೨೦ ರಲ್ಲಿ ಹೇಳಲ್ಪಟ್ಟಿದ್ದಾನೆ. ಶಿಲಾಹಾರವ ರಾಜರ ಪಸಾಯಿತಸೊಬ್ಬನು ಶ್ರೀ ರೇವಣರಿಗಾಗಿ ಸಿರಿವಾಳದ ಶಾಸನವನ್ನು ಬರೆಯಿಸಿರುವುದರಿಂದ (ಕ್ರಿ. ಶ. ೧೧೮೭) ಆಗಿನ ಶಿಲಾಹಾರವ ರಾಜರಿಗಾಗಲಿ ಅವರ ಸೇನಾಧಿಪತಿ ಕಲ್ಲರಸರಿಗಾಗಲಿ ಶ್ರೀ ರೇವಣರು ಪರಿಚಿತರಾದವರೆಂದು ವ್ಯಕ್ತವಾಗುತ್ತದೆ. ಈ ಕಲ್ಲರಸನು ವಿಜಯಾದಿತ್ಯನೊಡನೆ (ಬಿರಿದು ಅಯ್ಯನಸಿಂಗ-ಪಂಚವಕ್ತ್ರ) ಮೈಸೂರು ದೇಶದ ಸೊರಬದ ತಾಲ್ಲೂಕು ಕುಬಟೂರಿನ ದೇವಸ್ಥಾನಕ್ಕೆ ಹೋಗಿದ್ದಾನೆ ಎಂದೂ ಅಲ್ಲಿ ಒಂದು ಬಸದಿಯನ್ನು ವಿಜಯಾದಿತ್ಯನಿಗಾಗಿ ಕಟ್ಟಿಸಿದರೆಂದೂ ತಿಳಿಯಬರುತ್ತದೆ. (ಮೈಸೂರು ಶಾಸನ ಇಲಾಖೆಯ ರಿಪೋರ್ಟ್ ಕ್ರಿ. ಶ. ೧೯೧೬, ಪುಟ–೧೮) ಪಂಚವಕ್ತ್ರ ಗಣೇಶ್ವರನ ಮಗನು (ಮುಖಾಲಿ) ಪಾತಾಳಕ್ಕೆ ಹೋಗಿ ವೀಳ್ಯದೆಲೆ, ಅಡಿಕೆ, ಅರಿಸಿಣ, ಮುತ್ತೈದೆತನಕ್ಕಾಗಿ ಕಿವಿಗೆ ಇಡುವ ಓಲೆ ಅಥವಾ ತಾಳೆಗರಿಯ ಕೊಡೆ ಇವುಗಳನ್ನು ಇಹಲೋಕಕ್ಕೆ ತಂದವನೆಂದು ಗ್ರಂಥಗಳ ಹೇಳಿಕೆ. ಕುಬಟೂರು ಎಂಬುದು ಮಲೆನಾಡು, ಸೊರಬ ತಾಲೂಕು (ಶಿವಮೊಗ್ಗ ಜಿಲ್ಲೆ) ಅಲ್ಲಿ ಮೇಲೆ ಕಂಡ ಸಾಮಾನುಗಳು ಉತ್ಪತ್ತಿಯಾಗುತ್ತವೆ. ಬಂದಳಿಕೆ ಎಂಬುದು ನಾಗರಖಂಡಕ್ಕೆ ಸೇರಿದುದು. ಆ ನಾಗರಖಂಡವು ಈ ಕುಬಟೂರಿಗೆ ಸ್ವಲ್ಪ ದೂರ ಎಂದರೆ ೧೫–೨೦ ಮೈಲುಗಳ ದೂರದಲ್ಲಿ ಇದೆ. ನಾಗರಖಂಡ ಎಂದರೆ ಹಾವುಗಳ ಪ್ರದೇಶ ಎಂದು ಅರ್ಥ. ಆದುದರಿಂದ ಪಾತಾಳ ಎಂದು ಗ್ರಂಥಗಳಲ್ಲಿ ಬರೆದಿರುವುದು, ಈ ಪ್ರದೇಶವೇ ಆಗಿದೆ ಎಂದು ತಿಳಿಯಬಹುದಾಗಿದೆ. ಕ್ರಿ. ಶ. ೧೧೮೭–೧೯೯೧ರ ಕಾಲದಲ್ಲಿ ಕಲ್ಲರಸನು ಕಂಡುಬರುವುದಿಲ್ಲ. ಈ ಕಲ್ಲರಸನ ಹೆಂಡತಿ ಕ್ರಿ. ಶ. ೧೧೯೧ರ ಚೌಡದಾನಪುರದ ಶಾಸನದಲ್ಲಿ ಕಾಣುವುದರಿಂದ ಅಷ್ಟರೊಳಗಾಗಿ ಈ ಕಲ್ಲರಸನು ಗತಿಸಿರಬೇಕೆಂದು ಊಹಿಸಬೇಕಾಗಿದೆ. ಇವನು ಮೇಲಿನ ಶಾಸನದಲ್ಲಿ 'ಕಲಣ' (Kalana) ಎಂದು ಕರೆಯಲ್ಪಟ್ಟಿದ್ದಾನೆ.

*೨೦) **ಶಿಲಾಹಾರ ವಿಜಯಾದಿತ್ಯ (ಹಿಂದಿನ ಇದೇ ಸಂಖ್ಯೆಯ ವಿಷಯ ನೋಡಿ)**

ಪಂಚವಕ್ತ್ರಗಣೇಶ್ವರನ ಮಗ (ಮುಖಾಲಿ) ಪಾತಾಳಕ್ಕೆ ಹೋಗಿದ್ದನೆಂದು ಗ್ರಂಥಗಳಲ್ಲಿ ಹೇಳಿರುವುದಕ್ಕೆ ಸರಿಯಾಗಿ ಆ ಪಂಚಮುಖ ಗಣೇಶನೆಂದು ಗುರುತಿಸಲ್ಪಟ್ಟವನಾದ ಈ ಶಿಲಾಹಾರ ವಿಜಯಾದಿತ್ಯನು, ನಾಗರಖಂಡಕ್ಕೆ ಅಲ್ಲಿಗೆ ಸೇರಿರಬಹುದಾದ ಕುಬಟೂರಿಗೆ ಕ್ರಿ. ಶ. ೧೧೬೫ ರಲ್ಲಿ ಹೋಗಿದ್ದಾನೆ ಎಂದು ಗೊತ್ತಾಗುತ್ತದೆ. (ಕಲ್ಲರಸ ಎಂಬುವನ ವಿಷಯ ನೋಡಿ ಸಂಖ್ಯೆ-೮೮)

*೩೧) **ವೆಲನಾಡು ಗೊಂಕ II**
**(ಇದೇ ನಂಬರಿನ ಹಿಂದಿನ ವಿಷಯು ನೋಡಿ)**

ಬೆಂಗಳೂರಿನಿಂದ ಪೂನಾಕ್ಕೆ ಹೋಗುವ ರೈಲ್ವೆ ಗಾಡಿಯು ನಿಲ್ದಾಣವಾಗಿ ಬೆಳಗಾವಿ (Belgaum)ಯಿಂದ ಮುಂದೆ ಕರಾಡ ಎಂಬ ನಿಲ್ದಾಣ ಬರುತ್ತದೆ, ಈ ಗೊಂಕನು ಕರಾಡದವನಾಗಿರಬೇಕು. ಆದುದರಿಂದಲೇ ಇವನಿಗೆ ಕರಾಡದ ಅಸುರ ಅಥವಾ ಕರಾಟಾಸುರ (ಕರಟಾಸುರ) ಎಂದು ಗ್ರಂಥಗಳಲ್ಲಿ ಕರೆದಿರಬೇಕು. ಇವನು ತೆಲುಗು ಚೋಳನು.

೮೯) **ಕಂಚಿ ಪಂಡಿತಾರಾಧ್ಯ**

ಈತನು ಮದರಾಸು ಆಧಿಪತ್ಯದಲ್ಲಿರುವ ಕಂಚಿ ಎಂಬ ಊರಿನಲ್ಲಿ ಇದ್ದವನು. ಇವನಿಗೆ 'ಪಂಡಿತಾರಾಧ್ಯ' ಎಂಬ ಹೆಸರನ್ನು ಹೊಸದಾಗಿ ಕೊಟ್ಟು ಕಾಶಿ ವಿಶ್ವನಾಥಯ್ಯಗಳು ವೀರಶೈವ ದೀಕ್ಷೆ ಮಾಡಿದರು. ಈ ಪಂಡಿತಾರಾಧ್ಯರು ಭೈರಣ್ಣೊಡೆಯನ (ನೆಲ್ಲೂರು ಜಿಲ್ಲಾ ೩೬ನೆಯ ಶಾಸನ ಕ್ರಿ. ಶ. ೧೨೧೭–೧೮) ಭಕ್ತಿಗೆ ಒಳಪಟ್ಟು ಆತನ ಮನೆಯಲ್ಲಿ ಪ್ರಸಾದ ತೆಗೆದುಕೊಂಡವರು. (ಕಂಚಿಯ ಪಂಡಿತಾರಾಧ್ಯರ ಮಠವೊಂದು ಇರುವುದಾಗಿ ತಿಳಿಯುತ್ತದೆ. ಅದು ಅವರದೇ ಆಗಿರಬೇಕು.) ಇವರು ಭೈರಣ್ಣೊಡೆಯರ ಭಕ್ತಿ ಬಿನ್ನಹವನ್ನು ತೀರಿಸಿದನಂತರದಲ್ಲಿ ಇನ್ನೊಬ್ಬರ ಮನೆಗೆ ಬಿನ್ನಹಕ್ಕೆ ಹೋಗಿರಲು ಪಂಡಿತಾರಾಧ್ಯರು ಒಬ್ಬ ಕ್ಷತ್ರಿಯನ ಮನೆಯಲ್ಲಿ ಶೂದ್ರಾನ್ನವನುಂಡರೆಂದು ಆ ಮನೆಯವನು ಪಂಡಿತಾರಾಧ್ಯರಿಗೆ ವಿಷವನ್ನು ಪ್ರಸಾದದೊಡನೆ ಸೇರಿಸಿ ಉಣಬಡಿಸಿದರು. ಶಿವನಾಜ್ಞೆಯೆಂದು ಅವರು ಅದನ್ನು ಅರ್ಪಿಸಿದರು. ಶಿವಾಧೀನರಾದರು. ಇವರ ಸಮಾಧಿ ಮಾಡಿ ಜನರೆಲ್ಲರೂ ಊರೊಳಗೆ ಹೋದಮೇಲೆ ಇವರು ಜೀವದಿಂದ ಎದ್ದು, ಶಿವಸಂಕಾರ ದೇವರು ಎಂಬ ಹೆಸರಿನಿಂದ ಮುಂದೆ ಲೋಕ ವ್ಯವಹಾರ ಮಾಡಿದರು. (ಪರಮ ಮೂಲಜ್ಞಾನ ಪ್ರಶಸ್ತಿಯ ಕಥಾಗರ್ಭ)

೯೦) **ಧ್ರುವಮುನಿ**

'ಧ್ರುವೇಶ್ವರ ಮುನೀಶ್ವರಾತ್' ಎಂಬ ಒಂದು ಲೇಖನವಿದೆ (ಹೈದರಾಬಾದ್ ಬುಕ್ ೬೩. ಶಾಸನ III)

*೩೦) **ಉಪಮನ್ಯು** (ಇದೇ ಸಂಖ್ಯೆಯ ಹಿಂದಿನ ವಿಷಯನೋಡಿ)

ಕಾಕತೀಯ ಗಣಪತಿರಾಯನ ಕಾಲದಲ್ಲಿ ಯಾದವ ಮಹಾದೇವರಸನ ಶಾಸನದಲ್ಲಿ ಉಪಮನ್ಯು:ಮುನಿಯ ಹೆಸರಿದೆ.

*೧೫) **ಪಂಡಿತಾರಾಧ್ಯ** (ಇದೇ ಸಂಖ್ಯೆಯ ಹಿಂದಿನ ವಿಷಯ ನೋಡಿ)

ಬೇಜವಾಡದ ೯೨ನೆಯ ಶಾಸನದಲ್ಲಿ ಕಾರ್ತಿಕೇಯ ದೇವಾಲಯವನ್ನು ಶಿವ ದೇವಾಲಯವನ್ನಾಗಿ ಮಾರ್ಪಡಿಸಿದ ವಿಷಯವಿದೆ.

*೧೧) **ಶ್ರೀಪತಿಪಂಡಿತ** (ಇದೇ ಸಂಖ್ಯೆಯ ಹಿಂದಿನ ವಿಷಯ ನೋಡಿ)

ಬೇಜವಾಡ ೯೦ (ಮದರಾಸು ರಿಪೋರ್ಟ್ ೫೩೦ ಕ್ರಿ. ಶ. ೧೯೦೯) ಪಲ್ಲವರಾಜನಾದ ಮಹಾಮಂಡಲೇಶ್ವರ ಪಲ್ಲಕೇತರಾಜನು (ಕಾಡುವೆಟ್ಟಿ ವಂಶದಲ್ಲಿ ಹುಟ್ಟಿದವನು ಮತ್ತು ವೆಂಗಿದೇಶದ ಚಾಲುಕ್ಯ ರಾಜನ ಅಧೀನನಾಗಿದ್ದವನು) ಶ್ರೀಪತಿಪಂಡಿತನ ಪವಾಡದ ವಿಷಯದ ಶಾಸನವನ್ನು ಬರೆಯಿಸಿದ್ದಾನೆ. (EP Indica-1910)

೯೧) **ಮಲ್ಲಂಡು**

ಈತನು ಬೇಜವಾಡದ ಮಲ್ಲೇಶ್ವರ ದೇವಾಲಯವನ್ನು ಕಟ್ಟಿಸಿದನು ಕ್ರಿ. ಶ. ೯ನೆಯ ಶತಮಾನ. (ಬೇಜವಾಡ ೯೨ನೆಯ ಶಾಸನ)

*೧೮) **ಹರದತ್ತಾಚಾರ್ಯ** (ಇದೇ ನಂಬರಿನ ಹಿಂದಿನ ವಿಷಯ ನೋಡಿ)

ಈತನ ಮರಣವು ಕ್ರಿ. ಶ. ೧೧೯ರ ಸುಮಾರಿನಲ್ಲಿ ಆಯಿತೆಂದು ತಿಳಿಯುತ್ತದೆ. (ಈ ಹೆಸರಿನವರು ಇಬ್ಬರಿದ್ದರೆಂದು ತಿಳಿದುಬಂದಿದೆ. ಇನ್ನೂ ಶೋಧಿಸಬೇಕಾಗಿದೆ.) ಹರದತ್ತಾಚಾರ್ಯನ ಶಿಷ್ಯನೇ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದ ನೀಲಕಂಠ ಅಥವಾ ಶ್ರೀಕಂಠ ಶಿವಾಚಾರ್ಯ, Sivadvaita of Srıkanta ಎಂಬ ಪುಸ್ತಕದಲ್ಲಿ ಶೃತಿಸೂಕ್ತಮಾಲಾ ಗ್ರಂಥದ ವಿಷಯವು ಹೇಳಲ್ಪಟ್ಟಿದೆ. ಈ ಪುಸ್ತಕದ ಪುಟ ೪೨ರಲ್ಲಿ ಶ್ರೀಕಂಠನು ಗತಿಸಿದ ವರ್ಷದ ನಮೂದಿದೆ.

*೭೪) **ಶ್ರೀಕಂಠ ಅಥವಾ ನೀಲಕಂಠ ಶಿವಾಚಾರ್ಯ**

(ಇದೇ ನಂಬರಿನ ಹಿಂದಿನ ವಿಷಯ ನೋಡಿ)

ಇವರು ಕ್ರಿ. ಶ. ಸು. ೧೧೯ ರಲ್ಲಿ ಇದ್ದವರು. ಹರದತ್ತಾಚಾರ್ಯರ ಶಿಷ್ಯರು. ಶ್ರೀ ವ್ಯಾಸ ಋಷಿಗಳ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾರೆ. (Sivadvaita of Srikanta Page-42) ಇವರ ಭಾಷ್ಯವು ಶಿವಾದ್ವೈತ ಎಂದು ಹೇಳಲ್ಪಟ್ಟಿದೆ. ಉಮಾ ಸಹಿತನಾದ ಶಿವನೊಬ್ಬನೇ ದೇವನೆಂದು ತೋರಿಸಿ ಆ ವಿಷಯವನ್ನು ವಿವರಿಸುವಂತೆ ಇವರು ಭಾಷ್ಯವನ್ನು ರಚಿಸಿದ್ದಾರೆ. ಆದುದರಿಂದ ಇದು ಸಾಕಾರ ಶಿವನ ಅದ್ವೈತವಾಗಿದೆ. ವೀರಶೈವರು ಅನುಸರಿಸಿ ಇರುವುದು ನಿರಾಕಾರ ಶಿವನ ಅದ್ವೈತ. ಅದ್ವೈತ ತತ್ತ್ವಗಳಲ್ಲಿ ಸಾಕಾರ ಶಿವಾದ್ವೈತ-ನಿರಾಕಾರ ಶಿವಾದ್ವೈತ ಎಂದು ಎರಡು ಬಗೆಗಳೆಂದು ತಿಳಿಯಬೇಕು.

೯೨) **ಬಲ್ಲಿಚೋಡ**

ಇವನು ತೆಲುಗು ಚೋಡರಾಜರಲ್ಲಿ ಒಬ್ಬನು. ಪೊಟ್ಟಪ್ಪಿ ನನ್ನಿಚೋಡನ ಪರಂಪರೆಯಿಂದ ಬಂದವನು. ಶಿವಭಕ್ತನಾದ ಇವನ ವಂಶ ಸೂರ್ಯಕುಲ. "ಗೌರೀನಾಥ ಪದಾಬ್ಜ ವಂದಿತ ಗುಣಃ" ಎಂದು ಹೇಳಲ್ಪಟ್ಟಿದ್ದಾನೆ. (ನೆಲ್ಲೂರು ಶಾಸನಗಳು ಪುಟ ೩೫೪. ಕುನ್ನೆಪಲ್ಲಿ ಶಾಸನ Darsi ೪೮, ಕ್ರಿ. ಶ. ೧೧೪೫-೪೬) ಇವನು ಮುಂದಿನ ಪರಂಪರೆಯವನೇ.

ಶ್ರೀ ರೇವಣರಲ್ಲಿ ಭಕ್ತಿಯನ್ನಿಟ್ಟ ನೀಲಗಳ ಚಕ್ರವರ್ತಿ (Nallasiddha II) ಈ ಬಲ್ಲಿಚೋಡನ ತರುವಾಯದ ನನ್ನಿಚೋಡನೇ ಕುಮಾರಸಂಭವ ಕಾವ್ಯವನ್ನು ಬರೆದ ನನ್ನಿಚೋಡನೆಂದು ತರ್ಕಿಸಲವಕಾಶವಿದೆ.

೯೩) **ಹರದಿಹಳ್ಳಿಯ ನಂಜಣಾರ್ಯ**

ಇವನು ಪಂಚಾಚಾರ್ಯರ ಮೂಲಿಗರಲ್ಲಿ ಒಬ್ಬರಾದ ಏಕೋರಾಮ ತಂದೆಗಳ ಪುರಾಣವನ್ನು ಬರೆದಿದ್ದಾನೆ. ಅದರಲ್ಲಿ ತನ್ನ ಪೂರ್ವ ಪರಂಪರೆಯ ವಿಷಯವನ್ನು ಹೇಳಿಕೊಂಡಿದ್ದಾನೆ. ರಾಮಾಚಾರ್ಯ, ಈ ರಾಮಾಚಾರ್ಯ ತನಯ ಪೌತ್ರಪ್ರವಾಹಾಬ್ಧಿ ಚಂದ್ರತಿಲಕ ಮುನಿರಾಜ (೨ನೆಯ ಶಿವ), ಇವರ ಸುತ ದೇವಲ, ಇವನ ಮಗ ಪ್ರಣವ, ಇವನ ಮಗ ಶ್ರೀ ರುದ್ರದೇವ, ಇವನ ಮಗ ಪ್ರತ್ಯೂಷ, ಇವನ ಮಗ ಮಹಾಮಂತ್ರ ರಾಜ, ಇವನ ಮಗ ಶ್ರೀಕಂಠ, ಇವನ ಮಗ ವಾಮದೇವಾರ್ಯ, ಇವನ ಮಗ ದೇವೋತ್ತಮಾಚಾರ್ಯಾದಿ, ಇವನ ಮಗ ವಿಶ್ವನಾಥಾರ್ಯ, ಇವರ ಮಗ ಗುರುಸ್ವಾಮಿ, ಇವರ ಮಗ ವಿಶ್ವನಾಥಪ್ರಭು, ಇವರ ಮಗ ಹರಿಹರಾಚಾರ್ಯ, ಇವರ ಮಗ ಸುರಗಿಯ ಚೌಡದೇವಾರ್ಯ ನಾಮಾಂಕಿತ ಚೌಡೇಗುರು. ಇವರ ಮಗ ವೀರಣಾರ್ಯ (ಬಹಳ ಪ್ರಸಿದ್ಧ), ಇವನ ಮಗನೇ ಭೋಗಮಲ್ಲನಲೆಂಕ ಹರದಿಹಳ್ಳಿಯ ನಂಜಣಾರ್ಯ. (೧ನೆಯ ಸಂಧಿ ಪದ್ಯಗಳು ೪೬ ರಿಂದ ೫೨). ಇವರಲ್ಲಿ ತಾನು ಭೋಗಮಲ್ಲನದಾಸ ಎಂದು ಹೇಳಿಕೊಂಡಿದ್ದಾನೆ. ಭೋಗ ಮಲ್ಲಿಕಾರ್ಜುನ ಎಂಬುದು ಏಕೋರಾಮಾರಾಧ್ಯರ ಲಿಂಗ. ಆದುದರಿಂದ ಇವನು ಏಕೋರಾಮಾರಾಧ್ಯರುಗಳ ವಂಶಾನುಯಾಯಿಗಳು ಎಂದು ತಿಳಿಯುತ್ತದೆ. (ಪುರಾಣದ ೬ನೆಯ ಸಂಧಿಯಲ್ಲಿ ರಾಮರುದ್ರನ ಮಗನಾಗಿ ಏಕೋರಾಮನ ಜನನ ಎಂದು ಹೇಳಿರುವುದು ಮೂಲ ಆಚಾರ್ಯರಾದ ಏಕೋರಾಮ ದೇವರಿಗೇನೇ ಎಂದು ತಿಳಿಯುತ್ತದೆ. ಈ ಏಕೋರಾಮರ ವಂಶದಲ್ಲಿ ಕಾಶಿಯ ಪೀಠದ ಸ್ವಾಮಿಗಳ ಹೆಸರಾದ ವಿಶ್ವನಾಥ ಎಂಬುವರು ಇದ್ದರೆಂದೂ, ಬಸವೇಶ್ವರನ ಅನುಯಾಯಿ ಸುರಗಿಯ ಚೌಡಯ್ಯ ನಾಮಾಂಕಿತದವರೂ ಇದ್ದರೆಂದೂ ತಿಳಿದು ಬರುತ್ತದೆ.)

೯೪) **ಏಕೋರಾಮರು**

ಇವರು ಪಂಚಾಚಾರ್ಯರಲ್ಲಿ ಒಬ್ಬರು. ಹರದಿಹಳ್ಳಿಯ ನಂಜಣಾರ್ಯನು ಬರೆದ ಏಕೋರಾಮ ತಂದೆಗಳ ಪುರಾಣದ ಪ್ರಕಾರ ಮುದ್ರಾಪುರಕ್ಕೆ ರಾಮೇಶನಗರ ಎಂದು ಹೆಸರು. ಈ ರಾಮೇಶನಗರದಲ್ಲಿ ರಾಮರುದ್ರನ ಗರ್ಭದಲ್ಲಿ ಏಕೋರಾಮರು ಹುಟ್ಟಿದರು. ಆದರೆ ದೇವರ ದಾಸಿಮಯ್ಯನ ಮಗನು ಏಕೋರಾಮ ಎಂದು ಕವಿ ಚರಿತ್ರೆ (ಶ್ರೀ ಆರ್. ನರಸಿಂಹಾಚಾರ್ಯ ಕೃತ ಕವಿಚರಿತ್ರೆ) ಹೇಳುತ್ತದೆ.

೯೫) **ಅನ್ನದಾನಿ ಮಲ್ಲಿಕಾರ್ಜುನ**

ಮೈಸೂರು ದೇಶದ ಶಿವಮೊಗ್ಗ ಜಿಲ್ಲಾ ಶಿಕಾರಿಪುರದ ಸಮೀಪದಲ್ಲಿ ಹರಿಯುವ ಕುಮುದ್ವತೀ ನದಿಯ ಪಡುವಣ ತೀರದಲ್ಲಿ ಶ್ರೀಶೈಲಕ್ಕೆ ಸಮನಾದ ಪರ್ವತ, ಅಲ್ಲಿ

ಮಲ್ಲಿಕಾರ್ಜುನ ಕ್ಷೇತ್ರ, ಅಲ್ಲಿ ತುಂಬೂರು ಹೊಸೂರು ಅಗ್ರಹಾರ, ಅದರ ಸಮೀಪ ಶೀಲವಂತಪುರ (ಈಗ ಶೀಲವಂತನಕೊಪ್ಪ ಎಂಬ ಹೆಸರು), ಆ ಪುರಕ್ಕೆ ಅನ್ನದಾನಿ ಆಚಾರ್ಯನು ಪ್ರಭು, ಅನ್ನದಾನಿ ಮಲ್ಲಿಕಾರ್ಜುನ ದೇಶಿಕಾಗ್ರಣಿ ಎಂಬ ಈತನು 'ಗಂಗೋದಯ' ಅಥವಾ 'ವೀರಶೈವಾಮೃತ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನ ಪೂರ್ವ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ. ಬೇಜವಾಡನಗರಿಯಲ್ಲಿ ಪಂಡಿತಾರಾಧನ ವಂಶದಲ್ಲಿ ಕೆಂಚವೀರೇಶ, ಈತನ ಹೆಂಡತಿ ಚನ್ನವೀರಮ್ಮ, ಇವರ ಮಗ ಸೋಮನಾಥ, ತಾಯಿಯುವಂಶ ಭೃಂಗಿಗೋತ್ರ ಪಾಲ್ಕುರಿಕೆಯ ಆರಾಧ್ಯರ ಸಂತತಿಯಾದ ಕೊಡಗಿನಾಡೆಯಾಂಕನನ ಪುತ್ರರಾದ ನೀಲಕಂಠಾಗ್ರಜ ತ್ರಿಪುರಾರಿದೇವರ ಮಂತ್ರಿ ಸಂಗಪ್ಪವೊಡೆಯರು (ಭೃಂಗಿಯೇ ಪಾಲ್ಕುರಿಕೆ ಸೋಮೇಶನಾಗಿ ಪುಟ್ಟಿದನು) ಆ ಭೃಂಗಿಯ ವಂಶದಲ್ಲಿ ಹುಟ್ಟಿದ ಸಂಗಪ್ಪನ ಮಗನಾಗಿದ್ದ ಶ್ರೀ ಗಿರಿದೇವನ ಮಗಳು ಮಲ್ಲಮ್ಮ. ಈಕೆಯು ಮೇಲೆ ಕಂಡ ಸೋಮನಾಥನ ಧರ್ಮಪತ್ನಿ. ಇವರ ಮಗನೇ ದೇಶಿಕಾಗ್ರಣಿ ಅನ್ನದಾನಿ ಮಲ್ಲಿಕಾರ್ಜುನ. ಇವನಿಂದ ರಚಿಸಲ್ಪಟ್ಟ ಗ್ರಂಥವು ಸಂಸ್ಕೃತದಲ್ಲಿ ಇದೆ.

### ೯೬) **ವೀರಭದ್ರ ದೇವಾಚಾರ್ಯ**

'ವೀರಶೈವ ಸಿದ್ಧಾಂತ ದೀಪಿಕೆ' ಎಂಬ ಗ್ರಂಥವನ್ನು ಬರೆದವನು. ಶ್ರೀ ಪಂಡಿತಾರಾಧ್ಯರೆಂಬ ಹೆಸರಿನ ಆ ಆಚಾರ್ಯರ ವಂಶದವನಾಗಿ ಶಿವಸಿದ್ಧಾಂತ ತಂತ್ರವನ್ನು ತಿಳಿದ ಬಸವಾರ್ಯನೆಂಬ ಮಗನು ಹುಟ್ಟಿದನು. ಅವನ ಮಗ ಶಾಂತವೀರದೇವನು ಶಿವಪೂಜಾ ಪಾರಾಯಣನು. ಅವನ ಮಗ ವೀರಣಾರ್ಯನು. ಅವನ ಮಗ ವೀರಭದ್ರ ದೇವಾಚಾರ್ಯನು, ಭಿಕ್ಷಾವರ್ತಿ ಗುರುವಾದ ನೀಲಕಂಠದೇವರ ಕರುಣೆಯಿಂದ ಶಿವಸಿದ್ಧಾಂತ ದೀಪಿಕೆ ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾನೆ.

### *೩೧) **ವೆಲನಾಡಗೊಂಕ** II (ಇದೇ ನಂಬರಿನ ಹಿಂದಿನ ವಿಷಯ ನೋಡಿರಿ)

ಇವನು ಕ್ರಿ. ಶ. ೧೧೩೩ ರಿಂದ ೧೧೫೭ರ ವರೆವಿಗೆ ರಾಜ್ಯವಾಳಿದನು. ಇವನು ಕಡೆಕಡೆಗೆ ಕಾಳಹಸ್ತಿಯಿಂದ ಗಂಜಾಂವರೆವಿಗೆ ಇರತಕ್ಕ ದೊಡ್ಡ ಪ್ರದೇಶದ ಮೇಲೆ ಅಧಿಕಾರಿಯಾದನು (Cholas Page 626 N.) ಇವನಿಗೆ ಕೊಂಗಾಯನ್ (Kongayan) ಎಂಬ ಹೆಸರು ಇತ್ತು (102 A R E. Madras 1921) ಇವನು ವೆಲನಾಡು ರಾಜೇಂದ್ರ ಚೋಳ (ಗಾಂಗೇಯ ರಾಜನ್)ನ ಮಗನು. ಇವನು ಕಾಳಹಸ್ತಿ ಎಂಬ ಊರಿನ ಶಾಸನದಲ್ಲಿ ಇವನ ಮಂತ್ರಿ ವಾಸನನ್ (Vasanan) ಎಂಬುವನೊಡನೆ ಹೇಳಲ್ಪಟ್ಟಿದ್ದಾನೆ. (ARE 103, 108 of 1932 II 20) ಇವನ ದಂಡಾಧಿಪ ಮತ್ತು ಮಾಕುಳನಾಗಿ ಮಾರಾಯ ಪಾಂಡ (Mayraia Panda) ಎಂಬುವನು. ಇವನ ರಾಜ್ಯವನ್ನು ಬಹಳವಾಗಿ ಜೈಸಿ ಹೆಚ್ಚಿಸಿದನು. ಮತ್ತು ಇಕ್ಕುಪಲ್ಲಿ ಎಂಬಲ್ಲಿ ಒಂದು ಶಿವ ದೇವಾಲಯವನ್ನು ಕಟ್ಟಿಸಿದನು. (163 of 1897) (Cholas Page 72

by Nilakanta Sastri) ಪಾಂಡರಾಜನು ಈ ಎರಡನೆಯ ಗೊಂಕನ ಸೋದರ. (Apparantly)

೯೭) **ನಂಬಯ್ಯ** (Nambaya)

ಇವನು ಕೊಲ್ಲಿಪಾಕೆಯಲ್ಲಿ ಮಹಾಮಂಡಲೇಶ್ವರನಾಗಿದ್ದನು. (Cholas Page 72) (Ante PP. 48-63).

೯೮) **ಘಟ್ಟದೇವ ಮಹಾರಾಜ ಯಾನೆ ವಿಕ್ರಮಚೋಳ** (Cholas P. 72)
ಇವನ ಹೆಂಡತಿ ನಾಗಾಂಬಿಕೆ (Nagambika) (Cholas Page-79)

೯೯) **ಪೆರಿಯಸಿಕ್ಕಪ್ಪನಾಯಕ (ಸಿದ್ದಪ್ಪನಾಯಕ)**

ಇವನು ಮಧುರಾಂಕರ ಪೊಟ್ಟಪ್ಪಿ ಚೋಳನ ಆಶ್ರಯದಲ್ಲಿ ಕೆಲಸಮಾಡಿದವನು. ಕನ್ನಿ (Kanmi Nallur Sarana S. I. I)

೧೦೦) **ಸರಲೋಕವೀರ**

ಈತನು ಕ್ರಿ. ಶ. ೧೧೩೫ರ ವರೆಗೆ ಆಳಿದ ಚೋಳ ರಾಜರಲ್ಲಿ ಪ್ರಸಿದ್ಧನಾದ ವಿಕ್ರಮ ಚೋಳನ ಅಧೀನತೆಯಲ್ಲಿ ಕೆಲಸಮಾಡಿದವನು. ವಿಕ್ರಮ ಚೋಳನ ತರುವಾಯ ತನ್ನ ಅಧಿಕಾರವನ್ನು ಬಿಟ್ಟು ಚೋಳರಾಜನ ಆಜ್ಞೆಯಪ್ರಕಾರ ಮತಸಂಬಂಧವ ಕೆಲಸಗಳನ್ನು ಮಾಡುತ್ತಿದ್ದನು (ಬಹಳ ಮಟ್ಟಿಗೆ ದೇವಾಲಯಗಳ ಕೆಲಸಗಳನ್ನು ಮಾಡಿಸುತ್ತಿದ್ದಂತೆ ತಿಳಿಯಬೇಕಾಗಿದೆ. Studies in Chola History and administration-Page-196)

೧೦೧) **ತಿರುಕಾಲತ್ತಿದೇವ**

ಇವನು ತನ್ನ ತಂದೆ ಮನ್ನಸಿದ್ಧದೇವ ಮತ್ತು ಮಲ್ಲಸಿದ್ಧರಸ ಇವರಿಗೆ ಪುಣ್ಯ ಬರಲೆಂದು ನಂದಲೂರಿನಲ್ಲಿ ದೀಪವನ್ನು ಇಡಿಸಿದ್ದಾನೆ (ನಂದಲೂರು ಶಾಸನ 582 of 1907, Cholas Page 706, Cud Nellur Shasana 305 of 1894, S I g. No. 5-504. N-9. N-67)

೧೦೨) **ಸೂರ್ಯರಾಶಿ ಪಂಡಿತ**

ಗವರೇಶ್ವರದೇವರ ಅಂಗಭೋಗಕ್ಕೆ ಮಲ್ಲಸೆಟ್ಟಿ ಜೇಕಲದೇವಿಯ ಕಂಗಳ ಮಲ್ಲಿದೇವರಸರು ಆದಿತ್ಯ ದೇವರಸರ ಗದ್ದೆಯಲ್ಲಿ ಈ ಸೂರ್ಯರಾಶಿ ಪಂಡಿತರ ಪಾದವನ್ನು ತೊಳೆದು ಗದ್ದೆಯನ್ನು ದಾನಕೊಟ್ಟಿದ್ದಾರೆ. (ತಾಳಿಕೋಟೆಯಿಂದ ಕೊಡೆಕಲ್ಲಿಗೆ ಹೋಗುವ ದಾರಿಯಲ್ಲಿರುವ ಹಾರಟಿಗೆ ಎಂಬ ಗ್ರಾಮ-ಇದಕ್ಕೆ ಹಾರವಟ್ಟಿಗೆ ಎಂದು ಶಾಸನದಲ್ಲಿನ ಹೆಸರು. ಇಲ್ಲಿ ಚಾಲುಕ್ಯ ಜಗದೇಕಮಲ್ಲ II ಕಲ್ಯಾಣದ ನೆಲೆವೀಡಿನಲ್ಲಿ ನಲ್ಲಿದ್ದಾಗ ತನ್ನ ೮ನೆಯ ವರ್ಷದ ರಾಜ್ಯಭಾರದಲ್ಲಿ ರಕ್ತಾಕ್ಷಿ ಸಂವತ್ಸರದ ಚೈತ್ರಶುದ್ಧ ಪಂಚಮಿ ಸೋಮವಾರ-ಕ್ರಿ.ಶ. ೧೧೪೭-ಬರೆಸಿದ ಶಾಸನ)

೧೦೩) **ಪಾಂಡುರಾಜ (ನಾರಾಯಪಾಂಡ)**

ಇವನು ವೆಲನಾಡುಗೊಂಕ II ಎಂಬುವನ ಸೋದರಭಾವನು. (೯೬ರ ಮುಂದಿನ ೩೧ ನೋಡಿರಿ) ಈ ಪಾಂಡುರಾಜನ ಹೆಂಡತಿಯ ಹೆಸರು ನಾಗಾಂಬಿಕೆ (ಮದರಾಸು ವರದಿ ೧೭೬ ಸನ್ ೧೮೯೭)

೧೦೪) **ಮಲ್ಲಮಲ್ಲಯ್ಯ**

ಈತನು ವೆಲನಾಡು ವಂಶವ ರಾಜೇಂದ್ರ ಚೋಳ ಪೃಥ್ವೀಶ್ವರನ ಆಶ್ರಯದಲ್ಲಿ ಅಧಿಕಾರವಲ್ಲಿದ್ದವನು. ಇದಲ್ಲದೆ ಚೋಳರ ರಾಜರಾಜ II (ರಾಜೇಂದ್ರ ಚೋಳನ ಕೈಕೆಳಗೂ ಅಧಿಕಾರವಲ್ಲಿದ್ದವನು. (ಪೀಠಾಪುರಂ ಶಾಸನ. ಶಾ. ಶ. ೧೦೯೧-ಕ್ರಿ. ಶ. ೧೧೬೯) ಈತನೇ ಹಾರಟಿಗೆಯ ಶಾಸನದಲ್ಲಿ ಕಂಡ ಮಲ್ಲಸೆಟ್ಟಿ ಮಲ್ಲದೇವರಸನಾಗಿರ ಬಹುದೇ ?)

೧೦೫) **ಮಹೇಂದ್ರ ಪರ್ವತ**

ಗೋಮುಖಾಸುರನ ಆಂಧ್ರದೇಶವ (ವೆಲನಾಡು) ಗಡಿಯಲ್ಲಿ ಮಹೇಂದ್ರಪರ್ವತ ವಿರುವುದಾಗಿ ಸ್ವಯಂಭುವಾಗಮವು ಹೇಳುತ್ತದೆ. ಮಹೇಂದ್ರ ಪರ್ವತಕ್ಕೆ ಮ್ಮನು ಗೊಂಕ ಎಂಬ ರಾಜನು ಕ್ರಿ. ಶ. ೧೧೬೪ ರಲ್ಲಿ ಬಂದಂತೆ ತಿಳಿಯಬರುತ್ತದೆ. (Hisorical Inss of Southern India) ಈ ಮಹೇಂದ್ರ ಪರ್ವತವೇ ಬಿಜಾಪುರ ಜಿಲ್ಲಾ ಬಾದಾಮಿ ತಾಲೂಕು ಶಿವಯೋಗಮಂದಿರಕ್ಕೆ ಸಮೀಪದಲ್ಲಿರುವ "ಮಹಾಕೂಟ" ದ ಪರ್ವತವಾಗಿರಬೇಕು. ಈ ಪರ್ವತದ ಪಕ್ಕದಲ್ಲಿ ವಾಸವಾಗಿದ್ದುಕೊಂಡು ಗೋಮುಖಾಸುರನು ಅಯ್ಯಾರಳಿಯ ಬಲಿದೇವಿಯನ್ನು ಮೋಹಿಸಿದನೆಂದೂ, ಯುದ್ಧಕ್ಕೆ ಹೋದನೆಂದೂ, ಜನವಾರ್ತೆ (Tradition) ಇದೆ.

೧೦೬) **ಗೋಳಕಿಮಠ ಮತ್ತು ಈಶ್ವರ ಗುರುಗಳು**

ಗೋಳಕಿಮಠದ ವಿಷಯವಾಗಿ ಮದರಾಸು ವರದಿ ೧೯೧೭ನೆಯ ೩೫ನೆಯ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಆ ಪ್ರಕಾರ ಕ್ರಿ.ಶ. ೧೩ನೆಯ ಶತಮಾನದ ಆದಿಯಲ್ಲಿ ಕೃಷ್ಣಾ ಗೋಳಕೀಮಠ ಎಂಬುದು ಪ್ರಸಿದ್ಧವಾಗಿದ್ದಿತು. ಆಗ ಆ ಮಠದ ಅಧಿಕಾರಿಗಳಾಗಿ ಈಶ್ವರ ಗುರುಗಳು ಇದ್ದರು. ಇವರು ದೂರ್ವಾಸ ಋಷಿಯ ವಂಶದವರು. ಈ ವಂಶದವರಿಗೆ ಚೋಳರಾಜರಾದ ರಾಜರಾಜ, ರಾಜೇಂದ್ರ ಚೋಳ, ಕೊನೆಯಲ್ಲಿ ಕುಲೋತ್ತುಂಗ III ಇವರು ಧರ್ಮ ಪ್ರಚಾರ ಕಾರ್ಯದಲ್ಲಿ ಸಹಾಯಮಾಡಲು ಬಹಳ ಶ್ರದ್ಧೆಯನ್ನು ತೆಗೆದುಕೊಳ್ಳುತ್ತಿದ್ದರೆಂದು ಗೊತ್ತಾಗುತ್ತದೆ. ಕಾಶಿಯ ಗೋಳಕೀ ಮಠಕ್ಕೆ ಸೇರಿದ ಕಂಚಿಯಲ್ಲಿದ್ದ ಮಠದ ಕಾಶೀವಿಶ್ವನಾಥಯ್ಯಗಳಿಗೆ (ವಿಶ್ವಾರಾಧ್ಯರು) ಚೋಳರಾಜರ ಸಹಾಯವೂ ಇದ್ದಿರಬೇಕು, ಎಂಬುದು ಇದರಿಂದ ವ್ಯಕ್ತವಾಗುತ್ತದೆ. ರಾಜೇಂದ್ರ ಚೋಳ, ಕುಲೋತ್ತುಂಗ III-ಇವರು ಶ್ರೀ ರೇವಣರಲ್ಲಿ ಸಂಪೂರ್ಣ ಭಕ್ತಿಯುಳ್ಳವರಾಗಿದ್ದರೆಂಬುದು ಗ್ರಂಥಗಳಿಂದ ವ್ಯಕ್ತವಾಗುತ್ತದೆ.

೧೦೭) **ಅಘೋರ ಶಿವಾಚಾರ್ಯ**

ಇವನು 'ಕ್ರಿಯಾ ಕರ್ಮ ದ್ಯೋತಿಕ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇವನು ಗೋಳಕೀಮಠದ ಸಂಪ್ರದಾಯಕನಾದವನು. ದೂರ್ವಾಸ ಋಷಿಯ ವಂಶಿಕನು. ಮದರಾಸು ವರದಿ ೧೯೧೬ನೆಯ ೯೩ನೆಯ ಪ್ರಕರಣದಲ್ಲಿ ಶಾಸನಂ ೩೬೪ರಲ್ಲಿ ಗೋಳಕಿ ಮಠದ ಅಘೋರದೇವನ ಹೆಸರಿದೆ. ದೂರ್ವಾಸ ಋಷಿ ಈತನಿಂದ ತಂತ್ರಶಾಸ್ತ್ರವು ಹೊರಬಿದ್ದಿತೆಂದು ತಿಳಿಯು ಬಂದಿದೆ. (ವೀರಶೈವರಲ್ಲಿ '೨೧ ಗುರುಸಂಪ್ರದಾಯದವರು' ಎಂಬ ಹೇಳಿಕೆಯಲ್ಲಿ ಒಬ್ಬ ಗುರುಗಳ ಹೆಸರು 'ದೂರ್ವಾಸ' ಎಂದಿದೆ.

೧೦೮) **ಲಘುಪ್ರಭು**

ಈತನು ಅಘೋರ ಶಿವಾಚಾರ್ಯರ 'ಕ್ರಿಯಾಕರ್ಮದ್ಯೋತಿಕಾ' ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಗೋಳಕೀಮಠದ ಸಂಪ್ರದಾಯದವನು. ಇವನ ಹೆಸರಿನ ಮುಂದುಗಡೆಯಲ್ಲಿರುವ 'ಪ್ರಭು' ಎಂಬ ಉಪಪದವನ್ನು ನೋಡಿದಾಗ, ಇವರಂತೆ ಗೋಳಕೀಮಠದವರಿಗೆ ಹೆಸರಿನ ಮುಂದುಗಡೆಯಲ್ಲಿ 'ಪ್ರಭು' ಎಂಬ ಪದವನ್ನು ಉಪಯೋಗಿಸುತ್ತಿದ್ದರೆಂದು ತಿಳಿಯುಬರುತ್ತದೆ.

೧೦೯) **ವಿಶ್ವನಾಥಪ್ರಭು**

ಕೆರೆಯ ಪದ್ಮರಸರು ತಮ್ಮ 'ದೀಕ್ಷಾ ಬೋಧೆ' ಎಂಬ ಗ್ರಂಥದಲ್ಲಿ 'ವಿಶ್ವನಾಥ ಪ್ರಭುವೇ' ಎಂದು ಗುರುಸ್ತೋತ್ರ ಮಾಡಿರುವುದನ್ನು ನೋಡಿದರೆ, ಇವರು ಮೊದಲು ಗೋಳಕೀಮಠದವರಾಗಿದ್ದು ತರುವಾಯ ಸೌರಾಷ್ಟ್ರ ಸಿಂಹಾಸನ, ಕೊಲ್ಲಿಪಾಕಿ ಸಿಂಹಾಸನ ಮತ್ತು ಹಂಪೆ (ದಕ್ಷಿಣಕಾಶಿ) ಅಥವಾ ಭುಕ್ತ್ಯಬ್ಧಿ-ಸಿಂಹಾಸನ ಅಧಿಕಾರಿಗಳಾದ ಕಾಶೀವಿಶ್ವನಾಥಯ್ಯಗಳ (ವಿಶ್ವಾರಾಧ್ಯರ) ಸ್ತೋತ್ರವೇ ಆಗಿರಬೇಕೆಂದು ತಿಳಿಯಬೇಕಾಗಿದೆ (ಮೇಲೆ ಮದ್ರಾಸ ವರದಿಯಲ್ಲಿ ಕಂಡ 'ಪ್ರಭು' ಎಂಬ ಪದವು ಗೋಳಕೀಮಠದವರ ಹೆಸರಿನ ಮುಂದೆ ಹೇಗೆ ಬಂದಿತೆಂಬುದು ಇನ್ನೂ ಶೋಧನೀಯವಾಗಿಯೇ ಇದೆ)

೧೧೦) **ವಿಶ್ವೇಶ್ವರ ಶಿವಾಚಾರ್ಯ**

ಈತನು ಮಾಲ್ಕಾಪುರಂ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕಲಚುರಿ ಬಿಜ್ಜಳನ ಗುರುವಾಗಿದ್ದನೆಂದು ತಿಳಿದುಬರುತ್ತದೆ. ಗೋಳಕೀಮಠಕ್ಕೆ ಸೇರಿದವನು. (ಮದರಾಸು ವರದಿ ಮಾಲ್ಕಾಪುರ ಶಾಸನಗಳು ನಂ. ೪೦೭) ಕಲಚೂರಿ ಬಿಜ್ಜಳನು ದೂರ್ವಾಸ ವಂಶದ ಈ ಗುರುಗಳ ಶಿಷ್ಯನಾಗಿ ಶೈವನಾಗಿದ್ದನೆಂದು ನಿಶ್ಚಯಿಸಲಿಕ್ಕೆ ಬರುತ್ತದೆ).

೧೧೧) **ವಿಮಲಶಿವ**

ಈತನು ಕ್ರಿ. ಶ. ೧೩ನೇ ಶತಮಾನದ ಆದಿಯಲ್ಲಿದ್ದವನು. ಗೋಳಕೀಮಠದ ಸಂಪ್ರದಾಯದವನು. ಕ್ರಿ. ಶ. ೧೯೧೭ ನೆಯ ಮದರಾಸು ವರದಿ ೩೭ ನೆಯ ಪ್ರಕರಣ.

೧೧೨) **ದೇವರ ದಾಸಿಮಯ್ಯ**

(೧) ಇಲಿಯಟ್ಟರ ಸಂಗ್ರಹ ಪಾನು ೫೧೯, ಭಾಗ ೧ರಲ್ಲಿ ಪ್ರತಾಪಚಕ್ರವರ್ತಿ

ಜಗದೇಕಮಲ್ಲನ ಕಾಲದ ಶಾಸನ ನಂ. ೩೨ ರಲ್ಲಿ ಹೇಳಲ್ಪಟ್ಟಿದ್ದಾನೆ. (ಶಿವಾನುಭವ ೧-೨, ಪುಟ ೩೨ ರಲ್ಲಿ ನೋಡಿ) (೨) ಕಲಬುರಗಿ ಜಿಲ್ಲಾ ಗೊಬ್ಬೂರು ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕ್ರಿ. ಶ. ೧೧೪೮. (ಶಿವಾನುಭವ ೧-೨ ಪು. ೨೮.) ಈ ಶಾಸನದಲ್ಲಿ ದೇವರ ದಾಸಿಮಯ್ಯನು ಆಗ ಇದ್ದಂತೆ ತಿಳಿಯಬರುತ್ತದೆ. (೩) ಚಿಕ್ಕನಾಯಕನಹಳ್ಳಿ ೧೮ನೆಯ ಶಾಸನ (AD 1149) ಇದರಲ್ಲಿ ಬಾಣ ವಂಶೋದ್ಭವನಾದ ಮಾಚರಸನು ಶಿವಗೃಹಂಗಳನ್ನು ಮಾಡಿಸುತ್ತಿದ್ದುದು ಹೇಳಲ್ಪಟ್ಟಿದೆ. "ಬಾಣ ಮಯೂರ ದಾಸನಂ ವಸುಧೆಗೆ ಪೇಳಲಂತದುವೆ ಶಾಶ್ವತವೆಂಬುದು ಮಾಚರಸಂ ತಾಂ ಮಾಡುವಂ" ಎಂಬ ವರ್ಣನೆಯಿದೆ. (೪) ಹಾಸನಜಿಲ್ಲಾ ಚನ್ನರಾಯಪಟ್ಟಣದ ಶಾಸನ ನಂ.೨೧೦, AD ೧೧೬೬. ಇದರಲ್ಲಿ "ದಾಸನ ಕಯ್ಯಲು ತವನಿಧಿಯ ಪಡೆವಂತಿರೆ" ಎಂದಿದೆ. (೫) ಕ್ರಿ. ಶ. ೧೧೩೬ ರಲ್ಲಿ ಉಂಟೂರ ದೇವರ ದಾಸಿಮಯ್ಯನ ಶಾಸನವಿದೆ.

(ಶಿವಾನುಭವ vi-೬)

(ಒಟ್ಟಿನಲ್ಲಿ ದೇವರ ದಾಸಿಮಯ್ಯನು ಕ್ರಿ. ಶ. ೧೨ನೆಯ ಶತಮಾನದಲ್ಲಿ ಇದ್ದನೆಂಬುದಕ್ಕೆ ಆಧಾರಗಳು ಬಹಳವಾಗಿ ದೊರಕುತ್ತವೆ.)

೧೧೩) **ಶಂಕರ ದಾಸಿಮಯ್ಯ**

ಈತನು ಮಂಡ್ಯದ ೮೩ನೆಯ ಶಾಸನದಲ್ಲಿ ಹೇಳಲ್ಪಟ್ಟಿದ್ದಾನೆ. ಕ್ರಿ.ಶ. ೧೨೮೦. (ಶರಣಸಾಹಿತ್ಯ ೯-೧೦. ಡಿಸೆಂಬರ್-೧೯೪೬) ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಶಿವದಾಸಿಮಯ್ಯ--ಇವರು ಮೂವರೂ ಸಮಕಾಲೀನರು. ಕ್ರಿ. ಶ. ೧೨ನೆಯ ಶತಮಾನದವರು. ಎಂಬುದಕ್ಕೆ ಗ್ರಂಥಾಧಾರಗಳು ಬಹಳವಾಗಿ ಇವೆ.

೧೧೪) **ಸೋಮನಾಯಕನಹಳ್ಳಿಯ ಶಿವಪುರ**

ಮಂಗಳ ಕೆರೆಗೋಡನಾಡಬಿದಿರುಕೋಟೆಯ ಮಲ್ಲೆನಾಯಕ, ಸೋಮೆಯ ನಾಯಕನ ಹಳ್ಳಿಯ ಶಿವಪುರವಾಗಿ ಭಕ್ತರಿಗೆ ಧಾರಾಪೂರ್ವಕವಾಗಿ ಧರ್ಮಕೊಟ್ಟನು. ಈ ಶಿವಪುರವನ್ನು ಮಾದೆಯನಾಯನಕಯ್ಯಲುಕೊಂಡು ಸೋಮನಾಥಪುರವಾಗಿ ಮಾಡಿದರು. (ಶಕವರುಷ ೧೧೦೭. ಕ್ರಿ. ಶ. ೧೧೮೫. ಮೈಸೂರು ಶಾಸನ ಇಲಾಖೆಯ ರಿಪೋರ್ಟ್-೧೯೩೩. ನಂ. ೪೮. ಹೊಯ್ಸಳರ ವೀರಬಲ್ಲಾಳನ ರಾಜ್ಯ ಮಂಡ್ಯ ತಾಲೂಕು ೭೨ನೆಯ ಶಾಸನ ತಿದ್ದುಪಡಿ) ಈ ಧರ್ಮವು ವೀರಬಲ್ಲಾಳ ರಾಜನಿಗೆ ಹೆಚ್ಚಿನ ಪರಿಚಯಸ್ಥರಾಗಿ ಶ್ರೀ ರೇವಣಸಿದ್ಧರ ಪ್ರಯತ್ನದಿಂದಲೇ ನಡೆದಿರಬೇಕು. ಈ ರೇವಣರ ಕಾಲದಲ್ಲಿ ಲಿಂಗಾಯತ ಭಕ್ತರಿಗಾಗಿ ಶಿವಪುರವನ್ನು ಏರ್ಪಡಿಸಿದ ಉದಾಹರಣೆ ಅಲ್ಲಲ್ಲಿ ತೋರುತ್ತದೆ.

೧೧೫) **ಮಾದಿರಾಜಗುರು**

ಹೊಯ್ಸಳ ರಾಜ್ಯದಲ್ಲಿನ ವೀರಸೋಮನಾಥಪುರದ ವೀರಭದ್ರದೇವರೇ (ಇವು ಒಬ್ಬರ ಹೆಸರು) ಮುಂತಾದ ವೃತ್ತಿವಂತರು ಮಂಗಳಮಾಡಿದ (ಮಂಗಳವಾಡ ?)

ಅಸಂಖ್ಯಾತರಾದ ಗಣಂಗಳು ಸಹ ಸೇರಿ ಆ ವೀರಸೋಮನಾಥಪುರದ ಮಾದಿರಾಜ ಗುರುಗಳಿಗೆ ವೃತ್ತಿಯನ್ನು ಕೊಟ್ಟಿದ್ದಾರೆ. (ಈ ವೃತ್ತಿಯನ್ನು ಕೊಟ್ಟವನು ಕೆರೆಗೆ ದೇವಾಲಯಕ್ಕೆ ವೃತ್ತಿಯನ್ನು ಕೊಡತಕ್ಕವನಲ್ಲ ಎಂದು ಶಾಸನದಲ್ಲಿ ಸ್ಪಷ್ಟವಾಗಿ ಬರೆದಿದೆ.) ಈ ಮಾದಿರಾಜ ಗುರುವಿನ ಜೊತೆಗೆ ಕರಸ್ಥಳದ ಬಸವಿದೇವ, ಉತ್ತಮಾಂಗದ (ಶಿರಃಸ್ಥಳ) ಮಲ್ಲದೇವಗೆ-ವೃತ್ತಿಯನ್ನು ಕೊಟ್ಟಿದ್ದಾರೆ. ಈ ಶಾಸನದ ಕಾಲದಷ್ಟು ಹೊತ್ತಿಗೆ ಕಲ್ಯಾಣದಿಂದ ಅಸಂಖ್ಯಾತ ಗಣಂಗಳು ಹೊಯ್ಸಳ ರಾಜ್ಯಕ್ಕೆ ಬಂದಂತೆ ವ್ಯಕ್ತವಾಗುತ್ತದೆ. ಕರಸ್ಥಳದವರು, ಶಿರಃಸ್ಥಳದವರು ಎಂಬ ವೀರಶೈವರಿಗೆ ವೃತ್ತಿಯನ್ನು ಕೊಟ್ಟಿರುವುದರಿಂದ ಶಿವಶರಣರ ಆಚಾರವೂ ಅಲ್ಲಿ ರೂಢಿಗೆ ಬಂದಂತೆ ತೋರುತ್ತದೆ. ಆಗ ಇಲ್ಲಿನ ಸ್ಥಾನಪತಿ (ಸ್ಥಾನಾಚಾರ್ಯ) ಮಾದಿರಾಜಗುರು ಆಗಿದ್ದಾರೆ. ಗೋಳಕಿಮಠದ ಸಂಪ್ರದಾಯದವರು ಅನೇಕ ಕಡೆಗಳಲ್ಲಿ ಸ್ಥಾನಾಚಾರ್ಯರಾಗಿದ್ದಂತೆ, ಈ ಮಾದಿರಾಜ ಗುರುಗಳು ಇಲ್ಲಿ ಸ್ಥಾನಾಚಾರ್ಯರಾಗಿ ಇದ್ದಾರೆ. (ಕೊಪ್ಪದ ಹೋಬಳಿ ರಾಯಸೆಟ್ಟಿಪುರ ಸೋಮೇಶ್ವರ ದೇವಸ್ಥಾನದ ಪೂರ್ವದಿಕ್ಕಿನ ಕಲ್ಲು–ಕ್ರಿ. ಶ. ೧೨೫೧.)*



* ಇಲ್ಲಿಗೇ ಈ ಲೇಖನ ಮುಗಿಯಿತೋ ಅಥವಾ ಮುಂದೆ ಇನ್ನೂ ಇರುವುದೋ ಗೊತ್ತಿಲ್ಲ. ಸದ್ಧರ್ಮ ದೀಪಿಕೆಯ ಎಂಟುಸಂಚಿಕೆಯಲ್ಲಿ ಪ್ರಕಟವಾದ ಈ ಲೇಖನ ಎಷ್ಟಿತ್ತೋ ಅಷ್ಟನ್ನು ಮಾತ್ರ ನಾವು ಇಲ್ಲಿ ಕೊಟ್ಟಿದ್ದೇವೆ.

# ೩

# ತತ್ತ್ವ-ವಿಚಾರ-ವಿಜ್ಞಾನ

[ಶ್ರೀ ಚೆನ್ನಮಲ್ಲಿಕಾರ್ಜುನರು ತಮ್ಮ ಮಾಸಪತ್ರದಲ್ಲಿ ಸಂಪಾದಕೀಯ ಲೇಖನಗಳನ್ನು ಬರೆಯುತ್ತಿರಲಿಲ್ಲ. ಈ ಪತ್ರಿಕೆಯ ಉದ್ದೇಶ ವೀರಶೈವದ ಸರ್ವಾಂಗೀಣ ಉನ್ನತಿ ಮಾತ್ರ ಆಗಿರಲೂ ಇಲ್ಲ. ಅವರ ಉದ್ದೇಶ ವ್ಯಾಪಕವೂ ಬಹುಮುಖ ಮತ್ತು ದೂರದೃಷ್ಟಿಯುದೂ ಆಗಿತ್ತು. ಅನೇಕ ಪ್ರಚಲಿತ ರಾಷ್ಟ್ರೀಯ, ಜಾಗತಿಕ (ಮಾನವಿಕ-ವೈಜ್ಞಾನಿಕ) ಸಮಸ್ಯೆಗಳನ್ನೂ ಒಳಗೊಂಡಿರುತ್ತಿತ್ತು. ಇಂತಹ ಚಿಕ್ಕ ದೊಡ್ಡ ಲೇಖನಗಳೇ ಅವರ ಸಂಪಾದಕೀಯಗಳಾಗಿರುತ್ತಿದ್ದುವೆನ್ನಬಹುದು. ಪ್ರಕೃತ ಅಂಥ ಕೆಲವು ಗಮನಾರ್ಹವಾದ ಪೀಠಿಕೆ ಮತ್ತು ಚಿಕ್ಕ ದೊಡ್ಡ ಲೇಖನಗಳನ್ನು ಈ ಮುಂದೆ ಅವರ ಮಾಸಪತ್ರಿಕೆಗಳಿಂದ ಸಂಗ್ರಹಿಸಿ ಕೊಡಲಾಗಿದೆ.]

—ಸಂ.

# ವಾಗದ್ವೈತ ನಿರಸನ*

ಹಿಂದೂಗಳಲ್ಲಿ ಇರುವ ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಶಿವಾದ್ವೈತ ಇವುಗಳ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು—

ಮಹದೇವನೂ, ಜಗತ್ತೂ ಬೇರೆ ಬೇರೆ ಇದ್ದಾರೆ. ಜಗತ್ತು ಮಹಾದೇವನಾಗುವುದಿಲ್ಲ. ಮಹಾದೇವನು ಸಾಕಾರನು. ಅವನು ನಿರ್ಮಾಣ ಮಾಡಿದುದರಿಂದ ಜಗತ್ತಾಗಿದೆ. ಈ ಭೂಮಿಯು ಯಾವಾಗಲೂ ಸ್ಥಿರವಾಗಿ ಇರುವುದು ಎಂದು ದ್ವೈತಿಗಳು ಹೇಳುತ್ತಾರೆ. ಇವರು ಹೇಳುವಂತೆ ಸಾಕಾರನಾದ (ಕೈಕಾಲುಗಳುಳ್ಳ) ದೇವನು ಈ ಭೂಮಿಯನ್ನು ಮಾಡಿ ಒಗೆದನೆಂದು ಹೇಳುವುದು ಅಸಂಭವ. ಏಕೆಂದರೆ ಈಗಿನ ಶಾಸ್ತ್ರಕಾರರು (Scientists) ಎಲ್ಲಾ ಪದಾರ್ಥಗಳ ಮತ್ತು ಮನುಷ್ಯ ಮೂಲರೂಪದ ಸ್ಥಿತಿಯೂ ಒಂದೇ ಎಂದೂ ಒಂದೇ ವಸ್ತುವಿನಿಂದ ಎಲ್ಲ ರೂಪಿನ ವಸ್ತುಗಳೂ ಆಗಿರುವವೆಂದೂ ದೃಢಪಡಿಸಿ ಇರುತ್ತಾರೆ.

ವಿಶಿಷ್ಟಾದ್ವೈತಿಗಳು ದೇವನು ಈ ಜಗತ್ತಿನ ರೂಪಿನ ಆಕಾರದವನು, ಅವನ ಹೊಟ್ಟೆಯಲ್ಲಿ ಚರ, ಅಚರ ಎಂಬ ಎಲ್ಲಾ ಪದಾರ್ಥಗಳೂ ತುಂಬಿಕೊಂಡಿವೆ. ಅವು ಹೊರಗೆ ಬಂದಾಗ ಬೇರೆ ಬೇರೆ ತೋರುತ್ತವೆ. ಒಳಗೆ ಇದ್ದಾಗ ಒಂದರ ಕೂಡೊಂದು ಸೇರಿಕೊಂಡು ಇವೆ. ಹೀಗೆ ದೇವನು ಇರುವುದರಿಂದ ಈ ಅಭಿಪ್ರಾಯವು ವಿಶಿಷ್ಟಾದ್ವೈತ ಎನಿಸಿಕೊಂಡಿದೆ ಎಂದೂ ತಿಳಿಯುತ್ತಾರೆ. ಇದು ಕೆಲವು ಲಕ್ಷಣಗಳಿಂದ ಕೊರತೆಯನ್ನು ಹೊಂದುತ್ತದೆ. ಹೇಗೆಂದರೆ ಒಬ್ಬ ದೇವನ ಹೊಟ್ಟೆಯಲ್ಲಿ ಈ ದಿನ ಇರುವ ಭೂಮಿಯು ನಾಳೆ ಎಂದೋ ಒಂದು ದಿನ ನೀರಾಗಿ ಬಿಡಬಹುದು. ಪದಾರ್ಥಗಳಿಗೆ ಮೂರು ರೂಪಗಳುಂಟೆಂದೂ ಅವಕ್ಕೆ ನಾಶವಿಲ್ಲವೆಂದೂ ಆಧುನಿಕ ಶಾಸ್ತ್ರವು (Science) ಒಪ್ಪುತ್ತದೆ. ಹೀಗಿದ್ದಾಗ್ಯೂ ವಿಶಿಷ್ಟಾದ್ವೈತಿಗಳು ತಮ್ಮಿಂದ ಯೋಚಿಸಲ್ಪಡುವ ದೇವನು ಭಿನ್ನ ಭಿನ್ನ ರೂಪನಾಗಬಹುದು ಮತ್ತು ಆತನ ಒಳಗಿನ ವಸ್ತುಗಳೂ ಬೇರೆ ಬೇರೆ ರೂಪವನ್ನು ತಾಳಬಹುದು ಎಂದು ಹೇಳುವುದಕ್ಕೆ ಮಾತ್ರ ಒಪ್ಪುವುದಿಲ್ಲ. ದ್ವೈತಿಗಳಂತೆ ಪದಾರ್ಥಗಳು ಸ್ಥಿರವೆಂದೂ ದೇವನ ಹೊಟ್ಟೆಯಲ್ಲಿ ಅಡಗಿದ ಆ ಪದಾರ್ಥಗಳು ಅಲ್ಲಿಂದ ಮೊದಲಿನ ಸ್ಥಿತಿಯಲ್ಲಿಯೇ ಹೊರಬೀಳುವವೆಂದೂ ಅವರು ನಂಬುತ್ತಾರೆ. ಇವಲ್ಲದೆ ದೇವನು ಹೊಟ್ಟೆವುಳ್ಳವನು ಎಂದು ನಂಬಿರುವುದರಿಂದ

---

* ಶ್ರೀ ಚನ್ನಮಲ್ಲಿಕಾರ್ಜುನರು ಪ್ರಕಟಿಸಿದ ವಾಗದ್ವೈತ ನಿರಸನ ತ್ರಿವಿಧಿ ಗ್ರಂಥದ ಪೀಠಿಕೆಯಿಂದ.

ಇವರು ಬ್ರಹ್ಮಾಂಡ ರೂಪದಲ್ಲಿ ಇರುವ ಸಾಕಾರ ಮೂರ್ತಿಯನ್ನೇ ನಂಬಿಕೊಂಡಂತೆ ಆಗಿದೆ. ಈ ಬ್ರಹ್ಮಾಂಡ ರೂಪದ ಮೂರ್ತಿಯು ಈಗಿನ ರೂಪದಿಂದ ಎಂದಾದರೂ ಬದಲಾಗಬಹುದೆಂಬ ನಿಜ ಸಂಗತಿಗೆ ಈ ಅಭಿಪ್ರಾಯದಲ್ಲಿ ಅವಕಾಶವೇ ಇಲ್ಲ ಮತ್ತು ಕಣ್ಣಿಗೆ ಕಾಣುತ್ತಿರುವ ಬ್ರಹ್ಮಾಂಡದ ಮೂಲವಾದ ನಿರಾಕಾರ ವಸ್ತುವಿನ ಪ್ರತ್ಯೇಕವಾದ ಚಿಂತನೆಯೇ ಇದರಲ್ಲಿ ಇಲ್ಲ.

ಇನ್ನೂ ಅದ್ವೈತಿಗಳ ತಿಳುವಳಿಕೆಯು ಶ್ರೇಷ್ಠವೆಂದು ಹಿಂದೂಗಳೆಲ್ಲರೂ ಒಪ್ಪುತ್ತಾರೆ. ಬಹಳ ಮಟ್ಟಿಗೆ ಪೂರ್ವಿಕರ (ಹಿಂದೂ) ಶಾಸ್ತ್ರವೆಲ್ಲವೂ ಹೀಗೆಯೇ ಹೇಳುತ್ತವೆ. ಈ ಪ್ರಪಂಚದಲ್ಲಿ ಒಬ್ಬ ಬ್ರಹ್ಮನೇ ಇದ್ದಾನೆ ಎಂದೂ, ಭೂಮಿ ಮೊದಲಾದ ಜಡ ಪದಾರ್ಥಗಳು ಉಂಟೆಂದು ತಿಳಿಯುವುದು ಮಾಯೆ ಎಂದೂ ಈ ಮಾಯೆಯನ್ನು ಬಿಟ್ಟು ಬ್ರಹ್ಮವೊಂದನ್ನೇ ವಿಚಾರಿಸಬೇಕೆಂದೂ ಇವರು ಹೇಳುತ್ತಾರೆ. ಇವರು ತಿಳಿದುಕೊಂಡಿರುವ ಬ್ರಹ್ಮವು ನಿರಾಕಾರ ವಸ್ತುವು (ರೂಪಿಲ್ಲದುದು). ಸಾಮಾನ್ಯವಾಗಿ ಮನುಷ್ಯನ ಎದುರಿನಲ್ಲಿ ಕಾಣುತ್ತಿರುವ ಬ್ರಹ್ಮಾಂಡದಲ್ಲಿ ನಿರಾಕಾರವಾದ ಭಾಗವು ಆಕಾಶವೆಂದು ನಾವು ತಿಳಿದಿರುವೆವಷ್ಟೆ. ಅದಕ್ಕಿಂತಲೂ ಸೂಕ್ಷ್ಮ ರೂಪದಲ್ಲಿ ಇರುವ ಒಂದು ವಸ್ತುವು ಆಕಾಶವನ್ನು ಹುಟ್ಟಿಸಿರುವುದು ಎಂದೂ, ಸೂರ್ಯನು ಆಕಾಶದ ಆಶ್ರಯದಲ್ಲಿ ಇರುವಂತೆ ಆಕಾಶವು ಆ ಮೂಲ ವಸ್ತುವಿನ ಆಶ್ರಯದಲ್ಲಿ ಇರುವುದು, ಈ ಮೂಲ ವಸ್ತುವೇ ನಿರಾಕಾರ(ಬ್ರಹ್ಮ)ವು. ಈ ಬ್ರಹ್ಮವೇ ಯಾವಾಗಲೂ ಇರತಕ್ಕ ವಸ್ತುವು. ಭೂಮಿ ಮೊದಲಾದವುಗಳಾಗಲೀ ಮನುಷ್ಯನ ದೇಹ ಮೊದಲಾದವುಗಳಾಗಲೀ ಯಾವಾಗಲೂ ಇರತಕ್ಕವುಗಳಲ್ಲವೆಂತಲೂ ಇವು ಇವೆ ಎಂದು ತಿಳಿದುಕೊಳ್ಳುವುದೇ ತಪ್ಪು ತಿಳಿವಳಿಕೆ (ಮಾಯೆ) ಎಂದೂ ಆದುದರಿಂದ ಇವುಗಳ ವಿಚಾರಕ್ಕೆ ಗಮನ ಕೊಡದೆ ಬ್ರಹ್ಮಾಂಡದಲ್ಲಿ ಆಕಾಶಕ್ಕಿಂತ ಸೂಕ್ಷ್ಮವಾದ ವಸ್ತುವು ಹೇಗೆ ಬ್ರಹ್ಮ ಎನಿಸಿಕೊಂಡಿರುವನೋ ಹಾಗೆ ದೇಹದಲ್ಲಿ ತಪ್ಪು ತಿಳಿವಳಿಕೆಯನ್ನೂ ಬಿಟ್ಟ ಜೀವನೇ ಬ್ರಹ್ಮನೆನಿಸಿಕೊಳ್ಳುವನೆಂದೂ ಈ ಬ್ರಹ್ಮನೊಬ್ಬನೇ ಸತ್ಯ (ಯಾವಾಗಲೂ ಇರುವವನು) ಎಂದೂ ಇವನ ವಿಷಯವನ್ನು ಕುರಿತು ಯೋಚಿಸಿದರೆ ಸಾಕು. ಉಳಿದ ವಸ್ತುಗಳೆಲ್ಲಾ ಜಡಗಳಾದ್ದರಿಂದ ಅವರ ಗೋಜಿಗೆ ಹೋಗದಂತಿರಬೇಕೆಂದೂ ನಂಬುತ್ತಾರೆ.

ಒಂದು ದೊಡ್ಡ ಬಯಲಿನಲ್ಲಿ ಸೂರ್ಯ, ಚಂದ್ರ, ಭೂಮಿ, ನೀರು (ಮೋಡ) ಗಾಳಿ, ಆಕಾಶ ಇವುಗಳು ಕೂಡಿ ಇರುವುದರಿಂದ ಈ ಬಯಲೇ ಮುಖ್ಯವೆಂದು ತಿಳಿದು ಅದು ದೊಡ್ಡದು (ಬೃಹತ್ವ) ಮತ್ತು ಅದು ನಾನೇ ದೊಡ್ಡವನೆಂಬ ಕೂಗು (ಬೃಂಹಣತ್ವ = ನಾದರೂಪ) ಉಳ್ಳದು. ಆದುದರಿಂದ 'ಬ್ರಹ್ಮ' ಎಂಬ ಹೆಸರು ಇದಕ್ಕೆ ಬಂದಿದೆ. (ಬೃಹತ್ವಾದ್ ಬೃಂಹಣತ್ವಾಚ್ಚ ಬ್ರಹ್ಮ ಮಿತ್ಯುಚ್ಯತೇ ಬುಧೈಃ) ಈ ದೆಸೆಯಿಂದ ಈ ಅದ್ವೈತಿಗಳು ತಿಳಿದ ಬ್ರಹ್ಮನು ಆಕಾಶದಂತೆ ಇರುವ ನಿರಾಕಾರದ ಒಂದು ಮಂಡಲದ ರೂಪದಲ್ಲಿ ಇರುವನು. ಈ ಮಂಡಲದ ಒಳಗೆ ಇರತಕ್ಕ ಭೂಮಿ ಮೊದಲಾದವುಗಳು ಗಣನೆಗೆ ಬರತಕ್ಕವುಗಳಲ್ಲ.

ಯೋಚಿಸುವವರಿಗೆ ಇದೇ ಶ್ರೇಷ್ಠವಾದ ತಿಳಿವಳಿಕೆ ಎಂದು ಭಾವನೆ ಬರುವುದೇನೋ ನಿಜ. ಆದರೆ ಈ ತಿಳಿವಳಿಕೆಯು ಒಬ್ಬ ಮನುಷ್ಯನ ಮನಸ್ಸಿನಲ್ಲೂ ಯೋಚಿಸಲಿಕ್ಕೆ ಮಾತ್ರ, ಹೇಳುವುದಕ್ಕೆ ಮಾತ್ರ, ಸಾಧ್ಯವೇ ಹೊರತು ನಡೆಯಲ್ಲಿ ಬರಲಿಕ್ಕೆ ಅನುಕೂಲವಿಲ್ಲ. ಏಕೆಂದರೆ ಒಂದು ಕಪ್ಪೆಯಚಿಪ್ಪನ್ನು ಅಥವಾ ಮುತ್ತಿನ ಸಿಂಪೆಯನ್ನು ನೋಡಿ ಇದು ಬೆಳ್ಳಿ ಎಂದು ಭಾವಿಸುವಾಗ ಹೇಗೆ ಮನುಷ್ಯನಿಗೆ ಭ್ರಾಂತಿ ಇರುವುದೋ ಹಾಗೆಯೇ ಬ್ರಹ್ಮನನ್ನು ನೋಡಿ ಭೂಮಿ ಎಂದು ತಿಳಿಯುವ ಮನುಷ್ಯನಿಗೆ ಭ್ರಾಂತಿಯುಂಟೆಂದು ಹೇಳುವುದರಲ್ಲಿ ಕಪ್ಪೆಯಚಿಪ್ಪು, ಬೆಳ್ಳಿ ಎಂಬ ಎರಡೂ ವಸ್ತುಗಳೂ ಭೂಮಿ, ಬ್ರಹ್ಮ ಎಂಬ ಎರಡು ವಸ್ತುಗಳೂ ಅದ್ವೈತಿಗಳ ಬಳಕೆಯಲ್ಲಿ ಇದ್ದಂತಾಗುವುದು. ಆದುದರಿಂದಲೇ ವಸ್ತುಗಳಲ್ಲಿ ಜಡ, ಅಜಡ ಎಂಬುದಾಗಿ ಎರಡು ವಿಧವಾಗಿ ಪದಾರ್ಥಗಳನ್ನು ವಿಂಗಡಿಸಿ ಅಜಡನು ಬ್ರಹ್ಮ ಎಂದೂ, ಜಡವು ಭೂಮಿ ಎಂದೂ ತಿಳಿಯುತ್ತಾರೆ. ಭೂಮಿಯು ಯಾವಾಗಲೂ ಇರತಕ್ಕದ್ದಲ್ಲವೆಂಬ ಜ್ಞಾನಮಾತ್ರದಿಂದಲೇ ಅದನ್ನು ಜಡವಾಗಿ ಭಾವಿಸಿ ಇರುವುದರಿಂದ ಇವನು ವಸ್ತುಗಳಲ್ಲಿ ದ್ವೈವಿಧ್ಯವನ್ನು ಭಾವಿಸಿ, ನಡತೆಯಲ್ಲಿ ಎರಡು ವಸ್ತುಗಳನ್ನೇ ಮಾನಿಸಬೇಕಾಗುತ್ತದೆ.

ಇದಲ್ಲದೆ ಜ್ಞಾನದಲ್ಲಿ ಮಾತ್ರ ಒಂದೆಂದು ತಿಳಿಯಲ್ಪಡುವ ಅದ್ವೈತಿಗಳ ಈ ವಿವರ್ತ ವಾದವು ನಡತೆಯಲ್ಲಿ ಎಂದೂ ಉಪಯೋಗಕ್ಕೆ ಬರುವುದಿಲ್ಲ. ಏಕೆಂದರೆ ಭೂಮಿಯನ್ನು ನೋಡಿ, ನೀರನ್ನು ನೋಡಿ,ಬೆಂಕಿಯನ್ನು ನೋಡಿ ಇವು ಬ್ರಹ್ಮ ಎಂದು ತಿಳಿಯುವ ಮನುಷ್ಯನು ಬೆಂಕಿಯನ್ನು ತಾನು ಅಡಿಗೆ ಮಾಡುವುದಕ್ಕೆ ಉಪಯೋಗಿಸುವ ಬದಲಾಗಿ ನೀರನ್ನೇ ಬೆಂಕಿಯಾಗಿ ಉಪಯೋಗಿಸಿ ಎಂದೂ ಅಡಿಗೆಯನ್ನೂ ಮಾಡಲಾರನು. ಆದರೆ ಅವನ ಭಾವನೆಯಲ್ಲಿ ಮಾತ್ರ ಎಲ್ಲವೂ ಬ್ರಹ್ಮವೇ ಎಂಬುದಾಗಿ ಸರ್ವಾತ್ಮಕ ಅದ್ವೈತದಲ್ಲಿಯೂ ನಿರಾಕಾರದ ಬ್ರಹ್ಮನ ಹೊರತಾಗಿ ಕಣ್ಣಿಗೆ ಕಾಣುವ ಭೂಮಿ, ಬೆಂಕಿ ಮೊದಲಾದವುಗಳು ಜಡ ಎಂದು ನೇತ್ಯಾತ್ಮಕ ಅದ್ವೈತದಲ್ಲಿಯೂ ತಿಳಿದಿರುತ್ತಾನೆ. ಈ ಎರಡೂ ಜ್ಞಾನಗಳು ಅದ್ವೈತ ವೃತ್ತಿಗೆ ಹಾನಿಕರಗಳೇ.

ಸರ್ವಾತ್ಮಕ ಅದ್ವೈತಿಯಾದಾಗ ತನ್ನ ಆಚರಣೆಯಲ್ಲಿ ಬೆಂಕಿ, ನೀರು ಎಂಬ ಭಿನ್ನ ಮಾಡಲೇಬೇಕಾಗುತ್ತದೆ. ನೇತ್ಯಾತ್ಮಕ ಅದ್ವೈತಿಯಾದಾಗ ಜಡ (ಭೂಮಿ ಮೊದಲಾದುದು) ಅಜಡ (ಬ್ರಹ್ಮ) ಎಂಬುದಾಗಿ ಭೇದ ಮಾಡಿ ಎರಡು ವಸ್ತುಗಳನ್ನೂ ಮಾನಿಸಲೇಬೇಕಾಗುತ್ತದೆ. ಹೀಗೆ ಉಭಯ ವಿಧದಲ್ಲಿಯೂ ಅದ್ವೈತಕ್ಕೆ ಹಾನಿ ಬರುತ್ತದೆ. ಆದುದರಿಂದ ಇವರ ನಡತೆಯು ಹೇಗಿರಬೇಕಾಯಿತು ?

ಸರ್ವವೂ ಬ್ರಹ್ಮ ಎಂದು ತಿಳಿವಳಿಕೆ ಇರುವುದರಿಂದ ನಡತೆಯಲ್ಲಿ ಹೇಗಿದ್ದರೆ ತಾನೇ ಏನು ? ಎಂದು (೧) ಕೆಲವರು ಸ್ವೇಚ್ಛಾಚಾರ (ಅನ್ಯಾಯವರ್ತನ) ಮಾಡುವುದಕ್ಕೂ (೨) ಕೆಲವರು ವಂಶಪರಂಪರೆಯಿಂದ ಬಂದ ಬ್ರಾಹ್ಮಣಾದಿ ವರ್ಣಗಳ ಜಾತಿ ಪದ್ಧತಿಯನ್ನು ಅನುಸರಿಸಿ ಕರ್ಮವನ್ನು ಮಾಡಿಕೊಂಡು ಇರಲಿಕ್ಕೂ (೩) ಮತ್ತೆ

ಕೆಲವರು ಬ್ರಹ್ಮ ಒಂದೇ ಸತ್ಯ ಉಳಿದವುಗಳೆಲ್ಲವೂ ಮಿಥ್ಯೆ ಆದುದರಿಂದ ಈ ಪ್ರಪಂಚವ ವಿಷಯಗಳು ನನಗೊಂದೂ ಬೇಡ ಎಂದು ವೈರಾಗ್ಯವನ್ನು ತಾಳಿ ಸಂನ್ಯಾಸಿಗಳಾಗಿ ಇರುವುದಕ್ಕೂ ಈ ಅದ್ವೈತವು ಅನುಕೂಲವಾಗಿ ಪರಿಣಮಿಸಿ ಇರುತ್ತದೆ.

ಈಗಿನ ಸಮತಾವಾದಿಗಳ ದೃಷ್ಟಿಯಿಂದ ಈ ಮೂರೂ ವಿಧದ ಅದ್ವೈತ ರೀತಿಯ ವರ್ತನವೂ ನಿರಾಕರಿಸಲ್ಪಡತಕ್ಕುದೇ ಸಂನ್ಯಾಸಿಯಾದ ಮನುಷ್ಯನು ಲೋಕದಲ್ಲಿ ದುಡಿಯದೆ ಇರುವುದರಿಂದ ದೇಶ ಸಂಪತ್ತಿನ ಹಾನಿಯಾಗುತ್ತದೆ. ಸ್ವೇಚ್ಛಾಚಾರದಲ್ಲಿ ನೀತಿ ತಪ್ಪಿ ನಡೆಯುವುದರಿಂದ ಪರರಿಗೆ ಅಹಿತವಾಗುತ್ತದೆ. (ಎಲ್ಲವೂ ಬ್ರಹ್ಮವೇ ಎಂದು ಪರಸ್ತ್ರೀಯನ್ನು ಬಯಸಿದರೆ ದೋಷವಲ್ಲವೆ?) ಜಾತಿ ಕರ್ಮಗಳನ್ನು ಆಚರಣೆಯಲ್ಲಿ ತರುವಾಗ ತಾನು ಮನುಷ್ಯನಾಗಿದ್ದು ತನ್ನ ತಿಳಿವಳಿಕೆಯಲ್ಲಿ ಮಾತ್ರ ಬ್ರಹ್ಮ ಎಂದು ತಿಳಿದಿರುವುದರಿಂದ ತನ್ನ ಜ್ಞಾನಕ್ಕೂ ನಡತೆಗೂ ವ್ಯತ್ಯಾಸ ಬಂದು ನುಡಿಯಲ್ಲಿ ಒಂದು ನಡೆಯಲ್ಲಿ ಒಂದು ಆಗುತ್ತದೆ.

ನಾನು 'ಬ್ರಹ್ಮ' ಎಂಬ ತಿಳಿವಳಿಕೆಯಲ್ಲಿಯೂ 'ನಾನು' 'ಬ್ರಹ್ಮ' ಎಂಬ ಎರಡು ವಸ್ತುಗಳು ತೋರಿಬರುತ್ತವೆ.

ಇಲ್ಲಿ ಹೇಳಲ್ಪಟ್ಟ ಬ್ರಹ್ಮ ಎಂಬುದು ಅದ್ವೈತಶಾಸ್ತ್ರವ ಸಚ್ಚಿದಾನಂದ ನಿತ್ಯ ಪರಿಪೂರ್ಣ ಎಂಬ ಲಕ್ಷಣಗಳುಳ್ಳದೇ ಆಗಿರುತ್ತದೆ. ಕೆಲವರು ಬ್ರಹ್ಮಾಂಡ ಎಂದರೆ ಒಂದು ಭೂಮಿ ಎಂದು ಮಾತ್ರ ತಿಳಿಯುತ್ತಾರೆ. ಅವರ ಅಭಿಪ್ರಾಯದ ಪ್ರಕಾರ ಅನೇಕ ಬ್ರಹ್ಮಾಂಡಗಳು ಇರುವವೆಂದು ಅವರಿಗೆ ತೋರುತ್ತದೆ. ಇಂತಹ ಅನೇಕ ಬ್ರಹ್ಮಾಂಡಗಳ ಸಮಷ್ಟಿಯನ್ನೇ ಬ್ರಹ್ಮಾಂಡ ಎಂಬುದಾಗಿ ಇಲ್ಲಿ ಕರೆದಿವೆ.

ಇಷ್ಟರ ಮೇಲೂ ಆಧುನಿಕಶಾಸ್ತ್ರ (Science) ಪದ್ಧತಿಗೂ ಈ ಜ್ಞಾನವು ವಿರೋಧವು. ಈ ನವೀನ ಶಾಸ್ತ್ರದ ಅದ್ವೈತಿಗಳು ಮೂಲವಾಗಿರುವ ಒಂದೇ ವಸ್ತುವಿನಿಂದ ಅನೇಕ ವಸ್ತುಗಳಾಗಿವೆ ಎಂದು ಹೇಳುತ್ತಾರೆಯೇ ಹೊರತು ಮೂಲ ವಸ್ತುವೇ ಇಲ್ಲವೆಂದು ಹೇಳುವುದಿಲ್ಲ.

ಇನ್ನು ಶಿವಾದ್ವೈತಿಗಳ ವಿಚಾರವೇನೆಂಬುದನ್ನು ತಿಳಿಯೋಣ--ಅದ್ವೈತಿಗಳು ಹೇಳುವ ಬ್ರಹ್ಮನಿಗೂ ಶಿವಾದ್ವೈತಿಗಳು ಮೂಲ ವಸ್ತುವೆಂದು ತಿಳಿದಿರುವ ಶಿವನಿಗೂ ಏನಾದರೂ ವ್ಯತ್ಯಾಸ ಉಂಟೇನು? ಎಂದು ವಿಚಾರಿಸುವುದಕ್ಕೆ ಹೋದರೆ ಸೂಕ್ಷ್ಮ ರೀತಿಯಲ್ಲಿ ವ್ಯತ್ಯಾಸವು ಇರುವುದು ಕಂಡುಬರುತ್ತದೆ.

ಆತ್ಮ, ಬ್ರಹ್ಮ, ಶಿವ ಈ ಮೂರು ಪದಗಳೂ ಒಂದೇ ಅರ್ಥವುಳ್ಳವುಗಳೆಂದು ಹಿಂದೂ ಶಾಸ್ತ್ರದಲ್ಲಿ ಬಹಳ ಕಡೆಯಲ್ಲಿ ನಾವು ನೋಡಬಹುದಾದರೂ, ಕೆಲವು ಕಡೆಗಳಲ್ಲಿ ಸೂಕ್ಷ್ಮವಾಗಿ ಇವುಗಳ ವ್ಯತ್ಯಾಸವನ್ನು ತೋರಿಸಿ ಇರುತ್ತಾರೆ. ಹೀಗೆ ಮಾಡಲು ಮಹಾದೇವನ ವಿಚಾರಕ್ಕೆ ಹೋಗುವ ಮನುಷ್ಯನಿಗೆ ಬಹಳ ತೊಡಕುಗಳನ್ನು ಪ್ರಾರಂಭದಲ್ಲಿ ತಂದು ಹಾಕಬಾರದೆಂದು ಯೋಚಿಸಿ, ಈ ಮೂರೂ ವಸ್ತುಗಳೂ ನಿರಾಕಾರವಾದ್ದರಿಂದ ಮೊದಲು ನಿರಾಕಾರದ ಬೋಧೆಯಾಗಲಿ ಎಂದು ಇವುಗಳಲ್ಲಿ ಯಾವ

ಭೇದವನ್ನೂ ತೋರಿಸದೆ ಬಹಳವಾಗಿ ಹೇಳುತ್ತಾ ಹೇಳುತ್ತಾ ಈ ವಿಚಾರದಲ್ಲಿ ಮುಳುಗಿದ ಮನುಷ್ಯನಿಗೆ ಮಾತ್ರ ಇದು ಗೋಚರವಾಗಲೆಂದು ಕೆಲವು ಕಡೆಗಳಲ್ಲಿ ಮಾತ್ರ ವ್ಯತ್ಯಾಸವನ್ನೂ ಸೂಕ್ಷ್ಮವಾಗಿ ತಿಳಿಸಿರುತ್ತಾರೆ.

ಅಜ್ಞರಿಗೆ ಮಹಾದೇವನ ಜ್ಞಾನವನ್ನು ಉಂಟುಮಾಡಿಕೊಡುವುದರಲ್ಲಿ ಹಿಂದೂಗಳ ಜಾಣತನವು ಬಹಳ ಒಳ್ಳೆಯದು. ಮೊದಲು ಭೂಮಿಯನ್ನು ನೋಡಿ ಇದಕ್ಕಿಂತ ದೊಡ್ಡದು ಯಾವುದೂ ಇಲ್ಲ, ಎಂದು ಯೋಚಿಸುವವನಿಗೆ ನೀರೇ ಬ್ರಹ್ಮ ಎಂದು ಬೋಧಿಸಿ ಇರುವುದು. (ನೀರಿನ ರೂಪದಿಂದ ಮುಂದೆ ಭೂಮಿಯಾಯಿತಷ್ಟೆ) ನೀರು ದೊಡ್ಡದೆಂದು ತಿಳಿಯುವವರಿಗೆ ಸೂರ್ಯನಿಲ್ಲದೆ ಮನೆ ಬರುವುದಿಲ್ಲವಾದ್ದರಿಂದ ಸೂರ್ಯನೇ ದೊಡ್ಡವನೆಂದು ಬೋಧಿಸಿ ಇರುವುದು, (ಅಕಬರ್ ಚಕ್ರವರ್ತಿಯು ಸೂರ್ಯನೇ ದೊಡ್ಡವನೆಂದು ತಿಳಿದು ಸೂರ್ಯಾರಾಧನೆಯು ಎಲ್ಲರಿಗೂ ವಿಹಿತವೆಂದು ಏರ್ಪಡಿಸುವ ಅಭಿಪ್ರಾಯವುಳ್ಳವನಾದ್ದನೆಂದು ತಿಳಿಯುತ್ತದೆ) ಸೂರ್ಯನೇ ದೊಡ್ಡವನೆಂದು ತಿಳಿದವರಿಗೆ ಗಾಳಿಯೇ ದೊಡ್ಡದೆಂದು ಬೋಧಿಸಿ ಇರುವುದು ಹೀಗೆ ಕ್ರಮಕ್ರಮವಾಗಿ ನಿರಾಕಾರ ವಸ್ತುವಿನ ಜ್ಞಾನ ಮಾಡಿಕೊಡಲಿಕ್ಕೆ ಹೋಗಿರುವುದು, ಹಿಂದೂಗಳ ಬಹಳ ಜಾಣತನದ ಕೆಲಸವಲ್ಲವೆ?

ಆದರೂ ಯಾವನಾದರೊಬ್ಬನು ಭೂಮಿಯೇ ದೊಡ್ಡದು ಎಂದೂ ಅದಕ್ಕಿಂತ ದೊಡ್ಡದು ಯಾವುದೂ ಇಲ್ಲವೆಂದೂ ಹೇಳುವುದಾದರೆ ಅವನಿಗೇನು ಮಾಡುವುದು? ಸ್ಥೂಲದೃಷ್ಟಿಯಿಂದ (ಹೊರಗಿನ ನೋಟದಿಂದ) ಅವನಿಗೆ ಭೂಮಿಗಿಂತ ದೊಡ್ಡದನ್ನು ತೋರಿಸುವುದು ಹೇಗೆ? ಈ ರೀತಿ ತಿಳಿವಳಿಕೆಯನ್ನು ಹೊಂದಿದಾಗ ಅವನು ಪಾರಮಾರ್ಥಿಕ ವಿದ್ಯೆಯಲ್ಲಿ ಕಡಿಮೆಯು ತಿಳಿವಳಿಕೆಯುವನೇ ಆಗುತ್ತಾನೆ. ಹೀಗೆ ವಿಚಾರಿಸುತ್ತಾ ಮುಂದೆ ಹೋಗುವವನಿಗೆ ಮಹಾದೇವನ ವಿಚಾರದಲ್ಲಿ ಹೊಂದಬಹುದಾದ ತಿಳಿವಳಿಕೆಯು ಹಿಂದೂ ಧರ್ಮದ ಗ್ರಂಥಗಳಲ್ಲಿ ಇರುವಂತೆ ಇತರ ಯಾವ ಧರ್ಮದ ಗ್ರಂಥಗಳಲ್ಲಿಯೂ ಇರುವುದಿಲ್ಲ. ಅದಿರಲಿ.

ನಿರಾಕಾರ ವಸ್ತುಗಳಾದ ಆತ್ಮ, ಬ್ರಹ್ಮ, ಶಿವ ಇವರ ವಿಚಾರದ ಕಡೆಗೆ ಹೋಗೋಣ. ಈ ವಿಚಾರವನ್ನು ನಾವು ಮಾಡುವ ವೇಳೆಯಲ್ಲಿ ನಮ್ಮ ದೇಹವನ್ನು ಮಾದರಿ(Experiment)ಯಾಗಿ ಇಟ್ಟುಕೊಳ್ಳದೆ ಇದ್ದರೆ ನಾವು ಎಂದೂ ಮುಂದೆ ಹೋಗಲಾರೆವು. ಏಕೆಂದರೆ ಭೌತಿಕ ವಸ್ತುಗಳ ಮಾದರಿ(Experiment)ಯನ್ನು ಮೀರಿ ಇರುವ ವಿಚಾರವಿದು. ಭೌತಿಕವಾಗಿರುವ ಆಕಾಶವನ್ನೇ ಪ್ರತ್ಯೇಕ ತೆಗೆದು ತೋರಿಸಲಿಕ್ಕೆ ಉಪಕರಣವನ್ನೂ ಹೊಂದದ ನವೀನ ಶಾಸ್ತ್ರಕಾರರು (Modern Scientists) ಅದಕ್ಕಿಂತಲೂ ಸೂಕ್ಷ್ಮವಾದ ಆತ್ಮವನ್ನು ತೋರಿಸುವ ಉಪಕರಣವನ್ನು ಎಲ್ಲಿಂದ ತಂದಾರು? ಆ ಉಪಕರಣವೇ ಮನುಷ್ಯನ ದೇಹ.

ಈ ಮನುಷ್ಯನ ದೇಹದಲ್ಲಿ ಇರುವ ಜೀವನು ನಾನು ಇಂದ್ರಿಯ ಕರಣ ಮೊದಲಾದವುಗಳಲ್ಲಿ ಸೇರಿ ಕೆಲಸ ಮಾಡುವವನಲ್ಲ; ಅವುಗಳು ಮಾಡತಕ್ಕ ಕೆಲಸವನ್ನು ನಾನು ಪ್ರತ್ಯೇಕವಾಗಿ ಇದ್ದು ನೋಡುವವನು, (ಸಾಕ್ಷೀ ಚೇತನ) ಎಂದು ಯಾವಾಗ ತಿಳಿಯುವವನಿಗಾಗಿ ಆಗುವನೋ ಆಗ ಆ ಜೀವನು ಆತ್ಮನಾಗುತ್ತಾನೆ.

ಇದರಂತೆಯೇ ಬ್ರಹ್ಮಾಂಡದಲ್ಲಿ ಸೂರ್ಯ, ಗಾಳಿ, ಆಕಾಶ ಮೊದಲಾದವುಗಳ ಕೆಲಸವನ್ನು ಇದ್ದಕ್ಕಿದ್ದಂತೆ ನಿರೀಕ್ಷಿಸುತ್ತಾ ಇವುಗಳಲ್ಲದವನು ನಾನು ಎಂಬ ಜ್ಞಾನವುಳ್ಳ ಬಯಲ ವಸ್ತುವೇ ಆತ್ಮವು.

ಜ್ಞಾನ ಎಂಬ ವಸ್ತುವು ಬ್ರಹ್ಮಾಂಡದಲ್ಲಿ ಇರುವುದೆಂದೂ ಅದು ಅಲ್ಲಿ ಇಲ್ಲದಿದ್ದರೆ ಮನುಷ್ಯನ ದೇಹದಲ್ಲಿ ಎಂದೂ ತೋರುತ್ತಿದ್ದಿಲ್ಲವೆಂದೂ ಪ್ರತಿಯೊಬ್ಬನೂ ನೆನಪಿನಲ್ಲಿ ಇಟ್ಟಿರಬೇಕು.

ಯಾವ ಮನುಷ್ಯನ ಆತ್ಮವು ನಾನು ಸಾಕ್ಷೀ ಚೇತನನಾಗಿರುವುದು ಮಾತ್ರವಲ್ಲದೆ ಎಲ್ಲವನ್ನೂ ನಡೆಸಿಕೊಂಡು ಹೋಗುವವನು (ಈ ದೇಹವೂ ಈ ಭೂಮಿಯೂ ಎಲ್ಲವೂ ನಾನು) ಎಂಬ ಜ್ಞಾನವನ್ನು ಯಾವಾಗ ಹೊಂದುವುದೋ ಆಗ ಅವನ ಆತ್ಮವು ಬ್ರಹ್ಮ ಎಂಬ ಹೆಸರನ್ನು ಹೊಂದುತ್ತದೆ.

ಇದರಂತೆ ಹೊರಗೆ ಇರುವ ಬಯಲಿನಲ್ಲಿ ಸೂರ್ಯ, ಆಕಾಶ ಇವೇ ಮೊದಲಾದವುಗಳನ್ನು ನಡೆಸಿಕೊಂಡು ಹೋಗುವ ಶಕ್ತಿಯುಳ್ಳ ದೊಡ್ಡ ಬಯಲು ನಾನು ಎಂಬ ಜ್ಞಾನಕ್ಕೆ ಕಾರಣವಾದ ವಸ್ತುವು ಬ್ರಹ್ಮವು.

ಯಾವನಲ್ಲಿ ಮೇಲೆ ಕಂಡಂತೆ ಬ್ರಹ್ಮಸ್ವರೂಪವಾದ ಪ್ರಕಾಶವಾದ ಮೂಲ ವಸ್ತುವು ತಾನು ದೊಡ್ಡದಾಗಿರುವದು ಮಾತ್ರವಲ್ಲದೆ ಸೂಕ್ಷ್ಮಕ್ಕೆ ಸೂಕ್ಷ್ಮವಾಗಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ ಇರುವೆನೆಂಬ ಭಾವನೆಯುಳ್ಳದಾಗುವುದೋ ಆಗ ಅವನು ಶಿವ ಎಂಬ ಹೆಸರನ್ನು ಹೊಂದುವನು.

ವಾತುಲಾಗಮದಲ್ಲಿ ಶಿವನ ಲಕ್ಷಣವು ಸೂಕ್ಷ್ಮ ಎಂಬುದೇ ಮೊದಲಾದ ಹತ್ತು ಲಕ್ಷಣಗಳುಳ್ಳದು ಎಂದು ವಿವರಿಸಲ್ಪಟ್ಟಿದೆ.

ಇದರಂತೆಯೇ ಹೊರಗಿನ ವಸ್ತುಗಳಲ್ಲಿ ಸೂರ್ಯ ಮೊದಲಾದ ವಸ್ತುಗಳು ನನ್ನ ಆಶ್ರಯದಲ್ಲಿ ಇವೆ ಎಂಬ ಜ್ಞಾನದ ಕಣಗಳನ್ನುಳ್ಳ ಬ್ರಹ್ಮವು ಸೂಕ್ಷ್ಮರೂಪವನ್ನು ಹೊಂದಿ ಇರತಕ್ಕದ್ದಾಗಿ ಆ ಸೂಕ್ಷ್ಮ ವಸ್ತುವು ತಾನು ಎಲ್ಲರಲ್ಲಿಯೂ ವ್ಯಾಪಿಸಿ ಇರುವೆನೆಂಬ ಭಾವವುಳ್ಳದಾದಾಗ ಅದು ಶಿವನು.

ಜ್ಞಾನವನ್ನು ಉಂಟುಮಾಡತಕ್ಕ ಭಾವ ಎಂಬ ಒಂದು ವಸ್ತುವು ಬ್ರಹ್ಮಾಂಡ ಪಿಂಡಾಂಡದಲ್ಲಿಯೂ ಉಂಟು ಎಂಬುದನ್ನು ಸರ್ವರೂ ತಿಳಿದಿರಬೇಕು.

ಅಥವಾ ಬೇರೆ ವಿಧದ ಪದಗಳಲ್ಲಿ ಹೀಗೆ ಹೇಳಬಹುದು :

ನೇತ್ಯಾತ್ಮಕನಾದ ಬ್ರಹ್ಮನೇ ಎಂದರೆ ಇಂದ್ರಿಯವು ನಾನಲ್ಲ, ದೇಹವು ನಾನಲ್ಲ,

ಭೂಮಿಯು ನಾನಲ್ಲ, ನೀರು ನಾನಲ್ಲ ಎಂದು ತಾನು ಅವುಗಳಿಗೆ ಭಿನ್ನವಾಗಿ ಇರುವ ಬ್ರಹ್ಮನೇ ಆತ್ಮನು.

[ಆತ್ಮವನ್ನು ಒಂದು (ಪ್ರಾಕೃತಿಕ) ವಸ್ತು ಎಂತಲೇ ತಿಳಿಯಬೇಕು. ಆತ್ಮ ಎಂಬುವನ್ನು ಸೇರಿಸಿ ಆರು ತತ್ವಗಳೆಂದೂ ಇವುಗಳ ಅಂಗವಾಗಿ ೩೬ ತತ್ತ್ವಗಳುಂಟೆಂದೂ ತಿಳಿಯಬೇಕು. ಆದುದರಿಂದಲೇ ಪ್ರಸಿದ್ಧರಾದ ಆದ್ಯ ಶಿವಶರಣರ ವಚನಗಳಲ್ಲಿ ಪರ ಮಾತ್ಮ ಎಂಬ ಪದವನ್ನು ಮಹಾದೇವನಿಗಾಗಿ ಉಪಯೋಗಿಸಿ ಇರುವುದಿಲ್ಲ]

ಇಂದ್ರಿಯಗಳು ಮತ್ತು ಭೂಮಿ ಮೊದಲಾದವುಗಳು ಸರ್ವವೂ ತಾನು (ನಿರಾಕಾರನಾದ ದೊಡ್ಡವಸ್ತು) ಎಂಬ ಜ್ಞಾನವುಳ್ಳ ಬ್ರಹ್ಮನೇ ವೇದಾಂತ ಶಾಸ್ತ್ರದಿಂದ ತಿಳಿಯಲ್ಪಡುವ ಬ್ರಹ್ಮನು.

ಸೂಕ್ಷ್ಮಕ್ಕೆ ಸೂಕ್ಷ್ಮನೂ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಲ್ಪಟ್ಟವನೂ ಎಂಬ ಜ್ಞಾನವುಳ್ಳ ಬ್ರಹ್ಮನೇ ಶಿವನು.

ಮೇಲಿನ ಮೂರು ಭೇದಗಳು ಹೇಗೆ ನಮಗೆ ನಮ್ಮ ಜ್ಞಾನದಲ್ಲಿ ಒಡೆದು ಕಾಣು ತ್ತವೆಯೋ ಹಾಗೆಯೇ ಹೊರಗೆ ಬ್ರಹ್ಮಾಂಡದಲ್ಲಿ ದಿವ್ಯ ಜ್ಞಾನ ವಸ್ತುವಾದ ಬಯಲು ಆಕಾಶಕ್ಕಿಂತಲೂ ಸೂಕ್ಷ್ಮವಾಗಿ ಮೂರು ಭೇದವಾಗಿರುವುದು ಎಂದು ನಮ್ಮ ಹಿರಿ ಯರ ತಿಳಿವಳಿಕೆ.

ನಿರಾಕಾರವಾದ ಬಯಲಿನಲ್ಲಿ ಇವೆಲ್ಲಾ ಎಲ್ಲಿವೆ ? ಇದು ಮೂಢ ನಂಬುಗೆ. ಎಂದು ಕೆಲವರು ಆಕ್ಷೇಪಣೆ ಮಾಡುವುದಾದರೆ ಅವರು ತಕ್ಕ ಸಮಾಧಾನವನ್ನು ಹೀಗೆ ಹೊಂದಬಹುದು—

ಬ್ರಹ್ಮಾಂಡದಲ್ಲಿ ತೋರಿ ಬರುವ ಗಂಧ, ರಸ, ರೂಪ, ಸ್ಪರ್ಶ, ಶಬ್ದ ಎಂಬ ಭಿನ್ನ ವಸ್ತುಗಳು ಆ ಬ್ರಹ್ಮಾಂಡವೆಂಬ ಒಂದೇ ವಸ್ತುವಿನಲ್ಲಿ ಉಂಟಾದಾಗ್ಯೂ ಅವುಗಳ ಜ್ಞಾನವು ಆ ಬ್ರಹ್ಮಾಂಡವನ್ನು ಜಡ ಎಂದು ತಿಳಿಯುವ ಮನುಷ್ಯನ ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ ಎಂಬ ಇಂದ್ರಿಯಗಳಲ್ಲಿ ಒಂದೊಂದಕ್ಕೆ ವ್ಯಕ್ತಪಟ್ಟು ಇತರ ಇಂದ್ರಿಯಗಳಿಗೆ ಹೇಗೆ ಸ್ಪಷ್ಟವಾಗಿ ತಿಳಿಯುವುದಿಲ್ಲವೋ ಮತ್ತು ಹೊರಗೆ ಗಾಳಿ ಯಲ್ಲಿ ಕೂಡಿದ ಗಂಧವನ್ನು ಮೂಗಿಗೆ ಅದು ಬರುವುದರೊಳಗಾಗಿ ಹೊರಗೇನೇ ಮನು ಷ್ಯನು ಹೇಗೆ ತಿಳಿಯಲಾರನೋ ಹಾಗೆ ಬ್ರಹ್ಮಾಂಡದ ನಿರಾಕಾರದ ಬಯಲಿನಲ್ಲಿ ಇರುವ ಭಿನ್ನ ಭಿನ್ನ ಜ್ಞಾನಗಳು ನಿರಾಕರದ ರೂಪವಾಗಿಯೇ ಇರುವ ಮನುಷ್ಯನ ಜ್ಞಾನದಲ್ಲಿ ಭಿನ್ನ ಭಿನ್ನ ರೂಪಗಳಾಗಿ ಬರುವವೇ ಹೊರತು ಹೊರಗೆ ಅವು ಇದ್ದಾಗ ತಿಳಿವುದಕ್ಕೆ ಸಾಧ್ಯವಿಲ್ಲ. ಮನುಷ್ಯನ ಜ್ಞಾನದಲ್ಲಿ ಈ ಭೇದಗಳು ಉಂಟಾಗುವುದೇ ಹೊರಗೆ ಇವು ಇರುವುದಕ್ಕೆ ಗುರುತು. ಮನಸ್ಸು, ಬುದ್ಧಿ ಮೊದಲಾದ ನಿರಾಕಾರ ವಸ್ತುಗಳು ಬೇರೆ ಬೇರೆ ಇದ್ದಾಗ್ಯೂ ಅವುಗಳನ್ನು ಒಳಗಿನಿಂದ ಹೊರಗೆ ತೆಗೆದು ತೋರಿಸಲಿಕ್ಕೆ ಆಗದೆ ಇರುವುದೇ ಮತ್ತೊಂದು ಗುರುತು ಅಥವಾ ಸಾಕ್ಷಿ.

ಇದೇ ಜಗತ್ತು ಎಂಬ ಪುಸ್ತಕದಿಂದ ನಮಗೆ ದೊರಕುವ ಬೋಧೆಯು.

ಈಗ ಲೌಕಿಕರಿಗಿರುವ ಜ್ಞಾನವನ್ನು ದೇಹದಿಂದ ಹೊರಗಿಟ್ಟು ತೋರಿಸುವುದು ಹೇಗೆ ಎಂದು ಯೋಚಿಸುವುದಾದರೆ ಹೇಗೆ ಮನುಷ್ಯನು ನಾನು ಇದ್ದೇನೆ, ನಾನು ಕೆಲಸ ಮಾಡುತ್ತೇನೆ. ನಾನು ಉಣ್ಣಬೇಕು. ಎಂಬ ಜ್ಞಾನ ತನ್ನ ದೇಹದಲ್ಲಿ ಉಂಟಾಗಿ ದೆಯೋ ಇಂಥಾ ಜ್ಞಾನವನ್ನು ಹೊರಗೆ ತೆಗೆದು ಒಂದು ಕಂಬದಂತಹ ವಸ್ತುವಿನಲ್ಲಿ ಸೇರಿಸಿ ಆ ಕಂಬವು ಆ ಜ್ಞಾನದ ವಿಷಯವನ್ನು ಮಾತನಾಡುವಂತೆ ಮಾಡುವುದು.

ಅಥವಾ ಕಂಬವು ಬಾಯಿ ಇಲ್ಲದುದು ಎಂದು ತಿಳಿಯುವುದಾದರೆ ಈಗ ತಾನೇ ಮೃತ ಹೊಂದಿದ ಪ್ರಾಣಿಯಲ್ಲಿ ಚೇತನವಾಗುವಂತೆ ತನ್ನ ಚೇತನವನ್ನು ಸೇರಿಸುವುದು. (ಹೀಗೆ ಪೂರ್ವಿಕರು ಮಾಡಿ ತೋರಿಸಿದ ಉದಾಹರಣೆಗಳಿವೆ.)

ಇಂತಹುದನ್ನು ತೋರಿಸಲಾರದ ನವೀನ ಸಂಶೋಧಕರು ದಿವ್ಯ ಜ್ಞಾನದಲ್ಲಿ ಇರುವ ಮೂರು ಭೇದಗಳನ್ನಾಗಲೀ ಅವು ಬ್ರಹ್ಮಾಂಡದಲ್ಲಿ ತುಂಬಿಕೊಂಡಿರುವ ರೀತಿ ಯನ್ನಾಗಲೀ ತೋರಿಸಲಿಕ್ಕೆ ಹೇಗೆ ಸಮರ್ಥರಾದಾರು ? ಹೀಗೆಲ್ಲಾ ಇರುವುದನ್ನು ಪ್ರತ್ಯಕ್ಷವಾಗಿ ತೋರಿಸತಕ್ಕ ಸಮರ್ಥತೆಯುಳ್ಳವರಾಗಬೇಕೆಂಬ ಧ್ಯೇಯದಿಂದ ತಮ್ಮ ಪರಿಶೋಧನ (Research) ವನ್ನು ಅವರು ಮುಂದುರಿಸಲಿ. ಅಲ್ಲಿನವರೆವಿಗೂ ಪಿಂಡಾಂಡವೂ ಬ್ರಹ್ಮಾಂಡವೂ ಒಂದೇ ಎಂಬ ಹಿಂದೂ ಶಾಸ್ತ್ರದ ವಿವರವನ್ನು ಅವರು ಮಾನಿಸಲೇ ಬೇಕಾಗುವುದು.

ಇಷ್ಟು ತಿಳಿದುಕೊಂಡ ಮೇಲೆ ಶಿವಾದ್ವೈತವನ್ನು ತಿಳಿದುಕೊಳ್ಳುವುದು ಸುಲಭ ವಾಗುವುದು.

ಸೂಕ್ಷ್ಮರೂಪದಲ್ಲಿ ಇರುವ ಶಿವ (ಕಾರಣಬ್ರಹ್ಮ)ನೇ ಕಾರ್ಯರೂಪಕ್ಕೆ ಬಂದು ಅನೇಕ ರೂಪಗಳಾಗಿ ಪರಿಣಮಿಸಿ ಇರುವನು. ಎಂದರೆ ಭೂಮಿ, ನಕ್ಷತ್ರ, ದೇಹ, ಮನಸ್ಸು ಮೊದಲಾದ ನಾನಾ ವಸ್ತುಗಳಾಗಿರುತ್ತಾನೆ. ಈ ಅನೇಕ ವಿಧದ ರೂಪಗಳು ತೋರದಿದ್ದಾಗ ಕಡೆಯಲ್ಲಿ ಸೂಕ್ಷ್ಮ (ಶಿವ)ನಾಗಿ ಒಬ್ಬನೇ ಸರ್ವವ್ಯಾಪಿಯಾಗಿ ಇರು ತ್ತಾನೆ. ಇದೇ ಇವರ ಉತ್ತಮವಾದ ತಿಳುವಳಿಕೆ (ಸಮ್ಯಕ್‌ಜ್ಞಾನ).

ಉದಾಹರಣಾರ್ಥವಾಗಿ ಬ್ರಹ್ಮನು ದೊಡ್ಡವನಾಗಿ ೧ (ಅದ್ವೈತ) ಎಂಬ ಅಂಕೆ ಯಂತೆ ಗಣನೆಗೆ ಬರುವವನಾದರೆ ಶಿವನು ೦ ಸೊನ್ನೆ ಎಂಬ ಅರಿಕೆಯಂತೆ ಇರುವವನು.

ಇದಕ್ಕೂ ಸೂಕ್ಷ್ಮವಾದ ರೂಪ ಒಂದುಂಟು. ಇದಕ್ಕೆ 'ಶೂನ್ಯ' ಎಂಬ ಹೆಸರಿದೆ. ಇದು ಚುಕ್ಕೆ (=point) ಎಂಬುದರ ರೂಪದಂತೆ ಪರಮಾಣು ರೂಪದಲ್ಲಿ ಇರುತ್ತದೆ. ಈ ಶೂನ್ಯವನ್ನೇ (ಪರಮಾಣು ರೂಪವನ್ನೇ ಅಥವಾ ಪರಶಿವನನ್ನೇ) ಮೂಲನೆಂದು ಶಿವಾದ್ವೈತಿಗಳು ತಿಳಿದಿರುತ್ತಾರೆ. ಇದೇ ಈಗಿನ ಶಾಸ್ತ್ರಕಾರರು ಹೇಳುವ ಪರಮಾಣು ವಿನ ರೀತಿ (Atomic theory) ಗೆ ಸರಿಯಾದ ಯೋಜನೆಯು.

(ಅಣೋರಣೀಯಾನ್ ಎಂಬ ಸ್ಥಿತಿಯೇ ಪರಶಿವನೆಂದೂ ಮಹತೋ ಮಹೀ

ಯಾನ್ ಎಂಬ ಸ್ಥಿತಿಯೇ ಅದ್ವೈತ ಶಾಸ್ತ್ರಗಳಿಂದ ತಿಳಿಯಲ್ಪಡುವ ಬ್ರಹ್ಮನೆಂದೂ ಇವರ ನಂಬುಗೆ.)

ಮನುಷ್ಯನ ದೇಹವಾದರೂ ಈ ಶೂನ್ಯ ಬ್ರಹ್ಮನ ರೂಪವೇ. ಈ ಶೂನ್ಯ ಬ್ರಹ್ಮನು ಕಣ್ಣಿಗೆ ಕಾಣುವ ಈ ದೇಹದ ರೂಪವನ್ನು ತಪ್ಪಿಸಿಕೊಂಡು ಮೂಲರೂಪ ವಾಗಿ ಬ್ರಹ್ಮಾಂಡದ ಶೂನ್ಯ ರೂಪದಲ್ಲಿ ಏಕನಾಗಿ ಇರುವ ಸಮರಸ ಭಾವವನ್ನು ಹೊಂದುವುದಕ್ಕಾಗಿ ಪ್ರಯತ್ನಿಸಬೇಕು, ಎಂಬುದೇ ಶಿವಾದ್ವೈತಿಗಳ (ವೀರಶೈವರ) ಮೋಕ್ಷ ಪದದ ಗುರಿ.

ಮೊದಲಿದ್ದ ಈ ಶೂನ್ಯವಸ್ತುವೇ ಕಡೆಗೂ ಇರುತ್ತದೆ. ಆದರೆ ಮಧ್ಯದಲ್ಲಿ ಅದು ನಾನಾ ರೂಪಗಳನ್ನು ಪಡೆಯುತ್ತಾ ಜೀವ ಪ್ರಪಂಚವಾಗಿಯೂ, ಭೂತ ಪ್ರಪಂಚ ವಾಗಿಯೂ ಸರ್ವ ವಸ್ತುಗಳಾಗಿಯೂ ಆಗಿರುತ್ತದೆ, ಎಂಬುದೇ ಇವರ ಹೆಚ್ಚಿನ ತಿಳಿವಳಿಕೆ (ಮಹಾಜ್ಞಾನ). ಗಣಿತ ಶಾಸ್ತ್ರವನ್ನು ಕಲಿಯುವವರು ಮೊದಲು ಸೊನ್ನೆ ಯನ್ನೂ ಅದರ ಬೆಲೆಯನ್ನೂ ತಿಳಿದುಕೊಳ್ಳುವುದು ಹೇಗೆ ಮುಖ್ಯವೋ ಹಾಗೆ ಮಹಾ ದೇವನನ್ನು ಹುಡುಕುವವರು ಮೊದಲು ಶೂನ್ಯವನ್ನು ಹುಡುಕಲೇಬೇಕು. ಹೀಗೆ ಆ ಶೂನ್ಯವು ಒಂದಾಗಿ ಎರಡಾಗಿ ಕಡೆಗೆ ನಾನಾ ರೂಪಗಳುಳ್ಳದ್ದಾಗಿದೆ, ಎಂದು ತಿಳಿವ ಭಾವನೆಯೇ ಪರಿಣಾಮವಾದುವು.

ಉದಾಹರಣೆಗೆ ಬಂಗಾರವು ಸರಿಗೆ, ಬಳೆ ಮೊದಲಾದ ರೂಪಗಳನ್ನು ಹೊಂದಿ ಕರಗಿಸಿದಾಗ ಕಡೆಯಲ್ಲಿ ಬಂಗಾರವೇ ಉಳಿವಂತೆ ಶೂನ್ಯನು ನಾನಾ ರೂಪಗಳನ್ನು ಹೊಂದಿ ತಕ್ಕ ಸಂಸ್ಕಾರವನ್ನು ಹೊಂದುತ್ತಾ ಹೊಂದುತ್ತಾ ಕೊನೆಯಲ್ಲಿ ಶೂನ್ಯ ನಾಗಿಯೇ ಉಳಿವನು.

ಕೆಲವರು 'ಶೂನ್ಯ' ಎಂದರೆ ಏನೂ ಇಲ್ಲದುದು ಎಂದು ಅರ್ಥ ಮಾಡುತ್ತಾರೆ. ಇದು ಸರಿಯಲ್ಲ ಲೆಕ್ಕವನ್ನು ಮಾಡುವಾಗ ಮೊದಲು ಬೆಲೆಯಿಲ್ಲದುದು, ಎಂದು ಹೇಳ ಲ್ಪಡುವ ಸೊನ್ನೆಯು ೧ರ ಮುಂದೆ ಬಂದಾಗ ಅದರ ಬೆಲೆಯನ್ನು ಹತ್ತರಷ್ಟು ಹೆಚ್ಚಿ ಸುವುದು. ಎರಡನೆಯ ಮನೆ ಸೊನ್ನೆ ಆದಾಗ ಮೊದಲನೆಯ ೧ ಬೆಳೆಯುವುದು. ಇದ ರಂತೆ ಅನೇಕ ಸೊನ್ನೆಗಳಾದರೆ ಆ ೧ರ ಬೆಲೆಯು ಕೋಟಿಗಟ್ಟಲೆ ಬೆಳೆಯುವುದು. ಇದರಂತೆ ಶೂನ್ಯ ಎಂಬ ಮೂಲವಸ್ತುವು ಇತರ ವಸ್ತುಗಳ ರೂಪದಲ್ಲಿ ಬೆಳೆದಾಗ ಅದರ ಬೆಲೆಯು ಬಹಳ ಹೆಚ್ಚಿನದಾಗುವುದಾದ್ದರಿಂದ ಶೂನ್ಯ ಎಂಬುದು ಅತ್ಯಂತ ಮಹತ್ವ ವಾದ ವಸ್ತುವೆಂದು ತಿಳಿಯಬೇಕು. ಮತ್ತು ಇದನ್ನು ಪ್ರಪಂಚದ ವಸ್ತುಗಳೆಲ್ಲೆಲ್ಲಾ ವ್ಯಕ್ತಜ್ಞಾನಿ ಎನಿಸಿಕೊಂಡಿರುವ ಮನುಷ್ಯನಲ್ಲಿಯೇ ನಾವು ನೋಡಬಹುದು. ಬ್ರಹ್ಮಾಂಡ ದಲ್ಲಿರುವ ಜೀವ ಆತ್ಮ ಎಂಬ ವಸ್ತುಗಳು ಪ್ರಾಣಿ ಮನುಷ್ಯ ಎಂಬವರಲ್ಲಿ ಹೇಗೆ ವ್ಯಕ್ತ ವಾಗಿ ಕಾಣುತ್ತವೆಯೋ ಹಾಗೆ ಶೂನ್ಯ ವಸ್ತುವಿನ ಜ್ಞಾನವುಳ್ಳ ಮನುಷ್ಯನಲ್ಲಿಯೇ ಆ ಶೂನ್ಯವು ವ್ಯಕ್ತವಾಗಿ ತೋರುವುದೆಂದು ತಿಳಿದು ಆ ಶೂನ್ಯ ವಸ್ತುವಿನ ಮಹಾನುಭಾವಿ

ಯನ್ನು 'ಜಂಗಮ' ಎಂದೂ 'ಗುರುವಿನ ಗುರು' ಎಂದೂ ಶಿವಶರಣರು ಕರೆದಿರುತ್ತಾರೆ.

(ಅಲ್ಲಮ ಪ್ರಭುದೇವನು ಇಂತಹ ಜ್ಞಾನವುಳ್ಳ ಶೂನ್ಯ ವಸ್ತುವಿನ ಮಹಾನುಭಾವಿಯಾದುದರಿಂದಲೇ ಆತನನ್ನು ಜಂಗಮ ಎಂದೂ ಜಗದ್ಗುರು ಎಂದೂ ಬಸವೇಶ್ವರನು ಪೂಜಿಸಿದನಲ್ಲದೆ ಆತನು ಮಂಡಿಸಿದ ಪೀಠಕ್ಕೆ ಶೂನ್ಯಪೀಠ ಅಥವಾ ಶೂನ್ಯ ಸಿಂಹಾಸನವೆಂಬ ಹೆಸರನ್ನೂ ಇಟ್ಟಿರುತ್ತಾನೆ. ಶಿವಶರಣರು ಈ ಶೂನ್ಯ ವಸ್ತುವಿನ ವಿಚಾರಮಾಡಿ ತಿಳಿದುಕೊಂಡ ತಿಳಿವನ್ನೂ ಬರೆದಿಟ್ಟ ಹೊತ್ತಗೆಗೆ 'ಶೂನ್ಯ ಸಂಪಾದನೆ' ಎಂಬ ಪೆಸರೂ ಬಂದಿದೆ. ಆದುದರಿಂದ ಜಂಗಮ ಪೂಜೆ ಎಂಬುದು ಒಂದು ಶ್ರೇಷ್ಠ ತತ್ವವನ್ನು ಹಿಡಿದು ಬಂದುದೇ ಹೊರತು ಒಬ್ಬ ಕಾಡು ಮನುಷ್ಯನು ತನ್ನಂತೆ ಇರುವ ಮತ್ತೊಬ್ಬ ಕಾಡು ಮನುಷ್ಯನನ್ನು ಪೂಜಿಸುವುದು (Human Worship) ಈ ಪದ್ಧತಿ, ಎಂದು ಕೆಲವರು ಯೋಚಿಸುವಂತೆ ಹೀನ ಸ್ಥಿತಿಯ ತಿಳಿವಳಿಕೆಯಿಂದ ಬಂದುದಲ್ಲ. ಕೆಲವರು ಜಂಗಮರು ಇಂತಹ ಮಹಾನುಭಾವವನ್ನು ಪಡೆಯದವರಾಗಿದ್ದರೆ ಅದು ವ್ಯಕ್ತಿದೋಷವೇ ಹೊರತು ಈ ಶ್ರೇಷ್ಠವಾದ ಅಭಿಪ್ರಾಯದ ದೋಷವಲ್ಲ.

ಅಸಂಖ್ಯ ಪರಮಾಣುಗಳೇ ಬ್ರಹ್ಮಾಂಡವೆಂದು ಹೇಳುವುದಕ್ಕೆ ಯಾರೂ ಹಿಂಜರಿಯುವುದಿಲ್ಲ.

ಆದುದರಿಂದ ಶಿವಾದ್ವೈತಿಗಳ ಜ್ಞಾನವು ಪೂರ್ವಿಕ ಮತ್ತು ಆಧುನಿಕ ಶಾಸ್ತ್ರಕ್ಕೆ ಸಮ್ಮತವಾಗಿರುತ್ತದೆ. ಪರಮಾಣು ಸ್ಥಿತಿಯ ಮಹಾನುಭಾವವನ್ನು ಹೊಂದಿದ ಜಂಗಮನೇ ಮಹಾದೇವನೆಂದು ನಂಬಿದ ಅವರ ವರ್ತನವೂ ಪ್ರಕೃತಿಶಾಸ್ತ್ರ (ಸಹಜ ವರ್ತನ)ಕ್ಕೆ ವಿರೋಧವಾದುದೂ ಅಲ್ಲ. ಪ್ರತಿಮೆಗಳಲ್ಲಿ ದೇವನನ್ನು ಕಾಣುವುದಕ್ಕಿಂತಲೂ ಭಕ್ತ ದೇಹಿಕ ದೇವನಾದ್ದರಿಂದ ಮನುಷ್ಯನನ್ನು ದೇವನಲ್ಲಿ ಕಾಣುವುದು ಉತ್ತಮ. ಇದೇ ಅಭಿಪ್ರಾಯವನ್ನೇ ಅನೇಕ ಉಪನಿಷತ್ತುಗಳೂ ಹೇಳುತ್ತವೆ. ಬ್ರಹ್ಮಾಂಡದಲ್ಲಿ ಅಥವಾ ಪ್ರತಿಮೆಗಳಲ್ಲಿ ಅವ್ಯಕ್ತನಾಗಿ ಇರುವ ಮಹಾದೇವನು ಮಹಾನುಭಾವಿ (ಶಿವಯೋಗಿ)ಯಲ್ಲಿ ವ್ಯಕ್ತನಾಗಿ ಇರುವ ಸಹಜಸ್ಥಿತಿಯೇ ಹೀಗೆ ಹೇಳುವುದಕ್ಕೆ ಕಾರಣ.

ಪ್ರಕೃತಿ ಶಾಸ್ತ್ರಕಾರರೂ ವಿದ್ಯುತ್ತು ಎಂಬುದು ಕೆಲವು ಪದಾರ್ಥಗಳಲ್ಲಿ ವ್ಯಕ್ತವಾಗಿಯೂ ಕೆಲವು ಪದಾರ್ಥಗಳಲ್ಲಿ ಅವ್ಯಕ್ತವಾಗಿಯೂ ಇರುವುದು ಎಂದು ಒಪ್ಪುವಂತೆ ಪರಮಾಣು ರೀತಿಯ ಜ್ಞಾನವು ವ್ಯಕ್ತವಾಗಿ ಒಬ್ಬನಲ್ಲಿ ಇರಬಹುದು. ಆಗ ಅವನು ಮಹಾಜ್ಞಾನಿ ಎನಿಸಿಕೊಳ್ಳುತ್ತಾನೆ.

ಹಾಗಾದರೆ ಆಧುನಿಕ ಶಾಸ್ತ್ರದಲ್ಲಿ ಪರಮಾಣು ರೀತಿಯ ಜ್ಞಾನವನ್ನು ಪಡೆದವರು ಜಂಗಮರು ಎಂದು ಹೇಳಬಹುದೇ ಎಂದರೆ ಅದು ಬರಿ ತಿಳಿವಳಿಕೆಯ ಮಾತಿನ ಅದ್ವೈತಿಗಳು ನಾನು ಬ್ರಹ್ಮ ಎಂದು ಹೇಳಿದ ಹಾಗೆ ಆಗುತ್ತದೆ. ಆ ಪರಮಾಣು ರೂಪವು ಮಹಾ ಪ್ರಕಾಶವುಳ್ಳದೂ, ಆನಂದ ರೂಪವಾದುದೂ, ಮಹಾಜ್ಞಾನ ರೂಪವಾದುದೂ, ನಾದ ಬಿಂದು ಕಲಾತೀತವಾದುದೂ ಎಂದು ಪೂರ್ವಿಕರು ಅದರ ಲಕ್ಷಣವನ್ನು ಕೊಟ್ಟಿರು

ವಂತೆ ಆ ಲಕ್ಷಣಗಳು ತನ್ನಲ್ಲಿರುವಂತೆ ಅನುಭವವನ್ನು ಪಡೆದು, ಆಮೇಲೆ ಅವುಗಳನ್ನು ಅನುಸರಿಸಿ ನಡೆಯುವ ವರ್ತನವುಳ್ಳವನು (ಅನುಭಾವಿ) ಆಗಬೇಕು. ಆಗ ಆ ಮಹಾ ಜ್ಞಾನಿಯು ಮಹಾನುಭಾವಿ (ಜಂಗಮ) ಎನ್ನಿಸಿಕೊಳ್ಳುತ್ತಾನೆ. ಈ ಮಹಾನುಭಾವವು ಶಿವಯೋಗವನ್ನು ಅನುಸರಿಸಿದ ವಿನಾ ಸಾಧ್ಯವಿಲ್ಲ.

ಈ ಶಿವಯೋಗವು ಭಕ್ತಿಯಿಂದಲ್ಲದೆ ಬರುವುದಿಲ್ಲ. ಆದುದರಿಂದ ಭಕ್ತ ದೇಹಿಕನು ದೇವನು. ವೇದವಲ್ಲಿನ ಭಕ್ತಿ ಕಾಂಡವೇ ಶಿವನನ್ನು ಒಲಿಸುವುದಕ್ಕೆ ಮೇಲು ಎಂದು ಶಿವಾದ್ವೈತ ಶಾಸ್ತ್ರವು ಹೇಳುತ್ತದೆ.

ಕೆಲವರು ಬಂಗಾರವು ಸರಿಗೆ, ಬಳೆ ಎಂಬ ರೂಪಗಳನ್ನು ಹೊಂದುವುದೂ ವಿವರ್ತವಾದವೇ—ಏಕೆಂದರೆ ಬಂಗಾರದ ಸರಿಗೆ ಬಳೆ ಎಂಬ ರೂಪಗಳು ನಿಜವಲ್ಲ. ಬಂಗಾರವೇ ನಿಜ, ಎಂದು ವಾದಿಸುತ್ತಾರೆ. ಹೀಗೆ ಹೇಳುವುದು ಸರಿಯಾದುದಲ್ಲ. ಕಪ್ಪೆಚಿಪ್ಪಿನಲ್ಲಿ ಆರೋಪಿಸಿದ ಬೆಳ್ಳಿ ಎಂಬುದು ಕಪ್ಪೆ ಚಿಪ್ಪಿನಲ್ಲಿ ಇಲ್ಲ. ಆದುದರಿಂದ ಅಲ್ಲಿ ಬೆಳ್ಳಿ ಎಂಬುದು ಜ್ಞಾನ ಮಾತ್ರವೇ ಹೊರತು ವ್ಯವಹಾರದಲ್ಲಿ ಇಲ್ಲ; ಅದು ವಿವರ್ತವಾದ. ಇಲ್ಲಿ ಬಂಗಾರದಿಂದಾದ ಬಳೆ, ಸರಿಗೆ ಎಂಬುವು ವ್ಯವಹಾರದಲ್ಲೂ ಉಪಯೋಗದಲ್ಲಿವೆ. ಸರಿಗೆಯನ್ನು ಕುತ್ತಿಗೆಗೂ ಬಳೆಯನ್ನು ಕೈಗೂ ಹಾಕಿಕೊಳ್ಳುತ್ತಾರೆಯೇ ಹೊರತು ಎರಡೂ ಒಂದೇ ಎಂದು ಬಳೆಯನ್ನು ಕುತ್ತಿಗೆಗೂ. ಸರಿಗೆಯನ್ನು ಕೈಗೂ ಯಾರೂ ಹಾಕುವುದಿಲ್ಲ. ಇದರಂತೆ ಶೂನ್ಯ ವಸ್ತುವಿನಿಂದಾದ ಬೆಂಕಿಯನ್ನು ಅಡಿಗೆ ಮಾಡಲಿಕ್ಕೂ, ನೀರನ್ನು ಕುಡಿಯಲಿಕ್ಕೂ, ಜನರು ಉಪಯೋಗಿಸುವ ವ್ಯವಹಾರವು ಸರಿಯಾದುದೇ ಆಗುವುದು.

ಇದರಿಂದ ಅದ್ವೈತ ವಸ್ತುವಿನಿಂದಾದ ಅನೇಕ ರೂಪಗಳನ್ನು ಅನೇಕ ವಿಧದಲ್ಲಿ ಬಳಕೆಗೆ ತೆಗೆದುಕೊಳ್ಳುವುದೇ ಪರಿಣಾಮವಾದದ ಫಲವು.

ಆದುದರಿಂದ ಬಂಗಾರದಿಂದಾದ ಒಡವೆಗಳು ಪರಿಣಾಮವಾದಕ್ಕೆ ಸಂಬಂಧಿಸಿದವುಗಳೇ ಹೊರತು ವಿವರ್ತ ವಾದಕ್ಕೆ ಸಂಬಂಧಿಸಿದವುಗಳಲ್ಲ.

ಕೆಲವರು ಪರಿಣಾಮವಾದವು ಸರಿಯಾದುದಲ್ಲವೆಂದು ಅದನ್ನೂ ಕಿತ್ತೊಗೆಯುವರು. ಹಾಗೆ ಹೇಳಲಿಕ್ಕೆ ಅವರು ಒಂದು ಉದಾಹರಣೆಯನ್ನು ತೋರಿಸುತ್ತಾರೆ.

"ಸರಿಗೆ ಬಳೆ ಈ ರೂಪಗಳು ಪುನಃ ಬಂಗಾರವಾದಂತೆ ಹಾಲಿನಿಂದಾದ ಮೊಸರು ತುಪ್ಪಗಳು ಪುನಃ ಹಾಲು ಆಗುವುದಿಲ್ಲ." ಈ ಉದಾಹರಣೆಯನ್ನು ತೋರಿಸಿ ಪರಿಣಾಮವಾದವು ತಪ್ಪೆಂದು ಹೇಳುವರು. ಇನ್ನೊಂದು ಉದಾಹರಣೆಯನ್ನು ನೋಡುವುದಾದರೆ ಪರಿಣಾಮವಾದವು ಸರಿಯಾದುದೆಂದು ಅವರಿಗೆ ಗೊತ್ತಾಗುವುದು.

ಒಂದು ಮರದ ಬೀಜವನ್ನು ತೆಗೆದುಕೊಳ್ಳಲಿ; ಅದನ್ನು ಭೂಮಿಗೆ ಹಾಕಿದಾಗ ನೀರು, ಉಷ್ಣ ಮೊದಲಾದ ಸೌಕರ್ಯಗಳನ್ನು ಒದಗಿಸಿ ಕೊಟ್ಟರೆ ಆ ಬೀಜಗಳಿಂದ ಎಲೆಗಳಾಗುವುವು. ಆ ಎಲೆಗಳು ಪುನಃ ಬೀಜಗಳಾಗುವವೇನು ? ಇಷ್ಟರಿಂದಲೇ

ಪರಿಣಾಮವಾದವನ್ನು ನಿರ್ಣಯಿಸಲಿಕ್ಕೆ ಹೋದ ಅಪ್ರಬದ್ಧರಂತೆ ಇವರ ವಿಚಾರವಾಗುತ್ತದೆ. ಮುಂದೆ ನೋಡಿದಾಗ ಆ ಎಲೆಗಳಿಂದ ಹೂಗಳಾಗಿ ಹೂಗಳಿಂದ ಕಾಯಿಗಳಾಗಿ ಅವು ಮಾಗಿದಾಗ ಪುನಃ ಬೀಜಗಳೇ ತೋರುವುವು. ಹೀಗೆ ನಾವು ಮತ್ತೆ ಅವುಗಳಿಂದ ಎಲೆಗಳನ್ನು ಕಾಣಬಹುದು. ಬೀಜವು ನಡುವೆ ಅನೇಕ ರೂಪಗಳನ್ನು ಧರಿಸಿದಾಗ್ಯೂ ಕೊನೆಗೆ ಬೀಜವೇ ಆಗುವುದು, ಎಂದು ತಿಳಿಯುವುದರಿಂದ ಪರಿಣಾಮವಾದವು ಸರಿ ಎಂಬುದು ಇಲ್ಲಿ ತೋರುತ್ತದೆ, ಎಂದು ನಾವು ನಿರ್ಣಯಿಸಬಹುದು.

ಮೊಸರಾದ ವಸ್ತುವು ಒಮ್ಮೆಗೇ ಹಾಲು ಆಗಲಿ, ಎಂದು ಪರಿಣಾಮವಾದದ ವಿರೋಧಿಗಳು ಅಪೇಕ್ಷಿಸದೆ ಮೊಸರಾದುದು ಮುಂದೆ ಏನಾಗಬಹುದೆಂಬುದನ್ನು ಇನ್ನೂ ನಿರೀಕ್ಷಿಸಬೇಕು. ಅದು ಬೆಣ್ಣೆಯಾಗಿ ಅನಂತರ ತುಪ್ಪವಾದ ವಸ್ತುವು ಗೊಬ್ಬರವಾಗಿ ಅದೇ ಆಮೇಲೆ ಹುಲ್ಲಿನಲ್ಲಿ ಸೇರಿ ಪುನಃ ಗೋವಿನ ಬಾಯಿಗೆ ಸಿಕ್ಕು ಮತ್ತೆ ಹಾಲೇ ಆಗುವುದು. ಹೀಗೆ ತಿಳಿದಮೇಲೆ ಪರಿಣಾಮವಾದವು ಸರಿಯಾದುದು ಎಂದು ಎಲ್ಲರೂ ತಿಳಿಯುವುದಕ್ಕೆ ಅನುಮಾನವೇನಿರುವುದು ?

ಇದನ್ನು ಉಳ್ಳ ಶಿವಶರಣರು ಭೂಮಿ ಮೊದಲಾದವುಗಳನ್ನು ಬ್ರಹ್ಮನ (ಲಿಂಗದ) ಒಂದು ರೂಪ ಎಂದು ತಿಳಿದು ಇವುಗಳಿಗೂ ಒಂದೊಂದು ಬ್ರಹ್ಮ (ಲಿಂಗ) ಎಂದು ಕರೆದಿರುತ್ತಾರೆ. ಹೀಗೆ ಕರೆದಿರುವುದರಿಂದ ಬ್ರಹ್ಮನನ್ನು (ರೂಪವನ್ನು) ಬೇರೆ ಬೇರೆ ಕೆಲಸಕ್ಕೆ ಉಪಯೋಗಿಸಬಹುದಾಗಿದೆ. ವಾಗದ್ವೈತಿಗಳು ಬ್ರಹ್ಮನು ಒಬ್ಬನೇ ಎಂದು ಹೇಳುವ ಅಭಿಪ್ರಾಯವನ್ನು ಶಿವಾದ್ವೈತಿಗಳು ಒಪ್ಪಿಕೊಂಡು ಮುಂದೆ ಆ ಬ್ರಹ್ಮನು ನಾನಾ ರೂಪಗಳುಳ್ಳವನು ಎಂದು ಮಾನಿಸುವುದರಿಂದ ಇವರ ಅಭಿಪ್ರಾಯವು ಆ ಬರಿಯ ಮಾತಿನ ಅದ್ವೈತಿಗಳಿಗಿಂತ ಮುಂದೆ ಹೋಗಿದೆ, ಎಂಬುದಾಗಿ ಸಹಜವಾಗಿ ತಿಳಿಯುತ್ತದೆ. ಬ್ರಹ್ಮನಿಗೆ ಮೂರು ರೂಪಗಳು ಅಥವಾ ಅನೇಕ ರೂಪಗಳು ಉಂಟು ಎಂಬುದನ್ನು ಅನೇಕ ಉಪನಿಷತ್ತುಗಳು ಒಪ್ಪುತ್ತವೆ.

ನವೀನ ಶಾಸ್ತ್ರಕಾರರು ಒಂದೇ ಪದಾರ್ಥಕ್ಕೆ ಅನೇಕ ರೂಪಗಳು ಬಂದಾಗ್ಯೂ ಅವುಗಳ ಉಪಯೋಗವು ಮಾತ್ರ ಬೇರೆ ಬೇರೆ ವಿಧವಲ್ಲಿ ಇರುತ್ತದೆ. ಹೀಗೆ ರೂಪಾಂತರ ಹೊಂದುತ್ತಿರುವ ವಸ್ತುವು ಮಾತ್ರ ಎಂದೂ ನಾಶ ಹೊಂದುವುದಿಲ್ಲ ಎಂದು ಹೇಳುತ್ತಾರೆ. ಇದೇ ಪರಿಣಾಮ ವಾದ. ಈ ವಾದವನ್ನೇ ಶಿವಾದ್ವೈತಿಗಳು (ವೀರಶೈವರು) ಒಪ್ಪುತ್ತಾರೆ. ಈಗ ಯಾವನೊಬ್ಬ ವೀರಶೈವನೂ (ಲಿಂಗಧಾರಿಯೂ) ಈ ಅಭಿಪ್ರಾಯವುಳ್ಳ ಪರಿಣಾಮವಾದಕ್ಕೆ ವಿರೋಧವಾಗಿ ಹೇಳುವುದಿಲ್ಲ.

ಈ ಪರಿಣಾಮವಾದವು ಜಗತ್ತಿನ ಸಹಜಸ್ಥಿತಿಯನ್ನು ತೋರಿಸುವುದಕ್ಕೆ ಪೂರ್ವದವನ ಶಾಸ್ತ್ರದ ಅಭಿಪ್ರಾಯಕ್ಕೂ ನವೀನ ಶಾಸ್ತ್ರಕಾರರ (Modern Scientists) ಅಭಿಪ್ರಾಯಕ್ಕೂ ಹೊಂದಿಕೆಯು ಉಳ್ಳದ್ದಾಗಿದೆ. ಆದುದರಿಂದ ಶಿವಾದ್ವೈತ ಮಾರ್ಗವು ಸರ್ವರಿಗೂ ಸಮ್ಮತವಾದುದು.

ಪ್ರಪಂಚಕ್ಕೆ ಬಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವುಳ್ಳ ಮನುಷ್ಯ ಬ್ರಹ್ಮನು ಮಹಾದೇವನ ವಿಷಯವಾಗಿ ತನಗಿಂತ ಹೆಚ್ಚಿನ 'ದಾಸೋಹಂ' ಎಂಬ ಜ್ಞಾನಕ್ರಿಯೆ ಯುಳ್ಳ ಗುರುವನ್ನು (ಗುರು ಬ್ರಹ್ಮವನ್ನು) ಹೊಂದಲೇಬೇಕು. ಆಗ ಗುರುವು ಇವನ ಮನುಷ್ಯ ಭಾವನೆಯ ಶರೀರವನ್ನು ಬ್ರಹ್ಮ (ಮಂತ್ರ) ಮಯವಾಗಿ ಮಾಡುವುದರಿಂದ ಗುರುವು ತನುವಿಗೆ ಮಹಾದೇವನೆಂದೂ, ಇವನ ಮನಸ್ಸನ್ನು ಅಥವಾ ಜ್ಞಾನೇಂದ್ರಿಯ ಗಳನ್ನು ಬ್ರಹ್ಮ (ಲಿಂಗ) ಮಯವಾಗಿ ಮಾಡುವುದಕ್ಕಾಗಿ ಗುರುವು ಲಿಂಗವನ್ನು ಕೊಡುವುದರಿಂದ ಲಿಂಗವು ಮನಸ್ಸಿಗೆ ಮಹಾದೇವನೆಂದೂ, ಇವನ ಭಾವವನ್ನು ಬ್ರಹ್ಮ ಮಯವಾಗಿ ಮಾಡುವುದಕ್ಕಾಗಿ ಶೂನ್ಯ ವಸ್ತುವಿನ ಮಹಾನುಭಾವಿಯಾದ ಜಂಗಮನನ್ನು ತೋರಿಸುವುದರಿಂದ ಜಂಗಮನು ಭಾವಕ್ಕೆ (ಅಂತಃಕರಣ ವೃತ್ತಿಗಳಿಗೆ) ಮಹಾದೇವ ನೆಂದೂ ತಿಳಿದುಕೊಂಡು ಭಕ್ತನಾಗುವನು. ಹೀಗೆ ಶಿವಾದ್ವೈತಿಗಳು ಶರೀರದಲ್ಲಿ ತನು, ಮನ, ಭಾವ ಎಂಬ ಮೂರು ರೂಪಗಳಿರುವುದರಿಂದ ಆ ಮೂರು ರೂಪಗಳಿಗೆ ಸರಿ ಯಾಗಿ ಮೂರು ರೂಪಗಳ ಮಹಾದೇವನನ್ನು ಜೋಡಿಸಿ ಇರುತ್ತಾರೆ.

ಮನಸ್ಸಿನ ಮಹಾದೇವನು ಲಿಂಗ ಎಂದು ಜ್ಞಾನದಲ್ಲಿ ತಿಳಿದರಾಯಿತು. ಬೇರೆ ಒಂದು ಲಿಂಗವನ್ನು ಹೊರಗೆ ಧಾರಣ ಮಾಡುವುದು ಏಕೆ ? ಎಂದು ಕೆಲವರು ಶಂಕಿಸ ಬಹುದು. ಶಿವಾದ್ವೈತಿಗಳು ಬರಿಯ ಜ್ಞಾನದಿಂದ ತೃಪ್ತರಾಗುವುದಿಲ್ಲ. ತಾನು ಲಿಂಗ (ಬ್ರಹ್ಮ) ರೂಪನೆಂದು ತಿಳಿದು ನಡೆವುದರೊಡನೆ ತಾನು ಇರುವ ಜಗತ್ತು ಲಿಂಗರೂಪ ವೆಂದು ತಿಳಿವ ನಡೆಯೂ ಬರಬೇಕು. ಮನುಷ್ಯನು ಜಗತ್ತಿನ ಆಶ್ರಯದಲ್ಲಿ ಇದ್ದಾನೆ ಎಂಬುದು ಎಲ್ಲರಿಗೂ ತಿಳಿಯುವ ಮಾತು, "ಲಿಂಗರೂಪಂ ಜಗದ್ರೂಪಂ" ಎಂಬ ಪ್ರಮಾಣವಿರುವುದರಿಂದಲೂ ಇದರಂತೆ ಸಹಜವಾಗಿ ಭೂಮಿಯ ಆಕಾರದಂತೆ ವೀರ ಶೈವರು ಧರಿಸುವ ಲಿಂಗದ ಆಕಾರವು ಇರುವುದರಿಂದಲೂ ತಾನು ಜಗತ್ತಿನ ಆಶ್ರಯ ದಲ್ಲಿದ್ದೇನೆ, ಅಥವಾ ತಾನು ಜಗತ್ತನ್ನು ಧರಿಸಿ ಇದ್ದೇನೆ, ಎಂಬ ಆಚರಣೆಯು ತನ್ನಲ್ಲಿ ಬಂದಿದೆ ಎಂದು ತೋರಿಸುವುದಕ್ಕಾಗಿ, ಜಗತ್ತು ತನಗಿಂತ ಪ್ರತ್ಯೇಕವಾಗಿರುವಂತೆ ತಾನೂ ಪ್ರತ್ಯೇಕವಾದ ಲಿಂಗವನ್ನೂ ಧರಿಸಬೇಕು ಮತ್ತು ಜಗತ್ತೂ ತಾನೂ ಒಂದೇ ಎಂದು ತಿಳಿಯುವ ಶಾಸ್ತ್ರದ ಅಭಿಪ್ರಾಯಕ್ಕೆ ಅನುಸಾರವಾಗಿ ಜಗತ್ತೂ ಲಿಂಗವೂ ತಾನೂ ಒಂದೇ ಎಂದೂ ತಿಳಿದಾಚರಿಸಬೇಕು. ಇದಕ್ಕಾಗಿ ಲಿಂಗವನ್ನು ಧರಿಸಬೇಕು. ಹೀಗೆ ಧರಿಸಿದರೆ ಜಗತ್ತನ್ನು ಧರಿಸಿದ್ದೇನೆ ಎಂದು ಆಚರಿಸುವ ಅರ್ಥವು ಇದರಲ್ಲಿ ತೋರಿ ಬರುತ್ತದೆ.

ಭೂಮಿಯು ಕಠಿಣರೂಪವಾಗಿ ಇರುವಂತೆ ಲಿಂಗವೂ ಕಠಿಣ ರೂಪವಾಗಿ ಇರ ಲಿಕ್ಕೆ ಬೇಕು. ಬ್ರಹ್ಮಾಂಡದಲ್ಲಿ (ಆರುಭೂತಗಳಲ್ಲಿ) ಭೂಮಿಯು ಕಡೆಯ ರೂಪವಾಗಿ ರುವುದರಿಂದಲೂ ಭೂಮಿಯಲ್ಲಿ ಉಳಿದ ಎಲ್ಲಾ ತತ್ವಗಳೂ ಅಡಗಿ ಇರುವುದರಿಂದಲೂ ಅದರ ಆಕಾರದಂತೆ ಇರುವ ಲಿಂಗದಲ್ಲಿ ಎಲ್ಲವೂ ಅಡಗಿ ಇರುತ್ತವೆ, ಎಂಬುದೇ ಇವರ

ಜ್ಞಾನದ ಕ್ರಿಯೆಯು. ಇಷ್ಟಾದರೂ ಈ ಇಷ್ಟಲಿಂಗವು ಸ್ಥೂಲ ತನುವಿಗೆ ಹೊರತು ಉಳಿದ ತನುಗಳಿಗೆ ಮಹಾದೇವನಲ್ಲ. ಆದುದರಿಂದ ದೇಹಾವಸಾನದಲ್ಲಿ ತನುವಿನೊಡನೆ ಇದು ಉಳಿಯುವುದು.

ಮನಸ್ಸು ಸೂಕ್ಷ್ಮರೂಪದಲ್ಲಿ ಇರುವುದರಿಂದ ಅದಕ್ಕೆ ಪ್ರಾಣಲಿಂಗವೇ ಮಹಾದೇವನು. ಇಷ್ಟಲಿಂಗವನ್ನು ನೋಡುತ್ತಾ ನೋಡುತ್ತಾ ಕಣ್ಣಿನಲ್ಲಿ ಪ್ರಾಣಲಿಂಗವಿರುವುದೆಂದು ಆ ಲಿಂಗವನ್ನು ಜ್ಯೋತಿರೂಪವಾಗಿ ಅಲ್ಲಿ ಕಾಣಬೇಕು. ಹೀಗೆ ಪ್ರಾಣಲಿಂಗವನ್ನು ತಿಳಿವಾಗ ಮತ್ತು ತಿಳಿದಾಚರಿಸುವಾಗ ಈ ಇಷ್ಟಲಿಂಗವು ಒಂದು ಸಾಧನೆಯ ವಸ್ತುವಾಗಿರುವುದೇ ಹೊರತು ಇದೇ ಮಹಾದೇವನಾಗಿ ಇರುವುದಿಲ್ಲ.

ಪ್ರತಿಯೊಂದು ವಸ್ತುವಿನಲ್ಲಿಯೂ ಶಕ್ತಿ (Energy) ಇರುವುದೆಂದು ಪ್ರಕೃತಿ ಶಾಸ್ತ್ರಜ್ಞರು ಒಪ್ಪುವಂತೆ ಪರಶಿವ ಮೊದಲ್ಗೊಂಡು ಆತನ ರೂಪಗಳಾಗಿರುವ ಎಲ್ಲಾ ವಸ್ತು (ತತ್ವ)ಗಳಲ್ಲಿಯೂ ಶಕ್ತಿ ಇರುವುದೆಂದೂ, ಆ ಶಕ್ತಿ ಮತ್ತು ಚೈತನ್ಯ (ಶಿವ) ಈ ಉಭಯವೂ ಅವಿನಾಭಾವದಿಂದ ಕೂಡಿ ಒಂದಾದ ವಸ್ತುಗಳಲ್ಲಿ ಶಕ್ತಿಯೂ ವ್ಯಕ್ತ ದೆಸೆಗೆ ಬಂದಾಗಲೆಲ್ಲಾ 'ಅಂಗ' (ಜೀವ) ಎನಿಸಿಕೊಳ್ಳುವುದೆಂದೂ, ಚೈತನ್ಯವು ವ್ಯಕ್ತ ದೆಸೆಗೆ ಬಂದಾಗಲೆಲ್ಲಾ 'ಲಿಂಗ' (ಶಿವ) ಎನಿಸಿಕೊಳ್ಳುವುದೆಂದೂ, ಈ ಅಂಗಲಿಂಗ ಸಾಮರಸ್ಯವಾಗಿ ಲಿಂಗರೂಪ ಒಂದೇ ತೋರುವುದೇ ಎಂದರೆ ಕೇವಲ ಲಿಂಗರೂಪವಾದ ವ್ಯಕ್ತ ಸ್ಥಿತಿಯೇ ಕೈವಲ್ಯವೆಂದೂ, ಶಿವಾದ್ವೈತಿಗಳು ತಿಳಿದಿರುತ್ತಾರೆ. ಆದುದರಿಂದ ಈ ಶಿವಾದ್ವೈತದ ಅಭಿಪ್ರಾಯಕ್ಕೆ ಶಕ್ತಿ ವಿಶಿಷ್ಟಾದ್ವೈತ ಎಂಬ ನಾಮಧೇಯವೂ ಬಂದಿದೆ. ಇದಲ್ಲದೆ ಸಹಜದ್ವೈತ, ಅಖಂಡಾದ್ವೈತಾ, ಪರಮಾದ್ವೈತ, ದ್ವೈತಾದ್ವೈತ, ಅನುಭಾವಾದ್ವೈತ, ವಿಶೇಷಾದ್ವೈತ ಎಂಬ ಹೆಸರುಗಳೂ ಗ್ರಂಥಗಳಲ್ಲಿ ಅಲ್ಲಲ್ಲಿ ಉಪಯೋಗಿಸಲ್ಪಟ್ಟು ಇರುತ್ತವೆ.

ಹೀಗೆ ತಿಳಿದಾಚರಿಸುವ ದೆಸೆಯಿಂದ ಇವರ ದೈವಿಕ ಭಾವನೆಯು ಪ್ರಕೃತಿ ಶಾಸ್ತ್ರವನ್ನು ಅನುಸರಿಸಿ ಇರುತ್ತದೆ. ಪ್ರಕೃತಿ ಶಾಸ್ತ್ರಕ್ಕೆ, ಆತ್ಮವಿದ್ಯೆಗೆ, ಮತ್ತು ಸಹಜ ವರ್ತನಕ್ಕೆ ವಿರೋಧವಾದ ಯಾವುದೊಂದು ನಡತೆಯೂ ಇರಬಾರದೆಂಬುವೇ ವೀರಶೈವರ ಮುಖ್ಯವಾದ ಗುರಿಯು. ಈ ಗುರಿಯನ್ನು ಅನುಸರಿಸಿಕೊಂಡೇ ಆರು ಸ್ಥಲಗಳ (ಷಟ್‌ಸ್ಥಲಗಳ) ಆಚರಣೆಯೂ ಇರುತ್ತದೆ.

ಭೂಮಿಯ ಒಂದು ದಿಕ್ಕನ್ನು ಹಿಡಿದು ಹೊರಟವನು ನೆಟ್ಟಗೆ ಮುಂದೆ ಮುಂದೆ ಹೋಗುತ್ತಾ ಕೊನೆಗೆ ಮೊದಲಿದ್ದ ಸ್ಥಳಕ್ಕೆ ಬರುವಂತೆ ಮೂಲವಸ್ತುವು (ಪರಶಿವನ) ಯಾವ ರೂಪವನ್ನು ಹೊಂದಿದರೂ ಕಡೆಗೆ ಮೂಲ ವಸ್ತುವಾಗಿಯೇ ಉಳಿಯುವ ಸನ್ನಿವೇಶವು ಒಂದಾನೊಂದು ಕಾಲದಲ್ಲಿ ಉಂಟಾಗಬಹುದಾದಾಗ್ಯೂ ಊಟಮಾಡುವವರು ಕರಗುವ ಸ್ವಭಾವವುಳ್ಳ ಹೆತ್ತ ತುಪ್ಪವನ್ನು ತಾನಾಗಿ ಕರಗುವವರೆವಿಗೂ ಸುಮ್ಮನಿರದೆ ಜಾಗ್ರತೆ ಕರಗಲೆಂದು ಹೇಗೆ ಬೆಂಕಿಯ ಮೇಲಿಟ್ಟು ಕಾಯಿಸುವರೋ ಹಾಗೆ

ಇನ್ನೂ ಅನೇಕ ಜನ್ಮಗಳಲ್ಲಿ ಬಂದು ತೊಂದರೆಪಡದಂತೆ ಬೇಗನೆ ನಿರಾಕಾರದಲ್ಲಿ ಒಡಗೂಡಿರಬೇಕೆಂಬ ಆತುರಕ್ಕಾಗಿ ಆಚರಣೆ ಮಾಡುವಿಕೆಯೇ ಈ ಆರು ಸ್ಥಲಗಳ ಮಾರ್ಗವು.

ಇದರಲ್ಲಿ ಹೇಳಲ್ಪಟ್ಟ ಜಂಗಮವು ತಾನು ಪ್ರಪಂಚವು ಬೇಡವೆಂದು ಸಂನ್ಯಾಸವನ್ನು ಹೊಂದಿದವನಲ್ಲ. ಜನರನ್ನು ಉದ್ಧಾರಮಾಡುವೆನೆಂಬ ಕೆಲಸವನ್ನು ವಹಿಸಿದವನಾಗಿ ಮದುವೆಯಾಗದೆ ಇರುವವನು; ಆದುದರಿಂದ ಸಮತಾವಾದಿಗಳ ತತ್ತ್ವಕ್ಕೆ ಈ ಲಕ್ಷಣವು ವಿರೋಧವಲ್ಲ. ತಾನು ಬ್ರಹ್ಮವೆಂದು ಅಥವಾ ಶಿವನೆಂದು ಮಾತಿನಲ್ಲಿ ಹೇಳಿ ಮನುಷ್ಯನಾಗಿದ್ದು ಮಾಡಬೇಕಾದ ಜಾತಿಗಳ ಕರ್ಮವು ಈ ಶಿವಾದ್ವೈತದಲ್ಲಿ ಇಲ್ಲ. ಯಾವ ವಸ್ತುಗಳನ್ನು ಯಾವ ರೀತಿಯಲ್ಲಿ ಬಳಕೆಗೆ ತರಬೇಕೋ ಆ ರೀತಿಯಲ್ಲಿಯೇ ಬಳಕೆಯಲ್ಲಿ ತರಲು ತಕ್ಕ ರೂಪಗಳನ್ನು ಮಾನಿಸುವುದರಿಂದ ಸರ್ವವೂ ಬ್ರಹ್ಮವೆಂದು ಅತ್ಯಾಚಾರ ಅಥವಾ ಅನಾಚಾರಮಾಡುವ ಪ್ರಸಂಗವೂ ಇಲ್ಲಿ ಇರುವುದಿಲ್ಲ.

ಆದುದರಿಂದ ಆಚರಣೆಯಿಲ್ಲದ ಬರಿಯ ಮಾತಿನ ಅದ್ವೈತವನ್ನು ತಿರಸ್ಕಾರ ಮಾಡಿ, ಈ ಪುಸ್ತಕವನ್ನು ಪೂರ್ವಿಕರು ಬರೆದಿರುತ್ತಾರೆ.*

ಆದರೆ ಮೇಲೆ ಹೇಳಿದಂತೆ ದ್ವೈತ, ವಿಶಿಷ್ಟಾದ್ವೈತ, ಅದ್ವೈತಗಳನ್ನು ತಿರಸ್ಕರಿಸಿ ಎಲ್ಲರೂ ಶಿವಾದ್ವೈತವನ್ನೇ ಹೊಂದಬೇಕೆಂದು ಬೋಧಿಸುವುದು ಈ ಬರವಣಿಗೆಯ ಉದ್ದೇಶವಲ್ಲ.

ಮಹಾದೇವನ ಜ್ಞಾನವೇನೂ ಇಲ್ಲದವನು ಅವನೊಬ್ಬ ಸಾಕಾರ ಮೂರ್ತಿ, ನಮ್ಮಂತೆ ಇರುವವನು, ಎಂದು ತಿಳಿಯಲೇಬೇಕು. ಆಗ ಮೂರ್ತಿ ಪೂಜೆ ಬೇಕೇ ಬೇಕಾಗುತ್ತದೆ. ಆಗ ದ್ವೈತಶಾಸ್ತ್ರವು ಅವನಿಗೆ ಬೇಕೇ ಬೇಕು. ಅದರ ಫಲವಾದರೂ ಜ್ಞಾನವನ್ನು ಹುಟ್ಟಿಸತಕ್ಕದ್ದೇ ಎಂದು ಶಾಸ್ತ್ರದಲ್ಲಿಯೂ ಬರೆದಿದೆ.

ಮುಂದೆ ಆ ದೇವನು ಬ್ರಹ್ಮಾಂಡ ರೂಪದಲ್ಲಿ ಇರುವನೆಂಬ ತಿಳಿವಳಿಕೆ ಬೇಕೇ ಬೇಕು. ಆಗ ವಿಶಿಷ್ಟಾದ್ವೈತವೂ ಬೇಕು. ಇದು ಜ್ಞಾನಕ್ಕೆ ಸಾಧನೆ.

ಇಲ್ಲಿ ಜ್ಞಾನವೆಂದರೆ ಆ ದೇವನು ಸರ್ವಾಂತರ್ಯಾಮಿಯಾದುದರಿಂದ ತನ್ನಲ್ಲಿಯೂ ಇದ್ದಾನೆ ಎಂದು ತಿಳಿಯುವ ಅದ್ವೈತ ಜ್ಞಾನ (ನಿಜ ಜ್ಞಾನ) ವೇ.

ಮಹಾದೇವನು ನಿರಾಕಾರನು ಅವನೇ ನಾನು ಎಂಬ ಜ್ಞಾನವು ಆಮೇಲೆ ಬೇಕು. ಇದೇ ಅದ್ವೈತವು.

ಹೀಗೆ ಕ್ರಮ ಕ್ರಮವಾಗಿ ಒಬ್ಬನ ಜ್ಞಾನ ಮತ್ತು ನಡತೆಯನ್ನು ಮುಂದುವರಿಸಲಿಕ್ಕೆ ಎಲ್ಲವೂ ಅವಶ್ಯಕಗಳೇ ಆಗಿವೆ.

ನಿರಾಕಾರದಲ್ಲಿಯೂ ಆ ಮಹಾದೇವನು ಸೂಕ್ಷ್ಮನು, ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿದವನು; ಎಲ್ಲ ರೂಪಗಳನ್ನೂ ತಾಳಿದವನು ಎಂಬ ಶಿವಾದ್ವೈತ ಜ್ಞಾನವೂ ಆ ಆಚರಣೆಯೂ ಆಮೇಲೆ ಬರಬೇಕು, ಇದು ಕಟ್ಟಕಡೆಯದು.

* ಈ ಪುಸ್ತಕವೆಂದರೆ 'ವಾಗದ್ವೈತ ನಿರಸನ'-ಎಂಬ ಪುಸ್ತಕವೆಂದು ತಿಳಿಯಬೇಕು.

"ಸರ್ವಂ ಖಲ್ವಿದಂ ಬ್ರಹ್ಮಾ" ಎಂದೂ, ಬ್ರಹ್ಮನು 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದೂ ತಿಳಿಯುವ ಶಿವಾದ್ವೈತಿಯು ಆ ಬ್ರಹ್ಮ (ಮಹಾದೇವ)ನ ವಿಷಯದಲ್ಲಿ ಮುಂದೆ ತಿಳಿಯಬೇಕಾದ ಅಂಶವು ಇನ್ನೇನೂ ಇಲ್ಲವೆಂದು ಇದೇ ಹಿಂದೂ ಶಾಸ್ತ್ರದ ಕಡೆಯ ಗುರಿಯ ಬೋಧೆ ಎಂದೂ ಯಾರಾದರೂ ಸುಲಭವಾಗಿ ತಿಳಿಯಬಹುದು.

ದ್ವೈತಿಯಾದವನು ನಾನು ಮನುಷ್ಯ (ಪಾಪಿ) ಎಂದು ಯೋಚಿಸುವುದರಿಂದ ಅವನ ಎಂಜಲು ಮೊದಲಾದ ಸೂತಕಗಳನ್ನು ಒಪ್ಪಲೇಬೇಕು. ಒಬ್ಬ ಶಿವಾದ್ವೈತಿಯಾದವನು ಬ್ರಹ್ಮವೇ ಸರ್ವವೂ ಎಂದು ಯೋಚಿಸುವುದರಿಂದ ಆ ಸೂತಕಗಳನ್ನು ಅವನು ಇಲ್ಲವೆಂದೇ ಹೇಳಬೇಕು. ಹೀಗೆ ಒಂದೊಂದು ಅಭಿಪ್ರಾಯಕ್ಕೆ ಸರಿಯಾಗಿ ಆಚರಣೆಗಳಲ್ಲಿ ವ್ಯತ್ಯಾಸ ಬರುತ್ತದೆ. ಇವುಗಳನ್ನು ಕ್ರಮವಾಗಿಯಾಗಲೀ ಅಥವಾ ಹೆಚ್ಚಿನದನ್ನು ಒಮ್ಮೆಗೇ ಆಗಲೀ ಹೊಂದಲಿಕ್ಕೆ ಬರುತ್ತದೆ.

ಸ್ವತಂತ್ರತೆಯನ್ನು ಬಯಸುವ ಈ ಕಾಲದಲ್ಲಿ ಎಲ್ಲಾ ತತ್ತ್ವಗಳ ನಿಜಾಂಶಗಳ ಜ್ಞಾನವನ್ನು ಮಾಡಿಕೊಟ್ಟು ಯಾರು ಯಾವುದರಲ್ಲಿ ಬೇಕಾದರೂ ಇರಲಿ, ಎಂದು ಅವಕಾಶವನ್ನು ಕಲ್ಪಿಸಿಕೊಡುವುದೇ ಈಗಿನ ಹಿಂದೂ ಧರ್ಮದ ಮುಂದಾಳುಗಳು ಮಾಡಬೇಕಾದ ಮುಖ್ಯ ಕೆಲಸ.

ಈಗಿನ ಹಿಂದೂಮುಂದಾಳುಗಳು ಹಿಂದೂ ಮತವನ್ನು ಪರಿಷ್ಕರಣ (Reform) ಮಾಡುವುದರ ಕಡೆಗೆ ವಿಶೇಷಗಮನವನ್ನು ಕೊಟ್ಟು, ಸಾವಿರಾರು ಭೇದಗಳಾಗಿರುವ ಈ ಧರ್ಮವನ್ನು ಕೆಲವು ಮೂಲ ಸೂತ್ರಗಳಿಗೆ ಒಳಪಡಿಸುವುದು ಆವಶ್ಯಕವೆಂದು ತೋರುತ್ತದೆ.

೧) ಮಹಾದೇವನೇ ಇಲ್ಲವೆಂದು ತಿಳಿಯುವವರು. ಇವರಲ್ಲಿ ಶಾಕಾಹಾರಿಗಳು ಮತ್ತು ಮಾಂಸಾಹಾರಿಗಳು ಎಂಬ ಎರಡು ಭೇದಗಳು.

೨) ಮಹಾದೇವನು ಉಂಟೆಂದೂ ಅವನು ತಮಗಿಂತ ಅನ್ಯನಾಗಿ ಇದ್ದಾನೆ, ಎಂದೂ ತಿಳಿವವರು. ಇವರಲ್ಲಿ ಶಾಕಾಹಾರಿಗಳು ಮತ್ತು ಮಾಂಸಾಹಾರಿಗಳು ಎಂಬ ಎರಡು ಭೇದಗಳು (ಇವರು ತಮ್ಮ ಇಷ್ಟಬಂದ ಯಾವ ದೇವತೆಯನ್ನಾದರೂ ನಂಬಿಕೊಂಡಿರಲಿ)

೩) ಮಹಾದೇವನೇ ತಾನು ಎಂದು ನಂಬಿಕೊಂಡವರು. ಇವರಲ್ಲಿ ಬರೀ ಜ್ಞಾನಿಗಳು; ಜ್ಞಾನಕ್ರಿಯೆಗಳುಳ್ಳವರು ಎಂದು ಎರಡು ವಿಧವು, (ಇವರು 'ಅಹಿಂಸಾ ಪರಮೋ ಧರ್ಮಃ' ಎಂದು ಹೇಳುವವರಾಗಿ ಅದ್ವೈತಿಗಳಾದುದರಿಂದ ಇವರಲ್ಲಿ ಶಾಕಾಹಾರಿಗಳು ಮಾತ್ರವೇ ಇರಬೇಕು)

(ಪ್ರಪಂಚದಲ್ಲಿ ಹಿಂದೂ ದೇಶವು ಶಾಕಾಹಾರವನ್ನು ಪ್ರೀತಿಸುವುದರಲ್ಲಿ ಇತರ ಎಲ್ಲಾ ದೇಶಗಳಿಗಿಂತ ಮೊದಲನೆಯದು ಈ ಶಾಕಾಹಾರ ಪದ್ಧತಿಯನ್ನೆ ಹೆಚ್ಚಿಸುವ ಪ್ರಯತ್ನವೇ ಈಗಲೂ ನಡೆಯಬೇಕು)

ಹೀಗೆ ಅವರವರ ಪೂರ್ವಪದ್ಧತಿಯನ್ನು ಹಿಡಿದುಕೊಂಡಿರುವವರು ಬೇಕಾದರೆ ಅವನ್ನಿಟ್ಟುಕೊಂಡೇ ಈ ಹೊಸ ಪಂಗಡಗಳಲ್ಲಿ ಸೇರಿರುವಂತೆಯೂ ಆಗ ಊಟ ಉಪಚಾರ ವಿವಾಹಾದಿ ವ್ಯವಹಾರಗಳು ಒಂದೊಂದು ಪಂಗಡದಲ್ಲಿ ಒಂದೇ ವಿಧವಾಗಿ ಇರುವಂತೆಯೂ ಏರ್ಪಡಿಸಿದರೆ, ಅನೇಕ ಭೇದಗಳಾಗಿ ಅನೈಕಮತ್ಯದ ಪರ್ವತವಾಗಿ ಇರುವ ಹಿಂದೂ ಧರ್ಮವು ಕೈ ಬೆರಳುಗಳಿಂದ ಎಣಿಸುವಷ್ಟು ಭೇದಗಳನ್ನು ಒಪ್ಪಿಕೊಂಡು ಇರಬಹುದು. ಮತ್ತು ತಮಗೆ ಬೇಕಾದರೆ ತಾವು ಎಲ್ಲಕ್ಕೂ ಮೇಲಾದ ಸ್ಥಿತಿಯನ್ನು ಹೊಂದುವುದಕ್ಕೂ, ಅನುಕೂಲವಾಗಬಹುದು. ಈ ಭೇದಗಳೊಡನೆ ಬೌದ್ಧರು, ಮುಹಮ್ಮದೀಯರು, ಕ್ರೈಸ್ತರು ಮೊದಲಾದವರೆಲ್ಲರೂ ಮತ್ತು ಇಡೀ ಜಗತ್ತಿನ ಜನರೆಲ್ಲರೂ ಸೇರಬಹುದು. ಹೀಗೆ ಕೆಲವು ಮೂಲಸೂತ್ರಗಳಿಗೆ ಒಡಂಬಡಿಸಿ ಇಡೀ ಜಗತ್ತಿನ ಜನರನ್ನು ತನ್ನೊಳಗೆ ಕೂಡಿಸಿಕೊಳ್ಳುವ ಶಕ್ತಿಯು ಹಿಂದೂ ಮತಕ್ಕೆ ಬರುವಂತೆ ಮಾಡುವ ಹಿಂದೂ ಮುಂದಾಳು ಮಹನಿಯರೇ ಧನ್ಯರಲ್ಲವೇ ?

ರಷ್ಯಾ ದೇಶವು ಒಂದೇ ಒಂದು ಕ್ರೈಸ್ತಮತವಿದ್ದ ಜನಾಂಗವಾಗಿದ್ದರಿಂದ ಅಲ್ಲಿ ಒಪ್ಪಲ್ಪಟ್ಟ ಧರ್ಮರಹಿತವಾದ ಸಮತಾವಾದವು ಹಿಂದೂಸ್ಥಾನದಲ್ಲಿಯೂ ಬರಬೇಕಾದರೆ ಸಾವಿರಾರು ವರ್ಷಗಳು ಬೇಕಾಗಬಹುದು. ಮೇಲಿನ ವಿಧಿಯಲ್ಲಾದರೆ ಕೆಲವು ವರ್ಷಗಳಲ್ಲಿ ಜನರನ್ನು ಒಡಂಬಡಿಸಿ ಐಕಮತ್ಯಕ್ಕೆ ತರಬಹುದು. ರಾಷ್ಟ್ರಭಕ್ತರು ಧರ್ಮವನ್ನು ಬಿಟ್ಟು ಜನರನ್ನು ಐಕಮತ್ಯಕ್ಕೆ ಒಡಂಬಡಿಸಲಿಕ್ಕೆ ಹೋದರೆ, ಸಾವಿರಾರು ವರ್ಷಗಳಿಂದ ರೂಢ ಮೂಲವಾಗಿದ್ದ ಧರ್ಮವು ಅಡ್ಡಿಮಾಡಿ ಅವರಿಗಾದರೂ ಮುಂದಿನ ಕೆಲಸಕ್ಕೆ ತೊಂದರೆ ಕೊಡಬಹುದು. ಒಡಂಬಡಿಕೆಯಿಂದ ಆಗುವ ಕೆಲಸವು ದಡಂಬಡಿಕೆಯಿಂದ ಆಗಲಾರದು. ಈ ಅಭಿಪ್ರಾಯವನ್ನು ಹಿಂದೂ ಮುಂದಾಳುಗಳು ಪರ್ಯಾಲೋಚಿಸಿ ಬೇಗನೆ ಪರಿಷ್ಕರಣ (Reform) ಕಾರ್ಯಾರಂಭವನ್ನು ಮಾಡುವವರಾಗಲಿ*

ಹಿಂದೂ ಧರ್ಮವು ಯಾರನ್ನು ತಾನೇ ಒಳಕೊಳ್ಳುವುದಿಲ್ಲ ? ಮಹಾದೇವನೇ ಇಲ್ಲ ಎಂದು ಹೇಳುವವರನ್ನು ಚಾರ್ವಾಕರು ಎಂಬುದಾಗಿ ಕರೆದು ಅವರ ಲಕ್ಷಣವನ್ನೂ ಇದು ತನ್ನ ಗ್ರಂಥದೊಳಗೆ ಸೇರಿಸಿಕೊಂಡಿದೆ. ಕ್ರಿಮಿ ಕೀಟ ಪಕ್ಷಿಗಳು ಮನುಷ್ಯರು ರಾಜನ ಸೈನ್ಯ ಮೊದಲಾದವರಿಗೆಲ್ಲಾ ಆಶ್ರಯವನ್ನು ಕೊಟ್ಟಿರುವ ದೊಡ್ಡ ಆಲದ ಮರದಂತೆ ಎಲ್ಲಾ ವಿಧದ ಜನರಿಗೂ ಆಶ್ರಯವನ್ನು ಕೊಟ್ಟಿದೆ. ಇದರ ಯಥಾಸ್ಥಿತಿಯನ್ನು ತಿಳಿದುಕೊಳ್ಳಲಾರದೆ ಕೆಲವರು ಬೌದ್ಧಮತವನ್ನು ಕೆಲವರು ಕ್ರೈಸ್ತಮತವನ್ನು ಕೆಲವರು ಮುಹಮ್ಮದೀಯರೇ ಮೊದಲಾದ ಮತಗಳನ್ನು ಶ್ರೇಷ್ಠವೆಂದು ಭಾವಿಸಿ ಹಿಂದೂ ಮತವು ಕೆಟ್ಟದ್ದೆಂದು ತಿಳಿಯುತ್ತಾ, ಆ ಮಹಾವೃಕ್ಷದ ಬುಡಕ್ಕೆ ಕೊಡಲಿಯನ್ನು

---

* ಅತ್ಯಂತ ಜಟಿಲ ಸಮಸ್ಯೆಯಾದ ಹಿಂದೂ ಧರ್ಮದ ಪರಿಷ್ಕಾರದ ಬಗೆಗೆ ಶ್ರೀ ಚನ್ನಮಲ್ಲಿಕಾರ್ಜುನರು ಕೊಟ್ಟ ತಮ್ಮದೇ ಆದ ಅಭಿಪ್ರಾಯವನ್ನಿಲ್ಲಿ ಗಮನಿಸಬಹುದು.

(—ಸಂ.)

ಹಾಕಿಯೂ ಇನ್ನೂ ಕೆಲವರು ಹಾಕುತ್ತಲೂ ಇರುತ್ತಾರೆ. ಮತ್ತೆ ಕೆಲವರು ಬೇರಿಗೆ ಬೆಂಕಿಯನ್ನು ಹಚ್ಚಿ ಮರವನ್ನೇ ನಾಶಪಡಿಸಬೇಕೆಂತಲೂ ಪ್ರಯತ್ನಿಸುತ್ತಾ ಇರುತ್ತಾರೆ. ಇದೆಂಥಪ ಅನ್ಯಾಯ ?

ತಮ್ಮ ಮತವನ್ನು ತಾವು ಯೋಗ್ಯರೀತಿಯಲ್ಲಿ ಪರಿಷ್ಕರಣ ಮಾಡಿಕೊಳ್ಳದೆ ಅದನ್ನು ಒದೆಯುತ್ತಿರುವ ಜನರನ್ನು ಎಷ್ಟು ಕೃತಘ್ನರೆನ್ನಬೇಕು ?

ಬುದ್ಧನು ವೇದಗಳನ್ನೋದಬೇಡಿರಿ, ಮನುಷ್ಯನ ಬುದ್ಧಿಯೇ ಮುಖ್ಯವಾದುದು. ಆ ಬುದ್ಧಿಯಿಂದ ತಿಳಿದು ನಾನು ಹೇಳಿದುದೇ ವೇದ, ಎಂಬುದಾಗಿ ಹೇಳಿ ಹಿಂದೂ ಮತವನ್ನು ದೂರದಲ್ಲಿ ಕಿತ್ತೊಗೆದಾಗ್ಯೂ ಬೌದ್ಧಮತವು "ಬುದ್ಧಿರಾತ್ಮೇತಿ ಗೀಯತೇ" (ಬುದ್ಧಿಯನ್ನೇ ಆತ್ಮ ಎಂಬುದಾಗಿ ಹೇಳುತ್ತದೆ.) ಎಂದು ಹಿಂದೂ ಮತವು (ಅದನ್ನು ತನ್ನೊಳಗೆ ಸೇರಿಸಿಕೊಂಡಿರುತ್ತದೆ. ಜೈನರು ವೇದವು ನಮಗೆ ಮುಖ್ಯವಲ್ಲವೆಂದು ಹಿಂದೂ ಧರ್ಮವನ್ನು ಹೊರಗೆ ದೂಡಿದಾಗ್ಯೂ ಹಿಂದೂ ಮತದ ಅನೇಕ ಗ್ರಂಥಗಳಲ್ಲಿ ಜೈನರನ್ನು ಸೇರಿಸಿಕೊಂಡ ಉಲ್ಲೇಖವನ್ನು ನಾವು ನೋಡಬಹುದು. ಈಚೆಗೆ ಹಿಂದೂ ದೇಶಕ್ಕೆ ಬಂದ ಮುಹಮ್ಮದೀಯರು ಕ್ರೈಸ್ತ ಮತಗಳ ಅಭಿಪ್ರಾಯಗಳು ಹಿಂದೂ ಧರ್ಮ ದೊಳಗಿನ ದ್ವೈತದ ಭಾಗಗಳಲ್ಲಿ ಸೇರಿಸಿಕೊಳ್ಳಲಿಕ್ಕೆ ಈಗಲಾದರೂ ಬರುವಂತಿವೆ. ಇಂತಹ ಉದಾರವಾದ ಹಿಂದೂ ಮತವನ್ನು—ಯಾವನಾದರೂ ಒಬ್ಬನು ನಾನೊಲ್ಲೆ ನೆಂದು ಹೇಳುತ್ತಿದ್ದರೂ ನಿನಗೆ ಅವಕಾಶವಿದೆ ಬಾ, ಎಂದು ಕರೆಯುತ್ತಿರುವ ಮತ ವನ್ನು—ಬಿಟ್ಟು ಇದರ ಒಂದೊಂದು ಭಾಗವಾಗಿರತಕ್ಕ ಇತರ ಮತಗಳೇ ಶ್ರೇಷ್ಠವೆಂದು ನಂಬಲಿಕ್ಕೆ ಉದ್ಯೋಗಿಸುವ ಮನುಷ್ಯನು ಮರವನ್ನು ಮುಖ್ಯವೆಂದು ಗಣಿಸದೆ ಕೊಂಬೆ ಯನ್ನೇ ಮುಖ್ಯವೆಂದು ಗಣಿಸಿದವನಂತೆ ಬುದ್ಧಿ ಶೂನ್ಯನಾಗುವುದಿಲ್ಲವೆ ?

ಹಿಂದೂಗಳು ಇನ್ನು ಮೇಲಾದರೂ ತಮ್ಮ ಉಚ್ಚ ಧ್ಯೇಯವನ್ನು ಇಡೀ ಜಗ ತ್ತಿಗೆ ತೋರಿಸುವವರಾಗಲಿ. ಈ ವಿಷಯವನ್ನೇ ಇನ್ನೂ ಹೆಚ್ಚಾಗಿ ಹೇಳಲಿಕ್ಕೆ ಆಗು ತ್ತಿದ್ದರೂ ಮುನ್ನುಡಿಯ ಬಹಳ ವಿಸ್ತಾರವಾದ ಭಯದಿಂದ ಇಲ್ಲಿಗೆ ನಿಲ್ಲಿಸಿ ಮುಂದೆ ಗ್ರಂಥದ ವಿಷಯಕ್ಕೆ ಹೊರಡೋಣ.

ಈ ಗ್ರಂಥದಲ್ಲಿ ಉಪನಿಷತ್ತಿನ ಪ್ರಮಾಣಗಳನ್ನು ಕೊಡುತ್ತಾ ಇರುವುದನ್ನು ಈ ಮುಂಚೆ ಸದ್ಧರ್ಮ ದೀಪಿಕೆಯ ಮಾಸಪತ್ರದಲ್ಲಿ ಓದಿದ ಕೆಲವರು ಉಪನಿಷತ್ ಪ್ರಮಾಣ ಗಳನ್ನು ಕೊಟ್ಟಾಗ್ಯೂ ಲಿಂಗಧಾರಣಕ್ಕೆ ಪ್ರಮಾಣವೆಲ್ಲಿದೆ ? ಎಂದು ಆಕ್ಷೇಪಿಸುತ್ತಿದ್ದರು. ಈಗ ಪ್ರಕಟವಾದ ಉಪನಿಷತ್ತುಗಳಲ್ಲಿಯೇ ವೀರಶೈವ ಮತದ ಮೂಲಾಭಿಪ್ರಾಯಕ್ಕೆ ಅನುಸಾರವಾದ ಲೇಖನಗಳಿವೆ ಎಂಬುದನ್ನು ಮೊದಲು ಒಣ (ಬರಿಯ ಮಾತಿನ) ಅದ್ವೈತದ ನಿರಸನ ಮಾಡುವಾಗ ತೋರಿಸಿ ವೀರಶೈವ ಮತದ ವಿಷಯವನ್ನು ಹೇಳುವ ಕಡೆಯ ಭಾಗದಲ್ಲಿನ ತ್ರಿವಿಧಿಗಳ ಪ್ರಕಾರ ಲಿಂಗಧಾರಣೆ ಮೊದಲಾದ ವೀರ ಶೈವ ಲಕ್ಷಣಗಳಿಗೆ ಉಪನಿಷತ್ ಪ್ರಮಾಣಗಳು ಕೊಡಲ್ಪಟ್ಟಿವೆ. ಇವುಗಳಲ್ಲಿ ಕೆಲವನ್ನು (೪–೫ ಮಾತ್ರ) ಇನ್ನೂ ಮುದ್ರಣವಾಗದ ಉಪನಿಷತ್ತುಗಳಿಂದ ಗ್ರಹಿಸಿ ಇದೆ.

ಮುಖ್ಯವಾಗಿ ಲಿಂಗಧಾರಣ ಪದ್ಧತಿಯು ಬಹಳ ಪುರಾತನ (೫-೬ ಸಾವಿರ ವರುಷ)ದಿಂದ ಬಂದುದು ಎಂಬುದನ್ನು ಚರಿತ್ರೆಯ ಸಂಶೋಧಕರಾದ ಮಿ। ಮಾರ್ಷಲ್ ರವರೂ ಕೂಡಾ ಒಪ್ಪಿರುತ್ತಾರೆ. ಹಿಂದೂಗಳು ಧಾರ್ಮಿಕ ಪ್ರಬಲತೆಯುಳ್ಳವರಾಗಿ ನಾಗರಿಕತೆಯುಳ್ಳಿದ್ದ ಕಾಲದಲ್ಲಿಯೇ ಇದು ಇದ್ದಿತೆಂದು ಹೇಳುವುದಕ್ಕೆ ಅನುಮಾನ ವೇನೂ ಇಲ್ಲ.

ಶ್ರೀ ಶಂಕರಾಚಾರ್ಯರವರು ಬೋಧಿಸಿದ ಅದ್ವೈತವನ್ನು ಮೀರಿ ಇರುವ ವಿಷಯಗಳು ತೇಜೋಬಿಂದು ಮೊದಲಾದ ಅನೇಕ ಉಪನಿಷತ್ತುಗಳಲ್ಲಿ ಇರುವುದರಿಂದ ಶಿವಾದ್ವೈತ ತತ್ವವು ಬಹಳ ಪೂರ್ವದ್ದೆಂದು ಹೇಳಲಿಕ್ಕೆ ಬರುತ್ತದೆ.

ಈಗಿನ ಕವಿಗಳಲ್ಲೂ ಪ್ರಸಿದ್ಧರಾದ ಶ್ರೀ ರವೀಂದ್ರನಾಥ ಟಾಗೋರರವರೂ ಯೋಗಿಗಳಲ್ಲಿ ಪ್ರಸಿದ್ಧರಾದ ಶ್ರೀ ಅರವಿಂದ ಘೋಷರವರೂ ಸಹ ಅದ್ವೈತ ತತ್ತ್ವಕ್ಕಿಂತ ಮೀರಿ ಮನುಷ್ಯನ ಜ್ಞಾನವೂ ನಡತೆಯೂ ಬೆಳೆಯಬೇಕೆಂದು ಹೇಳುತ್ತಿದ್ದಾರೆ. ಅವರು ಹೇಳುತ್ತಿರುವ ಅದ್ವೈತವನ್ನು ಮೀರಿದ ಸ್ಥಿತಿಯು ಈ ವೀರಶೈವ(ಶಿವಾದ್ವೈತ)ದಲ್ಲಿ ಇರುತ್ತದೆ. "ಪೂರ್ಣ ಯೋಗವೂ ವೀರಶೈವವೂ" ಎಂಬ ಗ್ರಂಥವು ಇದರ ವಿವರಣೆ ಗಾಗಿಯೇ ರಚಿಸಲ್ಪಡುತ್ತಾ ಇದೆ.

ಬಸವೇಶ್ವರನ ಬೋಧೆಯು ವೇದಮಾನ್ಯವಲ್ಲವೆಂದೂ ಅದು ವರ್ಣಸಂಕರ ವೆಂದೂ ಕೆಲವರು ಅಭಿಪ್ರಾಯಪಡುತ್ತಿರುವರಷ್ಟೆ. ಹಾಗೆ ಹೇಳುವವರು ಈ ಗ್ರಂಥ ದಲ್ಲಿರುವ ಉಪನಿಷತ್ ಪ್ರಮಾಣಗಳನ್ನು ನೋಡಿದರೆ ಪೂರ್ವದ ಉಪನಿಷತ್ತುಗಳು ವೇದದ ಆಧಾರದಿಂದ ಹುಟ್ಟಿದವುಗಳಾಗಿದ್ದರಿಂದಲೂ ಈ ಉಪನಿಷತ್ತುಗಳಲ್ಲಿಯೇ ವರ್ಣಗಳಿಲ್ಲ, ಸೂತಕಗಳಿಲ್ಲ ಎಂಬಿವೇ ಮೊದಲಾದ ಪ್ರಮಾಣಗಳು ದೊರಕುವುದರಿಂದ ಬಸವೇಶ್ವರನಾಗಲೀ, ಪಂಚಾಚಾರ್ಯನಾಗಲೀ ತಿಳಿಯುತ್ತಿದ್ದ ವೀರಶೈವ ತತ್ತ್ವವು ಒಂದೇ ವಿಧವಾಗಿ ಉಂಟೆಂಬುದನ್ನು ಯೋಚಿಸದೆ ಇರಲಾರರು. ಇಂತಹ ತತ್ತ್ವಗಳನ್ನೊಳ ಗೊಂಡ ಗ್ರಂಥಗಳೇ ವೀರಶೈವರ ನಿಜವಾದ ಗ್ರಂಥಗಳು; ಇವೇ ವೇದಮಾನ್ಯಗಳೂ ಆಗಿವೆ.

ಲಿಂಗ ಎಂಬ ಪದವು ಬಹಳ ಪೂರ್ವದ ಉಪನಿಷತ್ತುಗಳಲ್ಲಿ ಇಲ್ಲವೆಂದು ಕೆಲವರು ಹೇಳುತ್ತಾರೆ. ದಶೋಪನಿಷತ್ತುಗಳಲ್ಲಿ ಒಂದಾದ ಕಠೋಪನಿಷತ್ತಿನಲ್ಲಿ ೨ನೆಯ ಅಧ್ಯಾಯ ೬ನೆಯ ವಲ್ಲಿಯುಲ್ಲಿ—

"ಇಂದ್ರಿಯೇಭ್ಯಃ ಪರಂ ಮನೋ ಮನಸಸ್ಸತ್ವಮುತ್ತಮಂ
ಸತ್ವಾದಧಿಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ
ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋ ಲಿಂಗ ಏವ ಚ
ಯದ್‌ಜ್ಞಾತ್ವಾ ಮುಚ್ಯತೇ ಜಂತುರ ಮೃತತ್ವಂಚ ಗಚ್ಛತಿ ॥

ಎಂದರೆ ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಸತ್ವ, ಸತ್ವಕ್ಕಿಂತ ಮಹತ್ತು ಮಹತ್ತಿಗಿಂತ ಅವ್ಯಕ್ತ, ಅವ್ಯಕ್ತಕ್ಕಿಂತ ಲಿಂಗವು ಶ್ರೇಷ್ಠ. ಇದನ್ನು ತಿಳಿದು ಪ್ರಾಣಿಯು ಮುಕ್ತನಾಗುತ್ತಾನೆ. ಮತ್ತು ಅಮೃತ(ಸಾಯದೆ ಇರುವಿಕೆ)ವನ್ನು ಹೊಂದುತ್ತಾನೆ ಎಂದು ಇದೆ. ಇಲ್ಲಿ 'ಲಿಂಗ' ಪದಕ್ಕೆ ಬದಲಾಗಿ 'ಅಲಿಂಗ' ಎಂಬುದಾಗಿ ಕೆಲವರು ಸಂಧಿ ವಿಂಗ ಡಿಸಿ ಇರುತ್ತಾರೆ. ಆದರೆ ಇದರಲ್ಲಿಯೇ ಪುರುಷೋ ವ್ಯಾಪಕೋ ಎಂಬಲ್ಲಿ ನಡುವೆ ಹೇಗೆ 'ಅ' ಸೇರಿಸುವುದಿಲ್ಲವೋ ಹಾಗೆಯೇ ವ್ಯಾಪಕೋ ಲಿಂಗ ಎಂಬಲ್ಲಿಯೂ "ಅ" ಸೇರಿಸದೆ ಇರುವುದೇ ಸರಿಯಾದ ರೀತಿಯು.

ಶ್ರೀ ಮೊಗ್ಗೆಯ ಮಾಯಿದೇವರು "ಲಿಂಗಾಯ ಲಿಂಗ ರೂಪಿಣೇ" "ಗುರ್ತಿಲ್ಲದ ರೂಪುಳ್ಳ ಲಿಂಗಕ್ಕೆ" ಎಂಬ ಅರ್ಥವುಳ್ಳ ಪದವನ್ನು ಉಪಯೋಗಿಸಿ ಇರುತ್ತಾರೆ. ನಿರಾಕಾರ ರೂಪವೇ ಲಿಂಗವೆಂಬುದಕ್ಕೆ ವೀರಶೈವ ಗ್ರಂಥಗಳಲ್ಲಿ ಪ್ರಮಾಣಗಳಿವೆ. ಈ ಪ್ರಕಾರ ಗುರುತಿಲ್ಲದ ಪುರುಷನು ವ್ಯಾಪಕನು ಎಂದರೂ ಲಿಂಗವೇ. (ಇಲ್ಲಿ ಗುರುತು ಎಂದರೆ ಕೈಕಾಲು ಮೊದಲಾದ ಅವಯವಗಳುಳ್ಳುದು ಅಥವಾ ಬ್ರಹ್ಮಾಂಡದಲ್ಲಿ ಇರುವ ವಸ್ತುಗಳಂತೆ ಭಿನ್ನಭಾಗ ಉಳ್ಳುದು ಅಥವಾ ಒಂದರ ಚಿಹ್ನೆಯಾಗಿ ಇರುವುದು, ಇಂಥ ವುಗಳು ಯಾವುವೂ ಇಲ್ಲದೆ ಭೂಮಿ, ಚಂದ್ರ, ನಕ್ಷತ್ರ ಮೊದಲಾದವುಗಳನ್ನು ಮುಚ್ಚಿ ಕೊಂಡು ನಿರಾಕಾರವಾದ ಬ್ರಹ್ಮವು ಹೇಗೆ ತೋರುವುದೋ ಹಾಗೆ ಅವಯವಗಳನ್ನೂ ಮುಚ್ಚಿಕೊಂಡು ನಿರಾಕಾರವಾದ ಬ್ರಹ್ಮವೂ ಹೇಗೆ ತೋರುವುದೇ ಲಿಂಗವು. ಆದುದ ರಿಂದ ಲಿಂಗದ ಬಳಕೆಯುಳ್ಳ ಶಿವಾದ್ವೈತವೂ ಋಷಿಗಳಿಂದಲೂ ಮಾನ್ಯವಾಗಿದೆ.

ಇದಲ್ಲದೆ ಪೂರ್ವದ ಉಪನಿಷತ್‌ಕಾರರು 'ಲಿಂಗ' ಎಂಬುದನ್ನು ಮುಖ್ಯವಾಗಿ ತಿಳಿಯುತ್ತಿದ್ದರೆಂಬುದಕ್ಕೆ 'ಲಿಂಗಾದಿ ಬ್ರಹ್ಮಾಂಡಾಂತಂ ಜಗತ್ ಸೃಷ್ಟಿಃ' ಎಂಬಿವೇ ಮೊದಲಾದ ಲೇಖನಗಳೂ ಉಪನಿಷತ್‌ಗಳಲ್ಲಿ ದೊರಕುತ್ತವೆ.

ಆದುದರಿಂದ ಲಿಂಗಪೂಜೆ ಅಥವಾ ಲಿಂಗಧಾರಣೆಯು ೮೦೦ ಅಥವಾ ೧೦೦೦ ವರ್ಷಗಳಿಂದ ಮಾತ್ರ ಬಂದುದೆಂದು ತಿಳಿಯಬಾರದು. ಅದ್ವೈತಿಗಳು ಬ್ರಹ್ಮವನ್ನು ಭೂಮಿ ಮೊದಲಾದವುಗಳ ಗಣನೆಯಿಲ್ಲದೆ ಎಲ್ಲವನ್ನೂ ಒಳಗೊಂಡಿರುವ ನಿರಾಕಾರ ವಾದ ಒಂದು ದೊಡ್ಡ ವಸ್ತುವೆಂದು ಭಾವಿಸುವಂತೆ, ಈಗ ನಾವು ಕಣ್ಣುಗಳ ಮುಂದಿನ ಪ್ರಪಂಚವನ್ನೂ ದಿಗಂತವನ್ನೂ ಒಟ್ಟಿಗೆ ನೋಡಿ ದುಂಡಗಿನ ಆಕಾರದ ಭೂಮಿಯು ತಳಹದಿಯುಮೇಲೆ ಆಕಾಶವೆಂಬ ಹೊದಿಕೆಯೊಳಗೆ ಮುಚ್ಚಿರುವ ಭಾಗವನ್ನೇ ಮಾತ್ರ ನೋಡಿ ಇದೇ ಬ್ರಹ್ಮ (ದೊಡ್ಡವಸ್ತು) ಎಂದು ಭಾವಿಸುವಂತೆ, ದುಂಡಗಿನ ವೃತ್ತದ ತಳಹದಿಯು ಮೇಲೆ ಮೇಲು ಹೊದಿಕೆ ಎಂಬ ಕಪ್ಪು ಬಣ್ಣದ ಕಂಥೆಯನ್ನು ಹೊದಿಸ ಲ್ಪಟ್ಟು ಬ್ರಹ್ಮದ ರೂಪುಳ್ಳುದಾದುದರಿಂದ ಲಿಂಗವೇ ಬ್ರಹ್ಮನ ಪ್ರತಿರೂಪವೆಂದು ಭಾವಿಸಿ ಲಿಂಗವೇ ಬ್ರಹ್ಮ ಎಂಬುದಾಗಿ ಶಾಸ್ತ್ರ ಹೇಳುತ್ತದೆ. ಮೇಲೆ ಕಂಡಂತೆ ಬ್ರಹ್ಮ ದಲ್ಲಿ ಜಗತ್ತು ಅಡಗಿದ್ದರೂ ಅದು ಗಣನೆಗೆ ಬಾರದೆ ಇರುವಂತೆ ವೀರಶೈವರು ಧರಿಸುವ

ಲಿಂಗದ ಒಳಭಾಗದಲ್ಲಿ ಪಂಚಸೂತ್ರಗಳಿದ್ದು ಪಂಚಭೂತಗಳ ಲಕ್ಷಣವನ್ನೂ ಅದು ಕೂಡಿಕೊಂಡಾಗ್ಯೂ ಮೇಲಿನ ಕಂಥೆಯೇ ಮುಖ್ಯವಾಗಿ ತೋರುವುದರಿಂದ ಪಂಚಭೂತಗಳ ಗಣನೆಯಿಲ್ಲದ ಬ್ರಹ್ಮದ ಪ್ರತಿರೂಪವೇ ಲಿಂಗ ಎಂದು ಹೇಳುವುದಕ್ಕೆ ಲಕ್ಷಣಗಳು ಸರಿಯಾಗಿ ಒಪ್ಪುತ್ತವೆ. ಆದುದರಿಂದಲೇ ವೀರಶೈವರು ಸ್ಥೂಲ ಬ್ರಹ್ಮ ಎಂದು ಇಷ್ಟಲಿಂಗಕ್ಕೆ ಕರೆದು, ಅದನ್ನು ಸ್ಥೂಲ ದೇಹಕ್ಕೆ ಸಂಬಂಧಿಸಿ, ದೇಹವನ್ನು ಬ್ರಹ್ಮಮಯವಾಗಿ ಮಾಡಿ ಆ ಮೂಲಕ ಪ್ರಾಣವನ್ನೂ ಜೀವವನ್ನೂ (ಆತ್ಮವನ್ನೂ) ಬ್ರಹ್ಮಮಯವಾಗಿ (ಸೂಕ್ಷ್ಮಬ್ರಹ್ಮ ಕಾರಣ ಬ್ರಹ್ಮರೂಪವಾಗಿ) ಮಾಡುವುದರಿಂದ ಇವರ ಲಿಂಗಧಾರಣೆಯು ಲಿಂಗವೇ ಪೂಜ್ಯವೆಂದು ಭಾವಿಸಿ, ತಾನು ಕೀಳೆಂದು ತಿಳಿಯುವ ಕರ್ಮಮಾರ್ಗವಲ್ಲವೆಂದೂ, ಲಿಂಗವೂ ತಾನೂ ಒಂದೇ ಎಂಬ ಅದ್ವೈತ ಕ್ರಿಯೆಯು ಸಾಧನೆ ಎಂದೂ ಸರ್ವರೂ ತಿಳಿಯಬಹುದಾಗಿದೆ. ಅದ್ವೈತಿಗಳು ಬಾಯಲ್ಲಿ ಬ್ರಹ್ಮವನ್ನು ಹೇಳುತ್ತಾರೆ. ವೀರಶೈವರು ಆ ಜ್ಞಾನವನ್ನೂ ಒಪ್ಪಿಕೊಂಡು ತಾನೂ ಬ್ರಹ್ಮನಾಗಿರುವಿಕೆಯನ್ನು ನಡೆದು ತೋರಿಸುತ್ತಾರೆ ಮತ್ತು ಜಗತ್ತು ಬ್ರಹ್ಮವೆಂಬ ಸರ್ವವೂ ಬ್ರಹ್ಮವೆಂಬ ಆಚರಣೆಯೂ ಇವರಲ್ಲಿ ಬಂದಿರುತ್ತದೆ.

ನಿರಾಕಾರ ಬ್ರಹ್ಮನ ಸಾಕಾರ (ಕಣ್ಣಿಗೆ ಕಾಣುವ) ರೂಪಕ್ಕೆ ಸಕಲ ಎಂದು ಕರೆದು ಅದೇ ಗುರುರೂಪವಾಗಿ ತೋರುವುದೆಂದೂ ಅದೇ ನಿರಾಕಾರ ಬ್ರಹ್ಮನ ಸಾಕಾರ ನಿರಾಕಾರ(ಕಣ್ಣಿಗೆ ಕಾಣದೆ ಉಳಿದ ಇಂದ್ರಿಯಗಳಿಂದ ತಿಳಿಯಲ್ಪಡುವ) ರೂಪಕ್ಕೆ ಸಕಲ ನಿಷ್ಕಲ ಎಂದು ಕರೆದು ಅದೇ ಲಿಂಗರೂಪವಾಗಿ ತೋರುವುದೆಂದೂ (ಪ್ರಾಣವು ಸಾಕಾರ ನಿರಾಕಾರವಾದುದರಿಂದ ಪ್ರಾಣವೇ ಲಿಂಗವೆಂದೂ), ನಿರಾಕಾರ ಬ್ರಹ್ಮನ ನಿರಾಕಾರ (ಯಾವ ಇಂದ್ರಿಯಗಳಿಗೆ ಗೋಚರವಾಗದೆ ಇರುವ) ರೂಪವನ್ನು ನಿಷ್ಕಲ ಎಂದು ಕರೆದು ಅದೇ ಜಂಗಮ ರೂಪವಾಗಿ ತೋರುವುದೆಂದೂ (ಭಾವವು ಅಥವಾ ಆತ್ಮವು ಕೇವಲ ನಿರಾಕಾರವಾದುದರಿಂದ ಅದೇ ಜಂಗಮ ರೂಪವಾಗಿ ತೋರುವುದೆಂದೂ) ತಿಳಿದು ಹೊರಗೆ ಕಾಣುವ ಗುರುಲಿಂಗ ಜಂಗಮರನ್ನು ತಮ್ಮಲ್ಲಿಯೇ ಭಾವಿಸಿ ಐಕ್ಯತೆಯನ್ನು ಹೊಂದಿ ಅದ್ವೈತದ ಕ್ರಿಯೆಯನ್ನು ಮಾಡಿ ತೋರಿಸುತ್ತಾರೆ.

ಒಬ್ಬ ಮನುಷ್ಯನಿಗೆ ಅವನ ದೇಹದಲ್ಲಿ ಕಾಣಬರುವ ದೇಹ (Body) ಮನಸ್ಸು (Mind) ಭಾವ ಅಥವ ಆತ್ಮ (Self) ಈ ಮೂರೂ ಬ್ರಹ್ಮನಲ್ಲಿ ತೋರುವ ಅವೇ ಮೂರು ರೂಪಗಳಲ್ಲಿ ಸಾಮರಸ್ಯವನ್ನು ಹೊಂದಬೇಕೆಂಬುದೂ ಬರೀ ದೇಹದ ಶ್ರಮ, (ಕೈಮುಗಿಯುವುದೇ ಮೊದಲಾದುದು), ಬರೀ ವಾಚಿಕಶ್ರಮ (ಹಾಡುವುದು, ಹೊಗಳುವುದೇ ಮೊದಲಾದುದು), ಬರೀ ಮಾನಸಿಕ ಶ್ರಮ (ಧ್ಯಾನ ಮಾಡುತ್ತಾ ಕೂಡುವುದು) ಇಷ್ಟು ಮಾತ್ರದಿಂದ ಮಹಾದೇವನ ಸಾಮರಸ್ಯವು ಒದಗುವುದಿಲ್ಲವೆಂಬುದೂ ಹೇಗೆ ನಿಷ್ಕಲ ಬ್ರಹ್ಮನು ತಾನೇ ತಾನಾಗಿರಬೇಕಾದರೆ, ಭೂಮಿ ಮೊದಲಾದ ಪಂಚಭೂತಗಳು

ಅಡಗಿ ತಾನೊಬ್ಬನೇ ಇರಬೇಕೋ ಹಾಗೆ ಮನುಷ್ಯನು ತನ್ನ ದೇಹ ಮನಸ್ಸು ಇಂದ್ರಿಯಗಳೆಂಬ ಭಾವನೆಯನ್ನು ಬಿಟ್ಟು ಅವೆಲ್ಲಾ ಮಹಾದೇವನವೇ ಎಂದು ವರ್ತಿಸುತ್ತಾ ಆ ಆಚರಣೆಯ ಎಚ್ಚರವೂ ಸಾಧನೆಯಿಂದ ತಪ್ಪಿಹೋಗಿ ಕೇವಲ ಮಹಾದೇವನೇ ಆಗಿ ಬಿಡುವಿಕೆ ಎಂಬ ಕೈವಲ್ಯವನ್ನು ಹೊಂದಬೇಕೆಂಬುದೂ ಎಲ್ಲರಿಗೂ ತಿಳಿವ ವಿಷಯವೇ ಆಗಿದೆ. ಆದುದರಿಂದ ವೀರಶೈವರು ಗುರುವನ್ನು ಹೊಂದಿ ಲಿಂಗವನ್ನು ಧರಿಸಿ ಲಿಂಗ ರೂಪವಾಗಿ ತಾವು ಮಾಡುತ್ತಿರುವ ಕ್ರಿಯೆಯಲ್ಲಿ ನಿಷ್ಕಲ ರೂಪವನ್ನು ಸಾಧಿಸಿ ನಿಷ್ಕಲ ವಲ್ಲಿ (ಪರಂಜ್ಯೋತಿ ರೂಪದಲ್ಲಿ) ಸಾಮರಸ್ಯವನ್ನು ಹೊಂದುವ ಅದ್ವೈತ ಸಿದ್ಧಿ ಗೋಸ್ಕರವೇ ಹೊರತು ಪ್ರಪಂಚಿಕರ ಕರ್ಮಿಗಳಂತೆ ಇಷ್ಟಲಿಂಗವನ್ನೇ ದೊಡ್ಡದೆಂದು ತಿಳಿದು ಅದನ್ನು ವಿಧವಿಧವಾದ ಆಡಂಬರಗಳಿಂದ ಪೂಜಿಸಿ ಹೆಮ್ಮೆಯನ್ನು ಪಡುವು ದಕ್ಕಲ್ಲ.

ಇವರಲ್ಲಿ ಲಿಂಗವು ಪ್ರಾಣಕ್ಕೆ ಸಮಾನವಾದುದು ಎಂಬ ಭಾವನೆ ದೃಢವಾಗಿ ಇರುವುದರಿಂದಲೇ ಪ್ರಾಣವು ಹೋದಕೂಡಲೇ ಲಿಂಗವನ್ನು ದೇಹದೊಡನೆ ಬಿಟ್ಟು ಬಿಡುವರು. ಪ್ರಾಣವಿದ್ದರೆ ಲಿಂಗ; ಲಿಂಗವಿದ್ದರೆ ಪ್ರಾಣ ಹೀಗೆ ವರ್ತಿಸುವುದೇ ಇವರ ಮುಖ್ಯ ಲಕ್ಷಣ. (ಮನಸ್ಸು ಅಥವಾ ಪ್ರಾಣವು ಶುದ್ಧವಾಗಿದ್ದರೆ ದೇಹವು ಶುದ್ಧತ್ವ ವನ್ನು ಪಡೆಯುತ್ತದೆ. ಮನಸ್ಸಿನಲ್ಲಿ ಮೋಸದ ಬುದ್ಧಿ ವ್ಯಾಪಿಸಿ ಹೊರಗೆ ಮೈದೊಳೆ ದರೆ ದೇಹ ಶುದ್ಧಿಯು ಪೂರ್ಣವಾಗುವುದಿಲ್ಲ. ಅದಕ್ಕಾಗಿ ಪ್ರಾಣಕ್ಕೆ ಲಿಂಗ ಎಂದೂ ಆ ಪ್ರಾಣಲಿಂಗವೇ ಇಷ್ಟಲಿಂಗವೆಂದೂ ಭಾವಿಸಿ ನಡೆಯುವುದರಿಂದ ದೇಹ ಶುದ್ಧತೆಯು ಪೂರ್ಣತೆಗೆ ಬರಲು ಅವಕಾಶವಾಗುತ್ತದೆ.) ದೇವಸ್ಥಾನಗಳಲ್ಲಿ ಇರುವ ಲಿಂಗ ಅಥವಾ ಮೂರ್ತಿಗಳಂತೆ ಇಷ್ಟಲಿಂಗವು ತಮ್ಮ ತರುವಾಯ ಪೂಜ್ಯವೆಂದು ವೀರಶೈವರು ತಿಳಿ ಯುವುದಿಲ್ಲ. ಆದುದರಿಂದಲೇ ಈ ಲಿಂಗವು ದೇವಸ್ಥಾನದ ಲಿಂಗದಂತೆ ಮೂರ್ತಿಯಲ್ಲ. ಕರ್ಮಿಗಳಂತೆ ಇವರು ಮೂರ್ತಿ ಪೂಜಕರೂ ಅಲ್ಲ.

ಭೂಮಿಗೆ ಬಂದ ಪ್ರತಿಯೊಬ್ಬ ವೀರಶೈವನಿಗೂ ಒಬ್ಬ ಗುರು, ಒಂದು ಲಿಂಗ ನಬ್ಬ ಜಂಗಮ ಹೊಸದಾಗಿ ಆಗಬೇಕು. ತನ್ನ ಅಪ್ಪನ ಗುರು ಅಪ್ಪನ ಲಿಂಗ ಅಪ್ಪನ ಜಂಗಮ ಆಗಬೇಕೆಂಬ ನಿಯಮವೇನೂ ಇಲ್ಲ. ಹೀಗಿರುವುದರಿಂದ ಇವರ ಲಿಂಗ ಪೂಜೆಯು ಕರ್ಮಮಾರ್ಗವೆಂದೂ ದ್ವೈತವೆಂದೂ ಯಾರಾದರೂ ತಿಳಿವುದಾದರೆ, ಅದು ದೊಡ್ಡ ತಪ್ಪೇ ಸರಿ.

ಭಕ್ತಸ್ಥಲದಲ್ಲಿಯೇ ಅದ್ವೈತದ ಆಚರಣೆಯು ಪ್ರಾರಂಭವಾಗುವುದು. ಅದು ಐಕ್ಯಸ್ಥಲದಲ್ಲಿ ಪೂರ್ಣತೆಯನ್ನೂ ಹೊಂದುವುದು. ಶಿವನೇ ಶಿವಾರ್ಚನೆ ಮಾಡುವವ ನಾಗಿ ಭಕ್ತಸ್ಥಲದಲ್ಲಿ ಇರುತ್ತಾನೆ ಎಂದು ಶಿವಶರಣರಾದ ಮೊಗ್ಗೆಯ ಮಾಯಿಪ್ರಭುಗಳು ಹೇಳಿರುತ್ತಾರೆ. ಅದ್ವೈತ ಶಾಸ್ತ್ರದಲ್ಲಿ ನಿಪುಣನಾದರೂ ಈ ಶಿವಾದ್ವೈತದಲ್ಲಿ ನಡೆದೇ ಅದ್ವೈತದ ಸಿದ್ಧಿ ಮಾಡಿಕೊಳ್ಳಬೇಕು. ಆದುದರಿಂದ ಶಿವಾದ್ವೈತದ ಈ ಮಾರ್ಗ

ವನ್ನು ಸರ್ವರೂ ಸೂಕ್ಷ್ಮ ದೃಷ್ಟಿಯಿಂದ ಚೆನ್ನಾಗಿ ಪರಿಶೀಲಿಸಿ ನೋಡಲಿ ಎಂಬುದೇ ಈ ಗ್ರಂಥ ಪ್ರಕಾಶಕನ ಹಾರೈಕೆಯು.

ಈ ಗ್ರಂಥದ ಕರ್ತರು ಯಾರು ಎಂಬುದನ್ನು ಇದರಲ್ಲಿ ಹೇಳಿಲ್ಲ. ಕೊನೆಯಲ್ಲಿ 'ಅರುಣಾಚಲೇಶ' ಎಂಬ ಅಂಕಿತವನ್ನು ಇಟ್ಟು ಇರುವುದರಿಂದ ಸ್ವಲ್ಪಮಟ್ಟಿಗೆ ಊಹಿಸಲಿಕ್ಕೆ ಬರುವಂತೆ ಇದೆ. ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳು ಮದ್ರಾಸ್ ಆಧಿಪತ್ಯದಲ್ಲಿ ಇರುವ ಅರುಣಾಚಲ ಮೊದಲಾದ ಕಡೆಗಳಲ್ಲಿ ಸಂಚರಿಸಿ ಬಂದರೆಂದು ಗೊತ್ತಾಗಿದೆ. ಅವರ ಚರದಲ್ಲಿ (ಅವರೊಡನೆ ಸಂಚರಿಸುತ್ತಿದ್ದ ಜಂಗಮ ಮೂರ್ತಿಗಳಲ್ಲಿ) ಇದ್ದವರೊಬ್ಬರು ಅರುಣಾಚಲದಲ್ಲಿ ಅನುಗ್ರಹವನ್ನು ಹೊಂದಿದವರು ಅಥವಾ ಅರುಣಾಚಲೇಶ ಎಂಬ ಹೆಸರಿನ ಗುರುವನ್ನು ಉಳ್ಳವರು 'ಅರುಣಾಚಲೇಶ' ಎಂಬ ಅಂಕಿತದಿಂದ ಇದನ್ನು ರಚಿಸಿರಬಹುದು. (ಸಂ. ೩೯)

# ಉಪನಿಷತ್ತುಗಳು

ಮನುಷ್ಯನಾಗಿ ಹುಟ್ಟಿದ ಮೇಲೆ ಪಶು ಪಕ್ಷಿ ಮೃಗಗಳು ಮೊದಲಾದುವುಗಳ ಹಾಗೆ ಗಂಡ ಹೆಂಡಿರು ಸಂಸಾರ ಮಾಡಿಕೊಂಡಿದ್ದು ಈ ಲೋಕದ ಯಾತ್ರೆಯನ್ನು ತೀರಿಸಿಬಿಡಬೇಕೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇರುವೆಯೂ ಕೂಡ ತನ್ನ ಸುಖವನ್ನು ಬಯಸಿ ಕೆಲಸ ಮಾಡುತ್ತದೆ. ಸಕ್ಕರೆ ಸಿಕ್ಕುವಲ್ಲಿಗೆ ಹೋಗುತ್ತದೆ. ತಿನ್ನುತ್ತದೆ. ಮೊಟ್ಟೆಗಳನ್ನು ಇಡುತ್ತದೆ. ತನಗೆ ತೊಂದರೆ ಉಂಟುಮಾಡಿದವರಿಗೆ ಕಡಿಯುತ್ತದೆ. ಇದೆಲ್ಲಾ ಸ್ವಾಭಾವಿಕವಾಗಿ ಪ್ರಾಣಿವರ್ಗದ ಗುಣವೇ ಆಗಿದೆ. ಇಷ್ಟನ್ನೇ ಮನುಷ್ಯನು ನಡೆಸಿಕೊಂಡು ಹೋದರೆ ಆತನು ತನ್ನ ವಿಚಾರಶಕ್ತಿಯನ್ನು ಸಂಪೂರ್ಣ ಉಪಯೋಗಿಸಿಕೊಂಡಂತೆ ಆಗುವುದಿಲ್ಲ. ಮನುಷ್ಯನ ಬುದ್ಧಿಯು ಅತಿ ಸೂಕ್ಷ್ಮ ವಾದುದು. ಇತರ ಪ್ರಾಣಿಗಳ ಯೋಚನೆಗಿಂತ ಮನುಷ್ಯನ ಯೋಚನೆಯು ಹೆಚ್ಚಿನದು. ಆದ್ದರಿಂದಲೇ ಇತರ ಪ್ರಾಣಿಗಳು ಹೊಂದದಿರುವ ಪ್ರಯೋಜನಗಳನ್ನು ಮನುಷ್ಯನು ಹೊಂದುತ್ತಾನೆ. ಮನುಷ್ಯನು ಹೊಂದುವ ಸುಖ ಸಾಧನೆಯ ವಸ್ತುಗಳು ಕೆಲವನ್ನು ಇತರ ಪ್ರಾಣಿಗಳು ಏನು ಕಷ್ಟಪಟ್ಟರೂ ಹೊಂದಲಾರವು. ಎಷ್ಟು ವರ್ಷಗಳು ತಮ್ಮ ಬುದ್ಧಿಯನ್ನು ಖರ್ಚುಮಾಡಿದರೂ ಹೊಂದಿಸಿಕೊಳ್ಳಲಾರವು.

ಹೀಗೆ ಈಗಿನ ಪ್ರಪಂಚದ ಪ್ರಾಣಿಗಳೆಲ್ಲೆಲ್ಲಾ ಶ್ರೇಷ್ಠವಾದ ಮನುಷ್ಯನು ತನ್ನ ಬುದ್ಧಿಯಿಂದ ಈ ಜಗತ್ತನ್ನು ಸೃಷ್ಟಿಮಾಡಿದ ಮಹಾದೇವನ ವಿಷಯವಾಗಿ ವಿಚಾರ ಮಾಡುವುದಕ್ಕೆ ಪ್ರಯತ್ನಪಟ್ಟು ಅವನ್ನು ಸಾಧಿಸುವುದಕ್ಕೆ ಪ್ರಯತ್ನ ಮಾಡುವದು ಅವನ ಅನೇಕ ಕೆಲಸಗಳಲ್ಲಿ ಒಂದು ಮುಖ್ಯವಾದ ಕೆಲಸವಾಗಿರುತ್ತದೆ. ಮಹಾದೇವನ ವಿಷಯವಾಗಿ ಏಕೆ ವಿಚಾರಮಾಡಬೇಕು ? ಅದರಿಂದ ನಮಗೇನು ಪ್ರಯೋಜನ ? ಅವನು ಕಣ್ಣಿಗೆ ಕಾಣುವುದಿಲ್ಲ ಎಂದು ಅನೇಕರು ಶಂಕಿಸಬಹುದು. ಕಾಣದಿರುವ ಎಷ್ಟೋ ವಸ್ತುಗಳನ್ನು (ಳಿಂದ?) ನಾವು ಉಂಟಾಗಿದ್ದೇವೆ. ಅವುಗಳ ವಿಚಾರ ಮಾಡ ದಿದ್ದರೆ ನಮಗೆ ಸುಖವು ದೊರೆವಂತೆ ಇಲ್ಲ. ಮನಸ್ಸನ್ನು ಹೊರಗಿನ ಕಣ್ಣುಗಳಿಂದ ನೋಡಿದವರು ಯಾರು ಇರುವರು? ಕೋಪವನ್ನು ನೋಡಿದವರಾರಿದ್ದಾರೆ. ಅಹಂಕಾರ ಯಾರ ಕಣ್ಣಿಗೆ ಗೋಚರವಾಗಿದೆ ? ಇವುಗಳನ್ನು ಇಲ್ಲವೆನ್ನಬೇಕೇನು ? ಇವುಗಳ ಕೆಲಸಗಳಿಂದ ಇವು ಉಂಟೆಂದು ಹೇಗೆ ತಿಳಿಯಬೇಕೋ ಹಾಗೆ ಕೇವಲ ಬಯಲು (ನಿರಾಕಾರ) ಸ್ವರೂಪವಾಗಿ ಕಾಣುವ ಆಕಾಶವೂ ಕೂಡ ಒಂದು ಮೂಲವಸ್ತುವಿನಿಂದ ಆಗಿರುವದೆಂದು ತಿಳಿಯಲಿಕ್ಕೆ ಬರುವಂತೆ ಇರುವುದರಿಂದ ಎಲ್ಲಕ್ಕೂ ಮೂಲವಸ್ತುವು ಯಾವುದೋ ಅದನ್ನೇ ಅವನನ್ನೇ ಮಹಾದೇವನೆಂದು ಭಾವಿಸಿ ಅವನ ವಿಷಯವಾಗಿ

ತಿಳಿಯುವುದು ಆವಶ್ಯಕವಾದ ಕೆಲಸವಾಗಿದೆ. ಆಕಾಶವನ್ನು ಹುಟ್ಟಿಸಿದ ಅಥವಾ ಅದರ ಹುಟ್ಟುವಿಕೆಗೆ ಕಾರಣವಾದ ಮಹಾದೇವನಿಂದಲಾದರೂ ನಮಗೇನು ಪ್ರಯೋಜನ ವೆನ್ನಬಹುದು. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶ ಎಂಬ ಪಂಚಭೂತಗಳ ಅಂಶಗಳೂ ನಮಗೆ ಸಂಬಂಧಪಟ್ಟು, ಹೇಗೆ ಕೆಲಸಮಾಡುವವೋ ಎಂದರೆ, ಭೂಮಿಯ ಗಟ್ಟಿರೂಪವಾದ ಎಲುಬು ಮೊದಲಾದವುಗಳ ರೂಪದಲ್ಲಿಯೂ, ನೀರು ಜಲರೂಪ ವಾದ ರಕ್ತ ಮೊದಲಾದವುಗಳ ರೂಪದಲ್ಲಿಯೂ, ಬೆಂಕಿಯು ಬಿಸಿ ರೂಪವಾದ ಉದ ರಾಗ್ನಿ ಮೊದಲಾದವುಗಳ ರೂಪದಲ್ಲಿಯೂ, ಗಾಳಿಯು ವಾಯುರೂಪವಾದ ಪ್ರಾಣ, ಅಪಾನ ಮೊದಲಾದವುಗಳ ರೂಪದಲ್ಲಿಯೂ, ಆಕಾಶವು ಬಯಲು ರೂಪಾದ ಶಬ್ದ ಧ್ವನಿ ಮೊದಲಾದ ರೂಪದಲ್ಲಿಯೂ, ನಮ್ಮ ಶರೀರದಲ್ಲಿ ಹೇಗೆ ವ್ಯಾಪಿಸಿಕೊಂಡಿವೆಯೋ ಹೇಗೆ ಕೋಪ ತಾಪಾದಿಗಳು, ಕಾಮಾದಿಗಳು, ಮುದಿತನ ಮೊದಲಾದ ವಿಕಾರಗಳು ಮನುಷ್ಯನನ್ನು ವ್ಯಾಪಿಸಿಕೊಂಡು ಕೆಲಸಮಾಡುತ್ತವೆಯೋ ಹಾಗೆ ಆಕಾಶದ ಹುಟ್ಟು ವಿಕೆಗೆ ಕಾರಣವಾದ ಮೂಲವಸ್ತುವು ದೇಹದಲ್ಲಿ ವ್ಯಾಪಿಸಿಕೊಂಡು ಕೆಲಸಮಾಡುತ್ತಿರು ತ್ತದೆ. ಶಾಂತಿ ಆನಂದ ಮೊದಲಾದ ರೂಪದಲ್ಲಿ ಅಮೂಲ ವಸ್ತುವಿನ ಕಾರ್ಯಗಳು ಗೋಚರಿಸುತ್ತವೆ. ಈ ಕಾರಣಗಳಿಂದ ಮಹಾದೇವನು ಉಂಟೆಂಬುದನ್ನೂ, ಅವನ ವಿಷಯಗಳನ್ನು ತಿಳಿಯುವುದರಿಂದ ನಮ್ಮ ದೇಶಕ್ಕೆ ನಮ್ಮ ಮನಸ್ಸಿಗೆ ನಮ್ಮ ಜೀವಕ್ಕೆ ಪ್ರಯೋಜನವುಂಟೆಂಬುದನ್ನೂ ನಿರ್ಧರಿಸಿಕೊಂಡು ಹಾಗೆ ತಿಳಿಯುವುದಕ್ಕಾಗಿ ಪ್ರಯತ್ನಿಸಬೇಕು.

ನಮ್ಮ ಕಣ್ಣಿಗೆ ಕಾಣದೆಯಿರುವ ಕೋಪವು ಹೇಗೆ ಹುಟ್ಟುತ್ತದೆ ? ಹೇಗೆ ಕೆಲಸ ಮಾಡುತ್ತದೆ ? ಹೇಗೆ ಕಡೆಯ ಫಲವನ್ನು ಕೊಡುತ್ತದೆ ? ಇಂಥ ವಿಷಯಗಳನ್ನೆಲ್ಲಾ ಯೋಚಿಸಿ ವಿಚಾರಮಾಡಿದರೆ ಆ ಕೋಪವನ್ನು ಹಿಡಿದಿರುವುದು ಅಥವಾ ಬಿಡುವುದು ಕೆಟ್ಟದ್ದು ಅಥವಾ ಒಳ್ಳೆಯದು ಎಂಬ ಆಲೋಚನೆಗೆ ಅವಕಾಶವಾಗಿ, ಬಿಡಬೇಕಾಗಿದ್ದರೆ ಹೇಗೆ ಬಿಡಬೇಕು ಎಂಬ ವಿಚಾರ ಹುಟ್ಟಿ, ಬಿಡುವುದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಿ, ಬಳಿಕ ಬಿಟ್ಟುಬಿಡುವುದು ಹೇಗೆ ಸಾಧ್ಯವೋ ಹಾಗೆಯೇ ಮಹಾದೇವನ ವಿಷಯವನ್ನು ತಿಳಿದು ಆಲೋಚಿಸಿ, ವಿವಾದಮಾಡಿ ನಿರ್ಧರಿಸಿ, ಆಚರಿಸಿ, ಸಾಧಿಸಿ ಅದರ ಫಲವನ್ನು ಪಡೆಯುವುದು ನಮಗೆ ಎಂದರೆ ಮನುಷ್ಯವರ್ಗಕ್ಕೆ ಸಾಧ್ಯವಿದೆ.

ನಮ್ಮ ಪೂರ್ವಿಕರು ಈ ವಿಷಯಕ್ಕಾಗಿ ಬಹಳ ಕಷ್ಟಪಟ್ಟಿದ್ದಾರೆ. ಮಹಾದೇವನ ವಿಷಯವನ್ನು ತಿಳಿದಿದ್ದಾರೆ; ಆಲೋಚಿಸಿದ್ದಾರೆ; ವಿವಾದಮಾಡಿ ನೋಡಿದ್ದಾರೆ. ನಿರ್ಧ ರಿಸಿದ್ದಾರೆ; ಆಚರಿಸಿದ್ದಾರೆ; ಸಾಧಿಸಿದ್ದಾರೆ. ತಾವು ಸಾಧಿಸಿ ಮುಂದಿನವರಿಗೂ ತಿಳಿಯ ಲೆಂದು ಬರೆದು ಇಟ್ಟಿದ್ದಾರೆ. ಅವರು ಬರೆದು ಇಟ್ಟಿರುವುವುಗಳನ್ನು ನಾವು ಓದಿ ಕೊಂಡರೆ, ನಾವು ಮುಂದೆ ಇನ್ನೂ ಏನನ್ನು ಆಲೋಚಿಸಬಹುದು ? ಏನನ್ನು ನಿರ್ಧ ರಿಸಬಹುದು? ಏನನ್ನು ಸಾಧಿಸಬಹುದು? ಎಂಬ ಅಂಶಗಳು ನಮಗೆ ಗೋಚರಿಸುತ್ತವೆ.

ಮನುಷ್ಯನು ಬರಬರುತ್ತಾ ಅಜ್ಞಾನದ ದೆಸೆಯನ್ನು ಕಳೆದು ಕಳೆದು, ಈ ಸ್ಥಿತಿಗೆ ಬಂದಿದ್ದಾನೆಂದು ಈಗ ಯೋಚಿಸುವವರು ಪೂರ್ವದವರು ಕಂಡುಹಿಡಿದ ವಿಷಯಗಳನ್ನು ಏಕೆ ನಡೆಸುತ್ತಲಿಲ್ಲ ? ಎಂಬುದಕ್ಕೆ ಉತ್ತರಕೊಡಬೇಕಾಗಿದೆ. ಉದಾಹರಣೆಗೆ ಪೂರ್ವದವರು ತಮ್ಮ ದೇಹದೊಳಗಿನ ಜೀವವನ್ನೇ ಒತ್ತಟ್ಟಿಗೆ ತೆಗೆದು ಇನ್ನೊಂದು ಜೀವವು ಮರಣ ಹೊಂದಿದ ದೇಹದೊಳಗೆ ಪ್ರವೇಶಮಾಡಿಸುತ್ತಿದ್ದರೆಂಬ ಉಲ್ಲೇಖಗಳು ಬೇಕಾದಷ್ಟು ಸಿಗುತ್ತವೆ. ಇದು ಈಗ ಏಕೆ ತೋರುವುದಿಲ್ಲ ? ಇದೂ ಇದ್ದು ಇದಕ್ಕಿಂತ ಹೆಚ್ಚಿನ ಕಾರ್ಯವನ್ನು ಈಗಿನವರು ಯೋಜನೆ ಮಾಡುತ್ತ ಇದ್ದಿದ್ದರೆ, ಜಗತ್ತು ಹಿಂದಿನಿಂದ ಮುಂದಕ್ಕೆ ಸುಧಾರಿಸುತ್ತ ಹೋಗಿದೆ ಎಂದು ತಿಳಿಯಬಹುದಾಗಿತ್ತು. ಹೀಗಲ್ಲದೆ ಹಿಂದಿನವರ ಕಾರ್ಯಗಳೇ ಈಗ ಇಲ್ಲವೆಂದಮೇಲೆ ಹಿಂದಿನವರ ಬುದ್ಧಿವಂತಿಕೆಯು ಈಗ ಕಳೆಯುತ್ತ ಬಂದ ಉದಾಹರಣೆಯು ನಮಗೆ ಸಿಕ್ಕಿದಂತಾಗಿ, ಈ ಗಣ ಮನುಷ್ಯ ಜಾತಿಗಿಂತಲೂ, ಹೆಚ್ಚಿನ ತಿಳುವಳಿಕೆಯ ಮನುಷ್ಯರು ಅಥವಾ ಬೇರೊಂದು ಜಾತಿಯವರು ಇದ್ದರೆಂದೂ, ಅವರಿಂದ ಕೆಲವು ವಿಷಯಗಳು ಈಗಿನ ಮನುಷ್ಯರಿಗೆ ಬಂದವೆಂದೂ ನಿರ್ಧರಿಸಬೇಕಾಗುತ್ತದೆ. ಇಲ್ಲದಿದ್ದರೆ ಆ ವಿದ್ಯೆ ಹಿಂದೆ ಇದ್ದದ್ದೇ ಸುಳ್ಳೆಂದು ಹೇಳಬೇಕಾಗುತ್ತದೆ. ಹಾಗೆ ಸುಳ್ಳೆಂದು ಹೇಳುವುದಾದರೆ ಇಂಥ ಸುಳ್ಳನ್ನು ಮುಂದಿನವರಿಗಾಗಿ ಬರೆದಿಡುವ ಪ್ರಕೃತವಾದರೂ ಪೂರ್ವಿಕರಿಗೆ ಏನಿತ್ತೆಂಬುದನ್ನು ಯೋಚಿಸಬೇಕಾಗುತ್ತದೆ. ಇದು ಹಾಗಿರಲಿ ಒಂದೊಂದು ಅಕ್ಷರಗಳನ್ನು ಉಚ್ಚರಿಸಿದಾಗ ಆ ಉಚ್ಚರಿಸಿದ ಕಾಲದಲ್ಲಿ ಇಂಥಿಂಥಾ ಬಣ್ಣವುಳ್ಳವುಗಳಾಗಿರುತ್ತವೆಂದು ಪೂರ್ವಿಕರು ಹೇಳಿರುತ್ತಾರೆ. ಈ ಕಾಲದಲ್ಲಿ ಯಂತ್ರೋಪಕರಣಗಳನ್ನಿಟ್ಟುಕೊಂಡು ಶಾಸ್ತ್ರ (Science) ಪರಿಶೋಧನೆ ಮಾಡುವವರು ವಾಯುವಿನ ಬಣ್ಣವನ್ನು ಕಂಡು ಹಿಡಿದಿರುವರಾದರೂ ಅದಕ್ಕಿಂತ ಸೂಕ್ಷ್ಮವಾದ ಧ್ವನಿಯ ಬಣ್ಣವನ್ನು ಕಂಡು ಹಿಡಿದುದನ್ನು ತಿಳಿದಿಲ್ಲ. ಇಂತಾ ಧ್ವನಿಯ ಬಣ್ಣವನ್ನು ಪೂರ್ವದವರು ಹೇಳಿರುವುದನ್ನು ನೋಡಿದರೆ ಈಗಿನವರಿಗಿಂತಲೂ ಅವರ ತಿಳಿವಳಿಕೆಯು ಕೆಲವು ಭಾಗದಲ್ಲಿಯಾದರೂ ಕೆಲವು ಮಟ್ಟಿಗಾದರೂ ಮುಂದೆ ಹೋಗಿತ್ತೆಂದು ನಿರ್ಧರಿಸಲಿಕ್ಕೆ ಬರುವಂತೆ ಇದೆ.

ಆದ್ದರಿಂದ ಪೂರ್ವಿಕರು ಮಹಾದೇವನ ವಿಷಯವಾಗಿ ಏನು ಹೇಳಿರುವರೆಂದು ನಾವು ನೋಡಲೇಬೇಕು. ಹಾಗೆ ನೋಡಬೇಕೆಂಬ ಅಪೇಕ್ಷೆಯು ನಮಗೆ ಹುಟ್ಟಿದರೆ ನಾವು ಪೂರ್ವಿಕರ ಗ್ರಂಥಗಳನ್ನು ಓದಬೇಕಾಗುತ್ತದೆ. ಹೀಗೆ ಮಹಾದೇವನನ್ನು ತಿಳಿಯುವ ವಿದ್ಯೆಗೆ ಪಾರಮಾರ್ಥಿಕ ವಿದ್ಯೆ, ಮಹಾದೇವನಿಗೆ ಬ್ರಹ್ಮ ಎಂತ ಕರೆಯುವುದರಿಂದ ಬ್ರಹ್ಮವಿದ್ಯೆ, ಮುಂತಾದ ಹೆಸರುಗಳಿವೆ. ಈ ಬ್ರಹ್ಮವಿದ್ಯೆಯನ್ನು ಬೋಧಿಸುವ ಗ್ರಂಥಗಳು ಬಹಳವಾಗಿವೆ. ಈ ವಿಷಯದ ಮುಖ್ಯ ಭಾಗಗಳನ್ನೇ ಬಹುಮಟ್ಟಿಗೆ ಬೋಧಿಸುವವುಗಳು ಉಪನಿಷತ್ತುಗಳಾಗಿವೆ. ಇವು ವೇದದ ಒಂದು ಭಾಗವಾಗಿ ಇರುತ್ತವೆ. ಭಗವದ್ಗೀತೆಯೂ ಈ ವಿಷಯವನ್ನು ಬೋಧಿಸುತ್ತದೆ. ಆದ್ದರಿಂದ ಇದಕ್ಕೆ ಉಪನಿಷತ್ ಎಂಬ ಅಂಕಿತವನ್ನು ಇಟ್ಟಿರುವುದು ಅದರ ಅಧ್ಯಾಯದ ಕಡೆಯಲ್ಲಿ ಬರೆ

ದಿರುವ '......ಗೀತಾಸು ಉಪನಿಷತ್‌ಸು' ಎಂಬ ಪದಗಳಿಂದ ನಿರ್ಣಯಿಸಬಹುದು.

ಉಪನಿಷತ್ ಎಂಬ ಸಮಸ್ತ (ಕೂಡಿದ) ಪದಕ್ಕೆ ಬ್ರಹ್ಮವಿದ್ಯೆ ಎಂದು ಅರ್ಥವಾಗುತ್ತದೆ. ಹೇಗೆಂದರೆ: ಉಪ ಎಂದರೆ ಸಮೀಪ, ಗುರುವಿನ ಸಮೀಪಕ್ಕೆ ಹೋಗಿ ಅವರಿಂದ ಪಡೆದು 'ನಿ' ಎಂದರೆ ನಿಶ್ಚಯದಿಂದ ಅಥವಾ ನಿಷ್ಠೆಯಿಂದ ಪರಿಶೀಲಿಸಿ,ಸಮಾಧಾನವನ್ನು ಹೊಂದಿದವರಿಗೆ **'ಷದ್'** ಎಂದರೆ ಸಸಾರ ಬೀಜವನ್ನು ನಾಶಮಾಡುವುದು. ಅಥವಾ **'ನಿ'** ಎಂದರೆ ಗುರು ಬೋಧೆಯಲ್ಲಿ ನಿಷ್ಠೆಯುಳ್ಳ ಮುಮುಕ್ಷುಗಳಿಗೆ **'ಷದ್'** ಎಂದರೆ ಬ್ರಹ್ಮವನ್ನು ಹೊಂದಿಸುವುದು ಅಥವಾ **'ನಿ'** ಶರಣ ಗತ್ಯವ ಸಾಧನಾರ್ಥಸ್ಯ **'ಷದ್ ಲೃ'** ಧಾತು ಎಂದಿರುವುದರಿಂದ 'ನಿ' ನಿಷ್ಠೆಯುಳ್ಳವರಿಗೆ **'ಷದ್'** ಬ್ರಹ್ಮನಲ್ಲಿ ಶರಣು ಹೋಗಿಸುವುದು ಎಂಬುದಾಗಿ ಅರ್ಥವನ್ನು ಹೊಂದಿ, ಬ್ರಹ್ಮವಿದ್ಯೆ ಎನಿಸಿಕೊಂಡಿದೆ.

ಬ್ರಹ್ಮ ಸಂಬಂಧವಾದ ವಿಷಯಗಳನ್ನು ಪ್ರತಿಪಾದನೆ ಮಾಡುವ ಇತರ ಗ್ರಂಥಗಳಿಗೂ ಕೂಡ ಗೌಣ ವೃತ್ತಿಯಿಂದ **'ಉಪನಿಷತ್'** ಎಂಬ ಹೆಸರು ಸಲ್ಲುತ್ತದೆ. ಈ ಕಾರಣದಿಂದಲೇ ಭಗವದ್‌ಗೀತೆಯು ಉಪನಿಷತ್ ಎನಿಸಿಕೊಂಡಿದೆ. ಈ ಸಂಗತಿಯನ್ನು ಹಿಂದೆ ಹೇಳಿರುತ್ತದೆ. ಈಗ ಒಂದು ವೇಳೆ ಇಂಥ ಗ್ರಂಥಗಳು ಹುಟ್ಟುವುದಾದರೆ ಅವೂ ಉಪನಿಷತ್ ಎನಿಸಿಕೊಳ್ಳಲಿಕ್ಕೆ ಯೋಗ್ಯವಾಗುತ್ತವೆ.

ಈ ಉಪನಿಷತ್ ವಿದ್ಯೆಯು ವೇದಗಳನ್ನೂ ನಂಬುವವರಾದ ಹಿಂದುಗಳೆಲ್ಲರಿಂದಲೂ ಗೌರವಿಸಲ್ಪಟ್ಟಿರುತ್ತದೆ. ಯುರೋಪ್ಯರೂ ಇವುಗಳ ವಿಷಯದಲ್ಲಿ ಗಮನ ಕೊಡುತ್ತಿದ್ದಾರೆ. ಜರ್ಮನಿ ದೇಶದವನಾದ 'ಮ್ಯಾಕ್ಸ ಮುಲ್ಲರ್' ಎಂಬ ಪ್ರಸಿದ್ಧ ಪಂಡಿತನು ತಾನು ಬರೆದಿರುವ "Six Systems of Indian Philosophy" ಎಂಬ ಪುಸ್ತಕದಲ್ಲಿ ಇವುಗಳ ವಿಷಯವಾಗಿ ಹೀಗೆ ಹೇಳಿದ್ದಾನೆ.

As we can feel that there is electricity in the air and that there will be a storm we feel on reading of 'uparishad' that there is philosophy in the Indian mind and that there will be thunder and that lightuing to follow soon.

ತಾತ್ಪರ್ಯ : ನಾವು ಗಾಳಿಯಲ್ಲಿ ವಿದ್ಯುತ್ (ಮಿಂಚು) ಇದೆ ಎಂಬುದನ್ನೂ ಮತ್ತು ಬಿರುಗಾಳಿ ಉಂಟಾಗುವುದೆಂಬುದನ್ನೂ ಅನುಭವದಿಂದ ತಿಳಿವಂತೆ ಹಿಂದೂ ಜನರ ಮನಸ್ಸಿನಲ್ಲಿ ತತ್ತ್ವಜ್ಞಾನವು (Tune=air) ಉಂಟೆಂಬುದೂ ಆ ಸಂಬಂಧದ ಮಿಂಚೂ ಗುಡುಗೂ ಬೇಗನೆ ಹಿಂದೆಯೇ ಬರುವವೆಂಬುದೂ ಉಪನಿಷತ್ತುಗಳನ್ನು ಓದಿದಾಗ ಗೊತ್ತಾಗುತ್ತದೆ.

ಮಹಾವಾಕ್ಯ ರತ್ನಾವಳಿಯಲ್ಲಿ ಮೂಲ ಉಪನಿಷತ್ತುಗಳು ವೇದದ ಒಂದೊಂದು ಭಾಗಕ್ಕೆ ಒಂದೊಂದರಂತೆ ಇರುವುದಾಗಿ ಬರೆದಿದ್ದಾರೆ. ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡ ಅಥವಾ ಮುಂಡಕ ಮಾಂಡೂಕ್ಯ, ತಿತ್ತಿರಿ ಅಥವಾ ತೈತ್ತಿರೀಯಕ,

ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಇವು ಹತ್ತು ಮುಖ್ಯವಾದವುಗಳಾಗಿವೆ. ಇವು ಬಹು ಪೂರ್ವದಲ್ಲಿ ಎಂದರೆ ಕ್ರಿ. ಪೂ. ೫ನೆಯ ಶತಮಾನಕ್ಕೆ ಮುಂಚೆ ಹುಟ್ಟಿದವು ಗಳೆಂದು ಪ್ರಸಿದ್ಧವಾಗಿವೆ. ಈ ದಶೋಪನಿಷತ್ತುಗಳ ಪ್ರಾಮಾಣ್ಯವು ಬಹಳ ಕಡೆಗಳಲ್ಲಿ ಅಂಗೀಕರಿಸಲ್ಪಟ್ಟಿರುತ್ತದೆ.ಇವಲ್ಲದೆ ಶ್ವೇತಾಶ್ವತರ,ಬ್ರಹ್ಮಬಿಂದು ಅಥವಾ ಅಮೃತಬಿಂದು ಕೈವಲ್ಯ, ಜಾಬಾಲ, ಹಂಸ, ಆರುಣಿಕ, ಗರ್ಭ, ನಾರಾಯಣ, ಪರಮಹಂಸ, ಬ್ರಹ್ಮ, ಅಮೃತನಾದ, ಅಥರ್ವಶಿರ, ಅಥರ್ವಶಿಖ, ಮೈತ್ರಾಯಣಿ, ಕೌಷೀತಕಿ, ಬ್ರಾಹ್ಮಣ, ಬೃಹ ಜ್ಜಾಲ, ನೃಸಿಂಹ, ತಾಪಿನಿ, ಕಾಲಾಗ್ನಿರುದ್ರ, ಮೈತ್ರೇಯಿ, ಸುಬಾಲ, ಕ್ಷುರಿಕ, ಮಂತ್ರಿಕ, ಸರ್ವಸಾರ, ನಿರಾಲಂಬ, ಶುಕರಹಸ್ಯ, ವಜ್ರಸೂಚಿಕ, ತೇಜೋಬಿಂದು, ಬ್ರಹ್ಮವಿದ್ಯಾ, ಯೋಗತತ್ವ, ಆತ್ಮಬೋಧ ನಾರದ, ನಾದಬಿಂದು, ಪರಿವ್ರಾಜಕ, ತ್ರಿಶಿಖಿ ಬ್ರಾಹ್ಮಣ, ಸೀತಾ, ಯೋಗ ಚೂಡಾಮಣಿ, ನಿರ್ವಾಣ, ಮಡಲಬ್ರಾಹ್ಮಣ, ದಕ್ಷಿಣಾಮೂರ್ತಿ, ಶರಭ, ಸ್ಕಂಧ. ತ್ರಿಪಾದ್ವಿಭೂತಿ ಮಹಾನಾರಾಯಣ, ಅದ್ವಯತಾರಕ, ರಾಮರಹಸ್ಯ, ರಾಮತಾಪಿನೀ ವಾಸುದೇವ, ಮುದ್ಗಲ, ಶಾಂಡಿಲ್ಯ, ಪೈಂಗಲ, ಭಿಕ್ಷುಕ, ಶಾರೀರಕ, ಯೋಗಶಿಖಾ, ತುರೀಯಾತೀತ, ಸಂನ್ಯಾಸ, ಅಕ್ಷಮಾಲ, ಅವ್ಯಕ್ತ, ಏಕಾಕ್ಷರ, ಅನ್ನ ಪೂರ್ಣಾ, ಸೂರ್ಯ, ಅಕ್ಷಿ, ಅಧ್ಯಾತ್ಮ, ಕುಂಡಿಕ, ಸಾವಿತ್ರಿ, ಆತ್ಮ, ಪಾಶುಪತಬ್ರಹ್ಮ, ಪರಬ್ರಹ್ಮ, ಅವಧೂತ, ತ್ರಿಪುರತಾಪಿನಿ, ದೇವಿ, ತ್ರಿಪುರ, ಕಠರುದ್ರ, ಭಾವನಾ, ರುದ್ರಹೃದಯ, ಯೋಗಕುಂಡಲಿ, ಭಸ್ಮ ಜಾಬಾಲ, ರುದ್ರಾಕ್ಷಜಾಬಾಲ, ಗಣಪತಿ, ಜಾಬಾಲದರ್ಶನ, ತಾರಸಾರ, ಮಹಾವಾಕ್ಯ, ಪಂಚಬ್ರಹ್ಮ, ಪ್ರಾಣಾಗ್ನಿಹೋತ್ರ, ಗೋಪಾಲತಾಪಿನಿ, ಕೃಷ್ಣ, ಯಾಜ್ಞವಲ್ಕ್ಯ, ವರಾಹ, ಶಾಠ್ಯಾಯನೀಯ, ಹಯ ಗ್ರೀವ, ದತ್ತಾತ್ರೇಯ, ಗರುಡಕಲಿಸಂತಾರಣ, ಜಾಬಾಲಿ, ಸೌಭಾಗ್ಯಲಕ್ಷ್ಮಿ, ಸರಸ್ವತೀ ರಹಸ್ಯ, ಬಹ್ವೃಚ, ಮುಕ್ತಿಕ—ಹೀಗೆ ತೊಂಬತ್ತೆಂಟು ಉಪನಿಷತ್ತುಗಳು ಪ್ರಚಾರದಲ್ಲಿ ಇವೆ. ಇವೆಲ್ಲಾ ಸೇರಿ ೧೦೮ ಉಪನಿಷತ್‍ಗಳೆನಿಸಿಕೊಂಡಿರುವವು. ಇವುಗಳಲ್ಲಿ ನೃಸಿಂಹತಾಪಿನಿ, ರಾಮತಾಪಿನಿ, ಗೋಪಾಲತಾಪಿನಿ, ನಾರಾಯಣ ಈ ನಾಲ್ಕು ಉಪ ನಿಷತ್ತುಗಳಲ್ಲಿ ಪೂರ್ವ ಉತ್ತರ ಎಂಬ ಎರಡು ಭಾಗಗಳಿರುವುದರಿಂದ ಇವುಗಳನ್ನು ಎಂಟಾಗಿ ಗಣನೆ ಮಾಡಿದರೆ (ಒಟ್ಟು) ೧೧೨ ಉಪನಿಷತ್ತುಗಳಾಗುವುವು. ಇವುಗಳನ್ನು ಅಷ್ಟೋತ್ತರ ಶತೋಪನಿಷದಃ ಎಂಬ ಹೆಸರಿನಿಂದ ಬೊಂಬಾಯಿಯಲ್ಲಿ ದೇವನಾಗರೀ ಲಿಪಿಯಲ್ಲಿ ಮುದ್ರಿಸಿರುವರು. ತೆಲಗು ಲಿಪಿಯಲ್ಲಿಯೂ ಈ ೧೦೮ ಉಪನಿಷತ್ತುಗಳು ಮುದ್ರಣವಾಗಿವೆ. ಮ. ರಾ. ವಾವಿಳ್ಲ ರಾಮಸ್ವಾಮಿ ಶಾಸ್ತ್ರಿಗಳು ಅಂಡ್ ಸನ್ಸ್ ಎಸ್‌ಪ್ಲನೇಡ್ ಚೆನ್ನಪುರಿ ಮದರಾಸ್ ಇವರಲ್ಲಿ ಮೂವತ್ತು ಉಪನಿಷತ್ತುಗಳು ಆಂಧ್ರ ತಾತ್ಪರ್ಯ ಸಹಿತವಾಗಿ ಮುದ್ರಣವಾದವುಗಳು, ಮಾರಾಟಕ್ಕೆ ದೊರೆಯುತ್ತವೆ. ಕನ್ನಡ ಲಿಪಿಯಲ್ಲಾದರೋ ?...ಎಲ್ಲಿವೆ ? ಎಷ್ಟಿವೆ ? ಎಣಿಸಿ ನೋಡಿದರೆ ಬೆರಳುಗಳ ಎಣಿಕೆ ಯೊಳಗೆ ಬರುವಷ್ಟು ಇರಬಹುದೆಂದು ತೋರುತ್ತದೆ. ಕನ್ನಡ ತಾತ್ಪರ್ಯ ಸಹಿತವಾಗಿ ಮುದ್ರಣವಾದ ಉಪನಿಷತ್ತುಗಳು ೩–೪ ಇರಬಹುದು. ಮ. ರಾ ದಿವಾಕರ ಎಂಬು

ವವರೂ ಕನ್ನಡದಲ್ಲಿ ಕೆಲವು ಬರೆದಿರುವವರಾದರೂ ಅವು ಇಂಗ್ಲೀಷ್ ಪುಸ್ತಕದ ಭಾಷಾಂತರಗಳು.

ಕೆಳದಿಯ ಬಸವಪ್ಪನಾಯಕರು ರಚಿಸಿದರೆಂಬ ಶಿವತತ್ವ ರತ್ನಾಕರದಲ್ಲಿ ೧೦೮ ಉಪನಿಷತ್ತುಗಳ ಹೆಸರನ್ನು ಹೇಳಿರುವದಾದರೂ ಕೆಲವು ಹೆಸರುಗಳು ಈಗ ಮುದ್ರಣ ವಾದ ಹೆಸರುಗಳಿಗೆ ಭಿನ್ನವಾಗಿವೆ. ಈ ವ್ಯತ್ಯಾಸಗಳೇನೇನು ? ಇವಕ್ಕೆ ಕಾರಣವೇನು ? ಎಂಬುದನ್ನು ಈ ವರೆಗೂ ವಿಚಾರ ಮಾಡಿದಂತೆ ತೋರಲಿಲ್ಲ.

ಈ ಉಪನಿಷತ್ತುಗಳು ವೀರಶೈವರಿಗೆ ಮಾನ್ಯಗಳಲ್ಲವೇನು ? ವಿದ್ಯೆಯಲ್ಲಿ ರಮಿ ಸುವವರು ವೀರರು ಎಂದು ತಮ್ಮ ವೀರಪದಕ್ಕೆ ಅರ್ಥಮಾಡಿಕೊಳ್ಳುತ್ತಿರುವಾಗ ಬ್ರಹ್ಮವಿದ್ಯಾ ಬೋಧಕವಾದ ಉಪನಿಷತ್ತುಗಳಲ್ಲಿ ಇವರ ರಮಣ(ವಿನೋದ)ವು ಇರಲೇ ಬೇಕಲ್ಲವೇ ! ಹಾಗೆ ಪೂರ್ವದವರು ಇವುಗಳಿಗೆ ಗಮನಕೊಟ್ಟು ಮಾನ್ಯ ಮಾಡಿರುವ ರೆಂಬುದಕ್ಕೆ ಅನುಮಾನವೇನೂ ಇಲ್ಲ. ಈಗ್ಯೆ ಸುಮಾರು ೮೦-೮೫ ವರ್ಷಗಳ ಪೂರ್ವ ದವರಾದ ಮೈಲಾರದ ಬಸವಲಿಂಗ ಶರಣರು **"ರುದ್ರಾಕ್ಷಿಯಾದುದೆಂದುಪನಿಷ ದ್ವಾಕ್ಯಾರ್ಥವುಂಟು"** ಎಂದು ಉಪನಿಷತ್ತಿನ ಪ್ರಮಾಣವನ್ನು ತಮ್ಮ ಅಷ್ಟಾವರಣ ವಾರ್ಧಿಕದಲ್ಲಿ ಕೊಟ್ಟಿದ್ದಾನೆ. ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರು ಬೃಹನ್ಮಠ ಚಿತ್ರದುರ್ಗ, ಶ್ರೀಮನ್ ಮಹಾಕೆಳದಿ ಸಂಸ್ಥಾನ ಹಿರೇಮಠ, ದಾವಣಗೆರೆ ಪುರಾಣಿಕರಮಠ, ಆಲೂರಿನಲ್ಲಿ ಒಂದು ಮಠ, ಸವದತ್ತಿಯಲ್ಲಿ ಪಟ್ಟದೇವರ ಮಠ ಇವೇ ಮೊದಲಾದ ಅನೇಕ ಮಠಗಳಲ್ಲಿ ಉಪನಿಷತ್‌ಗಳ ಓಲೆಯ ಪ್ರತಿಗಳೂ ಕೈಬರಹದ ಪ್ರತಿಗಳೂ ಇರುತ್ತವೆ. ಇವುಗಳಲ್ಲಿ ಕೆಲವು ಮೇಲೆ ಕಂಡ ೧೦೮ರ ಒಳಗೆ ಸೇರಿದವುಗಳೂ, ಕೆಲವು ಸೇರದಿದ್ದವುಗಳೂ ಇರುತ್ತವೆ. ಇತರರು ಬರೆದಿದ್ದನ್ನು ಅಥವಾ ಬರೆಯಿಸಿದ್ದನ್ನು ತಂದು ಇಟ್ಟುಕೊಂಡಿದ್ದಾರೆಂದು ಹೇಳು ವಂತೆಯೂ ಇಲ್ಲ. ಶ್ರೀ ಸಿದ್ಧಲಿಂಗಾಯನಮಃ ಶ್ರೀ ಚಿದಾತ್ಮ ಚನ್ನಮಲ್ಲಿಕಾರ್ಜುನ ಲಿಂಗಾಯನಮಃ ಎಂದು ಮೊದಲು ಬರೆದು ಮುಂದೆ ಉಪನಿಷತ್ತನ್ನು ಪ್ರಾರಂಭಿಸಿ ಇರುವುದರಿಂದ ವೀರಶೈವರು ಬರೆದವರು ವೀರಶೈವರು ಬರೆಯಿಸಿದವರು ಎಂಬ ಅಭಿ ಪ್ರಾಯವು ಸ್ಪಷ್ಟವಾಗುತ್ತದೆ. ಈಗ ಮುದ್ರಣವಾಗಿರತಕ್ಕ ಉಪನಿಷತ್ತುಗಳೊಡನೆ ಈ ಮೇರೆಗೆ ಕೈ ಬರಹ ಪ್ರತಿಯಲ್ಲಿ ಇದ್ದವುಗಳನ್ನು ಹೋಲಿಸಿದರೆ ಸ್ವಲ್ಪ ಹೆಚ್ಚು ಕಡಿಮೆ ಯಾಗಿ ಹೋಲುತ್ತವೆ. ಆದರೆ ಮುದ್ರಣದಲ್ಲಿ ಆಗಿರತಕ್ಕ ವ್ಯತ್ಯಾಸಗಳನ್ನು ಸ್ಪಷ್ಟ ವಾಗಿ ಕಂಡುಹಿಡಿದು ಅವಕ್ಕೆ ಕಾರಣವೇನೆಂಬುದನ್ನೂ ಪರ್ಯಾಲೋಚಿಸುವ ಕೆಲಸವು ಮಾತ್ರ ಬಾಕಿ ಉಳಿದಿದೆ.

ಪೂರ್ವದಲ್ಲಿ ಕೆಲವರು ಮೂವತ್ತೆರಡು ಉಪನಿಷತ್ತುಗಳು ಮುಖ್ಯವೆಂದು ತಿಳಿ ಯುತ್ತಿದ್ದರು. ಚಿತ್ರದುರ್ಗದ ಶ್ರೀಮನ್ ನಿರಂಜನ ಜಗದ್ಗುರು ಮುರುಘಾರಾಜೇಂದ್ರ ಮಹಾಸ್ವಾಮಿಗಳವರಲ್ಲಿ ಪೂರ್ವದವರಾದ ಮುರುಘಾ ಶಾಂತವೀರ ದೇಶಿಕೇಂದ್ರರವರು ಏಕೋನ ವಿಂಶತಿ ಪ್ರಬಂಧ ಎಂಬುದಾಗಿ ೧೯ ಶ್ಲೋಕಗಳುಳ್ಳ ಒಂದು ಗ್ರಂಥವನ್ನು

ರಚಿಸಿದ್ದಾರೆ. ಅವರಲ್ಲಿ ಇವರು ೩೨ ಉಪನಿಷತ್ತುಗಳ ಹೆಸರನ್ನು ಒಂದು ಪದ್ಯದಲ್ಲಿ ತೋರಿಸಿರುತ್ತಾರೆ. ಇವುಗಳ ಮೂಲ ಅಕ್ಷರಗಳನ್ನೇ ಸಂಕ್ಷೇಪವಾಗಿ ತೋರಿಸಿರುತ್ತಾರೆ. ಈ ಹೆಸರುಗಳನ್ನು ಈ ಗ್ರಂಥದ ಟೀಕಾಕಾರರು ವಿವರವಾಗಿ ಕೊಟ್ಟಿರುತ್ತಾರೆ.

"ಶ್ರೀ ಕಾ ಬ್ರ ಜಾ ಬೃ ಹಂ ಪಂಪತೇ ಪೃಚರ್ ಪ ॥
ನ ಕಾ ಬ್ರ ವಾ ಶ್ವೇ ಶ್ರ ವಾ ಸಾಂ ಕ ಬಾಷ್ ಶೌ ಶಿ ।
ಮೈ ಕೈ ಮೂಲಾದ್ವಿ ಬೋ ಮುಂಡಾಕಾಮೃತ
ಬಿಂದು ದ್ವಾ ತ್ರಿಂಶದುಪನಿಷತ್ ॥"

೧. ಶ್ರೀರುದ್ರ, ೨. ಕಾಲಾಗ್ನಿ' ೩. ಬ್ರಹ್ಮೋಪನಿಷತ್, ೪. ಜಾಬಾಲೋಪನಿಷತ್, ೫. ಬೃಹದಾರಣ್ಯಕ, ೬. ಹಂಸ, ೭. ಪಂಚಬ್ರಹ್ಮ, ೮. ಪರಮಹಂಸ, ೯. ತೇಜೋಬಿಂದು, ೧೦. ಪೃಚ್ಛೋಪನಿಷತ್, ೧೧. ಚರ್ಚೋಪನಿಷತ್, ೧೨. ಪರಾಕ್ರಮೋಪನಿಷತ್, ೧೩. ನಾರಾಯಣ, ೧೪. ಕಾತ್ಯಾಯಿನ್ಯುಪನಿಷತ್, ೧೫. ಬ್ರಹ್ಮಬಿಂದೂಪನಿಷತ್, ೧೬. ವಾಸುರಾಯಣೀಯ, ೧೭. ಶ್ವೇತಾಶ್ವಕರ, ೧೮. ಶ್ರವಣೋಪನಿಷತ್, ೧೯. ವಾಜಸನೇಯೋಪನಿಷತ್, ೨೦. ಸಾಂಖ್ಯಾಯ ನೀಯೋಪನಿಷತ್, ೨೧. ಕರವಲ್ಲಿ, ೨೨. ಭಾಷ್ಕಳೋಪನಿಷತ್, ೨೩. ಶಾನಕೀಯೋಪನಿಷತ್, ೨೪. ಶಿವಸಂಕಲ್ಪೋಪನಿಷತ್, ೨೫. ಮೈತ್ರಾಯಣಿ, ೨೬. ಕೈವಲ್ಯ, ೨೭. ಮೂಲ ಉಪನಿಷತ್, ೨೮. ಶ್ವಲಾಯನೀಯ, ೨೯. ಆರುಣೀಯ, ೩೦. ಬೋಧಾಯನೀಯ, ೩೧. ಮುಂಡಕ, ೩೨. ಅಮೃತಬಿಂದು.

ಇವುಗಳನ್ನು ನೋಡಿದರೆ ಮೇಲೆ ಕಂಡ ೧೦೮ ರಲ್ಲಿ ಇಲ್ಲದ ಕೆಲವು ಉಪನಿಷತ್ತುಗಳು ಇವುಗಳಲ್ಲಿ ಸೇರಿರುವುದು ವ್ಯಕ್ತವಾಗುತ್ತದೆ. ಪೊಗ್ಗೆಯ ಮಾಯಿದೇವರು.

ವಿದ್ಯಾಸುಶೃತಿರುಕ್ಕೃಷ್ಟಾ ರುದ್ರೈಕಾದಶಿನೀಶೃತೌ

ತಾತ್ಪರ್ಯ : ವೇದದಲ್ಲಿ ಶ್ರೀರುದ್ರ ಉಪನಿಷತ್ (ಏಕಾದಶರುದ್ರ) ವಿದ್ಯೆಯು ಶ್ರೇಷ್ಠವು ಎಂಬ ಪ್ರಮಾಣವನ್ನು ತೋರಿಸಿದ್ದಾರೆ.

ಈ ಏಕಾದಶ ರುದ್ರಕ್ಕೆ...ಶ್ರೀ ವೀರಶೈವ ಷಟ್‌ಸ್ಥಲ ಶಿವಯೋಗ ಶಿವಾದ್ವೈತ ಸತ್‌ಪಥ ಪ್ರತಿಷ್ಠಾಪನಾಚಾರ್ಯವರ್ಯ ಶ್ರೀ ಸೋಸಲೆ ವೀರಣಾರಾಧ್ಯದೇವ ಶಿವ ಸಾರ್ವಭೌಮ ತನೂಭವ ಶ್ರೀ ರೇವಣಸಿದ್ಧ ದೇಶಿಕ ಕುಂಜರಾತ್ಮಜ ರೇವಣಾರಾಧ್ಯದೇವರು ರಚಿಸಿದ 'ಶಾಂತಿಮೂರ್ತಿ ಪ್ರಕಾಶಿಕೆ' ಎಂಬ ಟೀಕೆಯು ಇರುತ್ತದೆ. ಇವಲ್ಲದೆ...... 'ನಾಸಾಪುರ'(ಮುಗೂರು)ದಲ್ಲಿರುವ ಗುರುನಂಜ ಎಂಬ ಗುರೂತ್ತಮರು ಭಟ್ಟ ಭಾಸ್ಕರ ವಿರಚಿತ ಶ್ರೀ ರುದ್ರ ಭಾಷ್ಯದ ಕರ್ನಾಟಕ ಟೀಕೆಯನ್ನು ರಚಿಸಿದ್ದಾರೆ. ಇವು ಓಲೆಯ ಪ್ರತಿಗಳಲ್ಲಿವೆ.

ಶ್ರೀ ರುದ್ರ ಪಾರಾಯಣವನ್ನು ವೀರಶೈವರು ಈಗಲೂ ಮಾಡುತ್ತಲೂ ಮಾಡಿಸ ತ್ತಲೂ ಇದ್ದಾರೆ.

ವೀರಶೈವರಿಗೆ ವೇದಾಧಿಕಾರವಿಲ್ಲವೆಂದೂ ಇವರು ವೇದ ಪಾಠಶಾಲೆಗೆ ಸೇರಲು ಅನರ್ಹರೆಂದೂ ಹೇಳತಕ್ಕವರು ಈ ವಿಷಯಗಳನ್ನೆಲ್ಲಾ ಚೆನ್ನಾಗಿ ಪರ್ಯಾಲೋಚಿಸಬೇಕಾಗಿರುತ್ತದೆ.

ಹೀಗೆ ಪೂರ್ವದ ವೀರಶೈವರು ಮಾನ್ಯ ಮಾಡುತ್ತಿದ್ದ ಉಪನಿಷತ್ತುಗಳನ್ನು ಈಗ ಯಾವ ವೀರಶೈವರು ಮುದ್ರಿಸಿ ಜನರಿಗೆ ಅನುಕೂಲಪಡಿಸುತ್ತಿರವರು? ಶ್ರೀ ಜಗದ್ಗುರು ರಂಭಾಪುರೀ (ಬಾಳೇಹಳ್ಳಿ) ಸಿಂಹಾಸನದ ಶ್ರೀ ಸ್ವಾಮಿಗಳವರು ತಮ್ಮ ಸಂಸ್ಥಾನದಲ್ಲಿ ಸಿಕ್ಕಿತೆಂದು 'ಸ್ವರೂಪ ಸಿದ್ಧಾಂತ' ಎಂಬ ಒಂದು ಉಪನಿಷತ್ತಿನ ಮೂಲ ಪ್ರತಿಯನ್ನು ಮುದ್ರಿಸಿರುತ್ತಾರೆ. ಈಗ ಇದು ಸಿಕ್ಕ ಪ್ರತಿಯೊಡನೆ ನೋಡಿದ್ದರಲ್ಲಿ ಸರಿಯಾಗಿದೆ.

ಎರಡು ವರ್ಷಗಳ ಹಿಂದೆ ಹಿಂದೂ ಧರ್ಮದ ವಿಷಯವನ್ನು ತಿಳಿಯಬೇಕೆಂದು ಮುದ್ರಣವಾದ ೧೧೮ ಉಪನಿಷತ್ತುಗಳನ್ನು ಓದಿ ಸಾಧ್ಯವಾದಷ್ಟು ತಿಳಿದುಕೊಂಡು ಹಳೆಯ ಓಲೆಯ ಪ್ರತಿಗಳನ್ನು ಅದೂವರೆವಿಗೆ ಸಂಗ್ರಹ ಮಾಡಿದವುಗಳನ್ನು ನೋಡಿದ್ದರಲ್ಲಿ ರುದ್ರೋಪನಿಷತ್ ಎಂಬುದು ಕಂಡಿತು. ಮುದ್ರಿಸಿದ ೧೧೮ ರಲ್ಲಿ ಈ ಹೆಸರು ದೊರೆಯಲಿಲ್ಲ. ಮುದ್ರಣದ ಉಪನಿಷತ್ತುಗಳನ್ನು ಓದುವಾಗ ಉಪನಿಷತ್ತುಗಳ ಸಂಖ್ಯೆಯು ಸಾವಿರದ ಮೇಲಿನ ಸಂಖ್ಯೆಯವರೆವಿಗೂ ವ್ಯಾಪಿಸಿ ಇರುವುದಾಗಿ ತಿಳಿದಿದ್ದದ್ದರಿಂದ ಇದೊಂದು ಮುದ್ರಣವಾಗದಿರುವ ಉಪನಿಷತ್ತೆಂದು ಭಾವನೆಗೆ ಬಂದಿತು. ಮೈಸೂರು ಓರಿಯೆಂಟಲ್ ಲೈಬ್ರರಿಗೆ ಬರೆದುದರಲ್ಲಿ ಅಲ್ಲಿಯೂ ೭-೮ ಉಪನಿಷತ್‌ಗಳು ದೊರೆಯುವವೆಂದು ತಿಳಿಯಿತು. ಅವಕ್ಕೆ ಖರ್ಚುಕೊಟ್ಟು ಬರೆಸುವುದಕ್ಕಾಗಿ ಸಹಾಯಕರನ್ನು ಹುಡುಕುತ್ತಿರುವಲ್ಲಿ ಶ್ರೀ ಕೆಳದಿ ಸಂಸ್ಥಾನ ಹಿರೇಮಠದ ಪಟ್ಟಾಧ್ಯಕ್ಷ ಸ್ವಾಮಿಗಳವರು ಖರ್ಚು ಕೊಡುವುದಕ್ಕೆ ಒಪ್ಪಿ ಕೊಟ್ಟಿದ್ದರಿಂದ ಬರೆಯಿಸಿ ತರಿಸಿದುದಾಯಿತು. ದೊರಕಿದ್ದ ಓಲೆಯ ಪ್ರತಿಯ ಗ್ರಂಥಗಳನ್ನು ನೋಡಬೇಕೆಂಬ ಅವಶ್ಯಕತೆಯು ತೋರಿಬಂದು ನೋಡಿದ್ದರಲ್ಲಿ ವೇದೋಪನಿಷತ್ ಎಂಬುದೂ ದೊರೆಯಿತು. ಮೈಸೂರಿಂದ ಬರೆದು ತರಿಸಿದವು ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರು ಬೃಹನ್ಮಠ ಚಿತ್ರದುರ್ಗ ಮತ್ತು ಇತರ ಮಠಗಳಲ್ಲಿ ಗೃಹಸ್ಥರ ಮನೆಗಳಲ್ಲಿ ಸಿಕ್ಕುವುದು ಸೇರಿ ವೇದಾಂತಸಾರ, ಸಿದ್ಧಾಂತಶಿಖಾನಿರ್ಲೇಪ, ಪ್ರಣವ ಶರೀರ, ಭಕ್ತಿಯೋಗ, ಚಿದಂಬರ ಶೃತಿರಹಸ್ಯ, ಪ್ರಸಾದಜಾಬಾಲ. ಲಿಂಗಧಾರಣ (ಲಿಂಗ), ಪೈಪ್ಪಲಾದ (ಶಾರದ), ಋಗ್ವೇದೋಪನಿಷತ್ (ಸಂಹಿತೋಪನಿಷತ್), ಶಿವಸಂಕಲ್ಪ, ಶ್ರೀ ಕೈವಲ್ಯ, ವೀರಶೈಂಗ್ಯ–ಈ ಉಪನಿಷತ್ತುಗಳು ಕೆಲವು ಒಂದೇ ಕಡೆಯಲ್ಲಿಯೂ ಕೆಲವು ೨–೩–೪ ಕಡೆಗಳಲ್ಲಿಯೂ ದೊರಕಿದವುಗಳನ್ನು ಎತ್ತಿ ಬರೆದಾಗಿರುತ್ತದೆ. ಇವುಗಳಲ್ಲದೆ ರುದ್ರಾಕ್ಷ ಜಾಬಾಲ, ಯೋಗಶಿಖಾ, ಧ್ಯಾನಬಿಂದು, ಅಮೃತನಾದ, ನಾದಬಿಂದು, ಕೈವಲ್ಯ, ಮಾಂಡೂಕ್ಯ, ಬ್ರಹ್ಮ, ಹಂಸ, ನಾರಾಯಣ ಪೂರ್ವ, ನಾರಾಯಣ, ಉತ್ತರ ಕಾಲಾಗ್ನಿ ರುದ್ರ, ತೈತ್ತಿರೀಯಕ, ಬೃಹಜ್ಜಾಬಾಲ,

ಪರಮಹಂಸ, ವಜ್ರಸೂಚಿ, ಅಥರ್ವಣಶಿಖಾ, ಮೈತ್ರಾಯಿಣಿ, ಅಥರ್ವಣ ಶಿರ, ನಿರಾಲಂಬ, ಗರ್ಭ, ಆರುಣಿ, ಜಾಬಾಲ, ತೇಜೋಬಿಂದು, ಮುಂಡಕ, ಕಠವಲ್ಲಿ ಎಂಬ ಉಪನಿಷತ್ತುಗಳ ಬರಹದ ಪ್ರತಿಗಳನ್ನು ನೋಡಿ ಹೆಚ್ಚು ಕಡಿಮೆಗಳನ್ನು ಗುರುತಿಸಿ ಇಟ್ಟಿರುತ್ತದೆ.

ಇವೆಲ್ಲ ಹಾಗಿರಲಿ, ಮದರಾಸಿನ ಆದ್ಯರ ಲೈಬ್ರರಿಯಲ್ಲಿ ಮುಂದೆ ಹೇಳಿರುವಂತೆ ಕೈ ಬರಹ ಪ್ರತಿಯ ಉಪನಿಷತ್ತುಗಳಿರುವುದಾಗಿ ಅವರ ಪಟ್ಟಿಯಿಂದ ಗೊತ್ತಾಗಿದೆ. ಈ ಹೆಸರುಗಳನ್ನು ಓದುವುದಕ್ಕೆ ವಾಚಕರು ಬೇಸರಪಡುವುದಾದರೆ ಹಾಗೆ ಮಾಡಬಾರದೆಂದು ಪ್ರಾರ್ಥನೆ. ಹಿರಿಯರು ಬರೆದಿಟ್ಟವುಗಳನ್ನು ಪೂರ್ಣವಾಗಿ ಓದುವುದಕ್ಕಾಗದಿದ್ದರೂ ಹೆಸರು ಓದುವುದಕ್ಕಾದರೂ ಬೇಸರಪಡುವುದು ಅನ್ಯಾಯವಲ್ಲವೇ ? ಹೆಸರು ತಿಳಿದ ಮೇಲೆ ಕೆಲ ಕೆಲವನ್ನಾದರೂ ಓದಬೇಕೆಂಬ ಲವಲವಿಕೆಯು ಮುಂದೆ ತಮಗೇ ಉಂಟಾಗಬಹುದು. ಇದುವರೆವಿಗೆ ಮುದ್ರಣವಾಗಿಲ್ಲವೆಂದು ತೋರಿದವುಗಳನ್ನೇ ಈ ಕೆಳಗಿನ ಪಟ್ಟಿಯಲ್ಲಿ ಕೊಟ್ಟಿರುತ್ತದೆ. (ಸಂ. ೨)

# ಶಿವಶರಣರ ವಚನವೂ ಉಪನಿಷತ್ ತಾತ್ಪರ್ಯವೂ

## ೧. ಬಸವೇಶ್ವರ ವಚನ

ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡುಗಿತ್ತು; ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯಲಿಂಗವೆಂದು ಸಾರುತ್ತೈದಾವೆ; ತರ್ಕ ತರ್ಕಿಸಲರಿಯದೆ ಅತರ್ಕ್ಯಲಿಂಗವೆಂದು ಮನಗೊಳ್ಳವು; ಆಗಮ ಅಗಮ್ಯಲಿಂಗವೆಂದು ಗಮಿಸಲರಿಯದೆ ಹೋದವು; ನರರು ಸುರರು ಅಂತುವ ಕಾಣರು. ನಮ್ಮ ಕೂಡಲ ಸಂಗಮದೇವನ ಪ್ರಮಾಣವ ಶರಣಬಲ್ಲ.

### ಕಠೋಪನಿಷತ್
### ಮೊದಲನೆಯ ಅಧ್ಯಾಯ–ಎರಡನೆಯ ವಲ್ಲಿ

ನ್ಯಾಯಮಾತ್ಮಾ ಪ್ರವಾಚನೇನ ಲಭ್ಯೋ । ನ ಮೇಧಯಾ । ನ ಬಹುನಾ ಶ್ರುತೇನ । ಯಮೈವೇಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥

ತಾತ್ಪರ್ಯ : ಈ ಆತ್ಮನು ಪ್ರವಚನದಿಂದ (ವೇದಾದಿಗಳನ್ನು ಓದುವುದರಿಂದ) ಹೊಂದಲ್ಪಡತಕ್ಕವನಲ್ಲ; ಉತ್ತಮವಾದ ತಿಳುವಳಿಕೆಯಿಂದ ಹೊಂದಲ್ಪಡತಕ್ಕವನಲ್ಲ; ಬಹಳ ಶಾಸ್ತ್ರ ಪುರಾಣಗಳನ್ನು ಕೇಳುವುದರಿಂದ ಹೊಂದಲ್ಪಡತಕ್ಕವನಲ್ಲ; ಈ ಆತ್ಮನು ಯಾವನನ್ನು ಅಂಗೀಕರಿಸುತ್ತಾನೆಯೋ ಅವನಿಂದ ಹೊಂದಲ್ಪಡತಕ್ಕವನು. ಅವನ ತನುವನ್ನೇ (ಅಂಗವನ್ನೇ ?) ಆತ್ಮನು ತನ್ನ ತನುವನ್ನಾಗಿ ಅಂಗೀಕರಿಸುತ್ತಾನೆ. (ಆವರಿಸುತ್ತಾನೆ).

ವಿಮರ್ಶೆ : ಇಲ್ಲಿ ಅಂಗಕ್ಕೆ ಲಿಂಗವನ್ನು ಆವರಿಸುವುದೇ ಮುಖ್ಯ ಆಚರಣೆಯು. ಇದರಿಂದ ಲಿಂಗದ ಅಂಗವೇ ತನುವಾಗುತ್ತದೆ. ಇಂತಹವನನ್ನೇ "ಶರಣ" ಎಂಬುದಾಗಿ ಬಸವೇಶ್ವರನು ತನ್ನ ವಚನದಲ್ಲಿ ಹೇಳಿದ್ದಾನೆ. ಉಪನಿಷತ್‌ನಲ್ಲಿ ಕಂಡ "ಆತ್ಮ" ಎಂಬುವನ್ನೇ ಬಸವೇಶ್ವರನು "ಲಿಂಗ" ಎಂಬ ಪದದಿಂದ ಕರೆದಿರುತ್ತಾನೆ, ಎಂದು ತಿಳಿಯಬಹುದಾಗಿದೆ. ಭಾವಲಿಂಗಕ್ಕೆ ಆತ್ಮಲಿಂಗವೆಂದು ಹೆಸರಿಸಿ ಇರುವುದನ್ನು ಶೂನ್ಯ ಸಂಪಾದನೆಯಲ್ಲಿ "ಸಿದ್ಧರಾಮಯ್ಯನ ಗುರು ಕರುಣ" ಎಂಬ ಉಪದೇಶದಲ್ಲಿ ನೋಡಬಹುದಾಗಿದೆ.

## ೨. ಬಸವೇಶ್ವರ ವಚನ

ಅದ್ವೈರ ವಚನ ಪುರುಷ ಕಂಡಯ್ಯ; ಸದಾಶಿವನೆಂಬ ಲಿಂಗವ ನಂಬುವುದು; ನಂಬಲೊಡನೆ ಸೀ ವಿಜಯ ಕಂಡಯ್ಯಾ. ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ.

## ಕಠೋಪನಿಷತ್

### ೨ ನೆಯ ಅಧ್ಯಾಯ–೬ ನೆಯ ವಲ್ಲಿ

ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ವಮುತ್ತಮಂ
ಸತ್ವಾದಧಿ ಮಹಾನಾತ್ಮಾ ಮಹತೋಽ ವ್ಯಕ್ತ ಮುತ್ತಮಂ
ಅವ್ಯಾಕ್ತಾತ್ತು ಪರಃ ಪುರುಷೋ ವ್ಯಾಪಕೋ ಲಿಂಗ ಏವ ಚ
ಯದ್ ಜ್ಞಾತ್ವಾ ಮುಚ್ಯತೇ ಜಂತುರ ಮೃತತ್ವಂಚ ಗಚ್ಛತಿ.

ತಾತ್ಪರ್ಯ : ಇಂದ್ರಿಯಗಳಿಗಿಂತಲೂ ಮನಸ್ಸು ಉತ್ತಮವಾದುದು; ಮನಸ್ಸಿಗಿಂತಲೂ ಸತ್ವವು (ಸಾತ್ವಿಕತೆಯ–ಅಹಿಂಸಾ ಭಾವವು, ಮತ್ತು ಯಥಾರ್ಥದ ಆಚರಣೆಯು) ಉತ್ತಮವಾದುದು; ಸತ್ವಕ್ಕಿಂತಲೂ ಆಧ್ಯಾತ್ಮ ಮಹಾತ್ಮ ಎಂಬ ಆತ್ಮನು ಉತ್ತಮನು; ಮಹಾತ್ಮನಿಗಿಂತಲೂ ಅವ್ಯಕ್ತವು ಉತ್ತಮವಾದುದು; ಅವ್ಯಕ್ತಕ್ಕಿಂತಲೂ ವ್ಯಾಪಕನಾದ ಪುರುಷ ಎಂಬ ಲಿಂಗವು ಉತ್ತಮವು. ಈ ಲಿಂಗವನ್ನು ತಿಳಿದು ಪ್ರಾಣಿಯು ಮೋಕ್ಷವನ್ನು ಹೊಂದಿ ಅಮೃತಪ್ರಾಯನಾಗಿರುತ್ತಾನೆ.

ವಿಮರ್ಶೆ : ಇಲ್ಲಿ ಹೇಳಿದಂತೆ ಲಿಂಗವು ಸೂಕ್ಷ್ಮರೂಪವೆಂಬುದಕ್ಕೆ ಲಿಂಗವು ಪರಬ್ರಹ್ಮವೆಂದು ಹೇಳಿದ ಸೂಕ್ಷ್ಮಾಗಮದ ೬ನೆಯ ಪಟಲ (ಶ್ಲೋಕ ೧೪ ಮತ್ತು ೨೪) ಆಧಾರವಾಗಿದೆ. ಸರ್ವಕಾರಣ ಕಾರಣಲಿಂಗವನ್ನು ಪೂಜಿಸಬೇಕು ಎಂದು ಹೇಳಲ್ಪಟ್ಟಿದೆ. (ಅದೇ ಶ್ಲೋಕ ೧೦).

ಅವ್ಯಕ್ತವು ವ್ಯಕ್ತ ಸ್ವರೂಪವನ್ನು ಹೊಂದಿದುದು ಎಂದೂ ಇದೆ. (ಅದೇ ಶ್ಲೋಕ ೧೫). ಲಿಂಗವು ಸದಾಶಿವ ರೂಪವೆಂದೂ, ಅಕ್ಷರವೆಂದೂ ಉಕ್ತವಾಗಿದೆ. (ಅದೇ ಶ್ಲೋಕ ೨೨–೨೪) ಇದೇ ಅಭಿಪ್ರಾಯವನ್ನು ಬಸವೇಶ್ವರನು ಮೇಲಿನ ವಚನದಲ್ಲಿ ಸದಾಶಿವನೆಂಬ 'ಲಿಂಗವ ನಂಬುವುದು' ಎಂಬ ವಾಕ್ಯದಿಂದ ವ್ಯಕ್ತಪಡಿಸಿದ್ದಾನೆ. ಭಾವಲಿಂಗವು ಅತಿ ಸೂಕ್ಷ್ಮರೂಪದಲ್ಲಿದ್ದು ಪ್ರಾಣಲಿಂಗವೆಂಬ ಅತಿ ಸೂಕ್ಷ್ಮರೂಪವನ್ನು ಹೊಂದಿ, ಆಮೇಲೆ ಇಷ್ಟಲಿಂಗವಾಗಿ ಪರಿಣಮಿಸಿ ಇರುವುದು, ಶಿವಜ್ಞಾನಿಗಳಿಗೆ ತಿಳಿದ ಅಂಶವೇ ಆಗಿದೆ. ಶತಕತ್ರಯದ ರಚನಾಕರ್ತರಾದ ಮೊಗ್ಗೆಯ ಮಾಯಿದೇವರು "ಲಿಂಗಯಾ ಲಿಂಗರೂಪಿಣೇ"–ಗುರುತಿಸುವುದಕ್ಕೆ ಬಾರದ ರೂಪವುಳ್ಳ ಲಿಂಗಕ್ಕೇ ನಮಸ್ಕಾರ–ಎಂದು ಹೇಳಿರುವುದರಿಂದಲೂ ಲಿಂಗವು ಸೂಕ್ಷ್ಮತಮವಾದುದೆಂದು ನಿರ್ಧರಿಸಬೇಕಾಗಿದೆ. ಈಗಿನ ಶಾಸ್ತ್ರವೂ (Science) ಪರಮಾಣುವನ್ನು ಲಿಂಗಾಕಾರವಾಗಿ ಎಂದರೆ ಸ್ವಲ್ಪ ಉದ್ದದ ವರ್ತುಳಾಕೃತಿಯಾಗಿ (ಗೋಳಕಾಕೃತಿ) ತೋರಿಸುತ್ತದೆ. ಇವುಗಳನ್ನೆಲ್ಲ ಪರಿಶೀಲಿಸಿದಾಗ ಲಿಂಗವನ್ನು ತನುವಿನಲ್ಲಿ ಆವರಿಸಿ ತಿಳಿದಾಚರಿಸುವುದೇ ಮೇಲಣ ಕಠೋಪನಿಷತ್ ವಾಕ್ಯದ ತಾತ್ಪರ್ಯಕ್ಕೆ ಸರಿಯಾದುದು ಎಂಬುದು ದೃಢಪಡುತ್ತದೆ. ಜ್ಞಾನಕ್ಕೆ ಸರಿಯಾದ ಆಚರಣೆಯು ಬಹು ಕಷ್ಟವಾದುದು. ಶರಣನ ಆಚಾರರೂಪ ಬೋಧೆಯೂ ಮಾತನಾಡುವುದಕ್ಕೆ ಸುಲಭವಲ್ಲ. ಅವರೂ

ಅನುಭವವ ಪರಿಣಾಮದಲ್ಲಿ ಹಿತವಾಗಿರುತ್ತದೆ. ಈ ಬೋಧೆಯುಳ್ಳ "ಅಧರಕ್ಕೆ ಕಹಿ ಉದರಕ್ಕೆ ಸಿಹಿ" ಎಂಬ ವಾಕ್ಯವು ಈ ವಚನವಲ್ಲಿದೆ.

### ೩. ಬಸವೇಶ್ವರ ವಚನ

ಪ್ರಣವವನುಚ್ಚರಿಸುವ ಅಪ್ರಮಾಣಿಕರೆಲ್ಲರೂ ಪ್ರಣವ ಮಂತ್ರವನೋದಿ, ಮಂತ್ರಾರ್ಥವನರಿಯರು. ಪ್ರಣವ ಓಂನಮಃಶಿವಾಯ, ಪ್ರಣವ ಓಂ, ನಮಃ ಶಿವಾಯ, ಪ್ರಣವ ಓಂ, ನಮಃಶಿವಾಯ ಎಂದುವು ಶೃತಿಗಳೆಲ್ಲ ಪ್ರಣವ ಭರ್ಗೋದೇವ ಎಂಬುವು ಶ್ರುತಿಗಳು. ಕೂಡಲಸಂಗನನರಿಯದ ದ್ವಿಜರೆಲ್ಲ ಭ್ರಮಿತರು.

ಮಾಂಡೂಕ್ಯೋಪನಿಷತ್

"ಅಮಾತ್ರಶ್ಚತುರ್ಥೋsವ್ಯವಹಾರ್ಯಃ ಪ್ರಪಂಚೋಪಶಮಃ
ಶಿವೋsದ್ವೈತ ಏವಮೋಂಕಾರ ಆತ್ಮೈವ
ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ" (ಯ ಏವಂ ವೇದ)

ತಾತ್ಪರ್ಯ : ಮಾತ್ರೆಗಳಿಲ್ಲದುದಾಗಿ, ನಾಲ್ಕನೆಯದಾಗಿ, ವ್ಯವಹಾರಕ್ಕೆ ಸಿಲುಕದುದಾಗಿ, ಪ್ರಪಂಚಕ್ಕೆ ಶಾಂತಿ ಮಾಡುವುದಾಗಿ ಎರಡಿಲ್ಲದ ಶಿವರೂಪವಾಗಿ, ಓಂಕಾರವು ಇದೆ. ಹೀಗಿರುವ ಓಂಕಾರವು ಆತ್ಮನಿಂದ (ತನ್ನಿಂದ ತಾನೇ) ಆತ್ಮನನ್ನು (ಶಿವರೂಪ ಸೂಕ್ಷ್ಮ ವಸ್ತುಗಳನ್ನು) ಪ್ರವೇಶ ಮಾಡುತ್ತದೆ. ಯಾರು ಇದನ್ನು ತಿಳಿದವರೋ ಅವರೇ ತಿಳಿದವರು.

### ಇದಕ್ಕೆ ಗೌಡಪಾದೀಯ ಉಪನಿಷತ್‌ಕಾರಿಕಾ

ಯುಂಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಂ
ಪ್ರಣವೇ ನಿತ್ಯ ಯುಕ್ತಸ್ಯ ನಭಯಂ ವಿದ್ಯತೇ ಕ್ವಚಿತ್
ಪ್ರಣವೋಹ್ಯ ಪರಂಬ್ರಹ್ಮ ಪ್ರಣವಶ್ಚ ಪರಃ ಸ್ಮೃತಃ
ಅಪೂರ್ವೋ ನಂತರೋs ಬಾಹ್ಯೋನ ಪರಃ ಪ್ರಣವೋsವ್ಯಯಃ
ಸರ್ವಸ್ಯ ಪ್ರಣವೋಹ್ಯಾದಿರ್ಮಧ್ಯಮಂತಸ್ತಥೈವಚ
ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನಂತರಂ
ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯಹೃದಿ ಸಂಸ್ಥಿತಂ
ಸರ್ವವ್ಯಾಪಿನಮೋಂಕಾರಂ ಮತ್ವಾ ಧಿರೋ ನ ಶೋಚತಿ
ಅಮಾತ್ರೋsನಂತ ಮಾತ್ರ ಶ್ಚ ತ್ವೈತಸ್ಯೋಪಶಮಃ ಶಿವಃ
ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋಜನಃ

ತಾತ್ಪರ್ಯ : ಪ್ರಣವದಲ್ಲಿ ಮನಸ್ಸನ್ನು ಕೂಡಿಸಬೇಕು. ಪ್ರಣವತೇ ಬ್ರಹ್ಮ; ಪ್ರಣವದಲ್ಲಿ ನಿತ್ಯವೂ ಕೂಡಿದವನಿಗೆ ಭಯವಿಲ್ಲ. ಪ್ರಣವವು ಪರಬ್ರಹ್ಮ, ಪ್ರಣವವು ಪೂರ್ವವಲ್ಲ; ಒಳಗಿನದಲ್ಲ; ಹೊರಗಿನದಲ್ಲ; ಬೇರೆಯಲ್ಲ. ಪ್ರಣವವು ಅಕ್ಷೀಣ

ವಾದುದು, ಹಾಗೆಯೇ ಸರ್ವಕ್ಕೂ ಪ್ರಣವವೇ ಆದಿ, ಮಧ್ಯ, ಅಂತ್ಯವಾದುದು ಹೀಗೆ ಪ್ರಣವವನ್ನು ತಿಳಿದು ಅನಂತರ ಅದನ್ನು ಅನುಭವಿಸುತ್ತಾನೆ. ಪ್ರಣವವೇ ಈಶ್ವರ. ಪ್ರಣವವೇ ಸರ್ವರ ಹೃದಯದಲ್ಲಿ ಇರುವ ಈಶ್ವರ. ಸರ್ವದಲ್ಲಿಯೂ ವ್ಯಾಪಿಸಿರುವ ಓಂಕಾರವನ್ನು ತಿಳಿದ ಧೀರನು ದುಃಖಿಸುವುದಿಲ್ಲ. ಪ್ರಣವವು ಮಾತ್ರೆಗಳಿಲ್ಲವುದಾಗಿಯೂ ಅನೇಕ ಮಾತ್ರೆಗಳುಳ್ಳುದಾಗಿಯೂ ಇದೆ. ಈ ಪ್ರಣವದ ಉಪಶಾಂತಿಯೇ (ಸಮೀಪ ವಿಶ್ರಮಸ್ಥಾನ) ಶಿವನು. ಓಂಕಾರವನ್ನು ತಿಳಿದವನೇ ಮುನಿಯು.

ವಿಮರ್ಶೆ : ಮೇಲಿನ ಪ್ರವಚನದಲ್ಲಿ ಪ್ರಣವವನ್ನು ಉಚ್ಚರಿಸುವವರಾಗಿ ಅದರ ಪ್ರಮಾಣವನ್ನು ಅರಿಯದವರೆಲ್ಲರೂ ಬರೀ ಪ್ರಣವ ಮಂತ್ರವನ್ನು ಓದಬಲ್ಲರೇ ಹೊರತು ಅದರ ಅರ್ಥವನ್ನು ತಿಳಿಯುವುದಿಲ್ಲ ಎಂಬುದರ ಕಾರಣಗಳಿವು—

'ಪ್ರಣವ' ಎಂಬ ಹೆಸರು ಮುಖ್ಯವಾಗಿ 'ಓಂ' ಎಂಬುದಕ್ಕೇನೇ ಇರುತ್ತದೆ. ಮೇಲಿನ ಕಾರಿಕೆಯಲ್ಲಿರುವ **'ಓಂಕಾರೋ ವಿದಿತೋ ಯೇನ'** ಎಂಬ ಪದಗಳಿಂದ ಈ ಸಂಗತಿಯೂ ಸ್ಪಷ್ಟವಾಗಿ ಇದೆ. ಪ್ರತಿ ಮನುಷ್ಯನೂ ಉಸಿರಾಡುವಾಗ ಉಚ್ಛ್ವಾಸ ನಿಶ್ವಾಸಗಳಲ್ಲಿ **ಹಂ** ಮತ್ತು **ಸಃ** ಎಂಬ ಸೂಕ್ಷ್ಮ ಧ್ವನಿಯಾಗುವುದೆಂಮೂ ಈ ಹಂಸ ಜಪವು ಒಂದು ದಿನಕ್ಕೆ ೨೧೬೦೦ ಸಲ ನಡೆವುದೆಂತಲೂ ಯೋಗಿಗಳು ತಿಳಿದಿರುತ್ತಾರೆ. ಈ ಪ್ರಕಾರ ಒಂದು ನಿಮಿಷಕ್ಕೆ ೧೬ ಸಾರಿ ಉಸಿರಾಡಿದಂತೆ ಆಗುತ್ತದೆ. ಈಗಿನ ಶಾರೀರಕ ಶಾಸ್ತ್ರದವರೂ ಒಂದು ನಿಮಿಷಕ್ಕೆ ೧೫ ಸಾರಿ ಉಸಿರಾಡುತ್ತದೆ ಎಂದು ಹೇಳುತ್ತಾರೆ. ಪೂರ್ವದವರ ಶರೀರದಲ್ಲಿ ೧೬ ಸಾರಿ ಇದ್ದಿರಬೇಕೆಂದು ನಂಬಬಹುದು. **ಹಂಸಃ** ಎಂಬ ಉಚ್ಛ್ವಾಸ ನಿಶ್ವಾಸದ ಗಾಳಿಯನ್ನು ಊರ್ಧ್ವ ಮುಖವಾಗಿ ಮಾಡಿದರೆ 'ಸೋಽಹಂ' ಎಂಬ ನಿವೃತ್ತಿ ಮುಖ ಸೂಕ್ಷ್ಮ ಧ್ವನಿಯಾಗಿ ಅದರಲ್ಲಿ **ಸಕಾರ ಹಕಾರ** ಗಳು ಕೇಳಿ ಬರದೇ ಉಳಿಯುವ 'ಓಂ' ಎಂಬುದೇ ಮುಖ್ಯವಾಗಿ ತನ್ನ ಕಿವಿಗೇ ಕೇಳಿಬರುವುದೆಂದೂಆದುದರಿಂದ ಓಂಕಾರವು ನಿವೃತ್ತಿ ಮುಖವೆಂದು ತಿಳಿದು ಜಪಿಸಬೇಕೆಂದೂ ತಿಳಿಯುತ್ತದೆ. ಈ ಅನುಭವವಿಲ್ಲದೆ ಸುಮ್ಮನೆ **'ಓಂ'** ಎಂದರೆ ಪ್ರಯೋಜನವೇನು ?

ಪ್ರಸಿದ್ಧನಾದ ಮ್ಯಾಕ್ಸಮುಲ್ಲರ್ ಎಂಬ ಬ್ರಿಟಿಷ್ ಕವಿಗೆ ಈ ಅಭಿಪ್ರಾಯವು ತಿಳಿಯದೆ a u m (ಅ, ಉ, ಮ್) ಎಂಬ ಮೂರಕ್ಷರಗಳು ಕೂಡಿ ಓಂ ಎಂದು ಹೇಳುವುದರಿಂದ ಪ್ರಯೋಜನವಿಲ್ಲ ಎಂದು ತಾನು ರಚಿಸಿದ "Six Systems of Indian Philosophy" (ಹಿಂದೂ ದೇಶದ ವೇದಾಂತದ ಆರು ಪದ್ಧತಿಗಳು) ಎಂಬ ಗ್ರಂಥದಲ್ಲಿ ಹೇಳಿದ್ದಾನೆ. ಈ 'ಓಂ' ಅಕ್ಷರದ ವಿಷಯದಲ್ಲಿ 'ಅಥರ್ವಣ' ಎಂಬ ಉಪನಿಷತ್ತಿನಲ್ಲಿ "ಯಸ್ಮಾದುಚ್ಚಾರ್ಯಮಾಣ ಏವ ಪ್ರಾಣಾದೂರ್ಧ್ವ ಮುತ್ಕ್ರಾಮಯತಿ ತಸ್ಮಾದ್ ಉಚ್ಯತೇ ಓಂಕಾರಃ" ಇದನ್ನು ಉಚ್ಚರಿಸುತ್ತಾ ಪ್ರಾಣಗಳನ್ನು ಊರ್ಧ್ವ ಎಂದರೆ ಮೇಲುಗಡೆ ಎಬ್ಬಿಸುವುದರಿಂದ ಇದಕ್ಕೆ **ಓಂಕಾರ** ಎಂಬ ಹೆಸರು ಎಂಬುದಾಗಿ ಹೇಳಿರುತ್ತಾರೆ. ಇದಲ್ಲದೆ ಇದಕ್ಕೆ ಪ್ರಣವ, ಸರ್ವವ್ಯಾಪಿ, ಅನಂತತಾರ, ಶುಕ್ಲ,

ಸೂಕ್ಷ್ಮ, ವೈದ್ಯುತ, ಪರಬ್ರಹ್ಮ, ಏಕ, ರುದ್ರ, ಈಶಾನ, ಮಹೇಶ್ವರ ಎಂಬ ಹೆಸರುಗಳಿವೆ ಎಂದೂ ಈ ಹೆಸರು ಬರುವುದಕ್ಕೆ ಕಾರಣಗಳನ್ನು ವಿವರಿಸಿ ಇರುತ್ತಾರೆ.

ಈ ಪ್ರಣವದಲ್ಲಿ ನಾದ ಬಿಂದು ಕಳೆಗಳ ರೂಪವಾದ ಮೂರು ಮಾತ್ರೆಗಳು ಸೇರಿರುವವೆಂದೂ ಪೂರ್ವಿಕರು ಹೇಳಿರುತ್ತಾರೆ. ತಾರೆ, ದಂಡ, ಕುಂಡಲಿ, ಅರ್ಧಚಂದ್ರ, ದರ್ಪಣ, ಜ್ಯೋತಿ ಈ ಆಕಾರವಾಗಿ ನಮಃ ಶಿವಾಯ ಓಂ ಎಂಬ ಮಾತ್ರೆಗಳೂ ಇದರಲ್ಲಿ ಸೇರಿರುವುದಾಗಿ ತಿಳಿಯಲ್ಪಟ್ಟಿದೆ.

ಈ ಮಾತ್ರೆಗಳು ಇರುವುದಕ್ಕೆ ಕಾರಣವೂ ಇವುಗಳ ಅಭಿಪ್ರಾಯವೂ ಬಹಳ ವಿಸ್ತಾರವಾಗಿದೆ. ಮುಖ್ಯವಾಗಿ **'ನಮಃ ಶಿವಾಯ'** ಈ ಐದಕ್ಷರಗಳಿಂದ ಜೀವವು ಶಿವಸ್ವರೂಪವನ್ನು ಹೊಂದಲಿ ಎಂದು ಅರ್ಥವಾಗುತ್ತದೆ. ಇವೆಲ್ಲವುಗಳನ್ನು ತಿಳಿಯದೆ ಬರೀ ಅಕ್ಷರವನ್ನು ಉಚ್ಚರಿಸಿದ ಮಾತ್ರದಿಂದ ಲಾಭವೇನೂ ಇಲ್ಲ. ಮ್ಯಾಕ್ಸಮುಲ್ಲರ್‌ರು ಇದನ್ನೆಲ್ಲಾ ಯೋಚಿಸಿದಂತೆ ತೋರಲಿಲ್ಲ. ಆದುದರಿಂದಲೇ ಇದು ಉಪಯೋಗವಿಲ್ಲದುದೆಂದು ಅವರು ತಿಳಿದಂತೆ ತೋರುತ್ತದೆ. ಆದರೆ ಹಿಂದೂ ದೇಶದ ಪೂರ್ವಿಕರ ಧರ್ಮದ ಅನುಯಾಯಿಗಳಿಗೆಲ್ಲಾ ಇದು ಮುಖ್ಯವಾದ ಅಕ್ಷರ. ಇದಲ್ಲದೆ ಇದನ್ನು ಶರೀರದೊಡನೆಯೂ, ಜಗತ್ತಿನೊಡನೆಯೂ ಹೋಲಿಸಿ ಆ ಲಕ್ಷಣಗಳನ್ನು ತನ್ನ ಅನುಭವದಲ್ಲಿ ತರುವುದು ಮುಖ್ಯ ಕೆಲಸ. ಇವೆಲ್ಲಾ ಇಲ್ಲದಿದ್ದರೆ 'ಓಂ' ನಿಷ್ಪ್ರಯೋಜನವಾದುದೇ ಸರಿ.

ಮೇಲೆ ಮಾಂಡುಕ್ಯೋಪನಿಷತ್ತಿನಲ್ಲಿ ಪ್ರಣವವು 'ಶಿವ' ಎಂದೂ ಮತ್ತು ಅಥರ್ವಶಿರ ಎಂಬ ಉಪನಿಷತ್ತಿನಲ್ಲಿ ಪ್ರಣವವು 'ಮಹೇಶ್ವರ' ಎಂದೂ ಹೇಳುವುದಕ್ಕೆ ಅನುಸಾರವಾಗಿ **'ಓಂಕಾರಂ ಲಿಂಗಮಾಖ್ಯಾತಂ'** ಎಂಬುದಾಗಿ ವೀರಶೈವರು ತಿಳಿದಿದ್ದಾರೆ. ವೀರಶೈವರ ಪ್ರಮಾಣ ಗ್ರಂಥವೆಂದು ತಿಳಿಯಲ್ಪಟ್ಟ ಸೂಕ್ಷ್ಮ ತಂತ್ರದ ನಾಲ್ಕನೆಯ ಪಟಲದಲ್ಲಿ **"ಓಂಕಾರಃ ಸರ್ವಮಂತ್ರಾಣಾಂ ಮಂತ್ರರಾಟ್ ಪರಿಕೀರ್ತಿತಃ"** (ಶ್ಲೋಕ ೫೮)—ಓಂಕಾರವು ಸರ್ವಮಂತ್ರಗಳಿಗೂ ಮಂತ್ರರಾಜ ಎಂದು ಹೊಗಳಲ್ಪಟ್ಟಿದೆ—ಎಂದಿದೆ, ಇದರೊಡದೆ ನಮಃ ಶಿವಾಯ ಎಂಬುದು ಸೇರಿದರೆ ಸಾಯುಜ್ಯ ಕಾರಣವೆಂದೂ ಅಲ್ಲಿಯೇ ಇದೆ.

ವೀರಶೈವರು ಪ್ರಣವದಲ್ಲಿ ಮುಳುಗಿ ತೇಲಾಡತಕ್ಕವರಾಗಿದ್ದಾರೆ. ಇವರ ಅಂಗವು ಪ್ರಣವರೂಪ, ಲಿಂಗವು ಪ್ರಣವರೂಪ, ಅಲ್ಲದೆ ಜಗತ್ತೂ ಪ್ರಣವರೂಪ ಎಂದು ತಿಳಿದಾಚರಿಸುವವರಿದ್ದಾರೆ. ಮೇಲಿನ ಪರಿಷತ್‌ಕಾರಿಕೆಯಲ್ಲಿಯೂ ಪ್ರಣವವೆಂದರೆ ಈಶ್ವರ, ಚೈತನ್ಯ ಎಂದು ಹೇಳಿರುತ್ತಾರೆ. ಪ್ರಣವವು **'ಭರ್ಗೋದೇವ'** ಎಂದರೆ ಶಿವನು ಅಥವಾ ನೇತ್ರಗಳಲ್ಲಿ ಪ್ರಕಾಶಿಸುವ ದಿವ್ಯ ತೇಜಸ್ಸುಳ್ಳ ಲಿಂಗರೂಪವು. ಮೈತ್ರೇಯಿ ಉಪನಿಷತ್ ನೋಡಿರಿ.

ಇವೇ ಮುಂತಾದ ಸಂಗತಿಗಳನ್ನು ಚೆನ್ನಾಗಿ ಪರಿಶೀಲಿಸಿ ಆಚರಿಸುವನಾದುದರಿಂದಲೇ ಲಿಂಗವನರಿಯದ (ಲಿಂಗಧಾರಿಗಳಲ್ಲದ) ದ್ವಿಜರು ಸುಮ್ಮನೆ ಓಂಕಾರವನುಚ್ಚರಿಸಿ ಭ್ರಾಂತಿಪರರಾಗಿದ್ದಾರೆ, **ಕ್ರಿಯೆಯ ತಿಳಿಯರು** ಎಂದು ಬಸವೇಶ್ವರನು ಮೇಲಿನ ವಚನದ ಮೂಲಕವಾಗಿ ಜನಸಾಮಾನ್ಯಕ್ಕೆಲ್ಲಾ ಬೋಧಿಸಿ ಇರುತ್ತಾನೆ.

ಇಲ್ಲಿ ಉದಾಹರಿಸಿರುವ ಕಠ ಮತ್ತು ಮಾಂಡೂಕ್ಯ ಉಪನಿಷತ್ತುಗಳು ಮೊದಲಿನ ಹತ್ತು ಉಪನಿಷತ್(ದಶೋಪನಿಷತ್)ಗಳಲ್ಲಿ ಸೇರಿದವುಗಳಾಗಿವೆ. ದಶೋಪನಿಷತ್‌ಗಳ ರಚನೆಯ ಕಾಲವು ಸುಮಾರು ಎರಡು ಸಾವಿರ ವರ್ಷಗಳಿಗಿಂತ ಪೂರ್ವವೆಂದು ಇತಿಹಾಸ ಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಈಗಿನ ವೀರಶೈವರ ಆಚರಣೆಯು ಬಹಳ ಪೂರ್ವದ ಹಿಂದೂ ದೇಶದ ಮಹನೀಯರ ಅಭಿಪ್ರಾಯಕ್ಕೆ ಅನುಸಾರವಾದುದು ಎಂದು ವ್ಯಕ್ತವಾಗುತ್ತದೆ. ಹೀಗೆ ಸನಾತನ ಆಚರಣೆಯು ವೀರಶೈವರಲ್ಲಿ ಇರುವ ಬಗ್ಗೆ ಇನ್ನೂ ಲೇಖನಗಳನ್ನು ಆಗಾಗ ಪ್ರಕಟಿಸಲಾಗುವುದು. (ಸಂ. ೫೪-೫೫)

# ಲಿಂಗಪೂಜೆ

ಹಿಂದೂ ದೇಶದಲ್ಲಿ ಶೈವ ದೇವಸ್ಥಾನಗಳು ಬಹಳವಾಗಿ ಇವೆ. ಆ ದೇವಸ್ಥಾನಗಳಲ್ಲಿ 'ಶಿವ' ಎಂಬ ದೇವನನ್ನು ಲಿಂಗರೂಪದಲ್ಲಿ ಪ್ರತಿಷ್ಠೆ ಮಾಡಿರುತ್ತಾರೆ. ಆ ಲಿಂಗದ ಮುಂದೆ ನಂದಿ (ಬಸವ) ವಿಗ್ರಹವೂ ಇರುತ್ತದೆ. ಶಿವನು ಇಪ್ಪತ್ತೈದು ಲೀಲೆಗಳನ್ನು ಮಾಡಿದನೆಂದೂ ಶೈವಾಗಮಗಳೇ ಮೊದಲಾದವು ಹೇಳುತ್ತವೆ. ಆ ಲೀಲೆಗಳಲ್ಲಿ ಅನೇಕ ಲೀಲೆಗಳು ಮನುಷ್ಯರಂತೆ ಆಕಾರ ಧರಿಸಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಮಾಡಿದವುಗಳಿವೆ. ಆಗ ಯಾವ ಆಕಾರದಲ್ಲಿ ಕಾಣಿಸಿಕೊಂಡನೋ ಆ ಆಕಾರವನ್ನು ತೋರಿಸುವ ಪ್ರತಿಮೆಗಳೂ ಪಟಗಳೂ ಕಾಣಬರುತ್ತಿರುವುವಾದರೂ ಅವುಗಳನ್ನು ಪೂಜಿಸುವುದಕ್ಕಿಂತಲೂ ಲಿಂಗ ರೂಪದಲ್ಲಿ ಶಿವನನ್ನು ತೋರಿಸುವ ದೇವಾಲಯಗಳೂ ಪೂಜಿಸುವ ಜನರು ಹೆಚ್ಚಾಗಿದ್ದಾರೆ. ಹೀಗೆ ಶಿವನನ್ನು ಹಸ್ತ ಪಾದಾದಿ ಅವಯವಗಳುಳ್ಳ ಮೂರ್ತಿಯನ್ನಾಗಿ ಪೂಜಿಸುವುದಕ್ಕಿಂತಲೂ ಲಿಂಗರೂಪದಲ್ಲಿ ಪೂಜಿಸುವ ಪದ್ಧತಿಯು ಏಕೆ ಹೆಚ್ಚಾಗಿ ಪ್ರಚಾರವಾಯಿತೆಂಬುದನ್ನು ತಿಳಿದುಕೊಳ್ಳುವುದು ಒಂದು ಧಾರ್ಮಿಕ ಜಿಜ್ಞಾಸವಾಗಿಯೇ ಇದೆ.

ಶಿವನ ಲೀಲೆಗಳಲ್ಲಿ ಲಿಂಗೋದ್ಭವಲೀಲೆ (ಮಹಾಲಿಂಗಲೀಲೆ) ಎಂಬುದೊಂದಿದೆ. ಈ ಲೀಲೆಯೇ ಇಪ್ಪತ್ತೈದು ಲೀಲೆಗಳಲ್ಲಿ ಕಡೆಯದು ಎಂದು ಸೂಕ್ಷ್ಮಾಗಮವು ಹೇಳುತ್ತಿದೆ. ಧ್ಯಾನ, ಪೂಜೆಗಳಿಗೋಸ್ಕರ ಜ್ಯೋತಿರಾಕೃತಿಯಾಗಿ ಲಿಂಗವು ಉದ್ಭವವಾಯಿತೆಂದೂ ಅದರಿಂದ ತಿಳಿಯಬರುತ್ತದೆ.

ಲೀಲೆಗಳಲ್ಲಿ ಮೊದಲನೆಯ ಸೋಮಧಾರಿ ಮೊದಲುಗೊಂಡು ಲಿಂಗೋದ್ಭವ ಅಂತ್ಯದವರೆವಿಗೂ ಮಹೇಶ್ವರ ರೂಪಗಳೆಂದು ತಿಳಿಯಲ್ಪಟ್ಟಿವೆ.

ನಿರಾಕಾರ ಶಿವನು (ಪರಶಿವ) ಶಿವ, ಸದಾಶಿವ, ಮಹೇಶ–ಎಂಬ ಮೂರು ರೂಪಗಳನ್ನು ತಾಳಿದನೆಂದೂ ಇವುಗಳಿಗೆ ತತ್ತ್ವ ಎಂದು ಕರೆಯುತ್ತಾರೆ ಎಂದೂ—ಶಿವತತ್ತ್ವ ಒಂದೇ ಇದ್ದು ಅದು ಚಿತ್ ಶಕ್ತಿಯೊಡನೆ ಕೂಡಿದೆ. ಸದಾಶಿವ ತತ್ತ್ವವು ಶಿವ ಸಾದಾಖ್ಯ, ಅಮೂರ್ತ ಸಾದಾಖ್ಯ, ಮೂರ್ತ ಸಾದಾಖ್ಯ, ಕರ್ತೃ ಸಾದಾಖ್ಯ, ಕರ್ಮ ಸಾದಾಖ್ಯ ಎಂಬ ಐದು ವಿಧವಾಗಿ ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬ ಐದು ವಿಧ ಶಕ್ತಿಗಳೊಡನೆ ಕೂಡಿಕೊಂಡಿರುತ್ತದೆ. ಇವುಗಳಲ್ಲಿ ಕರ್ಮ ಸಾದಾಖ್ಯ ರೂಪವೇ ಮೇಲೆ ಹೇಳಲ್ಪಟ್ಟ ಮಹೇಶ್ವರ ರೂಪ ಅಥವಾ ತತ್ತ್ವ ಎನಿಸಿಕೊಂಡು, ಅದರಿಂದ ಇಪ್ಪತ್ತೈದು ಲೀಲೆಗಳು ಆಗಿವೆ ಎಂದೂ-ವಾತುಲಾಗಮವು ಹೇಳುತ್ತದೆ. (ಇವಲ್ಲದೆ ಶಿವನಿಂದ ಇನ್ನೂ ಅನೇಕ ಲೀಲೆಗಳಾಗಿವೆ. ಆದರೆ ಇವು ಮುಖ್ಯವೆಂದು ಭಾವಿಸಲ್ಪಟ್ಟಿವೆ.)

ಇವುಗಳಲ್ಲಿ ಶಿವತತ್ತ್ವವು ನಿಷ್ಕಲ ಅಥವಾ ಪರ, ಸದಾಶಿವತತ್ತ್ವವು ಸಕಲ ನಿಷ್ಕಲ ಅಥವಾ ಸೂಕ್ಷ್ಮ, ಮಹೇಶ್ವರತತ್ತ್ವವು ಸಕಲ ಅಥವಾ ಸ್ಥೂಲ ಎಂದು ತಿಳಿಯಲ್ಪಟ್ಟಿವೆ.

ಸದಾಶಿವತತ್ತ್ವ ಅಥವಾ ಸಕಲ ನಿಷ್ಕಲರೂಪವೇ ಲಿಂಗ-ಇದು ಸೂಕ್ಷ್ಮವೆಂದೂ ಜ್ಯೋತಿರೂಪವಾದ ನಿರಾಕಾರವೆಂದೂ ಇದರಿಂದಲೇ ಜಗತ್ತು ಮುಂದೆ ತೋರಿತೆಂದೂ ಕಡೆಗೆ ಇದರಲ್ಲಿಯೇ ಲಯವಾಗುವುದೆಂದೂ ಆದುದರಿಂದಲೇ ಇದಕ್ಕೆ ಲಿಂಗ ಎಂಬ ಹೆಸರು ಬಂದಿತೆಂದೂ ಲಿಂಗ ಎಂದರೆ 'ಲಯಗಮನ' ಎಂಬ ಅರ್ಥವೇ ಎಂತಲೂ ಅದೇ ಆಗಮವು (ತತ್ತ್ವ ಭೇದ ಪಟಲ) ಹೇಳುತ್ತದೆ. (ಇಲ್ಲಿ ಇದುವರೆಗೆ ಹೇಳಿದ ವಿಷಯಗಳು ಆಗಮಗಳಿಂದ ಮಾತ್ರ ತಿಳಿಯಲ್ಪಡತಕ್ಕುವುಗಳೆಂದು ಭಾವಿಸಬಾರದು. ಉಪನಿಷತ್ತುಗಳಿಂದಲೂ ವೇದವ್ಯಾಸರ ಪುರಾಣಗಳಿಂದಲೂ ಹೀಗೆಯೇ ಸರಿ ಎಂದು ಗೊತ್ತಾಗುತ್ತದೆ. ಪದ್ಮ ಪುರಾಣದಲ್ಲಿ

ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ
ಆಲಯಃ ಸರ್ವಭೂತಾನಾಂ ಲಯನಾಲ್ಲಿಂಗ ಮುಚ್ಯತೇ

ಎಂಬ ಶ್ಲೋಕವಿದ್ದು ಇದರಲ್ಲಿ ಲಿಂಗವು ಆಕಾಶದಂತೆ ನಿರಾಕಾರವಾದ ಬ್ರಹ್ಮಾಂಡ ಸ್ವರೂಪವೆಂದೂ ಸರ್ವಭೂತಗಳ (ಭೂಮಿ ಮೊದಲಾದವುಗಳ) ಉತ್ಪತ್ತಿ, ಸ್ಥಿತಿ, ಲಯ ಸ್ಥಾನವೆಂದೂ ಹೇಳಲ್ಪಟ್ಟಿರುವುದು ಈ ಹೇಳಿಕೆಗೆ ಒಂದು ದೃಷ್ಟಾಂತವಾಗಿದೆ).

ಈಗ ನಾವು ಬಯಲಿನಲ್ಲಿ ಕೂತುಕೊಂಡು ಮೇಲೆ ಕೆಳಗೆ ನೋಡಿದರೆ ಭೂಮಿಯೇ ಪೀಠವೆಂದೂ ಆಕಾಶವೇ ಹೊದಿಕೆಯೆಂದೂ ಈ ವ್ಯಾಪನೆಯ ರೂಪವೂ ಲಿಂಗಾಕಾರವೇ ಎಂದೂ ನಮಗೆ ಚೆನ್ನಾಗಿ ತಿಳಿಯುವುದರಿಂದ ಲಿಂಗರೂಪವು ಬ್ರಹ್ಮಾಂಡರೂಪ ಅಥವಾ ಜಗದ್ರೂಪ ಎಂದು ತಿಳಿಯುವುದಕ್ಕೆ ಯಾವ ಅನುಮಾನವೂ ಬಾರದೆ ಪ್ರತ್ಯಕ್ಷ ಪ್ರಮಾಣವು ಇರುವುದರಿಂದ ಇದಕ್ಕಾಗಿ ಯಾವ ಶಾಸ್ತ್ರ, ಪುರಾಣ, ಇತಿಹಾಸ, ವೇದ ಉಪನಿಷತ್ತು ಮುಂತಾದುವುಗಳನ್ನು ಹುಡುಕಿ ತೆಗೆಯುವುದು ಅವಶ್ಯವಿಲ್ಲ. ಈ ಕಾರಣದಿಂದ ಧ್ಯಾನಪೂಜೆಗಳಿಗಾಗಿ ಲಿಂಗವನ್ನು ಪೂರ್ವಿಕ ಮಹನೀಯರು ಏರ್ಪಡಿಸಿಕೊಂಡರೆಂದು ನಿರ್ಧರಿಸಲಿಕ್ಕೆ ಕೊರತೆಯೇನೂ ಬಾರದು. (ಲಿಂಗಾಕಾರವು ಗೋಳಕಾಕಾರವೆಂದು ತಿಳಿಯುವುದೇ ಮುಖ್ಯವಾದುದು.)

ಮಹೇಶ್ವರರೂಪದ ಕಡೆಯಲೀಲೆಯ ರೂಪವು 'ಲಿಂಗ' ಎಂದೂ ಸದಾಶಿವ ತತ್ತ್ವವು 'ಲಿಂಗ' ಎಂದೂ ಮೇಲೆ ವಿವರಿಸಿದಂತೆ ತಿಳಿಯಬರುವುದರಿಂದ ಲಿಂಗವು ಪೂಜೆಗಾಗಿ ಸಿಕ್ಕಿರುವ ನಿರಾಕಾರದ ಒಂದು ಸಕಾರರೂಪವೆಂದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ದೆಸೆಯಿಂದಲೇ-

ಅತೋಯಜೇತ್ ಸದಾಲಿಂಗಂ ಸರ್ವಕಾರಣ ಕಾರಣಂ
ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ
ಜ್ಯೋತಿರ್ಮಯಂ ನಿರಾಲಂಬಂ ಸರ್ವಾಧಾರ ಮನೂಪಮಂ

ಎಂದು ಸೂಕ್ಷ್ಮಾಗಮದಲ್ಲಿ (೩ನೆಯ ಪಟಲ ಶ್ಲೋಕ ೧೦-೧೧) ಹೇಳಲ್ಪಟ್ಟಿದೆ. ಲಿಂಗಕ್ಕೆ ಪರಬ್ರಹ್ಮ ಎಂತಲೂ ತಿಳಿದಿದ್ದಾರೆ.

ತಸ್ಮಾಲ್ಲಿಂಗಂ ಪರಬ್ರಹ್ಮ ಸದಾಧ್ಯಾಯಂತಿ ಯೋಗಿನಃ
ತ್ರೈಗುಣ್ಯ ವಿಷಯಾನ್ ದೇವಾನ್ ತ್ಯಕ್ತ್ವಾ ಲಿಂಗಂಚ ನಿರ್ಗುಣಂ
ಭಜಂತಿ ಪರಮಂ ಧಾಮಶ್ಚೈವಂ ವಿಶ್ವಾದಿ ಕಾರಣಂ

(ಅದೇ ಪಟಲ ಶ್ಲೋಕ ೨೪-೨೫)

ಸತ್ವರಜತಮಗುಣಗಳುಳ್ಳ ದೇವತಾ ಮೂರ್ತಿಗಳಿಗಿಂತಲೂ ಲಿಂಗಾಧ್ಯಾನವು ಉತ್ತಮವೆಂದು ಭಾವಿಸಿದ್ದಾರೆ. ಭೂಮಿ ಮೊದಲಾದವುಗಳು ಹುಟ್ಟುವುದಕ್ಕೆ ಮುಂಚೆ ಕಂಭದೋಪಾದಿಯಲ್ಲಿ ನಿರಾಕಾರ ಜ್ಯೋತಿ ಇದ್ದಿತೆಂತಲೂ ಇದನ್ನೇ ಮೂಲಸ್ತಂಭ ಎಂದು ಹೆಸರಿಸಿದ್ದರೆಂತಲೂ ಪೂರ್ವಿಕರ ತಿಳಿವಳಿಕೆ. ಇದರಿಂದಲೇ ಪೂರ್ವಿಕರ ಶಾಸನ ಗಳಲ್ಲಿ **"ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ"** ಎಂದು ಮೊಟ್ಟಮೊದಲು ಬರೆ ಯಲ್ಪಟ್ಟಿರುವುದು. ಇಂತಹ ಸ್ತಂಭಾಕಾರದ ಜ್ಯೋತಿ ರೂಪದ ಆಕಾರವನ್ನೇ ಲಿಂಗವು ತೋರಿಸುವುದೆಂದು ನಂಬಿ ನಿರಾಕಾರದ ಸಾಕಾರವೇ ಲಿಂಗ ಎಂದು ಪೂರ್ವಿಕರು ನಿರ್ಧರಿ ಸಿರುತ್ತಾರೆ.

ಶಿವಶರಣ ಶರಣೆಯರ ವಚನಗಳಲ್ಲಿಯೂ ಇದೇ ಅಭಿಪ್ರಾಯವಿದೆ- **"ಪಾತಾಳ ವಿತ್ತಿತ್ತ; ಶ್ರೀಪಾದಾವತ್ತತ್ತ ಬ್ರಹ್ಮಾಂಡವಿತ್ತಿತ್ತ ಮಣಿ ಮುಕುಟವತ್ತತ್ತಿ ಚನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಳಕ್ಕೆ ಬಂದು ಚುಳುಕಾದಿ ರಯ್ಯ"**-ಇಲ್ಲಿ ಪಾತಾಳಕ್ಕಿಂತಲೂ ಕೆಳಗೆ ಬ್ರಹ್ಮಾಂಡಕ್ಕಿಂತಲೂ ಮೇಲೆ ನಿರಾ ಕಾರನಾಗಿ ವ್ಯಾಪಿಸಿ ದೊಡ್ಡವನಾಗಿರುವ ನೀನು (ಬ್ರಹ್ಮರೂಪ) ನನ್ನ ಕೈಗೆ ಬಂದು ಬೊಗಸೆಯೊಳಗೆ ಸಿಕ್ಕಿದಿರಯ್ಯ ಎಂದರೆ ಪೂಜಿಸಿಕೊಳ್ಳುವ ಲಿಂಗವಾದಿರಯ್ಯ ಎಂಬ ತಾತ್ಪರ್ಯವಿದೆ.

ಹೀಗೆ ಆಗಮಗಳಲ್ಲಿ ಹೇಳಲ್ಪಟ್ಟ ಲಿಂಗರೂಪವೂ ಶಿವಶರಣರು ತಿಳಿದುಕೊಂಡ ಲಿಂಗರೂಪವೂ ಒಂದೇ ಆಗಿದೆ. ನಿರಾಕಾರ ಶಿವನ ರೂಪವನ್ನು ಲಿಂಗರೂಪದಲ್ಲಿ ಪೂಜಿಸುವ ಪದ್ಧತಿಯ ಪ್ರಾಚೀನ ಕಾಲವನ್ನು ಶೋಧಿಸಲಿಕ್ಕೆ ಹೋದರೆ ಕೈಲಾಸದಲ್ಲಿ ಶಿವನು ದೇವನಾಗಿ ಮನುಷ್ಯರಂತೆ ಆಕಾರವುಳ್ಳವನಾಗಿ ಕಾಣಿಸಿಕೊಂಡಾಗ ಈ ಲಿಂಗ ಪೂಜೆಯ ಬೋಧೆಯನ್ನು ಮಾಡಿದನೆಂದು ತಿಳಿಯಲವಕಾಶವಿದೆ. ಆಗಮಗಳಲ್ಲಿ ಶಿವನು ಪಾರ್ವತಿಗೆ ಬೋಧೆ ಮಾಡಿದ ಹಾಗೆ ಲಿಂಗಪೂಜೆಯ ವಿಷಯಗಳಿವೆ. ಶಿವನು ಮಲಗಿ ದಾಗ ಪಾರ್ವತಿಯು ಕೂತುಕೊಂಡಿದ್ದಂತೆಯೂ, ಶಿವನು ಕೂತುಕೊಂಡಾಗ ಪಾರ್ವತಿ ನಿಂತುಕೊಂಡಿದ್ದಂತೆಯೂ ಇರುವ ಚಿತ್ರಗಳು ಹರಪ್ಪ-ಮೊಹಾಂಜೋದಾರೋ ಪಟ್ಟಣ ದಲ್ಲಿ ಸಿಕ್ಕಿರುವುದಾಗಿ ಮಾರ್ಷಲ್ ಸಾಹೇಬರು ಬರೆದಿರುವುದರಿಂದಲೂ ಈ ಪಟ್ಟಣವು ೫-೬ ಸಾವಿರ ವರ್ಷಗಳ ಹಿಂದಿನದೆಂದು ಗೊತ್ತಾಗಿರುವುದರಿಂದಲೂ ಆಗಮಗಳಲ್ಲಿ ಹೇಳಿ

ದಂತೆ ಶಿವನು ಲಿಂಗಪೂಜೆಯ ಬೋಧೆಯನ್ನು ಮಾಡಿದುದು ನಿಜವೆಂದು ಒಪ್ಪಿಕೊಳ್ಳ ವಂತೆ ಆಗಿದೆ. ಇದಲ್ಲದೆ ವ್ಯಾಸ ಋಷಿಯು ರಚಿಸಿದ ಪುರಾಣಗಳಲ್ಲಿಯೂ ಲಿಂಗಿಗಳು ಇದ್ದರೆಂದು ಹೇಳಲ್ಪಟ್ಟಿದೆ. 'ಶಿವಯೋಗೀಶ್ವರ' ಎಂಬ ಪ್ರತಿಮೆಯು ಹರಪ್ಪ-ಮೊಹಾಂಜೋದಾರೋ ಎಂಬಲ್ಲಿ ಇದ್ದು, ಆ ಮೂರ್ತಿಯ ಎಡಗೈಯಲ್ಲಿ ಲಿಂಗವಿರು ವುದರಿಂದ ಲಿಂಗಪೂಜಾಪದ್ಧತಿಯು ಕೈಲಾಸದ ಶಿವನಲ್ಲಿ ಇದ್ದಿತೆಂದು ವ್ಯಕ್ತವಾಗುವುದ ರಿಂದ ಈ ಪದ್ಧತಿಯು ೫-೬ ಸಾವಿರ ವರ್ಷಗಳ ಹಿಂದೆಯೇ ಇದ್ದಿತೆಂದೂ ಶಿವನೇ ಈ ವಿಷಯ ಪ್ರಥಮ ಬೋಧಕನೆಂದೂ ಗ್ರಂಥಗಳಲ್ಲಿ ಬರೆದಿರುವುದು ನಿಜವೆಂದೂ ಒಪ್ಪ ಬೇಕಾಗಿದೆ. ವೀರಶೈವವು ಪಾರ್ವತಿಗೆ ಮಂತ್ರದ ಹಾಸಿಗೆಯಲ್ಲಿ ಮಲಗಿದ್ದ ಶಿವನಿಂದ ಬೋಧಿಸಲ್ಪಟ್ಟುದೆಂದು ಜ್ಯೋತಿರ್ಮಯ ಶಾಂಭವ ಜ್ಞಾನ ದೀಕ್ಷಾ ಬೋಧೆ(ಪುಟ ೧) ಹೇಳುತ್ತದೆ.

ಹೀಗೆ ನಿರಾಕಾರ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವ ಪದ್ಧತಿಯು ಕೈಲಾಸದ ಶಿವನ ಕಾಲದಿಂದಲೂ ಬಂದಿದೆ. ಅವನೇ ಈ ವಿಷಯವನ್ನು ಬೋಧಿಸಿದ ಮೊದಲ ನೆಯ ಗುರು ಎಂದು ತಿಳಿದೇ ವೀರಶೈವರು ಕೈಲಾಸದ ಶಿವನಲ್ಲಿ ಗೌರವ ಭಾವವನ್ನಿ ಟ್ಟಿರುವರೇ ಹೊರತು ಬ್ರಹ್ಮ, ವಿಷ್ಣು ಶಿವ ಎಂಬ ಮೂರು ದೇವತೆಗಳ ಭಕ್ತರು ತಮಗಿಂತ ಭಿನ್ನವಾಗಿ ಅವರನ್ನು ತಿಳಿದು ಅವರ ಮೂರ್ತಿಗಳನ್ನು (ಪ್ರತಿಮೆ) ಪೂಜೆ ಮಾಡುವಂತೆ ಕೈಲಾಸದ ಶಿವನ ಮೂರ್ತಿಪೂಜೆ ಮಾಡುವವರಲ್ಲ. ಆದುದರಿಂದ ತ್ರಿಮೂರ್ತಿಗಳಲ್ಲಿ ಒಬ್ಬರ ಪೂಜಕರು ಇವರೆಂದು ವೀರಶೈವರ ಕಡೆಗೆ ನಿರ್ದೇಶಮಾಡಿ ಬೆರಳು ತೋರಿಸಿ ಹೇಳುವಂತಿಲ್ಲ.

ಕೈಲಾಸದ ಶಿವನು ಶ್ಮಶಾನದಲ್ಲಿ ಇದ್ದವನೆಂತಲೂ ಸೂತಕವುಳ್ಳವನೆಂತಲೂ ಅವನ ಪೂಜಕರು ಕೀಳರೆಂತಲೂ ಕೆಲವರು ತಿಳಿಯುತ್ತಾರೆ. ಭೈರವ ಲೀಲೆಯನ್ನು ತಾಳಿದ ಶಿವನು ರುಂಡಮಾಲೆಯನ್ನು ಧರಿಸಿರಬಹುದು; ಕಾಪಾಲಿಯಾಗಿರಬಹುದು; ಶ್ಮಶಾನ ದಲ್ಲಿರಬಹುದು. ಕಾಪಾಲಿಕ ಮತದವರು ಆ ಮೂರ್ತಿಯ ಪೂಜೆ ಮಾಡುತ್ತಾರೆ. ಅವರಿಗೆ ಆ ಮೂರ್ತಿಯ ವಿಷಯವು ಅನ್ವಯಿಸುವುದು. ಶಿವನು ಶಬರಲೀಲೆಯನ್ನು ಮಾಡಿದ್ದಾನೆ. ಶಬರರು ಆ ಮೂರ್ತಿಯ ಪೂಜೆಯನ್ನು ಮಾಡಬಹುದು. ಯಾವ ಯಾವ ಲೀಲೆಯೂ ಯಾರಿಗೆ ಸಂಬಂಧವೋ ಅವರವರು ಆಯಾ ಪೂಜೆಮಾಡಬಹುದು. ವೀರಶೈವರು ಶಿವಯೋಗಿಗಳೆಂದು ಗ್ರಂಥಗಳು ಹೇಳುವುದರಿಂದ ಶಿವ-ಯೋಗೀಶ್ವರ ಎಂಬ ಲೀಲೆಯನ್ನು ಅನುಕರಿಸುವವರಾಗಿದ್ದಾರೆ. ಭೈರವನಂತೆ ರುಂಡಮಾಲೆಯನ್ನು ಧರಿಸುವವರಲ್ಲ; ಶ್ಮಶಾನದಲ್ಲಿ ಇರುವವರಲ್ಲ; ಶಬರನಂತೆ ಧನುರ್ಧಾರಿಗಳಲ್ಲ; ಪ್ರಾಣಿ ಹಿಂಸೆ ಮಾಡುವವರು ಮೊದಲೇ ಅಲ್ಲ. ಇಂತಹ ಶಿವಭಕ್ತರನ್ನು ಕೀಳರೆಂದು ತಿಳಿಯು ವವರ ಜ್ಞಾನ ದೃಷ್ಟಿದೋಷವೇ ಹೊರತು ಮತ್ತೇನೂ ಅಲ್ಲ.

ಲಿಂಗವು ಬ್ರಹ್ಮ ಎಂದು ಮೇಲೆ ತೋರಿಸಲ್ಪಟ್ಟಿರುತ್ತದೆ. ವೀರಶೈವರು ನನ್ನ ತನುವು ಇಷ್ಟಲಿಂಗ, ನನ್ನ ಮನವು ಪ್ರಾಣಲಿಂಗ, ನನ್ನ ಆತ್ಮವು ಭಾವಲಿಂಗ ಎಂದು

ತಿಳಿಯುವುದರಿಂದ ಅಹಂ ಬ್ರಹ್ಮಾಸ್ಮಿ ಎಂದು ತಿಳಿಯುವ ಬ್ರಹ್ಮಜ್ಞಾನಿಗಳೂ ಇವರಾಗಿರುತ್ತಾರೆ. ಆದುದರಿಂದ ಸ್ವಸ್ವರೂಪ ಲಿಂಗಪೂಜೆಯು ಶಿವಯೋಗದ ಕ್ರಿಯೆಯೇ ಹೊರತು ಲೌಕಿಕ ಮನುಷ್ಯರು ತಮಗಿಂತ ಭಿನ್ನವಾಗಿ ತಿಳಿದು ಮಾಡುವ ಕರ್ಮದಂತಹ ಕರ್ಮವಲ್ಲ. ಆದುದರಿಂದ ಸ್ವಸ್ವರೂಪ ಲಿಂಗಪೂಜಾಬದ್ಧರಾದ ವೀರಶೈವರು ತಮ್ಮ ಪೂರ್ವಜನ್ಮದ ಪುಣ್ಯದಿಂದ ಲಿಂಗಪೂಜೆಯು ದೊರಕಿರುವುದೆಂದು ತಿಳಿದು ಆನಂದಿಸಿ ಲಿಂಗಪೂಜೆಯನ್ನು ಮಾಡಬೇಕು.

ಲಿಂಗವು ಬ್ರಹ್ಮಾಂಡದ ರೂಪವೆಂದು ತಿಳಿಯಬಂದಿರುವುದರಿಂದಲೂ ಬ್ರಹ್ಮಾಂಡವು ಎಲ್ಲಾ ಮನುಷ್ಯರಿಗೂ ಸಂಬಂಧಿಸಿಕೊಂಡೇ ಇರುವುದರಿಂದಲೂ ಲಿಂಗಪೂಜೆಯು ಜಗತ್ತಿನ ಜನರೆಲ್ಲರಿಂದಲೂ ಅಂಗೀಕರಿಸಲು ತಕ್ಕುದಾಗಿದೆ. ಯಾರಾದರೂ ಒಂದು ವ್ಯಕ್ತಿಯು ಕಲ್ಪನೆಮಾಡಿ ಬೋಧಿಸಿದ ಪೌರುಷ್ಯಭಾವದ ಮತವಾಗಿ ವೀರಶೈವವಿಲ್ಲ. ವಿಶ್ವ ವ್ಯಾಪಕ ಮತವಿದೆಂದು ನಿರ್ಧರಿಸಲನುಮಾನವೇನೂ ಇಲ್ಲ.

ಕೆಲವರು ಲಿಂಗವೆಂದರೆ ಶಿಶ್ನ ಎಂದು ಆಕ್ಷೇಪಿಸುತ್ತಾರೆ. 'ಲಿಂಗ' ಶಬ್ದದ ನಿರ್ವಚನವನ್ನು ಮೇಲೆ ಕೊಟ್ಟಿರುತ್ತದೆ. ಅದರ ಆಕಾರವೂ ಬ್ರಹ್ಮಾಂಡ ರೂಪವೆಂದು ಹೇಳಿದೆ. ಅದೇ ಆಕಾರವಾಗಿ ಶಿಶ್ನವಿರಬಹುದು. ಅದೇ ಆಕಾರವಾಗಿ ಬದನೆಯಕಾಯಿ ಇರಬಹುದು; ಅದೇ ಆಕಾರವಾಗಿ ಹೀರೆಯಕಾಯಿ ಇರಬಹುದು. ಆದ ಮಾತ್ರಕ್ಕೆ ಲಿಂಗವು ಬದನೆಯಕಾಯಿ, ಲಿಂಗವು ಹೀರೆಯಕಾಯಿ ಎಂದು ತಿಳಿದು ಪೂಜಿಸಲಿಕ್ಕೆ ಹೇಗೆ ಹೇಳಲ್ಪಟ್ಟಿಲ್ಲವೋ ಹಾಗೆ ಲಿಂಗವು ಶಿಶ್ನ ಎಂದು ತಿಳಿದು ಪೂಜಿಸಲಿಕ್ಕೆ ಹೇಳಲ್ಪಟ್ಟಿಲ್ಲ. ಇಂತಹ ಸ್ಥಿತಿಯಲ್ಲಿ ಲಿಂಗಕ್ಕೆ ಒಂದು ಅಪಾರ್ಥವನ್ನು ಕಲ್ಪಿಸಿ ಯೋಗ್ಯವಾದುವನ್ನು, ಅಯೋಗ್ಯವಾಗಿ ತಿಳಿದರೆ ಆ ದೋಷವು ಆ ರೀತಿ ತಿಳಿಯುವವನಿಗೆ ಬರುವುದೇ ಹೊರತು, ನಿಜವಾದ ಭಾವನೆಯವನಿಗೆ ಬರುವುದಿಲ್ಲ. ಆದರೆ ಪೂಜ್ಯವಸ್ತುವಾದ ಲಿಂಗವನ್ನು ಪೂಜಿಸುವವರ ಮನಸ್ಸನ್ನು ನೋಯಿಸುವಂತೆ ಅಪಾರ್ಥದಲ್ಲಿ ಮಾತನಾಡಿದವರಿಗೆ ಕಷ್ಟವು ಪ್ರಾಪ್ತವಾದ ಉದಾಹರಣೆ ಇದೆ. ಅದು ಧಾರ್ಮಿಕ ದೃಷ್ಟಿಯಿಂದ ವಿಚಾರ ಮಾಡಿದಾಗ ತೋರತಕ್ಕದೇ ಹೊರತು ಲೌಕಿಕ ದೃಷ್ಟಿಯಿಂದ ಒಂದಕ್ಕೊಂದು ಸಂಬಂಧವಿಲ್ಲದಂತೆ ಇರತಕ್ಕವುಗಳು.

ದೇವಸ್ಥಾನಗಳಲ್ಲಿ ಯೋನಿಯಾಕಾರದ ಪಾಣಿ ಬಟ್ಟಲಿನ ಮೇಲೆ ಬಾಣವು ಕೂಡಿಸಲ್ಪಟ್ಟಿರುವ ಲಿಂಗಗಳಿವೆ. ವೀರಶೈವರು ಪೂಜೆಗಾಗಿ ಇಟ್ಟುಕೊಂಡಿರುವ ಲಿಂಗಗಳು ಕಂಥೆಯನ್ನು ಧರಿಸಿದವುಗಳಾಗಿವೆ. ಈ ಎರಡು ವ್ಯತ್ಯಾಸ ಕಾರಣವನ್ನು ತಿಳಿಯುವುದು ಅವಶ್ಯಕವಾಗಿದೆ. ಕಂಥೆಯುಳ್ಳ ಲಿಂಗಗಳ ಒಳಭಾಗದಲ್ಲಿ ಪಾಣಿ ಬಟ್ಟಲು ಇರುವ ಲಿಂಗವಿದೆ. ಹಿಂದೆ ಹೇಳಿದಂತೆ ಶಕ್ತಿಯಿಂದ ಕೂಡಿದ ಶಿವ ಎಂಬ ಅಭಿಪ್ರಾಯವನ್ನು ಪ್ರಕಟಪಡಿಸುವುದಕ್ಕಾಗಿ ಶಕ್ತಿಯ ರೂಪವೇ ಸ್ತ್ರೀ ರೂಪ ಶಿವನ ರೂಪವೇ ಪುರುಷರೂಪ ಎಂದು ಪೂರ್ವಿಕರು ಭಾವಿಸಿದಂತೆ ಸ್ತ್ರೀ ಚಿಹ್ನೆಯಾದ ಯೋನಿಯನ್ನು

ಬುಡವಲ್ಲಿಯೂ ಪುರುಷ ಚಿಹ್ನೆಯನ್ನು ಮೇಲುಗಡೆಯಲ್ಲಿಯೂ ಇರುವಂತೆ ಮಾಡಿ ಲಿಂಗವನ್ನು ಏರ್ಪಡಿಸಿರುತ್ತಾರೆ.

ಒಂದು ಪರಮಾಣುವಿನಲ್ಲಿ ಧನಕಣ, ಋಣಕಣ ಎಂಬ ಎರಡು ಭಾಗಗಳಿದ್ದು ಧನಕಣವು ಮೇಲುಭಾಗದಲ್ಲಿ ಸ್ವಲ್ಪಮಟ್ಟಿಗೆ ಇದ್ದು ಕೆಳಭಾಗದ ಋಣಕಣವನ್ನೂ ಚಲನೆ ಮಾಡಿಸುವ ಶಕ್ತಿಯುಂಟಾಗಿದೆ ಎಂದು ಈಗಿನ ಶಾಸ್ತ್ರಕಾರರು (Scientists) ನಿರ್ಧರಿಸಿರುವಂತೆ ಧನಕಣವೇ ಪುರುಷ ಚಿಹ್ನೆಯಾಗಿಯೂ, ಋಣಕಣವೇ ಸ್ತ್ರೀ ಚಿಹ್ನೆಯಾಗಿಯೂ ಏರ್ಪಡಿಸಿ ಪೂರ್ವಿಕರು ಲಿಂಗರೂಪವನ್ನು ಏರ್ಪಡಿಸಿರುತ್ತಾರೆ. ಎಲ್ಲಾ ಪದಾರ್ಥಗಳಲ್ಲಿಯೂ ಶಕ್ತಿ ಇರುವುದೆಂದು ಈಗಿನ ಶಾಸ್ತ್ರ (Science) ನಿರ್ಧರಿಸಿದಂತೆ ನಿರಾಕಾರ ಮೂಲವಸ್ತು ಶಿವನಲ್ಲಿ ಶಕ್ತಿಯಿರುವುದೆಂದು ಕಂಡುಹಿಡಿದು, ಆ ಶಕ್ತಿಗೆ ಚಿತ್‌ಶಕ್ತಿ ಎಂದು ಹೆಸರಿಟ್ಟು ಅದರಿಂದ ಸದಾಶಿವ ತತ್ತ್ವವು ಉದಿಸಿತೆಂದೂ ಅದರಲ್ಲಿಯೂ ಶಕ್ತಿ ಉಂಟೆಂದೂ ವಿವರಿಸಿ ಹೇಳಿದ ಶಕ್ತಿ ವಿಶಿಷ್ಟ ಶಿವತತ್ತ್ವವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈಗಿನ ಶಾಸ್ತ್ರಕಾರರೂ ಪರಮಾಣುವಿನಲ್ಲಿನ ಋಣಕಣದ ಚಲನೆಯಿಂದ ಬೇರೆ ಬೇರೆ ಪರಮಾಣುಗಳು ಉತ್ಪತ್ತಿಯಾಗುತ್ತವೆ ಎಂದೂ ಅಣುಗಳು ಎರಡು, ಮೂರು, ನಾಲ್ಕು ಹೀಗೆ ಸೇರುವುದರಿಂದ ಬೇರೆ ಬೇರೆ ವಸ್ತುಗಳಾವುವುವೆಂದೂ ನಿರ್ಧರಿಸಿದ ಸಿದ್ಧಾಂತವೇ ಶಕ್ತಿವಿಶಿಷ್ಟ ಶಿವತತ್ತ್ವದ ಸಿದ್ಧಾಂತವಾಗಿದೆ. ಆದುದರಿಂದ ಶಕ್ತಿವಿಶಿಷ್ಟವಾದ ಲಿಂಗವು ನಿರಾಕಾರದ ಪ್ರತಿರೂಪವೇ ಎಂದು ತಿಳಿಯಲೇಬೇಕಾಗುತ್ತದೆ. ಈ ಮೇರೆಗೆ ದೇವಸ್ಥಾನದ ಲಿಂಗಗಳೂ ನಿರ್ಗುಣ ನಿರಾಕಾರರೂಪ ಎಂದೇ ನಿರ್ಧರವಾಗುತ್ತದೆ.

ವೀರಶೈವರು ಧರಿಸುವ ಲಿಂಗಗಳಲ್ಲಿ ಕಂಥೆ ಇರುವುದರಿಂದ ನಿರಾಕಾರವಾದ ಆಕಾಶವು ಭೂಮಿಯ ಪೀಠದೊಡನೆ ಯಾವ ದೃಶ್ಯವನ್ನು ತೋರಿಸುತ್ತದೆಯೋ ಅದೇ ದೃಶ್ಯವೇ ಅವರ ಲಿಂಗದಲ್ಲಿ ಇದೆ. ಆಕಾಶವು ನೀಲಿ ಬಣ್ಣವಾಗಿ ತೋರುವುದರಿಂದಲೂ ಮನುಷ್ಯರ ಕಣ್ಣಿನೊಳಗಿನ ಕನೀನಿಕೆಯು ನೀಲಿ ಬೆರಸಿದ ಕಪ್ಪು ಬಣ್ಣವಾಗಿದ್ದು ಹೊರಗಿನ ಪ್ರಕಾಶವನ್ನು ಗ್ರಹಿಸುವ ಮಧ್ಯದ ಹಾಹೆ(ಪಾಪೆ)ಯು ಚೈತನ್ಯರೂಪವೆಂದು ತಿಳಿಯುವಂತಾಗಿರುವುದರಿಂದಲೂ ಶಕ್ತಿ ಪೀಠವುಳ್ಳ ಲಿಂಗಕ್ಕೆ ನೀಲಿ ಬಣ್ಣ ಬೆರಸಿದ ಕಪ್ಪು ಕಂಥೆಯು ನಿರಾಕಾರ ರೂಪಿಸಲಿಕ್ಕೆ ಸರಿಯಾದುದೇ ಆಗಿದೆ. ಈ ಕಂಥೆಯು ಪ್ರಕಾಶವನ್ನು ಗ್ರಹಿಸುವಂತೆ ಹೊಳಪಾಗಿದ್ದು, ನೇತ್ರದ ಪ್ರಕಾಶವನ್ನು ಗ್ರಹಿಸಿ ಪ್ರತಿಬಿಂಬವಾಗಿ ನಿರಾಕಾರ ಸ್ವರೂಪವನ್ನು ದಹರಾಕಾಶದಲ್ಲಿ ರೂಪಿಸಿ ತೋರಿಸಲಿಕ್ಕೆ ಲಿಂಗವು ಒಂದು ಶ್ರೇಷ್ಠವಾದ ಸಾಧನವೆಂದು ನಿಶ್ಚಯಿಸುವಲ್ಲಿ ಬಾಧಕವೇನೂ ಇಲ್ಲ. ಕೆಲವರು ಅಂತರಂಗದ ಜ್ಯೋತಿರೂಪವನ್ನು ತಿಳಿಯುವುದಕ್ಕಾಗಿ ಗೆರೆಯ ಕಟ್ಟಿಗೆ (ರೂಲು ದೊಣ್ಣೆ, Cylinder) ಆಕಾರವುಳ್ಳ ಕಪ್ಪು ಬಣ್ಣ ಹಚ್ಚಿದ ಒಂದು ಕೊಳವೆಯನ್ನು ಸುಮ್ಮನೆ ನೋಡುತ್ತಿರುತ್ತಾರೆ ಎಂದು ತಿಳಿಯುತ್ತದೆ. ಅದಕ್ಕಿಂತಲೂ ಲಿಂಗವು ಉತ್ತಮವಾದ ಸಾಧನೆಯೆಂಬುದನ್ನು ನಾವು ಮನಗಾಣಬಹುದು.

ಈ ಕಾರಣಗಳಿಂದ ಲಿಂಗವನ್ನು ಪೂಜಿಸುವುದು ಮೂರ್ತಿಗಳ ಪೂಜೆಗಿಂತ ಉತ್ತಮವಾದುದು. ಪೂಜ್ಯ ಎಂಬ ಶಬ್ದವು ಪೂಜೆ ಎಂದಾಗಿ ಸೊನ್ನೆಗೆ ಪೂಜೆಯೆಂದು ಕರೆವುದು ಪೂರ್ವಿಕರ ರೂಢಿಯಿರುವುದರಿಂದ ಲಿಂಗಪೂಜೆ ಎಂಬ ಶಬ್ದವು ಲಿಂಗಶೂನ್ಯ (ನಿರಾಕಾರ ಲಿಂಗ) ಎಂಬ ಅಭಿಪ್ರಾಯವನ್ನು ಕೊಡುತ್ತದೆ. **'ಶೂನ್ಯ ಸಂಪಾದನೆ'** — ಎಂಬ ಹೆಸರು ಲಿಂಗಪೂಜೆಯ ಮಹತ್ವವನ್ನು ಕೂಡಿಸಿದುದು ಒಂದು ತಿಳಿಸುವ ಪುಸ್ತಕಕ್ಕೆ ಈ ದೆಸೆಯಿಂದಲೇ ಬಂದಿರಬೇಕಲ್ಲವೆ ?

ಲಿಂಗಪೂಜೆಗಾಗಿ ಕೂತುಕೊಂಡ ವೀರಶೈವರು ತಮ್ಮ ಎಡಗೈಯಲ್ಲಿ ಲಿಂಗವನ್ನು ಧರಿಸಿಕೊಂಡಾಗ ಯಾವ ರೀತಿ ಕಾಣುವುದೋ ಅದೇ ಪ್ರಮಾಣದ ಅಳತೆಯುಳ್ಳದ್ದಾಗಿ ಲಿಂಗವು ನಿರ್ಮಿಸಲ್ಪಟ್ಟಿರುವುದು, ಇದಕ್ಕೆ ಪಂಚಸೂತ್ರಲಿಂಗವೆಂಬ ಹೆಸರು. ಆದುದರಿಂದ ಅದು ಪೂಜಿಸುವವನ ಸ್ವಸ್ವರೂಪವೂ ಆಗಿದೆ. ಆತ್ಮಸ್ವರೂಪ ಎಂದು ಹೇಳಿಸಿಕೊಳ್ಳುತ್ತಲೂ ಇದೆ. ಆತ್ಮರೂಪ ಲಿಂಗದ ಪೂಜಾ ಕ್ರಿಯೆಯು ಆತ್ಮಾನುಸಂಧಾನಕ್ಕಾಗಿಯೇ—ತನ್ನ ತಾನು ತಿಳಿಯುವುದಕ್ಕೇ ಇದೆ. ಈ ದೆಸೆಯಿಂದಲೂ ಲಿಂಗಪೂಜೆಯು ಉತ್ತಮವು. ಆತ್ಮಜ್ಞಾನಿಗಳಾದ ಯೋಗಿಗಳಿಗೆ ಇದರ ಪೂಜೆಯು ಅವಶ್ಯಕವು.

ಯೋಗಿಗಳ ಧ್ಯಾನಪೂಜಾ ನಿಮಿತ್ತವಾಗಿಯೇ ಲಿಂಗವಿರುವುದೆಂದು ಆಗಮವು ಹೇಳುತ್ತದೆ. ನಿಜವನರಿದ ಯೋಗಿಗೆ ಯಾವ ಕರ್ಮವೂ ಇಲ್ಲವೆಂದು ನಿಜಗುಣ ಶಿವಯೋಗಿಗಳು ಹೇಳಿದಾಗ್ಯೂ–ಪರತರ ಶಿವಲಿಂಗವು ಎಳಸಿ ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿ ಯಜಿಸು ಎಂದೂ ಹೇಳಿರುವುದರಿಂದ ಲಿಂಗಪೂಜೆಯು ಕರ್ಮವಲ್ಲವೆಂದು ಅವರ ಅಭಿಪ್ರಾಯವೆಂಬುದು ಸ್ಪಷ್ಟವಾಗುತ್ತದೆ. ಅವರ ಅದ್ವೈತ ಬೋಧೆಯನ್ನು ಅಂಗೀಕರಿಸಿದ ವೀರಶೈವರು ಲಿಂಗಪೂಜೆಯನ್ನು ಅವಶ್ಯಕವಾಗಿ ಮಾಡಿಯೇ ತೀರಬೇಕು.

ಲಿಂಗಪೂಜೆಯನ್ನು ಮಾಡುವುದರಲ್ಲಿ ಉತ್ತಮ ವಿಧಾನವಾವುದು ಎಂಬುದನ್ನು ಲಿಂಗಪೂಜೆಯ ಆಕಾಂಕ್ಷಿಗಳು ತಿಳಿದಿರಬೇಕೆಂಬುದು ಸರಿಯಷ್ಟೆ. ಸಾಮಾನ್ಯವಾಗಿ ಲಿಂಗಕ್ಕೆ ಪಂಚವಿಧಪೂಜೆ, ಅಷ್ಟವಿಧಾರ್ಚನೆ ಷೋಡಶೋಪಚಾರ ಇವುಗಳೇ ಮುಂತಾದುವುಗಳ ಮೂಲಕವಾಗಿ ಅನೇಕರು ಮಾಡುತ್ತಿರುವುದರಲ್ಲಿ ಲಿಂಗವು ಆತ್ಮನಲ್ಲಿ ಹೇಗೆ ಸಂಬಂಧಿಸಲ್ಪಟ್ಟಿರುವುದೆಂಬ ಜ್ಞಾನಕ್ಕೆ ಹೆಚ್ಚು ಅವಕಾಶವಿಲ್ಲದಿರುವುದರಿಂದ ಅಂತಹ ಜ್ಞಾನವನ್ನು ಒಳಗೊಂಡಿರುವಂತೆ ಇರುವ ಲಿಂಗಪೂಜಾ ವಿಧಾನವೂ ವೀರಶೈವರಿಗೆ ಅತ್ಯಾವಶ್ಯಕವಾಗಿ ಬೇಕಾಗಿದೆ.

(ಸಂ. ೬೨–೬೩)

# ಲಿಂಗಪೂಜೆಯ ಉದ್ದೇಶ

"ಲಿಂಗಪೂಜೆಯ ಮಾಡುವುದು ಏತಕಯ್ಯಾ? ತನ್ನ ತಾನರಿವುದಕ್ಕೆ" ಎಂದು ಶ್ರೀ ಬಸವೇಶ್ವರರ ವಚನವಿದೆ. ಆ ಪ್ರಕಾರ ಲಿಂಗಪೂಜೆ ಮಾಡುವವರು ಸ್ವಸ್ವರೂಪವನ್ನು ತಿಳಿದು ಅನುಸಂಧಾನ ಮಾಡುವುದಕ್ಕೆ ಪ್ರಯತ್ನಪಡುವುದೇ ಬಹಳ ಉತ್ತಮವಾದುದು. "ಲಿಂಗರೂಪಂ ಜಗದ್ರೂಪಂ" ಎಂಬ ಆಗಮದ ಹೇಳಿಕೆಯ ಪ್ರಕಾರ ಲಿಂಗವು ಜಗತ್ತಿನ ರೂಪವಾಗಿ ಹೇಗೆ ಇದೆ ಎಂದು ತಿಳಿದಾಚರಿಸುವುದೂ ಲಿಂಗಪೂಜೆಯಲ್ಲಿ ಸೇರಿದ ವಿಷಯವೇ ಆಗಿದೆ. ಇವನ್ನೆಲ್ಲಾ ಯೋಚಿಸಿ ಲಿಂಗಪೂಜೆ ಮಾಡುವುದನ್ನು ಕಲಿಯಬೇಕು. ಈಗ ಪೂಜೆ ಮಾಡುವವರಲ್ಲಿ ಅನೇಕರು ಬರಿಯ ಹೊರಗಿನ ಅರ್ಚನೆ ಉಪಚಾರ ಇವುಗಳಿಗೆ ಮಾತ್ರ ಗಮನ ಕೊಡುತ್ತಾರೆ. ಆಡಂಬರದಿಂದ ಇವುಗಳನ್ನು ಮಾಡುತ್ತಾರೆ. ಇಷ್ಟೇ ಮಾಡುವುದರಿಂದ ವೀರಶೈವ ಧರ್ಮದ ಶಿವಪೂಜೆಯಾಗುವುದಿಲ್ಲ. ತಾನೊಬ್ಬನು ಬೇರೆ, ಲಿಂಗವು ಬೇರೆ ಎಂಬ ಭಾವನೆಯೇ ಈಗ ಹೆಚ್ಚಾಗಿರುತ್ತದೆ. ಈ ಭಿನ್ನ ಭಾವನೆಯು ಸರಿಯಾದುದಲ್ಲ. ಅಂಗ ಲಿಂಗ "ಸಂಗ" (ಸಮರಸ) ಆಗುವ ವಿಧಾನದ ಶಿವಪೂಜೆಯನ್ನೇ ಎಲ್ಲರೂ ಮಾಡಬೇಕು. ಈ ಕಡೆಗೆ ವೀರಶೈವರ ಗಮನವು ಹೆಚ್ಚು ಹೆಚ್ಚಾಗಿ ಬೀಳಬೇಕಾಗಿದೆ.

ಈಗ ಮಾಡುತ್ತಿರುವ ಬಾಹ್ಯದ ಉಪಚಾರದ ಪೂಜೆಯಲ್ಲಿ "ಅಷ್ಟವಿಧಾರ್ಚನೆ" "ಷೋಡಶೋಪಚಾರ" ಎಂದು ಎರಡು ವಿಧಗಳಿವೆ. ಎಂಟು ವಿಧವಾದ (ಅಷ್ಟವಿಧ) ಅರ್ಚನೆಯು ಅಭಿಷೇಕ ಎಂಬುದರಿಂದ ಆರಂಭವಾಗುತ್ತದೆ. ಅಭಿಷೇಕಕ್ಕೆ "ಅರ್ಚನೆ" ಎಂದು ಕರೆಯುವುದು ಬಳಕೆಯಲ್ಲಿ ಇದೆ. ಪೂಜ್ಯರಾದ ಸ್ವಾಮಿಗಳು ಮನೆಗೆ ಬಂದಾಗ ಪಾದಾರ್ಚನೆ ಮಾಡಬೇಕು ಎಂದು ಹೇಳುತ್ತಾರೆ. ಇಲ್ಲಿ ಪಾದಾರ್ಚನೆ ಎಂದರೆ ಪಾದಗಳನ್ನು ತೊಳೆಯುವುದು ಅಥವಾ ಪಾದಕ್ಕೆ ಅಭಿಷೇಕ ಮಾಡುವುದು ಎಂದು ಅರ್ಥ. ಈ ಪ್ರಕಾರವೇ ಅಷ್ಟವಿಧಾರ್ಚನೆಯು ಲಿಂಗಕ್ಕೆ ಮಜ್ಜನ ಮಾಡಿಸುವುದರಿಂದ ಆರಂಭವಾಗುತ್ತದೆ. "ಮಜ್ಜನಕ್ಕೆ ಎರೆವರಯ್ಯಾ" ಎಂಬ ಪ್ರಯೋಗವು ಶಿವಶರಣರ ಅನೇಕ ವಚನಗಳಲ್ಲಿ ಬಂದಿದೆ. ಈ ಪ್ರಯೋಗಕ್ಕೆ ಅಷ್ಟವಿಧದ ಅರ್ಚನೆ ಎಂಬುದಾಗಿ ತಿಳಿಯುವುದು ಅನೇಕ ಸಂದರ್ಭಗಳಲ್ಲಿ ಅವಶ್ಯಕವಾದುದಾಗಿದೆ. ಹೀಗೆ ಮಜ್ಜನ, ಗಂಧ ಧರಿಸುವುದು, ಅಕ್ಷತೆಯನ್ನು ಆರೋಪಿಸುವುದು, ಪತ್ರಿ ಪುಷ್ಪವನ್ನು ಧರಿಸುವುದು, ಧೂಪ ಹಾಕುವುದು, ದೀಪವನ್ನು ಬೆಳಗುವುದು, ನೈವೇದ್ಯವನ್ನು ತೋರಿಸುವುದು, ತಾಂಬೂಲವ ಕೊಡುವುದು ಇವೇ ಎಂಟು ಅರ್ಚನೆಯೊಳಗೆ ಸೇರುತ್ತವೆ. ಮಜ್ಜನವೆರೆಯುವುದು ಎಂಬ ಹೇಳಿಕೆಯಲ್ಲಿಯೇ ಈ ಎಂಟೂ ಕೂಡಿ ಹೋಗುವ ವಿಚಾರವು ವೀರಶೈವ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಆದುದರಿಂದ ಇದು ಅಷ್ಟವಿಧಾರ್ಚನೆಯು.

ಷೋಡಶೋಪಚಾರಗಳು ಎಂಬುದಾಗಿ ೧೬ ಉಪಚಾರಗಳನ್ನೂ ಲಿಂಗಪೂಜೆಯಲ್ಲಿ ಮಾಡುವ ಪದ್ಧತಿಯು ವೀರಶೈವರಲ್ಲಿ ಇದೆ. ವೀರಶೈವಾಮೃತ ಪುರಾಣ ಐನೆಯ ಕಾಂಡ ೯ನೆಯ ಸಂಧಿಯಲ್ಲಿ ಇದು ಹೇಳಲ್ಪಟ್ಟಿದೆ. ಅರ್ಘ್ಯ (ಮುಖ ತೊಳೆಯುವುದು), ಪಾದ್ಯ (ಕಾಲು ತೊಳೆಯುವುದು). ಆಚಮನ (ಬಾಯಿ ಮುಕ್ಕಳಿಸುವುದು), ಸ್ನಾನಾದಿ (ಮಜ್ಜನ), ದರ್ಪಣ (ಕನ್ನಡಿ ನೋಡುವುದು), ಧೂಪ (ಗಂಧ ದ್ರವ್ಯದ ಹೊಗೆ), ದೀಪ (ಆರತಿ), ಚಾಮರ (ಚವರಿ ಹಾಕುವುದು), ವ್ಯಜನ (ಬೀಸಣಿಗೆ), ಅರ್ಪಣ (ನೈವೇದ್ಯವನರ್ಪಿಸುವುದು), ಜಪ(ಮಂತ್ರವ ಜಪಿಸುವುದು) ಸ್ತೋತ್ರ (ಹೊಗಳುವುದು ಪದ್ಯ ಅಥವಾ ಶ್ಲೋಕಗಳಿಂದ), ವಂದನ (ನಮಸ್ಕಾರ ಮಾಡುವುದು), ಗೀತ (ಹಾಡುವುದು), ವಾದ್ಯ (ಗಂಟೆಬಾರಿಸುವುದೇ ಮುಂತಾದವು), ನಾಟ್ಯ (ಕುಣಿಯುವುದು). ಇವೇ ಹದಿನಾರು ಉಪಚಾರಗಳು. ಪೂಜ್ಯರಾದ ಸ್ವಾಮಿಗಳು ಮನೆಗೆ ಬಂದಾಗ ಅವರಿಗೆ ಮಾಡುವ ಉಪಚಾರಗಳಂತೆ ಈ ಹದಿನಾರು ಉಪಚಾರಗಳಿವೆ. ಇವುಗಳಲ್ಲಿ ಲಿಂಗಕ್ಕೆ ಆಚಮನದ ಉಪಚಾರವು ಬಂದಾಗ ಪೂಜೆ ಮಾಡುವವರ ಬಾಯಿ ಮುಕ್ಕಳಿಸಲಿಕ್ಕೆ ಹೇಳುತ್ತಾರೆ. ಇದು ಕೇವಲ ಅಸಂಗತ. ಪಾದ್ಯದಲ್ಲಿ ಪೂಜೆ ಮಾಡುವವರ ಪಾದವನ್ನು ಹೇಗೆ ತೊಳೆಸುವುದಿಲ್ಲವೋ ಹಾಗೆ ಆಚಮನ ಮಾಡುವಾಗ ಪೂಜೆ ಮಾಡುವವರು ಬಾಯಿ ಮುಕ್ಕಳಿಸಬೇಕಾದ ಅವಶ್ಯಕವಿಲ್ಲ. ಪೂಜ್ಯರಾದ ಸ್ವಾಮಿಗಳು ಬಂದಾಗ ಅರ್ಘ್ಯ ಪಾದ್ಯ ಆಚಮನ ಸ್ನಾನಾದಿಗಳು ಸ್ನಾನದ ಮನೆಯಲ್ಲಿಯೇ ನಡೆಯುತ್ತವೆ. ಈ ಉಪಚಾರಗಳನ್ನೆಲ್ಲಾ ಲಿಂಗಕ್ಕೆ ಮಾಡಬೇಕಾದರೆ ಮಂತ್ರಹೇಳಿ ಉದ್ಧರಣೆಯಿಂದ ನೀರು ಬಿಡುತ್ತಾರೆ. ಆಚಮನಕ್ಕೂ ಹೀಗೆಯೇ ಆಗಬೇಕು. ಪೂಜೆ ಮಾಡುವವರಿಗೆ ಈ ಉಪಚಾರಗಳಾಗಬಾರದು.

ಅಂತರಂಗದ ಅಷ್ಟ ವಿಧಾರ್ಚನೆ ಎಂದು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿದೆ. ಒಂದು ಕಡೆ ಕ್ಷಮೆ ಉಳ್ಳುದೇ ಅಭಿಷೇಕ; ಸಮಾಧಾನವೇ ಗಂಧ, ನಿರಹಂಕಾರವೇ ಅಕ್ಷತೆ; ವಿರತಿಯೇ ಪತ್ರ ಪುಷ್ಪ; ವಿಶ್ವಾಸವೇ ಧೂಪ, ಜ್ಞಾನವೇ ದೀಪ, ವಿಭ್ರಮಕ್ಕೆ ಆಸೆಪಡದೆ ತೃಪ್ತಿಯಿಂದಿರುವುದೇ ನೈವೇದ್ಯದ ಅಮೃತಾನ್ನ, ವಿಷಯಾರ್ಪಣವೇ ತಾಂಬೂಲ, ಹೀಗೆ ಎಂದು ಹೇಳಲ್ಪಟ್ಟಿವೆ.

ಏನಾದರೂ ಅಷ್ಟವಿಧಾರ್ಚನೆ ಮತ್ತು ಷೋಡಶೋಪಚಾರಗಳು ಪೂಜೆಮಾಡುವವನಿಗೆ ಭಿನ್ನ ರೂಪದಲ್ಲಿರುವ ಲಿಂಗಕ್ಕೆ ಹೊರಗಿನ (ಬಾಹ್ಯ) ಉಪಚಾರಗಳೇ ಹೊರತು ಅಂಗ ಲಿಂಗದ ಸಾಮರಸ್ಯವನ್ನು ತೋರಿಸುವುವುಗಳಲ್ಲ.

ವೀರಶೈವಾಮೃತ ಮಹಾಪುರಾಣದ ಐದನೆಯ ಕಾಂಡ "ದೇವವಿಂಶಿಕೆ" ಎಂಬ ಭಾಗದಲ್ಲಿ ದೇವಪೂಜೆಯಲ್ಲಿನ ಷೋಡಶೋಪಚಾರ ವಿಧಾನದ ಅಂತರಂಗದ ಷೋಡಶೋಪಚಾರ ಕ್ರಮವು ಹೇಳಲ್ಪಟ್ಟಿದೆ.

"ಆ ಪ್ರಕಾರ ಇಂತಪ್ಪ ದೇವತೆಗೆ ಆಸನಾದಿ ಉದ್ವಾಸಾಂತವ ಉಪಚಾರ ಕಲ್ಪನೆಗಳೆಂತೆಂದರೆ–ತನಗೆ ತಾನೇ ಆಧಾರವೆಂದು ತನ್ನಲ್ಲಿ ಅಧ್ಯಸ್ತವಾದ ಸರ್ವಪ್ರಪಂಚಕ್ಕೆ

ನಿಲಯುವೆಂದು ಕಾಂಬುದೇ ಆಸನವು". **"ಆತ್ಮಾಧಾರಧಾರಕಿ"** ಎಂದು ವ್ಯಾಪಕ ಸಂಬಂಧವಾದ ವಚನದಲ್ಲಿ **'ಆಧಾರಕ್ಕಾಧಾರವುತಾನೆ'** ಎಂಬ ಪ್ರಮಾಣ ಇರುವಲ್ಲಿ ಮುಂದೆ ಆ ದೇವತೆಯು ಸರ್ವ ಜಗತ್ತಿನಲ್ಲಿ ತುಂಬಿ ಚರಿಸಲ್ಕೆ ತೆರಹಿಲ್ಲದೆ ಆ ಸ್ಥಿರವಾದ ತೇಜಸ್ಸಮಗ್ರವೆಲ್ಲವೂ ಎಂದು ಕಾಣುವಲ್ಲಿ ಮಹದ್ಭಾಗ ಭೋಗಾದಿಗಳು ಮುಂದಿಲ್ಲದ ಕಾರಣ ಅರ್ಘ್ಯ ದ್ರವ್ಯ ಸಮರ್ಪಣೆ ಎಂಬುದು ಮೊದಲಾದ ಸಂಸ್ಕಾರ ಸಂಸ್ಪರ್ಶವಿಲ್ಲ ಮದರಿಂದ ಅದನ್ನು ತಿಳಿಯದೆಂದೆನಿಸಿಕೊಂಡೊಪ್ಪುವ ಪರದೇವತೆ (ಭಿನ್ನರೂಪ ಭಾವನೆ) ಯಲ್ಲಿ ಸಂತೋಷಿಸಿ ಶಕ್ತಿಸಹಿತವಾಗಿ ಆರೋಪಿಸಲ್ಪಟ್ಟು ಗುಣದ ಘನತರೈಶ್ವ ರ್ಯಾದಿ ದೇಶದಲ್ಲಿ ಸಕಲಸಮಾರಾಧನೆಗೆ ತಾನೆ ಯೋಗ್ಯವೆಂದು ಕಾಂಬುದೇ ಅರ್ಘ್ಯ ಪಾದ್ಯವು. **"ವಿಶ್ವಾಭೂತಾನಿ ತ್ರಿಪಾದ ಸ್ಯಾಮೃತಂ ದಿವಿ"** ಎಂಬ ಶೃತಿಯುಂಟಾದ ಕಾರಣ ದೃಷ್ಟವಾದ ವಿಶ್ವಪ್ರಪಂಚವೇ ದೇವತೆಯ ಪಾದವೆನಿಸಿ ಪ್ರಪಂಚೈಶ್ವರ್ಯವಂ ಮೀರಿದುದಾಗಿ ಕ್ಷೇಮ, ಅಭಯ, ಶಾಂತವೆಂಬ ತ್ರಿಪಾದವುಳ್ಳುದು ದೇವತೆ, ಎಂಬ ಜ್ಞಾನವೇ ಉಪಾಸ್ಯವು. 'ತತ್ಪ್ರಶಾಂತಾಗ್ರ' (ಎಂದರೆ ತತ್ಪದ ವಸ್ತು) ತಾಪತ್ರಯಾದಿ ಶ್ವನಿತ (ಎಂದರೆ ತ್ವಂ ಪದ ವಸ್ತು) ವಾದ, ತತ್ತ್ವಂ (ತತ್‌ತ್ವಂ ಎಂಬ) ಪದವು ನಿರ್ಮಲವಾದ ಮಂಗಲನು ತಾನೆನಿಸುವ ವಸ್ತುವೆ! ಆತ್ಮಸ್ವರೂಪವೆಂಬ ಬುದ್ಧಿ. ದೇವತೆಗೆ ಅದೇ ಶುಭ ಸ್ಥಾನವೆನಿಸುವ ಜಗತ್ತನ್ನು ವ್ಯಾಪಿಸುತ್ತ ತತ್ಕಾರಣವಾದ ಗುಣದಭ್ಯಾಸದಿಂದ ಮಿಕ್ಕಿರುವ ಶುದ್ಧ ಚಿದ್ದೇವತೆಗೆ ಅದೇ ವಸ್ತ್ರವು. ಸರ್ವಾವರಣ ವಾದ ತ್ರಿಗುಣಗಳಂ ಸೂಚಿಸುವ ಋಗ್ಯಜುಸ್ಸಾಮಗಳೆಂಬ ವೇದತ್ರಯಂಗಳನ್ನು ಹೀಗೆ ನಾಮ ರೂಪಾತ್ಮಕನೆನಿಸುವ ಪ್ರಪಂಚಗಳಂ ವ್ಯಾಪಿಸುತ್ತೆ ಮೆರೆವ ಚೈತನ್ಯ ಬ್ರಹ್ಮ ವೆಂಬುದೇ ಯಜ್ಞಸೂತ್ರವು. ಎಲ್ಲಾ ವಿಧದಿಂ ತಮ್ಮಲ್ಲಿ ಅಧ್ಯಸ್ತವಾದ, ದೇಹೇಂದ್ರಿ ಯಾದಿ ಅಪರಿಮಿತ ಲೋಕವನೊಳಗುಮಾಡಿಯೊಪ್ಪುವ. ನಿರ್ಲೇಪ ನಿರುಪಾಧಿಕವಾದ. ಸೊಗಸಿಗೆ ವಿಷಯುವೆನಿಸುವ, ಆ ಚೈತನ್ಯದೇವತೆ ಎಂಬುದೇ ಆಭರಣವು. ವಿಷಯ ಸುಖರೂಪಿಂದ ಪರಿಣಿತವಾಗಿರ್ದ ಪರಮಾನಂದರಸವಾದ ಸಕಲ ಜಗತ್ತಿನಲ್ಲಿ ಅಧಿ ವಾಸಿಸುವುದೆಂಬುದೇ ಗಂಧಾನುಲೇಪನವು. ಇಷ್ಟಾರ್ಥ ಸುಖ ಕಾರಣ ಸಂಪೂರ್ಣ ವಾದ ನಿಜಮುಳುಪೆಂ ಯಿಂ ಸಕಲವಂ ತುಂಬಿ ಅಧಿವಾಸಿಸುವುದೆಂಬುದೇ ಪುಷ್ಪವು ಶುದ್ಧ ಪ್ರಕಾಶ ಭಾವದಿಂ ಸರ್ವವಂ ಅಧಿವಾಸಿಸುವುದೆಂಬುದೇ ಧೂಪವು ಆ ತ್ರಿಗುಣಾ ತ್ಮಕವಾದ ಜಗತ್ತಂ ಹಬ್ಬಿವರ್ತಿ (ಬತ್ತಿ) ಯುಂ ಮಾಡಿ ಬೆಳಗುವ ನಿಜಪ್ರಕಾಶವು ತಾನೆಂಬುದೇ ದೀಪವು. ಭೋಗ್ಯವಾದ ಸರ್ವಲೋಕಗಳಂ ಸಾಕ್ಷಾತ್ಕರಿಸಿ ರೂಪಿನಿಂ ಭೂಮಂಡಲದಲ್ಲಿ ಭೋಗಿಸುವ ತನ್ನ ನಿಜಸುಖದಿಂದ ತಣಿದಾತ್ಮನೇ ತೃಪ್ತವೆನಿಸುವ ದೇವತೆ, ಎಂದು ಕಾಂಬುದೇ ನಿವೇದನವು. ಮೂಲಜ್ಞಾನದಿಂ ಪುಟ್ಟಿದ (ಸತ್ವ) ಕೇವಲ ಪ್ರಕಾಶದಲ್ಲಿ ಪ್ರವೃರ್ತಿಸದ (ರಜಸ್ಸು) ಮೋಹದ (ತಮಸ್ಸು) ಕ್ಲುಪ್ತಮಯುವಾದ ಸತ್ವ ರಜಸ್ತ ಮಂಗಳೇ ಪೂಗ (ಅಡಕೆ) ಪರ್ಣ (ಎಲೆ) ಚೂರ್ಣ (ಸುಣ್ಣ) ಗಳಾಗಿ ಈ ಗುಣ ದಿಂದ ಭಾಗಿಸುವ ಚೈತನ್ಯವೆಂಬುದೇ ತಾಂಬೂಲವು. ದೇವತೆಯೆಂದರೂ ತಾನೆಂದರೂ,

ಒಂದೇ ಎಂಬ ಬುದ್ಧಿಯನ್ನು ಆವರಿಸುವ ಭಾವವೇ ಪ್ರದಕ್ಷಿಣೆಯು. ವಂದಕ (ನಮಸ್ಕರಿಸುವವ)ನು, ವಂದ್ಯ (ನಮಸ್ಕರಿಸಿಕೊಳ್ಳುವವ)ನು, ಇವರೀರ್ವರ ಕೃತ್ಯತೆಯಂ ತೋರಿ, ವಂದ್ಯನಂ ಕುರಿತು ಜಗತ್ತಿನಲ್ಲಿ ವಿಶೇಷಿಸುವುದು ಪ್ರಮಾಣವಾಗಿಹುದು! ಇಲ್ಲಿಯೂ ವಿಶ್ವಾತ್ಮಕನು (ವಂದ್ಯ) ವಿದ್ಯಾಧಿಕ ಪರಮಾತ್ಮ (ವಂದಕ) ತಾನೆಂಬುದೇ ನಮಸ್ಕಾರವು. ಸರ್ವ ಪ್ರಪಂಚದಲ್ಲಿ ನಾನಾ ಪ್ರಪಂಚ ಭೇದವಳಿದ ಬ್ರಹ್ಮನೇ ನಿಜಾತ್ಮನಾಗಿ ತಾನುಳಿದಪದೆಂಬುದೇ ವಿಸರ್ಜನ ವಿಧಿಗಳು, ಎಲೈ ಕುಮಾರನೇ! ಷೋಡಷೋಪಚಾರವೇ ಬುದ್ಧಿಯು. ಈ ನಿಶ್ಚಯ ಮಾತ್ರದಿಂದೊಪ್ಪುವುದೇ ಉಪಾಸನವು. ಕೇಳೆಂದು ಹಲಗೆಯಾಚಾರ್ಯನು ನುಡಿದನು.

ವಸ್ತುನೋ ಯಸ್ಯ ಸಾರೇಣ ಧಾರಯತ್ಯುಚ್ಯತೇ ಜಗತ್ ।
ತಸ್ಯಾಚ್ಯುತತ್ವ ಸಂಧಾನಮುಪಚಾರಃ ಪ್ರಕೀರ್ತಿತಃ

"ಯಾವ ವಸ್ತುವಿಗೆ ಶ್ರೇಷ್ಠವಾದುದರಿಂದ ಜಗತ್ತು ಧರಿಸಲ್ಪಡುವುದೆಂದು ಹೇಳುವುದೋ ಅದಕ್ಕೆ ನಾಶರಹಿತ ಭಾವ ವಸ್ತುವಿನಲ್ಲಿ ಸಂಧಾನವೆಂಬುದೇ ಉಪಚಾರವೆಂದು ಹೇಳಲ್ಪಡುತ್ತದೆ."

ಈ ಪ್ರಕಾರವಾಗಿ ವಸ್ತುವಿನ (ಬ್ರಹ್ಮದ) ಸಾರದಿಂದ ಈ ಜಗತ್ತು ಧರಿಸಲ್ಪಡುತ್ತದೆ. ಈ ಧಾರಣೆಯು ನಾಶವಿಲ್ಲದೆ ನಡೆದಿದೆ ಎಂಬುದನ್ನು ಹೊಂದಿಸಿ ತೋರಿಸುವುದೇ ಉಪಚಾರ ಎಂಬುದಾಗಿ ಅದ್ವೈತಿಗಳು ತಿಳಿದುಕೊಂಡು ತಮ್ಮ ಅಂತರಂಗದ ಹದಿನಾರು ಉಪಚಾರಗಳನ್ನೂ ರಚಿಸಿಕೊಂಡಿರುತ್ತಾರೆ. ಈ ಹದಿನಾರು ವಿಧದ ಉಪಚಾರಗಳಾದರೋ ಬ್ರಹ್ಮಾಂಡ ಮತ್ತು ಆತ್ಮ ಇವರ ಹೊಂದಿಕೆಯಿಂದ (ಅನುಸಂಧಾನ) ಕೂಡಿದುದಾಗಿ ಇರುತ್ತವೆ. ನಮಸ್ಕಾರದಲ್ಲಿ ಪರಮಾತ್ಮನು ವಂದ್ಯ ತಾನು ವಂದಕ ಎಂದು ತಿಳಿಯಬೇಕಾಗಿದೆ. ಹೀಗೆ ಈ ವಿಚಾರವೂ ಕೂಡಾ ಬ್ರಹ್ಮಾಂಡ ಮತ್ತು ಆತ್ಮ (ತಾನು) ಇವು ಎರಡೆಂಬ ಭಾವಳಿಯನ್ನು ಮೊದಲು ಹೊಂದಿ ಆಮೇಲೆ ಒಂದುಗೂಡಿಸುವ ವಿಷಯವುಳ್ಳದೇ ಆಗಿದೆ. ದಕ್ಷಿಣಾ ಮೂರ್ತಿಯು ಷಣ್ಮುಖನಿಗೆ ಬೋಧಿಸಿದ ವೇದಾಂತದ ಅಭಿಪ್ರಾಯವು ಇಲ್ಲಿ ಹೇಳಲ್ಪಟ್ಟಿರುತ್ತದೆ. ದಕ್ಷಿಣಾಮೂರ್ತಿಯನ್ನು ತಮ್ಮ ಗುರುವೆಂದು ವೀರಶೈವರಲ್ಲಿ ಕೆಲವರು ಗುರುಸ್ತೋತ್ರವನ್ನು ಮಾಡುತ್ತಾರೆ. ಆದರೆ ದಕ್ಷಿಣಾಮೂರ್ತಿ ಸ್ತೋತ್ರವು ಅದ್ವೈತಿಗಳಿಗೆ ಸಂಬಂಧಿಸಿದುದಾಗಿದೆ. ಹೀಗೆ ತರ್ಕ ವಿಚಾರವಿಲ್ಲದೆ, ಆಚಾರಗಳು ಈಗ ಕೆಲವು ವೀರಶೈವರಲ್ಲಿ ರೂಢಿಯಾಗಲಿಕ್ಕೆ ಹತ್ತಿವೆ. ಇಂತಹವುಗಳನ್ನೆಲ್ಲ ವೀರಶೈವರು ಯೋಚಿಸಿ ತಮ್ಮ ಪರಿಶುದ್ಧವಾದ ನಿಷ್ಕಲ ಶಿವನನ್ನು ನಂಬಿದ ಆಚರಣೆಯನ್ನೇ ನಡೆಸುವವರಾಗಬೇಕು.

ವೀರಶೈವರಲ್ಲಿ ಅಂಗವು (ಶಕ್ತಿ) ಮತ್ತು ಲಿಂಗವೆಂದು ಎರಡಾಗಿ ಕಂಡರೂ ಅವೆರಡೂ ಒಂದೇ ವಸ್ತುವೆಂದು ತಿಳಿದಾಚರಿಸುವುದೇ ಸಾಮರಸ್ಯವೆಂದು ನಿಯಾಮಕವಿದೆ. ಈ ಅನುಸಂಧಾನದ ಕಡೆಗೆ ಅವರ ಗಮನವು ಹೆಚ್ಚಾಗಿ ಬೀಳಬೇಕಾಗಿದೆ.

ಉಡುತಡಿ ಮಹಾದೇವಿಯಕ್ಕನವರ ವಚನದಲ್ಲಿಯೂ ಮತ್ತು ಅಕ್ಕಮ್ಮಗಳು (ಎಲೇಶ್ವರದ ಕೇತಯ್ಯಗಳ ಪುಣ್ಯ ಸ್ತ್ರೀ ?) ಹೇಳಿದ ವಚನಗಳಲ್ಲಿಯೂ ಜಂಗಮಕ್ಕೆ ಭಕ್ತಿಯ ಉಪಚಾರವನ್ನು ತಾವು ಲಿಂಗರೂಪವಾಗಿ ಅನುಭವಿಸುವುದಕ್ಕೆ ಮುಂಚೆಯೇ ಮಾಡಬೇಕೆಂದು ಹೇಳಲ್ಪಟ್ಟಿದೆ (ಮಹಾದೇವಿಯಕ್ಕನ ವಚನಾರ್ಥ ೧೦೨ ನೆಯ ವಚನ ಮೈಸೂರು ಮುದ್ರಣ ಪ್ರತಿ).

ಆಸನ, ಮಜ್ಜನ, ವಸ್ತ್ರ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯಾರ್ಪಣ, ಪಾನೀಯ, ತಾಂಬೂಲ, ಹಾವುಗೆ, (ಪಾದುಕೆ) ಕೊಡುವುದು, ನಾದವ ಕೇಳಿಸುವುದು, ಆಭರಣವ ತೊಡಿಸುವುದು, ವಾಹನವನೇರಿಸುವುದು, ಹಸ್ತಪ್ರಕ್ಷಾಲನ ಈ ಹದಿನಾರು ಉಪಚಾರಗಳು ಲಿಂಗರೂಪಳಾದ ತನಗೆ ಮಾಡಿಕೊಳ್ಳುವುದಕ್ಕೆ ಮುಂಚೆಯೇ ಜಂಗಮಕ್ಕೆ ಮಾಡುವುದಾಗಿ ಮಹಾದೇವಿಯಕ್ಕನು ಹೇಳಿದ್ದಾಳೆ. ಅಕ್ಕಮ್ಮಗಳು ಮಜ್ಜನ, ಭೋಜನ, ಅಂದಳ (ವಾಹನ) ಸತ್ತಿಗೆ, ಚಾಮರ, ಆನೆ, ಕುದುರೆ, ಕನ್ನಡಿ, ಪರಿಮಳ (ಲೇಪನ), ಗಂಧ ಲೇಪನ, ಅಕ್ಷತೆ, ವಸ್ತ್ರ (ಕಪ್ಪಡ) ಪಾದುಕೆ, ತಾಂಬೂಲ, ಆಭರಣ, ಮಂಚ, ಸುಪ್ಪತ್ತಿಗೆ, ಸ್ತ್ರೀ ಸಂಸರ್ಗ ಈ ಹದಿನೆಂಟು ಭಕ್ತಿ ಉಪಚಾರಗಳನ್ನು ಹೇಳಿದ್ದಾಳೆ.

ಈ ಉಪಚಾರಗಳನ್ನು ಲಿಂಗರೂಪರಾದ ತಮಗೆ ಮಾಡಿಕೊಳ್ಳುವುದಾಗಲೀ, ಜಂಗಮಕ್ಕೆ ಮಾಡಿಸುವುದಾಗಲೀ ತಕ್ಕ ಅನುಕೂಲಗಳಿರುವವರಿಗೆ ಮಾತ್ರ ಸಾಧ್ಯವಾಗ ತಕ್ಕವುಗಳಾಗಿವೆ. ಸಾಮಾನ್ಯವಾಗಿ ಲಿಂಗಾಂಗ ಸಾಮರಸ್ಯವನ್ನು ತೋರಿಸುವ ಕೇವಲ ದಾಸೋಹಂಭಾವದ ವೃತ್ತಿಯವರಿಗಾಗಿ ಈ ಉಪಚಾರಗಳನ್ನು ನಡೆಸಲು ಸಾಧ್ಯವಾಗುವುದಿಲ್ಲ.

ಯಾವ ವಿಧವಲ್ಲಿ ಆಲೋಚನೆ ಮಾಡಿದರೂ ಮೇಲೆ ಕಂಡ ಷೋಡಶೋಪಚಾರಗಳು ಬಹಿರಂಗವಾಗಿ ಆಡಂಬರವನ್ನು ತೋರಿಸುವವುಗಳಾಗಿವೆ. ಆದುದರಿಂದ ಕೇವಲ ಲಿಂಗಾಂಗ ಸಾಮರಸ್ಯದ ಲಿಂಗ ಪೂಜಾಸ್ಥಿತಿಯನ್ನು ತಿಳಿದುಕೊಂಡು ಆಚರಿಸಿ ಲಿಂಗ ಪೂಜೆ ಮಾಡುವುದರ ಉದ್ದೇಶವು ತನ್ನ ತಾನರಿವುದಕ್ಕೆ ಎಂಬ ಶರಣರ ವಚನವನ್ನು ಪಾಲಿಸುವ ರೀತಿಯು ಕಡೆಗೆ ತಿರುಗಲೇಬೇಕಾಗಿದೆ. ಪೂರ್ವಿಕ ಶರಣರು ಆಚರಿಸಿ ನಡೆದ ರೀತಿಯಲ್ಲಿಯೇ ಆ ಲಿಂಗಪೂಜಾ ವಿಧಾನವು ಇರುತ್ತದೆ.

ಈ ಲಿಂಗಪೂಜೆಯು ಮುಖ್ಯ ಸೂತ್ರಗಳನ್ನು ಇಲ್ಲಿ ಸಂಕ್ಷೇಪವಾಗಿ ತೋರಿಸಬಹುದಾಗಿದೆ. ಇವರಲ್ಲಿ ಆಡಂಬರ ಮತ್ತು ಹೆಚ್ಚಿನ ವಿಷಯಗಳನ್ನು ಸೇರಿಸಿಕೊಳ್ಳಬೇಕೆಂಬ ಇಷ್ಟವುಳ್ಳವರು ಆ ರೀತಿ ಮಾಡಲಿಕ್ಕೂ ಬರುತ್ತದೆ.

ಮೇಲೆ ಹೇಳಿದಂತೆ ಅದ್ವೈತಿಗಳು ಮಾಡುತ್ತಿರುವ ಷೋಡಶೋಪಚಾರಗಳೇ ಮೊದಲಾದ ಅವರ ಪದ್ಧತಿಗೂ ವೀರಶೈವರ ಪದ್ಧತಿಗೂ ಇರುವ ಭೇದಗಳಲ್ಲಿ ಕೆಲವನ್ನಾದರೂ ವೀರಶೈವರು ತಿಳಿಯಬೇಕಾದುದು ಅವಶ್ಯಕವಾಗಿ ಇದೆ. (೧) ಅದ್ವೈತಿ

ಗಳು ತಿಳಿದಿರುವ ಪ್ರಕಾರ ಗುರುವು ಪರಬ್ರಹ್ಮನು. ಅವರಲ್ಲಿ ಗುರು, ಲಿಂಗ, ಜಂಗಮ ಎಂಬ ಮೂವರು ಪೂಜ್ಯ ವಸ್ತುಗಳಿಲ್ಲ. (೨) ಅವರು ದೇವನ ಉಪಾಸನೆ ಮಾಡುವಲ್ಲಿ ಯಾವ ದೇವನನ್ನಾದರೂ (ವಿಷ್ಣು ಮೊದಲಾಗಿ) ಪೂಜಿಸಬಹುದು. ವೀರಶೈವರಲ್ಲಿ ಕೇವಲ ನಿರಾಕಾರನಾದ ನಿಷ್ಕಲ ತತ್ವವನ್ನು ಲಿಂಗರೂಪದಲ್ಲಿ ಪೂಜಿಸಬೇಕೇ ವಿನಾ ಅನ್ಯ ದೇವತೆಗಳನ್ನು ಪೂಜಿಸಲೇಕೂಡದು. (೩) ಅದ್ವೈತಿಗಳು ಜಗತ್ತನ್ನು ಮಿಥ್ಯೆ ಎಂದು ತಿಳಿದು ಅವರಲ್ಲಿ ಬ್ರಹ್ಮನು ಅಧ್ಯಸ್ತ (ಒಳಗೆ ವ್ಯಾಪಿಸಿರುವವನು) ಎಂದು ತಿಳಿವುದೂ, ಜ್ಞಾನವಲ್ಲಿ ಸೇರಿದ ಅಂಶವಾಗಿದೆ ಎಂದು ತಿಳಿಯುತ್ತಾರೆ. ವೀರಶೈವರು ಈ ಜಗತ್ತು ನಿಷ್ಕಲವಾದ ಶಿವನ ಒಂದು ರೂಪವೆಂದೂ, ನಿಷ್ಕಲನಿಗೆ ನಾನಾ ರೂಪಗಳುಂಟೆಂದೂ ಒಪ್ಪುತ್ತಾರೆ. ಉಪನಿಷತ್ತುಗಳು ಇದಕ್ಕೆ ಸಮ್ಮತಿಯನ್ನು ಕೊಡುತ್ತವೆ. **"ಬ್ರಹ್ಮಣಃ ನಾನಾ ರೂಪಾಣಿ ಭವಂತಿ, ಬ್ರಹ್ಮಣಃ ತ್ರೀಣಿ ರೂಪಾಣಿ ಭವಂತಿ,** ಸಕಲಂ, **ಸಕಲನಿಷ್ಕಲಂ; ನಿಷ್ಕಲಂ ಚ"** ಎಂಬ ಉಪನಿಷತ್ ವಾಕ್ಯಗಳೂ ಇವೆ.

೪) ತಾನು 'ಬ್ರಹ್ಮ' ಎಂದು ಅದ್ವೈತಿಯು ಹೇಳಿದಂತೆ ವೀರಶೈವನು ತಾನು 'ಲಿಂಗ' ಎಂದು ಹೇಳುತ್ತಾನೆ. ಆದರೆ ಅದ್ವೈತಿಯು ಮನದ ನಿಧಿಧ್ಯಾಸಗಳಿಂದ ತಾನು ಬ್ರಹ್ಮ ಎಂದು ನಿಶ್ಚಯಿಸಬೇಕೆಂದು ಹೇಳಿದಂತೆ ವೀರಶೈವರು ಹೇಳುವುದಿಲ್ಲ. ಮನೋಬುದ್ಧಿ ಮೊದಲಾದ ಇಂದ್ರಿಯಗಳ ಸಮೂಹವೆಲ್ಲವೂ ಲಿಂಗರೂಪಗಳೆಂದೂ, ಜಗತ್ತಿನ ಅಂಶಗಳೆಲ್ಲವೂ ಲಿಂಗರೂಪಗಳೆಂದೂ, ಲಿಂಗವು ಪರಿಪೂರ್ಣವಾಗಿ ಎಲ್ಲೆಡೆಗಳೆಲ್ಲಿಯೂ ಇರುವುದೆಂದೂ **"ಪೂರ್ಣಸ್ಯ ಪೂರ್ಣಮಾದಾಯ ಪೂರ್ಣ ಮೇವಾ ಶಿಷ್ಯತೇ"** ಎಂಬ ಉಪನಿಷತ್ ಪ್ರಮಾಣದ ಪ್ರಕಾರ ನಂಬುವವರಾಗಿದ್ದಾರೆ. ಆದುದರಿಂದ ಬ್ರಹ್ಮೋಪಾಸನೆಯಲ್ಲಿ ಅವರಿಗೂ ಇವರಿಗೂ ಭೇದವಿದೆ.

೫) ತಾನು ಬ್ರಹ್ಮ ಎಂಬುದನ್ನು ಅದ್ವೈತಿಗಳಂತೆ ವೀರಶೈವರು ಒಪ್ಪಿಕೊಳ್ಳುತ್ತಾರೆ. ಆದರೆ ಮೇಲೆ ಕಂಡ ಷೋಡಶೋಪಚಾರಗಳಲ್ಲಿ ಹೇಳಿದಂತೆ ಬ್ರಹ್ಮಾಂಡವನ್ನು ಬ್ರಹ್ಮದಲ್ಲಿ ನಿಧ್ಯಾಭ್ಯಾಸ ಮಾಡುವುದೇ 'ಯೋಗ' ಎಂಬುದನ್ನು ವೀರಶೈವರು ಒಪ್ಪುವುದಿಲ್ಲ.

೬) ಅದ್ವೈತಿಗಳು ಉಪಾಸನಾಕ್ರಮದಲ್ಲಿ ಜೀವ ಈಶ ಎಂದು ಎರಡು ವಿಭಾಗ ಮಾಡಿ ಈಶನು ಸರ್ವಜ್ಞತೆ ಮೊದಲಾದ ಲಕ್ಷಣಗಳಿಂದ ಕೂಡಿದವನೆಂದೂ, ಜೀವನು ಕಿಂಚಿತ್‌ಜ್ಞ ಮೊದಲಾದ ಲಕ್ಷಣಗಳುಳ್ಳವನೆಂದೂ ತಿಳಿದು ಈಶನನ್ನು ಬ್ರಹ್ಮ ಎಂದು ಪ್ರತಿಪಾದಿಸುತ್ತಾರೆ. ವೀರಶೈವರು ಈ ಅಭಿಪ್ರಾಯವುಳ್ಳವರಲ್ಲ.

ಇವೇ ಮುಂತಾದ ಭೇದಗಳನ್ನು ತಿಳಿದುಕೊಂಡು ವೀರಶೈವರು ತಮ್ಮ ಲಿಂಗ ಪೂಜಾಕ್ರಮವನ್ನು ಇಟ್ಟುಕೊಳ್ಳಬೇಕಾಗಿದೆ. (ಸಂ. ೧೪೪೪–೧೪೫)

# ಶಿವಪೂಜೆಯ ವಿಧಾನ
## (ಇಷ್ಟಲಿಂಗ ಪೂಜೆಯ ಕ್ರಮ)

(ಭಕ್ತಸ್ಥಲ ಅಥವಾ ಸಾಮಾನ್ಯ ವೀರಶೈವರಿಗಾಗಿ)

ಸೂಚನೆ—ಸ್ಥೂಲ ತನುವಿಗೆ ಅಂಟಿದ ಬೆವರು ಮುಂತಾದ ಕಲ್ಮಷಗಳು ಹೋಗುವಂತೆ ಶಿರಸ್ಸು ಮೊದಲುಗೊಂಡು ಅಂಗಾಲುವರೆವಿಗೆ ಸ್ನಾನ ಮಾಡುವುದು. ಈ ಸ್ನಾನ ಮಾಡುವಾಗ ಇಷ್ಟಲಿಂಗ ಸ್ನಾನವೂ ತನ್ನ ಸ್ನಾನವೂ ಜೊತೆಯಲ್ಲಿಯೇ ನಡೆಯಬೇಕು. ದಿನಕ್ಕೆ ಒಂದು ಸಾರಿಯಾದರೂ ಶಿವಪೂಜೆಯೂ ಸ್ನಾನವೂ ಅವಶ್ಯಕ. ಆದರೆ ಸ್ನಾನ ಮಾಡುವುದರಿಂದಲೇ ನಾನು ಶುದ್ಧನೆಂದು ತಿಳಿಯಬಾರದು. ಶಿವಭಕ್ತನಿಗೆ ತಾನು ಶುದ್ಧ ಶಿವರೂಪನೆಂಬುದು (ಅಂತಃಶೌಚ) ಯಾವಾಗಲೂ ಇದೆ.

ಟಿಪ್ಪಣಿ: ವೀರಶೈವನಿಂದ ಪೂಜೆಯ ಕೈಗೊಳ್ಳುವ ಶಿವನು ಕೈಲಾಸದ ಪಾರ್ವತೀಪತಿಯಾದ ಶಿವನಲ್ಲ. ನಿರಾಕಾರದ ಸೂಕ್ಷ್ಮರೂಪನು. 'ಶಿವ' ಎಂಬುದು ಅವನ ಹೆಸರಲ್ಲ; ಶುದ್ಧ ರೂಪನಾದವನು ಶಿವನು ಎಂದರ್ಥ. 'ಅಣೋರಣೀಯಾನ್' ಎಂಬ ಪದದಿಂದ ಕರೆಯಲ್ಪಡುವ ಅಣುರೂಪನೇ ಶಿವನು.

ಮೊದಲು ಗುರುವನ್ನು ಸ್ತುತಿಸುವುದು.

ಗುರುವೆ ಮನುಜನೊಳಗಧಿಕನು<br>
ಗುರುವೇ ಕಣ್ಣೆದಿರಿರುವ ಮಹಾದೇವನೆ ತಾಂ ।<br>
ಗುರುವೇ ಭವವ ಪರಿಹರಿಪಂ<br>
ಗುರುವಂ ಸತತಂ ನುತಿಪೆನು ರಕ್ಷಿಸಲೆನ್ನಂ ॥

೧) ನಾನು ನಿರಾಕಾರರೂಪಾದ ಶಿವನನ್ನು (ಲಿಂಗರೂಪದಿಂದ) ಸಾಧಿಸುವುದಕ್ಕೆ (ಶಿರಸ್ಸಿನಲ್ಲಿನ ಪರಂಜ್ಯೋತಿಯ ಅನುಸಂಧಾನಕ್ಕೆ) ಶಿವಪೂಜೆಯ ಮಾಡಲುಳ್ಳವನು.

ಟಿಪ್ಪಣಿ—ನಿರಾಕಾರ ಶಿವನು ಬ್ರಹ್ಮಾಂಡದ ಆಕಾರದ ರೂಪವಾಗಿ ಸಾಕಾರ ರೂಪನಾಗಿ ಬಂದಾಗ 'ಸದಾಶಿವ' 'ಲಿಂಗ' 'ಬ್ರಹ್ಮ' ಎಂಬ ನಾಮಗಳಿಂದ ಕರೆಯಲ್ಪಡುತ್ತಾನೆ. "ಮಹತೋಪಮಹಿಯಾನ್" ಎಂದು ಕರೆಯುಲ್ಪಡುವವನೇ ಇವನು.

೨) ಅಂಗ ಮನ ಭಾವಗಳು (ಸ್ಥೂಲತನು ಸೂಕ್ಷ್ಮತನು ಕಾರಣತನಗಳು) ಶಿವನ ರೂಪವೆಂದು ಭಾವಿಸಿ ಕೇವಲ ನಿರಾಕಾರ ರೂಪವನ್ನು ಪ್ರತ್ಯಕ್ಷನೆಂದು ಸಾಧಿಸುವೆನು.

ಟಿಪ್ಪಣಿ—ಶಿವಪೂಜೆಯನ್ನು ಮಾಡುವುದಕ್ಕೆ ಹುಲ್ಲು, ತೆಂಗಿನಗರಿ, ಕಡ್ಡಿಗಳಿಂದ ಮಾಡಿದ ಚಾಪೆ. ಉಣ್ಣೆಯಿಂದ ಮಾಡಿದ ಬಿಳಿಯ ಕಂಬಳಿ. ನಾರು ವಸ್ತ್ರ ಮುಂತಾದು

ವುಗಳ ಮೇಲೆ ಕೂಡುವುದು ಅವಶ್ಯವು. ರೇಷ್ಮೆಯ ವಸ್ತ್ರ, ಚರ್ಮದ ಆಸನ ಮುಂತಾದ ಪ್ರಾಣಿಗಳ ಹಿಂಸೆಯಿಂದ ಒದಗುವುವೆಂಬ ನಂಬಿಗೆಯುಳ್ಳ ಆಸನಗಳ ಮೇಲೆ ಕೂಡ ಬಾರದು, ಬರಿಯ ಮಣೆಯಮೇಲೆ ಕೂಡುವುದಕ್ಕಿಂತಲೂ ಮೇಲೆ ಹೇಳಿದಂತೆ ಹುಲ್ಲು ಎಲೆ ಮುಂತಾದುವುಗಳು ಅವುಗಳಿಂದ ಸಿದ್ಧಪಡಿಸಿದ ಆಸನ ಮುಂತಾದುವನ್ನು ಮಣೆಯ ಮೇಲೆ ಹಾಕಿಕೊಳ್ಳುವುದು ಬಹು ಉತ್ತಮವಾದುದು.

ಶಿವಪೂಜೆಯ ಮಾಡುವಾಗ ಉತ್ತರದಿಕ್ಕು, ಈಶಾನ್ಯದಿಕ್ಕು ಪೂರ್ವದಿಕ್ಕಿಗೆ ಅಭಿಮುಖವಾಗಿ ಕೂತುಕೊಳ್ಳಬೇಕು. ಆದರೆ ಪಶ್ಚಿಮ ದಿಕ್ಕಿಗೆ ಕೂಡುವುದು ಮಧ್ಯಮ. ದಕ್ಷಿಣದಿಕ್ಕು ಪ್ರವೃತ್ತಿಯ ಪರಿಣಾಮದ ಕೊನೆಯ ದಿಕ್ಕಾದುದರಿಂದ ಆ ದಿಕ್ಕಿಗೆ ಅಭಿಮುಖವಾಗಿ ಕುಳಿತು ಸಾಧಕರು ಶಿವಪೂಜೆಯ ಮಾಡಬಾರದು. ಮೊದಲು ಪೂಜಕನು ಅಂಗರೂಪನಾದುದರಿಂದ ಈ ನಿಯಮವು ಬೇಕು.

೩) ಲಿಂಗದಲ್ಲಿ ಕಲೆಯನ್ನು ಸ್ಥಾಪಿಸುವುದು–ಶಿವನು ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿದವನು. ಅವನು ತನ್ನ ಸಿರಸ್ಸಿನಲ್ಲಿ ಕಲಾರೂಪಕನಾಗಿ ಬೆಳಗಿ ಬಿಂದುರೂಪನಾಗಿ ಕಣ್ಣಿನಲ್ಲಿ ತೋರಿ, ಓಂಕಾರಧ್ವನಿ ನಾದರೂಪನಾಗಿ, ಮುಖದಲ್ಲಿ ತೋರುತ್ತಾನೆ. ಶಿವನ ಕಲೆಯನ್ನು ತಲೆಯ ಪಶ್ಚಿಮ ಭಾಗದಿಂದ ನಡುನೆತ್ತಿಗೂ ಅಲ್ಲಿಂದ ಕಣ್ಣಿನ ಮುಖಾಂತರ ಇಷ್ಟಲಿಂಗಕ್ಕೂ ತರುವೆನೆಂದು ಕರಡಿಗೆಯ ಬಾಯಿ ತೆರೆದು (ವಸ್ತ್ರದ ಹೊದ್ದಿಕೆಯ ತೆಗೆದು) ಆ ತಲೆಯನ್ನು ಲಿಂಗದಲ್ಲಿ ಸ್ಥಾಪಿಸುವುದು.

ಟಿಪ್ಪಣಿ—ಗುರುವು ಮೊದಲು ಈ ಕಾರ್ಯವನ್ನು ಮಾಡಿದ್ದರೂ ಪೂಜಕನು ಪೂಜಿಸುವಾಗಲೆಲ್ಲಾ ಅದನ್ನು ಅಂಕುಶ ಮುದ್ರೆಯಿಂದ ಪಶ್ಚಿಮದ ಚಕ್ರದಿಂದ ಕಲೆಯನ್ನು ಸಾಧಿಸಿ ತಂದು ಲಿಂಗದಲ್ಲಿ ಕೂಡಿಸಬೇಕು.

ಶಿವಪೂಜೆ ಮಾಡುವುದಕ್ಕೆ ಸಿದ್ಧಾಸನ, ಪದ್ಮಾಸನಗಳಲ್ಲಿ ಕೂಡುವುದು ಉತ್ತಮ, ಸಾಮಾನ್ಯವಾಗಿ ಚಕ್ಕಳಬಕ್ಕಳ ಹಾಕಿಕೊಂಡು ಕೂಡುವುದೂ ಉತ್ತಮವೇ.

ಹಾಗೆ ಕೂತುಕೊಂಡು ಕರಡಿಗಿಯಿಂದ ಲಿಂಗವ ತೆಗೆದುಕೊಂಡು ಎಡ ಅಂಗೈಯಲು ತನ್ನ ಎಡಕ್ಕೆ ಲಿಂಗದ ಗೋಮುಖವು ಬರುವಂತೆ ಇಟ್ಟುಕೊಂಡು ಲಿಂಗವಿರುವ ಯನ್ನು ಗೋಮುಖದಂತೆ ಎಡಕ್ಕಿರಿಸಿಕೊಂಡು–

೪) ಮಜ್ಜನ (ಅಭಿಷೇಕ) "ಶಿವನಿಗೆ ನಮಸ್ಕಾರ" "ಮನಜ್ಜನಂಗೆಯ್ವೆ" ಎಂದು ಮಜ್ಜನವನ್ನು ಮಾಡುವುದು. ಈ ಮಜ್ಜನಕ್ಕೆ 'ಲೀಲಾಮಜ್ಜನ' ಎಂದು ಕೆಲವರು ಕರೆಯುತ್ತಾರೆ.

(ಪೂಜಕನು ಅಂಗ ಲಿಂಗ ಸಾಮರಸ್ಯ ಪಡೆದವನಾದ್ದರಿಂದ, ತನ್ನ ಪ್ರಾಣಲಿಂಗಕ್ಕೆ ಎದುರು ಮುಖವಾಗಿ ಕೈಯಿಂದ ಪ್ರಸಾದವನ್ನು ತನ್ನ ಮುಖದಲ್ಲಿ ಹೇಗೆ ಅರ್ಪಿಸುವನೋ ಹಾಗೆ ಪೂಜೆ ಮಾಡುವಾಗಲೂ ಪ್ರಾಣಲಿಂಗದ ರೂಪವೇ ಇಷ್ಟಲಿಂಗ ಎಂದು ಭಾವಿಸಿ ತನ್ನ ಪ್ರಾಣಲಿಂಗದ ಮುಖವು ಯಾವ ದಿಕ್ಕಿಗೆ ಇದೆಯೋ ಅದೇ ದಿಕ್ಕಿಗೆ ಇಷ್ಟಲಿಂಗದ ಮುಖವಿದೆ ಎಂದು ಪೂಜಾಕಾಲದಲ್ಲಿ ಭಾವಿಸಬೇಕು.)

ಅನಂತರ ಲಿಂಗವನ್ನು ಶುಭ್ರ ವಸ್ತ್ರದಿಂದ ಒರೆಸಿ ಲಿಂಗಕ್ಕೆ ಭಸ್ಮವ ಧರಿಸುವುದು ತಾನೂ ಹಣೆಗೊಮ್ಮೆ ಧರಿಸುವುದು.

ಭಸ್ಮವನ್ನು ತನುವಿನ ಮೇಲೆ ಉದರಿಸುವುದು (ಸ್ನಾನ) ಶರೀರದಲ್ಲೆಲ್ಲಾ ಲೇಪಿಸುವುದು (ಉದ್ಧೂಳನ) ಈ ಕಾರ್ಯಗಳನ್ನು ಅವಕಾಶವಿದ್ದರೆ ಮಾಡಬೇಕು.

೫) ನಮಸ್ಕಾರ ಮಂತ್ರ.

ಲಿಂಗದ ಮಧ್ಯದಿ ಜಗವುಂ ।
ಲಿಂಗದೊಳಂ ಮೂರು ಲೋಕ ಚರಮಚರಗಳುಂ ॥
ಲಿಂಗದೆ ನೆಲಸಿಹವೆಲ್ಲಂ ।
ಲಿಂಗದ ಹೊರಗಿಲ್ಲವೇನು ನಮಿಸುವೆನೀಗಳ್

ಲಿಂಗಕ್ಕೆ ಹಣೆಯು ಮುಟ್ಟಿ ನಮಿಸ್ಕರಿಸಿ ಕರಡಿಗೆಯೊಳಿಡುವುದು. ನೂಲಿನವಸ್ತ್ರದೊಳಗಡಗುವುದು (ರೇಷ್ಮೆಯ ವಸ್ತ್ರವು ಕೂಡದು).

ಟಿಪ್ಪಣಿ—ಹಣೆಯು ಮುಟ್ಟಿಸುವುದರಿಂದ ತನ್ನಲ್ಲಿನ ಹುಬ್ಬುಗಳ ನಡುವಿನ ಜ್ಞಾನ ಕಲೆಯು (ತಾನು ಶಿವನೆಂಬುದು) ಲಿಂಗಕ್ಕೆ ವ್ಯಾಪಿಸಿತೆಂದು ಭಾವಿಸುವುದೂ ಅವಶ್ಯಕವಾದುದು.

೬) ಓಂ.

(ಮೂಲ ಪ್ರಮಾಣನಾದವನುಳ್ಳ ಗಂಟೆಯು ಬಾರಿಸುವುದು) ಎಡಗಡೆಯು ಮೂಗಿ 'ಹಂ' ಎಂತಲೂ ಬಲಗಡೆ ಮೂಗಿನಲ್ಲಿ ಸಃ ಎಂತಲೂ ಉಚ್ಛ್ವಾಸ ನಿಶ್ವಾಸಗಳು (ಪೂರಕ ರೇಚಕಗಳು) ನಡೆವುವೆಂದು ತಿಳಿದು ಅವುಗಳನ್ನು ಸೋಹಂ ಎಂದು ನಿವೃತ್ತಿ ಮಾರ್ಗಕ್ಕೆ ತಿರುಗಿಸಿ ಅದೇ ಓಂಕಾರ ಧ್ವನಿಯಾಗಿ ಪರಿಣಮಿಸುವುದೆಂದು ಸಾಧನೆ ಮಾಡಬೇಕು. ಸೋಹಂ (ಇಲ್ಲಿ ಸ ಕಾರ ಹ ಕಾರಗಳನ್ನು ಬಿಟ್ಟರೆ) (ಓಂ) ಇದೇ ಉನ್ಮನಿಯು ನಿವೃತ್ತಿ ಮುಖ ಪ್ರಾಣಾಯಾಮ. ಬಲಗಡೆಯ ಉಸಿರನ್ನೂ ಎಡಗಡೆಯ ಉಸಿರನ್ನೂ ಮೇಲಕ್ಕೆ ಎತ್ತಬೇಕು. ಆಗ 'ಓಂ' ನಾದವು ತನ್ನಷ್ಟಕ್ಕೆ ತಾನೇ ಆಗುತ್ತದೆ.

ಓಂಕಾರವು ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿರುವುದೆಂದು ತಿಳಿವುದು. ಇದೇ ವೇದಗಳ ಮೂಲ ಪ್ರಥಮಸ್ವರ ಎಂದು ತಿಳಿಯಬೇಕು. ಒಂದೇ ವಸ್ತುವಿನ ಮೂರು ರೂಪಗಳು ಎಲ್ಲಿ ಕಾಣುವುವೋ ಅವೆಲ್ಲವೂ ಓಂಕಾರದ ರೂಪಗಳು.

ಮೇಲೆ ಕಂಡ ಓಂಕಾರದ ರೂಪಗಳೇ ಅಂಗ ಲಿಂಗಗಳೆಂದು ಭಾವಿಸುವುದು. ಈ ೬ ವಿಷಯಗಳು ಲಿಂಗಪೂಜೆಯ ಮೊದಲಿನ ಮುಖ್ಯ ಕಾರ್ಯಗಳು (ಸಂಖ್ಯೆಯ ಮುಂದೆ ಬರೆದವುಗಳು ಕನ್ನಡ ಭಾಷೆಯ ಮಂತ್ರಗಳು.)

## ಅಷ್ಟಾವರಣ

೧. **ಭಸ್ಮ** : ಭಸ್ಮದ ಗಟ್ಟಿಯನ್ನು ಎಡಗೈಯಲ್ಲಿ ಹಿಡಿದುಕೊಂಡು "ಇದು ಭಸ್ಮಜ್ಯೋತಿ, ಆತ್ಮಜ್ಯೋತಿ—ಆತ್ಮಜ್ಯೋತಿಯೇ ಇಲ್ಲಿ ಬಾ. ಸಂಪತ್ತನ್ನೂ ಕ್ರಿಯಾ

ಶಕ್ತಿಯನ್ನು ಒದಗಿಸು" ಎಂದು ಪ್ರಾರ್ಥಿಸುವುದು (ಭಸ್ಮದ ಮೇಲೆ ಓಂಕಾರವ ಬರೆದು ಉಪಚಾರವಾಗಿ ಪೂಜೆಯನ್ನು ಸಾಧ್ಯವಾದಷ್ಟು ಮಾಡುವುದು. ಸುಮ್ಮನೆ ಭಸ್ಮವ ಧರಿಸಿದರೂ ಆಗಬಹುದು.

ಬಲಗೈಯ ಮಧ್ಯದ ಬೆರಳುಗಳಿಗೆ ಭಸ್ಮವನ್ನು ಧರಿಸಿಕೊಂಡು ಹಣೆಯ ಮಧ್ಯದಲ್ಲಿ ಬಲಗಡೆಯಿಂದ ಎಡಗಡೆಗೆ ಬರುವಂತೆ ಮೂರು ಎಸಳು ಭಸ್ಮವನ್ನು ೩ ಸಾರಿ ಧರಿಸುವುದು.

ಟಿಪ್ಪಣಿ— ಮೂರೆಸಳು ಭಸ್ಮವನ್ನು ಹಣೆಯ ಎಡಭಾಗದಿಂದ ಬಲಭಾಗದ ಕಡೆಗೆ ಕೈಯ ಮಧ್ಯದ ಬೆರಳುಗಳಿಂದ ಧರಿಸಬೇಕು. (ಮೇಲೆ "ಬಲಗಡೆಯಿಂದ ಎಡಗಡೆ ಎಂತ ಹೇಳಿರುವುದು ಸರಿಯಲ್ಲ) ಮನುಷ್ಯನ ಎಡಭಾಗವು ಶಕ್ತಿಯ ಸ್ಥಾನ. ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲ ಎಂಬ ಮನುಷ್ಯನ ಮೂರು ಮಲಗಳನ್ನು ನಾಶಮಾಡಿದುದರ ಗುರ್ತಾಗಿ ಈ ರೀತಿ ಭಸ್ಮದ ಬಿಳಿಯ ಎಸಳುಗಳು ಎಡದಿಂದ ಬಲಕ್ಕೆ ಬರುವಂತೆ ಧರಿಸಬೇಕಾಗಿದೆ. ಬಿಳುಪು ಬಣ್ಣವು ಸುಜ್ಞಾನದ ರೂಪವನ್ನು ತೋರಿಸುತ್ತದೆ. ಹೀಗೆ ಭಸ್ಮವ ಧರಿಸುವುದರಿಂದ ತನ್ನ ಅಜ್ಞಾನ ನಿವೃತ್ತಿಯಾಯಿತೆಂದು ಭಾವಿಸುವುದು.

ಎದೆಯ ಮೇಲೆ, ಹಣೆಯ ಮೇಲೆ, ತಲೆಯ ಮೇಲೆ ಮೂರು ಕಡೆಗಳಲ್ಲಿಯೂ ಭಸ್ಮವ ಧರಿಸಬೇಕು. ಹೀಗೆ ಧರಿಸುವಾಗ "ಅಂಗ ಲಿಂಗ ಸಂಗಿ" ಎಂಬ ಆರಕ್ಷರ ಮಂತ್ರವನ್ನು ಉಚ್ಚರಿಸುವುದು. (ಅಂಗ ಲಿಂಗ ಸಂಗಿ ಎಂದರೆ ನಮಃ ಶಿವಾಯ ಓಂ). ಭಸ್ಮವನ್ನು ಕರಡಿಗೆಯಲ್ಲಿಯ ಲಿಂಗಕ್ಕೂ ಮೂರೆಸಳು ಧರಿಸುವುದು.

೨) **ರುದ್ರಾಕ್ಷಿ :** ಕೈಲಾಸದ ಶಿವನ ಮೂರನೆಯದಾದ "ಹಣೆಯ ಕಣ್ಣಿನ ರೂಪವಾಗಿ, (ಇಂದ್ರಿಯಗಳು ಶಿವರೂಪವೆಂಬ ಜ್ಞಾನ ನೇತ್ರವಾಗಿ) ಐಶ್ವರ್ಯವನ್ನು ಕೊಟ್ಟು ಲೋಕಹಿತವನ್ನು ಮಾಡುವ ರುದ್ರಾಕ್ಷಿಗೆ ನಮಸ್ಕಾರ" ಎಂದು ರುದ್ರಾಕ್ಷಿಯನ್ನು ಕೈಯಲ್ಲಿ ಹಿಡಿದುಕೊಂಡು ಉಪಚಾರದ ಪೂಜೆಯ ಮಾಡುವುದು. ಸಾಧ್ಯವಾದಷ್ಟು, ಸುಮ್ಮನೆ ಅದಕ್ಕೆ ಭಸ್ಮವ ಧರಿಸಿದರೂ ಆಗಬಹುದು. ಕಡೆಯ ಪಕ್ಷ ಒಂದಾದರೂ ಆರು ಮುಖದ ರುದ್ರಾಕ್ಷಿಯನ್ನು ಕೊರಳಲ್ಲಿ ಧರಿಸುವುದು.

ಟಿಪ್ಪಣಿ— ರುದ್ರಾಕ್ಷಿಯ ಮುಖಗಳನ್ನನುಸರಿಸಿ ತನ್ನ ಇಂದ್ರಿಯಗಳು ರುದ್ರಮುಖ (ಶಿವರೂಪ), ಆದುವೆಂದು ತಿಳಿಯುವುದು.

೩) **ಮಂತ್ರ :** ಅಂಗ ಲಿಂಗ ಸಂಗಿ (ನಮಃ ಶಿವಾಯ ಓಂ). ಓಂ ನಮಃ ಶಿವಾಯ.

ಟಿಪ್ಪಣಿ— ಭಸ್ಮ ರುದ್ರಾಕ್ಷಿಗಳು ಪೂಜೆಗೆ ಸಿಕ್ಕುವ ರೀತಿಯಲ್ಲಿ ಮಂತ್ರವು ಸಿಕ್ಕುವುದಿಲ್ಲ. ಲಿಂಗವೇ ಮಂತ್ರರೂಪವೆಂದು ಮಂತ್ರದ ಅನುಸಂಧಾನವನ್ನು ಲಿಂಗದಲ್ಲಿಯೇ ಮಾಡಬೇಕು. ಎಂದರೆ ಲಿಂಗದ ಕೆಳಗಿನ ಪೀಠ, ಕಟಿ, ವರ್ತುಳ, ಗೋಮುಖ, ನಾಳ-ಬಾಣಗಳು ಕ್ರಮವಾಗಿ ನಮಃ ಶಿವಾಯ ಓಂ ಎಂಬ ಮಂತ್ರ ಬೀಜಾಕ್ಷರ ಸಂಬಂಧ

ವುಳ್ಳವುಗಳೆಂದೂ, ಲಿಂಗವೇ ಷಡಕ್ಷರ ರೂಪವೆಂದು ಭಾವಿಸಿ, ಸಾಧ್ಯವಾದಷ್ಟು ಉಪಚಾರದ ಪೂಜೆ ಮಾಡುವುದು. ಸುಮ್ಮನೆ ಭಸ್ಮವ ಧರಿಸಿದರೂ ಆಗಬಹುದು. ಮಂತ್ರವನ್ನು ಕನಿಷ್ಟಪಕ್ಷ ಆರುಸಾರೆ ಆದರೂ ಜಪಿಸಬೇಕು. ೩೬ ಸಾರಿ, ೧೦೮ ಸಾರಿ ಹೀಗೆ ಜಪಿಸುವುದು ರೂಢಿ.

ಶಿವಪೂಜೆಮಾಡುವವನು ಶಿವರೂಪನಾಗಬೇಕು. ಭಸ್ಮದಿಂದ ತನುವಿನ ಮಲತ್ರಯಗಳು ನಾಶವಾದುವೆಂದು ತಿಳಿದುದಾಯಿತು. ರುದ್ರಾಕ್ಷಿಯಿಂದ ಇಂದ್ರಿಯಗಳು ಶಿವರೂಪವೆಂಬ ಭಾವನೆ ಬಂದುದಾಯಿತು. ಮಂತ್ರದ ಮನನದಿಂದ ಅಂಗವು ಲಿಂಗರೂಪವಾಗುತ್ತದೆ.

**'ನಮಃ'** ಎಂದರೆ ಜೀವ; ಮತ್ತೊಂದರ್ಥ ಅಂಗ. ಶಿವ ಎಂದರೆ (ನಿರಾಕಾರ ರೂಪ) ಮತ್ತೊಂದರ್ಥ ಲಿಂಗ; ಅಯ ಎಂದರೆ ಎರಡೂ ಸಂಬಂಧವಾಗಲಿ.

ಈ ಅರ್ಥವು ಸ್ಕಾಂದ ಪುರಾಣ ಮೊದಲಾದ ಭಾರತೀಯ ಗ್ರಂಥಗಳಲ್ಲಿ ಬರೆಯಲ್ಪಟ್ಟಿದೆ. ಅಂಗ ಲಿಂಗ ಸಂಬಂಧವಾಗಲಿ (ಜೀವ ಶಿವರ ಐಕ್ಯವಾಗಲಿ) ಎಂಬುದೇ ಮಂತ್ರದ ಅರ್ಥ. ಮುಂದೆ ಶಿವನೇ ನಾನು (ಸೋಹಂ ಎಂಬುದನ್ನು ತೋರಿಸುವ ಓಂ, ಹೀಗೆ "ಅಂಗ ಲಿಂಗ ಸಂಬಂಧವಾಗಿ ಲಿಂಗವೇ ನಾನು" ಎಂಬುದನ್ನು ಪ್ರಕಟ ಮಾಡುವುದೀ ಮಂತ್ರವು. (ಇದೊಂದು ಪ್ರಾರ್ಥನೆ ಇದ್ದಂತೆ)

"ಸೋಹಂ ನಮಃ ಶಿವಾಯಃ" "ಓಂ ನಮಃ ಶಿವಾಯ" "ಶಿವನು ನಾನು" "ಅಂಗ ಲಿಂಗ ಸಂಗವಾಗಲಿ" ಹೀಗೆ ಅರ್ಥವಿದ್ದು "ಓಂ ನಮಃ ಶಿವಾಯ" ಎಂದು ಹೇಳುವುದು ಧರ್ಮ ಗ್ರಂಥಗಳಲ್ಲಿ ಬಹಳ ಕಡೆ ಬಂದಿದೆ. ಈ ಮಂತ್ರವು ನಿವೃತ್ತಿ ಮಾರ್ಗವೆಂದೂ ಲಯ ಮಂತ್ರವೆಂದೂ ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಓಂ ಎಂಬುದು ಶಿರಸ್ಸಿನಲ್ಲಿಯೂ ನಮಃ ಶಿವಾಯ ಎಂಬುದು ಆಧಾರದಿಂದ ಕಂಠದ ವರೆಗಿನ ದೇಹದಲ್ಲಿಯೂ ಸಂಬಂಧವಾಗುವುದರಿಂದ ಅದು ಮೊದಲು ಶಿರಸ್ಸು, ಆಮೇಲೆ ದೇಹಸಂಬಂಧವಾದಂತಾಗಿ, ಸ್ಥಿತಿ ಮಂತ್ರವೇ ಆಗುತ್ತದೆ. ಈ ರೀತಿ ವೀರಶೈವರು ಜಪಿಸುವುದು ಉತ್ತಮ.

ಕೆಲವರು ಸಂಸ್ಕೃತ ಮಂತ್ರ "ಶಿವಾಯನಮಃ" ಎಂಬುದೇ ವೀರಶೈವರ ಮಂತ್ರ ಎಂದು ತಿಳಿದಿರುತ್ತಾರೆ. ಅದು ವೀರಶೈವೇತರ ಗಂಡಸರಿಗೂ ಹೆಂಗಸರಿಗೂ ಉಪಯೋಗ. (ಭಿನ್ನ ಸಾಧನ ಮಂತ್ರ), "ಶಿವನಿಗೆ ನಮಸ್ಕಾರ" ಎಂದು ಇದರ ಅರ್ಥ. ವೀರಶೈವರು ಆ ಮಂತ್ರವನ್ನು ಜಪಿಸಬಾರದು. 'ಅಂಗ ಲಿಂಗ ಸಂಗಿ' ಎಂಬ ಆರು ಅಕ್ಷರದ ಮಂತ್ರವು ಷಡಕ್ಷರ ಮಂತ್ರದ ಯಥಾರ್ಥವನ್ನೇ ತೋರಿಸುತ್ತದೆ.

### ೪. ಗುರು

ಸೂಚನೆ (೧) ಭಸ್ಮ, ರುದ್ರಾಕ್ಷಿ, ಮಂತ್ರ ಈ ಮೂರು ಅಷ್ಟಾವರಣದಲ್ಲಿ ಮೊದಲು ಪ್ರಾಪ್ತವಾಗಿ ತನು, ಇಂದ್ರಿಯ ಮತ್ತು ಜೀವರನ್ನು ಶುದ್ಧಿಗೊಳಿಸಿ ಸಾಧಕನನ್ನು ಶಿವರೂಪನನ್ನಾಗಿ ಮಾಡುವುದರಿಂದ **'ಶಿವೋ ಭೂತ್ವಾ ಶಿವಂ ಯ ಜೇತ್'**

(ಶಿವನಾಗಿ ಶಿವಪೂಜೆ ಮಾಡಬೇಕು). ಎಂಬ ವಿಧಿಯ ಪ್ರಕಾರ ಶಿವನಾಗಿ ಶಿವಪೂಜೆ ಮಾಡುವುದಕ್ಕೆ ಅರ್ಹತೆಯುಳ್ಳ ಅಧಿಕಾರಿಯಾಗುತ್ತಾನೆ. ಆದುದರಿಂದ ಈ ಮೂರನ್ನು ಶಿವಪೂಜೆಯ ಸಾಧನ ವಸ್ತುಗಳೆಂದು ತಿಳಿದಾಚರಿಸಬೇಕು.

ಸೂಚನೆ (೨) ಮೇಲೆ ಕಂಡ ಈ ಮೂರು ಸಾಧನ ವಸ್ತುಗಳಿಂದ ಮೂರು ಪೂಜ್ಯ ವಸ್ತುಗಳನ್ನು ಸಾಧಿಸಬೇಕು. ಎಂದರೆ ಅನುಸಂಧಾನ (ಪೂಜೆ) ಮಾಡಬೇಕು. ವೀರಶೈವರಿಗೆ ತನು ಶುದ್ಧಿಗಾಗಿ ಗುರುಪೂಜೆಯೂ, ಮನ ಅಥವಾ ಪ್ರಾಣ ಶುದ್ಧಿಗಾಗಿ ಇಷ್ಟಲಿಂಗ ಪೂಜೆಯೂ, ಭಾವ ಅಥವಾ ಆತ್ಮ ಶುದ್ಧಿಗಾಗಿ ಜಂಗಮ ಪೂಜೆಯೂ ವಿಧಾಯಕವಾಗಿದೆ. ಗುರುದೀಕ್ಷೆ ಮಾಡುವಾಗ ತನುವನ್ನು ತಾನು ಶುದ್ಧಿ ಮಾಡಿ, ಮನ ಶುದ್ಧಿಗಾಗಿ ಲಿಂಗವನ್ನು ಕೊಟ್ಟಿರುವುದಲ್ಲದೆ ಭಾವಶುದ್ಧಿಗಾಗಿ ಜಂಗಮ ಪೂಜೆಮಾಡ ಬೇಕೆಂದು ಉಪದೇಶ ಮಾಡಿರುತ್ತಾನೆ. ವೀರಶೈವರಿಗೆ ತನುವನ್ನು ಶುದ್ಧಿಮಾಡಿದುದ ರಿಂದ ತನುವೇ ಗುರು ಸ್ವರೂಪ ಎಂದು ತಿಳಿದು ಆ ತನುವಿನಿಂದ ಗುರುಪೂಜೆ ಮಾಡ ಬೇಕು. ಗುರುವನ್ನು ಸೇವಿಸಬೇಕು. ಆದುದರಿಂದ ಮೊದಲನೆಯದು ಗುರುಪೂಜೆ. ವೀರಶೈವೇತರರಂತೆ ಯಾವುದಾದರೊಂದು ಮೂರ್ತಿ ಪೂಜೆಯು ಹೇಳಲ್ಪಟ್ಟರೆ ಮನುಷ್ಯನಿಗಿರುವ ಸ್ಥೂಲತನು (ಅಂಗ), ಸೂಕ್ಷ್ಮತನು (ಸುಮನ), ಕಾರಣತನು (ಸದ್ಭಾವ), ಇವುಗಳ ಶುದ್ಧಿಯಾಗುವುದಿಲ್ಲ. ಆದುದರಿಂದ ವೀರಶೈವ ವಿಧಿಯು ಉತ್ತಮವಾದುದೆಂದು ತಿಳಿಯಬೇಕು.

ಸೂಚನೆ (೩) ಮೇಲೆ ಕಂಡಂತೆ ಪೂಜ್ಯ ವಸ್ತುಗಳು ಮೂರಾದುದರಿಂದ ಆ ರೀತಿ ಪೂಜೆಯು ವೀರಶೈವನಿಗೆ ಕಷ್ಟದ ಕೆಲಸವೆಂದು ತಿಳಿಯಬಾರದು. ಇಷ್ಟಲಿಂಗ ಒಂದರಲ್ಲಿಯೇ ಮೂವರೂ ಇದ್ದಾರೆ-ಎಂದು ಮೂವರ ಸಂಬಂಧಮಾಡಿ, ಅದೊಂದನ್ನೇ ಪೂಜಿಸಿದರೆ ಮೂವರ ಪೂಜೆಯೂ ಆಗುತ್ತದೆ. ಇಷ್ಟಲಿಂಗದ ವರ್ತುಳವೇ ಗುರು, ಗೋಳಕವೇ ಲಿಂಗ, ಗೋಮುಖವೇ ಜಂಗಮ ಎಂದು ಭಾವಿಸಿ ಪೂಜಿಸಬೇಕು. ಈ ಮೂರೂ ಇಷ್ಟಲಿಂಗದ ಪೀಠದ (ವೃತ್ತ) ಆಧಾರದ ಸಂಬಂಧವುಳ್ಳವುಗಳು ಎಂದು ತಿಳಿದಾಚರಿಸಬೇಕು.

ಇಷ್ಟಲಿಂಗ ಪೂಜೆ ಮಾಡುವ ಕಾಲದಲ್ಲಿ ಗುರುವು ಇದ್ದರೆ ಆ ಗುರುವನ್ನೇ ಪೂಜಿಸಿ, ಆ ಗುರು ಪೂಜೆಯಲ್ಲಿಯೇ ಲಿಂಗ ಜಂಗಮ ಪೂಜೆಯೂ ಆಯಿತೆಂದು ಭಾವಿಸ ಬೇಕು. ಗುರು ಲಿಂಗ ಜಂಗಮ ಮೂವರೂ ಇದ್ದರೆ ಜಂಗಮ ಪೂಜೆ ಮಾಡಿದರೆ, ಗುರು ಪೂಜೆಯೂ ಲಿಂಗ ಪೂಜೆಯೂ ಅದರಲ್ಲಿಯೇ ಸಂಬಂಧವಾದುದೆಂದು ತಿಳಿಯಬೇಕು.

## ಗುರುಪೂಜೆ

(ಅಷ್ಟಾವರಣದಲ್ಲಿನ **'ಗುರು'** ಎಂದರೆ 'ಪಂಚಾಚಾರ್ಯರು ಮತ್ತು ಅವರ ಶಾಖಾನುವರ್ತಿಗಳು') ಭಕ್ತಿ ಸ್ಥಲದಿಂದ ಪ್ರಸಾದಸ್ಥಲದವರೆವಿಗೆ ಆಚರಿಸುವವರು. ತಮ್ಮ ಸ್ಥಿತಿಗೆ ತಕ್ಕಂತೆ ಸ್ಥಲಗಳಲ್ಲಿ ನುರಿತ ಗುರುಗಳನ್ನು ಆರಿಸಿಕೊಳ್ಳುತ್ತಾರೆ. ಅಷ್ಟಾ

ವರಣದಲ್ಲಿನ ಜಂಗಮರು ತಮಗೆ ಬೇಕಾದ ಜಂಗಮರನ್ನೇ ಗುರುಗಳನ್ನಾಗಿ ಆರಿಸಿಕೊಳ್ಳುತ್ತಾರೆ.

### ಗುರು ಧ್ಯಾನ

ತನಗೆ ದೀಕ್ಷೆ ಮಾಡಿದ ಗುರುವಿನ ಮೂರ್ತಿಯನ್ನು ಮನದಲ್ಲಿ ಧ್ಯಾನಿಸಿ, ಆ ಗುರುವೇ ಅಲ್ಲಿ ಪೂಜೆಗಾಗಿ ಕುಳಿತಿರುವ ಮೂರ್ತಿ ಎಂದು ಭಾವಿಸಬೇಕು.

ಸ್ತೋತ್ರ (ಕಂದ ಪದ್ಯ)

ಗುರುದೇವನೆ ಮಹದೇವನು ।
ಗುರುವೆದುರಿನ ತಾತ್ವಿಕ ಮೂರ್ತಿ ಸದಾಶಿವನೈ ।
ಗುರುವಿಂದಲಧಿಕವಿಲ್ಲ ವು ।
ಗುರುದೇವನೆ ಸಲೆ ಶರಣುವೊಗುವೆ ಪಾಲಿಪುದೈ ॥

ಆಮೇಲೆ ಗುರುವಿನ ಎರಡು ಪಾದಗಳನ್ನು ಸಾಧ್ಯವಾದಷ್ಟು ಉಪಚಾರದಿಂದ ಪೂಜಿಸಬೇಕು. ಈ ಪೂಜೆಯಲ್ಲಿ ಗುರುವು ಧರಿಸುವ ಲಿಂಗವೂ ಗುರುವಿನ ಪಾದವೂ ಗುರು ಲಿಂಗ ರೂಪಗಳೇ ಎಂದು ತಿಳಿದು ಪೂಜಿಸಬೇಕು. ಉಪಚಾರಗಳಲ್ಲಿ ಐದು (ಪಂಚ) ಉಪಚಾರಗಳ ಪೂಜೆಯೇ ಸಂಗ್ರಹದ ಪೂಜೆ. ಇದನ್ನು ಲಿಂಗ ಪೂಜೆಯ ವಿಚಾರದಲ್ಲಿ ತೋರಿಸಿ ಇದೆ. ಅದೇ ರೀತಿಯೇ ಎಲ್ಲಾ ಪೂಜಾ ವಿಚಾರಗಳಲ್ಲಿಯೂ ನಡೆಯಿಸಲಿಕ್ಕೆ ಬರುವುದು.* (ಸಂ. ೧೧೧)

* ಈ 'ಶಿವಪೂಜಾ ವಿಧಾನ'ವು ಮುಂದಿನ ಯಾವ ಸಂಚಿಕೆಗಳಲ್ಲೂ ನಮಗೆ ಸಿಗಲಿಲ್ಲ. ಬೇರೆ ಪುಸ್ತಕರೂಪದಲ್ಲಿ ಇದು ಪ್ರಕಟವಾಗಿರುವುದೋ ಹೇಗೋ ತಿಳಿಯದು. ಬಹುಶಃ ಇಲ್ಲಿಗೆ ಈ ಬರವಣಿಗೆ ಪೂರ್ಣವಾಗಿದೆಯೆಂದು ನಮಗೆ ಅನ್ನಿಸುವುದಿಲ್ಲ. ನಾವು ಲಿಂಗ ಪೂಜೆ, ಲಿಂಗಪೂಜೆಯ ಉದ್ದೇಶ, ಲಿಂಗಪೂಜೆಯ ಕ್ರಮ– ಈ ಮೂರು ಲೇಖನಗಳನ್ನು ಒಂದೆಡೆಗೆ ಬೇರೆ ಬೇರೆ ಸಂಚಿಕೆಗಳಿಂದ ಆಯ್ದು ಜೋಡಿಸಿದ್ದೇವೆ. (–ಸಂ.)

# ಸ್ಥಿತಪ್ರಜ್ಞನ ಲಕ್ಷಣ

ಈಗಿನ ಕಾಲದಲ್ಲಿ ಕೆಲವರು ಬ್ರಹ್ಮಜ್ಞಾನವಾದರೆ ಅದೇ ಬಲುದೊಡ್ಡದೆಂದು ತಿಳಿದಿರುತ್ತಾರೆ. ಬ್ರಹ್ಮಜ್ಞಾನವೆಂದರೆ 'ಅಹಂಬ್ರಹ್ಮಾಸ್ಮಿ'–ನಾನು ಬ್ರಹ್ಮನಿದ್ದೇನೆ–ಎಂದು ತಿಳಿಯುವುದೇ ಮುಖ್ಯವೆಂದು ಅವರು ಜ್ಞಾನವನ್ನು ಹೊಂದಿದ್ದಾರೆ. ಭಗವದ್ಗೀತೆ, ಉಪನಿಷತ್ತುಗಳು ಮುಂತಾದುವುಗಳನ್ನು ಓದುತ್ತಾ ಹೋದರೆ ಇಂತಹ ಬ್ರಹ್ಮಜ್ಞಾನಕ್ಕಿಂತಲೂ ಇನ್ನೂ ಹೆಚ್ಚಾಗಿ ತಿಳಿಯಬೇಕಾದುದೂ ಆಚರಿಸಬೇಕಾದುದೂ ಆತ್ಮನ ಉನ್ನತಿಗೆ ಮುಖ್ಯವೆಂದು ಕಂಡುಬರುತ್ತದೆ–ಸಾಮಾನ್ಯವಾಗಿ ಶಬ್ದಬ್ರಹ್ಮ. ಸ್ಥಿತಬ್ರಹ್ಮ ಎಂಬುದಾಗಿ ಎರಡು ವಿಧವಾಗಿ ವಿಂಗಡಿಸಿದಂತೆ ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಶಬ್ದಬ್ರಹ್ಮವೆಂದರೆ ಪುಸ್ತಕಗಳನ್ನೋದಿ ನಿರಾಕಾರ ಬ್ರಹ್ಮನಿದ್ದಾನೆ ಎಂದು ತಿಳಿಯುವುದು. ಶಬ್ದಬ್ರಹ್ಮ; ಈ ಬ್ರಹ್ಮವನ್ನೇ ವಚನಬ್ರಹ್ಮ, ಮಾತಿನಬ್ರಹ್ಮ (ವಾಗ್ಬ್ರಹ್ಮ) ಎಂದು ಶಿವಶರಣರು ಕರೆದಿದ್ದಾರೆ. ಪುಸ್ತಕಗಳನ್ನೋದುವುದೆಂದರೆ ಯಾರಾದರೊಬ್ಬರು ಬರೆದ ಅಥವಾ ರಚಿಸಿದ ಪುಸ್ತಕಗಳೆಂದಷ್ಟೇ ಅಭಿಪ್ರಾಯವಲ್ಲ. ವೇದಾಂತ, ಬ್ರಹ್ಮಸೂತ್ರ ಭಾಷ್ಯ ಉಪನಿಷತ್ತುಗಳು ಮುಂತಾದುವುಗಳನ್ನು ಓದಿ ತಿಳಿಯುವ ಬ್ರಹ್ಮವೂ ಆ ಮಾತಿನ ಬ್ರಹ್ಮವೇ ಆಗಿದೆ. ಉಪನಿಷತ್ತುಗಳಲ್ಲಿ ಅಜರ, ಅಮರ, ಅಮೃತ ಮುಂತಾದ ನಿರಾಕಾರ ಬೋಧಕ ಯಾವ ಪದಗಳಿಂದ ಬ್ರಹ್ಮನ ಲಕ್ಷಣವನ್ನು ನಾವು ಹೇಳಲಿಕ್ಕೆ ತೊಡಗಿದರೂ ಆ ಬ್ರಹ್ಮನು ಶಬ್ದಬ್ರಹ್ಮನೇ ಆಗುತ್ತಾನೆ. ಸ್ಥಿತಬ್ರಹ್ಮವೆಂದರೇನು ? ಎಂಬುದನ್ನು ವಿಚಾರದಿಂದ ತಿಳಿದುಕೊಳ್ಳುವುದು ಅವಶ್ಯಕವಾದ ಕೆಲಸವೇ ಆಗಿದೆ. ಈ ಸ್ಥಿತ ಬ್ರಹ್ಮನನ್ನು ಬಲ್ಲವರಿಗೆ 'ಸ್ಥಿತಪ್ರಜ್ಞ' ಎಂದು ಕರೆಯುತ್ತಾರೆ, ಎಂದು ತಿಳಿದು ಬರುತ್ತದೆ. ಭಗವದ್ಗೀತೆಯ ೨ನೆಯ ಅಧ್ಯಾಯದ ೫೪ನೆಯ ಶ್ಲೋಕದಿಂದ ೭೨ನೆಯ ಆ ಅಧ್ಯಾಯದ ಕೊನೆಯ ಶ್ಲೋಕದವರೆವಿಗೆ ಸ್ಥಿತಪ್ರಜ್ಞನ ವಿಷಯವು ಹೇಳಲ್ಪಟ್ಟಿದೆ. ಕೆಲವರು ಭಗವದ್ಗೀತೆಯ ಒಂದೊಂದೇ ಶ್ಲೋಕದ ಉದಾಹರಣೆ ಕೊಟ್ಟು ಯಾವುದಾದರೊಂದು ವಿಷಯವನ್ನು ಸಮರ್ಥಿಸಲಿಕ್ಕೆ ಹೋಗುತ್ತಾರೆ. ಕೆಲವು ಸಂದರ್ಭಗಳಲ್ಲಿ ಮೊದಲಿನ ಶ್ಲೋಕದ ವಿರೋಧವಾದ ಅಭಿಪ್ರಾಯವೇ ಮುಂದಿನ ಶ್ಲೋಕದಲ್ಲಿ ಬಂದಿರುತ್ತದೆ. ಆದುದರಿಂದ ಒಂದು ಪ್ರಕರಣದ ಆರಂಭದಿಂದ ಕೊನೆಯುವರೆವಿಗೂ ಇರತಕ್ಕ ಶ್ಲೋಕಗಳನ್ನು ಒಟ್ಟುಗೂಡಿಸಿ ಮುಖ್ಯಾಭಿಪ್ರಾಯವನ್ನು ತಿಳಿಯುವುದೇ ಉತ್ತಮವಾದ ಕೆಲಸ. ಆ ಮೇರೆಗೆ ಈ 'ಸ್ಥಿತಪ್ರಜ್ಞ' ವಿಷಯವನ್ನು ಬೋಧಿಸುವ ಈ ಪ್ರಕರಣದ ಕಡೆಯ ಶ್ಲೋಕವು ಹೀಗೆ ಇದೆ–

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ॥
ಸ್ಥಿತ್ವಾಸ್ಯಾಮಂತ ಕಾಲೇಽಪಿ ಬ್ರಹ್ಮನಿರ್ವಾಣ ಮೃಚ್ಛತಿ ॥ (೨-೭೨)

ಈ ಸ್ಥಿತಪ್ರಜ್ಞ ಪ್ರಕರಣವಲ್ಲಿರುವುದು ಬ್ರಾಹ್ಮೀಸ್ಥಿತಿ ಎಂದೂ ಕೊನೆಗಾಲದಲ್ಲಿ ಯಾವರೂ ಇದರಲ್ಲಿ ಸ್ಥಿತನಾದರೆ ನಿರ್ವಾಣ ಬ್ರಹ್ಮನನ್ನು (ಬ್ರಹ್ಮ ನಿರ್ವಾಣ = ಕೇವಲ ಬ್ರಹ್ಮ) ಹೊಂದುವನೆಂದೂ ಈ ಪ್ರಕರಣದ ಕೊನೆಯ ಮಾತು. ಇದರಂತೆ ಆಚರಿಸಿದವನಿಗೆ ಬ್ರಾಹ್ಮೀ ಸ್ಥಿತಿ ಪ್ರಾಪ್ತವಾಗುವುದರಿಂದಲೇ ಹಾಗೆ ಆಚರಿಸಿದವನಿಗೆ 'ಸ್ಥಿತ ಪ್ರಜ್ಞ' ಎಂದು ಕರೆದದ್ದಾಗಿದೆ. ಹೀಗೆ ಸ್ಥಿತಪ್ರಜ್ಞ, ಸ್ಥಿತಬ್ರಹ್ಮ ಎರಡೂ ಸಮಾನವಾದ ಅಭಿಪ್ರಾಯವುಳ್ಳವುಗಳು.

ಇವನು ಆಚರಿಸಬೇಕಾದ ವಿಷಯಗಳೇನೆಂದು ತಿಳಿಯಲಿಕ್ಕೆ ಹೋಗುವುದಾದರೆ, ಮನಸ್ಸಿಗೆ ಬರುವ ಸರ್ವಕಾಮಗಳನ್ನೂ ಬಿಡಬೇಕು; ದುಃಖದಲ್ಲಿ ವ್ಯಥೆಯಿಲ್ಲದಿರಬೇಕು; ಸುಖದಲ್ಲಿ ಇಚ್ಛೆಯಿಲ್ಲದವನಾಗಿರಬೇಕು; ರಾಗ ಭಯ ಕ್ರೋಧಗಳನ್ನು ಬಿಟ್ಟವನಾಗಿರಬೇಕು; ಆಯಾಯ ಶುಭಾಶುಭಗಳನ್ನು ಇಚ್ಛೆಯಿಲ್ಲದೆ ಹೊಂದಿ ಅಭಿಮಾನವೂ ಇಲ್ಲದೇ ದ್ವೇಷವೂ ಇಲ್ಲದೆ ಇರಬೇಕು. ಆಮೆಯು ತನ್ನ ಸರ್ವಾಂಗವನ್ನೂ ಮುಚ್ಚಿಟ್ಟಿರುವಂತೆ ಇಂದ್ರಿಯಗಳನ್ನು ಇಂದ್ರಿಯಾರ್ಥಕ್ಕಾಗಿ ಎಡೆಗೊಡದೆ ಇರಬೇಕು. ಹೀಗೆ ಜೀವನಿಗೆ ನಿರಾಕಾರನನ್ನು ಮಾಡಿದರೆ ಅವನ ವಿಷಯಗಳೂ ತಿರುಗಿಬಿಡುತ್ತವೆ. ಅವನಿಗೆ ಮನಸ್ಸೂ ಕೂಡ ಚಂಚಲವಿಲ್ಲದ್ದಾಗಿ ಪರವಸ್ತುವನ್ನು ಕಂಡು ತಿರುಗುತ್ತದೆ. (ಈ ಅಭಿಪ್ರಾಯವು ವೀರಶೈವರ ತತ್ತ್ವಕ್ಕೆ ಅನುಸಾರವಾಗಿದೆ. ಇಂದ್ರಿಯಗಳನ್ನು ಅವುಗಳ ಸುಖೇಚ್ಛೆಗೆ ಬಿಡದೆ ಲಿಂಗಮುಖವಾಗಿ ತಿರುಗಿಸಿ ಲಿಂಗ ಪದಾರ್ಥವನ್ನು ಅನುಭೋಗಿಸುವಂತೆ ಮಾಡಬೇಕೆಂಬುದು ಶಿವಶರಣರ ಆಚರಣೆ.) ಹೀಗೆ ಸ್ಥಿತಪ್ರಜ್ಞನ ಲಕ್ಷಣವನ್ನು ದೇವನ ಕಡೆಗೆ ಇಂದ್ರಿಯ ಸಂಯಮನ ಮಾಡುವ ಮುಖ್ಯ ಗುರಿಯಾಗಿಟ್ಟುಕೊಂಡು ಹೇಳಿರುತ್ತಾರೆ. ಇದರಿಂದ ಪ್ರಸಾದವನ್ನೂ ಪಡೆಯುತ್ತಾನೆ ಎಂದು ಹೇಳಿದ್ದಾರೆ. (ಪ್ರಸಾದವನ್ನೂ ಪಡೆಯಬೇಕೆಂಬುದೂ ವೀರಶೈವರ ಅಭಿಪ್ರಾಯವೇ- ಇದೇ ಪದವು ಭಗವದ್ಗೀತೆಯಲ್ಲಿಯೂ ಇದೆ.) ಇಂತಹ ಪ್ರಸಾದದಿಂದ ಸರ್ವ ದುಃಖಗಳ ಹಾನಿಯಾಗುತ್ತದೆ. ಇಂತಹ ಪ್ರಸಾದದ ಕಡೆಗೆ ಒಲಿದ ಚೇತನವುಳ್ಳವನಿಗೆ ಬುದ್ಧಿಯು ಬೇಗನೆ ಪರಿಣಮಿಸುತ್ತದೆ (ತೃಪ್ತಿಪಡುತ್ತದೆ). (ಇಲ್ಲಿ ಹೇಳಲ್ಪಟ್ಟ ಪ್ರಸಾದವನ್ನೇ ಪಡೆಯಲು ವೀರಶೈವರ ಆಚರಣೆ ಇದೆ.) ಎಲ್ಲಾ ನೀರು ಸಮುದ್ರದಲ್ಲಿ ಸೇರುವ ಹಾಗೆ ಯಾರ ಕಾಮುಗಳೆಲ್ಲವೂ ಯಾವ ಅಚಲ ಪ್ರತಿಷ್ಠನಾದ ದೇವನಲ್ಲಿ ಪ್ರವೇಶಿಸುವುವೋ ಅವನು ಶಾಂತಿಯನ್ನು ಪಡೆಯುತ್ತಾನೆ. ಹಾಗಿಲ್ಲದೆ ಕಾಮುಗಳನ್ನು ಅಪೇಕ್ಷಿಸುವವನಿಗೆ ಶಾಂತಿಯಿಲ್ಲ. ವೀರಶೈವರು ಆಚರಿಸುವುದು ಹೀಗೆಯೇ. ಆದುದರಿಂದ ಇಲ್ಲಿ ಹೇಳಲ್ಪಟ್ಟ ಸ್ಥಿತಪ್ರಜ್ಞನ ಆಚರಣೆಯು ವೀರಶೈವರಲ್ಲಿ ಸಹಜವಾಗಿ ಧರ್ಮಾಚರಣೆಯಾಗಿದೆ, ಎಂಬುದನ್ನು ಚನ್ನಾಗಿ ತಿಳಿದಿರಬೇಕು.

ಮೇಲಿನ ಭಗವದ್ಗೀತೆಯು ಅಭಿಪ್ರಾಯದಿಂದ ಇಂದ್ರಿಯಗಳನ್ನು ದೇವನಲ್ಲಿ ಇಡುವ ವಿಷಯವೊಂದೇ ಗೊತ್ತಾಗುತ್ತದೆ. ಈ ಸ್ಥಿತಬ್ರಹ್ಮ ವಿಷಯವು 'ಅನ್ನ ಪೂರ್ಣೋಪನಿಷತ್ತಿ'ನಲ್ಲಿ ಇನ್ನೂ ಹೆಚ್ಚಾಗಿ ಹೇಳಲ್ಪಡುತ್ತದೆ. ಅದರ ಮೂರನೆಯ ಅಧ್ಯಾಯದಲ್ಲಿ ವಿದೇಹ ಮುಕ್ತಿಯು ರೂಪವಾವುದು ? ಯಾವ ಯೋಗವನ್ನು ಹೊಂದಿ ಆ ಪರಮ ಪದವನ್ನು ಯಾರು ಹೊಂದಿದರು ? ಎಂಬ ಪ್ರಶ್ನೆಗೆ ಉತ್ತರವು ಹೇಳಲ್ಪಟ್ಟಿದೆ. 'ಚಿದಾತ್ಮನಾದ ಭಗವಂತನು ಸರ್ವಸಾಕ್ಷಿಯಾಗಿ ಇದ್ದಾನೆ. ಅವನೇ ನಾನು' ಎಂಬ ಅಭಿಪ್ರಾಯವುಳ್ಳ

"ಚಿದಾತ್ಮಾ ಭಗವಾನ್ ಸರ್ವ ಸಾಕ್ಷಿತ್ವೇನ ಸ್ಥಿತೋ ಸ್ಮ್ಯಹಂ"

ಈ ಶ್ಲೋಕದಲ್ಲಿ ಸ್ಥಿತ ಪದವಿದೆ. ಮುಂದೆ ಅಂಥಾ ಬ್ರಹ್ಮ ಜ್ಞಾನನಾದ ಆತ್ಮನಿಂದ ಕಣ್ಣೇ ಮೊದಲಾದವುಗಳು ತಿಳಿಯಲ್ಪಡುವುದಿಲ್ಲ (ನಿಜ್ಞಾರ್ತಾ), ಎಂದು ಹೇಳಿರುವುದೂ ಭಗವದ್ಗೀತೆಯು ಅಭಿಪ್ರಾಯಕ್ಕೆ ಸರಿಯಾಗಿದೆ. ಈ ವಿಷಯವು ಇನ್ನೂ ವಿಸ್ತರಿಸಿ ಹೀಗೆ ಹೇಳಲ್ಪಟ್ಟಿದೆ–

ಸುಷುಪ್ತ ಸ್ಥೈರ್ಯಯಾಮಾ ಸಾಧ್ಯ । ತುರ್ಯ ರೂಪಮುಪಾಯಯೌ ।
ನಿರಾನಂದೋಪಿ ಸಾನಂದಃ । ಸಚ್ಚಾಸಚ್ಚ ಬಭೂವ ಸಃ ॥
ತತಸ್ತತ್ ಸಂಬಭೂವಾಸೌ ಯದ್ಗಿರಾಮಪ್ಯಗೋಚರಃ ।
ಯಚ್ಛೂನ್ಯ ವಾದಿನಾಂ ಶೂನ್ಯಂ । ಬ್ರಹ್ಮಬ್ರಹ್ಮವಿದಾಂ ಚಯತ್ ॥
ವಿಜ್ಞಾನ ಮಾತ್ರಂ ವಿಜ್ಞಾನ । ವಿದಾಂ ಯದಮಲಾತ್ಮಕಂ ।
ಪುರುಷಃ ಸಾಂಖ್ಯ ದೃಷ್ಟೀನಾಂ । ಈಶ್ವರೋ ಯೋಗವಾದಿನಾಂ ॥
ಶಿವಃ ಶೈವಾಗಮ ಸ್ಥಾನಾಂ । ಕಾಲಃ ಕಾಲೈಕವಾದಿನಾಂ ॥
ಯತ್ ಸರ್ವಶಾಸ್ತ್ರ ಸಿದ್ಧಾಂತಂ । ಯತ್ಸರ್ವ ಹೃದಯಾನುಗಂ ॥
ಯತ್ ಸರ್ವಂ ಸರ್ವಗಂ ವಸ್ತು ಯತ್ತತ್ತ್ವಂ ತದಸೌ ಸ್ಥಿತಃ ॥
ಯದನುಕ್ತಮ ನಿಷ್ಪಂದಂ ! ದ್ರೀಪಕಂ ತೇಜಸಾಮಪಿ ॥
ಸ್ವಾನು ಭೂತ್ಯೈಕಮಾನಂ ಚ । ಯತ್ತತ್ತ್ವಂ ತದಸೌ ಸ್ಥಿತಃ ॥
ಯದೇಕಂ ಚಾಪ್ಯನೇಕಂ ಚ । ಸಾಂಜನಂ ಚ ನಿರಂಜನಂ ॥
ಯತ್ ಸರ್ವಂ ಚಾಪ್ಯಸರ್ವಂ ಚ । ಯತ್ತತ್ತ್ವಂ ತದಸೌ ಸ್ಥಿತಃ ॥

(ಅಜಮಮರಮ ನಾದ್ಯ ಮಾದ್ಯ ಮೇಕಂ ಪದಮಮಲಂ ಸಕಲಂ ಚ ನಿಷ್ಕಲಂ ಚ ಸ್ಥಿತ ಇತಿ ಸತತಾ ನಭಃ ಸ್ವರೂಪಾದಪಿ ಪಿಮಲಸ್ಥಿತಿರೀಶ್ವರಃ ಕ್ಷಣೇನು)–ಇತಿ ತೃತೀಯೋಽಧ್ಯಾಯಃ

ಹೀಗೆ ವಿದೇಹ ಮುಕ್ತನಾಗಿ ಸ್ಥಿತಪ್ರಜ್ಞ–ಸ್ಥಿತಬ್ರಹ್ಮ ಎಂಬ ಸ್ಥಿತಿಗೆ ಬರುವ ಬ್ರಾಹ್ಮೀ ಸ್ಥಿತಿಯನ್ನು ವಿವರಿಸಿದ್ದಾರೆ.

ಜಾಗ್ರತ್ ಸ್ವಪ್ನಗಳ ಅನಂತರ ಸುಷುಪ್ತಿ ಸ್ಥಿತಿಯನ್ನು ಹೊಂದಿದ ಮೇಲೆ ತುರ್ಯ ಎಂದರೆ ನಾಲ್ಕನೆಯ ರೂಪವನ್ನು ಹೊಂದುತ್ತಾನೆ. ಆಗ ಆನಂದವಿಲ್ಲದವನೂ ಆನಂದವುಳ್ಳವನೂ ಆಗುತ್ತಾನೆ. ಸತ್‌ಸ್ವರೂಪನೂ ಅಸತ್ ಸ್ವರೂಪನೂ ಆಗುತ್ತಾನೆ. ಆ ಸ್ಥಿತಿಯನ್ನು ಮಾತಿನಿಂದ ಹೇಳಲಾಗುವುದಿಲ್ಲ. ಶೂನ್ಯವಾದಿಗಳು ನಂಬಿರುವ ಶೂನ್ಯನೂ, ಬ್ರಹ್ಮಜ್ಞಾನಿಗಳು ನಂಬಿರುವ ಬ್ರಹ್ಮನೂ, ವಿಜ್ಞಾನ ವಾದಿಗಳು (Scientists) ನಂಬಿರುವ ನಿರ್ಮಲಾತ್ಮನೂ(ಶುದ್ಧವಸ್ತುವೂ), ಸಾಂಖ್ಯ ಶಾಸ್ತ್ರದವರು ನಂಬಿರುವ ಪುರುಷನೂ, ಯೋಗದವರು ನಂಬಿರುವ ಈಶ್ವರನೂ, ಶೈವಾಗಮದವರು ನಂಬಿರುವ ಶಿವನೂ, ಕಾಲವೇ ಮುಖ್ಯವೆಂದು ಹೇಳುವವರ ಕಾಲನೂ, ಅವನೇ ಆಗಿದ್ದಾನೆ. (ಅದ್ವೈತದವರು ನಂಬಿರುವ ಬ್ರಹ್ಮನಿಗೂ ಹೀಗೆಯೇ ಹೇಳುತ್ತಾರೆ ಎಂದು ಕೆಲವರು ಎನ್ನಬಹುದು. ಮುಂದಿನವನ್ನು ತಿಳಿದಾಗ ಇನ್ನೂ ಹೆಚ್ಚಿನ ಬೋಧೆ ಇದೆ ಎಂದು ಗೊತ್ತಾಗುವುದು.) ಯಾವುದು ಸರ್ವ ಶಾಸ್ತ್ರದಲ್ಲಿಯೂ ಸಿದ್ಧಾಂತವಸ್ತು ಎಂದು ಹೇಳಲ್ಪಡುವುದೋ, ಯಾವುದು ಎಲ್ಲರ ಹೃದಯದಲ್ಲಿ ಅನುಯಾಯಿಯಾಗಿ ಇರುವುದೋ, ಯಾವುದು ಸರ್ವವೂ ಸರ್ವದಲ್ಲಿ ವ್ಯಾಪಿಸಿರುವ ವಸ್ತುವು ಆಗಿದೆಯೋ ಆ ತತ್ತ್ವವೇ 'ಸ್ಥಿತ' ಎಂಬುದಾಗಿರುತ್ತದೆ. ಯಾವುದು ಹೇಳಲಿಕ್ಕೆ ಆಗದುದೋ, ಯಾವುದು ಚಲನೆಯಿಲ್ಲದುದೋ, ಯಾವುದು ಬೆಳಕುಳ್ಳ ವಸ್ತುಗಳಿಗೆ ಬೆಳಕನ್ನು ಕೊಡುವುದಾಗಿದೆಯೋ, ತನ್ನ ಅನುಭವದಿಂದಲೇ ಪ್ರಮಾಣಿಸುವುದಾಗಿರುವ ಆ ವಸ್ತುವು "ಸ್ಥಿತ" ಎಂಬುದಾಗಿದೆ. (ನಾನು ಬ್ರಹ್ಮ ಎಂದು ಜ್ಞಾನದಿಂದ ತಿಳಿದ ಮಾತ್ರನಾದ ಅದ್ವೈತಿಗೆ ಅನುಭವದಿಂದ ಅನುಭವಿಸುವುದೆಲ್ಲಿ ಇದೆ? ಆದುದರಿಂದ ಜ್ಞಾನ ಮಾತ್ರದ ಶಬ್ದ ಬ್ರಹ್ಮನಿಂದ ಹೆಚ್ಚಿನ ಲಕ್ಷಣವು ಸ್ಥಿತಬ್ರಹ್ಮನಿಗೆ ಇರುವುದೆಂದು ಸ್ಪಷ್ಟವಾಗಿ ತಿಳಿಯುತ್ತದೆ. ವಿದೇಹಮುಕ್ತತೆಯು ಆ ಶಬ್ದಬ್ರಹ್ಮಿಗೆ ಬದುಕಿದಾಗ ಇಲ್ಲವೇ ಇಲ್ಲ. ಅದು ಈ ರೀತಿ ಸ್ಥಿರಬ್ರಹ್ಮಾನುಭವಿಗೆ ಮಾತ್ರ ದೊರಕುತ್ತದೆ, ಇನ್ನು ಮುಂದಿನದನ್ನು ಓದಿರಿ.) ಆ ವಸ್ತುವು ಒಂದಾಗಿಯೂ, ಅನೇಕ (ಬಹಳ) ಆಗಿಯೂ, ಅಂಜನ (ಲೇಪವುಳ್ಳದು) ನಿರಂಜನ (ಲೇಪವಿಲ್ಲದುದು) ಆಗಿಯೂ ಎಲ್ಲವಲ್ಲದುದೂ (ಒಂದೇ ಆದುದೂ) ಆಗಿದೆ. ಈ ತತ್ವವೇ ಸ್ಥಿತ (ಸ್ಥಿತ ತತ್ವ ಅಥವಾ ಸ್ಥಿತಬ್ರಹ್ಮ) ವನಿಸಿಕೊಳ್ಳುತ್ತದೆ. (ಈ ವಿಷಯಕ್ಕೆ ಶಬ್ದಬ್ರಹ್ಮದ ಅದ್ವೈತಿಯು ಎಂದೆಂದೂ ಒಪ್ಪುವುದಿಲ್ಲ. ಬ್ರಹ್ಮವು ಅನೇಕವಾಗುವುದಿಲ್ಲವೆಂದೇ ಹೇಳುತ್ತಾನೆ.) ಅದು ಉತ್ಪತ್ತಿ ಇಲ್ಲದುದೂ, ಮರಣವಿಲ್ಲದುದೂ, ಅನಾದಿಯೂ, ಆದಿಯೂ–ಅಮಲ (ಶುದ್ಧ)ವೂ–ಸಕಲವೂ, ನಿಷ್ಕಲವೂ ಆಗಿ 'ಸ್ಥಿತ' ಆಗುತ್ತದೆ. ಇಂತಹ ಸ್ಥಿತಿಯು ಆಕಾಶದ ರೂಪಕ್ಕಿಂತಲೂ ಶುದ್ಧವಾಗಿ ಒಂದು ಕ್ಷಣದಲ್ಲಿಯೇ ಈಶ್ವರ ಎನಿಸಿಕೊಳ್ಳುತ್ತದೆ. (ಬ್ರಹ್ಮಾದ್ವೈತಿಯೂ ಮಾತಿನ ಅದ್ವೈತಿಯೂ, ವಾಗದ್ವೈತಿಯೂ, ಶಬ್ದಬ್ರಹ್ಮಿಯೂ) ಬ್ರಹ್ಮನಿಗೆ ರೂಪಗಳನ್ನೇ ಮಾನಿಸುವುದಿಲ್ಲ. ಅನೇಕ ಉಪನಿಷತ್ತುಗಳಲ್ಲಿ ಬ್ರಹ್ಮನಿಗೆ ರೂಪಗಳುಂಟೆಂದು ಹೇಳಲ್ಪಟ್ಟಿದೆ. ಮೇಲೆ ಹೇಳಲ್ಪಟ್ಟ ಸಕಲ ನಿಷ್ಕಲ ರೂಪಗಳೂ

ವೀರಶೈವರಲ್ಲಿ ಬಳಕೆಯಲ್ಲಿ ಇವೆ. ಸಕಲವೇ ಗುರುರೂಪ ಎಂದೂ, ನಿಷ್ಕಲವೇ ಜಂಗಮರೂಪ ಎಂದೂ ತಿಳಿದಿರುತ್ತಾನೆ. ಮಾತಿನ ಅದ್ವೈತಿಯಾದ ಪುಸ್ತಕದ ಅದ್ವೈತಿಗೆ ಇವರ ಗಂಧವೇ ಇಲ್ಲ. ಇದರಿಂದ ಅವನನ್ನು **'ಬ್ರಹ್ಮವಿದುತ್ತಮ'** ಎಂದು ತಿಳಿಯುವುದು ಹೇಗೆ ? ಮಹೋಪನಿಷತ್ತಿನಲ್ಲಿ ಬ್ರಹ್ಮಜ್ಞಾನಿ, ಬ್ರಹ್ಮವಿದುತ್ತಮ ಈ ಭೇದವು ತೋರಿಸಲ್ಪಟ್ಟಿದೆ. ಬ್ರಹ್ಮವಿತ್ತುಗಳಲ್ಲಿ ಶ್ರೇಷ್ಠನು ಸರ್ವರೂಪಾಗಿಯೂ ಬ್ರಹ್ಮನಿದ್ದಾನೆ ಎಂದು ತಿಳಿಯುತ್ತಾನೆ ಎಂಬ ಹೇಳಿಕೆ ಇದೆ. ವೀರಶೈವರೂ ಹಾಗೆಯೇ ನಂಬುತ್ತಾರೆ. ಹೀಗೆ ನಂಬದೇ ಇದ್ದವರು ವೀರಶೈವವನ್ನೂ ಬೋಧಿಸಲಿಕ್ಕೆ ಹೇಗೆ ಶಕ್ತರಾಗುತ್ತಾರೆ ? ಆದುದರಿಂದ ನಾನು ಬ್ರಹ್ಮ ಎಂದು ಹೇಳುವವರು ಸ್ಥಿತಬ್ರಹ್ಮರಾದರೆ ಬ್ರಹ್ಮಾನುಭವವು ತಮಗೆ ಆಗುವುದೆಂದು ಚೆನ್ನಾಗಿ ತಿಳಿಯಬೇಕು. ಇಲ್ಲದಿದ್ದರೆ ಗಿಳಿಯ ಓದಿನಂತೆ ಅವನ ಮಾತಿನ ಬ್ರಹ್ಮವಾಗಿರುತ್ತದೆ. ಈ ಕಡೆಗೆ ಸರ್ವರ ಗಮನವೂ ಬೀಳಲಿ.

ಇವನ್ನೆಲ್ಲಾ ಪರಿಶೋಧಿಸಲಾಗಿ ಭಗವದ್ಗೀತೆಯಲ್ಲಿ ಹೇಳಿದಂತೆ ಇಂದ್ರಿಯಗಳನ್ನು ದೇವನ ಕಡೆಗೆ ಸಂಯಮನ ಮಾಡುವುದು ಮಾತ್ರವೇ ಅಲ್ಲದೇ ಸರ್ವವೂ ಬ್ರಹ್ಮ-ಬ್ರಹ್ಮವು. ಒಬ್ಬನಾಗಿಯೂ, ನಾನಾ ರೂಪನಾಗಿಯೂ ಇದ್ದಾನೆ ಎಂದು ತಿಳಿದು ನಡೆಯುವುದೂ ಸ್ಥಿತಪ್ರಜ್ಞನ ಲಕ್ಷಣವೇ ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಈಗಿನ ವಿಜ್ಞಾನಿಗಳು (Scientists) ಒಂದು ವಿಧದ ಅಣುಗಳೇ ನಾನಾ ವಸ್ತುಗಳಾಗಿವೆ, ಅವು ಚೈತನ್ಯವುಳ್ಳವೂ ಆಗಿದೆ ಎಂದು ಹೇಳುವುದಕ್ಕೆ ಈ ಧಾರ್ಮಿಕ ಜ್ಞಾನವೂ ಸರಿಹೋಗುತ್ತಿದೆ. ಇಷ್ಟೆಲ್ಲಾ ತಿಳಿಯದೆ ಬ್ರಹ್ಮನಿಗೆ ರೂಪವಿಲ್ಲವೆಂದೂ ಒಂದು ಲಕ್ಷಣವಾಗಿ ಹೇಳಿದುದನ್ನೇ ನಂಬಿಕೊಂಡು ಆ ಒಣ ಬ್ರಹ್ಮವನ್ನೇ ತಿಳಿದು ವಾಗ್ಬ್ರಹ್ಮಿಯಾಗುವುದಕ್ಕಿಂತಲೂ ಸ್ಥಿತಬ್ರಹ್ಮನಾಗುವುದು ಶ್ರೇಷ್ಠವಾದುದೆಂಬುದನ್ನೂ ಇದೇ ಬ್ರಹ್ಮವೃತ್ತಿ ಎಂಬುದನ್ನೂ ಶಬ್ದಬ್ರಹ್ಮಿಗಳು ಏಕೆ ತಿಳಿಯಬಾರದು ?

ಹೀಗೆ ಬ್ರಹ್ಮವೃತ್ತಿಯೇ ಲೌಕಿಕ ಕಾರ್ಯವಾಗಿ ಪರಿಣಮಿಸಿ ಇರುವಾಗ ಇತರ ಮನುಷ್ಯರಂತೆ ಜಾತಿ, ಕುಲ, ಆಶ್ರಮ, ಸೂತಕ ಇವುಗಳಿಗೆ ಏಕೆ ಅಂಟಿಕೊಳ್ಳಬೇಕು ? ಹೀಗೆ ಅಂಟಿಕೊಳ್ಳುವುದು ಪೂರ್ವಜನ್ಮಕ್ಕೆ ಕಾರಣವಲ್ಲವೇ ? ವೀರಶೈವರು ತಿಳಿದಿರುವುದೇನು ? ಸರ್ವವೂ ಲಿಂಗ (ಬ್ರಹ್ಮ), ಲಿಂಗದಾಚರಣೆಯೇ (ಬ್ರಹ್ಮವೃತ್ತಿ) ಎಲ್ಲವೂ ಇವರು ಸ್ಥಿತಪ್ರಜ್ಞರಲ್ಲದೆ ಮತ್ತಾರು ? ಆಗಲಾಗಲಿ ಮಹನೀಯರು ಇವನ್ನೆಲ್ಲಾ ತಿಳಿದಾಚರಿಸಲಿ.

ತೇಜೋಬಿಂದೂಪನಿಷತ್ತಿನ ಚತುರ್ಥೋಪದೇಶದಲ್ಲಿ "ಬ್ರಹ್ಮವೃತ್ತವನ್ನು ಅನುಸರಿಸುವ ಪಂಡಿತನು ಗೂಢ ಧರ್ಮವನ್ನಾಶ್ರಯಿಸಿ ಅಜ್ಞಾನಚರಿತನಾಗಿ ನಡೆಯಬೇಕು. ಸರ್ವಪ್ರಾಣಿಗಳ ಮೇಲೆ ಕರುಣಾದೃಷ್ಟಿಯುಳ್ಳವನಾಗಿ ವರ್ಣಾಶ್ರಮಗಳನ್ನು ಬಿಟ್ಟು ಕುರುಡನ ಹಾಗೆಯೂ, ಮೂಕನ ಹಾಗೆಯೂ, ಜಡನ ಹಾಗೆಯೂ ಭೂಮಿಯನ್ನು ಸುತ್ತಬೇಕು ಎಂದಿದೆ. ಬ್ರಹ್ಮವೃತ್ತಿಯ ಸಾಧನೆ ಮಾಡುವವನಿಗೆ ಮೊದಲಿನ

ಅಭ್ಯಾಸವಿದು. ಈ ಮೊದಲಿನ ಅಭ್ಯಾಸದ ಕಾಲದಲ್ಲಿಯೇ ವರ್ಣಾಶ್ರಮಗಳನ್ನು ಬಿಡಬೇಕೆಂದಿರುವಾಗ, ಬ್ರಹ್ಮವೃತ್ತಿಯು ಆಳವಟ್ಟಮೇಲೆ ಅವುಗಳನ್ನು ಇಟ್ಟುಕೊಳ್ಳು ವುದುಂಟೆ ? ಪ್ರಮಥಾಚಾರ್ಯರಾದ ಶ್ರೀ ರೇವಣರು ಇಂತಹ ರೀತಿಯ ಅಜ್ಞಾತ ಚರಿತೆ ಯಲ್ಲಿ ನಡೆಯಲಿಲ್ಲವೇ ? ಪಿಣ್ಣಾಕನ ವೇಷ, ಗಾಣದ ಕಲ್ಲಿಸೆಟ್ಟಿಯ ಮನೆಯಲ್ಲಿನ ಸೇವೆ ಮುಂತಾದುದನ್ನೂ ಆಚರಿಸಲಿಲ್ಲವೇ ? ಹೀಗೆ ಧರ್ಮದ ಮೂಲ ಆಚಾರ್ಯರೇ ಆಚರಿ ಸುವುದನ್ನು ತಿಳಿದಮೇಲೆಯೂ ಈಗಿನ ವೀರಶೈವರು ಜಾತಿ ಜಾತಿ ಎಂದು ಬಡಿದು ಕೊಳ್ಳುವುದು ಏತಕ್ಕೆ ? ಬ್ರಹ್ಮನಾದವನಿಗೆ ಜಾತಿ ಎಲ್ಲಿಂದ ? ವೀರಶೈವರೂ ಲಿಂಗ ಸ್ವರೂಪರೇ ಆಗಿರುವಾಗ ಜಾತಿ ಎಲ್ಲಿಯದು ? ಇಂತಹ ವಿಷಯಗಳನ್ನೆಲ್ಲಾ ವೀರಶೈವ ಸಮಾಜದವರು ಚೆನ್ನಾಗಿ ಯೋಚಿಸಿಕೊಂಡು ತಮ್ಮ ಆಚರಣೆಯಲ್ಲಿಟ್ಟುಕೊಳ್ಳಲಿ.

(ಸಂ. ೧೩೪)

# ಶ್ರೀ ಕೇದಾರಪೀಠ

ಈ ಪೀಠವು ಪಂಚಾಚಾರ್ಯರ ಪೀಠಗಳಲ್ಲಿ ಒಂದೆಂಬುದು ವೀರಶೈವರೆಲ್ಲರಿಗೂ ತಿಳಿದ ವಿಷಯುವೇ ಆಗಿದೆ. ಇದಕ್ಕೆ ಊಖೀ (ಓಖೀ) ಮಠವೆಂದೂ ಈ ಮಠಾಧಿಪತಿಗಳಿಗೆ ರಾವಲರು ಎಂದೂ ಅಲ್ಲಿ ಕರೆಯುುವ ವಾಡಿಕೆ ಇದೆ. ಈ ರಾವಲರು ಈಗ್ಗೆ ಒಂದು ತಿಂಗಳ ಹಿಂದೆ ಶಿವಾಧೀನರಾದುವರಿಂದ ಈಗ ಮಠದಲ್ಲಿರುವ ೫-೬ ಜನ ಶಿಷ್ಯರೆಲ್ಲರೂ ಈ ಪೀಠಾಧಿಪತ್ಯ ಸ್ಥಾನವು ತಮಗೆ ದೊರೆಯಬೇಕೆಂದು ಟೆಹರಿ ಸಂಸ್ಥಾನದ ಪ್ರಭುತ್ವದಲ್ಲಿ ಅರ್ಜಿಗಳನ್ನು ಹಾಕಿಕೊಂಡಿರುವುದಾಗಿ ತಿಳಿದುಬರುತ್ತದೆ. ಈ ಪೀಠದ ಉತ್ತರಾಧಿಕಾರಿಗಳನ್ನು ನಿಯಮಿಸುವ ಬಗೆಗೆ ಅಲ್ಲಿನ ನ್ಯಾಯಸ್ಥಾನದವರು (Court) ಒಂದು ಯೋಜನೆಯುನ್ನು (Scheme) ತಯಾರಿಸಿರುವರೆಂತಲೂ ಅದರಲ್ಲಿ "ರಾವಲರು ತಮ್ಮ ಮಠದಲ್ಲಿರುವ ಶಿಷ್ಯರಲ್ಲಿ ಒಬ್ಬರನ್ನು ತಮ್ಮ ಉತ್ತರಾಧಿಕಾರಿಯುನ್ನಾಗಿ ಸೂಚಿಸಬಹುದು. ಹೀಗೆ ಸೂಚಿಸಲ್ಪಟ್ಟವನು ದಕ್ಷಿಣ ದೇಶದ ಜಂಗಮರೇ ಆಗಿರಬೇಕು. (The Rawal may nominate a successor from among the Cholas of the Math. The naminee must be Jangam Gosain from the Deccan) ಎಂದು ಹೇಳಲ್ಪಟ್ಟಿರುವುದೆಂತಲೂ ತಿಳಿಯುತ್ತದೆ.

ಮುಂದೆ ಆ ಯೋಜನೆಯಲ್ಲಿ ಈ ಕೆಳಗಿನ ವಿಷಯುವಿರುವದಂತೆ. (ಈ ಯೋಜನೆಯ ಭಾಗಗಳನ್ನು ಪಂಚಾಚಾರ್ಯಪ್ರಭಾ ಪತ್ರಿಕೆಯಿಂದ ಉಲ್ಲೇಖಿಸಿ ಇದೆ.)

ಗತಿಸಿದ ರಾವಲರು ತಮ್ಮ ಜೀವಿತ ಕಾಲದಲ್ಲಿ ತಮ್ಮ ಉತ್ತರಾಧಿಕಾರಿಯು ಹೆಸರನ್ನು ಗೊತ್ತುಪಡಿಸಬೇಕು. ರಾವಲರು ಮೃತರಾದಮೇಲೆ ಊಖೀ ಮಠದಲ್ಲಿರುವ ಶಿಷ್ಯರು, ಪೂಜಾರಿಗಳು ಕೇದಾರನಾಥ ದೇವಸ್ಥಾನ ಮತ್ತು ಅದಕ್ಕೆ ಸಂಬಂಧಪಟ್ಟ ದೇವಸ್ಥಾನಗಳ ಪೂಜಾರಿಗಳು ಕೆಲಸಗಾರರು ಮತ್ತು ಕೇದಾರ ಮಠಕ್ಕೆ ಸೇರಿದ ೧೪೩ ಇನಾಂ ಗ್ರಾಮಗಳ ಕಂದಾಯ ಕೊಡುವ ಜಮಿನಾನುದಾರರು ಮತ್ತು ಭಾಗದಾರರು ಇವರುಗಳಿಂದ ಕೂಡಿದ ಒಂದು ಪಂಚಾಯುತ್ ಸಭೆಯು ಓಖೀ ಮಠದಲ್ಲಿ ಕೂಡಬೇಕು. ಈ ಪಂಚಾಯಿತಿ ಸಭೆಯು ಮುಂದೆ ಗತಿಸಿದ ರಾವಲರು ಮೃತ್ಯುಪತ್ರದಲ್ಲಿ ಬರೆದಿಟ್ಟಿರುವ ಉತ್ತರಾಧಿಕಾರಿಯು ಹೆಸರನ್ನು ತಿಳಿಸಿ ಹೊಸ ರಾವಲನ್ನು ಆರಿಸಬೇಕು.

(The Late Rawal during his terms of office nominates a successor. After the Rawal's decease a Panchayat is held at Ukhimath at which the Pujaries & Chelas of the Math, the officials of establishments of Kedarnath and attached shrines refered to in Para 1 and the Malgujas & Co-Shares

of the assigned 143 villagers refened to in Para 2 have a right to attend such Panchayat as hither-to been held on a date to be fixed as prescribed in Para 12 below; at this Panchayat the namınation of the late Rawal is declared and a Rawal is elected by those present.)

ಇದರ ಮೇಲೆ ಆ ಯೋಜನೆಯ ೧೨ನೆಯ ಪ್ರಕರಣದಲ್ಲಿ ಹೀಗೆ ಹೇಳಲ್ಪಟ್ಟಿದೆ, "ಓಖೀ ಮಠದಲ್ಲಿ ಸೇರಿದ ಓಟುದಾರರಿಗೆ ಸ್ಪೆಷಲ್ ಅಧಿಕಾರಿಗಳು ಗತಿಸಿದ ರಾವಲರು ಬರೆದಿಟ್ಟಿರುವ ಉತ್ತರಾಧಿಕಾರಿಯ ಹೆಸರನ್ನು ತಿಳಿಸಬೇಕು. ಆಗ್ಗೆ ಶಿಷ್ಯರಲ್ಲಿ ಯಾರಾದರೂ ಉಮೇದುವಾರರಾಗಿ ನಿಂತು ರಾವಲರು ಬರೆದಿಟ್ಟಿರುವ ಸೂಚನೆಗೆ ವಿರೋಧಿಸಿದರೆ ಆಗ್ಯೆ ಸ್ಪೆಷಲ್ ಅಧಿಕಾರಿಗಳು ಓಟಿನ ಮೂಲಕ ಚುನಾವಣೆಯನ್ನು ನಡೆಸಬೇಕು. ಓಟುಗಳು ಎರಡೂ ಕಡೆಗೂ ಸಮವಾದ ಪಕ್ಷದಲ್ಲಿ ಗತಿಸಿದ ರಾವಲರು ಬರೆದಿಟ್ಟಿರುವ ಹೆಸರಿಗೆ ಒಪ್ಪಿಗೆಯನ್ನು ಕೊಡಬೇಕು."

(The nomination made by the late Rawal shall be declared by the special officer to the electors assembled at Ukimath who will then proceed to elect a successor in cases where the succession is disputed by apposing candidates. The votes of the electors shall be recorded in case of equality of votes. Preference shall be given to the nominee of the Rawal.)

(ಮೇಲಿನ ಕನ್ನಡ ಅನುವಾದವಲ್ಲಿ ದಪ್ಪ ಅಕ್ಷರದ ಭಾಗವು ಇಂಗ್ಲೀಷಿನ ಆ ಭಾಗಕ್ಕೆ ವ್ಯತ್ಯಾಸವಾಗಿದೆ.)

ಈ ಯೋಜನೆಯ ಭಾಗಗಳಲ್ಲಿ "ರಾವಲರು ಮಠದ ಶಿಷ್ಯರಲ್ಲಿ ಒಬ್ಬನನ್ನು ಉತ್ತರಾಧಿಕಾರಿಯಾಗಿ ಸೂಚಿಸಬಹುದು" ಎಂದಿರುವ ಅಭಿಪ್ರಾಯವನ್ನು ತಿಳಿದು ಈಗ ೫-೬ ಜನ ಆ ಮಠದ ಶಿಷ್ಯರು ತಮಗೆ ಮಠಾಧಿಪತ್ಯಬೇಕೆಂದು ಕೇಳಿರುವಂತೆ ತೋರುತ್ತದೆ. ಈ ಐದಾರು ಜನರೂ ದಕ್ಷಿಣ ದೇಶದ ಜಂಗಮರು ಅಹುದೋ ಅಲ್ಲವೋ ಎಂಬುದು ನಮಗೆ ತಿಳಿಯದಾಗಿದೆ.

ವೀರಶೈವ ಧರ್ಮದ ಪೀಠಾಚಾರ್ಯರಾಗಿರತಕ್ಕವರು ವೀರಶೈವ ಧರ್ಮ ಗ್ರಂಥಗಳಾದ ಸಿದ್ಧಾಂತ ಶಿಖಾಮಣಿ, ಅನುಭವಸೂತ್ರ ಮೊದಲಾದ ಗ್ರಂಥಗಳು, ಪಾರಮೇಶ್ವರ ತಂತ್ರ, ವಾತೂಲತಂತ್ರ, ಸೂಕ್ಷ್ಮತಂತ್ರ ಮೊದಲಾದ ಆಗಮಗಳು ಇವೇ ಮೊದಲಾದವುಗಳನ್ನು ಓದಿದವರಾಗಿ ವೀರಶೈವ ಪದ್ಧತಿಗೆ ಸರಿಯಾದ ಆಚರಣೆಯುಳ್ಳವರಾಗಿರಬೇಕು.

ದಕ್ಷಿಣ ದೇಶದ ಜಂಗಮರಲ್ಲಿ ಈ ಲಕ್ಷಣವು ನೆಲೆಗೊಂಡಿರುವುದೆಂತಲೇ ಯೋಜನೆಯಲ್ಲಿ ಈ ಮಠದ ಉತ್ತರಾಧಿಕಾರಿಗಳು ದಕ್ಷಿಣ ದೇಶದ ಜಂಗಮರಾಗಿರ

ಬೇಕೆಂದು ಸ್ಪಷ್ಟವಾಗಿ ಉಲ್ಲೇಖಿಸಿ ಇದೆ. ಅವರೆ ಈ ಮಠದ ಶಿಷ್ಯರಲ್ಲಿ ಯಾರಾದರೂ ದಕ್ಷಿಣ ದೇಶದ ಜಂಗಮರಿಲ್ಲದಿದ್ದರೆ ಬೇರೆ ದಕ್ಷಿಣ ದೇಶದ ಜಂಗಮರನ್ನು ಅವರು ಶಿಷ್ಯರಾಗದಿದ್ದರೂ ಆ ಅಧಿಕಾರಕ್ಕೆ ಗೊತ್ತುಪಡಿಸಬಹುದು.

Gazetteer of Garhwal (ಗರ್ವಾಲ್ ಗೆಜಿಟೀರ್) ೧೬೬ನೆಯ ಪುಟದಲ್ಲಿ ಕೇದಾರನಾಥ ದೇವಾಲಯದ ವಿಷಯವಾಗಿ ಬರೆಯುತ್ತಾ 'The temple is sacrred to siva and is under the contral of a Rawal who is a Jangam gosain of the Birseb Seet from the Deccan'. (ಈ ದೇವಸ್ಥಾನವು ಶಿವನ ಪೂಜ್ಯಸ್ಥಾನವಾಗಿದ್ದು ದಕ್ಷಿಣ ದೇಶದ ವೀರಶೈವ ಪಂಗಡದ ಜಂಗಮ ಗೋಸಾಯಿಯ ಮೇಲು ವಿಚಾರಣೆಯಲ್ಲಿದೆ) ಎಂದೂ ಅದೇ ಪುಸ್ತಕದ ೧೭೩ನೆಯ ಪುಟದಲ್ಲಿ ಊಖೀಮಠದ ವಿಷಯವಾಗಿ ಬರೆಯುತ್ತಾ "....The Priests officiating at Kedar Guptakashi Ukhmiath & Madhmeshwra belong to the establishment of the Math at Ukhimath, the head of which is the Rawal of Kedar math. They are Jangam gosains (lingaits) of the Briseb sect."

[ಕೇದಾರ, ಗುಪ್ತಕಾಶಿ, ಊಖೀಮಠ ಮತ್ತು ಮಧಮೇಶ್ವರ ಇವುಗಳ ಅರ್ಚಕರು ಊಖೀಮಠದಲ್ಲಿರುವ ಮಠದ ಆಡಳಿತಕ್ಕೆ ಸೇರಿದವರಾಗಿದ್ದಾರೆ. ಈ ಮಠದ ಮುಖ್ಯಾಧಿಕಾರಿಯು ಕೇದಾರನಾಥದ ರಾವಲ್ ಆಗಿದ್ದಾನೆ. ಅವರು ವೀರಶೈವ ಪಂಗಡದ ಜಂಗಮ ಗೋಸಾಯರು (ಲಿಂಗಾಯಿತರು) ಆಗಿದ್ದಾರೆ.

The imperial Gazetteer of India Vol. XV, (ಇಂಪೀರಿಯಲ್ ಗೆಜೆಟೀರ್ ಸಂಪುಟ ೧೫) ಪುಟ ೧೯೬ ರಲ್ಲಿ ಹೀಗೆ ಬರೆಯಲ್ಪಟ್ಟಿದೆ. "The Rawal or Chief Piest of Kedarmath is always a Jangama from Mysore or some other pait of southern India". (ಕೇದಾರನಾಥದ ಮುಖ್ಯ ಆಚಾರ್ಯನು ಯಾವಾಗಲೂ ಮೈಸೂರು ಅಥವಾ ದಕ್ಷಿಣ ದೇಶದ ಯಾವುದಾದರೂ ಇತರ ಭಾಗದ ಒಬ್ಬ ಜಂಗಮನು.)

ಇವುಗಳೆಲ್ಲವನ್ನೂ ನೋಡಿದರೆ ಕೇದಾರದ ಪೀಠಾಚಾರ್ಯರು ಯಾವಾಗಲೂ ಮೈಸೂರು ಅಥವಾ ದಕ್ಷಿಣ ದೇಶದ ಕಡೆಯ ವೀರಶೈವ ಜಂಗಮರೇ ಆಗಿರಬೇಕಾಗಿರುವುದರಿಂದ ಈ ಪ್ರಾಂತಗಳ ವೀರಶೈವರು ಈಗಲೂ ಪೀಠಾಧಿಪತ್ಯಕ್ಕೆ ಅಂತಹವರನ್ನೇ ಗೊತ್ತುಪಡಿಸುವುದರಲ್ಲಿ ಬದ್ಧಾದರರಾಗಿರಬೇಕೆಂದು ಇಲ್ಲಿ ಒತ್ತಿ ಹೇಳದೆ ಇರಲಾರೆವು.

ಮೇಲೆ ತೋರಿಸಲ್ಪಟ್ಟಿರುವ ಕೋರ್ಟಿನ ಯೋಜನೆಯಲ್ಲಿ ಬರೆದ ಅಭಿಪ್ರಾಯದ ಪ್ರಕಾರ ಆ ಮಠದ ಶಿಷ್ಯರು ತಾವೇ ಆಧಿಪತ್ಯವಹಿಸಬೇಕೆಂದು, ಅರ್ಜಿ ಹಾಕಿಕೊಂಡಿರುವುದು ಯುಕ್ತವಾದುದಲ್ಲ. ಏಕೆಂದರೆ ಮೇಲೆ ಕಂಡ ಗರ್ವಾಲ್ ಗೆಜೆಟೀರ್‌ನ ೧೭೭ ನೆಯ ಪುಟದಲ್ಲಿ ಹೀಗೆ ಹೇಳಲ್ಪಟ್ಟಿದೆ—

"The Rawal exercises temperal rather than apiritual authority over the affais of the endowment. He never officiatis himself at the shine of Kedarmath but appoints Chelas". (ರಾವಲರು ಈ ಧರ್ಮ ಸ್ವತ್ತಿನಲ್ಲಿ ಮತ ಸಂಬಂಧವಾದ ಕೆಲಸಕ್ಕಿಂತ ವಿಶೇಷವಾಗಿ ಐಹಿಕ ಕಾರ್ಯಗಳನ್ನೇ ನಡೆಸುತ್ತಾರೆ. ಅವರು ದೇವಸ್ಥಾನದ ಮೂರ್ತಿಗಳಲ್ಲಿ ಎಂದೂ ಕಾರ್ಯವನ್ನು ಮಾಡುವುದಿಲ್ಲ. ಆದರೆ ಶಿಷ್ಯರನ್ನು ನಿಯಮಿಸುತ್ತಾರೆ.) ಇದೇ ನಿಜವಾದ ವೀರಶೈವ ಪದ್ಧತಿಯು. ವೀರಶೈವ ಆಚಾರ್ಯರು ಎಂದೂ ಮೂರ್ತಿ ಪೂಜೆ ಮಾಡುವುದಿಲ್ಲ. ತಮ್ಮ ಶಿಷ್ಯರನ್ನು ಅವಕ್ಕೆ ನಿಯಮಿಸುತ್ತಾರೆ. ಆದರೆ ಆ ಮೂರ್ತಿಗಳ ಚೈತನ್ಯ ಕಲಾ ಭಿನ್ನವಾಗದಂತೆ ಇರಿಸುವ ಮುಖ್ಯ ಕಾರ್ಯವನ್ನು ಆಚಾರ್ಯರು ನಡೆಸುತ್ತಾರೆ. ಆದರೆ ಈಗ ಅರ್ಜಿ ಹಾಕಿರುವ ಶಿಷ್ಯರಲ್ಲಿ ಕೆಲವರು ಮೇಲೆ ಗೆಜೆಟೀರಿನಲ್ಲಿ ಕಂಡಂತೆ ಮೂರ್ತಿಗಳ ಪೂಜೆ ಮಾಡುವವರಿರಬಹುದು. ಇಂತಹವರನ್ನೆಲ್ಲಾ ಪೀಠಾಚಾರ್ಯರ ಪದವಿಗೆ ಏರಿಸುವುದು ಸರಿಯಾಗಿಲ್ಲ.

ಒಟ್ಟಿನಲ್ಲಿ ಒಂದು ಸಂಗತಿಯನ್ನು ತಿಳಿಸಬೇಕಾಗಿದೆ. ದಕ್ಷಿಣ ದೇಶದಲ್ಲಿ ಇದ್ದಂತೆ ವೀರಶೈವ ಆಚಾರ ಪದ್ಧತಿಯು ಕೇದಾರದಲ್ಲಿ ಇಲ್ಲ; ಅಲ್ಲಿ ಒಬ್ಬನು ಬ್ರಾಹ್ಮಣರಂತೆ ಜನಿವಾರವನ್ನು ಹಾಕಿ ತಾನು ವೀರಶೈವನೆಂದು ಹೇಳಬಹುದು. ಅವರನ್ನು ಪರಿಶೀಲಿಸಿ ಯೋಗ್ಯರನ್ನು ಪೀಠಾಚಾರ್ಯ ಪದವಿಗೆ ತರುವುದು ಸುಲಭ ಸಾಧ್ಯವಲ್ಲ. ಏಕೆಂದರೆ ಅದಕ್ಕೆ ದಕ್ಷಿಣ ದೇಶದ ವೀರಶೈವರ ಒಪ್ಪಿಗೆಯು ಬೇಕೇಬೇಕು. ಆದುದರಿಂದ ಅದಕ್ಕೆ ದಕ್ಷಿಣ ದೇಶದ ವೀರಶೈವ ಜಂಗಮರನ್ನೇ ಅಲ್ಲಿನ ಪೀಠದ ಅಧಿಪತ್ಯಕ್ಕೆ ಗೊತ್ತುಪಡಿಸುವುದು ಸುಸೂತ್ರವಾದ ಕೆಲಸವಾಗಿದೆ ಮತ್ತು ಪ್ರಾಚೀನ ರೂಢಿಯನ್ನು ಅನುಸರಿಸಿದಂತೆ ಆಗುತ್ತದೆ. (ಸಂ. ೫೩)

# ಶಿವರಾತ್ರಿ

(ಮೈಸೂರು ಆಕಾಶವಾಣಿಯಿಂದ ಬಿತ್ತರಿಸಿದ ಭಾಷಣ)

ಈ ದಿನ ಮಹಾಶಿವರಾತ್ರಿ. ಇಲ್ಲಿ ಮಾತನಾಡುವ ಅವಕಾಶವು ದೊರಕಿದುದು ನನಗೊಂದು ಭಕ್ತಿಯ ಸೇವೆಯು ದೊರಕಿತೆಂಬ ಸಂತೋಷದಲ್ಲಿ ಲೀನವಾಗಿದೆ.

ವರ್ಷಕ್ಕೊಮ್ಮೆ ಮಹಾಶಿವರಾತ್ರಿ ಹಬ್ಬವಾಚರಿಸಲ್ಪಡುತ್ತಿರುವುದು ಭಾರತದಲ್ಲೆಲ್ಲಾ ಪ್ರಸಿದ್ಧವಾದ ವಿಷಯ ಈ ದಿನ ಭಕ್ತಿಯುತರಾಗಿ ಶಿವನನ್ನು ಪೂಜಿಸುವುದಕ್ಕೆ ಸಲಕರಣೆಗಳನ್ನು ಒದಗಿಸುವುದು. ಪ್ರದೋಷ ಕಾಲದಲ್ಲಿ ವೈಭವದಿಂದ ಪೂಜಿಸುವುದು, ರಾತ್ರಿಯಲ್ಲಿ ಜಾಗರವಿದ್ದು ಮಹಾದೇವನ ಸ್ತೋತ್ರಗಳಲ್ಲಿ ಕಾಲವನ್ನು ಕಳೆಯುವುದು, ಮುಂತಾದುದರಲ್ಲಿ ಈ ದಿವಸವನ್ನೆಲ್ಲಾ ಮಹಾದೇವನಿಗಾಗಿ ಮುಡುಪಾಗಿ ಇಟ್ಟಿರುವುದು ಭಾರತದಲ್ಲಿ ವಿಶೇಷವಾಗಿ ಪ್ರಚಾರದಲ್ಲಿ ಇದೆ. ಈ ಮಹಾಶಿವರಾತ್ರಿಯಲ್ಲಿ ಶಿವನನ್ನು ವಿಶೇಷವಾಗಿ ಪೂಜಿಸುತ್ತಾರಷ್ಟೆ. ಅದಕ್ಕೆ ಕಾರಣವೇನು ? ಎಂಬ ಅಂಶಗಳನ್ನು ಭಾರತೀಯರು ಚೆನ್ನಾಗಿ ತಿಳಿದಿರುವುದು ಅವಶ್ಯಕ. ಸಾಮಾನ್ಯವಾಗಿ ಕೈಲಾಸದಲ್ಲಿ ಪರಮೇಶ್ವರನು ಪಾರ್ವತಿಯೊಡನೆ ಇದ್ದವನು, ಅವನಲ್ಲಿ ಭಕ್ತಿಯನ್ನು ಪ್ರದರ್ಶಿಸಿ ಆಚರಿಸುವುದಕ್ಕಾಗಿ ಈ ಮಹಾ ಶಿವರಾತ್ರಿ ಆಗಿದೆ, ಎಂದು ಅನೇಕರು ಭಾವಿಸಿ ಇರುತ್ತಾರೆ. ಹಾಗಿದ್ದರೆ ಆ ಶಿವನ ಪ್ರತಿಮೆಯನ್ನು (ಉಮಾ ಸಹಿತ)ಪೂಜಿಸಬೇಕಾಗಿದ್ದಿತು. ಅದಿಲ್ಲ ಮಹಾಶಿವರಾತ್ರಿಯನ್ನಾಚರಿಸುವವರು ಬಹಳವಾಗಿ ಲಿಂಗಪೂಜೆಯನ್ನೇ ಮಾಡುತ್ತಾರೆ.

ಪಾರ್ವತೀಪತಿಯಾದ ಶಿವನು ಸಗುಣರೂಪ ಸಾಕಾರಮೂರ್ತಿ. ಇಂತಹ ಅನೇಕ ಸಾಕಾರಮೂರ್ತಿಗಳನ್ನು ಪೂಜಿಸುವವರು ಬಹಳವಾಗಿ ಇದ್ದಾರೆ. ಸಾಕಾರಮೂರ್ತಿಗಳೆಂದರೆ ಕೈ ಕಾಲುಗಳು ಉಳ್ಳವರು. ಸುಗುಣಮೂರ್ತಿಗಳೆಂದರೆ ಸತ್ವ, ರಜ, ತಮ, ಎಂಬ ಗುಣಗಳುಳ್ಳವರು. ಈ ಮೂರ್ತಿಗಳ ಪೂಜೆಗಿಂತಲೂ ನಿರಾಕಾರ ನಿರ್ಗುಣ ಪರವಸ್ತುವಿನ ಪೂಜೆಯು ಉತ್ತಮವಾದುದೆಂಬುದೂ ಭಾರತೀಯ ಧರ್ಮಗ್ರಂಥಗಳು ಹೇಳುವ ಸಾರವಾದ ಅಂಶವಾಗಿದೆ ಮಹಾದೇವನು (God) ನಿರಾಕಾರನೆಂಬುದು ಎಲ್ಲರೂ ಒಪ್ಪತಕ್ಕ ವಿಷಯ. ಆ ನಿರಾಕಾರ ಪರವಸ್ತುವೇ ಗಟ್ಟಿಕೊಂಡು ಭೂಮಿ ಮೊದಲಾದ ದೊಡ್ಡ ದೊಡ್ಡ ವಸ್ತುಗಳಾಗಿ ಪರಿಣಮಿಸಿ ಇದೆ ಎಂಬುದೂ, ಎಲ್ಲರೂ ಒಪ್ಪತಕ್ಕ ವಿಷಯ. ಹೀಗೆ ಯೋಚಿಸುವುದಾದರೆ ನಿರಾಕಾರ ವಸ್ತುವೇ ಗೋಳಾಕಾರದ ಘನವಸ್ತುಗಳ ರೂಪಗಳನ್ನು ಹೊಂದಿದೆ ಎಂದು ಹೇಳಲಿಕ್ಕೆ ಅಡ್ಡಿಏನೂ ಇಲ್ಲ. ಈ ಗೋಳಾಕಾರದ ವಸ್ತುಗಳಿಗೆ ಕೈಯಲ್ಲಿ ಕಲ್ಲು. ಮನುಷ್ಯರಲ್ಲಿ ಸತ್ತ್ವರಜ ತಮಗಳಿರುವಂತೆ

ಗುಣಗಳೂ ಇಲ್ಲ. ಆದುವರಿಂದ ಅದೇ ನಿರಾಕಾರ ವಸ್ತುವಿನ ಪ್ರತಿರೂಪ ಎಂದು ಸಹಜವಾಗಿ ಪ್ರಕೃತಿಯ ಸ್ವಭಾವದಿಂದಲೇ ನಿಶ್ಚಯಿಸಲಿಕ್ಕೆ ಬರುತ್ತದೆ. ಇಂತಹ ಪ್ರಕೃತಿ ಲಕ್ಷಣಯುಕ್ತವಾದ ಗೋಳಾಕಾಕಾರದ ಪ್ರತಿರೂಪವೇ ಲಿಂಗವು. ಕೈಲಾಸದ ಶಿವನೂ ಇಂತಹ ಲಿಂಗವನ್ನು ಪೂಜಿಸುತ್ತಾ ಇದ್ದನು. 'ಶಿವಯೋಗೀಶ್ವರ' ಎಂಬ ಪ್ರತಿಮೆಯು ಎಡಗೈಯಲ್ಲಿ ಲಿಂಗವ ಧರಿಸಿ ಪೂಜಿಸುವಂತೆ ಇರುವುದು ದೊರಕುತ್ತದೆ.

ಬ್ರಹ್ಮ ವಿಷ್ಣು ಈ ಮೂರ್ತಿಗಳಂತೆ ಶಿವನು ಸಗುಣನು ಅವನು ತ್ರಿಮೂರ್ತಿಗಳಲ್ಲಿ ಒಬ್ಬನು ಎಂದು ಹೇಳುವುದಕ್ಕೆ ಗ್ರಂಥ ಪ್ರಮಾಣಗಳು ದೊರಕುತ್ತಿರುವವು. ಶಿವನು ನಿರ್ಗುಣವೆಂದು ತಿಳಿಯುವುದು ಹೇಗೆ ? ಎಂಬ ಶಂಕೆ ಬರಬಹುದು. ಈ ಶಂಕೆಗೆ ಅವಕಾಶವಿಲ್ಲ. ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಿದ ಉತ್ತರ ಗೀತೆಯಲ್ಲಿ ನಿರಾಕಾರ ಪರವಸ್ತುವಿಗೆ 'ಶಿವ' ಎಂದು ಕರೆಯಲ್ಪಟ್ಟಿದೆ. ವಾತುಲಾಗಮದಲ್ಲಿ ಶಿವತತ್ತ್ವವು ನಿರಾಕಾರವೆಂದು ಹೇಳಿರುವುದು ಮಾತ್ರವಲ್ಲದೆ. ಅದಕ್ಕೆ ಶುದ್ಧ. ಪರಾತ್ಪರ, ಸೂಕ್ಷ್ಮ. ನಿತ್ಯ. ಸರ್ವಗತ, ಅವ್ಯಯ. ಅನಿಂದಿತ. ಅಪ್ರಮಾಣ, ಅನಾಮಯ ಎಂಬ ಹತ್ತು ಲಕ್ಷಣಗಳು ಹೇಳಲ್ಪಟ್ಟಿರುವುವು. ಅದ್ವೈತಿಗಳು ನಿರಾಕಾರ ಬ್ರಹ್ಮನಿಗೆ ಸತ್, ಚಿತ್, ಆನಂದ. ನಿತ್ಯ, ಪರಿಪೂರ್ಣ ಎಂಬ ಐದು ಲಕ್ಷಣಗಳನ್ನು ಹೇಳುತ್ತಾರೆ. ಈ ಐದು ಲಕ್ಷಣಗಳುಳ್ಳ ಘನವಸ್ತುವೇ 'ಬ್ರಹ್ಮ ' ಎಂದೂ ಮೊದಲು ಹೇಳಿದ ಹತ್ತು ಲಕ್ಷಣಗಳುಳ್ಳ ಸೂಕ್ಷ್ಮ ಮೂಲರೂಪವೇ 'ಶಿವ' ಎಂದೂ ತಿಳಿಯಲಿಕ್ಕೆ ಬರುತ್ತದೆ. ಘನವಸ್ತುವೇ ಬ್ರಹ್ಮ ಎಂಬುದಕ್ಕೆ ಅದರಿಂದ ಉಂಟಾದ ಅಂಡಕ್ಕೆ ಬ್ರಹ್ಮಾಂಡ ಎಂಬ ಹೆಸರಿರುವುದೇ ದೊಡ್ಡ ದೃಷ್ಟಾಂತರ. ಸೂಕ್ಷ್ಮಮೂಲ ವಸ್ತುವಿನಲ್ಲಿ ಸತ್ವರಜತಮ ಗುಣಗಳನ್ನು ಮೀರಿದ್ದಾಗಿ ಆ ಗುಣಗಳನ್ನು ಹುಟ್ಟಿಸುವ ಶಕ್ತಿಯೂ ಅದರಲ್ಲಿ ಕೂಡಿಕೊಂಡಿದೆ. ಎಂದು ಧಾರಾಳವಾಗಿ ಹೇಳಲಿಕ್ಕೆ ಬರುತ್ತದೆ. ಆದುದರಿಂದ ನಿರಾಕಾರ ಶಿವನ ಸಾಕಾರ ರೂಪವು ಗೋಳಕಾಕಾರ ಲಿಂಗ ಎಂದು ಭಾವಿಸಲ್ಪಟ್ಟು ಲಿಂಗ ಪೂಜೆಯು ಪ್ರಚಾರಕ್ಕೆ ಬಂದಿರುತ್ತದೆ. ಈ ದೆಸೆಯಿಂದ ಬ್ರಹ್ಮವೇ ಲಿಂಗ. ಶಕ್ತಿಯನ್ನು ಸ್ತ್ರೀ ರೂಪದಲ್ಲಿಯೂ ಚೈತನ್ಯವನ್ನು ಪುರುಷರೂಪದಲ್ಲಿಯೂ ತಿಳಿಯುವುದು ಸ್ವಾಭಾವಿಕವಾದುದರಿಂದ ಶಿವಾಲಯಗಳಲ್ಲಿ ಲಿಂಗಗಳು ಶಕ್ತಿರೂಪವಾದ ಪಾಣಿವೀರವನ್ನೂ ಪುರುಷ ರೂಪವಾದ ಬಾಣವನ್ನೂ ಒಳಗೊಂಡಿರುವುವು. ಇಂತಹ ಲಿಂಗಗಳ ಮೇಲೆ (ಕಂಥೆ)ಯನ್ನು ಧರಿಸಿರುವುದೇ ಗೋಳಾಕಾಕಾರ ಲಿಂಗ. ಅಂತು ಲಿಂಗಪೂಜೆಯು ನಿರ್ಗುಣ ಪೂಜೆಯಾಗಿದೆ. **"ಲಿಂಗಂ ಚ ನಿರ್ಗುಣಂಧಾಮು"** ಎಂಬ ಆಗಮ ಪ್ರಮಾಣವೂ ಇದೆ.

ಸಗುಣ ಸಾಕಾರ ಮೂರ್ತಿಗಳ ಪೂಜೆಮಾಡುವವರೆಲ್ಲರೂ ಈ ಮಹಾಶಿವರಾತ್ರಿಯಲ್ಲಿ ನಿರ್ಗುಣ ನಿರಾಕಾರ ವಸ್ತುವನ್ನು ಪೂಜೆಮಾಡಲಿ;ಅದರಿಂದ ಹೆಚ್ಚಿನ ಧಾರ್ಮಿಕ ಪ್ರಯೋಜನವನ್ನು ಪಡೆಯಲಿ;ಆ ಪ್ರಯೋಜನವು ವರ್ಷಕ್ಕೊಂದು ದಿನವಾದರೂ ದೊರಕಲಿ—ಎಂಬ ಉದ್ದೇಶವನ್ನಿಟ್ಟುಕೊಂಡು ಈ ಹಬ್ಬವು ಆಚರಣೆಗೆ ಬಂದಿದೆ. ಆದುದರಿಂದಲೇ ಭಾರತ ಧರ್ಮೀಯರು ಬಹು ಭಕ್ತಿಯಿಂದ ಎಲ್ಲರೂ ಮಹಾಶಿವರಾತ್ರಿ

ಯನ್ನು ಆಚರಿಸುತ್ತಾರೆ. ಆಚರಿಸದೆ ಇರುವವರು ಅಪರೂಪ. ಸಾಕಾರಮೂರ್ತಿಗಳಿಂದ (ಆ ಮೂರ್ತಿ ಪೂಜೆಯಿಂದ) ಈ ಲೋಕದ ಸುಖದ ಸಾಧನೆ ಯಾಗುವುದು. ನಿರ್ಗುಣ ಮೂರ್ತಿಯಿಂದ (ಆ ಮೂರ್ತಿಯ ಅನುಭವದಿಂದ) ಮನುಷ್ಯನ ಜೀವದ (ಪ್ರಾಣ) ಉನ್ನತಿಯಾಗುವುದು. ಈ ದೆಸೆಯಿಂದ ಮಹಾಶಿವರಾತ್ರಿಯನ್ನು ಏರ್ಪಡಿಸಲಾಗಿದೆ ಎಂದು ತಿಳಿಯಬೇಕಾಗಿದೆ.

ಕಲ್ಯಾಣದ ಶ್ರೀ ಬಸವೇಶ್ವರನಿಗೂ ಶಿವರಾತ್ರಿಯಲ್ಲಿ ಗೌರವ ವಿಶೇಷವಾಗಿ ಇದ್ದಿತು. ಆ ಮಹಾತ್ಮನು ತನ್ನದೊಂದು ವಚನದಲ್ಲಿ ಹೀಗೆ ಹೇಳಿರುತ್ತಾನೆ.

"ಹೃದಯ ಕತ್ತರಿ ತುದಿನಾಲಿಗೆ ಬೆಲ್ಲೆಂಬೋ, ಆಡಿಹೆನೆಂಬೋ, ನಿಚ್ಚ ನಿಚ್ಚ ಶಿವ ರಾತ್ರಿಯ ಮಾಡಿಹೆನೆಂಬೋ ಆನು ಎನ್ನಂತೆ, ಮನದಂತೆ, ಕೂಡಲಸಂಗಮದೇವ ತಾನು ತನ್ನಂತೆ."

ಈ ವಚನದಿಂದ ಶಿವರಾತ್ರಿಯನ್ನಾಚರಿಸುವವರು ಬಹಳವಾಗಿ ತಿಳಿಯತಕ್ಕ ಅಂಶ ಗಳಿವೆ. ಹೃದಯದಲ್ಲಿ ಕೆಡುಕು ಮಾಡಬೇಕೆಂಬ ಭಾವವಿಟ್ಟುಕೊಂಡು ಬಾಯಲ್ಲಿ ಮಾತ್ರ ಸಿಹಿ ಮಾತನಾಡುವ ಮನುಷ್ಯನು ಹೇಗೋ, ಶಿವನ ಮಾತನ್ನು ಆಡಿ ಇರುವೆನು; ಶಿವನ ಸ್ತೋತ್ರವನ್ನು ಮಾಡಿ ಇರುವೆನು;ದಿನಾಲೂ ಶಿವರಾತ್ರಿಯನ್ನು ಮಾಡಿಕೊಂಡಿ ರುವೆನು, ಎಂದು ಹೇಳುವ ಮನುಷ್ಯನ ಹಾಡು ಹಾಗೇಯೇ. ಹಾಗಾದರೆ ಆ ಮನುಷ್ಯ ನಿಗೆ ಆನು ಎನ್ನವಂತೆ ಎಂದರೆ ಇತರ ಮನುಷ್ಯರಂತೆ, ಅವನ ಮನಸ್ಸು ಇತರರ ಮನ ಸ್ಸಿನಂತೆ ಹೀಗಾದರೆ ಶಿವನು ತಾನು ತನ್ನಂತೆ ಇರುವನು, ಆ ಮನುಷ್ಯನಿಗೆ ಒಲಿಯುವು ದಿಲ್ಲ ಎಂದು ಈ ವಚನದ ಭಾವಾರ್ಥ.

ಶಿವರಾತ್ರಿಯಲ್ಲಿ ಆಡಂಬರದಿಂದ ಪೂಜಿಸುವವರೂ ಬಂಡಿ ಬಂಡಿ ಪತ್ರಿಯ ತಂದು ಲಿಂಗದ ಮೇಲೆ ಧರಿಸುವವರೂ ಕೊಡಗಟ್ಟಲೆಯ ಹಾಲು ತಂದು ಎರೆದು ಲಿಂಗ ಮಜ್ಜನ ಮಾಡಿಸುವವರೂ ವಿಧವಿಧವಾದ ದೀಪಾರತಿಗಳಿಂದ ಬೆಳಗುವವರೂ ಈ ವಿಧದಲ್ಲಿ ಅನೇಕ ಉಪಚಾರ ಮಾಡುವವರೂ ಬಹಳವಾಗಿ ಸಿಕ್ಕಬಹುದು. ಶಿವರಾತ್ರಿಯ ಹಬ್ಬ ದಂತೆ ದಿನದಿನ ಲಿಂಗಪೂಜೆಯನ್ನು ಮಾಡುತ್ತೇವೆ ಎಂದೂ ಹೇಳಬಹುದು. ಇಂತಹ ವರಿಗೆ ಶಿವನು ಒಲಿಯನು.

"ಬಂಡಿ ಬಂಡಿ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವಿರಯ್ಯ ತಾಪತ್ರ ಕಳೆದು ಪೂಜಿಸಿ;ತಾಪತ್ರಯವ ಲಿಂಗನೊಲ್ಲ ಕೂಡಲಸಂಗಮದೇವ ಬರಿಯುದಕವಲಿ ನೆನೆವನೇ" ಹೀಗೆ ಬಸವೇಶ್ವರನೇ ಹೇಳಿರುತ್ತಾನೆ.

ಅದ್ವೈತ ವಿದ್ಯೆಯಲ್ಲಿ ನಿಪುಣನೆನಿಸಿಕೊಂಡ ಜನಕ ಮಹಾರಾಜನೂ ಲಿಂಗ ಪೂಜ ಕನಾಗಿದ್ದನು. ಅವನು ಒಮ್ಮೆ ಹೀಗೆ ಹೇಳಿದ್ದಾನೆ.

ಕಃ ಕಲ್ಯಾಣ ಪರಂಪರಾರ್ಣವ ಪರಂ ತಂ ಶಂಕರಂ ನ ಸ್ಮರೇತ್
ಗೌರೀ ಚಾಹ ಕುಚೋರು ಕುಂಕುಮ ರಸಾ ಸಾರಾರುಣಾಂಘ್ರಿ ಪರಂ

ಸೋಹಂ ಭಾವನಯಾಪಿ ಸಂಸ್ಮರ ಮಹಾದೇವಂ ಮುಹುರ್ಮೋಹಭಿಃ ॥
ಸ್ವಾಜ್ಯಾ ಪೂಜ್ಯತಮೋತ್ತಮೋತ್ತಮ ತಮಂ ಸೋಮಂ ಮನಃ ಸಂಸ್ಮರ

"ಸುಖಪರಂಪರೆಗಳನ್ನು ತುಂಬಿಕೊಂಡು ಸಮುದ್ರ ರೂಪನಾದ ಶಂಕರನನ್ನು ಯಾರು ಸ್ಮರಿಸುವುದಿಲ್ಲ ? ಗೌರೀಕುಚಗಳ ಕುಂಕುಮ ರಸದ ಸಾರದಿಂದ ಕೆಂಪಾದ ಶಿವನ ಪಾದಗಳನ್ನು ಯಾರು ಸ್ಮರಿಸುವುದಿಲ್ಲ ? ಎಲೈ ಮನಸ್ಸೇ, ಒಂದು ಕ್ಷಣಮಾತ್ರ ಶಂಕರನಲ್ಲಿ ಮೋಹವಿಡುವ ಅಂಜಿಕೆಯನ್ನು ಬಿಟ್ಟುಬಿಡು. ಪೂಜ್ಯರಲ್ಲಿ ಉತ್ತಮ, ಉತ್ತಮತರ, ಉತ್ತಮತಮನಾದ ಸೋಮನನ್ನು ಸೋಹಂ ಭಾವನೆಯಿಂದಲಾದರೂ ಸ್ಮರಿಸು" ಎಂದು ಇದರ ಭಾವಾರ್ಥ.

ಮಹಾಶಿವರಾತ್ರಿಯಲ್ಲಿ ಭಕ್ತರು ಒಂದು ದಿನ ತಮ್ಮನ್ನು ಶಿವನ ಕೆಲಸಕ್ಕಾಗಿ ಹೇಗೆ ಒಪ್ಪಿಸಿಬಿಡುವರೋ ಅದೇ ರೀತಿ ಮನಸ್ಸು ತನ್ನನ್ನು ಶಿವನಿಗೆ ಒಪ್ಪಿಸಿ, ತಾನೇ ಶಿವ ಎಂದು ಹೇಳುವುದೇ ಸೋಹಂ ಭಾವನೆ. ಇಂತಹ ಭಾವನೆಯಿಂದ ಪೂಜಿಸುವುದು ಆಡಂಬರದ ಪೂಜೆಗಿಂತಲೂ ಮೇಲಾದುದು. 'ತಾಪತ್ರಯವ ಕಳೆದು 'ಪೂಜಿಸಿ', ಎಂದು ಶ್ರೀ ಬಸವೇಶ್ವರನು ಹೇಳಿದುದೂ ಇದೇ ಅಭಿಪ್ರಾಯವುಳ್ಳದು. ನನಗೆ ಜೀವನ (ಆತ್ಮ) ತೊಂದರೆ, ಭೂತಗಳ ತೊಂದರೆ, ದೈವಿಕ ತೋದರೆ, ಎಂದು ತಿಳಿಯುವುದೇ ತಾಪ ತ್ರಯ. ಅದನ್ನು ಕಳೆಯುವುದೆಂದರೆ ಅವೆಲ್ಲವೂ ಶಿವರೂಪವೆಂದು ತಿಳಿಯುವುದು ನವೀನ ಶಾಸ್ತ್ರಜ್ಞರು (Scientiats) ಈ ಬ್ರಹ್ಮಾಂಪವು ಅಣುವಿನಿಂದ ಆಗಿದೆ. ಎಂದು ಹೇಳುತ್ತಾರೆ. ಇದರಂತೆ ಈ ಬ್ರಹ್ಮಾಂಡವು ಸೂಕ್ಷ್ಮವಾದ ಶಿವರೂಪದಿಂದ ಆಗಿದೆ ಎಂದು ಹೇಳುವ ಪೂರ್ವಿಕರ ಶಾಸ್ತ್ರವು (ಉಪನಿಷ್ಯತ್) ನಿಜ ಎಂದು ತಿಳಿಯುವುದರಲ್ಲಿ ಟತಂಕವೇನೂ ಇಲ್ಲ. ಶಿವರಾತ್ರಿಯಲ್ಲಿ ಶಿವಪೂಜೆಯನ್ನು ಆಡಂಬರದಲ್ಲಿ ನಡೆಸುವವರು ಈ ರಹಸ್ಯವನ್ನು ಚನ್ನಾಗಿ ತಿಳಿದು ಉನ್ಮನೀವಂತರಾಗಬೇಕೆಂದು ನನ್ನ ಅನೇಕ ವಿನಯಾ ರ್ಥಿಗಳು;ಅದೇ ಸೋಹಂ ಭಾವನೆಯ ವರ್ತನೆ. ಆಗ ಉಪಚಾರಗಳೆಲ್ಲವೂ ಶಿವಾಕಾರ ವಾಗಿಯೇ ತಿರುಗುವುವು.

ವೀರಶೈವರು ಲಿಂಗಪೂಜಾಲೋಲುಪರಾದವರು. ಇವರು ತಮ್ಮ ದೇಹವೇ ಇಷ್ಟಲಿಂಗವೆಂದೂ ಮನವೇ ಪ್ರಾಣಲಿಂಗವೆಂದೂ ಭಾವವೇ ಭಾವಲಿಂಗವೆಂದೂ ತಿಳಿ ದವರು ಆದುದರಿಂದ ಸೋಹಂಭಾವನೆಯ ವರ್ತನೆಯು ಇವರಲ್ಲಿ ರೂಢ ಮೂಲವಾಗಿ ನೆಲೆಗೊಂಡಿದೆ. ಇವರು ತಮ್ಮನ್ನು ನಿತ್ಯವೂ (ಯಾವಾಗಲೂ) ಶಿವನಿಗೆ ಒಪ್ಪಿಸಿ ಶಿವ ಪೂಜೆಮಾಡುವವರು 'ರುದ್ರೋ ಭೂತ್ವಾ ಯಜೇದ್ ರುದ್ರಂ' ಎಂಬಂತೆ ಶಿವನಾಗಿ ಶಿವ ಪೂಜೆಯನ್ನು ಮಾಡುವವರು. ಆದುದರಿಂದ ಇವರು ಮಾಡುವ ಶಿವಪೂಜೆಯು ಶಿವ ರಾತ್ರಿಯ ಪೂಜೆಯಂತೆ ಇರುವುದು. ಆದುದರಿಂದ "ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿ ದೆನೆಂಬೋ" ಎಂದು ಬಸವೇಶ್ವರನು ಹೇಳಿದುದು ಇವರಿಗಾಗಿಯೇ. ಇವರೂ ಮಹಾ ಶಿವರಾತ್ರಿಯ ಹಬ್ಬವನ್ನು ವಿಶೇಷ ವೈಭವದಿಂದ ಆಚರಿಸುತ್ತಾರೆ. ಪೂಜೆ ಮಾಡುವುದ ರಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಮೂರು ಭೇದಗಳಿವೆ. ನಿತ್ಯಪೂಜೆಯು

ಸಾಮಾನ್ಯವಾಗಿ ದಿನಾಲೂ ಇದ್ದುದೇ. ನೈಮಿತ್ತಿಕ ಪೂಜೆಯು ವಿಶೇಷವಾಗಿ ನಡೆಸಲ್ಪಡುವುದು. ಮಹಾಶಿವರಾತ್ರಿಯಂತಹ ದಿನಗಳಲ್ಲಿ ವಿಶೇಷವಾಗಿ ಶಿವಪೂಜೆಮಾಡುವುದು ಅವರಿಗೆ ಸೇರಿದುದು. ಕಾಮ್ಯ ಪೂಜೆಯು ಯಾವುದಾದರೊಂದು ಫಲದ ಉದ್ದೇಶವನ್ನಿಟ್ಟುಕೊಂಡು ಲೋಕ ಹಿತಾರ್ಥವಾಗಿಯಾಗಲೀ, ಪರಾರ್ಥವಾಗಿಯಾಗಲೀ ಆಚರಿಸುವುದು.

*ವೀರಶೈವರಲ್ಲಿ ಇಷ್ಟ ಪ್ರಾಣಭಾವಲಿಂಗಗಳ ರೂಪವಾಗಿ ಗುರುಲಿಂಗಜಂಗಮರು ಬಾಹ್ಯದಲ್ಲಿ ತೋರುತ್ತಾರೆ, ಎಂಬ ಭಾವನೆ ಇದೆ. ಇವರಲ್ಲಿ ಜಂಗಮವೇ ಪರವಸ್ತುವಿನ ಸಾಕ್ಷಾದ್ರೂಪವೆಂದು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಈ ಮಹಾಶಿವರಾತ್ರಿಯ ದಿನ ಜಂಗಮಪೂಜೆಯನ್ನು ವಿಶೇಷ ವೈಭವದಿಂದ ನಡೆಸಿ ಮಾರನೆಯ ಬೆಳಿಗ್ಯೆ ಗಣಾರಾಧನೆಯನ್ನು ಮಾಡಿ ಅನೇಕ ಶಿವಶರಣರು ತಮ್ಮ ದಾಸೋಹಂಭಾವವನ್ನು ವ್ಯಕ್ತಪಡಿಸಿದ್ದಾರೆ. ಈಗಲೂ ಈ ರೀತಿ ನಡೆಸುವ ಮಹನೀಯರು ಅನೇಕರಿದ್ದಾರೆ. ಇವರ ಈ ವರ್ತನವು ಬಹಳ ಸ್ತುತ್ಯವಾದುದು. ಆದರೆ ಈಗಿನ ದಾಸೋಹವು ಆಹಾರವಿಲ್ಲದವರಿಗೆ ಸಲ್ಲುವಂತೆ ಆಗಬೇಕು.

ಶಿವ ಮಹಾ ಪುರಾಣದಲ್ಲಿ ಈ ದಿನದ ಉತ್ಸವವು 'ಮಹಾಶಿವರಾತ್ರಿಯ ವ್ರತ' ಎಂದು ಹೇಳಲ್ಪಟ್ಟಿದೆ.

'ಇದಂ ವ್ರತಂ ಚ ಸರ್ವೇಷಾಂ ಧರ್ಮ ಸಾಧನ ಮುತ್ತಮಂ ।
ವರ್ಣಾ ನಾಮಾಶ್ರಮಾಣಾಂ ಚ ಸ್ತ್ರೀಣಾಂ ಚ ಶಿಶುನಾಂ ತಥಾ ।
ದಾಸಾನಾಂ ದಾಸಿಕಾನಾಂ ಚ ಹಿತಂ ವ್ರತಮನುತ್ತಮಂ ।
ದೇವಾನಾಂ ದಾನವಾನಾಂ ಚ ಸರ್ವೇಷಾಂ ಚ ಶರೀರಿಣಾಂ ।
ಸಕಾಮಾನಾಂ ಚ ಸರ್ವೇಕೆಷಾಂ ಭುಕ್ತಿ ಮುಕ್ತಿ ಪ್ರದಾಯಕಂ ।
ಮಾಘಸ್ಯೈ ವಾಸಿತೇ ಪಕ್ಷೇ ಕೃಷ್ಣಾ ಚೈವ ಚತುರ್ದಶೀ ।
ನಿಶಾರ್ಧ ವ್ಯಾಪಿನೀ ಗ್ರಾಹ್ಯಾ ಹತ್ಯಾ ಕೋಟಿ ವಿನಾಶಿನೀ ।
ತದ್ದಿನೇ ಚೈವ ಯತ್ಕಾರ್ಯಂ ಶ್ರೂಯತೇ ಕಥಯಾಮಿತೇ ॥'

ಎಂದು ಹೇಳಲ್ಪಟ್ಟಿದೆ. ಮಾಘ ಬಹುಳ ೧೪ ದಿನ ಕೋಟಿ ಹತ್ಯಗಳ ಪಾಪವಿನಾಶನ ಕಾಲವು ರಾತ್ರಿಯ ಮೊದಲನೆಯ ಅರ್ಧದಲ್ಲಿ ಇದೆ. ಆ ದಿನದಲ್ಲಿ ಮಹಾಶಿವರಾತ್ರಿಯು ಏರ್ಪಾಡಾಗಿದೆ, ಎಂದು ಶಿವನ ಮೇಲಿನ ಶ್ಲೋಕಗಳನ್ನು ಹೇಳುತ್ತಾನೆ. ಆದುದರಿಂದ ಎಲ್ಲಾ ವರ್ಣದವರಿಗೂ ಆಶ್ರಮದವರಿಗೂ ದಾಸದಾಸೀ ಜನರೇ ಮೊದಲಾದವರೆಲ್ಲರಿಗೂ ಈ ವ್ರತವು ಶ್ರೇಷ್ಠವಾದುದೆಂದು ವ್ಯಕ್ತವಾಗುತ್ತದೆ.

ಕೈಲಾಸದ ಶಿವನು ಸರ್ವ ವಿದ್ಯೆಗಳಿಗೂ ಮೂಲನು ಎಂಬುದು ಪ್ರಸಿದ್ಧವಾಗಿದೆ. ಅವನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಕಾಲವನ್ನು ನಿರ್ಧರಿಸಿ ಮಹಾಶಿವರಾತ್ರಿಯನ್ನು ಏರ್ಪಡಿಸಿರಲಿ ಅಥವಾ ತಾನೇ ಮಹಾಶಿವರಾತ್ರಿಯನ್ನು ಆಚರಿಸಿ ಇವನ್ನು ಮುಂದಕ್ಕೆ

ತಂದಿರಲಿ. ಅವರ ಕಾಲದಿಂದಲೂ ಈ ಮಹಾಶಿವರಾತ್ರಿಯು ಆಚರಣೆಯಲ್ಲಿ ಬಂದಿದೆ ಎಂದು ಹೇಳಲನುಮಾನವೇನೂ ಇಲ್ಲ.

"ಪ್ರತಿ ಮಾಸದಲ್ಲಿಯೂ ಬಹುಳ ೧೪ ಶಿವರಾತ್ರಿಯು ಬರುವುದೆಂದೂ ಶಿವ ಪುರಾಣದ ಹೇಳಿಕೆ. ಅವುಗಳಲ್ಲಿ ಮುಖ್ಯವಾದುದು ಮಾಘ ಬ. ೧೪. ಅದೇ ಈ ವರ್ಷದ ಇಂದಿನ ಮಹಾಶಿವರಾತ್ರಿ."

ಶಿವರಹಸ್ಯದಲ್ಲಿ ಜಾತಿಭೇದಗಳಿಲ್ಲದೆ ಯಾರಾದರೂ ಲಿಂಗಪೂಜೆ ಮಾಡಲು ಅರ್ಹರೆಂಬ ಹೇಳಿಕೆ ಇದೆ. ಆದುದರಿಂದ ಎಲ್ಲರನ್ನೂ ಒಂದೇ ಸಮನಾಗಿ ಕಾಣುವ ಭಾವನೆಯು ನಿರಾಕಾರ ರೂಪ ಶಕ್ತಿ ವಿಶಿಷ್ಟನಾದ ಶಿವನ ಪೂಜೆಯಲ್ಲಿ ಬಹಳ ಪೂರ್ವದಿಂದಲೂ ಉಂಟಾಗಿದ್ದಿತೆಂದು ತಿಳಿಯಲವಕಾಶವಾಗಿದೆ. ಅಂತೂ ಶಿವಪೂಜೆಯ ವೈಶಿಷ್ಟ್ಯವು ಭಾರತದಲ್ಲಿ ಎಲ್ಲರನ್ನೂ ಒಂದುಗೂಡಿಸುವುದಕ್ಕೆ ಬಹುಮುಖ್ಯ ಸಾಧನವಾಗಿದೆ. ಈ ದಿನ ದೇವಾಲಯದಲ್ಲಿ ಲಿಂಗ ಪೂಜೆ ಮಾಡುವವರೆಲ್ಲರೂ ಶಕ್ತಿವಿಶಿಷ್ಟ, ಶಿವಾದ್ವೈತ ಪರರು, ಎಂದು ಸ್ಪಷ್ಟವಾಗಿ ಗೋಚರವಾಗುತ್ತದೆ. ಕೈಲಾಸದ ಶಿವನು ಪ್ರತಿನಿತ್ಯ ಸಾಯಂಕಾಲವಲ್ಲಿ (ಪ್ರದೋಷ ಸಮಯ) ಶಿವಪೂಜೆ ಮಾಡುವುದರಲ್ಲಿ ಬಹಳ ಸಂತುಷ್ಟಿಯುಳ್ಳವನಾಗಿದ್ದನು, ಎಂದು ಶಿವರಹಸ್ಯದಲ್ಲಿ ಹೇಳಲ್ಪಟ್ಟಿರುವುದರಿಂದ ಮಾಸಶಿವರಾತ್ರಿಯಲ್ಲಾಗಲೀ ಮಹಾಶಿವರಾತ್ರಿಯಲ್ಲಾಗಲೀ ಸಾಯಂಕಾಲದ ಪೂಜೆ ಮುಂತಾದುವುಗಳು ಆ ಶಿವನ ಕಾಲದಿಂದಲೇ ಏರ್ಪಡಿಸಲ್ಪಟ್ಟವುಗಳೆಂದು ತಿಳಿಯುವುದಕ್ಕೆ ಶಿವನರಹಸ್ಯವು ಮುಖ್ಯ ಆಧಾರಗ್ರಂಥವಾಗಿದೆ.

ಸರ್ವರಿಗೂ ಮಂಗಳವಾಗಲೀ, ಗೋವುಗಳು ಚೆನ್ನಾಗಿ ಬೆಳೆದು ಹಾಲನ್ನು ಕರೆಯಲಿ; ಎಲ್ಲರಿಗೂ ಆಹಾರವೂ ಕೊರತೆಯಿಲ್ಲದಂತೆ ದೊರೆತು ಸುಖವಲ್ಲಿ ಇರಲಿ; ಮಳೆಯು ಕಾಲಕಾಲಕ್ಕೆ ಸರಿಯಾಗಿ ಹುಯ್ಯಲಿ; ವಿದ್ಯಾರ್ಥಿಗಳು ತಮ್ಮ ಸಂಸ್ಕೃತಿಯನ್ನು ಶುದ್ಧಿಪಡಿಸಿಕೊಳ್ಳಲಿ; ಮಹಿಳೆಯರು ಸ್ವತಂತ್ರ ಜೀವಿಗಳಾಗಲಿ; ಮಕ್ಕಳಿಗೆ ಹಾಲು ಕುಡಿಯಲು ಕಡಿಮೆಯಾಗದಿರಲಿ; ಕೆಲಸಗಾರರ ಕೆಲಸಗಳು ನಿರಾತಂಕವಾಗಿ ನಡೆಯಲಿ; ಭಾರತಮಾತೆಯು ಸಂತೋಷದಿಂದ ನಲಿಯಲಿ, ವಿರೋಧಿಗಳ ಹಾವಳಿಯು ತಪ್ಪಿ ಹೋಗಲಿ. ಭಾಷೆಗಳ ವಿಂಗಡದ ಒಕ್ಕೂಟ (Union) ಮುಂದೆ ಬರಲಿ; ಪ್ರಜಾರಾಜ್ಯವು (Repablic) ಸರ್ವತೋಮುಖದಿಂದ ನಿರ್ವಹಣ ಶಕ್ತಿಯನ್ನು ಹೊಂದಿ ಉನ್ನತವಾಗಲಿ. ಈ ಮಂಗಳಾಶ್ವಾಸನದೊಡನೆ ಈ ಮಹಾಶಿವರಾತ್ರಿಯ ಹಬ್ಬವು ಪರಿಣಾಮವನ್ನು ಹೊಂದಲಿ.

ಭಕ್ತರ ಸೇವಕರ ಸೇವಕರ ಸೇವಕರ ದಾಸಾನುದಾಸ,
(ಶ್ರೀ ಚನ್ನಮಲ್ಲಿಕಾರ್ಜುನ)

---

* ಈ ಗುರ್ತು ಹಾಕಿದ ೨ ಅಂಕಗಳು ಕಾಲಾತೀತವಾಗುವುದೆಂಬ ಶಂಕೆಯಿಂದ ಹೇಳದೆ ಉಳಿದವು. —ಸಂ. ೮೯–೯೦

# ದ್ವೈತಿ ಮತ್ತು ಅದ್ವೈತಿಗಳ ಮಾತಿನ ಯುದ್ಧ

ಬೆಂಗಳೂರಿಗೆ ದ್ವೈತ ಮತದ (ಉತ್ತರಾದಿ ಮತದ) ಸ್ವಾಮಿಗಳು ಬಂದಿರುವುದಾಗಿಯೂ ಅವರ ದ್ವೈತ ಸಿದ್ಧಾಂತದ ಖಂಡನೆಯನ್ನು ಮಾಡುವುದಕ್ಕಾಗಿ ಅದ್ವೈತಿಗಳು ಪ್ರಯತ್ನಪಡುತ್ತಿರುವಂತೆಯೂ ಈ ಬಗ್ಗೆ ಕೆಲವು ನಿಯಮಗಳನ್ನು ಏರ್ಪಡಿಸಿ ಸಭೆಯು ಕೂಡುವಂತೆ ಮಾತು ಕಥೆಗಳು ನಡೆಯುತ್ತಿರುವುದಾಗಿಯೂ ಪ್ರಕಟವಾಗಿದೆ. ಸಭೆಯನ್ನು ಕೂಡಿಸುವ ನಿಯಮಗಳಲ್ಲಿ ಇಂತಹ ಗ್ರಂಥಗಳನ್ನೇ ಪ್ರಮಾಣವಾಗಿ ತೆಗೆದುಕೊಳ್ಳಬೇಕೆಂದು ಒಂದು ನಿಬಂಧನೆಯಾಗಬೇಕೆಂದು ಅಪೇಕ್ಷಿಸುತ್ತಿರುವುದಾಗಿಯೂ ತಿಳಿದುಬರುತ್ತದೆ. ಹಿಂದೂ ದೇಶದಲ್ಲಿನ ಧರ್ಮ ಗ್ರಂಥಗಳು ಎಲ್ಲಾ ಜನರಿಗೂ ಎಲ್ಲಾ ಬೋಧೆಯನ್ನೂ ಮಾಡುವುದಕ್ಕೋಸ್ಕರವಾಗಿ ಹುಟ್ಟಿವೆ. ಚಾರ್ವಾಕ ಶಾಸ್ತ್ರದಲ್ಲಿ "ಋಣಂ ಕೃತ್ವಾ ಘೃತಂ ಪಿಬೇತ್ = ಸಾಲಮಾಡಿಯಾದರೂ ತುಪ್ಪವನ್ನು ತಿಂದೇತೀರಬೇಕು" ಎಂದು ಹೇಳುತ್ತವೆ. ಏಕೆಂದರೆ ಶರೀರವಿದ್ದಾಗ ಮನುಷ್ಯನ ಯಾವ ಸುಖವನ್ನು ಅನುಭವಿಸುವನೋ ಅದೇ ಸುಖವು, ಜೀವವು. ದೇಹವನ್ನು ಬಿಟ್ಟ ಮೇಲೆ ಪುನಃ ಹುಟ್ಟಿ ಬರುವುದು ನಿಜಾಂಶವಲ್ಲ. ಆದುದರಿಂದ ಜೀವನಿಗೆ ಅಂದರೆ ಜೀವಸಹಿತವಾದ ಶರೀರಕ್ಕೆ ಈಗಲೇ ಸೌಖ್ಯವನ್ನುಂಟು ಮಾಡಬೇಕೆಂಬುದೇ ಅವರ ತಿಳುವಳಿಕೆ. ಅದೇ ಅದ್ವೈತಿಗಳ ಗ್ರಂಥಗಳನ್ನು ನೋಡಿದರೆ, "ದೇಹವು ಮಿಥ್ಯ (ಸುಳ್ಳು), ಇಂದ್ರಿಯಗಳು ಮಿಥ್ಯ, ಕರಣಗಳು ಮಿಥ್ಯ—ಆದುದರಿಂದ ದೇಹ ಸುಖವನ್ನು ನೋಡದೆ ವೈರಾಗ್ಯವನ್ನು ತಾಳಿ ಬ್ರಹ್ಮಜ್ಞಾನದಲ್ಲಿ ಮಗ್ನನಾಗಿದ್ದರೆ ತನ್ನ ಜೀವವು ದೇಹವನ್ನು ಬಿಟ್ಟು ನಂತರದಲ್ಲಿ ಬ್ರಹ್ಮನಲ್ಲಿ ಕೂಡುವುದು. ಆ ಸುಖವೇ ಪರಮ ಸೌಖ್ಯ. ದೇಹಕ್ಕಾಗಿ ಪಡೆದ ಸುಖವು ನಿತ್ಯವಾದುದಲ್ಲ" ಎಂದು ಹೇಳುತ್ತವೆ. ಹಿಂದೂ ದೇಶದ ಧರ್ಮ ಗ್ರಂಥಗಳು ಯಾವುದನ್ನು ತಿರಸ್ಕರಿಸುತ್ತವೆ ಎಂಬುದನ್ನು ಸ್ವಲ್ಪ ತೋರಿಸಲಿ. ೬೪ ವಿದ್ಯೆಗಳಲ್ಲಿ ಕಳ್ಳತನ ಒಂದನ್ನು ಸೇರಿಸಿ ಉತ್ತಮ ಕಳ್ಳನಾಗುವುದಕ್ಕಾಗಿ ಅದರಲ್ಲಿ ದಾರಿಯನ್ನು ತೋರಿಸಿ ಇರುತ್ತದೆ. ಆಯುರ್ವೇದದಲ್ಲಿ ದೇಹಸೌಖ್ಯವನ್ನು ಪಡೆವುದಕ್ಕಾಗಿ ಔಷಧಿ ಮೊದಲಾದವುಗಳ ಉಪಯೋಗವು ಹೇಳಲ್ಪಟ್ಟಿರುತ್ತದೆ. ಇದರಂತೆ ದ್ವೈತಿಗಳ ಗ್ರಂಥಗಳನ್ನು ನೋಡಿದರೆ ಅದರಲ್ಲಿ "ದ್ವೈತವೇ ಶ್ರೇಷ್ಠ ಅದಕ್ಕಿಂತ ಹೆಚ್ಚಿಗೆ ಯಾವುದೂ ಇಲ್ಲ" ಎಂದು ಹೇಳುತ್ತದೆ. ಈ ಕಾರಣದಿಂದ ಹಿಂದೂಗಳು ತಮ್ಮ ಧರ್ಮ ಗ್ರಂಥ

ಗಳನ್ನು ಓದಬೇಕಾದರೆ ವಿಷಯ, ಸಂಬಂಧ, ಅಧಿಕಾರಿ, ಪ್ರಯೋಜನ ಈ ನಾಲ್ಕು ವಿಷಯಗಳನ್ನು ತಿಳಿದು ಓದಬೇಕೆಂದಿದೆ. ಇಲ್ಲಿ ಅಧಿಕಾರಿ ಎಂದರೆ ಯಾರಿಗಾಗಿ ಪುಸ್ತಕವು ಬರೆಯಲ್ಪಟ್ಟಿದೆಯೋ ಅವರೇ ಅದರ ಪ್ರಯೋಜನವನ್ನು ಹೊಂದತಕ್ಕವರು. ಈ ಅಭಿಪ್ರಾಯವನ್ನು ತೋರಿಸುವುದಕ್ಕಾಗಿಯೇ ಈ ವಿಚಾರ ಮಾಡಬೇಕೆಂದು ವಿಧಿಸಿರುತ್ತಾರೆ. ಆದುದರಿಂದ ದೇಹ ಸೌಖ್ಯವನ್ನು ಪಡೆಯುವುದು ಚಾರ್ವಾಕರಿಗಾಗಿಯೇ, ಕಳ್ಳತನದ ವಿದ್ಯೆಯ ಪ್ರಯೋಜನವು ಕಳ್ಳರಿಗಾಗಿಯೇ ಹೊರತು ಬೇರೊಬ್ಬರಿಗಲ್ಲ. ಕಳ್ಳತನವು ಕೆಟ್ಟದ್ದೆಂದು ಬರೆದಿರುವ ಅಭಿಪ್ರಾಯವು ಬೇರೆಕಡೆಯಲ್ಲಿ ದೊರಕುತ್ತದೆ. ದೇಹಸೌಖ್ಯವೊಂದನ್ನೇ ನೋಡಬಾರದೆಂಬ ಅಭಿಪ್ರಾಯವು ಚಾರ್ವಾಕರಲ್ಲದವರ ಗ್ರಂಥಗಳಲ್ಲಿ ದೊರೆಯುತ್ತದೆ. ಹೀಗಿರುವುದರಿಂದ ಅದ್ವೈತಿಗಳ ಗ್ರಂಥದ ಪ್ರಮಾಣವು ಅದ್ವೈತಿಗಳಿಗೇ ಮಾನ್ಯ; ಅವನ್ನು ನೋಡಿ ನಿರ್ಣಯ ಕೊಡುವವರು ಆ ಹೊತ್ತಗೆಯ ಪ್ರಕಾರ ಅದೇ ಸರಿ. ಈ ಹೊತ್ತಗೆಯ ಪ್ರಕಾರ ಇದೇ ಸರಿ, ಎಂದು ಹೇಳಬೇಕಾಗುತ್ತದೆ. ಹಿಂದೂ ದೇಶದ ಧರ್ಮ ಗ್ರಂಥಗಳ ಪಾಡೇ ಹೀಗೆ ಇರುತ್ತದೆ. ಆದುದರಿಂದ ಗ್ರಂಥಗಳ ನಿಬಂಧನೆಯನ್ನು ಹಾಕಿ ಜಯಶಾಲಿಗಳಾಗುವುದಕ್ಕಿಂತಲೂ ಮಹಾದೇವನ ಪುಸ್ತಕವಾದ ಈ ಜಗತ್ತಿನಲ್ಲಿ ತೋರತಕ್ಕ ಸ್ಥಿತಿಗಳನ್ನು ನೋಡಿ, ಯಾವ ತತ್ತ್ವವು ಮೊದಲು ತಿಳಿಯಬೇಕಾದುದು, ಯಾವ ತತ್ತ್ವವು ಅನಂತರ ತಿಳಿಯಬೇಕಾದುದು ಎಂದು ಗೊತ್ತುಮಾಡುವುದೊಂದು ಯೋಜನೆಯನ್ನು ನಿರ್ಣಯಕಾರರು ಕೈಕೊಂಡರೆ, ಆ ತೀರ್ಮಾನವು ಉತ್ತಮವಾದುದಾಗುವುದು. ಜಗತ್ತಿನಲ್ಲಿ ಬೇಡವಾದುದು ಅಥವಾ ಇಲ್ಲದುದು ಯಾವುದೂ ಇಲ್ಲ. ಯಾವ ಮಾತಾದರೂ ಜಗತ್ತಿನಲ್ಲಿ ಇದ್ದುದೇ ಸುಳ್ಳೂ ಇದ್ದುದೇ; ತಿಪ್ಪೆಯ ಗುಂಡಿಯೂ ಇದ್ದುದೇ; ಎರಡೂ ಪ್ರಯೋಜನಕಾರಿಗಳೇ. ಆದರೆ ಮನುಷ್ಯ ವ್ಯಕ್ತಿಗೆ ಅತ್ಯಂತ ಹೆಚ್ಚಿನ ಪ್ರಯೋಜನವನ್ನು ಒದಗಿಸಿಕೊಡುವುದಾವುದೆಂಬುದನ್ನು ಗೊತ್ತುಮಾಡುವುದೇ ಮನುಷ್ಯನ ಸೂಕ್ಷ್ಮ ಬುದ್ಧಿಯ ಮುಖ್ಯವಾದ ಕೆಲಸ. ಈ ರೀತಿ ದ್ವೈತಾದ್ವೈತಗಳಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಿರ್ಣಯಿಸುವುದಕ್ಕೆ ಈಗ ಉಚ್ಚಶಾಲೆ, ಪ್ರೌಢಶಾಲೆಗಳಲ್ಲಿ ಕಲ್ಪಿಸಿಕೊಡುತ್ತಿರುವ ಶಾಸ್ತ್ರವು (Science) ಬಹಳ ಸಹಾಯ ಮಾಡುತ್ತದೆ ಎಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಆ ಶಾಸ್ತ್ರದಲ್ಲಿ ಗೊತ್ತಾದ ಅಂಶಗಳನ್ನು ಮೊದಲು ಬರೆದಿಟ್ಟು ಅದರ ಮುಂದಿನ ಅಂಶಗಳನ್ನು ಕಂಡು ಹಿಡಿದಾಗ ಅದನ್ನು ಮತ್ತೆ ಬರೆಯುತ್ತಾ ಬಂದಿರುವುದರಿಂದ ಈಗ ಹೊಸದಕ್ಕೆ ಹೆಚ್ಚಿನ ವಿಷಯವನ್ನು ಹೇಳುವುದಕ್ಕೆ ಬೆಲೆ ಇದೆಯೇ ವಿನಾ ಹಿಂದಿನ ಮಾತುಕಥೆಗಳಿಗೆ ಬೆಲೆಯಿಲ್ಲ. ಹಿಂದೂ ದೇಶದ ಧರ್ಮ ಶಾಸ್ತ್ರವು ಒಂದು ಕಾಲದಲ್ಲಿ ಗೊತ್ತುಮಾಡಲ್ಪಟ್ಟ ಅಂಶಗಳೇ ಕೆಲಕಾಲ ಪ್ರಾಬಲ್ಯದಲ್ಲೂ ಇರುವುವು, ಕೆಲಕಾಲ ದೌರ್ಬಲ್ಯದಲ್ಲಿ ಇರುವುದು. ಹೀಗಾಗಿ ಈ ಶಾಸ್ತ್ರದ ಪ್ರಗತಿಯೇ ಇಲ್ಲವಾಗಿ ಯಾವಾಗಲೂ ಹಿಂದಣ ಸಂಬಂಧದ ಇಂತಹ ಜಗಳಗಳಿಂದಲೇ ಕೂಡಿಕೊಂಡಿರುವುದು. ರಾಜಕೀಯ ವಿಪ್ಲವಗಳಿಲ್ಲದೆ ಶಾಂತವಾಗಿರುವ ಈ ಕಾಲದಲ್ಲಿ ಹಿಂದೂ

ಗಳೆಲ್ಲರೂ ಕಲೆತು ಯಾವುದು ಹೆಚ್ಚಿನ ಕೊನೆಯ ಮಾರ್ಗ ಇಂತಹ ಸಂಗತಿಗಳನ್ನು ಈಗ ನಿರ್ಣಯ ಮಾಡಿಬಿಟ್ಟರೆ ಧಾರ್ಮಿಕ ವಿಷಯದಲ್ಲಿ ಮುಂದೆ ಹೆಚ್ಚಿಗೆ ಕಂಡುಹಿಡಿದವರಿಗೆ ತಕ್ಕ ಮಾನ್ಯತೆಯು ದೊರಕುತ್ತದೆ. ಈಗಿನ ಹಿಂದೂ ಮಹಾಸಭೆಯು ತನ್ನ ಒಳಗಿನ ವಿಷಯಗಳಿಗೆ ಕೈ ಹಾಕಿ ತಳಹದಿಯನ್ನು ಶುದ್ಧಿಮಾಡಿ ಎಲ್ಲರನ್ನೂ ಒಂದುಗೂಡಿಸುವ ಕೆಲಸಕ್ಕೆ ಕೈ ಹಾಕದೆ ಹೊರಗಿನಿಂದ ಹಿಂದೂಗಳಿಗೆ ಏನು ಸಹಾಯಬೇಕೋ ಅವನ್ನೇ ಮಾತ್ರ ಮಾಡುತ್ತಿರುವುದು, ನೆಲಗಟ್ಟು ಭದ್ರವಿಲ್ಲದ ಮನೆಗೆ ಮೇಲೆ ಹೊಚ್ಚಲಿಕ್ಕೆ ಹೆಂಚುಗಳನ್ನೂ ಸಾಮುಗ್ರಿಗಳನ್ನೂ ಶಿಖರವನ್ನೂ ಹುಡುಕಿ ತರುವವನಂತೆ ಆಗಿರುತ್ತದೆ. ಈ ಸ್ಥಿತಿಯು ಎಂದು ಸರಿಪಡುವುದೋ ?

ಪಾಶ್ಚಾತ್ಯಶಾಸ್ತ್ರ (Science) ಪದ್ಧತಿಯ ಮೇರೆಗೆ ಈಗ ಈ ಜಗಳವನ್ನು ನಿರ್ಣಯಿಸುವುದು ಒಂದು ಬಗೆಯ ಯೋಜನೆಯಾಗಿದೆ. ಇದಲ್ಲದೆ ಇನ್ನೊಂದು ಯೋಜನೆಯೂ ಉಂಟು ಹಿಂದೂ ದೇಶದ ಧರ್ಮ ಗ್ರಂಥಗಳಲ್ಲಿ ಬರೆದಿಟ್ಟ ಪ್ರಮಾಣ ಗಳಿಂದಲೇ ನಿರ್ಣಯಿಸುವಿಕೆ. ಉದಾಹರಣೆಗೆ ಮನುಧರ್ಮ ಶಾಸ್ತ್ರವನ್ನು ನೋಡಿರಿ. ಅದರಲ್ಲಿ ನಾಲ್ಕು ವರ್ಣಗಳ ವಿಚಾರವನ್ನು ಹೇಳಿರುವುದೂ ಅವೇ ಮುಖ್ಯವೆಂದು ಎಲ್ಲಾ ಹಿಂದೂಗಳೂ ತಿಳಿದಿರುವುದೂ ಸರಿಯಷ್ಟೆ. ಅದೇ ಮನುಧರ್ಮ ಶಾಸ್ತ್ರದ ೧೨ನೆಯ ಅಧ್ಯಾಯದ ಕಡೆಯ ಭಾಗವನ್ನು ನೋಡಿದರೆ ಅಲ್ಲಿ "ಇದುವರೆವಿಗೂ ಹೇಳ ಲ್ಪಟ್ಟಿರುವುದು ಸಾಮಾನ್ಯವಾದ ಮನುಷ್ಯನ ವರ್ಗಕ್ಕೆ ಅನ್ವಯಿಸುವುದೆಂದೂ ಆತ್ಮ ಜ್ಞಾನಿಗಳಿಗೆ ಈ ವಿಧಿಗಳು ಅನ್ವಯಿಸುವುದಿಲ್ಲವೆಂದೂ" ಸ್ಪಷ್ಟವಾಗಿ ಬರೆದಿದೆ. ಇಡೀ ದೊಡ್ಡ ಪುಸ್ತಕವನ್ನೇ ಈ ಸಂಬಂಧದ ಕೆಲವು ಶ್ಲೋಕಗಳು ತಲೆ ಕೆಳಗು ಮಾಡಿಬಿಡು ತ್ತವೆ. ಆಗ ನಾಲ್ಕು ವರ್ಣಗಳ ಪ್ರಯೋಜನವು ಎಷ್ಟು ಮಟ್ಟಿಗೆ ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ.

ಹೀಗೆ ವರ್ಣಗಳ ಗ್ರಂಥದ ಹೊತ್ತಿಗೆಯುಲ್ಲಿಯೇ ವರ್ಣಾತೀತದ ಸುದ್ದಿ ಇರುವಂತೆ ದ್ವೈತ ಗ್ರಂಥಗಳಲ್ಲಿ ಅದ್ವೈತದ ಸುದ್ದಿಯೂ ಅದ್ವೈತದ ಗ್ರಂಥಗಳಲ್ಲಿ ದ್ವೈತದ ಸುದ್ದಿಯೂ ಅಲ್ಲಲ್ಲಿ ಇದ್ದೇ ಇವೆ. ಅವುಗಳನ್ನು ಗ್ರಹಿಸಿಕೊಂಡರೆ ಮಾತ್ರ ಧರ್ಮ ಗ್ರಂಥಗಳು ಗರಿ ಒಂದೇ ಇರುವುದೆಂಬುದೂ, ತಿಳಿಯದೇ ನಾವು ಜಗಳಾಡುತ್ತೇವೆ ಎಂಬುದೂ ನಮಗೇ ತಿಳಿದುಬರುತ್ತದೆ. ಆದುದರಿಂದ ಧರ್ಮ ಗ್ರಂಥಗಳನ್ನು ನೋಡಿ ನಿರ್ಣಯ ಮಾಡುವವರು ಈ ತೆರೆದ ವಿವೇಚನಾ ಶಕ್ತಿಯುಳ್ಳವರಾಗುವಷ್ಟು ದ್ವೈತಾ ದ್ವೈತ ಗ್ರಂಥಗಳನ್ನು ಓದಿದ್ದರೆ ನಿರ್ಣಯವನ್ನು ಹೇಳುವುದು ಸಾಧ್ಯವಾಗುತ್ತದೆ. ಅನೇಕ ಆಗಮಗಳು ಮತ್ತು ಉಪನಿಷತ್ತುಗಳಲ್ಲಿಯೂ ದ್ವೈತಾದ್ವೈತಗಳ ವಿಚಾರವು ಹೇಳಲ್ಪಟ್ಟಿರುತ್ತದೆ. ದ್ವೈತವೇ ಶ್ರೇಷ್ಠ ಅದ್ವೈತವೇ ಶ್ರೇಷ್ಠ ಎಂದು ಹೇಳಿರುವುವು ಗಳೂ ದೊರೆಯುತ್ತವೆ. ಅವುಗಳನ್ನು ವಿಮರ್ಶೆಮಾಡಿ ತಾರತಮ್ಯವನ್ನು ಕಂಡುಹಿಡಿ ಯುವುದು ವಿಮರ್ಶಕರ ವಿಚಕ್ಷಣ ಬುದ್ಧಿಗೆ ಸಂಬಂಧಿಸಿ ಇರುತ್ತದೆ. ಆದುದರಿಂದ

ಈ ಮಾತಿನ ಯುದ್ಧದ ತೀರ್ಮಾನ ಮಾಡುವವರು ಆಧುನಿಕರಶಾಸ್ತ್ರ (Science), ಪುರಾತನರ ಶಾಸ್ತ್ರ (ಧರ್ಮಗ್ರಂಥ), ಈ ಎರಡರ ದೃಷ್ಟಿಯಿಂದಲೂ ಪರಿಶೋಧಿಸಿ ತೀರ್ಮಾನಿಸುವವರಾಗಲಿ ಎಂದು ನಮ್ಮ ಅಭಿಪ್ರಾಯವನ್ನು ಕೊಟ್ಟು ಇಷ್ಟಕ್ಕೆನೇ ಈಗ ವಿರಮಿಸಿ ಅತ್ಯಂತ ಕುತೂಹಲದಿಂದ ಈ ವಿಷಯದ ಕಾರ್ಯಕಲಾಪಗಳನ್ನು ನೋಡುತ್ತಿರುವೆವು ಮತ್ತು ಸಾಧ್ಯವಾದರೆ ಮುಂದೆಯೂ ಲೇಖನಗಳನ್ನು ಬರೆದೆವು.*

(ಸಂ. ೪೭-೪೮)

* ಈ ಒಂದು ವರದಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಹಿಂದೂ ಧರ್ಮದ ಪರಿಷ್ಕಾರವನ್ನು ವೈಜ್ಞಾನಿಕ ವಿಚಾರಗಳ ಒರೆಗಲ್ಲಿಗೆ ಹಚ್ಚಿ, ನೂತನ ವಿಚಾರಗಳಿಂದ ಹಿಂದೂಗಳ ಸಂಘಟನೆ ಅವಶ್ಯಕವಾಗಿ ಆಗಬೇಕೆಂಬ ಅತಿ ಮಹತ್ವದ ಸೂಚನೆಯನ್ನಿಲ್ಲಿ ಗಮನಿಸಬಹುದು. (—ಸಂ.)

# ಕಾಶಿಕ್ಷೇತ್ರವನ್ನು ಕುರಿತು

ಕಾಶಿಯಲ್ಲಿ ಔರಂಗಜೇಬನಿಂದ ಹಾಳಾಗಿ ಕ್ರಿ. ಶ. ೧೮ ನೆಯ ಶತಮಾನದಲ್ಲಿ ಇಂದೂರು ಮಹಾರಾಣಿಯವರಿಂದ ಕಟ್ಟಿಸಲ್ಪಟ್ಟಿರುವ ವಿಶ್ವೇಶ್ವರನ ದೇವಸ್ಥಾನದ ಲಿಂಗಾಭಿಷೇಕವಲ್ಲಿ ಭಾಗವಹಿಸುವುದು ವೀರಶೈವರಿಗೆ ಮುಖ್ಯವಲ್ಲ. ಅದು ಶುದ್ಧ ಶೈವರ ಕೆಲಸ, ಲಿಂಗಾಧಾರಿಗಳಾಗಿ ಶುದ್ಧ ಶೈವರೂ ಇರುತ್ತಾರೆ ಎಂಬ ಅಂಶವನ್ನು "ವೀರಶೈವ ಮೊದಲನೆಯ ಸ್ಥಲ" ಎಂಬ ಪುಸ್ತಕದಿಂದ ತಿಳಿಯಬಹುದು. ಕಾಶಿ ವಿಶ್ವೇಶ್ವರ ದೇವಸ್ಥಾನದ ಆಡಳಿತವೂ ಈಗ ಅಲ್ಲಿನ ವೀರಶೈವ ಪೀಠಾಧಿಕಾರಿಗಳ ವಶದಲ್ಲಿ ಇಲ್ಲ.

ಈ ಲೇಖಕರು ತಿಳಿಸುವ ಕ್ರಿ. ಶ. ೬ ನೆಯ ಶತಮಾನದ (ವಿಕ್ರಮಶಕ ೬೩೧) ಜಯನಂದದೇವರು ಕಾಶೀಪೀಠದ ಮಲ್ಲಿಕಾರ್ಜುನ ಸ್ವಾಮಿಗಳವರಿಗೆ ಕೆಲವು ಭೂಮಿಯನ್ನು ದಾನಮಾಡಿದ ಶಾಸನವು ಒಂದು ವ್ಯಾಜ್ಯದ ಸಂಬಂಧದಲ್ಲಿ ಕಾಶಿ ಸಬ್ ಜಡ್ಜ಼ ಕೋರ್ಟಿನಲ್ಲಿ ಹಾಜರಾಗಿತ್ತು. ಅದರ ಲಿಪಿಯು ಮೈಸೂರು ದೇಶದ ಶಾಸನದ ಇಲಾಖೆಯವರು ಪ್ರಕಟಿಸಿದ ಬೆಂಗಳೂರು ಡಿಸ್ಟ್ರಿಕ್ಟ್ ಶಾಸನದ ಪುಸ್ತಕ (Epigruphia Carnatika-9) ಕನ್ನಡ ಭಾಗದ 53A ಪುಟದಲ್ಲಿ ಮುದ್ರಿತವಾದ (Bn. 142) ಶಕ ವರ್ಷ ೩೬೬ ರ ಶಾಸನದ ಲಿಪಿಯಂತೆ ಇರುವುದಾಗಿ ಆ ನ್ಯಾಯಾಧೀಶರು ಭಾವಿಸಿ ಈ ಮಠವು ಪ್ರಾಚೀನವಾದುದೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಶಾಸನ (Bn. 142) ಪ್ರಕಟಿಸಿದ ಶಾಸನದ ಇಲಾಖೆಯ ಮುಖ್ಯಾಧಿಕಾರಿಗಳಾದ ಮಿ॥ ಲೂಯಿ ರೈಸ್‌ರವರು ಅದೇ ಶಾಸನವು ಅದರಲ್ಲಿ ಬರೆದಿರುವ ಕಾಲದಷ್ಟು ಪ್ರಾಚೀನವಲ್ಲ; ಕ್ರಿ.ಶ. ೧೧೦೫ (?) ಇರಬಹುದು ಎಂದು ಅದರ ಇಂಗ್ಲೀಷ್ ಪರಿವರ್ತನೆಯಲ್ಲಿ ತೋರಿಸಿದ್ದಾರೆ. ಮತ್ತು ಪುಸ್ತಕದ ಆರಂಭದಲ್ಲಿ (Introduction Pages 13-14) ಅದೇ ಶಾಸನವು ಶಿವಮೊಗ್ಗಾ ಡಿಸ್ಟ್ರಿಕ್ಟ್ ಶಿಕಾರಿಪುರದ ತಾಲ್ಲೂಕು ಬೇಗೂರು, ಸೊರಬದ ತಾಲ್ಲೂಕು ಕುಪ್ಪಗಡ್ಡೆ ಅಗ್ರಹಾರಗಳ ಸಂಬಂಧದ ಶಾಸನಗಳಲ್ಲಿ ಒಡ್ಡಾಚಾರಿಯು ಸಹಿ ನಿಸಿ ಬರೆಯಲ್ಪಟ್ಟಂತೆ ಇರುವುದು ಮತ್ತು ಅದೇ ಶಿಕಾರಿಪುರದ ತಾಲ್ಲೂಕು ಗೌಜ ಮೊದಲಾದ ಅಗ್ರಹಾರಗಳಿಗೆ ಜನಮೇಜಯರಾಯನು ಬರೆದುಕೊಟ್ಟ ಶಾಸನಗಳ ಮಾದರಿಯಲ್ಲಿ ಇರುವುದು ಎಂದು ಅಭಿಪ್ರಾಯಪಟ್ಟಿರುವುದಲ್ಲದೆ ಈ ಬರೆವಣಿಗೆಯು ಅಡಿ ಟಿಪ್ಪಣಿ ೨ರಲ್ಲಿ ಕ್ರಿ.ಶ. ೯೦೦ ಕ್ಕಿಂತ ಈಚೆಗೆ ಹುಟ್ಟಿರಬೇಕು. ಶಕ ೯೬೬ ಕ್ಕೆ ಸರಿಗೂಡುತ್ತದೆ. ಶಕ ೩೬೬ ಕ್ಕೆ ಕೂಡಿಬರುವುದಿಲ್ಲ ಎಂದು ತೋರಿಸಿದ್ದಾರೆ.

ಈ ಕಾರಣಗಳಿಂದ ಅವರಂತೆ ಆರುನೂರು ವರ್ಷ ಸೇರಿದರೆ ಮೇಲೆ ಕಂಡ ೬೩೧ ಶಾಸನವು ಕ್ರಿಸ್ತಶಕ ೧೨ನೆಯ ಶತಮಾನದ್ದಾಗುತ್ತದೆ. ಆದರೆ ಈ ಶಾಸನವು ಕಾಗದ

ವಲ್ಲಿ ಬರೆಯಲ್ಪಟ್ಟುದು ಎಂದು ನ್ಯಾಯಾಧೀಶರ ವಿಚಾರಣೆಯಲ್ಲಿ ಹೊರಬಿದ್ದಿರುವುದು. ಆ ಕಾಲದ ಉತ್ತರ ಹಿಂದೂಸ್ಥಾನದ ಯಾವ ಶಾಸನದ ಲಿಪಿಗೂ ಸರಿಬೀಳದೆ ಮೇಲೆ ಕಂಡ ಮೈಸೂರು ದೇಶದ ಶಾಸನ (Bn. 142) ಕ್ಕೆ ಸರಿಯಾಗಿದೆ. ಎಂದು ತೀರ್ಮಾನಿಸಿದರೂ ಆ ಶಾಸನವು ಅಲ್ಲಾಡುತ್ತಿರುವುದರಿಂದಲೂ ಕಾಶಿಯ ಶಾಸನದ ೬೩೦ ರ ಪ್ರಾಚೀನತೆಯು ಸ್ಥಿರಪಡುವುದಿಲ್ಲ.

ಈ ಲೇಖಕರು ಹೇಳುವಂತೆ ಕಾಶಿಯ ಶಾಸನದಲ್ಲಿ 'ವಿಕ್ರಮ' ಎಂಬ ಶಬ್ದವಿಲ್ಲ. ಬರೀ ಸಂಪತ್ ೬೩೧ ಎಂದು ಇದೆ. ಕ್ರಿ. ಶ. ೬೦೬ ರಲ್ಲಿ ಪ್ರಾರಂಭವಾದ ಶ್ರೀಹರ್ಷ ಶಕೆ ಎಂಬುದೊಂದು ಹಿಂದೂ ದೇಶದಲ್ಲಿ ಗಣನೆಯಲ್ಲಿ ಇದ್ದಿತು. (ಶ್ರೀ ಹರಪ್ರಸಾದ ಶಾಸ್ತ್ರಿ, ಎಂ.ಎ. ಎಂಬುವರು ಬರೆದ Catalogue of Mss in the Durbar of Nepal ಎಂಬ ಪುಸ್ತಕದ ಮುನ್ನುಡಿ ii ನೆಯ ಪುಟ ನೋಡಿರಿ) ಆ ಸಂಪತ್ ೬೩೧ ಎಂದು ಭಾವಿಸಿದರೆ ಕ್ರಿ. ಶ. ೧೨೩೭ ರಲ್ಲಿ ಈ ಶಾಸನವು ಹುಟ್ಟಿದಂತಾಗುತ್ತದೆ. ಅಷ್ಟೊತ್ತಿಗೆ ವಿಶ್ವಾರಾಧ್ಯರ ತರುವಾಯದ ಮಲ್ಲಿಕಾರ್ಜುನಸ್ವಾಮಿಗಳು ಕಾಶಿಯಲ್ಲಿ ಇದ್ದರೆಂದು ಊಹಿಸಲಿಕ್ಕೆ ಬರುತ್ತದೆ. ಇಷ್ಟಾಗಬೇಕಾಗಿದ್ದರೂ ಈ ಶಾಸನವು ನಿಜವಾದುದೆಂದು ಧೃಡಪಡಬೇಕು. ಆವರೆವಿಗೂ ಈ ಶಾಸನವನ್ನು ಪ್ರಾಮಾಣ್ಯವಾಗಿ ಅಂಗೀಕರಿಸಲು ಬರುವಂತಿಲ್ಲ.

ಕಾಶಿಮಠದ ಶಾಖೆಯಾದ ನೇಪಾಳ ದೇಶದ 'ಬಾಗಾಗಾಂ' ಎಂಬ ಗ್ರಾಮದಲ್ಲಿನ ಮಠದಲ್ಲಿ ಕ್ರಿ.ಶ. ೬೩೯ ರಲ್ಲಿ ಬರೆಯಲ್ಪಟ್ಟ ದೇವನಾಗಿರಿ ಲಿಪಿಯ ಶಾಸನವು ಇರುವುದಾಗಿಯೂ ನೇಪಾಳದ ರಾಜನಾದ ವಿಶ್ವಮಲ್ಲ ನೃಪತಿಯು ಭೂದಾನ ಮಾಡಿರುವುದಾಗಿಯೂ ಲೇಖಕರು ಬರೆದಿರುತ್ತಾರೆ. ನೇಪಾಳ ಶಕೆ ಎಂಬ ಒಂದು ಶಕೆ ಕ್ರಿ. ಶ. ೮೮೦ ರಲ್ಲಿ ಆರಂಭವಾಗುತ್ತದೆ. ಆ ಶಕೆಯನ್ನು ಅನುಸರಿಸಿ ಬರೆದ ಶಾಸನವದು. ಆ ಕಾಲಕ್ಕೆ ನೇಪಾಳ ರಾಜರ ವಂಶಾವಳಿಯಲ್ಲಿ ವಿಶ್ವಮಲ್ಲರಾಜನ ಹೆಸರು ಬರುತ್ತದೆ. ಆದುದರಿಂದ ಅದನ್ನು ಕ್ರಿ. ಶ. ೬೩೯ ಎಂದು ಭಾವಿಸಲಾಗದು. ಈ ವಿಶ್ವಮಲ್ಲನ ಮಗ ತ್ರೈಲೋಕ್ಯಮಲ್ಲನು ಕ್ರಿ.ಶ. ೧೫೭೨ ರಿಂದ ಆಳುತ್ತಾನೆ. ನೇಪಾಳದಲ್ಲಿ ಯಕ್ಷಮಲ್ಲ ಎಂಬ ರಾಜನ ತರುವಾಯ (ಕ್ರಿ.ಶ. ೧೪೯೬ ರ ಅನಂತರ) ಮೂರು ರಾಜಸಂತತಿಗಳು ಏರ್ಪಟ್ಟವು. ಮೂರು ರಾಜ್ಯಭಾಗಗಳಾದವು. ಅವುಗಳಲ್ಲಿ ಭಾತಗಾಂವ ಸಂತತಿ ಎಂಬುದೊಂದು; ಆ ರಾಜರೊಳಗೆ ವಿಶ್ವಮಲ್ಲನೊಬ್ಬನು. ಭಾತಗಾಂವ ರಾಜ್ಯಭಾಗದಲ್ಲಿಯೇ ಕಾಶೀ ಶಾಖಾಮಠವಿದೆ. ಜಯರುದ್ರಮಲ್ಲನೂ ನೇಪಾಳದ ರಾಜರಲ್ಲಿ ಒಬ್ಬನು. ಅವನ ಕಾಲವು ಕ್ರಿ.ಶ. ೧೩೨೦. ಈ ಲೇಖಕರು ಹೇಳುವ ರಾಜರ ಹೆಸರುಗಳೆಲ್ಲವೂ ಮೇಲುಗಡೆಯಲ್ಲಿ ಬಂದಿವೆ. ಭಾತಗಾಂವ ಸಂತತಿಯೇ ಕ್ರಿ.ಶ. ೧೪೯೬ ತರುವಾಯ ಪ್ರಾರಂಭವಾಗಿರುವಲ್ಲಿ ಆ ಸಂತತಿಯ ರಾಜನು ಕ್ರಿ.ಶ. ೬೩೯ ರಲ್ಲಿ ಇರುವುದೆಂತು ? ವಿಶ್ವಮಲ್ಲನ ಶಾಸನದಲ್ಲಿ ಭಾತಗಾಂತ ಸಂತತಿಯ ಹೆಸರಿಲ್ಲದೆ ಇಲ್ಲ. ಆದುದರಿಂದ ಈ ಭಾತಗಾಂವ ಎಂಬ ನೇಪಾಳ ದೇಶದ ಗ್ರಾಮದಲ್ಲಿನ ಶಾಸನವನ್ನು ನೇಪಾಳದ

ಸಂವತ್ ಅನುಸರಿಸಿ ಬರೆದಿದ್ದಾರೆಂದು ವ್ಯಕ್ತವಾಗುತ್ತದೆ. ಸಂವತ್ ಎಂಬ ಪದವನ್ನು ವಿಕ್ರಮಶಕೆಗೆ ಮಾತ್ರ ಉಪಯೋಗಿಸುತ್ತಾರೆ ಎಂದು ಲೇಖಕರು ಭಾವಿಸಿರುವುದು ಸರಿಯಲ್ಲ.

ಇವೆಲ್ಲಾ ಕಾರಣಗಳಿಂದ ಈ ಲೇಖಕರು ಯೋಚಿಸುವಂತೆ ಕಾಶೀಪೀಠದ ಪುರಾತನ ತತ್ತ್ವವು ಕ್ರಿ.ಶ. ೧೨ ನೆಯ ಶತಮಾನಕ್ಕಿಂತ ಪೂರ್ವದ್ದು ಎಂದು ಹೇಳುವುದಕ್ಕೆ ಸರಿಯಾದ ಆಧಾರವು ಇನ್ನು ಹೊರಬಿದ್ದಿಲ್ಲ.

ಪಂಚಾಚಾರ್ಯರಲ್ಲಿ ಹಿರಿಯರೆಂದಿನಿಸಿಕೊಂಡ ರೇವಣಸಿದ್ಧರ ಕಾಲವನ್ನು ಮ॥ರಾ॥ ಕಪಟರಾಳು ಕೃಷ್ಣರಾಯರವರು ೧೧ನೆಯ ಶತಮಾನವೆಂದು ಹೇಳುತ್ತಾರೆ. (ಶರಣ ಸಾಹಿತ್ಯ). ೧೨ನೆಯ ಶತಮಾನಕ್ಕೆ ೧೦೦ ವರ್ಷ ಹಿಂದೆ ಎಂದು ಚಾರಿತ್ರಿಕವಾಗಿ ಹೇಳುವವರು ಈಗ ಇವರೊಬ್ಬರೆ. ಕೆಲವರು ೧೦ನೆಯ ಶತಮಾನದ ಮಧ್ಯಭಾಗಕ್ಕೆ ಅವರ ಕೊನೆಗಾಲವನ್ನು ತರುತ್ತಾರೆ. ಕ್ರಿ.ಶ. ೧೧೮೭ ರ ಸಿರಿವಾಳದ ಶಾಸನದಿಂದ–ಇದು ಆಚಾರ್ಯರಲ್ಲಿ ಒಬ್ಬರಾದ ರೇವಣಸಿದ್ಧರ ವಿಷಯವನ್ನೇ ಹೇಳುತ್ತದೆ ಎಂದು ಚೆನ್ನಾಗಿ ದೃಢಪಡಿಸಲಿಕ್ಕೆ ಬರುತ್ತದೆ. ಮತ್ತು ಇತರ ಶಾಸನಗಳಿಂದ ೧೨ ನೆಯ ಶತಮಾನದ ಕಡೆಯ ಭಾಗದವರೆವಿಗೂ ಶ್ರೀ ರೇವಣಸಿದ್ಧರಿದ್ದರೆಂದು ನಿಶ್ಚಯವಾಗುತ್ತದೆ. ಕ್ರಿ. ಶ. ೧೨೧೬–೧೮ ರವರೆವಿಗೂ ಅವರ ಕಾಲವು ಬರುವುದೆಂಬ ಕೆಲವು ಆಧಾರಗಳೂ ತೋರಿಬಂದಿವೆ. (ಅವುಗಳನ್ನು ಸಂದರ್ಭಾನುಸಾರ ಪ್ರಕಟಿಸಲಾಗುವುದು). ಪಂಡಿತಾರಾಧ್ಯರು ಬಸವೇಶ್ವರನ ಸಮಕಾಲೀನರೆಂಬುದು ಪ್ರಸಿದ್ಧವಾಗಿದೆ. ಮರುಳಸಿದ್ಧರು, ಸಿದ್ಧರಾಮೇಶ್ವರರು, ರೇವಣಸಿದ್ಧರು ದಕ್ಷಿಣ ದೇಶದಲ್ಲಿ ಮೈಸೂರು ಪ್ರಾಂತದಲ್ಲಿ ಸಂಚರಿಸಿದ ಉದಾಹರಣೆಗಳು ದೊರಕುತ್ತಲಿವೆ. ಏಕೋರಾಮಾರಾಧ್ಯರು ಭಾಸ್ಕರರಾಯನ ಕಾಲದವರು. ಈ ರಾಯನು ೧೨ನೆಯ ಶತಮಾನದವನು. ವಿಶ್ವಾರಾಧ್ಯರ ತರುವಾಯದ ಮಲ್ಲಿಕಾರ್ಜುನಸ್ವಾಮಿಗಳೂ ಶಾಖಾಮಠವೂ ೭ನೆಯ ಶತಮಾನವಾಗಿದ್ದರೆ ಪಂಚಾಚಾರ್ಯರು ಕೂಡಿ ಇದ್ದ ಕಾಲವಾವುದು ಎಂಬುದು ದೊಡ್ಡ ತೊಡಕಾಗಿ ಪರಿಣಮಿತ್ತದೆ. ಪಂಚಾಚಾರ್ಯರ ಕಾಲವನ್ನು ಒಂದೇ ಶತಮಾನಕ್ಕೆ ಅಥವಾ ಸಮಕಾಲೀನ ಸ್ಥಿತಿಗೆ ಸರಿಯಾಗಿ ಚಾರಿತ್ರಿಕ ದೃಷ್ಟಿಯಿಂದ ತೋರಿಸಬೇಕು. ಹಾಗಾದರೆ ಅದು ನಿಲ್ಲುತ್ತದೆ. ವಿಶ್ವಾರಾಧ್ಯರು ೭ನೆಯ ಶತಮಾನದ ಪೂರ್ವ, ರೇವಣಸಿದ್ಧರು ೧೧ನೆಯ ಶತಮಾನ ಹೀಗೆ ಹೇಳಲಿಕ್ಕೆ ಹೊರಟರೆ ಚರಿತ್ರೆಯ ತಕ್ಕಡಿಯ ಒಂದು ಪರಡಿಯು ಮೇಲಕ್ಕೆ ಎದ್ದರೆ ಇನ್ನೊಂದು ಪರಡಿಯು ಕೆಳಕ್ಕೆ ಬೀಳುವುದು. ಆದುದರಿಂದ ಪಂಚಾಚಾರ್ಯರ ಕಾಲವನ್ನೂ ಹೇಳುವವರು ಬಹಳ ಎಚ್ಚರಿಕೆಯಾಗಿ ಇರಬೇಕು. ಬೇರೆ ಬೇರೆ ಕಾಲವಾದರೆ ಇವರ ಹೆಸರನ್ನು ಕೂಡಿಸಿ ರಚನೆ ಮಾಡಿನವರಾರು ಎಂಬ ಪ್ರಶ್ನೆ ಏಳುತ್ತದೆ. ಚಾರಿತ್ರಿಕಕ್ಕೆ ಸಂಬಂಧಪಡದ ಕಾಲವನ್ನು ಹೇಳಿ–ಸಮಾಜದಲ್ಲಿ ಗೊಂದಲವನ್ನೆಬ್ಬಿಸುವುದು ಸರಿಯಲ್ಲ.

ಅನೇಕವಾಗಿ ಶಾಸನಗಳು ಪ್ರಕಟವಾಗಿರುವ ಈ ಕಾಲದಲ್ಲಿ ನಿಜವಾದ ಇತಿಹಾಸವನ್ನು ತಿಳಿಯದೆ ಇನ್ನು ಯಾವಾಗ ತಿಳಿಯಬೇಕು ? ಈ ಪ್ರಕಟವಾಗಿರುವ ಆಧಾರಗಳಿಂದ ಕಾಲ ನಿರ್ಣಯವನ್ನು ಒಮ್ಮತದಿಂದ ಸಮಾಜವು ಮಾಡಲಿ. ಚಾರಿತ್ರಿಕಕ್ಕೆ ತೂಗದೆ ಪಕ್ಷಪಾತದ ಮಾತುಗಳನ್ನೇಕೆ ಆಡುತ್ತಿರಬೇಕು.

ಪುರಾಣಕರ್ತರಾದ ವ್ಯಾಸಋಷಿಗಳ ಗುರುಗಳಾದ ಘಂಟಾಕರ್ಣ ಶಿವಾಚಾರ್ಯರು ಪಂಚಾಚಾರ್ಯರಲ್ಲಿ ಒಬ್ಬರೆಂದು ಹೇಳುವುದೂ ಅನನ್ವಯ ಪ್ರಸಂಗವೇ ಆಗಿದೆ. ವ್ಯಾಸಋಷಿಗಳಿಗೂ ನಂದೀಶ್ವರನಿಗೂ ವಿವಾದ ನಡೆದುದು ಪುರಾಣದಿಂದ ತಿಳಿಯಬರುತ್ತದೆ. ವೀರಶೈವರಾದ ಘಂಟಾಕರ್ಣರು ಆ ವ್ಯಾಸರಿಗೆ ಗುರುಗಳಾಗಿದ್ದರೆಂಬುದಕ್ಕೆ ಸರಿಯಾದ ಆಧಾರಗಳಿಲ್ಲ ಹಾಗಿದ್ದರೆ ನಂದೀಶ್ವರನು ಅವರೊಡನೆ ವಿವಾದ ಮಾಡುವ ಪ್ರಸಂಗವು ಬರುತ್ತಿರಲಿಲ್ಲ. ಇಂತಹವುಗಳನ್ನು ಐತಿಹಾಸಿಕಕ್ಕೆ ಹಚ್ಚುವುದೂ ಸರಿಯಲ್ಲ. ರಾಮೇಶ್ವರ ಲಿಂಗಾಭಿಷೇಕಕ್ಕಾಗಿ ಪ್ರಯಾಗದಿಂದ (ಅಲಾಹಾಬಾದ್) ಗಂಗೆಯನ್ನು ತೆಗೆದುಕೊಂಡು ಹೋಗುವುದೂ ರಾಮೇಶ್ವರದ ಅನೇಕ ತೀರ್ಥಗಳಲ್ಲಿ ಸ್ನಾನ ಮಾಡಬೇಕೆಂಬುದೂ ವೀರಶೈವರಿಗೆ ಅವಶ್ಯಕವಾದ ಕಾರ್ಯವಲ್ಲ. ಈ ವಿಷಯದಲ್ಲಿ ಮಹನೀಯರಾದ ಮೊಗ್ಗೆಯ ಮಾಯಿದೇವರು ಈ ಪದ್ಯವನ್ನು ಹೇಳಿದ್ದಾರೆ. (ಶಿವಾವಲ್ಲಭ ಶತಕ ೨೦)

ಶಿವಭಕ್ತಂ ಗಿರಿಕಾಶಿ ಹಂಪೆ ಮೊದಲಾದ ಕ್ಷೇತ್ರ ತೀರ್ಥಂಗಳೆಂ ।
ಬವನೆಂದುಂ ಪೆಸರ್ಗೊಳ್ಳ ನಾಲಿಸನತೀ ವಾಕಾಂಕ್ಷೆಯಿಂ ಪೋಗನು ।
ತ್ಸವದಿಂ ನೋಡನಕೃತ್ಯ ಕೃತ್ಯಮುಮನೇನಂ ಮಾಡನಿಷ್ಟಾರ್ಥಮಂ ।
ನೆವದಿಂ ಬೇಡನನನ್ಯಭಾವ ಪರಿಪೂರ್ಣಾತ್ಮಂ ಶಿವವಲ್ಲಭಾ ॥

ವೀರಶೈವರಿಗೆ ಶಿವಜ್ಞಾನಿಯಾದವನ ಪಾದದ ಧೂಳು ಬಿದ್ದ ಸ್ಥಳವೇ ಕ್ಷೇತ್ರ; ಅವನ ಪಾದದಲುಂಟಾದ ಉದಕವೇ ನಿರ್ಮಲವಾದ ತೀರ್ಥ. ಆತನ ಪಾದಕಮಲ ಯುಗಳವೇ ದೈವವಾಗಿ ಇವೆ. ಜಡವಾಗಿ ತೋರುವ ಪ್ರಕೃತಿಯಲ್ಲಿನ (ಪ್ರಪಂಚದ) ತೀರ್ಥಕ್ಷೇತ್ರ ದೈವಗಳು ಅಜ್ಞರಿಗಾಗಿ ಇವೆ. ಶಿವಭಕ್ತರು ಇವನ್ನು ಹೊಂದುವುದಿಲ್ಲ ಎಂಬುದಾಗಿಯೂ ಅದೇ ೧೯ನೆಯ ಪದ್ಯದಲ್ಲಿ ಹೇಳಿದ್ದಾರೆ.

ಶಿವಸಂವಿಚ್ಚರಣಾಬ್ಜ ರೇಣುಪತನಂ ಕ್ಷೇತ್ರಂ ತದೀಯಾಂಘ್ರಿಸಂ ।
ಭವ ಸಂಕ್ಷಾಲಿತ ತೋಯಮೇ ವಿಮಲತೀರ್ಥಂ ತತ್ಪದಾಂಭೋಜಯು ।
ಗ್ಮವೆ ದೈವಂ ಜಡ ಭೌತಿಕ ಪ್ರಕೃತಿ ತೀರ್ಥ ಕ್ಷೇತ್ರದೈವಂಗಳೆಂ ।
ಬವು ಮಿಕ್ಕಜ್ಞರಿಗೈಸೆ ನಿಮ್ಮವರಿವಂ ಪೊರ್ದರ್ ಶಿವಾವಲ್ಲಭಾ ॥

ಇದರಿಂದ ಪ್ರಕೃತಿ ಸೌಂದರ್ಯವನ್ನು ನೋಡಲಿಚ್ಛಿಸಲು ವೀರಶೈವರ ಯಾತ್ರೆಯೇ ಹೊರತು ಫಲ ಪಡೆಯಲಿಲ್ಲವೆಂಬುದು ಚೆನ್ನಾಗಿ ಗೊತ್ತಾಗುತ್ತದೆ.

'ಧನುಷ್ಕೋಟಿ' ಅಥವಾ 'ಧನಸ್ಸುಕೋಡಿ' ಎಂಬ ಹೆಸರಿನಿಂದ ಒಂದು ಅಂಶವನ್ನು ಗ್ರಹಿಸಬಹುದಾಗಿದೆ. ಕೆರೆಯ ಅಥವಾ ಸಮುದ್ರದ ಕೋಡಿ ಸ್ಥಳಕ್ಕೆ ಕೋಟಿ

ಎಂಬ ಶಬ್ದವನ್ನು ಪೂರ್ವಿಕರು ಪ್ರಯೋಗಿಸುತ್ತಿದ್ದರೆಂಬುದು ಆ ಅಂಶ. ಶಿವಯೋಗ ಮಂದಿರ ಸಮೀಪದ ಮಹಾಕೂಟದಲ್ಲಿನ ಕೋಟಿಲಿಂಗವೂ ನೀರು ಹರಿಯುವ ಸ್ಥಳದ ಮೇಲುಗಡೆ ಇದೆ. ಶಿವಮೊಗ್ಗ ಡಿಸ್ಟ್ರಿಕ್ಟ್ ಕುಬಟೂರಿನ ಕೋಟಿಲಿಂಗವೂ ಗೋಕರ್ಣದ ಕೋಟಿ ತೀರ್ಥವೂ ಇಂತಹ ಸನ್ನಿವೇಶದಲ್ಲಿಯೇ ಇರಬಹುದಲ್ಲವೇ !

ವೀರಶೈವ ದೃಷ್ಟಿಯಿಂದ ಶೋಧಿಸಬೇಕಾದ ಅನೇಕ ಅಂಶಗಳ ಕಡೆಗೆ ಲೇಖಕರು ಗಮನ ಕೊಟ್ಟಂತೆ ತೋರುವುದಿಲ್ಲ. ಶ್ರೀ ಕಾಶೀಪೀಠದ ಮೂಲ ಗುರುಗಳಾದ ವಿಶ್ವಾರಾಧ್ಯರವರ ತರುವಾಯದ ಮಲ್ಲಿಕಾರ್ಜುನ ಸ್ವಾಮಿಗಳ ಸಮಾಧಿ ಸ್ಥಳಗಳೇನಾದರೂ ಕಾಶಿಯಲ್ಲಿ ಇವೆಯೇ ? ಅವರು ಕಾಶಿಯಲ್ಲಿ ಮಾಡಿದ ಕೆಲಸಗಳೇನು ? ಮಠಾಚಾರ್ಯರಾಗಿ ಮಠಾನುಯಾಯಿಗಳನ್ನು ಅಭಿವೃದ್ಧಿಗೆ ತಂದದು ಯಾವಾಗ ? ಅವರಲ್ಲಿ ಪ್ರಸಿದ್ಧರಾರು ? ಈಗ ಆ ಪ್ರಾಂತದಲ್ಲಿ ವೀರಶೈವರು ಏಕೆ ಬಹಳ ಅಪರೂಪವಾಗಿ ಇದ್ದಾರೆ ಅಥವಾ ಇಲ್ಲವೇ ಇಲ್ಲ. ಇವುಗಳ ಚರಿತ್ರಾಂಶವೇನು ? ಕಾಶೀ ಪೀಠದ ಉಳಿದ ಸ್ವಾಮಿಗಳು ಮಾಡಿದ ಸಮಾಜಾಭಿವೃದ್ಧಿಯ ಕಾರ್ಯಗಳಲ್ಲಿ ಈಗ ವೀರಶೈವರಿಗೆ ಸಂಬಂಧಿಸಿರುವ ಮುಖ್ಯ ಸಂಗತಿಗಳಾವುವು ? ಆ ಪೀಠದವರು ಬರೆದ ಗ್ರಂಥಗಳಾವುವು ? ಆ ಪೀಠದ ಗುರುಗಳಿಗೂ ಇತರ ಪೀಠದ ಗುರುಗಳಿಗೂ ಸಂಬಂಧಿಸುವುದನ್ನು ತೋರಿಸುವ ಗುರುತುಗಳು ಕಾಶಿಯಲ್ಲಿ ಏನಿವೆ ? ಇವೇ ಮುಂತಾದ ವಿಷಯುಗಳಿದ್ದರೂ ಆ ಕಡೆಗೆ ಇವರ ಗಮನವು ಬೀಳಲಿಲ್ಲ. ಒಟ್ಟಿನಲ್ಲಿ ಕಾಶಿಯಾತ್ರೆ ಮಾಡುವವರಿಗೊಂದು ಕೈಪಿಡಿಯಾಗಿ ಇವರ ಲೇಖನವು ಪ್ರಯೋಜನಕಾರಿಯಾಗಿದೆ ಎಂದು ಸಂತೋಷಿಸಬೇಕಾಗಿದೆ.

(ಸಂ. ೬೨-೬೩)

# ಈಗಿನ ಅದ್ವೈತ ಶಾಸ್ತ್ರದ ಉಗಮ

ಈಗ ರೂಢಿಯಲ್ಲಿರುವ ಅದ್ವೈತ ಬೋಧೆಯ ವಿಷಯಗಳನ್ನು ನಿಜಗುಣ ಶಿವ ಯೋಗಿಗಳು ಕೈವಲ್ಯ ಪದ್ಧತಿ ಪಾರಮಾರ್ಥಗೀತೆ, ಅನುಭಾವಸಾರ ಮುಂತಾದ ಗ್ರಂಥ ಗಳಲ್ಲಿ ನಿರೂಪಿಸಿರುವುದು ಸರಿಯಷ್ಟೆ. ತನ್ನ ನಿಜಸ್ಥಿತಿಯನ್ನು ತಿಳಿಯಬೇಕೆಂಬ ಶಿಷ್ಯ ನಿಗೆ "ಕೇಳೆಲೆ ವಾಸಿಷ್ಠಾದಿಗಳಲ್ಲಿ ಹೇಳಿದ ತತ್ವಾರ್ಥವ ನಿಂದಿಲ್ಲಿ, ನಿನಗರುವುವೇ ನಾನೀ ಗೀತೆಯೊಳು" ಎಂಬುದಾಗಿ ಗುರುವು ಬೋಧಿಸಲಾರಂಭಿಸುತ್ತಾನೆ. ಇಲ್ಲಿ ಕಂಡ 'ವಾಸಿಷ್ಠ' ಎಂಬ ಗ್ರಂಥವು 'ವಾಸಿಷ್ಠ ರಾಮಾಯಣ' ಎಂಬುದಾಗಿಯೂ ಕರೆಯಲ್ಪಡು ತ್ತದೆ. ಶ್ರೀ ವಸಿಷ್ಠ ಮುನಿಯು ಶ್ರೀ ರಾಮನಿಗೆ ಬೋಧಿಸಿದ ವಿಷಯವು ಈ ಗ್ರಂಥದಲ್ಲಿದೆ. ಇದರಲ್ಲಿನ ಸ್ಥಿತಿ ಪ್ರಕರಣದ ಪ್ರಾರಂಭದಲ್ಲಿ ಈ ಶ್ಲೋಕಗಳಿವೆ—

೧. 'ಪ್ರಸಿದ್ಧ ಚಿತ್ರ ವೈಧರ್ಮ್ಯಂ ಜಗಚ್ಚಿತ್ರಸ್ಯ ವರ್ಣ್ಯತೇ ।
ಸಂಖ್ಯಾದಿ ಮತಮುತ್ಸೃಜ್ಯ ಸಾಧ್ಯತೇ ಬ್ರಹ್ಮ ಮಾತ್ರತಾ' ।

೨. 'ಏವಂ ತಾವದಿದಂ ವಿದ್ಧಿ ದೃಶ್ಯಂ ಜಗದಿತಿ ಸ್ಥಿತಂ ।
ಅಹಂ ಚೇತ್ಯಾದ್ಯನಾಕಾರಂ ಭ್ರಾಂತಿ ಮಾತ್ರಮಸನ್ಮಯಂ'

೧೮. (ಪೂರ್ವಾರ್ಧ) 'ಗೃಹ್ಯಮಾಣೋ ಅಸದ್ರೂಪೋ ನಿಶಾಚರ ಇವಾಸ್ಥಿತಂ'

ಇವುಗಳ ತಾತ್ಪರ್ಯ : "ಜಗತ್ತೆಂಬ ಚಿತ್ರದಲ್ಲಿನ ಚಿತ್ರಗಳ ಪ್ರಸಿದ್ಧವಾದ ವಿರೋಧ ಧರ್ಮವು ವರ್ಣಿಸಲ್ಪಡುತ್ತದೆ. ಸಾಂಖ್ಯಮತ ಮೊದಲಾದವುಗಳನ್ನು ಪರಿಹರಿಸಿ ಬ್ರಹ್ಮ ಮಾತ್ರವೇ ಇರುವುದು ಸಾಧಿಸಲ್ಪಡುತ್ತದೆ. ಜಗತ್ತೆಂಬುದಾಗಿ ಕಣ್ಣಿಗೆ ಕಾಣಿಸಿಕೊಂಡು ಇರುವಂತಹುದು, ಇದಂ (ಇದು) ಎಂದು ಕರೆಯಲ್ಪಡುವುದು ಮತ್ತು ನಾನು ಎಂದೆನ್ನುವುದು,ಭ್ರಾಂತಿ ಮಾತ್ರವೆಂದೂ ಇಲ್ಲದುದೆಂದೂ ಆಕಾರವಿಲ್ಲದು ದೆಂದೂ ತಿಳಿ. ಬೇತಾಳ (ದೆವ್ವ) ಎಂದು ತಿಳಿಯಲ್ಪಡುವ ವಸ್ತುವು ರೂಪವಿಲ್ಲದು ದಾಗಿ ಇಲ್ಲದುದೇ ಆಗಿದೆ. ಅದರಂತೆ ಜಗತ್ತು.

೧೮ (ಉತ್ತರಾರ್ಧ) ಮಹಾಕಲ್ಪಕ್ಷಯೇ ದೃಶ್ಯಂ ಆಸ್ತೇ ಬೀಜ ಇವಾಂಕುರಃ
ಪರೇ ಭೂಯ ಉದೇತ್ಯೇತತ್ ತತ್ತ ಏವೇತಿ ಕಿಂ ವದ
ಏವಂ ಬೋಧಾಃ ಕಿಮು ಜ್ಞಾಃ ಸ್ಯುಃ ಉತ ಜ್ಞಾ ಇತಿ ಚಸ್ಫುಟಂ ।
ಯಥಾವದ್ ಭಗವನ್ ಬ್ರೂಹಿ ಸರ್ವ ಸಂಶಯ ಶಾಂತಯೇ ॥

ತಾತ್ಪರ್ಯ : ಮಹಾಕಲ್ಪದ ಕಾಲದಲ್ಲಿ ಸರ್ವವೂ ನಾಶವಾಗುವ ವೇಳೆಯಲ್ಲಿ ಈ ಕಾಣುವ ಜಗತ್ತು ಬೀಜದೊಳಗಿನ ಅಂಕುರದಂತೆ ಪರವಸ್ತುವಿನಲ್ಲಿ ಅಡಗಿಕೊಂಡಿರು ತ್ತದೆ. ಪುನಃ ಅದದ್ದೇ ಆಗಿ ಹುಟ್ಟುತ್ತದೆ ಎಂತಲೂ ಹೇಳಿರುವುದು ಸರಿಯೇ ? ಈ

ರೀತಿ ತಿಳಿದುಕೊಂಡವರು ಜ್ಞಾನಿಗಳೇ ಅಜ್ಞಾನಿಗಳೇ ? ಸರ್ವ ಸಂಶಯ ನಿವಾರಣಾರ್ಥ ವಾಗಿ ನನಗೆ ಸ್ಪಷ್ಟವಾಗಿ ಇದ್ದುದನ್ನು ಇದ್ದಂತೆ ಹೇಳಿರಿ."

ಹೀಗೆ ಕೇಳಲ್ಪಟ್ಟ ಶ್ರೀ ವಸಿಷ್ಠರು ಶ್ರೀರಾಮನಿಗೆ ಹೇಳಿದ ವಿಷಯದ ಶ್ಲೋಕ ಗಳಿವು—

೨೧. ಇದಂ ಬೀಜೇಂಕುರ ಇವ ದೃಶ್ಯಮಾಸ್ತೇ ಮಹಾಶಯೇ
ಬ್ರೂತೇಯ ಏವಮಜ್ಞತ್ವಂ ಏತತ್ ತಸ್ಯಾಸ್ತಿಶೈಶವಂ
೨೨. ಶೃಣ್ವೇತತ್ ಕಿಮಸಂಬಂಧಂ ಕಡಮೇತದ ವಾಸ್ತವಂ
ವಿಪರೀತೋ ಬೋಧ ಏಷಃ ವಕ್ತುಃ ಶ್ರೋತುಶಮೋಹಕೃತ್ ॥
೨೩. ಬೀಜೇ ಕಿಲಾಂಕುರ ಇವ ಜಗದಾಸ್ತ ಇತೀಹ ಯಾ
ಬುದ್ಧಿಃ ಸಾಸತ್ ಪ್ರಲಾಪಾರ್ಥಂ ಮೂಢಾಶೃಣು ಕಥಂ ಕಿಲ
೨೪. ಬೀಜಂ ಭವೇತ್ ಸ್ವಯಂ ದೃಶ್ಯಂ ಚಿತ್ತಾದೀಂದ್ರಿಯ ಗೋಚರಂ ।
ಯವ ಧಾನಾದಿ ಧಾನ್ಯಾನಿ ಯುಕ್ತೇಃ ಪತ್ರಾಂಕುರೋದ್ಭವಃ
೨೫. ಮನಃ ಷಷ್ಠೇಂದ್ರಿಯಾತೀತಂ ಯತ್ ಸ್ಯಾದತಿತರಾಮಣು ।
ಬೀಜಂ ತದ್ ಭವಿತುಂ ಶಕ್ತಂ ಸ್ವಯಂಭೂರ್ಜಗತಾಂ ಕಥಂ
೨೬. ಆಕಾಶಾದಪಿ ಸೂಕ್ಷ್ಮಸ್ಯ ಪರಸ್ಯ ಪರಮಾತ್ಮನಃ
ಸರ್ವಾಖ್ಯಾನುಪಲಂಭಸ್ಯ ಕೀ ದೃಶೀ ಬೀಜತಾ ಕಥಂ ।
೨೭. ತತ್ ಸೂಕ್ಷ್ಮಮಸದಾಭಾಸಂ ಅಸದೇವ ಹ್ಯತಾದೃಶಂ
ಕೀದೃಶೀ ಬೀಜತಾ ತತ್ರ ಬೀಜಾಭಾವೇ ಕುತೋಂಕುರಃ
೨೮. ಗಗನಾಂಗಾದಪಿ ಸ್ವಚ್ಛೇ ಶೂನ್ಯೇ ತತ್ರ ಪದೇಪದೇ ।
ಕಥಂ ಸಂತಿ ಜಗನ್ಮೇರು ಸಮುದ್ರ ಗಗನಾದಯಃ
೩೦. ಶೂನ್ಯ ರೂಪಾದ್ ಪಟಾಕಾಶಾತ್ ಜಾತೋದ್ರಿಃ ಕ್ವಕುತಃಶದಾ ।
೩೧. ಕಥಮಾಸ್ತೆ ತಮೋಭಾಸೌ ಕಥಮಾಸ್ತೇ ಹಿಮೋಷ್ಣತೀ
೩೨. ಮೇರುರಾಸ್ತೇ ಕಥಮಣೌ ಕುತಃ ಕಿಂಚಿದನಾಕೃತೌ ।
ತವತದ್ರೂಪಯೋರೈಕ್ಯಂ ಶ್ವಚ್ಛಾಯೂತಪಯೋರಿವ ॥
೩೩. ಸಾಕಾರ ವಟಧಾನ್ಯಾಸೌ ಅಂಕುರಾಃ ಸಂತಿ ಯುಕ್ತಿಮತ್
ನಾಕಾರೇ ತನ್ಮಹಾಕಾರಂ ಜಗದಸ್ತೀತ್ಯ ಯುಕ್ತಿಕಂ
೩೫. ಶೌರ್ಯಸ್ಯ ತತ್ ಕಾರಣತಾಂ ಪ್ರಯಾತಂ ।
ವಕ್ತೀತಿ ಯಸ್ತಸ್ಯ ವಿಮೂಢ ಬೋಧಃ ।
ಕೈರ್ನಾಮತತ್ ಕಾರ್ಯಮುದೇತಿ ತಸ್ಮಾತ್
ಸ್ವೈಃ ಕಾರಣಾದ್ ಯೈಃ ಸಹಕಾರಿ ರೂಪೈಃ ॥

೨೬. ದುರ್ಬುದ್ಧಿಭಿಃ ಕಾರಣ ಕಾರ್ಯ ಭಾವಂ ಸಂಕಲ್ಪಿತಂ
ದ್ದೂರತರೇ ವ್ಯುದಸ್ಯ ತದೇವತತ್ ಸತ್ಯಮನಾದಿ ಮಧ್ಯಂ ಜಗತ್
ತದೇತತ್ ಸ್ಥಿತ ಮಿತ್ಯವೇಹಿ ॥

(ಜನ್ಯಜನಿ ನಿರಾಕರಣಂ ನಾಮ ಪ್ರಥಮಃ ಸರ್ಗಃ)

(ಇಲ್ಲಿನ ಸಂಖ್ಯೆಗಳು ಮೂಲ ಗ್ರಂಥದ ಶ್ಲೋಕ ಸಂಖ್ಯೆಗಳಾಗಿವೆ)

ತಾತ್ಪರ್ಯ : "ಈ ಜಗತ್ತು ಬೀಜವಲ್ಲಿನ ಅಂಕುರದಂತೆ ಇದೆ ಎಂದು ಯಾವನು ಹೇಳುವನೋ ಅವನು ದಡ್ಡ ಮತ್ತು ಕೂಸು. ಇದು ಸಂಬಂಧವಿಲ್ಲದ ನಿಜ ವಲ್ಲದ ಮಾತು. ವಿಪರೀತ (ವಿರುದ್ಧವಾದ) ಬೋಧೆ. ಇದು ಹೇಳುವವನಿಗೂ ಕೇಳು ವವನಿಗೂ ಮೋಹಕರವಾಗಿ ಇದೆ (ನಿಜದಂತೆ ತೋರುತ್ತದೆ). ಬೀಜದಲ್ಲಿ ಅಂಕುರ ವಿದ್ದಂತೆ ಜಗತ್ತಿದೆ ಎಂದು ಹೇಳುವ ಬುದ್ಧಿಯು ದಡ್ಡಬುದ್ಧಿ, ಇಲ್ಲದ ಮಾತು. (ಅಸತ್‌ಪ್ರಲಾಪಕ್ಕಾಗಿ) ಗೋದಿ ಮೊದಲಾದ ಬೀಜವು ಕಣ್ಣಿಗೆ ಕಾಣುತ್ತದೆ. ಮನಸ್ಸೇ ಮೊದಲಾದ ಇಂದ್ರಿಯಗಳಿಗೆ ಗೋಚರವಾಗುತ್ತದೆ. ಅದರಿಂದ ಮೊಳಕೆ ಎಲೆಗಳು ಹುಟ್ಟುತ್ತವೆಂಬುದು ಯುಕ್ತಿ (ಯೋಗ್ಯ). ಆರನೆಯದಾದ ಮನವೆಂಬ ಇಂದ್ರಿಯ ವನ್ನೂ ಮೀರಿರುವುದೂ (ಪಂಚ ಕರ್ಮೇಂದ್ರಿಯಗಳಿಗೆ ಮೂಲವಾಗಿ ಮನ ಅಥವಾ ಮನದ ಎಂಬ ಇಂದ್ರಿಯ) ಅಣುವಿಗಿಂತಲೂ ಸೂಕ್ಷ್ಮವಾಗಿ ಇರುವುದೂ, ತಾನೇ ಹುಟ್ಟಿದುದೂ ಆದ ಪರವಸ್ತುವು ಜಗತ್ತುಗಳ ಬೀಜವಾಗಿ ಆಗಲಿಕ್ಕೆ ಹೇಗೆ ಶಕ್ಯವಿದೆ ? ಆಕಾಶಕ್ಕಿಂತಲೂ ಸೂಕ್ಷ್ಮವಾದ ಪರಕ್ಕಿಂತಲೂ ಪರವಾದ ಎಲ್ಲಾ ಹೆಸರುಗಳನ್ನೂ ಹೊಂದಲಾಗದ ಪರಮಾತ್ಮನಿಗೆ ಯಾವ ವಿಧವಾಗಿ ಬೀಜ ಲಕ್ಷಣವು ಬರುತ್ತದೆ ? ಹೇಗೆ ಬರುತ್ತದೆ ? ಇಲ್ಲದುದರಂತೆ ತೋರುವ (ಅಸದಾಭಾಸ) ಸೂಕ್ಷ್ಮವಾದ ವಸ್ತುವು ಇಲ್ಲದುದಷ್ಟೆ (ಅಸದೇವ). ಅದರಂತೆ ಇರುವ ವಸ್ತುವು ಮತ್ತೊಂದಿಲ್ಲ. ಅದು ಯಾವ ವಿಧವಾಗಿ ಬೀಜವಾಗುವುದು ? ಬೀಜವೇ ಇಲ್ಲದಾಗ ಮೊಳಕೆ ಎಲ್ಲಿಯದು ? ಆಕಾಶ ವೆಂಬ ಅಂಗಕ್ಕಿಂತಲೂ ಸ್ವಚ್ಛವಾದ (ಶುದ್ಧವಾದ) ಶೂನ್ಯವಾದ (ಸೊನ್ನೆಯ ರೂಪಿನ) ಪರವಸ್ತುವಿನಲ್ಲಿ ಜಗತ್ತು, ಮೇರು, ಪರ್ವತ, ಸಮುದ್ರ ಆಕಾಶಾದಿಗಳು ಹೇಗೆ ಇರು ತ್ತವೆ ? ಶೂನ್ಯರೂಪವಾದ ಘಟಾಕಾಶ (ಕೊಡದೊಳಗಿನ ಬಯಲು)ದಿಂದ ಪರ್ವತ ವೆಲ್ಲಿಯಾದರೂ ಹುಟ್ಟುವುದೇ ? ಎಲ್ಲಿಂದ ಯಾವಾಗ ಹುಟ್ಟುವುದು ? ಸೂರ್ಯನಲ್ಲಿ ಕತ್ತಲೆಯುಂಟೇ ? ಬೆಂಕಿಯಲ್ಲಿ ಶೀತವುಂಟೇ ? ಅಣುವಿನಲ್ಲಿ ಮೇರು ಪರ್ವತವು ಹೇಗಿ ರುತ್ತದೆ ? ಆಕಾರವಿಲ್ಲದುದರಲ್ಲಿ (ಅನಾಕಾರ) ಏನಾದರೂ ಎಲ್ಲಿಂದ ಬರುತ್ತದೆ ? ಪರ ವಸ್ತುರೂಪ, ಅದಲ್ಲದ ರೂಪ ಇವು ಬಿಸಿಲು ನೆಳಲುಗಳಂತೆ (ವಿರುದ್ಧ) ಇವೆ. ಇವು ಗಳು ಕೂಡಿರುವುವೆಂಬುದು ಎಲ್ಲಿಯ ಮಾತು ಸಾಕಾರವಾದ ಆಲದಮರದ (ಬೀಜ) ಧಾನ್ಯವೇ ಮೊದಲಾದವುಗಳಲ್ಲಿ ಮೊಳಕೆಯಿರುವುದೆಂಬುದು ಯುಕ್ತಿಗೂಡಿದ ವಿಷಯ. ಆಕಾರವಿಲ್ಲದುದರಲ್ಲಿ ಮಹಾಕಾರವಾದ ಜಗತ್ತಿಗೆ ಎಂದು ಹೇಳುವುದೇ ಅಯುಕ್ತಿಕ

(ಅಯೋಗ್ಯ) ಕಾರ್ಯ (ಮಾಡಿಮದು) ಆದ ವಸ್ತುವಿನಲ್ಲಿ (ಮೂಲರೂಪವು) ಹೋಗಿದೆ ಎಂಮ ಹೇಳತಕ್ಕ ಮಾತು ಬಲು ದಡ್ಡ ಬೋಧನೆ.

ಕಾರಣ (ಮೂಲ) ವಸ್ತುವಿನಿಂದ ಸಹಕಾರಿ ಎಂಬುದೇ ಮೊದಲಾದ ಯಾವ ಕಾರಣಗಳಿಂದ (Cause) ಕಾರ್ಯವು ಹುಟ್ಟುತ್ತದೆ ?

ದುರ್ಬುದ್ಧಿಯುಳ್ಳವರಿಂದ ಜಗತ್ತಿನಲ್ಲಿ ಕಾರ್ಯ ಭಾವವೂ ಪರಮವಸ್ತುವಿನಲ್ಲಿ ಕಾರಣ ಭಾವವೂ ಕಲ್ಪಿಸಲ್ಪಟ್ಟಿದೆ. ಈ ಕಲ್ಪನೆಯನ್ನು ಬಹಳ ದೂರದಲ್ಲಿ ಬಿಟ್ಟು ಬಿಟ್ಟು ಆ ಪರವಸ್ತುವೇ (ತದ್‌ವಸ್ತು) ಸತ್ಯ. ಅದು, ಆದಿಯಿಲ್ಲದುದು, (ಅನಾದಿ) ಮಧ್ಯೇ ಇದು ಎಂಬ ಜಗತ್ತಾಗಿ ನಿಂತಿದೆ ಎಂದು ತಿಳಿ.

ಮೇಲಿನ ಅಭಿಪ್ರಾಯಗಳನ್ನು ಯೋಚಿಸಿದರೆ ಅದು, ಇದು, ಎಂದು ಅಥವಾ ಚಿತ್, ಅಚಿತ್ ಎಂಬ ಭೇದವನ್ನು ಮಾಡಿದುದೇ ಈ ಬೋಧೆಯ ಸಾರಾಂಶವಾಗಿದೆ ಎಂದು ತಿಳಿಯುತ್ತದೆ. ಬೋಧೆಯನ್ನೇ ಈಗಲೂ ಮಾಡುತ್ತಿರುವವರು ಅದ್ವೈತಿಗಳು ಎಂದು ಹೇಳಲಾಕ್ಷೇಪಣೆಯುಂಟೆ ?

ವಾಸಿಷ್ಠಾದಿಗಳಲ್ಲಿ ಹೇಳಲ್ಪಟ್ಟ ತತ್ತ್ವಾರ್ಥವನ್ನು ಗುರುವು ಶಿಷ್ಯನಿಗೆ ಬೋಧಿಸುತ್ತಾನೆ, ಎಂದು ಶ್ರೀ ನಿಜಗುಣರು ಪರಮಾರ್ಥ ಗೀತೆಯಲ್ಲಿ ಹೇಳಿರುವುದು ಅದ್ವೈತವೆಂದೂ, ಇದಕ್ಕೆ ಮುಖ್ಯವಾದ ಗ್ರಂಥವೇ ವಾಸಿಷ್ಠ ರಾಮಾಯಣವೆಂದೂ ಚೆನ್ನಾಗಿ ಗುರ್ತಿಸಬಹುದಲ್ಲವೆ! ಈ ದೆಸೆಯಿಂದ ಈಗಿನ ಅದ್ವೈತ ಶಾಸ್ತ್ರದ ಉಗಮವು ವಸಿಷ್ಠರಿಂದ ಆಯಿತೆಂದೂ ತಿಳಿಯಬಹುದಲ್ಲವೇ !

ನಿರಾಕಾರದಿಂದ ಜಗತ್ತಾಗಿಲ್ಲ, ಎಂದು ಹೇಳಿರುವುದರಲ್ಲಿ ವಸಿಷ್ಠರು ಇತರ ಗ್ರಂಥದ ಆಧಾರವನ್ನು ತೋರಿಸಿಲ್ಲ. ಆ ಕಾಲದಲ್ಲಿ ಪ್ರಚಲಿತವಾದ ಜ್ಞಾನವನ್ನು (ಬೀಜಾಂಕುರ ನ್ಯಾಯ ಜಗತ್ತು ಎಂಬುದು) ಖಂಡನೆ ಮಾಡುವುದಕ್ಕೆ ಮಾತ್ರ ಮೇಲೆ ಕಂಡಂತೆ ಬಹಳ ಸಾಹಸಮಾಡಿದ್ದಾರೆ.

ಸಾಕಾರವಾದ ಧಾನ್ಯದ ಬೀಜದಿಂದ ಸಾಕಾರವಾದ ಮೊಳಕೆ ಎಲೆಗಳು ಹುಟ್ಟಿದಂತೆ ಸಾಕಾರದಿಂದ ಸಾಕಾರ ಹುಟ್ಟಬಹುದೇ ಹೊರತು ನಿರಾಕಾರದಿಂದ ಸಾಕಾರ ಹುಟ್ಟುವುದಿಲ್ಲವೆಂಬುದು ವಸಿಷ್ಠರ ಮುಖ್ಯಾಭಿಪ್ರಾಯ (೩೩). ಈ ಅಭಿಪ್ರಾಯವನ್ನಿಟ್ಟುಕೊಂಡು ಇದಿಲ್ಲದವರನ್ನು ದಡ್ಡರೆಂದೂ ಕೂಸುಗಳೆಂದೂ ಅವರು ಕರೆದಿರುತ್ತಾರೆ.

ಈ ಕಾಲದ ಶಾಸ್ತ್ರ (Science) ಶೋಧನೆಯಲ್ಲಿ ಕಂಡು ಹಿಡಿದ ಅಂಶಗಳಿಂದ ಮೇಲಿನ ವಸಿಷ್ಠರ ಅಭಿಪ್ರಾಯವು ಸರಿಯೆಂದು ಹೇಳಲಾಗುವುದಿಲ್ಲ. ಮನುಷ್ಯನ ಇಂದ್ರಿಯಗಳಿಗೆ ಮನಸ್ಸಿಗೆ ಗೋಚರವಾಗದ ರೀತಿಯಲ್ಲಿ ಧ್ವನಿಯು ಆಕಾಶದಲ್ಲಿದ್ದು ರೇಡಿಯೋ ಯಂತ್ರ ಸಹಾಯದಿಂದ ಸಾವಿರಾರು ಮೈಲಿಗಳ ದೂರದಲ್ಲಿ ಕೇಳಿಬರುತ್ತದೆ. ಎರಡು ವಾಯುಗಳನ್ನು ಬೆರಸಿ ನೀರನ್ನು ಮಾಡಿ ಅದನ್ನು ಗಟ್ಟಿಮಾಡಿ

ನೀರುಗಡ್ಡೆ (Ice) ಮಾಡುವುದನ್ನು ಮಾದರಿಯಲ್ಲಿ (Experiment) ನೋಡುತ್ತೇವೆ. ಕೇವಲ ಆಕಾಶಕ್ಕಿಂತಲೂ ಸೂಕ್ಷ್ಮವಾದ ಅಣು (Atoms) ಗಳನ್ನು ಕೂಡಿಸಿ ಬೇರೆ ಬೇರೆ ವಿಧದಲ್ಲಿ ಬೇರೆ ಬೇರೆ ವಸ್ತುಗಳನ್ನು ಮಾಡುವುದು ತಿಳಿದುಬರುತ್ತದೆ.

ಒಂದು ಅಣುವು ಅನೇಕ ವಿದ್ಯುತ್ ಪರಮಾಣುಗಳನ್ನು (Electrical Partaicler ar Charges) ಒಳಗೊಂಡಿರುವುದಾಗಿಯೂ ಅವುಗಳಲ್ಲಿ Protions Electrons, Positrons, Neutrons, Deutrons ಎಂಬ ಹೆಸರಿನವುಗಳು ಒಂದಕ್ಕಿಂತ ಒಂದು ಸೂಕ್ಷ್ಮತರವಾಗಿರುವುದಾಗಿಯೂ ಕಂಡುಹಿಡಿದಿರುತ್ತಾರೆ. ಹೀಗೆ ಸೂಕ್ಷ್ಮವಾದ ಮೂಲ ವಸ್ತುವಿನಿಂದ ಭೂಮಿ ಮೊದಲಾದ ದೊಡ್ಡ ವಸ್ತುಗಳು ಆಗಿರುವುದನ್ನು ಪ್ರತ್ಯಕ್ಷವಾಗಿ ತಿಳಿಯಲಿಕ್ಕೆ ಬರುತ್ತದೆ. ಮೇಲೆ ಹೇಳಿದ ಅತಿ ಸೂಕ್ಷ್ಮವಾದ Deutrons ಗಿಂತಲೂ ಸೂಕ್ಷ್ಮವಾಗಿ ಪರವಸ್ತುವಿದ್ದರೂ ಅದು ಅನಿರ್ವಾಚ್ಯವಾಗಿದ್ದರೂ ಅದರಿಂದಲೇ ಈಗ ಕಂಡುಹಿಡಿದಿರುವ Deutrons ಆಗಿರುವುದೆಂದೂ ನಿರ್ಧರಿಸಲಿಕ್ಕೆ ಬರುತ್ತದೆ. ಸದ್ಧರ್ಮ ದೀಪಿಕೆಯ ೭೪-೭೫ ನೆಯ ಸಂಚಿಕೆಯಲ್ಲಿ 'ಅಣುವೂ ಅದರ ಲಕ್ಷಣವೂ' ಎಂಬ ಶಿರೋಲೇಖನದೊಳಗೆ ಕೊಡಲ್ಪಟ್ಟ ವಿಷಯಗಳಲ್ಲಿ (ಪುಟ ೧೩ ರಿಂದ ೧೭) Electron ವಿದ್ಯುದಣುವಿನಿಂದ ಸರ್ವವಸ್ತುಗಳೂ ಆಗಿರುವುವೆಂದು ಹೇಳಲ್ಪಟ್ಟಿದೆ. ಆತ್ಮ ಎಂಬ ಸೂಕ್ಷ್ಮವಸ್ತುವಿನಿಂದ ಭೂಮಿ ಆಯಿತೆಂಬ ಅಭಿಪ್ರಾಯವುಳ್ಳ ಆತ್ಮನಃ ಆಕಾಶಃ...ಅದ್ಭ್ಯಃ ಪೃಥಿವೀ ಎಂಬ ವಾಕ್ಯವು ಧರ್ಮ ಗ್ರಂಥಗಳಲ್ಲಿಯೂ ದೊರಕುತ್ತದೆ.

ವಸಿಷ್ಠರಾದರೋ ಆಕಾಶಕ್ಕಿಂತಲೂ ಸೂಕ್ಷ್ಮವಾದುದು ಪರವಸ್ತುವೆಂದು ತಿಳಿದುಕೊಂಡಿದ್ದಾರೆ. (ಶ್ಲೋಕ ೨೬ ಮತ್ತು ೨೮) ಅದನ್ನು ನಿರಾಕಾರವೆಂದೂ ಕರೆದಿದ್ದಾರೆ. ಶೂನ್ಯ ಎಂದೂ ಸಂಬೋಧಿಸಿದ್ದಾರೆ. (ಶ್ಲೋಕ ೨೮). ಸೂಕ್ಷ್ಮವೆಂದೂ ಅಸತ್ತಿನ ಆಭಾಸ (ತೋರಿಕೆ) ಎಂದು ಕರೆದಿರುತ್ತಾರೆ (ಶ್ಲೋಕ ೨೭) ಆದರೆ ಈ ಇಲ್ಲದಂತೆ ತೋರುವ ವಸ್ತುವನ್ನು ಇಲ್ಲವೆಂದೇ ಭಾವಿಸಿದ್ದಾರೆ. (೨೭) ದೆವ್ವವು (ನಿಶಾಚರ) ಸೂಕ್ಷ್ಮವಾಗಿ ಕಂಡರೂ ಅದು ಇಲ್ಲದುದು ಎಂತಲೇ ಹೇಳಿದ್ದಾರೆ (೧೮ ಪೂರ್ವಾರ್ಧ). ಆಕಾಶಾಂಗಕ್ಕಿಂತಲೂ ಸೂಕ್ಷ್ಮವಾದ ಶೂನ್ಯವಾದ ಪರವಸ್ತುವಿನಲ್ಲಿ ಭೂಮಿ, ಮೇರು ಹೇಗೆ ಹುಟ್ಟುವುದೆಂದು ಕೇಳಿದ್ದಾರೆ. (ಶ್ಲೋಕ ೨೮) ಹೀಗೆ ನಿರಾಕಾರದಿಂದ ಸಾಕಾರ ವಸ್ತುವಾಗುವುದಿಲ್ಲ ಎಂಬ ಇದರ ತಿಳಿವಳಿಕೆ ಮಾತ್ರ ತಪ್ಪಿನದು.

ಇವರ ಉಪಮೆಯನ್ನು ಕೊಟ್ಟಿರುವ ದೆವ್ವಕ್ಕಿಂತಲೂ, ಈಗಿನ ಶಾಸ್ತ್ರಕಾರರು ಕಂಡುಹಿಡಿದಿರುವ ಪರಮಾಣುಗಳು ಸೂಕ್ಷ್ಮತರವಾಗಿಯೇ ಇವೆ; ಫೋಟ್ರಾ (Photra) ಎಂಬ ದೀಪದ ಅಣುವಿಗೂ ಜಂಟಿಗೂ ಹೋಲಿಕೆ ಇರುವುದು ನಿಜವಾದರೂ, ಅದು ಅಲೆಯಂತೆ ಇದೆ ಎಂದು ಹೇಳಿದ್ದಾರೆ. ಮೇಲೆ ಕಂಡ ಮಾತುಕತೆಗಳ ಪ್ರಕಾರ ಈ ಗ್ರಂಥವು ವಸಿಷ್ಠರ ಮತ್ತು ರಾಮಚಂದ್ರರ ಕಾಲದಲ್ಲಿ ಹುಟ್ಟಿದುವೆಂದು ತಿಳಿಯುವುದಾದರೆ ಆ ಕಾಲದಲ್ಲಿ ಈಗಿನ ರೀತಿಯಂತೆ ಶಾಸ್ತ್ರವು (Science) ಮುಂದಕ್ಕೆ

ಬಂದಿರಲಿಲ್ಲವಾದುದರಿಂದ ವಸಿಷ್ಠರ ವಚನವೇ ಮುಖ್ಯವೆಂದು ರಾಜನಾದ ಶ್ರೀ ರಾಮಚಂದ್ರನೂ ಒಪ್ಪಿಕೊಂಡಂತೆ ತೋರುತ್ತದೆ. ಅದು ಈ ಕಾಲದವರೆವಿಗೂ ಬೆಳೆದು ಬಂದಿದೆ. ಹೀಗಾಗಲಿಕ್ಕೆ ಆ ಕಾಲದಲ್ಲಿಯೂ ಪ್ರಬಲವಾದ ತರ್ಕಶಾಸ್ತ್ರದಲ್ಲಿನ "ಸೂರ್ಯನಲ್ಲಿ ಕತ್ತಲೆಯಲ್ಲಿ ಅದರಂತೆ ನಿರಾಕಾರವು ಸಾಕಾರವಾಗುವುದಿಲ್ಲ (ಶ್ಲೋಕ ೩೧) ಎಂಬ ಭಿನ್ನಾಭಿಪ್ರಾಯದಲ್ಲಿ ವಸ್ತುಗಳನ್ನು ತೋರಿಸುವ ವಾಕ್ಯಗಳೇ ಕಾರಣವಾಗಿರಬೇಕು. ಇವು ಪ್ರಪಂಚ ವಸ್ತುಗಳ ಪರಿಜ್ಞಾನಕ್ಕೇ ಅಲ್ಲದೇ ಮೂಲ ಶೋಧನೆಗೆ ಉಪಯೋಗವಿಲ್ಲ.

ಶುಕ್ಲ ಶೋಣಿತದ ಬಿಂದುಗಳಿಂದಾದ ಒಂದು ದೇಹದಲ್ಲಿ ಕಣ್ಣು-ಮೂಗು ಮುಂತಾದವುಗಳು ಬೇರೆ ಬೇರೆ ಎಂದು ಕಂಡರೂ ಮೂಲವು ಒಂದೇ ಎಂಬುದು ಸ್ಪಷ್ಟವಾಗಿ ಇರುತ್ತದೆ. ಒಬ್ಬನೇ ಆತ್ಮನಿಂದ ಆದ ಬೆಂಕಿ ನೀರು ಒಂದಕ್ಕೊಂದು ವಿರುದ್ಧವಾಗಿ ಬೇರೆ ಬೇರೆಯಾಗಿ ಕಂಡರೂ ಅವೆರಡರ ಮೂಲವೂ ಒಂದೇ ಎಂಬುದು ಸ್ಪಷ್ಟವಾಗಿ ಇದೆ. ಒಂದು ಬಿಳಿಯ ಸೂರ್ಯಕಿರಣವು ಒಡೆದು ಏಳು ಬಣ್ಣಗಳಾಗುತ್ತವೆ. ಅವು ಒಂದಕ್ಕೊಂದು ವಿರುದ್ಧ ಇವೆ ಎಂಬುವನ್ನು ಈಗಿನ ಮಾಧ್ಯಮಿಕ ಶಾಲೆಯ ಚಿಕ್ಕ ವಿದ್ಯಾರ್ಥಿಯೂ ಬಲ್ಲನು. ಆದುದರಿಂದ ಪ್ರಪಂಚ ಕಾರ್ಯಗಳನ್ನು ತಿಳಿಯುವ ಜ್ಞಾನ ಸಾಧನವಾದ ತರ್ಕಶಾಸ್ತ್ರವನ್ನು ಓದಿ ಮೂಲ ವಸ್ತುವಿನ ನಿರ್ಣಯ ಮಾಡುವುದು ಎಂದಿಗೂ ಸಾಧ್ಯವಲ್ಲ, ಎಂದು ತಿಳಿಯಬೇಕಾಗುತ್ತದೆ. ವೇದಾಂತ (ಉಪನಿಷತ್) ಬೋಧೆಯೇ ಮೂಲವಸ್ತುವಿನ ಜ್ಞಾನಕ್ಕೆ ಮುಖ್ಯ ಸಾಧನ. ಆದಾಗರೂ ಈಗ ಕಣ್ಣಿಗೆ ಕಾಣುತ್ತಿರುವ ಮಾದರಿಗಳಿಂದ ತೋರಿಸಲ್ಪಡುತ್ತಿರುವ ಪ್ರತ್ಯಕ್ಷ ಶಾಸ್ತ್ರಕ್ಕೆ (Science) ಸರಿ ಹೋಲಬೇಕು. ಆಗ ಆ ಬೋಧೆಯು ನಿಜವಾದುದು ಎಂದು ಸ್ಪಷ್ಟವಾಗುತ್ತದೆ.

ಈಗಲೂ ಪುಸ್ತಕದ ವಾಕ್ಯಗಳನ್ನು ಅವಲಂಬಿಸಿ ಮಾತನಾಡುತ್ತಾ ಸುಮ್ಮನೆ ಚರ್ಚೆ ಮಾಡುತ್ತಾ ತಮ್ಮ ನಂಬುಗೆಯನ್ನೇ ಮುಖ್ಯವೆಂದು ತಿಳಿಯುವವರು ಅನೇಕರು ಇದ್ದಾರೆ. ಅವರು ಇನ್ನು ಮೇಲೆ ತಮ್ಮ ವಿಚಾರಗಳನ್ನು ಈಗಿನ ಶಾಸ್ತ್ರಕ್ಕೆ (Science) ಒರೆಹಚ್ಚಿ ನೋಡಿದಾಗ ಮಾತ್ರ ಅವರ ಕೊರತೆಗಳು ಅವರಿಗೆ ತೋರುತ್ತವೆ.

ಪೂರ್ವಿಕರು ಇವೇ ಭೂಮಿ, ಇದೇ ಸೂರ್ಯ ಮುಂತಾದವರನ್ನೇ ನಂಬಿಕೊಂಡು ತಮ್ಮ ಶಾಸ್ತ್ರಗಳನ್ನು ಬರೆದರು. ಈ ಪ್ರಾಪಂಚಿಕ ಸುಖವನ್ನು ಎಷ್ಟು ಉತ್ತಮವಾದ ರೀತಿಯಲ್ಲಿ ಪಾರಮಾರ್ಥಿಕ ಸುಖವನ್ನು ಪಡೆಯುವ ಬಗ್ಗೆ ಉಪಯೋಗಿಸಿಕೊಳ್ಳಬಹುದೆಂಬುವನ್ನು ಅನೇಕ ವಿಧದಲ್ಲಿ ಶೋಧಿಸಿದ್ದಾರೆ. ಈಗಿನ ಶಾಸ್ತ್ರಕಾರರೂ ಪ್ರಾಪಂಚಿಕ ಸುಖದ ಶೋಧನೆಯಲ್ಲಿದ್ದಾಗ್ಯೂ ಇವೇ ಭೂಮಿ ಸೂರ್ಯ ಮುಂತಾದವರನ್ನೇ ತಮ್ಮ ಉಪಕರಣಗಳಾಗಿ ಗ್ರಹಿಸಿಕೊಂಡಿದ್ದಾರೆ. ಆದುದರಿಂದ ಎ ಡನ್ನೂ ಹೊಂದಿಸಿ ಶಾಸ್ತ್ರವನ್ನು ತಿಳಿಯುಲಿಕ್ಕೆ ಈ ಕಾಲದಲ್ಲಿ ಹೋಗಬೇಕೇ ಹೊರತು ಬರಿಯ ಪುಸ್ತಕ ಪಾಠದಿಂದ ಪ್ರಯೋಜನವು ಕಡಿಮೆ. ಉದಾಹರಣೆಗೆ ಒಬ್ಬರು ಪುಸ್ತಕ ಪಾಠದವರು ಈ ಭೂಮಿ

ಯನ್ನು ಯಾವನೋ ಒಬ್ಬ ದೇವನು ಮಾಡಿ ಒಗೆದನೆಂದು ಹೇಳುವುದಾದರೆ ಈಗಿನ ಭೌತಶಾಸ್ತ್ರವು ಅದಕ್ಕೆ ಅಡ್ಡವಾಗಿ ಬಂದು ಭೂಮಿಯು ತನ್ನಷ್ಟಕ್ಕೆ ತಾನೇ ಆಯಿತೆಂದು ಹೇಳುತ್ತದೆ. ಹೀಗೆ ವಿಚಾರಿಸುತ್ತಾ ಹೋದರೆ ಪುಸ್ತಕ ಪಾಠದ ಎಷ್ಟೋ ವಿಷಯಗಳು ನಿಷ್ಪ್ರಯೋಜನವೆಂದು ಬಿಟ್ಟುಬಿಡಬೇಕಾಗುತ್ತದೆ.

ವಸಿಷ್ಠರ ಕಾಲದ ಹಿಂದೂದೇಶದ ಧರ್ಮಗ್ರಂಥಗಳು ಅವುಗಳಲ್ಲಿನ ಸಂಗತಿಗಳು ಎಲ್ಲವು ಬರಿಯ ಪುಸ್ತಕಪಾಠವು ಎಂದು ಹೇಳುವಂತಿಲ್ಲ. "ಆತ್ಮನಃ ಆಕಾಶಃ, ಆಕಾಶಾದ್ವಾಯುಃ ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ" ಎಂಬ ಉಪನಿಷತ್ ವಾಕ್ಯವಿದ್ದು ಇದರಿಂದ ನಿರಾಕಾರನಾದ ಆತ್ಮನಿಂದ ಸಾಕಾರವಾದ ಪೃಥಿವಿ ಆಯಿತೆಂದು ನಿಶ್ಚಯವಾಗಿ ತಿಳಿಯಲಿಕ್ಕೆ ಬರುತ್ತದೆ. ಆದರೆ ಈ ಕಡೆಗೆ ವಸಿಷ್ಠರ ಗಮನವು ಏಕೆ ಬೀಳಲಿಲ್ಲವೋ ತಿಳಿಯದಾಗಿದೆ.

ವಾಯು ಪದಾರ್ಥದಿಂದ ದ್ರವಪದಾರ್ಥ, ದ್ರವದಿಂದ ಕಠಿಣ ಪದಾರ್ಥ, ಆಗುತ್ತವೆ. ಕಠಿಣವು ದ್ರವವಾಗಿಯೂ ದ್ರವವು ವಾಯುವಾಗಿಯೂ ತಿರುಗಬಲ್ಲವು ಎಂದು ಈಗ ಗುರ್ತುಮಾಡಿರುವಂತೆ ನಿರಾಕಾರದಿಂದ ಸಾಕಾರ, ಸಾಕಾರದಿಂದ ನಿರಾಕಾರ, ಆಗುವುದನ್ನು ಪೂರ್ವದವರೂ ತಿಳಿದಿದ್ದರು. ಉಪನಿಷತ್ತುಗಳಲ್ಲಿ ಈ ಬಗೆಯ ಉಲ್ಲೇಖವಿದೆ. ಇವು ಪ್ರವೃತ್ತಿ ನಿವೃತ್ತಿ ಮಾರ್ಗಗಳೆಂದು ಪೂರ್ವಿಕರು ಹೇಳಿದ್ದಾರೆ.

ವಸಿಷ್ಠರು ಬೋಧಿಸುವುದಕ್ಕೆ ಮುಂಚೆ ಶ್ರೀರಾಮನು ತಿಳಿದುಕೊಂಡಿದ್ದ ಬೀಜಾಂಕುರದಂತೆ ಜಗತ್ತು ಪ್ರಳಯಕಾಲದಲ್ಲಿ ಪರವಸ್ತುವಿನಲ್ಲಿ (ಮೂಲವಸ್ತು) ಅಡಗಿರುವುದೆಂಬ ಮಾತು ತಪ್ಪಿನದಲ್ಲ. ಕಬ್ಬಿಣವು ಬಹಳ ಕಾಸುವಿಕೆಯಿಂದ ವಾಯುವಾಗುವಂತೆ ಈ ಭೂಮಿಯು ನಿವೃತ್ತಿ ಮಾರ್ಗದಲ್ಲಿ ಆತ್ಮನಾಗುವುದೆಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಬೀಜವು ಮೂಲ ರೂಪ, (ಕಾರಣ). ಮೊಳಕೆಯು ಕಾರ್ಯ. ಇಲ್ಲಿ ಕಾರಣದಿಂದ ಕಾರ್ಯವಾಗಿದೆ. ಇದರಂತೆ ಆತ್ಮನು ಕಾರಣ ಜಗತ್ತು ಕಾರ್ಯ. ಈ ಕಾರಣ ಕಾರ್ಯ ಭಾವಗಳು ಇರತಕ್ಕವುಗಳೇ ಮುಂದೆ ಅಂಕುರವು ವೃಕ್ಷವಾದಾಗ ವೃಕ್ಷವು ಮೂಲ (ಕಾರಣ). ಬೀಜವು ಕಾರ್ಯ ಈ ಕಾರಣ ಕಾರ್ಯ ಭಾವಗಳನ್ನು ತಿರಸ್ಕರಿಸುವ ಕಾರಣವು ವಸಿಷ್ಠರಿಗೆ ಏನಿದ್ದಿತೆಂಬುದು ತಿಳಿಯದಾಗಿದೆ. ಕಾರಣವೇ ಕಾರ್ಯದಲ್ಲಿ ಕೂಡಿ ಹೋಗಿದೆ. ಹೋಗುತ್ತದೆ—ಕಾರ್ಯವೂ ಕಾರಣದಲ್ಲಿ ಕೂಡುತ್ತದೆ. ಹೀಗಿದ್ದರೂ ಕಾರ್ಯದಲ್ಲಿ ಕಾರಣವೂ ಕೂಡಿ ಹೋಗಿದೆ, ಎಂದು (ಶ್ಲೋಕ ೩೫) ಹೇಳುವುದು ಬಲು ದಡ್ಡತನವೆಂದು ಏಕೆ ಹೇಳಿದರೋ "ತತ್ ಸೃಷ್ಟ್ವಾ ತದನು ಪ್ರವೇಶ" ಎಂದರೆ ಜಗತ್ತನ್ನು ಸೃಷ್ಟಿಮಾಡಿ ಅದರಲ್ಲಿ ಪ್ರವೇಶಿಸಿದನು ಎಂಬ ಉಪನಿಷತ್ತಿನ ವಾಕ್ಯವನ್ನು ವಸಿಷ್ಠರು ಜ್ಞಾಪಕಕ್ಕೆ ತರಲಿಲ್ಲವೋ ಏನೋ !

'ಬ್ರಹ್ಮಣಃ ತ್ರೀಣಿ ರೂಪಾಣಿ ಭವಂತಿ ಸಕಲಂ ಸಕಲ ನಿಷ್ಕಲಂ, ನಿಷ್ಕಲಂಚ ಬ್ರಾಹ್ಮಣಃ ನಾನಾ ರೂಪಾಣಿ ಭವಂತಿ'. ಈ ವಾಕ್ಯಗಳನ್ನು ಉಪನಿಷತ್ತುಗಳಲ್ಲಿ ನಾವು ಕಾಣುತ್ತೇವೆ. ಇದು ಈಗಿನ ಶಾಸ್ತ್ರಕ್ಕೂ ಒಪ್ಪಿತವಾದ ಮಾತು. ಮೂಲವಸ್ತು

ಎಂದು ತಿಳಿಯಬಹುದಾದ ಪರಮಾಣವು ಅನೇಕ ವಸ್ತುಗಳಾಗುವುದೆಂದು ನವೀನಶಾಸ್ತ್ರ ಕಾರರು (Scientists) ಹೇಳುತ್ತಾರೆ. ಇದರಿಂದ ಬೀಜಾಂಕುರ ನ್ಯಾಯವು ಪರ ವಸ್ತುವಿನ ಎಲ್ಲಾ ರೂಪಗಳಿಗೂ ಅನ್ವಯಿಸುತ್ತದೆ.

ಒಟ್ಟಿನಲ್ಲಿ ವಸಿಷ್ಠರು ಬೋಧಿಸಿದ ಅದ್ವೈತವು ನವೀನ (ವಿಜ್ಞಾನ) ಶಾಸ್ತ್ರದ ಮುಂದೆ ನಿಂತು ಸರಿಗೂಡಲಾರದು. ಅವರು ಕೊಟ್ಟಿರುವ ಅಣುವಿನಲ್ಲಿ ಮೇರು ಪರ್ವತ ಹೇಗೆ ಇರುತ್ತದೆ ಎಂಬ ದೃಷ್ಟಾಂತದಿಂದ (ಶ್ಲೋಕ ೩೨) ಪರವಸ್ತುವನ್ನು ಅಣು ವೆಂದೂ ಜಗತ್ತನ್ನು ದೊಡ್ಡದೆಂದೂ ಅವರು ಭಾವಿಸದಂತಾಗಿರುತ್ತದೆ. ಅಣೋರಣೀ ಯಾ‌ ಮಹತೋ ಮಹೀಯಾ‌ ಎಂಬ ಉಪನಿಷದ್ ವಾಕ್ಯದ ಕಡೆಗೆ ಅವರ ಗಮನವು ಹೋಗಿಲ್ಲ. ಇದರಿಂದ ಹಿಂದೂ ಧರ್ಮ ಗ್ರಂಥಗಳ ಸರ್ವ ಸಮನ್ವಯವಾಗಿಯೂ ತಮ್ಮ ಅಭಿಪ್ರಾಯವನ್ನು ತಿಳಿಸಿಲ್ಲವೆಂದು ತಿಳಿಯಬೇಕಾಗುತ್ತದೆ. ನವೀನಶಾಸ್ತ್ರಕಾರರು ಅನೇಕಾನೇಕ ಅಣುಗಳು ಕೂಡಿ ಮಹದ್ವಸ್ತುವಾಗುವುದನ್ನು ಒಪ್ಪುತ್ತಾರೆ. ಭೂಮಿ ಯನ್ನು ಅವರಂತೆ ಕಠಿಣವಲ್ಲದ ಸೂರ್ಯನು ಆಕರ್ಷಿಸುತ್ತಿರುವುದೂ ಅಂತಹ ಸೂರ್ಯ ನನ್ನು ಅವನಂತೆ ಪ್ರಕಾಶರೂಪವನ್ನು ತಾಳದೆ ಇರುವ ಆಕಾಶವು ಆಕರ್ಷಿಸಿ ಒಂದು ಗತಿಯಲ್ಲಿ ಪ್ರವರ್ತಿಸುವಂತೆ ಮಾಡಿರುವುದೂ ನಮಗೆ ಗೋಚರವಾಗುತ್ತದೆ. ಈ ಬಗೆಗೂ ವಸಿಷ್ಠರ ಅಭಿಪ್ರಾಯವು ಸರಿಗೂಡುವುದಿಲ್ಲ.

ಈ ಅದ್ವೈತವಲ್ಲದೆ ಶಿವಾದ್ವೈತವೆಂಬುದೊಂದಿಗೆ ಅದರ ಪ್ರಕಾರ ಬೀಜಾಂಕುರ ನ್ಯಾಯವನ್ನು ಒಪ್ಪಲಿಕ್ಕೆ ಬರುತ್ತದೆ.

"ಭಕ್ತಿ ಶಿವ ಪ್ರಸಾದ ಜನನೀ ಭವನಂ, ಶಿವನ ಪ್ರಸಾದ ಭಕ್ತಿಗೆ ಜನ್ಮಭೂಮಿ ವಿಮಾಳಾಂಕುರ ಬೀಜದ ಪೊಲ್ ಪರಸ್ಪರಂ ವ್ಯಕ್ತಂ' ಎಂದು ಶತಕತ್ರಯವು ಒಪ್ಪಿ ಕೊಂಡಿದೆ. ಒಬ್ಬ ಬ್ರಹ್ಮನೇ ಅಂಗ ಲಿಂಗ ಎಂದು ಎರಡು ರೂಪಗಳನ್ನು ತಾಳಿದ ನೆಂದೂ ಅಂಗವೇ ಉಪಾಸಕನೆಂದೂ ಲಿಂಗವೇ ಉಪಾಸ್ಯವೆಂದೂ ವೀರಶೈವರು ಹೇಳು ತ್ತಾರೆ. ಆತ್ಮ ಎಂಬ ಮಹಾಲಿಂಗದಿಂದ ಭೂಮಿ ಎಂಬ ಆಚಾರಲಿಂಗವು ಪ್ರವೃತ್ತಿ ಮಾರ್ಗದಲ್ಲಿ ಉಂಟಾಯಿತೆಂದು ಹೇಳುತ್ತಾರೆ. ನಿವೃತ್ತಿ ಮಾರ್ಗದಲ್ಲಿ ಆಚಾರ ಲಿಂಗವು ಮಹಾಲಿಂಗದಲ್ಲಿ ಕೂಡಿ ಹೋಗುವುದನ್ನು ಒಪ್ಪುತ್ತಾರೆ. ಅಂಕುರವು ಬೀಜದೊಳಡಗಿ ರುವಂತೆ ಜಗತ್ತು ಪರವಸ್ತುವಿನಲ್ಲಿ ಅಡಗುವುದನ್ನು ಅವರು ಅಲ್ಲಗಳೆಯುವುದಿಲ್ಲ. ಇದರಲ್ಲಿ ಪರವಸ್ತುವಿಗೆ 'ಶೂನ್ಯ' ಎಂದು ಹೇಳಿದ ಪದವನ್ನೇ ಉಪಯೋಗಿಸಿಕೊಂಡು 'ಶೂನ್ಯ ಸಂಪಾದನೆ' ಎಂಬ ಗ್ರಂಥವನ್ನು ಬರೆದಿದ್ದಾರೆ.

ಈ ಕಾರಣಗಳಿಂದ ಅದ್ವೈತ ಶಾಸ್ತ್ರವು ಈಚೆಗೆ ಎಷ್ಟು ಹೆಚ್ಚಾಗಿ ಬೆಳೆದು ಬಂದಿ ದ್ದರೂ ಅದರ ಮೂಲಸೂತ್ರವೇ ತಳಪದಿಯೇ ನವೀನ ಶಾಸ್ತ್ರಕ್ಕೆ ಸರಿಗೂಡುವುದಿಲ್ಲ ವಾದುದರಿಂದ ಅದರ ಬೆಳವಣಿಗೆಯ ಫಲಿತಾಂಶವೂ ಬರೀ ಬ್ರಹ್ಮಜ್ಞಾನದಲ್ಲಿ ನಿಲ್ಲುವುದೇ ಹೊರತು ಕಾರ್ಯರೂಪಕ್ಕೆ ಬರುವಂತಹುದಲ್ಲ. ಶಿವಾದ್ವೈತ್‌ವಾದರೋ ನವೀನ ಶಾಸ್ತ್ರಕ್ಕೆ ಸರಿಗೂಡಿ ತನ್ನ ಋಜತ್ವವನ್ನು ಪ್ರತಿಷ್ಠಾಪಿಸುತ್ತದೆ. ನಡೆಯಲಿಕ್ಕೂ ಬರು

ತ್ತದೆ. ಇದು ಶ್ರೀ ರಾಮಚಂದ್ರನ ಕಾಲದಲ್ಲಿಯೇ ಇತ್ತೆಂಬುದೂ ಯೋಗ ವಾಸಿಷ್ಠ ಗ್ರಂಥದಿಂವಲೇ ತಿಳಿದುಬರುತ್ತದೆ. ಆದುದರಿಂದ ಈ ಶಿವಾದ್ವೈತದ ಲಕ್ಷಣ ಲಕ್ಷ್ಯಗಳ ಕಡೆಗೆ ಜನರ ದೃಷ್ಟಿಯು ಇನ್ನು ಮೇಲೆ ವಿಶೇಷವಾಗಿ ತಿರುಗಬೇಕಾಗಿದೆ.

ಈಗಿನ ಉಚ್ಚಶಾಲೆಯ ತರಗತಿಗಳ (High School Classes) ವಿದ್ಯಾರ್ಥಿಗಳಿಗೆ ಕಲಿಸುವ 'ಸರಳ ರಸಾಯನಶಾಸ್ತ್ರ' ಎಂಬ ಪುಸ್ತಕದಲ್ಲಿ ಇಂಗ್ಲೀಷ್ ವಿಜ್ಞಾನಿ ಜಾರ್ಡಾಲ್ಟನ್ ಎಂಬುವರು ಕಂಡು ಹಿಡಿದಿದ್ದ ಪರಮಾಣು 'ವಾದ' (Theory) ವಿಷಯಗಳಿವೆ.

ಆ ಪ್ರಕಾರ ೬,೦೦೦,೦೦೦,೦೦೦,೦೦೦,೦೦೦,೦೦೦,೦೦೦,೦೦೦ ಜಲಜನಕ ಪರಮಾಣುಗಳ ತೂಕವು ೧ ಗ್ರ್ಯಾಂ ಆಗಬಹುದು. ಒಂದು ಮೂಲವಸ್ತುವಿನ ಪರಮಾಣುವಿಗೆ ಒಂದು ನಿಯತವಾದ ತೂಕವಿದೆ. ಈ ಪರಮಾಣುಗಳು ೧ ಕ್ಕೆ ೧, ೧ಕ್ಕೆ ೨, ೨ ಕ್ಕೆ ೩ ಹೀಗೆಸರಳ ಪ್ರಮಾಣದಲ್ಲಿ ಸಂಯೋಗವಾಗುತ್ತವೆ. ಹೀಗೆ ಪರಮಾಣುಗಳ ಸಂಯೋಗವಾದಾಗ 'ಅಣು' (Molecule) ಆಗುತ್ತದೆ. ಒಂದು ಪರಮಾಣುವನ್ನು ಸೃಷ್ಟಿಸಲೂ ಆಗುವುದಿಲ್ಲ. ನಾಶಮಾಡಲೂ ಆಗುವುದಿಲ್ಲ. ರಸಾಯನ ಕಾರ್ಯದಲ್ಲಿ (ಪರಮಾಣುಗಳನ್ನು ಸಂಯೋಗ ಮಾಡುವ ಕೆಲಸ) ಭಾಗವಹಿಸುವ ವಸ್ತುಗಳ ತೂಕವು ಬದಲಾಯಿಸುವುದಿಲ್ಲ. ಹೀಗೆ ವಸ್ತು ನಿತ್ಯತೆಯು ನಿಯಮವಿದೆ (ಆಮ್ಲಜನಕ, ಜಲಜನಕ ಎಂಬ ಎರಡು ವಾಯುಗಳ ಪರಮಾಣುಗಳ ಬೇರೆ ಬೇರೆ ವಿಧದ ಸಂಯೋಗದಿಂದ ನೀರು, ಮತ್ತು ಜಲಜನಕದ 'ಪರಾಕ್ಸೈಡ್' ಎಂಬ ಎರಡು ವಸ್ತುಗಳಾಗುತ್ತವೆ) ೧ ಗ್ರಾಂ=ಸುಮಾರು ೨/೨೩ ತೊಲೆ, ೧ ಪೌಂಡ್=೪೫೩·೫೯ ಗ್ರಾಂ.

ಈ ವಿಷಯಗಳನ್ನು ಓದಿದಾಗ ಈಗಿನ ವೈಜ್ಞಾನಿಕರು ಎಷ್ಟು ಸೂಕ್ಷ್ಮವಾದ ಪರಮಾಣುವನ್ನು ಕಂಡು ಹಿಡಿದಿದ್ದಾರೆ ಎಂಬುದೂ, ಅವುಗಳಿಂದ ಅನೇಕ ವಸ್ತುಗಳೂ ಜಗತ್ತು ಮೊದಲಾದವು ಆಗಿರುವುವೆಂಬುದೂ ಚನ್ನಾಗಿ ಗೊತ್ತಾಗುತ್ತದೆ.

ಬರಿಯಮಾತಿನ ಅದ್ವೈತಿಗಳು ಪರಮಾಣುವನ್ನು ಇನ್ನೂ ಸೂಕ್ಷ್ಮವೆಂದು ಹೇಳಬಹುದು. ಎಷ್ಟೇ ಸೂಕ್ಷ್ಮವೆಂದರೂ ಆ ಪರಮಾಣುಗಳ ಕಾರ್ಯವೂ ಇದೇ ಆಗಿದೆ. ಇದೇ ಅಭಿಪ್ರಾಯವೇ ಮೂಲವಸ್ತುವು (God) 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬುದರಲ್ಲಿ ವ್ಯಕ್ತವಾಗುತ್ತದೆ. ಈ ಪಾಠವನ್ನು ಓದಿದ ವಿದ್ಯಾರ್ಥಿಯು ಮುಂದೆ ವಸಿಷ್ಠ ಋಷಿಗಳು ಹೇಳಿದ "ಅಣುವಿಗಿಂತ ಸೂಕ್ಷ್ಮವಾದುದೂ (ಇದೇ ಪರಮಾಣು) ತಾನೇ ಹುಟ್ಟಿದುದೂ (ಇದನ್ನು ಸೃಷ್ಟಿಸಲಾಗುವುದಿಲ್ಲ ಎಂದು ಮೇಲೆ ಹೇಳಿದೆ) ಆದ ಪರವಸ್ತು ಜಗತ್ತುಗಳ ಬೀಜವಾಗಿ ಆಗಲಿಕ್ಕೆ ಹೇಗೆ ಶಕ್ಯವಿದೆ. (ಶ್ಲೋಕ ೨೫) ಎಂಬ ಪ್ರಶ್ನೆಯನ್ನು ಹಾಕಿದರೆ ಅವನು ಏನು ಹೇಳುವನೋ ಅವನ ಮುಂದೆ ಪ್ರಶ್ನೆ ಮಾಡುವವರು ಎಷ್ಟು ದಡ್ಡರಾಗಬೇಕೋ ಓದುಗ ಮಹನೀಯರೇ ನಿರ್ಧರಿಸಬೇಕಾಗಿದೆ.

ಪರವಸ್ತುವಿನ ಬೀಜಾಂಕುರ ನ್ಯಾಯವಾಗಿ ಜಗತ್ತನ್ನು ಹೇಳುವವರು ದುರ್ಬುದ್ಧಿಯವರು (ಶ್ಲೋಕ ೩೬) ದಡ್ಡರು (ಶ್ಲೋಕ ೩೫) ಅವರು ಅಜ್ಞರು ಮತ್ತು ಕೂಸು (ಶ್ಲೋಕ ೨೧) ಎಂದು ಯಾರನ್ನು ದೂಷಿಸಿರುವರೋ ಅವರು ಈಗಿನ ವೈಜ್ಞಾನಿಕರ ಶೋಧನೆಯ ಬಲದಿಂದ ವಸಿಷ್ಠರಿಗೆ ಪ್ರತಿಪ್ರಶ್ನೆಯನ್ನು ಹಾಕಬಹುದಲ್ಲವೆ ?

ಶ್ರೀ ರಾಮಚಂದ್ರನು ವಸಿಷ್ಠ ಋಷಿಗೆ ಬೀಜಾಂಕುರ ನ್ಯಾಯದ ವಿಷಯಗಳನ್ನು ಕೇಳಿದುದು ವಾಸ್ತವವೆಂಬುದಕ್ಕೆ ಪೂರ್ವಕಾಲದ ಅನೇಕ ಉಪನಿಷತ್ತುಗಳು ಆ ರೀತಿ ಬೋಧಿಸುವವುಗಳಿವೆ. ಆದುದರಿಂದ ಜಗತ್ತನ್ನು ಪರವಸ್ತುವಿನ ಬೀಜಾಂಕುರದಂತೆ ಗ್ರಹಿಸುವ ವೀರಶೈವರು ತಮ್ಮ ಶಿವಾದ್ವೈತ ತತ್ತ್ವವೇ ನಿಜವಾದುದೆಂದು ಭಾವಿಸಬೇಕು. ಮತ್ತು ತಮ್ಮ ತಾತ್ತ್ವಿಕಾಭಿಪ್ರಾಯದ ಬೋಧೆಯು ಶ್ರೀ ರಾಮಚಂದ್ರನಿಗಿಂತಲೂ ಮುಂಚೆಯೇ ಇದ್ದುದೆಂದೂ ನಿಃಸಂಶಯವಾಗಿ ತಿಳಿಯಬೇಕು. ಈ ತತ್ತ್ವವು ಎಷ್ಟು ಹಳೆಯದೋ ಅಷ್ಟು ಹೊಸದೂ ಆಗಿದೆ. ಈಗಿನ ವೈಜ್ಞಾನಿಕರ ಶೋಧನೆಯ ಪ್ರಕಾರದ ಅಭಿಪ್ರಾಯಗಳೂ ಇದರಲ್ಲಿ ಕಂಡುಬರುತ್ತದೆ. ಪರವಸ್ತುವು ಸೃಷ್ಟಿಸಲ್ಪಡುವುದೂ ಅಲ್ಲ, ನಾಶವಾಗುವುದೂ ಅಲ್ಲ, ಎಂದು ವೈಜ್ಞಾನಿಕರಂತೆ ಹೇಳುವ ಹಿಂದೂ ಧರ್ಮಶಾಸ್ತ್ರವನ್ನು ಇವರು ಒಪ್ಪುವವರೇ !

ನಾವು ಮಹಾದೇವನನ್ನು ತಿಳಿಯಬೇಕು ಎಂಬುದೇನೋ ಧಾರ್ಮಿಕ ಮುಖ್ಯ ಕಾರ್ಯ. ಅದರಲ್ಲಿಯೂ ಸಹಜವಾಗಿ ಇದ್ದುದನ್ನು ಇದ್ದಂತೆ ತಿಳಿಯುತ್ತಾ ಹೋಗುವುದೇ ವಿಚಾರ ಪೂರ್ವಕವಾದ ಕಾರ್ಯ. ಅಂತಹ ನೈಜ ರೀತಿಯಲ್ಲಿ–ತಿಳಿಯುವುದಕ್ಕೆ ಸರ್ವರೂ ಪ್ರಯತ್ನಪಡಲಿ ಮುಂದೆ ಧರ್ಮವನ್ನು ಸುಧಾರಿಸಬೇಕೆಂಬ, ಒಂದೇ ಧರ್ಮವನ್ನು ನೆಲೆಗೊಳಿಸಬೇಕೆಂಬ ಮಹನೀಯರೂ ಇಂತಹ ವಿಷಯಗಳಿಗೆ ಗಮನ ಕೊಟ್ಟು ಪರಿಶೀಲಿಸಲಿ ಎಂಬ ವಿನಯಾರ್ಥಿಗಳೊಡನೆ ಇಲ್ಲಿಗೆ ವಿರಮಿಸೋಣ.

ಇನ್ನು ವಸಿಷ್ಠರು ಬೋಧಿಸಿದ ಪ್ರಕಾರ ತತ್ (ಪರವಸ್ತು), ಏತತ್ (ಇದು ಎಂಬುದು ಕಣ್ಣಿಗೆ ಕಾಣುವ ಜಗತ್ತು), ಎಂದರೆ ಚಿತ್, ಅಚಿತ್ ಅಥವಾ ಅಜಡ, ಜಡ ಎಂದು ವಸ್ತುಗಳಲ್ಲಿ ಎರಡು ವಿಧ ಉಂಟೇ ಎಂದು ಶೋಧಿಸಲಿಕ್ಕೆ ಹೋದರೆ ಅದೂ ಇಲ್ಲ. ಈಗಿನ ವಿಜ್ಞಾನ ಶಾಸ್ತ್ರಿಗಳು ಪರಿಶೋಧನೆ ಮಾಡುತ್ತಾ ಮಾಡುತ್ತಾ ಕೊನೆಯಲ್ಲಿ ತಗಡು (Tin) ಮುಂತಾದ ಜಡವಸ್ತುಗಳಿಗೂ ಪ್ರಾಣವಿರುವುದೆಂದು ಕಂಡು ಹಿಡಿದಿದ್ದಾರೆ. ಇನ್ನುಮೇಲೆ ಜಡ, ಅಜಡ ಎಂದು ಪದಾರ್ಥಗಳನ್ನು ವಿಂಗಡಿಸುವಂತಿಲ್ಲ ಎಲ್ಲವೂ ಚೈತನ್ಯ ವಸ್ತುಗಳೇ ಎಂದು "ಪ್ರಬುದ್ಧ ಕರ್ಣಾಟಕ"ದಲ್ಲಿಯೂ ಪ್ರಕಟವಾಗಿದೆ. ಶಿವಾದ್ವೈತ ಮಂಜರಿಯ ಮೊದಲಲ್ಲಿನ ಒಂದು ಶ್ಲೋಕವು ಹೀಗೆ ಇದೆ.

ಬ್ರಹ್ಮಾದ್ವೈತಮನಾತ್ಮ ಕಲ್ಪ ಮಿತರೈವರಾಭಣ್ಯತೇ ತತ್ ಪುನ- ।
ಸ್ತ್ವಸ್ತೀತ್ಯಾದಿ ವಿಭಾಗತಃ ಸ್ಫುಟತರಂ ದ್ವೈತೇ ಸುಮಿಶ್ರಾಮ್ಯಲೆ ।
ತದ್ರೀತಿಂ ಪ್ರತಿಪಾದ್ಯ ದೂಷಣ ಗಣಂ ಚಾಪಾದ್ಯ ಸದ್‌ದ್ವಯರ್ ಕ್ರಿಯಂ ।
ತದ್ ಬ್ರಹ್ಮೇತ್ಯುಪಪಾದ್ಯ ವಿಶ್ವಮುಖಿಲಂ ತದ್ರೂಪಮಾಚಕ್ಷ್ಮ ಹೇ ॥

ಸಾರಾಂಶ: ಬ್ರಹ್ಮಾದ್ವೈತವು ಅನಾತ್ಮ ಎಂಬುದೊಂದನ್ನು ಕಲ್ಪನೆ ಮಾಡುತ್ತದೆ ಎಂದು ಇತರರು ವರ್ಣಿಸಿರುತ್ತಾರೆ. ಅದು ಮತ್ತೆ ಬ್ರಹ್ಮನನ್ನು ಅಸ್ತಿ, ಭಾತಿ, ಪ್ರಿಯ ಎಂದು ಮೂರು ವಿಭಾಗ ಮಾಡಿ, ಸ್ಪಷ್ಟವಾಗಿ ದ್ವೈತದಲ್ಲಿಯೇ ವಿರಮಿಸುತ್ತದೆ. ಅದರ ರೀತಿಯನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಿ, ಅದರ ತಪ್ಪುಗಳ ಸಮೂಹವನ್ನು ತೋರಿಸಿ, (ಅಸಾಧ್ಯ) ಸತ್ ಸ್ವರೂಪವಾದ ಜ್ಞಾನ ಮತ್ತು ಕ್ರಿಯೆ ಎರಡೂ ಉಳ್ಳದ್ದು ತತ್ ಎಂಬ ಬ್ರಹ್ಮ ಎಂದು ಅಂಗೀಕರಿಸಿ (ಉಪಪಾದ್ಯ) ಆ ಬ್ರಹ್ಮರೂಪವೇ ಸಮಸ್ತ ವಿಶ್ವವು ಎಂದು ಹೇಳುತ್ತೇನೆ.

ಹೀಗೆ ಗ್ರಂಥಕರ್ತರು ತಮ್ಮ ಗ್ರಂಥದ ಮೊದಲಿನಲ್ಲಿಯೇ ಬ್ರಹ್ಮಾದ್ವೈತ, ಶಿವಾದ್ವೈತ ಇವುಗಳ ಭೇದವನ್ನು ತೋರಿಸಿ ಇದ್ದಾರೆ. ಈ ಹೇಳಿಕೆಯು ಈಗಿನ ವಿಜ್ಞಾನಿಗಳು ಹೇಳುವ ಸಮಸ್ತವೂ ಚೈತನ್ಯವೇ ಎಂಬ ಅಭಿಪ್ರಾಯಕ್ಕೆ ಸರಿಗೂಡುತ್ತದೆ. ಆದುದರಿಂದ ಈಗಿನ ಅದ್ವೈತ ಶಾಸ್ತ್ರವು ಬರಿಯ ಬ್ರಹ್ಮ ಜ್ಞಾನಕ್ಕೆ ಮಾತ್ರವೇ ಹೊರತು ಕೆಲಸಕ್ಕೆ ಬರುವುದಿಲ್ಲ. ಅದರಂತೆ ಅನಾತ್ಮ ಕಲ್ಪನೆ ಮಾಡಕೂಡದು ಎಂಬುದು ಸ್ಪಷ್ಟವಾಗುತ್ತದೆ. ವೀರಶೈವರಾದರೋ ಸರ್ವವೂ ಲಿಂಗ ಎಂದು ತಿಳಿದವರು, 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶೃತಿಗೆ ಒಳಪಟ್ಟವರು. ಈಗಿನ ವಿಜ್ಞಾನ ಶಾಸ್ತ್ರಕ್ಕೆ ಸರಿಯಾದ ತಾತ್ವಿಕಾಭಿಪ್ರಾಯವುಳ್ಳವರು. ಇವರು ತಮ್ಮ ತಾತ್ವಿಕಾಭಿಪ್ರಾಯವೇನು ? ಅದಕ್ಕೆ ತಕ್ಕ ನಡತೆ ಏನು ? ತಮ್ಮ ಗ್ರಂಥಗಳಲ್ಲಿ ಏನು ಹೇಳುತ್ತದೆ ? ಎಂಬ ವಿಚಾರವನ್ನು ತಿಳಿದುಕೊಂಡು ನಡೆವವರಾಗಬೇಕು. ಲಿಂಗಧಾರಿಗಳು ನಾವು ಬರಿಯ ಹೆಮ್ಮೆಯಿಂದಿದ್ದರೆ ಸಾಲದು.

(ಸಂ. ೭೭–೭೮)

# ವೀರಶೈವದ ಹಿನ್ನೆಲೆ*

ಈಗ ದೇಹದ ಮೇಲೆ ಲಿಂಗವನ್ನು ಧರಿಸಿರುವವರೆಲ್ಲರೂ ವೀರಶೈವರೆಂದು ಕರೆಯುವ ರೂಢಿಯಿದೆ; ಪ್ರಸಿದ್ಧ ವಿಷಯವೂ ಆಗಿದೆ. ಲಿಂಗವನ್ನು ದೇಹದ ಮೇಲೆ ಧರಿಸುವುದು ಯಾವ ಕಾಲದಿಂದ ಪ್ರಚಾರದಲ್ಲಿ ಬಂದಿದೆ. ಹೀಗೆ ಮಾಡುವ ಸಂಪ್ರದಾಯದ ಅನುಯಾಯಿಗಳು ಯಾರಿದ್ದರು, ಇವೇ ಮೊದಲಾದ ವಿಷಯಗಳನ್ನು ಚಾರಿತ್ರಿಕ ದೃಷ್ಟಿಯಿಂದ ತಿಳಿಯುವುದು ಅವಶ್ಯಕವಾದ ಸಂಗತಿಯಾಗಿದೆ. ಸಿಂಧೂ ದೇಶದಲ್ಲಿನ ಭೂಗರ್ಭಕವಾಗಿದ್ದ ಹರಪ್ಪ ಮಹೆಂಜೋದಾರೋ ಎಂಬ ಪಟ್ಟಣಗಳನ್ನು ಶೋಧಿಸಿದ ಶ್ರೀ ಮಾರ್ಷಲ್ ಅವರು ಆರ್ಯ ಸಂಸ್ಕೃತಿಗಿಂತ ಮೊದಲು ಭಾರತದಲ್ಲಿ ದ್ರಾವಿಡ ಸಂಸ್ಕೃತಿ ಇದ್ದಿತೆಂದೂ ಅದಕ್ಕಿಂತ ಪೂರ್ವದಲ್ಲಿ ಲಿಂಗಧಾರಿಗಳಾದ ಜನರು ಆ ಪಟ್ಟಣಗಳಲ್ಲಿ ಇದ್ದನೆಂದೂ, ಅವರು ಧರಿಸುತ್ತಿದ್ದ ಲಿಂಗಗಳು ದಕ್ಷಿಣ ಭಾರತದಲ್ಲಿ ವೀರಶೈವರು ಧರಿಸುತ್ತಿರುವ ಲಿಂಗಗಳಂತೆ ಇರುವುವೆಂದೂ ಶೋಧನೆ ನಡೆಸಿ ಪ್ರಕಟಿಸಿದ್ದಾರೆ. ಹರಪ್ಪ ಮಹೆಂಜೋದಾರೋ ಪಟ್ಟಣಗಳು ಕ್ರಿ.ಶ.ಪೂ. ೫೦೦೦ ವರ್ಷಗಳಿಗಿಂತ ಹಿಂದೆಯೇ ಇದ್ದಿರಬಹುದೆಂದೂ, ತಮ್ಮ ಶೋಧನೆಯಲ್ಲಿ ಹೇಳಿದ್ದಾರೆ. ಈ ದೆಸೆಯಿಂದ ಸುಮಾರು ಹತ್ತು ಸಾವಿರ ವರ್ಷಗಳ ಹಿಂದಿನಿಂದಲೂ ದೇಹದ ಮೇಲೆ ಲಿಂಗ ಧರಿಸುವ ರೂಢಿ ಪ್ರಚಾರದಲ್ಲಿದ್ದಿತೆಂದು ತಿಳಿಯಲವಕಾಶವಾಗಿದೆ.

ಈ ವಿಚಾರ ಪರಿಶೋಧನೆ ಮಾಡಲು ಹೋದಾಗ ಮೇರು ಪರ್ವತದಲ್ಲಿದ್ದ ದೇವತೆಗಳು, ಋಷಿಗಳು ಮೊದಲಾದವರು ಲಿಂಗಧರಿಸಿದ್ದರು, ಎಂದು ತಿಳಿಯಲಿಕ್ಕೆ ಬರುತ್ತದೆ. ಹಾಗೆ ದೇವತೆಗಳೂ ಋಷಿಗಳೂ ಲಿಂಗ ಧರಿಸಿದ್ದರೆಂಬುದಕ್ಕೆ ಕೆಲವು ಉಪನಿಷತ್ತುಗಳೂ, ವ್ಯಾಸರ ಪುರಾಣಗಳೇ ಮೊದಲಾದುವು ಹೇಳುತ್ತಿರುವುದು ಬಲವಾದ ಸಾಕ್ಷಿಯಾಗಿದೆ. ಮದರಾಸಿನಲ್ಲಿ 'ಅಪ್ರಕಾಶಿಕಾ ಉಪನಿಷದಃ' (un Published-upanishads) ಎಂಬ ಒಂದು ಪುಸ್ತಕವು ಪ್ರಕಟವಾಗಿದೆ. ಅದರಲ್ಲಿ ಸಿದ್ಧಾಂತ ಶಿಖೋಪನಿಷತ್ ಪುಟ ೩೮೦ ರಿಂದ ೩೮೩ ರಲ್ಲಿ ದೇವತೆಗಳು ಲಿಂಗಪೂಜೆ ಮಾಡಿದ ವಿಷಯವು ಹೇಳಲ್ಪಟ್ಟಿದೆ. ಉಪಮನ್ಯುಮುನಿಗೆ ವಿಷ್ಣುವು (ಶ್ರೀಕೃಷ್ಣನು) ಶಿಷ್ಯನಾಗಿ

---

* 'ದಾಸೋಹ' ಎಂಬ ಹೆಸರಿನ ರಜತ ಸಂಪುಟವು ಶ್ರೀ ಜ.ಚ.ನಿ. ಅವರ ರಜತ ಮಹೋತ್ಸವ ಸಂಭಾವನಾ ಗ್ರಂಥವಾಗಿ ೧೯೬೭ ರಲ್ಲಿ ಕೊಡಲ್ಪಟ್ಟಿತು. ಅದರಲ್ಲಿ ಪ್ರಕಟವಾದ ಈ ಲೇಖನವು ಯಾವುದರಿಂದ ಎತ್ತಿ ಪ್ರಕಟಿಸಲ್ಪಟ್ಟಿದೆಯೋ ಗೊತ್ತಿಲ್ಲ. ಬಹುಶಃ 'ವೀರಶೈವ ತತ್ತ್ವ ಪ್ರಕಾಶ' ಗ್ರಂಥಕ್ಕೆ ಶ್ರೀ ಚೆನ್ನಮಲ್ಲಿಕಾರ್ಜುನರು ಬರೆದದ್ದೆಂದು ಊಹಿಸಿದ್ದೇವೆ. ಆ ಗ್ರಂಥ ನಮಗೆ ದೊರೆಯಲಿಲ್ಲ. ಆ ಉತ್ತಮ ಲೇಖನವನ್ನಿಲ್ಲಿ ಸಂಪಾದಿಸಿ ಕೊಟ್ಟಿದ್ದೇವೆ. (ಸಂ.)

ನೀಲದ ಲಿಂಗವನ್ನು ಪೂಜಿಸುತ್ತ ಮೇಘರೂಪದಿಂದೀಶನಂ ಭಜಿಸಿ, ಸಾಂಬನಂ ಪಡೆದನು ಎಂಬುದು ಪುರಾಣ ಪ್ರಸಿದ್ಧ ವಿಷಯವಾಗಿದೆ. (ವೀರಶೈವಾಮೃತ ಮಹಾಪುರಾಣ ೩ನೇ ಕಾಂಡ ೧೧ನೇ ಸಂಧಿಯಲ್ಲಿಯೂ ಈ ವಿಷಯವಿದೆ. ಮೇಲೆ ಕಂಡ ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ಸಿಕ್ಕ ಲಿಂಗವೂ ನೀಲಲಿಂಗವಾಗಿಯೇ ಇವೆ, ಎಂಬುದನ್ನು ಶಾಸನ ಇಲಾಖೆಯವರು ಪ್ರದರ್ಶಿಸಿದ ಆ ಅವಶೇಷದ ಲಿಂಗವನ್ನು ನೋಡಿದುದರಲ್ಲಿ ವ್ಯಕ್ತವಾಗಿದೆ. ಬಹು ಪ್ರಾಚೀನವಾದವುಗಳೆಂದು ಗೊತ್ತುಮಾಡಲ್ಪಟ್ಟವುಗಳಲ್ಲಿ ಒಂದಾದ ಕಠೋಪನಿಷತ್ತಿನಲ್ಲಿ

"ಇಂದ್ರಿಯೇಭ್ಯಃ ಪರಾಹ್ಯರ್ಥಾ, ಅರ್ಥೇಭ್ಯಶ್ಚ ಪರಂಮನಃ,
ಮನಸಸ್ತು ಪರಾಬುದ್ಧಿಃ, ಬುದ್ಧಿರಾತ್ಮಾ ಮಹಾನ್‌ಪರಃ,
ಮಹಾಕಃ ಪರೆಮವ್ಯಕ್ತಾತ್ ಪುರುಷಃ ಪರಃ,
ಪುರುಷಾನ್‌ನಪರಂ ಕಿಂಚಿತ್ ಸಾಕಾಷ್ಠಾ ಸಾಪರಾಗರೆಃ"

–ಎಂದು ಒಂದು ಕಡೆಯಲ್ಲಿಯೂ— "ಅವ್ಯಕ್ತಾತ್ತುಪರಃ ಪುರುಷಃ ವ್ಯಾಸಕೋಲಿಂಗ ಏವಚ"–ಎಂದು ಮತ್ತೊಂದು ಕಡೆಯಲ್ಲಿಯೂ ಹೇಳಲ್ಪಟ್ಟಿದೆ. ಇದರಿಂದ ಮಹತ್ತತ್ತ್ವಕ್ಕಿಂತಲೂ ಶ್ರೇಷ್ಠವಾದ ಅತ್ಯಕ್ತತ್ವಕ್ಕಿಂತಲೂ ಶ್ರೇಷ್ಠವಾದ ಪುರುಷತತ್ತ್ವವು. ಕೊನೆಯೆಂದು ಹೇಳಿ, ಆ ಪುರುಷತತ್ತ್ವವೇ ಲಿಂಗ ಎಂದು ಹೇಳಿರುವುದು ಪೂಜಿಸಲ್ಪಡುವ ಲಿಂಗವೇ ಎಂಬುದನ್ನು ತೋರಿಸುತ್ತದೆ. ಇದಲ್ಲದೆ–

"ಅಂಗುಷ್ಟಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ,
ಈಶಾನೋಭೂತ ಭವ್ಯಸ್ಯ ಸಏವಾದ್ಯಃ ಸಉರ್ಶ್ಚ ಏಕದ್ವೈಕತ್"

—ಎಂದು ಕಠೋಪನಿಷತ್ತಿನಲ್ಲಿರುವುದರಿಂದ ಅಂಗುಷ್ಟಮಾತ್ರನಾದ ಪುರುಷನು ಹೊಗೆಯಿಲ್ಲದ ದೀಪರೂಪನಾಗಿ ಹಿಂದಿನ ಮುಂದಿನ ಸೃಷ್ಟಿಗೆ ಈಶಾನನಾಗಿ ಇರುತ್ತಾನೆ.ಅವನೇ ಆರ್ಶ್ಯನು. (ಮೊದಲನೆಯವನು) ಎಂದು ಹೇಳಿರುವುದು ದೇಹದಲ್ಲಿ ಧರಿಸಿರುವ ಲಿಂಗವನ್ನೇ ಈಶಾನವೆಂದು ತೋರಿಸುತ್ತದೆ. ಈಶಾನಾಸ್ಯೋಪನಿಷತ್ತಿನಲ್ಲಿರುವ– "ಈಶಾವಾಸ್ಯಮಿದಂ ಸರ್ವಂ ಯಕ್ಕಿಂಚಜನಕ್ಯಾಂಜಗಕ್"–ಎಂಬ ಮಂತ್ರದಲ್ಲಿ ಜಗಕ್ಯಾಂ ಎಂಬ ಪದಕ್ಕೆ 'ಜಗಕ್ಯಾಂ ಭುವನಾಧ್ವಾನಂ' ಎಂದರೆ ಲಿಂಗದ ಜಗರೆ ಎಂಬ ಭಾಗದಲ್ಲಿ ಭುವನಾಧ್ವನಿಗೆ ಎಂದು ಹೇಳುವ ಉಪಬ್ರಹ್ಮಣ ವಾಕ್ಯವು ದೊರಕುತ್ತದೆ. ಲಿಂಗದಲ್ಲಿ ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ಕಲಾಧ್ವ, ತತ್ವಾಧ್ವ–ಎಂಬ ಆರು ಅಧ್ವಗಳು ಇರುವುದಾಗಿ ಗ್ರಂಥಗಳ ಪ್ರಮಾಣವೂ ಇದೆ. ಆದ್ದರಿಂದ ಇಲ್ಲಿ ಹೇಳುವ ಈಶನು ಲಿಂಗವೆಂದೇ ತಿಳಿಯಲಿಕ್ಕೆ ಬರುತ್ತದೆ.–

"ಈಶ್ವರಃ ಸರ್ವಭೂತಾನಾಂ ಹೃದ್ದೇಕೇಜುರ್ನ ತಿಷ್ಠತೆ।
ಬ್ರಾಮಯನ್ ಸರ್ವಲೋಕಾನಿ, ಯಂತ್ರಾರೂಢಾನಿಮಾಯಯಾ।
ತಮೇವ ಶರಣಂಗಚ್ಛ ಸರ್ವಭಾವೇನ ಭಾರಕ।
ತಕ್ ಪ್ರಸಾದಾಕ್ ಪರಾಂಶಾಂತಿಂ ಪ್ರಾಪ್ಸ್ಯಸಿ ಶಾಶ್ವತಂ ॥"

–ಅರ್ಜುನನೇ ಕೇಳು, ಸರ್ವಪ್ರಾಣಿಗಳ ಹೃದಯದಲ್ಲಿ ಈಶ್ವರನಿದ್ದಾನೆ. ಅವನು ಸರ್ವ ಪ್ರಾಣಿಗಳಿಗೆ ಲೋಕ ಭ್ರಮೆಯನ್ನು ಹುಟ್ಟಿಸಿ, ಪ್ರಪಂಚಯಂತ್ರಕ್ಕೆ ಏರಿಸುತ್ತಾನೆ. ಅವನಿಗೆ ಸರ್ವಭಾವದಿಂದ ಶರಣು ಹೋಗು. ಅವನ ಪ್ರಸಾದದಿಂದ ಶ್ರೇಷ್ಠ ಶಾಂತಿಯನ್ನು, ಶಾಶ್ವತ ಸ್ಥಾನವನ್ನು ಪಡೆಯುತ್ತೇವೆ. ಎಂಬುದಾಗಿ ಭಗವದ್ಗೀತೆಯ ೧೮ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಈಶ್ವರನು ಲಿಂಗವೇ ಆಗಿದ್ದಾನೆ. ಏಕೆಂದರೆ ಮಹಾಭಾರತದಲ್ಲಿರುವ ಉತ್ತರ ಗೀತೆಯಲ್ಲಿ ನಿರಾಕಾರವಾದ, ನಿರಂಜನನಾದ ಶಿವನನ್ನು ಹೃದಯ ಮಧ್ಯದಲ್ಲಿ ನೋಡಬೇಕೆ ಹೊರತು ಹೊರಗಿನ ಕಲ್ಲು ಮಣ್ಣು ಕಟ್ಟಿಗೆ ಮೊದಲಾದವುಗಳಿಂದ ನಿರ್ಮಿಸಲ್ಪಟ್ಟ ಸಾರಮಯ ಮೂರ್ತಿಗಳಲ್ಲಿ ಎಂದೆಂದೂ ಕಾಣಲಿಕ್ಕೆ ಬರುವುದಿಲ್ಲ.–ಎಂಬ ಅಭಿಪ್ರಾಯವು ಸ್ಪಷ್ಟವಾಗಿಯೇ ಇದೆ. ಅಲ್ಲಿ ಹೇಳಿದ ಹೃದಯದಲ್ಲಿನ ಶಿವನೇ ಕಠೋಪನಿಷತ್ತಿನಲ್ಲಿ ಹೇಳಿದ ಅಂಗುಷ್ಠ ಮಾತ್ರ ಪುರುಷನೆಂದೂ, ಅವನೇ ಲಿಂಗ ಎಂದೂ ಚೆನ್ನಾಗಿ ತಿಳಿಯಲಿಕ್ಕೆ ಬರುವಂತೆ ಇದೆ, ಏಕೆಂದರೆ ಈ ಲಿಂಗವು ಸರ್ವಭೂತಾಂತರಾತ್ಮವೆಂದೂ ಸರ್ವಮೂಲವೆಂದೂ ಸರ್ವರ ಹೃದಯದಲ್ಲಿರುವವನೆಂದೂ ಕಠೋಪನಿಷತ್ತಿನಲ್ಲಿಯೇ ಹೇಳಿದೆ. (ಇದರಿಂದ ಪೂರ್ವಿಕ ಮಹನೀಯರ ವರ್ತನೆಯು ಲಿಂಗಪೂಜೆಯ ಕಡೆಗೇ ಹೆಚ್ಚು ಗಮನವುಳ್ಳದ್ದಾಗಿದ್ದಿತೆಂದು ತಿಳಿಯಲವಕಾಶವಾಗಿದೆ.) ಇನ್ನು ವೀರಶೈವರ ಗ್ರಂಥಗಳ ಕಡೆಗೆ ತಿರುಗಿ ನೋಡಿದರೆ, ಇದೇ ಅಭಿಪ್ರಾಯವೇ ಹೊರಬೀಳುತ್ತದೆ. ವೀರಶೈವಾಮೃತ ಮಹಾಪುರಾಣ ೧ನೆಯ ಕಾಂಡ ೯ನೆಯ ಸಂಧಿಯಲ್ಲಿ "ಪರಶಿವ ಮಹಾಶಕ್ತಿಗಳ ಕೂಟವೇ ಶಿವಲಿಂಗವು ಆ ಶಿವಶಕ್ತಿಯಿಂ ಪುಟ್ಟಿದ ಸಕಲ ತತ್ತ್ವರೂಪವಾದೀ ಶಿವಲಿಂಗವು ಮಹದಾದಿ ಸರ್ವತತ್ತ್ವಗಳಿಗೆ ಆಸ್ಪದವಾದುದು... ಇದು ಲಿಂಗತತ್ತ್ವ ಶಾರದರ ಮತ. (ಸದಾನಂದೋಪನಿಷತ್ ಸದಾ ಹೀಗೇ ಹೇಳುತ್ತದೆ) ಎಂಬ ಹೇಳಿಕೆಯು ಸ್ಪಷ್ಟವಾಗಿರುವುದರಿಂದ ಮಹದಾದಿ ಸರ್ವತತ್ತ್ವಗಳಿಗೆ ಎಂದರೆ ಕಠೋಪನಿಷತ್ತಿನಲ್ಲಿ ಹೇಳಲ್ಪಟ್ಟ ಮಹತ್ತತ್ತ್ವ, ಅವ್ಯಕ್ತತತ್ತ್ವಗಳಿಗೆ ಮೂಲವಾದ ಪುರುಷ ತತ್ತ್ವವೇ ಲಿಂಗ. ಅದೇ ಈ ಪುರಾಣಗಳಲ್ಲಿ ಹೇಳಲ್ಪಟ್ಟ ಶಿವಲಿಂಗ. ಹೀಗೆ ಎಲ್ಲ ಅಭಿಪ್ರಾಯಗಳೂ ಮೂಲಸ್ವರೂಪವಾದ ಲಿಂಗವನ್ನೇ ನಿರ್ದೇಶಿಸುತ್ತವೆ, ಎಂಬುದು ಸ್ಪಷ್ಟ.

ಇವೇ ಮೊದಲಾದ ಅನೇಕ ಉದಾಹರಣೆಗಳಿಂದ ಬಹು ಪ್ರಾಚೀನಕಾಲದಲ್ಲಿ ಎಂದರೆ ಸುಮಾರು ಹತ್ತುಸಾವಿರ ವರ್ಷಗಳ ಹಿಂದೆ ಲಿಂಗಧಾರಕರು ಇದ್ದರೆಂದು ಚೆನ್ನಾಗಿ ತಿಳಿಯಲಿಕ್ಕೆ ಬರುತ್ತದೆ. ವೇದವ್ಯಾಸರು ತಮ್ಮ ಒಂದು ಕ್ರಮವಿಡಿದು ಬರೆದ ನಾಲ್ಕು ವೇದಗಳ ಸಾರವಾದ ಉಪನಿಷತ್ತುಗಳ ಬೋಧೆಯಂತೆ ವರ್ತನಮಾಡುವ ಆರ್ಯ ಸಂಸ್ಕೃತಿ ಮತ್ತು ಅದಕ್ಕೆ ಮುಂಚಿನ ದ್ರಾವಿಡ ಸಂಸ್ಕೃತಿ ಈ ಸಂಸ್ಕೃತಿಗಿಂತ ಪೂರ್ವದಲ್ಲಿಯೇ ಲಿಂಗವಂತ ಸಂಸ್ಕೃತಿ ಅಥವಾ ಶೈವ ಸಂಸ್ಕೃತಿ ಭಾರತದ ಉತ್ತರ ಮೇರೆಯಾದ ಮೇರು ಪರ್ವತ ಮೊದಲಾದವುಗಳಲ್ಲಿ ವ್ಯಾಪಿಸಿದ್ದರೆಂಬುದಕ್ಕೆ ಅನುಮಾನವೇನೂ ಇಲ್ಲ. ಏಕೆಂದರೆ ಭಾರತದ ಪ್ರಾಚೀನ ಗ್ರಂಥಗಳಾದ ಉಪನಿಷತ್ತು ಮೊದಲಾದವುಗಳಲ್ಲಿಯೇ ಈ ಲಿಂಗವಂತರ ಸಂಸ್ಕೃತಿಯ ಆಚರಣೆಯ ಗುರುತುಗಳು ಕಂಡುಬರುತ್ತದೆ. ಆದುದರಿಂದ

ಮಾರ್ಷಲ್ ಅವರು ಶೋಧಿಸಿ ಕಂಡುಹಿಡಿದಂತೆ ಲಿಂಗವಂತರ ಸಂಸ್ಕೃತಿಯು ಭಾರತದ ಆದ್ಯ ಸಂಸ್ಕೃತಿಯೆಂದು ನಿರ್ಣಯಿಸುವುದರಲ್ಲಿ ಆಕ್ಷೇಪಣೆಯೇನೂ ಬರಲಾರದು.

ಆದರೆ ಬಹುಪ್ರಾಚೀನ ಲಿಂಗವಂತರು ಈಗಿನ ದಕ್ಷಿಣ ಭಾರತದಲ್ಲಿ ವೀರಶೈವರಂತೆ ಒಂದೇ ವಿಧವಾದ ಪಂಚಸೂತ್ರದ ಲಿಂಗವನ್ನು ಧರಿಸುತ್ತಿದ್ದರೆಂದು ತಿಳಿಯಲಾಗುವುದಿಲ್ಲ. ಮೇಲೆ ಕಂಡ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ ಈ ಕೆಳಗೆ ಕಂಡಂತೆ ಇದೆ. (ಮೇಲೆ ಕಂಡ ಅಪ್ರಕಾಶಿಕಾ ಉಪನಿಷದಃ ಎಂಬ ಪುಸ್ತಕದ ಪುಟ ೩೮೦–೩೮೩ರಲ್ಲಿಯೇ ಈ ಉಪನಿಷತ್ತು ಇದೆ.)

"ಪುರಾದೇವಾಃ ಪಶುಪಾಶಾಕ್ ವಿಮುಕ್ತಾಃ ಶಿವಂಪೂಜ್ಯೈವ
ಹರಿಪದ್ಮಾವಯೋಪಿ,
ಇಂದ್ರನೀಲಂ ಪೂಜಿಕಂ ವಿಷ್ಣುನಾನೇಲ್ಲಿಂಗಂ, ವೈಢೂರ್ಯಂ ವಿಧಿನಾ
ಪದ್ಮರಾಗಂ,
ಶಕ್ರೇನ ಹೈಮಂಯಕ್ಷರಾಜೇನ ವಿಶ್ವದೇವೈಃ ಕಾಪ್ಯಂ ತಸುಭಿಃಕಾಂಶ್ಯಕಂಚ
ಯದ್ದಾರುಕೂಟಂ ರಾಯುನಾ ಪಾರ್ಥಿವಂ ತದಶ್ವಿಭ್ಯಾವಯಸೀಕ್
ಸ್ಫಾಟಿಕಂ ಪಾಶಿನಾ.
ಆದಿಕ್ಯೈಸ್ತಾಮ್ರಂ ಮೌಕ್ತಿಕಂ ದೇವಕೈಸ್ತೈರನಂತಾದ್ಯೈಃ
ಫಣಿಭಿಶ್ಚಪ್ರವಾಲಂ
ದೈಕ್ಯೈರ್ಜಾಲಂ ರಾಕ್ಷಸೈಶ್ಚ ಋತ್ವೈರ್ಲೋಹಂ ಗಣೈಃಶೈಲಂ ಸೈಕಕಂ
ಮೂಕ್ರಕಾಭಿಃ
ದಾರೂದ್ಭತಂ ನಿರುತಿನಾ ಯಮೇನಸಪೂಜ್ಯರೂಸೀಕ್ ಮಾರಕರ್ತಂಚ
ರುದ್ರೈಃ
ಸುಭಸ್ಮರೂಪಂ ಸೂಕ್ಷ್ಮರೂಪಂಚ ಲಕ್ಷ್ಮ್ಯಾ ಋಶೈಲಾನ್ಯೇವ ಮುನಯೋ
ಭೇಜಿರೇಕಥಾ
ಸರಸ್ವತೀರತ್ನರೂಪಂಚ ದುರ್ಗಾಹೈಮಂ ಲಿಂಗಂ ಪೂಜಯಾಮಾಸಭಕ್ತ್ಯಾ
ಜಲೈರುಷ್ಣೈಃ ಶೀಕಲೈರ್ವಾ ಕದಾಚಿತ್‌ಜ್ಞಾನಾದ್ವಾಪತಿತೈಃ ಪಕ್ರಪುಷ್ಟಿಃ
ಕೂಷ್ಣೋಯಚ್ಛೇದ್ವಾಂಭಿಕಾರ್ಥಂ ಮಹೇಶಃ ಕಿಂ ದುರ್ಲಭಂ
ಶಿವಭಕ್ತಸ್ಯಲೋಕೇ
ಅತ್ಯಲ್ಪಮಪಿ ನೈವೇದ್ಯಂ ಫಲಂವಾಜಲಯೇವವಾ ಕದೇವ
ಪ್ರಾಶಯಿಕ್ವಾಥಬ್ರಹ್ಮಭೂಯಾಯಕಲ್ಪತೇ"

—ವಿಷ್ಣುವಿನಿಂದ ಇಂದ್ರನೀಲಲಿಂಗ, ಬ್ರಹ್ಮನಿಂದ ವೈಢೂರ್ಯಲಿಂಗ, ಇಂದ್ರನಿಂದ ಪದ್ಮರಾಗಲಿಂಗ, ಗಣಂಗಳಿಂದ ಶೈಲಲಿಂಗ, ಮಾತ್ರಕೆಯರಿಂದ ಮಳಲಿನಲಿಂಗ, ವಾಯುವಿನಿಂದ ದಾರುಕೂಟಲಿಂಗ, ನಿರುಕಿಯಿಂದ ಕಟ್ಟಿಗೆಯಲಿಂಗ–ಹೀಗೆ ಅನೇಕ ವಿಧದ ಲಿಂಗಗಳು ಪೂಜಿಸಲ್ಪಡುತ್ತಲಿದ್ದವೆಂದು ಮೇಲಿನ ಶ್ಲೋಕಗಳಿಂದ ತಿಳಿದುಬರುತ್ತದೆ. ಲಕ್ಷ್ಮಿ,

ಸರಸ್ವತಿ ಮೊದಲಾದ ಹೆಂಗಸರುಗಳಿಂದ ಶಿಲಾದಿ ಬೇರೆ ಬೇರೆ ಲಿಂಗಗಳು ಪೂಜಿಸಲ್ಪಡುತ್ತಿದ್ದವು. ಲಿಂಗಪೂಜಕನಾದ ಶಿವಭಕ್ತನಿಗೆ ದುರ್ಲಭವಾದುದು ಯಾವುದೂ ಇಲ್ಲವೆಂದು ಹೇಳಲ್ಪಟ್ಟಿದೆ. 'ಶಿವಭಕ್ತ' ಎಂಬುವದೇ ಎಲ್ಲರಿಗಿಂತ ಶ್ರೇಷ್ಠರೆಂದು ವ್ಯಾಸ ಋಷಿಯ ಪುರಾಣ ಸೂತಸಂಹಿತೆ ಮೊದಲಾದವುಗಳಲ್ಲಿ ಉಕ್ತವಾಗಿದೆ.

ಇದೇ ಪುಸ್ತಕದಲ್ಲಿನ 'ಲಿಂಗೋಪನಿಷತ್' ಎಂಬುದರಲ್ಲಿ (ಪು. ೩೯–೩೧೧) 'ದೇಹೇ ಧಾರಣಂ ಯಸ್ಯ ನವಿದ್ಯತೇ ತದ್ದೇಹಂ ನಪಶ್ಯೇತ್' (ನಪಶ್ಯೇತ್ ಎಂಬುವರ ಬದಲಾಗಿ ನಿದರ್ಶಯೇತ್ ಎಂಬ ಪಾಠಾಂತರವು ಬೇರೆ ಓಲೆ ಪ್ರತಿಯಲ್ಲಿ ಇದೆ.) ಲಿಂಗ ಧಾರಣವಿಲ್ಲದ ದೇಹವನ್ನು ನೋಡಬಾರದು. ಎಂಬುದಾಗಿ ಇಲ್ಲಿ ಬೋಧೆಯಿದೆ. ಈ ಆಚರಣೆಯೇ ಮುಖ್ಯವೆಂದೂ, ಆ ಬಹುಪ್ರಾಚೀನ ಕಾಲದಲ್ಲಿಯೂ ಲಿಂಗಧಾರಿಗಳು ಬಹಳವಾಗಿ ತುಂಬಿಕೊಂಡಿದ್ದರೆಂದೂ ತಿಳಿಯಲವಕಾಶವಾಗಿದೆ. ಒಟ್ಟಿನಲ್ಲಿ ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ಶಿವಭಕ್ತರೇ ಬಹಳ ಹೆಚ್ಚಾಗಿದ್ದರೆಂದೂ ಲಿಂಗವಂತರ ಸಂಸ್ಕೃತಿಯೇ ಭಾರತದಲ್ಲಿನ ಆದ್ಯ ಸಂಸ್ಕೃತಿಯೆಂದೂ ನಿರ್ಣಯಿಸಲು ಆತಂಕವು ಬರಲಾರದು.

'ದೇವಸಹಿತ ಭಕ್ತನು ಮನೆಗೆ ಬಂದರೆ ನಿಮ್ಮ ಕುಲವಾವುದೆಂದು ಬೆಸಗೊಂಡರೆ ನಿಮ್ಮಾಣೆ' ಎಂದು ಬಸವೇಶ್ವರನು ಹೇಳಿದ್ದಾನೆ. ಇಲ್ಲಿ ದೇವ ಎಂಬ ಪದಕ್ಕೆ ಲಿಂಗ ಎಂದು ಸುಲಭವಾಗಿ ಅರ್ಥಮಾಡಬಹುದು. 'ದ್ಯಾವಾಪೃಥಿವೀ ಜನಯನ್ ದೇವ ಏಕಃ'–ಸ್ವರ್ಗಭೂಮಿಗಳನ್ನು ಹುಟ್ಟಿಸುವ ದೇವನು ಒಬ್ಬನೇ ಎಂಬ ವಚನವನ್ನು ಬಸವೇಶ್ವರನೇ ಹೇಳಿದ್ದಾನೆ. ಆದುದರಿಂದ "ದೇವ ಏಕಃ" ಎಂಬಲ್ಲಿ ದೇವ ಎಂದರೆ ಲಿಂಗ ಎಂದು ಅರ್ಥವಾಗುತ್ತದೆ. 'ದೇವಧಾರಣಂ' ಎಂಬ ಪದವನ್ನು ಉಪನಿಷತ್ತುಗಳಲ್ಲಿಯೂ ಭಾರತ ಗ್ರಂಥಗಳಲ್ಲಿಯೂ ಅಲ್ಲಲ್ಲಿ ನೋಡಬಹುದಾಗಿದೆ. ಅಲ್ಲೆಲ್ಲಾ ಲಿಂಗ ಧಾರಣವೆಂದೇ ಅರ್ಥಮಾಡಬೇಕು. ಹೀಗೆ ಲಿಂಗಧಾರಣದ ಅಭಿಪ್ರಾಯವು ಚೆನ್ನಾಗಿ ದೊರಕುತ್ತದೆ.

ಇನ್ನು ವ್ಯಾಸಋಷಿಯ ಪುರಾಣಗಳ ಕಡೆಗೆ ತಿರುಗಿ ನೋಡೋಣ. ಲಿಂಗ ಪುರಾಣದಲ್ಲಿ ದೇವತೆಗಳು ಶಿವನನ್ನು ಕುರಿತು ಬೇಡಿಕೊಳ್ಳುವ ವಿಷಯವು ಹೀಗೆ ಹೇಳಲ್ಪಟ್ಟಿದೆ:

ವಯಂ ಬ್ರಹ್ಮಾದಯಃ ಸರ್ವೇ ಪಶವಃ ಪರಿಕೀರ್ತಿತಾ ।<br>
ತ್ವಮಸ್ಮಾಕಂ ಪತಿರ್ಯಸ್ಮಾತ್ ತಸ್ಮಾತ್ ಪಶುಪತಿಶ್ಶಿವಃ ॥<br>
ಅತೋಬ್ರಹ್ಮಾದಿ ದೇವಾನಾಂ ಉಪಾಸ್ಯ ಶಿವವಹಿ ।<br>
ತದಾದಿ ಭೂತಿರುದ್ರಾಕ್ಷ ಲಿಂಗಧಾರಕ ದೇಹಿನಃ ॥<br>
ಶುದ್ಧ ಸ್ಫಟಿಕ ಮಾಲಾಭಿರ್ಬದ್ಧ ಹಸ್ತಾಂಬುಜಾಸಪಿ ।<br>
ಬ್ರಹ್ಮ ವಿಷ್ಣ್ವಾದಿ ದೇವಾಂಶ್ಚ ದೃಷ್ಟ್ವಾ ಸಾಂಬಸ್ತ್ರಿಲೋಚನಃ ॥

ಬ್ರಹ್ಮಾದಿಗಳಾದ ನಾವೆಲ್ಲರೂ ಪಶುಗಳು; ಶಿವನೇ ನೀನು ನಮಗೆ ಪತಿ, ಎಂದರೆ ಪಶುಪತಿ. ಆದ್ದರಿಂದ ನೀನು ನಮ್ಮಗಳ ಉಪಾಸ್ಯನು. ಎಂದು ಹೇಳಿದ ಭಸ್ಮ ರುದ್ರಾಕ್ಷ ಲಿಂಗಧಾರಣ ದೇಹಿಗಳಾದ ಶುದ್ಧವಾದ ಸ್ಫಟಿಕಮಣಿ ಮಾಲೆಯನ್ನು ಧರಿಸಿದ ಹಸ್ತಾಂಜಲ ಬದ್ಧರಾಗಿ ಕೈಮುಗಿದ ದೇವತೆಗಳನ್ನು ಮೂರು ಕಣ್ಣುಳ್ಳವನಾದ ಸಾಂಬನು ನೋಡಿದನು. ಎಂಬೀ ಅಭಿಪ್ರಾಯದ ಶ್ಲೋಕಗಳಿಂದ ಕೈಲಾಸದಲ್ಲಿನ ಅಂಬಿಕಾಪತಿಯಾದ ಮೂರುಕಣ್ಣುಳ್ಳ ಶಿವನು ಪಶುಪತಿಯೆಂದೂ, ಆ ಪಶುಪತಿಯ ಉಪಾಸಕರಾದ ಬ್ರಹ್ಮವಿಷ್ಣು ಮೊದಲಾದ ದೇವತೆಗಳು ಭಸ್ಮರುದ್ರಾಕ್ಷ ಲಿಂಗಧಾರಣವುಳ್ಳ ದೇಹವುಳ್ಳವರಾಗಿದ್ದರೆಂದೂ ಪಾಶುಪತರೆಂದೂ ಸ್ಪಷ್ಟವಾಗುತ್ತದೆ.

ಕಾಶೀ ಖಂಡದಲ್ಲಿ ಪಾಶುಪತದ ಆಚಾರವು ಹೀಗೆ ಹೇಳಲ್ಪಟ್ಟಿದೆ.

"ಏತೇ ಪಾಶುಪತಾಃ ಸಿದ್ಧಾ ಆ ಬಾಲ ಬ್ರಹ್ಮಚಾರಿಣಃ ।
ಜಿತೇಂದ್ರಿಯಾಸ್ತಪೋನಿಷ್ಠಾಃ ಪಂಚಾರ್ಥ ಜ್ಞಾನ ನಿರ್ಮಲಾಃ ॥
ಭಸ್ಮಕೂಟಶಯಾದಾಂತಾ ಸುಶೀಲಾ ಊರ್ಧ್ವರೇತಸಃ ।
ಲಿಂಗಾರ್ಚನರತಾ ನಿತ್ಯ ಮನನ್ಯೇಂದ್ರಿಯ ಮಾನಸಾಃ ॥
ಸದೈವ ವಾರುಣಾಗ್ನೇಯಸ್ನಾನದ್ವಯ ಸುನಿರ್ಮಲಾಃ
ಕಂದಮೂಲ ಫಲಾಹಾರಾ ಪರತತ್ವಾರ್ಪಿತೇಕ್ಷಣಾಃ ॥
ಸತ್ಯವಂತೋಜಿತಕ್ರೋಧಾ ನಿರ್ಮೋಹಾ ನಿಷ್ಪರಿಗ್ರಹಾಃ
ನಿರೀಹಾ ನಿಷ್ಪ್ರಪಂಚಾಶ್ಚ ನಿರಾತಂಕಾ ನಿರಾಮಯಾಃ
ನಿರ್ಭಗಾ ನಿರುಪಾಯಾಶ್ಚ ನಿಸ್ಸಂಗಾ ನಿರ್ಮಲಾಶ್ರಯಾಃ
ಸದೈವಮೇ ಮಹಾಪ್ರೀತಾ ಮತ್ಪುತ್ರಾ ಮತ್ಸ್ವರೂಪಿಣಃ
ಏತೇ ಪೂಜ್ಯಾನಮಸ್ಯಾಶ್ಚ ಮದ್ಬುದ್ಧ್ಯಾ ಮತ್ಪರಾಯಣೈಃ ।
ಅರ್ಚಿತೇಷ್ಟೇಷ್ಟಹಂಪ್ರೀತೋ ಭವಿಷ್ಯಾಮಿ ನ ಸಂಶಯಃ
ಅಸ್ಮಿನ್ ವೈಶ್ವೇಶ್ವರ ಕ್ಷೇತ್ರೇ ಸಂಭೋಜ್ಯಾಃ ಶಿವಯೋಗಿನಃ
ಕೋಟಿಭೋಜ್ಯ ಫಲಂ ಸಮ್ಯಗೇಕೈಕ ಪರಿಸಂಖ್ಯಯಾಃ"

(ಭಾಗ ೨, ಅಧ್ಯಾಯ ೯೯, ಪು. ೧೮೨)

—ಇವುಗಳ ಅಭಿಪ್ರಾಯವು ಹೀಗೆ ಇದೆ: ಈ ಪಾಶುಪತರು ಸಿದ್ಧರೆನಿಸಿಕೊಂಡಿದ್ದಾರೆ. ಬಾಲ್ಯಮೊದಲ್ಗೊಂಡು ಕೊನೆಯವರೆವಿಗೂ ಬ್ರಹ್ಮಚಾರಿಗಳಾಗಿದ್ದಾರೆ. ಜಿತೇಂದ್ರಿಯರು, ತಪೋನಿಷ್ಠರು ಧರ್ಮಾರ್ಥ ಕಾಮ ಮೋಕ್ಷ ಭಕ್ತಿಯೆಂಬ ಪಂಚಾರ್ಥಗಳ ಜ್ಞಾನದಿಂದ ನಿರ್ಮಲರಾದವರು. ಭಸ್ಮದ ರಾಶಿಯ ಮೇಲೆ ಮಲಗುವವರು. ಬಹಿರಿಂದ್ರಿಯ ನಿಗ್ರಹವುಳ್ಳವರು. ಒಳ್ಳೆಯ ಶೀಲವುಳ್ಳವರು. ಊರ್ಧ್ವ ರೇತಸ್ಕರಾಗಿ ಉನ್ಮನೀಮುಖವರು. ದಿನಾಲು ಲಿಂಗಪೂಜೆಯನ್ನು ಮಾಡುವವರು. ಇತರರನ್ನು ಪೂಜಿಸುವದಿರುವ ಇಂದ್ರಿಯ ಮನಸ್ಸುಳ್ಳವರು. ಯಾವಾಗಲೂ ಜಲಸ್ನಾನ, ಭಸ್ಮ

ಸ್ನಾನಗಳನ್ನು ಮಾಡುವವರು. ಗಡ್ಡೆಗೆಣಸುಗಳನ್ನು ತಿನ್ನುವವರು. ಪರತತ್ತ್ವಕ್ಕೆ ಅರ್ಪಿಸಲ್ಪಟ್ಟ ದೃಷ್ಟಿಯುಳ್ಳವರು. ಸತ್ಯವಂತರು, ಕ್ರೋಧವಿಲ್ಲದವರು, ಮೋಹವಿಲ್ಲದವರು, ಪರಿವಾರವಿಲ್ಲದವರು. ಈ ಲೋಕದ ಫಲಾಪೇಕ್ಷೆ ಇಲ್ಲದವರು. ಪ್ರಪಂಚಗಳಿಲ್ಲದವರು. ಆತಂಕವಿಲ್ಲದವರು. ಗುಣದೋಷ ವರ್ಜಿತರು, ನಿರ್ದ್ವೈಶ್ವರ್ಯರು, ಉಪಾಯರಹಿತರು, ಲೌಕಿಕ ಸಂಗವಿಲ್ಲದವರು, ನಿರ್ಮಲವಾದ ಇಚ್ಛೆಯುಳ್ಳವರು, ಯಾವಾಗಲೂ ನನ್ನಲ್ಲಿ ಮಹಾಪ್ರೀತಿಯುಳ್ಳವರು, ನನ್ನ ಮಕ್ಕಳು, ನನ್ನ ಸ್ವರೂಪವುಳ್ಳವರು, ಇವರೇ ಶಿವಸ್ವರೂಪರು–ಎಂಬ ಬುದ್ಧಿಯುಳ್ಳ ಶಿವಪಾರಾಯಣರಾದವರಿಗೆ ಪೂಜ್ಯರು. ನಮಸ್ಕಾರಕ್ಕೆ ಯೋಗ್ಯರು (ಆರಾಧ್ಯರು?) ಆಗಿದ್ದಾರೆ. ಇವರನ್ನು ಪೂಜೆ ಮಾಡಿದರೆ ನನಗೆ ಪ್ರೀತಿ. ಇವರು ಕಾಶಿಯಲ್ಲಿ ತೃಪ್ತಿಪಡಿಸಲ್ಪಡತಕ್ಕ ಶಿವಯೋಗಿಗಳು. ಇವರಲ್ಲಿ ಒಬ್ಬರಿಗೆ ತೃಪ್ತಿಪಡಿಸಿದರೆ ಕೋಟಿ ಜನರಿಗೆ ತೃಪ್ತಿಪಡಿಸಿದಂತೆ. ಹೀಗೆ ಶಿವನು ಪಾರ್ವತಿಗೆ ಹೇಳಿದ್ದಾನೆ.

ಈ ಹೇಳಿಕೆಯಿಂದ ಪಾಶುಪತರು ಸಿದ್ಧರೆನಿಸಿಕೊಂಡು ಆ ಬಾಲಬ್ರಹ್ಮಚಾರಿಗಳಾಗಿ ತಪೋನಿಷ್ಠರಾಗಿ ನಿತ್ಯವೂ ಲಿಂಗಾರ್ಚನೆ ಮಾಡತಕ್ಕವರಾಗಿ ಗೆಡ್ಡೆ ಗೆಣಸುಗಳನ್ನು ತಿನ್ನತಕ್ಕವರಾಗಿ ಶಿವಪರಾಯಣರಿಂದ ಪೂಜಿಸಲ್ಪಡತಕ್ಕವರಾಗಿ (ಆರಾಧ್ಯರಾಗಿ) ಕಾಶಿಯಲ್ಲಿ ಶಿವಯೋಗಿಯೆನಿಸಿಕೊಂಡು ತೃಪ್ತಿಪಡಿಸಲ್ಪಡುವುದಕ್ಕೆ ಯೋಗ್ಯರಾಗಿ ಇದ್ದರೆಂಬುವ ಅಭಿಪ್ರಾಯವು ಹೊರಬೀಳುತ್ತದೆ. ಮೇಲೆ ಕಂಡ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ ವಿಷ್ಣುವೆ ಮೊದಲಾದ ಲಿಂಗಧಾರಿಗಳು ಪಶುಪಾಶದಿಂದ ಬಿಡಲ್ಪಟ್ಟವರೆಂದು ಹೇಳಲ್ಪಟ್ಟಿದ್ದರೆ ಈ ಪುರಾಣದಲ್ಲಿ ಹೇಳಲ್ಪಟ್ಟವರು ನಾವು ಪಶುಗಳು ನೀನು ಪಶುಪತಿ ಎಂದು ಕೈಲಾಸದ ಶಿವನನ್ನು ಆರಾಧಿಸುವ ಲಿಂಗಪೂಜಕರಾದ ಪಾಶುಪತ ಸಿದ್ಧರಾಗಿದ್ದಾರೆ. ಇವೆಲ್ಲವುಗಳನ್ನು ನೋಡಿದರೆ, ಬಹು ಪ್ರಾಚೀನಕಾಲದಲ್ಲಿ ದೇವತೆಗಳೇ ಮೊದಲಾದವರೆಲ್ಲರೂ ಪಾಶುಪತರಾಗಿ ಲಿಂಗಪೂಜೆಯನ್ನು ಮಾಡುತ್ತಿದ್ದರೆಂಬುದು ನಿರ್ವಿವಾದವಾಗಿ ಹೊರಬೀಳುವ ಅಂಶವಾಗಿದೆ.

ಆದರೆ ಈ ದೇವತೆಗಳೇ ಮೊದಲಾದವರು ಪಾಶುಪತರಾಗಿ ಆಚರಿಸುತ್ತಿದ್ದುದು ದಕ್ಷಿಣ ಭಾರತದ ವೀರಶೈವರು ಆಚರಿಸುತ್ತಿರುವ ಷಟ್‌ಸ್ಥಲಕ್ರಮದ ಲಿಂಗಾಂಗ ಸಾಮರಸ್ಯದ ಲಿಂಗಪೂಜೆಗೆ ಸರಿಯಾದುದೆಂದು ಹೇಳುವುದಕ್ಕೆ (ಮೇಲೆ ಹೇಳಿದಂತೆ) ಇಲ್ಲಿನ ಪ್ರಮಾಣಗಳಿಂದ ಕಂಡುಬಂದಿಲ್ಲ. ಇದಲ್ಲದೆ–

"ಏಕದಾಸ ಮುನಿಃ ಶ್ರೀಮಾನ್ ಪರ್ಯಟನ್ ಪೃಥಿವೀತಲೇ ।
ಸಂಪ್ರಾಪ್ತೋ ನೈಮಿಷಾರಣ್ಯಂ ಯತ್ರ ಸಂತಿ ಮುನೀಶ್ವರಾಃ ।
ಅಷ್ಟಾಶೀತಿ ಸಹಸ್ರಾಣಿ ಶೌನಕಾದ್ಯಾಸ್ತಪೋಧನಾಃ ।
ತ್ರಿಪುಂಡ್ರಿಕ ಮಹಾಭಾಲಾಲಸದ್ರುದ್ರಾಕ್ಷ ಮಾಲಿನಃ ।

ವಿಭೂತಿಧಾರಿಣೋ ಭಕ್ತ್ಯಾ ರುದ್ರಸೂಕ್ತ ಜನಪ್ರಿಯಾನ್ !
ಲಿಂಗಾರಾಧನ ಸಂಸಕ್ತಾನ್ ಶಿವನಾಮ ಕೃತಾದರಾನ್
ವಿಲೋಕ್ಯ ಸಮುನಿರ್ವ್ಯಾಸಸ್ತಾನ್ ಸರ್ವಾನ್ ಗಿರಿಶಾತ್ಮನಃ"

(--ಕಾಶೀಖಂಡ ಭಾ-೨, ಅ. ೯೫. ಪು. ೧೬೧)

–ಈ ಶ್ಲೋಕಗಳ ಅಭಿಪ್ರಾಯವು ಹೀಗಿದೆ: ಒಂದಾನೊಂದು ಕಾಲದಲ್ಲಿ ವ್ಯಾಸ ಮುನಿಯು ದೇಶಸಂಚಾರಕ್ಕೆ ಹೊರಟನು. ನೈಮಿಷಾರಣ್ಯಕ್ಕೆ ಬಂದಾಗ ಅಲ್ಲಿ ಶೌನಕಾದಿ ಎಂಬತ್ತೆಂಟುಸಾವಿರ ಮುನೀಶ್ವರರು ಇದ್ದರು. ಅವರು ತ್ರಿಪುಂಡ್ರ ಭಸ್ಮಧಾರಣ ಮಾಡಿದ ಹಣೆಯುಳ್ಳವರಾಗಿಯೂ, ಭಸ್ಮ ರುದ್ರಾಕ್ಷಧಾರಣ ಮಾಡಿದವರಾಗಿಯೂ ಲಿಂಗವನ್ನು ಪೂಜಿಸುವವರಾಗಿಯೂ ಶಿವನಾಮೋಚ್ಚಾರಣೆಯಲ್ಲಿ ಆದರವುಳ್ಳವ ರಾಗಿಯೂ ಇರುತ್ತಿದ್ದರು. ಆ ಶಿವಾತ್ಮರನ್ನು ಕಂಡನು. ಹೀಗಿರುವುದರಿಂದ ಶೌನ ಕಾದಿ ಋಷಿಗಳು ಲಿಂಗಧಾರಿಗಳಾಗಿ ಪಾಶುಪತರಾಗಿದ್ದರು, ಎಂದು ಹೇಳಲು ಅನು ಮಾನವೇನೂ ಇಲ್ಲ. ಮತ್ತು

ಶ್ರದ್ಧೋಪಸ್ಪರ್ಶಿ ಹೃದಯದಿಂದ ತ್ರಿತಯ ಹೇತುಭಿಃ
............ಕಲಶೈಃ...............
ಅಷ್ಟಮ್ಯಾಂಚ ಚತುರ್ದಶ್ಯಾಮುಪವಾಸೀನರೋತ್ತಮಃ ।
ಪ್ರಾತಃ ಸ್ನಾತ್ವಾಥ ಪೀತಾಂಭಸ್ತ್ವಂತರ್ಲಿಂಗಮಯೋಭವೇತ್ ।
ಏಕಾದಶ್ಯಾಮುಪೋಷ್ಯಾತ್ರ ಪ್ರಾಶ್ನಾತಿ ಚಲುಕತ್ರಯಂ
ಹೃದಯೇತಸ್ಯ ಜಾಯಂತೇತ್ರಿಣಿ ಲಿಂಗಾನ್ಯ ಸಂಶಯಃ

(ಕಾಶೀಖಂಡ ಭಾ-೨, ಅ ೩೩, ಪು. ೨೦೮-೨೦೯)

–ಇಲ್ಲಿ ಮೊದಲಿನ ಎರಡು ಸಾಲುಗಳು ಪೂರ್ತಿಯಾಗಿ ಇಲ್ಲದ್ದರಿಂದ ಸರಿಯಾದ ಅಭಿ ಪ್ರಾಯವನ್ನು ಗ್ರಹಿಸಲಿಕ್ಕೆ ಬರುವಂತಿಲ್ಲ. ಮನುಷ್ಯರಲ್ಲಿ ಉತ್ತಮರಾದವರು ಅಷ್ಟಮಿ ಯಲ್ಲಿ ಚತುರ್ದಶಿಯಲ್ಲಿ, ಒಂದು ಪಕ್ಷದಲ್ಲಿ ಎರಡುದಿನ ಉಪವಾಸಿಗಳಾಗಿರಬೇಕು. ಬೆಳಗಿನ ಹೊತ್ತು ಸ್ನಾನಮಾಡಿ ನೀರುಕುಡಿದು ಹೃದಯದಲ್ಲಿ ಲಿಂಗವಿದೆಯೆಂದು ಆ ಲಿಂಗಮಯರಾಗಬೇಕು. ಏಕಾದಶಿಯ ದಿವಸ ಉಪವಾಸಮಾಡಿ, ಮೂರು ಬೊಗಸೆ ನೀರು ಕುಡಿಯಬೇಕು. ಅವನ ಹೃದಯದಲ್ಲಿ ಮೂರುಲಿಂಗಗಳು ಹುಟ್ಟುತ್ತವೆ, ಇದಕ್ಕೆ ಸಂಶಯವಿಲ್ಲ. ಇವರು 'ಅಂತರ್ಲಿಂಗಮಯ'ರು. ಎಂದಿರುವುದರಿಂದ ಬಹಿರ್ಲಿಂಗ ಧಾರಿಗಳಹುದೋ ಅಲ್ಲವೋ ಎಂಬ ಸಂಶಯ ತೋರಿಬರುತ್ತದೆ. (ಸದಾನಂದೋಪ ನಿಷತ್–ಈ ಭೇದವನ್ನು ತೋರಿಸುತ್ತದೆ)

ಹೀಗೆ ಹೇಳಿರುವುದರಲ್ಲಿ ಹೃದಯದಲ್ಲಿ ಹುಟ್ಟುವ ಮೂರು ಅಂತರ್ಲಿಂಗಗಳು ಯಾವುವೆಂಬುದನ್ನು ಪರಿಶೋಧಿಸಬೇಕಾಗಿದೆ. ಅವು ವೀರಶೈವರ ಇಷ್ಟ ಪ್ರಾಣ ಭಾವ ಲಿಂಗಗಳಲ್ಲ ಏಕೆಂದರೆ ಏಕಾದಶಿಯಲ್ಲಿ ಉಪವಾಸಮಾಡಿ, ಮೂರು ಬೊಗಸೆ ನೀರನ್ನು

ಕುಡಿದು ಇಷ್ಟ ಪ್ರಾಣ ಭಾವಲಿಂಗಗಳನ್ನು ಯಾವ ಷಟ್‌ಸ್ಥಲಾಚರಣೆಯ ವೀರಶೈವನೂ ಧರಿಸುವುದಿಲ್ಲ. ಅವನ ಸ್ಥೂಲತನುವು ಇಷ್ಟಲಿಂಗವಾಗಿಯೂ, ಸೂಕ್ಷ್ಮತನುವು ಪ್ರಾಣ ಲಿಂಗವಾಗಿಯೂ, ಕಾರಣತನುವು ಭಾವಲಿಂಗವಾಗಿಯೂ ಇರುವುದರಿಂದ ಅವನು ಲಿಂಗರೂಪನು (ನಿರಾಕಾರ ಶಿವರೂಪ) ಆಗಿದ್ದಾನೆ. ನಿರಾಕಾರ ಶಿವನು ಉಪವಾಸ ಮಾಡುವುದಿಲ್ಲ. ಇಲ್ಲಿ ಹೇಳಲ್ಪಟ್ಟ ಪಾಶುಪತರು ಮನುಷ್ಯೋತ್ತಮರಾಗಿದ್ದಾರೆ, ಎಂದರೆ ತಮಗಿಂತ ಭಿನ್ನವಾಗಿ ಲಿಂಗವಿದೆ, ಎಂದು ತಿಳಿದು ಪೂಜಿಸುವವರಾಗಿದ್ದಾರೆ. ಆದುದರಿಂದ ಅವರು ಮನುಷ್ಯರಲ್ಲಿ ಉತ್ತಮರು ಎಂದು ತಿಳಿಯಲು ಅನುಮಾನವೇನೂ ಇಲ್ಲ. ಆದರೆ ಅವರು ಪೂಜಿಸುವ ಲಿಂಗವು ವೀರಶೈವರ ಇಷ್ಟಲಿಂಗಕ್ಕೆ ಸರಿಯಾದುದಲ್ಲ. ಒಟ್ಟಿನಲ್ಲಿ ಇಲ್ಲಿ ಹೇಳಲ್ಪಟ್ಟ ಪಾಶುಪತರು ದೇಹದಲ್ಲಿ ಲಿಂಗವನ್ನು ಧರಿಸಿ, ಹೃದಯದಲ್ಲಿ ಅಂತರ್ಲಿಂಗ ಸಂಧಾನವುಳ್ಳವರಾಗಿ ವ್ಯಾಸಮುನಿಯ ಕಾಲದಲ್ಲಿ ಇದ್ದರು ಎಂದರೆ ಆರ್ಯ ಸಂಸ್ಕೃತಿಯ ಪ್ರಾಬಲ್ಯಕಾಲದಲ್ಲಿ ಇದ್ದರೆಂದು ನಿರ್ಣಯಿಸಲು ಅನುಮಾನವೇ ಇಲ್ಲ.

"ಜ್ಞಾನೋದ ತೀರ್ಥ ಭಜನಾತ್ ಸಾ ಸುಶೀಲಾ ಕುಮಾರಿಕಾ
ಬಹಿರಂತಸ್ತದಾದ್ರಾಕ್ಷೀತ್ ಸರ್ವಂ ಲಿಂಗಮಯಂ ಜಗತ್
ಲಿಂಗತ್ರಯ ಶರೀರಿಣ್ಯಾಸ್ತಸ್ಯಾಸ್ಸಾನ್ನಿಧ್ಯತಃ ಸಹಿ
ದಿವ್ಯಂ ವ ಪುಸ್ಸಮಾಸಾದ್ಯ ರಾಕ್ಷಸ ಸ್ತ್ವಿ ದಿವಂ ಯಯೌ"

(ಕಾಶೀಖಂಡ ಭಾ-೧, ಅ. ೩೩, ಪು. ೨೧೧)

–ಎಂಬ ಪ್ರಮಾಣಾವುಳ್ಳದಾದ ಕಥೆಯಲ್ಲಿ ಸುಶೀಲೆಯೆಂಬ ಕನ್ಯೆಯು ಕಾಶಿಯಲ್ಲಿನ ಜ್ಞಾನವಾಪಿಯ ಜ್ಞಾನೋದಕವನ್ನು ಸೇವಿಸಿ ತನ್ನ ಒಳಗೆ ಮತ್ತು ಹೊರಗೆ ಸರ್ವವೂ ಲಿಂಗಮಯವೆಂದು ತಿಳಿದಳು. ಲಿಂಗತ್ರಯ ಶರೀರವುಳ್ಳ ಆಕೆಗೆ ವಿರೋಧಮಾಡಿ ಮೃತಪಟ್ಟ ರಾಕ್ಷಸನು ದಿವ್ಯ ಶರೀರವನ್ನು ಹೊಂದಿ, ಸ್ವರ್ಗಕ್ಕೆ ಹೋದನು. (ಇದೇ ಅಭಿಪ್ರಾಯವನ್ನೇ ಅನುಮೋದಿಸಿ ಉಡುತಡಿಯ ಅಕ್ಕಮಹಾದೇವಿಯು ತನ್ನ ಲೌಕಿಕ ದೇಹವನ್ನು ಬಿಟ್ಟು ದಿವ್ಯ ಶರೀರವನ್ನು ಹೊಂದಿ ಕೈಲಾಸಕ್ಕೆ ಹೋದಳೆಂದು ಹರಿಹರ ಕವಿ ಬರೆಯುತ್ತಾನೆ. ಅದು ಲಿಂಗಾಂಗ ಸಾಮರಸ್ಯದ ಷಟ್‌ಸ್ಥಲದ ಆಚರಣೆಯ ವರ್ತನವಲ್ಲ.) ಆ ಸುಶೀಲೆಗೆ ಪ್ರೀತಿಪಾತ್ರನಾದ ವಿದ್ಯಾಧರ ಬಾಲಕನೂ ಸುಶೀಲೆಯೂ ಸಹ ರಾಕ್ಷಸನೊಡನೆ ಜಗಳವಾಡಿದಾಗ ಮೃತರಾದರು. ಆಮೇಲೆ ಸುಶೀಲೆಯು ಕರ್ನಾಟಕ ದೇಶದಲ್ಲಿ ವಿದ್ಯಾನಗರದಲ್ಲಿ ರಾಜನಮಗಳಾಗಿ ಕಲಾವತಿ ಎಂಬ ಹೆಸರಿನಿಂದ ಹುಟ್ಟಿದಳು. ವಿದ್ಯಾಧರ ಬಾಲನು ಮಲಯದೇಶದ ಕೇತು ರಾಜನಿಗೆ ಮಾಲ್ಯಕೇತು ಎಂಬ ಮಗನಾಗಿ ಹುಟ್ಟಿದನು. ಇಬ್ಬರಿಗೆ ಮದುವೆಯಾಯಿತು. ಇವರಿಗೆ ಮೂವರು ಮಕ್ಕಳು ಹುಟ್ಟಿದರು, ಎಂಬ ಕಥೆಯಿಂದ ತಿಳಿದುಬರುವ ಸುಶೀಲೆಗೆ ಆದ ಎರಡನೆಯ ಜನ್ಮದ ಸ್ಥಿತಿಯು ಷಟ್‌ಸ್ಥಲ ವೀರಶೈವರ ಅಂತಿಮಸ್ಥಿತಿಗೆ ಸರಿಬೀಳುವುದಿಲ್ಲ. ಇನ್ನೂ ತಿಳಿಯಬೇಕಾದ ಮುಖ್ಯ ವಿಷಯವೇನೆಂದರೆ–

೧) "ಏಕಃ ಪಾಶುಪತಶ್ರೇಷ್ಠೋ ವಾಲ್ಮೀಕಿಂತಿ ಸಂಜ್ಞಿತಃ
.........ಕಪರ್ದೀಶ ಸಮರ್ಚಯನ್
ಚಕಾರಭಸ್ಮನಾ ಸ್ನಾನಮಾದತಲ ಮಸ್ತಕಮ್ ।
ಜಪನ್ ಪಂಚಾಕ್ಷರೀಂ ವಿದ್ಯಾಧ್ಯಾಯತ್ ದೇವಂ ಕಪರ್ದಿನಂ
ಹುಡುಂಕೃತ್ಯ ಹುಡುಂಕೃತ್ಯ ಹುಡುಂಕೃತ್ಯ ತ್ರಿರುಚ್ಚಕೈಃ"
(ಭಾ. ೨, ಅ ೫೪, ಪು. ೧೩)

೨) ಕದಾಚಿತ್ ದೈವಯೋಗಾತ್ ಸದಮನೋನಾಮ ತಾಪಸಃ
ರೇವಾತವೇ ನಿದ್ರೈಕ್ಷಿಷ್ಟ ತೀರ್ಥಂ ಚಾಮರ ಕಂಟಕಂ
ಮಹದಾಯಕನಂ ಪುಣ್ಯಲೋಂಕಾರಸ್ಯಾಪಿ ತತ್ರವೈ
ದೃಷ್ಟ್ವಾ ಹೃಷ್ಟಮನಾ ಆಸೀಚ್ಚೇತಃ ಸ್ಥೈರ್ಯಮವಾಪಹ
ಅಥ ಪಾಶುಪತಾಂ ಸ್ತತ್ರಸನಿದೀಕ್ಷ್ಯ ತಪೋಧನಾನ್
ವಿಭೂತಿಭೂಷಿತ ತಮಾನ್ ಕೃತಲಿಂಗ ಸಮರ್ಚನಾನ್
ವಿಹಿತಪ್ರಾಣ ಯಾತ್ರಾಂಶ್ಚ ಕೃತಾಗಮ ವಿಚಾರಣಾನ್
ಪ್ರಣಮ್ಯೋಪವಿಶತ್ತತ್ರ ತದಾಚಾರ್ಯಸ್ಸ ಸನ್ನಿಧೌ
ಪ್ರಬುದ್ಧ ಹಸ್ತ ಯುಗಲಃ ಪ್ರಣಮತ್ತರ ಕಂಧರಃ
ಅಥ ಪಾಶುಪತಾಚಾರ್ಯೋ ಗರ್ಗೋನಾಮ ಮಹಾಮುನಿಃ
ವಾರ್ಧಕೇನ ಸಮಾಕ್ರಾಂತಸ್ತಪಸಾ ಕೃಶವಿಗ್ರಹಃ
ಶಂಭೋರಾರಾಧನೇನಿಷ್ಠಃ ಶ್ರೇಷ್ಠಸ್ಸರ್ವತಪಸ್ವಿಷು
(ಭಾ. ೨, ಅ ೭೪, ಪು. ೧೦೨)

೩) ಕಪಿಲಶ್ಚೈವ ಸೌಪರ್ಣಿಃ ಶ್ರೀಕಂಠಃ ಪಿಂಗಲೋಂಶುಮಾನ್
ಏಕೇಪಾಶುಪತಾಸ್ಸಿದ್ಧಾಸ್ತಲ್ಲಿಂಗಾರಾಧನೇ ನಹಿ
ಇತ್ಯುಖ್ಯಾಯ ಕಥಾಂ ರಮ್ಯಾಂ ಗರ್ಗಃ ಪಾಶುಪತೋತ್ತಮಃ
ಭಾರದ್ವಾಜೇನ ಸಹಿತಃ ಪ್ರಾಪ್ಯ ವಾರಣಾಸೀಂ ಪುರೀಂ
ದಮನೋಪಿಹಿ ಧರ್ಮಾತ್ಮಾ ಗರ್ಗಾಚಾರ್ಯೇಣ ಸಂಯುತಃ
ಆರಾಧ್ಯ ಶ್ರೀಮದೋಂಕಾರಂ ತಸ್ಮಿಲ್ಲಿಂಗೇ ಲಯಂಗಕಃ
(ಭಾ. ೨, ಅ ೭೫, ಪು. ೧೦೩-೧೦೬)

೪) ದೂರ್ವಾಸಃ ಸಂಪರಿಪ್ರಾಪ್ತಃ ಶಂಭೋರಾನಂದ ಕಾನನಂ
ಪದೇ ಪದೇ ಮುನೀನಾಂಚ ಜಿತಕಾಲ ಮಹಾಭಯಾಂ
ದೃಷ್ಟ್ವೋಟಜಾನಿರಮ್ಯಾಣಿ ದೂರ್ವಾಸೋ ವಿಸ್ಮಿತೋಭವತ್
ದೂರ್ವಾಸಶ್ಚಾತಿ ಹೃಷ್ಟೋ ಅಭೂತ್‌ದೃಷ್ಟ್ವಾ ಪಾಶುಪತೋತ್ತಮಾನ್
ಭೂತಿಭೂಷಿತ ಸರ್ವಾಂಗಾನ್ ಜಟಾಜಟಿತ ಮೌಲಿಕಾನ್

ಕೌಪೀನಮಾತ್ರ ವಸನಾನ್ ಸ್ಮರಾರಿ ಧ್ಯಾನ ತತ್ಪರಾನ್
ಕಕ್ಷೀಕೃತ ಮಹಾಲಾಬೂನ್ ಹುಡುಕ್ಕರ ಜಿತಾಂಬುದಾನ್
ಕರವಂಡ ಪಾನೀಯು ಪಾತ್ರಮಾತ್ರ ಪರಿಗ್ರಹಾನ್
ಕ್ವಚಿತ್ ತ್ರಿದಂಡಿನೋದೃಷ್ಟ್ವಾ ನಿಸ್ಸಂಗಾನ್ ನಿಷ್ಪರಿಗ್ರಹಾನ್
(ಭಾ. ೨, ಅ ೮೫, ಪು. ೧೩೮)

೫) "ಪಂಡುಂ (ಡಂ?) ಚಾ ನಾರಕಾಖ್ಯಂದ್ಯೆ ತತ್ರಸ್ನಾತೋನ ನಾರಕೀ
ವರಣಾಯಾಸ್ತಟೀ ರಮ್ಯೇವರಣೇಶಸ್ತು ದುಸ್ತರೇ
ತತ್ರಪಾಶುಪತಃ ಸಿದ್ಧಸ್ತ್ವಕ್ಷಪಾದೋ ಮಹಾಮುನೀ (?)
ಅನೇನೈವ ಶರೀರೇಣಶಾಶ್ವತೀಂ ಸಿದ್ಧಿಮಾರ್ಗಃ"
(ಭಾ. ೨, ಅ-೯೬, ಪು. ೧೭೧)

೬) "ತತ್ರ ಪಾಶುಪತಃ ಸಿದ್ಧಸ್ತ್ರ್ಯಂಬಕೋನಾಮ ನಾಮತಃ
ಅನೇನೈವ ಶರೀರೇಣ ರುದ್ರಲೋಕಮವಾಪ್ತವಾನ್"

೭) "ತತ್ರ ಸಿದ್ಧಃ ಪಾಶುಪತಿಃ ಕಪಿಲರ್ಷಿರ್ಮಹಾತಪಃ
ತತ್ರಾಸ್ತಿ ಹಿ ಗುಹಾರಮ್ಯಾ ಕಪಿಲೇಶ್ವರ ಸನ್ನಿಧೌ"
"ತಾಂಗುಹಾಂ ಪ್ರವಿಶೇದ್ಯೋ ವೈನಸಗರ್ಭೇ ವಿಶೇತ್‌ಕ್ವಚಿತ್"

೮) "ತತ್ರ ಯಜ್ಞೋದಕೂಪೋಸ್ತಿ ವಾಜಿಮೇಧ ಫಲಪ್ರದಃ"

೯) ವ್ಯಾಸತೀರ್ಥಾತ್ ಪಶ್ಚಿಮತೋಘಂಟಾಕರ್ಣೋಹ್ರದೋಮಹಾನ್
ಘಂಟಾಕರ್ಣ ಸಮೋಪೇತು ಪಂಚಚೂಪ್ಸರಸ್ಸರಃ
ತದ್ದಕ್ಷಿಣೇ ಸಿದ್ಧಕೂಪಃ ಸಿದ್ಧಾಸ್ಸಂತಿ ಸಹಸ್ರಶಃ
ವಾಯುರೂಪಾಸ್ತುಯೇ ಸಿದ್ಧಾಯೇ ಸಿದ್ಧಾಭಾಸುರಸ್ಮಿಗಾಃ
ತೈಃ ಸ್ಥಾಪಿತಂತು ಯಲ್ಲಿಂಗಂ ತತ್‌ಸಿದ್ಧೇಶ್ವರ ಮೀರಿತಂ
ಲಿಂಗತ್ರಯಂ ಹೃದಚ್ಛೀಯಚ್ಛ್ರದ್ಧಮಾಪೀತಮರ್ಪಯೇತ್
ಯೈಸ್ತತ್ರ ತಜ್ಜಲಂ ಪೀತಂ ಕೃತಾರ್ಥಾಸ್ತೇ ನರೋತ್ತಮಾಃ
(ಭಾ. ೨, ಅ-೯೭, ಪು. ೧೭೨, ೧೭೪, ೧೭೬)

—ಇವುಗಳ ತಾತ್ಪರ್ಯವು ಹೀಗೆ ಇದೆ: (೧) ವಾಲ್ಮೀಕಿಯೆಂಬ ಪಾಶುಪತ ಶ್ರೇಷ್ಠ ನಿದ್ದನು... ಅವನು ಪಾದದಿಂದ ಮಸ್ತಕದವರೆವಿಗೂ ಭಸ್ಮಸ್ನಾನವಾಡಿ ಪಂಚಾಕ್ಷರೀ ಮಂತ್ರವನ್ನು ಜಪಿಸಿ ಶಿವನನ್ನು ಹುಡುಂ ಹುಡುಂ ಹುಡುಂ ಎಂಬುದಾಗಿ ಮೂರುಸಾರೆ ಉಚ್ಚಾರವಾಡಿ, ಕಪರ್ದೀಶನನ್ನು ಪೂಜಿಸುತ್ತಿದ್ದನು. (೨) ದಮನ ಎಂಬ ತಪಸ್ವಿಯು ಒಂದಾನೊಂದು ಕಾಲದಲ್ಲಿ ಶಿವಾನದೀತೀರದಲ್ಲಿ ಕೇದಗೆಯ ಮೆಳೆಯಿಂದ ವ್ಯಾಪ್ತವಾದ ಒಂದು ಕೊಳವನ್ನು ನೋಡಿದನು. ಅಲ್ಲಿ ಓಂಕಾರೇಶ್ವರನ ಮಹಾದೇವಾಲಯವನ್ನು ಕಂಡನು. ಸಂತೋಷಯುಕ್ತನಾಗಿ ಆಮೇಲೆ ಸ್ಥಿರಮನಸ್ಕನಾದನು. ಅಲ್ಲಿ ತಪಸ್ಸ

ಗಳಾದ ಅನೇಕ ಪಾಶುಪತರನ್ನು ನೋಡಿದನು. ಅವರು ವಿಭೂತಿಯನ್ನು ಧರಿಸಿಕೊಂಡು ಲಿಂಗಪೂಜೆ ಮಾಡುತ್ತಿದ್ದರು. ಆಗಮವಿಚಾರದಿಂದ ಪ್ರಾಣಾಯಾಕ್ರಮದಲ್ಲಿ ಕೂಡಿದವರಾಗಿದ್ದರು. ಇಂತಹ ಪಾಶುಪತರನ್ನು ಕಂಡು ನಮಸ್ಕರಿಸಿ, ಅವರಲ್ಲಿ ಕೂಡಿ, ಆ ಪಾಶುಪತರ ಆಚಾರ್ಯನಾದ ಗರ್ಗಮುನಿಯ ಸನ್ನಿಧಿಗೆಹೋಗಿ, ಕೈಗಳನ್ನು ಜೋಡಿಸಿಕೊಂಡು ತಲೆಬಗ್ಗಿಸಿ ನಮಸ್ಕರಿಸಿದನು. ಆ ಮುನಿಯು ಮುದುಕನಾಗಿ ತಪಸ್ಸಿನಿಂದ ಸೊರಗಿದ ದೇಹವುಳ್ಳವನಾಗಿ ಶಿವಾರಾಧನೆ ಮಾಡಿ, ಇತರ ತಪಸ್ವಿಗಳಿಗಿಂತ ಶ್ರೇಷ್ಠನಾಗಿದ್ದನು, (೩) ಕಪಿಲಸಾವರ್ಣಿ, ಶ್ರೀಕಂಠ, ಪಿಂಗಲ, ಅಂಶುಮಂತ-ಇವರು ಲಿಂಗಾರಾಧನೆಯಿಂದಲೇ ಪಾಶುಪತ ಸಿದ್ಧರಾದರು. ಈ ಕಥೆಯನ್ನು ಗರ್ಗಮುನಿಯು ದಮನನಿಗೆ ಹೇಳಿದನು. ಆಮೇಲೆ ಗರ್ಗನೂ ಭಾರದ್ವಾಜನೂ ಸಹ ಕಾಶಿಗೆ ಹೋದರು. ಧರ್ಮಾತ್ಮನಾದ ದಮನನು ಗರ್ಗಾಚಾರ್ಯನೊಡನೆ ಕೂಡಿಕೊಂಡು ಓಂಕಾರೇಶ್ವರನನ್ನು ಪೂಜಿಸಿ ಆಲಿಂಗವಲ್ಲಿ ಅಂತರ್ಧಾನರಾದರು. (೪) ದೂರ್ವಾಸಮುನಿಯು ಶಂಭುವಿನ ಆನಂದಕಾನನ ಎಂಬ ಅಡವಿಗೆ ಹೋದನು. ಅಲ್ಲಿ ಕಾಲನ ಭಯವಿಲ್ಲದಿರುವ ಅನೇಕರ ಗುಡಿಸಲುಗಳನ್ನು ಅಲ್ಲಲ್ಲಿ ನೋಡಿ ಆಶ್ಚರ್ಯವಂತನಾದನು. ಆ ದೂರ್ವಾಸನು ಅಲ್ಲಿ ಪಾಶುಪತೋತ್ತಮರನ್ನು ನೋಡಿ ಹರ್ಷಪಟ್ಟನು. ಈ ಪಾಶುಪತೋತ್ತಮರು ಸರ್ವಾಂಗವಲ್ಲಿ ಭಸ್ಮಧರಿಸಿದ್ದರು. ಶಿರಸ್ಸಿನಲ್ಲಿ ಜಡೆಯನ್ನು ಬಿಟ್ಟಿದ್ದರು. ಕೌಪೀನವೊಂದನ್ನೇ ಧರಿಸಿದ್ದರು. ಕೈಲಾಸ ಶಿವನ ಧ್ಯಾನಪರರಾಗಿದ್ದರು. ಕಂಕುಳಲ್ಲಿ ಭಸ್ಮಗುಟಿಕೆಯಿಟ್ಟುಕೊಂಡಿದ್ದರು. ಹುಡುಕ್ಕಾರ ಶಬ್ದದಿಂದ ತರುಸ್ಸನ್ನು ಕಳೆದಿದ್ದರು. ಕರಡಿಗೆ ದಂಡ ಕುಡಿಯುವ ನೀರಿನ ಪಾತ್ರೆ ಇಷ್ಟನ್ನೇ ಇಟ್ಟುಕೊಂಡಿದ್ದರು. ಕೆಲವರು ಮೂರು ದಂಡವುಳ್ಳವರಾಗಿ ನಿಸ್ಸಂಗರಾಗಿದ್ದರು. ಪರಿವಾರವಿಲ್ಲದವರಾಗಿದ್ದರು. (೫) ಕಾಶಿಯಲ್ಲಿ ಅನಾಶಕವೆಂಬ ಹೊಂಡವಿದೆ. ಅಲ್ಲಿ ಸ್ನಾನಮಾಡಿದವನು ನರಕಕ್ಕೆ ಹೋಗುವುದಿಲ್ಲ. ವರಣಾ ನದಿಯ ದಡವಲ್ಲಿ ವರಣೇಶ ಎಂಬ ಗುಡಿಯಿದೆ. ಅಲ್ಲಿ ಪಾಶುಪತ ಸಿದ್ಧನಾದ ಅಕ್ಷಪಾದಮುನಿಯು ಇದ್ದನು. ಅವನು ಅದೇ ಶರೀರದಲ್ಲಿಯೇ ಸಿದ್ಧಿಯನ್ನು ಹೊಂದಿದನು. (೬) ಅಲ್ಲಿಯೇ ತ್ರ್ಯಂಬಕ ಎಂಬ ಪಾಶುಪತ ಸಿದ್ಧನು ಈ ಶರೀರದಿಂದಲೇ ರುದ್ರಲೋಕವನ್ನು ಪಡೆದನು. (೭) ಅಲ್ಲಿ ಕಪಿಲ ಋಷಿಯೆಂಬ ಆ ಮಹಾತಪಸ್ಸನ್ನು ಮಾಡಿದ ಪಾಸುಪತ ಸಿದ್ಧನಿದ್ದನು. ಅಲ್ಲಿಯೇ ಕಪಿಲೇಶ್ವರ ದೇವಾಲಯದ ಮುಂಭಾಗದಲ್ಲಿ ಒಂದು ಗವಿ ಇದ್ದಿತು. ಆ ಗವಿಯನ್ನು ಹೊಕ್ಕು ಒಳಗೆ ಎಲ್ಲಿಯಾದರೂ ಇದ್ದದ್ದಾದರೆ ಅವನು ಪುನಃ ಜನನವಾಗುವುದಿಲ್ಲ. (೮) ಅಲ್ಲಿಯೇ ಯಜ್ಞೋದವೆಂಬ ಹೊಂಡವಿದೆ. ಅದು ಅಶ್ವಮೇಧ ಯಜ್ಞಮಾಡಿದ ಫಲ ಕೊಡುತ್ತದೆ. (೯) ವ್ಯಾಸತೀರ್ಥದ ಪಶ್ಚಿಮ ದಿಕ್ಕಿನಲ್ಲಿ ದೊಡ್ಡದಾದ ಘಂಟಾಕರ್ಣವೆಂಬ ಹೊಂಡವಿದೆ. ಈ ಘಂಟಾಕರ್ಣ ಹೊಂಡದ ಸಮೀಪದಲ್ಲಿ ಪಂಚ ಚೂಡಾಪ್ಸರ ಸರೋವರವಿದೆ. ಅದರ ದಕ್ಷಿಣದಲ್ಲಿ ಸಿದ್ಧರೂಪ ಎಂಬ ಹೊಂಡವಿದೆ. ಅಲ್ಲಿ ಸಾವಿರ ಗಟ್ಟಲೆ ಸಿದ್ಧರಿದ್ದಾರೆ. ಆ ಸಿದ್ಧರು ವಾಯುರೂಪರು. ಅವರು ಸೂರ್ಯಕಿರಣದಲ್ಲಿ

ಸಂಚರಿಸುವರು. ಅವರಿಂದ ಸ್ಥಾಪಿಸಲ್ಪಟ್ಟ ಲಿಂಗವು ಸಿದ್ಧೇಶ್ವರಲಿಂಗ ಎಂದು ಹೇಳಲ್ಪಡುತ್ತದೆ. ಯಾರಿಂದ ಅಲ್ಲಿನ ನೀರು ಕುಡಿಯಲ್ಪಡುತ್ತದೆಯೋ, ಹೃದಯ ಕಮಲದಲ್ಲಿನ ಮೂರು ಲಿಂಗಕ್ಕೆ ಯಾರು ಶ್ರದ್ಧೆಯಿಂದ ತಾವು ಕುಡಿದುದನ್ನು ಅರ್ಪಿಸುತ್ತಾರೆಯೋ ಅವರು ಕೃತಾರ್ಥರು. ಅವರು ಮನುಷ್ಯೋತ್ತರು.

ಮುಖ್ಯ ವಿಷಯವೆಂದು ಆರಿಸಲ್ಪಟ್ಟ ಈ ಮೇಲಿನ ಶ್ಲೋಕಗಳ ಅಭಿಪ್ರಾಯದಿಂದ ಸಾವಿರಾರು ವರ್ಷಗಳ ಹಿಂದೆ, ಸಾವಿರಗಟ್ಟಲೆ ಪಾಶುಪತರೂ, ಪಾಶುಪತ ಸಿದ್ಧರೂ ಇದ್ದರೆಂದು ಚೆನ್ನಾಗಿ ವ್ಯಕ್ತವಾಗುತ್ತದೆ. ಇವರು ಲಿಂಗಧಾರಿಗಳಾಗಿಯೂ, ಸ್ಥಾವರಲಿಂಗ ಪೂಜಕರಾಗಿಯೂ ಇದ್ದರೆಂದೂ ತಿಳಿಯಬರುತ್ತದೆ. ಇಂತಹ ಲಿಂಗಧಾರಿಗಳು ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ಆ ಪಟ್ಟಣಗಳು ಪ್ರಬಲವಾಗಿದ್ದಾಗ ಅಲ್ಲಿ ವಾಸವಾಗಿದ್ದರೆಂದು ನಿರ್ವಿವಾದವಾಗಿಯೇ ನಿರ್ಣಯಿಸಬೇಕಾಗಿದೆ. ಇವರ ಧಾರ್ಮಿಕ ಆಚಾರವು ಹೇಗಿದ್ದಿತೆಂದು ತಿಳಿಯಲಿಕ್ಕೆ ಹೋಗುವುದಾದರೆ, ಈ ಕೆಳಗಿನ ಸಂಗತಿಗಳು ಮೇಲಿನ ಶ್ಲೋಕಗಳಿಂದಲೇ ಹೊರಬೀಳುತ್ತವೆ.

"ಇವರು ಹುಟ್ಟಿದಲಾಗಾಯಿತು ಸಾಯುವವರೆಗೂ ಬಾಲಬ್ರಹ್ಮಚಾರಿಗಳಾಗಿಯೇ ಇರುತ್ತಿದ್ದರು. ಕೌಪೀನವನ್ನು ಮಾತ್ರ ಧರಿಸಿ ಹೊದ್ದಿಕೆಯೇನೂ ಇಲ್ಲದೆ ತಪಸ್ಸು ಮಾಡುತ್ತ ಕಾಲಯಾಪನೆ ಮಾಡುತ್ತಿದ್ದರು. ಹುಡುಂ, ಹುಡುಂ, ಹುಡುಂ, ಹುಡುತ್ ಹುಡುತ್ ಹುಡುತ್ ಎಂದು ಶಬ್ದಮಾಡಿ, ಕಾಮಸ ನಿವೃತ್ತಿಯಾಗುವುದೆಂದು ತಿಳಿದಿದ್ದರು. 'ಕಪರ್ದೀಶ' ಮೊದಲಾದ ಹೆಸರುಳ್ಳ ಲಿಂಗಗಳನ್ನು ಪೂಜಿಸುತ್ತಿದ್ದರು. ಪಾದದಿಂದ ಮಸ್ತಕದವರೆಗೆ ಭಸ್ಮಸ್ನಾನ ಮಾಡುತ್ತಿದ್ದರು. ಕೈಲಾಸದ ಕಪರ್ದಿಯನ್ನು ಧ್ಯಾನಮಾಡಿ, ಪಂಚಾಕ್ಷರ ಜಪವನ್ನು ಮಾಡುತ್ತಿದ್ದರು. ಆಗಮದಲ್ಲಿ ಹೇಳಲ್ಪಟ್ಟಂತೆ ಪ್ರಾಣಾಯಾಮವನ್ನು ಮಾಡುತ್ತಿದ್ದರು. ರುದ್ರಾಕ್ಷಮಾಲಿಕೆಯನ್ನು ಧರಿಸುತ್ತಿದ್ದರು. ಅನಾರಕವೆಂಬ ಹೊಂಡದಲ್ಲಿ ಸ್ನಾನ ಮಾಡಿ ತಾವು ಸಿದ್ಧರೆಂದು ತಿಳಿಯುತ್ತಿದ್ದರು. ತ್ರ್ಯಂಬಕನೆಂಬುವನು ಸಿದ್ಧನಾಗಿ ಈ ದೇಹದಿಂದಲೇ ರುದ್ರಲೋಕಕ್ಕೆ ಹೋದನು. ತಾವು ಕುಡಿಯುತ್ತಿರುವ ನೀರನ್ನು ತಮ್ಮ ಹೃದಯದಲ್ಲಿರುವ ಮೂರು ಲಿಂಗಕ್ಕೆ ಅರ್ಪಿಸುತ್ತಿದ್ದರು. ಹೀಗೆ ಅರ್ಪಿತವಾದ ನೀರನ್ನು ಕುಡಿದವರು ಮನುಷ್ಯೋತ್ತಮರು ಆಗಿದ್ದರು.

ಗರ್ಗಮಹಾಮುನಿಯೆಂಬ ಪಾಶುಪತಾಚಾರ್ಯನಿದ್ದನು. ಕಪಿಲ, ಸೌವರ್ಣಿ, ಶ್ರೀಕಂಠ, ಪಿಂಗಲ, ಅಂಶುಮಂತ್ ಎಂಬ ಪಾಶುಪತ್‌ಸಿದ್ಧರ ಕಥೆಯನ್ನು ಆಚಾರ್ಯನು ಪಾಶುಪತರಿಗೆ ಬೋಧಿಸಿದನು. ಗರ್ಗಾಚಾರ್ಯನೊಡನೆ ಭರದ್ವಾಜನೂ, ಗಮನಕನೂ ಕಾಶಿಗೆ ಹೋಗಿ ಓಂಕಾರೇಶ್ವರ ಲಿಂಗವನ್ನು ಆರಾಧಿಸಿ ಆ ಲಿಂಗದಲ್ಲಿಯೇ ಲೀನರಾದರು. ವ್ಯಾಸಮಹರ್ಷಿಯು ಇಂತಹ ಪಾಶುಪತೋತ್ತಮರನ್ನು ಕಾಲದ ಬಾಧೆಯಿಲ್ಲದೆ ಗುಡಿಸಲುಗಳಲ್ಲಿ ವಾಸ ಮಾಡುತ್ತಿರುವವರನ್ನು ನೋಡಿ ಆಶ್ಚರ್ಯಪಟ್ಟನು. ಪಾಶುಪತರು ತ್ರಿದಂಡಿಗಳಾಗಿದ್ದರು. ಲಿಂಗಸನ್ನಿಧಿಯ ಗವಿಯಲ್ಲಿ ಪ್ರವೇಶ ಮಾಡುವುದರಿಂದ ಜನನ

ಮರಣ ಭಯವಿಲ್ಲವೆಂದು ತಿಳಿಯುತ್ತಿದ್ದರು. ಈ ಸಿದ್ಧರು ಸ್ಥಾಪಿಸಿದ ಲಿಂಗವು ಸಿದ್ಧೇಶ್ವರ ಎಂದು ಕರೆಯಲ್ಪಡುತ್ತಿತ್ತು.

ಈಗಿನ ವೀರಶೈವರು ಎಲ್ಲರೂ ಕಡೆಯವರೆವಿಗೂ ಬ್ರಹ್ಮಚಾರಿಗಳಾಗಿರಬೇಕೆಂಬ ನೇಮವಿಲ್ಲ. ಯಾವ ಆಶ್ರಮದ ನಿಯಮದಿಂದಲೂ ಬಂಧಿಸಲ್ಪಟ್ಟಿಲ್ಲ. ಜಂಗಮರಿಗೆ ಸೂಚನಾರ್ಥದ ವಸ್ತ್ರಧಾರಣೆಯ ಹೊರತಾಗಿ ಉಡುಪಿನ ನಿರ್ಬಂಧವಾವುದೂ ಇಲ್ಲ. ಹುಡುಂ ಹುಡುಂ ಹುಡುಂ ಹುಡುತ್ ಹುಡುತ್ ಹುಡುತ್ ಎಂದು ಮೂರುಸಲ ಉಚ್ಚ ರಿಸುವುದಿಲ್ಲ. ಹಾಗೆ ಉಚ್ಚರಿಸಿದರೆ ತಾಮಸ ನಾಶವಾಗುವುದೆಂದು ಯಾರೂ ತಿಳಿದಿಲ್ಲ. ಉಘೇ ಉಘೇ ಚಾಂಗುಭಲರೇ ಎಂಬ ಶಬ್ದಗಳನ್ನು ಉತ್ಸವಗಳಲ್ಲಿ ಸಂತೋಷಾರ್ಥ ವಾಗಿ ಉಪಯೋಗಿಸಿರುವುದು ಗ್ರಂಥಗಳಲ್ಲಿ ಕಂಡುಬರುತ್ತದೆ.

ಶೈವರೆಲ್ಲರಿಗೂ ಭಸ್ಮರುದ್ರಾಕ್ಷಧಾರಣ, ಶಿವಾಯನಮಃ ಎಂಬ ಪಂಚಾಕ್ಷರಮಂತ್ರ ಇವುಗಳು ಅವಶ್ಯಕವಾಗಿವೆ. ಪಾಶುಪತರಿಗೂ ಅವಶ್ಯಕ. ಆದರೆ ಇವರಂತೆ ವೀರಶೈವ ರಿಗೆ ಇರದೆ ತ್ರಿಪುಂಡಧಾರಣ, ಕಂಠಮಾಲೆ ಕಣಕ ಮುಂತಾದವುಗಳಲ್ಲಿ ಕ್ರಮವಿಡಿದು ರುದ್ರಾಕ್ಷಧಾರಣ ಸಗರ್ಭಷಡಕ್ಷರ ಜಪ ಇವುಗಳಿರುತ್ತವೆ. ಕೈಲಾಸದ ಶಿವನೊಬ್ಬನೇ ಪತಿಯು ಉಳಿದ ದೇವತೆಗಳೆಲ್ಲರೂ ಪಶುಗಳು ಎಂದು ನಂಬಿ ಪಾಶುಪತರಾಗಿದ್ದವರು ಆ ಕೈಲಾಸದ ಶಿವರೂಪ ದೇವಾಲಯದೊಳಗಿನ ಲಿಂಗ ಮತ್ತು ತಾವು ಧರಿಸುವ ಲಿಂಗ ಎಂದು ತಿಳಿದು ಓಂಕಾರೇಶ, ಕಪರ್ದೀಶ ಮೊದಲಾದ ಹೆಸರುಗಳಿಂದ ಆ ಲಿಂಗಗಳಿಗೆ ಕರೆಯುತ್ತಿದ್ದರು, ಎಂದು ಊಹಿಸಬಹುದಾದರೂ ವೀರಶೈವರು ನಿರಾಕಾರ ಪರವಸ್ತು (ಪರಶಿವ) ರೂಪವೇ ಲಿಂಗವೆಂದೂ ಅದು ಸರ್ವಾಂಗದಲ್ಲಿಯೂ ಧರಿಸಲ್ಪಟ್ಟು ಇಷ್ಟ ಪ್ರಾಣಭಾವಲಿಂಗಗಳೆಂಬ ಹೆಸರನ್ನು ಹೊಂದಿ, ಸರ್ವಜಗದ್ರೂಪವಾಗಿ ಅಲ್ಲಿಯೂ ಆ ಹೆಸರುಗಳನ್ನೇ ಹೊಂದಿ ಈ ಹೆಸರುಗಳೇ ಗುರುಲಿಂಗ ಜಂಗಮ ಎಂಬ ಹೆಸರಿನಿಂದಲೂ ಕರೆಯಲ್ಪಟ್ಟು ಸರ್ವವೂ ಲಿಂಗವಾಗಿರುವುದೆಂದೂ, ತಿಳಿದಿದ್ದಾರೆ. ಗ್ರಾಮದವರು ತಮ್ಮ ಊರಿನ ಉನ್ನತಿಗಾಗಿ ಲಿಂಗದೇವಾಲಯವನ್ನು ನಿರ್ಮಿಸಿ ಒಂದೊಂದು ಹೆಸರಿ ನಿಂದ ಕರೆದರೆ ಅದೇ ಹೆಸರನ್ನೇ ತಮ್ಮ ನಿರಾಕಾರ ಪರಶಿವರೂಪ ಲಿಂಗಗಳಿಗೆ ಕರೆದಿರು ವುದು ಶರಣರ ವಚನಗಳಲ್ಲಿ ಕಂಡುಬಂದರೂ ಅದು ಲೋಕ ನಿಮಿತ್ತವಾಗಿಯೇ ಹೊರತು ತಾತ್ವಿಕವಾಗಿ ಅಲ್ಲ. ಆದರೂ ವೀರಶೈವರಿಗೆ ಸ್ಥಾವರಲಿಂಗ ಪೂಜೆಯು ಸಿದ್ಧಾಂತ ಶಿಖಾಮಣಿಯ ೧೦೧ ಸ್ಥಲಗಳಲ್ಲಾಗಲಿ ಶಿವಶರಣರ ಷಟಸ್ಥಲ ವಚನಗಳಲ್ಲಿಯಾಗಲಿ ಹೇಳಲ್ಪಟ್ಟಿಲ್ಲ. ಈ ದೆಸೆಯಿಂದ ಪಾಶುಪತರು ಧರಿಸಿದ ಲಿಂಗಕ್ಕೂ ವೀರಶೈವರು ಧರಿಸಿದ ಲಿಂಗಕ್ಕೂ ಭಾವನೆಯಲ್ಲಿಯೂ, ನಿರ್ಮಾಣದಲ್ಲಿಯೂ ಬಹಳ ವ್ಯತ್ಯಾಸವಿದೆ. ಎಂಬುದನ್ನು ಚೆನ್ನಾಗಿ ನೆನಪಿನಲ್ಲಿಡಬೇಕು. ಪಾಶುಪತರ ಪ್ರಾಣಾಯಾಮಕ್ಕೂ ವೀರ ಶೈವರ ಪ್ರಾಣಾಯಾಮಕ್ಕೂ ವ್ಯತ್ಯಾಸವಿದೆ. ವೀರಶೈವರು ಯಾವುದಾದರೂ ಹೊಂಡದ ನೀರಿನಲ್ಲಿ ನದಿಯ ನೀರಿನಲ್ಲಿ ಕ್ಷೇತ್ರದ ನೀರಿನಲ್ಲಿ ಸ್ನಾನಮಾಡಿದರೂ ಶುದ್ಧರಾದೆವೆಂದು ತಿಳಿಯುವುದಿಲ್ಲ. 'ನಸ್ಪೃಷ್ಟಿ ಬುದ್ಧ್ಯಾಸ್ನಾಯೀತ ಯದಿರುರ್‍ಯಾತ್ ಸಪಾಕರೇ'–

ಎಂದರೆ ನಾನು ಮುಟ್ಟುವುದಾದುದರಿಂದ ಸ್ನಾನ ಮಾಡಿ ಶುದ್ಧನಾಗುತ್ತೇನೆ ಎಂದು ಸ್ನಾನ ಮಾಡಬಾರದು ಹಾಗೆ ಮಾಡಿದರೆ ಪಾಪಿಯಾಗುತ್ತಾನೆ ಎಂದು ಪಾರಮೇಶ್ವರ ತಂತ್ರ ಪ್ರಮಾಣವಿದೆ. ಹಾಗೆ ತೀರ್ಥಸ್ನಾನ ಮಾಡಿ ರುದ್ರಲೋಕವನ್ನು ಸೇರಬೇಕೆಂಬ ಅಪೇಕ್ಷೆಯೂ ಇವರಿಗಿಲ್ಲ. 'ಬ್ರಹ್ಮಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ ರುದ್ರ ಪದವಿಯನೊಲ್ಲೆ ...' ಎಂದು ಬಸವಣ್ಣನವರ ವಚನವು ಘಂಟಾಘೋಷವಾಗಿ ಹೇಳುತ್ತದೆ. ಹೊಂಡದ ನೀರನ್ನು ಲಿಂಗಕ್ಕರ್ಪಿಸಿ ಕುಡಿದರೆ ರುದ್ರಲೋಕ ಪ್ರಾಪ್ತಿಯೆಂದು ಪಾಶುಪತರು ತಿಳಿದಂತೆ ವೀರಶೈವರು ತಿಳಿದಿಲ್ಲ. ತಾವು ಕುಡಿಯುತ್ತಿದ್ದ ಪವಿತ್ರವಾದ ಹೊಂಡದ ನೀರನ್ನು ಸಿದ್ಧಿ ಪಡೆಯುವುದಕ್ಕಾಗಿ ಪಾಶುಪತರು ತಮ್ಮ ಹೃದಯದಲ್ಲಿರುವ ಮೂರು ಲಿಂಗಗಳಿಗೆ ಅರ್ಪಿಸುತ್ತಿದ್ದರು, ಎಂಬಲ್ಲಿ ತೀರ್ಥದ ನೀರನ್ನು ತ್ರಿಲಿಂಗಕ್ಕರ್ಪಿಸುವ ವಿಷಯುವು ಹೇಳಲ್ಪಟ್ಟಿದೆ. ವೀರಶೈವರು ಹೀಗೆ ಹೊಂಡದ ನೀರನ್ನು ತ್ರಿಲಿಂಗಕ್ಕೆ ಅರ್ಪಿಸುವವರಲ್ಲ. ಪಾಶುಪತರು ತಮ್ಮ ಹೃದಯದಲ್ಲಿನ ಲಿಂಗವು ಕರಸ್ಥಲದಲ್ಲಿ ಮನಸ್ಸಿನಲ್ಲಿ ಭಾವದಲ್ಲಿ ಮೂರು ಲಿಂಗಗಳಾಗಿ ವ್ಯಾಪಿಸಲ್ಪಟ್ಟಿರುವುದೆಂದು ಭಾವಿಸಿದ್ದರು. ಆದುದರಿಂದಲೇ ತಾವು ಕುಡಿಯುತ್ತಿದ್ದ ನೀರನ್ನು ಆ ಲಿಂಗಗಳಿಗೆ ಅರ್ಪಿಸಿದವರು ಉತ್ತಮರಾದ ಮನುಷ್ಯರು ಎಂದು ತಿಳಿಯುತ್ತಿದ್ದರು. ಹೀಗೆ ಮೂರು ಲಿಂಗಗಳಿಗರ್ಪಿಸುವವರು ಮನುಷ್ಯರು ಎಂಬ ಭಾವನೆ ಅವರಲ್ಲಿದ್ದುದರಿಂದ ಅವರ ಹೃದಯದಲ್ಲಿನ ಲಿಂಗವಾಗಲಿ, ಅವರ ಸಂಬಂಧದ ತ್ರಿಲಿಂಗಗಳಾಗಲಿ, ಮನುಷ್ಯನಿಗಿಂತ ಭಿನ್ನವಾದವುಗಳೆಂಬ ಅಭಿಪ್ರಾಯವು ಹೊರಬೀಳುತ್ತದೆ. ವೀರಶೈವರಲ್ಲಿ ಹೃದಯದಲ್ಲಿನ ಲಿಂಗದ ಭಾವನೆಯಿಲ್ಲ. ಮಸ್ತಕದಲ್ಲಿನ ಚಿಕ್ಕಳೆಯಿಂದ ಇಷ್ಟ, ಪ್ರಾಣ, ಭಾವಲಿಂಗಗಳಾಗುವುವೆಂದು ಭಾವಿಸುತ್ತಾರೆ. ಇದರಿಂದ ಇವರ ತನುವೂ ಲಿಂಗ, ಮನವೂ ಲಿಂಗ,ಭಾವವೂ ಲಿಂಗವಾಗಿ ಇವರು ಲಿಂಗರೂಪವೇ ಆಗುತ್ತಾರೆ. ಮನುಷ್ಯತ್ವವು ಇವರಲ್ಲಿ ಉಳಿದಿರುವುದಿಲ್ಲ. ತನುಮನ ಭಾವಗಳೇ ಲಿಂಗ ಎಂದು ಪೂರ್ಣವಾಗಿ ವೀರಶೈವರು ತಿಳಿದಿರುವುದಕ್ಕೆ ಬದಲಾಗಿ ಹೃದಯದಲ್ಲಿ ಧ್ಯಾನಲಿಂಗ, ಮನದಲ್ಲಿ ಚಿಂತನ ಲಿಂಗ, ಮಂತ್ರದಲ್ಲಿ ಜಪರೂಪಲಿಂಗ ಎಂದು ಲಿಂಗವನ್ನು ಮೂರು ಕಡೆಗಳಲ್ಲಿ ಭಿನ್ನವಾಗಿ ತಿಳಿಯುವುದು ಪಾಶುಪತರ ಪದ್ಧತಿಯಾಗಿದೆ. ಆದುದರಿಂದಲೇ ಮನುಷ್ಯರಾಗಿ ತಾವು ಕುಡಿವ ನೀರನ್ನು ಲಿಂಗಕ್ಕರ್ಪಿಸಿ ಕುಡಿಯುವವರು ಮನುಷ್ಯೋತ್ತಮರು ಎಂಬ ಭಾವನೆಯು ಅವರಲ್ಲಿ ಚೆನ್ನಾಗಿ ಮೂಡಿದೆ. ಆದುದರಿಂದ ವೀರಶೈವರ ಇಷ್ಟ ಪ್ರಾಣಭಾವ ಲಿಂಗಗಳಿಗೆ ಪಾಶುಪತರ ಮೂರು ಲಿಂಗಗಳ ಹೋಲಿಕೆಯು ಸರಿಬರುವುದಿಲ್ಲ. ವೀರಶೈವರಿಗೆ ಹೊಂಡದ ನೀರನ್ನು ಕುಡಿದು ಸಿದ್ಧರಾಗಬೇಕೆಂಬ ವಿಧಾಯಕವೂ ಇಲ್ಲ. ಪಾಶುಪತರಲ್ಲಿ ಗರ್ಗಮಹಾಮುನಿಯೆಂಬ ಹೆಸರುಳ್ಳ ಪಾಶುಪತಾಚಾರ್ಯನು ಓಂಕಾರೇಶ್ವರ ಎಂಬ ಸ್ಥಾವರಲಿಂಗವನ್ನು ಆರಾಧಿಸುತ್ತಿದ್ದನು. ಎಂದಿಷ್ಟು ಮಾತ್ರ ತಿಳಿದುಬಂದಿದೆ. ಮೇಲೆ ಹೇಳಿದ ಪಾಶುಪತ ಧಾರ್ಮಿಕ ಆಚಾರಗಳು ದಮನ ಶ್ರೀಕಂಠ ಮೊದಲಾದ ಪಾಶುಪತ ಸಿದ್ಧರಲ್ಲಿ ರೂಢಿಯಲ್ಲಿದ್ದುವೆಂದು ತಿಳಿದು ಬರುತ್ತದೆ. ಈ ಮುಖ್ಯ ವಿಷಯ

ಗಳಲ್ಲಿನ ಸಂಗತಿಗಳಿಂದ ಪಾಶುಪತರಾಗಲಿ, ಪಾಶುಪತ ಸಿದ್ಧರಾಗಲಿ, ಈಗಿನ ಷಟ್‌ಸ್ಥಲ ವೀರಶೈವರ ಆಚರಣೆಯಂತೆ ನಡೆಯುತ್ತಿರಲಿಲ್ಲ. ಆದ್ದರಿಂದ ಇವರನ್ನು ವೀರಶೈವ ರೆಂದು ತಿಳಿಯಲಾಗುವುದಿಲ್ಲ. ಈ ಪಾಶುಪತರು ವ್ಯಾಸರ ಕಾಲದಲ್ಲಿ ಕಾಶಿಯಲ್ಲಿದ್ದರು. ಎಂಬುದು ಮೇಲಿನ ಆಧಾರಗಳಿಂದ ಸಿದ್ಧವಾಗುತ್ತದೆ. ವ್ಯಾಸ ಋಷಿಗಿಂತಲೂ ಬಹು ಪೂರ್ವದಲ್ಲಿ ಪ್ರಬಲವಾಗಿದ್ದ ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ಇದೇ ನಮೂನೆಯ ಪಾಶುಪತರಿದ್ದರೆಂಬುದನ್ನು ಸೂಚಿಸುವ ಕೆಲವು ಆಧಾರಗಳು ಮೇಲಿನ ಶ್ಲೋಕಗಳಲ್ಲಿ ಕಾಣಬರುತ್ತವೆ.

ಇಷ್ಟರ ಮೇಲಿಂದಲೇ ವೀರಶೈವರು ಬಹುಪ್ರಾಚೀನ ಕಾಲದಲ್ಲಿ ಇದ್ದಿಲ್ಲವೆಂದು ತಿಳಿಯಲಿಕ್ಕೆ ಆಗುವುದಿಲ್ಲ. ಅಮರಸಿಂಹನು ರಚಿಸಿದ ಅಮರಕೋಶ ಎಂಬ ನಿಘಂಟಿನಲ್ಲಿ "ಸಂಘಾಕೇ ಪ್ರಮಥೇಗಣಃ" ಎಂದರೆ ಗುಂಪಿನಲ್ಲಿಯೂ ಪ್ರಮಥರಲ್ಲಿಯೂ ಗಣ ಎಂಬ ಶಬ್ದವು ವರ್ತಿಸುತ್ತದೆ, ಎಂದು ಅಮರಸಿಂಹನು ಹೇಳಿದ್ದಾನೆ. ಈ ಅಮರಸಿಂಹನಕಾಲವು ಹಿಂದೆಸುಮಾರು ೧೬೦೦ ವರ್ಷಗಳು. ಇವನು ಪ್ರಮಥ ಗಣಂಗಳಿದ್ದರೆಂದು ಒಪ್ಪಿಕೊಂಡಿ ರುವುದರಿಂದ ಈ ಪ್ರಮಥಗಣಂಗಳು ಅಮರಸಿಂಹನಿಗಿಂತ ಮುಂಚೆಯೇ ಇದ್ದರೆಂಬುದು ನಿರ್ವಿವಾದವಾಗಿ ತಿಳಿಯುವಂತಾಗಿದೆ. ಪ್ರಮಥ ಶಬ್ದವು ಭಾರತೀಯರ ಬಹು ಪ್ರಾಚೀನದ ಗ್ರಂಥಗಳಲ್ಲಿ ಕಂಡುಬರುತ್ತದೆ. ಈ ಪ್ರಮಥರು ಕೈಲಾಸದ ಶಿವನ ಸಭೆ ಯಲ್ಲಿ ಇದ್ದರು. ಎಂಬುದು ಗ್ರಂಥಗಳಲ್ಲಿ ಘಂಟಾಘೋಷವಾಗಿದೆ. ಈ ಪ್ರಮಥರಲ್ಲಿ ಈಗಿನ ವೀರಶೈವರಂತಹ ಧಾರ್ಮಿಕ ವರ್ತನೆ ಇದ್ದಿತೆಂದು ಸೂಚಿಸುವ ಕೆಲವು ಅಂಶಗಳು ಕಂಡುಬರುತ್ತಿವೆ. ಈ ಲೇಖನದ ಪ್ರಾರಂಭ ಭಾಗದಲ್ಲಿ ಹೇಳಲ್ಪಟ್ಟ 'ಅಪ್ರಕಾಶಿತಾ ಉಪನಿಷದಃ' ಎಂಬ ಪುಸ್ತಕದಲ್ಲಿನ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ 'ಗಣೈಃ ಶೈಲಂ' ಗಣಗಳಿಂದ ಶೈಲಲಿಂಗವು (ಶಿಲಾಲಿಂಗ) ಪೂಜಿಸಲ್ಪಟ್ಟಿದ್ದಿತೆಂದು ಉಕ್ತವಾಗಿದೆ. ಈ ಗಣಂಗಳೇ ಪ್ರಮಥ ಗಣಂಗಳೆಂದೂ, ಈ ಪ್ರಮಥರು ಧರಿಸುತ್ತಿದ್ದ ಶಿಲಾಲಿಂಗವೇ ವೀರಶೈವರು ಧರಿಸುತ್ತಿದ್ದ ನೀಲಬಣ್ಣದ ಲಿಂಗದ ನಮೂನೆಯದೆಂದು ಊಹಿಸುವಂತಾ ಗಿದೆ. ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ಶಿಲಾಲಿಂಗಗಳು ಬಹಳವಾಗಿ ದೊರಕಿವೆ. ಕಲ್ಯಾಣದ ಬಸವೇಶ್ವರನೇ ಮೊದಲಾದವರಿಗೆ 'ಬಸವಾದಿ ಪ್ರಮಥರು' ಎಂದು ಕರೆದಿರುವುದು ಅನೇಕ ಕಡೆಗಳಲ್ಲಿ ಇದೆ. ಕೈಲಾಸದ ಪ್ರಮಥರಲ್ಲಿ ಇದ್ದ ಆಚ ರಣೆಯೇ ಬಸವಾದಿಗಳಲ್ಲಿ ಇದ್ದುದರಿಂದ ಇವರೂ ಪ್ರಮಥರೆಂದು ಕರೆಯಲ್ಪಟ್ಟಿದ್ದಾರೆ. ಈ ದೆಸೆಯಿಂದ ನೀಲಬಣ್ಣದ ಲಿಂಗಧಾರಿಗಳಾದ ಪ್ರಮಥರೂ, ಹರಪ್ಪ ಮಹೆಂಜೋ ದಾರೋ ಪಟ್ಟಣಗಳಲ್ಲಿ ಇದ್ದರೆಂದು ಊಹಿಸಲಿಕ್ಕೆ ಅನುಮಾನವಿಲ್ಲ. ಆದರೆ ಬಸವೇ ಶ್ವರನ ವಚನಗಳಲ್ಲಿ ಪಾಶುಪತದ ವಿಷಯವು ಸಂಬಂಧಿಸದೆ ಉಳಿದಿಲ್ಲ. 'ಬಾರದು ಬಾರದು ಪಶುಪತಿವ್ರತವು ವಿಷಯಿಗೆ' ಎಂಬ ವಾಕ್ಯವು ಬಸವೇಶ್ವರನ ವಚನದಲ್ಲಿ ಇದೆ. ಇದರಿಂದ ಪಾಶುಪತದ ವ್ರತವನ್ನು ಬಸವೇಶ್ವರನು ಒಪ್ಪಿಕೊಂಡಂತೆ ವ್ಯಕ್ತವಾಗುತ್ತದೆ. ಈ ಪಾಶುಪತರ ವ್ರತವು ಮೇಲೆ ಹೇಳಿದ ಪಾಶುಪತ, ಪಾಶುಪತ ಸಿದ್ಧರ ಆಚಾರವಲ್ಲ.

ಪಾಶುಪತರ ಆಚಾರಕ್ಕೂ, ಪಾಶುಪತ ವ್ರತಿಗಳ ಆಚಾರಕ್ಕೂ ಬಹಳ ವ್ಯತ್ಯಾಸವಿದೆ. ಬಹಳ ಪ್ರಾಚೀನಕಾಲದಲ್ಲಿದ್ದ ಪ್ರಮಥರ ಆಚಾರವು ಸಾವಿರಾರು ವರ್ಷಗಳ ತರುವಾಯ ಪಾಶುಪತ ವ್ರತವಾಗಿ ಬದಲಾಯಿಸಲ್ಪಟ್ಟಿರಬೇಕು. ಈ ಪ್ರಮಥಾಚಾರ ಪಾಶುಪತ ವ್ರತಾಚಾರ ಇವುಗಳ ವಿಷಯವಾಗಿ ಇನ್ನೂ ಬಹಳ ಶೋಧನೆ ನಡೆಯಬೇಕಾಗಿದೆ.

ರೇವಾನದಿಯ ದಡದಿಂದ ಕಾಶಿಗೆ ಗರ್ಗಮಹಾಮುನಿಯು ಅನೇಕ ಪಾಶುಪತ ರೊಡನೆ ಬಂದನೆಂದು ಮೇಲೆ ಹೇಳಲ್ಪಟ್ಟಿದೆ. ರೇವಾನದಿಯು ಪಂಜಾಬ ದೇಶದಲ್ಲಿ (ಈಗಿನ ಪಶ್ಚಿಮ ಪಾಕಿಸ್ಥಾನ) ಇರುವ ರಾವೀನದಿಯಾಗಿರಬೇಕು. ಈ ಸಂಗತಿ ಸರಿ ಯಾದರೆ ಪಂಜಾಬಿನಿಂದ ಕಾಶಿಗೆ ಪಾಶುಪತರು ಹೋದರೆಂದು ತಿಳಿಯುಲಿಕ್ಕೆ ಬರುತ್ತದೆ. ಹರಪ್ಪ ಮಹೆಂಜೋದಾರೋ ಪಟ್ಟಣಗಳು ಪಂಜಾಬಿನ ಆಗ್ನೇಯ ಮೂಲೆಯಲ್ಲಿ ಇರುವುದರಿಂದ ಬಹುಪ್ರಾಚೀನ ಕಾಲದಲ್ಲಿ ಆ ಪಟ್ಟಣಗಳಿಗೂ ಕಾಶಿಗೂ ಹೋಗಿಬರುವ ಪ್ರಚಾರವು ರೂಢಿಯಲ್ಲಿದ್ದಿತೆಂದು ತಿಳಿಯಲಿಕ್ಕೆ ಬರುವಂತಿದೆ. ದೂರ್ವಾಸ ಋಷಿಯು ಶಂಭುವಿನ ಆನಂದಕಾನನಕ್ಕೆ ಹೋದನೆಂದು ತಿಳಿದುಬರುತ್ತದೆ. ಈ ಕಾನನವು ಪಂಜಾ ಬಿನ ಸಮೀಪದಲ್ಲಿಯೇ ಇರಬಹುದೆಂದು ಊಹಿಸಲವಕಾಶವಿದೆ.

ಕಾಶಿಯಲ್ಲಿರುವ ಕಪಿಲಋಷಿಯ ಪ್ರತಿಮೆ, ದಕ್ಷಬ್ರಹ್ಮನ ಪ್ರತಿಮೆ ಇವುಗಳನ್ನು ನೋಡಿದಾಗ, ಇವರು ಲಿಂಗಧಾರಕರಾಗಿದ್ದರೆಂದು ತಿಳಿಯಲಿಕ್ಕೆ ಬರುತ್ತದೆ. ಹಾವೇ ರಿಯ ಸಿದ್ಧೇಶ್ವರ ದೇವಾಲಯದಲ್ಲಿಯೂ ಲಿಂಗಧಾರಕರಾದ ಋಷಿಗಳ ಪ್ರತಿಮೆಗಳಿವೆ. ಕಾಶಿಯಲ್ಲಿ 'ನರಕಾರ್ಣವತಾರಕ' ಎಂಬ ಹೆಸರಿನ ಪಂಚಮುಖ ಮೂರ್ತಿ ಶಿರಸ್ಸಿನಲ್ಲಿ ಗಂಗೆಯಿರುವ ಕೈಲಾಸದ ಶಿವನ ಪ್ರತಿಮೆಯನ್ನು ನೋಡಿ ಕೈಲಾಸದ ಶಿವನೂ ಲಿಂಗ ಧಾರಕನೆಂದು ನಿರ್ಣಯಿಸಲಿಕ್ಕೆ ಬರುತ್ತದೆ. ಇದೂ ಅಲ್ಲದೆ ಶಿವಯೋಗೀಶ್ವರ ಎಂಬ ಹೆಸರಿನ ಮೂರ್ತಿಗಳು ಉತ್ತರ ಹಿಂದೂಸ್ಥಾನದಲ್ಲಿ ಒಂದು, ದಕ್ಷಿಣ ಹಿಂದೂಸ್ಥಾನದಲ್ಲಿ ಒಂದು ಇರುವುದಾಗಿ ಶಾಸನ ಇಲಾಖೆಯ ವರದಿಗಳಲ್ಲಿ ಹೇಳಲ್ಪಟ್ಟಿರುವುದಾಗಿ ಹಿಂದೆ ಹೇಳಿದೆ. ಇವುಗಳಿಂದಲೂ ಯೋಗೀಶ್ವರನಾದ ಶಿವನು ಲಿಂಗಧಾರಕನಾಗಿದ್ದನೆಂದು ವ್ಯಕ್ತವಾಗುತ್ತದೆ. ಇವೆಲ್ಲಾ ಸಂಗತಿಗಳ ಮೇಲಿಂದ ಅನೇಕ ಸಾವಿರ ವರ್ಷಗಳ ಸಿಂಧೂ ದೇಶದಲ್ಲಿಯೂ ಆ ಮುಂದೆ ಅಥವಾ ಅವರ ಪ್ರಾಬಲ್ಯಕಾಲದಲ್ಲಿ ಕಾಶಿಯಲ್ಲಿಯೂ ಲಿಂಗಧಾರಕರ ಸಂಖ್ಯೆಯು ಅಸಂಖ್ಯಾತವಾಗಿದ್ದಿತೆಂದು ತಿಳಿಯುಲವಕಾಶವಿದೆ. ಈಗ ಬಹಿರಂಗವಾಗಿ ಸುಪ್ರಸಿದ್ಧವಾಗಿರುವ ಕಾಶೀಕ್ಷೇತ್ರವೇ ಲಿಂಗಧಾರಕರ ಚರಿತ್ರೆಯನ್ನು ಶೋಧಿಸುವ ಸ್ಥಾನವಾಗಿದೆ. ಈ ಕಾಶಿಯು ಐದಾರು ಸಾವಿರ ವರ್ಷಗಳಿಂದಲೂ ಇದ್ದ ಪಟ್ಟಣವೆಂದು ಹೇಳಬಹುದಾಗಿದೆ. ಕೈಲಾಸದ ಶಿವನ ಕಾಲದಲ್ಲೂ, ಆ ತರುವಾಯವೂ ಲಿಂಗ ಪ್ರತಿಷ್ಠೆಮಾಡಿದ ಅನೇಕಾನೇಕ ಶಿವಾಲಯಗಳು ಇದ್ದವೆಂದು ನಿರ್ಣಯಿಸಲಿಕ್ಕೆ ಅನುಮಾನವೇನೂ ಇಲ್ಲ.

## ಸ್ಕಂದಪುರಾಣದೊಳಗಿನ ಕೇದಾರಖಂಡ

"ಕಥಾ ಚ ವೀರಭದ್ರಾಂ ಶಾಃ ಪೂಜಾರ್ಥಮರ್ರೈಃ ।
ತತ್ರವಿಂಶತಿ ಸಂಸ್ಕಾರಾಸ್ತೇಷಾಮಷ್ಟಾಧಿಕಾಭವನ್ ॥
ಕಥಿತಾಶ್ಯಂಕರೇಣೈವ ಲಿಂಗಸ್ಯಾರ್ಚನ ಸೂಚಕಾಃ ।
ಸಂತಿ ರುದ್ರೇಣಕಥಿಕಾಃ ಶಿವಧರ್ಮಾಸ್ಸನಾತನಾಃ ॥
ವೀರಭದ್ರೊ ಯಥಾರುದ್ರಸ್ತ್ವಸ್ಯೇ ಗುರುವಃ ಸ್ಮೃತಾಃ ।
ಗುರೋರ್ಜಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ ॥
ಲಿಂಗಸ್ಯ ಮಹಿಮಾನಂತು ನಂದೀಜಾನಾತಿತತ್ತ್ವತಃ ।
ತಥಾಸ್ಕಂದೋಹಿ ಭಗವಾನಸ್ಯೇ ನಾಮಧಾರಣಃ ॥
ಯಥೋಕ್ತಾಃ ಶಿವಧರ್ಮಾಹಿ ನಂದಿನಾ ಪರಿಕೀರ್ತಿಕಾಃ ।
ಶೈಲಾದೇನ ಮಹಾಭಾಗಾ ವಿಚಿತ್ರಾಲಿಂಗಧಾರಕಾಃ ॥
ಶವಸ್ಯೋಪರಿಲಿಂಗಂಚಫ್ರೀಯತೇ ಚ ಪುರಾತನೈಃ ।
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹಜೀವಿತಂ ॥
ಏತೇಧಮಃ ಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ ।
ಧರ್ಮಃ ಪಾಶುಪತಃ ಶ್ರೇಷ್ಠಃ ಸ್ಕಂದೇನ ಪ್ರತಿಪಾಲಿತಃ ॥
ಶುದ್ಧಾ ಪಂಚಾಕ್ಷರೀ ವಿದ್ಯಾಪ್ರಸಾದೀ ತದನಂತರಂ ।
ಷಡಕ್ಷರೀ ತಥಾವಿದ್ಯಾ ಪ್ರದಾದಸ್ಯ ಚ ದೀಪಿಕಾ ॥
ಸ್ಕಂದಾತ್ತತ್ಸಮನು ಪ್ರಾಪ್ತಮಗಸ್ತೇನ ಮಹಾತ್ಮನಾ ।
ಪಶ್ಚಾದಾಚಾರ್ಯ ಭೋದೇನ ಹ್ಯಾನಮಾಬಹವೋಽಭವನ್ ॥"

## ಆಚಾರ್ಯರಿಂದ ಅಗಮುಗಳು

"ಕಿಂ ಮಯೈ ಬಹುನೋಕ್ತೇನ ಶಿವ ಇತ್ಯಕ್ಷರದ್ವಯಂ ।
ಉಚ್ಚಾರಯಂತಿಯೇ ನಿತ್ಯಂ ತೇ ರುದ್ರಾನಾತ್ರ ಸಂಶಯೇಃ ॥
ಸತ್ಮಾಂ ಮಾರ್ಗಂ ಪುರಸ್ಕೃತ್ಯಂಯೇ ಸರ್ವೇ ತೇ ಪುರಾಂತಕಾಃ ।
ವೀರಮಾಹೇಶ್ವರಾಜ್ಞೀಯಾಃ ಪಾಪಕ್ಷಯಕರಾನ್ನೃಣಾಂ ॥
ಪ್ರಸಂಗೇನಾನುಷಂಗೇನ ಶ್ರದ್ಧಯಾ ಯದೃಚ್ಛಯಾ ।
ಶಿವಭಕ್ತಿಂ ಪ್ರಕುರ್ವಂತಿಯೇ ಲೈತೇಯಾಂತಿ ಸದ್ಗಂತಿಂ ॥"

(ಕೇ. ಖಂ. ಅ-೭, ಪು. ೧೧-೧೨)

–ಈ ಶ್ಲೋಕದಲ್ಲಿ ತಾತ್ಪರ್ಯ ಹೀಗೆ; ವೀರಭದ್ರಾಂಶದವರು ದೇವತೆಗಳಿಂದ ಪೂಜೆ ಗೋಸ್ಕರವಾಗಿ ಅಂಗೀಕರಿಸಲ್ಪಟ್ಟರು. ಅವರ ಸಂಸ್ಕಾರಗಳು ೨೮ ಇದ್ದವು. ಅವು ಲಿಂಗಾರ್ಚನೆಯ (ಲಿಂಗವನ್ನು ಧರಿಸಿ ಲಿಂಗವಾಗಿ ಲಿಂಗವನ್ನು ಅರ್ಚಿಸುವ) ಸೂಚಕ ಗಳೆಂದು ಶಂಕರನಿಂದಲೇ ಹೇಳಲ್ಪಟ್ಟವುಗಳಾಗಿವೆ. ಇವು ರುದ್ರನಿಂದ ಹೇಳಲ್ಪಟ್ಟವಾಗಿ

ಸನಾತನ ಶಿವಧರ್ಮಗಳೆನಿಸಿಕೊಂಡಿರುತ್ತವೆ. ರುದ್ರನು ಹೇಗೋ ಹಾಗೆ ವೀರಭದ್ರನೂ ಇತರರೂ ಗುರುಗಳೆಂದು ತಿಳಿಯಲ್ಪಡುತ್ತಾರೆ. ಗುರುಗಳಿಂದ ಹುಟ್ಟಿದವರೇ ಗುರುಗಳು, ಎಂಬುದಾಗಿ ಮೂರುಲೋಕದಲ್ಲಿ ಪ್ರಖ್ಯಾತರಾಗಿದ್ದಾರೆ. ಲಿಂಗದ ಮಹಿಮೆಯನ್ನು ಯಥಾಸ್ಥಿತವಾಗಿ ನಂದೀಶ್ವರನು ತಿಳಿದಿದ್ದಾನೆ. ಹಾಗೆಯೇ ಭಗವಂತನಾದ ಷಣ್ಮುಖನು ತಿಳಿದಿದ್ದಾನೆ. ಉಳಿದವರು ಹೆಸರನ್ನು ಮಾತ್ರ ಧರಿಸಿದ ಗುರುಗಳು. ಶಿಲಾದ ಋಷಿಯ ಮಗನಾದ ನಂದೀಶ್ವರನಿಂದ ಯಥಾಸ್ಥಿತವಾಗಿ ಹೇಳಲ್ಪಟ್ಟವುಗಳು; ಶಿವಧರ್ಮಗಳೆಂದು ಹೆಸರಾದವುಗಳು. ಲಿಂಗಧಾರಕರು ವಿಚಿತ್ರ ಲಕ್ಷಣಗಳುಳ್ಳವರು. ಹೆಣದಮೇಲೆ ಲಿಂಗವನ್ನು ಈ ಪುರಾತನರು (ಲಿಂಗಧಾರಕರು) ಧರಿಸುತ್ತಾರೆ. ಲಿಂಗದೊಡನೆ ಸಾಯುವರು. ಲಿಂಗದೊಡನೆ ಬದುಕುವುದು ಈ ಶಿವಧರ್ಮದ ಲಕ್ಷಣಗಳು, ಶಿಲಾದ ಪುತ್ರನಾದ ನಂದೀಶ್ವರನಿಂದ ಪ್ರತಿಷ್ಠಾಪಿಸಲ್ಪಟ್ಟವುಗಳಾಗಿವೆ. ಷಣ್ಮುಖನಿಂದ ಪಾಶುಪತ ಶ್ರೇಷ್ಠ ಧರ್ಮವು ಪ್ರತಿಪಾದಿಸಲ್ಪಟ್ಟದಾಗಿದೆ. ಶುದ್ಧ ಪಂಚಾಕ್ಷರೀ ವಿದ್ಯೆಯು ಪ್ರಸಾದಿ (ಪ್ರಸನ್ನತೆಯುಳ್ಳದ್ದು) ಆಗಿದೆ. ಆಮೇಲೆ ಅದರಂತೆಯೇ ಷಡಕ್ಷರೀ ವಿದ್ಯೆಯು ಪ್ರಸಾದದ ದೀಪವಾಗಿದೆ. ಷಣ್ಮುಖನಿಂದ ಅಗಸ್ತ್ಯಋಷಿಗೆ ಚೆನ್ನಾಗಿ ಬೋಧಿಸಲ್ಪಟ್ಟಿದೆ. ಆಮೇಲೆ ಬಹುವಿಧವಾದ ಆಚಾರ್ಯಭೇದದಿಂದ ಬಹಳ ವಿಧವಾದ ಆಗಮಗಳು ಹುಟ್ಟಿದವು. ಬಹಳ ಮಾತುಹೇಳಿ ಏನು ಪ್ರಯೋಜನ ? 'ಶಿವ' ಎಂಬೆರಡಕ್ಷರಗಳು ಮುಖ್ಯ. ಯಾರು ಈ ಎರಡಕ್ಷರಗಳನ್ನು ನಿತ್ಯ ಉಚ್ಚರಿಸುತ್ತಾರೋ ಅವರು ರುದ್ರರು; ಇದಕ್ಕೆ ಸಂಶಯವಿಲ್ಲ. ಈ ಸದ್ಧರ್ಮದವರ ಮಾರ್ಗವನ್ನು ಯಾರು ಅಂಗೀಕರಿಸಿ ನಡೆಯುವರೋ ಅವರು ಶಿವರೂಪಿಗಳು; ಅವರು ಮನುಷ್ಯರಿಗೆ ತಗಲಿದ ಪಾಪವನ್ನು ಹೋಗಲಾಡಿಸುವವರಾಗಿ 'ವೀರಮಾಹೇಶ್ವರರು' ಎಂದು ತಿಳಿಯಲ್ಪಡುತ್ತಾರೆ. ತಾತ್ಕಾಲಿಕ (ಒದಗಿದ ಸಂದರ್ಭ)ವಾಗಲಿ, ಬಳಿವಿಡಿದಾಗಲಿ, ಶ್ರದ್ಧೆಯಿಂದಾಗಲಿ, ಮನಬಂದಾಗಲಾಗಲಿ, ಯಾರು ಶಿವಭಕ್ತಿಯನ್ನು ಮಾಡುವರೋ ಅವರು ಸದ್ಗತಿ (ಸದ್ಧರ್ಮಗತಿ) ಯನ್ನು ಹೊಂದುತ್ತಾರೆ. ಹೀಗ ಹೇಳಲ್ಪಟ್ಟ ಅಂಶಗಳಿಂದ ತಿಳಿಯಬೇಕಾದುದೇನೆಂದರೆ—

ಲಿಂಗಧಾರಿಗಳ ವಿಷಯವನ್ನು ತಿಳಿಯಲು ಇದೊಂದು ಮುಖ್ಯಭಾಗ ಎಂಬುದು. ಈ ಭಾಗದಲ್ಲಿ ಹೇಳಲ್ಪಟ್ಟ ವಿಷಯಗಳನ್ನು ಚೆನ್ನಾಗಿ ಗಮನಿಸಬೇಕಾಗಿದೆ. ಇದರಲ್ಲಿ ಕೈಲಾಸದ ಶಿವನ ಸುದ್ದಿಯೂ ಇದೆ. ಲಿಂಗಾರ್ಚನೆಯನ್ನು ಮಾಡುವುದನ್ನು ಸೂಚಿಸುವ ೨೮ ಸಂಸ್ಕಾರಗಳು ಕೈಲಾಸದ ಶಿವನಿಂದ ಹೇಳಲ್ಪಟ್ಟವುಗಳು. ವೀರಭದ್ರನ ವಂಶದವರು ಲಿಂಗಾರ್ಚನೆ ಮಾಡುವವರಾಗಿದ್ದರು. ದೇವತೆಗಳು ವೀರಭದ್ರನ ಅಂಶದವರೇ ಗುರುಗಳೆಂದು ನಂಬಿದ್ದರು, ಎಂಬ ಹೇಳಿಕೆಯಿಂದ ಕೈಲಾಸವಲ್ಲಿನ ಶಿವನು ಹೇಳಿದ ಲಿಂಗಾರ್ಚನಾ ಸಂಬಂಧದ ೨೮ ಸಂಸ್ಕಾರಗಳು ದೇಹದಲ್ಲಿ ಲಿಂಗಧರಿಸಿದ ವೀರಶೈವ ಸಂಸ್ಕಾರಗಳೇ ಎಂದು ತಿಳಿಯಬಹುದಾಗಿದೆ. ಇವೇ ಸನಾತನ ಶಿವಧರ್ಮಗಳಾಗಿವೆ. ಬದುಕಿದ್ದಾಗಲೂ ದೇಹದಲ್ಲಿ ಲಿಂಗ, ಸತ್ತಾಗಲೂ ದೇಹದ ಮೇಲೆ ಲಿಂಗ

ಎಂಬುದಾಗಿ ಮೇಲೆ ಹೇಳಿರುವುದು, ವೀರಶೈವರ ಲಿಂಗಧಾರಣ ಸಂಸ್ಕಾರವನ್ನೇ ಹೇಳುತ್ತದೆ. ಈಗಲೂ ವೀರಶೈವರಲ್ಲಿ ಈ ಸಂಸ್ಕಾರವೇ ರೂಢಿಯಲ್ಲಿದೆ. ಕೆರೆಯ ಪದ್ಮರಸರು ದೀಕ್ಷಾಬೋಧೆ ಎಂಬ ತಮ್ಮ ಗ್ರಂಥದಲ್ಲಿ 'ಶಿವಧರ್ಮ' 'ಶಿವರಹಸ್ಯ' ಎಂಬೆರಡು ಗ್ರಂಥಗಳನ್ನೇ ಬಹಳ ಕಡೆಯ ಪ್ರಮಾಣವಾಗಿ ತೆಗೆದುಕೊಂಡಿರುವುದರಿಂದ ಶಿವಧರ್ಮ ಗ್ರಂಥದಲ್ಲಿನ ವಿಷಯಗಳೇ ಇಲ್ಲಿ ಕೈಲಾಸ ಶಿವನು ಹೇಳಿದ ಸನಾತನ ಶಿವಧರ್ಮಗಳೆಂದು ಊಹಿಸಬಹುದಾಗಿದೆ. "ಕೈಲಾಸದ ಶಿವನ ಹಾಗೆಯೇ ಕೈಲಾಸದಲ್ಲಿನ ವೀರಭದ್ರನೂ ಗುರುವು. ಹಾಗೆಯೇ ಗುರುಗಳೆಂದು ತಿಳಿಯಲ್ಪಡುತ್ತಾರೆ. 'ಗುರುವಿನಿಂದ ಹುಟ್ಟಿದವರೇ' ಎಂಬ ಅಭಿಪ್ರಾಯದಿಂದ ಕೈಲಾಸದ ಶಿವನು ಗುರುವಾಗಿದ್ದನು, ಎಂದು ತಿಳಿಯಬಹುದಾಗಿದೆ. 'ಆದಿ ಗುರು ಶಂಭುಲಿಂಗ' ಎಂದು ನಿಜಗುಣರು ಹೇಳಿರುವುದು ಇದೇ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. ಅನೇಕ ವೀರಶೈವ ಗ್ರಂಥಗಳು ಕೈಲಾಸದ ಶಿವನು ಗುರುವೆಂದು ಸಾರುತ್ತವೆ. 'ಲಿಂಗದ' ಮಹಿಮೆಯನ್ನು ಕೈಲಾಸ ನಂದಿಯೊಬ್ಬನೇ ನಿಜವಾದ ಸ್ವರೂಪವಲ್ಲಿ ತಿಳಿದಿರುತ್ತಾನೆ. ಇದರಂತೆ ಶಿವನ ಮಗನಾದ ಷಣ್ಮುಖನೂ ತಿಳಿದಿದ್ದಾನೆ. ಇವರಿಬ್ಬರನ್ನೂ ನಿಜಗುರುಗಳೆಂದು ತಿಳಿಯಬೇಕು. ಉಳಿದವರೆಲ್ಲರೂ ಕೈಲಾಸದಲ್ಲಿ ಹೆಸರುಮಾತ್ರಕ್ಕೆ ಗುರುಗಳು. ಎಂಬ ಮೇಲಿನ ಅಭಿಪ್ರಾಯದಿಂದ ಕೈಲಾಸದಲ್ಲಿ ನಂದೀಶ್ವರನು ಗುರುವಾಗಿದ್ದನೆಂದು ಸ್ಪಷ್ಟಪಡುತ್ತದೆ. ವೀರಶೈವರಲ್ಲಿ ಅನೇಕರು ಪ್ರಾಚೀನ ಕಾಲದಲ್ಲಿ 'ನಂದೀಶ್ವರನೇ ಗುರು' ಎಂದು ಹೇಳುವುದಕ್ಕೆ ಈ ಅಭಿಪ್ರಾಯವು ಆಧಾರವಾಗಿದೆ. ಶಿಲಾದ ಋಷಿಯ ಮಗನಾದ ನಂದೀಶ್ವರನಿಂದ ಹೇಳಲ್ಪಟ್ಟ ಯಥಾಸ್ಥಿತವಾದ ಧರ್ಮಗಳು ಶಿವಧರ್ಮಗಳಾಗಿವೆ, ಎಂಬ ಹೇಳಿಕೆಯಿಂದ ವ್ಯಾಸಮಹರ್ಷಿಯ ಸಮಕಾಲೀನನಾದ ಶೈಲಾದ ನಂದೀಶ್ವರನು ಹೇಳಿದ ಧರ್ಮಗಳೂ ಶಿವಧರ್ಮಗಳಾಗಿವೆ. ಲಿಂಗಧಾರಕರು ವಿಚಿತ್ರರು. ಹಣೆದಮೇಲೆ ಲಿಂಗವು ಈ ಪುರಾತನರಿಂದ ಧರಿಸಲ್ಪಡುತ್ತದೆ. ಲಿಂಗದೊಡನೆ ಬದುಕಿ ಲಿಂಗದೊಡನೆ ಲಯವಾಗುತ್ತದೆ. ಎಂಬ ಹೇಳಿಕೆಯಿಂದ ಶೈಲಾದನಾದ ನಂದೀಶ್ವರನಿಂದಲೂ ಪುನಃ ಲಿಂಗಾಧಾರಕ ಧರ್ಮವು ಪ್ರತಿಷ್ಠಿತವಾಗಿದೆ ಎಂದು ತಿಳಿಯಲವಕಾಶವಾಗಿದೆ. ಇಲ್ಲಿ ದೇಹದ ಮೇಲೆ ಲಿಂಗಧರಿಸುವವರು ಪುರಾತನರು ಎಂದು ಹೇಳಲ್ಪಟ್ಟಿದೆ. ಬಸವೇಶ್ವರನೇ ಮೊದಲಾದವರು ಪುರಾತನರೆಂದು ವೀರಶೈವ ಗ್ರಂಥಗಳಲ್ಲಿ ಸಾರುತ್ತವೆ. 'ಬಸವಪುರಾತನರ್...' ಎಂದು ಮೊಗ್ಗೆಯ ಮಾಯಿದೇವ ಹೇಳಿದ್ದಾನೆ. ಬಸವೇಶ್ವರನು ನಂದೀಶ್ವರನ ಅವತಾರವೆಂದು ಕರೆಯುವುದಕ್ಕೆ ಶ್ರೀ ಶೈಲಾದನಾದ ನಂದೀಶ್ವರನನ್ನೇ ಮೂಲವಾಗಿಟ್ಟುಕೊಂಡರೆಂದು ತಿಳಿಯಬೇಕಾಗಿದೆ. ಷಣ್ಮುಖನಿಂದ ಪ್ರತಿಪಾದಿಸಲ್ಪಟ್ಟ ಧರ್ಮವು ಪಾಶುಪತ ಶ್ರೇಷ್ಠವೆಂದು ಎನಿಸಿದೆ. ಪಂಚಾಕ್ಷರೀ ವಿದ್ಯೆಯು ಷಣ್ಮುಖನಿಂದಲೇ ಅಗಸ್ತ್ಯನಿಗೆ ಬೋಧಿಸಲ್ಪಟ್ಟುದು. ಪ್ರಸಾದಿ, (ಪ್ರಸಾದರೂಪವಾದುದು ಆಗಿದೆ. ಜೀವನು ಶಿವನಾಗಲಿ ಎಂಬರ್ಥವುಳ್ಳುದು 'ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರವು. ಜೀವನು ಶಿವನಾಗುವುದರಿಂದ ಪ್ರಾಣ ಪ್ರಸಾದವಾಯಿತು.) ಮುಂದೆ ಷಡಕ್ಷರೀಮಂತ್ರವು 'ಓಂ ನಮಃ ಶಿವಾಯ';

ಇಲ್ಲಿ ಸೋಹಂ ಎಂಬುದರ ಬದಲಾಗಿ, ಓಂ ಇರುವುದರಿಂದ ಮೇಲೆ ಕಂಡ ಪ್ರಾಣ ಪ್ರಸಾದದ ಜ್ಞಾನವಾಗಿ ಶಿವನೇ ನಾನು ಎಂಬ ಜ್ಞಾನ ಬರುವುದರಿಂದ ಅದು ಪ್ರಾಣ ಪ್ರಸಾದದ ಜ್ಯೋತಿಯು; ಈ ಎರಡು ಮಂತ್ರಗಳ ವಿಚಾರವು ಷಣ್ಮುಖನಿಂದ ಅಗಸ್ತ್ಯರಿಗೆ ಬೋಧೆಯಾದಂತಾಗಿದೆ. 'ಶಿವ' ಎಂಬೆರಡಕ್ಷರಗಳನ್ನು ವಾಚ್ಯರೂಪವಾಗಿ ಉಚ್ಚರಿಸಿದವರು ರುದ್ರರು ಎಂದು ಮೇಲಿನ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವುದು ಶಿವಭಕ್ತಿಯುಳ್ಳ 'ವೀರಮಾಹೇಶ್ವರರಿಗಾಗಿ' ಎಂದು ತಿಳಿಯಬೇಕು. ಇವರನ್ನನುಸರಿಸಿ ಭಕ್ತಿಯಿಂದ ನಡೆಯುವ ಮನುಷ್ಯರು ಸದ್ಧರ್ಮಗರಿಯನ್ನು ಹೊಂದುತ್ತಾರೆಂದು ಮೇಲೆ ಹೇಳಲ್ಪಟ್ಟಿದೆ. ಈ ಸಂಗತಿಗಳನ್ನೆಲ್ಲ ಯೋಚಿಸಿದರೆ, ಈಗಿನ ವೀರಶೈವರಲ್ಲಿನ ಸಂಸ್ಕಾರಗಳು ಈ ಮುಖ್ಯ ಭಾಗದಲ್ಲಿ ಹೇಳಲ್ಪಟ್ಟಿವೆ ಎಂದು ತಿಳಿಯಲನುಮಾನವೇನೂ ಇಲ್ಲ. 'ವೀರಮಾಹೇಶ್ವರರು' ಎಂದು ವೀರಶೈವರಿಗೆ ಕರೆದಿರುವುದು ಗ್ರಂಥಗಳಿಂದ್ಲ ಕಂಡುಬರುತ್ತದೆ. ಈ ಹಿಂದೆ ಮುಖ್ಯ ವಿಷಯಗಳು ಎಂಬುದಾಗಿ ಗೊತ್ತುಮಾಡಲ್ಪಟ್ಟ ಪಾಶುಪತಾಚಾರಗಳು ವೀರಶೈವರಲ್ಲ. ಈಗಿನ ವೀರಶೈವರ ಆಚರಣೆಯಂತೆ ನಡೆಯುವ ಶಿವಧರ್ಮ ಮಾರ್ಗದವರು ಅತ್ಯಂತ ಪ್ರಾಚೀನಕಾಲದಲ್ಲೂ ಇದ್ದರೆಂಬುದನು, ನಿರ್ವಿವಾದವಾಗಿ ಅಂಗೀಕರಿಸಬೇಕು. (ಮೇಲೆ ಧಾರ್ಮಿಕ ವಿಷಯಗಳ ಹೋಲಿಕೆಯ ವಿಮರ್ಶೆಗಾಗಿ ಮೊದಲು ಹೇಳಿದ ಅಂಶಗಳನ್ನು ಪುನಃ ವಿವರಿಸಿ ಇಲ್ಲಿ ತೋರಿಸಿದೆ.)

ಈ ಹಿಂದೆ ಪಾಶುಪತ ಧರ್ಮವನ್ನು ನಡೆಸುವವರಿಗೆ ಪಶುಪತರು, ಪಶುಪತ ಸಿದ್ಧರು ಎಂದು ಕರೆದಿದ್ದಾರೆ; ಈ ಪಶುಪತಸಿದ್ಧರು ರುದ್ರಲೋಕಕ್ಕೆ ಹೋಗುತ್ತಾರೆ. ಎಂದು ಹೇಳಿದರೆ ಇದೇ ಧರ್ಮದ ಪಾಶುಪತ ಶ್ರೇಷ್ಠರು ಇವರು ರುದ್ರರೇ (ರುದ್ರ ಸ್ವರೂಪರೇ) ಎಂದು ಹೇಳಲ್ಪಟ್ಟಿರುವುದರಿಂದ ಪಾಶುಪತರಿಗೂ ಪಾಶುಪತ ಶ್ರೇಷ್ಠರಿಗೂ ಬಹಳ ವ್ಯತ್ಯಾಸವಿದೆ, ಎಂದು ಸ್ಪಷ್ಟವಾಗಿ ತಿಳಿದುಕೊಳ್ಳುವಂತಾಗಿದೆ. ಈ ಸ್ಕಂದ ಪಾಲಿಕರಾದ ಪಾಶುಪತ ಶ್ರೇಷ್ಠರನ್ನೇ ತನ್ನ ವಚನದಲ್ಲಿ ಹೇಳಿದ್ದಾನೆಯೋ ಎಂಬುದನ್ನು ಇನ್ನೂ ಪರಿಶೋಧಿಸಿ ನೋಡಬೇಕಾಗಿದೆ. ಅತಿ ಪ್ರಾಚೀನ ಕಾಲದಲ್ಲಿ ಪಾಶುಪತರಲ್ಲಿ ಅನೇಕ ಭೇದಗಳಿದ್ದವೆಂದು ಮೇಲಿನ ಅಂಶಗಳಿಂದ ನಿರ್ವಿವಾದವಾಗಿ ನಿರ್ಣಯಿಸಲಿಕ್ಕೆ ಬರುತ್ತದೆ. ಪಾಶುಪತ ಎಂಬ ಹೆಸರನ್ನು ಕಂಡ ಮಾತ್ರದಿಂದಲೇ ಅವರು ವೀರಶೈವರೆಂದು ಎಲ್ಲ ಕಡೆಯಲ್ಲಿಯೂ ತಿಳಿಯಲಾಗುವುದಿಲ್ಲ.

ಇಲ್ಲಿ ನಂದೀಶ್ವರನೆಂಬುವನು ಶಿವನ ಸಭೆಯಲ್ಲಿ ಇದ್ದವನು ಮತ್ತು ವ್ಯಾಸ ಋಷಿಯ ಸಮಕಾಲೀನನಾದ ಶಿಲಾದನ ಮಗ ನಂದೀಶ್ವರನೆಂಬುವನೊಬ್ಬನು ಇವರು ಬೇರೆ ಬೇರೆ ಎಂದು ಗುರ್ತಿಸಲ್ಪಟ್ಟಿದೆ. ಆದರೆ ಎಲ್ಲಾ ಶ್ಲೋಕಗಳ ಅಭಿಪ್ರಾಯದಿಂದ ಒಬ್ಬನೇ ಎಂಬುದೂ ಧ್ವನಿತವಾಗುತ್ತದೆ. ಒಬ್ಬನೇ ಎಂದು ತಿಳಿಯುವುದಾದರೆ ಶಿವ, ನಂದೀಶ್ವರ, ಷಣ್ಮುಖ, ಅಗಸ್ತ್ಯ, ವೀರಭದ್ರ, ವ್ಯಾಸ ಋಷಿ ಇವರೆಲ್ಲರೂ ಒಂದೇ ಕಾಲ

ದವರಾಗುತ್ತಾರೆ. ಕೈಲಾಸದ ಶಿವನ ತರುವಾಯ ಸಾವಿರಾರು ವರ್ಷಗಳಮೇಲೆ ವ್ಯಾಸ ಋಷಿಯು ಕಾಲವಿದ್ದಿತೆಂದು ಐತಿಹಾಸಿಕವಾಗಿ ತಿಳಿಯಲವಕಾಶವಾಗಿದೆ. ಹಾಗಲ್ಲದೆ ಇವರೆಲ್ಲರೂ ಒಂದೇ ಕಾಲದವರೆಂದು ತಿಳಿಯುವುದಾದರೆ ಸ್ಕಾಂದ ಪುರಾಣದೊಳಗಿನ ಈ ಕೇದಾರ ಖಂಡವು ಐತಿಹಾಸಿಕಕ್ಕೆ ದೂರವಾಗಿದೆ, ಎಂದು ಎಲ್ಲರೂ ಚನ್ನಾಗಿ ತಿಳಿದಿರ ಬೇಕಾಗಿದೆ.

ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿನ ಲಿಂಗಧಾರಕರ ಸಂಸ್ಕೃತಿಯು ವ್ಯಾಸಋಷಿಗಳ ಕಾಲದ ಕಾಶೀಪಟ್ಟಣದ ಲಿಂಗಧಾರಕರ ಸಂಸ್ಕೃತಿಗಿಂತ ಪ್ರಾಚೀನ ವಾದುದು ಎಂಬುದಕ್ಕೆ ಶಿವನ ಪಂಚಮುಖ ವಿಗ್ರಹವು ಲಿಂಗಧಾರಣೆಯೊಡನೆ ಕಾಶೀ ಪ್ರಾಂತದಲ್ಲಿ ಸಿಕ್ಕಿರುವುದೇ ಸಾಕ್ಷಿಯಾಗಿದೆ. ಕೈಲಾಸದ ಶಿವನ ಲಿಂಗಧಾರಣೆಯ ಸಂಸ್ಕಾರವೂ ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿ ನೆಲಸಿದ್ದಿತೆಂದು ತಿಳಿಯಲನು ಮಾನವೇನೂ ಇಲ್ಲ.

ಮುಖ್ಯ ಭಾಗವೆಂದು ಗುರ್ತಿಸಿದ ಮೇಲಿನ ಶ್ಲೋಕಗಳಲ್ಲಿ ರುದ್ರ, ಶಂಕರ ಎಂಬ ಎರಡು ಹೆಸರುಗಳಿವೆ; ಇವು ಒಬ್ಬ ವ್ಯಕ್ತಿಗೆ ಸಂಬಂಧಿಸಿದವುಗಳಾಗಿರದೆ, ಕಾಲಾಂತರ ದಲ್ಲಿ ಅವತರಿಸಿದ ಭಿನ್ನ ವ್ಯಕ್ತಿಗಳಿಗೆ ಸಂಬಂಧಿಸಿದವುಗಳಾಗಿರುತ್ತವೆ, ಎಂಬುದನ್ನು ಚಾರಿತ್ರಿಕವಾಗಿ ಇನ್ನೂ ಶೋಧಿಸಬೇಕಾಗಿದೆ. ನಂದೀಶ್ವರನು ಆಚರಿಸಿದ ಧರ್ಮವು ಶಿವ ಧರ್ಮವೆಂದೂ, ಷಣ್ಮುಖರು ಪ್ರತಿಪಾದಿಸಿದ ಧರ್ಮವು ಶ್ರೇಷ್ಠವಾದ ಪಶುಪತ ವೆಂದೂ ಮೇಲಿನ ಶ್ಲೋಕಗಳಿಂದ ಧ್ವನಿತವಾಗುತ್ತದೆ. ಇವೆರಡಕ್ಕೂ ಭೇದವೇನೆಂಬು ದನ್ನು ಇನ್ನೂ ಶೋಧಿಸಬೇಕಾಗಿದೆ. ಲಿಂಗದೊಡನೆ ಪಂಚತ್ವ ಲಿಂಗದೊಡನೆ ಜೀವನ ಎಂಬುದಾಗಿ ನಂದೀಶ್ವರನಿಂದ ಹೇಳಲ್ಪಟ್ಟ ಶಿವ ಧರ್ಮವೇ ಈಗಿನ ವೀರಶೈವರಲ್ಲಿ ಪ್ರಚಲಿತವಾಗಿರುವುದೆಂದು ತಿಳಿಯಲನುಮಾನವಿಲ್ಲ. ಈ ಸನಾತನ ಶಿವಧರ್ಮವೂ, ಹರಪ್ಪ ಮಹೆಂಜೋದಾರೋ ಪಟ್ಟಣಗಳ ಲಿಂಗಧಾರಿಗಳ ಸಂಸ್ಕೃತಿಯಲ್ಲಿ ಸೇರಿದ್ದುದೆಂದು ತಿಳಿಯಲಿಕ್ಕೆ ಯಾರಿಗೂ ಅನುಮಾನವೂ ಬರಲಾರದು. ಆಚಾರ್ಯಾಭೇದದಿಂದ ಆಗಮ ಗಳ ಭೇದವೆಂಬ ಹೇಳಿಕೆಯಿಲ್ಲ. ಈ ಶಿವ ಧರ್ಮವೂ ಶ್ರೇಷ್ಠ ಪಶುಪತ ಧರ್ಮವೂ ಬೇರೆ ಬೇರೆಯಾಗಿ ಸುರಿದವುಗಳೇ ಆಗಿರಬೇಕು. ಈ ವಿಷಯವನ್ನು ಇನ್ನೂ ಶೋಧ ಮಾಡಬೇಕಾಗಿಯೇ ಇದೆ. ಪೂರ್ವಿಕ ಮಹನೀಯರು ಹೇಳಿದ ಸಂಗತಿಗಳನ್ನೂ ಆಯಾಯ ಕಾಲದಲ್ಲಿನ ಆಚರಣೆಯ ದೃಷ್ಟಿಯಿಂದ ಪರಿಶೋಧಿಸಬೇಕಲ್ಲದೆ ಈಗಿನ ಆಚರಣೆಗಳನ್ನು ಸೇರಿಸಿಕೊಂಡು ಪರಿಶೋಧಿಸುವುದು ಸರಿಯಲ್ಲ.

**ವ್ಯಾಸ ಋಷಿಗಳು ಕೇದಾರಖಂಡದಲ್ಲಿ ಹೇಳಿದ ಲಿಂಗಧಾರಿಗಳ ವಿಷಯ**

"ಪೀಠಿಕಾಲಿಂಗರೂಪಂಸ್ಯಾತ್ ಲಿಂಗರೂಪೀ ಮಹೇಶ್ವರಃ ।
ತಸ್ಮಾಲ್ಲಿಂಗಾರ್ಚನಂ ಶ್ರೇಷ್ಠಂ ಸರ್ವೇಷಾಮಪಿ ವೈದ್ವಿಜಾಃ ॥
ಬ್ರಹ್ಮಾಮಣಿಮಯಂಲಿಂಗಂ ಪೂಜಯತ್ಯನಿಶಂಶುಭಂ ।

ಇಂದ್ರೋರತ್ನಮಯಂ ಲಿಂಗಂ ಚಂದ್ರೋಮುಕ್ತಾಮಯಂ ಕಥಾ ॥
ಭಾನುಸ್ತಾಮ್ರಮಯಂ ಲಿಂಗಂ ಪೂಜಯತ್ಯನಿಶಂಶುಭಂ ।
ಶಾರ್ಮಂಲಿಂಗಂ ಕುಬೇರಶ್ಚ ಪಾಶೀಚಾಲಕ್ತಮೇವಚ ।
ಯತೋನೀಲಮಯಂ ಲಿಂಗಂ ರಾಜಕಂ ನೈರುಕಸ್ತಥಾ
ಕಾಶ್ಮೀರಂಪವನೋ ಲಿಂಗ ಮರ್ಚಯಕ್ಯನಿಶಂ ವಿಭೋಃ ।
ಏವಂಕೇಲಿಂಗಿತಾಃ ಸರ್ವೇ ಲೋಕಪಾಲಾಸವಾಸವಾಃ ।
ತಥಾ ಸರ್ವೇಪಿಪಾಕಾಲೇ ಗಂಧರ್ವಾಃ ಕಿನ್ನರೈಸ್ಸಹ ।
ದೈತ್ಯಾವಾಂ ವೈಷ್ಟವಾಶೀಃ ಕೇಚಿತ್ ಪ್ರಹ್ಲಾದಪ್ರಮುಖಾದ್ವಿಜಾಃ ।
ಏಕಲ್ಲಿಂಗಂ ತ್ವಯಾವಿಷ್ಣೋ ಧೃತಂ ವೈಪಿಂಡಿರೂಪಿಣಾ
ಮಹಾವಿಷ್ಣು ಸ್ವರೂಪೇಣ ಘಾತಿಕಾ ಮಧುಕೈಟಭೌ

(ಅ ೮, ಪುಟ ೧೨-೧೩-೧೪)

— ಲಿಂಗಾಪೀಠವು ವಿಷ್ಣುರೂಪಃ ಲಿಂಗ ಬಾಣಾವು ಶಿವರೂಪಃ ಆದುದರಿಂದ ಎಲ್ಲ ಜನರಿಗೂ ಲಿಂಗಪೂಜೆ ಮಾಡವುದು ಶ್ರೇಷ್ಠವಾದ ಧರ್ಮವಾಗಿದೆ. ಬ್ರಹ್ಮನು ಮಣಿಯಿಂದ ಮಾಡಿದ ಲಿಂಗವನ್ನು ಯಾವಾಗಲೂ ಪೂಜಿಸುತ್ತಾನೆ. ಇಂದ್ರನು ರತ್ನದಿಂದ ಮಾಡಿದ ಲಿಂಗವನ್ನೂ, ಚಂದ್ರನು ಮುತ್ತಿನಿಂದ ಮಾಡಿದ ಲಿಂಗವನ್ನೂ, ಸೂರ್ಯನು ತಾಮ್ರದಿಂದ ಮಾಡಿದ ಲಿಂಗವನ್ನೂ, ಕುಬೇರನು ಬಂಗಾರದ ಲಿಂಗವನ್ನೂ, ವರುಣನು ಅರಗಿನಿಂದ ಮಾಡಿದ ಲಿಂಗವನ್ನೂ, ಯಮನು ನೀಲದಿಂದ ಮಾಡಿದ ಲಿಂಗವನ್ನೂ, ನಿರುತಿಯು ಬೆಳ್ಳಿಯಿಂದ ಮಾಡಿದ ಲಿಂಗವನ್ನೂ, ವಾಯುವು ಕಾಶ್ಮೀರ ಲಿಂಗವನ್ನೂ ಯಾವಾಗಲೂ ಪೂಜಿಸುತ್ತಾರೆ. ಇವಲ್ಲದೆ ಪಾತಾಳಲೋಕದಲ್ಲಿರುವ ಗಂಧರ್ವರು ಕಿನ್ನರರು ಕೆಲವರು ವಿಷ್ಣುಭಕ್ತರಾದ ದೈತ್ಯರು (ಪ್ರಹ್ಲಾದನೇ ಮೊದಲಾದವರು) ಲಿಂಗ ಪೂಜೆ ಮಾಡುವವರಾಗಿದ್ದಾರೆ. ಎಲೈ ವಿಷ್ಣುವೇ, ನೀನೂ ಕೂಡ ಪಿಂಡೀಭೂತವಾದ (ಸಾಕಾರ ಸ್ಥೂಲರೂಪ) ಲಿಂಗವನ್ನು ಧರಿಸಿರುವೆ.

ಹೀಗೆ ವ್ಯಾಸರು ಹೇಳಿರುವುದನ್ನು ನೋಡಿದರೆ, ಅತಿ ಪ್ರಾಚೀನಕಾಲದಲ್ಲಿ ಎಲ್ಲರೂ ಲಿಂಗಧಾರಿಗಳೇ ಇದ್ದರು, ಎಂದು ವ್ಯಕ್ತವಾಗುತ್ತದೆ. (ಈ ಮಾತು ನಿಜವೇ, ಭೂಮ್ಯಾದಿ ಆರು ಭೂತಗಳು ಗೋಳಾಕಾರ;ಸೂರ್ಯಚಂದ್ರಾದಿ ನಕ್ಷತ್ರಗಳು ಗೋಳಾಕಾರ ಭತ್ತ, ಜೋಳ ಆದಿಯಾಗಿ ಧಾನ್ಯಗಳು ಗೋಳಾಕಾರ ಮನುಷ್ಯಾದಿ ಪ್ರಾಣಿಗಳೆಲ್ಲ ತಾಯಿಯ ಗರ್ಭದಲ್ಲಿರುವಾಗ ಆ ಚೀಲವು ಗೋಳಾಕಾರ; ಗೋಳಾಕಾರವೇ ಲಿಂಗಾಕಾರ ಹೀಗೆ ಎಲ್ಲವೂ ಲಿಂಗಾಕಾರವಾಗಿರುವಾಗ ನಿರಾಕಾರ ಪರವಸ್ತುವು ಲಿಂಗರೂಪವೆಂದೂ, ಆ ಲಿಂಗರೂಪನೇಕಾರನೆಂದು ತಿಳಿದು ಲಿಂಗವನ್ನು ಧರಿಸಿ ಪೂಜಿಸುವುದು ಮನುಷ್ಯನಿಗೆ ತಪ್ಪಿನ ಕೆಲವೇನಲ್ಲ) ವಿಷ್ಣುವು ಲಿಂಗಧಾರಣೆ ಮಾಡಿದ್ದನೆಂಬುದಕ್ಕೆ ಪಂಡರಾಪುರದ ಪಾಂಡುರಂಗನ ಪ್ರತಿಮೆಯಿದೆ. ಋಷಿಗಳೇ ಮೊದಲಾದವರು ಲಿಂಗಧಾರಣೆ ಮಾಡಿದ

ಪ್ರತಿಮೆಗಳು ಬೇಕಾದಷ್ಟಿವೆ. ಇದರಂತೆ ಲಿಂಗಧಾರೀ ದೇವತೆಗಳ ಪ್ರತಿಮೆಗಳು ಎಲ್ಲೆಲ್ಲಿವೆ ಎಂಬುದನ್ನು ಇನ್ನೂ ಶೋಧಿಸಬೇಕಾಗಿದೆ. ಇದಕ್ಕಾಗಿ ಕಾಶೀ ಪಟ್ಟಣ ಮತ್ತು ಪುರಾತನ ಇವುಗಳನ್ನು ಚನ್ನಾಗಿ ಶೋಧಿಸಬೇಕಾಗಿದೆ. ಸಮುದ್ರದ ತಳವನ್ನು ಹಿಮಾಲಯ ಪರ್ವತದ ಮೇಲ್ಭಾಗವನ್ನಾಗಿ ಮಾಡಿದ ಮಹಾಪ್ರಳಯವು (ದೊಡ್ಡ ಭೂಕಂಪ=Grate Earth-Quake) ಆಗದೆ ಇದ್ದಿದ್ದರೆ ಈ ದಿಸೆಯಲ್ಲಿ ವಿಪುಲವಾದ ಪ್ರಮಾಣಗಳು ಚಾರಿತ್ರಿಕ ಸಂಗತಿಗಳೂ ನಮಗೆ ದೊರಕುತ್ತಿದ್ದವು. ಈ ಮಹಾಪ್ರಳಯಕ್ಕೊಳಗಾದ ಸಿಂಧೂ ದೇಶದ ಬುಡದಲ್ಲಿದ್ದ ಹರಪ್ಪ ಮಹೆಂಜೋದಾರೋ ಪಟ್ಟಣಗಳಲ್ಲಿನ ನಗರದ ನಿರ್ಮಾಣವು ಸಂಶೋಧನವಾಗಿದ್ದಿತೆಂದು ಶ್ರೀ ಮಾರ್ಷಲ್ ಅವರೇ ಅಭಿಪ್ರಾಯಪಟ್ಟಿದ್ದಾರೆ (ಶ್ರೀ ಮಾರ್ಷಲ್ ಅವರು ಆರ್ಯ ಸಂಸ್ಕೃತಿಗಿಂತ ಮುಂಚೆ ದ್ರಾವಿಡ ಸಂಸ್ಕೃತಿ ಇದ್ದು, ಆ ಸಂಸ್ಕೃತಿಯಲ್ಲಿ ಲಿಂಗಧಾರಿಗಳಿದ್ದರೆಂದು ಅಭಿಪ್ರಾಯಪಡುತ್ತಾರೆ) ಮೇಲೆ ಹೇಳಿದಂತೆ ಕಠೋಪನಿಷತ್ತಿನಲ್ಲಿ ಅಂಗುಷ್ಠ ಮಾತ್ರನಾದ ಪ್ರದುಷನು ಎಂದರೆ ಲಿಂಗವು ಹೊಗೆಯಿಲ್ಲದ ಜ್ಯೋತಿ ರೂಪವಾಗಿದ್ದು, ಹಿಂದಿನ ಮುಂದಿನ ಸೃಷ್ಟಿಗೆ ಕಾರಣನಾಗಿದ್ದವನೇ ಆದ್ಯನೆಂದು ಹೇಳಲ್ಪಟ್ಟಿರುವುದರಿಂದ ಲಿಂಗಧಾರಿಗಳ ಸಂಸ್ಕೃತಿಯು ಆದ್ಯವೆಂದೇ ತಿಳಿಯಬೇಕಾಗಿದೆ. ಮೇಲೆ ಹೇಳಿದಂತೆ ದೇವತೆಗಳಲ್ಲಿ ಪಂಚಮುಖ ಶಿವನು ಲಿಂಗವನ್ನು ಪೂಜಿಸಿದಂತೆ ಇರುವ ಪ್ರತಿಮೆಯು ಸಿಕ್ಕಿರುವುದರಿಂದಲೂ ಶಿವನಿಗಿಂತ ಮುಂಚಿನವರು ಯಾರೆಂಬುದನ್ನು ಭಾರತೀಯ ಧರ್ಮ ಗ್ರಂಥಗಳು ಯಾವುವೂ ಹೇಳುವದಿಲ್ಲವಾದುದರಿಂದಲೂ ಶಿವನೇ ಆದ್ಯನೂ ಸನಾತನು ಎಂದು ಅನೇಕ ಗ್ರಂಥಗಳಲ್ಲಿ ನೋಡಬಹುದಾದರಿಂದಲೂ ಲಿಂಗಧಾರಿಗಳ ಸಂಸ್ಕೃತಿಯು ಆದ್ಯವೆಂದೂ ಸನಾತನವೆಂದೂ ಒಪ್ಪಲೇಬೇಕು. ಶ್ರೀ ಮಾರ್ಷಲ್‌ರವರು ತಿಳಿದಿರುವ ದ್ರಾವಿಡ ಸಂಸ್ಕೃತಿಯುವರು ಆದ್ಯಲಿಂಗಧಾರಿಗಳ ಸಂಸ್ಕೃತಿಯ ತರುವಾಯದವರೆಂದೇ ತಿಳಿಯಬೇಕು. ಈ ಆದ್ಯ ಸಂಸ್ಕೃತಿಗೆ ಕೈಲಾಸದ ಶಿವನ ಸಂಸ್ಕೃತಿ, ದೇವ ಸಂಸ್ಕೃತಿ, ಲಿಂಗ ಸಂಸ್ಕೃತಿ–ಎಂತಲೂ ಕರೆಯಲಿಕ್ಕೆ ಬರುವಂತೆ ಇದೆ. ದೇವತೆಗಳು ಪಾಶುಪತರಾಗಿ ಲಿಂಗಧಾರಿಗಳಾಗಿದ್ದರೆಂಬುವಕ್ಕೆ ಗ್ರಂಥಗಳ ಪ್ರಮಾಣವು ಈ ಹಿಂದೆ ತೋರಿಸಲ್ಪಟ್ಟಿದೆ. (ಇವೇ ಮುಂತಾದ ವಿಷಯುಗಳನ್ನು ಸರ್ವರೂ ಚನ್ನಾಗಿ ಗ್ರಹಿಸಿರಬೇಕಾಗಿದೆ)ಲಿಂಗಧಾರಿಗಳ ನಾಗರಿಕತೆಯು ಸಂಸ್ಕೃತಿಯು ಭೂಮಿಯಲ್ಲಿ ಹೂತು ಹೋಗಿದೆ. ಈಗಿನ ಲಿಂಗಧಾರಿಗಳಾದ ವೀರಶೈವರ ಸಂಸ್ಕೃತಿಯು ಗ್ರಂಥಸ್ಥವಾಗಿ ಕೈಬರೆಹದ ಹೊತ್ತಿಗೆಗಳಲ್ಲಿ ಹೂತುಹೋಗಿದೆ. ಎಲ್ಲೋ ಅಲ್ಪಸ್ವಲ್ಪ ಮುದ್ರಣವಾದರೆ ಓದಬೇಕೆಂಬುವವರೂ ಬಹಳ ಕಡಿಮೆ ಹೀಗೆ ಹೂತು ಹೋಗಿರುವ ಜ್ಞಾನನಿಧಿಯು ಚನ್ನಾಗಿ ಪ್ರಚಾರ ಯಾವದಾಗುವುದೋ ಏನೋ ! ಪರವಸ್ತುವಿನ ಲೀಲೆ ಎಂತಿರುವುದೋ ನೋಡಬೇಕು !! ಸೂಕ್ಷ್ಮ ವಿಷಯುಗಳನ್ನು ಇದ್ದುದನ್ನು ಇದ್ದಂತೆ ತಿಳಿದುಕೊಳ್ಳುವ ಸುಯೋಗವು ವಿಜ್ಞಾನಶಾಸ್ತ್ರದ ಪ್ರಬಲ ಪ್ರಚಾರವಿರುವ ಈ ಕಾಲದಲ್ಲಿಯೂ ಲಭ್ಯವಾಗಿಲ್ಲವೇ !!!

ವ್ಯಾಸ ಋಷಿಯ ಪುರಾಣಗಳೆಲ್ಲವನ್ನು ಓದಿ ಶೋಧಿಸಿದರೆ, ಲಿಂಗಧಾರಿಗಳ ಸಂಸ್ಕಾರದ ವಿಷಯವು ಇನ್ನೂ ಬಹಳವಾಗಿ ಹೊರಬೀಳಬಹುದು. ವೀರಶೈವರ ಪ್ರಾಚೀನತೆಯನ್ನು ತಿಳಿಯುವುದಕ್ಕೂ ಸಹ ವೀರಶೈವ ಮಹಾಸಭೆಯವರು ಮಹಾ ಪೂಜ್ಯರಾದ ಗುರುವಿರಕ್ತ ಮಹಾಸ್ವಾಮಿಗಳವರು ಶ್ರೀಮಂತರೂ,ಧರ್ಮಾಭಿಮಾನಿಗಳೂ ಬಹಳ ಹೆಚ್ಚಾಗಿ ಪ್ರಯತ್ನಿಸಬೇಕಾಗಿದೆ; ಶ್ರಮಿಸಬೇಕಾಗಿದೆ; ಮುದ್ರಣ ಮಾಡಿಸ ಬೇಕಾಗಿದೆ; ಪ್ರಚಾರಪಡಿಸಬೇಕಾಗಿದೆ. ಎಲ್ಲಾ ಸಮಾಜದವರೂ ಧರ್ಮೋನ್ನತಿಯ ಮಾರ್ಗದಲ್ಲಿ ನಡೆಯುವಂತೆ ಅನುಕೂಲಪಡಿಸಬೇಕಾಗಿದೆ, ಎಂಬುದನ್ನು ಸರ್ವರೂ ಬಹಳ ಚೆನ್ನಾಗಿ ಗಮನದಲ್ಲಿ ಇಡಬೇಕಾಗಿದೆ, ಎಂದು ಈ ಲೇಖಕನು ಪ್ರಾರ್ಥಿಸುತ್ತಾನೆ.

# ಶಾಂತಿ ಮಂತ್ರ

ಓಂ ಸಹ ನಾವವಿತು. ಸಹನೌಭುನಕ್ತು. ಸಹ ವೀರ‍್ಯಂಕರವಾವಹೈ.
ತೇಜಸ್ವಿನಾಽವಧೀತಮಸ್ತು ಮಾವಿದ್ವಿಷಾವಹೈ.
ಓಂ ಶಾಂತಿಃ ಶಾಂತಿಃ ಶಾಂತಿಃ

ಇದರ ಅಭಿಪ್ರಾಯವೀರೀತಿ :

ನಾವು ಜೊತೆಯಲ್ಲಿ ರಕ್ಷಣೆ ಪಡೆಯೋಣ, ಜೊತೆಯಲ್ಲಿ ಊಟ ಮಾಡೋಣ, ಜೊತೆಯಲ್ಲಿ ಸಾಮರ್ಥ್ಯ ತೋರಿಸೋಣ, ಬಲ (ಪರಾಕ್ರಮ) ದಿಂದ ಕೂಡಿದವರಾಗಿ ಸಾವಧಾನವುಳ್ಳವರಾಗಿರೋಣ, ವೈರವನ್ನು ಮಾಡುವುದು ಬೇಡ.

ಶಾಂತಿ ಶಾಂತಿ ಶಾಂತಿ

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಾಮುದಚ್ಚತೇ
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ
ಓಂ ಶಾಂತಿಃ ಶಾಂತಿಃ ಶಾಂತಿಃ

ಇದು ಶುಕ್ಲ ಯಜುರ್ವೇದದ ಶಾಂತಿ ಮಂತ್ರವು ಸಾಮಾನ್ಯವಾಗಿ ಇದರ ಅಭಿಪ್ರಾಯವು ಹೀಗೆ :– "ಅದುಪೂರ್ಣ, ಇದುಪೂರ್ಣ ಪೂರ್ಣವಿರುವುದರ ದೆಸೆಯಿಂದಲೇ ಪೂರ್ಣ ಎಂದು ಹೇಳಲ್ಪಡುತ್ತದೆ. ಪೂರ್ಣದೊಳಗೆ ಪೂರ್ಣವನ್ನು ತೆಗೆದುಕೊಂಡರೆ ಪೂರ್ಣವೇ ಉಳಿಯುತ್ತದೆ."

ಭಾರತೀಯರು ವೇದಗಳ ಆರಂಭದಲ್ಲಿ ಇಂತಹ ಶಾಂತಿ ಮಂತ್ರಗಳನ್ನು ಜೋಡಿಸಿದ್ದಾರೆ. ಭಾರತದ ಪ್ರಜೆಗಳಲ್ಲಿ ಇರಬೇಕಾದ ಸರ್ವ ಸಮತಾ ಭಾವವನ್ನು ಈ ಮಂತ್ರವು ಬೋಧಿಸುತ್ತದೆ. ರಕ್ಷಣೆಯಲ್ಲಿಯೂ, ಊಟದಲ್ಲಿಯೂ ಜೊತೆ ಜೊತೆಯಲ್ಲಿಇರುವಿಕೆ ಎಂಬ ಸಮತಾ ಭಾವವು ಇಲ್ಲಿ ವ್ಯಕ್ತವಾಗುತ್ತದೆ. ಪರಾಕ್ರಮವನ್ನು ಪಡೆದರೂ ಎಚ್ಚರಿಕೆಯಿಂದ ಅವರ ಉಪಯೋಗವನ್ನು ಹೊಂದಬೇಕೆಂದೂ ವೈರವನ್ನು ಹೊಂದಬಾರದೆಂದೂ ಈ ಮಂತ್ರವು ಬೋಧಿಸುತ್ತದೆ.

ಈ ಶ್ಲೋಕವು ಸಾಮಾನ್ಯವಾಗಿ ಬಳಕೆಯಲ್ಲಿದ್ದುದಾಗಿದೆ ವಿದ್ಯಾ ವಿವಾದಾಯ, ಧನಂ ಮದಾಯ, ಶಕ್ತಿಃ ಪರೇಷಾಂ ಪರಪೀಡನಾಯ ಖಳಸ್ಯ ಸಾಧೋರ್ವಿಪರೀತ ಮೇತತ್ ಜ್ಞಾನಾಯದಾನಾಯ–ಚರಕ್ಷಣಾಯ ॥

ತಾತ್ಪರ‍್ಯ : ಖಳರಿಗೆ ವಿದ್ಯೆಯು ವಾದ (ಜಗಳ) ಕ್ಕಾಗಿಯೂ, ದ್ರವ್ಯವು ಗರ್ವಕ್ಕಾಗಿಯೂ, ಶಕ್ತಿಯು ಪರರಿಗೆ ತೊಂದರೆ ಕೊಡುವುದಕ್ಕೂ ಒದಗಿರುತ್ತದೆ. ಸಾಧುಗಳಿಗಾದರೆ ವಿದ್ಯೆಯು ಜ್ಞಾನಕ್ಕೂ, ಧನವು ದಾನಕ್ಕೂ ಶಕ್ತಿಯು ಪರರ ರಕ್ಷಣೆಗೂ ಇರುತ್ತದೆ.

ಈ ಪ್ರಕಾರ ಸಾಮರ್ಥ್ಯ ಬಂದ ಮನುಷ್ಯನಿಗೆ ಹೊಡೆದಾಡಬೇಕೆಂಬ ಬುದ್ಧಿಯು ಮಾಯೆಯ ದೆಸೆಯಿಂದ ಉಂಟಾಗುತ್ತದೆ. ಆದರೆ ಅದನ್ನು ಪರರ ರಕ್ಷಣೆಗೆ ಉಪಯೋಗಿಸುವುದು ಸಾತ್ವಿಕದ ಮಾರ್ಗವು.

ಮೇಲೆ ಕಂಡ ಶಾಂತಿ ಮಂತ್ರವು ಇಂತಹ ಸಾಧುತನವನ್ನೇ ಬೋಧಿಸುತ್ತದೆ. ಈ ಮಂತ್ರದಂತೆ ಭಾರತೀಯರು ನಡೆದು ಶಾಂತಿಯುತರಾಗಿ ಬಾಳಲಿ. ಸರ್ವರೂ ಶಾಂತಿ ಮಂತ್ರವನ್ನು ಜಪಿಸಿ ಆಚರಿಸಲಿ. (ಸಂ.–೧೩೧–೧೩೪)

ಸಂಸ್ಕೃತ ವಿಶ್ವ ಪರಿಷತ್ತಿನ ೪ ನೆಯ ಅಧಿವೇಶನವು ತಿರುಪತಿಯಲ್ಲಿ ಇದೇ ನವಂಬರು ೧೧, ೧೨, ೧೩ ದಿನಾಂಕಗಳಲ್ಲಿ ಜರುಗಿತು. ರಾಷ್ಟ್ರಪತಿಗಳಾದ ಶ್ರೀ ರಾಜೇಂದ್ರ ಪ್ರಸಾದರು ಈ ಅಧಿವೇಶನದ ಪ್ರಾರಂಭೋತ್ಸವವನ್ನು ಜರುಗಿಸಿ, ಭಾರತ ಸಂಸ್ಕೃತಿಯ ಮೂಲವಾಗಿರುವ ಸಂಸ್ಕೃತ ಭಾಷಾ ಪ್ರಸಾರಕ್ಕಾಗಿ ಸರ್ವ ವಿಧದಿಂದ ಸರ್ವರೂ ಪ್ರಯತ್ನಿಸುವ ಅವಶ್ಯಕತೆಯನ್ನು ಒತ್ತಿ ಹೇಳಿದರು. ಸಂಸ್ಕೃತವು ಮಾತೃ ಭಾಷೆಯಲ್ಲಿ, ಅದೆಂದೂ ಹಾಗೆ ಆಗಲಾರದು, ಎಂಬ ಅಭಿಪ್ರಾಯ ಪಟ್ಟು ಅದರ ಪ್ರಸಾರವನ್ನು ರಾಜ್ಯ ಸರಕಾರಗಳು ವಿವಿಧ ರೀತಿಯಲ್ಲಿ ಮಾಡಬೇಕೆಂದು ಕೇಳಿಕೊಂಡರು. ಎಂದು ವರದಿಯಾಗಿದೆ.

ಸಂಸ್ಕೃತದಿಂದ ಭಾರತ ಸಂಸ್ಕೃತಿಯು ಪ್ರಚಾರಕ್ಕೆ ಬರುವುದೆಂದು ಈಗಿನ ಸರಕಾರವ ಯೋಚನೆ ಇದ್ದರೂ ಸಂಸ್ಕೃತ ಗ್ರಂಥಗಳ ಬೋಧನೆಯಲ್ಲಿನ ಸಾರವನ್ನು ತೆಗೆದು ಪ್ರಚಾರ ಪಡಿಸುವವರು ಬಹಳ ಅಪರೂಪ. ಮೇಲಿನ ಶಾಂತಿ ಮಂತ್ರದಲ್ಲಿ ಎಲ್ಲರೂ ಕೂಡಿ ಜೊತೆಯಲ್ಲಿ ಶಾಂತಿಯಿಂದಿರೋಣ ಎಂಬ ಸಮತಾವಾದದ ಅಭಿಪ್ರಾಯವು ತೋರಿದರೆ ಭಗವದ್‌ಗೀತೆಯಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ ವಿಷಯವೆಂದು

'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ'

ಎಂಬುದಾಗಿ ಜನರನ್ನು ೪ ಜಾತಿಗಳಾಗಿ ವಿಂಗಡಿಸಿ ಬೇರ್ಪಡಿಸುವ ಬೋಧೆ ಇದೆ. ಇದರಲ್ಲಿ ಯಾವುದು ಭಾರತೀಯ ಸಂಸ್ಕೃತಿ ಎಂದು ತಿಳಿಯಬೇಕು ? ಹೇಗೆ ಪ್ರಚಾರವನ್ನು ಮಾಡಬೇಕು.

ಈಗಿನ ಸರಕಾರವು ಜಾತ್ಯತೀತ ಸರಕಾರವೆಂದು ಪ್ರಸಿದ್ಧಿಸಲ್ಪಟ್ಟಿರುವುದರ ದೆಸೆಯಿಂದ ಮೇಲೆ ಕಂಡ ಶಾಂತಿ ಮಂತ್ರದ ಸಂಸ್ಕೃತಿಗೆ ಅದು ಒಪ್ಪುವುದೆಂದು ನಿರ್ವಿವಾದವಾಗಿ ಒಪ್ಪಬೇಕಾಗಿದೆ ಹಾಗಾದರೆ ಭಗವದ್‌ಗೀತೆಯಲ್ಲಿನ ಜಾತಿ ಬೋಧನೆಯ ವಿಷಯವು ಈಗಿನ ಭಾರತೀಯ ಸಂಸ್ಕೃತಿಗೆ ಅನುಕೂಲವಾದುದಲ್ಲವೆಂದು ಹೇಳುವವರಾರು ?

(–ಸಂ.–೧೩೪)

# ಜಗತ್ತಿನಲ್ಲಿ ಒಂದೇ ಧರ್ಮ

ಧರ್ಮ ಎಂದರೆ ದೇವನನ್ನು ನಂಬಿ ಮಾಡುವ ಕೆಲಸ ಎಂಬ ಅರ್ಥವನ್ನು ಪೂರ್ವ ಮೀಮಾಂಸೆಯಲ್ಲಿ ಹೇಳಿರುವುದನ್ನೇ ಸರಿಯಾದುದೆಂದು ನಾವು ನಂಬಲೇಬೇಕು. ಪಕ್ಷಿಗಳು ಮಾಡುವ ಕೆಲಸ ಪಕ್ಷಿ ಧರ್ಮ ಮನುಷ್ಯನು ಮಾಡುವ ಕೆಲಸ ಮನುಷ್ಯ ಧರ್ಮ ಎಂಬುದಾಗಿ ಹೇಳುವುದು ಸಾಧುವಾದುದಲ್ಲ. ಧರ್ಮ ಶಬ್ದಕ್ಕೆ 'ಧ್ರಿಯತೇ ಅನೇನ' ಎಂಬ ನಿರ್ವಚನದಿಂದ ಮನುಷ್ಯನನ್ನು ಅಧೋಗತಿಗೆ ಬೀಳದಂತೆ ತಡೆದು ಹಿಡಿಯುವುದು ಧರ್ಮ. ಮನುಷ್ಯನು ಮಾಡುವ ಕೆಲಸಗಳೆಲ್ಲವೂ ಮನುಷ್ಯನನ್ನು, ಅವನ ಜೀವವನ್ನು ಕೆಳಮಟ್ಟಕ್ಕೆ ಹೋಗದಂತೆ ತಡೆದು ಹಿಡಿಯುವುದಿಲ್ಲ. ಆದುದರಿಂದ ಮನುಷ್ಯನ ಎಲ್ಲಾ ಕೆಲಸಗಳೂ ಮನುಷ್ಯಧರ್ಮ ಎನ್ನಿಸಿಕೊಳ್ಳಲಾರವು. ಒಬ್ಬ ಮನುಷ್ಯನು ಇನ್ನೊಂದು ಪ್ರಾಣಿಗೆ ಹಿಂಸೆಯನ್ನು ಮಾಡಿದರೆ ಅವನ ಜೀವವು ಕೆಳಮಟ್ಟಕ್ಕೆ ಹೋಗುವುದೆಂಬುವುದು ಸಿದ್ಧವಾದ ಮಾತು. ಮನುಷ್ಯ ಇಂತಹ ಕೆಲಸವನ್ನು ಕರ್ಮ ಎಂದು ಹೇಳಬೇಕೇ ಹೊರತು ಧರ್ಮ ಎಂದು ಹೇಳಲಿಕ್ಕೆ ಬರುವಂತಿಲ್ಲ.

ನಮ್ಮ ಗ್ರಹಮಂಡಲದಲ್ಲಿ ಸೂರ್ಯ, ಭೂಮಿ ಮೊದಲಾದುವು ಒಂದೊಂದೇ ಇರುವಂತೆ ಇವುಗಳಿಗೆಲ್ಲಾ ಆಧಾರವಾಗಿರುವ ದೇವರು ಅಥವಾ ಮಹಾದೇವನು ಒಬ್ಬನೇ ಇದ್ದಾನೆ ಎಂಬುದು ಸಿದ್ಧವಾದ ವಿಷಯ. ಆ ಒಬ್ಬನಾದ ಮಹಾದೇವನನ್ನು ನಂಬಿ ಮಾಡುವ ಕೆಲಸವು–ಧರ್ಮವೂ–ಒಂದೇ ಇರಬೇಕಾದದು ಯುಕ್ತವೆಂಬ ವಿಷಯವೂ ಸಿದ್ಧವಾದ ಸಂಗತಿಯೇ ಆಗಿದೆ.

ಈಗ ಪ್ರಪಂಚದಲ್ಲಿ ಕ್ರೈಸ್ತ ಧರ್ಮ, ಬೌದ್ಧ ಧರ್ಮ, ಜೈನ ಧರ್ಮ ಮಹಮ್ಮದೀಯ ಧರ್ಮ ಭಾರತ ಧರ್ಮ ಎಂಬಿವು ಬಹಳ ಜನರನ್ನೊಳಗೊಂಡ ಧರ್ಮಗಳು ಆಗಿ ಇವೆ. ಸ್ವಲ್ಪ ಸಂಖ್ಯೆಯ ಜನರನ್ನು ಒಳಗೊಂಡ ಧರ್ಮಗಳೂ ಅನೇಕ ಇವೆ.

ಪ್ರಪಂಚದಲ್ಲಿ ಹೀಗೆ ಅನೇಕ ಧರ್ಮಗಳು ಇರುವುದಕ್ಕೆ ಪ್ರಪಂಚದ ಜನರು "ಧರ್ಮ" ಪದದ ಸರಿಯಾದ ಅರ್ಥವನ್ನು ಯೋಚಿಸಿ ಉತ್ತಮವಾದ ಮಾರ್ಗದಲ್ಲಿ ನಡೆಯುವ ಯೋಚನೆಯನ್ನು ಮಾಡದೆ ಇರುವುದೇ ಕಾರಣವಾಗಿದೆ.

ಮೇಲೆ ಹೇಳಿದ ಯಾವ ಧರ್ಮವೇ ಆಗಲಿ, ಜಗತ್ತು, ಜೀವ, ಈಶ್ವರ (ಮಹಾದೇವ) ಇವರ ವಿಷಯದಲ್ಲಿ ಯೋಚಿಸಿದ ಅಭಿಪ್ರಾಯಗಳನ್ನು ಮುಂದುಮಾಡಿಕೊಂಡು ಹೇಳಿದ ಆಚರಣೆಗಳನ್ನೊಳಗೊಂಡು ಇರುವುದೆಂಬುದು ಸಿದ್ಧವಾದ ಸಂಗತಿಯೇ ಆಗಿದೆ.

ಒಬ್ಬನು ಮಹಾದೇವನು ಸಗುಣನೆಂದು ಒಂದು ಧರ್ಮವನ್ನು ಹೇಳಿದರೆ ಇನ್ನೊಬ್ಬನು ನಿರ್ಗುಣನೆಂದು ಹೇಳಿ ಮತ್ತೊಂದು ಧರ್ಮವನ್ನು ಹೇಳಿದ್ದಾನೆ. ಒಬ್ಬನು ಈ

ಜಗತ್ತು ಇಲ್ಲದುದು (ಸುಳ್ಳು) ಎಂದು ಹೇಳಿದರೆ, ಇನ್ನೊಬ್ಬನು ಇರುವುದು (ಸತ್ಯ) ಎಂದು ಹೇಳಿ ತನ್ನ ಧರ್ಮವನ್ನು ವಿವರಿಸಿದ್ದಾನೆ ಹೀಗಾಗಿ ಪ್ರಪಂಚದಲ್ಲಿ ಲೆಕ್ಕಕ್ಕೆ ಸಿಕ್ಕದಷ್ಟು ಧರ್ಮಗಳಾಗಿ ಇವೆ.

ಇವುಗಳನ್ನೆಲ್ಲಾ ವಿಮರ್ಶಿಸಿ ಜೀವನ ವಿಷಯದಲ್ಲಿ ಜಗತ್ತಿನ ವಿಷಯದಲ್ಲಿ ದೇವನ ವಿಷಯದಲ್ಲಿ ಯಾರ್‍ಯಾರು ಯಾವ ಯಾವ ಅಭಿಪ್ರಾಯಪಟ್ಟಿರುವರೋ ಆ ಅಂಶಗಳನ್ನೇ ವಿಶದೀಕರಿಸಿ ಒಂದು ಪಟ್ಟಿಯನ್ನು (List ) ಮಾಡುವುದಾದರೆ ಅದರೊಳಗೆ ಎಲ್ಲಾ ಧರ್ಮಗಳು ಸೇರಿಬಿಡುತ್ತವೆ. ಮಹಮ್ಮದೀಯ ಧರ್ಮವು ದೇವನು ನಿರಾಕಾರ ಎಂದು ಹೇಳುವುದಾದರೆ ಅದೇ ಮಾತನ್ನು ಹೇಳುವ ನಿರಾಕಾರ ಶಿವಾದ್ವೈತವೂ ಆ ಅಂಶದಲ್ಲಿ ಒಂದೇ ಪಂಕ್ತಿಯಲ್ಲಿ ಸೇರುತ್ತದೆ. ಹೀಗೆ ಯೋಚಿಸಿದರೆ ಮೂರ್ತಿಗಳನ್ನೇ ಪೂಜೆಮಾಡಬೇಕೆಂದು ಹೇಳುವ ಧರ್ಮಗಳನ್ನೆಲ್ಲಾ 'ಮೂರ್ತಿಪೂಜಕರು' ಎಂಬ ಒಂದೇ ಒಂದು ಪಂಕ್ತಿಯಲ್ಲಿ ಸೇರಿಸಿ ಬಿಡಬಹುದು.ಹೀಗಾದರೆ ನಮ್ಮ ಪಟ್ಟಿಯುಲ್ಲಿನ ಪಙ್ತಿಗಳು ಲೆಖ್ಖಕ್ಕೆ ಒಂದು ಅನೇಕ ಧರ್ಮಗಳ ಅಭಿಪ್ರಾಯವನ್ನು ಸಂಗ್ರಹಿಸಿದ ಕೆಲವು ಪಙ್ತಿಗಳನ್ನೊಳಗೊಂಡ ಒಂದು ಪಟ್ಟಿಯು ಸುಲಭದಲ್ಲಿ ಸಿದ್ಧವಾಗಬಹುದು.

ಈ ರೀತಿ ಒಂದು ಪಟ್ಟಿಯು ಸುಲಭದಲ್ಲಿ ಸಿದ್ಧವಾದ ಮೇಲೆ ಜೀವನ ವಿಷಯದಲ್ಲಿ ಹೇಳಲ್ಪಟ್ಟ ಧರ್ಮಗಳ ಆಚರಣೆಯಲ್ಲಿ ಯಾವುದು ಉತ್ತಮವಾಗಿದೆ ? ಜಗತ್ತಿನ ವಿಷಯದಲ್ಲಿ ಹೇಳಲ್ಪಟ್ಟ ಧರ್ಮಾಚರಣೆಯಲ್ಲಿ ಯಾವುದು ಉತ್ತಮವಾಗಿದೆ ? ಎಂಬುದನ್ನು ಶೋಧಿಸಿ ಆರಿಸಿ ತೆಗೆಯುವುದಾದರೆ ಮೂರು ನಾಲ್ಕು ಸಾಲುಗಳಲ್ಲಿ ಅವುಗಳು ನಿಲ್ಲುತ್ತವೆ. ಪುನಃ ಶೋಧಿಸಿದಾಗ ಒಂದೇ ಒಂದು ಧರ್ಮವು ಎಲ್ಲಕ್ಕಿಂತಲೂ ಶ್ರೇಷ್ಠವಾದುದು ಎಂದು ಸ್ಪಷ್ಟವಾಗುತ್ತದೆ.

ಇಷ್ಟಾದರೂ ಉತ್ತಮವಾದ ಆ ಶ್ರೇಷ್ಠ ಧರ್ಮಕ್ಕಾಗಿ ಎಲ್ಲರೂ ಬದಲು (Convert) ಆಗಬೇಕು ಎಂದು ಹೇಳಬಾರದು. ಅವರವರ ಇಷ್ಟದ ಧರ್ಮದ ಆಚರಣೆಯಲ್ಲಿಯೇ ಇರಬಹುದು. ಕಲಾಶಾಲೆಗಳಲ್ಲಿ ಓದುವ ವಿದ್ಯಾರ್ಥಿಗೆ M. A.ತರಗತಿ ಹೆಚ್ಚಿನದು ಎಂದು ತಿಳಿದುಕೊಂಡಿರುವಂತೆ ಅನೇಕ ಧರ್ಮಗಳ ಆಚರಣೆಯಲ್ಲಿ ಇರುವವರು ಇಂತಹ ಧರ್ಮವು ಶ್ರೇಷ್ಠವಾದುದು, ಅದೊಂದೇ ಮುಖ್ಯವಾದ ಧರ್ಮ ಎಂದು ಎಲ್ಲರೂ ತಿಳಿದುಕೊಂಡರೆ ಸಾಕು. ಆಗ ಪ್ರಪಂಚವೆಲ್ಲವೂ ಒಂದೇ ಧರ್ಮದಲ್ಲಿ ಇದ್ದಂತಾಗುವುದು. ಪ್ರಪಂಚದಲ್ಲಿ ಇರುವ ಉಚ್ಚ ಕಲಾ ಶಾಲೆಗಳಲ್ಲ ಒಂದೇ ತರಹದ ವಿದ್ಯಾಭ್ಯಾಸವು ನಡೆಯುವುದೆಂದು ಈಗ ಎಲ್ಲರೂ ತಿಳಿದುಕೊಂಡಿರುವಂತೆ ಪ್ರಪಂಚದಲ್ಲೆಲ್ಲಾ ಒಂದೇ ತರಹದ ಧರ್ಮದ ಆಚರಣೆ ಉಂಟೆಂದು ಎಲ್ಲರೂ ತಿಳಿದುಕೊಳ್ಳಲಿಕ್ಕೆ ಅವಕಾಶವಾಗುತ್ತದೆ.

ಹೀಗೆಲ್ಲಾ ಮಾಡುವುದರಿಂದ ವೀರಶೈವ ಧರ್ಮವು ಮೂಲೆಗೆ ಬೀಳುವುದೆಂದು ಕೆಲವರು ಯೋಚಿಸಬಹುದು. ಆದರೆ ವೀರಶೈವ ಧರ್ಮವು ಜಾಗತಿಕ ಧರ್ಮ. ಜಗ

ತ್ತಿನ ಮೂಲ ತತ್ವಗಳನ್ನನುಸರಿಸಿ ಆಚರಿಸತಕ್ಕದ್ದಾಗಿದೆ. ಯಾವುದಾದರೂ ಒಂದು ವ್ಯಕ್ತಿ ಹೇಳಿದುದಾಗಿ ಒಂದು ಧರ್ಮವಾಗಿ ಇಲ್ಲಿ ಹೇಳಿದ್ದರೆ ಕೈಲಾಸದ ಶಿವನು ಹೇಳಿದ ನೆಂಬ ಒಂದು ಪ್ರತೀತಿಯ ಮೇಲೆ ಅವರಂತೆ ತಿಳಿಯಬಹುದಾದರೂ ಆಚರಣೆಯು ಜಾಗತಿಕ ತತ್ವಗಳನ್ನು ಅವಲಂಬಿಸಿಕೊಂಡು ಇರುವುದೇ ಹೊರತು ಕೈಲಾಸ ಶಿವನನ್ನು ಅವಲಂಬಿಸಿಕೊಂಡು ವೀರಶೈವರ ಆಚರಣೆಗಳಿಲ್ಲ. ಕೈಲಾಸದ ಶಿವನು ರುಂಡಮಾಲಾ ಧರನಾದರೆ ವೀರಶೈವರಾರೂ ರುಂಡಮಾಲೆಗಳನ್ನು ಧರಿಸುತ್ತಲಿಲ್ಲ. ಕೈಲಾಸದ ಶಿವನು ಅರ್ಜುನನಿಗಾಗಿ ಬೇಡರ ವೇಷವನ್ನು ತಾಳಿದರೆ ಆ ವೇಷವನ್ನು ವೀರಶೈವರಾರೂ ಪೂಜಿಸುತ್ತಲಿಲ್ಲ. ಅರ್ಧನಾರೀಶ್ವರನ ಲೀಲೆಯನ್ನು ಶಿವನು ಮಾಡಿದರೆ ಆ ಲೀಲೆಯ ವಿಗ್ರಹವನ್ನು ವೀರಶೈವರು ಪೂಜಿಸುತ್ತಲಿಲ್ಲ. ಕೊರಳಲ್ಲಿ ಸರ್ಪಾಭರಣನಾಗಿ ಶಿವನಿದ್ದರೆ ಆ ವಿಗ್ರಹವನ್ನು ಯಾರೂ ಪೂಜಿಸುತ್ತಲಿಲ್ಲ.

ವೀರಶೈವರು ಪೂಜಿಸುವಲಿಂಗವು ನಿರಾಕಾರ ಪರವಸ್ತುವಿನಿಂದ ಆದ ಮೊಟ್ಟಮೊದಲನೆಯ ರೂಪವು, ಬ್ರಹ್ಮಾಂಡವು ಲಿಂಗರೂಪವಾಗಿ ಮೊದಲು ರಚನೆಯಾಯಿತು. ಸೂರ್ಯನೂ, ಚಂದ್ರನೂ, ನಕ್ಷತ್ರಗಳೂ ಅದೇ ರೂಪವನ್ನು ಧರಿಸಿದವುಗಳು. ಲಿಂಗದ ಆಕಾರವೆಂದರೆ ಗೋಳಕಾಕಾರದ (Cylinder), ಅಖಂಡಾಕಾರ, ಜ್ಯೋತಿರಾಕಾರ, ಮುಂತಾದ ರೀತಿಯ ಆಕಾರವು.

ಇದೇ ಆಕಾರದಲ್ಲಿ ಮರ, ಎಲೆ, ಧಾನ್ಯದ ಬೀಜಗಳು ಮುಂತಾದ ಮಹಾದೇವನಿಂದಾದ ಸಕಲವಸ್ತುಗಳೂ ಆಗಿದೆ. ಇಂತಹ ಒಂದು ಆಕಾರವನ್ನು ಹಿಡಿದ ಮಾತ್ರದಿಂದ ವೀರಶೈವರು ಮೂರ್ತಿ ಪೂಜಕರಲ್ಲ. ಜಾಗತಿಕ ಧರ್ಮವನ್ನು ಆಚರಿಸುವವರೇ ಆಗಿದ್ದಾರೆ. ಗುರು ಜಂಗಮರ ಲಕ್ಷಣಗಳೂ ನಿರಾಕಾರ ಪರವಸ್ತುವನ್ನು ಸಾಧಿಸಲನುಕೂಲವುಳ್ಳವುಗಳಾಗಿದೆ. ಇದೇ ಮುಂತಾದ ಕಾರಣಗಳಿಂದ ವೀರಶೈವರು ತಮ್ಮದೊಂದು ವಿಧವಾದ ಧರ್ಮವೆಂದು ಜಾತಿ ಎಂದು ತಿಳಿಯುವುದಕ್ಕೆ ಎಳ್ಳಷ್ಟು ಅವಕಾಶವಿಲ್ಲ. ಧರ್ಮದಲ್ಲಿ ಉತ್ತಮವಾದುದನ್ನು ಶೋಧಿಸಲಿಕ್ಕೆ ಹೊರಟಾಗ ವೀರಶೈವವು ತನ್ನ ಉನ್ನತಿಯನ್ನು ಹೊರಗೆಡವದೆ ಎಂದೂ ಹಿಂಮುಳಿಯಲಾರದು.

ಒಟ್ಟಿನಲ್ಲಿ ಧರ್ಮಗಳ ಪರಿಶೋಧನೆಯಾಗಿ ಒಂದೇ ಧರ್ಮದಲ್ಲಿ ಪ್ರಪಂಚದ ಜನರಿರುವುದು ಬಹಳ ಉತ್ತಮವಾದುದು. ಧರ್ಮಗಳ ಹೋರಾಟ, ಪಕ್ಷಾಂಧತೆ, ಅಭಿಮಾನ ಸ್ವಾರ್ಥತೆ ಮುಂತಾದವುಗಳು ಧರ್ಮಾಚರಣೆಯಲ್ಲಿ ಪ್ರವೇಶಿಸಬಾರದು.

ಭಾರತೀಯರಲ್ಲಿ ಅನೇಕರು ಹೊರಗೆ ಜಾತ್ಯತೀತರೆಂದು ಹೇಳುತ್ತಿದ್ದರೂ ಒಳಗೆ ಒಂದು ಧರ್ಮಕ್ಕೆ ಸಿಕ್ಕಿಕೊಂಡು ಆ ವಿಧವಾದ ಸಂಸ್ಕಾರವನ್ನೇ ಬೆಳಸಲಿಕ್ಕೆ ಹೋಗುತ್ತಾರೆ. ಅದು ನಿಲ್ಲುವವರೆಗೂ ಭಾರತವು ಎಂದಿಗೂ ಮುಂದಕ್ಕೆ ಬರುವುದಿಲ್ಲವೆಂದು ಧರ್ಮದ ಶ್ರೇಷ್ಠ ಆಚರಣೆಗಳನ್ನೂ ತೋರಿಸಲಿಕ್ಕೆ ಭಾರತವೇ ಆದರ್ಶವಾಗಿರುವುದಕ್ಕೆ

ಬದಲಾಗಿ ಭಾರತದ ಧರ್ಮವು ಬಹುಹೀನವಾದುದೆಂದು ತಿಳಿಯಲ್ಪಡುವುದಕ್ಕೆ ಅವಕಾಶವುಳ್ಳದಾಗುವುದೆಂದು ಸರ್ವರೂ ಚೆನ್ನಾಗಿ ತಿಳಿದಿರಬೇಕು.

ಈ ಒಂದೇ ಧರ್ಮವನ್ನು ರಚಿಸುವುದಕ್ಕಾಗಿ ಈ ಭೂಮಿಯಲ್ಲಿನ ಎಲ್ಲಾ ದೇಶೀಯರೂ ಸೇರಿ ಪ್ರಯತ್ನಿಸಬೇಕು. ಪ್ರಪಂಚದ ಶಾಂತಿಯನ್ನು ಕೋರುವ ಸಂಸ್ಥೆಯಾದರೂ ಈ ಕಾರ್ಯವನ್ನು ವಹಿಸಿಕೊಂಡರೆ ಕೆಲವಾರು ವರ್ಷಗಳಲ್ಲಿಯೆ ಈ ಪ್ರಯೋಜನವು ದೊರಕಬಹುದು. ಮುಂಚೆ ಭಾರತದ ರಾಜಕೀಯವೇ ಈಗಿನ ತನ್ನಲ್ಲಿನ ಎಲ್ಲಾ ಧರ್ಮಗಳ ಸಾರವನ್ನು ಸಂಗ್ರಹಿಸಿ ಪ್ರಪಂಚದ ಮುಂದೆ ಇಡಬೇಕೆಂದು ಕೋರುತ್ತೇವೆ. ಸರ್ವಧರ್ಮ ಸಮ್ಮೇಲನದವರೂ ಈ ಕೆಲಸಕ್ಕೆ ಕೈ ಹಾಕಿ ರಾಜಕೀಯದಲ್ಲಿ ಮನವಿಗಳನ್ನು ಒಪ್ಪಿಸಬೇಕು. ಹೀಗಾದರೆ ಜಾಗತಿಕವಾಗಿ ಇರಬಹುದಾದ ಒಂದೇ ಧರ್ಮವನ್ನು ಕೆಲವು ವರ್ಷಗಳಲ್ಲಿಯೇ ನೋಡಬಹುದಾಗಿದೆ. (ಸಂ. ೧೨೯)

# ಸರ್ವ ಧರ್ಮ ಸಮ್ಮೇಳನ

ಸರ್ವ ಧರ್ಮಗಳನ್ನು ಕೂಡಿಸಬೇಕೆಂಬ ಉದ್ದೇಶದಿಂದ 'ಸರ್ವಧರ್ಮ ಸಮ್ಮೇಳನ' ಎಂಬ ಹೆಸರಿನ ಸಭೆಗಳು ಆಗಾಗ ಅಲ್ಲಲ್ಲಿ ನಡೆಯುತ್ತಾ ಇರುವವು. ಆ ಸಭೆಗಳಲ್ಲಿ ಜೈನ, ಬೌದ್ಧ, ಮಹಮ್ಮದೀಯ ಕ್ರೈಸ್ತ ಮೊದಲಾದ ಮತದವರೂ ದ್ವೈತ (ಶ್ರೀ ಮಧ್ವಾಚಾರ್ಯರ ಬೋಧೆಯನ್ನನುಸರಿಸಿ ನಡೆಯುವವರು), ವಿಶಿಷ್ಟಾದ್ವೈತ (ಶ್ರೀ ರಾಮಾನುಜಾಚಾರ್ಯರ ಬೋಧೆಯನ್ನನುಸರಿಸುವವರು), ಶಿವಾದ್ವೈತ (ಬಸವೇಶ್ವರಾದಿ ಪ್ರಮಥರ ಮತ್ತು ಪಂಚಾಚಾರ್ಯರ ಬೋಧೆಯನ್ನನುಸರಿಸಿ ನಡೆಯುವವರು) ಮುಂತಾದ ಭಾರತ ಧರ್ಮಕ್ಕೆ ಸೇರಿದವರೂ ಕೆಲವರು ಭಾಷಣಕಾರರು ಮಾತನಾಡಿ ಕೊನೆಗೆ ಎಲ್ಲ ಧರ್ಮದವರೂ ಒಬ್ಬರಿಗೊಬ್ಬರು ಸ್ನೇಹ ಭಾವದಿಂದ ನಡೆದುಕೊಳ್ಳಬೇಕೆಂಬ ಅಧ್ಯಕ್ಷರ ತೀರ್ಮಾನದಲ್ಲಿ ಮುಗಿದು ಹೋಗುತ್ತಲಿರುವ ಸಂಗತಿಯು ಪ್ರಖ್ಯಾತವಾಗಿದೆ.

ಈ ಸಭೆಗಳಲ್ಲೊಂದರಲ್ಲಿ ಯಾವುದಾದರೂ ಧರ್ಮದವರು ತಮ್ಮ ಧರ್ಮದ ಅಭಿಪ್ರಾಯವನ್ನು ಹೇಳಲು ಶಕ್ತಿ ಸಾಲದವರಾದರೆ ಆ ಧರ್ಮವು ಸಾಧಾರಣವಾದುದೆಂದೂ ಇನ್ನೊಂದು ಧರ್ಮದವರು ಚತುರರಾಗಿ ಜನರಿಗೆ ಮನರಂಜನೆಯಾಗುವಂತೆ ತಮ್ಮ ಧರ್ಮದ ವಿಷಯವನ್ನು ಹೇಳಿದರೆ ಅದು ಉತ್ತಮ ಧರ್ಮವೆಂದು ಸಭೆಗೆ ಸೇರಿದವರು ತಿಳಿದುಕೊಳ್ಳುವಂತೆ ಆಗಿದೆ. ಕೆಲವು ಸಭೆಗಳಲ್ಲಿ ಮಹಮ್ಮದೀಯರ ತಮ್ಮ ಮತದಲ್ಲಿನ ಸರ್ವಸಮಾನತೆಯ ಆಚರಣೆಯನ್ನೂ ಕೆಲವು ಉತ್ತಮ ಪದ್ಧತಿಗಳನ್ನೂ ಜನರಿಗೆ ಚೆನ್ನಾಗಿ ತೋರಿಸಿ ತಮ್ಮ ಮತವೇ ಶ್ರೇಷ್ಠವೆಂದು ಹೇಳಿದ ಉದಾಹರಣೆಗಳಿವೆ. ಅವರೂ ಕೊನೆಯಲ್ಲಿ ಎಲ್ಲ ಧರ್ಮದವರೂ ಪ್ರೀತಿಯಿಂದ ನಡೆದುಕೊಳ್ಳಬೇಕೆಂದು ಅಧ್ಯಕ್ಷರ ಭಾಷಣವಾಗಿ ಸಭೆಗಳು ಮುಗಿಸಲ್ಪಡುತ್ತಲಿವೆ ಎಂದೂ ಗೊತ್ತಾಗಿದೆ.

ಈಗಿನ ಪ್ರಜಾರಾಜ್ಯದಲ್ಲಿ ಸರ್ವರೂ ಸಮಾನತೆಯಿಂದ ನಡೆಯಬೇಕೆಂದು ಜಾತಿಗಳ ಹೆಸರನ್ನೇ ಎತ್ತಕೂಡದೆಂದೂ ಜಾತ್ಯತೀತ ರಾಜಕೀಯ ಏರ್ಪಾಡಾಗಿರುತ್ತದೆ. ಸರ್ವಧರ್ಮ ಸಮ್ಮೇಳನಗಳಲ್ಲಿ ನಡೆಯುತ್ತಿರುವ ಭಾಷಣಗಳಿಂದ ನಾವು ಉತ್ತಮರಾಗಿದ್ದರೂ ಇತರರೊಡನೆ ಪ್ರೀತಿಯಿಂದ ನಡೆದುಕೊಳ್ಳಬೇಕೆಂಬ ಭಾವನೆಯು ಬರುವುದೇ ಹೊರತು ಸರ್ವರೂ ಸಮಾನರೆಂಬ ಭಾವನೆ ಬರುವುದೇ ಇಲ್ಲ. ಆದುದರಿಂದ ಈಗಿನ ರಾಜಕೀಯದಲ್ಲಿ ಸರ್ವ ಧರ್ಮ ಸಮ್ಮೇಳನಗಳ ಪ್ರಯೋಜನವು ಬಹಳ ಕಡಿಮೆ ಎಂದೇ ಭಾವಿಸಬೇಕಾಗಿದೆ. ಇಂತಹ ಸರ್ವ ಧರ್ಮ ಸಭೆಗಳು ಇದೂವರೆವಿಗೆ ಅನೇಕವಾಗಿ ನಡೆದಿದ್ದರೂ ಯಾವುದೊಂದರ ನಿರ್ಣಯ ಅಥವಾ ಫಲಿತಾಂಶಕ್ಕೆ ಏನೂ ಬಂದಿಲ್ಲವಾಗಿ ತೋರುತ್ತದೆ. ಈ ಸಭೆಯಲ್ಲಿ ಸೇರಿದವರು ಹೊರಗೆ ಹೋದಾಗ ಮತ್ತೆ ಸ್ಪರ್ಶಾಸ್ಪೃಶ್ಯ,

ಶುದ್ಧಾಶುದ್ಧ ಭಾವನೆಗಳಿಂದ ತುಂಬಿ ಲೋಕ ವರ್ತನೆ ಮಾಡುವುದೂ ಕಂಡು ಬರುತ್ತದೆ.

ಇನ್ನು ಮುಂದೆ ಸರ್ವಧರ್ಮ ಸಮ್ಮೇಳನಗಳು ಈ ರೀತಿ ನಡೆದರೆ ಸಮ್ಮೇಳನಗಳಿಂದ ಪ್ರಯೋಜನವಾಗಬಹುದಾಗಿ ತೋರುತ್ತದೆ :

೧) ಈ ಸಭೆಗೆ ಸೇರುವವರೆಲ್ಲರೂ ಸ್ವಧರ್ಮದ ಪಕ್ಷಪಾತವಿಲ್ಲದವರಾಗಬೇಕು. ಈ ಭೂಮಿ ನಮ್ಮದು, ಈ ಜನರು ನಮ್ಮವರು ಎಂದು ಇಡೀ ಜಗತ್ತನ್ನೂ ಎಲ್ಲ ಜನರನ್ನೂ ಪ್ರೀತಿಸುವವರಾಗಬೇಕು.

೨) ಎಲ್ಲ ಧರ್ಮದವರೂ ಎಲ್ಲಾ ಜನರೂ ಎಲ್ಲಾ ವಸ್ತುಗಳೂ ನಿರಾಕಾರನಾದ ದೇವನಿಂದ ಬಂದವರು ಎಂದು (ಈಗಿನ ಶೋಧನ ಶಾಸ್ತ್ರಕಾರರು–seientists–ಒಂದು ಅಣುವಿನಿಂದಲೇ ಎಲ್ಲವೂ–ಎಲ್ಲಾ ಜನರೂ ಜಗತ್ತೂ ವಸ್ತುಗಳೂ ಆಗುರುವರೆಂದು ತಿಳಿಯುವಂತೆ ತಿಳಿಯುವರಾಗಬೇಕು. ಹೀಗಾದರೆ ಸರ್ವರೂ ಸಮಾನರೆಂಬ ತತ್ವದ ತಳಹದಿಯಲ್ಲಿ ಎಲ್ಲರೂ ಕೂತುಕೊಂಡು ಮುಂದೆ ವಿಚಾರ ಮಾಡಲಿಕ್ಕೆ ಪ್ರಾರಂಭಿಸಿದಂತೆ ಆಗುತ್ತದೆ.

೩) ಮುಂದೆ ಸಭೆ ಸೇರಿ ಮಾತನಾಡುವಲ್ಲಿ ನಿರ್ಣಯಮಾಡುವಲ್ಲಿ ಈ ಕೆಳಗೆ ಕಂಡ ಅಂಶಗಳಿಗೆ ಹೆಚ್ಚಾಗಿ ಗಮನವನ್ನು ಕೊಡಬೇಕು :

ಅ) ಯಾವ ಮತದವರಾದವರೂ ಭಾರತೀಯ ಧರ್ಮದವರಾದರೂ ತಮ್ಮದು ಕಡಿಮೆ ದರ್ಜೆಗೆ ಬರುವುದೆಂಬ ಭಾವನೆಯನ್ನು ದೂರದಲ್ಲಿ ಬಿಟ್ಟು ಬಿಡಬೇಕು. 'ಸರ್ವ ಖಲ್ವಿದಂ ಬ್ರಹ್ಮ' ಎಂದು ಭಾರತೀಯ ಧರ್ಮವು ಹೇಳುವಂತೆ ಹೇಗಾದರೂ ನಾವು ಬ್ರಹ್ಮದಲ್ಲಿ ಸೇರಿದವರೇ ಎಂಬ ವಿಶಾಲ ಭಾವನೆಯುಳ್ಳವರಾಗಬೇಕು. ಈಗಿನ ಶೋಧನ ಶಾಸ್ತ್ರ ಅದನ್ನೇ ಹೇಳುತ್ತಿದೆ.

ಆ) ಈಗಿನ ಶಾಸ್ತ್ರ ಶೋಧಕನು ತನ್ನದು ಕಡಿಮೆ ಅಥವಾ ಹೆಚ್ಚು ಎಂದು ಹೇಗೆ ತಿಳಿಯುವುದಿಲ್ಲವೊ ಹಾಗೆ ಪ್ರತಿಯೊಂದು ಧರ್ಮದವನೂ ತಿಳಿಯುವವನಾಗಬೇಕು.

ಇ) ಮತಾನುಯಾಯಿಗಳು ಎಂದರೆ ತಮ್ಮ ಮೂಲಮತವಾದಿಗಳು (Dictators) ಹೇಳಿದಂತೆ ನಡೆಯುವವರು ತಮ್ಮ ತಮ್ಮ ಉದ್ಧಾರವಾದ ಹೆಗ್ಗುರುತು ಏನು ಎಂಬುದನ್ನು ಚೆನ್ನಾಗಿ ಪ್ರತಿಪಾದಿಸಬೇಕು. ಜಿನ, ಕ್ರಿಸ್ತ, ಬುದ್ಧ, ಮುಹಮ್ಮದ್ ಇವರು ಹೇಳಿದಂತೆ ನಡೆವವರು ಆಯಾಯ ಮತಾನುಯಾಯಿಗಳೆಂದು ತಿಳಿಯಲ್ಪಡುತ್ತಾರೆ. ಶ್ರೀ ಶಂಕರಾಚಾರ್ಯರೇ ಮೊದಲಾದ ಮೇಲೆ ಕಂಡ ಭಾರತೀಯ ಧರ್ಮದವರ ಬೋಧೆಯಂತೆ ನಡೆವವರು ತತ್ತ್ವಾನುಯಾಯಿಗಳು ಎಂದು ತಿಳಿಯಲ್ಪಡುತ್ತಾರೆ. ಜೈನ ಬೋಧೆಯಲ್ಲಿ ಪ್ರಕೃತಿಯೇ ಮುಖ್ಯ. ಪ್ರಕೃತಿ ಜ್ಞಾನದಿಂದಲೇ ಮನುಷ್ಯನ ಉದ್ಧಾರ. ಬೌದ್ಧ ಬೋಧೆಯಲ್ಲಿ ಬುದ್ಧಿಯೇ ಮುಖ್ಯ. ಅದರಿಂದಲೇ ಮನುಷ್ಯನ ಉದ್ಧಾರ. ಕ್ರೈಸ್ತ ಬೋಧೆಯಲ್ಲಿ ಪ್ರೇಮವೇ ಮುಖ್ಯ. ಅದರಿಂದಲೇ ಮನುಷ್ಯನ ಉದ್ಧಾರ. ಮುಹಮ್ಮದೀಯ ಬೋಧೆಯಲ್ಲಿ ಶಾಂತಿಯು ಮುಖ್ಯ. ಅದರಿಂದಲೇ ಮನುಷ್ಯನ

ಉದ್ಧಾರ. ಎಂದು ಈಗ ವ್ಯಕ್ತವಾಗಿರುವಂತೆ ಆಯಾ ಮತಾನುಯಾಯಿಗಳು ಆ ಹೆಗ್ಗುರುತನ್ನೇ ಹೆಚ್ಚಾಗಿ ಪ್ರತಿಪಾದಿಸುವವರಾಗಬೇಕು. ಭಾರತೀಯ ಧರ್ಮದವರು ದೇವನನ್ನೇ ಮುಖ್ಯವಾಗಿ ನಂಬಿ ನಡೆಯುವಲ್ಲಿ ಆ ದೇವನ ವಿಷಯವನ್ನು ತತ್ತ್ವರೂಪದಲ್ಲಿ ತಿಳಿದು ಎಂದರೆ ನಿರಾಕಾರನೊಬ್ಬನೇ ದೇವ (ಬ್ರಹ್ಮ) ಎಂಬುದು ಅದ್ವೈತ. ದೇವನೂ ಮನುಷ್ಯನೂ ಬೇರೆ ಬೇರೆ ಎಂಬುದು ದ್ವೈತ, ಪ್ರಕೃತಿಯೂ ಮನುಷ್ಯನೂ ದೇವನಲ್ಲಿ ಸೇರಿಕೊಂಡೇ ಇದ್ದಾರೆ ಎಂಬುದು ವಿಶಿಷ್ಟಾದ್ವೈತ. ಬ್ರಹ್ಮಾಂಡವೂ ಪಿಂಡಾಂಡವೂ ದೇವನೂ ಒಂದೇ ಎಂಬುದು ಶಿವಾದ್ವೈತ. ಹೀಗೆ ನಿರಾಕಾರನ ವಿಷಯವನ್ನು ತಿಳಿದು ನಡೆಯುವುದನ್ನು ಬೋಧಿಸುವುದರಿಂದ ಆಯಾ ಅನುಯಾಯಿಗಳು ತತ್ವಾನುಯಾಯಿಗಳೇ ಎಂದು ತಿಳಿಯಲ್ಪಡುತ್ತಾರೆ. ಶ್ರೀ ಶಂಕರಾಚಾರ್ಯರಾಗಲೀ ಶ್ರೀ, ಮಧ್ವಾಚಾರ್ಯರಾಗಲೀ ನಾನು ಹೇಳುತ್ತೇನೆ ಅದರಂತೆ ಜನರಾಚರಿಸಬೇಕೆಂದು ಹೇಳುವವರಲ್ಲಿ, ದೇವನ ವಿಷಯದಲ್ಲಿ ಈ ರೀತಿ ತಿಳಿದು ನಡೆಯಿರಿ ಎಂದು ಬೋಧಿಸುವವರು. ಇವುಗಳನ್ನೇ ಯಾರು ಮೊದಲು ಬೋಧಿಸಿದರೆಂದು ಯೋಚಿಸುವುದಾದರೆ ಕೈಲಾಸದ ಶಿವ ಎಂಬ ದೇವನೂ, ವೈಕುಂಠದ ವಿಷ್ಣು ಎಂಬ ದೇವನೂ ಇದ್ದಾರೆ ಎಂದು ತತ್ವದ ಮೂಲ ಪುರುಷರು ಹೇಳಿದಾಗ ಭಾರತೀಯ ಧರ್ಮದಲ್ಲಿ ಶೈವ, ವೈಷ್ಣವ ಎಂಬ ಎರಡು ಮುಖ್ಯ ಮತಗಳಿರುವುದಾಗಿ ತಿಳಿಯಬೇಕಾಗುತ್ತದೆ. ಈ ಎರಡು ಮತಗಳಾದರೂ ಬ್ರಾಹ್ಮಣಾದಿ ಜಾತಿಗಳುಳ್ಳವರಾಗಿ ಕಂಡುಬರುತ್ತದೆ. ಹೀಗಿದ್ದರೂ ಭಾರತೀಯ ಧರ್ಮದ ಹೆಗ್ಗುರುತು (Motto) "ಶಾಂತಿ" ಇದರಿಂದಲೇ ಮನುಷ್ಯನ ಉದ್ಧಾರ ಭಗವದ್ಗೀತೆಯು ಇದನ್ನೇ ಒಪ್ಪುತ್ತದೆ.

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ......'

**'.....ತಮೇವ ಶರಣಂ ಗಚ್ಛ....' "ತತ್ ಪ್ರಸಾದೇನ ಶಾಂತಿ ಮಧಿಗಚ್ಛಸಿ"**

ಈ) ಈ ಗೀತೆಯ ವಾಕ್ಯಗಳು ಶಾಂತಿಯ ಫಲವನ್ನೇ ಹೇಳುತ್ತವೆ. ಭಾರತೀಯರಲ್ಲಿ ದೇವನ ಅಭಿಷೇಕವನ್ನು ಮೊಟ್ಟಮೊದಲು ಮಾಡಿದಾಗ ಓಂ ಶಾಂತಿಃ ಶಾಂತಿಃ ಶಾಂತಿಃ ಎಂದು ಮೂರು ಬಾರಿ ಕೊನೆಯಲ್ಲಿ ಉಚ್ಚರಿಸುತ್ತಾರೆ. ವೇದದ ನಾಲ್ಕು ಭಾಗಗಳಿಗೂ ಶಾಂತಿ ಮಂತ್ರಗಳು ಇವೆ. ಭಾರತೀಯರು ಮುಕ್ತಿಯನ್ನು ಬಯಸುವವರು ಎಂದು ಮುಖ್ಯವಾಗಿ ತಿಳಿಯಲ್ಪಟ್ಟಿದ್ದರೂ ಆ ಮುಕ್ತಿಯೂ ಸಹ ಈ ಲೋಕದಲ್ಲಿ ಶಾಂತಿ ವರ್ತನೆಯಿಂದ ದೊರಕುತ್ತದೆ ಎಂದು ಬೋಧಿಸಿ ಜನರನ್ನು ಶಾಂತಿಯ ಕಡೆ ಎಳೆಯುವುದೇ ಆಗಿದೆ. ಮಹಮ್ಮದೀಯರ ಬೋಧೆಯು ಶಾಂತಿಯು ಈ ಜೀವನಿಗಿರುವಾಗ ಈ ಲೋಕದಲ್ಲಿ ಅನುಭವಿಸಲ್ಪಡುವುದಾಗಿದೆ. ಭಾರತೀಯರ ಶಾಂತಿಯು ಜೀವನು ದೇಹದಲ್ಲಿರುವಾಗಲೂ, ದೇಹವನ್ನು ಬಿಟ್ಟು ನಿರಾಕಾರ ರೂಪದಲ್ಲಿ ಇರುವಾಗಲೂ ಅನುಭವಿಸಲ್ಪಡುವುದಾಗಿದೆ. ಮೇಲೆ ಕಂಡ ತತ್ವದ ಅನುಯಾಯಿಗಳಾದರೂ ತಮ್ಮ

ತತ್ವದ ಬೋಧೆಗಳನ್ನು ಚೆನ್ನಾಗಿ ಪ್ರತಿಪಾದಿಸಬೇಕು. ಹಾಗಾದರೆ ಭಾರತೀಯ ಧರ್ಮವು ಜನರಿಗೆ ಚೆನ್ನಾಗಿ ತಿಳಿಯಲ್ಪಡುವುದಕ್ಕೆ ಅವಕಾಶವಾಗುತ್ತದೆ.

ಉ) ಈಗಿನ ಶೋಧನ ಶಾಸ್ತ್ರದವರು ಈ ಜಗತ್ತಿನಲ್ಲಿ ಎಲ್ಲಾ ವಸ್ತುಗಳೂ ಜೀವವುಳ್ಳವುಗಳೆಂದು ನಿರ್ಣಯಿಸಿರುವಂತೆ ಪಿಂಡಾಂಡ ಬ್ರಹ್ಮಾಂಡ ಎರಡೂ ಚೈತನ್ಯವುಳ್ಳವುಗಳೆಂದೂ ನಿರಾಕಾರ ದೇವನ ರೂಪಗಳೆಂದೂ ದೃಢವಾಗಿ ನಂಬುವವರಾಗಬೇಕು. ಇದರಿಂದ ಮೇಲೆ ಕಂಡಂತೆ ತತ್ವಾನುಯಾಯಿಗಳು ಏನು ಬೋಧಿಸಿದಾಗ್ಯೂ ಅದರಲ್ಲಿನ ನಿಜಾಂಶವನ್ನು ಹೊರಗೆ ತೆಗೆದು ಅದರ ಆಚರಣೆಗೆ ತರಲಿಕ್ಕೆ ಅನುಕೂಲವಾಗುತ್ತದೆ.

ಊ) ಜೀವ, ದೇವ, ಜಗತ್ತು ಈ ವಿಷಯಗಳಲ್ಲಿ ಮತಬೋಧೆಯವರೂ ತತ್ತ್ವ ಬೋಧೆಯವರೂ ಹೇಳದ ವಿಷಯಗಳನ್ನು ಸಂಗ್ರಹಿಸಿ ಮುಂದೆ ಒಂದೇ ಧರ್ಮವಾಗುವುದಕ್ಕೆ ಯಾವ ಯಾವ ರೀತಿ ಮಾಡಬೇಕೆಂದು ಯೋಚಿಸಿ ಪ್ರಯತ್ನಿಸುವುದು.

(ಈ ವಿಷಯದಲ್ಲಿ 'ಜಗತ್ತಿನಲ್ಲಿ ಒಂದೇ ಧರ್ಮ' ಎಂಬ ಲೇಖನವು ಇದೇ ಮಾಸ ಪತ್ರದಲ್ಲಿ (ಪುಟ i-iv) ಪ್ರಕಟವಾಗಿದೆ. ಅದನ್ನು ನೋಡಿ ಆ ರೀತಿ ಮಾಡುವದಕ್ಕೆ ಪ್ರಯತ್ನಿಸುವುದು ಮುಖ್ಯ)

ಎ) ನೀತಿಗಳ ವಿಚಾರದಲ್ಲಿ ಒಂದೊಂದು ಧರ್ಮದವರು ಒಂದೊಂದು ರೀತಿ ಹೇಳಿರಬಹುದು. ಅವು ಕಾಲ ದೇಶ ಸಂದರ್ಭಗಳಿಗನುಸಾರವಾಗಿ ಹೆಚ್ಚು ಕಡಿಮೆಯಾಗುತ್ತದೆ. ಹಿಟ್ಲರನು ಯುದ್ಧದ ಕಾಲಕ್ಕೆ ಒಬ್ಬ ಗಂಡಸು ಅನೇಕ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳಬೇಕೆಂದು ವಿಧಿಸಿದರೆ ಈಗಿನ ಭಾರತ ರಾಜಕೀಯವು ಒಬ್ಬನು ಒಬ್ಬಳನ್ನೇ ಮದುವೆಯಾಗಬೇಕೆಂದು ವಿಧಿಸುತ್ತದೆ.

ಭಾರತದಲ್ಲಿಯೂ ಪೂರ್ವದಲ್ಲಿ ಬಹಳ ಜನರಿಗೆ ಅನ್ನಸಂತರ್ಪಣೆ ಮಾಡಿದರೆ ಅವರು ಬಹಳ ಒಳ್ಳೆಯವರೆಂದು ತಿಳಿಯಲ್ಪಡುತ್ತಿದ್ದರು. ಈಗ ಹಾಗೆ ಮಾಡಿದರೆ ಅವರು ದ್ರೋಹಿಗಳೆಂದು ತಿಳಿಯಲ್ಪಡುತ್ತಾರೆ.

ಮಹಮ್ಮದೀಯರು ತಂದೆಯ ತಮ್ಮನ ಮಗಳನ್ನು ಮದುವೆಯಾಗುವುದು ಯುಕ್ತವೆಂದು ಬೋಧಿಸಿದರೆ ಭಾರತೀಯರು ತಾಯಿಯ ತಂಗಿಯ ಅಥವಾ ಅಕ್ಕನ ಮಗಳನ್ನು ಮದುವೆಯಾಗಬೇಕು ಎಂದು ವಿಧಿಸಿದ್ದಾರೆ.

ಇವುಗಳನ್ನೆಲ್ಲಾ ಯೋಚಿಸಿ ದೇಶ, ಕಾಲ, ಸಂದರ್ಭಗಳಿಗನುಸಾರವಾಗಿ ನೀತಿಯನ್ನು ಏರ್ಪಡಿಸಿಕೊಳ್ಳಬಹುದಾಗಿದೆ.

ಒಟ್ಟಿನಲ್ಲಿ ದೇವನನ್ನು ಅನುಸರಿಸಿದ ಮಾರ್ಗವನ್ನು ಒಂದು ವಿಧದಲ್ಲಿ ಸರ್ವರೂ ಇಟ್ಟುಕೊಳ್ಳುವುದು ಅಥವಾ ಇಂತಹುದುದು ಉತ್ತಮೋತ್ತಮ ಮಾರ್ಗವೆಂದು ಗ್ರಹಿಸುವುದು ಧರ್ಮದ ಐಕ್ಯತೆಯ ಸಾಧನವಾಗಿದೆ ಎಂಬುದನ್ನು ಸರ್ವರೂ ಯೋಚಿಸಿ ಅದಕ್ಕಾಗಿ ಪ್ರಯತ್ನಿಸುವುದು ಅವಶ್ಯಕವಾಗಿದೆ.

(ಸಂ. ? )

# ಆಧ್ಯಾತ್ಮಿಕ ದೃಷ್ಟಿಯ ಅವಶ್ಯಕತೆ*

ಈ ಪ್ರಪಂಚದಲ್ಲಿನ ಎಲ್ಲ ಜನರಿಗೂ ಎರಡು ವಿಧದ ಕಾರ್ಯಗಳಿವೆ. ಈ ಲೋಕದಲ್ಲಿ ದೇಹ ಸೌಖ್ಯಕ್ಕಾಗಿ ಪ್ರಯತ್ನಿಸುವುದು. ದೇಹದಿಂದ ಜೀವನು ಬಿಡುಗಡೆ ಹೊಂದಿದ ಮೇಲೆ ಸನ್ನುತವಾದ ಉನ್ನತಿಯನ್ನು ಪಡೆಯಲು ಯತ್ನಿಸುವುದು. ಈ ಎರಡನೆಯ ಕಾರ್ಯವನ್ನು ಬಹಳ ಜನರು ಚಿಂತಿಸುತ್ತಲಿಲ್ಲ. ಕೆಲವರು ಜೀವನ ಮುಂದಿನ ಗತಿಯುಂಟೆಂಬುದನ್ನು ತಿಳಿಯದೇ ಇರುವುದೇ ಇದಕ್ಕೆ ಕಾರಣ.

ಈಗಿನ ಪಾಶ್ಚಾತ್ಯ ಶೋಧಕರು ಮನುಷ್ಯ ದೇಹದಿಂದ ಜೀವನ ವಿಯೋಗವಾದ ಮೇಲೆ ಜೀವನು ಇದ್ದು ಕೆಲಸ ಮಾಡುತ್ತಾನೆ ಎಂದು ಕಂಡು ಹಿಡಿದಿರುವುದರಿಂದ ಇತರರ ದೇಹಗಳಲ್ಲಿ ಪ್ರವೇಶಿಸಿ ಮಾತನಾಡುವುದೇ ಮೊದಲಾದವುಗಳಿಂದ ಜೀವನಿಗೆ ಮುಂದೆ ಗತಿಯುಂಟೆಂದು ತಿಳಿಯಬೇಕು. ಈ ಜೀವನ ಕೆಲಸವನ್ನು ಉತ್ತಮಗೊಳಿಸಬೇಕೆಂಬ ಮನುಷ್ಯನು ಜೀವಿಸಿದ್ದಾಗ ಮಾಡುವುದೇ ಮುಖ್ಯ ಕಾರ್ಯ.

ಇದಕ್ಕಾಗಿ ದೇವನೊಬ್ಬನಿದ್ದಾನೆ. ಅವನ ಮರೆ ಹೋಗುವುದರಿಂದ ಜೀವನಿಗೆ ನಿತ್ಯಾನಂದ ಪರಿಸ್ಥಿತಿಯೊದಗುತ್ತದೆ ಎಂಬುದೇ ಪ್ರಪಂಚದ ಬಹುಭಾಗದ ಜನರ ಯೋಚನೆ. ಇದಕ್ಕೇ ಧರ್ಮ ಎಂದು ಕರೆಯುತ್ತಾರೆ.

ದೇವನು ಕಣ್ಣಿಗೆ ಕಾಣುವುದಿಲ್ಲ ಎಂದು ಬಹು ಜನರ ತಿಳುವಳಿಕೆ. ಅವನ ಸೂಕ್ಷ್ಮ ರೂಪವು ಮನುಷ್ಯನ ಕಣ್ಣಿಗೆ ಕಾಣನಂತೆ ಇದ್ದರೂ ಸ್ಥೂಲರೂಪವು ಕಣ್ಣಿಗೆ ಕಾಣುತ್ತದೆ. ಆ ಮಹಾದೇವನನ್ನು ನಾನು ತೋರಿಸುತ್ತೇನೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ಭಾರತೀಯ ಧರ್ಮದ ಮುಖ್ಯ ಬೋಧೆ, ಆ ಪ್ರಕಾರ ಕಣ್ಣಿಗೆ ಕಾಣುವ ಜಗತ್ತು ಮೊದಲಾದುವುಗಳೆಲ್ಲವೂ ಬ್ರಹ್ಮವೇ. ಸೂರ್ಯನು ಬ್ರಹ್ಮ; ಭೂಮಿ ಬ್ರಹ್ಮ ಬ್ರಹ್ಮವಲ್ಲದುದು ಒಂದೂ ಇಲ್ಲ ಎಂಬುದನ್ನು ಅನೇಕ ಉಪನಿಷತ್ತುಗಳು ಬೋಧಿಸುತ್ತವೆ.

ಈಗಿನ ಶಾಸ್ತ್ರಕಾರರೇ (scientists) Eletron ಅಥವಾ ಇನ್ನೊಂದು ಹೆಸರಿನ ಅಣುವಿನಿಂದ ಸರ್ವವೂ ಆಗಿದೆ ಎಂದೂ ಅಣುವಿಗಿಂತಲೂ ಸೂಕ್ಷ್ಮರೂಪವಾದುದು ಅನಿರ್ವಾಚ್ಯವೆಂದೂ ಹೇಳುತ್ತಾರೆ. ಆ ಅನಿರ್ವಾಚ್ಯವನ್ನೇ ಮಹಾದೇವನ ಕಾಣದನೆಂದು ಭಾವಿಸಲಿಕ್ಕೆ ಬರುತ್ತದೆ.

---

* ಶ್ರೀ ಚೆನ್ನಮಲ್ಲಿಕಾರ್ಜುನರು ವಿಜಾಪುರದಲ್ಲಿ ನಡೆದ ೭೭೦ ಜನ ಅಮರ ಗಣಾಂಗಳ ಪೂಜಾ ಕಾಲದಲ್ಲಿ ಸೇರಿದ ಸಭೆಯಲ್ಲಿ ಮಾಡಿದ ಭ ಷಣದ ಸಾರಾಂಶ.

ಭಾರತ ದೇಶದ ಧರ್ಮವು ಒಂದು ದೊಡ್ಡ ಆಲದ ಮರಕ್ಕೆ ಸದೃಶವಾದುದು. ಆಲದ ಮರವು ಅನೇಕರಿಗೆ ನೆಳಲನ್ನು ಕೊಡುವಂತೆ ಭಾರತ ಧರ್ಮವು ಅನೇಕರಿಗೆ ಆಶ್ರಯವನ್ನು ಕೊಟ್ಟಿದೆ. ಬುದ್ಧಧರ್ಮ, ಕ್ರೈಸ್ತಧರ್ಮ, ಮುಹಮ್ಮದೀಯ ಧರ್ಮಗಳಿವೆ. ಭಗವಾನ್ ಬುದ್ಧನು ಬರೆದ ಗ್ರಂಥಗಳಿವೆ. ಮುಹಮ್ಮದ್ ಪೈಗಂಬರರ ಖುರಾನ್ ಇದೆ. ಯೇಸುಕ್ರಿಸ್ತನ ಬೈಬಲ್ ಇದೆ. ಎಲ್ಲವೂ ಧರ್ಮವನ್ನು ಹೇಳುತ್ತವೆ.

ಬರೀ ದೇವನೊಬ್ಬನ ವಿಷಯವೇ ಅಲ್ಲದೆ ಜಗತ್ತು, ಜೀವ ಇವರುಗಳ ವಿಷಯವಾಗಿ ದೈವಿಕ ಭಾವನೆಯ ಯೋಚನೆ ಮಾಡುವುದೂ ಧರ್ಮದೊಳಗೇ ಸೇರಿಕೊಂಡಿವೆ.

ಧರ್ಮದ ವಿಷಯವಾಗಿ ಯಾರು ಹೇಳಿದರೂ ಈ ವಿಷಯಗಳನ್ನೇ ಬೋಧಿಸುತ್ತಾರೆ. ಈ ಜಗತ್ತನ್ನು ಬಿಟ್ಟು ಯಾವನೂ ದೇವನನ್ನು ಕಾಣುವ ಹಾಗಿಲ್ಲ. ಈ ಜೀವನನ್ನು ಬಿಟ್ಟು ಯಾವನೂ ದೇವನನ್ನು ಕಾಣುವ ಹಾಗಿಲ್ಲ.

ಭಾರತದಲ್ಲಿನ ಧರ್ಮ ವಿಧಾನಗಳು ಸಾವಿರಾರು ಇವೆ. ಅವುಗಳಲ್ಲಿ ದೇವಸ್ಥಾನದಲ್ಲಿನ ದೇವನನ್ನು ಪೂಜಿಸಬೇಕೆಂದು ಹೇಳುವವುಗಳೇ ಬಹಳ. ಆ ದೇವರುಗಳ ಭಕ್ತರು ನಿರಾಕಾರ ದೇವನನ್ನು ನಂಬುವ ಹವ್ಯಾಸಕ್ಕೆ ಹೋಗುವುದಿಲ್ಲ. ನಿರಾಕಾರನಾದ ಒಬ್ಬನೇ ದೇವನಿದ್ದಾನೆ ಎಂದು ತಿಳಿಯುವುದೇ ಧರ್ಮದಲ್ಲಿ ಮೇಲಿನ ತರಗತಿಯ ಜ್ಞಾನ. ಭಗವದ್ಗೀತೆ ಇದನ್ನೇ ಹೇಳುತ್ತದೆ.

ಈ ನಿರಾಕಾರನನ್ನು ಕಂಡುಹಿಡಿಯಲು ಮನುಷ್ಯನು ತನ್ನ ಶರೀರದಲ್ಲಿ (ಅಂಗದಲ್ಲಿ) ನೋಡಿಕೊಳ್ಳಬೇಕೆ ಹೊರತು ಹೊರಗಿನ ಪ್ರಪಂಚದಲ್ಲಿ ಅವನಿಗೆ ಏನೂ ಗೊತ್ತಾಗುವುದಿಲ್ಲ. ಪಾಶ್ಚಾತ್ಯ ಶಾಸ್ತ್ರಜ್ಞರೆಲ್ಲರೂ ಈ ವಿಷಯಕ್ಕೆ ಗಮನವನ್ನು ಕೊಟ್ಟಿರುವುದು ಅಪರೂಪ.

'Man the Unknown' ಎಂಬ ಪುಸ್ತಕವು ಈ ವಿಷಯವನ್ನು ಚೆನ್ನಾಗಿ ತಿಳಿಸುತ್ತದೆ. ತನ್ನಲ್ಲಿ ನಿರಾಕಾರನನ್ನು ಕಾಣಬೇಕೆಂಬುದೇ ಧರ್ಮದ ಮುಖ್ಯ ಪಾಠ. ಇದನ್ನು ತಿಳಿಯದೆ ಬಹಳ ಜನರು ಶ್ರಮ ಹೆಚ್ಚು ಫಲ ಕಡಿಮೆಯ ಕೆಲಸವನ್ನು ಮಾಡುತ್ತಾರೆ. ನಿರಾಕಾರನನ್ನು ತಿಳಿಯುವವರಿಗೆ ಶ್ರಮ ಕಡಿಮೆ ಫಲ ಹೆಚ್ಚು ದೊರಕುತ್ತದೆ.

ವೀರಶೈವ ಧರ್ಮವು ಒಂದು ಜಾತಿಯಲ್ಲ. ಇದೊಂದು ವ್ರತವುಳ್ಳದು. ಲಿಂಗವು ಜಗದ್ರೂಪನಾದ ಬ್ರಹ್ಮನ ಸದೃಶವುಳ್ಳದು. ಹೀಗೆ ತಿಳಿದರೆ ಪ್ರಪಂಚದ ಜನರೆಲ್ಲರೂ ಲಿಂಗಾಂಗಿಗಳೇ ಆಗುತ್ತಾರೆ. ಆದರೆ ಅನೇಕರಿಗೆ ಆ ಸಂಗತಿ ತಿಳಿಯದು. ಕಣ್ಣೇ ಮನುಷ್ಯನಲ್ಲಿ ಇರುವ ಪ್ರಾಣಲಿಂಗ. ಅದರ ರೂಪವೇ ಇಷ್ಟಲಿಂಗ. ಆ ವಿಷಯದಲ್ಲಿ ಉಪನಿಷತ್ತುಗಳಲ್ಲಿಯೂ ಕನ್ನಡ ಗ್ರಂಥಗಳಲ್ಲಿಯೂ ಉಲ್ಲೇಖಗಳಿವೆ. 'ತಾರಕರತ್ನಾಕರ' ಎಂಬುದೊಂದು ಚಿಕ್ಕ ಗ್ರಂಥವು ನೇತ್ರದ ವಿಷಯವನ್ನು ವಿಶೇಷವಾಗಿ ತಿಳಿಸುತ್ತದೆ.

ಇವನ್ನೆಲ್ಲಾ ಪರಿಶೀಲಿಸಿದಾಗ ಈ ನಮ್ಮ ಭೂಮಿಗೆ ಒಬ್ಬ ಸೂರ್ಯ ಒಂದು ವಾಯುಮಂಡಲ ಮೊದಲಾದುವುಗಳಿದ್ದಂತೆ ದೇವನೂ ಒಬ್ಬನೇ ಇದ್ದಾನೆ. ಅವನ ಮೂಲ ರೂಪವನ್ನು ವಿಸ್ತೃತ ರೂಪವನ್ನೂ ತಿಳಿಯದೆ ನಮ್ಮ ಮನಬಂದಂತೆ ಕಲ್ಪಿಸಿ ಕೊಂಡು ನಾವು ಭಿನ್ನ ಭಿನ್ನವಾಗಿ ಧರ್ಮವಂತರಾಗಿದ್ದೇವೆ. ಎಲ್ಲರಿಗೂ ದೇವ ನೊಬ್ಬನೇ ಆ ಮಹಿಮನ ವಿಷಯಗಳನ್ನು ತಿಳಿಯುವವರು ಜಗತ್, ಜೀವ, ದೇವ ಇವರ ವಿಷಯದಲ್ಲಿನ ಕೆಲವು ಅಂಶಗಳನ್ನೇ ತಿಳಿದುಕೊಂಡದ್ದನ್ನು ಗೊತ್ತುಮಾಡಿ ಕೊಂಡು ಮುಂದೆ ಇನ್ನೂ ಇದೆ ಎಂಬುದನ್ನು ತಿಳಿಯುವವರಾದರೆ.

೧ನೆಯ ತರಗತಿಯಲ್ಲಿ ಓದುವವನು M.A. ತರಗತಿಯವರೆವಿಗೂ ಓದತಕ್ಕದ್ದು ಉಂಟೆಂದು ತಿಳಿಯುವಂತೆ ತಿಳಿಯುವವರಾದರೆ ಜಗತ್ತೆಲ್ಲವೂ ಒಂದೇ ಧರ್ಮದಲ್ಲಿ ಇದ್ದಂತಾಗುತ್ತದೆ.

ಆಗ ಬೇರೆ ಬೇರೆ ಧರ್ಮ ಬೋಧಕರ ಸ್ಮರಣೆಯನ್ನು ಮಾಡುತ್ತಾ ದೇವನ ವಿಷಯವನ್ನು ಒಂದೇ ವಿಧದಲ್ಲಿ ತಿಳಿಯಲನುಕೂಲವಾಗುತ್ತದೆ. ಇದರಿಂದ ಸೌಹಾರ್ದ ಭಾವವು ಜಗತ್ತಿನಲ್ಲಿ ಬೆಳೆಯುತ್ತದೆ.

"ಚಕ್ಷುರ್ಮನಸ್ತಮಃ ಸ್ಥಾನಂ ಸರಿತ್‌ಸಾಗರ ಸಂಜ್ಞರಂ
ಹೃದಯಂ ದಹರಂ ದಾರ್ಹಂ ಪರ್ಜನ್ಯಂ ಕೃಷ್ಣಪಿಂಗಲಂ
ನವಚಕ್ರೋಜ್ವಲಂ, ಸೂರ್ಯ ಚಂದ್ರಾಗ್ನಿ ಪರಿಭೂಷಿತಂ"
"ಕುಂಡಲೀ ಮಂಟಪಂ ಪ್ರಾಣಪ್ರಣವ ಜ್ಯೋತಿರಾಶ್ರಯಂ
ಸರ್ವಾಶ್ರಯಂ ಬ್ರಹ್ಮಬೀಜಂ ಸಹಸ್ರದಳ ಪಂಕಜಂ
ಅಂಗ ಲಿಂಗತ್ರಯಾಧಾರಂ ತದ್ವಿಷ್ಣೋಃ ಪರಮಂ ಪದಂ
ಅಪಃ ಸ್ಥಲಾಖ್ಯಂ ಚ ಶಿವಯೋರ್ಬೀಜಯೋಃ ಸ್ಥಲಂ
ವಾಲಾಗ್ರಾಂಗುಷ್ಠ ಸದೃಶಂ ಸೃಷ್ಟಿ ಸಂಹಾರ ಕಾರಣಂ
ತಾರಕಾತ್ಮ ಚಿದಾಭಾಸ ಸ್ವರೂಪಂ ತದ್ ಹೃದಂಬುಜಂ"

(ಅನುಭಾವ ಪ್ರದೀಪಿಕೆ)

ನಿಜ ಶಿವಯೋಗಿಯ ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗಾಂಗ ಪರಿಪೂರ್ಣ, ಪರಿಪೂರ್ಣವೇ ಪರಬ್ರಹ್ಮ ತಾನೇ ನೋಡ ಅದೆಂತೆಂದೊಡೆ

ಸಾಕ್ಷಿ: "ನೇತ್ರದೇವೊ ನ ಚಪರಃ ನೇತ್ರಂ ಚ ಸರ್ವಮೇವ ಚ
ನೇತ್ರಮಧ್ಯೋದ್ಭವಂ ಲಿಂಗಂ ನೇತ್ರ ಮಧ್ಯೋದ್ಭವಂ ಶುಭಂ
ದ್ವಿನೇತ್ರಂ ಕುಚವಲ್ಲ್ಯಂಗ್ಯಂ ಚಕ್ಷುಶ್ಚ ಶಿವಪುಷ್ಪ(ಷ್ಟ)ಕಂ
ಲಿಂಗ ಜ್ಯೋತಿ ಸ್ಥಿತಂ ನೇತ್ರಂ ಲಿಂಗಾಭಿಷೇಕ ಶ್ಚಾಕ್ಷುಷಃ
ಇಂತು ತನ್ನ ತಾನೇ ಬೆಳಗುತಿಪ್ಪುದು ನೋಡಾ. ಗುಹೇಶ್ವರ ಲಿಂಗವು"

(ಪ್ರಭುಸ್ವಾಮಿಗಳವರ ವಚನ)

ಯಜುರ್ವೇದ.

ಯೋಪಾಂ ಪುಷ್ಪಂ ವೇದ ಪುಷ್ಪವಾರ್ ಪ್ರಜಾವಾರ್ ಪಶುವಾರ್ಭವತಿ
ಯೋಪಾಂ ಮಾಯತನಂ ವೇದ ಆಯತನವಾರ್ ಭವತಿ

ಮೊದಲಾದ ವೇದವಾಕ್ಯಗಳಿವೆ.

ಈ ಪ್ರಮಾಣಗಳಿಂದ ಮನುಷ್ಯನ ದೇಹದಲ್ಲಿನ ನೇತ್ರವು ಎಂತಹ ಲಕ್ಷಣವುಳ್ಳದು? ಅದರ ಪ್ರಯೋಜನವನ್ನು ಮನುಷ್ಯನು ಸರಿಯಾಗಿ ಹೊಂದುವುದಾದರೆ ಎಂತಹ ಶ್ರೇಷ್ಠ ಸ್ಥಿತಿಯನ್ನು ಹೊಂದಬಹುದು ? ಮುಂತಾದ ವಿಷಯಗಳು ಚೆನ್ನಾಗಿ ಗೋಚರವಾಗುತ್ತವೆ. ಮೇಲೆ ಕಂಡ ಯಜುರ್ವೇದದ ಹೇಳಿಕೆಯ ಪ್ರಕಾರ ದೇಹದಲ್ಲಿರುವ ನೇತ್ರ ಕಮಲವನ್ನು ತಿಳಿದವನು ಬ್ರಹ್ಮಾಯತನವಂತನಾಗುತ್ತಾನೆ. ಎಂಬುದನ್ನು ಬಹಳವಾಗಿ ಪರಿಶೋಧಿಸಿ ಸಾಧಿಸಬೇಕಾದ ಅಂಶವಾಗಿದೆ. (ಇಲ್ಲಿ ಕೊಟ್ಟಿರುವ ಶ್ಲೋಕಗಳು ಒಂದು ಬರಹದ ಪ್ರತಿಯಿಂದ ಉದ್ಧರಿಸಿದವುಗಳಾಗಿವೆ. ವೇದಗಳೆಂದು ಪ್ರಕಟವಾಗಿರುವ ಸಂಹಿತಾ ಭಾಗದಲ್ಲಿ ಇಲ್ಲದಿದ್ದರೆ ಬ್ರಾಹ್ಮಣ ಭಾಗ ಉಪನಿಷದ್ ಭಾಗ ಇವುಗಳಲ್ಲಿ ನೋಡಬೇಕಾದುದು ಅವಶ್ಯ) ಅಂಗದ ಒಂದೊಂದು ಭಾಗವನ್ನೂ ಆಧ್ಯಾತ್ಮಿಕ ದೃಷ್ಟಿಯಿಂದ ದೇವನ ಕಡೆಗೆ ತಿರುಗಿಸುವುದಕ್ಕಾಗಿ ಈಗಿನ ಜನರ ಪ್ರಯತ್ನವು ಹೆಚ್ಚಾಗಿ ಆಗಬೇಕಾಗಿದೆ.

(ಸಂ.)

# ಅಹಿಂಸೆ ಎಂದರೇನು ?

ಒಬ್ಬ ಪತ್ರವ್ಯವಹಾರಿಯು ಮಹನೀಯರಾದ ಗಾಂಧೀಜಿಯವರಿಗೆ ಹೀಗೆ ಬರೆದಿರುತ್ತಾನೆ; ೫ನೆಯ ಮೇ ತಾರೀಖಿನ ಹರಿಜನ ಬಂಧು ಪತ್ರಿಕೆಯಲ್ಲಿ ನಿಮ್ಮ ಅಹಿಂಸೆ ಜನತೆಗೆ ಅಪಾಯ ಮಾಡುವ ಪ್ರಾಣಿಗಳನ್ನು ಚಿರತೆ, ತೋಳ, ಹಾವು, ಚೇಳುಗಳಂಥವೇ ಮೊದಲಾದವುಗಳನ್ನು ಕೊಲ್ಲುವುದರಲ್ಲಿ ಬಗೆಗೊಂಡಿರುವುದಾಗಿ ನೀವು ಬರೆಯುತ್ತೀರಿ.

ನಾಯಿಗಳೇ ಮೊದಲಾದವುಗಳಿಗೆ ಆಹಾರ ಕೊಡುವುದರಲ್ಲಿ ನಿಮಗೆ ವಿಶ್ವಾಸವಿಲ್ಲ. ಗುಜರಾತಿಗಳಲ್ಲದ ಇತರ ಜನರು ನಾಯಿಗಳಿಗೆ ಆಹಾರ ಕೊಡುವುದು ಯೋಗ್ಯ (ಪುಣ್ಯ) ಕೆಲಸವೆಂದು ತಿಳಿಯುತ್ತಾರೆ. ಈಗಿನಂತಹ ಆಹಾರ ಕೊರತೆಯ ಕಾಲದಲ್ಲಿ ಆ ತಿಳುವಳಿಕೆಯು ಯೋಗ್ಯವಾದುದಲ್ಲ. ಆದರೂ ಈ ಪ್ರಾಣಿಗಳು ಮನುಷ್ಯನಿಗೆ ಬಹಳ ಪ್ರಯೋಜನಕಾರಿಗಳೆಂಬುದನ್ನು ನಾವು ನೆನಪಿನಲ್ಲಿ ಇಡಬೇಕು. ಯಾರಾದರೂ ಅವುಗಳಿಂದ ಕೆಲಸ ತೆಗೆದುಕೊಂಡು ಅವುಗಳಿಗೆ ಆಹಾರ ಕೊಡಬಹುದು. ನೀವು ಶ್ರೀ ರಾಮಚಂದ್ರ ಭಾಯಿ ಎಂಬುವನಿಗೆ ೨೭ ಪ್ರಶ್ನೆಗಳನ್ನು ಹಾಕಿದ್ದೀರಿ. ಈ ಪ್ರಶ್ನೆಗಳಲ್ಲಿ "ಹಾವು ಕಚ್ಚಲಿಕ್ಕೆ ಬಂದಾಗ ಒಬ್ಬ ಶೋಧಕನು ಏನು ಮಾಡಬೇಕು ?" ಎಂಬುದೊಂದು. ಅದಕ್ಕೆ "ಆ ಹಾವನ್ನು ಕೊಲ್ಲಬಾರದು. ಅದು ಕಚ್ಚಿದರೆ ಅದನ್ನು ಹಾಗೆಯೇ ಬಿಟ್ಟು ಬಿಡಬೇಕು" ಎಂದು ಅವನು ಉತ್ತರ ಕೊಟ್ಟಿದ್ದನು. ಈಗ ನೀವು ಬೇರೆ ಮಾತನಾಡುವುದು ಹೇಗೆ ?"

ಈ ಬರವಣಿಗೆಗೆ ಗಾಂಧೀಜಿಯವರು ೯-೬-೪೬ರ "ಹರಿಜನ" ಪತ್ರಿಕೆಯಲ್ಲಿ ಕೊಟ್ಟ ಉತ್ತರದ ಸಾರಾಂಶವಿದು:

"ನಾನು ಈ ವಿಷಯದಲ್ಲಿ ಈ ಹಿಂದೆ ಬಹಳವಾಗಿ ಬರೆದಿರುತ್ತೇನೆ. ಆ ಕಾಲದಲ್ಲಿ ಹುಚ್ಚು ನಾಯಿಗಳನ್ನು ಕೊಲ್ಲುವ ವಿಷಯವಾಗಿತ್ತು. ಆವಾಗ ಈ ವಿಷಯದಲ್ಲಿ ಬಹಳ ಚರ್ಚೆ ನಡೆದಿತ್ತು. ಈಗ ಅದೆಲ್ಲವೂ ಮರೆತಿರುವಂತೆ ತೋರುತ್ತದೆ.

ನನ್ನ ಅಹಿಂಸೆಯು ಜೀವವುಳ್ಳ ಎಲ್ಲ ಪ್ರಾಣಿಗಳಲ್ಲಿನ ದಯೆಯು ಮಾತ್ರವಲ್ಲ. ಜೈನಮತದಲ್ಲಿ ಮನುಷ್ಯನಿಗೆ ಅಧೀನವಾದ (ಕೈಕೆಳಗಿನ) ಪ್ರಾಣಿಗಳ ಜೀವನದ ಪವಿತ್ರತೆಯ ವಿಷಯವಾದ ಮುಖ್ಯ ಭಾವವು ತಿಳಿಯಲ್ಪಡತಕ್ಕದ್ದಾಗಿದೆ. ಮನುಷ್ಯ ಜೀವವನ್ನು ಬಿಟ್ಟು ಈ ಪ್ರಾಣಿಗಳಿಗೆ ದಯೆ ತೋರಿಸಬೇಕೆಂದು ಇದರ ಅಭಿಪ್ರಾಯವೆಂದಿಗೂ ಆಗಲಾರದು. ಇಂಥಾ ಪ್ರಾಣಿಗಳ ಜೀವನದ ಮುಖ್ಯತೆಯನ್ನು ಬರೆಯುತ್ತಿರುವಲ್ಲಿ ಮನುಷ್ಯ ಜೀವಕ್ಕೆ ಆ ಮುಖ್ಯತೆಯು ಕೊಡಲ್ಪಟ್ಟಿದೆ, ಎಂದು ನಾನು ಗ್ರಹಿಸುತ್ತೇನೆ. ಪ್ರಾಣಿಗಳ ಜೀವದಯೆಯನ್ನು ಮುಖ್ಯವೆಂದು ಅನೇಕರು ಭಾವಿಸಿ

ಇರುವೆಗಳಿಗೆ ಆಹಾರವನ್ನು ಹಾಕುತ್ತಾರೆ. ಹೀಗೆ ಕಪಟಾಚರಣೆ ಮತ್ತು ಸಂಕುಚಿತಾರ್ಥ ಮಾಡುವಿಕೆಯು ಮತದ ಹೆಸರಿನಲ್ಲಿ ಈಗ ರೂಢವಾಗಿದೆ.

ಅಹಿಂಸೆಯೆಂಬುದು ಅತ್ಯುಚ್ಚವಾದ ಮನೋ ಕಲ್ಪನೆ. ಅದು ಧೈರ್ಯಶಾಲಿಗಳಿಗಾಗಿಯೇ ಹೊರತು ಹೇಡಿಗಳಿಗಲ್ಲ. ಇತರರನ್ನು ಕೊಲ್ಲುವುದರಲ್ಲಿ ಉಪಕಾರ ಮಾಡಿ (ಉಳಿಸಿ) ಒಬ್ಬನು ಒಳ್ಳೆಯ ಮತಾಚರಣೆಯಲ್ಲಿಯೂ ಅಹಿಂಸೆಯಲ್ಲಿಯೂ ಇರುವೆನೆಂದು ಭ್ರಮೆಗೊಳ್ಳುವುದು ಬರಿಯ ವಂಚನೆ. ಜೀವಮಾನದಲ್ಲಿ ಹಿಂಸೆಯನ್ನು ಸಂಪೂರ್ಣವಾಗಿ ಬಿಟ್ಟು ಬಿಡಲಾಗುವುದಿಲ್ಲ. ಮಾಂಸವನ್ನೇ ತಿಂದು ಬೆಳೆದ ಒಬ್ಬನಿಗೆ ಅದನ್ನು ಸುಮ್ಮನೆ ತಪ್ಪಿಸುವುದು ಪಾಪಕಾರ್ಯ.

ನಾನು ವ್ಯವಸಾಯಗಾರನಾಗಿ ಅರಣ್ಯದಲ್ಲಿ ಇರಬೇಕೆಂದು ಅಪೇಕ್ಷಿಸಿದರೆ ಜಮೀನುಗಳ ರಕ್ಷಣೆಗಾಗಿ ನಿರ್ವಾಹವಿಲ್ಲದೆ ಸ್ವಲ್ಪ ಹಿಂಸೆಯನ್ನು ಉಪಯೋಗಿಸಬೇಕಾಗುವುದು. ನನ್ನ ಬೆಳೆಯನ್ನು ತಿನ್ನುವ ಕಪಿಗಳನ್ನೂ ಪಕ್ಷಿಗಳನ್ನೂ ಕ್ರಿಮಿ ಕೀಟಕಗಳನ್ನು ಕೊಲ್ಲಬೇಕಾಗುವುದು. ನಾನು ಹಾಗೆ ಮಾಡಲಪೇಕ್ಷಿಸದಿದ್ದರೆ ನನಗಾಗಿ ಇತರರನ್ನು ಆ ಕೆಲಸ ಮಾಡಲು ನಿಯಮಿಸಬೇಕಾಗುವುದು. ನಮ್ಮಿಬ್ಬರಲ್ಲಿ ಆಗ ವ್ಯತ್ಯಾಸವೇನೂ ಇಲ್ಲ. ಅಹಿಂಸೆಯ ಹೆಸರಿನಲ್ಲಿ ಬೆಳೆಯನ್ನು ತಿನ್ನಲು ಬಿಟ್ಟುಬಿಡುವುದು, ದೇಶದಲ್ಲಿ ಕ್ಷಾಮವಿರುವಾಗ ನಿಶ್ಚಯವಾಗಿಯೂ ಪಾಪ, ಕೆಲವು ಸಂದರ್ಭಗಳಲ್ಲಿ ಒಳ್ಳೆಯದಾಗಿರುವುದು, ಬೇರೆ ಕೆಲವು ಸಂದರ್ಭಗಳಲ್ಲಿ ಕೆಟ್ಟುದಾಗಿಯೂ ಪಾಪಕಾರ್ಯವಾಗಿಯೂ ಆಗಬಹುದು.

ಮನುಷ್ಯನು ಶಾಸ್ತ್ರಗಳೆಂಬ ಬಾವಿಯಲ್ಲಿ ಮುಳುಗಿ ಸಾಯಬಾರದು. ಅವುಗಳ ವಿಶಾಲವಾದ ಸಾಗರದಲ್ಲಿ ಮುಳುಗಿ ಮುತ್ತುಗಳನ್ನು ಹುಡುಕಿ ತರುವವನಾಗಬೇಕು. ಪ್ರತಿಯೊಂದು ನಡೆಯಲ್ಲಿಯೂ ಯಾವುದು ಅಹಿಂಸೆ ಯಾವುದು ಹಿಂಸೆ ಎಂಬುದನ್ನು ತಿಳಿಯಲಿಕ್ಕೆ ತನ್ನ ವಿಚಾರ ಶಕ್ತಿಯನ್ನು ಉಪಯೋಗಿಸಬೇಕು.

ಹಾವುಗಳು ಚೇಳುಗಳ ಜತೆಗೆ ಹೆದರಿಕೆಯಿಲ್ಲದೆ ಆಟವಾಡಬೇಕೆಂದು ನನ್ನ ಕಲ್ಪನೆಯಿದೆ. ಆದರೆ ಆವರೆವಿಗೂ ಆಗಬೇಕೆಂಬುದು ನನ್ನ ಅಪೇಕ್ಷೆ. ಅದು ಯಾವಾಗ ಎಲ್ಲಿ ಸಂಭವಿಸುವುದೆಂದು ನನಗೆ ಗೊತ್ತಿಲ್ಲ. ಎಲ್ಲೆಲ್ಲಿಯೂ ನನ್ನ ಬಳಿಯ ಜನರಿಗೆ ಎರಡನ್ನೂ ಕೊಲ್ಲುವುದಕ್ಕೆ ಅವಕಾಶ ಕೊಟ್ಟಿದ್ದೇನೆ. ಅವುಗಳನ್ನು ನನ್ನ ಕೈಯಲ್ಲಿ ತೆಗೆದುಕೊಳ್ಳುವುದಕ್ಕೆ ಮತ್ತು ನನ್ನ ಸಹವರ್ತಿಗಳಿಗೆ ಹಾಗೆ ಮಾಡುವುದನ್ನು ಕಲಿಸಲಿಕ್ಕೆ ನನಗೆ ಧೈರ್ಯವಿಲ್ಲ. ರಾಮನಾಮವು ನನ್ನ ಮೇಲೆ ದಯೆ ಇಡುವುದಾದರೆ ಇನ್ನು ಮೇಲಾದರೂ ಒಂದು ದಿನ ಆ ಧೈರ್ಯವನ್ನು ಪಡೆಯಬಹುದು.

## ಗಾಂಧಿಜೀಯವರ ಈ ಅಭಿಪ್ರಾಯವೇ ಶ್ರೀ ಚನ್ನಮಲ್ಲಿಕಾರ್ಜುನರ ವಿಶ್ಲೇಷಣೆ ಈ ರೀತಿ ಇದೆ

ಗಾಂಧೀಜಿಯವರು ಹೇಳುವಂತೆ ಮತಾಚರಣೆ ಎಂಬುದಾಗಿ ಸಂಕುಚಿತವಾದ ಮತ್ತು ವಂಚನೆಯ ಭಾವದಲ್ಲಿ ನಡೆಯಬೇಕೆಂದು ನನಗೂ ಇಷ್ಟವಿಲ್ಲ. ಶಾಸ್ತ್ರಗಳೆಂಬ

ಬಾವಿಯಲ್ಲಿಯೂ ಬಿದ್ದು ಸಾಯುವುದು ಬೇಕಾಗಿಲ್ಲ. ವಿಚಾರಶಕ್ತಿಯ ಉಪಯೋಗ ದಿಂದ ಶಾಸ್ತ್ರಾರ್ಥವನ್ನು ನಡೆತೆಗೆ ಇಟ್ಟುಕೊಳ್ಳುವುದೇ ಒಳ್ಳೆಯದು.

ಅಹಿಂಸೆಯೆಂಬುದು ಶ್ರೇಯಸ್ಕರವಾದ ಕಾರ್ಯವೇ "ಅಹಿಂಸೆಯೇ ಪರಮ ಧರ್ಮವು" ಎಂಬುದು ವೀರಶೈವರ ಹೆಗ್ಗುರುತೂ ಆಗಿದೆ. ಆದರೆ ನನ್ನ ಅನುಭವವನ್ನು ಈ ವಿಚಾರದಲ್ಲಿ ಸ್ವಲ್ಪಮಟ್ಟಿಗೆ ಜನತೆಯ ಮುಂದೆ ಇಡಲೇಬೇಕಾಗಿದೆ. ಮೈಸೂರುದೇಶದ ಶಿವಮೊಗ್ಗೆ ಡಿಸ್ಟ್ರಿಕ್ಟ್ ಶಿಕಾರಿಪುರದ ತಾಲೂಕಿನಲ್ಲಿ ಕಪ್ಪನಹಳ್ಳಿ, ಗ್ರಾಮದ ಬಳಿ ಯಲ್ಲಿ "ಶಿವಯೋಗಾಶ್ರಮ" ಎಂಬುದೊಂದು ಮಠವು ಅಡವಿಯಲ್ಲಿ ಇದೆ. ಅಲ್ಲಿನ ಸ್ವಾಮಿಗಳು ಯೋಗ ಸಾಧನೆಯನ್ನು ಬಲ್ಲವರಾಗಿ ಅಹಿಂಸಾಪಾಲನವೇ ಮೊದ ಲಾದುವುಗಳನ್ನು ಆಚರಿಸಿ, ಆ ಪ್ರಾಂತದ ಜನರಿಂದ ಪೂಜ್ಯರೆನಿಸಿಕೊಂಡಿದ್ದಾರೆ. ಅವ ರಿಗ ಸಂಬಂಧಪಟ್ಟ ಒಂದು ಮಾವಿನ ತೋಟವೂ ಕೆಲವು ಗದ್ದೆಗಳು ಹೊಲಗಳೂ ಇವೆ. ಮಠದಲ್ಲಿ ಆಳುಗಳೂ ಹೆಚ್ಚಾಗಿಲ್ಲ. ಕೇವಲ ಮಿತವ್ಯಯದಿಂದಲೇ ಆ ಆಶ್ರಮದ ಕಾರ್ಯಗಳು ಸಾಗಿಸಲ್ಪಡುತ್ತವೆ. ಅಲ್ಲಿನ ತೋಟಕ್ಕೆ ಮತ್ತು ಹೊಲಗಳಿಗೆ ಕಪಿಗಳ ಬಾಧೆ ಬಹಳವಾಯಿತು. ಆಗ ಅವರು ಬಹಳ ಆಲೋಚನೆ ಮಾಡಿ ನಾಯಿಯನ್ನು ಸಾಕುವುದರಿಂದ ಕಪಿಗಳ ಬಾಧೆ ಕಡಿಮೆಯಾಗುತ್ತದೆ ಎಂಬ ಅಂಶವನ್ನು ಕಂಡುಹಿಡಿದು ಅದರಂತೆ ಮಾಡಿ ಮಾವಿನ ಹಣ್ಣುಗಳನ್ನೂ ಹೊಲದ ಬೆಳೆಯನ್ನೂ ಪಡೆಯುತ್ತಿದ್ದಾರೆ. ನಾಯಿಯಾದರೂ ಒಂದು ಕಪಿಯನ್ನೂ ಕೊಂದಿಲ್ಲ. ಬೆಳೆಯನ್ನು ತಿನ್ನಲು ಬಂದಾಗ ಹೆದರಿಸುವುದೊಂದೇ ಅದರ ಕೆಲಸ. ಪಕ್ಷಿಗಳ ಹಾವಳಿಯನ್ನೂ ಅಲ್ಲಲ್ಲಿ ಗಾಳಿಗೆ ತೂಗಾಡುವ ಡಂ ಡಂ ಬೆಂತರಗಳನ್ನೂ ಕಟ್ಟಿ ತಪ್ಪಿಸಿಕೊಂಡಿದ್ದಾರೆ.

ಅದೇ ತಾಲೂಕು ಶಿರಾಳಕೊಪ್ಪದ ಸಮೀಪದಲ್ಲಿ ಮಂಚೀಕೊಪ್ಪ ಗ್ರಾಮದಲ್ಲಿ ಶ್ರೀ ಶಿವಬಸವದೇವರೆಂಬುವರಿದ್ದರು. ಅವರು ಸ್ವಲ್ಪಮಟ್ಟಿಗೆ ಗದ್ದೆ ಹೊಲಗಳುಳ್ಳವ ರಾಗಿ ತಾವೇ ತಮ್ಮ ಮನೆಯವರೊಂದಿಗೆ ವ್ಯವಸಾಯ ಕಾರ್ಯಗಳನ್ನು ಮಾಡುತ್ತಿ ದ್ದರು. ಒಂದು ದಿನ ಅವರಲ್ಲಿಗೆ ಹೋದಾಗ ಅವರು ತಮ್ಮ ಮನೆಯಲ್ಲಿನ ಧಾನ್ಯ ಗಳಿಗೆ ಇಲಿ ಹೆಗ್ಗಣಗಳ ಹಾವಳಿ ಇದೆ. ಗದ್ದೆಯಲ್ಲಿ ಕಬ್ಬಿನ ಬೆಳೆಗೆ ಕಪಿಗಳ ಹಾವಳಿ ಯಿದೆ. ಅದಕ್ಕೇನು ಮಾಡಬೇಕೆಂದು ನನ್ನೊಡನೆ ಆಲೋಚಿಸಿದರು—ಪ್ರಾಣಿಗಳು ಮನುಷ್ಯರಂತೆ ತಮ್ಮ ಆಹಾರಕ್ಕಾಗಿ ಪ್ರಯತ್ನಪಡುವುದು ಅವುಗಳ ಸಹಜ ಕಾರ್ಯ. ಮನುಷ್ಯನು ಅವುಗಳಿಗೆ ಸಿಕ್ಕದಂತೆ ಜೋಪಾನವಾಗಿಡಬೇಕೆಂದು ಅಪೇಕ್ಷಿಪಟ್ಟರೆ ಹಾಗೆ ಮಾಡಲು ಅವನ ಬುದ್ಧಿಶಕ್ತಿಯು ಪ್ರಾಣಿಗಳ ಬುದ್ಧಿಶಕ್ತಿಗಿಂತ ಕಡಿಮೆಯದಲ್ಲ. ಇಲಿ ಹೆಗ್ಗಣಗಳು ಪ್ರವೇಶ ಮಾಡದಂತೆ ಕಲ್ಲು ಕಟ್ಟಡದ ಆವರಣವನ್ನೇರ್ಪಡಿಸಿ ಧಾನ್ಯ ಸಂಗ್ರಹ ಮಾಡಬಹುದು. ಗೋಡೆಗಳನ್ನು ಕಟ್ಟಿಸಿ ಅಥವಾ ಬೇರೆ ಉಪಾಯಗಳನ್ನು ಮಾಡಿ ಅವುಗಳನ್ನು ಒಳಗೆ ಪ್ರವೇಶಿಸಿದಂತೆ ಮಾಡಬಹುದು—ಎಂದೆನು. ಹಾಗೆಯೇ ಬುದ್ಧಿಶಕ್ತಿಯಿಂದ ಕಬ್ಬಿನ ಬೆಳೆಗೆ ಬರುವ ಮಂಗಗಳ ಹಾವಳಿಯನ್ನು ತಪ್ಪಿಸುವುದಕ್ಕಾಗಿ ಕಬ್ಬು ಸ್ವಲ್ಪ ದಿನಗಳಲ್ಲಿಯೇ ಕೀಳುವ ಸ್ಥಿತಿಯಲ್ಲಿ ಇದ್ದುದರಿಂದ ಅವರೆಗೂ ಮನೆ

ಯುವರೇ ಕಾದಿರಲು ಹೇಳಿದೆನು. ಹೀಗೆ ಉಪಾಯದಿಂದ ಹಾವಳಿಯನ್ನು ತಪ್ಪಿಸಿ ಕೊಂಡರವರು.

ಹಾವು ಚೇಳುಗಳನ್ನು ಕೈಯಲ್ಲಿ ಹಿಡಿಯುವ ಶಕ್ತಿ ಬಂದರೆ ಅಹಿಂಸೆಗೆ ಅವಕಾಶ ವಾಗುತ್ತದೆ ಎಂದೂ ತಿಳಿಯುವುದು ಬೇಕಾಗಿಲ್ಲ. ಇಂತಹ ಪ್ರಾಣಿಗಳಿಗೆ ತಮ್ಮ ರಕ್ಷಣೆ ಮಾಡಿಕೊಳ್ಳಬೇಕೆಂದು ಅವುಗಳ ಮುಖ್ಯ ಉದ್ದೇಶವಿರುತ್ತದೆ. ಅದಕ್ಕೆ ಅಡ್ಡಿಯಾದಾಗ ಮಾತ್ರ ಅವು ಕಚ್ಚುತ್ತವೆ. ತನ್ನ ಸಮೀಪಕ್ಕೆ ಹಾವು ಬಂದರೂ ತಾನು ಸುಮ್ಮನೆ ಇದ್ದರೆ ಅದು ಕಚ್ಚದೆ ಹಾಗೆಯೇ ಹೊರಟುಹೋದ ಸಂಗತಿಯನ್ನು ಅನೇಕಸಾರಿ ನಾನು ತಿಳಿದಿದ್ದೇನೆ. ಅವುಗಳ ರಕ್ಷಣೆಗೆ ಅಡ್ಡಿ ಮಾಡದೆ ಇರುವುದೇ ಅಹಿಂಸಾಪಾಲನೆಯ ಮಾರ್ಗ. ಒಂದು ಸಾರಿ ನಾಗರಹಾವಿಗೆ ಒಂದು ಅಡಿಯ ದೂರದಲ್ಲಿ ನಾನು ಶೌಚಕ್ಕೆ ಕೂಡಲು ಹೋಗಿದ್ದೆನು. ಅದು ಇರುವುದು ನನಗೆ ಗೊತ್ತಾಗಲಿಲ್ಲ. ಅದು ಸುರುಳಿ ಸುತ್ತಿಕೊಂಡಿದ್ದುದು ಸ್ವಲ್ಪಮಟ್ಟಿಗೆ ಹೆಡೆಯನ್ನು ಎತ್ತಿ ತನ್ನ ಸುರುಳಿಯನ್ನೇ ಸ್ವಲ್ಪ ದೂರ ಆಚೆಗೆ ಹಾರಿಸಿತು. ನಾನು ಬಹಳ ಗಾಬರಿಗೊಂಡೆನು. ಆದರೆ ಅದಕ್ಕೆ ಹೊಡೆಯಬೇಕೆಂಬ ಯೋಚನೆಯು ನನಗೆ ಬರಲಿಲ್ಲ. ಮನೆಯಲ್ಲಿ ತಿಗುಣೆಗಳು ಮುಂತಾದುವು ತಮ್ಮನ್ನು ಕಚ್ಚುವುದೆಂದು ಅವನ್ನು ಕೊಲ್ಲುತ್ತಾರೆ. ಹಾಸಿಗೆಗಳನ್ನು ಕನಿಷ್ಠ ಪಕ್ಷ ವಾರಕ್ಕೊಮ್ಮೆಯಾದರೂ ತೊಳೆಯುವುದು ಗೋಡೆಗಳನ್ನು ಸಾರಿಸುವುದು ಫಿನಾಯಿಲ್ ಹಾಕುವುದು ಮುಂತಾದ ಉಪಾಯಗಳಿಂದ ಆ ಕ್ರಿಮಿಗಳಾಗದಂತೆ ಮಾಡಿ ಕೊಳ್ಳುವುದು ಮನುಷ್ಯನ ಶಕ್ತಿಯಲ್ಲಿ ಇದೆ. ದಪ್ಪದಪ್ಪನಾದ ತಡಿಗಳನ್ನು ಹಾಸಿಗೆ ಗಳಿಗೆ ಉಪಯೋಗಿಸಿ ತಿಂಗಳುಗಟ್ಟಲೆ ಅವುಗಳನ್ನು ತೊಳೆಯದೆ ಬಿಡುವುದು ತಪ್ಪು, ತಡಿಗಳಿಗೆ ಮೇಲೆ ಮಾತ್ರ ಸ್ವಚ್ಛವಾದ ಬಟ್ಟೆಗಳಿದ್ದರೂ ತಡಿಯಲ್ಲಿನ ಕೊಳೆಯು ಕ್ರಿಮಿ ಗಳಿಗೆ ಅವಕಾಶಕೊಡುತ್ತದೆ ಎಂಬುದನ್ನು ಮರೆಯಬಾರದು. ವಾರಕ್ಕೊಮ್ಮೆಯಾದರೂ ತೊಳೆಯಬಹುದಾದ ಬಟ್ಟೆಗಳು ಹಾಸಿಗೆಗೆ ಇರಬೇಕೇ ಹೊರತು ಅರಳೆ ಮೊದಲಾದವು ಗಳನ್ನು ಹಾಕಿ ದಪ್ಪನಾಗಿದ್ದು ತೊಳೆಯಲಾಗದವುಗಳನ್ನು ಬಿಟ್ಟುಬಿಡಬೇಕು.

ತೋಳ, ಚಿರತೆ, ಹುಲಿಗಳಾದರೂ ಮನುಷ್ಯನನ್ನು ತಿನ್ನಬೇಕೆಂಬುವುಗಳಲ್ಲ, ಮನುಷ್ಯನನ್ನು ಕಂಡರೆ ಭಯಪಟ್ಟುಕೊಂಡೇ ಇರುತ್ತವೆ. ಮನುಷ್ಯನು ಅವುಗಳನ್ನು ಪೀಡಿಸಿದಾಗ ಮಾತ್ರ ಮನುಷ್ಯನ ಮೇಲೆ ಬೀಳುತ್ತವೆ. ಒಮ್ಮೆ ಮನುಷ್ಯನನ್ನು ಕೊಂದಾಗ ಮುಂದೆ ನರಭಕ್ಷಕಗಳಾಗುತ್ತವೆ. ಆದರೆ ಅವುಗಳು ಗೋವುಗಳೇ ಮೊದ ಲಾದ ನಿರಪರಾಧಿ ಪ್ರಾಣಿಗಳನ್ನು ಸುಮ್ಮನೆ ಕೊಲ್ಲುವುವೆಂಬುದು ನಿಜ. ಇವು ಅವುಗಳ ಪ್ರಕೃತಿಜನ್ಯವಾದ ಆಹಾರ. ಅವುಗಳ ಹಾವಳಿಯನ್ನು ತಪ್ಪಿಸುವುದಕ್ಕಾಗಿ ಅವುಗಳನ್ನು ಕೊಲ್ಲುವುದು ದುಷ್ಟ ಶಿಕ್ಷಣ, ಶಿಷ್ಟಶಿಕ್ಷಣ ಎಂಬ ರಾಜಸಗುಣಕ್ಕೆ ಸೇರಿದ ಕಾರ್ಯವೇ ಹೊರತು ಮನುಷ್ಯನು ತನ್ನ ರಕ್ಷಣೆಗಾಗಿ ಅವುಗಳನ್ನು ಕೊಲ್ಲಬೇಕಾದುದೇ ಇಲ್ಲ. ಇತರ ಪ್ರಾಣಿಗಳಿಗಿಂತ ಮನುಷ್ಯನ ಜೀವಕ್ಕೆ ಆಧಿಕ್ಯವನ್ನು ಕೊಡುವಾಗ ಮನುಷ್ಯನಲ್ಲಿ ಸಾತ್ವಿಕ ಗುಣ (ಹಿಂಸೆ ಮಾಡದಿರುವುದು) ಪ್ರಧಾನವಾಗಿರಬೇಕು.

ಸಾತ್ವಿಕಗುಣವುಳ್ಳವರಿಗೆ ಯಾವ ಹಿಂಸಾ ಪ್ರಾಣಿಯಾದರೂ ತನ್ನ ಕ್ರೌರ್ಯವನ್ನು ತೋರಿಸದಿರುವವೊಂದು ದೈವಲೀಲೆ. ಎಷ್ಟೋ ಋಷಿಗಳು, ಈಚೆಗೆ ಅನೇಕರು ಸ್ವಾಮಿಗಳು ತಮ್ಮ ಆಶ್ರಮಕ್ಕೆ ಬಂದ ಹುಲಿಗಳಿಗೆ ಖರ್ಜೂರ ಮುಂತಾದ್ದು ಕೊಟ್ಟು ಬೆನ್ನು ಚಪ್ಪರಿಸಿ ಕಳುಹಿಸುತ್ತಿದ್ದರೆಂದು ಕೇಳುತ್ತೇವೆ. ಇಂತಹ ಸಾತ್ವಿಕಗುಣದ ಪ್ರಭಾವವು ಬೆಳೆಯಬೇಕಾದರೆ ಮನುಷ್ಯನಲ್ಲಿ ತಾನು ಬ್ರಹ್ಮ, ತಾನು ಶಿವ ಎಂಬ ದೈವಿಕ ಭಾವನೆ (Supermanship) ಬೆಳೆಯಬೇಕು, ಅದಿರಲಿ.

ಸಾಮಾನ್ಯ ಮನುಷ್ಯನಿಗೂ ಅವನ ಬೆಳೆಯನ್ನು ತಿನ್ನಲು ಕೆಡಿಸಲು ಹಂದಿಗಳೇ ಮೊದಲಾದುವುಗಳು ಬರುವುದನ್ನು ಬೇಲಿ ಕಾಲುವೆ ಮುಂತಾದವುಗಳಿಂದ ತಪ್ಪಿಸಿ ಕೊಳ್ಳಲಿಕ್ಕೆ ಬರುತ್ತದೆ.

ಮಾಂಸವನ್ನು ತಿಂದು ಜೀವಿಸಿದ ಅಭ್ಯಾಸವುಳ್ಳ ಮನುಷ್ಯನಿಗೂ ಮಾಂಸಾಹಾರ ವನ್ನು ಬಿಟ್ಟು ಶಾಖಾಹಾರದಿಂದ ಜೀವಿಸಲು ಎಂತಹ ಶೀತ ಪ್ರದೇಶದಲ್ಲಿಯೂ ಬರು ವುದೆಂಬುದಕ್ಕೆ ಪರೀಕ್ಷೆಗಳು ನಡೆಯುತ್ತಿವೆ. ಇಂಗ್ಲೆಂಡ್ ಮೊದಲಾದ ಕಡೆಗಳಲ್ಲಿ ಶಾಖಾಹಾರಿಗಳ ಗುಂಪು ಬೆಳೆಯುತ್ತಾ ಇದೆ. ಆ ಬಗ್ಗೆ ಪ್ರಚಾರಕಾರ್ಯವೂ ನಡೆದು ಆ ಪತ್ರಿಕೆಗಳು ಬರುತ್ತಾ ಇದೆ.

ಇದನ್ನೆಲ್ಲಾ ಯೋಚಿಸಿದರೆ ಮನುಷ್ಯನಿಗೆ ಪ್ರಾಣಿಗಳನ್ನು ಕೊಲ್ಲಬೇಕಾದ ಅವಶ್ಯ ಕತೆಯೇ ಇಲ್ಲವೆಂಬುದು ಸ್ಪಷ್ಟಪಡುತ್ತದೆ. ಇದರಲ್ಲಿ ಧೈರ್ಯಶಾಲಿ ಹೇಡಿ ಎಂಬ ಭಿನ್ನ ದೃಷ್ಟಿಯ ವಿಚಾರವೇ ಬೇಕಾಗಿಲ್ಲ. ಅಹಿಂಸೆ ಧೈರ್ಯಶಾಲಿಗಳಿಗೆ ಮಾತ್ರ ಇದೆ ವ್ಯಾಖ್ಯಾನ (Commentary) ಮಾಡುವುದೂ ಸರಿಯಲ್ಲ.

ಅಹಿಂಸಾತತ್ತ್ವ ಪ್ರಚಾರಕರು ಮಾಡುವ ಕೆಲಸವಿಷ್ಟೆ. ಮನುಷ್ಯನು ಐಚ್ಛಿಕ ವಾಗಿ ಪ್ರಾಣಿ ಹಿಂಸೆ ಮಾಡುತ್ತಾನೆ. ಅದನ್ನು ಬಿಡಬೇಕೆಂದು ಒತ್ತಾಯಪಡಿಸುವುದು ಮಹಾದೇವನ ಸೃಷ್ಟಿನಿಯಮದಲ್ಲಿ ಒಬ್ಬ ಮನುಷ್ಯನು ಮತ್ತೊಂದು ಪ್ರಾಣಿಯನ್ನು ಹುಟ್ಟಿಸಲಾರನೆಂಬುದು ಗೋಚರವಾಗುತ್ತದೆ. ತನ್ನಿಂದ ಹುಟ್ಟಿಸಲ್ಪಟ್ಟವರೆಂದು ಮನುಷ್ಯನು ತಿಳಿದುಕೊಂಡ ತನ್ನ ಮಕ್ಕಳನ್ನೇ ಕೊಲ್ಲದೆ ದಯೆ ತೋರುತ್ತಿರುವಲ್ಲಿ ತನ್ನಿಂದನ್ಯವಾಗಿ ಸೃಷ್ಟಿಸಲ್ಪಟ್ಟ ಪ್ರಾಣಿಗಳನ್ನು ಕೊಲ್ಲುವುದು ಅನ್ಯಾಯವಲ್ಲವೇ !

ಒಟ್ಟಿನಲ್ಲಿ ಅಹಿಂಸಾಚರಣೆಯನ್ನು ಸಂಪೂರ್ಣವಾಗಿ ಆಚರಿಸಲಿಕ್ಕೆ ಬರುವುದಿಲ್ಲ ವೆಂಬುದನ್ನು ನಾನೂ ತಿಳಿದಿರುತ್ತೇನೆ. ಓಡಾಡುವಲ್ಲಿ ಕೆಲಸ ಮಾಡುವಲ್ಲಿ ಮನುಷ್ಯನಿಗೆ ಗೊತ್ತಿಲ್ಲದೆ ಅನೇಕ ಪ್ರಾಣಿಗಳು ಸಾಯುತ್ತವೆ. ಮಳೆ ಬಂದಾಗ ಹೆಚ್ಚು, ಬಿಸಿಲು ಬಂದಾಗ ಅನೇಕ ಪ್ರಾಣಿಗಳು ಸತ್ತರೂ ಮಳೆ ಬಿಸಿಲುಗಳ ಕಾರಣನಾದ ಮಹದೇವನನ್ನು ತಪ್ಪುಗಾರ ನನ್ನಾಗಿ ತಿಳಿಯಲು ಹೇಗೆ ಬರುವುದಿಲ್ಲವೋ ಹಾಗೆ ಮನುಷ್ಯನನ್ನೂ ತಿಳಿಯದೆ ಸಂಭ ವಿಸಿದ ತಪ್ಪಿಗೆ ಗುರಿಮಾಡುವುದು ಸರಿಯಲ್ಲ. ಆದರೂ ಮನುಷ್ಯನು ಇಂತಹ ತಪ್ಪು ಗಳೂ ಆಗದಂತೆ ಎಚ್ಚರವಾಗಿರಲು ಪ್ರಯತ್ನಪಡಬೇಕು. ಹೊಟ್ಟೆಯೊಳಗಿನ ಜಂತು ಹುಳುಗಳು ಮನುಷ್ಯನು ತಿನ್ನುವ ಒಂದೊಂದು ಬಗೆಯ ಆಹಾರದಿಂದ ಅವನಿಗೆ

ಗೊತ್ತಿಲ್ಲದೆ ಸಾಯುವುದುಂಟು. ಕೊಲ್ಲಬೇಕೆಂದು ಅವನು ಏನನ್ನೂ ತೆಗೆದುಕೊಳ್ಳದಿದ್ದರೂ ತಾನಾಗಿ ನಡೆದ ಈ ಹಿಂಸೆಗೆ ಏನು ಮಾಡುವುದಿದೆ.

ನನ್ನ ಅಭಿಪ್ರಾಯದ ಪ್ರಕಾರ ಅಹಿಂಸಾ ಪದದ ಅರ್ಥವೀರೀತಿ— ಮನುಷ್ಯನು ತನಗೆ ತಿಳಿದಂತೆ ಯಾವ ಪ್ರಾಣಿಯ ಹಿಂಸೆಯನ್ನೂ ಮಾಡಬಾರದು. ತೊಂದರೆಕೊಡುತ್ತಿದ್ದರೆ ಆ ತೊಂದರೆಯನ್ನು ತಪ್ಪಿಸಿಕೊಳ್ಳುವ ಬುದ್ಧಿಶಕ್ತಿ ವಿಚಾರವನ್ನೇ ಪ್ರಯೋಗಿಸಬೇಕು. ಅಕಸ್ಮಾತ್ತಾಗಿ ಮನುಷ್ಯನಿಗೆ ತಿಳಿಯದೆ ಸಂಭವಿಸುವ ಹಿಂಸೆಗಳಿಗೆ ಮನುಷ್ಯನು ಹೊಣೆಯಲ್ಲ. ಅವನು ಅಹಿಂಸಾಪಾಲಕನೇ ಎಂದು ನಿರ್ಧರಿಸಬೇಕು. ಪ್ರಾಣಿಗಳಿಂದ ಕೆಲಸ ತೆಗೆದುಕೊಂಡು ಜೀವಾವಧಿ ಅವುಗಳನ್ನು ರಕ್ಷಿಸಬೇಕು. ಪ್ರಾಣಿಗಳ ಜೀವಕ್ಕಿಂತಲೂ ಮನುಷ್ಯನ ಜೀವದ ಉನ್ನತಿಗೆ ಹೆಚ್ಚು ಗಮನಕೊಡಬೇಕೆಂಬುದು ಸಹಜ. "ಮನುಷ್ಯನ ಜೀವವನ್ನು ರಕ್ಷಿಸಬೇಕು ಪ್ರಾಣಿಗಳ ಹತವಾದರೂ ಅಡ್ಡಿಯಿಲ್ಲ"ಎಂಬುದು ಕ್ರೈಸ್ತ ಮತೀಯರ ಅಭಿಪ್ರಾಯ. ಆದರೆ ಪ್ರಾಣಿಗಳ ಸೃಷ್ಟಿಯು ಮನುಷ್ಯನಿಂದ ಆಗುವುದಿಲ್ಲವಾದುದರಿಂದ ಮನುಷ್ಯನ ಜೀವರಕ್ಷಣೆಗಿಂತ ಕಡಿಮೆಯಾದ ಗಮನವನ್ನು ಕೊಟ್ಟಾದರೂ ಪ್ರಾಣಿಗಳ ಜೀವವನ್ನು-ಹಿಂಸಾ ಪ್ರಾಣಿಗಳ ಜೀವವನ್ನಾದರೂ ಹತ ಮಾಡದೆ ಇರಬೇಕು.

ಅಹಿಂಸಾ ಪಾಲನೆಯನ್ನೂ ಧರ್ಮಕಾರ್ಯಗಳಲ್ಲಿ ಒಂದನ್ನಾಗಿ ಉಳ್ಳ ವೀರಶೈವರಿಗೂ ಈ ಲೇಖನವು ಮುಖ್ಯವೆಂದು ಭಾವಿಸುತ್ತೇನೆ. ಅವರಲ್ಲಿ ಬಹು ಜನರು ಚಿಕ್ಕಾಡು, ತಿಗಣೆ, ಉಣ್ಣೆ ಮೊದಲಾದ ಚಿಕ್ಕ ಪ್ರಾಣಿಗಳನ್ನು ಕೊಲ್ಲಲು ಹೋಗುತ್ತಾರೆ. ಅದು ಸರಿಯಲ್ಲ. ತಮ್ಮ ವಿಚಾರ ಶಕ್ತಿಯನ್ನು ಉಪಯೋಗಿಸಿ ಇವುಗಳ ಬಾಧೆಯನ್ನು ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಇಲಿಗಳನ್ನು ಅವು ವಾಸವಾಗಿದ್ದ ಒಂದು ಕೋಣೆಯಿಂದ ಹೊರಕ್ಕೆ ಹೊರಡಿಸಲಿಕ್ಕೆ ಉಪಾಯವೊಂದಿದೆ. ಅವುಗಳಿಗೆ ಆಹಾರ ನೀರು ಸಿಕ್ಕದಂತೆ ಮಾಡಿದರೆ ಇವುಗಳಿಗಾಗಿ ಆ ಕೋಣೆಯನ್ನು ಬಿಟ್ಟು ಅವು ಹೊರಗೆ ಹೋಗಲೇಬೇಕು. ಇಂತಹ ಉಪಾಯಗಳನ್ನು ಯೋಜನೆ ಮಾಡಬೇಕು.*

(ಸಂ. ೫೮–೫೯)

* ಹಿಂಸೆಯ ಸಮಸ್ಯೆಗಾಗಿ ಶ್ರೀ ಚೆನ್ನಮಲ್ಲಿಕಾರ್ಜುನರ ವಿಶ್ಲೇಷಣೆ ಬಹಳ ಅರ್ಥಪೂರ್ಣವಾಗಿದೆ. ಇಂದು ಸೃಷ್ಟಿಯ ಸಮತೋಲನಕ್ಕಾಗಿ ಕಾಡಿನ ಪ್ರಾಣಿಗಳನ್ನು ಕೊಲ್ಲಬಾರದೆಂದು ಮಾಡಿರುವ ಸರಕಾರದ ಕಟ್ಟುಪಾಡಿಗೆ ಶ್ರೀಯವರ ಅಭಿಪ್ರಾಯ ಹೇಗೆ ಪೂರಕವಾಗಿದೆ ಎಂಬುದನ್ನು ಗಮನಿಸಬಹುದು.

# ಗಾಂಧಿ ಧರ್ಮ

ವೃತ ಮಹನೀಯರಾದ ಗಾಂಧೀಜಿಯವರ ಸ್ಮಾರಕಕ್ಕಾಗಿ ೧೮೦ ಕೋಟಿ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿ ಆ ನಿಧಿಯಿಂದ ಗಾಂಧಿ ತತ್ತ್ವ ಪ್ರಚಾರ ಮಾಡಿ ಗಾಂಧಿ ಧರ್ಮವನ್ನು ಹೊಸದಾಗಿ ನಿರ್ಮಾಣ ಮಾಡಲು ಭಾರತದ ರಾಜಕೀಯ ರಾಷ್ಟ್ರಸಂಘದ ಮಂತ್ರಿಗಳು ತೀರ್ಮಾನ ಮಾಡಿಕೊಂಡಿರುವುದಾಗಿ ತಿಳಿಯುತ್ತದೆ.

ಹಿಂದೂ ದೇಶವು ಧಾರ್ಮಿಕದ ಕಡೆಗೆ ಹೆಚ್ಚು ಗಮನವುಳ್ಳ ರಾಜ್ಯ. ಇಂಗ್ಲಿಷರು ಈ ದೇಶಕ್ಕೆ ಬಂದಾಗ ಕ್ರಿಸ್ತ ಮತವನ್ನು ಹರಡುವ ಪ್ರಯತ್ನವು ಸೈನ್ಯದಲ್ಲಿ ನಡೆದು ಆಗ ಭಾರೀದಂಗೆಯೇ ಆಗಿ ಮುಂದೆ ಧರ್ಮದ ವಿಷಯಕ್ಕೆ ಕೈಹಾಕುವುದಿಲ್ಲವೆಂದು ಆಶ್ವಾಸನವು ಪ್ರಭುತ್ವದವರಿಂದ ಕೊಡಲ್ಪಟ್ಟಮೇಲೆ ಧಾರ್ಮಿಕ ಶಾಂತಿಯಾಗಿ ಕ್ರಿ.ಶ. ೧೮೫೭ನೆಯ ವರ್ಷದಿಂದಲೂ ಹಾಗೆಯೇ ನಡೆದುಕೊಂಡು ಬಂದಿತು. ಇಂತಹ ಶಾಂತಿಯ ಕಾಲದಲ್ಲಿಯೂ (ಒಂದು ಶತಮಾನ) ತಮ್ಮ ಧರ್ಮ ಗ್ರಂಥಗಳಲ್ಲಿನ ಶ್ರೇಷ್ಠ ವಾದ ಮಾರ್ಗವಾವುದೆಂದು ವಿಚಾರಿಸಿ ಪ್ರಗತಿಯನ್ನು ಹೊಂದುವುದರ ಕಡೆಗೆ ಗಮನವು ಕೊಡಲ್ಪಡಲಿಲ್ಲ. ಪೂರ್ವಿಕರು ನಡೆದಂತೆ ನಡೆಯಬೇಕೆಂಬ ಅಂಧಶ್ರದ್ಧೆಯಲ್ಲಿಯೇ ಜನರು ಕಾಲ ಕಳೆದರು.

ಗಾಂಧಿ ಧರ್ಮವೆಂಬ ಒಂದೇ ವಿಧಾನವು ಏರ್ಪಡುವುದರಿಂದ ದೇಶದ ರಾಜಕೀಯ ಅಶಾಂತತೆಯು ತಲೆದೋರುವುದೆಂದು ಯೋಚಿಸುವುದು ಸರಿಯಲ್ಲ. ಒಂದೇ ಧರ್ಮವನ್ನುಳ್ಳ ಪಾಶ್ಚಾತ್ಯ ರಾಜ್ಯಗಳು ಕೆಲವು ರಾಜಕೀಯ ಅಶಾಂತಿಯಿಂದ ಜಗತ್ತಿನ ಯುದ್ಧವೇ ಆಗುವಂತೆ ಮಾಡಿರುವುದೂ, ಮಾಡುತ್ತಿರುವುದೂ ಇದಕ್ಕೆ ಉದಾಹರಣೆ.

ರಾಜಕೀಯವೆಂಬುದು ಸುಖದ ಲೋಲುಪ್ತಿಯ ಆಸೆ. ಎಂತಹ ಧರ್ಮನಿಷ್ಠ ನನ್ನೂ ಈ ಆಸೆಯಿಂದ ಒಬ್ಬ ಅಧರ್ಮಿಯು ಸೋಲಿಸಲು ಯುದ್ಧ ಮಾಡಬಹುದು. ಅಂತಹ ಸಂಭವಗಳೂ ಹಿಂದೆ ನಡೆದಿವೆ.

ಮುಖ್ಯವಾಗಿ ಈಶ್ವರನ ಮಾಯೆಯು ಜಗತ್ತಿನಲ್ಲಿ ಅಹಂಕಾರ ಮಮಕಾರ ಗಳನ್ನುಂಟು ಮಾಡಿ ಒಬ್ಬರ ಮೇಲೊಬ್ಬರ ವಿರೋಧವನ್ನುಂಟು ಮಾಡಿಸುವ ನಾಟಕ ಆಡುವುದು ಈಗಲೂ ತೋರಿಬರುತ್ತಲಿದೆ.

ಗಾಂಧಿ ಧರ್ಮವು ಯಾವ ರೀತಿಯಲ್ಲಿ ಇರುವುದೆಂಬುದೂ, ಅದರ ಆಚರಣೆಯ ನಿಯಮಗಳೇನೆಂಬುದೂ ಇನ್ನೂ ಹೊರಬಿದ್ದಿಲ್ಲ. ಗಾಂಧೀಜಿಯವರಿದ್ದಾಗಲೇ ಅವರ ಧರ್ಮಬೋಧೆಯನ್ನು ಕೆಲವರು ಆಕ್ಷೇಪಿಸುತ್ತಿದ್ದರು. ಅವರ ಕೊಲೆಯ ಕಾರಣಗಳಲ್ಲಿ ಇದೂ ಒಂದೆಂದು ಕೆಲವರು ಯೋಚಿಸಬಹುದು. ಇಂತಹ ಸ್ಥಿತಿಯಲ್ಲಿ "ಗಾಂಧಿ

ಧರ್ಮ" ಎಂಬ ಹೆಸರನ್ನಿಟ್ಟು ಪ್ರಚಾರಕ್ಕೆ ತರುವ ಸಂದರ್ಭದಲ್ಲಿ ಕೆಲವರಾದರೂ ಅದಕ್ಕೆ ವಿರೋಧಿಗಳಾಗಬಹುದು. ಈ ದೆಸೆಯಿಂದ ಇನ್ನೂ ಕೆಲವು ಕಾಲ ರಾಜಕೀಯವು ಧಾರ್ಮಿಕದಲ್ಲಿ ಕೈಹಾಕದಿರುವುದೇ ಮೇಲು.

ಅಂಧ ಶ್ರದ್ಧೆಯ ಜನರು ತಮ್ಮ ಪೂರ್ವಿಕಾಚರಣೆಯನ್ನು ಬಿಡಲು ಸುಲಭವಲ್ಲಿ ಒಪ್ಪುವುದಿಲ್ಲ. ಅಂತಹವರ ಮೇಲೆ ಬಲಾತ್ಕಾರ ನಡೆಯಿಸುವುದರಲ್ಲ ಅರಾಜಕತೆ ಪ್ರಾಪ್ತವಾಗಬಹುದು.

ಹಿಂದೂ ದೇಶದಲ್ಲಿ ಈಗ ಇರತಕ್ಕ ಧಾರ್ಮಿಕ ಭೇದಗಳಲ್ಲಿ ಒಂದೊಂದರಲ್ಲಿ ಗಾಂಧೀಜಿಯವರ ತತ್ತ್ವವನ್ನು ಹೇಳದೆ ಬಿಟ್ಟಿಲ್ಲ. ಶಾಂತಿ, ಅಹಿಂಸಾತತ್ತ್ವ, ಸಮತಾ ವಾದ, ಸ್ತ್ರೀ ಸ್ವಾತಂತ್ರ್ಯ, ಉದ್ಯೋಗಗಳ ರಾಷ್ಟ್ರೀಕರಣ ಮುಂತಾದುವುಗಳು ಶ್ರೇಷ್ಠ ವೆಂದು ಭಾರತದ ಧರ್ಮ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದು. ಭಾರತದ ಮೂಲಧರ್ಮ ವನ್ನನುಸರಿಸುವ ಭಾರತ ನಿವಾಸಿಗಳಿಗೆ ಈಗ ತಮ್ಮ ಧರ್ಮದಲ್ಲಿ ಶ್ರೇಷ್ಠವಾವುದೆಂಬು ದನ್ನು ವಿಚಾರಿಸಲು ಪ್ರಚಾರ ಮಾಡಲು ಅವಕಾಶವು ಕೊಡಲ್ಪಡಬೇಕು. ಆ ವಿಧ ವಾದ ಚಳುವಳಿಯನ್ನು ಅವರಲ್ಲಿ ಉಂಟು ಮಾಡಬೇಕು. ಅವರೇ ಸ್ವತಂತ್ರ ವಿಚಾರ ದಿಂದ ತಮಗೆ ಮನಬಂದ ರೀತಿಯಲ್ಲಿ ಇರಲಿಕ್ಕೆ ಯಾವ ತೊಂದರೆಯೂ ಇಲ್ಲದಂತೆ ಮಾಡಬೇಕು.

ಶಾಕಾಹಾರಿಗಳಿಗೂ ಮಾಂಸಾಹಾರಿಗಳಿಗೂ ಒಂದೇ ಬಗೆಯ ಧರ್ಮವು ಸರಿಬೀಳ ಲಾರದು. ಒಬ್ಬನು ಜೀವಿಗಳಲ್ಲಿ ನಿಷ್ಕರುಣಿ, ಇನ್ನೊಬ್ಬನು ದಯಾಶಾಲಿ ಇಬ್ಬರ ಧಾರ್ಮಿಕ ಕಾರ್ಯಗಳೂ ಒಂದೇ ರೀತಿಯಲ್ಲಿ ನಡೆಯಲಾರವು.

ಒಬ್ಬನು ದೇವನನ್ನು ತನಗಿಂತ ಬೇರೆಯವನನ್ನಾಗಿ ತಿಳಿಯುತ್ತಾನೆ. ಇನ್ನೊ ಬ್ಬನು ತನ್ನಲ್ಲಿಯೇ ದೇವನಿರುವುದಾಗಿ ತಿಳಿಯುತ್ತಾನೆ. ಇವರಿಬ್ಬರ ಧಾರ್ಮಿಕಾಚರಣೆ ಗಳೂ ಬೇರೆ ಬೇರೆ ಇರುತ್ತವೆ.

ಇಂತಹ ವೈಷಮ್ಯಗಳನ್ನು ತಡೆಗಟ್ಟುವ ಉಪಾಯಗಳು ಹಿಂದೂ ಧರ್ಮ ಗ್ರಂಥ ಗಳಲ್ಲಿ ಹೇಳಲ್ಪಟ್ಟಿವೆ. ಕನಿಷ್ಟಮಾರ್ಗ, ಉತ್ತಮ ಮಾರ್ಗಗಳನ್ನು ಸ್ಪಷ್ಟವಾಗಿ ತೋರಿಸಿ ಉತ್ತಮ ಮಾರ್ಗವನ್ನು ಹಿಡಿಯುವವರಿಗೆ ತಕ್ಕ ಪ್ರೋತ್ಸಾಹವನ್ನು ಅದು ಕೊಟ್ಟಿದೆ. ಅಹಿಂಸೆ, ಶಾಂತಿ, ಅದ್ವೈತಜ್ಞಾನ, ಇವು ಉತ್ತಮ ಮಾರ್ಗದಲ್ಲಿಯೇ ಸೇರಿಸಲ್ಪಟ್ಟಿದೆ. ಉತ್ತಮ ಮಾರ್ಗದಲ್ಲಿ ಹೋಗುವುದಕ್ಕೆ ಎಲ್ಲರಿಗೂ ಹಕ್ಕು ಉಂಟೆಂಬು ವನ್ನು ಧರ್ಮಗ್ರಂಥಗಳೂ ಒಪ್ಪಿಕೊಳ್ಳುತ್ತವೆ.

ಶಾಲೆಗಳಲ್ಲಿ ಬಾಲಪಾಠಗಳು ಮಾಧ್ಯಮಿಕ ಪಾಠಗಳು ಉಚ್ಚ ಪಾಠಗಳು ಘನ ಪಾಠಗಳು ಇರುವಂತೆ ಧಾರ್ಮಿಕವಲ್ಲಿಯೂ ಮೆಟ್ಟಲುಗಳಿವೆ. ಪ್ರತಿಯೊಬ್ಬನೂ ಘನ ಪಾಠಿಯಾಗಲು ಹಕ್ಕಿರುವಂತೆ ಶ್ರೇಷ್ಠ ಧರ್ಮದವನಾಗಲಿಕ್ಕೂ ಹಕ್ಕಿದೆ.

ಇವನ್ನೆಲ್ಲಾ ಪರಿಶೀಲಿಸದೆ ಎಲ್ಲ ಮನುಷ್ಯರು ಒಂದೇ, ಎಲ್ಲರ ಧರ್ಮ(ದೇವನನ್ನು

ತಿಳಿದನುಭವಿಸುವುದು) ಒಂದೇ, ಎಂದು ಹೇಳಿದರೆ ಅದು ಅವ್ಯವಹಾರವೂ ಅಸಂಭವವೂ ಆಗುತ್ತದೆ.

ಒಮ್ಮೆಗೆ ಶ್ರೇಷ್ಠ ಧರ್ಮವನ್ನು ಹೊಂದುವಷ್ಟು ಮನಸ್ಸನ್ನು ಬದಲಾಯಿಸಲು ಅಂಥ ಶ್ರದ್ಧೆಯ ಅನೇಕರಿಗೆ ಆಗುವುದಿಲ್ಲವಾದುದರಿಂದ ಕ್ರಮಕ್ರಮವಾಗಿ ಅವರಿಗೆ ಆ ಅವಕಾಶವನ್ನು ಹೊಂದುವಂತೆ ಮಾಡುವುದಕ್ಕಾಗಿ ಪ್ರಾರಂಭದಲ್ಲಿ ಶಾಕಾಹಾರಿ,ಮಾಂಸಾಹಾರಿಗಳ ಪಂಗಡ, ಅನ್ಯವಾಗಿ ದೇವನನ್ನು ತಿಳಿಯುವವರು (ದ್ವೈತಿ) ತನ್ನನ್ನು ದೇವನನ್ನಾಗಿ ತಿಳಿವುದು (ಅದ್ವೈತಿ) ಈ ಪಂಗಡಗಳು ಇಷ್ಟನ್ನೇ ಮುಖ್ಯವಾಗಿ ವಿಂಗಡಿಸಿ ಧರ್ಮಕ್ಕೆ ಯಾವ ಹೆಸರನ್ನೂ ಕೊಡದೆ ವಿಶ್ವಧರ್ಮ ವಿಶ್ವಕುಲ ಎಂಬುದಾಗಿ ಕರೆದು ಶ್ರೇಷ್ಠಧರ್ಮವನ್ನು ಯಾರಾದರೂ ಅವಲಂಬಿಸಬಹುದೆಂದು ಸಾರಿದರೆ ಹಿಂದೂದೇಶದ ಧಾರ್ಮಿಕ ವಿಚಾರಕ್ಕೆ ಪ್ರಪಂಚದ ಎಲ್ಲಾ ದೇಶದವರೂ ತಲೆಬಾಗಬಹುದು.

ಈಗ ಗಾಂಧಿ ಧರ್ಮವು ತನಗೆ ಸರಿಯಾದುದೆಂದು ರಷ್ಯಾ ದೇಶವು ಹೇಳದಿರಬಹುದು. ಗಾಂಧೀಜಿಗೆ ಮಹರ್ಷಿಯೆಂದು ಅದು ಕರೆಯದಿರಬಹುದು.

ಹಿಂದೂ ದೇಶವೊಂದಕ್ಕೆ ಮಾತ್ರ ಅನ್ವಯಿಸುವಂತಹ ಧರ್ಮವನ್ನು ಈಗಿನ ರಾಷ್ಟ್ರದ ಮುಂದಾಳುಗಳು ಮುಂದಕ್ಕೆ ತರದೆ ಜಗತ್ತೇ ಒಪ್ಪುವ ಧರ್ಮವನ್ನು ಮುಂದಕ್ಕೆ ತರುವವರಾಗಲಿ.

ಧಾರ್ಮಿಕವೊಂದಾದರೆ ರಾಜಕೀಯವೂ ಒಂದಾಗುವುವೆಂಬ ಭಾವನೆಯನ್ನು ಬಿಟ್ಟು ಧರ್ಮವು ಜನತೆಯ ಸ್ವಾತಂತ್ರ್ಯವಾಗಿದ್ದು ಅದು ತನ್ನಷ್ಟಕ್ಕೆ ತಾನೇ ಜನತೆಯಿಂದಲೇ ಉದ್ಧರಿಸಲ್ಪಡಲಿ ಎಂದು ರಾಜಕೀಯ ಮುಂದಾಳುಗಳು ಯೋಚಿಸಿ ಆ ಕೆಲಸಕ್ಕೆ ತಮ್ಮ ಸಹಾಯವನ್ನು ಮಾಡಲಿ, ಧನಶೇಖರ ಮಾಡಲಿ.

ಹಿಂದೂ ದೇಶದೊಳಗಾದರೂ ಧಾರ್ಮಿಕಕ್ಕೆ ಕೈಹಾಕದ ರಾಜಕೀಯವು ಎಲ್ಲರಿಂದಲೂ ಸಹಾಯವನ್ನು ಹೊಂದಲರ್ಹವಾಗಿ ಪರಿಣಮಿಸಬಹುದು. ಬಹಳ ಧಾರ್ಮಿಕ ಭೇದಗಳುಳ್ಳ ಈ ದೇಶದಲ್ಲಿ ಸುಲಭವಾಗಿ ಒಂದು ಧರ್ಮವು ರೂಢಿಗೆ ಬರುವಂತೆ ಮಾಡುವುದು ಬಹು ಕಷ್ಟಸಾಧ್ಯ ಎಂಬುವನ್ನು ರಾಜಕೀಯವಾಗಿಯೂ ಆಲೋಚಿಸಲಿ.

ಒಟ್ಟಿನಲ್ಲಿ ಧಾರ್ಮಿಕವಾಗಿರತಕ್ಕ ಸಂಸ್ಕಾರವನ್ನು ಪಡೆದಾಗ ಮಾತ್ರ ಎಲ್ಲರೂ ಎಲ್ಲವನ್ನೂ ಹೊಂದಲರ್ಹರು ಎಂಬುದನ್ನು ರಾಜಕೀಯವೂ ಜನತೆಯೂ ಕೂಡಾ ಚೆನ್ನಾಗಿ ತಿಳಿದಿರಲಿ.

(ಸಂ. ೭೨–೭೩)

# ಗಾಂಧೀಜಿಯವರೂ ಮಹಾದೇವನು

## (Gandhiji and God)

ಮಹನೀಯರಾದ ಗಾಂಧೀಜಿಯವರು ಮಹಾದೇವನ ವಿಷಯದಲ್ಲಿ ಹೊಂದಿರುವ ಅಭಿಪ್ರಾಯವಿದು. (೧೪-೭-೪೬ ರ 'ಹರಿಜನ' ಪತ್ರಿಕೆಯಲ್ಲಿ ಪ್ರಕಟವಾದಂತೆ)

"Am I propagating a new variety of Superstition? askeed Gandhiji in one course of one of his recent prayer discourses at Poona. "God in not a person. He is the all-pervading, all-powerful spirit. Any one who bears him in his heart has accession of a marvellous force of energy comparable in its results to physical forces like steam or electricity but much more rubtle"

ಇದನ್ನು ತಿಳಿಸುತ್ತಾ ಅವರ ಕಾರ್ಯದರ್ಶಿ ಹರಿಜನ ಪತ್ರಿಕೆಯ ಪ್ರಕಾಶಕರಾದ ಪ್ಯಾರೆಲಾಲರು ರಾಮನಾಮವು ಒಂದು ಕಪ್ಪು ಯಂತ್ರ (magic)ದಂತೆ ಇಲ್ಲವೆಂತಲೂ ಎಲ್ಲ ಗುರುತಿನಿಂದ ತೋರಿಸುವುದಕ್ಕೆ ಬರುವುದೆಂದು ಗ್ರಹಿಸಬೇಕೆಂತಲೂ ಬಹಳ ಶೋಧನೆ ಮಾಡಿ ಕಂಡುಹಿಡಿಯುವ ಫಲಿತಾಂಶವನ್ನು ಗಣಿತದ ಸೂತ್ರ (Formula) ಸೂಕ್ಷ್ಮದಲ್ಲಿ ತಿಳಿಸುವುದಕ್ಕೆ ಸಮನಾಗಿ ಈ ರಾಮನಾಮವಿರುವುದಾಗಿ ಗಾಂಧೀಜಿಯವರ ಅಭಿಪ್ರಾಯವೆಂದೂ ಇದೇ ಮುಂತಾಗಿ ವಿವರಿಸಿರುತ್ತಾರೆ. ಮಹಾದೇವನ ಹೆಸರನ್ನು ಅಂಗೀಕರಿಸಬೇಕಾದರೆ ಮಹಾದೇವನ ಆತ್ಮವುಳ್ಳವನಾಗಿ (Godly life) ಜೀವಿಸಬೇಕೆಂತಲೂ ಹೇಳಿರುತ್ತಾರೆ. ಯಂತ್ರದ ಕೆಲಸದಂತೆ ಸುಮ್ಮನೆ ರಾಮನಾಮವನ್ನು ಉಚ್ಚರಿಸುವುದು ಬಲವನ್ನು ಕೊಡುವುದಿಲ್ಲವೆಂಬುದೂ ಅವರ ಅಭಿಪ್ರಾಯ.

ವೀರಶೈವರೂ ನಿರಾಕಾರನಾದ ಶಿವನನ್ನೇ ಮಹಾದೇವನೆಂದು ತಿಳಿಯುತ್ತಾರೆ. ಆ ಶಿವನು ಗಾಂಧೀಜಿಯವರು ಹೇಳುವಂತೆ ಸರ್ವಗತ (All pervading) ಸೂಕ್ಷ್ಮ (subtie) ಪರಾತ್ಪರ (Higher supremespirit) ಎಂಬ ಲಕ್ಷಣಗಳುಳ್ಳವನಲ್ಲದೆ ಶಿವ ಎಂದರೆ ಶುದ್ಧ, ನಿತ್ಯ, ಅವ್ಯಯ, ಅನಿಂದಿತ, ಅಪ್ರಮಾಣ, ಅನೌಪಮ್ಯ, ಅನಾಮಯ ಎಂಬ ಲಕ್ಷಣಗಳುಳ್ಳವನೆಂದೂ ತಿಳಿಯುತ್ತಾರೆ. ನಿತ್ಯ ಎಂದರೆ ಕಾರಣ ಕಾರಣನು; ಅವ್ಯಯ ಎಂದರೆ ಕ್ಷೀಣನಾಗದೆ ಇರುವವನು; ಅನಿಂದಿತ ಎಂದರೆ ನಿರ್ಮಲನು; ಅನೌಪಮ ಎಂದರೆ ಸಾದೃಶ್ಯವಿಲ್ಲದವನು; ಪ್ರಮಾಣಕ್ಕೆ ನಿಲುಕದವನಾದ್ದರಿಂದ ಅಪ್ರಮೇಯನು; ವಿಶೇಷವಾಗಿ ನಿರ್ಗುಣನಾದುದರಿಂದ ಅನಾಮಯನು ಎಂಬೀ ವ್ಯಾಖ್ಯಾನವನ್ನು ತಿಳಿಸಿ ಶಿವನ ಹತ್ತು ಲಕ್ಷಣಗಳನ್ನು ವಾತುಲಾಗಮವು ಬೋಧಿಸುತ್ತದೆ.

ಇವನನ್ನು ಮನಸ್ಸಿನಲ್ಲಿ ಇಡುವವರಿಗೆ ಉಗಿ (Steam) ವಿದ್ಯುಚ್ಛಕ್ತಿ (Electricity) ಇವುಗಳಿಗಿಂತಲೂ ಸೂಕ್ಷ್ಮಶಕ್ತಿಗೆ ಸಮನಾದ ಆಶ್ಚರ್ಯಕರವಾದ ಶಕ್ತಿಯನ್ನು ಗ್ರಹಿಸುವುದಾಗುವುದೆಂಬುದೇನೋ ನಿಜ. ಗಾಂಧೀಜಿಯವರು ಹೇಳಿರ ತಕ್ಕ ಈ ವಿಷಯವು ಸರ್ವರೂ ಗ್ರಹಿಸಲಿಕ್ಕೆ ಅರ್ಹವಾದುದೇ ಆಗಿದೆ. ಬರಿಯ ಹೆಸರನ್ನು ಹೇಳಿದ ಮಾತ್ರದಿಂದ ಪ್ರಯೋಜನವು ಕಡಿಮೆ.

ಆದರೆ ರಾ. ಪ್ಯಾರೆಲಾಲ್‌ರವರು ಹೇಳಿರುವಂತೆ ಮಹಾದೇವನ ಆತ್ಮಸ್ಥಿತಿ (Godly life) ಬರಬೇಕಾದರೆ ರಾಮನಾಮವನ್ನು ಮನಸ್ಸಿನಲ್ಲಿ ಇಡುವುದೇ ಸಾಲದು. ನಿರಾಕಾರ ವಸ್ತುವು ಸಾಕಾರವಾಗಿ ಹೇಗೆ ಬಂದಿರುವನೆಂದು ಯೋಚಿಸಿದರೆ ಈಗಿನ ಶಾಸ್ತ್ರ ದೃಷ್ಟಿಗೆ (Science) ತಕ್ಕಂತೆ ಮೊದಲು ಮಿಂಚಿನ (ವಿದ್ಯುದಗ್ನಿ) ಪ್ರಕಾಶರೂಪನ್ನು ಬರ ಬರುತ್ತಾ ಅಗ್ನಿಯ ಪ್ರಕಾಶನೂ ಆಗಿ ಆಮೇಲೆ ನೀರು, ಭೂಮಿ ರೂಪವಾಗಿ ಮನುಷ್ಯರ ಕಣ್ಣಿಗೆ ತೋರುತ್ತಿರುವನೆಂಬುದೇ ವ್ಯಕ್ತವಾಗುತ್ತದೆ. ಆದುದರಿಂದ ದೀಪದ ಪ್ರಕಾಶವು ಅದಕ್ಕಿಂತಲೂ ಸೂಕ್ಷ್ಮವಾದ ವಿದ್ಯುತ್ ಪ್ರಕಾಶವು ತಮ್ಮ ಮನಸ್ಸಿನಲ್ಲಿ (ಹೃದಯದಲ್ಲಿ) ತೋರಲಿ ಎಂದು ಯೋಗಿಗಳಾದವರು ಬಹಳವಾಗಿ ಪ್ರಯತ್ನಿಸಿದ್ದಾರೆ. ರಾಮನ ಹೆಸರನ್ನು ಧ್ಯಾನಕ್ಕೆ ಇಟ್ಟುಕೊಂಡರೆ ಕೆಲವರು ಯೋಚಿಸುವಂತೆ ದಶರಥನ ಮಗನಾದ ಶ್ರೀರಾಮನ ಆಕಾರವು (ಮೂರ್ತಿಯು) ಅವನ ಮನಸ್ಸಿನಲ್ಲಿ ಮೂಡಿ ಧ್ಯಾನಿಯು ಸಗುಣಮೂರ್ತಿಯ ಉಪಾಸಕನಾಗುವುದರಿಂದ ಹೆಚ್ಚಿನ ಫಲವನ್ನು ಪಡೆಯುವುದಿಲ್ಲ.

ನಿರಾಕಾರನು ದೀಪದಂತೆ, ಭೂಮಿಯಂತೆ, ಸೂರ್ಯನಂತೆ ಗೋಳಕಾಕೃತಿಯಾಗಿ ಸಾಕಾರಕ್ಕೆ ಬಂದಿರುವನೆಂಬುದು ಎಲ್ಲರೂ ಒಪ್ಪತಕ್ಕ ವಿಷಯವಾಗಿದೆ. ಗಾಳಿಯ ಒಂದು ಅಣುವನ್ನು ನೀರಿನ ಒಂದು ಬಿಂದುವನ್ನು ಚಿತ್ರಿಸಿದರೆ ಗೋಳಾಕಾರವಾಗಿಯೇ ತೋರುವುದು. ಈಗಿನ ಶಾಸ್ತ್ರ (Science) ಕಾರರಿಗೆ ವ್ಯಕ್ತವಾಗಿ ಇರುತ್ತದೆ.

ಈ ಗೋಳಾಕಾಕೃತಿಯ ಪ್ರಕಾಶವು ಹೃದಯದೊಳಗೆ ಪ್ರತಿಬಿಂಬಿಸಿ ಬರಲೆಂದು ಶಿವಶರಣರು ಲಿಂಗವನ್ನು ತಮ್ಮ ಮುಂದುಗಡೆಯಲ್ಲಿ ಹಸ್ತದಲ್ಲಿ ಇಟ್ಟುಕೊಂಡು ಆ ರೂಪವನ್ನು ಒಳಗೆ ಗ್ರಹಿಸುತ್ತಾರೆ. ಕಪ್ಪು ಕಂಥೆಯನ್ನು ಧರಿಸುವ ಲಿಂಗವೇ ಈ ಯೋಗ ಸಾಧನೆಗೆ ಮುಖ್ಯವಾದುದು.

ಗಾಂಧೀಜಿಯವರು 'ನಾನು ಮೂಢ ಭಕ್ತಿಯವನಲ್ಲ' ಎಂದು ಹೇಳಿ ನಿರಾಕಾರನಾದವನು ರಾಮ ಎಂದು ತಿಳಿದರೂ ನೇತ್ರದಲ್ಲಿ ಕಂಡ ಮೂರ್ತಿಯು ಮನಸ್ಸಿನಲ್ಲಿ ಬಿಂಬಿಸುವುದು ಸುಲಭವಾಗಿರುವಂತೆ ನಿರಾಕಾರ ರಾಮನನ್ನು ತಮ್ಮ ನೇತ್ರದ ಮುಂದೆ ಅವರು ಇಟ್ಟುಕೊಳ್ಳುವುದಕ್ಕೆ ರಾಮನ ಚಿತ್ರ (Photo) ದೊರಕುವುದೇ ಹೊರತು ಬೇರೆ ಇನ್ನಾವ ಸಾಧನೆಯು ಇಲ್ಲ. ಮಹಾದೇವನು ಮನುಷ್ಯನಲ್ಲ ಎಂದು ಯೋಚಿಸಿದರೆ ಬರಿಯ ಹೆಸರನ್ನು ಧ್ಯಾನದಲ್ಲಿ ಇಡುವುದರಿಂದ ಪ್ರಯೋಜನ ಕಡಿಮೆ. ನಿರಾಕಾರನನ್ನು ಧ್ಯಾನದಲ್ಲಿ ಇಡುವುದಕ್ಕೆ ಆಗುವುದೂ ಇಲ್ಲ.

ನಿರಾಕಾರನಾದ ಶಿವನನ್ನೇ ರಾಮ ಎಂದು ಸಂಬೋಧಿಸುವುದಕ್ಕೆ ಏನೂ ಅಡ್ಡಿಯಿಲ್ಲ ಎಂದು ತಿಳಿಯಬಹುದಾದರೂ ಪೂರ್ವ ಸಂಪ್ರದಾಯದ ಹೆಸರು ಎಂಬುದಾಗಿ 'ಶಿವ' ಎಂಬ ಹೆಸರನ್ನು ಬಿಟ್ಟುಬಿಡುವುದು ವೀರಶೈವರಿಗೆ ಸರಿಯಾದುದಾಗಿ ನನಗೆ ತೋರುವುದಿಲ್ಲ. ವೀರಶೈವರಾದವರೂ ರಾಮನಾಮದ ಬದಲಾಗಿ ಶಿವನಾಮವನ್ನು ಜಪಿಸಿ ಅಷ್ಟುಮಾತ್ರಕ್ಕೆ ತೃಪ್ತರಾಗುವುದು ಸಾಲದು. ಆ ಶಿವನನ್ನು ಲಿಂಗರೂಪಿ (ಗೋಳಕಾಕೃತಿ)ಯಾಗಿ ತಿಳಿಯಬೇಕೆಂಬ ಪೂರ್ವಿಕರ ಪದ್ಧತಿಯನ್ನು ತಿರಸ್ಕರಿಸದೆ ಲಿಂಗದ ಮುಖಾಂತರ ನಿರಾಕಾರನನ್ನು ಅನುಭವಿಸುವ ತಮ್ಮ ಯೋಗ ಮಾರ್ಗವನ್ನು ಕ್ರಿಯೆಯಿಂದ ನಡೆಸಬೇಕು.

ನಾನು ಆತ್ಮರೂಪ (God life) ಎಂದು ತಿಳಿಯುವುದು ಬರಿಯ ಜ್ಞಾನ ಆ ಜ್ಞಾನ ಸ್ವರೂಪದ ಕ್ರಿಯೆಯು ನನ್ನಲ್ಲಿ ಉಂಟು ಎಂದು ಕೆಲಸಮಾಡುವುದೇ ಕ್ರಿಯೆ (Godly working). ಈ ಎರಡನ್ನೂ ಉಳ್ಳವರೇ ಶಿವಶರಣರು. ಅವರೇ ಮಹಾತ್ಮರು.

ಮಿಂಚಿನ ಶಕ್ತಿಗಿಂತಲೂ ಸೂಕ್ಷ್ಮವಾದ ಆಶ್ಚರ್ಯಕರವಾದ ಶಕ್ತಿಯುಳ್ಳವನು ಮಹಾದೇವ (God) ಎಂದು ಗಾಂಧೀಜಿಯವರು ತಿಳಿದಿರುವುದು ವೀರಶೈವರು ತಿಳಿದುಕೊಂಡಿರುವ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಲಿಂಗದ ಮೂರು ರೂಪಗಳಲ್ಲಿ 'ಭಾವಲಿಂಗ' ಎಂಬುದಕ್ಕೆ ಸಮನಾಗಿ ಇರುವುದೆಂದು ಹೋಲಿಸಬಹುದು. ಆ ಭಾವಲಿಂಗದಿಂದ ಪ್ರಾಣಲಿಂಗವು (ಅಂತರಾತ್ಮನು) ಯಾವ ರೀತಿಯಲ್ಲಿ ಭಿನ್ನನಾಗಿ ತೋರಿರುವನೆಂಬುದನ್ನು ಮಹನೀಯರಾದ ಗಾಂಧೀಜಿಯವರು ಚೆನ್ನಾಗಿ ವಿವರಿಸಿ ತೋರಿಸಲಿ. ಮಿಂಚಿನ ಶಕ್ತಿಯಿಂದ ಮಾತ್ರವೇ ಮನುಷ್ಯನಿಗೆ ಪ್ರಾಣ ಬಂದಿಲ್ಲವೆಂಬುದು ಸಾಮಾನ್ಯವಾಗಿ ತಿಳಿಯತಕ್ಕ ಅಂಶ. ಬ್ರಹ್ಮಾಂಡದಲ್ಲಿ ಇರತಕ್ಕ ಯಾವುದೋ ಒಂದು ಅತ್ಯಂತ ಸೂಕ್ಷ್ಮಶಕ್ತಿಯು ಮನುಷ್ಯನ ಪ್ರಾಣವಾಗಿ (ಜೀವರೂಪ) ಒಂದು ಮನುಷ್ಯನಿಗೆ ಪ್ರಪಂಚದ ತಿಳುವಳಿಕೆಯನ್ನು ಉಂಟುಮಾಡಿ ಕೊಡುತ್ತದೆ. ಇದೇ ಪ್ರಪಂಚದಲ್ಲಿ ಆಶ್ಚರ್ಯಕರವಾದ ವಿಷಯ. ಈ ಆಶ್ಚರ್ಯಕ್ಕಿಂತಲೂ ಮನುಷ್ಯನ ಆತ್ಮಸ್ಥಿತಿ (Godly life) ಪಡೆಯುವುದು ಹೆಚ್ಚಿನ ಆಶ್ಚರ್ಯಕರ. ಈ ವಿಚಾರವನ್ನು ಜನತೆಯು ಸದಾ ಚಿಂತಿಸಿ ಕೆಲಸಮಾಡಲಿ ಎಂದು ನನ್ನ ಹಾರೈಕೆ.*

(ಸಂ. ೬೦–೬೧)

* ಶ್ರೀ ಚನ್ನಮಲ್ಲಿಕಾರ್ಜುನರು ಧರ್ಮದ ವಿಚಾರವಾಗಿ ಯಾರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗಲೂ, ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ತರ್ಕಬದ್ಧವಾಗಿ ವ್ಯಕ್ತಪಡಿಸಿ, ಮೂಲಭೂತ ತತ್ತ್ವದ ಆಳಕ್ಕಿಳಿದು ವೀರಶೈವ ಸಿದ್ಧಾಂತದೊಡನೆ ತೌಲನಿಕವಾಗಿ ವಿಮರ್ಶೆಮಾಡಿ ಸೂಕ್ತ ಸಲಹೆ ಕೊಡುತ್ತಿದ್ದರೆಂಬುದನ್ನು ಈ ಲೇಖನದಲ್ಲಿ ತಿಳಿಯಬಹುದು.

(—ಸಂ.)

# ಪರಮ ಶಾಂತಿ ಪುರುಷ ಮಹನೀಯ ಗಾಂಧೀಜಿ

ಅಯ್ಯೋ ಇನ್ನೇನು ? ಹಿಂದೂ ದೇಶದಲ್ಲೆಲ್ಲಾ ಒಬ್ಬನೇ ಒಬ್ಬ ಪರಮ ಶಾಂತಿ ಪುರುಷನಾಗಿ ಜಗತ್ತಿಗೆಲ್ಲಾ ಶಾಂತಿ ತತ್ತ್ವವನ್ನು ಬೀರಿ ಜಗತ್ತನ್ನು ಶಾಂತಿಯ ಕಡೆಗೆ ತಿರುಗಿಸಲು ಕಾರಣನಾಗಿ, ಅಹಿಂಸೆಯ ಪ್ರಚಾರಕನಾಗಿ ಜಗತ್ತಿಗೆಲ್ಲಾ ಆದರ್ಶನಾಗಿದ್ದ ಮೋಹನದಾಸ ಕರಮಚಂದ ಗಾಂಧೀಜಿ ಮಹನೀಯನು ಕಣ್ಮರೆಯಾದನು.

ಹಿಂದೂ ದೇಶದ–ತನ್ನ ಜನ್ಮದೇಶದ–ಸುಖ ದುಃಖವೇ ತನ್ನದೆಂದು ಯೋಚಿಸಿ ಹಗಲಿರುಳೂ ದುಡಿಯುತ್ತಿದ್ದ ಮಹನೀಯನು ದೂರ ಹೋದನು. ಇಂತಹ ಮಹನೀಯನನ್ನು ಹಿಂದೂದೇಶವು ಹೊಂದುವುದು ಇನ್ನೆಂದಿಗೋ ?

ಯಾರಾದರೂ ಇದ್ದ ಕಾಲದಲ್ಲಿ ಅವರ ಪ್ರಭಾವವು ಜನರಿಗೆ ಹೆಚ್ಚಾಗಿ ತೋರಿ ಬರುವುದಿಲ್ಲ. ಇಲ್ಲದೆ ಇದ್ದಾಗ ಅವರ ಅವಶ್ಯಕತೆಯನ್ನು ಕಂಡು ಶೋಕಿಸುವವರು ಬಹಳ.

ಹಿಂದೂ ದೇಶದಲ್ಲಿ ರಾಜ್ಯಭಾರದ ದರ್ಪವು ಚುರುಕಾಗಿರುವ ವೇಳೆಯಲ್ಲಿ ಆ ದರ್ಪಕ್ಕೆ ಹೆದರದೆ 'ಕ್ವಿಟ್ ಇಂಡಿಯಾ' ಎಂಬ ಮಂತ್ರವನ್ನು ಹಿಂದೂ ದೇಶದವರಿಗೆ ಬೋಧಿಸಿ ಆ ಮಂತ್ರವನ್ನು ಸಾರ್ಥಕವಾಗಿ ಸಫಲವಾಗಿ ಆಗುವಂತೆ ನಡೆಸುವ ಧೈರ್ಯವನ್ನು ಪ್ರಕಾಶಪಡಿಸಿದ ಮಹನೀಯನು ಇನ್ನು ಸಿಕ್ಕುವನೇ ?

ಹಿಂದೂ ದೇಶದವರು ಈ ರೀತಿ ಶೋಕಿಸುವಂತೆ ಮಾಡಲಿಕ್ಕೆ ಕಾರಣರಾರು ? ನಾಥೂರಾಂ ವಿನಾಯಕ ಗೋಡ್ಸೆ ಎಂಬುವನು. ಈಗ ಪೂನಾ ಪ್ರಾಂತೀಯ ಹಿಂದೂ ಮಹಾಸಭೆಯ ಕಾರ್ಯದರ್ಶಿಯಾಗಿದ್ದವನು. ಗಾಂಧೀಜಿ ಮತ್ತು ಇತರ ಕಾಂಗ್ರೆಸ್ ನಾಯಕರುಗಳು ಭಾರತವನ್ನು ಮುಸ್ಲಿಮರಿಗೆ ಮಾರುತ್ತಿದ್ದಾರೆ, ಹಿಂದೂ ಸಾಮ್ರಾಜ್ಯದ ವಿಭಜನೆಗೆ ಅವರೇ ಕಾರಣರು, ಎಂದು ಹೇಳುತ್ತಿರುವಂತೆ.

ಇವನು ಮಹನೀಯರಾದ ಗಾಂಧೀಜಿಯವರನ್ನು ರಿವಾಲ್ವರು ಗುಂಡುಗಳು ಎದೆಗೆ ಹೊಟ್ಟೆಗೆ ತಗಲುವಂತೆ ಹೊಡೆದು ಕೊಲೆ ಮಾಡಿದಾಗ ತನ್ನ ಕೆಲಸದ ಪರಿಣಾಮವನ್ನು ಯೋಚಿಸಿದನೇ ? ಗಾಂಧೀಜಿಯವರು ಮಾಡಿದ ಅವರ ಸ್ವಂತ ಪ್ರಯೋಜನದ ತಪ್ಪಿಗಾಗಿ ಏನಾದರೂ ದ್ವೇಷಿಸಿದನೆ ? ತನ್ನ ಸ್ವಂತ ಕೆಲಸವು ಕೆಟ್ಟುದಕ್ಕಾಗಿ ದ್ವೇಷಿಸಿದನೇ? ಹಿಂದೂ ದೇಶಕ್ಕಾಗಿ ದುಡಿಯುತ್ತಿದ್ದ ಕೆಲಸಗಳಲ್ಲಿ ಕೆಲವೊಂದು ದೋಷವನ್ನು ಆರೋಪಿಸಿ, ತನ್ನ ಸಂಘಕ್ಕೇ ಅಪಕೀರ್ತಿಯನ್ನು ತರುವ ಕಾರ್ಯವನ್ನು ಮಾಡಿದನಲ್ಲವೇ?

ಹಿಂದೂ ದೇಶದ ಅಧ್ಯಾತ್ಮಿಕ ಮುಖ್ಯವಾದ ಗುರಿಯೇ ಪರಮ ಶಾಂತಿ. ಅಂತಹುದನ್ನು ಹೊಂದಿದ ಮಹನೀಯನನ್ನು ಕೊಂದು ಹಿಂದುಗಳು ತಮ್ಮ ತತ್ತ್ವಶಾಸ್ತ್ರದ ಅಭಿಪ್ರಾಯದಂತೆ ನಡೆಯುವುದಿಲ್ಲವೆಂದು ಜಗತ್ತಿನವರೆಲ್ಲರೂ ಆಕ್ಷೇಪಿಸುವಂತೆ ಮಾಡಿದ

ಕ್ರೂರಿಯು ಇವನಲ್ಲವೇ ? ಹಿಂದೂಗಳ ಶತ್ರುಗಳು ಮಾಡಬಹುದಾದೀ ಕೆಲಸವನ್ನು ಮಾಡಿ ಅವರಿಗಿಂತಲೂ ಮಹಾ ಕ್ರೂರಿಯೂ ನಿಷ್ಕರುಣಿಯೂ ಎಂಬ ಅಪವಾದಕ್ಕೆ ಗುರಿಯಾದವನಿವನಲ್ಲವೇ ? ತನ್ನ ಸಂಘವನ್ನು ಹಿಂದೂ ದೇಶವೇ ದ್ವೇಷಿಸುವಂತ ಮಾಡಿಕೊಂಡನಿವನಲ್ಲವೇ ?

ಇವನು ಗಾಂಧೀಜಿಯವರನ್ನು ಕೊಂದುದರಿಂದ ಹಿಂದೂ ದೇಶದ ಇಬ್ಭಾಗವು ತಪ್ಪುವುದೇ ? ಆ ಕೆಲಸವನ್ನು ಇವನು ಮಾಡುವನೇ ? ಹಿಂದೂ ದೇಶದ ಅಂತಃಕಲಹವು ಈಗ ಎದ್ದಿರುವುದು ಅಶಾಂತಿಯ ನೆಸೆಯಿಂದಲೇ ಇಂತಹ ಅಶಾಂತಿಯು ಪರಮ ಶಾಂತಿಯಿಂದ ದೂರವಾಗುವುದಿಲ್ಲವೆಂದು ಸದ್ಧರ್ಮದೀಪಿಕೆಯಲ್ಲಿ ಪ್ರಕಟಿಸಲ್ಪಟ್ಟಿದೆ. ಮಹನೀಯರನ್ನು ಕೊಲ್ಲುವವರು ಒಬ್ಬರಿಬ್ಬರಾದರೂ ಇರಬಹುದೆಂದು ಪ್ರಕಟಿತವಾಗಿದೆ. ಅದನ್ನೇ ಇವನು ನಿಜ ಮಾಡಿ ತೋರಿಸಿಬಿಟ್ಟನಲ್ಲವೇ ? ಸುಭಾಸಚಂದ್ರ ಬೋಸರು ಶೌರ್ಯದಿಂದಲೇ ಹಿಂದೂ ದೇಶದ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಧೀರರು. ಹಿಂದೂ ಸೈನ್ಯಗಳನ್ನೇರ್ಪಡಿಸಿದವರು. ಗಾಂಧಿಯವರ ಪರಮ ಶಾಂತಿತತ್ತ್ವವು ಅವರಿಗೆ ಒಪ್ಪಿಗೆಯಾಗಿರಲಿಲ್ಲ. ಆದರೂ ಗಾಂಧೀಜಿಯವರನ್ನು ಕೊಲ್ಲಬೇಕೆಂಬ ಬುದ್ಧಿಯು ಲೇಶವೂ ಬಂದಿರಲಿಲ್ಲ. ಈ ಹೇಡಿಗೆ ಇಂತಹ ಯೋಚನೆ ಹೇಗೆ ಬಂದಿತೊ ? ಪರಮ ಶಾಂತಿ ತತ್ತ್ವವು ಕೂಡಲೇ ಫಲ ಕೊಡದಿದ್ದರೂ ಕೊನೆಯಲ್ಲಿ ಫಲ ಕೊಡುವುದು ನಿಜ. ಗಾಂಧೀಜಿಯವರಿಗೇನೇ ತಮ್ಮ ಅಹಿಂಸಾತತ್ತ್ವವು ಈಗ ಯಾರಿಗೂ ಬೇಕಾಗಿಲ್ಲ ಎಂಬುದು ತಿಳಿದಿತ್ತು. ಅಶಾಂತಿಯನ್ನು ನಿಲ್ಲಿಸಲಿಕ್ಕೆ ಬೇರೆ ಬೇರೆ ಯೋಜನೆಗಳು ಯೋಚಿಸಲ್ಪಡುತ್ತಿದ್ದವು, ಕೊನೆಯಲ್ಲಿ ಹಿಂದೂ ದೇಶವು ಒಂದಾಗಿರಬೇಕೆಂಬ ಅಭಿಪ್ರಾಯವು ಎಲ್ಲರಿಗೂ ಇದ್ದಿತು, ಅದನ್ನು ಕಾರ್ಯರೂಪಕ್ಕೆ ತರುವುದರೊಳಗೆ ಬರುವ ಕಷ್ಟನಿಷ್ಠುರಗಳನ್ನು ಸಹಿಸಿಕೊಂಡು ತಮ್ಮ ಧ್ಯೇಯವನ್ನು ಸಾಧಿಸುವುದರಲ್ಲಿ ಈಗಿನ ಮುಖ್ಯಮಂತ್ರಿ ಮೊದಲಾದವರೆಲ್ಲರೂ ನಿರತರಾಗಿದ್ದರು. ಇದು ಮಹನೀಯರಿಗೂ ತಿಳಿಯದೆ ಇರಲಿಲ್ಲ. ರಾಜಕೀಯ ಪ್ರಯತ್ನಗಳಲ್ಲಿ ಇವರ ಅಂಗವಿಲ್ಲದೆ ಇರುತ್ತಿರಲಿಲ್ಲ. ಇದನ್ನೆಲ್ಲಾ ಯೋಚಿಸದೆ, ಹಿಂದೂ ದೇಶದ ಧಾರ್ಮಿಕ ಕೀರ್ತಿಯು ಹೇಗೆ ಇರುವುದೆಂಬುದನ್ನೂ ಸಹ ಯೋಚಿಸದೆ ಈ ಹೇಡಿಯು ಕೊಂದುಬಿಟ್ಟನಲ್ಲವೇ ? ಹಿಂದೂ ದೇಶಕ್ಕೆ ಎಂತಹ ಅನ್ಯಾಯವಾಯಿತು ? ಇದು ಪರಮಾನ್ಯಾಯ. ಅಳತೆಗೆ ಮೀರಿದ ಅನ್ಯಾಯ.

ಹಿಂದೂಗಳ ಶತ್ರುಗಳ ಅಶಾಂತಿಯನ್ನು ತಡೆಯುವುದು ಕಷ್ಟವಾಗಿ ಆ ಕೆಲಸದ ಹೊರೆಯೇ ಹೆಚ್ಚಾಗಿರುವಲ್ಲಿ ಈ ಗೋಡ್ಸೆ ಸಂಘದವರನ್ನು ಮೂಲೆಗೊತ್ತುವ ಒಂದು ಅಶಾಂತಿಯೂ ಹಿಂದೂ ದೇಶವಲ್ಲಿ ಬೆಳೆಯುವಂತೆ ಮಾಡಿದ ಮೂರ್ಖನಿವನಲ್ಲವೇ ?

ರಾಜ್ಯಾಡಳಿತದ ದಕ್ಷತೆಗೆ ರಾಜಸಗುಣವೇ ಬೇಕು. ದುಷ್ಟರನ್ನು ಶಿಕ್ಷಿಸುವುದು ಶಿಷ್ಟರನು ರಕ್ಷಿಸುವುದು ಇಂತಹ ಕಾರ್ಯಗಳು ನಡೆಯಬೇಕು, ನಿಜ. ಆದರೆ ಇಂತಹ ಕಾರ್ಯಗಳ ಕೊನೆಯ ಧ್ಯೇಯವೂ ಪರಮಶಾಂತಿ—ಅಶೋಕನು ಲಕ್ಷಗಟ್ಟಲೆ ಸೈನಿಕರನ್ನು

ಕೊಂದು ಆಮೇಲೆ ಅಶೋಕನಾಗಲಿಲ್ಲವೇ ? ಆಮೇಲೆ ಕೊಲ್ಲದ ಪ್ರತಿಜ್ಞೆಯನ್ನು ಮಾಡ ಲಿಲ್ಲವೇ ? ಅಶಾಂತಿಯು ಹೆಚ್ಚಾದಾಗ ಅವನ್ನು ನಿಲ್ಲಿಸುವುದು ಹೇಗೆಂಬ ಆಲೋಚನೆ ಮುಂದಾಳುಗಳಿಗೆ ಬಂದೇಬರುತ್ತದೆ. ತಕ್ಕ ಕಾರ್ಯಕ್ರಮಗಳು ನಡೆಸಲ್ಪಡುತ್ತವೆ. ಪರಮಶಾಂತಿ ಮಂತ್ರವು ಆಗಲೇನೂ ನಡೆಯುವುದಿಲ್ಲ. ಆದರೆ ಆ ಮಂತ್ರವನ್ನು ಅದರ ಅನುಯಾಯಿಗಳೇ ಆಗ ಜಪಿಸುವುದಿಲ್ಲ. ಆದುದರಿಂದ ಸುಭಾಸಚಂದ್ರರು ಬರಲೆಂದು ಹಿಂದೂ ದೇಶವು ಹಾರೈಸುತ್ತಲಿದೆ. ಇಂತಹ ಹೊತ್ತಿನಲ್ಲಿ ಪರಮಶಾಂತಿ ಮಂತ್ರದ ವೃದ್ಧರಾದ ಮಹನೀಯರನ್ನು ಸುಮ್ಮನೆ ಮೂಲೆಯಲ್ಲಿ ಇರಲೆಂದು ಬಿಟ್ಟು ಅಶಾಂತಿಕಾರಕ ಕೆಲಸಗಳನ್ನು ಮಾಡದೆ ಮಹನೀಯರನ್ನು ಕೊಲ್ಲುವ ಯೋಚನೆ ಮಾಡಿದ ಗೋಡ್ಸೆಯ ಮೂರ್ಖತನವು ಎಷ್ಟಿರಬಹುದು ?

ಮಹನೀಯರೂ ಸಾಕಾಗಿದ್ದರು. ಈಗಿನ ಅಶಾಂತಿಯನ್ನು ನೋಡಿ ತಾವು ಜಾಗ್ರತೆ ಸಾಯಬೇಕೆನ್ನುತ್ತಿದ್ದರು. ಅವರ ಪ್ರಕೃತಿಯೂ ಬಹಳವಾಗಿ ಅಸ್ವಸ್ಥತೆಯಲ್ಲಿ ಇದ್ದಿತು. ತಾನಾಗಿ ಸಾಯುವ ಮುದುಕನನ್ನು ಅದರೊಳಗೂ ಹಿಂದೂ ದೇಶವ ಅಜ್ಜ ನನ್ನು ಕೊಂದು ಈ ಪಾಪಿಯು ಯಾವ ಫಲವನ್ನು ಅನುಭವಿಸುವನೋ ಹೇಳತೀರದು.

ಮಹನೀಯ ಗಾಂಧೀಜಿಯ ಮರಣವು ಉತ್ತಮವಾದುದೆಂದೇ ಭಾವಿಸಬೇಕಾ ಗಿದೆ. ನೈತಿಕ ಬಲದಿಂದಲಂತೂ ಅದು ಉತ್ತಮವೇ. ರೋಗ ಬಂದು ನರಳಿ ತೊಂದರೆ ಯನುಭವಿಸಿ ಜೀವವು ವ್ಯಥೆಪಡದೆ ಒಮ್ಮೆಗೇ ಪ್ರಾಣವಿಯೋಗವಾಗುದು ಉತ್ತಮವೇ. ಪಾರಮಾರ್ಥಿಕ ದೃಷ್ಟಿಯಿಂದ ವಿಚಾರಿಸಿದಾಗ ಪರಮಶಾಂತಿ ಪುರುಷರ ಆತ್ಮವು ಪರಮ ಶಾಂತಿಯಿಂದಲೇ ಕೊನೆಯಲ್ಲಿ ಪರಮಾತ್ಮನಲ್ಲಿ ಸಮರಸವಾಗಬೇಕಾಗಿದ್ದಿತು. ಗುಂಡಿ ನೇಟು ಬಿದ್ದಾಗ 'ಹಾ ರಾಮ್' ಎಂದು ಅವರು ಹೇಳಿವಂತೆ ಈಚೆಗೆ ಪ್ರಕಟವಾಗಿದೆ. ಪಾರಮಾರ್ಥಿಕ ದೃಷ್ಟಿಯಿಂದ ಇದು ಉತ್ತಮವಾದುದೇ. ಅವರೂ ವ್ಯಥೆಯಿಂದ ಮಾಡಿದ ಸ್ಮರಣೆಗಿಂತಲೂ ಶಾಂತಿಯಿಂದ ಮಾಡುವ ಸ್ಮರಣೆಯು ಮೇಲಾದುದು. ಇಂತಹುದಕ್ಕೆ ಅವಕಾಶ ಕೊಡದೆ ಈ ಪಾಪಿಯು ಘಾತಕ ಮಾಡಿದನು. ತಾನಾಗಿ ಸಾಯುವವರಿಗೆ ಘಾತಿಸಿ ಕೊಂದನು. ಇದೂ ಅವನ ಯೋಚನೆಗೆ ಬರಲಿಲ್ಲವೇ ?

'ಅಹಿಂಸಾ ಪರಮೋಧರ್ಮಃ' ಎಂಬುದು ಹಿಂದೂಗಳ ಹೆಗ್ಗುರುತು. ತನ್ನನ್ನು ಕೊಂದವನನ್ನು ಕೊಲ್ಲಬಾರದೆಂಬುದೇ ಹಿಂದೂ ಧರ್ಮದ ತಿಳಿಲು (ಸಾರ) ಹಿಂದೂ ದೇಶಕ್ಕೆ ಎಂತಹ ಅಪಕಾರವನ್ನು ಮಾಡಿದರೂ ಗಾಂಧೀಜಿಯು ಅವಧ್ಯನು. ಕೊನೆ ಯಲ್ಲಿ ಬಹಳ ನೋವಿನಿಂದ ಒದ್ದಾಡುತ್ತಿದ್ದ ಗೋವನ್ನು ಗುಂಡುಹೊಡೆದು ಕೊಂದರೆಂಬ ಅಪವಾದವೇ ಮೊದಲಾದವು ಕೆಲವಿದ್ದಾಗ್ಯೂ ಹಿಂದೂ ದೇಶಕ್ಕೆ ಅವರು ಮಾಡಿದ ಉಪ ಕಾರವು ಬಹಳ ಹೆಚ್ಚಾದುದು. ಅಪಕಾರವು ನೀರಿನ ಒಂದು ಹನಿಯಷ್ಟಾದರೆ ಉಪ ಕಾರವು ಸಮುದ್ರದಷ್ಟು.

ಉಪ್ಪಿನ ತೆರಿಗೆಯ ನಾಶ,ಮದ್ಯಪಾನನಿರೋಧ ಮುಂತಾದ ಅನೇಕ ಉಪಕಾರಗಳಾಗಿ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಇದೆ. ಇಂತಹ ಕಾಲದಲ್ಲಿ ಇಂತಹ ಮಹನೀಯನನ್ನು ಕೊಲ್ಲು

ವುದು ನ್ಯಾಯವೇ ? ಮುಂದಿನ ಕೆಲಸವನ್ನು ತಾನು ಮುಂದಾಳಾಗಿ ಮಾಡಬಾರದಿತ್ತೇ ಗೋಡ್ಸೆ ! ಅಯ್ಯೋ ಅಂತಹ ಧೈರ್ಯವು ಅವನಿಗೆಲ್ಲಿ ?

ಮಹನೀಯ ಇಂತಹ ಮರಣಕ್ಕೆ ಎಷ್ಟು ಶೋಕಿಸಿದರೂ ತೀರದು.

ಆದುದು ಮತ್ತೆ ಬರುವುದಿಲ್ಲ. (ಗತಂ ಗತಂ) ಈಗ ಗಾಂಧೀಜಿಯವರ ಆತ್ಮಕ್ಕೆ ಶಾಂತಿಯುಂಟಾಗಲೆಂದು ಸರ್ವರೂ ಮಹಾದೇವನನ್ನು ಪ್ರಾರ್ಥಿಸಬೇಕು. ನಾವು ಪ್ರಾರ್ಥಿಸುತ್ತೇವೆ. ಅವರ ಸಂಬಂಧಿಕರಿಗೆ ದುಃಖ ಮಾಡದಂತೆ ನಾವು ಸಂಬೋಧಿಸಬೇಕು. ಅದರಂತೆ ನಾವು ಮಾಡುತ್ತೇವೆ.

ಒಟ್ಟಿನಲ್ಲಿ ಶಿವಶರಣರ ತತ್ತ್ವದೊಡನೆ ಮಹನೀಯ ಗಾಂಧೀಜಿಯವರ ತತ್ತ್ವವನ್ನು ಹೋಲಿಸಿ ವಿಮರ್ಶಕ ವಿಚಾರಗಳನ್ನು ನಾವು ತಿಳಿದುಕೊಳ್ಳಬೇಕಾಗಿದೆ.

೧. ಗಾಂಧೀಜಿಯವರು ಅಪೇಕ್ಷಿಸಿದಂತೆ ೧೨೫ ವರ್ಷ ಬದುಕಬೇಕೆಂದಾಗಲೀ ಈಗಲೇ ಸಾಯಬೇಕೆಂದಾಗಲೀ ಶಿವಶರಣರು ಅಪೇಕ್ಷಿಸುವುದಿಲ್ಲ.

೨. ಹಿಂದೂ ದೇಶವು ಸ್ವತಂತ್ರವಾಗಿ ಅವರ ಆಳ್ವಿಕೆಯು ನಮಗೇ ಇದ್ದರೆ ಧನ್ಯರೆಂಬಷ್ಟು ಮಾತ್ರವೇ ಯೋಚಿಸಿ ಶಿವಶರಣರಲ್ಲಿ. ಲೌಕಿಕದಲ್ಲಿ ಎಷ್ಟೇ ಸ್ವಾತಂತ್ರ್ಯವಿದ್ದರೂ ಪಾರಮಾರ್ಥಿಕದಲ್ಲಿಯೂ ಸ್ವಾತಂತ್ರ್ಯವಿರಬೇಕೆಂದು ಬಯಸುವವರು ಶಿವಶರಣರು. ಮಹಾದೇವನನ್ನು ನಿರಾಕಾರನೆಂದು ತಿಳಿದು ಅವನು ನಮ್ಮಲ್ಲಿ ಸರ್ವರಲ್ಲಿಯೂ ವ್ಯಾಪಿಸಿಕೊಂಡಿದ್ದಾನೆ. (ಸರ್ವಂ ಖಲ್ವಿದಂ ಬ್ರಹ್ಮ)ಪರವಸ್ತು(ಮೂಲವಸ್ತು)ವಲ್ಲದೆ ಬೇರೊಂದಿಲ್ಲ ಎಂದು ತಿಳಿವುದೇ ಈಗಿನ ಶಾಸ್ತ್ರಕ್ಕೂ (Science) ಹಿಂದಿನ ಶಾಸ್ತ್ರಕ್ಕೂ ಒಡಂಬಡಿಕೆಯಾದ ಮಾತು. ಅಂತಹ ಸ್ವಾತಂತ್ರ್ಯವನ್ನು ಗಂಡುಸಾಗಲೀ ಹೆಂಗುಸಾಗಲೀ, ಬಾಲಕನಾಗಲೀ, ಬಾಲಕಿಯಾಗಲೀ, ಅಜ್ಞನಾಗಲೀ, ತಜ್ಞನಾಗಲೀ ಹೊಂದಿರಬೇಕೆಂಬುದೇ ಪಾರಮಾರ್ಥಿಕ ಸ್ವಾತಂತ್ರ್ಯ. ಈ ಸ್ವಾತಂತ್ರ್ಯದಿಂದ ಮನುಷ್ಯನ ಮಹಿಮೆಯು—ಇಟ್ಟರೆ ವರ ಕೊಟ್ಟರೆ ಶಾಪ—ಎಂಬ ಸ್ಥಿತಿಯೂ ಪ್ರಾಪ್ತವಾಗಿ ಅವನೇ ಲೋಕದ ಒಡೆಯನೆಂದು ಪ್ರಖ್ಯಾತಿಯನ್ನು ಪಡೆಯುತ್ತಾನೆ. ಇಂತಹವುಗಳೇ ಮೊದಲಾದವು ಇವೆ. ಇವನ್ನು ಇಲ್ಲಿಗೆ ನಿಲ್ಲಿಸೋಣ. (ಸಂ. ೬೮-೬೯)

# ಸ್ವಾತಂತ್ರ್ಯ ದಿನಾಚರಣೆ ಪಾರಮಾರ್ಥಿಕಕ್ಕೂ ಬೇಕು

ಭಾರತಕ್ಕೆ ತನ್ನನ್ನು ತಾನು ನಡೆಯಿಸಿಕೊಳ್ಳುವ ಸ್ವಾತಂತ್ರ್ಯ ಹಕ್ಕು ಸಿಕ್ಕು ಅದರ ಸಂತೋಷಾರ್ಥವಾಗಿ ಪ್ರತಿ ವರ್ಷ ಅಗಸ್ಟ ೧೫ ರಂದು ಉತ್ಸವವು ಇಡಿಯ ಭಾರತದಲ್ಲೆಲ್ಲಾ ನಡೆಯಿಸಲ್ಪಡುವುದು. ಈ ಸ್ವಾತಂತ್ರ್ಯದಿಂದ ಭಾರತವು ತನ್ನ ಲೌಕಿಕ ಸುಖವನ್ನು ಎಷ್ಟುಮಟ್ಟಿಗೆ ಹೆಚ್ಚಾಗಿ ಪಡೆಯಬಹುದೋ ಅಷ್ಟುಮಟ್ಟಿಗೂ ಪಡೆಯಲಿಕ್ಕೆ ಅನುಕೂಲ ಮಾಡಿಕೊಳ್ಳಲಿಕ್ಕೆ ಅವಕಾಶವುಂಟು. ಈಗಿನ ರಾಜಕೀಯವು ಆಲೋಚಿಸಿ ನಡೆಯಿಸುತ್ತಿರುವ ಪಂಚವಾರ್ಷಿಕ ಯೋಜನೆಗಳು ಅಂತಹ ಮಹತ್ತರವಾದ ಪ್ರಯೋಜನವನ್ನು ಒದಗಿಸುವ ಕಾರ್ಯಗಳನ್ನು ಕೈಗೊಂಡವುಗಳಾಗಿವೆ. ಈ ತರಹೆಯ ಕಾರ್ಯಕ್ರಮಗಳಿಗೆ ಭಾರತೀಯರು ಹೆಚ್ಚು ಗಮನ ಕೊಟ್ಟು ರಾಜಕೀಯದಿಂದಲೂ ಸ್ವಂತವಾಗಿಯೂ ಲೌಕಿಕದ ಸುಖಾಭಿವೃದ್ಧಿಯ ಅನೇಕ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗುವುದು ಅವಶ್ಯಕವಾಗಿದೆ. ಈ ಉತ್ಸವದ ದಿನದಲ್ಲಿ ನಾವು ಎಲ್ಲಾ ಪ್ರಜೆಗಳ ಸೌಖ್ಯವನ್ನು ತೋರುವುದೂ ಒಬ್ಬರಿಗೊಬ್ಬರು ಸೌಮ್ಯ ಭಾವನೆಯಿಂದ ಒಟ್ಟಿನ ಸೌಖ್ಯ ಕಾರ್ಯಗಳನ್ನು ನಡೆಯಿಸಿಕೊಂಡು ಹೋಗಲು ಆಲೋಚಿಸುವುದೂ ದೊಡ್ಡ ದೊಡ್ಡ ಕಾರ್ಯಕ್ರಮ(ಗಳನ್ನು ಆರಂಭಿಸುವುದೂ ಅತ್ಯವಶ್ಯಕವಾಗಿದೆ. ಆ ಮೇರೆಗೆ ದೇಶದಲ್ಲಿ ಸುಖ ಸಂಪತ್ತು ಹೆಚ್ಚಾಗಲೆಂದು ಜನರೂ ಪಶುಗಳೂ ಆರೋಗ್ಯಭಾಗ್ಯವನ್ನು ಪಡೆದಿರಲೆಂದು ನಾವು ಮಹಾದೇವನನ್ನು ಪ್ರಾರ್ಥಿಸುತ್ತೇವೆ. ಯಾವ ರೀತಿಯಲ್ಲಿ ಭಾರತೀಯರ ಭೂಮಿಯು ಸ್ವಾತಂತ್ರ್ಯದಿಂದ ಲೌಕಿಕ ಸುಖವನ್ನು ಹೆಚ್ಚು ಮಾಡಿಕೊಳ್ಳಬಹುದೊ ಹಾಗೆ ಭಾರತೀಯರು ತಮ್ಮ ಜೀವವು (ಪ್ರಾಣ) ಸೌಖ್ಯವಾಗಿದ್ದು ಅಧ್ಯಾತ್ಮಿಕವಾಗಿ ಉನ್ನತಿಯನ್ನು ಪಡೆದು ಸ್ವಾತಂತ್ರ್ಯವಾಗಿ ಇರುವಂತೆ ಏರ್ಪಡಿಸಿಕೊಳ್ಳುವುದು ಮುಖ್ಯವಾದ ಕೆಲಸವಾಗಿದೆ. ಈ ಕಡೆಗೆ ಭಾರತೀಯರ ಗಮನವು ಸಾಕಾದಷ್ಟು ಬಿದ್ದಿರುವುದೆಂದು ಹೇಳುವಂತಿಲ್ಲ. ದೇವನು ಸರ್ವವ್ಯಾಪಿಯಾಗಿ ಇದ್ದಾನೆಂದೂ ಆ ಆ ಮಹಿಮೋನ್ನತನು ತನ್ನಲ್ಲಿಯೂ ಇದ್ದಾನೆಂದೂ ತಿಳಿಯುವುದು ಪ್ರಸಿದ್ಧ ವಿಷಯವಾದಾಗ್ಯೂ ಭಾರತೀಯರಲ್ಲಿ ಅನೇಕರು ದೇವನ ಕೃಪೆಯನ್ನು ಪಡೆಯುವುದಕ್ಕಾಗಿ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ತಮ್ಮಲ್ಲಿ ವ್ಯಾಪಿಸಿಕೊಂಡಿರುವ ದೇವನನ್ನು ಮರೆದು ತಮಗಿಂತ ಅನನ್ಯನಾಗಿ ಅವನು ಇದ್ದಾನೆ ಎಂಬುದನ್ನೇ ಪ್ರಾಧಾನ್ಯವಾಗಿ ಇಟ್ಟುಕೊಂಡು ತಮ್ಮ ಭಕ್ತಿಯ ಪ್ರಕಾಶಕ್ಕಾಗಿ ವೆಚ್ಚ ಮಾಡುತ್ತಿರುವುದನ್ನು ತಿಳಿದು ಎಷ್ಟು ವಿಷಾದಪಟ್ಟರೂ ತೀರದು. ಮುಂಬಯಿಯಲ್ಲಿ ವಿಗ್ರಹಾರಾಧನೆಗೆ ಪ್ರತಿದಿನವೂ ಹದಿನೇಳು ಸಾವಿರ ರೂಪಾಯಿಗಳು ವೆಚ್ಚವಾಗುತ್ತವೆ ಎಂದು ಪ್ರಕಟವಾಗಿದೆ. ಜನಸಾಮಾನ್ಯರು ಶ್ರೀ ಬಸವೇಶ್ವರನ ಒಂದು ವಚನವನ್ನು ಚೆನ್ನಾಗಿ ತಿಳಿದುಕೊಂಡು ಅವರಂತೆ

ಆಚರಿಸುವುದಾದರೆ ಮುಂಬಯಿಯಲ್ಲಿ ಈ ಹದಿನೇಳು ಸಾವಿರ ರೂಪಾಯಿಗಳು ಪ್ರಾಣದ ಆಧ್ಯಾತ್ಮಿಕ ಉನ್ನತಿಯನ್ನು ಪಡೆಯುವ ಕಾರ್ಯಗಳಿಗೆ ಉಪಯೋಗಿಸಲ್ಪಟ್ಟರೆ ಜನ ಜೀವನದ ಅಧ್ಯಾತ್ಮಿಕ ಹಂತಗಳನ್ನು ಏರುತ್ತಾ ಸ್ವಾತಂತ್ರ್ಯದ ಕೊನೆಯ ಹಂತವನ್ನು ಏರುವುದಕ್ಕೆ ತಕ್ಕ ಪ್ರಯತ್ನಗಳು ನಡೆಯಿಸಲ್ಪಡುವುವೆಂಬುದಕ್ಕೆ ಅನುಮಾನವಿಲ್ಲ. ಬಸವೇಶ್ವರನ ಬೋಧೆಯಲ್ಲಿನ ಆ ವಚನವಿದು —

"ಉಳ್ಳವರು ಶಿವಾಲಯವ ಮಾಡುವರು. ನಾನೇನ ಮಾಡುವೆ ಬಡವನಯ್ಯಾ, ಎನ್ನ ಕಾಲೆ ಕಂಭ, ದೇಹವೇ ದೇಗುಲ, ಸಿರ, ಹೊನ್ನ ಕಳಸವಯ್ಯಾ ಕೂಡಲ ಸಂಗಮ ದೇವ, ಕೇಳಯ್ಯಾ ಸ್ಥಾವರಕ್ಕಳಿವುಂಟು, ಜಂಗಮಕ್ಕಳವಿಲ್ಲ."

ಈ ಪ್ರಕಾರ ಪ್ರತಿಯೊಬ್ಬರೂ ತಮ್ಮ ದೇಹವನ್ನೇ ದೇವಾಲಯ ಎಂದು ಭಾವಿಸುವವರಾದರೆ ಹೊರಗೆ ದೇವಾಲಯಗಳನ್ನು ಕಟ್ಟಿಸಬೇಕಾದ ಅವಶ್ಯಕತೆಯೇ ಇಲ್ಲ. ಅದಕ್ಕಾಗಿ ಮಾಡಬೇಕಾದ ಪ್ರಾರಂಭದ ಸ್ಥಾಪನೆಯು ಸಾವಿರಾರು ರೂಪಾಯಿಗಳ ಖರ್ಚು ಉಳಿಯುತ್ತದೆ. ಇದಲ್ಲದೆ ಸ್ಥಾವರಕ್ಕೆ ಅಳಿವುಂಟು ಎಂದು ಶ್ರೀ ಬಸವೇಶ್ವರರು ಬೋಧಿಸಿದ ಪ್ರಕಾರ ಹೊರಗಿನ ದೇವಾಲಯಗಳು ಒಂದಿಲ್ಲೊಂದು ದಿನ ಶಿಥಿಲವಾಗಿ ಬಿದ್ದು ಹೋಗುತ್ತವೆ. 'ಜಂಗಮಕ್ಕೆ ಅಳಿವಿಲ್ಲ' ಎಂದು ಅವರು ಹೇಳಿದ ಪ್ರಕಾರ ನಿರಾಕಾರದ ಆತ್ಮನೇ ಜೀವನಾಗಿ ಬಂದಿರುವುದರಿಂದ ಈ ಜೀವನು ತನ್ನ ಪೂರ್ವದ ಆತ್ಮಸ್ವರೂಪವನ್ನು ಸಂಪಾದಿಸಿದರೆ ಆ ಆತ್ಮನು ನಾಶವಾಗುವ ಸಂಭವವೇ ಇಲ್ಲ.

ಈ ಪಾರಮಾರ್ಥಿಕ ಪಾರತಂತ್ರ್ಯದ ದೆಸೆಯಿಂದ ಭರತಖಂಡವು ಎಷ್ಟು ಶೋಚನೀಯ ಸ್ಥಿತಿಗೆ ಅಧೋಗತಿಗೆ ಇಳಿದಿದೆ ಎಂಬುದನ್ನು ಗಣಿಸುವುದಕ್ಕೆ ಬರುವಂತೆಯೇ ಇಲ್ಲ. ಈ ವರ್ಷದ ಸ್ವಾತಂತ್ರ್ಯದ ಆನಂದೋತ್ಸವದಲ್ಲಿ (ಅಗಸ್ಟ ೧೫ ರಲ್ಲಿ) ಭಾಗಿಗಳಾದ ನಾವು ಮುಂದಿನ ವರ್ಷದ ಈ ಉತ್ಸವದ ಒಳಗಾಗಿಯೇ ಪಾರಮಾರ್ಥಿಕ ಸ್ವಾತಂತ್ರ್ಯದ ತಳಹದಿಯನ್ನು ಹಾಕಿಕೊಳ್ಳಲು ಬಲವಾಗಿ ಸಾಂಘಿಕವಾಗಿ ಸಾಹಸ ಪೂರ್ವಕವಾಗಿ ಭಾರತೀಯರೆಲ್ಲರೂ ಪ್ರಯತ್ನಿಸಿದುದಾದರೆ ಭಾರತವು ಹೊಸದೊಂದು ಯುಗವನ್ನು ಪ್ರಪಂಚಕ್ಕಾಗಿ ಸೃಷ್ಟಿಸಿದಂತೆ ಆಗುತ್ತದೆ. ಈ ಕಡೆಗೆ ಸರ್ವರ ಗಮನವೂ ಬೀಳಲಿ.

(ಸಂ. ೧೨೬)

# ಸ್ವತಂತ್ರ ಭಾರತದ ಬಗೆಗೆ

ಸುಮಾರು ೫೦ ವರುಷಗಳ ಹಿಂದೆ ಶ್ರೀ ದಾಧಾಭಾಯಿ ನವರೋಜಿಯವರು ಒಂದು ವಾರ್ಷಿಕ ರಾಷ್ಟ್ರಸಂಘದ ಸಭೆಯ ಅಧ್ಯಕ್ಷರಾಗಿ ಆದುವರೆವಿಗೆ ರಾಷ್ಟ್ರಸಂಘ ದವರು ತಮಗೆ ಬೇಕಾದ ಹಲವು ಕೆಲವು ಅನುಕೂಲಗಳನ್ನು ಕೊಡಿರೆಂದು ರಾಜಕೀಯ ದಲ್ಲಿ ಆಂಗ್ಲೇಯರಿಗೆ ಬೇಡುತ್ತಿದ್ದುದನ್ನು ತಪ್ಪಿಸಿ ಒಟ್ಟಿಗೆ ಸ್ವರಾಜ್ಯವನ್ನೇ ಕೇಳಬೇಕು ಎಂದು ನಿರ್ಣಯಿಸಿದರು. ಈಚೆಗೆ ಅದೇ ಧ್ಯೇಯವನ್ನೇ ಇಟ್ಟುಕೊಂಡು ರಾಷ್ಟ್ರ ಸಂಘವು ಕೆಲಸ ಮಾಡಿತು. ಮಹನೀಯರಾದ ಗಾಂಧೀಜಿಯವರು ಬರಿಯ ಬೇಡುವ ಕೆಲಸವನ್ನು ಮಾತ್ರ ಮಾಡದೆ ಅಸಹಕಾರ ಪದ್ಧತಿಯನ್ನು ರೂಢಿಯಲ್ಲಿ ತಂದು ರಾಜಕೀಯದ ನಿರಂಕುಶತೆಯನ್ನು ಬಹಳವಾಗಿ ತಗ್ಗಿಸಿದರು. ಇವುಗಳಲ್ಲಿ ೧೯೪೨ ರ ಅಸಹಕಾರವು ವಿದ್ಯಾರ್ಥಿಗಳಿಂದಲೂ ಕೂಡಿ ನಡೆಸಲ್ಪಟ್ಟುದು ಅಂದಿನ ರಾಜಕೀಯ ವನ್ನು ತಲ್ಲಣಿಸುವಂತೆ ಮಾಡಿತು. ಈಚೆಗೆ ಆಂಗ್ಲೇಯ ರಾಜಕೀಯವು ಭಾರತೀಯ ರಿಗೆ ಸ್ವರಾಜ್ಯವನ್ನು ೧೯೪೭ನೆಯ ಆಗಸ್ಟ್ ೧೫ನೆಯ ಆರಂಭದ ಹೊತ್ತಿನಲ್ಲಿಯೇ ಕೊಟ್ಟಿರುವುದೂ ಈಗ ನಮ್ಮ ರಾಜ್ಯವನ್ನು ನಾವೇ ನಮ್ಮ ಮನಸ್ಸು ಬಂದ ಹಾಗೆ ಆಳಿ ಕೊಳ್ಳಬಹುದೆಂಬ ಭರವಸೆಯುಂಟಾಗಿರುವುದೂ ಭಾರತೀಯರಿಗೆ ಸಂತೋಷವುಂಟು ಮಾಡಿರುವುದಾಗಿ ಈಗಿನ ರಾಜಕೀಯವು ಸಂತೋಷದ ರಾಜಕೀಯ ಎಂದು ಹೇಳಲು ಅಭ್ಯಂತರವೇನೂ ಇಲ್ಲ.

ಈ ರಾಜಕೀಯವು ಭಾರತೀಯರಿಗೆ ಬರಲಿಕ್ಕೆ ಕಾರಣವನ್ನು ಕೆಲವರು ಕೆಲವು ವಿಧವಾಗಿ ಹೇಳುತ್ತಾರೆ.

೧. ಆಂಗ್ಲೇಯರು ಭಾರತೀಯರ ಮೇಲೆ ದಯೆ ಇಟ್ಟುಕೊಟ್ಟರು.

೨. ರಾಷ್ಟ್ರಸಂಘದವರು ಅಸಹಕಾರ ಮೊದಲಾದವುಗಳನ್ನು ಮಾಡಿ ದೇಶಕ್ಕಾಗಿ ಪ್ರಾಣಗಳ ಬಲಿಯನ್ನು ಕೊಟ್ಟರು. ಇದರಿಂದ ಆಂಗ್ಲೇಯ ರಾಜಕೀಯಕ್ಕೆ ತೊಂದರೆ ಬಂದು ಕೊಟ್ಟರು.

೩. ಜಾಗತಿಕ ೨ನೆಯ ಮಹಾಯುದ್ಧವಾಗಿ ಅದರಿಂದ ಆಂಗ್ಲೇಯ ರಾಜ್ಯಕ್ಕೆ ಬಹಳ ಸಾಲವಾಗಿ ಆ ಸಾಲವನ್ನು ತೀರಿಸಿಕೊಂಡು ಪರದೇಶದ ಅಧಿಕಾರಿಗಳನ್ನು ಹೆಚ್ಚು ಸಂಬಳದಲ್ಲಿ ಇಟ್ಟು ದರ್ಪದಿಂದ ರಾಜ್ಯಭಾರ ನಡೆಸುವುದು ಕಷ್ಟವಾಗಿ ತೋರಿಬಂದು ಕೊಟ್ಟರು.

೪. ಈ ಕಾಲದಲ್ಲಿ ಪ್ರತಿಯೊಂದು ದೇಶದವರಿಗೂ ಸ್ವಾತಂತ್ರ್ಯವಿರಬೇಕು. ಎಂದು ಜಾಗತಿಕ ಶಾಂತಿ ಸಮಿತಿ ಏರ್ಪಾಡಾಗಿ ಇರುವುದರಿಂದ ಆ ಸಮಿತಿಯವರನ್ನು ಸಮಾಧಾನಪಡಿಸುವುದಕ್ಕಾಗಿ ಕೊಟ್ಟರು.

ಇವೇ ಮುಂತಾಗಿ ಇವುಗಳಲ್ಲಿ ೩ನೆಯ ಕಾರಣವೇ ಹೆಚ್ಚು ಪ್ರಬಲವಾದುದೆಂದು ತೋರುತ್ತದೆ. ಪೂರ್ವಕಾಲದಲ್ಲಿ ದೊಡ್ಡ ದೊಡ್ಡ ಯುದ್ಧಗಳನ್ನು ಮಾಡಿ ರಾಜರು ಬಡವರಾಗಿ ಹೇಳಹೆಸರಿಲ್ಲದೆ ಹೋದುದು ಚರಿತ್ರೆಯಿಂದ ನಮಗೆ ತಿಳಿದು ಬರುತ್ತದೆ.

ಏನಾದರೂ ಕಾರಣವಿರಲಿ. ಭಾರತೀಯರಿಗೆ ಸ್ವರಾಜ್ಯವು ಬಂದಿದೆ. ಆದರೆ ಸಂಪೂರ್ಣ ಸ್ವಾತಂತ್ರ್ಯವುಳ್ಳುದಲ್ಲ. ಸಂತೋಷದ ರಾಜಕೀಯ Dominion Status= ಸಾಮ್ರಾಜ್ಯಾಂತರ್ಗತ ಸ್ವರಾಜ್ಯ. ಈ ಪದ್ಧತಿಯ ಪ್ರಕಾರ ಬ್ರಿಟಿಷ್ ಸಾಮ್ರಾಜ್ಯ ದೊಳಗೆ ಸೇರಿಕೊಂಡು ೧. ರಾಜ್ಯ ರಕ್ಷಣೆ (ಪರದೇಶದ ಶತ್ರುಗಳನ್ನು ತಡೆಯು ವುದು.) ೨. ದೇಶದಲ್ಲಿನ ಸಂಚಾರ ಮಾರ್ಗಗಳು (ರೇಲ್ವೆ ಮುಂತಾದುವುಗಳು). ೩. ವಿದೇಶಾಂಗ ವ್ಯವಹಾರ (ಪರದೇಶದ ರಾಜರೊಡನೆ ಯುದ್ಧ, ಸಮಾಧಾನ, ಕರಾರು ಮುಂತಾದುವುಗಳನ್ನು ಮಾಡುವಿಕೆ.) ಈ ಮೂರು ಕೆಲಸಗಳನ್ನು ಮಾಡಬೇಕೇ ಹೊರತು ಸ್ವತಂತ್ರವಾಗಿ ಮಾಡುವಂತಿಲ್ಲ. ಇವುಗಳ ಹೊರತಾಗಿ ದೇಶದ ಒಳ ಆಡಳಿತ ದಲ್ಲಿ ಸ್ವತಂತ್ರವಾಗಿ ಇರಲಿಕ್ಕೆ ಅವಕಾಶವು ಈ ದೊರಕಿದೆ. (ಇಲ್ಲಿ ಬ್ರಿಟಿಷ್ ಎಂಬ ಪದವು ಪತ್ರಿಕೆಗಳಲ್ಲಿ ಇಲ್ಲದುದು.)

ಭಾರತೀಯರಿಗೆ ಇಷ್ಟು ಸ್ವಾತಂತ್ರ್ಯವು ಈಗ ದೊರಕಿದುದು ಬಹಳ ಉತ್ತಮ ವಾದುದು. ಸ್ವಂತವಾಗಿ ರಾಜ್ಯವಾಳಿ ಮೇಲಿನ ಮೂರು ವಿಷಯಗಳಲ್ಲಿಯೂ ಇತರ ಸ್ವಂತ ರಾಷ್ಟ್ರಗಳಂತೆ ಸ್ವತಂತ್ರವಾಗಿರಬಲ್ಲೆವೆಂಬುದನ್ನು ಪ್ರಪಂಚಕ್ಕೆ ತೋರ್ಪಡಿಸುವ ಸಂಧಿಕಾಲವಿದು.

ಈ ವಿಧವಾದ ರಾಜ್ಯಭಾರವು ಕ್ರಿ.ಶ. ೧೯೨೭ ರಲ್ಲಿಯೇ ನಮಗೆ ಕೊಡಲ್ಪಡುತ್ತ ಲಿದ್ದಿತು. ಇಷ್ಟು ಪ್ರಾಣಬಲಿ ಕೊಟ್ಟು ದೇಶವನ್ನು ಪಾಕಿಸ್ತಾನ್, ಹಿಂದುಸ್ತಾನ್ ಎಂದು ಭಾಗ ಮಾಡಿ ಆಗ ಸ್ವರಾಜ್ಯವನ್ನು ಪಡೆಯುತ್ತಿರಲಿಲ್ಲ. ರಾಷ್ಟ್ರನಾಯಕರು ಮುಂದಾ ಲೋಚನೆ ಮಾಡದೆ ಭಾರತಕ್ಕೆ ಬಹಳ ಅನ್ಯಾಯವಾಯಿತು ಎಂದು ನವಸಂದೇಶ ಪತ್ರಿಕೆಯು ಈಗಿನ ರಾಷ್ಟ್ರಸಂಘದ ನಾಯಕರನ್ನು ಆಕ್ಷೇಪಿಸುತ್ತಿದೆ.

ಆದುದಾಯಿತು. ಕಳೆದುದನ್ನು ಕೂಡಿಸಲಿಕ್ಕೆ ಬರುವುದಿಲ್ಲ. ಮುಂದೇನು ಮಾಡಬೇಕೆಂಬುದನ್ನು ಯೋಚಿಸುವುದೇ ಜಾಣರ ಕೆಲಸ.

ಮುಂದೆ ಭಾರತಕ್ಕೆ ಆಗಬೇಕಾಗಿರುವ ಕೆಲಸಗಳಲ್ಲಿ ಕೆಲವು ಇವು ಎಂದು ತಿಳಿಯುತ್ತದೆ.

೧. ಭಾಷಾವಾರ್ ಪ್ರಾಂತ ರಚನೆ. ಕನ್ನಡ ರಾಜ್ಯವು ಒಂದಾಗದೆ ಅನುಭವಿ ಸುತ್ತಿರುವ ಕಷ್ಟವು ಬಹಳವಾಗಿದೆ. ಆಂಧ್ರರೂ, ಮಹಾರಾಷ್ಟ್ರರೂ ತಮ್ಮ ಪ್ರಾಬಲ್ಯ ದಿಂದ ಕನ್ನಡದ ಏಳಿಗೆಗೆ ಬಹು ತೊಂದರೆಪಡಿಸುತ್ತಿದ್ದಾರೆ. ಆದುದರಿಂದ ಮೊಟ್ಟ ಮೊದಲು ಈ ಭಾಷೆಯ ಪ್ರಾಂತದರಚನೆಯಕಡೆಗೆ ಅವಶ್ಯವಾಗಿ ಗಮನಕೊಡಬೇಕಾಗಿದೆ.

೨. ಸಂಸ್ಥಾನಗಳು ಕ್ರಮಕ್ರಮವಾಗಿ ನೂತನ ರಾಜ್ಯಾಂಗ ವಿಧಾನವನ್ನಾಚರಿಸುವಂತೆ ಶಾಂತಿಯಿಂದ ಅವುಗಳನ್ನು ಮುಂದಕ್ಕೆ ತರುವುದು.

೩. ಸಮತಾವಾದವು ಒಳ್ಳೆಯದಾಗಿದ್ದರೂ, ಸಾವಿರಾರು ವರ್ಷಗಳಿಂದ ಧಾರ್ಮಿಕದಲ್ಲಿಯೂ, ಲೌಕಿಕದಲ್ಲಿಯೂ ಅದನ್ನಾಚರಿಸದಿದ್ದ ಪ್ರಜೆಗಳನ್ನು ನಿಧಾನವಾಗಿ ಅವರ ಪದ್ಧತಿಯನ್ನು ಬದಲಾಯಿಸಿಕೊಳ್ಳುವಂತೆ ಏರ್ಪಡಿಸುವುದು.

೪. ಕೈಗಾರಿಕೆಗಳು ವಿಶೇಷವಾಗಿ ಹೆಚ್ಚುವಂತೆ ಏರ್ಪಡಿಸುವುದು ಇದಕ್ಕಾಗಿ ಬೇಕಾದ ಆರ್ಥಿಕ ಸಹಾಯಕ್ಕೆ ಈಗಿನ ಶ್ರೀಮಂತರು ಧಾರಾಳವಾಗಿ ಹಣವನ್ನು ಕೊಡುವಂತೆ ಬಡ್ಡಿ ದರವನ್ನು ಹೆಚ್ಚು ಮಾಡುವುದೇ ಮುಂತಾದ ಉಪಾಯಗಳಿಂದ ಧನ ನಿಧಿಯನ್ನು ಹೆಚ್ಚು ಮಾಡುವುದು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟುಗಳನ್ನು ೫೦೦ ರೂಪಾಯಿ ಅಥವಾ ಸಾವಿರ ರೂಪಾಯಿ ಮೊದಲುಗೊಂಡು ಪಡೆಯುವವರಿಗೆ ಅವರಿಗೇನೇ ಕಮೀಷನ್ ದೊರೆಯುವಂತೆ ಏರ್ಪಡಿಸುವುದೇ ಮುಂತಾದ ಸೌಲಭ್ಯಗಳನ್ನು ಉಂಟುಮಾಡುವುದು.

೫. ಶ್ರೀಮಂತರನ್ನೂ ಜಮೀನುದಾರರನ್ನೂ ಕ್ರಮಕ್ರಮವಾಗಿ ಬಡವರಿಗೂ ಚಿಕ್ಕ ರೈತರಿಗೂ ಅನುಕೂಲವಾಗಿರುವಂತೆ ಏರ್ಪಡಿಸಿ ದೇಶದ ಸಂಪತ್ತು ಹೆಚ್ಚುವಂತೆ ಮಾಡುವುದು.

೬. ಗೋವುಗಳ ರಕ್ಷಣೆಯಾಗುವಂತೆ ಮಾಡುವುದಕ್ಕೆ ಹೆಚ್ಚಿನ ಪ್ರಯತ್ನಗಳು.

೭. ದೇಶದಲ್ಲಿ ರೈಲ್ವೆ ಮೊದಲಾದ ಸಂಚಾರ ಮಾರ್ಗಗಳ ಅನುಕೂಲತೆಯನ್ನು ಇನ್ನೂ ಹೆಚ್ಚಿಸುವುದು.

೮. ಜಮೀನಿನಿಂದ ಹೆಚ್ಚು ಬೆಳೆಯನ್ನು ಪಡೆಯುವಂತೆ ಏರ್ಪಡಿಸುವುದು. ರೈತರಿಗೆ ಜಮೀನು ಕಂದಾಯವನ್ನು ಕಡಿಮೆ ಮಾಡುವುದು.

೯. ದೇಶದ ರಕ್ಷಣೆಗಾಗಿ ಮುಖ್ಯ ಪ್ರಯತ್ನ. ಶಾಂತಿ ಸಮಿತಿಯಲ್ಲಿ ಸೇರುವ ಉಪಾಯವಲ್ಲದೆ ದೌರ್ಜನ್ಯದಿಂದ ಒಬ್ಬ ಶತ್ರುವು ಅಣುಬಾಂಬ್ ಮುಂತಾದವುಗಳನ್ನು ಉಪಯೋಗಿಸಿ ಮೇಲೆ ಬಿದ್ದರೂ ಅದನ್ನು ತಡೆಯತಕ್ಕಷ್ಟು ಸಾಮರ್ಥ್ಯವನ್ನು ಬಲಪಡಿಸುವುದು.

೧೦. ಹಿಂದೂ ದೇಶವು ಪೂರ್ವದಿಂದಲೂ ಕಾಪಾಡಿಕೊಂಡು ಬಂದಿದ್ದ ಧಾರ್ಮಿಕ ಪ್ರಖ್ಯಾತಿಯನ್ನು ಮುಂದೂ ಉಳಿಸಿಕೊಳ್ಳುವುದು. ಧರ್ಮ ಗ್ರಂಥಗಳ ಪರಿಶೋಧನೆ ನಡೆಯಿಸಿ ಯಾವ ಯಾವ ಉತ್ತಮ ಧಾರ್ಮಿಕ ಸಂಗತಿಗಳುಂಟೋ ಅವುಗಳನ್ನು ಊರ್ಜಿತಪಡಿಸಿ ಜನರು ಧರ್ಮಶ್ರದ್ಧೆಯುಳ್ಳವರಾಗುವಂತೆ ಮಾಡುವುದು. (ಇದರಲ್ಲಿ ಅಲಕ್ಷ್ಯ ಮಾಡಿದರೆ ರಾಜ್ಯಕ್ಕೆ ಅದೇ ದೊಡ್ಡ ಕೇಡೆಂದು ತಿಳಿದಿರುವುದು ಅವಶ್ಯಕ.) ಈಗ ಯುದ್ಧ ಮಾಡಿದ ರಾಷ್ಟ್ರಗಳಲ್ಲಿ ಬಲವು ಕಡಿಮೆಯಾಗಿದ್ದರೂ ದೈವ

ಸಹಾಯದಿಂದ ಜಯಹೊಂದಿದ ಉದಾಹರಣೆಯನ್ನು ಕಂಡದ್ದಾಗಿದೆ. ಆದುದರಿಂದ ಮಹಾದೇವನನ್ನು ತಿಳಿದನುಭವಿಸತಕ್ಕ ಧರ್ಮಮಾರ್ಗವನ್ನು ಎಷ್ಟು ಉನ್ನತಿಪಡಿಸಿದರೆ ಅಷ್ಟು ಸೌಖ್ಯವು ಉನ್ನತಿಯೂ ಆಗುವುದೆಂದು ದೃಢವಾಗಿ ನಂಬಬೇಕು.

ಜನರು ಆರೋಗ್ಯ ದೃಢಕಾಯರಾಗಿರುವಂತೆಯೂ ಪರರ ದಾಳಿಗಳನ್ನು ತಡೆಯುವಷ್ಟು ಶಕ್ತಿಯುಳ್ಳವರಾಗಿರುವಂತೆಯೂ ಮಾಡುವುದೇ ಮೊದಲಾದ ಅನೇಕ ಸುಧಾರಣೆಗಳಿವೆ.

ಇಂತಹ ಎಲ್ಲ ಸುಧಾರಣೆಗಳನ್ನು ಪಡೆದು ದೇಶವು ಸಂಪೂರ್ಣ ಸ್ವಾತಂತ್ರ್ಯವನ್ನನುಭವಿಸುವಂತೆ ಆಗಿ, ಈಗಿನಕ್ಕಿಂತಲೂ ಅತಿಶಯವಾದ ಸುಖ ಸಂಪತ್ತುಗಳುಳ್ಳದಾಗುವಂತೆ ಮಹಾದೇವನು ದಯೆಗೈಯ್ಯಲಿ ಎಂಬ ಶುಭಾಶಯವನ್ನು ತೋರಿ ಈ ಸ್ವಾತಂತ್ರ್ಯದ ಆರಂಭ ದಿನದ ಉತ್ಸವದ ಸಂತೋಷವನ್ನು ಈ ಮೂಲಕ ಈಗ ಹೊರಗೆ ಪ್ರಕಾಶಪಡಿಸೋಣ.

(ಸಂ. ೬೪-೬೫)

# ರಾಷ್ಟ್ರಭಾಷೆ

ಭರತಖಂಡದ ಎಲ್ಲ ವಿಶ್ವವಿದ್ಯಾಲಯಗಳ ಸ್ಥಾನಪತಿಗಳ ಸಮಿತಿಯು ಭರತ ಖಂಡಕ್ಕೆ ರಾಷ್ಟ್ರಭಾಷೆಯು ಯಾವುದಿರಬೇಕೆಂದು ಆಲೋಚಿಸುತ್ತಿರುವ ಸಮಯವಿದೆಂದು ತಿಳಿಯುತ್ತದೆ.

ಉತ್ತರ ಹಿಂದೂಸ್ಥಾನದಲ್ಲಿ ಪ್ರಬಲ ಭಾಷೆಯಾಗಿರುವ ಸಂಸ್ಕೃತ ಲಿಪಿಯ ಹಿಂದಿಯೇ ರಾಷ್ಟ್ರಭಾಷೆಯಾಗಬೇಕೆಂದು ರಾಜ್ಯ ಘಟನಾ ಸಮಿತಿಯವರು ಅಂಗೀಕರಿಸಿದ್ದಾರೆ, ಎಂದು ವರದಿಯಾಗಿದೆ.

ಪ್ರಾಂತಿಕ ಭಾಷೆಗಳು ಮೊದಲನೆಯವುಗಳಾಗಿ ಜನರ ಬಳಕೆಯಲ್ಲಿ ಇರತಕ್ಕವುಗಳಾದರೆ ಹಿಂದೀಭಾಷೆಯು ಎರಡನೆಯದಾಗಿ ರಾಜಕೀಯವಾಗುವುದೆಂದು ಭಾವಿಸಿದರೂ ಈಗ ಇಂಗ್ಲಿಷ್ ಭಾಷೆಯೇ ಮುಖ್ಯವಾಗಿ ಇತರ ಭಾಷೆಗಳನ್ನು ಮೂಲೆಗೊತ್ತಿರುವಂತೆ ಮುಂದೆ ಹಿಂದಿ ಭಾಷೆಯೇ ಮುಖ್ಯವಾಗಿ ಇತರ ಭಾಷೆಗಳು ಮೂಲೆಗೊತ್ತಲ್ಪಡುವುವು, ಎಂಬುದು ನಿರ್ಧರವಾದ ಸಂಗತಿ.

ಕೆಲವರು ಮಹನೀಯರು ಆಲೋಚಿಸುವಂತೆ ಸಂಸ್ಕೃತವನ್ನು ಎರಡನೆಯ ಭಾಷೆಯಾಗಿ ಮಾಡಿದರೆ ರಾಜಕೀಯದಲ್ಲಿ, ನ್ಯಾಯಾಧಿಕಾರ ಸ್ಥಾನಗಳಲ್ಲಿ ಉಪಯೋಗಿಸಲು ಜನರ ಬಳಕೆಯ ಭಾಷೆಯದಲ್ಲವಾಗಿ ಅದು ಹಿಂದೂ ದೇಶದಲ್ಲಿ ಸರ್ವತ್ರ ವ್ಯಾಪಿಸುವುದು ಹೇಗೆ ? ಎಂಬ ಶಂಕೆಯು ಬರುವುದೂ ನಿಶ್ಚಯ.

ಸಂಸ್ಕೃತದಲ್ಲಿ ಇದ್ದಷ್ಟು ಹಿಂದೂ ದೇಶದ ಪ್ರಾಚೀನಕಾಲದ ಜನರ ಅನುಭವ ಮತ್ತು ಸಾಂಸ್ಕೃತಿಕ ವಿಷಯಗಳು ಇತರ ಭಾಷೆಗಳಿಂದ ದೊರಕುವುದಿಲ್ಲವಾದುದರಿಂದ ಸಂಸ್ಕೃತವನ್ನು ತ್ಯಾಜ್ಯಮಾಡುವುದೂ ಸರಿಯಲ್ಲ.

ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಮಾಡಿ ಪ್ರಾಂತಿಕ ಭಾಷೆಗಳನ್ನು ಲೋಪ ಮಾಡಿಕೊಳ್ಳುವುದಕ್ಕಿಂತಲೂ ಹಿಂದೂ ದೇಶವು ಮುಂದಾಳಾಗಿ ಅನೇಕ ವಿಧದ ಪ್ರಾಂತಿಕ ಭಾಷೆಗಳು ಭಾಷಾವಾರ್ ವಿಭಜನೆಗೆ ಅವಕಾಶಕೊಟ್ಟು ಇಡೀ ಭರತಖಂಡದ ಒಂದುಗೂಡಿದ ವಿಷಯಾಲೋಚನೆಗಳಿಗೆ ತೊಂದರೆ ಕೊಡುವುದರಿಂದ ಪ್ರಾಂತಿಕ ಭಾಷೆಗಳಲ್ಲಿ ಮುಖ್ಯವಾದುವುವೆಂಬುದನ್ನೇ ಯೋಚಿಸಿ ಅದನ್ನು ರಾಷ್ಟ್ರಭಾಷೆಯಾಗಿಯೂ ಸಂಸ್ಕೃತವನ್ನು ಎರಡನೇಯ ಭಾಷೆಯನ್ನಾಗಿಯೂ ಏರ್ಪಡಿಸುವುದು ಉತ್ತಮ ಮಾರ್ಗವು. ಪ್ರಾಂತಿಕ ಭಾಷೆ, ಎರಡನೆಯ ಭಾಷೆ, ರಾಷ್ಟ್ರಭಾಷೆ ಹೀಗೆ ಮೂರು ವಿಧವಾಗಿ ವಿಂಗಡಿಸುವುದರಿಂದ ಜನರಲ್ಲಿ ಒಡಕುಗಳಾಗುವುದಕ್ಕೆ ಕಾರಣವಾಗುವುದು. ಉತ್ತರ ಹಿಂದೂಸ್ಥಾನದಲ್ಲಿ ಗೌಡ ಭಾಷೆಗಳು ಪ್ರಬಲವಾಗಿರುವುವು. ದಕ್ಷಿಣ ಹಿಂದೂಸ್ಥಾನದಲ್ಲಿ ದ್ರಾವಿಡ ಭಾಷೆಗಳು ಪ್ರಬಲವಾಗಿರುವುವು. ಈ ಎರಡು ವಿಧಗಳಿಗೆ ಸೇರಿದ ಭಾಷೆಗಳಲ್ಲಿ ಒಂದನ್ನು

ಆಯ್ದುಕೊಳ್ಳುವುದರಿಂದ ಹಿಂದೂ ದೇಶದ ಪೂರ್ವ ಪದ್ಧತಿಯನ್ನು ಅಳಿದಂತಾಗುವುದಿಲ್ಲ. ಆದರೆ ಹಿಂದೂ ದೇಶದ ಜನತೆಯು ಹೀಗೆ ಮಾಡುವಷ್ಟು ಮುಂದಾಳುತನವನ್ನು ಈಗಲೇ ಒಮ್ಮೆಗೇ ಹೊಂದಲಾರದೆಂಬ ಯೋಚನೆ ಬರುತ್ತದೆ. ಅಂತಹ ಸಂದರ್ಭದಲ್ಲಿ ಉತ್ತರ ಹಿಂದೂ ದೇಶದಲ್ಲಿ ಗೌಡ ಭಾಷೆಗಳಲ್ಲಿ ಒಂದನ್ನೂ-ಇವುಗಳಲ್ಲಿ ಬಂಗಾಳಿಯೇ ಉತ್ತಮವೆಂದು ತೋರುತ್ತದೆ. ದಕ್ಷಿಣ ಹಿಂದೂದೇಶದಲ್ಲಿ ದ್ರಾವಿಡ ಭಾಷೆಗಳಲ್ಲಿ ಒಂದನ್ನೂ ರಾಷ್ಟ್ರಭಾಷೆಯಾಗಿ ಇಟ್ಟುಕೊಳ್ಳುವುದು ಕ್ಷೇಮಕರ. ಉಳಿದ ಭಾಷೆಗಳು ನಿರ್ನಾಮ (Extinct) ಆದರೂ ದೇಶದ ಹಿತಕ್ಕೆ ಏನೂ ಬಾಧಕವಿಲ್ಲ.

ದ್ರಾವಿಡ ಭಾಷೆಗಳಲ್ಲಿ ಕನ್ನಡವೇ ಬಹಳ ಪೂರ್ವಕಾಲದುದೆಂದೂ ಸುಧಾರಿಸಲ್ಪಟ್ಟ ಭಾಷೆಯೆಂದೂ ಈಗ ಗೊತ್ತಾಗಿರುವುದರಿಂದ ದಕ್ಷಿಣ ಹಿಂದೂಸ್ಥಾನಕ್ಕೆ ಕನ್ನಡವನ್ನೇ ರಾಷ್ಟ್ರಭಾಷೆಯಾಗಿ ಮಾಡುವುದು ಬಹಳ ಒಳ್ಳೆಯದು. ಅದನ್ನು ಬಳಕೆ ಮಾಡುವ ಜನರ ಸಂಖ್ಯೆ ೨ ಕೋಟಿ ಎಂದು ಈಗ ಸಾಮಾನ್ಯವಾಗಿ ಗಣಿಸಲ್ಪಟ್ಟರೂ ಇದರಲ್ಲಿನ ಗ್ರಂಥ ಭಂಡಾರ, ಆಧ್ಯಾತ್ಮಿಕ ವಿದ್ಯೆ, ಶಿಲ್ಪಕಲಾವಿದ್ಯೆ, ಕೈಗಾರಿಕೆಯ ವಿದ್ಯೆ ಮುಂತಾದುವು ಜಗತ್ತಿಗೇ ದಂಗುಬಡಿಸುವಂತೆ ಇರುವುದರಿಂದಲೂ ಆಧ್ಯಾತ್ಮಿಕ ವಿದ್ಯೆಯು ಕೆಲವು ಮಟ್ಟಿಗೆ ಸಂಸ್ಕೃತಕ್ಕಿಂತಲೂ ಕನ್ನಡದಲ್ಲಿಯೇ ಹೆಚ್ಚಾಗಿ ಇರುವುದರಿಂದಲೂ ಇದರ ಬಳಕೆಯು ದಕ್ಷಿಣ ಹಿಂದೂ ದೇಶವಲ್ಲೆಲ್ಲಾ ಬೇಗನೆ ವ್ಯಾಪಿಸಲನುಕೂಲವಾಗಲೇಬೇಕು.

ಹತ್ತಾರು ವರುಷಗಳಾದ ಮೇಲೆ ಉತ್ತರ ಹಿಂದೂಸ್ಥಾನ ದಕ್ಷಿಣ ಹಿಂದೂಸ್ಥಾನ ಎರಡನ್ನೂ ಸೇರಿಸುವಂತೆ ಬಳಕೆಗೆ ತರುವ ರಾಷ್ಟ್ರಭಾಷೆ ಯಾವುದೆಂಬುದನ್ನು ಯೋಚಿಸಬಹುದು. ಮೇಲೆ ಕಂಡ ವಿಷಯಗಳನ್ನು ವಿಶ್ವವಿದ್ಯಾಲಯ ಸಮಿತಿಯವರು ಕೂಲಂಕಷವಾಗಿ ಚೆನ್ನಾಗಿ ಪರ್ಯಾಲೋಚಿಸಲಿ.

ಒಂದು ರಾಷ್ಟ್ರಭಾಷೆ ಮೊದಲನೆಯದಾಗಿಯೂ ಸಂಸ್ಕೃತವು ಎರಡನೆಯದಾಗಿ ಅವಶ್ಯಕವಾಗಿಯೂ ಇರುವಂತೆ ಏರ್ಪಡಿಸಬೇಕೇ ಹೊರತು ಅನೇಕ ಭಾಷೆಗಳು ದೇಶದಲ್ಲಿ ವರ್ಧಿಸುವಂತೆ ಮಾಡುವುದು ದೇಶಹಿತಕಾರಿಯಲ್ಲವೆಂಬವನ್ನು ಸರ್ವರೂ ಮನಸ್ಸಿನಲ್ಲಿ ಮುಖ್ಯವಾಗಿ ಇಟ್ಟಿರಬೇಕಾದುದು ಅವಶ್ಯಕವಾಗಿದೆ. ಈ ದೇಶದಲ್ಲಿ ವ್ಯಾಪಿಸಿರುವ ಪರದೇಶಿಯರು ತಮ್ಮ ಭಾಷೆಯನ್ನು ಮೂರನೆಯದಾಗಿ ಮಕ್ಕಳಿಗೆ ಅಭ್ಯಾಸಮಾಡಿಸಬಹುದು.

(ಸಂ. ೭೨-೭೩)

# ಕನ್ನಡದ ಉನ್ನತಿ

ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಈಚೀಚೆಗೆ ಕರ್ಣಾಟಕ ಸಾಹಿತ್ಯ ಪರಿಷತ್ತು ಬಹಳ ಉತ್ತಮವಾದ ಕೆಲಸವನ್ನು ಮಾಡುತ್ತಾ ಇದೆ. ಕಳೆದ ವರ್ಷ ಏರ್ಪಡಿಸಿದ ಗ್ರಂಥ ಪ್ರದರ್ಶನದಿಂದ ಎಲ್ಲ ಕನ್ನಡ ಗ್ರಂಥಗಳೂ ಒಂದು ಕಡೆಯಲ್ಲಿ ಕೂಡಿ ಬೀಳಲಿಕ್ಕೆ ಅವಕಾಶವಾದುದಲ್ಲದೆ ಕನ್ನಡ ವಾಙ್ಮಯದ ಬಂಡವಾಳವು ಈಗ ದೊರಕಲಿರುವುದು ಎಷ್ಟು ಎಂಬುದನ್ನು ತಿಳಿಯುವುದಕ್ಕೂ ಅನುಕೂಲವಾಯಿತು.

ಈ ವರ್ಷ (೧೯೩೫ ಮೇ ಜೂನ್ ತಿಂಗಳುಗಳಲ್ಲಿ) ಬೆಂಗಳೂರಿನಲ್ಲಿ ಇರುವ ಶ್ರೀ ಕೃಷ್ಣರಾಜ ಪರಿಷನ್ಮಂದಿರ (ಈ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯಾಲಯ) ದಲ್ಲಿ ಗಮಕ ಕಲೆಯ ಅಭ್ಯಾಸದ ಗೋಷ್ಠಿಯನ್ನು ಎಂದರೆ ಕನ್ನಡ ಕಾವ್ಯಗಳನ್ನು ಕಿವಿಗೆ ಇನಿದಾಗುವಂತೆಯೂ ಅರ್ಥವು ಓದಿದ ಕೂಡಲೆ ಸುಲಭವಾಗಿ ತಿಳಿಯುವಂತೆಯೂ ಓದುವುದನ್ನು ಕಲಿಸುವ ವರ್ಗವು ಒಂದೊಂದು ಗಂಟೆಯ ಹೊತ್ತು ನಡೆಯಲು ಈ ಪರಿಷತ್ತಿನವರಿಂದ ಏರ್ಪಡಿಸಲು ನಿಶ್ಚಿತವಾಗಿದ್ದಿತು.

ಕನ್ನಡವಲ್ಲಿ ತ್ರಿವಿದಿ, ಸಾಂಗತ್ಯ, ಸೀಸಪದ್ಯ, ಷಟ್ಪದಿ, ಕಂದ ಪದ್ಯ, ವೃತ್ತ ಮೊದಲಾದ ಅನೇಕ ಛಂದೋಬದ್ಧವಾದ ಪದ್ಯಗಳಿದ್ದಾಗ್ಯೂ ಅವುಗಳನ್ನು ಓದುವ ದಾಟಿ ಮೊದಲಾದುವುಗಳು ತಿಳಿಯದೆ ಹುಡುಗರ ಮಗ್ಗಿ (ಪರೋಚಿ) ಯಂತೆ ಅವುಗಳನ್ನು ಉದ್ದಕ್ಕೆ ಓದುವ ಪದ್ಧತಿಯು ಬಿದ್ದು ಇವುಗಳನ್ನು ನಿರ್ಮಿಸಿದವರ ಉದ್ದೇಶಕ್ಕೆ ಭಂಗವನ್ನು ತರುವಂತೆ ಆಗಿದೆ.

ಈ ಪದ್ಯಗಳು ಕೇಳುವವರಿಗೆ ಮನೋಹರವಾಗಿ, ಕಿವಿಗಿಂಪಾಗಿ ಇರುವುದಕ್ಕಾಗಿ ರಚಿಸಲ್ಪಟ್ಟವುಗಳಾಗಿ ಇವೆ. ತಕ್ಕ ರೀತಿಯಲ್ಲಿ ಇವುಗಳನ್ನು ಹೇಳಿದರೆ ಕನ್ನಡದ ರಸಿಕತೆಯು ಉಳಿದಂತಾಗುತ್ತದೆ. ಈ ಉದ್ದೇಶವು ನೆರವೇರುವಂತೆ ಪರಿಷತ್ತಿನವರು ಏರ್ಪಡಿಸಿದುದು ಶ್ರೇಷ್ಠವಾದ ಕೆಲಸ.

ಇದಲ್ಲದೆ ರಾಯಚೂರಿನಲ್ಲಿ ಕೂಡಿದ ೧೯೩೪ನೆಯ ಈ ಸಾಹಿತ್ಯ ಪರಿಷತ್ತಿನ ಸಮ್ಮೇಳನವಲ್ಲಿ ಆಗಿರುವ ನಿರ್ಣಯಗಳಲ್ಲಿ ಈ ಕೆಳಗಿನವು ಬಹು ಮುಖ್ಯವಾದವುಗಳು.

ನಿಜಾಂ ಸರ್ಕಾರವಲ್ಲಿ ಕರ್ಣಾಟಕದ ಇತಿಹಾಸಕ್ಕೆ ಮುಖ್ಯ ಸಾಮಗ್ರಿಗಳಾಗಿರುವ ಶಿಲಾಶಾಸನಗಳು ಹೇರಳವಾದುವೂ ಮಹತ್ತ್ವವುಳ್ಳವೂ ಇರುವುದರಿಂದ, ನಿಜಾಂ ಸರ್ಕಾರದವರು ಕೊಪ್ಪಳ ಜಹಗೀರಿನ ಶಾಸನಗಳನ್ನು ಮುದ್ರಿಸುತ್ತಿರುವುದಕ್ಕಾಗಿ ಈ ಸಮ್ಮೇಳನವು ಆ ಸರ್ಕಾರವನ್ನು ಅಭಿನಂದಿಸಿ, ಅದರಂತೆ ಈ ಸಂಸ್ಥಾನದ ಇತರ ಭಾಗಗಳಲ್ಲಿಯೂ ಶಿಲಾಲಿಪಿಗಳ ಸಂಶೋಧನ ಕಾರ್ಯವನ್ನು ಶೀಘ್ರವೇ ನಡೆಸಿ, ಸಂಸ್ಥಾನದ

ಯಾವತ್ತೂ ಭಾಗಗಳ ಕನ್ನಡ ಶಿಲಾ ಲಿಪಿಗಳ ಅಚ್ಚನ್ನು ತೆಗೆದುಕೊಂಡು ಮುದ್ರಿಸಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ನಿಜಾಂ ಸಂಸ್ಥಾನದಲ್ಲಿ ಕೈಬರಹದ ಅಸಂಖ್ಯಾತ ಕನ್ನಡ ಗ್ರಂಥಗಳು ದೊರೆಯುವುದರಿಂದ ಅವುಗಳನ್ನು ಸಂಗ್ರಹಿಸಿ ಸಂಶೋಧಕರಿಗೆ ದೊರಕಿಸಿಕೊಡಬೇಕೆಂದು ನಿಜಾಂ ಸರ್ಕಾರವನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಕರ್ಣಾಟಕ ದೇಶದ ಭಾಷೆ ಸಾಹಿತ್ಯ ಸಂಸ್ಕೃತಿಗಳಲ್ಲಿ ಇರುವ ಪ್ರಾದೇಶಿಕ ವ್ಯತ್ಯಾಸಗಳನ್ನು ಕಡಿಮೆಮಾಡಿ ಅವುಗಳ ಏಕರೂಪತೆಯನ್ನೂ ಸಾರಸಂಪತ್ತುಗಳನ್ನೂ ಹೆಚ್ಚುಪಡಿಸುವುದಕ್ಕೆ ಕನ್ನಡ ನಾಡಿನಲ್ಲಿರುವ ನಾನಾ ಸರಕಾರಗಳ ಮತ್ತು ವಿದ್ಯಾಧಿಕಾರಿಗಳ ಮನಃಪೂರ್ವಕವಾದ ಅನ್ಯೋನ್ಯ ಸರಕಾರವು ಅತ್ಯಂತ ಆವಶ್ಯವಾಗಿರುವುದರಿಂದ ಇಂಥ ಸಹಕಾರವನ್ನು ಸಂಪಾದಿಸಿ,ಸಾರ್ಥಕಗೊಳಿಸುವುದಕ್ಕಾಗಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಂಬಂಧದಲ್ಲಿ ಒಂದು ಪ್ರತ್ಯೇಕವಾದ ಸಮಿತಿಯು ಏರ್ಪಾಡಾಗಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ. ಆ ಸಮಿತಿಯಲ್ಲಿ (೧) ಮೈಸೂರು ಸಂಸ್ಥಾನ, (೨) ಬೊಂಬಾಯಿ ಆಧಿಪತ್ಯ, (೩) ಮದರಾಸು ಆಧಿಪತ್ಯ, (೪) ಹೈದರಾಬಾದು ಸಂಸ್ಥಾನ, (೫) ಕೊಡಗು ಪ್ರಾಂತ, (೬) ಉತ್ತರ ಕರ್ಣಾಟಕ ಸಂಸ್ಥಾನಗಳು—ಈ ಬೇರೆ ಬೇರೆ ಸರ್ಕಾರಗಳು ನಿಯಮಿಸಿ ಕಳುಹಿಸುವ ಪ್ರತಿಯೊಬ್ಬ ಪ್ರತಿನಿಧಿಯೂ; (೧) ಮೈಸೂರು, (೨) ಬೊಂಬಾಯಿ, (೩) ಮದರಾಸು, (೪) ಹೈದರಾಬಾದು—ಈ ವಿಶ್ವವಿದ್ಯಾಲಯಗಳ ಒಬ್ಬೊಬ್ಬ ಪ್ರತಿನಿಧಿಯೂ; ಇವರುಗಳ ಜೊತೆಗೆ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯು ನಿಯಮಿಸುವ ಮೂವರು ಸದಸ್ಯರೂ ಇರತಕ್ಕದ್ದು ಮತ್ತು ಈ ಸಮಿತಿಗೆ ಉಚಿತ ತೋರಿದ ಮೇರೆಗೆ ಐದು ಮಂದಿಗೆ ಮೀರದಂತೆ ಬೇರೆ ಸದಸ್ಯರನ್ನು ಸೇರಿಸಿಕೊಳ್ಳಲು ಅದಕ್ಕೆ ಅಧಿಕಾರವಿರತಕ್ಕದ್ದು. ಈ ಸಮಿತಿಯು ಈ ಮುಂದೆ ಕಾಣುವ ಪ್ರಶ್ನೆಗಳನ್ನು ವಿಚಾರಕ್ಕೆ ತೆಗೆದುಕೊಳ್ಳತಕ್ಕದ್ದು—

೧) ಬೇರೆ ಬೇರೆ ಪ್ರಾಂತಗಳಲ್ಲಿರುವ ಪಾಠಶಾಲೆ ವಿಶ್ವವಿದ್ಯಾಲಯಗಳಲ್ಲಿ ನಾನಾ ತರಗತಿಗಳಲ್ಲಿ ಉಪಯೋಗವಾಗುತ್ತಿರುವ ಕನ್ನಡ ಪಠ್ಯಪುಸ್ತಕಗಳ ಶೈಲಿ ಸಾಹಿತ್ಯ ಮೊದಲಾದುವುಗಳಲ್ಲಿ ಏಕರೂಪತೆಯನ್ನುಂಟುಮಾಡಿಸುವುದು ಎಷ್ಟುಮಟ್ಟಿಗೆ ಸಾಧ್ಯ? ಅದಕ್ಕೆ ಆಗಬೇಕಾದ ಏರ್ಪಾಟುಗಳೇನು ?

೨) ಸರ್ಕಾರ ಕನ್ನಡದ ಪ್ರಸಿದ್ಧ ಪತ್ರಿಕೆಗಳು, ಪ್ರಕಟಣೆಗಳು ವರದಿಗಳು ಮುಂತಾದ ಕಾಗದ ಪತ್ರಗಳಲ್ಲಿ ಒಂದೇ ಬಗೆಯ ಶೈಲಿಯನ್ನೂ ಒಂದೇ ಪರಿಭಾಷೆಯನ್ನು ರೂಢಿಗೆ ತರುವುದು ಎಷ್ಟುಮಟ್ಟಿಗೆ ಸಾಧ್ಯ ? ಅದಕ್ಕೆ ಆಗಬೇಕಾದ ಏರ್ಪಾಟುಗಳಾವುವು ?

೩) ಕನ್ನಡ ದೇಶವೆಲ್ಲಕ್ಕೂ ಸಮಾನ ಪ್ರಮಾಣವಾಗಿರುವಂತೆ ನಿಘಂಟು, ವ್ಯಾಕರಣ, ಕೋಶಗಳನ್ನು ತಯಾರು ಮಾಡಿಸಲು ಸಾಧ್ಯವೇ ? ಅದು ಹೇಗೆ ?

೪) ಕನ್ನಡ ಪಾಠಶಾಲೆಗಳ ಬೋಧಕರ ಪ್ರಯೋಜನಕ್ಕಾಗಿ ಪಂಡಿತ ಪರೀಕ್ಷೆ ಮೊದಲಾದ ಪರೀಕ್ಷೆಗಳನ್ನು ಕನ್ನಡ ದೇಶದ ಎಲ್ಲ ಸರ್ಕಾರಗಳೂ ಎಲ್ಲ ವಿದ್ಯಾ ಇಲಾಖೆಗಳೂ ಅಂಗೀಕರಿಸುವಂತೆ ಒಂದು ಅಧಿಕಾರ ಸ್ಥಾನದಿಂದ ನಡೆಯಿಸುವುದು ಸಾಧ್ಯವೇ ?

ಈ ಪ್ರಶ್ನೆಗಳನ್ನೂ ಮತ್ತು ಇವಕ್ಕೆ ಸಂಬಂಧಪಟ್ಟ ಇತರ ಪ್ರಶ್ನೆಗಳನ್ನೂ ಮೇಲ್ಕಂಡ ಸಮಿತಿಯು ಪರ್ಯಾಲೋಚಿಸಿ, ತನ್ನ ತೀರ್ಮಾನವನ್ನು ಈ ಸಮ್ಮೇಳನಕ್ಕೂ ಕನ್ನಡ ನಾಡಿನ ಸರ್ಕಾರಗಳಿಗೂ ೧೯೩೫ ನೆಯ ಇಸವಿಯ ಅಂತ್ಯದೊಳಗಾಗಿ ತಿಳಿಯಪಡಿಸತಕ್ಕದ್ದು.

ಈ ಮೇಲೆ ಕಂಡಂತೆ ಸಮಿತಿಯನ್ನು ನಾನಾ ಸರ್ಕಾರಗಳ ಸಹಾಯದಿಂದ ನಿಯಾಮಕ ಮಾಡಿಸಿ ಕೆಲಸ ನೆರವೇರಿಸಲು ಅವಶ್ಯವಾದ ಎಲ್ಲ ಪ್ರಯತ್ನಗಳನ್ನೂ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ನಡೆಸತಕ್ಕದ್ದು.

ಈ ನಿರ್ಣಯದ ಪ್ರಕಾರ ಮೈಸೂರು, ಬೊಂಬಾಯಿ, ಮದರಾಸು, ಹೈದರಾಬಾದು ಸರ್ಕಾರದವರು ಕೂಡಿ ಕನ್ನಡದ ಪಠ್ಯಪುಸ್ತಕಗಳನ್ನು ಏರ್ಪಡಿಸುವುದಾದರೆ ಕನ್ನಡ ಮಾತೆಯು ತನ್ನ ಮಕ್ಕಳೆಲ್ಲರನ್ನು ಒಂದೇ ವಿಧವಾಗಿ ಪೋಷಿಸುವಂತೆ ಆಗುತ್ತದೆ. ಇಲ್ಲದಿದ್ದರೆ ಕಲ್ಯಾಣದ ಕಡೆಯಲ್ಲಿ ಯಾನಾ ಎಂಬ ಪದದ ಉಪಯೋಗ ಮಾಡುವುದು ರೈಲ್ವೆ ಇಲಾಖೆಯಲ್ಲಿ ರಿಟರನ್ ಟಿಕೆಟ್ ಎಂಬ ಪದದ ಉಪಯೋಗ ಮಾಡುವುದು ಇವೇ ಮುಂತಾದ ಅಬದ್ಧಗಳು ಬೆಳೆದು ಕನ್ನಡಿಮಾತೆಯ ಮುಖಕ್ಕೆ ಮಸಿ ಹಚ್ಚಿದಂತಾಗಿ ಅನುಯಾಯಿಗಳಿಗೂ ಆ ಮಸಿಯು ಅಂಟಿಕೊಳ್ಳಲಿಕ್ಕೆ ಆರಂಭವಾಗುವುದು.

ಇಂಥ ಅನಿಷ್ಟಗಳೆಲ್ಲಾ ನಿವಾರಣೆಯಾಗುವಂತೆ ಕರ್ನಾಟಕ (ಕನ್ನಡ) ರಾಜ್ಯದ ರಾಜರುಗಳು ತಕ್ಕ ಬೆಂಬಲವನ್ನು ಕೊಟ್ಟು ಕನ್ನಡವನ್ನು ಸ್ವಚ್ಛವಾಗಿ ಬೆಳಗುವಂತೆ ಮಾಡಿ ಕನ್ನಡವು ಕನ್ನಡಿಯಾಗಿರುವಂತೆ ಉನ್ನತಿಗೈಯಲಿ ಎಂದು ಸ್ವಾಭಿಮಾನದಿಂದ ಪ್ರಾರ್ಥಿಸುವೆವು.

ಹೈದರಾಬಾದು ಸರಕಾರದವರು ಕನ್ನಡ ಲಿಪಿಯ ಶಿಲಾಶಾಸನಗಳನ್ನು ಇದುವರೆವಿಗೆ ಬಯಲಿಗೆ ತಾರದೆ ಇರುವುದಕ್ಕೆ ಬಹಳ ವಿಷಾದಿಸಬೇಕಾಗಿದೆ. ವರ್ಷಕ್ಕೆ ಸ್ವಲ್ಪ ಸ್ವಲ್ಪವೆಂತಲಾದವರು ಈ ಕೆಲಸವನ್ನು ನಡೆಸುವುದರ ಕಡೆಗೆ ಆ ಸರಕಾರದವರು ಗಮನ ಕೊಡುವರೆಂದು ನಿರೀಕ್ಷಿಸುತ್ತೇವೆ.

ಈ ಕರ್ನಾಟಕ ಸಾಹಿತ್ಯ ಪರಿಷತ್ತಿನ ದ್ರವ್ಯನಿಧಿಗಾಗಿ ಕನ್ನಡ ಭಾಷೆಯ ಮುಂದಾಳುಗಳಾದ ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು M.A.B.L. ಸೆಂಟ್ರಲ್ ಕಾಲೇಜಿನ ಇಂಗ್ಲೀಷ್ ಪ್ರೊಫೆಸರ್ ಇವರು ಒಂದು ಸಾವಿರ ರೂಪಾಯಿಗಳನ್ನು ದಾನ ಮಾಡಿದುದು ಸ್ತುತ್ಯವಾದ ಕೆಲಸ.

ಈಚೆಗೆ ಪ್ರಬಲಕ್ಕೆ ಬಂದ ಹಿಂದಿ ಭಾಷೆಯ ಪ್ರಚಾರಕ್ಕೆ ಲಕ್ಷಗಟ್ಟಲೆ ನಿಧಿಯನ್ನು ಕೂಡಿಸಬೇಕೆಂದು ರಾಷ್ಟ್ರದ ಮುಂದಾಳುಗಳಾದ ಮೋಹನದಾಸ ಕರಮಚಂದ ಗಾಂಧಿಯವರು ಮುಂತಾದವರು ಯೋಚಿಸುತ್ತಾ ಇರುವಲ್ಲಿ ಸಾವಿರಾರು ವರ್ಷಗಳಿಂದ ತನ್ನ

ಮನೋಹರತೆಯನ್ನು ವ್ಯಾಪನೆಗೊಳಿಸಿರುವ ಕನ್ನಡದ ಅಭಿವೃದ್ಧಿಗೆ ತಕ್ಕ ನಿಧಿ ಇಲ್ಲದೆ ಇರುವುದು ಎಷ್ಟು ದೊಡ್ಡ ಕೊರತೆ ಮತ್ತು ವ್ಯಸನದ ಸ್ಥಿತಿಯು. ಈ ಕೊರತೆಯ ಪರಿಹಾರಕ್ಕಾಗಿ ಇವರು ಹಾಕಿದ ಮಾದರಿಯನ್ನು ಕನ್ನಡದ ಅಭಿಮಾನಿಗಳು ಅನುಸರಿಸಿ ತಾವೂ ಈ ದ್ರವ್ಯನಿಧಿಯನ್ನು ಬೆಳೆಯಲು ಸಹಾಯಮಾಡಿ ಕನ್ನಡವು ತನ್ನಷ್ಟಕ್ಕೆ ತಾನೇ ಮುಂದೆ ಬಂದು ಸನ್ನುತವಾದ ಕಾರ್ಯವನ್ನು ಮಾಡಿ ಜಗತ್ತನ್ನು ಆನಂದಪಡಿಸುವಂತೆ ಆಗಲಿ ಎಂಬುದೇ ಕನ್ನಡಿಗರೆಲ್ಲರ ಬಯಕೆಯು. ಅದರಲ್ಲಿ ನಮ್ಮದು ಸ್ವಲ್ಪ.

ಈ ವರ್ಷದ ಸಾಹಿತ್ಯ ಪರಿಷತ್ತು ಹಿಂದೂಸ್ಥಾನದ ಅತ್ಯಂತ ದೊಡ್ಡ ಪಟ್ಟಣವಾದ ಬೊಂಬಾಯಿಯಲ್ಲಿ ಮುಂದಿನ ಡಿಸೆಂಬರು ತಿಂಗಳಲ್ಲಿ ಕೂಡಲಿರುವುದು ಇನ್ನೂ ಸಂತೋಷದ ಕಾರ್ಯವು, ಇದಲ್ಲದೆ ದಿವಾನ್ ಬಹದ್ದೂರ್ ಸಿದ್ದಪ್ಪನವರು, ತೋಟಪ್ಪನವರು, ಕಂಬಳಿ, (ಬೊಂಬಾಯಿ ವಿದ್ಯಾಭ್ಯಾಸದ ಇಲಾಖಾ ಮಂತ್ರಿಯವರು) ಮೊದಲಾದವರು ಇದನ್ನು ಯೋಗ್ಯ ರೀತಿಯಲ್ಲಿ ನೆರವೇರಿಸಲು ಏರ್ಪಡಿಸುತ್ತಾ ಇರುವುದನ್ನು ನೋಡಿದರೆ ಕನ್ನಡದ ಬನ್ನ(ಭಂಗ)ವೇ ಹರಿದುಹೋಗುವ ಕಾಲವು ಬಂದಿತು ಎಂದು ಯೋಚಿಸಬೇಕಾಗಿರುವುದು.

ಕನ್ನಡ ಕೊರತೆಗಳು ಬಹಳವಾಗಿ ಇವೆ. ಎಲ್ಲಾ ಕನ್ನಡ ಪದಗಳನ್ನು ಒಳಗೊಂಡ ಒಂದು ಕನ್ನಡ ಕೋಶವು ಈವರೆವಿಗೂ ರಚಿಸಲ್ಪಟ್ಟಿಲ್ಲ. ಶಿವಶರಣರು ವಚನವಾಙ್ಮಯದಲ್ಲಿ ಇರುವ ಪಾರಿಭಾಷಿಕ ಪದಗಳ ಸರಿಯಾದ ಅರ್ಥವನ್ನು ತಿಳಿಯುವುದಕ್ಕೆ ತಕ್ಕ ಅನುಕೂಲಗಳಿಲ್ಲ. ಈ ಕಾಲದಲ್ಲಿ ಇಂಗ್ಲೀಷ್ ಭಾಷೆಯು ಇಡೀ ಜಗತ್ತನ್ನು ಆವರಿಸಿ ಇರುವುದರಿಂದ ಕನ್ನಡದಲ್ಲಿ ಇರುವ ವಿಶೇಷ ಸಂಗತಿಗಳನ್ನು ಇಂಗ್ಲೀಷ್‌ನಲ್ಲಿ ತಿಳಿಸಲು ಕನ್ನಡ ಪಾರಿಭಾಷಿಕ ಪದಗಳಿಗೆ ತಕ್ಕ ಇಂಗ್ಲಿಷ್ ಪದಗಳು ಬೇಕು. ಅವುಗಳ ಯೋಜನೆಯಿಲ್ಲ.

ಇಂತಹ ಕೊರತೆಗಳನ್ನು ನಿವಾರಣ ಮಾಡುವುದಕ್ಕೆ ಈ ವರ್ಷದ ಪರಿಷತ್ತಿನಲ್ಲಿ ಅನುಕೂಲವು ಮಾಡಲ್ಪಡುವುದೆಂದು ನಂಬುತ್ತೇವೆ.

ವೈದ್ಯದ ವಿಷಯವೇ ಮೊದಲಾದ ಅನೇಕ ವಿಷಯಗಳ ಗ್ರಂಥಗಳು ಓಲೆಯಗರಿಯಲ್ಲಿ ಇರತಕ್ಕವುಗಳು ಇನ್ನೂ ಮುದ್ರಣವಾಗಿಲ್ಲ. ಇವನ್ನೆಲ್ಲಾ ಹೊರಕ್ಕೆ ತರುವಂತೆಯೂ ಒಂದೊಂದು ಭಾಗದಲ್ಲಿಯೂ ಅಭಿವೃದ್ಧಿಯು ತೋರುವಂತೆಯೂ ಮಾಡಲಿಕ್ಕೆ ಉಪ ಸಮಿತಿಗಳು ಏರ್ಪಾಡಾಗುವುದೂ ಅತ್ಯಂತ ಅವಶ್ಯಕವಾದ ಕಾರ್ಯವಾಗಿದೆ.

ಕರ್ಣಾಟಕ ಸಿಂಹಾಸನಾಧೀಶ್ವರರಾದ ಮೈಸೂರಿನ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರು G.C.S.I.G.B.E. ಇವರು ಈ ಪರಿಷತ್ತಿನ ಮೇಲೆ ಕೃಪೆಯಿಟ್ಟು, ಪೋಷಕರಾಗುವರಲ್ಲದೆ ಇದರ ವಿಶೇಷೋತ್ಸವಗಳಿಗೆ ಕೃಪಾಪೂರ್ವಕವಾಗಿ ಧನಸಹಾಯವನ್ನು ಮಾಡುತ್ತಾ ಇರುವುದು ಅಭಿನಂದನೀಯವಾದ ಸಂಗತಿ. ಪೂರ್ವದಲ್ಲಿ ಕನ್ನಡದ ಅಭಿವೃದ್ಧಿಗೆ ರಾಜರುಗಳ ಬೆಂಬಲವು ವಿಶೇಷವಾಗಿದ್ದಿತು. ಈಗ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಈ ಮಹಾರಾಜರವರೇ ಮುಂದಾಳು

ಗಳೆಂದು ತಿಳಿಯಲು ಸಂಶಯವೇನೂ ಇಲ್ಲ. ಇವರ ಕೃಪಾದೃಷ್ಟಿಯನ್ನೇ ಕನ್ನಡ ಮಾತೆಯು ಹಾರೈಸಿ ಬೇಡುತ್ತಿದ್ದಾಳೆ. ಈ ಮಹಾರಾಜರವರ ವಿಶೇಷ ಕೃಪೆಗೆ ಪಾತ್ರಳಾದಲ್ಲದೆ ಕನ್ನಡಮಾತೆಯು ತನ್ನ ಅಲಂಕಾರ ವೈಖರಿಗಳಿಂದ ಶೋಭಿಸಿದಳು.ಆದ್ದರಿಂದ ಇವರ ಕೃಪಾಪೂರ್ವಕವಾದ ಸಹಾಯವೂ ಇನ್ನೂ ಹೆಚ್ಚಾಗಿ ಆಗಬೇಕಾಗಿದೆ.

ಶ್ರೀಮದ್ಯುವರಾಜ ಕಂಠೀರವ ನರಸರಾಜ ಒಡೆಯರ್ ಬಹದ್ದೂರರವರು ಜಿ.ಸಿ.ಐ.ಇ. ರವರು ಈ ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾಗಿ ಇರುತ್ತಾರೆ. ಈ ದೆಸೆಯಿಂದ ಈ ಪರಿಷತ್ತು ಇವರದಾಗಿರುತ್ತದೆ. ಕನ್ನಡಮಾತೆಯು ಇವರ ತಾಯಿಯ ಸ್ವರೂಪಳಾಗಿಯೂ ಇರುತ್ತಾಳೆ. ಇಂತಹ ತಾಯಿಯನ್ನು ಹೇಗೆ ಜೋಪಾನ ಮಾಡಬೇಕೆಂಬುದು ಇವರಿಗೇ ಗೊತ್ತು. ಹಿಂದಿ ಭಾಷೆಯ ಉಪಟಳದಿಂದ ನೋಯದಂತೆ ಈಕೆಯನ್ನು ಹೇಗೆ ರಕ್ಷಿಸಬೇಕೆಂಬುದೂ ಇವರಿಗೆ ಗೊತ್ತು. ಇದರಲ್ಲಿ ನಾವು ಬರೆಯಬೇಕಾದುದೇನೂ ಇಲ್ಲ.

ಈ ವರ್ಷದ ಪರಿಷತ್ತಿನಲ್ಲಿ ಕೂಡುವ ಕನ್ನಡ ಸಾಹಿತ್ಯಾಭಿಮಾನಿಗಳು ಆಂಧ್ರದಿಂದ ಮತ್ತು ಮಹಾರಾಷ್ಟ್ರದಿಂದ ಕನ್ನಡಕ್ಕೆ ಆಗುತ್ತಿರುವ ಪೀಡೆಗಳನ್ನು ತಪ್ಪಿಸಿ ಸರ್ವತೋಮುಖವಾಗಿ ಕನ್ನಡವು ಆನಂದದಿಂದ ಬೆಳೆಯುವಂತೆ ಏರ್ಪಡಿಸುವರೆಂದೂ ಕನ್ನಡದ ಉನ್ನತಿಯ ಅನುಕೂಲಗಳನ್ನು ಹೆಚ್ಚಿಸಿ ಅದರ ಏಳಿಗೆಗೆ ಚಿರಸ್ಥಾಯಿಯಾದ ಕಾರ್ಯಗಳನ್ನು ಮಾಡುವರೆಂದೂ ಕನ್ನಡವು ಹಿಂದೂ ದೇಶದ ನಾಗರಿಕತೆಯ ಮುಖ್ಯ ಚಿಹ್ನೆಯಾಗಿದ್ದ ಧಾರ್ಮಿಕ ತತ್ತ್ವ ವಿಷಯಗಳ ವಿವರಣೆಯ ಮುಖ್ಯವಾದ ಬೀಡಾಗಿರುವುದೆಂಬುದನ್ನು ಇಡಿ ಜಗತ್ತಿಗೆ ತೋರಿಸುವಂತೆ ಮಾಡುವರೆಂದೂ ನಂಬಿ ನಿರೀಕ್ಷಿಸುತ್ತಿರುವೆವು. (ಸಂ. ೨೭-೨೮)

# ನವೀನ ಶೋಧ

## ತಲೆಯ ಎಲುಬಿನ ಮುಖಾಂತರ ಧ್ವನಿಗೇಳುವುದು

---

ತಾ. ೨೦-೫-೩೮ ನೆಯ ಮುಂಬಯಿ ಕ್ರಾನಿಕಲ್ (The Bombay Chronicle) ಎಂಬ ದಿನಪತ್ರಿಕೆಯಲ್ಲಿ ಈ ಕೆಳಗಿನ ವಿಷಯಗಳು ಪ್ರಕಟವಾಗಿರುತ್ತದೆ.

Hearing Through Bones.

Hearing by means of bone conduction can reach as high a degree to perfection as normal hearing, according to Dr. N. A. Watson of the University of California. He says that using the bones of the Head to conduct sound, instead of the air inside the ear, will always work best if the listener closes his mouth and holds teath together without clinching them.

ಕ್ಯಾಲಿಪೋರ್ನಿಯಾ ಸರ್ವ ವಿದ್ಯಾಲಯ (University) ಕ್ಕೆ ಸೇರಿದ ಪಂಡಿತ ಎನ್. ಎ. ವಾಟಸನ್ (Docter N. A. Watson) ಎಂಬುವರ ಹೇಳುವಿಕೆಯ ಪ್ರಕಾರ ಸಾಮಾನ್ಯವಾಗಿ ಕಿವಿಯಲ್ಲಿ ಕೇಳುವ ಹಾಗೆ ಎಲುಬುಗಳ ಶಕ್ತಿ ಪ್ರವಾಹದಿಂದ ಧ್ವನಿಗೇಳುವ ಕೆಲಸವನ್ನು ಪೂರ್ಣರೀತಿಯ ಉನ್ನತ ಸ್ಥಿತಿಯಲ್ಲಿ ಮಾಡಬಹುದು.

ಅವರು ಹೀಗೆ ಹೇಳುತ್ತಾರೆ:—

ಧ್ವನಿಯ ಪ್ರವಾಹವನ್ನು ಒಯ್ಯುವುದಕ್ಕೆ ಕಿವಿಯೊಳಗೆ ಇರುವ ಗಾಳಿಯ ಬದಲಾಗಿ ತಲೆಯೊಳಗಿನ ಎಲುಬುಗಳ ಉಪಯೋಗವು ಯಾವಾಗಲೂ ಅತ್ಯುತ್ತಮವಾಗಿ ಕೆಲಸ ಮಾಡುವುದು. ಆದರೆ ಕೇಳುವವನು ತನ್ನ ಬಾಯಿಮುಚ್ಚಿಕೊಂಡು ಹಲ್ಲುಗಳನ್ನು ಬಿಗಿಹಿಡಿಯದಂತೆ ಕೂಡಿಸಿಕೊಂಡು ಇರಬೇಕು.

ಈ ಅಭಿಪ್ರಾಯವನ್ನು ನೋಡಿದರೆ ವೀರಶೈವರು ಮಹಾದೇವನನ್ನು ತಿಳಿದಾಚರಿಸುವುದಕ್ಕೆ ತಲೆಯನ್ನೇ ಮುಖ್ಯವಾಗಿ ಇಟ್ಟುಕೊಂಡಿರುವುದು ಬಹಳ ಉತ್ತಮವಾದುದೆಂದು ತಿಳಿಯಬೇಕಾಗಿದೆ. ಇವರು ತಲೆಯಲ್ಲಿ ಬ್ರಹ್ಮರಂಧ್ರ ಶಿಖಾಚಕ್ರ ಪಶ್ಚಿಮ ಚಕ್ರಗಳಲ್ಲಿ ಇಷ್ಟ ಪ್ರಾಣಭಾವ ಲಿಂಗಗಳಿರುವವೆಂದೂ ಇವುಗಳ ಮೂಲಕವಾಗಿಯೇ

ಸುಚಿತ್ತ ಮೊದಲಾದ ಎಲ್ಲ ಕಿರಣಗಳಿಗೂ ಕಿವಿ ಮುಂತಾದ ಇಂದ್ರಿಯಗಳಿಗೂ ಲಿಂಗಗಳ ವ್ಯಾಪನೆಯಾಗಿರುವುದೆಂದು ತಿಳಿಯುತ್ತಾರೆ. ಉಪನಿಷತ್ತುಗಳಲ್ಲಿಯೂ ಕೂಡಾ ಕಿವಿಗೆ ಕಿವಿಯಾಗಿಯೂ ಕಣ್ಣಿಗೆ ಕಣ್ಣಾಗಿಯೂ ಒಬ್ಬನಾದ ನಿರಾಕಾರ ಏಕೋದೇವನು ಇರುವ ನೆಂದು ಹೇಳಲ್ಪಟ್ಟಿದೆ. ಈ ಎಲ್ಲ ಅಭಿಪ್ರಾಯಗಳು ಒಂದುಗೂಡುವುದರಿಂದ ವೀರಶೈವರು ಹೊಂದಿರುವ ಮಹಾದೇವನ ತಿಳುವಳಿಕೆಯ ವಿಚಾರವು ಇತರರ ತಿಳು ವಳಿಕೆಗಿಂತ ಮೇಲಾದುದು ಎಂದು ದೃಢವಾಗಿ ತಿಳಿಯಬೇಕಾಗಿದೆ.

(ಸಂ. ೪೪)

# ಖನಿಜಗಳಿಗೆ ಪ್ರಾಣ

ತಾ. ೨೮-೬-೩೮ ನೆಯ ಮುಂಬಯಿ ಕ್ರಾನಿಕಲ್ (The Bombay Chronicle)ನಲ್ಲಿ ಹೀಗೆ ಬರೆದಿದೆ.

Minerals Live & Suffer.

Research Scientists are of the opinion that minerals live, suffer communicable diseases and reproduce their kind. Microphotographs by a professor of Naples indicate that crystals not only move but exhibit generative processes similar to those of vegetables. German chemists have found an infectious desease called 'tin-pest' which attacks tin roofs and may be communicated from one roof to another. At Calcatta a scientist demonstrated that a mineral can be poisoned.

ಪರಿಶೋಧನೆಗಾರರಾದ ಈಗಿನ ಶಾಸ್ತ್ರಕಾರರು (Scientist) ಖನಿಜಗಳು ಬದುಕುತ್ತವೆ. ಮತ್ತು ವರ್ತಮಾನ ಕೊಡಲಿಕ್ಕೆ ಬರುವಂತಹ ಕಾಹಿಲೆಗಳನ್ನು ಅನುಭವಿಸುತ್ತವೆ. ಮತ್ತು ಆ ನಮೂನೆಯ ರೋಗಗಳನ್ನು ಅವು ಪುನಃ ಉತ್ಪತ್ತಿ ಮಾಡುತ್ತವೆ. ಎಂಬ ಅಭಿಪ್ರಾಯವುಳ್ಳವರಾಗಿರುತ್ತಾರೆ.

ಅಸ್ಪಷ್ಟ ಶಬ್ದಗಳನ್ನು ಕಿವಿಗೆ ಕೇಳಿಸುವಂತೆ ಮಾಡುವ ಯಂತ್ರದಿಂದ ಪಡೆದ ಚಿತ್ರಗಳು (Micro-Photographs) (ನೇಪಲ್ಸ್ ಪಟ್ಟಣದ ಒಬ್ಬ ಪಂಡಿತನಿಗೆ ದೊರಕಿರುವುವುಗಳು "ಸ್ಫಟಿಕದ ಹರಳು ಚಲಿಸುವುದಲ್ಲದೆ ಸಸ್ಯಗಳಂತೆ ಉತ್ಪತ್ತಿ ಮಾಡುವ ಕಾರ್ಯಕ್ರಮಗಳನ್ನು ಉಂಟಾಗಿರುವುವು ಎಂಬುದನ್ನು ತೋರಿಸುತ್ತವೆ", "ಜರ್ಮನಿಯ ರಸಾಯನಶಾಸ್ತ್ರಕಾರರು 'ತಗಡಿನ ರೋಗ' ಎಂಬ ಅಂಟು ರೋಗವನ್ನು ಕಂಡು ಹಿಡಿದಿರುತ್ತಾರೆ ಈ ರೋಗವು ಮನೆಯ ಛಾವಣಿಯಲ್ಲಿ ಇರುವ ತಗಡುಗಳಿಗೆ ಅಂಟಿಕೊಳ್ಳುತ್ತದೆ. ಆಗ ಆ ವಿಷಯು ಒಂದು ಛಾವಣಿಯಿಂದ ಮತ್ತೊಂದು ಛಾವಣಿಗೆ ತಿಳಿಸಲ್ಪಡುತ್ತದೆ." ಕಲಕತ್ತೆಯಲ್ಲಿ ಒಬ್ಬ ಶಾಸ್ತ್ರಕಾರನು ಒಂದು ಖನಿಜಕ್ಕೆ ವಿಷವನ್ನು ಹಾಕಬಹುದೆಂಬುದನ್ನು ಪ್ರಯೋಗ ಮಾಡಿ ತೋರಿಸಿದನು.

ಈ ಸಂಗತಿಗಳಿಂದ ಪ್ರಪಂಚದಲ್ಲಿ ಎಲ್ಲಾ ವಸ್ತುಗಳು ಜೀವವುಳ್ಳವುಗಳೆಂದು ನಿರ್ಧರಿಸಬಹುದಾಗಿದೆ. ವೀರಶೈವರ ಅಭಿಪ್ರಾಯದ ಪ್ರಕಾರ ಜಡವಸ್ತುವೆಂಬುದೇ ಈ ಲೋಕದಲ್ಲಿ ಇಲ್ಲ. ಸರ್ವವೂ ಚೈತನ್ಯರೂಪ ಎಂದು ತಿಳಿವುದೇ ಮುಖ್ಯವಾಗಿದೆ.

ಇವರು ಸರ್ವವೂ ಲಿಂಗ (ಆಕಾರವನ್ನು ಹೊಂದಿದ ನಿರಾಕಾರ ಚೈತನ್ಯ) ಎಂದೇ ತಿಳಿಯುತ್ತಾರೆ. "ಸರ್ವಂ ಖಲ್ವಿಂ ಬ್ರಹ್ಮ" ಎಂಬ ಉಪನಿಷತ್ತಿನ ವಾಕ್ಯವೂ ಇದೇ ರೀತಿ ಇರುತ್ತದೆ. ವಸ್ತುಗಳಲ್ಲಿ ಜಡಅಜಡ ಎಂಬ ಎರಡು ಭೇದಗಳುಂಟೆಂದು ತಿಳಿಯುವ ದ್ವೈತರ ಭೇದವಾದವಾಗಲೀ ಮಾಯೆಯಿಂದ ಅಜಡ ವಸ್ತುವನ್ನು ಕಲ್ಪಿಸಬೇಕೆಂಬ ಅದ್ವೈತರ ಮಾಯಾವಾದವಾಗಲೀ ಪ್ರಪಂಚವನ್ನು ನಂಬಿ ಜಡ ವಸ್ತುಗಳನ್ನು ತೋರಿಸುವ ಈಗಿನ ಶಾಸ್ತ್ರಕಾರರ ಭೌತಿಕವಾದವಾಗಲೀ ಮೇಲೆ ಕಂಡ ಅಭಿಪ್ರಾಯಕ್ಕೆ ಮುಂದೆ ಬಂದು ನಿಂತು ಉತ್ತರವನ್ನು ಕೊಡಲಾರವು. ಶಾಸ್ತ್ರಕಾರರ ಪರಿಶೋಧನೆಯು ಇನ್ನೂ ಹೆಚ್ಚಿದ ಹಾಗೆಲ್ಲಾ ವೀರಶೈವರ ಧಾರ್ಮಿಕ ಅಭಿಪ್ರಾಯವೇ ನಿಜತತ್ವವೆಂದು ಬೆಳಕಿಗೆ ಬರಬಹುದಾಗಿದೆ.

ಸರ್ವವೂ ಚೈತನ್ಯ ಎಂಬ ಅಭಿಪ್ರಾಯವನ್ನು ಕೆಲವು ಉಪನಿಷತ್ತುಗಳು ಹೇಳುತ್ತವೆ.

'ನಾಸ್ತ್ಯನಾತ್ಮಮಯಂ ಜಗತ್' ಅನಾತ್ಮದಿಂದ ತುಂಬಿರುವ ಜಗತ್ತು ಇಲ್ಲಿ (ಮಹೋಪನಿಷತ್) ತೇಜೋಬಿಂದೂಪನಿಷತ್ತಿನ ೫ನೆಯ ಅಧ್ಯಾಯದಲ್ಲಿ ಅನಾತ್ಮವೆಂಬುದಿಲ್ಲವೇ ಇಲ್ಲವೆಂದು ನಿಶ್ಚಯಿಸು (ಶ್ಲೋಕ ೧೫–೧೭) ಮತ್ತು 'ಸರ್ವಮಾತ್ಮೇತಿ ಶಾಸನಾತ್' (ಸರ್ವವೂ ಆತ್ಮ (ಚೈತನ್ಯವಸ್ತು) ಎಂದು ಶಾಸನವಿರುವುದರ ದೆಸೆಯಿಂದ) ಎಂದು ಹೇಳಿರುತ್ತಾರೆ. ಇನ್ನೂ ಪ್ರಮಾಣಗಳಿವೆ. ಇವು ಸಾವಿರಾರು ವರ್ಷದ ಹಿಂದಿನ ಉಪನಿಷತ್ತುಗಳು.

ಹೀಗೆ ಹಿಂದೂ ದೇಶದ ಅತ್ಯಂತ ಪ್ರಾಚೀನ ಪೂರ್ವಿಕರ ಧಾರ್ಮಿಕದ ಮುಖ್ಯ ಅಭಿಪ್ರಾಯವು ಸರ್ವವನ್ನೂ ಬ್ರಹ್ಮಮಯವಾಗಿ ಭಾವಿಸುವುದೇ ಆಗಿದ್ದು ಇಂತಹ ಅಭಿಪ್ರಾಯವನ್ನು ಗ್ರಹಿಸಲಾರದವರಿಗೆ ಮೊದಲು ಭೇದ ಭಾವನೆ, ಆಮೇಲೆ ಅಭೇದ ಭಾವನೆ ಅನಂತರ ಸರ್ವವೂ ಬ್ರಹ್ಮ ಎಂಬ ಭಾವನೆ ಬರಲೆಂದು ಆಯಾ ತಿಳುವಳಿಕೆಗೆ ತಕ್ಕಂತೆ ಅವರವರ ಆಚರಣೆಗಳನ್ನು ಏರ್ಪಡಿಸಿದ್ದರೆಂದೂ ಸಾವಿರಾರು ವರ್ಷಗಳಿಂದೀಚೆಗೆ ಎಂದರೆ ಶ್ರೀ ಶಂಕರಾಚಾರ್ಯರ ಕಾಲದಲ್ಲಿ ಅದ್ವೈತವೇ ಮುಖ್ಯ ಅದೇ ಕೊನೆಯದು ಎಂಬ ಬೋಧೆಯೂ, ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ದ್ವೈತವೇ ಮುಖ್ಯ ಅದೇ ಕೊನೆಯದು ಎಂಬ ಬೋಧೆಯೂ, ಹೀಗೆಯೇ ಒಂದೊಂದು ಅಭಿಪ್ರಾಯಕ್ಕೆ ಸೇರ್ಪಡೆಯಾದವರು ಆಯಾಕಾಲದಲ್ಲಿ ಮಾಡಿದ ತಮ್ಮದೇ ಸ್ವತಂತ್ರ ಮತ್ತು ಕೊನೆಯದು ಎಂಬ ಬೋಧೆಯೂ ಪ್ರಬಲವಾಗಿ ಹಿಂದೂ ದೇಶದಲ್ಲಿನ ಜನರು ಅನೇಕ ಭೇದಗಳಾಗಿ ಒಡೆಯುವುದಕ್ಕೆ ಅವಕಾಶವನ್ನು ಉಂಟುಮಾಡಿದೆ ಎಂದು ಪೂರ್ವಿಕರ ಗ್ರಂಥಗಳ ದೆಸೆಯಿಂದ ತಿಳಿದು ಬರುತ್ತದೆ.

ಹಿಂದೂ ಧರ್ಮವು ಈಗಿನ ಒಂದು ವಿದ್ಯಾಶಾಲೆ (School)ಯಂತೆ ಏರ್ಪಡಿಸಲ್ಪಟ್ಟು ಇರುತ್ತದೆ. ಈಗಿನ ಪಾಠಶಾಲೆಗಳಲ್ಲಿ ೧ನೆಯ ವರ್ಗ, ೨ನೆಯ ವರ್ಗ, ೩ನೆಯ ವರ್ಗ ಮೊದಲಾದ ವರ್ಗಗಳು ಏರ್ಪಾಡಾಗಿ ಅವುಗಳಲ್ಲಿ ಓದುವವರು ಕ್ರಮಕ್ರಮವಾಗಿ

ವಿದ್ಯೆಯನ್ನು ಬೆಳೆಯಿಸಿಕೊಳ್ಳಲಿಕ್ಕೆ ಹೇಗೆ ಅವಕಾಶವಿದೆಯೋ ಹಾಗೆ ಅತ್ಯಂತ ಪ್ರಾಚೀನ ದಲ್ಲಿ ಧಾರ್ಮಿಕ (ಮಹಾದೇವನ ಅನುಸರಣೆಯ ಮಾರ್ಗ) ದಲ್ಲಿಯೂ ಕೆಲವು ವರ್ಗ ಗಳನ್ನೇರ್ಪಡಿಸಿ ಇದ್ದರು. ಈಗಿನ ಪಾಠಶಾಲೆಗಳಲ್ಲಿ ಒಬ್ಬ ವಿದ್ಯಾರ್ಥಿಯು ಉಚ್ಚತಮ ತರಗತಿಗೆ ಹೇಗೆ ಏರಬಹುದೋ ಹಾಗೆಯೇ ಧಾರ್ಮಿಕದಲ್ಲಿಯೂ ಯಾರು ಬೇಕಾದರೂ ಉಚ್ಚತಮ ಸ್ಥಿತಿಯನ್ನು ಹೊಂದಬಹುದಾಗಿದ್ದಿತು, ಎಂಬುದೂ ನಮಗೆ ಪೂರ್ವಿಕರ ಗ್ರಂಥಗಳಿಂದ ತಿಳಿದು ಬರುತ್ತದೆ.

ಒಂದು ಮನೆಯಲ್ಲಿ ಗಂಡನು ವಿಷ್ಣುಭಕ್ತನಾಗಿಯೂ ಹೆಂಡತಿಯು ಶಿವಭಕ್ತೆ ಯಾಗಿಯೂ ಅಥವಾ ಹೆಂಡತಿಯು ವಿಷ್ಣುಭಕ್ತೆಯಾಗಿಯೂ ಗಂಡನು ಶಿವಭಕ್ತನಾಗಿಯೂ ಇದ್ದಂತೆಯೂ ತಿಳಿದುಬರುತ್ತದೆ.

ಈಗಲೂ ಹಿಂದೂಗಳು ಸೌಹಾರ್ದ ಭಾವದಿಂದ ಕೂಡಿಕೊಂಡು ತಮ್ಮ ತಮ್ಮ ಧಾರ್ಮಿಕ ವಿಚಾರಗಳ ಮುಖ್ಯ ಸಂಗತಿಯನ್ನು ಸರ್ವರಿಗೂ ತಿಳಿಯುವಂತೆ ಪ್ರಚಾರ ಪಡಿಸಿ ಅತ್ಯಂತೆ ಹೆಚ್ಚಿನದಾದ ವರ್ಗ (ಸೋಪಾನ)ಕ್ಕೆ ಯಾರು ಬೇಕಾದರೂ ಏರುವಂತೆ ಏರ್ಪಡಿಸಿಕೊಂಡು ಪರಸ್ಪರ ಸಹೋದರ ಭಾವದಿಂದ ವರ್ತಿಸುವಂತೆ ಆದರೆ ಹಾಗೆ ಆಗಲಿಕ್ಕೆ ಪ್ರಾರಂಭವಾದ ದಿನವು ಹಿಂದೂ ದೇಶದ ಧಾರ್ಮಿಕ ಸರ್ವ ಶುಭ ದಿನ ವೆಂದು ಸರ್ವರು ತಿಳಿದು ಅದರ ಸ್ಮಾರಕವನ್ನು ಏರ್ಪಡಿಸಬಹುದಲ್ಲವೇ! ಹಿಂದೂ ದೇಶದ ಹಿಂದೂ ಮಹಾಸಭೆಯು ಈ ವಿಷಯವನ್ನು ಏಕೆ ಯೋಚಿಸುವುದಿಲ್ಲ?

ಹಿಂದೂ ಮುಂದಾಳುಗಳಲ್ಲಿ ಮುಖ್ಯರೆನಿಸಿಕೊಂಡ ಶ್ರೀ ಮದನ ಮೋಹನ ಮಾಳವೀಯರವರು ಹಿಂದೂಗಳ ನಾಲ್ಕುವರ್ಣಗಳ ಸಂಬಂಧವಲ್ಲಿ ಈಗ ಕೈಹಾಕಬಾರ ದೆಂದು ಹೇಳುತ್ತಾ ಕೆಲವು ನೂರು ವರ್ಷಗಳ ಹಿಂದೆ ಇದ್ದ ಕಟ್ಟನ್ನು ಏಕೆ ಬಲಪಡಿಸ ಲಿಕ್ಕೆ ಹೋಗುವರು? ಅವರು ಈಗಲಾದರೂ ಚೆನ್ನಾಗಿ ಯೋಚಿಸಲಿ. ಇದಿರಲಿ ವೀರ ಶೈವರ ಕಡೆಗೆ ತಿರುಗೋಣ.

ಮೇಲಿನ ಎರಡು ನವೀನ ಶೋಧಗಳಿಂದ ವೀರಶೈವರ ಧರ್ಮಶಾಸ್ತ್ರಕ್ಕೆ ಶ್ರೇಷ್ಠ ತೆಯು ದೊರಕುವುದರಲ್ಲಿ ಏನೂ ಅನುಮಾನವಿಲ್ಲ. ವೀರಶೈವರು ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ, ಹೃದಯ ಎಂಬ ಆರು ಜ್ಞಾನೇಂದ್ರಿಯಗಳ ಮೂಲವಾದ ಆಚಾರಾದಿ ಆರು ಲಿಂಗಗಳೂ, ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು, ಜ್ಞಾನ, ಭಾವ, ಎಂಬ ಆರು ಅಂತಃಕರಣಗಳ ಮೂಲವಾದ ಆರು ಲಿಂಗಗಳೂ, ಅಂತರ್ಯಾಮಿ, ಚೈತನ್ಯ, ಭಾವ, ಕರ್ತಾರ, ಕ್ಷೇತ್ರಜ್ಞ, ಶಿವ. ಎಂಬ ಆತ್ಮನ ರೂಪಗಳ ಮೂಲವಾದ ಆರು ಲಿಂಗ ಗಳೂ ಈ ಆತ್ಮನ ರೂಪಗಳೇ ತಿದ್ದುಪಡಿಯನ್ನು ಹೊಂದಿ ಆದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಅಂಗಗಳ ಮೂಲವಾದ ಆರು ಲಿಂಗಗಳೂ ತಲೆಯಲ್ಲಿಯೇ ಇವೆ, ಎಂದು ನಿರ್ಣಯಿಸಿದ್ದಾರೆ.

ತಲೆಯ ಹಿಂಭಾಗದಲ್ಲಿ ತೆಂಗಿನಕಾಯಿಯ ಬೀಜದಂತೆ ಇರುವುದಾಗಿ ಈಗಿನ ಶಾಸ್ತ್ರ ಕಾರರು ಹೇಳುವ ಒಂದು ನರದ ಗ್ರಂಥಿಗೆ ಇವರು ಪರಶಿವಲಿಂಗ ಎಂಬ ಸಂಕೇತನಾಮ

ವನ್ನಿಟ್ಟು ಅದರಿಂದ ಒಂಬತ್ತು ಲಿಂಗರೂಪಗಳು ಆಗಿರುವವೆಂದು ತಿಳಿಯುತ್ತಾರೆ. ಈ ಲಿಂಗಗಳ ಕಾರ್ಯಗಳೇ ಶರೀರದಲ್ಲಿ ಕರ್ಮೇಂದ್ರಿಯ, ವಾಯು, ಧಾತುಗಳು, ಮೊದಲಾದುವುಗಳಲ್ಲೆಲ್ಲಾ ವ್ಯಾಪಿಸಿ ಇರುವುದಾಗಿಯೂ ತಿಳಿಯುತ್ತಾರೆ. ತಲೆಯಲ್ಲಿನ ಮತ್ತು ಶರೀರದಲ್ಲಿನ ನರಗಳ ಕಾರ್ಯಗಳ ವ್ಯವಸ್ಥೆಗೆ ಭ್ರೂಮಧ್ಯೆ (ಹುಬ್ಬುಗಳ ನಡುವೆ) ಇರುವ ಸ್ಥಳವು ಮುಖ್ಯವೆಂದು ತಿಳಿದು ಅಲ್ಲಿ ಮಹಾಲಿಂಗವಿರುವುದೆಂದು ಭಾವಿಸುತ್ತಾರೆ. ಇದೇ ರುಂಡ ಮುಂಡಗಳ ಸಂಯೋಗದ ನರಗ್ರಂಥಿಯ ಸ್ಥಳವು. ಇದು ಮಧ್ಯಹೃದಯವೆಂದೂ ಜ್ಞಾನೇಂದ್ರಿಯಗಳ ಭೋಗತೃಪ್ತಿಯ ಆನಂದವು ಇಲ್ಲಿ ನಡೆವುದು, ಇದೇ ಮಹಾಲಿಂಗ ತೃಪ್ತಿ ಎಂದೂ ತಿಳಿಯುತ್ತಾರೆ. ಮೇಲೆ ಕಂಡ ಒಂಬತ್ತು ಲಿಂಗಗಳೆಂಬ ನರಗಳ ಗ್ರಂಥಿಗಳು ಪ್ರತ್ಯೇಕವಾಗಿ ತಲೆಯಲ್ಲಿ ಇರಲಿಕ್ಕೇ ಬೇಕು. ಆದುದರಿಂದ ತಲೆಯು ಶರೀರದ ಎಲ್ಲಾ ಭಾಗಗಳಿಗೂ ಮುಖ್ಯವಾದುದಾಗಿದೆ. ಹೀಗೆ ಈ ಲಿಂಗಗಳ ಮೂಲರೂಪ (ಚೈತನ್ಯ ವಸ್ತು ಜೀವವುಳ್ಳವು)ಗಳನ್ನೆಲ್ಲಾ ನವೀನ ಶೋಧನಕಾರರು ಪರಿಶೋಧಿಸಿ ಕಂಡುಹಿಡಿಯಬೇಕಾಗಿದೆ. ಈಗಿನವರು ಇನ್ನೂ ಪರಿಶೋಧಿಸಿ ಕಂಡುಹಿಡಿಯುತ್ತಾ ಇರುವ ವಿಷಯಗಳನ್ನು ಪೂರ್ವಿಕ ವೀರಶೈವರು ತಿಳಿದಿದ್ದರೆಂದು ಯೋಚಿಸುವ ನಾವು ಅವರ ಅನುಭಾವವು ಬಹಳ ದೊಡ್ಡದೆಂದು ಆಶ್ಚರ್ಯಪಡಬೇಕಾಗಿದೆಯಲ್ಲವೇ ?

(ಸಂ. ೪೪)

# ಸುರಾಪಾನ

ಸಾರಾಯಿ ಹೆಂಡ ಕುಡಿಯುವುದನ್ನು ತಪ್ಪಿಸಿ ಕುಡುಕರನ್ನು ಉದ್ಧರಿಸಬೇಕೆಂದು ಈಗಿನ ರಾಷ್ಟ್ರೀಯ ರಾಜ್ಯಾಡಳಿತವು ಪ್ರಯತ್ನಮಾಡುತ್ತಾ ಇರುವುದು ಸರಿಯಷ್ಟೆ. ಇದು ಉತ್ತಮವೆಂಬುದನ್ನು ತೋರಿಸುವುದಕ್ಕೆ ೧-೧೨-೪೬ರ 'ಹರಿಜನ' ಪತ್ರಿಕೆಯಲ್ಲಿ ಪ್ರಕಟವಾದ ವಿಷಯಗಳಲ್ಲಿ ಒಂದೆರಡನ್ನು ಇಲ್ಲಿ ಕೊಡಲಾಗಿದೆ.

(17) In the tug of war between life and death, drink pulls on the grave-yard side.

(18) If the drink habit would be eradicated from the nation this court might close its doors at any rate for the greater part of the time.

Lord Gorell
President of English Diverse Court

ಇವುಗಳ ಅಭಿಪ್ರಾಯ: ಜೀವಕ್ಕೂ ಮರಣಕ್ಕೂ ಪರಸ್ಪರ ಪ್ಯಾಜ್ಯ ಬಂದಾಗ ಕುಡಿತವು ಸ್ಮಶಾನ (ಮರಣ)ದ ಕಡೆಗೆ ಎಳೆಯುತ್ತದೆ.

ಜನಾಂಗದಲ್ಲಿ ಕುಡಿತದ ನಡೆವಳಿಕೆಯನ್ನು ನಿರ್ಮೂಲ ಮಾಡಿದರೆ ಈ ಕೋರ್ಟು ಬಹಳ ಹೊತ್ತು ಮುಚ್ಚಲ್ಪಡಬಹುದು.

(ಇಂಗ್ಲಿಷರ ವಿವಾಹ ವಿಚ್ಛೇದನ ನ್ಯಾಯಸ್ಥಾನದ ಅಧ್ಯಕ್ಷ)

ಇವುಗಳಿಂದ ಕುಡಿತವನ್ನು ನಿಲ್ಲಿಸುವುದು ಒಳ್ಳೆಯದೆಂದು ವ್ಯಕ್ತವಾಗುತ್ತದೆ. ಈ ದೆಸೆಯಿಂದ ಈಗ ಮದ್ಯದ ಅಂಗಡಿಗಳನ್ನು ಮುಚ್ಚುವುದು ಕೆಲವು ಕಡೆ ನಡೆದಿದೆ.

ಕೆಲವರು ಸಭ್ಯರು ಈಚಲು ಗಿಡದಿಂದ "ನೀರಾ" ಎಂಬುದಾಗಿ ತಿಳಿಯ ಹಾಲನು ತೆಗೆದು ಪಾನೀಯಕ್ಕಾಗಿ ಉಪಯೋಗಿಸುವರು. ಇದರಲ್ಲಿಯೂ ಸ್ವಲ್ಪಮಟ್ಟಿಗೆ ಮಾದಕದ ಅಂಶವಿರಬಹುದು. ಇದರ ನಿರೋಧಕ್ಕಾಗಿ ಯಾವ ನಿಯಮವು ಏರ್ಪಟ್ಟಿದೆ ಯೆಂಬುದು ತಿಳಿದಿಲ್ಲ. ಈ 'ನೀರಾ'ವಲ್ಲಿ ಕ್ಷಯರೋಗವನ್ನು ಗುಣಪಡಿಸುವ ಲಕ್ಷಣ ವಿದೆ ಎಂದು ಕೆಲವರು ಹೇಳುತ್ತಾರೆ. ಇದು ಇನ್ನೂ ಯಾವ ಯಾವ ಒಳ್ಳೆಯ ಕೆಲಸ

ಗಳಿಗೆ ಉಪಯೋಗವಾಗುವುದೆಂಬುದನ್ನು ಶಾಸ್ತ್ರಜ್ಞರು ಶೋಧಿಸಬೇಕಾಗಿದೆ. ತಾಳೆಯ ರಸದಿಂದ ಬೆಲ್ಲವಾಗುವುದು ಪ್ರಸಿದ್ಧವಿದೆ.

ರಾಜಕೀಯವಾಗಲೀ ಸ್ವಂತವಾಗಲೀ ಇರತಕ್ಕ ಈಚಲು ಮತ್ತು ತಾಳೆಯ ಮರಗಳ ಹತೋಟಿಯು ರಾಜ್ಯಾಡಳಿತಕ್ಕೆ ಒಳಪಟ್ಟಿದ್ದರೆ ಸಂಪೂರ್ಣವಾಗಿ ಪಾನನಿರೋಧಕ್ಕೆ ಅನುಕೂಲವಾಗುತ್ತದೆ. ವಿಶೇಷ ಶೋಧನೆಯಿಂದ ಅವುಗಳ ಸದುಪಯೋಗವನ್ನು ಕಂಡುಹಿಡಿಯಬಹುದಾಗಿದೆ. ಕೆಲವು ಕಡೆಗೆ ಈಚಲು ಮರಗಳನ್ನು ಕತ್ತರಿಸಿ ಹಾಕಿಬಿಡಬೇಕೆಂದು ಯೋಚಿಸುತ್ತಾರೆ ಎಂದು ತಿಳಿಯಬಂದಿದೆ. ದೈವದತ್ತವಾದ ವಸ್ತುವಿನ ಸದುಪಯೋಗವನ್ನು ಸಾಧ್ಯವಾದಷ್ಟು ಶೋಧಿಸಿ ಕಂಡುಹಿಡಿಯುವುದು ಒಳ್ಳೆಯದಲ್ಲವೇ ?

(ಸಂ. ೬೦-೬೧)

# ಭಿಕ್ಷೆ ಬೇಡುವುದು

ಭೀತಿಯನ್ನು ಹೋಗಲಾಡಿಸುವುದು ಭಿಕ್ಷೆ ಎಂದು ಕೆಲವರು ಅರ್ಥ ಮಾಡಿಕೊಂಡು ನಮಗೆ ಹಸಿವಿನ ಭೀತಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಭಿಕ್ಷೆ ಬೇಡುವುದು ಉತ್ತಮವೆಂದು ಧನಧಾನ್ಯದ ಭಿಕ್ಷೆ ಆಹಾರದ ಭಿಕ್ಷೆಗಾಗಿ ಹೊರಡುತ್ತಾರೆ. 'ಕೊಡು' ಎಂದು ಬೇಡುವವನಿಗೆ ಇಲ್ಲ ಎನ್ನಬಾರದು ಎಂಬುದು ಹಿಂದೂ ದೇಶದ ಪೂರ್ವಾಚಾರವೆಂದು ತಿಳಿದು ಅವರಿಗೆ ಭಿಕ್ಷೆ ಕೊಡುವವರೂ ಈಗಲೂ ಅನೇಕರಿದ್ದಾರೆ. ಆದರೆ ಭಿಕ್ಷೆಯು ಯಾರಿಗಾಗಿ ಏರ್ಪಟ್ಟಿದೆ ಎಂದು ಯೋಚಿಸುವವರು ಬಹಳ ಕಡಿಮೆ. ಈಗ ಪಡಿತರದ ಧಾನ್ಯವನ್ನು ಪಡೆದು ಜೀವಿಸುವ ಕಾಲ. ದೇಶವಲ್ಲಿನ ಆಹಾರ ಸಾಮಗ್ರಿಯು ಮನುಷ್ಯರಿಗೆ ಸಾಕಾಗುವಷ್ಟು ಇಲ್ಲ ಎಂಬ ಲೆಖ್ಖಾಚಾರವನ್ನು ಇಟ್ಟುಕೊಂಡೇ ಪಡಿತರವು ಏರ್ಪಟ್ಟಿದೆ. ಅಂಗವಿಹೀನರು, ರೋಗಿಷ್ಠರು, ದುಡಿಯಲಾರದ ಸ್ಥಿತಿಯಲ್ಲಿ ಇರುವ ಅನಾಥ ವೃದ್ಧರು ಬಾಲಕರೇ ಮುಂತಾದವರು ಭಿಕ್ಷೆಯನ್ನು ಈ ಕಾಲದಲ್ಲಿಯೂ ಬೇಡುವುದು ವಿಹಿತವಾದುದೇ ಆಗಿರುತ್ತದೆ. ಕೈಕಾಲು ಗಟ್ಟಿಯಾಗಿ ಇರುವವರೂ ಕೆಲಸ ಮಾಡತಕ್ಕ ಶಕ್ತಿಯುಳ್ಳವರೂ, ತರುಣರೂ, ಯುವಕರೂ ತಮ್ಮ ಉದ್ಯೋಗವು ಭಿಕ್ಷವೆಂಬುದಾಗಿ ತಿಳಿದು ಭಿಕ್ಷೆಗೆ ಬರುವವರೂ ಈಗಲೂ ಬಹಳವಾಗಿ ಇದ್ದಾರೆ. ಹೀಗಾಗಿ ಬೇಡುವುದೂ ಒಂದು ಉದ್ಯೋಗವೆಂದು ತಿಳಿದಿರುವಿಕೆಯೇ ಹೆಚ್ಚಾಗಿದೆ.

ಪೂರ್ವಿಕರು ಇಂತಹ ಅಭಿಪ್ರಾಯವನ್ನಿಟ್ಟುಕೊಂಡು ಬೇಡುವುದಕ್ಕೆ ಅವಕಾಶವನ್ನು ಕೊಟ್ಟಿಲ್ಲ. 'ಕೊಡು' ಎಂದು ಬೇಡುವುದು ದರಿದ್ರತೆ ಎಂದೂ ಅದು ಪಾಪದ ಕೆಲಸವೆಂದೂ ಅವರು ಮೊದಲು ಬೋಧಿಸಿದರು, ನಿಜಗುಣ ಶಿವಯೋಗಿಗಳು ನನಗೆ ಪ್ರಾಣವು ಹೋದರೂ 'ಕೊಡು' ಎಂಬ ಎರಡಕ್ಷರಗಳನ್ನು ಉಪಯೋಗಿಸದೆ ಇರುವ ಪರಾಕ್ರಮವನ್ನು ಕೊಡು ಎಂಬುದಾಗಿ ಶಂಭುಲಿಂಗವನ್ನು ಬೇಡಿಕೊಂಡಿದ್ದಾನೆ. ಇದಲ್ಲದೆ ಶಿವಶರಣರು ಕಾಯಕಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿರುವರೇ ಹೊರತು ಭಿಕ್ಷೆಗೆ ಕೊಟ್ಟಿಲ್ಲ. ಪರರಿಗೆ ಉಪಕಾರವನ್ನು ಮಾಡುವುದಕ್ಕಾಗಿಯೇ (ದಾಸೋಹಂ ಭಾವದ ಕಾರ್ಯ) ಜೋಳಿಗೆಯನ್ನು ಕೊಟ್ಟಿರುತ್ತಾರೆ. ಹಸಿವಿಗೆ, ಸಂಸಾರಕ್ಕೆ ಮುಂತಾದ ಸ್ವಾರ್ಥದ ಕಾರಣಗಳಿಗೆ ಎಂದೂ ಭಿಕ್ಷೆ ಬೇಡಬಾರದು. ಈ ಅಭಿಪ್ರಾಯವನ್ನು ಮೊದಲು ಬೋಧಿಸಿ ಆಮೇಲೆ ಭಿಕ್ಷೆ ಬೇಡಲಿಕ್ಕೆ ಹಚ್ಚುತ್ತಾರೆ. ಆಗ ಅನಿವಾರ್ಯವಾಗಿ ಭಿಕ್ಷೆ ಬೇಕಾದವರು ಮಾತ್ರ ಕೇಳಬಹುದು. ಅಂತಹವರಿಗೆ ಅವಶ್ಯವಾಗಿ ಕೊಡಲೇ

ಬೇಕು ಎಂದು ಪೂರ್ವಿಕರು ವಿಧಿಸಿರುತ್ತಾರೆ. ಆದುದರಿಂದ ಭಿಕ್ಷೆ ಬೇಡುವುದು ಉದ್ಯೋಗವಲ್ಲ. ಉದ್ಯೋಗಗಳಿಲ್ಲದಾಗ ಭಿಕ್ಷೆ ಬೇಡಬೇಕು. ಈ ಕಾಲದಲ್ಲಿ ಕೆಲಸ ಗಾರರು ಸಿಕ್ಕುವುದಿಲ್ಲ ಎಂಬ ಕೂಗು ಬಹಳವಾಗಿದೆ. ಈಗ ಭಿಕ್ಷೆಯೇ ಉದ್ಯೋಗ ಎಂದು ತಿಳಿದುಕೊಂಡಿರುವ ಜನರು ಇತರ ಕೆಲಸಗಳನ್ನು ಕಷ್ಟಪಟ್ಟು ಕಲಿತು ಆ ಮಾರ್ಗವಲ್ಲಿ ಸಂಪಾದಿಸಲಿಕ್ಕೆ ಹೋಗಬೇಕು. ಆ ಸಂಪಾದನೆಯು ಭಿಕ್ಷೆಯ ಸಂಪಾದನೆ ಗಿಂತಲೂ ಹೆಚ್ಚಾಗಿಯೇ ಆಗುತ್ತದೆ. ಈಗ ಪಟ್ಟಣಗಳಲ್ಲಿ ಕೆಲವರು ಗೃಹಸ್ಥರಿಗೆ ತಮ್ಮ ಬಳಿಗೆ ಬಂದ ಭಿಕ್ಷುಕರಿಗೆ ಇಲ್ಲ ಎಂದು ಹೇಳಿ ಕಳುಹಿಸುವುದಕ್ಕೆ ಬಹಳ ಹೊತ್ತು ಖರ್ಚಾ ಗುತ್ತದೆ. ಅಷ್ಟು ಭಿಕ್ಷುಕರ ಸಂಖ್ಯೆ ಇದೆ.

"ನಾನು ಬೇಡಬಾರದು" ಎಂಬ ಪಾಠವನ್ನು ಭಿಕ್ಷುಕರು ಮೊದಲು ಕಲಿಯ ಬೇಕು. ಹಾಗೆ ಕಲಿಯದಿದ್ದರೆ ದೇಶವನ್ನು ದರಿದ್ರ ಸ್ಥಿತಿಗೆ (ಬಡತನಕ್ಕೆ) ತರಲಿಕ್ಕೆ ಅವರೇ ಕಾರಣರಾಗುತ್ತಾರೆ. ಹೀಗೆ ಕಲಿತ ಪಾಠದಂತೆ ನಡೆಯಲಿಕ್ಕೆ ಆಗದೆ ನಿರ್ವಾಹ ವಿಲ್ಲದೆ ಇರುವ ಸಂದರ್ಭ ಒದಗಿದರೆ ಆಗ ಬೇಡ ಬೇಕು.

ಕೆಲವರು ತಮ್ಮಲ್ಲಿ ರೂಪಾಯಿಗಳಿದ್ದರೂ ಕಾಸುಗಳನ್ನು ಬೇಡುವುದು, ಆಹಾರ ವಿದ್ದರೂ ಅದನ್ನು ಹೊಂದುವ ಅನುಕೂಲವಿದ್ದರೂ, ಅತ್ಯಾಸೆಯಿಂದ ಮತ್ತೂ ಬೇಡು ವುದು, ಇನ್ನೊಬ್ಬನಿಂದ ಒಂದು ಕಾಸಿನ ಸಾಮಾನನ್ನಾದರೂ ಬೇಡಿ ಪಡೆದುಕೊಂಡು ಅದೇ ದೊಡ್ಡ ಲಾಭವೆಂದು ತಿಳಿಯುವುದು ಹೀಗೆ ಮಾಡುತ್ತಾರೆ. ಈ ಕೆಲಸಗಳು ಬೇಡುವಿಕೆಯಲ್ಲಿನ ಅಧಮ ಕಾರ್ಯಗಳು.

ಎರಡು ಕಣ್ಣೂ ಕಾಣದಿರುವ (ಹುಟ್ಟುಗುರುಡ) ಆದ ಶ್ರೀ ಪಂಚಾಕ್ಷರೀ ಗವಾಯಿಗಳು ಸಂಗೀತ ವಿದ್ಯಾಭ್ಯಾಸಮಾಡಿ ೭೦–೮೦ ಬಡ ವಿದ್ಯಾರ್ಥಿಗಳಿಗೆ ಉಚಿತ ವಾಗಿ ಭೋಜನ ಮಾಡಿಸಿ ಕನ್ನಡ, ಸಂಸ್ಕೃತ, ಸಂಗೀತ ವಿದ್ಯಾಭ್ಯಾಸ ಮಾಡಿಸುವ ಶಕ್ತಿ ವಂತರಾಗಿ ಬಹಳವಾಗಿ ಕೀರ್ತಿ ಸಂಪಾದಿಸುವಲ್ಲಿ ಶಕ್ತರಾದರೆಂದಮೇಲೆ ಕಾಯಪುಷ್ಟರಾಗಿ ಬೇಡುವುದು ಎಂತಹ ಕನಿಷ್ಟ ಕಾರ್ಯ.

ಇತರ ಅಂಗವಿಹೀನರಾದವರಲ್ಲಿ ಕೆಲವರು ತಾವು ಬೇಡುವುದಕ್ಕೊಡಂಬಡದೆ ಪರೋಪಕಾರಿಗಳಾಗಿ ಪರಿಣಮಿಸಿ ಸಫಲರಾಗಿದ್ದಾರೆ.

ಇವೆಲ್ಲಾ ಸಂದರ್ಭಗಳನ್ನು ಯೋಚಿಸಿದರೆ ಇತರ ಉದ್ಯೋಗಗಳು ಸುಲಭವಾಗಿ ದೊರೆಯುತಕ್ಕ ಈ ಕಾಲದಲ್ಲಿ ಬೇಡುವ ಉದ್ಯೋಗವನ್ನು ತಾಳುವುದು ಯುಕ್ತವಲ್ಲ ಎಂಬುದು ಸ್ಪಷ್ಟಪಡುತ್ತದೆ. ಕಷ್ಟಪಟ್ಟು ಕೆಲಸಮಾಡಿ ಮೈ ಬೆವರನ್ನು ಸುರಿಸಿ ಪಡೆದ ಒಂದು ಕಾಸು, ಭಿಕ್ಷೆ ಬೇಡಿ ಪಡೆದ ಒಂದು ರೂಪಾಯಿಗಿಂತಲೂ ಉತ್ತಮವಾದುದೆಂದು ತಿಳಿಯಬೇಕು. ಒಬ್ಬ ಕವಿಯೂ ಹೀಗೆ ಹೇಳಿದ್ದಾನೆ—

*ಕಂದ ॥ ಸಾಲದೆ ಸೋಲದೆ ಪೊಡಮ- ।
ಟ್ಟೋಲೈಸದೆ ನಿಚ್ಚವಯಣಮಿಲ್ಲದೆ ತಾನಿ ।
ರ್ದಾಲಯದೊಳಿರ್ದು ಬಾಳ್ವುದೆ
ಭೂಲೋಕವನಾಳ್ವ ಸುಖದಿನಗ್ಗಳಮಲ್ತೆ ॥

ಇದರಲ್ಲಿ ಕಂಡಂತೆ ಇರುವ ಲಕ್ಷಣವು ಬರಬೇಕಾದರೆ 'ಬೇಡುವುದನ್ನು ಮೊದಲು ತಪ್ಪಿಸಬೇಕು' ಎಂಬ ವಾಕ್ಯವನ್ನು ಎಲ್ಲರೂ ಮೊದಲು ಗಟ್ಟಿಮಾಡಿಕೊಂಡು ಅದರಂತೆ ನಡೆಯಬೇಕು.

(ಸಂ. ೬೦-೬೧)

---

* ಈ ಕಂದಪದ್ಯ ಶ್ರೀ ಚನ್ನಮಲ್ಲಿಕಾರ್ಜುನರದೇ ಎಂಬುದನ್ನು ಗಮನಿಸಬೇಕು.

(—ಸಂ.)

## ನೀರುಳ್ಳಿಯು ಆಹಾರ ಜೀರ್ಣತೆಗೆ ಮಾಡುವ ಸಹಾಯ

ಹಸಿಯು ನೀರುಳ್ಳಿಯು ಜೀವನಸತ್ವ (Vitamin 'C') ಎಂಬುದಕ್ಕೆ ಅತ್ಯುತ್ತಮವಾದ ಆಧಾರವಾಗಿದೆ. ಈ ಜೀವನಸತ್ವಕ್ಕೆ ಕೆಲವು ವೇಳೆ "ವಾತತತ್ವದ ಅನ್ನಾಂಗ" ಎಂತಲೂ ಕರೆಯುತ್ತಾರೆ. ಇದು ಸ್ಕರ್ವಿ ಎಂಬ ರೋಗವನ್ನು ಬಾರವಂತೆ ತಡೆಯುತ್ತದೆ. ಇದಲ್ಲದೆ ನೀರುಳ್ಳಿಯು 'B' ಹಾಗೂ 'G' ಎಂಬ ಜೀವನಸತ್ವಗಳನ್ನು ಸಾಧಾರಣವಾಗಿ ಹೊಂದಿದೆ. B ಎಂಬ ಜಲತತ್ವ ಅನ್ನಾಂಗವು 'ಬೆರಿ ಬೆರಿ' ಎಂಬ ರೋಗವನ್ನೂ ಮತ್ತು ಪರಿವಾತವನ್ನೂ (Poly-Neuritis) ತಡೆಯುತ್ತದೆ. ಇದು ಎಲ್ಲ ವಯಸ್ಸಿನವರಿಗೂ ಉತ್ತಮವಾದ ಆರೋಗ್ಯಕ್ಕೆ ಅವಶ್ಯಕವಾದುದು ಮತ್ತು ಚರ್ಮರೋಗದ ಕಲೆಗಳಂತಿರುವ ಚುಕ್ಕೆಗಳನ್ನು ತಡೆಯುತ್ತದೆ. ನೀರುಳ್ಳಿಯಲ್ಲಿ ಅಗ್ನಿ ತತ್ವದ ಅನ್ನಾಂಗವು (Vitamin 'A') ಕಡಿಮೆಯಾಗಿದೆ. ಮೇಲಾಗಿ ಇದರಲ್ಲಿ ಕಬ್ಬಿಣದ ಅಂಶವು ಸಾಧಾರಣವಾಗಿಯೂ, ಇತರ ಖನಿಜಗಳು ಕೊಂಚವಾಗಿಯೂ ಸೇರಿಕೊಂಡಿದೆ.

ನೀರುಳ್ಳಿಯನ್ನು ತಿನ್ನಲಿಕ್ಕೆ ಸಹನೆ ಇಲ್ಲದ ಜನಗಳು ಕೆಲವರಿದ್ದಾರೆ. ಇಂಥವರಿಗೆ ತರಕಾರಿಯ ಜತೆಯಲ್ಲಿ ಸೇರಿಸಿ ಉಣಿಸಿದರೆ ಅವರಿಗೆ ಇದರ ಸಂಬಂಧದ ಕಾಹಿಲೆಯು ಬರುವುದಿಲ್ಲ. ಮೇಲಾಗಿ ಇದರಲ್ಲಿ (ನೀರುಳ್ಳಿಯಲ್ಲಿ) ಒಂದು ವಿಧದ ಎಣ್ಣೆ ಇದೆ. ಇದರಲ್ಲಿ ಗಂಧಕ ಮಿಶ್ರವಿದ್ದು, ಅಲ್ಪ ರುಚಿಕರವಾದ ವಾಸನೆಯನ್ನು ಉಂಟುಮಾಡುತ್ತದೆ. ಇದರಿಂದ ಕೆಲವು ಜನರು ಅದರ ರುಚಿಯುನ್ನು ಗ್ರಹಿಸತಕ್ಕದ್ದಲ್ಲವೆಂದು ಹೇಳುತ್ತಾರೆ. ಆಹಾರ ಪುಷ್ಟಿಯ ವೈದ್ಯನಾದ ಬ್ರಾನ್ಸನ್ ಎಂಬುವನು ಹೀಗೆ ಅಭಿಪ್ರಾಯಪಡುತ್ತಾನೆ. "ಈ ನೀರುಳ್ಳಿಯ ಎಣ್ಣೆಯು ಸ್ವಲ್ಪ ಮಟ್ಟಿಗೆ ಉಪಯೋಗಿಸಲ್ಪಟ್ಟರೆ ಹೊಟ್ಟೆಗೆ ಚೇತನ ಕೊಡತಕ್ಕದ್ದಾಗಿ ಸಾಮಾನ್ಯವಾಗಿ ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ. ಬಹಳವಾಗಿ ಉಪಯೋಗಿಸಿದರೆ, ಅದು ಹೊಟ್ಟೆಯುಬ್ಬರಕ್ಕೆ ಕಾರಣವಾಗಿದೆ. ಈ ಎಣ್ಣೆಯು ಆರಿಹೋಗುವ ಸ್ವಭಾವವುಳ್ಳದು. ಅಡಿಗೆ ಮಾಡುವಷ್ಟರಲ್ಲಿ ಕೆಲವು ಭಾಗ ಹಾರಿಹೋಗುತ್ತದೆ. ಈ ಕಾರಣದಿಂದಲೇ ಬೇಯಿಸಿದ ನೀರುಳ್ಳಿಯು ಬಹಳ ರುಚಿಕರವಾಗಿದೆ. ಅಡಿಗೆ ಮಾಡುವುದಕ್ಕಾರಂಭಿಸುವಾಗ ನೀರುಳ್ಳಿಯನ್ನು ಒಂದೆರಡು ಸಾರಿ ನೀರಿನಲ್ಲಿ ತೊಳೆಯಬೇಕು. ಹೊಸ ನೀರಿನಲ್ಲಿ ಬೇಯಿಸಲಿಕ್ಕಾರಂಭಿಸಬೇಕು. ಹೀಗೆ ಮಾಡುವುದರಿಂದ ಕೆಲವು ಜನರಿಗೆ ಸುಲಭವಾದ ಜೀರ್ಣತೆಗೆ ಸಹಾಯ ಮಾಡುತ್ತವೆ.

ಮೇಲೆ ಕಂಡಂತೆ ತೊಳೆದ ನೀರಿನಲ್ಲಿ ಸ್ವಲ್ಪ ಭಾಗ ಖನಿಜ ಸಂಬಂಧದ ಉಪ್ಪುಗಳು ಇರುತ್ತವೆ. ಇದನ್ನು ನೀರುಳ್ಳಿಯಿಂದ ಆ ನೀರು ಗ್ರಹಿಸಿಕೊಂಡಿರುತ್ತದೆ. ಇಂಥ ನೀರನ್ನು ಕಾಯಿಪಲ್ಯ, ಸಾರು ಮಾಡುವಾಗ ಉಪಯೋಗಿಸಬೇಕು.

ಒಳ್ಳೆಯ ನೀರುಳ್ಳಿಯು ಹೊಳಪಾಗಿಯೂ, ಚೊಕ್ಕಟವಾಗಿಯೂ ಇರುತ್ತವೆ. ಅದರ ಹೊರಗಿನ ಸಿಪ್ಪೆಗಳು ಒಣಗಿಕೊಂಡು ಹುರುಬರಕು ಆಗಿರುತ್ತವೆ. ದಪ್ಪ ಚಂಡುಳ್ಳ (ಬುಡ), ಎರಡು ಚಂಡುಳ್ಳ, ಹಸುರು ಮೊಳಕೆ ಹಾದಿರುವ ಹಸಿಯಾಗಿ ಬೇರಿರುವ, ಮತ್ತು ಹಸಿ ಚಂಡುಳ್ಳ ನೀರುಳ್ಳಿಗಳನ್ನು ಬಿಡಬೇಕು. ಅವು ಕೆಟ್ಟುಹೋದ ಗುರುತು. ಉತ್ತಮವಾದುವುಗಳನ್ನು ಗುರುತಿಸಲು ಬಣ್ಣವೇ ಬಹಳ ಮುಖ್ಯವಾದ ವಿಷಯವಾಗಿದೆ. ಬಿಳಿಯ ನೀರುಳ್ಳಿ ಸುಟ್ಟು ತಿನ್ನಲ್ಪಡತಕ್ಕದ್ದಾಗಿದೆ. ಒಂದೇ ಅಳತೆಯುಳ್ಳ ಸ್ವಲ್ಪ ದೊಡ್ಡದಾದ ಮಧ್ಯಮ ತರಹದ ನೀರುಳ್ಳಿಗಳು ಬೇಯಿಸಿದ ಮೇಲೆ ತಮ್ಮ ಆಕಾರವನ್ನು ಯಥಾಸ್ಥಿತಿ ಇಟ್ಟುಕೊಂಡಿರುವುದರಿಂದ ಬೇಯಿಸಲಿಕ್ಕೆ ತಕ್ಕವುಗಳಾಗಿವೆ.

ನೀರುಳ್ಳಿಯ ಸಂಬಂಧವಾದ ಈ ವಿಷಯವು ಹಿಂದೆ "Bombay chronicle" ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಪ್ರಕಟವಾದ ಸಂಗತಿ. ಇದರಿಂದ ನೀರುಳ್ಳಿಯನ್ನು ಚೆನ್ನಾಗಿ ತೊಳೆದು ಬೇಯಿಸಿ ಉಪಯೋಗಿಸುವುದು ಉತ್ತಮವೆಂದು ಸ್ಪಷ್ಟಪಡುತ್ತದೆ. ಇಂಥ ಬೇಯಿಸಿದ ನೀರುಳ್ಳಿಯು ಚರ್ಮಸಂಬಂಧದ ರೋಗಗಳನ್ನು ಪರಿಹರಿಸುವುದಾಗಿಯೂ ತಿಳಿದುಬಂದಿದೆ. ಹಸೀ ನೀರುಳ್ಳಿಯನ್ನು ಉಪಯೋಗಿಸುವುದು ಶರೀರಕ್ಕೆ ತೊಂದರೆ ಎಂಬುದು ಮೇಲಿನ ವಿಷಯಗಳಿಂದ ತಿಳಿದುಬರುತ್ತದೆ. ನೀರುಳ್ಳಿಯನ್ನು ಉಪಯೋಗಿಸುವವರು ಈ ಕಡೆಗೆ ಅವಶ್ಯವಾಗಿ ಗಮನ ಕೊಡಲಿ.

(ಸಂ. ೬೦-೬೧)

# ಅಕ್ಕಿ ಗಂಜಿಯಿಂದ ಮೊಸರು

ಬೆಂಗಳೂರಿನ ವಿಜ್ಞಾನಶಾಸ್ತ್ರ (Science) ಶೋಧನಾಲಯದವರು ಅಕ್ಕಿಯ ಗಂಜಿಯಿಂದ ಮೊಸರು ಮಾಡುವ ವಿಧಾನವನ್ನು ಕಂಡುಹಿಡಿದಿರುವಂತೆ ಪ್ರಕಟವಾಗಿದೆ. ಒಂದು ಸೇರು ಅಕ್ಕಿಯಗಂಜಿಯನ್ನು ಚೆನ್ನಾಗಿ ಕುದಿಸಿ ಒಂದುಕಡೆ ಆರಲಿಕ್ಕೆ ಇಡಬೇಕು. ಮುಕ್ಕಾಲುಸೇರು ಹಾಲನ್ನು ಚೆನ್ನಾಗಿ ಮರಳಿಸಿ, ಆರಲಿಕ್ಕೆ ಇಡಬೇಕು. ಎರಡೂ ಉಗುರುಬೆಚ್ಚಗಾದ ನಂತರ ಎರಡನ್ನೂ ಕೂಡಿಸಿ ಹೆಪ್ಪು ಹಾಕಬೇಕು. ಎರಡು ಸೇರು ಮೊಸರು ರುಚಿಕರವಾಗಿ ಗಟ್ಟಿಯಾಗಿ ಪೌಷ್ಟಿಕವಾಗಿ ಇರುವುದು ಅಗುತ್ತದೆ ಎಂದು ಕಂಡುಹಿಡಿದಿರುತ್ತಾರೆ. ಈ ಶೋಧನೆಯು ಗಂಜಿಯನ್ನು ಚೆಲ್ಲುವ ಮನೆಯವರಿಗೆ ಲಾಭಕರವಾಗಿಯೇ ಇರುವುದು. ಈ ಕಡೆಗೆ ಅವರ ಗಮನವು ಬೀಳಲಿ.

(ಸಂ. ೬೨-೬೩)

# ರಷ್ಯ ದೇಶದ ಸಮತಾವಾದವೂ ವೀರಶೈವವೂ

"ರಷ್ಯದ ಯೋಜನೆಗೆ ಮತ್ತು ಸಾಧನೆ" ಎಂಬುದೊಂದು ಕನ್ನಡ ಪುಸ್ತಕವಿದೆ. ರಾ. ವಿ. ಎಸ್. ನಾರಾಯಣರಾವ್ ಎಂಬುವರು ಅದರ ರಚನಾಕರ್ತರು. ಅದರಲ್ಲಿ ಹೇಳಲ್ಪಟ್ಟ ಪ್ರಕಾರ ರಷ್ಯ ದೇಶದ ಸಮತಾವಾದದ ರೂಪರೇಖೆಗಳ ಸ್ವಲ್ಪಭಾಗವನ್ನು ಇಲ್ಲಿ ತೋರಿಸಲಾಗಿದೆ.

ಅಪಾರವಾದ ಐಶ್ವರ್ಯವು ಒಂದೊಂದು ವ್ಯಕ್ತಿಯ ವಶವಾಗಿ ಬಂಡವಾಳ ಪ್ರಭುತ್ವವು ತಲೆಹೋರದಂತೆ ಸಮಾಜವಾದದ ಸಿದ್ಧಾಂತಕ್ಕನುಗುಣವಾಗಿ ರಷ್ಯದಲ್ಲಿ ರಾಜ್ಯಾಂಗ ವ್ಯವಸ್ಥೆಯನ್ನು ಮಾಡಿದ್ದಾರೆ. ಈ ರೀತಿ ಲೌಕಿಕದ ಪ್ರಯೋಜನಕ್ಕಾಗಿ ಏರ್ಪಡಿಸಿದ ವಿಧಾನವು ವೀರಶೈವರು ಶಿವನಲ್ಲಿ ಭಕ್ತಿಯನ್ನು ತೋರಿಸುವುದಕ್ಕಾಗಿ ಪಾರಮಾರ್ಥಿಕವಾಗಿ ಏರ್ಪಡಿಸಿಕೊಂಡ ಆಚರಣೆಯ ವಿಧಾನಕ್ಕೆ ಸರಿದೂಗುವ ಅಂಶಗಳನ್ನೂ ಇಲ್ಲಿ ಒಂದಕ್ಕೊಂದು ಹೋಲಿಸಿ ಇರುತ್ತದೆ.

೧) ರಷ್ಯದೇಶದ ರಾಜ್ಯಭಾರದ ಸಂಯುಕ್ತ ಸಂಸ್ಥಾನಕ್ಕೆ Union of Soviet Socialist Republic ಅಥವಾ ಸಂಕುಚಿತ ರೂಪದಲ್ಲಿ ಸೋವಿಯಟ್ ರಿಪಬ್ಲಿಕ್ ಎಂದು ಕರೆಯುತ್ತಾರೆ. ಬಂಡವಾಳಗಾರರು ಆಡಳಿತ ಮಾಡುವ ಪದ್ಧತಿಯನ್ನು ಬುಡಸಹಿತ ಕಿತ್ತುಹಾಕಿ ಸಾಮಾನ್ಯ ಕೆಲಸಗಾರರಿಗೆ (Labour Party) ಆಡಳಿತ ಮಾಡುವ ಸಮಾಜವಾದದ ಸಿದ್ಧಾಂತವನ್ನು ಆಚರಣೆಗೆ ತರಲು ಟೊಂಕಕಟ್ಟಿ ನಿಂತಿರುವ ರಾಷ್ಟ್ರವು ಇಡೀ ಪ್ರಪಂಚದಲ್ಲಿ ರಷ್ಯದೇಶವೊಂದೇ ಆಗಿದೆ.

**ವೀರಶೈವ :** ಪ್ರತಿಯೊಬ್ಬನೂ ಸಂಪಾದಿಸಿದುದು ಸಮಾಜದ ಎಲ್ಲರಿಗೂ ಹಂಚಲ್ಪಡಬೇಕೆಂಬ ಮತ್ತು ಎಲ್ಲರಿಗೂ ಸ್ವಾತಂತ್ರ್ಯವಿರಬೇಕೆಂಬ ವ್ಯವಸ್ಥೆಯುಳ್ಳ ಧರ್ಮವು ಇಡೀ ಪ್ರಪಂಚಕ್ಕೆ ವೀರಶೈವವೊಂದೇ ಆಗಿದೆ.

೨) ರಷ್ಯದೇಶದಲ್ಲಿ ಭೂಮಿಯು ಸರಕಾರದ ವಶವಾಗಿ ಇದೆ. ಒಂದಂಗುಲ ಭೂಮಿಯನ್ನೂ ರೈತರು ತನ್ನದೆನ್ನುವಂತಿಲ್ಲ.

**ವೀರಶೈವ :** ಲಿಂಗ (ಶಿವ) ಮುಖವೇ ಜಂಗಮ ಎಂಬುದಾಗಿ ಜಂಗಮಕ್ಕೆ ತನ್ನ ದ್ರವ್ಯ, ವಾಹನ, ಅಲಂಕಾರ (ಒಡವೆ), ವಸ್ತ್ರ ಮೊದಲಾದವುಗಳೆಲ್ಲವನ್ನೂ ಒಪ್ಪಿಸಬೇಕು. (ಶತಕತ್ರಯ-ಶಿವಾಧವಶತಕ ಪದ್ಯ ೧೩) ಇದು ವೀರಶೈವರು ನಡೆಯಬೇಕಾದ ಧರ್ಮ ಮಾರ್ಗದ ಆರು ಸ್ಥಳಗಳಲ್ಲಿ ೧ನೆಯದಾದ ಭಕ್ತಸ್ಥಲದ ಕೆಲಸ.

ಹೊನ್ನು, ಹೆಣ್ಣು, ಮಣ್ಣುಗಳು ಮೂರು ಮಲಗಳ ರೂಪಗಳೆಂದೂ ಸ್ವಾರ್ಥಕ್ಕಾಗಿ ಇವುಗಳೆಲ್ಲವೆಂದೂ ಸ್ವಾರ್ಥಕ್ಕಾಗಿವೆ ಎಂಬ ಭಾವನೆಯನ್ನು ತ್ಯಾಗಮಾಡಬೇಕೆಂದೂ

ಗುರು ಲಿಂಗ ಜಂಗಮ ಸೇವೆಗಾಗಿಯೇ ಇವು ಉಂಟೆಂದೂ ಅನೇಕ ಶಿವಶರಣರ ವಚನಗಳಿವೆ.

೩) **'ಕೊಲ್ಖೋಜ್'** ಎಂಬ ಖಾಸಗೀ ಸಮಷ್ಟಿ (ಸಾಮೂಹಿಕ) ಕ್ಷೇತ್ರ ಮತ್ತು ಸೋವ್ಖೋಜ್ ಎಂಬ ಸರಕಾರದ ವ್ಯವಸಾಯ ಕ್ಷೇತ್ರ, ಎಂಬುವ ೨ ವಿಭಾಗಗಳು, ರಷ್ಯ ದೇಶದ ಜಮೀನುಗಳಲ್ಲಿ ವಿಂಗಡಿಸಲ್ಪಟ್ಟಿದೆ. ಯಂತ್ರಾಲಯಗಳಲ್ಲಿ ಕೆಲಸ ಮಾಡು ವವರ ವಿನಾ ಉಳಿದವರೆಲ್ಲರೂ ಈ ಕ್ಷೇತ್ರಗಳಲ್ಲಿ ವ್ಯವಸಾಯ ಮಾಡಬೇಕು.

೧) ಭೂಮಿಯಿಂದ ಉತ್ಪನ್ನವಾದ ಕಾಳು, ಹಾಲು, ಬೆಣ್ಣೆ, ಗೋಧನ– ಇವು ಗಳಲ್ಲಿ ನಿರ್ದಿಷ್ಟ ಭಾಗವನ್ನು ಮೊದಲೇ ಸರಕಾರವು ಗೊತ್ತುಮಾಡಿದ ದರದಲ್ಲಿ ಕಂದಾಯ ರೂಪವಾಗಿ ಸರ್ಕಾರಕ್ಕೆ ಸಲ್ಲಿಸಬೇಕು.

೨) ಮುಂದಿನ ಸಾಲಿಗೆ ಬೇಕಾಗುವ ಬಿತ್ತನೆ, ಗೊಬ್ಬರ, ದನಕರುಗಳ ಮೇವು ಅಕಸ್ಮಾತ್ ಸಂಭವಿಸುವ ಸಂಕಟಗಳಿಂದ ಪಾರಾಗಲು ವಿಮೆಯ ಕಂತು ಇವುಗಳನ್ನು ಸಲ್ಲಿಸಿದ ಮೇಲೆ,

೩) ಉಳಿದುದನ್ನು ಸಾಮೂಹಿಕ ಕ್ಷೇತ್ರದ ಸದಸ್ಯರಲ್ಲಿ ಕ್ಷೇತ್ರಕ್ಕಾಗಿ ಮಾಡಿ ರುವ ದುಡಿಮೆ, ಮತ್ತು ಅವರ ಅವಶ್ಯಕತೆಗನುಸಾರವಾಗಿ ಹಂಚಲಾಗುವುದು. ಒಬ್ಬ ವ್ಯಕ್ತಿ ಒಂದು ದಿನವಲ್ಲಿ ಎಷ್ಟು ಉಪಯುಕ್ತ ಕೆಲಸಮಾಡುತ್ತಾನೆ ಎಂಬುದೇ ದುಡಿ ಮೆಯ ಅಳತೆ. ಹೀಗೆ ವರ್ಷದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ದುಡಿಮೆ ಎಷ್ಟು ? ಸಾಮೂ ಹಿಕ ಕ್ಷೇತ್ರಕ್ಕೆ ಅವನಿಂದ ಎಷ್ಟು ಪ್ರಯೋಜನ ? ಎಂಬುದನ್ನು ಪರಿಗಣಿಸಿ ಪ್ರತಿ ಯೊಬ್ಬನಿಗೂ ಪ್ರತಿಫಲ ದೊರೆಯುತ್ತದೆ. ಕೊಲ್ಖೋಜ್‌ಗಳ ಮೇಲು ವಿಚಾರಗಳಿಗೆ ಸಂಬಳ ದೊರೆಯುತ್ತದೆ. ಜೊತೆಗೆ ಅವರ ಕುಟುಂಬಕ್ಕೆ ಬೇಕಾಗುವಷ್ಟು ದವಸವೂ ದೊರೆಯುತ್ತದೆ. ಕಳೆದುಳಿವ ದವಸ ಧಾನ್ಯ ಕಾಳುಕಡ್ಡಿ ಇವುಗಳು ಕೋ-ಆಪರೇಟಿವ್ ಸಂಸ್ಥೆಗಳ ಮೂಲಕ ವಾರಾಟವಾಗುತ್ತವೆ. ಧಾನ್ಯ ಧನರೂಪದಲ್ಲಿ ಬರುವ ಲಾಭದಲ್ಲಿ ಶೇಕಡಾ ೧೦ ಭಾಗ ಕಾಯಂ ಆದ ರಿಜರ್ವ್‌ಫಂಡ ಎಂಬ ಆಪದ್ಧನ (ಮೀಸಲು) ವಾಗಿ ಇಡಲ್ಪಡುವುದು.

ವೀರಶೈವ: ವ್ಯವಸಾಯ, ವ್ಯಾಪಾರ ಮೊದಲಾದುವುಗಳನ್ನು ಇತರರಂತೆ ತನ್ನ ಅಥವಾ ತನ್ನ ಸಂಸಾರದ ಪೋಷಣೆಗಾಗಿ ಶಿವಭಕ್ತನು ಮಾಡುವುದಿಲ್ಲ. ಭಕ್ತಿ ಸಂಭವ ವಾದ ಎಂದರೆ ಜಂಗಮಕ್ಕೆ ಅರ್ಪಣವಾಡುವ ಭಕ್ತಿ ಕಾಯಕ ಎಂಬುದಾಗಿ ಕೆಲಸವನ್ನು ಮಾಡುತ್ತಾನೆ. ಇದೂ ಭಕ್ತಸ್ಥಲದ ಧರ್ಮ. (ಶಿವಾವಲ್ಲಭ ಶತಕ ೬೨, ೬೩ನೆಯ ಪದ್ಯಗಳನ್ನು ನೋಡಿರಿ.)

೪) ವ್ಯಾಪಾರದ ಮತ್ತು ಕೈಗಾರಿಕೆಯ ವಿಷಯದಲ್ಲಿ ಸೋವಿಯಟ್ ಸರ್ಕಾರವು ಹೀಗೆ ವಿಧಿಸಿ ಇದೆ.

ಪ್ರಥಮ ಸೂತ್ರ: ಖಾಸಗೀ ಮಾಲೀಕತ್ವವಿಲ್ಲ.

ದ್ವಿತೀಯ ಸೂತ್ರ: ಉತ್ಪಾದನೆಯು ಲಾಭಕ್ಕಲ್ಲ ವಿನಿಯೋಗಕ್ಕಾಗಿ.

ಮೂರನೆಯ ಸೂತ್ರ: ಉತ್ಪಾದನೆಗೆ ನಿಯತ ಮಿತಿಯಿಲ್ಲ. ಈ ಸೂತ್ರಗಳನ್ನನುಸರಿಸಿ ಲಾಭ ಸಂಪಾದಿಸದಂತೆಯೂ, ಗಂಟು ಕಟ್ಟದಂತೆಯೂ, ವ್ಯಾಪಾರದಲ್ಲಿ ಪೈಪೋಟಿ ತಲೆದೋರದಂತೆಯೂ ಯೋಗ್ಯ ವ್ಯವಸ್ಥೆ ಮಾಡಿದೆ. ತನ್ನ ಹಾಗೂ ದೇಶದ ಆರ್ಥಿಕ ಪದ್ಧತಿಯನ್ನು ವ್ಯವಸ್ಥೆಗೊಳಿಸಿದೆ. ವ್ಯಕ್ತಿಯಂತೂ ಹಣ ಶೇಖರಿಸುವಂತಿಲ್ಲ. ಆಸ್ತಿ ಮಾಡುವಂತಿಲ್ಲ.

**ವೀರಶೈವ**—ಮೇಲೆ ವ್ಯವಸಾಯದ ವಿಷಯದಲ್ಲಿ ಹೇಳುವಾಗ ಶಿವಭಕ್ತನು ಜಂಗಮಕ್ಕೆ ಅರ್ಪಿಸುವ ಭಕ್ತಿ ಕಾಯಕವನ್ನು ಮಾಡುತ್ತಾನೆಂದು ಹೇಳಿ ಇದೆ. ವ್ಯಾಪಾರದ ವಿಷಯದಲ್ಲಿಯೂ ಹಾಗೆಯೇ. ಮೇಲೆ ಸೂಚಿಸಿದ ಪದ್ಯಗಳನ್ನೇ ಇಲ್ಲಿಕೊಡಲಾಗಿದೆ.

೬೭. ವಾಣಿಜ್ಯಂ, ಕೃಷಿಸೇವೆ ಯಾಚ್ಞೆಯೆಸಿಪೀದುಷ್ಕರ್ಮಮಂ ಮಾಳ್ಪನೇ ।
ಜಾಣಂ ಶ್ರೀ ಶಿವಭಕ್ತನುದ್ಧತನುದಾರಂ ಭಕ್ತಿಸತ್ಕರ್ಮನಿ ।
ರ್ವಾಣ್ಯೈ ಕಾಶ್ರಿತನಾತ್ಮ ಪೋಷಣ ನಿಮಿತ್ತಂ ಮರ್ತ್ಯರಂ ತಕ್ಕಟಾ
ಮಾಣಾಮಾತದು ಬೇಡ ಭಕ್ತನ ಸಮಾನಾಢ್ಯಂ ಶಿವಾವಲ್ಲಭಾ ॥

೬೩. ಭವಿಗಳ್ ಮಾಳ್ಪವೊಲಾತಮಾಳ್ಪನೆ ಬಿಡಾ ಯಾಚ್ನಾನ್ಯಸೇವಾಕೃಷಿ ।
ವ್ಯವಹಾರಂಗಳನಕ್ಕಟಾ ಪರಮಭಕ್ತಂ ಮಾಳ್ಪೊಡಂ ಭಕ್ತಿ ಸಂ
ಭವ ಸತ್ಕಾಯಕಮಾಗಿ ಮಾಳ್ಪನದರಿಂದಂ ಜೀವಿಪಂ ಭಕ್ತಿಯಿಂ
ದವೆ ತಾಂ ಜೀವಿಪನೈಸೆ ಭಕ್ತಿಚರಿತಂ ಭಕ್ತಂ ಶಿವಾವಲ್ಲಭಾ.

ಹೀಗೆ ಭಕ್ತಿಕಾಯಕವೆಂಬುದಾಗಿ ವ್ಯಾಪಾರಾದಿಗಳನ್ನು ಮಾಡಿ ಜಂಗಮಕ್ಕೆ ಅರ್ಪಿಸುವನೆಂಬುದಕ್ಕೆ ಶಿವಾಧವಶತಕದ ೧೩ನೆಯ ಪದ್ಯವು ಹೀಗೆ ಹೇಳುತ್ತದೆ.

ಕಿಂಕರ ಭಾವವಂ ಬಲಿದು ಲಿಂಗಮುಖಂ ಚರಲಿಂಗವೆಂದು ನಿಃ ।
ಶಂಕತೆಯಿಂ ಸುವರ್ಣ ವಸನಾನ್ನಪುರಸ್ಸರವಸ್ತುವಾಹನಾ
ಲಂಕರಣಂಗಳಂ ಸಲೆಸಮರ್ಪಿಸಿ ವೀರಶಿವಾಗವೋಕ್ತಚಿ ।
ಹ್ನಾಂಕಿತರಾದವರ್ಗೆ ಮಣಿವಂತುಟೆ ಭಕ್ತಿಪದಂಶಿವಾಧವಾ ॥

ರಷ್ಯಾ ಸರ್ಕಾರವು ವ್ಯಕ್ತಿಯು ಹಣವನ್ನು ಶೇಖರಿಸದಂತೆ, ಆಸ್ತಿ ಮಾಡದಂತೆ ಹೇಗೆ ವಿಧಾಯಕ ಮಾಡಿದೆಯೋ ಹಾಗೆ ವೀರಶೈವ ಧರ್ಮವು ಭಕ್ತನಲ್ಲಿ ಇರತಕ್ಕ ಸರ್ವಸ್ವವನ್ನೂ ಜಂಗಮನಿಗೆ ಅರ್ಪಿಸಬೇಕೆಂದು ವಿಧಿಸಿ ಇದೆ. ಸೋವಿಯಟ್ ಹೇಗೆ ವ್ಯಕ್ತಿಗಳನ್ನು ರಕ್ಷಿಸುವುದಕ್ಕೆ ಏರ್ಪಾಡು ಮಾಡಿದೆಯೋ ಹಾಗೆ ಜಂಗಮವೂ ವ್ಯಕ್ತಿಗಳ ಊಟ ಮೊದಲಾದುದಕ್ಕೆ ಏರ್ಪಾಡು ಮಾಡಬೇಕೆಂದು ವಿಧಿ ಇದೆ. ಇದಕ್ಕಾಗಿ ಪ್ರತಿಯೊಂದು ಮಠದಲ್ಲಿಯೂ ದಾಸೋಹಂ (ದಾಸೋಹ) ಎಂಬುದಾಗಿ ಬಂದ ಭಕ್ತರಿಗೆ ಪ್ರತಿದಿನವೂ ಊಟ ಮಾಡಿಸುವ ಪದ್ಧತಿಯು ಈಗಲೂ ರೂಢಿಯಲ್ಲಿ ಇದೆ. ಕೆಲವರು ಭಕ್ತರು ತಮ್ಮ ಆಸ್ತಿಯಲ್ಲವನ್ನೂ ಜಂಗಮರಿಗೆ ಒಪ್ಪಿಸಿ ಜೀವವಿರುವವರೆಗೂ ಅಲ್ಲಿ ಕೆಲಸಮಾಡಿ ಊಟ ಮಾಡಿಕೊಂಡಿರುವವರು ಈಗಲೂ ಇದ್ದಾರೆ.

೫. ಭೂಮಿಯನ್ನು ರೈತರ ಸ್ವಾತಂತ್ರ್ಯದಿಂದ ತಪ್ಪಿಸುವುದು ಸೋವಿಯಟ್‌ಗೆ ಬಹುಕಷ್ಟವಾಗಿದ್ದಿತು. (ಈಗ ಎಲ್ಲವನ್ನೂ ತಮ್ಮ ಸ್ವಾಧೀನಪಡಿಸಿಕೊಂಡಿದ್ದಾರೆ. ಆಗಿನ ಕಷ್ಟದ ಕೆಲವು ದೃಶ್ಯಗಳನ್ನು ಇಲ್ಲಿ ಕೊಟ್ಟಿದೆ.)

ಇದು ನನ್ನದು, ಇದು ನನ್ನ ಜಮೀನು, ನನ್ನ ಮನೆ ಎಂದು ಹೇಳಿ ಹಿಗ್ಗುವುದು ಮಾನವ ಸ್ವಭಾವ. ಉತ್ತು, ಬಿತ್ತು, ಬೆವರುಸುರಿಸಿ ಫಲವತ್ತಾಗಿ ಮಾಡಿದರೆ ಸಾಹುಕಾರ ಕೈ ನೀಡುತ್ತಾನೆ ಭೂಮಿ ತನ್ನದೆಂದು. ಇದು ಯಾವ ನ್ಯಾಯ? ಭಗವಂತ ಮಳೆ ಕೊಡುತ್ತಾನೆ. ಬಸವಣ್ಣ ಉಳುತ್ತಾನೆ. ರೈತ ದುಡಿಯುತ್ತಾನೆ. ಆದುದರಿಂದ ಭೂಮಿ ಅವನದೇ ಆಗಬೇಕೆಂದು ರಷ್ಯದಲ್ಲಿಯೂ ರೈತರು ಅನೇಕ ಸಾರೆ ದೊಂಬಿ ಎದ್ದು ಪ್ರಾಣ ಸಹ ಕಳೆದುಕೊಂಡಿದ್ದಾರೆ, ರೈತನು ಭೂಮಿ ಮತ್ತು ಪ್ರಾಣಗಳ ಒಡೆಯನಲ್ಲ ಎಂಬ ನಿಯಮ ಅವನಿಗೆ ಬಹು ಕಠೋರವಾಗಿ ತೋರಿತು. ಸಮಷ್ಟಿ ವ್ಯವಸಾಯ ಕ್ಷೇತ್ರಗಳಲ್ಲಿ ಸೇರಿ ಕೆಲಸ ಮಾಡಲು ರೈತ ನಿರಾಕರಿಸಿದ. "ಕುಲಾಕ್ಸ್" ಎಂಬ ಶ್ರೀಮಂತ ಶ್ರೇಣಿಯ ರೈತರು ಅವರಿಗೆ ಬೆಂಬಲ, ಪ್ರಪಂಚದಲ್ಲಿ ಇದುವರೆಗೂ ಎಲ್ಲೂ ನಡೆಯದ ಪ್ರಯೋಗ ಆಚರಣೆಗೆ ತಂದು ಯಶಸ್ವಿ ಮಾಡಲೇಬೇಕೆಂದು ಸರ್ಕಾರ ಹಟತೊಟ್ಟಿತು. ವ್ಯವಸಾಯ ಯಾಂತ್ರೀಕರಿಸದಿದ್ದರೆ ದೇಶಕ್ಕೆ ಮೋಕ್ಷವಿಲ್ಲೆಂದು ಸೋವಿಯಟ್ ನಿರ್ಧರಿಸಿತು. ರೈತರು ಕೆಲಸ ಮಾಡುವುದಿಲ್ಲವೆಂದರೆ ಅವರಿಗೆ ಸಾಕಷ್ಟು ಎಚ್ಚರಿಕೆ ಇತ್ತು, ತರುವಾಯ ಆ ಗ್ರಾಮಸ್ಥರೆಲ್ಲರನ್ನು ದೂರ ಪ್ರದೇಶಗಳಿಗೆ ಸಾಗಿಸಿ ಅವರಿಂದ ಕೆಲಸ ತೆಗೆದುಕೊಳ್ಳುತ್ತಿದ್ದರು. ಅನೇಕರು ಸೈಬೀರಿಯಾಕ್ಕೆ ಸಾಗಿಸಲ್ಪಟ್ಟರು. ಹುಟ್ಟಿಬೆಳೆದ ಮಾತೃಭೂಮಿ ಬಿಟ್ಟು ಹೋಗಲಾರದೆ ಅನೇಕರು ದಬ್ಬಾಳಿಕೆಗೆ ತಲೆಬಾಗಿದರು. ಮಾರಿಸ್‌ಹಿಂಡಿಸ್ ಎಂಬ ರಷ್ಯದಲ್ಲಿಯೇ ನೆಲಸಿದ ಅಮೇರಿಕಾದೇಶದ ಗ್ರಂಥಕಾರನು 'ಬೇರುಸಹಿತ ಉಚ್ಚಾಟನೆಯಾದ ಮಾನವ' (ಹ್ಯುಮ್ಯಾನಿಟಿ ಆಫ್‌ರೂಟೆಡ್) 'ಕೆಂಪುರೊಟ್ಟಿ' ಎಂಬ ಅಸದೃಶವಾದ ಗ್ರಂಥಗಳಲ್ಲಿ ಎದೆಬಿರಿಯುವಂತೆ ಈ ದೃಶ್ಯ ಚಿತ್ರಿಸಿದ್ದಾನೆ. "ನಮ್ಮನ್ನು ಬಲವಂತದಿಂದ ಸಾಗಿಸಬಹುದು. ನಮ್ಮ ಹೊನ್ನಿನ ಭೂಮಿಯನ್ನೂ ಸಾಗಿಸಬಲ್ಲರೊ" ಎಂದು ದುಃಖದಿಂದ ಕಣ್ಣೀರು ಸುರಿಸುತ್ತಾ ಹೆಂಗಸರು ಮನೆಗಳನ್ನು ಬಿಡಲಾರದೆ ಬಿಡುತ್ತಿದ್ದರು. ಬಲಾತ್ಕಾರವಾಗಿ ಮೋಟಾರಿನಲ್ಲಿ ಸಾಗಿಸುತ್ತಿದ್ದ ವೃದ್ಧ ರೈತನು "ನನ್ನ ಮುದ್ದು ಭೂಮಾತೆಯನ್ನು ಒಮ್ಮೆ ಮನದಣಿಯೇ ಚುಂಬಿಸಿ, ನಮಸ್ಕರಿಸಿ ಬರುವೆನೆಂದು ಎರಡು ಕೈಗಳನ್ನು ಚಾಚಿ ರೋಧಿಸಿ ಕಂಬನಿಗರೆಯುವ ಚಿತ್ರ, ಯಾವ ಕಠೋರ ಹೃದಯವನ್ನು ತಾನೆ ಕರಗಿಸದು ? ನವಯೋಜನೆಗೆ ಮನಸೋತ 'ಕೋಮ್‌ಸೋಲ್' ಅಥವಾ ತರುಣ ಕಮ್ಯುನಿಸ್ಟ್ ಸಂಘದ ಸದಸ್ಯರು ಅನೇಕಸಾರಿ ತಮ್ಮ ಮಾತಾಪಿತೃಗಳನ್ನೇ ಸಾಮೂಹಿಕ ವ್ಯವಸಾಯದಲ್ಲಿ ಭಾಗವಹಿಸಲು ಬಲವಂತಪಡಿಸುವ ನಿದರ್ಶನ ರಷ್ಯದ ಚರಿತ್ರೆಯಲ್ಲಿ ವಿಪುಲ. ಅಧಿಕ ದನಕರುಗಳನ್ನು ಕುದುರೆಗಳನ್ನು ಇಟ್ಟುಕೊಳ್ಳುವುದು ಕಾನೂನು ಬಾಹಿರವಾದುದರಿಂದ ಸರ್ಕಾರಕ್ಕೆ ಅವುಗಳನ್ನು ಒಪ್ಪಿಸುವ ಬದಲು ಲಕ್ಷಾಂತರ ರಾಸುಗಳನ್ನು ರೈತರು ಕಡಿದು ಹಾಕಿದರು, ೧೯೩೦-೩೧ ರಲ್ಲಿ ೧೫ ಕೋಟಿ

೩೦ ಲಕ್ಷ ರಾಸುಗಳು ಕೊಲ್ಲಲ್ಪಟ್ಟವು. ಯಂತ್ರಕೊಳ್ಳಲು ಪರದೇಶಗಳಿಗೆ ಆಹಾರ ಪದಾರ್ಥಗಳನ್ನು ವಿಶೇಷವಾಗಿ ಸರ್ಕಾರ ಸಾಗಿಸಬೇಕಾಗಿತ್ತು. ಇಂತು ಈ ಸಂದರ್ಭಗಳಲ್ಲಿ ರೈತರ ಹಟ ರಾಸುಗಳ ವಧೆ ಇವುಗಳಿಂದ ವೀರಕ್ಷಾಮ ತಲೆದೋರಿ ಸೋವಿಯಟ್ ಸರ್ಕಾರ ತತ್ತರಿಸಿ ಹೋಯಿತು. ಶಾಸನಗಳನ್ನು ಸ್ವಲ್ಪ ಸಡಲಿಸಿದರೂ ನಿಷ್ಕರುಣಿ ಸ್ಟಾಲಿನ್ ಎದೆಗುಂದಲಿಲ್ಲ. "ವ್ಯಕ್ತಿ ಸಂಪಾದಿಸಿದ್ದು ಪ ಅನಿಗೇ ಸೇರಿದ್ದು; ಪವಿತ್ರವಾದುದು; ಅದರ ಅಪಹರಣ ದಂಡನಾರ್ಹ ಎಂಬುದಾದರೆ ಸಮಾಜಕ್ಕೆ ಸೇರಿದ ಸಾಮೂಹಿಕ ಐಶ್ವರ್ಯ ಮತ್ತೂ ಹಿರಿದಲ್ಲವೇ? ಸಮಾಜದ ಆಸ್ತಿ ಅಪಹರಿಸುವವನು ಸಮಾಜ ಶತ್ರು. ದೇಶದ ವೈರಿ. ಕೊಲೆಯೇ ಅವನಿಗೆ ಶಿಕ್ಷೆ" ಎಂದು ಸ್ಟಾಲಿನ್ ನಿರ್ಧರಿಸಿ ಶಾಸನದಲ್ಲಿ ಮರಣ ದಂಡನೆ ವಿಧಿಸದಿದ್ದರೂ ಇದಕ್ಕಾಗಿ ಹೊಸ ಶಾಸನವನ್ನು ಜಾರಿಗೆ ತಂದನು.

ವೀರಶೈವ—ವೀರಶೈವರಲ್ಲಿ ಧರ್ಮತಪ್ಪಿ ನಡೆದವರಿಗೆ ಸತ್ಯಾಗ್ರಹ, ಮುಷ್ಕರ ಮೊದಲಾದುವುಗಳಿಂದ ಸರಿಪಡಿಸಲು, ಅದಕ್ಕೆ ಸರಿಯಾಗದೆ ಇದ್ದರೆ ಧರ್ಮದ್ರೋಹಿ. ಯಾದವನನ್ನು ಕೊಲ್ಲಲು, 'ಗಣಾಚಾರ' ಎಂಬ ಒಂದು ಆಚಾರವು ಪಂಚಾಚಾರಗಳಲ್ಲಿ ಒಂದಾಗಿ ಇದೆ. 'ವೀರಶೈವ ಜಂಗಮರು' ಅಂತಹ ಗಣಾಚಾರವನ್ನು ಈ ಕಾಲಕ್ಕೆ ತಕ್ಕಂತೆ ಸುಲಭದಲ್ಲಿಯಾದರೂ ಆಚರಿಸುವರಲ್ಲಿ ಶಕ್ತಿವಂತರಾಗದಿದ್ದುದರಿಂದ ಲೌಕಿಕದಲ್ಲಿ ತಮ್ಮ ಮೇಲ್ಮೆಯನ್ನೆಲ್ಲಾ ಕಳೆದುಕೊಂಡು ವೀರಶೈವರು ಸಮಾಜ ಸೇವಕರಾಗುವುದರ ಬದಲಾಗಿ ಎಲ್ಲರಿಗೂ ಅಡಿಯಾಳಾಗಿರುವ ಪ್ರಸಂಗವನ್ನು ತಂದುಕೊಂಡಿದ್ದಾರೆ. (ಸತ್ತ್ವ ಇಲ್ಲದುದೇ ಇದರ ವೈಶಿಷ್ಟ್ಯ).

೬. ರಷ್ಯ ಶ್ರಮಜೀವಿಗಳ ರಾಜ್ಯ. ಇದು ನನ್ನದು, ನನ್ನ ರಾಜ್ಯ, ನನ್ನ ಸರ್ಕಾರ, ನನ್ನ ರಾಷ್ಟ್ರ ಎಂದು ಶ್ರಮಜೀವಿ ಹೆಮ್ಮೆಪಡಬಹುದಾದರೆ ಅದು ರಷ್ಯ. ರಷ್ಯದ ಕ್ರಾಂತಿ ನಡೆದುದು ಕಾರ್ಮಿಕರಿಂದ. ರಾಜ್ಯ ನಡೆಯುತ್ತಿರುವುದು ಅವರಿಗಾಗಿ ಮತ್ತು ಅವರಿಂದಲೇ. ಶ್ರಮಜೀವಿಯ ಶ್ರೇಯೋಭಿವೃದ್ಧಿಗಾಗಿ ರಷ್ಯದಲ್ಲಿ ವಿಶೇಷ ಪ್ರಯತ್ನಗಳು ನಡೆದಿವೆ. ನವೀನ ಪ್ರಯೋಗಗಳು ಸಾಮಾಜಿಕ, ಆರ್ಥಿಕರಂಗಗಳಲ್ಲಿ ಇವನಿಗಾಗಿ ನಡೆಯುತ್ತಿವೆ. ಇವನ ಏಳಿಗೆಯೇ ಸೋವಿಯಟ್ಟಿನ ಗುರಿ. ಬಂಡವಾಳಗಾರರನ್ನು ತುಳಿದು, ಬಂಡವಾಳ ಪ್ರಭುತ್ವ ಮುರಿದು ಶ್ರಮಜೀವಿಯ ಶ್ರೇಯಸ್ಸನ್ನು ಸೋವಿಯಟ್ ಸರ್ಕಾರ ಬಯಸುವುದು. ಪ್ರಪಂಚದಲ್ಲೆಲ್ಲಾ ಶ್ರಮಜೀವಿಗಳ ಪ್ರಭುತ್ವ ಸ್ಥಾಪಿಸುವುದೇ ಸಮಾಜದ ಗುರಿ. ಈ ಗುರಿ ಕಳೆದುಕೊಂಡರೆ ರಷ್ಯ ತನ್ನ ವೈಶಿಷ್ಟ್ಯವನ್ನು ಕಳೆದುಕೊಳ್ಳುತ್ತದೆ. ಸೋವಿಯಟ್ ಸರ್ಕಾರದ ಜಯಾಪಜಯ ನಿರ್ಧರಿಸುವ ತೂಗುಬೊಟ್ಟು ಕೂಲಿ, ರೈತ,—ಕೋಟ್ಯಾಧೀಶ್ವರರಲ್ಲ! ಇಂಗ್ಲೆಂಡು ಅಥವಾ ಅಮೇರಿಕೆ ನಮ್ಮಲ್ಲಿ ಇಷ್ಟು ಕೋಟ್ಯಾಧೀಶ್ವರರು ಇದ್ದಾರೆಂದು ಹೆಮ್ಮೆಪಡಬಹುದು, ರಷ್ಯಪಡಲಾರದು. ಹಣ ಸಂಗ್ರಹ ಐಶ್ವರ್ಯದ ಅಳತೆಯಲ್ಲಿ ರಷ್ಯದಲ್ಲಿ ಧನಸಂಗ್ರಹ ಧ್ಯೇಯವು ಪತನದ ಚಿಹ್ನೆ. ಶ್ರೇಯಸ್ಸಿನ ಹೆಗ್ಗುರುತಲ್ಲ.

ವೀರಶೈವ– ಸ್ವಾರ್ಥಕ್ಕಾಗಿ ಹಣ ಸಂಚಯ ಮಾಡಬೇಕೆಂಬುದೂ ಇವರಲ್ಲಿ ಇಲ್ಲ. ತನ್ನ ಮನೆಯ ಹೆಂಗಸರು ಮಕ್ಕಳನ್ನು ಕೂಡಾ ತನ್ನವರೆಂದು ತಿಳಿಯಬಾರದು. ಪರರಿಗೆ ಪ್ರಯೋಜನಕಾರಿಯಾಗಿರಬೇಕು ಎಂಬುದೇ ಮುಖ್ಯ ಕಟ್ಟಳೆ. ಈ ರೀತಿ ಬೋಧಿಸುವುದಕ್ಕಾಗಿ ಶಿವಾವಲ್ಲಭ ಶತಕದಲ್ಲಿ ೬೫ ರಿಂದ ೭೨ ರವರೆಗೆ ೮ ಪದಗಳಿವೆ.

೬೫ನೆಯ ಪದ್ಯದಲ್ಲಿ "ಪರರಂ ತನ್ನವರೆಂದು ಮಾಡದೊಡೆತಾಂ ವ್ಯರ್ಥ" ಎಂದಿದೆ.

ಪದ್ಯ ೬೬ ಪರರಾರ್ ತನ್ನವರಾರ್ ವಿವೇಚಿಸೆ ನಿಜ ಸ್ತ್ರೀ ಪುತ್ರಮಿತ್ರರ್ ಸ್ವಕೀ।
ಯರೆಮಿಕ್ಕಾದವರನ್ಯರೇ ತನಗೇ ನಾವೇನೆಂಬೆವಿಂತಪ್ಪ ಮೂ।
ರ್ಖರನನ್ಯೋಸ್ವಪರಾದಿಕಂ ಗುರುಮತಂ ದೇಹಾದಿ ತಾನನ್ಯವೆಂ।
ದಿರೆ ಮುಕ್ತಿನ್ನುಳಿದರ್ಗೆ ಪೇಳ್ವಕಥೆಯುಂ ನೋಡಾಶಿವಾವಲ್ಲಭಾ ॥

ಈ ಪದ್ಯದಿಂದ ದೇಹವೇ ತನಗೆ ಅನ್ಯವಾದುದು, ಉಳಿದವರನ್ನು ಯಾಕೆ ಹೇಳಬೇಕು ? ಅನ್ಯರೆಲ್ಲರೂ ನಮ್ಮವರೇ ಎಂದು ತಿಳಿಯಬೇಕು ಎಂಬ ಅಭಿಪ್ರಾಯವು ಹೊರಡುತ್ತದೆ.

ಪದ್ಯ ೭೦. ಶರಣಂ ತನ್ನವರನ್ಯರೆಂದು ಬಗೆಯುಂ ಸ್ತ್ರೀ ಪುತ್ರ ಮುಖ್ಯರ್ಕಳುಂ।
ಪರರುಂ ನೋಳ್ಪಡೆ ತನ್ನವರ್ ಸಕಲರುಂ ತತ್ವಾರ್ಥದಿಂ ಮತ್ತೆ ತಾಂ
ಪರಿಕಿಪ್ಪಲ್ಲಿ ಸಮಸ್ತರುಂ ಪರರಿದಕ್ಕಾರಾದೊಡೇಂ ಮಾಳ್ಪತತ್।
ಪುರುಷಾರ್ಥಂ ಸಮ ಎಲ್ಲಿ ತನ್ನ ಮನಮಲ್ಲೀವಂ ಶಿವಾವಲ್ಲಭಾ ॥

೭೨ನೆಯ ಪದ್ಯದಲ್ಲಿ ಅಹಂಕಾರ ಮಮಕಾರ (ನಾನು ನನ್ನದು) ಎಂಬಿವುಗಳನ್ನು ತತ್ (ಅವನು) ಎಂದು ಕರೆಯಲ್ಪಡುವ ಪರವಸ್ತುವಿಗೆ ಕೊಟ್ಟು ಉಳಿದುದನ್ನು ಇಟ್ಟುಕೊಂಡಿರುವವನು ಜಾಣನು. (ತಾನು ತನ್ನದೆಲ್ಲವನ್ನೂ ಕೊಟ್ಟಮೇಲೆ ತಾನು ಮಹಾದೇವ (God) ಸ್ವರೂಪನಾಗುವನೆಂದು ತಾತ್ಪರ್ಯ)

ಇದೇ ಅಭಿಪ್ರಾಯದಂತೆ ಸೋವಿಯಟ್ ಆಲೋಚಿಸಿ ಒಬ್ಬನವನ್ನು ತೆಗೆದುಕೊಳ್ಳುವುದು ದ್ರೋಹವಾದರೆ ರಾಷ್ಟ್ರದ್ದನ್ನೇ ತೆಗೆದುಕೊಳ್ಳುವವನು ರಾಷ್ಟ್ರದ್ರೋಹಿ ಎಂದು ನಿರ್ಧರಿಸಿರುವುದೆಂದು ವ್ಯಕ್ತವಾಗುತ್ತದೆ. (ಮೇಲೆ ೫ನೆಯ ಪ್ರಕರಣದಲ್ಲಿ ನೋಡಿರಿ. ರಷ್ಯ ದೇಶದಲ್ಲಿ ವ್ಯಕ್ತಿಯು ಹೇಗೆ ಹಣ ಶೇಖರಿಸುವಂತಿಲ್ಲವೋ ಹಾಗೆ ವೀರಶೈವರಲ್ಲಿಯೂ ಪರಹಿತಕ್ಕಾಗಿಯೇ ದ್ರವ್ಯವನ್ನು ವಿನಿಯೋಗ ಮಾಡಬೇಕೆಂದಿರುವುದು ಮೇಲಿನ ಪದ್ಯಗಳ ಅಭಿಪ್ರಾಯದಿಂದ ವ್ಯಕ್ತಪಡುತ್ತದೆ. ಕೆರೆಯ ಪದ್ಮರಸರ ದೀಕ್ಷಾ ಬೋಧೆಯಲ್ಲಿಯೂ ಈ ವಿಷಯವು ಚೆನ್ನಾಗಿ ವಿವರಿಸಲ್ಪಟ್ಟಿದೆ.*

(ಸಂ. ೫೮-೫೯)

* ರಷ್ಯಾದೇಶದ ಸೋವಿಯಟ್ ಸರಕಾರದ ರೀತಿ ನೀತಿಗಳು ವೀರಶೈವಧರ್ಮದ ತತ್ತ್ವಗಳಿಗೆ ಅನ್ವಯವಾಗುವುದನ್ನು ಶ್ರೀ ಚ.ರವರು ಪದೇಪದೇ ತಮ್ಮ ಪ್ರವಚನದಲ್ಲಿ ಒತ್ತಿ ಹೇಳುತ್ತಿದ್ದರು. ಇದು ಅವರ ಭಾರತರಾಷ್ಟ್ರದ ರಾಜಕೀಯ ಕ್ರಾಂತಿ ವೀರಶೈವ ಧರ್ಮತತ್ತ್ವಕ್ಕನುಗುಣವಾಗಿ ಆಗುವುದಾದರೆ ಇಂದಿನ ಸಮಸ್ಯೆಗಳೇ ಇರುತ್ತಿರಲಿಲ್ಲವೆಂಬ ಅಭಿಪ್ರಾಯದವರಾಗಿರುತ್ತಿದ್ದರು. (—ಸಂ.)

# ರಷ್ಯದಲ್ಲಿನ ಮಹಿಳೆಯರು, ಮಕ್ಕಳು, ಮದುವೆ ಮುಂತಾಗಿ ಸಾಮಾಜಿಕ ಸ್ಥಿತಿ

ಸ್ತ್ರೀ ಸರ್ವ ವಿಧದಲ್ಲಿ ಪುರುಷನಿಗೆ ಸಮ. ಪುರುಷನಿಗೆ ಇರುವಷ್ಟು ಸ್ವಾತಂತ್ರ್ಯ ಸ್ತ್ರೀಗೂ ಉಂಟು. ರಾಜಕೀಯ, ಕಾರ್ಖಾನೆ, ನೌಕರಿ, ಮನೆ, ಆಸ್ತಿಯ ಹಕ್ಕು ಎಲ್ಲದರಲ್ಲಿಯೂ ಸ್ತ್ರೀ ಸಮಾನಳು. ರಷ್ಯದಲ್ಲಿ ಇಂಗ್ಲೆಂಡಿನಲ್ಲಿ ಹೆಂಗಸರಿಗೆ ಇರುವುದಕ್ಕಿಂತ ಅಧಿಕ ಸ್ವಾತಂತ್ರ್ಯ ಮತ್ತು ಸೌಲಭ್ಯ. ಪರದೇಶದ ರಾಯಭಾರಿಯಾಗಿ ಸ್ತ್ರೀಯನ್ನು ಮೊದಲು ನೇಮಿಸಿದ ಗೌರವ ರಷ್ಯಕ್ಕೆ ಸಲ್ಲುತ್ತದೆ. ವಿಮಾನದ ಪ್ಯಾರಷೂಟ್‌ಗಳಿಂದ ಬಹಳ ಎತ್ತರದಿಂದ ಹಾರುವುದರಲ್ಲಿ ರಷ್ಯದ ಸ್ತ್ರೀಯರು ಪ್ರಥಮಸ್ಥಾನ ಪಡೆದಿರುತ್ತಾರೆ. ಸ್ತ್ರೀ ವಿಮಾನದಳ ಮೊದಲು ಸ್ಥಾಪಿತವಾದುದು ರಷ್ಯದಲ್ಲಿ. ರೈಲ್ವೆ ಎಂಜಿನ್ ನಡೆಸುವುದು, ಗಣಿಗಳಲ್ಲಿ ಕಷ್ಟಕರವಾಗಿ ಕೆಲಸ ಮಾಡುವುದು ಇವುಗಳಲ್ಲಿ ರಷ್ಯದ ಹೆಂಗಸರಿಗೇ ಪ್ರಥಮಸ್ಥಾನ. ಜಹಜುಗಳ ಕ್ಯಾಪ್ಟನ್ ಹಲವರು.

ಮಕ್ಕಳ ಪೋಷಣೆಯ ಹೊಣೆ ಸರ್ಕಾರಕ್ಕೆ ಸೇರಿದ್ದು ಪ್ರತಿಯೊಂದು ಗಿರಣಿ, ಕಾರ್ಖಾನೆ, ಎಲ್ಲೆಡೆಗಳಲ್ಲಿಯೂ ಮಕ್ಕಳ ಪೋಷಣೆಗಾಗಿ ಮಕ್ಕಳ ಮಂದಿರ ಕಿಂಡರ್ ಗಾರ್ಟನ್ ಶಾಲೆ ಹೇರಳವಾಗಿವೆ. ತಾಯಿ ತನ್ನ ಮಕ್ಕಳನ್ನು 'ಕ್ರೆಚೆ'ಯಲ್ಲಿ ನಿರ್ಭಯವಾಗಿ ಬಿಟ್ಟುಹೋಗುತ್ತಾಳೆ. ಅಲ್ಲಿ ತನ್ನ ಮನೆಗಿಂತ ಮಕ್ಕಳಿಗೆ ಸೌಲಭ್ಯ ಅಧಿಕ. ನವಕರಿಗಳಲ್ಲಿ ೧೦೦ ಕ್ಕೆ ೨೮ ರಂತೆ ಇಂಗ್ಲೆಂಡಿನ ಹೆಂಗಸರು ನಿರತರಾಗಿದ್ದಾರೆ. ರಷ್ಯದಲ್ಲಿ ೧೦೦ ಕ್ಕೆ ೩೫ ರಂತೆ ಹೆಂಗಸರಿರುತ್ತಾರೆ.

[ಮನೆಗೆಲಸ, ದಿನಗೂಲಿಯಲ್ಲಿ ೧೯೨೯ ರಲ್ಲಿ ೫೨೭೦೦೦ ಜನರಿದ್ದರು. ೧೯೩೫ ರಲ್ಲಿ ೧೯೨೦೦೦ ಮಾತ್ರ.] ಮನೆಗೆಲಸವೆಂದರೆ ಅವಮಾನ ಅಪ್ಪಣೆ ಶಿರಸಾವಹಿಸಿ ಅವರ ಮನೋಗತ ಅನುಸರಿಸಿ ನಡೆಯಬೇಕು. ಸಂಬಳ ಕಡಿಮೆ, ದುಡಿತ ಹೆಚ್ಚು, ಸ್ವಾತಂತ್ರ್ಯಕ್ಕೆ ಸಂಚಕಾರ. ಆದುದರಿಂದ ಹೆಚ್ಚು ವರಮಾನ, ಗೌರವ ಸ್ವಾತಂತ್ರ್ಯ ದೊರೆಯುವಲ್ಲಿ ಸ್ತ್ರೀ ಹೋಗುವಳು. ಮನೆಗೆಲಸಕ್ಕೆ ಹೆಂಗಸರು ದೊರೆಯುವುದೇ ಕಷ್ಟ. ಅವರವರೇ ತಮ್ಮ ಮನೆಗೆಲಸ ಮಾಡಿಕೊಳ್ಳುತ್ತಾರೆ.

ವಿವಾಹ ಪವಿತ್ರವಾದುದು. ಸಪ್ತ ಋಷಿಗಳ ಸಮ್ಮುಖ ಅಗ್ನಿಸಾಕ್ಷಿಯಾಗಿ ಮಾಡಿಕೊಂಡ ವಿವಾಹ ಮರಣ ಮಾತ್ರದಿಂದಲೇ ವಿಚ್ಛೇದನವಾದೀತು ಮುಂತಾದ ಭಾರತೀಯ ದೈವಿಕ ಭಾವನೆಗಳು ಅಲ್ಲಿ ಇಲ್ಲ. ವಿವಾಹ, ಜನನ-ಮರಣ ಇವುಗಳೆಲ್ಲ ಶರೀರಕ್ಕೆ ಸಂಬಂಧಪಟ್ಟ ಕ್ರಿಯೆಗಳು. ದೈವಿಕ ಅಥವಾ ಧಾರ್ಮಿಕವಲ್ಲ. ಧರ್ಮ, ಪುಣ್ಯ, ಪಾಪ, ಶಾಸ್ತ್ರೋಕ್ತ ಮೊದಲಾದವುಗಳ ಹೆಸರಿನಲ್ಲಿ ವಿವಾಹಕ್ಕೆ ಒಂದು ಪೂಜ್ಯ

ತೆಯ ವಾತಾವರಣ ಕಲ್ಪಿಸುವುದನ್ನು ಸೋವಿಯಟ್ ಸರ್ಕಾರ ಮನ್ನಿಸದು. ಇದರಲ್ಲಿ ಪಾರಮಾರ್ಥಿಕವೇನಿದೆ ಎಂದು ಪ್ರಶ್ನಿಸುತ್ತಾರೆ. 'ಇವನನ್ನೇ ಮದುವೆಯಾಗು, ಇಷ್ಟು ಮಕ್ಕಳನ್ನು ಪಡೆ, ಅವಳ ಕೈ ಬಿಡಬೇಡ' ಎಂದು ದೇವರ ಹೆಸರಿನಲ್ಲಿ ನಡೆಯುವ ಅತ್ಯಾಚಾರವನ್ನು ಲೆನಿನ್ ತೀಕ್ಷ್ಣವಾಗಿ ಖಂಡಿಸುತ್ತಾನೆ. ದಾಂಪತ್ಯ ಜೀವನದ ರಹಸ್ಯ ತಿಳಿಯಬೇಕು. ಚಿಕ್ಕ ವಯಸ್ಸಿನಿಂದಲೂ ದಾಂಪತ್ಯ ವಿಜ್ಞಾನ ಶಾಸ್ತ್ರೀಯವಾಗಿ ತಿಳಿಯ ಪಡಿಸಲಾಗುತ್ತದೆ. ಸ್ತ್ರೀ ಪುರುಷರು ಲಿಂಗ ವಿಚಾರಗಳನ್ನು ತೆರೆಯ ಮರೆಯಲ್ಲಿ ಪಿಸು ಪಿಸು ಮಾತನಾಡದೆ 'ಏನು ಊಟ ಆಯಿತೆ, ಮಳೆ ಆಯಿತೆ' ಎಂಬಂತೆ ಸರಳವಾಗಿ. ನಿರ್ಲಜ್ಜೆಯಿಂದ ಮಾತನಾಡುವುದು ಸರ್ವಸಾಮಾನ್ಯ. ಇದು ನಮ್ಮವರಿಗೆ ಅಸಹ್ಯ ಕಾಣಬಹುದು. ಪ್ರಯತ್ನಪೂರ್ವಕ ಹಳೆಯ ಸಂಪ್ರದಾಯವನ್ನು ಕಿತ್ತೊಗೆದು ವಿಚಾರ ಸ್ವಾತಂತ್ರ್ಯವನ್ನು ರಷ್ಯ ಸ್ಥಾಪಿಸಿದೆ. ಕಾನೂನಿನಲ್ಲಿ ಅತ್ಯಾಚಾರವೆಂಬ ಶಬ್ದವೆ ಇಲ್ಲ. ವಿವಾಹ, ಬ್ರಹ್ಮಚರ್ಯ, ವಿವಾಹ ವಿಚ್ಛೇದನ, ಪುನರ್ವಿವಾಹ ಎಲ್ಲವೂ ವ್ಯಕ್ತಿಗೆ ಸಂಬಂಧ ಪಟ್ಟದ್ದು. ವ್ಯಕ್ತಿ ಸ್ವಾತಂತ್ರ್ಯ ವಿವಾಹದ ದಾಂಪತ್ಯ ಜೀವನದ ಅಡಿಗಲ್ಲು, ಸ್ತ್ರೀ ಪುರುಷರಿಬ್ಬರಿಗೂ ಹಕ್ಕು ಬಾಧ್ಯತೆಗಳು ಸಮಾನ, ಕ್ಷಣದಲ್ಲಿ ವಿವಾಹ, ಅರೆಕ್ಷಣದಲ್ಲಿ ವಿಚ್ಛೇದನ, ಪುನಃ ವಿವಾಹವಾಗಬಹುದು. ಹೀಗೆಂದಮಾತ್ರಕ್ಕೆ ರಷ್ಯದ ಸ್ತ್ರೀ ಪುರುಷ ರೆಲ್ಲರೂ ವಿಷಯ ಲಂಪಟರು, ವ್ಯಭಿಚಾರಿಗಳು ಎಂದು ಭಾವಿಸಲಾಗದು. ದಾರಿ ತಪ್ಪಿ ನಡೆದವರಿಗೆ 'ಮಾಡಿದ್ದುಣ್ಣೋ ಮಹಾರಾಯ' ಎಂಬಂತೆ ನಿಸರ್ಗ ನಿಯಮವೇ ಯೋಗ್ಯ ಶಿಕ್ಷೆ ವಿಧಿಸುತ್ತದೆಂಬ ನಂಬಿಕೆ. ಆದುದರಿಂದ ಪ್ರತಿಯೊಬ್ಬರೂ ಆರೋಗ್ಯ ನಿಯಮ ಮನ್ನಿಸಿ ನಡೆಯುತ್ತಾರೆ. ಸ್ವಾತಂತ್ರ್ಯವಿದ್ದರೂ, ಸ್ವೇಚ್ಛಾವೃತ್ತಿಯಿಲ್ಲ, ಬೂಟಾಟಿಕೆಯ ಬ್ರಹ್ಮಚರ್ಯವೂ ಇಲ್ಲ, ಬಲವಂತಿಕೆಯ ವೈಧವ್ಯವೂ ಇಲ್ಲ, ಪರಸ್ತ್ರೀ, ಪರಪುರುಷ ಎಂಬ ಅಲೌಕಿಕ ಲಜ್ಜೆಯೂ ಇಲ್ಲ. ಯಾವ ಮನೆಯಲ್ಲಾದರೂ ಸ್ತ್ರೀ ಪುರುಷರು ನಿರ್ಭಯ. ಒಬ್ಬರ ಮನೆಗೊಬ್ಬರು ಸ್ನೇಹಿತರು ಹೋಗಿಬರುತ್ತಾರೆ. ಸಂತಾನ ನಿರೋಧ ಮತ್ತು ಗರ್ಭಸ್ರಾವ ಎರಡೂ ಕಾನೂನು ಬದ್ಧ. ಆದರೆ ಸಂತಾನ ನಿರೋಧಕ್ಕೆ ಅನವಶ್ಯಕ ಪ್ರಚಾರವೂ ಇಲ್ಲ. ಯಾರು ಬೇಕಾದರೂ ನಿಪುಣ ವೈದ್ಯರಿಂದ ಸಲಹೆ ಪಡೆಯಬಹುದು. ಉಚಿತ ಸಲಹೆ, ಉಚಿತ ಚಿಕಿತ್ಸೆ, ಗರ್ಭಸ್ರಾವಕ್ಕೆ ಕಾನೂನಿನ ಅನುಮತಿ ದೊರೆತುದು ದೇಶಾದ್ಯಂತವೂ ವಿಶೇಷವಾಗಿ ಪರದೇಶಗಳಲ್ಲಿ ಬಹಳ ಕಳ ವಳಕ್ಕೆ ಎಡೆಗೊಟ್ಟಿತು. ರಷ್ಯ ಕುಪಿತವಾಯಿತು. ವೈದ್ಯಕೀಯ ಪ್ರಪಂಚದಲ್ಲಿ ಈ ಕಾನೂನು ಕ್ರಾಂತಿಯನ್ನೇ ಮಾಡಿತು.

'ಮದುವೆ ಮಾಡಿ ನೋಡು ಮನೆ ಕಟ್ಟಿ ನೋಡು' ಎಂಬುದು ಅನುಭವದ ಮಾತು, ಮಾಡಿ ಅನುಭವಿಸಿದರೆ ತಾನೆ ಅದರ ಕಷ್ಟ ಸುಖ ತಿಳಿದೀತು. ನಮ್ಮಲ್ಲಿ ಮದುವೆ ಎಂದರೆ ಮನೆಹಾಳು ವೆಚ್ಚ, ಸಾಲ. ಆದರೆ ರಷ್ಯದಲ್ಲಿ ಮದುವೆಗೆ ಕೆಲವು ಆಣೆಗಳಿದ್ದರೆ ಸಾಕು. ವಿವಾಹದ ರಜಿಸ್ಟರಿನಲ್ಲಿ ವಿವಾಹಿತ ನೂತನ ದಂಪತಿಗಳ ಹೆಸರು ಬರೆಸಲು ಕೆಲವು ಕೂಪೆಕ್ಸ (ಆಣೆಗಳ) ಶುಲ್ಕ. ಅದರ ಮೇಲೆ ವೆಚ್ಚ ಮಾಡುವುದು

ಅವರವರ ಸಂತೋಷ. ಪುಸ್ತಕದಲ್ಲಿ ಹೆಸರು ಬರೆಸಲು ಇಪ್ಪತ್ತು ನಿಮಿಷಗಳು. ಮುಗಿಯಿತು ಲಗ್ನ. ಆದರೆ ಮದುವೆಯು ಸಡಗರ, ಸಂಭ್ರಮ ಬೇಕಲ್ಲ, ಅದಕ್ಕೂ ನೂತನ ಏರ್ಪಾಡು. ದಂಪತಿಗಳು ರಷ್ಯದ ರಾಷ್ಟ್ರೀಯ ಬಣ್ಣ ಕೆಂಪು ವಸ್ತ್ರದಿಂದ ಅಲಂಕೃತವಾದ ಹಸೆಯಮೇಲೆ ತಮ್ಮ ಕಾರ್ಖಾನೆಗಳ ಕಮಿಟಿಗಳ ಸದಸ್ಯರಿಂದ ಆವೃತ ರಾಗಿ ಕೂಡುತ್ತಾರೆ, ವಧುವಿನ ಪರ ಮಹಿಳಾ ಸಂಘದ ಸದಸ್ಯರು ಹಾಜರಿರುತ್ತಾರೆ. ಕಮಿಟಿಯ ಅಧ್ಯಕ್ಷರು ಕನ್ಯಾದಾನ ಮಾಡುತ್ತಾರೆ. ವಧೂ-ವರರಿಬ್ಬರೂ ತಮ್ಮ ಕಾರ್ಯಾಲಯಗಳಲ್ಲಿ ಒಮ್ಮನಸ್ಸಿನಿಂದ ಕೆಲಸ ಮಾಡುವುದಾಗಿ ಪ್ರಮಾಣಮಾಡುತ್ತಾರೆ. ಭಾಷಣ, ಸಂಗೀತ, ಉಪಹಾರ, ಮುಗಿಯಿತು ಮದುವೆ. ಹುಟ್ಟಿದ ಹಸುಳೆಗೆ 'ಲೆಂಟ್ರೋಜಿನ' 'ರೆಂ' 'ಇರ' ಎಂದರೆ ಕ್ರಾಂತಿ, ಲೆನಿನ್, ನವಯುಗ ಇವರುಗಳ ಸ್ಮರಣಾರ್ಥ ನಾಮಕರಣವಾಗುತ್ತದೆ. ಬೇಕಾದರೆ ದಂಪತಿಗಳೂ ಹೆಸರನ್ನು ಬದಲಾಯಿಸಿ ಕೊಳ್ಳಬಹುದು.

ವಿವಾಹ ವಯಸ್ಸು ವರನಿಗೆ ೧೮, ಕನ್ಯೆಗೆ ೧೬. ಅದಕ್ಕಿಂತ ಕಡಿಮೆ ವಯಸ್ಸಿಗೆ ಕನ್ಯಾ-ವರರ ಲಗ್ನ ಕಾನೂನು ಬಾಹಿರ, ಶಿಕ್ಷಾರ್ಹ. ಏಕಪತ್ನೀವ್ರತವೇ ಆಚರಣೆಯಲ್ಲಿದೆ. ಮೊದಲನೆಯ ವಿವಾಹ ಮುಚ್ಚಿಟ್ಟು, ಎರಡನೆಯ ವಿವಾಹವಾಗುವುದು, ಕ್ರಿಮಿನಲ್ ಅಪರಾಧ. ಬುದ್ಧಿ ಸ್ವಾಧೀನವಿಲ್ಲದವರು ವಿವಾಹವಾಗಲಾರರು. ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಸಹೋದರ ಸಹೋದರಿಯರು ತಮ್ಮಲ್ಲಿ ವಿವಾಹ ಮಾಡಿಕೊಳ್ಳರು. ಮದುವೆಗೆ ಮುಂಚಿತವಾಗಿಯೇ ಮಗುವಾಗಿದ್ದರೂ ಅಥವಾ ಮದುವೆಯ ಕಾಲದಲ್ಲಿ ವಧುವು ಗರ್ಭಿಣಿಯಾಗಿದ್ದರೂ ಸರಿ, ಮದುವೆಯಾಗಬಹುದು.

(ಸಂ. ೫೮–೫೯)

# ವಿವಾಹ ವಿಚ್ಛೇದನ

ವಿವಾಹವಾಗುವುದು ಎಷ್ಟು ಸುಲಭವೋ ವಿಚ್ಛೇದನವಾಗುವುದೂ ಅಷ್ಟೇ ಸುಲಭ. ವಿಚ್ಛೇದನಕ್ಕೆ ಕಾರಣ ಕೊಡಬೇಕಾದ್ದಿಲ್ಲ. ಒಬ್ಬರ ಮೇಲೊಬ್ಬರು ಅಪರಾಧ ಹೊರಿಸಿ ತಪ್ಪು ಸಾಬೀತ್ ಮಾಡಬೇಕಾಗಿಲ್ಲ. ಅತ್ಯಾಚಾರ ಎಂಬ ಪದಪ್ರಯೋಗವೇ ರಷ್ಯದ ನೂತನ ಧರ್ಮಶಾಸ್ತ್ರದಲ್ಲಿ ಇಲ್ಲ. ನಾವಿಬ್ಬರೂ ದಂಪತಿಗಳಾಗಿರಲು ಇಚ್ಛಿಸುವುದಿಲ್ಲ ಎಂದು ಗಂಡ ಹೆಂಡಿರೇ, ರಜಿಸ್ಟ್ರೇಷನ್ ಆಫೀಸಿನಲ್ಲಿ ತಿಳಿಸಿದರೆ ಸಾಕು ವಿಚ್ಛೇದನವಾಗುತ್ತೆ. ಇಡೀ ಪ್ರಪಂಚದಲ್ಲಿ ಯಾವ ಧರ್ಮ ಶಾಸ್ತ್ರದಲ್ಲಿಯೂ ಇಷ್ಟು ಸುಲಭವಿಲ್ಲ, ವಿವಾಹ ವಿಚ್ಛೇದನ ಗಂಡನಿಗೆ ಹೆಂಡತಿಯನ್ನು ತೊರೆಯಲು ಎಷ್ಟು ಸ್ವಾತಂತ್ರ್ಯವಿದೆಯೋ, ಹೆಂಡತಿಗೂ ಅಷ್ಟೇ ಸ್ವಾತಂತ್ರ್ಯ. ಮಕ್ಕಳಾಗಿದ್ದಲ್ಲಿ ಮಾತ್ರ ವಿಚ್ಛೇದನವು ಕೋರ್ಟಿನ ಸಮ್ಮುಖದಲ್ಲಿ ನಡೆಯಬೇಕು. ಮಗುವಿನ ಪೋಷಣೆಯ ಹೊಣೆ ನಿರ್ಧರಿಸುವುದಕ್ಕಾಗಿ, ಅಷ್ಟೆ. ನ್ಯಾಯಾಸ್ಥಾನಗಳಾದರೂ ಏನು ? ಟ್ರೇಡ್ ಯೂನಿಯನ್ ಮತ್ತು ಸೋವಿಯಟ್‌ನಿಂದ ಚುನಾಯಿತ ಸ್ತ್ರೀ ಪುರುಷರ ಸಮಿತಿ. ಪುರುಷ ತನ್ನ ವರಮಾನದಲ್ಲಿ ಮೂರನೆಯ ಅಥವಾ ನಾಲ್ಕನೇ ಒಂದು ಭಾಗ ವಿಚ್ಛೇದಿತ ಸ್ತ್ರೀ ಮತ್ತು ಮಕ್ಕಳ ಪೋಷಣೆಗೆ ಕೊಡಬೇಕು. ಮಕ್ಕಳು ಸಾಮಾನ್ಯವಾಗಿ ತಾಯಿಯ ಬಳಿಯೇ ಬೆಳೆಯುತ್ತಾರೆ. ಮಕ್ಕಳನ್ನು ಶಿಶುವಿಹಾರಗಳಲ್ಲಿ ಬಿಟ್ಟು ಪೋಷಣೆಯ ವೆಚ್ಚ ಕೊಟ್ಟರೂ ಆಯಿತು. ವಿವಾಹವಿಲ್ಲದೆ ಗರ್ಭಿಣಿಯರಾದರೆ, ಪ್ರಸವವಾಗುವ ಮೂರು ತಿಂಗಳ ಮುಂಚೆ ಇಂತಹವನೇ ಮಗುವಿನ ತಂದೆ ಎಂದು ನ್ಯಾಯಾಸ್ಥಾನಕ್ಕೆ ಆತನ ಹೆಸರು ತಿಳಿಸಬೇಕು. ಇದಕ್ಕೆ ವಿರುದ್ಧ ಎರಡು ವಾರಗಳಲ್ಲಿ ಆತನು ಈ ಮಗುವಿನ ತಂದೆಯಲ್ಲವೆಂದು ರುಜುವಾತ್ ಮಾಡಬೇಕು. ಹಾಗೆ ಮಾಡದಿದ್ದಲ್ಲಿ ಅವನೇ ತಂದೆಯೆಂದು ಭಾವಿಸಲಾಗುತ್ತೆ. 'ಅಲಿಮೆಂಟಾ' ಅಥವಾ ಪೋಷಣೆ ದ್ರವ್ಯ ಅವನೇ ಸಲ್ಲಿಸಬೇಕು. ದ್ವಿತೀಯ ವಿವಾಹ ಮಾಡಿಕೊಳ್ಳುವ ಹೆಂಗಸು ಸಹ, ಮೊದಲನೆಯ ವಿವಾಹದಿಂದ ಹುಟ್ಟಿದ ಮಕ್ಕಳ ಪೋಷಣೆಯ ವೆಚ್ಚ, ಆ ಮಕ್ಕಳ ತಂದೆಗೆ–ಅವಳು ಸಂಪಾದನೆ ಮಾಡುತ್ತಿದ್ದರೆ–ಕೊಡಬೇಕು. ಮಕ್ಕಳ ಪೋಷಣೆಗೆ ಸರ್ಕಾರ ಎಷ್ಟು ಗಮನಕೊಡುತ್ತದೆ ಎಂದು ಇದರಿಂದ ತಿಳಿಯಬಹುದು. ಅವಿವಾಹಿತರ ಕೂಡಿಕೆಯಿಂದ ಜನನವಾದ ಮಕ್ಕಳಿಗೆ ವಿವಾಹಿತ ದಂಪತಿಗಳಿಗೆ ಹುಟ್ಟುವ ಮಕ್ಕಳಿಗಿರುವ ಸರ್ವ ಹಕ್ಕು, ಬಾಧ್ಯತೆಗಳೂ ಪೌರಸ್ವಾತಂತ್ರ್ಯ ಅಧಿಕಾರಗಳೂ ಉಂಟು. ಅದಕ್ಕೆ ಯಾವ ದೋಷವೂ ಕಳಂಕವೂ ತಾಗದು. ತಾಯಿಗೂ ಕಳಂಕವಿಲ್ಲ. ದಾರಿ ತಪ್ಪಿ ನಡೆವ ಗಂಡ-ಹೆಂಗಸರ ಪಾಪವನ್ನು ಮಕ್ಕಳ ಮೇಲೆ ಹೊರಿಸದು ರಷ್ಯ.

ಹದಿನಾಲ್ಕು ವಯಸ್ಸಾಗುತ್ತಲೇ ಈ ಮಕ್ಕಳು ತಮ್ಮ ಧರ್ಮ ಹೆಸರು, ಪೌರತ್ವ ಇವುಗಳನ್ನು ತಾವೇ ನಿರ್ಧರಿಸಿಕೊಳ್ಳಲು ಬಾಧ್ಯರು; ಅಥವಾ ಮಾತಾಪಿತೃಗಳು ನಿರ್ಧರಿಸಬಹುದು, ಇಲ್ಲವೇ ನ್ಯಾಯಾಸ್ಥಾನವು ತೀರ್ಮಾನಿಸುತ್ತದೆ. ತಂದೆ ತಾಯಿಗಳು ಮಗುವಿನ ಧರ್ಮವನ್ನು ನಿಷ್ಕರ್ಷಿಸಲಾರದೆ ಹೋದರೆ, ಆ ಮಕ್ಕಳು ನಾಸ್ತಿಕರೆಂದು ತೀರ್ಮಾನಿಸಲಾಗುವುದು.

ಪತಿ ಊರನ್ನು ಬಿಟ್ಟು ಹೋದರೆ, ಪತ್ನಿ ಅವನನ್ನು ಹಿಂಬಾಲಿಸಬೇಕಾದ್ದಿಲ್ಲ. ಮದುವೆಯ ವಿಚ್ಛೇದನಕ್ಕೆ ಇಷ್ಟೇ ಕಾರಣ ಸಾಕು! ಕಾರಣವೇ ಬೇಕಿಲ್ಲವಲ್ಲ. ಮದುವೆಯ ಪರಿಣಾಮವಾಗಿ ಯಾರೂ ತಮ್ಮ ಪೌರ ಸ್ವಾತಂತ್ರ್ಯ ಕಳೆದುಕೊಳ್ಳುವುದಿಲ್ಲ.

ಮಕ್ಕಳನ್ನು ದತ್ತು ಮಾಡಿಕೊಳ್ಳುವಂತಿಲ್ಲ ರಷ್ಯದಲ್ಲಿ. ಪರದಲ್ಲಿ ವಿಶ್ವಾಸವಿಲ್ಲ. ಪಿಂಡ ಪ್ರಧಾನವಿಲ್ಲ. ಆಸ್ತಿ ಮಾಡುವಂತಿಲ್ಲ, ಇನ್ನು ದತ್ತು ಪುತ್ರರೇಕೆ? ಗಂಡು ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ಸಮಭಾಗ. ಸಮಾಭಾಗ ನ್ಯಾಯವಾಗದ ವಿಶೇಷ ಸಂದರ್ಭಗಳಲ್ಲಿ ಮರಣಪತ್ರ ಬರೆಸಲು ಆಸ್ಪದವಿದೆ.

ಯುಕ್ರೇನ್ ಪ್ರಾಂತ್ಯದಲ್ಲಿ ವಧು ಅಥವಾ ವರನಿಲ್ಲದೆ ಮದುವೆಯೂ ಆಗಬಹುದು, ವಿಚ್ಛೇದವೂ ಆಗಬಹುದು. ಇಂತಹವನನ್ನು ಅಥವಾ ಇಂತಹವಳನ್ನು ಮದುವೆಯಾಗಿದ್ದೇನೆ ಅಥವಾ ತೊರೆದಿದ್ದೇನೆ ಎಂದು ನೋಟಿಸ್ ಕೊಟ್ಟರೆ ಆಯಿತು. ನೋಟೀಸ್ ಪಡೆದವರು ಒಂದು ತಿಂಗಳೊಳಗಾಗಿ ಉತ್ತರ ಕೊಡಬೇಕು. ಇಲ್ಲದಿದ್ದರೆ ನೋಟೀಸ್ ಆಚರಣೆಗೆ ಬರುತ್ತದೆ. (ಯುಕ್ರೇನ್ ಪ್ರಾಂತ್ಯದ ವಿವಾಹ ಕಾನೂನು, ೧೩೩ ನೆಯ ನಿಬಂಧನೆ) ನಾನು ಅವನ ಹೆಂಡತಿಯಲ್ಲವೆಂದು ಉತ್ತರ ಕೊಡದಿದ್ದರೆ, ಕೋರ್ಟು ವಿವಾಹ ಖಾಯಂ ಮಾಡುತ್ತೆ.

ಸ್ತ್ರೀ ಪುರುಷರಲ್ಲಿ ಅನ್ಯೋನ್ಯ ಅನುರಾಗವಿಲ್ಲದಿದ್ದಲ್ಲಿ ಬಲೋದ್ಬಂಧದಿಂದ ಒಟ್ಟಿಗೆ, ಗಂಡ ಹೆಂಡರಾಗಿ ಬಾಳುವಂತೆ ಮಾಡಲಾಗದು ಎಂಬುದೇ ಸೋವಿಯಟ್ಟಿನ ವಿವಾಹಶಾಸ್ತ್ರದ ಮುಖ್ಯ ಉದ್ದೇಶ. ಬಡತನದ ಸಂಕಟ, ಆರ್ಥಿಕ ಬಿಕ್ಕಟ್ಟು, ಸಂಪ್ರದಾಯದ ಕಟ್ಟು ಇವು ಪ್ರೇಮಾನುರಾಗ ಹುಟ್ಟಿಸಲಾರವು. ಹೃದಯಾಂತರಾಳದಿಂದ ಪ್ರೇಮ ಹುಟ್ಟಿಸಬೇಕು. ಅದೇ ನಿಜ ಪ್ರೇಮ ಎಂಬುದೇ ಅವರ ತತ್ವ.

ವಿವಾಹ ವಿಚ್ಛೇದನ ಬಹಳ ಸುಲಭವಾದುದರಿಂದ ವಿವಾಹದ ಪಾವಿತ್ರ್ಯತೆಯೇ ತೊಲಗಿ ಹೋಗುವುದು, ಸಂಸಾರ ಒಡೆದು ಹೋಗುವುದು. ದಾಂಪತ್ಯ ಜೀವನ ಕೇವಲ ಕ್ಷಣಿಕವಾಗುವುದು. ಪುರುಷರೂ ಸ್ತ್ರೀಯರೂ ಪತಂಗ ಹುಳುವಿನಂತೆ ಜೇನು ನೊಣದಂತೆ ಮಧುವಿನ ಸವಿ ನೋಡಲು ಪುಷ್ಪದಿಂದ ಪುಷ್ಪಕ್ಕೆ ಹಾರುವಂತೆ ಜೀವನ ಸುಖ ಸವಿಯಲು ತಲ್ಲಣಿಸುತ್ತಾರೆ, ಎಂದು ಅಪಾದನೆ ಮಾಡಲಾಗುವುದು. ಇತರ ರಾಷ್ಟ್ರಗಳಲ್ಲಿ ಶಾಸನಕಟ್ಟು, ಸಂಪ್ರದಾಯ ಭಯ, ಸಮಾಜದ ಭೀತಿ ಮೊದಲಾದ ಬಾಹ್ಯ ಬಂಧನ, ಪ್ರೇಮ ಬಂಧನ ಭದ್ರಪಡಿಸಲು ಪ್ರಯತ್ನಿಸಿದರೆ ಇಂತಹ ಯಾವ ಕುಟಿಲ ಬಲಾತ್ಕಾರಗಳೂ ಇಲ್ಲದೆ, ಸಹಜ ಅನುರಾಗ ಬೆಳೆದು ದಾಂಪತ್ಯ ಜೀವನ ಸುಖ

ಮಯವಾಗಬೇಕೆಂಬುದೇ ರಷ್ಯದ ಆಶಯ. ಪ್ರಯೋಗ ಫಲ ಬಹಳ ಆಶಾದಾಯಕ ವಾಗಿ ತೋರಿಬರುತ್ತದೆ.

ದಾಂಪತ್ಯ ವಿಚ್ಛೇದ ನಿಯಮಗಳು ಸಡಿಲವಾಗುತ್ತಲೇ ಮೊದಲು ಮೊದಲು ವಿಚ್ಛೇದವು ಸುರಿಮಳೆಯಾಗಿ ಹೋಯಿತು. ೧೯೩೬ ರಲ್ಲಿ ಮಾಸ್ಕೋದಲ್ಲಿ ೧೬,೮೧೨ ದಾಂಪತ್ಯ ವಿಚ್ಛೇದಗಳಾದವು. ಆದರೆ ಸ್ವಲ್ಪ ದಿನಗಳಲ್ಲಿಯೇ ಉನ್ಮತ್ತಸಾಗರ ಪ್ರಶಾಂತ ವಾಯಿತು. ೧೯೩೬ ರಲ್ಲಿಯೇ ಅರ್ಧಕ್ಕೆ ಇಳಿಯಿತು—ದಾಂಪತ್ಯ ವಿಚ್ಛೇದನ ಸಂಖ್ಯೆ ೮೯೧೧—ಈಗ ಇನ್ನೂ ಬಹಳ ಕಡಿಮೆಯಾಗಿರುತ್ತದೆ. ಏಕಪತಿ, ಏಕಪತ್ನಿ ಇದರಲ್ಲಿಯೇ ವಿಶ್ವಾಸ ಬೆಳೆಯುತ್ತಿದೆ. ವಿವಾಹ ವಿಚ್ಛೇದನವಾದರೂ ಮಕ್ಕಳ ಪೋಷಣೆಗೆ ಬಹಳ ಹಣ ಕೊಡಬೇಕಾಗುವುದರಿಂದ, ವಿಚ್ಛೇದವನ್ನು ಸುಲಭವಾಗಿ ಯಾರೂ ಅಪೇಕ್ಷಿಸರು. ಯುವತಿಯರಲ್ಲಿ ಸರಸವಾಡುತ್ತಿದ್ದರೆ, ತನ್ನ ಅರಿವಿಲ್ಲದೆ ಹುಟ್ಟುವ ಮಕ್ಕಳಿಗೂ ತಾನು ಹೊಣೆಗಾರನಾಗಬೇಕಾದೀತಲ್ಲ ಎಂಬ ಭೀತಿಯಿಂದ ಯುವಕನು ಎಚ್ಚರನಾಗಿರುತ್ತಾನೆ. ಮಕ್ಕಳ ಹಿತ ರಕ್ಷಣೆಯ ದೃಷ್ಟಿಯಿಂದ ಯಾರ ಮೇಲಾದರಾಗಲೀ ಹೊಣೆ ಹೊರಿಸಲು ಸರ್ಕಾರವು ಹಿಂಜರಿಯುವುದಿಲ್ಲ. ಇದೊಂದೇ ಸಾಕಷ್ಟು 'ಹುಷಾರ್' ಕೊಡುವುದಾಗಿದೆ.

ವೀರಶೈವ : ಹೆಂಗಸರಿಗೂ, ಗಂಡಸರಿಗೂ ಸಮಾನವಾದ ಸ್ವಾತಂತ್ರ್ಯವು ವೀರ ಶೈವರಲ್ಲಿ ಇದೆ. ಗಂಡನಿಗಿಂತ ಹೆಂಡತಿ ಕಡಿಮೆಯ ಧಾರ್ಮಿಕ ಹಕ್ಕು ಉಳ್ಳವಳು ಎಂಬ ಭಾವನೆಯೂ ಇಲ್ಲ. ಪುರುಷನಿಗೆ ಆದ ಧಾರ್ಮಿಕ ಸಂಸ್ಕಾರವೇ ಸ್ತ್ರೀಗೂ ಆಗುತ್ತದೆ. ಸ್ತ್ರೀಯೂ ಕಾಯಕವನ್ನು ಮಾಡಬೇಕೆಂಬ ನಿಯಮವಿದೆ. ಚಿಕ್ಕಂದಿನಲ್ಲಿಯೇ ಮದುವೆ ಮಾಡಬೇಕೆಂಬ ನಿಯಮವಿಲ್ಲ. ಶಾರದಾಬಿಲ್ ಪ್ರಕಾರ ಕನ್ಯೆಗೆ ೧೪ ವರ್ಷ ಆದರೂ ಆಗಲಿ ಮೇಲೆ ಇನ್ನೂ ೧೪ ಆದರೂ ಆಮೇಲೆ ಮದುವೆಯಾಗಬಹುದು. ಮದುವೆ ಯಾಗುವಲ್ಲಿ ಸ್ತ್ರೀಗೆ ಸ್ವಾತಂತ್ರ್ಯವೂ ಇದೆ. ಗಂಡನು ಸತ್ತುಹೋದರೆ ಹೆಂಡತಿಗೆ ಕೊರತೆ ಬರುವುದಿಲ್ಲ. ವಿಧವೆಯೂ ವಂದನೀಯಳು ಎಂದು ಪಾರಮೇಶ್ವರಾಗಮ ಎಂಬ ಗ್ರಂಥವು ಹೇಳುತ್ತದೆ. ಗಂಡನು ನಷ್ಟವಾದರೆ, ಸತ್ತುಹೋದರೆ, ಸನ್ಯಾಸಿ ಯಾದರೆ, ನಪುಂಸಕನಾದರೆ ಮತಭ್ರಷ್ಟನಾದರೆ ಸ್ತ್ರೀಯು ಮತ್ತೆ ಮದುವೆಯಾಗ ಬಹುದು. ಆದರೆ ಸಂತಾನ ನಿರೋಧ, ಗರ್ಭಸ್ರಾವ ಇವುಗಳಿಗೆ ಅವಕಾಶವಿಲ್ಲ. ಮದು ವೆಯ ವೆಚ್ಚವೂ ಸುಲಭದಲ್ಲಿ ಇದೆ. ನೂರಾರು ರೂಪಾಯಿಗಳನ್ನು ಖರ್ಚುಮಾಡ ಬೇಕೆಂಬ ನಿಯಮವೂ ಇಲ್ಲ. ವರದಕ್ಷಿಣೆ ಕನ್ಯಾ ಶುಲ್ಕಗಳ ಬಾಧೆಯೂ ಇಲ್ಲ. ಗುರುವೇ ಮದುವೆ ಮಾಡಿಸುವ ಪುರೋಹಿತನು. ಒಬ್ಬ ಶಿವಶರಣರು ಸರಿಯಾದ ಆಚಾರಸ್ಥ ರನ್ನು ದೊರಕಿಸಲಾರದೆ ಅಣ್ಣತಂಗಿಯರನ್ನೇ ಮದುವೆ ಮಾಡಿಸಿದರಂತೆ. ವೀರಶೈವರು ಲೌಕಿಕರಲ್ಲ. ಪ್ರಾಕೃತಿಕರಲ್ಲ. ಆದುದರಿಂದ ಲೌಕಿಕ ಸಂಬಂಧವಾದ ಮದುವೆಯ ಕಟ್ಟು ಪಾಡುಗಳಿಗೂ ಇತರ ಲೌಕಿಕ ಕರ್ಮಗಳಿಗೂ ಒಳಪಟ್ಟವರಲ್ಲ. ಅಷ್ಟಾವರಣ ಪಂಚಾ ಚಾರಗಳಲ್ಲಿ ಕೊರತೆಯಿಲ್ಲದಿದ್ದರಾಯಿತು ಎಂಬುವರಿವರು.

ಮದುವೆ ಮುಂತಾದ ಲೌಕಿಕ ಕಾರ್ಯಗಳಲ್ಲಿ ಪಾರಮಾರ್ಥಿಕವೇನಿದೆ? ದೇಶ ಸೇವೆಯೇ ಈಶ ಸೇವೆ, ಸಮಾಜಕ್ಕಾಗಿಯೇ, ಜಂಗಮಕ್ಕಾಗಿಯೇ ನಾವು ಕೆಲಸಮಾಡುವ ವರೆಂಬ ಭಾವನೆ ಮಾತ್ರ ಇದ್ದರೆ ಸಾಕೆಂಬುವರಿವರು.

ಸೋವಿಯಟ್ಟಿನ ಮದುವೆಯ ಕಟ್ಟಳೆಗಳು ವೀರಶೈವ ಧರ್ಮಕ್ಕೆ ಚ್ಯುತಿಯನ್ನೇನೂ ತರುವುದಿಲ್ಲ. ಅಹಿಂಸೆಗೆ ಒಳಪಡದೆ ಇದ್ದರೆ ಅದು ಮಾತ್ರ ವೀರಶೈವರಿಗೆ ಬೇಕಿಲ್ಲ. ಎಷ್ಟನೆಯ ಮದುವೆಯಲ್ಲಿ ಹುಟ್ಟಿದ ಕೂಸಿಗಾದರೂ ಧಾರ್ಮಿಕದಲ್ಲಿ ಸಮಾನವಾದ ಹಕ್ಕು ಉಂಟು. ಯಾರಿಗೂ ಲಿಂಗಧಾರಣೆ ಮಾಡದೆ ಬಿಡುವಂತಿಲ್ಲ. ಅದನ್ನನುಸರಿಸಿದ ಆಚಾರಗಳು ಇದ್ದೇ ಇರುತ್ತವೆ. ಸಾಮಾಜಿಕದಲ್ಲಿಯೂ ಅವರಿಗೆ ಬಹಿಷ್ಕಾರವಿಲ್ಲ. ಕೂಸು ತಂದೆಯ ಮಗನೆಂದು ತಿಳಿಯುವುದಿಲ್ಲ. ಮಹಾದೇವನ ಮಗನೇ ಎಂದು ತಿಳಿಯುತ್ತಾರೆ. [ಕೆರೆಯ ಪದ್ಮರಸರ ದೀಕ್ಷಾ ಬೋಧೆ ನೋಡಿರಿ] ದೀಕ್ಷೆಯಾದಮೇಲಂತೂ ಗುರುವಿನ ಮಗನೇ ಆಗುತ್ತಾನೆ. (ಇವೆಲ್ಲವೂ ಹಿಂದೂ ದೇಶದ ಧರ್ಮ ಗ್ರಂಥಗಳಾದ ಉಪನಿಷತ್ತು ಆಗಮ ಇವುಗಳಲ್ಲಿ ಒಪ್ಪಲ್ಪಟ್ಟ ಧಾರ್ಮಿಕ ವಿಷಯಗಳೇ ಆಗಿವೆ.)

ರಷ್ಯ ದೇಶದಂತೆ ವೀರಶೈವರಲ್ಲಿಯೂ ದತ್ತು ಮಾಡಿಕೊಳ್ಳುವ ಅವಶ್ಯಕವಿಲ್ಲ. ಪಿಂಡ ಪ್ರಧಾನವಿಲ್ಲ. ಮರಣಪತ್ರವನ್ನು ವಿಶೇಷ ಸಂದರ್ಭಗಳಲ್ಲಿ ಬರೆದಿಡಬಹುದು, ಹಿಂದೂ ದೇಶದ ಕೆಲವರಂತೆ ವಿಧವೆಯರಿಗೆ ತಲೆಬೋಳಿಸುವುದೇ ಮುಂತಾಗಿ ವಿಕಾರ ಗೊಳಿಸುವ ಪದ್ಧತಿಯಿಲ್ಲ. ದಾಂಪತ್ಯ ವಿಚ್ಛೇದವಾಗಿ ಮತ್ತೊಬ್ಬನನ್ನು ಮದುವೆ ಯಾಗುವುದೂ ರೂಢಿಯಲ್ಲಿ ಇದೆ.

ರಷ್ಯ ದೇಶದ ಸಾಮಾಜಿಕ ಸ್ಥಿತಿಗೆ ಸರಿಬಾರದ ಒಂದೆರಡು ಅಂಶಗಳೂ ಇವೆ. ಮಗನನ್ನು ಹಡೆದ ಮೇಲೆ ಅಥವಾ ಗರ್ಭಿಣಿಯಾದ ಮೇಲೆ ಮೊದಲನೆಯ ಮದುವೆ ಯಾಗುವ ಪದ್ಧತಿ ಮಾತ್ರ ಇಲ್ಲ. ಅಹಿಂಸಾ ಪಾಲನೆಯೊಂದಿದೆ. ಇವಿಷ್ಟನ್ನು ಬಿಟ್ಟರೆ ರಷ್ಯದೇಶದ ಸಾಮಾಜಿಕ ಸ್ಥಿತಿಗೆ ಸರಿಗೂಡುವುದಕ್ಕೆ ವಿರೋಧವಾಗಿ ಏನಿರುವುದೆಂಬು ದನ್ನು ಯೋಚಿಸುವುದಕ್ಕೇ ಬಾರದಂತಾಗಿದೆ. ಒಟ್ಟಿನಲ್ಲಿ ಮದುವೆಯ ಸಂಬಂಧದ ಕಟ್ಟುಗಳ ತಿಟ್ಟುಗಳೇ ಇವರಿಗೆ ದೂರದಲ್ಲಿ ಇವೆ.

೮. ಪ್ರತಿಯೊಬ್ಬನೂ ಸಂಪಾದಿಸಿದ ಧನ ಧಾನ್ಯಗಳಲ್ಲಿ ಅವನ ಚಿಲ್ಲರೆ ಖರ್ಚಿಗೆ ತಕ್ಕಷ್ಟನ್ನು ಬಿಟ್ಟು ಉಳಿದುದೆಲ್ಲವನ್ನೂ ತನ್ನ ವಶಪಡಿಸಿಕೊಂಡ ಸರ್ಕಾರವು ಸಂಪಾದನೆ ಯನ್ನು ಒದಗಿಸಿಕೊಟ್ಟವರ ಊಟ ಉಪಚಾರ, ಕಾಹಿಲೆಗೆ ಔಷಧಿ ಮುಂತಾದವುಗಳಿಗೆ ಅನುಕೂಲಪಡಿಸಿಕೊಟ್ಟಿರುವುದೂ, ದೇಶದಲ್ಲಿ ಹುಟ್ಟಿದ ಮಕ್ಕಳೆಲ್ಲರೂ ಸರಕಾರದ ಮಕ್ಕಳೇ ಎಂದು ಭಾವಿಸಿ ಅವರಿಗೆ ವಿದ್ಯಾಭ್ಯಾಸ, ಊಟ, ವ್ಯಾಯಾಮ, ಕೈಗಾರಿಕೆ ಮುಂತಾದವುಗಳನ್ನು ಕಲ್ಪಿಸಿಕೊಟ್ಟಿರುವುದೂ ರಷ್ಯ ದೇಶದ ಒಂದು ವಿಶೇಷ ಮಹತ್ವದ ಸಂಗತಿಯಾಗಿದೆ. ಪ್ರಪಂಚದಲ್ಲಿ ಯಾವ ರಾಷ್ಟ್ರವೂ ರಾಜ್ಯವೂ ತನ್ನ ಪ್ರಜೆಗಳೆಲ್ಲರಿಗೂ ಊಟವನ್ನು ಹಾಕುತ್ತಲಿಲ್ಲ. ಈ ವೈಶಿಷ್ಟ್ಯವು ಸಮತಾವಾದದ ತಳಹದಿಯಿಂದಲೇ ಉತ್ಪನ್ನವಾದುದೆಂದು ತಿಳಿಯಬೇಕು.

ವೀರಶೈವ: ಭಕ್ತನು ತನ್ನದೆಲ್ಲವನ್ನೂ ಜಂಗಮಕ್ಕೆ ಒಪ್ಪಿಸಬೇಕೆಂದು ಭಕ್ತಸ್ಥಲದ ಆಚರಣೆಯನ್ನು ವಿಧಿಸಿದ ವೀರಶೈವವೂ ಆ ಭಕ್ತನ ಊಟಕ್ಕೆ ತಕ್ಕ ಏರ್ಪಾಡನ್ನು ಮಾಡದೆ ಬಿಟ್ಟಿಲ್ಲ. ತನ್ನಲ್ಲಿರುವುದೆಲ್ಲವನ್ನೂ ಜಂಗಮಕ್ಕೆ ಅರ್ಪಿಸಿದ ಮೇಲೆ ಅವರಿಂದ ಕೊಡಲ್ಪಡುವ ಪ್ರಸಾದವನ್ನು (ಊಟವನ್ನು) ಅನುಭವಿಸಬೇಕೆಂದು ಪ್ರಸಾದಿಯ ಸ್ಥಲದಲ್ಲಿ ವಿಧಿಸುತ್ತದೆ. ಅನೇಕ ಜಂಗಮ ಮಠಗಳಲ್ಲಿ ಈಗಲೂ ಪ್ರತಿನಿತ್ಯ ದಾಸೋಹವು [ಬಂದವರಿಗೆ ಊಟಮಾಡಿಸಿ ಕಳುಹಿಸುವುದು] ನಡೆಯುತ್ತಾ ಇದೆ. ಆದರೆ ಭಕ್ತರಿಂದ ಅವರ ಸಂಪಾದನೆ ಬರುವುದು ಮಾತ್ರ ಈ ದಾಸೋಹದ ಮಠಗಳನೇಕಗಳಲ್ಲಿ ನಿಂತು ಹೋಗಿದೆ. ಅಂತಹ ಮಠಗಳವರು ಈಗ ಪೇಚಾಟಕ್ಕೆ ಸಿಕ್ಕಿದ್ದಾರೆ. ಆದಾಯ ಕಡಿಮೆಯಾಗಿ ಖರ್ಚು ಹೆಚ್ಚಾಗಿ ತೊಂದರೆಪಡುತ್ತಿದ್ದಾರೆ. ಸಾಲವನ್ನೂ ಮಾಡಿಕೊಂಡಿದ್ದಾರೆ. ಮಠಾಧಿಪತ್ಯವೂ ಬಲು ಕಷ್ಟಕರವಾದುದೆಂದು ಅವರು ತಿಳಿದುಕೊಂಡಿದ್ದಾರೆ. ಸೋವಿಯಟ್ ಸರ್ಕಾರದಂತೆ ಭಕ್ತರ ಸಂಪಾದನೆಯನ್ನು ಶಕ್ತಿಯಿಂದ ವಸೂಲ್ಮಾಡುವ ಅವಕಾಶವಿಲ್ಲದುದೊಂದು, ಪ್ರತಿ ನಿತ್ಯವು ತಮ್ಮಲ್ಲಿಗೆ ಬರುತ್ತಿರುವ ಸೋಮಾರಿಗಳ ಹೊಟ್ಟೆ ತುಂಬಿಸಿ ಕಳುಹಿಸಬೇಕಾದುದೊಂದು, ಹೀಗಾಗಿ ಬಹಳ ಪೇಚಾಟಪಡುತ್ತಿದ್ದಾರೆ. ಕೆಲವು ಗುರು ವರ್ಗದ ಮಠಗಳೂ ಗೃಹಸ್ಥ ಮಠಗಳೂ ಹೀಗೆಯೇ ಆಗಿವೆ. ಅನೇಕ ಮಠ ಮಠಗಳವರೂ ಯಾವುದಾದರೊಂದು ಕಾಯಕವನ್ನು ಅವಲಂಬಿಸಬೇಕೆಂದು ಈಗ ಯೋಚಿಸುತ್ತಿದ್ದಾರೆ. ಕರ್ತವ್ಯದ ಲೋಪ ಉಂಟಾದರೆ ಒಳ್ಳೆಯದೂ ಕೆಟ್ಟದಾಗಿ ಪರಿಣಮಿಸಬಹುದಲ್ಲವೇ? ಈ ಪ್ರಯತ್ನದಲ್ಲಿ ಜಯಶಾಲಿಯಾದ ರಷ್ಯದಂತಹ ಸಮತಾವಾದ ತತ್ತ್ವವನ್ನು ಅವಲಂಬಿಸಿದ ವೀರಶೈವವು ಬಹಳ ಕನಿಷ್ಟ ದೆಸೆಯನ್ನು ಹೊಂದಿ ರಷ್ಯ ದೇಶದ ಎದುರಿಗೆ ನಾನೂ ನಿಮ್ಮಂತೆ ಇದ್ದೇನೆ ಎಂದು ಹೇಳುವುದಕ್ಕೆ ಕೂಡ ಶಕ್ತಿಯಿಲ್ಲದಷ್ಟು ಹೀನ ಸ್ಥಿತಿಗೆ ಬಂದಿರುವುದು ಬಹಳ ನಾಚಿಕೆಕರವಾದ ಅಂಶವಲ್ಲವೆ ?

ವೀರಶೈವರ ಲೌಕಿಕಾಚರಣೆಯ ರೀತಿಯು ಹೀಗೆ ಇದೆ: ಭಕ್ತಸ್ಥಲದಲ್ಲಿ ಭಕ್ತನಾದವನು ತನ್ನದೆಲ್ಲವನ್ನೂ ಜಂಗಮಕ್ಕೆ ಒಪ್ಪಿಸಿ ತನ್ನ ವೈರಾಗ್ಯ ಭಾವವನ್ನು ವ್ಯಕ್ತಪಡಿಸಬೇಕು. ಹೀಗೆ ತನ್ನದೆಲ್ಲವನ್ನೂ ಕೊಟ್ಟಮೇಲೆ ಅನ್ಯರ ವಸ್ತುವನ್ನು ಇವನು ಅಪೇಕ್ಷಿಸಬಹುದು ಅಥವಾ ಕದಿಯಬಹುದು ಎಂದು ಆಲೋಚಿಸಿ ಇದ್ದುದೆಲ್ಲವನ್ನೂ ಕೊಡಿಸಿ ಮಾಹೇಶ್ವರ ಸ್ಥಲಕ್ಕೆ ಕಳುಹಿಸಿದ ಕೂಡಲೇ ಅಲ್ಲಿ ಪರದ್ರವ್ಯವನ್ನು ಆಶಿಸಬೇಡ, ನಿನ್ನ ಸುಖಕ್ಕಾಗಿ ಪರರನ್ನು ಹಿಂಸಿಸಬೇಡ ಎಂಬಿವೇ ಮುಂತಾದ ಕಟ್ಟುಗಳನ್ನು ವಿಧಿಸಿತು. ತನ್ನದೆಲ್ಲವನ್ನೂ ಕೊಟ್ಟಾಯಿತು. ಇನ್ನೊಬ್ಬರದನ್ನು ಮುಟ್ಟುವಂತೆ ಇಲ್ಲ. ನನಗೇನು ಗತಿ ಎಂದು ಚಿಂತಿಸುತ್ತಿರುವವರಿಗೆ ಮುಂದೆ ಪ್ರಸಾದಿಸ್ಥಲಕ್ಕೆ ಕಳುಹಿಸಿ ಅಲ್ಲಿ ಪ್ರತಿನಿತ್ಯವೂ ಪ್ರಸಾದ (ಊಟ) ಸಿಕ್ಕುವಂತೆ ಏರ್ಪಡಿಸಿತು. ಹೀಗೆ ಪ್ರಸಾದವನ್ನುಂಡು ಅವನು ತೃಪ್ತಿಯಾಗುವಂತಾಯಿತು. ಇದಲ್ಲದೆ ಭಕ್ತರು ಕೊಟ್ಟು ಧನಧಾನ್ಯಗಳನ್ನು ಕಾಯಕವನ್ನು ಮಾಡಿ ನಷ್ಟವನ್ನು ಹೊಂದಿದ ಅಥವಾ ದುಡಿಯಲಾರದ (ಸೋಮಾರಿಗಲ್ಲ) ಭಕ್ತನಿಗೆ ಕೊಡಬೇಕೆಂಬ ಪದ್ಧತಿಯೂ ಇದೆ. ಎಷ್ಟೋ ಜಂಗಮರು

ಬಡವರಿಗೆ ಧನಧಾನ್ಯ ಮದುವೆಗಾಗಿ ಖರ್ಚು ಬಟ್ಟೆ ಮುಂತಾದವುಗಳನ್ನು ಕೊಟ್ಟಿದ್ದಾರೆ. ಈಗಲೂ ಕೊಡುತ್ತಿದ್ದಾರೆ. ಈ ಮೇರೆಗೆ ಭಕ್ತಸ್ಥಲದಲ್ಲಿಎಲ್ಲವನ್ನೂ ಜಂಗಮಕ್ಕೆ ಒಪ್ಪಿಸಬೇಕೆಂಬುದಾಗಿ ಶಿವಶರಣರಾದ ಪೊಗ್ಗೆಯ ಮಾಯಿದೇವರು ಶತಕತ್ರಯದಲ್ಲಿ ಹೇಳಿರುವುದನ್ನು ಈ ಮುಂಚೆ ಶಿವಾಧವಶತಕದ ೧೩ನೆಯ ಪದ್ಯ ಉದಾಹರಿಸಿದುವರಲ್ಲಿ ತೋರಿಸಲಾಗಿದೆ. ಅವರೇ ಮಾಹೇಶ್ವರ ಸ್ಥಲದ ಪ್ರಸಾದಿಸ್ಥಲದ ಪದ್ಯಗಳನ್ನು ಹೇಳಿರುವುದು ಹೀಗೆ—

೧೪ ಪರವಧುವಂ ಪರದ್ರವಿಣಮಂ ಪರಹಿಂಸೆಯನ್ನೆದೆ ದೂರದಿಂ
ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪಷಟ್‌ಸ್ಥಲ ಸಂಗ್ರಹಾ
ಚರಣೆಯೊಳೇಕಲಿಂಗ ನಿಜನಿಷ್ಠೆ ಸಮಾಹಿತ ಮಾದೊಡಂತದೇ
ಪರಮೇಶ್ವರ ಸ್ಥಲದ ಲಕ್ಷಣವೃತ್ತಿಪದಂ ಶಿವಾಧವಾ.

೧೫ ಲಿಂಗ ಮುಖಾಪರಣೀಯವಹ ಸರ್ವವಿಶುದ್ಧ ಪದಾರ್ಥಜಾತಮಂ
ಸ್ವಾಂಗ ವಚೋಮನಃ ಕರಣ ಕಾಯಕ ವಾಚಕ ಮಾನಸ ಕ್ರಿಯಾ
ಸಂಗತ ಸಾವಧಾನ ಸುವಿವೇಕದಿನರ್ಪಿಸಿ ತತ್‌ಪ್ರಸಾದಮಂ
ಪಿಂಗದೆ ಭೋಗಿಪಲ್ಲಿ ಬಳಿಕಾಸ್ಥಲ ಸಿದ್ಧಿದಿಟಂ ಶಿವಾಧವಾ

ಹೀಗೆ ಬಸವೇಶ್ವರಾದಿಗಳಿಂದ ಆಚರಿಸಲ್ಪಟ್ಟ ಸಮತಾವಾದದ ಅಭಿಪ್ರಾಯವು ಸುಮಾರು ೨೫ ವರ್ಷಗಳಿಂದೀಚೆಗೆ ರಷ್ಯದಲ್ಲಿ ತನ್ನಷ್ಟಕ್ಕೆ ತಾನೇ ಉತ್ಪನ್ನವಾಗಿ ಆಚರಣೆಗೂ ಬರುತ್ತದೆ. ಎಂದು ಸಿದ್ಧವಾಗಿರುವುದನ್ನು ನೋಡಿದರೆ ಮಹಾದೇವನ ಲೀಲೆಯು ಎಷ್ಟು ಅದ್ಭುತವಾದುದು ಎಂದು ಗೊತ್ತಾಗಿ ಆಶ್ಚರ್ಯಪಡಬೇಕಾಗುವುದಲ್ಲವೆ !*

(ಸಂ. ೫೮-೫೯)

* ವೀರಶೈವದ ಸಮತಾವಾದದ ತತ್ತ್ವವನ್ನು ರಷ್ಯಾ ಸಮತಾವಾದದೊಡನೆ ಹೋಲಿಸಿ ಬರೆದಿರುವ ಶ್ರೀ ಜೆ.ರವರ ಈ ವಿಚಾರಧಾರೆ ವಿಚಾರಕ್ಕೆ ಅರ್ಹವಾಗಿದೆ.

# ರಷ್ಯದೇಶದ ಧರ್ಮ (ಮತ ಸ್ವಾತಂತ್ರ್ಯ)

ರಷ್ಯ ದೇಶದಲ್ಲಿ ಈಗ ಸ್ಟಾಲಿನ್ ಎಂಬುವರು ರಾಜ್ಯಾಂಗದ ಆಡಳಿತವನ್ನು ನಡೆಸುತ್ತಿದ್ದಾರೆ. (ಕ್ರಿ.ಶ.೧೯೨೪ ರಿಂದ) ಇವರಿಗಿಂತ ಮುಂಚೆ ಲೆನಿನ್ ಎಂಬುವರಿದ್ದರು. ಇವರೇ ಈಗಿನ ಸೋವಿಯಟ್ ಪದ್ಧತಿಯನ್ನು ರಷ್ಯದಲ್ಲಿ ರೂಢಿಗೆ ತರಲು ಬಹಳವಾಗಿ ಪ್ರಯತ್ನ ಮಾಡಿದವರು. (ಸೋವಿಯಟ್ ಸ್ಥಾಪನೆ ಕ್ರಿ. ಶ. ೧೯೧೭) ಈ ಲೆನಿನ್ ಹೀಗೆ ಹೇಳಿದ್ದಾರೆ.

"ಧರ್ಮವು ಜನತೆಯ ಅಫೀಮು, ಜನತೆಯ ಮೌಢ್ಯ, ದಾಸ್ಯ, ನಾಶಕ್ಕೆಮೂಲ, ಧರ್ಮವು ಗೊಡ್ಡು ಶಿಷ್ಟಾಚಾರ, ಮೂಢನಂಬಿಕೆ. ಸುಖ ಶಾಂತಿಯು ಸ್ವರ್ಗದಲ್ಲಿ ದೊರೆಯುತ್ತದೆ ಎಂದು ತಾಳ್ಮೆಯನ್ನೂ ಕಷ್ಟಸಹಿಷ್ಣುತೆಯನ್ನೂ ಧರ್ಮವು ಜನರಲ್ಲಿ ಹುಟ್ಟಿಸುವುದು. ಮನುಷ್ಯನು ಜನನ, ಮರಣ, ರೋಗ, ರುಜಿನ ಮೊದಲಾದ ಸಹಜವಾದ ನಿಯಮಗಳನ್ನು ತಪ್ಪಿಸಬೇಕೆಂದು ಸುಮ್ಮನೆ ಹೊರಾಡುತ್ತಾ ದೇವರು, ಭೂತ, ಪಿಶಾಚಿ, ಯಂತ್ರ ಮಂತ್ರಗಳಲ್ಲಿ ತಿಳುವಳಿಕೆಯಿಲ್ಲದೆ ನಂಬಿಕೆ ಇಡುತ್ತಾರೆ. ಇಹಲೋಕದಲ್ಲಿ ದೊರೆಯದ ಸುಖವು ಪರಲೋಕದಲ್ಲಿ ಸಿಗಬಹುದೆಂದು ಸಮಾಧಾನ ಪಡೆಯುತ್ತಾನೆ. ಇದು ಬಲಹೀನರ ಮೂಢನಂಬಿಕೆ. ಈ ಮೂಢನಂಬಿಕೆಗೆ ಉತ್ತೇಜನ ಮಾಡುತ್ತಾ ಅವರ ಫಲವನ್ನೇ ಈಗ ಪಡೆಯದೆ ಇರುತ್ತಾನೆ. ದುಡಿಯುವವನ ಅಂಧ ಧರ್ಮಶ್ರದ್ಧೆಯೇ ದುಡಿಸಿಕೊಳ್ಳುವವನಿಗೆ ಒಳ್ಳೆಯ ಅವಕಾಶವನ್ನು ಉಂಟುಮಾಡುತ್ತದೆ. ಧರ್ಮವು ದೇವರ ಹೆಸರಿನಲ್ಲಿ ನಡೆಯುವ ದಬ್ಬಾಳಿಕೆ ಅದು ಮೋಸ.

"ಜನರನ್ನು ಮೋಸಗೊಳಿಸಿ ಲೂಟಿ ಹೊಡೆದು ಹಣಗಳಿಸಲು ಐಶ್ವರ್ಯವಂತರಿಗೆ ಧರ್ಮವು ಸಹಕಾರಿಯಾಗಿದೆ. "ದಾನ ಧರ್ಮ ಮಾಡಿರಿ" ಎಂದು ಧರ್ಮವು ಕೂಗಿ ಹೇಳುತ್ತದೆ. ಗಳಿಸಿವರೆ ತಾನೇ ದಾನ ಮಾಡಲಿಕ್ಕೆ ಬರುವುದು? ಆದುದರಿಂದ ದಾನ ಧರ್ಮ ಮಾಡಲು ಹೇಗಾದರು ಗಳಿಸಿದರಾಯಿತು, ನಾನು ಗಳಿಸಿದ್ದು ದಾನ ಧರ್ಮ ಮಾಡುವುದಕ್ಕಾಗಿಯೇ ಎಂದು ಪರೋಪಕಾರ ಬುದ್ಧಿಯ ಮಾತನಾಡಿ ನಟಿಸುತ್ತ ಜನರ ರಕ್ತವನ್ನು ಹೀರುವವನೂ ದಾನಶೂರ ಕರ್ಣನಾಗುವನು."

ಹೀಗೆ ಲೆನಿನ್ ಹೇಳುವುದಕ್ಕೆ ಆಧಾರವೂ ಇದ್ದಿತು. ಝಾರ್ (ರಷ್ಯ ದೇಶದ ಚಕ್ರವರ್ತಿ) ಕಾಲದಲ್ಲಿ ಕ್ರಾಂತಿಗೆ ಪೂರ್ವಭಾವಿಯಾಗಿ ಮಠಾಧಿಕಾರವು ರಾಜ್ಯಾಧಿಕಾರ ದೊಡನೆ ಬೆರೆತು ಹೋಗಿದ್ದಿತು. ಧರ್ಮದ ರಕ್ಷಣೆಯನ್ನೂ ರಾಜ್ಯವೂ ರಾಜ್ಯದ ಘನತೆಯನ್ನು ಧರ್ಮವೂ ಕಾಪಾಡಿಕೊಂಡು ಬರುತ್ತಿದ್ದುವು. ರಷ್ಯದ ಅಂಗಾಂಗಗಳಲ್ಲಿ ಚರ್ಚ್ ಪ್ರಭಾವವು ಕಾಣಬರುತ್ತಿತ್ತು. ಚರ್ಚ್ ಎಂದರೆ ಬರಿಯ ಪ್ರಾರ್ಥನಾಮಂದಿರ ದಲ್ಲಿ ಕ್ರೈಸ್ತಧರ್ಮ, ಆಚಾರ, ವಿಚಾರ ವ್ಯವಹಾರ, ಸಂಪ್ರದಾಯ, ಬಹಿಷ್ಕಾರವೈ

ಮೊದಲಾಗಿ ಪಾದ್ರಿಗಳ ಮತ್ತು ಮಠದ ಅಧಿಕಾರ ವ್ಯಾಪ್ತಿ ಇವೆಲ್ಲಾ ಚರ್ಚ್ ಎಂಬುದ ರಲ್ಲಿ ಅಡಕ. ಇದಕ್ಕೆ ಸರ್ಕಾರವೂ ಬೆದರುತ್ತದೆ. ಯಾವುದಾದರೂ ಕಾನೂನು ಆಚರಣೆ ಬರಬಾರದೆಂದು ಚರ್ಚ್ ತೀರ್ಮಾನಿಸಿದರೆ ಅದು ಬೆಳಕು ಕಾಣುವಂತೆಯೇ ಇಲ್ಲ.

ಸರ್ಕಾರವನ್ನೇ ಹೆದರಿಸುವ ಚರ್ಚ್ ಶ್ರೀಮಂತವೆಂತಲೂ ಸಾಮಾನ್ಯ ಜನರ ಮೇಲೂ ತನ್ನ ಅಧಿಕಾರವನ್ನು ನಡೆಯಿಸಿ ಹಣವನ್ನು ಸೆಳೆಯುತ್ತಿದ್ದುದು ಸಹಜ ವಾಗಿಯೇ ಇದೆ.

ವೀರಶೈವ : ಕೇವಲ ನಿರಾಕಾರನಾದ ಪರವಸ್ತುವುಂಟೆಂದು ತಿಳಿದಾಚರಿಸುವುದೇ ಮುಖ್ಯವಲ್ಲದೆ ಯಂತ್ರ, ಮಂತ್ರ, ಭೂತ, ಪಿಶಾಚಿ ಮೊದಲಾದುವುಗಳು ಉಂಟೆಂದೂ, ಅವುಗಳಿಗಾಗಿ ಹಣವನ್ನು ಖರ್ಚು ಮಾಡಬೇಕೆಂದೂ ವೀರಶೈವವು ಹೇಳುವುದಿಲ್ಲ. ದೇವನ ದಿವ್ಯ ಸ್ವರೂಪವು ತನ್ನಲ್ಲಿ (ಅಂತರಂಗ, ಬಹಿರಂಗಗಳಲ್ಲಿ) ವ್ಯಾಪಿಸಿ ಇರುವು ದೆಂದು ತಿಳಿದಿರುವುದರಿಂದ ಹೊರಗೆ ಆಡಂಬರವಾಗಿ (ಸ್ವಲ್ಪವಾಗಿಯಾದರೂ) ಖರ್ಚು ಮಾಡುವ ಯಾವ ಪದ್ಧತಿಯನ್ನೂ ಇದು ಮೂಢನಂಬಿಕೆಯಿಂದ ಅಂಗೀಕರಿಸುವುದಿಲ್ಲ. ದೇವಸ್ಥಾನ ಮೊದಲಾದವುಗಳ ಶ್ರೇಷ್ಠತೆಯನ್ನೂ ಪ್ರಯೋಜನವನ್ನೂ ಒಪ್ಪುವುದೇ ಇಲ್ಲ. ದೇಹವೇ ದೇವಾಲಯ, ಒಳಗಿರುವ ಆತ್ಮನೇ ಮಹಾದೇವ ಎಂದು ಬಸವೇಶ್ವ ರನೇ ಮೊದಲಾದ ಶರಣರು ವಚನಗಳನ್ನು ಹಾಡಿದ್ದಾರೆ. ಜನನ, ಮರಣ, ರೋಗ, ರುಜಿನಗಳಿಗಾಗಿ ಅಂಧ ಶ್ರದ್ಧೆಯಿಂದ ಖರ್ಚು ಮಾಡಬೇಕೆಂದು ಹೇಳುವುದೂ ಇಲ್ಲ.— ಮರಣವಾಗುವುದು ಮಹಾದೇವನ ಲೀಲೆ ಎಂದು ಸಂತೋಷಿಸುತ್ತಾರೆ. ಇದಕ್ಕಾಗಿ ಪ್ರತಿಕ್ರಿಯೆ ಪ್ರಕಿಯೆ ಯಾವುದೂ ಬೇಕಾಗಿಲ್ಲ. ಪರಮಾತ್ಮನನ್ನು ತನ್ನಲ್ಲಿ ನೋಡುವ ಅನುಭವಿಸುವ ಯೋಗಕ್ಕೆ ಯಾವ ಸಾಧನೆಯು ಬೇಕೋ ಅ ಸಾಧನೆ ಮತ್ತು ಅದಕ್ಕಾಗಿ ಹೊರಗಿನ ಉಪಕರಣಗಳು ಬೇಕು. ಇದಕ್ಕಾಗಿ ಹೆಚ್ಚಿನ ಖರ್ಚೂ ಇಲ್ಲ. ಯಂತ್ರ, ಮಂತ್ರ, ತೀರ್ಥಯಾತ್ರೆ ಮಾರಿ ಮಸಣಿಗಳ ಪೂಜೆ ಇವುಗಳು ಇರಕೂಡದೆಂದು ವೀರ ಶೈವವು ಸಾರಿ ಹೇಳುತ್ತದೆ. ಉರಿಯಿಂದ ಕರಗುವ ದೈವ, ಸಾಲವಾದರೆ ಮಾರಿ ಕೊಂಡು ತಿನ್ನುವ ದೈವ ಇಂತಹ ದೇವಮೂರ್ತಿಗಳನ್ನು ಖಂಡಿಸುತ್ತದೆ. ದೀಕ್ಷೆ ಮೊದಲಾದವುಗಳನ್ನು ಹೊಂದುವೆಡೆಯಲ್ಲಿಯೂ "ವಿತ್ತಶಾಠ್ಯಂ ನ ಕಾರಯೇತ್" "ಹಣದ ಖರ್ಚಿನ ಆಧಿಕ್ಯದ ಅಹಂಕಾರವನ್ನು ಮಾಡಕೂಡದು"ಎಂದು ಬೋಧಿಸುತ್ತದೆ.

೯. ಧರ್ಮ ಸಂಬಂಧದಿಂದ ಆದ ದುಷ್ಪರಿಣಾಮವನ್ನು ನೋಡಿದ ಸೋವಿ ಯಟ್ ಈ ಕೆಳಗೆ ಕಂಡಂತೆ ಕಾರ್ಯವನ್ನು ಮಾಡಿತು.

'ಮಾರ್ಕ್ಸ್' ಎಂಬುವರ ಭೌತಿಕವಾದ ತತ್ತ್ವವನ್ನು ಅನುಸರಿಸಿ ಮಠಾಧಿಕಾರವನ್ನು ರಾಜ್ಯಾಧಿಕಾರದಿಂದ ಬೇರ್ಪಡಿಸಬೇಕು. ನಾಸ್ತಿಕವಾದಕ್ಕೆ ಹೆಚ್ಚು ಪ್ರೋತ್ಸಾಹ ಕೊಡ ಬೇಕೆಂದು ತೀರ್ಮಾನಿಸಿತು. ಧರ್ಮ ಸಂಬಂಧದಿಂದ ಹಣವನ್ನು ಸೆಳೆಯುವವರು ಶೋಷಕರೆಂದು ಭಾವಿಸಿ ಶ್ರಮಜೀವಿಗಳನ್ನು ಈ ಶೋಷಕ ವರ್ಗದ ಜಾಲಗಳಿಂದ

ಬಿಡಿಸಲು, ನಾಸ್ತಿಕವಾದ ಸ್ಥಾಪಿಸಲು ವಿಜ್ಞಾನದ (Science) ಸಹಾಯದಿಂದ ಪ್ರಚಂಡ ಚಳುವಳಿಯನ್ನು ಕೈಗೊಳ್ಳುವುದೇ ತನ್ನ ಧ್ಯೇಯವೆಂದು ಕಮ್ಯುನಿಸ್ಟ್ ಪಾರ್ಟಿ ತೀರ್ಮಾನಿಸಿತು. (ನಿಯಮ ೧೩-೧೯೧೮)

ಪ್ರಾರ್ಥನಾಮಂದಿರಗಳನ್ನು ನೆಲಸಮ ಮಾಡುವುದು, ಅದರ ಆಸ್ತಿಪಾಸ್ತಿ ಸರಕಾರದ ವಶಪಡಿಸಿಕೊಳ್ಳುವುದು ಪಾದ್ರಿಗಳ ಕೊಲೆ ಮೊದಲಾದ ಅಕೃತ್ಯಗಳನ್ನು ನಡೆಯಿಸಿತು.

೧೯೨೨-೨೩ ವರ್ಷಗಳಲ್ಲಿ ಮೊದಲಿನ ಮಠಾಧಿಕಾರವನ್ನು ಒಡೆದು ತನಗೆ ಬೆಂಬಲ ಕೊಡುವ ಹೊಸ ಮಠಾಧಿಪತ್ಯವನ್ನು ಸೋವಿಯಟ್ ಸ್ಥಾಪಿಸಿತು.

೧೯೨೮ ರಿಂದ ಮಠಾಧಿಕಾರ, ಮತ, ದೇವತೆಗಳಲ್ಲಿ ನಂಬಿಕೆ(ಒಬ್ಬನೇ ದೇವನೆಂಬ ನಂಬಿಕೆ ಸಹಾ) ಈ ಭಾವನೆಗಳನ್ನು ನಾಶಮಾಡುವ ಪ್ರಯತ್ನ ಪ್ರಬಲವಾಯಿತು. ನಮ್ಮ "ದೇವ ಮಂದಿರವನ್ನು ದಯಮಾಡಿ ಕೆಡವಿರಿ" ಎಂದು ಜನರೇ ನಿರ್ಣಯಿಸು ವಂತೆ ಪ್ರೇರಿಸುವುದು.ಈ ಆಧಾರದ ಮೇಲೆ ದೇವಾಲಯವನ್ನು ನೆಲಸಮಮಾಡುವುದು, ಬೆಂಕಿ ಹಚ್ಚುವುದು, ದೇವಾಲಯದ ಗಂಟೆಗಳನ್ನು ಕೀಳಿಸುವುದೇ ಮೊದಲಾದ ಕೃತ್ಯ ಗಳು ಬಹಿರಂಗವಾಗಿ ನಡೆಯಿಸಲ್ಪಟ್ಟವು.

೧೫ ಮೇ ೧೯೩೨ ರಲ್ಲಿ ನಾಸ್ತಿಕವಾದಿಗಳು ಸಭೆ ಸೇರಿ ಧರ್ಮ ನಿರ್ಮೂಲ ಮಾಡುವ ಪಂಚವಾರ್ಷಿಕ ಯೋಜನೆಯೊಂದನ್ನು ಗೊತ್ತುಮಾಡಿತು. "ಮೇ ೧೯೩೭ ರ ಒಳಗಾಗಿ ಸೋವಿಯಟ್ಟಿನ ಭೂಭಾಗದಲ್ಲಿ ಒಂದು ಪ್ರಾರ್ಥನಾಮಂದಿರವಾದರೂ ತಲೆಯೆತ್ತಿ ನಿಲ್ಲಲಾಗದಂತೆ ನಾಶಮಾಡಬೇಕು, ದೈವಭಾವನೆ ನಿರ್ಮೂಲಗೊಳಿಸಬೇಕು, ಈ ಭಾವನೆಯು ಪುರಾತನ ಕಂದಾಚಾರವಾಗಿದೆ. ಇದು ಶ್ರಮಜೀವಿಗಳನ್ನು ತುಳಿ ಯುವ ಸಾಧನ" ಎಂದು ಪಂಚವಾರ್ಷಿಕ ಯೋಜನೆಯನ್ನು ನಿರ್ಧರಿಸಿತು.

ಆ ಪ್ರಕಾರ ಕೆಲಸ ಮಾಡಿತು. ಆದರೆ ಮುಂದೆ ೨-೩ ವರ್ಷಗಳಲ್ಲಿ ಮಹಾ ಜಾಗತಿಕ ಯುದ್ಧವು IIನೆಯದು ಆರಂಭವಾದ ಮೇಲೆ ತನಗೆ ಉಂಟಾದ ಕಷ್ಟ ಪರಂಪರೆ ಗಳನ್ನು ನೋಡಿ ಯಾರು ಯಾವ ಮತದಲ್ಲಿ ಬೇಕಾದರೂ ಇರಲಿ ಸರಕಾರ ಮಾತ್ರ ಅದಾವುದನ್ನೂ ಲೆಕ್ಕಿಸುವುದಿಲ್ಲ ಎಂಬಂತೆ ಅವಕಾಶವನ್ನು ಕೊಟ್ಟಿತೆಂದು ತಿಳಿದು ಬಂದಿದೆ.

ವೀರಶೈವ—ಪ್ರಾರ್ಥನಾಮಂದಿರಗಳನ್ನು ಕೆಡವಿದರೂ ಕೆಡವಲಿ ಹೆಚ್ಚಿನ ಹಣವು ಶ್ರಮಜೀವಿಗಳಿಂದ (Labour Party) ಖರ್ಚಾಗುವುದೆಂದು ಯೋಚಿಸಿ ಹೀಗೆ ಮಾಡಿದರೆಂದು ಭಾವಿಸೋಣ (ವೀರಶೈವಕ್ಕೆ ಪ್ರಾರ್ಥನಾಮಂದಿರಗಳೂ ಬೇಕಾಗಿಲ್ಲ) ಆದರೆ ಮಹಾದೇವನಿಲ್ಲ ಎಂಬ ನಾಸ್ತಿಕವಾದವನ್ನು ಹಿಡಿದುದು ರಷ್ಯದೇಶದ ಅನ್ಯಾಯ ವಾದ ಕಾರ್ಯ. ಇದನ್ನು ವೀರಶೈವವು ಒಪ್ಪದು. ವಿಜ್ಞಾನಶಾಸ್ತ್ರ (Science) ಬಲದಿಂದ ಮಹಾದೇವನೆಲ್ಲಿ ಎಂದು ಕಂಡು ಹಿಡಿದು ಪ್ರಚಾರ ಮಾಡಿದುದೇ ತಪ್ಪು ಭಾವನೆಯದು. ದೇವನೆಂಬುವನು ಒಂದು ವ್ಯಕ್ತಿ ಎಂದು ಭಾವಿಸಿ ಅಲ್ಲಿನ ವಿಜ್ಞಾನಿಗಳು

ಹಾಗೆ ಹೇಳಿದರೆಂದು ತೋರುತ್ತದೆ. ವೀರಶೈವರ ಆಗಮಗಳ ಪ್ರಕಾರ ಆಕಾಶಕ್ಕಿಂತಲೂ ಸೂಕ್ಷ್ಮನಾದವನು (ಅಣೋರಣೀಯಾನ್) ಶಿವ ಎಂದು ತಿಳಿಯಬರುತ್ತದೆ. ಈ ಬ್ರಹ್ಮಾಂಡವು ದೇವನಿಂದ ಅನ್ಯವಾದುದೆಂದು ವಿಜ್ಞಾನಿಗಳು (Scientists) ತಿಳಿದಿರುವುದು ಸರಿಯಲ್ಲ. ಈ ಪ್ರಪಂಚಕ್ಕೆ ಮೂಲಾಣುರೇಣುಗಳನ್ನೇ (Electron, Recton, Poritron) ಸೂಕ್ಷ್ಮರೂಪದ ಶಿವ ಎಂದು ತಿಳಿಯಲಿಕ್ಕೆ ಬರುತ್ತದೆ. ಅವುಗಳ ಮೂಲವು ಹೇಗೆ ವಿಜ್ಞಾನಿಗಳಿಗೆ ಹೇಳುವುದಕ್ಕಾಗುವುದಿಲ್ಲವೋ ಹಾಗೆ ಅನಿವಾರ್ಯವಾಗಿ ಪರವಸ್ತುವನ್ನು ತಿಳಿಯಬೇಕಾಗುವುದು. ದೇಹದಲ್ಲಿಯೂ ಹಾಗೆಯೇ. ಹೀಗೆ ತಿಳಿದಾಚರಿಸುವುದರಿಂದ ಶ್ರಮಜೀವಿಗಳು ತಮ್ಮ ಹಣವನ್ನು ಮೂಢಾಚರಣೆಯಿಂದ ಹೆಚ್ಚು ಖರ್ಚು ಮಾಡುವುದೂ ಬೇಕಾಗಿಲ್ಲ. ಯಾರಿಗೂ ದಾಸರಾಗಿರುವುದೂ ಬೇಕಾಗಿಲ್ಲ. ತಾವು ಇದ್ದಲ್ಲಿಯೇ ತಮ್ಮಲ್ಲಿಯೇ ತಮಗೆ ವಿರಾಮಕಾಲದಲ್ಲಿ (ಕೊನೆಗೆ ರಾತ್ರಿಕಾಲದಲ್ಲಿ) ಮಹಾದೇವನ ಚಿಂತನೆ ಮಾಡಬಹುದು. ಹಾಗೆ ಮಾಡುವುದರಿಂದ ಮನುಷ್ಯನಿಗೆ ನಿಜ ಸ್ವರೂಪ ಜ್ಞಾನವಾಗಿ ನಾನು ಮನುಷ್ಯಮಾತ್ರನಲ್ಲ ನನ್ನೊಬ್ಬನ ಸುಖವೇ ಮುಖ್ಯವಲ್ಲ ಎಂಬ ಭಾವನೆ ಬಂದು ನಾನು ಜಗತ್‌ಸ್ವರೂಪನು, ಜಗತ್ತಿನಲ್ಲಿರುವ ಮೂಲಾಣುರೇಣುಗಳೇ ನನ್ನಲ್ಲಿವೆ. ನನ್ನ ಹಣವೇ ಜಗತ್ತಿನ ಹಣ, ನನ್ನ ಆಸ್ತಿಯೇ ಜಗತ್ತಿನ ಆಸ್ತಿ, ಜಗತ್ತೇ ನಾನು ಎಂಬ ಉದಾರ ಭಾವನೆಯು ಆ ಧರ್ಮದಿಂದ ಬೆಳೆಯುವುದಲ್ಲದೆ ದೇಹದಿಂದ ವಿಯೋಗನಾದ ಜೀವನಿಗೂ ಮುಂದೆ ಉನ್ನತಾವಸ್ಥೆಗೆ ಬರಲಿಕ್ಕೆ ಅನುಕೂಲವಾಗುತ್ತದೆ. ವೀರಶೈವ ಧರ್ಮವು ಇದೇ ಅಭಿಪ್ರಾಯವನ್ನೇ ಬೋಧಿಸುತ್ತದೆ.

ಇಂತಹ ಮಹದೇವನ ಸಂಬಂಧದ ತಿಳುವಳಿಕೆಯು ಪ್ರಚಾರಕ್ಕಾಗಿ ಪ್ರಾರ್ಥನಾ ಮಂದಿರಗಳನ್ನೂ ದೇವಸ್ಥಾನಗಳನ್ನೂ ಉಳಿಸಿಕೊಂಡಿದ್ದರೆ ಎಷ್ಟೋಕೋಟಿ ರೂಪಾಯಿಗಳನ್ನು ರಷ್ಯ ದೇಶವು ತನಗೆ ಉಳಿಸಿಕೊಂಡಂತಾಗುತ್ತಿತ್ತು. ಕೋಪದಲ್ಲಿ ಕೊಯ್ದ ಮೂಗು ಶಾಂತಿಯಲ್ಲಿ ಹತ್ತೀತೇ ?

ಈಗ ರಷ್ಯದ ರಾಜ್ಯಾಡಳಿತಮಾಡುತ್ತಿರುವ ಸ್ಟಾಲಿನ್‌ರು "ಮಹಾಭಾರತ"ವನ್ನು ರಷ್ಯನ್ ಭಾಷೆಗೆ ತರ್ಜುಮೆ ಮಾಡಿಸುತ್ತಿದ್ದಾರೆ ಎಂದೂ ಪ್ರಾರ್ಥನಾ ಮಂದಿರಗಳನ್ನು ಮತ್ತೆ ಹೊಸದಾಗಿ ಕಟ್ಟಿಸಲಿಕ್ಕೆ ಅವಕಾಶ ಕೊಡುತ್ತಾ ಇದ್ದಾರೆ ಎಂದೂ ತಿಳಿಯಬರುತ್ತದೆ. ಆದರೇನು ? ರಷ್ಯ ದೇಶದ ಲೌಕಿಕಾಚರಣೆಯಂತೆ ಪಾರಮಾರ್ಥಿಕ ಭಾವನೆಯಿಂದ ಲೌಕಿಕಾಚರಣೆ ಇಟ್ಟುಕೊಂಡಿರುವ ನಿರಾಕಾರ, ಕೇವಲ ಸೂಕ್ಷ್ಮರೂಪ ಮತ್ತು ಮಹದ್ರೂಪವನ್ನು ತಿಳಿದಾಚರಿಸುವ ವೀರಶೈವ ಧರ್ಮದಲ್ಲಿ ಹೇಳಿದ ಮಹಾದೇವನ ಸಂಬಂಧದ ಸೂಕ್ಷ್ಮ ವಿಷಯಗಳನ್ನು ತಿಳಿದಲ್ಲದೆ ಧರ್ಮ ಜ್ಞಾನವು ಪೂರ್ತಿಯಾಗಿ ಆಗುವುದಿಲ್ಲ.

ಸೋವಿಯಟ್ಟಿನ ಸಮತಾವಾದದ ಆಚರಣೆಗಳನ್ನು ಪತ್ರಿಕಾ ಮುಖಾಂತರವಾಗಿ

ಯುದ್ಧಕ್ಕೆ ಮುಂಚೆ ತಿಳಿಸಿದಾಗ ವೀರಶೈವ ಮತಕ್ಕೆ ಜಂಗಮ ಮುಖ್ಯವಾದಂತೆ ರಷ್ಯ ದೇಶಕ್ಕೆ ಸ್ಟಾಲಿನ್ ಜಂಗಮನೆಂದೂ ಆದರೆ ವೀರಶೈವ ಜಂಗಮವು ಮಹಾದೇವನನ್ನು ನಂಬಿರುವಂತೆ ಸ್ಟಾಲಿನ್‌ರು ನಂಬದೆ ಇರುವುದೇ ಒಂದು ಕೊರತೆಯೆಂದೂ ಭಾವಿಸು ತ್ತಿದ್ದನು.

ಯುದ್ಧ ಕಾಲದಲ್ಲಿ ದೇವನಿದ್ದಾನೆಂದು ಅವರು ಒಪ್ಪಿಕೊಂಡಿರುವುದರಿಂದ ಮುಂದೆ ವೀರಶೈವದ ಸೂಕ್ಷ್ಮ ವಿಚಾರದಂತೆ ಮಹಾದೇವನನ್ನು ತಿಳಿಯುವುದಕ್ಕವಕಾಶವಾಗುವು ದೆಂದು ಭಾವಿಸುತ್ತೇನೆ. ಅಂತೂ ರಷ್ಯ ದೇಶದಲ್ಲಿ ಲೌಕಿಕದ ಹಿತವೆಂದು ಭಾವಿಸಲ್ಪಟ್ಟ ಪ್ರಜೆಗಳ ದುಡಿಮೆ ಸರಕಾರದ್ದೆಂಬ ಆಚರಣೆಯು ಪಾರಮಾರ್ಥಿಕವೆಂದು ತಿಳಿಯಲ್ಪಟ್ಟ ಭಕ್ತನ ಆಸ್ತಿ ಜಂಗಮದ್ದೆಂಬ ಆಚರಣೆಗೆ ಸರಿಹೋಗಿ ಎರಡೂ ಒಂದೇ ವಿಧವಾಗಿ ಲೌಕಿಕದಲ್ಲಿ ತೋರುವುದರಿಂದ ರಷ್ಯದ ಲೌಕಿಕಾಚರಣೆಯು ಪಾರಮಾರ್ಥಿಕವಾಗಿ ತಿರುಗಲಿ ಎಂಬ ಹಾರೈಕೆಯಿಂದ ಈ ಲೇಖನವನ್ನು ಮುಗಿಸೋಣ.

(—ಸಂ. ೫೮–೫೯)

# ರಷ್ಯಾ-ಭಾರತಗಳ ಸ್ನೇಹ

ರಷ್ಯಾ ದೇಶವು ಪ್ರಾಪಂಚಿಕ ಜನತೆಯ ಉನ್ನತಿಯ ಸಲುವಾಗಿ ಅನೇಕ ಕೆಲಸಗಳನ್ನು ಮಾಡುತ್ತಲಿದೆ. ಅದರಲ್ಲಿ ಸೋವಿಯಟ್ ಒಕ್ಕೂಟದ ಸಮಾಚಾರ ವಿಚಾರ (News and Views of Soviet Union) ಎಂಬ ಪತ್ರಿಕೆಯನ್ನು ಕನ್ನಡ ಭಾಷೆಯಲ್ಲಿ ನವದೆಹಲಿಯಿಂದ ಹೊರಡಿಸುತ್ತಿರುವುದೂ ಒಂದು ಕೆಲಸ. ಇದಕ್ಕಾಗಿ ಕನ್ನಡಿಗರು ಅಭಿನಂದಿಸಬೇಕಾಗಿದೆ. ರಷ್ಯಾ ದೇಶದ ತಾಸ್ (Tass) ಪತ್ರಿಕೆಯ ಪ್ರತಿನಿಧಿ ಈ ಕೆಲಸವನ್ನು ಮಾಡುತ್ತಿದ್ದಾರೆ.

೧. ಭಾವನೆಗಳ ಮತ್ತು ಅಧ್ಯಾತ್ಮಿಕ ಮೌಲ್ಯಗಳ ಸೌಭ್ರಾತೃತ್ವದ ವಿನಿಮಯಕ್ಕಾಗಿ ಸೋವಿಯಟ್ ಒಕ್ಕೂಟದ ಮತ್ತು ಭಾರತದ ಜನತೆಗಳ ಹೃದಯಗಳು ಮತ್ತು ಮನಸ್ಸುಗಳು ವಿಸ್ತಾರವಾಗಿ ತೆರೆಯಲ್ಪಟ್ಟಿವೆ.

೨. ಮಾನವತೆಯು ಬೆಳೆಯಿಸಿಕೊಂಡಿರುವ ಅಧ್ಯಾತ್ಮಿಕ ಸಂಪತ್ತೆಲ್ಲದರ ಪಾಂಡಿತ್ಯವನ್ನು ಪಡೆದ ಹೊರತು ಸಮಾಜವಾದೀ ಸಂಸ್ಕೃತಿಯು ನಿರ್ಮಿಸಲ್ಪಡಲಾರದೆಂಬುದನ್ನು ಲೆನಿನ್‌ರವರು ನಮಗೆ ಕಲಿಸಿದ್ದಾರೆ. ನಾವು ವಿಸ್ತೃತವಾದ ಅಂತರರಾಷ್ಟ್ರೀಯ ಸಂಸ್ಕೃತಿ ವಿನಿಮಯದ ಪಕ್ಷವನ್ನು ವಹಿಸುತ್ತೇವೆ. ಅದರಲ್ಲಿ ವಿಭಿನ್ನ ದೇಶಗಳ ಜನತೆಗಳ ರಾಷ್ಟ್ರೀಯ ಸಂಸ್ಕೃತಿಗಳ ಪರಸ್ಪರ ಅಭಿವೃದ್ಧಿಯ ಸಾಧನದಲ್ಲಿ ಮಾತ್ರವಷ್ಟೇ ಅಲ್ಲದೆ ಜನತೆಗಳ ನಡುವೆ ಇನ್ನೂ ಉತ್ತಮವಾದ ಪರಸ್ಪರರ ಅರಿವು ಮತ್ತು ಗೆಳೆತನವನ್ನು ಸಾಧಿಸುವ ಮಾರ್ಗವನ್ನೂ ಕೂಡಾ ನಾವು ಕಾಣುತ್ತೇವೆ.

ಈ ಎರಡು ಪ್ರಕರಣಗಳು ೨೩-೧೧-೧೯೫೫ನೆಯ ಪತ್ರಿಕೆಯಲ್ಲಿ ಇವೆ. ಈ ವಿಷಯಗಳನ್ನು ನೋಡಿದರೆ ಸಂಸ್ಕೃತಿಯ ಅಭಿವೃದ್ಧಿಯ ಸಾಧನದಲ್ಲಿ ಮಾತ್ರವಷ್ಟೇ ಅಲ್ಲದೆ ಪರಸ್ಪರರ ಅರಿವು ಮತ್ತು ಗೆಳೆತನವನ್ನು ಸಾಧಿಸುವ ಮಾರ್ಗವನ್ನೂ ಜನತೆಯು ಸಂಪಾದಿಸಬೇಕೆಂಬುದು ಈ ಲೇಖಕರ ಅಭಿಪ್ರಾಯವೆಂಬುದು ಸ್ಪಷ್ಟವಾಗುತ್ತದೆ.

ಅಧ್ಯಾತ್ಮದ ವಿಷಯ ಎಂದರೆ ಮಹಾದೇವನು ಪಿಂಡಾಂಡದಲ್ಲಿ ವ್ಯಾಪಿಸಿರುವ ರೀತಿಯು ಬ್ರಹ್ಮಾಂಡದಲ್ಲಿ ತುಂಬಿಕೊಂಡಿರುವುದರೊಡನೆ ಹೋಲಿಸಲ್ಪಡುವುದು ಹೇಗೆ ಎಂಬುದರ ಅರಿವನ್ನು ರಷ್ಯಾ ದೇಶವು ಇನ್ನೂ ಹೆಚ್ಚಾಗಿ ಪಡೆಯಲಪೇಕ್ಷಿಸುತ್ತದೆ ಎಂದು ವ್ಯಕ್ತವಾಗುತ್ತದೆ. ಅದು ನಿಜವೇ. ಈ ವಿಷಯದಲ್ಲಿ ಪ್ರಪಂಚದ ಎಲ್ಲಾ ದೇಶಗಳಿಗಿಂತಲೂ ಭಾರತವು ತನ್ನ ಅರಿವನ್ನು ಮುಂದುಮಾಡಿಕೊಂಡು ಇರುವುದೆಂಬುದು ಸಾವಿರಾರು ವರ್ಷಗಳಿಂದಲೂ ಪ್ರಪಂಚವು ಪ್ರಸಿದ್ಧವಾಗಿ ತಿಳಿದಿರುವ ವಿಷಯವೇ ಆಗಿದೆ. ಈ ಅರಿವನ್ನು ಭಾರತವು ರಷ್ಯಾ ದೇಶಕ್ಕೆ ಹಂಚಲೇಬೇಕು.

ಇನ್ನು ಕನ್ನಡಿಗರ ಯೋಜನೆಯೇನು? ಅಧ್ಯಾತ್ಮ ತತ್ತ್ವಗಳನ್ನು ಸಂಸ್ಕೃತ ಭಾಷೆಯಲ್ಲಿನ ಉಪನಿಷತ್ತುಗಳಿಗಿಂತಲೂ ಹೆಚ್ಚಾಗಿ ತಿಳಿದಿರುವೆವೆಂದು ಭಾವಿಸುತ್ತಿರುವ ಕನ್ನಡಿಗರು ಈಗಲೂ ಸುಮ್ಮನೆ ಕುಳಿತುಕೊಂಡಿರಬೇಕೇ ? ಈ ಕನ್ನಡ ಪತ್ರಿಕೆಗೆ ಲೇಖನಗಳನ್ನು ಕೊಡುವುದರ ಮೂಲಕ ಶಿವಶರಣರ ವಚನ ತಾತ್ತ್ವಿಕ ಅಭಿಪ್ರಾಯವನ್ನು ರಷ್ಯಾದವರಿಗೂ ತಿಳಿಯುವಂತೆ ಏಕೆ ಮಾಡಬಾರದು ? ಈ ವಿಧದಲ್ಲಿ ಕನ್ನಡಿಗರು ರಷ್ಯಾ ದೇಶದ ಸ್ನೇಹವನ್ನು ಹೆಚ್ಚಾಗಿ ಏಕೆ ಬೆಳೆಯಿಸಬಾರದು ?

ಶ್ರೀ ಲೆನಿನ್ ಅವರು ಮೇಲೆ ಹೇಳಿದಂತೆ ಅಧ್ಯಾತ್ಮಿಕ ಸಂಪತ್ತೆಲ್ಲದರ ಪಾಂಡಿತ್ಯವನ್ನು ಪಡೆದೇ ಸಮಾಜವಾದೀ ಸಂಸ್ಕೃತಿಯನ್ನು ನಿರ್ಮಿಸಬೇಕು. ಈ ಅಧ್ಯಾತ್ಮಿಕ ಪಾಂಡಿತ್ಯವು ಸುಲಭವಾಗಿ ಒದಗಲಾರದು. ಭಾರತೀಯರ ಧರ್ಮಗ್ರಂಥಗಳ ಸಾರವನ್ನೊಳಗೊಂಡ ಒಂದು ಗ್ರಂಥವೇ ಈಗ ರಚಿತವಾಗಬೇಕು. ಅದರಲ್ಲಿ ಎಲ್ಲಾ ಧರ್ಮಗಳ ಜ್ಞಾನವನ್ನೂ ಅನುಭವದೊಡನೆ ಹೊರಗೆಡಹುವ ವಿಶಾಲ ಭಾವನೆಗಳ ಅಭಿಪ್ರಾಯವೂ ಕೂಡಿಕೊಂಡಿರಬೇಕು. ಈಗಿನ ವಿಜ್ಞಾನಿಗಳು (Scientists) ಕಂಡು ಹಿಡಿದಿರುವ ಶೋಧನೆಗಳನ್ನು ಅಧ್ಯಾತ್ಮ ಸಂಪತ್ತಿಗಾಗಿ ಎಷ್ಟುಮಟ್ಟಿಗೆ ಉಪಯೋಗಿಸಿಕೊಳ್ಳಬೇಕೆಂಬ ಶೋಧನೆಯೂ ಸೇರಿಸಬೇಕು. ಜೀವ, ಅದರ ರಚನೆ, ಲಕ್ಷಣ, ಅದರ ಮೂಲವಸ್ತುಗಳು, ಅದರ ರಸಾಯನಿಕ ವಿಭಾಗಗಳ ಲಕ್ಷಣ, ಮನುಷ್ಯನ ದೇಹದಲ್ಲಿ ಭೌತಿಕ ಲಕ್ಷಣಗಳಿಗೆ ವಿಪರೀತವಾಗಿ ಸೇರಿಕೊಂಡಿರುವ ಅಂಶಗಳು, ಅಣುಗಳು (Atoms) ರೇಣುಗಳು, ಇವುಗಳ ವಿವಿಧ ರೀತಿಗಳು, ಇವುಗಳ ಪರಿಶೋಧನೆ ಇವೇ ಮುಂತಾದ ಸಂಗತಿಗಳಿಂದ ಅಧ್ಯಾತ್ಮಿಕ ಸಂಪತ್ತು ನಿಷ್ಕರ್ಷೆಯಿಂದ ತಿಳಿಯುವಂತಾದರೆ ಅಂತಹ ಅಧ್ಯಾತ್ಮದಿಂದ ಜನರಲ್ಲಿನ ಸಂಸ್ಕೃತಿಯನ್ನು ಶೋಧಿಸಿ ನೆಲೆಗೊಳಿಸುವುದಕ್ಕೆ ಅವಕಾಶವಾಗುತ್ತದೆ. (—ಸಂ. ೧೩೪)

# ಕೃತಕ ಭೂ-ಉಪಗ್ರಹದ (ಚಂದ್ರಶಿಶು) ಈಗಿನ ಸ್ಥಿತಿ ಮತ್ತು ಉಲ್ಕೆಗಳು

ಮಾನವ ನಿರ್ಮಿತ, ಸೋವಿಯತ್ ಭೂ-ಉಪಗ್ರಹದ ಚಲನೆಯನ್ನು ಮಾನವ ಕೋಟಿಯು ವೀಕ್ಷಿಸುತ್ತಿರುವುದರೊಂದಿಗೆ ಅವರ ತೀಕ್ಷ್ಣ ಆಸಕ್ತಿಯು ಎಂದಿನಂತೆಯೇ ಇನ್ನೂ ತೀಕ್ಷ್ಣವಾಗಿಯೇ ಇದೆ. ಮೂರು ವಾರಗಳಿಗಿಂತಲೂ ಹೆಚ್ಚು ಕಾಲದಿಂದ ಭೂ-ಉಪಗ್ರಹವು ಭೂಮಿಯನ್ನು ಸುತ್ತುತ್ತಿದೆ. ಈ ಕಾಲಾವಧಿಯಲ್ಲಿ ಅದು ಬಾಹ್ಯಾಂತರಿಕ್ಷದ ಅತ್ಯಂತ ದೊಡ್ಡ ಅಪಾಯಗಳೊಲ್ಲೊಂದಾದ ಯಾವುದಾದರೊಂದು ದೊಡ್ಡ ಉಲ್ಕೆಯೊಡನೆಯು ಸಂಘಟನೆಯನ್ನು ಇದುವರೆಗೆ ತಪ್ಪಿಸಿಕೊಂಡು ಸುತ್ತುತ್ತಿದೆ. ಸೋವಿಯಟ್ ಅಂತರರಾಷ್ಟ್ರೀಯ ಭೂ-ಭೌತವರ್ಷ ಸಮಿತಿಯನ್ನು "ತಾಸ್ ಸುದ್ದಿಗಾರನೊಬ್ಬಾತನು, ಅಂತರಿಕ್ಷಗಾಮಿ ರಾಕೆಟ್ಟುಗಳ ಮೇಲೆಯೂ ಮತ್ತು ಉಪಗ್ರಹಗಳ ಮೇಲೆಯೂ ಉಲ್ಕೆಗಳಿಂದುಂಟಾಗುವ ಪರಿಣಾಮವನ್ನೂ ಅದು ಹೇಗಾಗುತ್ತದೆಯೆಂಬುವನ್ನೂ ತಿಳಿಸಬೇಕೆಂದು ಕೋರಿದರು. ಉಲ್ಕೆಗಳ ಬಗ್ಗೆ ಕಾರ್ಯನಿರತವಾಗಿರುವ ಈ ಸಮಿತಿಯ ತಂಡದ ಅಧಿಪತಿಯುವರಾದ ಪ್ರೊ. ವಿ. ವಿ. ಫೇದಿಯಸ್ಕಿಯುವರು ಈ ಕೆಳಗಿನಂತೆ ತಿಳಿಸಿದರು—

ಭೂಮಿ ಮತ್ತು ಇತರ ಗ್ರಹಗಳಷ್ಟೇ ಅಲ್ಲದೆ, ಬಹುಸಂಖ್ಯೆಯ ಅಪಾರವಾದ, ಸೂಕ್ಷ್ಮಾತಿಸೂಕ್ಷ್ಮ ಪ್ರಮಾಣದ, ಕಬ್ಬಿಣದ ಮತ್ತು ಕಲ್ಲಿನ ಉಲ್ಕಾಕಣಗಳು ಸೂರ್ಯನ ಸುತ್ತಲೂ ಸುತ್ತುತ್ತಿವೆ. ಸೂರ್ಯನ ಸುತ್ತಲೂ ಅವು ವಿಸ್ತಾರವಾದ ಧೂಳಿನ ಮೋಡವನ್ನು ನಿರ್ಮಿಸಿವೆ. ಆ ಮೋಡದ ಮುಖಾಂತರವೇ ನಮ್ಮ ಭೂಗ್ರಹ ಸುತ್ತುತ್ತಾ ಹೋಗುತ್ತದೆ. ಒಂದು ದಿನದ ಕಾಲಾವಧಿಯಲ್ಲಿ ಕೋಟ್ಯಾವಧಿಯ ಇಂತಹ ಉಲ್ಕಾಕಣಗಳನ್ನು ಭೂಮಿಯು ಸಂಧಿಸುತ್ತದೆ. ವಾತಾವರಣದ ಉನ್ನತ ಸ್ತರಗಳ ವಿರಳಗೊಳಿಸಲಾದ ಅನಿಲಗಳೊಡನೆ ಘರ್ಷಣೆಯಾದೊಡನೆಯೇ ಈ ಉಲ್ಕಾಕಣಗಳು ಆವಿಯಾಗಿಹೋಗುತ್ತವೆ. "ಬೀಳುವ ನಕ್ಷತ್ರ"ಗಳು ಆಕಾಶದಲ್ಲಿ ತೂರಿಕೊಂಡು ಹೋಗುವಂತೆ, ನಾವು ಉಲ್ಕೆಗಳ ಪ್ರಕಾಶವನ್ನು ಆಗಾಗ ನೋಡುತ್ತಿರುತ್ತೇವೆ. 'ಅಯನೀ'ಕೃತವಾದ (ವಿದ್ಯುಚ್ಚರಿತ) ಪ್ರಕಾಶವು ಉಲ್ಕೆಗಳ ಹಾರಾಟದ ತರುವಾಯ ಉಳಿಯುವುದನ್ನು 'ರಾಡಾರ್' ಸಹಾಯದಿಂದ ಸುಲಭವಾಗಿ ಕಂಡು ಹಿಡಿಯಲು ಸಾಧ್ಯವಾಗುತ್ತದೆ. ಬರಿಯ ಕಣ್ಣಿನಿಂದ ಕೇವಲ ಅತ್ಯಂತ ದೊಡ್ಡ ಮತ್ತು ಅತ್ಯಂತ ವೇಗವಾದ ಉಲ್ಕಾಕಣಗಳನ್ನು ಮಾತ್ರ, ಅವು ಉಜ್ವಲ ಪ್ರಕಾಶವನ್ನು ಹೊರಸೂಸುವುದನ್ನು ಕಾಣಬಹುದಾಗಿದೆ.

ಭೂಮಿಯು ಉಲ್ಕಾ ಸಮುದಾಯಗಳನ್ನು-ಹಾಗೆಂದು ಕರೆಯಲ್ಪಡುವ 'ಉಲ್ಕಾ ವೃಷ್ಟಿ'ಗಳನ್ನು–ಸಂಧಿಸಿದಾಗ, ಒಂದೇ ಒಂದು ಗಂಟೆಯಲ್ಲಿ ಹತ್ತಾರು ಉಲ್ಕೆಗಳನ್ನು ಕಾಣಬಹುದು. ಗಂಟೆಗೆ ಸುಮಾರು ೨೦೦೦ ಉಲ್ಕೆಗಳ ದಾಖಲೆಯನ್ನು 'ರಾಡಾರ್' ಸಹಾಯದಿಂದ ಪಡೆಯಬಹುದು. ಸೂಕ್ಷ್ಮ ಉಲ್ಕಾಣುಗಳನ್ನು ಬಿಡುವ (ಮೈಕ್ರೋ ಮಿಟು ಯೊರೈಟ್ಸ್) ಅತ್ಯಂತ ಸೂಕ್ಷ್ಮವಾದ ಕಣಗಳು ತೀರಾ ಧೂಳೀಕಣಗಳಾಗಿದ್ದು, ಅವುಗಳ ಸಂಖ್ಯೆಯು ಇನ್ನೂ ಹೆಚ್ಚಾಗಿರುತ್ತದೆ. ಅವು ವಾತಾವರಣದ ಉನ್ನತಸ್ತರ ಗಳನ್ನು ನಿರಂತರವಾಗಿ ಪ್ರಹಾರಕ್ಕೀಡುಮಾಡುತ್ತಿರುತ್ತದೆ. ಬಾಹ್ಯಾಕಾಶದ ಯಾನಗಳು (ಷಿಪ್ಸ್) ಇವುಗಳ ಮುಖಾಂತರ ತೂರಿ ಹಾದಿ ಮಾಡಿಕೊಂಡು ಹೋಗಬೇಕು.

ಭಾವೀ ನೌಕೆಗಳ ಪೂರ್ವ ಪರೀಕ್ಷಕ ಶೋಧಕ ಯಾನವಾಗಿ ಮುಂದೆ ಸಾಗಿ ನಡೆ ಯುತ್ತಿರುವ ಮಾನವ-ನಿರ್ಮಿತ ಉಪಗ್ರಹವು ಈಗ ಸೂಕ್ಷ್ಮ ಉಲ್ಕಾಣುಗಳ ಬಡಿತಕ್ಕೆ ಗುರಿಯಾಗಿದೆ. ಈ ಸಂಘಟನೆಯಲ್ಲಿ ಅವು ಉಪಗ್ರಹದ ಕಾಯದ ಮೇಲೆಯೂ ಮತ್ತು ವಾಹಕ ರಾಕೆಟ್ಟಿನ ಮೇಲೆಯೂ ನಿಸ್ಸಂದೇಹವಾಗಿಯೂ ಸಣ್ಣಸಣ್ಣ ಕಚ್ಚುಗಳನ್ನುಂಟು ಮಾಡುತ್ತವೆ. ಭವಿಷ್ಯತ್ತಿನಲ್ಲಿ ಇಂತಹ ಬಡಿತಗಳನ್ನು ಒಂದು ವಿಶಿಷ್ಟ ಸೂಕ್ಷ್ಮಧ್ವನಿ ವರ್ಧಕದ ಮೂಲಕ ದಾಖಲೆ ಪಡೆಯುವ ಉದ್ದೇಶ ನಮಗಿದೆ. ಆದರೆ ಈಗಾಗಲೇ ಮಾನವ ನಿರ್ಮಿತ ಉಪಗ್ರಹದಿಂದ ದೊರೆಯುವ ಉಲ್ಕಾಣು ಬಡಿತದ ಪರಿಣಾಮವು ಗಣನೀಯವಾದ ಆಸಕ್ತಿಯನ್ನುಂಟುಮಾಡಿದೆ.

ಉಪಗ್ರಹವನ್ನು ಹಾರಿಸಿದಂದಿನಿಂದ ಕಳೆದಿರುವ ಅನೇಕ ದಿನಗಳಲ್ಲಿ ಯಾವ ಏಕ ಮಾತ್ರ ಉಲ್ಕಾಣು ಕಾಯವೂ ನಮ್ಮ "ಶಿಶುಚಂದ್ರ"ದ ಮೇಲೆ ಯಾವ ಗಮನಾರ್ಹ ಹಾನಿಯನ್ನೂ ಉಂಟುಮಾಡಿಲ್ಲ. ಹೀಗೆಂದರೆ ಉಪಗ್ರಹವು ಇದುವರೆಗೆ ತನ್ನ ಪಥ ದಲ್ಲಿ ಯಾವ ದೊಡ್ಡ ಉಲ್ಕಾಣುವಿನ ಕಾಯದೊಂದಿಗೂ ಸಂಘಟನೆಯಾಗಿಲ್ಲ. ಈ ಆಧಾರದ ಮೇಲಿನಿಂದ, ಅಂತರಿಕ್ಷದಲ್ಲಿರುವ ವಿನಾಶಕಾರಿಯಾದ ದೊಡ್ಡ ಉಲ್ಕಾ ಕಾಯ ಗಳ ಮಧ್ಯೆ ಇರಬಹುದಾದ ದೂರವನ್ನು ಲೆಕ್ಕಾಚಾರ ಮಾಡಲು ಸಾಧ್ಯವಾಗುತ್ತದೆ ಮತ್ತು ಬಾಹ್ಯಾಂತರಿಕ್ಷದಲ್ಲಿ ಹಾರಾಡುವ ಕೃತಕ ಉಪಗ್ರಹಗಳ ಮತ್ತು ರಾಕೆಟ್ಟುಗಳ ಸಂಬಂಧದ ಪರಿಸ್ಥಿತಿಗಳ ಬಗ್ಗೆ ಇದುವರೆಗಿಂತಲೂ ಹೆಚ್ಚು ಕರಾರುವಾಕಾದ ಮಾಹಿತಿ ಯನ್ನು ಮುಂಗಾಣಲು ಸಾಧ್ಯವಾಗಿದೆ.

ಈ ದೃಷ್ಟಿಯಿಂದ ಅಕ್ಟೋಬರ್ ದಿನಾಂಕ ೨೦ ರಿಂದ ೨೩ರ ವರೆಗಿನ ದಿನಗಳು ವಿಶೇಷ ಆಸಕ್ತಿಜನಕವಾಗಿದ್ದವು. ಆ ಸಮಯದಲ್ಲಿ ಭೂಮಿಯು ಮೃಗಶಿರಾ ನಕ್ಷತ್ರ ಪುಂಜದಿಂದ (ಓರಿಯೋನಿಡ್ಸ್) ಬರುವ ಉಲ್ಕಾ ವೃಷ್ಟಿಯ ಮುಖಾಂತರ ಹಾದು ಬಂದಿತು. ಪ್ರಸಿದ್ಧವಾದ ಹ್ಯಾಲೀ ಧೂಮಕೇತುವಿನ ಅಂಶಿಕ ಶೈಥಿಲ್ಯದ ಪರಿಣಾಮ ವಾಗಿ ಈ ದೃಷ್ಟಿಯು ರೂಪುಗೊಂಡಿತು.

ಉನ್ನತ ವಾತಾವರಣದ ವಿರಳಗೊಂಡ ಸ್ಥಳಗಳಲ್ಲಿ ಉಪಗ್ರಹದ ವೇಗವು ಕಡಮೆ ಯಾಗುವುದರಿಂದ, ಅದು ಭೂಮಿಯು ಬಳಿಗೆ ಮರಸುತ್ತಿನ ಆಕಾರದ ಗ್ರಹಪಥದ

ಮಾರ್ಗದಿಂದ (ಸ್ಪೈರಲ್ ಆರ್ಬಿಟ್) ಇಳಿದುಬರುತ್ತದೆ. ಅದರ ಪ್ರಕಾಶವು ಅನೇಕ ಸಂದರ್ಭಗಳಲ್ಲಿ ಉಲ್ಕೆಯಂತೆಯೇ ಇರುತ್ತದೆ. ಇದರ ಪರಿಶೀಲನೆಯು ವಿಜ್ಞಾನಿಗಳಿಗೆ ವಾತಾವರಣದ ಉನ್ನತ ಸ್ತರಗಳ ಸಾಂದ್ರತೆಯ ಬಗ್ಗೆ ಸಮಾಚಾರವನ್ನು ಒದಗಿಸುತ್ತದೆ.

ಕೃತಕ ಭೂ-ಉಪಗ್ರಹಕ್ಕೆ ಇರುವ ಅನುಕೂಲಕರವಾದ ಭಿನ್ನತೆ ಏನೆಂದರೆ, ಅದು ಉಲ್ಕೆಗಳಂತಿರದೆ, ಅದರ ಪ್ರಕಾಶವನ್ನು ಗಣನೀಯ ಕಾಲದವರೆಗೂ ಸಮೀಕ್ಷಿಸಲು ಸಾಧ್ಯವಿದೆ.

ಭೂ ಉಪಗ್ರಹ ಈ ಪ್ರಕಾಶವು ಅದರ ಅಸ್ತಿತ್ವದ ಕೊನೆಯ ಘಟ್ಟವನ್ನು ಗುರುತಿಸುವುದು; ಆದರೂ ಕೂಡ ಆಗಲೂ ಉಪಗ್ರಹದ ಸಮೀಕ್ಷೆಗಳಿಂದ ವಿಜ್ಞಾನಕ್ಕೆ ತುಂಬಾ ಲಾಭವಾಗುವುದು. ವಿಜ್ಞಾನಿಗಳು ದೀರ್ಘಕಾಲದವರೆಗಿರುವ ಮಾನವ ನಿರ್ಮಿತ ಉಲ್ಕೆಯನ್ನು ಪಡೆಯುವರು ಮತ್ತು ಅದರ ವಿವರ ಪೂರ್ಣವಾದ ಪರಿಶೀಲನೆಯನ್ನು ಮಾಡಲು ಸಮರ್ಥರಾಗುವರು.

(ಸೋವಿಯಟ್ ಒಕ್ಕೂಟದ ಸಮಾಚಾರ ವಿಚಾರ ಪತ್ರಿಕೆಯಿಂದ)

ರಷ್ಯಾ ದೇಶದ ವಿಜ್ಞಾನಿಗಳು ಬಹಳ ಸಾಹಸ ಕಾರ್ಯವನ್ನು ಮಾಡುತ್ತಿದ್ದಾರೆ. ಕೃತಕವಾದ ಉಪಗ್ರಹ ಒಂದನ್ನು ಭೂಮಿಯ ಸುತ್ತಲೂ ತಿರುಗುವುದನ್ನು ನಿರ್ಮಿಸಿದ್ದಾರೆ. ಸುಮಾರು ಮೂರು ವಾರಗಳಿಗಿಂತಲೂ ಹೆಚ್ಚು ಕಾಲದಿಂದ ಅದು ಭೂಮಿಯನ್ನು ಸುತ್ತುತ್ತಾ ಇದೆ. ಅದರ ವಿಷಯದ ಮೇಲೆ ಕಂಡ ವಿವರಗಳಿಂದ ಸೂರ್ಯಗೋಳದ ಸುತ್ತುಮುತ್ತಲೂ ಕಬ್ಬಿಣದ ಮತ್ತು ಕಲ್ಲಿನ ಮಯವಾದ ಸಣ್ಣ ದೊಡ್ಡ ಉಲ್ಕೆಗಳೂ ಅವುಗಳ ಪುಡಿ ಧೂಳಿನ ವಾತಾವರಣವೂ ಸುತ್ತುತ್ತಿರುವುದಾಗಿ ತಿಳಿಯಬರುತ್ತದೆ. ಭೂಮಿಯ ಸುತ್ತಲೂ ಇರುವ ವಾಯುವಿನ ಅಂದವನ್ನು ನೋಡಿ ಭೂಮಿಯ ಮೇಲಿರುವದೆಲ್ಲವೂ ಗಾಳಿಯಂತೆ ನಿರಾಕಾರವಾಗಿರುವುದೆಂದು ಜನರ ದೃಷ್ಟಿಯಲ್ಲಿ ಕಂಡುಬರುತ್ತದೆ. ಆದರೆ ನಿಜವಾಗಿ ಶೋಧನೆ ನಡೆಸಿ ಭೂಮಿಯ ಸುತ್ತಲಿನ ವಾಯುವಿನ ಮೇಲೆ ಕಠಿಣವಾದ ವಸ್ತುಗಳು ಇರುವವೆಂದೂ ಅವು ಕೆಳಕ್ಕೆ ಬೀಳದೆ ಸೂರ್ಯನ ಆಕರ್ಷಣ ಶಕ್ತಿಯಿಂದಲೇ ಸುತ್ತುತ್ತಾ ಇರುವವೆಂದೂ ಕಂಡುಹಿಡಿದಿರುವುದು ಗಮನೀಯವಾದ ಅಂಶವಾಗಿದೆ. ರಷ್ಯಾದವರು ಕಳುಹಿಸಿದ ಉಪ-ಭೂ-ಗ್ರಹವು (ಶಿಶುಚಂದ್ರ=ಬೇಬಿಮೂನ್) ಸಹ ಒಂದು ಉಲ್ಕೆಯಾಗಿ ಈಗ ಪರಿಣಮಿಸಿ ಇದೆ.

ವೀರಶೈವರು ನಿರಾಕಾರದ ಪರವಸ್ತುವಿನ ಉಪಾಸಕರೆಂಬುದು ಪ್ರಸಿದ್ಧವಾಗಿದೆ. ಇವರ ನಿರಾಕಾರ ವಸ್ತುವು ಭೂಮಿಯ ಮೇಲಿನ ಗಾಳಿಯಲ್ಲ. ಅದರ ಮೇಲಿನ ಉಲ್ಕೆಯಲ್ಲ. ಅದರ ಮೇಲಿನ ಸೂರ್ಯ ಗೋಳವಲ್ಲ. ಆ ಸೂರ್ಯಗೋಳದ ಸುತ್ತಲಿನ ಅಥವಾ ಮೇಲೆ ಇರುವ ವಾಯುವಲ್ಲ. ಅದರ ಮೇಲಿನ ಆಕಾಶವಲ್ಲ. ಇವೆಲ್ಲವುಗಳನ್ನೂ ಮೀರಿ ನಿರಾಕಾರ ವಸ್ತು ಇರುವುದೆಂದು ಈಗಿನ ಶೋಧಕರು ಒಪ್ಪುವಂತೆ ವೀರಶೈವ ಧಾರ್ಮಿಕರು ಒಪ್ಪುತ್ತಾರೆ. ಆ ಮೀರಿದ ನಿರಾಕಾರದಿಂದ ಗೋಳಾಕಾರ

(ಲಿಂಗಾಕಾರ) ಇಗಿರುವ ಸೂರ್ಯನಿರುವಂತೆ ತಮ್ಮ ಹೃದಯದಲ್ಲಿನ ನಿರಾಕಾರ ವಸ್ತು ಲಿಂಗಾಕಾರವಾಗಿರುವುದೆಂದು ಅವರ ಅನುಸಂಧಾನ ಮಾಡುತ್ತಾರೆ. ವೀರಶೈವರ ಧಾರ್ಮಿಕ ಜ್ಞಾನವ ವಿಷಯಗಳು ಈಗಿನ ಶಾಸ್ತ್ರ (ಸೈನ್ಸ್) ಶೋಧಕರ ದೃಷ್ಟಿಗೆ ಸರಿ ಗೂಡುವುದರಿಂದ ಈ ಧರ್ಮಾಭಿಮಾನಿಗಳು ಈಗಿನ ಶಾಸ್ತ್ರ (ಸೈನ್ಸ್) ಕಡೆಗೆ ಗಮನ ಕೊಟ್ಟು ಹೋಲಿಸಿ ನೋಡಿ ತಮ್ಮ ಧರ್ಮ ಜ್ಞಾನವನ್ನು ದೃಢಗೊಳಿಸಬೇಕೆಂದು ಸಮಾಜಕ್ಕೆ ಪ್ರಾರ್ಥನೆ ಮಾಡುತ್ತೇವೆ. –[ರಷ್ಯಾ ದೇಶದ ವಿಜ್ಞಾನಿಗಳು ಮಾಡಿದ ಕೃತಕ ಭೂಮಿಯ ಉಪಗ್ರಹ (ಬೇಬಿಮೂನ್=ಶಿಶುಚಂದ್ರ) ಗೋಳಾಕಾರವಾಗಿದೆ. ಅದರ ಸಹಾಯಕ್ಕಾಗಿ ಕಳುಹಿಸಿದ ಆಕಾಶಬಾಣ (ರಾಕೆಟ್) ಅದೂ ಗೋಳಾಕಾರ ವಾಗಿದೆ. ಹೀಗೆ ಎಲ್ಲವೂ ಗೋಳಾಕಾರ (ಲಿಂಗಾಕಾರ) ಸೃಷ್ಟಿ ನಡೆದಿರುವಾಗ ಲಿಂಗ ದೊಳಗಲ್ಲದೆ ಲಿಂಗವನ್ನೇ ತುಂಬಿಕೊಂಡಿರದೆ ಜಗತ್ತು ಹೊರಗೆ ಎಲ್ಲಿದೆ. ಇದನ್ನೆಲ್ಲಾ ಯೋಚಿಸದೆ ಮನುಷ್ಯನು ಸಂಕೋಚ ಭಾವದಿಂದ ತಾನೊಬ್ಬನೇ ದೊಡ್ಡವನೆಂದು ಆಚ ರಿಸಿದರೆ ಅದು ಸತ್ಯಕ್ಕೆ ಹೊರಗಲ್ಲದೆ ಲಿಂಗದ ಮಹಿಮೆಯನ್ನು ಪೂರ್ಣವಾಗಿ ಬಲ್ಲವರು ಯಾರು ? ಇದನ್ನು ಎಲ್ಲರೂ ಚೆನ್ನಾಗಿ ವಿಚಾರ ಮಾಡಿಕೊಳ್ಳಲಿ.] (–ಸಂ. ೧೩೪)

# ರಷ್ಯಾ ಭಾರತ ಸ್ನೇಹ

ಬೆಂಗಳೂರು ನಗರಸಭೆಯ ಸ್ವಾಗತ ಸಮಾರಂಭದಲ್ಲಿ ಎನ್. ಎಸ್. ಖ್ರುಶ್ಚೆವ್ಹ್ ಅವರ ಭಾಷಣದಲ್ಲಿ ರಷ್ಯಾದೇಶವು ಭಾರತದ ಮೈತ್ರಿಯನ್ನು ಬೆಳೆಯಿಸುವ ವಿಷಯವು ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ಅದರೊಳಗಿನ ಒಂದು ಸಂಗತಿ ಹೀಗೆ ಇದೆ-

"ಆರ್ಥಿಕ ದೃಷ್ಟಿಯಿಂದ ಭಾರತ ದೇಶವು-ಅಧ್ಯಾತ್ಮಿಕತೆಯಲ್ಲಿಯೂ ಸಂಸ್ಕೃತಿಯಲ್ಲಿಯೂ ತನ್ನ ನೈತಿಕ ಮಹತ್ತರತೆಯಲ್ಲಿಯೂ ಅದು ಇಂದು ಹಿರಿಯದಾಗಿರುವಂತೆಯೇ-ಹಿರಿದಾದ ಬಲಿಷ್ಟ ರಾಜ್ಯವಾಗಬೇಕೆಂದೇ ನಮ್ಮ ಅಕೃತ್ರಿಮವಾದ ಮನದಾಸೆ ಆಗಿದೆ. ಅದು ಉನ್ನತವಾದ ಅಭಿವೃದ್ಧಿಗೊಂಡ ಕೈಗಾರಿಕೆ ಉದ್ಯಮವನ್ನು ಹೊಂದಲೆಂದೂ ಪ್ರಗತಿಗಾಮಿಯಾದ ಭೂವ್ಯವಸಾಯವನ್ನೂ ಮತ್ತು ತನ್ನ ಜನತೆಯ ಸಲುವಾಗಿ ಉನ್ನತ ಜೀವನ (ವಿ?)ಸ್ತರವನ್ನೂ ಹೊಂದಲೆಂಬುದೇ ನಮ್ಮ ಮನದಾಸೆಯಾಗಿದೆ. ನಮ್ಮ ಮಟ್ಟಿಗೆ ಹೇಳುವುದಾದರೆ ಈ ಒಳ್ಳೆಯ ಅದ್ಭುತವಾದ ಕಾರ್ಯದಲ್ಲಿ ನಿಮ್ಮೊಡನೆ ಸಹಕರಿಸಲು ನಾವು ಸಿದ್ಧರಿದ್ದೇವೆ". ಇದರಿಂದ ರಷ್ಯಾ ಪ್ರಮುಖರ ಅಭಿಪ್ರಾಯವು ಭಾರತದ ಆರ್ಥಿಕದ ಅಭಿವೃದ್ಧಿಯ ವಿಷಯದಲ್ಲಿ ಕೃತ್ರಿಮವಿಲ್ಲದ ಸಹೃದಯ ಭಾವವುಂಟೆಂಬುದು ವ್ಯಕ್ತವಾಗುತ್ತದೆ. ಭಾರತವು ಸ್ವತಂತ್ರವಾಗಿ ಒಂಬತ್ತು ವರ್ಷಗಳಿಂದಲೂ ತನ ಹಿಂದಿನ ಬಡತನವನ್ನು ಕಳೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಿರುವ ಈ ಕಾಲದಲ್ಲಿ ರಷ್ಯಾದಿಂದ ಆದಷ್ಟು ಸಹಾಯವನ್ನು ಈ ದೇಶದ ರಾಜಕೀಯದವರೂ, ಯಂತ್ರಚಾಲಕರೂ, ವ್ಯಾಪಾರಿಗಳೂ, ವ್ಯವಸಾಯಗಾರರೂ, ಕಾರ್ಮಿಕರೇ ಮೊದಲಾದವರು ತಮತಮಗೆ ಶಕ್ಯವಿದ್ದಷ್ಟು ಪಡೆಯುವುದಕ್ಕೆ ಹೆಚ್ಚು ಹೆಚ್ಚು ಪ್ರಯತ್ನಿಸುವುದು ಉತ್ತಮವಾಗಿದೆ.

ಇದಲ್ಲದೆ ರಷ್ಯಾ ದೇಶಕ್ಕೂ ಭಾರತ ದೇಶವು ಮಾಡಬೇಕಾದ ಒಂದು ದೊಡ್ಡ ಸಹಾಯವೂ ಇದೆ. ಭಾರತವು ಅಧ್ಯಾತ್ಮಿಕ, ಸಂಸ್ಕೃತಿ ಮತ್ತು ನೀತಿಯ ಮಹತ್ತರಗಳಲ್ಲಿ ಈಗಾಗಲೇ ಪ್ರಪಂಚದ ಎಲ್ಲಾ ದೇಶಗಳಿಗಿಂತ ಹಿರಿಯದಾಗಿರುವುದೆಂದು ರಷ್ಯಾ ಪ್ರಮುಖರೇ ಒಪ್ಪಿಕೊಳ್ಳುತ್ತಿದ್ದಾರೆ. ಅವರಿಗೆ ಅಧ್ಯಾತ್ಮಿಕ ಅನುಭವವನ್ನು ಈಗ್ಗಿಂತಲೂ ಹೆಚ್ಚು ಮಾಡಿಕೊಡಲಿಕ್ಕೆ ಭಾರತವು ಪ್ರಯತ್ನಿಸಬೇಕು. ಇದರಿಂದ ಭಾರತದ ಸಂಸ್ಕೃತಿಯು ರಷ್ಯಾದಲ್ಲಿ ಪ್ರಸಾರವಾಗಲಿಕ್ಕೆ ಅನುಕೂಲವಾಗುತ್ತದೆ. ಭಾರತದಲ್ಲಿ ಇರುವ ನಿರ್ಗುಣ ಪರವಸ್ತುವಿನ ಅನುಸಂಧಾನವು ಇತರ ಯಾವ ದೇಶಗಳಲ್ಲಿಯೂ ಇಲ್ಲ. ಈ ಅನುಸಂಧಾನ ಮಾರ್ಗವು ಉಪನಿಷತ್ತುಗಳಲ್ಲಿ, ಶಿವಶರಣರ ವಚನಗಳಲ್ಲಿ ವಿವರಿಸಲ್ಪಟ್ಟಿರುವುದು ಪ್ರಖ್ಯಾತವಾಗಿದೆ. ಇಂತಹ ವಿದ್ಯೆಯನ್ನು ಇಂಗ್ಲಿಷ್, ಹಿಂದಿ ಭಾಷೆಗಳ ಮೂಲಕ ರಷ್ಯಾ ದೇಶದಲ್ಲಿ ಹಾಸಿಸುವಂತೆ ಇವರು ಸಿದ್ಧ

ಪಡಿಸಿಕೊಡಬೇಕು. ಶಾಕುಂತಲ ನಾಟಕ, ಮಹಾಭಾರತ, ರಾಮಾಯಣ ಮುಂತಾದ ಗ್ರಂಥಗಳ ಪರಿಚಯ ಅಥವಾ ಅನುವಾದವನ್ನು ಅವರು ಹೊಂದುವಂತೆ ಮಾಡಿದರೆ ಸಾಲದು. ಸಂಸ್ಕೃತ ಭಾಷೆಯಲ್ಲಿನ ಉಪನಿಷತ್ತುಗಳ ಅಭಿಪ್ರಾಯವೂ ಕನ್ನಡದಲ್ಲಿ ಇರುವ ಶಿವಶರಣರ ವಚನಗಳ ಅಭಿಪ್ರಾಯವೂ ರಷ್ಯಾ ದೇಶದವರಿಗೆ ಚೆನ್ನಾಗಿ ತಿಳಿಯುವಂತೆ ಏರ್ಪಡಿಸಿಕೊಡಬೇಕು.

ಕಾರ್ಮಿಕರಿಗೂ, ವ್ಯವಸಾಯಗಾರರಿಗೂ ಆರ್ಥಿಕಾಭಿವೃದ್ಧಿಯ ಕಾರ್ಯಗಳನ್ನು ರಷ್ಯಾ ದೇಶವು ಏರ್ಪಡಿಸುತ್ತಿರುವಂತೆ ಅವರಿಗೆ ಯೋಗ್ಯವಾದ, ಆಡಂಬರವಿಲ್ಲದ, ಮೋಸಕ್ಕೆ ಒಳಗಾಗದ, ಪುರೋಹಿತರ ದುಂಬುಗಾರಿಕೆಗೆ ಅವಕಾಶವಿಲ್ಲದ, ಸ್ವಂತವಾಗಿಯೇ, ಸ್ವತಂತ್ರವಾಗಿಯೇ ಆಚರಿಸಲಿಕ್ಕೆ ಬರುವಂತಿರುವ ಅಧ್ಯಾತ್ಮಿಕ ಧರ್ಮವನ್ನು ರಷ್ಯಾದ ಕಾರ್ಮಿಕರಿಗೂ, ವ್ಯವಸಾಯಗಾರರಿಗೂ ಇವರೇ ಮುಂತಾದವರಿಗೆಲ್ಲಾ ಕಲಿಸುವ ಪ್ರಯತ್ನಕ್ಕೆ ಭಾರತವು ಹೆಚ್ಚಾಗಿ ಸಹಾಯ ಮಾಡಬೇಕು. ಅಲ್ಲಿ ಆರ್ಥಿಕ ದೃಷ್ಟಿಯಿಂದ ದೇಶದ ಹಣವೆಲ್ಲವೂ ಹೇಗೆ ಒಟ್ಟಿಗೆ ಶೇಖರಿಸಲ್ಪಡುತ್ತಿದೆಯೋ ಹಾಗೆಯೇ ಅಧ್ಯಾತ್ಮಿಕ ದೃಷ್ಟಿಯಿಂದ ಜನತೆಯ ಸಂಸ್ಕೃತಿಯೂ ನೀತಿಯೂ ಬೆಳೆದು ದೇಶದ ಜನರನ್ನೆಲ್ಲಾ ಒಂದೇ ಅಭಿಪ್ರಾಯವುಳ್ಳವರಾಗುವಂತೆ ಮಹತ್ತರವಾದ ದೈವಿಕ ಕಾರ್ಯವೂ ನಡೆಯುತ್ತದೆ. (–ಸಂ. ೧೩೫)

# ಸೋವಿಯಟ್ ಒಕ್ಕೂಟದ ಸಮಾಚಾರ–ವಿಚಾರ

---

ಈ ಹೆಸರಿನ ಒಂದು ಪತ್ರಿಕೆಯು ೪ನೆಯದು ೧೮-೮-೫೫ ರಲ್ಲಿ ಪ್ರಕಟವಾಗಿದೆ. ನವದೆಹಲಿಯಿಂದ ಹೊರಡುತ್ತದೆ. ಈ ಪತ್ರಿಕೆಯಲ್ಲಿ ೧. ಸೋವಿಯಟ್ ರಶಿಯದಲ್ಲಿ ಅಣುಶಕ್ತಿಯ ಶಾಂತಿಯುತ ಉಪಯೋಗಗಳು, ೨. ಪತ್ರಿಕಾಪ್ರಪಂಚ, ಮತ್ತು ಜನತೆಯ ನಡುವಣ ನಿಕಟ ಸಂಪರ್ಕ, ೩. ಸೋವಿಯಟ್ ರಶಿಯಾದಲ್ಲಿ (ಅ) ಲಿಥಯೇನಿಯದಲ್ಲಿ ಸಾರ್ವಜನಿಕ ಶಿಕ್ಷಣ, (ಆ) ಕಜಕ್ ವಿದ್ಯಾಮಂದಿರದಲ್ಲಿ ವೈಜ್ಞಾನಿಕ ಕಾರ್ಯ, (ಇ) ಕೀಯಲ್ ನಗರದಲ್ಲಿ ವಸತಿ ನಿರ್ಮಾಣ, (ಈ) ಕಾರ್ಮಿಕರು ಮತ್ತು ಯಂತ್ರಶಿಲ್ಪಿಗಳು ಸ್ವಂತ ಮನೆಗಳನ್ನು ಕಟ್ಟಿಕೊಳ್ಳುತ್ತಾರೆ, (ಉ) ಕಾರ್ಮಿಕರಿಗೆ ಬೇಸಗೆಯ ರಜಾ ದಿನಗಳು.

ಈ ವಿಷಯಗಳಿವೆ. ರಶಿಯಾ ದೇಶವು ಸ್ವತಂತ್ರದ ಭರಭರಾಟಿಕೆಯಲ್ಲಿ ಈಗ ಬಹಳವಾಗಿ ಮುಂದುವರಿದಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ನವೀನವಾದ ಸ್ವತಂತ್ರ ಭಾರತವು ರಶಿಯಾದಿಂದ ಕಲಿಯಬೇಕಾದ ವಿಷಯಗಳು ಅನೇಕ ಇವೆ. ಈ ಪತ್ರಿಕೆಯಲ್ಲಿ ಬರೆದ 'ಅಣುಶಕ್ತಿಯ ಉಪಯೋಗಗಳು' ಎಂಬಲ್ಲಿ ಸ್ಟಾಲಿನ್‌ಗ್ರಾಡ್ ಮತ್ತು ಇತರ ಜಲ ಕೇಂದ್ರಗಳ (Hydrostations) ನಿರ್ಮಾಣ ಕಾರ್ಯದಲ್ಲಿ ತೊಡಗಿಸುವ ಜಲಸಾಮರ್ಥ್ಯದ ಹೂಳೆತ್ತುವ ಯಂತ್ರಗಳು ಗಣನೀಯವಾದ ಪ್ರಮಾಣದಲ್ಲಿ ಹೆಚ್ಚಿನ ರೀತಿಯಲ್ಲಿ ಹೂಳುಮಣ್ಣನ್ನು ಅದರಲ್ಲಿರುವ ನೀರಿನೊಡನೆ (ಕೆಸರನ್ನು) ಎತ್ತುತ್ತಿರುವುದು ವಿವರಿಸಲ್ಪಟ್ಟಿದೆ. ಮನೆ ಮೊದಲಾದುದನ್ನು ಕಟ್ಟಲು ಬಹಳ ಕೆಸರು ಬೇಕಾದವರು ಅಥವಾ ಹೂಳು ಮಣ್ಣನ್ನು ಹೊರಗೆ ತೆಗೆಯಿಸಬೇಕೆಂಬುವರು ಇಂತಹ ಯಂತ್ರಗಳನ್ನಿಟ್ಟುಕೊಂಡರೆ ಅವರ ಕೆಲಸಗಳು ಬೇಗನೆ ಆಗುತ್ತವೆ. ಹೀಗೆ ರಶಿಯಾದ ಸಾಂಪತ್ತಿಕ ಸೌಕರ್ಯದ ಫಲಗಳನ್ನು ತಿಳಿದು ಭಾರತವು ತನ್ನ ಸ್ಥಿತಿಯನ್ನು ಸಾಂಪತ್ತಿಕವಾಗಿ ಬೆಳೆಯಿಸಿಕೊಳ್ಳಬಹುದಾಗಿದೆ. ಇಂತಹ ಪತ್ರಿಕೆಗಳ ಕಡೆಗೆ ಸಾರ್ವಜನಿಕರ ಗಮನವು ಹೆಚ್ಚಾಗಿ ಬೀಳಬೇಕಾಗಿದೆ.

ಇದರ ಐದನೆಯ ಪತ್ರಿಕೆ ತಾ. ೨೬-೮-೫೫ ರದೂ ಕೈಸೇರಿ ಇದೆ. ಇದರಲ್ಲಿ ಪ್ರಪಂಚದ ಶಾಂತಿಯನ್ನು ನೆಲೆಗೊಳಿಸುವ ಉದ್ದೇಶದಿಂದ ಸೋವಿಯತ್ ಒಕ್ಕೂಟದ ರಾಜಕೀಯವು ತನ್ನ ಸೇನಾಬಲದಲ್ಲಿ ೬೪೦೦೦೦ ಜನರನ್ನು ಕಡಿಮೆ ಮಾಡಲು ನಿರ್ಧರಿಸಿರುವಸಂಗತಿಯು ಪ್ರಕಟವಾಗಿದೆ. ಇದನ್ನು ತಿಳಿದ ಲಂಡನ್ ಮೊದಲಾದ ಕಡೆಗಳಲ್ಲಿನ ಕೆಲವು ಪತ್ರಿಕೆಗಳು ತಮ್ಮ ಅಭಿನಂದನೆಯನ್ನು ಸೂಚಿಸಿ ಪ್ರಪಂಚದಲ್ಲೆಲ್ಲಾ ಶಾಂತಿಯುಂಟಾಗಲು ನಿಶ್ಶಸ್ತ್ರೀಕರಣ ಮಾಡುವುದಕ್ಕೆ ಇದು ಮೊದಲನೆಯ ಹೆಜ್ಜೆ ಎಂದು ಅಭಿಪ್ರಾಯಪಟ್ಟಿವೆ.

ಇದಲ್ಲದೆ ಸೋವಿಯತ್ ರಶಿಯದ ಮಂತ್ರಿಮಂಡಳದ ಅಧ್ಯಕ್ಷರು ಇದೇ ಅಗಸ್ಟ್ ದಿನಾಂಕ ೪ ರಂದು, ಮಾಡಿದ ಭಾಷಣದಲ್ಲಿ "ದೇಶಗಳ ನಡುವೆ ಪ್ರತಿನಿಧಿಮಂಡಲಗಳ ವಿನಿಮಯ ಮತ್ತು ಕೈಗಾರಿಕೋದ್ಯಮ, ವ್ಯವಸಾಯ, ವ್ಯಾಪಾರ, ವಿಜ್ಞಾನ. ಸಂಸ್ಕೃತಿ, ಕಲೆ ಈ ಕ್ಷೇತ್ರಗಳ ಮುಖಂಡರ ಹಾಗೂ ಪ್ರಮುಖ ಸಾರ್ವಜನಿಕ ಮುಖಂಡರ ಪರಸ್ಪರ ನಾಡುಗಳಲ್ಲಿನ ಪ್ರವಾಸವು ಅತ್ಯಂತ ಪ್ರಯೋಜನಕಾರಿಯಾದುದೆಂದು ನಾವು ನಂಬುತ್ತೇವೆ" ಎಂಬುದಾಗಿ ಹೇಳಿರುವುದು ವ್ಯಕ್ತಪಟ್ಟಿದೆ. ಮೇಲೆ ಬರೆದಂತೆ ಭಾರತವು ಮೇಲೆ ಕಂಡ ಕ್ಷೇತ್ರಗಳಲ್ಲಿ ತನಗೆ ಬೇಕಾದ ಸಹಾಯವನ್ನು ಹೊಂದಲು ಬಹಳ ಅನುಕೂಲವಿದೆ ಎಂಬುದು ಸರ್ವರಿಗೂ ತಿಳಿಯದಿರಲಾರದು. ಈ ರೀತಿ ಪರಸ್ಪರ ಸೌಹಾರ್ದದಿಂದ ಪ್ರತಿಯೊಂದು ದೇಶವೂ ಉನ್ನತಿಗೆ ಬರಲೆಂದು ಮಹಾದೇವನನ್ನು ಪ್ರಾರ್ಥಿಸುತ್ತೇವೆ.

ಮೊದಲು ಜರ್ಮನ್ ಯುದ್ಧ ಕಾಲದಲ್ಲಿ ಅಮೇರಿಕವು ದೇವನಿದ್ದಾನೆ ಎಂದು ತಿಳಿಯಬೇಕೆಂದು ರಶಿಯಾ ಬೋಧಿಸಿತು. ಈಗ ರಶಿಯವು ಶಾಂತಿಯಿಂದಿರಬೇಕೆಂದು ಅಮೇರಿಕಕ್ಕೆ ಬೋಧಿಸುತ್ತಲಿದೆ. ಇದೂ ಒಂದು ದೈವಿಕ ವಿನಿಮಯವೇ ಆಗಿದೆ.

(ಸಂ. ೧೩೧)

# ಒಂದೇ ಮರದಲ್ಲಿ ಮೂರು ಬಗೆಯ ಹಣ್ಣುಗಳ ಬೆಳೆ !

ಚಪ್ಪಟೆ ಕಿತ್ತಳೆ. (ಟಾಂಜ್‌ರೈನ್) ಗಜನಿಂಬೆ (ಲೆಮನ್) ಮತ್ತು ಕಿತ್ತಳೆ ಹಣ್ಣುಗಳಿಂದ ಅಲಂಕೃತವಾಗಿ ಫಲಭರಿತವಾದ ಜಂಬೀರ ಜಾತಿಯ ಹಣ್ಣುಗಳನ್ನು (ಸಿಟ್ರಿಸ್ ಫ್ರೂಟ್ಸ್)ಬಿಡುವ ಫಲವೃಕ್ಷಗಳ ತೋಟಗಳು ಕಾಕಸಸ್ಸಿನ ಜಾರ್ಜಿಯಾ ಪ್ರದೇಶದ ಇಳೀ ಉಷ್ಣದ ಜಿಲ್ಲೆಗಳ ಸಾಮೂಹಿಕ ಕೃಷಿ ಕ್ಷೇತ್ರಗಳಲ್ಲಿಯೂ, ರಾಜ್ಯವ್ಯವಸಾಯ ಕ್ಷೇತ್ರಗಳಲ್ಲಿಯೂ ಇವೆ. ಇವು ಚಪ್ಪಟೆ ಕಿತ್ತಳೆಯ ಮರಳಾಗಿದ್ದು ಮೂಲತಃ ಇವುಗಳಿಗೆ ಗಜನಿಂಬೆಯ ಮತ್ತು ಕಿತ್ತಳೆಯ ಮರಗಳ ರೆಂಬೆಗಳು ಕಸಿ ಮಾಡಲ್ಪಟ್ಟಿವೆ. ಈ ಮರಗಳು ಒಂದೇ ಸಮಯದಲ್ಲಿ ಮೂರು ಬಗೆಯ ಜಂಬೀರ ಜಾತಿಯ ಫಲಗಳನ್ನು ಬಿಡುತ್ತವೆ.

ಚಪ್ಪಟೆ ಕಿತ್ತಳೆ ಹಣ್ಣುಗಳ ಮರದ ಬುಡದ ತುದಿಯಲ್ಲಿ (ಕ್ರೌನ್) ಗಜನಿಂಬೆ ಮತ್ತು ಕಿತ್ತಳೆ ಹಣ್ಣಿನ ಟೊಂಗೆಗಳನ್ನು ಕಸಿ ಮಾಡುವುದರ ಪರಿಣಾಮವಾಗಿ ಹಣ್ಣುಗಳು ಹೆಚ್ಚಾಗಿಯೂ ಬಿಡುತ್ತವೆ. ಕಸಿ ಮಾಡಿದ ರೆಂಬೆಗಳು ಎರಡು ಮೂರು ವರ್ಷಗಳ ಅವಧಿಯ ತರುವಾಯ ಫಲಿಸತೊಡಗುತ್ತವೆ. ಆ ಕೊಂಬೆಗಳಲ್ಲಿ ಬಿಡಲಾದ ಹಣ್ಣುಗಳು ದೊಡ್ಡವಾಗಿಯೂ, ರಸಭರಿತವಾಗಿಯೂ ಇರುತ್ತವೆ. ಇಂತಹ ಪ್ರತಿಯೊಂದು ಮರದಿಂದಲೂ ಸಾವಿರಕ್ಕಿಂತಲೂ ಹೆಚ್ಚು ಹಣ್ಣುಗಳು ದೊರೆಯುತ್ತವೆ.

ಕಸಿ ಮಾಡುವ ಋತು ಈಗಾಗಲೇ ಪ್ರಾರಂಭವಾಗಿದೆ. ವಿಶೇಷ ಶಿಕ್ಷಣ ಕ್ರಮ (ಕೋರ್ಸ್)ಗಳಿಂದಲೂ, ಪ್ರೌಢ ವಿದ್ಯಾರ್ಥಿಗಳ ವ್ಯಾಸಂಗ ಸಮಾವೇಶಗಳಲ್ಲೂ (ಸೆಮಿನಾರ್ಸ್) ತರಬೇತು ಪಡೆದವರ ಕೆಲಸವು ಹಣ್ಣಿನ ತೋಟಗಳಲ್ಲಿ ಪ್ರಾರಂಭವಾಗಿದೆ. ಗುಲ್‌ರಿಪ್‌ಷಿ, ಬಾತುಮಿ ಕೊಬುಲೇತಿ ಮತ್ತು ಮಖಾರಾಡ್ಜೆ ಜಿಲ್ಲೆಗಳಲ್ಲಿರುವ ಸಾಮೂಹಿಕ ಕೃಷಿ ಕ್ಷೇತ್ರಗಳಲ್ಲಿಯೂ ರಾಷ್ಟ್ರ ವ್ಯವಸಾಯ ಕ್ಷೇತ್ರಗಳಲ್ಲಿಯೂ ಮೊವಲಸೆಯ ತಂಡದ ಸಾವಿರಾರು ಮರಗಳು ಕಸಿಮಾಡಲ್ಪಟ್ಟಿದೆ. ಈ ವರ್ಷದಲ್ಲಿ ಒಟ್ಟು ೮೨೦೦೦ ಚಪ್ಪಟೆ–ಕಿತ್ತಳೆ ಹಣ್ಣಿನ ಮರಗಳಿಗೆ ಗಜನಿಂಬೆ ಮತ್ತು ಕಿತ್ತಳೆಯ ಕಸಿ ಹಣ್ಣುಗಳು (ಐಸ್) ಹೆಚ್ಚು ಫಲ ನೀಡುಪಂತಹ ಗಜನಿಂಬೆ ಹಾಗೂ ಕಿತ್ತಳೆಯ ಮರಗಳಿಂದ ಕತ್ತರಿಸಲ್ಪಟ್ಟು ಅಂಟುಮಾಡಲ್ಪಡುವುವು. ('ಸೋವಿಯತ್ ಒಕ್ಕೂಟದ ಸಮಾಚಾರ ವಿಚಾರ' ಎನೆಯ ಪತ್ರಿಕೆಯಿಂದ).

(–ಸಂ. ೧೩೨)

# ಮಾನವ ನಿರ್ಮಿತ ಕಲ್ಪವೃಕ್ಷ (ಹಣ್ಣಿನ ತೋಟ)

ರಷ್ಯಾ ದೇಶದ ಸೋಚೀ ಪ್ರಯೋಗ ಕೇಂದ್ರದ ಸಂಶೋಧಕ ವಿಜ್ಞಾನಿಯಾದ ಎಫ್. ಜೋರಿನ್‌ರವರು–ಇವರು ಸುವಿಖ್ಯಾತ ಸೋವಿಯತ್ ವಿಜ್ಞಾನಶಾಸ್ತ್ರವಿಶಾರದರೂ ಪ್ರಕೃತಿ ಪರಿವರ್ತನ ವಿಜ್ಞಾನದ ಪಂಡಿತೋತ್ತಮರೂ ಆಗಿದ್ದ ಐ. ವಿ. ಮಿಚಂಡಿನ್ ಅವರ ಶಿಷ್ಯರಲ್ಲೊಬ್ಬರು—ಮಾನವ ನಿರ್ಮಿತ ಕಲ್ಪವೃಕ್ಷದ (ಫಲೋದ್ಯಾನ ಗಿಡ) ಬೆಳೆ ಎಂಬುದಾಗಿ ಶಿರೋಲೇಖನಬಿಟ್ಟು ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಅವರು ಹೇಳುವುದೇನೆಂದರೆ–ಒಂದೇ ಒಂದು ಗಿಡ–ಒಂದೇ ಜಾತಿಯ ಹಣ್ಣಿನ ಗಿಡದಿಂದ–ಬಗೆಬಗೆಯ ಹಣ್ಣುಗಳು ಫಲಿಸುವಂತೆ ಮಾಡುವುದನ್ನು ತಿಳಿಸಿದ್ದಾರೆ. ಆ ಒಂದು ಗಿಡವೇ 'ಹಣ್ಣಿನ ತೋಟ' ಎನಿಸಿಕೊಳ್ಳುತ್ತದೆ. ಈ ರೀತಿ ಪ್ರಯೋಗ ಮಾಡುವುದಕ್ಕೆ ಈ ಕೆಳಗೆ ಕಂಡ ವಿವರಣೆಯನ್ನು ಕೊಟ್ಟಿದ್ದಾರೆ.

"ಈ ಪ್ರಯೋಗದ ಸಲುವಾಗಿ, ಮೂರು ವರ್ಷ ವಯಸ್ಸಿನ ಬಳ್ಳಿಯ ಸದೃಢ ಸಸಿಯೊಂದನ್ನು ಆರಿಸಿಕೊಳ್ಳಲಾಗುತ್ತದೆ. ಚೆನ್ನಾಗಿ ಅಭಿವೃದ್ಧಿಗೊಂಡ ಅದರ ಪ್ರತಿಯೊಂದು ರೆಂಬೆಯಲ್ಲಿಯೂ (೫-೧೦ ಮಿಲಿಮೀಟರುಗಳ ವ್ಯಾಸವುಳ್ಳ ರೆಂಬೆಗಳಲ್ಲಿ) ಅನುಕೂಲಕರವಾದ ಬೇರೆ ಬೇರೆ ವಿಧವಾದ ಸಸಿಗಳನ್ನೂ ಮೊಳಕೆ ಕಸಿಮಾಡಲಾಗುತ್ತದೆ. ಮೊಳಕೆಗಳು ಕೂಡಿ ಬೆಳೆದು, ಅವುಗಳಿಂದ ಮೊಳಕೆ ಹೊರಟೊಡನೆಯೇ, ಕಸಿಮಾಡಲಾದ ಭಾಗವು ಮಿತಿಮೀರಿ ಬೆಳೆಯದಂತೆ ತೋಟಗಾರರು ನೋಡಿಕೊಳ್ಳುತ್ತಾರೆ. ಒಂದು ಕಸಿಯು ಇನ್ನಿತರ ಕಸಿಗಳ ಮೇಲೆ ಪ್ರಾಬಲ್ಯವನ್ನು ಬೀರದಿರುವುದಕ್ಕಾಗಿ, ಕಾಲಕಾಲಕ್ಕೆ ಅದನ್ನು ಸಮರುಗತ್ತರಿಯಿಂದ ಸವರಲಾಗುತ್ತದೆ.

"ಫಲೋಧ್ಯಾನ ಸಸಿ"ಯನ್ನು ನಿರ್ಮಿಸಿ, ಯಾವ ಹವ್ಯಾಸಿ ತೋಟಗಾರನಾದರೂ ವೈಜ್ಞಾನಿಕ ಪ್ರಯೋಗಗಳನ್ನು ನಡೆಸಬಹುದು, ಹೊಸ ಮಾದರಿ ಸಸಿಗಳನ್ನು ಸೃಜಿಸಬಹುದು. ಇಂತಹ ಗಿಡದ ಮೇಲೆ ಬೆಳೆಯುವ ಹಣ್ಣುಗಳು, ಆಕಾರ, ಗಾತ್ರ, ಬಣ್ಣ ಮತ್ತು ಪಕ್ವಕಾಲಗಳಲ್ಲಿ ಹಲವು ವೇಳೆ ಮಹತ್ತರ ಬದಲಾವಣೆಗಳಿಗೀಡಾಗುತ್ತವೆ. ಈ ಗಿಡವೇ ನೂತನ ಮಾದರಿಗಳನ್ನೂ ನಿರ್ಮಿಸುತ್ತಿವೆಯೆಂದೆನಿಸುತ್ತದೆ. ಅದು ತೀರಾ ಸ್ವಾಭಾವಿಕವೇ. ವಿಭಿನ್ನ ಪ್ರಕೃತಿಯ ಮತ್ತು ವಿಭಿನ್ನ ಜೀವಶಾಸ್ತ್ರೀಯ ಗುಣಗಳ ಜೀವಂತ ಭಾಗಗಳನ್ನು ಏಕೈಕ ಜೀವಾಂಶವಾಗಿ ಕೂಡುವಂತೆ ಜೋಡಿಸಲಾಗುತ್ತದೆ. ಸಸ್ಯ ನಿರ್ಮಾಣ ಕ್ರಮದ ಪ್ರಕ್ರಿಯೆಯಲ್ಲಿ ಅವು ಒಂದರ ಮೇಲೊಂದು ಪ್ರಭಾವವನ್ನು ಬೀರುತ್ತವೆ. ಇಂತಹ ಪ್ರಯೋಗಗಳ ಸಂಘಟನೆಯ ಮುಖ್ಯ ತತ್ವವು ಈ ಪರಸ್ಪರ ಪ್ರಭಾವದಲ್ಲಿಯೇ ಅಡಗಿದೆ.

ಉದಾಹರಣೆಗೆ ಹೇಳುವುದಾದರೆ ಒಂದು ಮಾವರಿಯ ಗಿಡವು ಅತ್ಯುತ್ತಮ ಗುಣವುಳ್ಳ ಫಲಗಳನ್ನು ನೀಡುತ್ತಿದ್ದು, ಒಂದು ಒಣಭೂಮಿ ಪ್ರದೇಶದಲ್ಲಿನ ವಾತಾವರಣ ಪರಿಸ್ಥಿತಿಗಳಲ್ಲಿ ಚೆನ್ನಾಗಿ ಬೆಳೆಯದಿರುವ ಸಂದರ್ಭದಲ್ಲಿ, ಅನಾವೃಷ್ಟಿಯ ಸ್ಥಿತಿಯನ್ನೆದುರಿಸಬಲ್ಲ ಗುಣವುಳ್ಳ ರೆಂಬೆಯನ್ನು ಅದರ ಬಳಿಯಲ್ಲಿಯೇ ಕಸಿಮಾಡಲಾಗುತ್ತದೆ. ಇದರಿಂದ ಆ ಸಸಿಯು ತನ್ನ ನೆರೆಯ ಸಸಿಯಮೇಲೆ ತನ್ನ ಸತ್‌ಪ್ರಭಾವವನ್ನು ಬೀರುತ್ತದೆ. ಯಾವುದಾದರೊಂದು ಬಗೆಯ ರೋಗ ನಿರೋಧಕ ಶಕ್ತಿಯಿಲ್ಲದ ಪಕ್ಷದಲ್ಲಿ, ಅದರ ಪಕ್ಕದಲ್ಲಿ ಅಂತಹ ಶಕ್ತಿಯುಳ್ಳ ಸಸಿಯನ್ನು ಕಸಿಮಾಡುವುದರಿಂದ ಈ ಕೊರತೆಯನ್ನು ಹೋಗಲಾಡಿಸಬಹುದು.

ಗುಣ ವ್ಯತ್ಯಾಸಗಳುಳ್ಳ ನಮೂನೆಗಳ ಸಸಿಗಳನ್ನು—ಹಣ್ಣು ಚೆನ್ನಾಗಿದ್ದರೂ ಸಹ ಅನುಕೂಲರಹಿತ ಪ್ರಾಕೃತಿಕ ಪರಿಸ್ಥಿತಿಗಳಲ್ಲಿ ಹೆಚ್ಚು ನಿರೋಧಕ ಶಕ್ತಿಯಿಲ್ಲದ ಸಸಿಗಳನ್ನು—ವಿಶೇಷತಃ—ಇಡೀ ಅಂಕುರಗಳಾಗಿಯಲ್ಲ, ಭಾಗಗಳಾಗಿ ತೆಗೆದುಕೊಂಡು ಕಸಿಮಾಡಬೇಕಾಗುತ್ತದೆ. ಈ ಕಾರ್ಯಕ್ಕಾಗಿ, ಒಂದು ನಿರ್ದಿಷ್ಟ ನೀತಿಯ ಅಂಕುರವನ್ನು ಇಬ್ಭಾಗವಾಗಿ ಉದ್ದಕ್ಕೂ ಸಮನಾಗಿ ಕತ್ತರಿಸಲಾಗುತ್ತದೆ. ವಿಭಿನ್ನ ಅಂಕುರಗಳ ಭಾಗಗಳನ್ನು ಜೋಡಿಸಲಾಗುತ್ತದೆ ಮತ್ತು ಹಾಗೆ ಜೋಡಿಸಲಾದ ಜಂಟಿ ಅಂಕುರವನ್ನು ಒಂದೇ ಕಸಿಯಾಗಿ ಸೇರಿಸಿ ಬೆಳೆಸಲಾಗುತ್ತದೆ.

ಈ ಕಾರ್ಯವು ಯಶಸ್ವಿಯಾದರೆ, ಜಂಟಿ ಮಾಡಲಾದ ಅಂಕುರ ಭಾಗಗಳು ಒಂದೇ ಮೊಳಕೆಯಾಗಿ ಕೂಡಿ ಬೆಳೆಯುತ್ತವೆ. ಆಮೇಲೆ ಆ ರೆಂಬೆಯಲ್ಲಿ ಬಿಡುವ ಹಣ್ಣುಗಳು ಅವೆರಡೂ ಜಾತಿಯ ಒಳ್ಳೆಯ ಗುಣಗಳನ್ನೂ ಹೊಂದಿರುತ್ತವೆ.

ನಿಂಬೆ ಜಾತಿಯ ಹಣ್ಣುಗಳ ಗಿಡಗಳು ಸ್ವಾಭಾವಿಕವಾಗಿ ಬೆಳೆಯುವ ಪ್ರದೇಶಕ್ಕಿಂತಲೂ ಬಲು ದೂರಕ್ಕೆ, ಸುದೂರೋತ್ತರದಲ್ಲಿ ಸೋಚಿ ನಗರವಿದೆ. ಈ ಜಿಲ್ಲೆಯಲ್ಲಿ ಆಗಿಂದಾಗ್ಗೆ ಕಡುಶೀತ ವಾಯುವಿನ (ಫ್ರಾಸ್ಟ್) ತೊಂದರೆಯಿದ್ದೇ ಇರುತ್ತದೆ. ಆದರೂ ಕೂಡ ಇಂತಹ ತೀವ್ರ ಪರಿಸ್ಥಿತಿಗಳಲ್ಲಿಯೂ ಸದಾ ಶ್ಯಾಮಲ ಗಿಡಗಳು "ಫಲೋಧ್ಯಾನ ವೃಕ್ಷ"ಗಳಾಗಿ, ಬಣ್ಣದಲ್ಲಿಯೂ, ಆಕಾರದಲ್ಲಿಯೂ, ರುಚಿಯಲ್ಲಿಯೂ ಮತ್ತು ಪಕ್ವ ಸಮಯದಲ್ಲಿಯೂ, ತೀರಾ ಭಿನ್ನಭಿನ್ನವಾಗಿರತಕ್ಕ ಹಣ್ಣುಗಳನ್ನು-ಸುಮಾರು ೨,೦೦೦ ಹಣ್ಣುಗಳನ್ನು-ಪ್ರತಿಯೊಂದು ಗಿಡವೂ ನೀಡುತ್ತದೆ".

ಈ ವಿವರಣೆಯ ಪ್ರಕಾರ ಸುಮಾರು ೫೦ ಚದರಡಿ ಬರಿಯ ಸ್ಥಳವುಳ್ಳವರು ಇಂತಹ ಒಂದೊಂದು "ಹಣ್ಣಿನ ತೋಟ"ದ ಗಿಡವನ್ನು ಬೆಳೆಯಿಸಬಹುದಾಗಿದೆ. ಭಾರತ ದೇಶವು ಇಂತಹ ಗಿಡಗಳು ಅಸಂಖ್ಯಾತವಾಗಿ ಬೆಳೆ ಮಾಡುವಂತೆ ಆಗುವುದು ಜನರಿಗೆ ಸಾಫಲ್ಯಕರವಲ್ಲವೇ ? (—ಸಂ. ೧೪೪)

# ಸೋವಿಯಟ್ ಒಕ್ಕೂಟದ ಪತ್ರಿಕೆಗಳು

ಭಾರತ ದೇಶದಲ್ಲಿ ರಷ್ಯಾ ದೇಶವು ವಿಚಾರ ಪ್ರಚಾರವಾಗುವುವರಲ್ಲಿ ೧. ಸೋವಿಯಟ್ ಒಕ್ಕೂಟದ ಸಮಾಚಾರ-ವಿಚಾರ ಎಂಬುದೊಂದು ಕನ್ನಡ ಭಾಷೆಯ ಪತ್ರಿಕೆ, ೨. News and Views from the Soviet Union ಎಂಬ ಇಂಗ್ಲೀಷ್ ಪತ್ರಿಕೆ. ೩. Soviet Land ಎಂಬ ಇಂಗ್ಲಿಷ್ ಪತ್ರಿಕೆ. ಈ ಮೂಲ ಪತ್ರಿಕೆಗಳು ಈಗ ಬಹಳವಾಗಿ ಪ್ರಚಾರದಲ್ಲಿ ಇವೆ.

ಒಂದನೆಯದು ಸೋವಿಯಟ್ ದೂತಾವಾಸದ ಸಮಾಚಾರ ಶಾಖೆಯಿಂದ ಪ್ರಕಟವಾಗುತ್ತದೆ. ಅದು ೨೫ ಬಾರಾಖಂಬಾ ರಸ್ತೆ, ಹೊಸದಿಲ್ಲಿ-೧, ಪೋಸ್ಟ್‌ಬಾಕ್ಸ್ ನಂಬರ್ ೨೪೧ ಎಂಬುದು ಅದರ ವಿಳಾಸ. ಎರಡನೆಯದು ಭಾರತ ದೇಶದಲ್ಲಿರುವ ರಷ್ಯಾ ದೇಶದ ರಾಯಭಾರಿಯ ಸಮಾಚಾರದ ಶಾಖೆಗೋಸ್ಕರ ನ್ಯೂಡೆಲ್ಲಿ-೧ ರಲ್ಲಿ ಸ್ಟ್ಯಾಂಡರ್ಡ್ ಬಿಲ್ಡಿಂಗ್ಸ್ ಕಿತಾಬ ರೋಡಿನಲ್ಲಿರುವ ಆನಂದ ಪ್ರೆಸ್ಸಿನಲ್ಲಿ ಮುದ್ರಣವಾಗಿ ೨೫ ಬಾರಾಖಂಬಾ ರಸ್ತೆಯಲ್ಲಿ ಪ್ರಕಟವಾಗುತ್ತದೆ. ಮೂರನೆಯದು ಭಾರತ ದೇಶದಲ್ಲಿನ ರಷ್ಯಾ ರಾಯಭಾರಿಯ ಸಮಾಚಾರದ ಇಲಾಖೆಯಿಂದ ಹೊರಡುತ್ತದೆ. ಈ ಪತ್ರಿಕೆಗಳು ಭಾರತ ದೇಶಕ್ಕೆ ಮಾಡುವ ಉಪಕಾರಗಳು ಬಹಳವಾಗಿವೆ.

೧. ಪ್ರಪಂಚದಲ್ಲಿ ಮುಂದೆ ಯುದ್ಧವು ಶಾಂತಿಯನ್ನು ನೆಲೆಗೊಳಿಸಲಿಕ್ಕಾಗಿ ಅನೇಕ ಲೇಖನಗಳು ಪ್ರಕಟವಾಗುತ್ತವೆ.

೨. ವ್ಯವಸಾಯದಲ್ಲಿ ಮತ್ತು ತೋಟಗಳನ್ನು ಮಾಡುವುದರಲ್ಲಿ ಈಗಿನಕ್ಕಿಂತಲೂ ಹೆಚ್ಚು ಬೆಳೆಯನ್ನು ಬೆಳೆಯುವ ವಿಚಾರದ ಲೇಖನಗಳು ಇರುತ್ತವೆ. ಮಳೆಯಿಲ್ಲದೆ ಮಂಜು ಜಿಬುರುಹನಿ ಬೀಳುವ ಮಾತ್ರದಿಂದಲೇ ನೇಗಿಲಿನ ಉಪಯೋಗವನ್ನೂ ಅಪರೂಪವಾಗಿ ಮಾಡಿ ಗೋದಿ ಬೆಳೆಯುವಿಕೆ ಮುಂತಾದ ವಿಷಯಗಳಿರುತ್ತವೆ.

(–ಸಂ. ೧೩೭)



# ಗ್ರಂಥ ಪರಿಚಯ ಮತ್ತು ಗ್ರಂಥ ವಿಮರ್ಶೆ

[ಟಿಪ್ಪಣಿ : ಸದ್ಧರ್ಮದೀಪಿಕೆಯ ಸಂಪಾದಕರು ಗ್ರಂಥಾನ್ವೇಷಣೆಗಾಗಿ ಕನ್ನಡ ನಾಡಿನಲ್ಲೆಲ್ಲ ಸಂಚಾರ ಮಾಡಿದುದುಂಟು ಮತ್ತು ಅವರಲ್ಲಿಗೇ ಕೆಲವು ಅಚ್ಚಾದ ಅಥವಾ ಅಚ್ಚಾಗದ ಗ್ರಂಥಗಳು ಬರುತ್ತಿದ್ದುದೂ ಉಂಟು. ಹಸ್ತಪ್ರತಿಗಳಲ್ಲಿ ಕೆಲವನ್ನು ಇವರೇ ಸಂಸ್ಕರಿಸಿ ಪಾಠಾಂತರ, ಟಿಪ್ಪಣಿ, ವ್ಯಾಖ್ಯಾನ ಮತ್ತು ಸಮುಚಿತ ಮುನ್ನುಡಿಯೊಡನೆ ಪ್ರಕಟಿಸುತ್ತಿದ್ದರು. ಅಚ್ಚಾದ ಗ್ರಂಥಗಳನ್ನು ಓದಿ ಸೂಕ್ತ ವಿಮರ್ಶೆಯನ್ನು ನಿರ್ದಾಕ್ಷಿಣ್ಯವಾಗಿ ಮಾಡುತ್ತಿದ್ದರು.

ತಮಗೆ ಲಭಿಸಿದ ನೂರಾರು ಹಸ್ತಪ್ರತಿಗಳನ್ನು ಪ್ರಕಟಿಸಲು ಸಾಧ್ಯವಿಲ್ಲದಿದ್ದಾಗ ಆ ಗ್ರಂಥಗಳ ತಮ್ಮ ಟೀಕೆ ಟಿಪ್ಪಣಿಗಳೊಂದಿಗೆ ಪ್ರಕಟಿಸುತ್ತಿದ್ದರು. ವಿಮರ್ಶೆಗೆ ಬಂದ ಪ್ರಾಚೀನ ಮತ್ತು ನವೀನ ಗ್ರಂಥಗಳು ನೂರಾರು. ಅವುಗಳನ್ನು ಕೂಡ ಸಂದರ್ಭೋಚಿತವಾಗಿ ಗುಣೈಕಪಕ್ಷಪಾತಿಗಳಾಗಿ ವಿಮರ್ಶಿಸುತ್ತಿದ್ದರು. ಮಾದರಿಗಾಗಿ ಕೆಲವನ್ನು ಮುಂದೆ ಕೊಟ್ಟಿದೆ. 'ಸಶೇಷ' 'ಮುಂದುವರಿವುದು' -ಎಂಬ ಮಾತುಗಳು ಕೆಲವು ಲೇಖನಗಳ ಅಂತ್ಯದಲ್ಲಿ ಬಂದಿವೆ. ಆದರೆ ಕಾಲಾನುಭವದಿಂದಲೋ ಮತ್ತಾವ ಕಾರಣದಿಂದಲೋ ಆ ಲೇಖನಗಳು ಅಪೂರ್ಣವಾಗಿಯೇ ಉಳಿದಿವೆ. ಅವುಗಳಲ್ಲಿ ಕೆಲವು ಸ್ವಯಂಪರಿಪೂರ್ಣವಾಗಿಯೇ ಇವೆ.]

# ೧. ಪ್ರಭುದೇವರು ನಿರೂಪಿಸಿದ ಪರಮಯೋಗ ಮಂತ್ರಗೋಪ್ಯ ಪರಿಚಯು

೨೭ ಪದ್ಯಗಳುಳ್ಳ ಈ ಮಂತ್ರಗೋಪ್ಯದ ಮೂಲವು ಓಲೆಯ ಪ್ರತಿಯಲ್ಲಿ ಶಿವ ಮೊಗ್ಗ ಡಿ॥ ಶಿರಾಳಕೊಪ್ಪದಲ್ಲಿ ಇದ್ದಾಗ ವೇ. ಶೀಲವಂತಮಠದ ಮಹಾಲಿಂಗಯ್ಯನವ ರಲ್ಲಿ ದೊರಕಿತ್ತು. ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾ ಸ್ವಾಮಿಗಳವರ ಚಿತ್ರದುರ್ಗದ ಬೃಹನ್ಮಠದಲ್ಲಿ ಈ ಮೂಲಕ್ಕೆ ಕಲ್ಮಠದ ಪ್ರಭುದೇವರು (ವಿದ್ಯಾನಗರದಲ್ಲಿ ಕ್ರಿ. ಶ. ೧೪೩೦ ರಲ್ಲಿ ಇದ್ದವರು ಮತ್ತು 'ಲಿಂಗಲೀಲಾ ವಿಲಾಸ ಚಾರಿತ್ರ'ವನ್ನು ಬರೆದವರು) ಟೀಕಾ ತಾತ್ಪರ್ಯವನ್ನು ಬರೆದ ಪ್ರತಿಯು ದೊರೆಯಿತು. ಶ್ರೀಮನ್ ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರು ಇವರ ಹಾವೇರಿ ಹುಕ್ಕೇರಿ ಮಠದಲ್ಲಿ 'ಇವಕ್ಕೆ ಇನ್ನೊಂದು ವಿಧವಾದ ಟೀಕೆಯುಳ್ಳ ಪ್ರತಿ ದೊರಕಿತು. ಈ ಟೀಕೆಯು ಯಾರಿಂದ ಆದದ್ದೆಂಬುದನ್ನು ಈ ಪ್ರತಿಯಲ್ಲಿ ಕಾಣುವುದಿಲ್ಲ. ಈ ಮೂರು ಪ್ರತಿಗಳ ಸಹಾಯದಿಂದ ಈ ಪುಸ್ತಕವು ಮುದ್ರಣವಾಯಿತು. ಈ ಮೂರು ಪ್ರತಿಗಳನ್ನು ಒದ ಗಿಸಿಕೊಟ್ಟದ್ದಕ್ಕಾಗಿ ಅವರ ಉಪಕಾರ ಸ್ಮರಣೆಯನ್ನು ಮಾಡುತ್ತೇನೆ.

ಇವರಲ್ಲಿರುವ ಪದ್ಯಗಳು ಮೊದಲನೆಯ ಪಾದ ಮೂರನೆಯ ಪಾದ ೨೦ ಮಾತ್ರೆ, ಎರಡನೆಯ ಪಾದ ನಾಲ್ಕನೆಯ ಪಾದ ೧೬ ಮಾತ್ರೆ ಇರುವಂತೆ ರಚಿಸಲ್ಪಟ್ಟಿವೆ-ಈ ನಮೂನೆಯ ಪದ್ಯದ ಹೆಸರೇನೆಂಬುದನ್ನು ತಿಳಿಯುವುದು ಕಷ್ಟವಾಗಿದೆ.

ಪದ್ಯಗಳು ಸುಲಭವಾದ ಕನ್ನಡ ಪದಗಳಿಂದ ಕೂಡಿವೆ. ಆದರೆ ಅರ್ಥವು ಬಹಳ ಗಾಂಭೀರ್ಯವಾಗಿದೆ. ಸಂಸ್ಕೃತದಲ್ಲಿ ಸೂತ್ರಗಳಿಗೆ ಹೆಚ್ಚು ವಿವರಣದ ವೃತ್ತಿಗಳು ವ್ಯಾಖ್ಯಾನಗಳು ಹೇಗೆ ಬೇಕೋ ಹಾಗೆ ಇವುಗಳಿಗೂ ವಿವರಣವಿಲ್ಲದೆ ಅಭಿಪ್ರಾಯ ತಿಳಿವುದು ಕಷ್ಟವಾದ್ದರಿಂದ ಇವನ್ನು ಕನ್ನಡ ಸೂತ್ರಗಳೆಂದು ತಿಳಿಯಬೇಕಾಗಿದೆ. ಕಲ್ ಮಠದ ಪ್ರಭುದೇವರ ಟೀಕೆಯನ್ನು ೧ನೆಯ ಟೀಕೆ ಎಂದೂ ಇನ್ನೊಂದನ್ನು ಎರಡ ನೆಯ ಟೀಕೆ ಎಂದೂ ವಿಭರಿಸಿ ಆ ಕಲ್‌ಮಠದ ಪ್ರಭುದೇವರು ಬರೆದ ತಾತ್ಪರ್ಯವನ್ನೇ ಕಡೆಯಲ್ಲಿ ಕೊಟ್ಟಿರುತ್ತದೆ. ಮೂಲದ ಕೆಲವು ಭಾಗವನ್ನು ತೆಗೆದುಕೊಂಡು ಅವರ ಪ್ರತಿಪದದ ಅರ್ಥವನ್ನು ಬರೆದು ಮತ್ತೆ 'ಹೀಗೆಂಬುದು ಈ ಶಬ್ದಕ್ಕರ್ಥ' ಎಂದು ಹಿಂದಿ ನವರು ಬರೆದಿರುವ ಟೀಕೆಗಳಲ್ಲಿ ಎರಡು ಮೂರು ಸಾರಿ ಮೂಲದ ಪದಗಳು ಬರುವು ದಲ್ಲಿದೆ ಎಂಬ "ಶಬ್ದಕ್ಕರ್ಥ" ಎಂಬ ವಾಕ್ಯಗಳ ಗುಂಪು ಬಹಳ ಇರುತ್ತವೆ. ಹೀಗಾದರೆ ಒಟ್ಟಿನ ಅರ್ಥವನ್ನು ಹುಡುಕಿಕೊಂಡು ತಿಳಿದುಕೊಳ್ಳಲಿಕ್ಕೆ ಶ್ರಮಪಡಬೇಕಾಗುವದೆಂದು ಯೋಚಿಸಿ ಅರ್ಥದ ಪದಗಳನ್ನೇ ಒಟ್ಟುಗೂಡಿಸಿ ಟೀಕೆ ಎಂದು ಬರೆದಿರುತ್ತದೆ. ಈ

ಎರಡು ಟೀಕೆಗಳನ್ನು ನೋಡಿದರೆ ಮೂಲ ಪದ್ಯಗಳಲ್ಲಿರುವ ಪ್ರತಿಪದದ ಅರ್ಥವು ದೊರಕುತ್ತದೆ. ಒಂದು ಟೀಕೆಯಲ್ಲಿ ಯಾವದಾದರೂ ಪದದ ಅರ್ಥವು ತಿಳಿಯದೆ ಇದ್ದರೆ ಇನ್ನೊಂದು ಟೀಕೆಯಲ್ಲಿ ತಿಳಿಯಬಹುದು. ಇವುಗಳ ಜೊತೆಗೆ ತಾತ್ಪರ್ಯವೂ ಸೇರಿದರೆ ರಚಿಸಿದವರ ಅಭಿಪ್ರಾಯವು ಚೆನ್ನಾಗಿ ತಿಳಿಯುತ್ತದೆ. ಕೆಲವು ಕಡೆ ಹಳೆಗನ್ನಡ ಪದಗಳಿದ್ದು ಅರ್ಥವು ಕಷ್ಟವೆಂದು ತೋರಿದ್ದರಿಂದ ಸುಲಭವಾಗಿ ತಿಳಿಯುವಂತೆ ಸಂಧಿ ಬಿಡಿಸಿ ಅಥವಾ ಕೆಲ ಪದಗಳನ್ನು ಬೇರೆಯಾಗಿ ಜೋಡಿಸಿ ಬರೆದಿರುವುದೇ ವಿನಹಾ ಮೂಲಕರ್ತರ ಅಭಿಪ್ರಾಯಕ್ಕೆ ಭಿನ್ನವಾಗಿ ಬರೆದಿಲ್ಲ. ಆವರಣದಲ್ಲಿ ಬರೆದ ಪದಗಳು ಈಗ ಹಾಕಿದವುಗಳಾಗಿವೆ.

ಕಲ್‌ಮಠದ ಪ್ರಭುದೇವರು ಬರೆದ ಪೀಠಿಕಾಸೂತ್ರದಲ್ಲಿ ಈ ಗ್ರಂಥದ ಅರ್ಥವು ಯೋಗಮಾರ್ಗಿಗಳು ಮೊದಲಾದವರಿಗೆ ತಪ್ಪೆಂದು ತಿಳಿಯುತ್ತದೆ ಎಂದು ಹೇಳಿದ್ದಾರೆ. ಪ್ರಭುದೇವರು ಸಹ ಶರಣನಿಗೆ ಆ ಪರವಸ್ತು ಗೋಚರಿಸುವದೆಂದೂ ವಾಚಾಳಕರು ಎಂದರೆ ವೇದಾಂತಿ(ಶುದ್ಧಾದ್ವೈತಿ)ಗಳಿಗೆ ಇದು ಗೋಚರಿಸುವುದಿಲ್ಲ ಎಂದೂ ಬರೆದಿದ್ದಾರೆ. ಆ ಪರವಸ್ತುವು ಅದೃಶ್ಯ ಮಾನಸಗೋಚರನಲ್ಲದವನು ಅಕ್ಷರ ಸ್ವರೂಪನು ಲಿಂಗಸ್ವರೂಪನು ಎಂದೂ ಹೀಗೆ ತಿಳಿವುದೇ ಶರಣಮಾರ್ಗವೆಂದೂ ಹೇಳಿದ್ದಾರೆ. ಇವುಗಳಿಂದ ಶರಣ ಮಾರ್ಗವು ಇತರರು ಒಪ್ಪದಿರುವಂಥಾ ಒಂದು ಮಾರ್ಗವೆಂದು ತೋರುವಂತೆ ಆಗಿದೆ. ಈಗಿನ ಕೆಲವರು ಹೀಗೆಯೇ ಹೇಳುತ್ತಾರೆ. ಎಂದರೆ ಲಿಂಗಾಂಗ ಸಾಮರಸ್ಯದ ಅಭಿಪ್ರಾಯವು ಬಸವೇಶನ ಕಾಲದಿಂದೀಚೆಗೆ ಗೊತ್ತಾದದ್ದೆಂದು ಹೇಳುತ್ತಾರೆ. ಆದರೆ ನಿಜಸ್ಥಿತಿಯನ್ನು ಹುಡುಕಿದರೆ ಈ ಮಾರ್ಗವು ಋಷಿಗಳ ಕಾಲದಲ್ಲಿಯೂ ಒಪ್ಪಲ್ಪಟ್ಟದ್ದೇ ಎಂದು ತಿಳಿಯುತ್ತದೆ.

೧೦೮ ಉಪನಿಷತ್ತುಗಳು ಮುದ್ರಣವಾಗಿರತಕ್ಕವುಗಳಲ್ಲಿ ಮೊದಲಿನ ಹತ್ತು ಬಹಳ ಪೂರ್ವದವುಗಳೆಂದು ತಿಳಿದಿರುವುದು ಸರಿಯಷ್ಟೆ. ಇವುಗಳಲ್ಲಿ ಒಂದಾದ ಮುಂಡಕೋಪನಿಷತ್ತಿಗೆ ಶ್ರೀ ಶಂಕರಾಚಾರ್ಯರ ಗುರುಗಳಾದ ಗೌಡಪಾದರು ವ್ಯಾಖ್ಯಾನವಾಗಿ ಕೆಲವು ಶ್ಲೋಕಗಳನ್ನು ರಚಿಸಿರುತ್ತಾರೆ. ಇವರು ಕಲ್ಯಾಣದಲ್ಲಿ ಇದ್ದ ಪ್ರಭುದೇವರಿಗಿಂತ ಹಿಂದಿನವರೆಂಬುದು ನಿರ್ವಿವಾದದ ವಿಷಯವಾಗಿದೆ. ಆದ್ದರಿಂದದ ಈ ಉಪನಿಷತ್ತು ಅವರಿಗಿಂತಲೂ ಪೂರ್ವದ್ದು ಎಂದು ದೃಢಪಡುತ್ತದೆ.ಇದರಲ್ಲಿ ಪ್ರಥಮ ಮುಂಡಕ ಪ್ರಥಮ ಖಂಡದಲ್ಲಿ

> ಅಥ ಪರಾಯಯಾ ತದಕ್ಷರಮಧಿಗಮ್ಯತೇ, ಯತ್ತದದ್ರೇಶ್ಯಮಗ್ರಾಹ್ಯ
> ಮಗೋತ್ರಮವರ್ಣಮಚಕ್ಷುಃ ಶ್ರೋತ್ರಂತದಪಾಣಿಪಾದಂ ನಿತ್ಯಂ ವಿಭುಂ
> ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ತದ್ಭೂತಯೋನಾ ಪರಿಪಶ್ಯಂತಿ
> ದೀರಾಃ.........ತಥಾಕ್ಷರಾತ್ ಸಂಭವತೀಹ ವಿಶ್ವಂ.

ತಾತ್ಪರ್ಯ : ಧೀರರಾದವರು ಪರಾವಿದ್ಯೆಯಿಂದ ಕಣ್ಣು ಮೊದಲಾದವುಗಳಿಗೆ ಕಾಣಬಾರದ ಅಕ್ಷರ ಎಂದರೆ ನಿರಾಕಾರ ಪರವಸ್ತುವನ್ನು ನೋಡುತ್ತಾರೆ. ಅಕ್ಷರದಿಂದ ಈ ಜಗತ್ತು ಉಂಟಾಗಿದೆ.

ತೃತೀಯ ಮುಂಡಕ ಪ್ರಥಮ ಖಂಡದಲ್ಲಿ—

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ
ಕರ್ಮಣಾ ವಾ
ಜ್ಞಾನಪ್ರಸಾದೇನ ವಿಶುದ್ಧ ಸತ್ವಸ್ತತಸ್ತುತಂ ಪಶ್ಯತೇ ನಿಷ್ಕಲಂ
ಧ್ಯಾಯಮಾನಃ

ತಾತ್ಪರ್ಯ : ನಿಷ್ಕಲವಾದ ಪರವಸ್ತುವನ್ನು ಜ್ಞಾನಪ್ರಸಾದದಿಂದ ವಿಶುದ್ಧ ಸತ್ವನಾದವನು ಧ್ಯಾನಿಸಿ ಕಾಣುತ್ತಾನೆ.

ಇವುಗಳಲ್ಲಿ ಅಕ್ಷರ, ನಿಷ್ಕಲ ಈ ಪದಗಳು ನಿರಾಕಾರನಾದ ಪರವಸ್ತುವಿಗೆ ಉಪಯೋಗಿಸಲ್ಪಟ್ಟಿವೆ. ಇವನನ್ನು ಪರಾವಿದ್ಯೆಯಿಂದ ತಿಳಿಯಬಹುದು ಎಂದು ಹೇಳಿದ್ದಾರೆ. ವ್ಯಾಸಋಷಿಗಳೂ ಸಹ ಶಿವಪುರಾಣ ವಾಯವೀಯ ಸಂಹಿತೆಯಲ್ಲಿ ಪರಮವಿದ್ಯ ಅಪರಮವಿದ್ಯೆ ಎಂದು ಎರಡು ವಿದ್ಯೆಗಳಿವೆ. ಪರಮವಿದ್ಯೆಯೇ ಕಾಮಿಲಕಾದಿ ವಾತುಲಾಂತಗಳಾದ ೨೮ ಶಿವಾಗಮಗಳಲ್ಲಿ ಹೇಳಿದ್ದು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಶರಣನಾದರೂ ಈ ೨೮ ಶಿವಾಗಮಗಳಲ್ಲಿ ಹೇಳಲ್ಪಟ್ಟಂತೆ ನಿರಾಕಾರ ಪರವಸ್ತುವಿನ ಸೇವಾರೂಪವಾದ ನಡತೆಯನ್ನು ಅಂಗೀಕರಿಸತಕ್ಕವನೇ ಆಗಿದ್ದಾನೆ.

ಇನ್ನು ಅಕ್ಷರವೆಂದರೆ ಯಾವುದು ? ಎಂಬುದನ್ನು ವಿಚಾರ ಮಾಡೋಣ. ಹೀಗೆ ವಿಚಾರಕ್ಕೆ ಬಂದ ಅಂಶಗಳನ್ನು ಇದೇ ಸಂಬಂಧವಾಗಿ ಹೇಳಲ್ಪಟ್ಟ ಇತರ ಉಪನಿಷತ್ತುಗಳು ಮೊದಲಾದ ಪ್ರಮಾಣಗಳಿಂದ ಗ್ರಹಿಸಬೇಕು. ಹೀಗೆ ಗ್ರಹಿಸಿದ ಪ್ರಮಾಣಗಳಿಗೆ ಉಪಬೃಂಹಣ ವಾಕ್ಯಗಳು ಎಂದು ಕರೆಯುತ್ತಾರೆ. ಈ ಉಪಬೃಂಹಣ ವಾಕ್ಯಗಳಿಲ್ಲದೆ ಮಾಡಿದ ಅರ್ಥವನ್ನು ಸಾಧುವೆಂದು ಒಪ್ಪುವುದಿಲ್ಲ. ಆದ್ದರಿಂದ ಹೀಗೆ ಹುಡುಕಿದ್ದಾದರೆ ಮಾಂಡೂಕ್ಯೋಪನಿಷತ್ತಿನಲ್ಲಿ (ಇದೂ ಹತ್ತರದಲ್ಲಿ ಒಂದು = ಹಳೆಯದು).

ಓಮಿತ್ಯೇತದಕ್ಷರಂ ಇದಂ ಸರ್ವಂ

ಎಂದು ಹೇಳಿರುವದರಿಂದ ಇದರಿಂದ ಅಕ್ಷರವು ಮೂಲ ಪ್ರಣವವೆಂದು ಅಭಿಪ್ರಾಯವಾಗುತ್ತದೆ. ಇಲ್ಲಿ ಅಕ್ಷರನು ಜಗತ್ಕಾರಣನೆಂದು ಹೇಳಿರುವದರಿಂದಲೂ ಲಿಂಗ ಶಬ್ದದ ಉತ್ಪತ್ತಿಯನ್ನು ಇದೇ ರೀತಿ ಹೇಳಿರುವದರಿಂದಲೂ ಅಕ್ಷರವೆಂದರೆ ಲಿಂಗ ಎಂದು ಅಭಿಪ್ರಾಯವಾಗುತ್ತದೆ.

ಪ್ರಭುದೇವರಾದರೂ ೧೮ನೆಯ ಪದ್ಯದಲ್ಲಿ ಮೂಲಪ್ರಣವ ಅದರಲ್ಲಿ ವ್ಯಾಪಿಸಿರುವ ಐದು ಅಕ್ಷರಗಳು ಸೇರಿ ಆರು ಅಕ್ಷರ ಮಂತ್ರ, ಅದೇ ರೀತಿ ಆಗಿರುವ ಲಿಂಗ ಎಂದು ಹೇಳಿರುತ್ತಾರೆ. ವ್ಯಾಸ ಋಷಿಗಳು ಸಹ ಅಕ್ಷರ ಎಂದರೆ ಲಿಂಗ ಎಂದು ತಮ್ಮ ಪುರಾಣಗಳಲ್ಲಿ ಅನೇಕ ಕಡೆ ಹೇಳಿರುತ್ತಾರೆ. ಸೂಕ್ಷ್ಮತಂತ್ರ ೬ನೆಯ ಪಟಲದಲ್ಲಿ—

ಪರಾತ್ಪರತರಂ ತತ್ವಮಕ್ಷರಂ...ಯದ್ರೂಪಂ ತಲ್ಲಿಂಗಮಿತಿ ಕೀರ್ತಿತಂ

ತಾತ್ಪರ್ಯ : ಅಕ್ಷರವು ಲಿಂಗವೆಂದು ಹೇಳಲ್ಪಡುತ್ತದೆ. ಪಾರಮೇಶ್ವರಾಗಮ ೧೧ನೆಯ ಪಟಲದಲ್ಲಿ

ತಸ್ಮಾದೇಕಾಕ್ಷರಂ ದೇವ ಮಾಹುರಾಗಮವಾದಿನಃ

ತಾತ್ಪರ್ಯ : ಆಗಮವಾದಿಗಳು ಏಕಾಕ್ಷರನನ್ನು ದೇವನೆಂದು ಹೇಳುತ್ತಾರೆ. ಆದ್ದರಿಂದ ಅಕ್ಷರ ಎಂದರೆ ಲಿಂಗವು.

ನಿಷ್ಕಲ ಎಂಬ ಪದವಂತೂ ವೀರಶೈವರ ಬಳಕೆಯಲ್ಲಿ ಇದ್ದದ್ದೂ ಟೀಕಾಕಾರರ ಪೀಠಿಕಾಸೂತ್ರದಲ್ಲಿ ಬರೆಯಲ್ಪಟ್ಟದ್ದೂ ಆಗಿದೆ. ಪ್ರಣವ ಸ್ವರೂಪಿಗಳಾದ ತೋಂಟದ ಸಿದ್ಧಲಿಂಗ ಸ್ವಾಮಿಗಳು ಸಿದ್ಧೇಶ್ವರ ವಚನ ೨೬೩ ರಲ್ಲಿ ನಿಷ್ಕಲ ಲಿಂಗವೆಂದು ಹೇಳಿರುತ್ತಾರೆ. ಆದ್ದರಿಂದ ನಿಷ್ಕಲವೆಂದರೆ ಲಿಂಗವೆನ್ನುವುದಕ್ಕೆ ಬೇರೆ ಹುಡುಕಿಕೊಂಡು ಹೋಗ ಬೇಕಾಗಿಯೇ ಇಲ್ಲ.

ಧೀರಾಃ ಎಂಬ ಪದವು ವೀರಶೈವರಿಗೆ ಹೇಳಲ್ಪಟ್ಟದ್ದೆಂದು ಈಚಿಗಿನ ವೀರಶೈವ ಧರ್ಮದ ಸಂಗ್ರಹ ಕರ್ತರು ಬರೆದಿರುತ್ತಾರೆ.

ಈ ಕಾರಣಗಳಿಂದ ನಿರಾಕಾರ ವಸ್ತುವೇ ಲಿಂಗವೆಂದೂ ಈ ಪುಸ್ತಕದಲ್ಲಿ ಹೇಳಿ ರುವ ವಿಷಯವೂ ಉಳಿದ ವಿಷಯಗಳೂ ಮೇಲೆ ಕಂಡಂತೆ ವ್ಯಾಸಋಷಿಗಳು ಮೊದ ಲಾದವರಿಗೆ ಒಪ್ಪಿಗೆಯಾದವುಗಳೇ ಹೊರತು ಭಿನ್ನವಾದವುಗಳಲ್ಲವೆಂದೂ ಚೆನ್ನಾಗಿ ತಿಳಿಯುತ್ತದೆ ಮತ್ತು ಕೆಲವು ಉಪಮಾನಗಳೂ ಕೂಡ ಉಪನಿಷತ್ತುಗಳಲ್ಲಿ ಬಂದವು ಗಳೇ ಆಗಿವೆ.

ಮುಂಡಕ–ತೃತೀಯ ಖಂಡದಲ್ಲಿ—

ಯಥಾನದ್ಯಃ ಸ್ಯಂದಮಾನಾಃ ಸಮುದ್ರೇಸ್ತಂಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ ನಾಮರೂಪಾದ್ ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ...ಸ ಯೋ ಹವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವಭವತಿ.

ತಾತ್ಪರ್ಯ : ನದಿಗಳು ಸಮುದ್ರದಲ್ಲಿ ಸೇರಿ ತಮ್ಮ ಹೆಸರು ಮತ್ತು ರೂಪಗಳನ್ನು ಹೇಗೆ ಬಿಡುವವೋ ಹಾಗೆ ಬುದ್ಧಿವಂತನು ನಾಮರೂಪಗಳನ್ನು ಬಿಟ್ಟು ದಿವ್ಯ ಪರಾತ್ಪರ ವಸ್ತುವನ್ನು ಹೊಂದುವನು.

ಪರಬ್ರಹ್ಮನನ್ನು ತಿಳಿದವನು ಪರಬ್ರಹ್ಮನೇ ಆಗುತ್ತಾನೆ.

ಇಷ್ಟು ದೀರ್ಘವಾಗಿ ವಿವರಿಸಿರುವ ಅರ್ಥವನ್ನೇ "ನದಿಯೊಳಗೆ ನದಿ ಬೆರದಂತೆ ಸಾಕಾರವಡಗಿದಾ ಪರಮಯೋಗಿ" ಇಷ್ಟು ಸಂಕ್ಷಿಪ್ತ ಪದಗಳಲ್ಲಿ ೧೬೭ನೆಯ ಪದ್ಯದಲ್ಲಿ ನೋಡಬಹುದು.

ಇವಲ್ಲದೆ ವೇದಾಂತ ಸಿದ್ಧಾಂತ ಯೋಗ ಮಾರ್ಗಗಳಿಗೆ ಈ ಶರಣಮಾರ್ಗವು ನಿಲುಕುವುದಿಲ್ಲ ಎಂಬ ಇದರಲ್ಲಿರುವ ಅಭಿಪ್ರಾಯವು ಒಂದು ಮತದ ಹೆಚ್ಚುಗಾರಿಕೆಗಾಗಿ ಬರೆದುದಲ್ಲ. ಮಂಡಲ ಬ್ರಾಹ್ಮಣೋಪನಿಷತ್ತಿನಲ್ಲಿ ಎರಡನೆಯ ಬ್ರಾಹ್ಮಣದಲ್ಲಿ ಜೀವನ

ಪಂಚಾವಸ್ಥೆಗಳನ್ನೂ ವಿವರಿಸುವಾಗ ತುರ್ಯಾವಸ್ಥೆಯು ಬ್ರಹ್ಮಾಹಂ ಎಂಬ ಶುದ್ಧಾದ್ವೈತ ವನ್ನು ತೋರಿಸುವದೆಂದು ಹೇಳಿರುತ್ತಾರೆ ಮತ್ತು ತುರ್ಯಾತೀತಾವಸ್ಥೆಯಲ್ಲಿ—

> ನಹಿ ಮದನ್ಯದಿತಿ ಜಾತ ವಿವೇಕಃ ಶುದ್ಧಾದ್ವೈತ ಬ್ರಹ್ಮಾಹಮಿತಿ ಭಿದಾ ಗಂಧಂ ನಿರಸ್ಯ...ಸರ್ವ ಪರಿಪೂರ್ಣ ತುರೀಯಾತೀತ ಬ್ರಹ್ಮಭೂತೋ ಯೋಗಿ ಭವತಿ ತಂ ಬ್ರಹ್ಮೇತಿಸ್ತುವಂತಿ; ಸರ್ವಲೋಕ ಸ್ತುತಿ ಪ್ರಾತಃ ಸರ್ವ ದೇಶ ಸಂಚಾರ ಶೀಲಃ, ಪರಮಾತ್ಮ ಗಗನೇ ಬಿಂದುಂ ನಿಕ್ಷಿಪ್ಯ ಶುದ್ಧಾದ್ವೈತಾಜಾಡ್ಯ ಸಹಜಾಮಮನಸ್ಕ ಯೋಗ ನಿದ್ರಾಖಂಡನಂದ ಪದಾನುವೃತ್ತ್ಯಾ ಜೀವನ್ಮುಕ್ತೋಭವತಿ ಸಚ್ಚಾನಂದ ಸಮುದ್ರಮಗ್ನಾ ಯೋಗಿನೋ ಭವಂತಿ ತದಪೇಕ್ಷಯಾ ಇಂದ್ರಾದಯಃ ಸ್ವಲ್ಪಾನಂದಾಃ ಏವಂ ಪ್ರಾಪ್ತಾನಂದಃ ಪರಮಯೋಗೀ ಭವತಿ.

ತಾತ್ಪರ್ಯ : ಸರ್ವಪರಿಪೂರ್ಣನಾಗಿ ತುರ್ಯಾತೀತಾವಸ್ಥೆಯು ನೈದಿದವನು ಬ್ರಹ್ಮ ನಾಗಿ ಯೋಗಿಯಾಗುತ್ತಾನೆ. ಇವನು ಶುದ್ಧಾದ್ವೈತ ಜಾಡ್ಯವಿಲ್ಲದ ಸಹಜ (ಅಮನಸ್ಕ) ಯೋಗವನ್ನು ಅನುಸರಿಸಿ ಪರಮಯೋಗಿಯಾಗುತ್ತಾನೆ. ಇವನಿಗಿಂತ ಇಂದ್ರಾದಿಗಳು ಕಡಿಮೆಯಾದ ಆನಂದವುಳ್ಳವರು.

ಈ ಗ್ರಂಥದ ೨೦ ಮತ್ತು ೨೨ನೆಯ ಪದ್ಯಗಳು ಇದೇ ತಾತ್ಪರ್ಯವನ್ನೇ ಬೋಧಿ ಸುತ್ತವೆ.

ಶುದ್ಧಾದ್ವೈತವನ್ನೇ ವೇದಾಂತ ಎಂದು ಈ ಗ್ರಂಥದಲ್ಲಿ ಕರೆದಿರುತ್ತಾರೆ. ಸಿದ್ಧಾಂತವೆಂಬುದು ಜೀವ ಪರಮರ ಭೇದವನ್ನು ಹೇಳುವಂಥಾದ್ದು. ಯೋಗಮಾರ್ಗ ವೆಂದರೆ ಪರವಸ್ತುವನ್ನು ಭಿನ್ನವಾಗಿ ತಿಳಿದು ಆಚರಿಸುವ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಮೊದಲಾದ ಭಾಗಗಳುಳ್ಳದ್ದು. ಈ ವೇದಾಂತ ಸಿದ್ಧಾಂತ ಯೋಗ ಮಾರ್ಗಗಳಿಗೆ ಸಿಲುಕದೆ ಇದರಲ್ಲಿ ಹೇಳಲ್ಪಟ್ಟ ಶಿವಶರಣ ಮಾರ್ಗವಾದ ಪರಮಯೋಗವು ಬೇರೆಯಾಗಿ ಇರುತ್ತದೆ. ಆದ್ದರಿಂದ ಪ್ರಭುದೇವರು ಬೋಧಿಸಿದುದು ಪೂರ್ವಿಕ ಋಷಿಗಳ ಅಭಿಪ್ರಾಯಕ್ಕೆ ಭಿನ್ನವಾದುದಲ್ಲ ಮತ್ತು ವಿಲಕ್ಷಣವಾದುದಲ್ಲ ಎಂಬುದನ್ನೂ ಇದು ಶಿವಾದ್ವೈತ ಮಾರ್ಗವು ಎಂಬುದನ್ನೂ ಸರ್ವರೂ ಗ್ರಹಿಸಿ ಶ್ರದ್ಧೆ ಇಡಬೇಕೆಂದು ವಿಜ್ಞಾಪನೆ.

ಶ್ರೀಮಾನ್ ನಿರಂಜನ ಜಗದ್ಗುರು ದುರುದುಂಡೇಶ್ವರ ಮಹಾಸ್ವಾಮಿಗಳವರು ಸಂಸ್ಥಾನಮಠ, ಅರಭಾವಿ ಬೆಳಗಾಂವ ಡಿಸ್ಟ್ರಿಕ್ಟ್ ಇವರು ಉದಾರಾಶ್ರಯವನ್ನು ಕೊಟ್ಟು ಈ ಗ್ರಂಥ ಮುದ್ರಣಕ್ಕೆ ಕಾರಣರಾಗಿರುತ್ತಾರೆ. ಇವರ ಈ ತೆರದ ಕಾರ್ಯವು ಅತ್ಯಂತ ಶ್ರೇಷ್ಠವಾದುದು. ಶಿವಯೋಗದ ಸಾರಭೂತವಾದ ಅಷ್ಟಾವರಣಗಳಲ್ಲಿ ಫಲರೂಪ ವಾಗಿರುವ ಪಾದೋದಕ ಪ್ರಸಾದಗಳನ್ನು ತಾವು ಅಧಿಕಾರಕ್ಕೆ ಬಂದಂದಿನಿಂದ ನಿತ್ಯಪೂ

ಸಹಜವಾಗಿ ಪಡೆಯುತ್ತಾ ಅದನ್ನೇ ನಿತ್ಯವ್ರತವಾಗಿ ಆಚರಿಸಿ ಸಹಜ ಶಿವಯೋಗಿಗಳೆನಿಸಿ ಕೊಂಡ ಈ ಮಹಿಮರ ಭಾವಚಿತ್ರವು ಈ ಗ್ರಂಥದ ಪ್ರಾರಂಭದಲ್ಲಿ ಕೊಡಲ್ಪಟ್ಟಿರುತ್ತದೆ. ಇವರಿಗೆ ನಿರಂಜನ ಜಂಗಮಮೂರ್ತಿಯು ಶುಭವನೀಯಲೆಂದು ಪ್ರಾರ್ಥಿಸುತ್ತೇನೆ.

—ಈ ಮಹಾಸ್ವಾಮಿಗಳವರ ಪಾದಸೇವಕರ ದಾಸರ ದಾಸನಾದ
ಪ್ರಕಾಶಕ.

ಇದನ್ನೆಲ್ಲಾ ನೋಡಿದರೆ ವೀರಶೈವರು ಪರಬ್ರಹ್ಮನನ್ನು ತಿಳಿದು ಸಾಧಿಸುವುದಕ್ಕಾಗಿ ಅನುಸರಿಸುತ್ತಿರುವ ತತ್ವ(ಮತಧರ್ಮ)ಗಳು ಆಧುನಿಕ (ಈಗಿನ ಕಾಲದವುಗಳು) ಅಥವಾ ೭೦೦-೮೦೦ ವರ್ಷಗಳ ಈಚೆಗೆ ಹುಟ್ಟಿದವುಗಳಾಗಿ ತೋರುವದಿಲ್ಲ. ಅರವತ್ತುಮೂರು ಪುರಾತನರಲ್ಲಿ ಅನೇಕರಿಗೆ ಲಿಂಗಧಾರಣೆ ಇತ್ತೆಂದು ದ್ರಾವಿಡ ಭಾಷೆಯಲ್ಲಿರುವ ಪೆರಿಯ ಪುರಾಣದಿಂದ ತಿಳಿದುಬರುತ್ತದೆ. (ಪುರಾತನ ಭಕ್ತಿವಿಲಾಸ ಎಂಬ ಗ್ರಂಥವನ್ನು ನೋಡಿರಿ) ದ್ರಾವಿಡ ದೇಶದಲ್ಲಿ ಅನೇಕ ಶೈವ ವೀರಶೈವ ರಾಜರುಗಳಾಗಿ ಹೋದರು. ಕಲಿಗಣನಾಥನೆಂಬ ಒಬ್ಬ ರಾಜನು ತನ್ನ ಬಳಿಗೆ ಬರುವವರು ಲಿಂಗಧಾರಿಗಳಾಗಿರ ಬೇಕೆಂದು ಕಟ್ಟುಮಾಡಿದನು. ಒಬ್ಬ ಭಿಕ್ಷುಕನು ಲಿಂಗಧಾರಣವಿಲ್ಲದೆ ಭಿಕ್ಷೆಗಾಗಿ ತನ್ನ ಬಳಿಗೆ ಬರಲು ಅದನ್ನು ಕೂಡಾ ಸಹಿಸದೆ ಅವನಿಗೆ ಲಿಂಗಧಾರಣೆ ಮಾಡಿಸಿದನು. (ಶಿವನೇ ಪರೀಕ್ಷೆಗಾಗಿ ಹೀಗೆ ಬಂದಿದ್ದನೆಂದು ಪೂರ್ವ ಲೇಖನಗಳು ದೊರೆಯುತ್ತವೆ.) ಈತನೂ ಪುರಾತನರಲ್ಲಿ ಒಬ್ಬನು. ಈ ಪುರಾತನರು ಕ್ರಿ. ಶ. ೬ನೆಯ ಶತಮಾನದಲ್ಲಿ ದ್ದರೆಂದು ಕೆಲವರೂ ೮-೯ನೆಯ ಶತಮಾನದವರೆಂದು ಕೆಲವರೂ ಹೇಳುತ್ತಾರೆ. ಏನೇ ಆಗಲಿ, ಇವರು ಕಲ್ಯಾಣದ ಪ್ರಭುದೇವರಿಗಿಂತ ಹಿಂದಿನವರು. ಶಿವನಲ್ಲಿ ಭಕ್ತಿ ಇಡು ವುದಾದ ಶೈವ ಎಂಬುದು ೨೦೦೦ ವರ್ಷಗಳಿಗಿಂತಲೂ ಹಿಂದೆಯೇ ರೂಢಿಯಲ್ಲಿ ಇದ್ದದ್ದು. ಶಿವಮೊಗ್ಗಾ ಡಿಸ್ಟ್ರಿಕ್ಟ್ ಶಿಕಾರಿಪುರ ತಾಲ್ಲೂಕು ಮಳವಳ್ಳಿ ಎಂಬ ಗ್ರಾಮ ದಲ್ಲಿ ಇರುವ ಒಂದು ಶಿವಾಲಯವು ಸುಮಾರು ಕ್ರಿ. ಶ. ಎರಡನೆಯ ಶತಮಾನದಲ್ಲಿ ಕಟ್ಟಲ್ಪಟ್ಟದ್ದೆಂಬ ಶಾಸನಗಳಿಂದ ತಿಳಿದುಬಂದಿರುತ್ತದೆ. ಆಗಮಗಳಲ್ಲಿ ಹೇಳಿದ ಪ್ರಕಾರ ಶೈವವೆಂಬುದು ಉದಿಸಿದಾಗಲೇ ವೀರಶೈವವವೆಂಬುದೂ ಉದಯವಾದಂತೆ ತಿಳಿಯುವುದರಿಂದ ವೀರಶೈವವು ಪೂರ್ವದ್ದೇ ಹೊರತು ಒಂದೇ ಸಾವಿರ ವರ್ಷದ್ದಲ್ಲ.

ಈಗಿನದಾಗಲೀ ಹಳೆಯದಾಗಲೀ ತತ್ವವು ಉತ್ತಮವಾದದ್ದೇ ಹೇಗೆ? ಎಂಬು ದನ್ನು ವಿಚಾರಮಾಡಿ ತಿಳಿಯಬೇಕಾದದ್ದು ಮುಖ್ಯಾಂಶ. ಈಗಿನವರು ಯೋಚಿಸಿದರೂ ಈ ಲೋಕದಲ್ಲಿ ಮನುಷ್ಯ ಪ್ರಾಣಿಯೇ ಹೆಚ್ಚಿನವನೆಂದು ತಿಳಿದಿದ್ದಾರೆ. ಆದ್ದರಿಂದ ಕಲ್ಲು ಮೊದಲಾದ ಮೂರ್ತಿಗಳಲ್ಲಿ ಸ್ಥಾಪಿಸಿದ ದೇವಕಲೆಗಿಂತಲೂ ಮನುಷ್ಯನಲ್ಲಿಯೇ ದೇವಕಲೆಯನ್ನು ಸ್ಥಾಪಿಸುವುದು ಉತ್ತಮವೆಂಬುದನ್ನು ಈಗಿನವರು ಹೆಚ್ಚು ಯೋಚನೆ ಮಾಡಿ ನಿರ್ಧರಿಸಬಹುದು. ಪೂರ್ವದವರಾದರೂ ಹಾಗೆಯೇ ತಿಳಿದುಕೊಂಡು “ತನ್ನ ಬಿಟ್ಟು ಶಿವನಿಲ್ಲ” ಎನ್ನುತ್ತಿದ್ದರು. ಇದೇ ವಿವೇಕವನ್ನೇ ಹಿಂದೂ ಧರ್ಮದ ಸಾರವು

ಬೋಧಿಸುವದೆಂಬುದನ್ನು ಮೇಲೆ ಕಂಡ ಉಪನಿಷತ್ತಿನ ಉದಾಹರಣೆಗಳಲ್ಲಿ ನೋಡ ಬಹುದು. "ನಹಿ ಮದನ್ಯದಿತಿ ಜಾತ ವಿವೇಕಃ" ಎಂಬುದು ಈ ಅರ್ಥವನ್ನೇ ತೋರಿ ಸುತ್ತದೆ. ತನ್ನ ರೂಪು ಶಿವನೆಂಬ ಜ್ಞಾನವಾದಮೇಲೆ ಜ್ಞಾನಕ್ಕೆ ತಕ್ಕ ಕ್ರಿಯೆ ಇರ ಬೇಕಾದುದು ಅವಶ್ಯಕವಾದ್ದರಿಂದ ಅಂಗಕ್ಕೆ ಶಿವಭಾವವನ್ನು ಹೊಂದಿಸುವುದಕ್ಕಾಗಿ ಲಿಂಗ ಧಾರಣೆ ಎಂಬ ಕ್ರಿಯೆ ಇರಬೇಕೆಂದು ಶಿವಶರಣರು ನಂಬಿರುತ್ತಾರೆ. ಆದ್ದರಿಂದ ಈ ಶರಣ ಮಾರ್ಗವು ಈಗ್ಯೂ ಉತ್ತಮವೇ ಆಗಿರುತ್ತದಲ್ಲದೆ ಆಗ್ಯೂ ಉತ್ತಮವೇ ಆಗಿದ್ದಿ ತೆಂಬುದನ್ನೂ ಮುಂದೂ ಮನುಷ್ಯ ಜಾತಿಯು ಶ್ರೇಷ್ಠವೆನಿಸಿಕೊಂಡು ಈ ಭೂಮಿಯ ಮೇಲೆ ಇರುವವರೆವಿಗೂ ಉತ್ತಮವಾಗಿರುವದೆಂಬುದನ್ನೂ ಮರೆಯದಿರಬೇಕು.

ಲಿಂಗಧಾರಣೆಯು ಬಹಳ ಪೂರ್ವದಿಂದಲೂ ಬಂದದ್ದೆಂಬುದು ಶೋಧಿಸುತ್ತಾ ಹೋದಹಾಗೆಲ್ಲಾ ನಿದರ್ಶನಕ್ಕೆ ಬರಬಹುದು. ಪರಂತು ಶ್ರದ್ಧಾದೃಷ್ಟಿಯಿಂದ ಶೋಧಿಸಿ ಪ್ರಕಟಿಸುವವರು ಇನ್ನೂ ಬೇಕೆಂದು ಯೋಚನೆಗೆ ಬರುತ್ತಾ ಇದೆ.

---

'ಮಂತ್ರಗೋಪ್ಯ'ಕ್ಕೆ ಶ್ರೀ ಚ. ಅವರು ಬರೆದಿರುವ ಮುನ್ನುಡಿಯಿಂದ ಎತ್ತಿಕೊಂಡುದು.

## ೨. ಬಸವಣ್ಣನವರು ಪೂರ್ವಾಚಾರ್ಯರು

"ಸಮತಾವಾದಿ ಶರಣರ ಅಡಿಯಾಳು" ಎಂಬವರು ಒಂದು ಪ್ರಕಟನೆ ಪತ್ರಿಕೆಯನ್ನು ಹೊರಡಿಸಿದ್ದಾರೆ. ಸಕ್ರೋಜಿ ಪ್ರೆಸ್, ಬಾಗಲಕೋಟ ಎಂಬಲ್ಲಿ ಅದು ಮುದ್ರಿತವಾಗಿದೆ. ಅದರಲ್ಲಿ "ಪೂರ್ವಾಚಾರ್ಯ ಬಸವಣ್ಣನವರು" ಎಂಬ ವಿಷಯವು ಲೇಖಾಂಕ ೧ ಆಗಿಯೂ "ವೀರಶೈವ ಧರ್ಮದ ನಿಜಸ್ವರೂಪ" ಎಂಬುದು ಲೇಖಾಂಕ ೨ ಆಗಿಯೂ ಪ್ರಕಟವಾಗಿದೆ. ೧ನೆಯ ಲೇಖನದಲ್ಲಿ ಬಸವಣ್ಣನವರು ಪೂರ್ವಾಚಾರ್ಯರು ಎಂಬುದಕ್ಕೆ ಚಾಮರಸನ ಪ್ರಭುಲಿಂಗಲೀಲೆಯ ೧ನೆಯ ಗತಿಯ ಒಂದು ಪದ್ಯವನ್ನು ಉದಾಹರಿಸಿದ್ದಾರೆ. ಇನ್ನೊಂದು ಗತಿಯಲ್ಲಿ—

ಬಸವ ಮಾಡಿದರಾಯ್ತು ಗುರುನೆಲೆ, ಬಸವ ಮಾಡಿದರಾಯ್ತು ಲಿಂಗವು
ಬಸವ ಮಾಡಿದರಾಯ್ತು ಜಂಗಮವರಿವ ಮಹಿಮರಿಗೆ
ಬಸವನಿಂದಧ್ಯಾತ್ಮವೇ ಪಸರಿಸಿತು ಲೋಕದೊಳಿಂತು ಕಾರಣ
ಬಸವನೇ ಪರದೈವವೆನುತಿರ್ದ ಪ್ರಭುರಾಯ.

ಎಂಬ ಪದ್ಯವನ್ನು ಉದಾಹರಿಸಿದ್ದಾರೆ.

ಶೂನ್ಯ ಸಂಪಾದನೆಯಲ್ಲಿ ಚನ್ನಬಸವಣ್ಣನವರ ಸಂಪಾದನೆಯಲ್ಲಿ "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನವರ ಸಾಂಪ್ರದಾಯದ ಕಂದನು ನೋಡಾ ನೀನು" ಎಂಬ ಚೆನ್ನಬಸವಣ್ಣನವರು ಪ್ರಭುದೇವರಿಗೆ ಹೇಳಿದ ವಚನವನ್ನು ವಿವರಿಸಿದ್ದಾರೆ.

ಪಾಲ್ಕುರಿಕೆ ಸೋಮನಾರಾಧ್ಯರು ತಮ್ಮ "ಗಣಸಹಸ್ರ" ಗ್ರಂಥದಲ್ಲಿ "ಶಿವತತ್ವ ಸರ್ವ ಚೈತನ್ಯಂ ಈಶ ಗುರು ಬಸವಲಿಂಗ ಪ್ರಥಮಾಚಾರ್ಯರೆಂದು ವಂದಿಸಿನುತಿಸುವೆಂ" ಎಂಬ ವಾಕ್ಯವಿರುವುದಾಗಿ ತೋರಿಸಿದ್ದಾರೆ.

ಗುರುರಾಜ ಕವಿಯು ತನ್ನ ಗುರುರಾಜ ಚರಿತ್ರೆಯಲ್ಲಿ "ಬಸವೇಂದ್ರನ ತರುವಾಯ ಭೂಮಿಯ ಮೇಲೆ ವೀರಶೈವ ಧರ್ಮವನ್ನು ಸುಸ್ಥಿರಗೊಳಿಸಿ ಮುಂದುವರಿಸುವವರಿನ್ನಾರು ?" ಎಂದೂ, ನೀಲಕಂಠಾಚಾರ್ಯರು ತಮ್ಮ ಆರಾಧ್ಯ ಚರಿತ್ರೆಯಲ್ಲಿ "ವೀರಶೈವಾಚಾರ ವರ್ತನೆಗೆ ಪಿರಿದು ದಿಕ್ಕಿನ್ನಾವನೀ ವೀರಸಮಯಂ ಸ್ಥಾಪಿಸುವನಿನ್ನಾವನು ?" ಎಂದೂ ಪಂಡಿತಾರಾಧ್ಯರಿಂದ ಹೇಳಿಸಿರುವುದಾಗಿ ಸೂಚಿಸಿರುತ್ತಾರೆ.

ಮೊಗ್ಗೆಯ ಮಾಯಿದೇವರು ತಮ್ಮ ಶತಕತ್ರಯದಲ್ಲಿ (ಕ್ರಿ. ಶ. ೧೪೭೮) "ವೀರಶೈವ ನಿರ್ಣಯ ಪರಮಾವತಾರ ಆದಿದೇಶಿಕ" ಎಂದು ಬಸವಣ್ಣನವರನ್ನು ವರ್ಣಿಸಿದ್ದಾರೆ, ಎಂದಿದ್ದಾರೆ.

ಮರಿತೋಂಟದಾರ್ಯರು ತಮ್ಮ ಸಿದ್ಧೇಶ್ವರ ಪುರಾಣದಲ್ಲಿ ಬಸವಣ್ಣನವರನ್ನು ಕುರಿತು "ವರ ವೀರಶೈವವ ನೆಲೆಗೊಳಿಸಿದ ಬಸವನೆಮಗನವರತ ಶಿವಭಕ್ತಿಯಂ ಕೊಟ್ಟು ರಕ್ಷಿಸುಗೆ" ಎಂದು ಪ್ರಾರ್ಥಿಸಿದುದನ್ನು ಹೇಳಿದ್ದಾರೆ.

ಕೆಳದಿಯ ಅರಸರಾದ ಬಸವಪ್ಪನಾಯಕರು ತಮ್ಮ ಶಿವತತ್ತ್ವ ರತ್ನಾಕರದಲ್ಲಿ "ಭಗವಾನ್ ಬಸವೇಶ್ವರರು ವೀರಶೈವ ಮತವನ್ನು ಸ್ಥಾಪಿಸಿ ಪ್ರಕಾಶಗೊಳಿಸಿವರು" ಎಂದಿರುವುದನ್ನು ಬರೆದಿದ್ದಾರೆ.

ಮರಿತೋಂಟದಾರ್ಯರು "ವೀರಶೈವ ಅಷ್ಟಾವರಣ ಪಂಚಾಚಾರ ಸ್ಥಾಪನವೇ ಕೇವಲ ಉದ್ದೇಶವುಳ್ಳವರಾಗಿ ಪರಮೇಶ್ವರನ ಅನುಜ್ಞೆಯ ಅನುಸಾರವಾಗಿ ನಂದೀಶ್ವರ ರವತಾರರಾದ ಬಸವೇಶ್ವರರು" ಎಂದು ಮುಂತಾಗಿ ಹೇಳಿರುವುದನ್ನು ತೋರಿಸಿಕೊಟ್ಟು

ಕೊನೆಯಲ್ಲಿ—ಇಂತು ಬಸವೇಶ್ವರರು ಇಷ್ಟಲಿಂಗಸಹಿತ ಅಷ್ಟಾವರಣ, ಪಂಚಾಚಾರ ಷಟ್‌ಸ್ಥಲ ವಿಶಿಷ್ಟ ವರ್ಣಾಶ್ರಮ ಪಂಚಸೂತಕ ರಹಿತ ಜಾತಿ ಭೇದವಿಲ್ಲದ ಸಮತಾಭಾವದ ವೀರಶೈವ ಮತ ಪ್ರವರ್ತಕರಲ್ಲವೇ ?" ಎಂದು ಹೇಳಿ ಬಸವಣ್ಣನವರ ಪೂರ್ವಾಚಾರ್ಯತ್ವವನ್ನು ಸ್ಥಿರಪಡಿಸಿದ್ದಾರೆ. ಮುಂದೆ,

ಡಾ. ಶ್ರೀ ನಂದೀಮಠರು "...ಶೈವಾಗಮಗಳಲ್ಲಿ ವೀರಶೈವ ಧರ್ಮದ ಬಗ್ಗೆ ಅಥವಾ ಷಟ್‌ಸ್ಥಲ ಸಿದ್ಧಾಂತದ ಬಗ್ಗೆ ಅನೇಕ ಉಲ್ಲೇಖಗಳಿಲ್ಲ. ಅಲ್ಲದೆ ದೊರೆತಿರುವ ತೀರ ಸ್ವಲ್ಪ ಭಾಗಗಳೂ ಕೂಡ ವೀರಶೈವ ಷಟ್‌ಸ್ಥಲ ಧರ್ಮವನ್ನು ೨೮ ಶೈವಾಗಮಗಳು ಉಪದೇಶಿಸುತ್ತವೆಂಬ ವಿಚಾರ ಸರಣಿಯನ್ನು ಎತ್ತಿಹಿಡಿಯುವುದಿಲ್ಲ... ಶೈವಾಗಮಗಳ ಪೂರ್ವಾರ್ಧ ಭಾಗಗಳು ಶೈವ ಸಿದ್ಧಾಂತವನ್ನೂ ಉತ್ತರಾರ್ಧ ಭಾಗಗಳು ವೀರಶೈವ ಸಿದ್ಧಾಂತವನ್ನೂ ನಿರೂಪಿಸುತ್ತವೆಂಬ ಪ್ರತೀತಿಯುಂಟಾಗಿರುವುದು. ಇದು ಎಷ್ಟರಮಟ್ಟಿಗೆ ಸಮರ್ಥನೀಯವೆಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ"... ಎಂದು ತಮ್ಮ ಕೈಪಿಡಿಯಲ್ಲಿ ಅಭಿಪ್ರಾಯಪಟ್ಟಿರುವರೆಂದು ಹೇಳಿ ವೀರಶೈವಕ್ಕೆ ೨೮ ಶಿವಾಗಮಗಳ ಪ್ರಾಮಾಣ್ಯವನ್ನು ಅಲ್ಲಗಳೆದಿದ್ದಾರೆ.

ಪ್ರೊಫೆಸರ್ ಎಂ. ಆರ್. ಸಾಖರೆ ಎಂ.ಎ. ಅವರು ತಮ್ಮ ಇಂಗ್ಲಿಷ್ ಭಾಷೆಯ ಉಪೋದ್ಘಾತವನ್ನು ಲಿಂಗಧಾರಣ ಚಂದ್ರಿಕೆ ಎಂಬ ಗ್ರಂಥವಲ್ಲಿ ಬರೆಯುವಾಗ "... ಶೈವಾಗಮಗಳು ಕೇವಲ ೨೮ ಇದ್ದರೂ ಈ ಆಗಮಗಳು ಬರಬರುತ್ತ ಇತ್ತಿತ್ತಲಾಗಿ ಉತ್ತರ ಭಾಗಗಳಾಗಿ ಸೇರಿಸಲ್ಪಟ್ಟು ವಿಸ್ತರಿಸಲ್ಪಟ್ಟಿವೆ. ಉದಾಹರಣಾರ್ಥವಾಗಿ ಮೊಗ್ಗೆಯ ಮಾಯಿದೇವರಿಂದ (ಕ್ರಿ. ಶ. ೧೪೫೦) ಬರೆಯಲ್ಪಟ್ಟ ಅನುಭವಸೂತ್ರ ಸಂಸ್ಕೃತ ಗ್ರಂಥವು ವಾತುಲೋತ್ತರ ಆಗಮವಾಗಿ ಸೇರಿಸಲ್ಪಟ್ಟಿದೆ. ಅಲ್ಲದೆ ಶಿವಶರಣ ಪ್ರಮಥರ ವರ್ಣನೆ ಹಾಗು ಪ್ರಶಂಸನೆಯೂ ಶೈವಾಗಮಗಳ ಉತ್ತರ ಭಾಗಗಳಾಗಿ ಬೆಳೆಸಲ್ಪಟ್ಟಿವೆ" ಎಂದು ಆಧಾರಪೂರ್ವಕವಾಗಿ ತೋರಿಸಿಕೊಟ್ಟಿರುವರೆಂದು ಹೇಳಿ ಪ್ರಾಚೀನ ೨೮ ಶೈವಾಗಮಗಳ ಪ್ರಾಮಾಣ್ಯವು ವೀರಶೈವಕ್ಕೆ ಇಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

"ಸಿದ್ಧಾಂತ ಶಿಖಾಮಣಿ" ಎಂಬ ಸಂಸ್ಕೃತ ಗ್ರಂಥವು ಕ್ರಿ.ಶ. ೧೩೦೦ ಸುಮಾರಿನಲ್ಲಿ ಶಿವಯೋಗಿ ಶಿವಾಚಾರ್ಯನಿಂದ ರಚಿಸಲ್ಪಟ್ಟಿದೆಂದೂ ಅನಂತರ ಅನೇಕ ಸಂಸ್ಕೃತ ಗ್ರಂಥಗಳು ರಚಿತವಾಗಿರುವುದೆಂದೂ ಹೇಳಿದ್ದಾರೆ.

ಪ್ರಭುರಾಯನಿಗಿಂತಲೂ ಪೂರ್ವದಲ್ಲಿ ಇದ್ದ ಜಂಗಮರಾರನ್ನೂ ಈಗಿನ ವೀರ ಶೈವರು ಹೇಳದೆ "ಬಾಹ್ಯಸ್ಥಲಕ್ಕೆ ಕುರುಹಾಗಿ ಅಲ್ಲಮಪ್ರಭುವನ್ನೇ ಆದಿ ಎಂದು ಏಕೆ ಹೇಳುತ್ತಿದ್ದಾರೆ ?" ಎಂದು ಅಲ್ಲಮನಿಗಿಂತ ಪೂರ್ವದ ವೀರಶೈವ ಪ್ರಾಚೀನತೆಯನ್ನು ಖಂಡಿಸಿದ್ದಾರೆ.

ತ್ರೇತಾಯುಗದ ಅಗಸ್ತ್ಯಮುನಿಯ ಕಾಲದಲ್ಲಿ ರೇಣುಕಾಚಾರ್ಯರು ಇದ್ದರೆಂದು ಹೇಗೆ ಒಪ್ಪಲಾಗುವುದು ? ದ್ವಾಪರಯುಗದ ದೂರ್ವಾಸಮುನಿಯು ಶೈವನಲ್ಲದೆ ವೀರ ಶೈವ ಜಂಗಮನು ಹೇಗೆ ಆಗುವನು ? ಇಂತಹ ನಂಬಲರ್ಹವಲ್ಲದ ವಿಷಯಗಳನ್ನು ದೊಡ್ಡ ಸಭೆಗಳಲ್ಲಿಯೂ ಪ್ರವಚನಗಳಲ್ಲಿಯೂ,ಲೇಖನಗಳಲ್ಲಿಯೂ ಪ್ರತಿಪಾದಿಸುವುದು ಅಜ್ಞ ಭಕ್ತರುಗಳ ಅಂಧಕಾರವನ್ನು ನಿವಾರಿಸುವುದರ ಬದಲಾಗಿ ಅವರ ಅಜ್ಞಾನವನ್ನು ಮತ್ತಷ್ಟು ದೃಢಗೊಳಿಸಿ ವಂಚಿಸಿದಂತೆ ಆಗುವುದಿಲ್ಲವೇ ?...ಎಂದು ಘಂಟಾಘೋಷವಾಗಿ ಸಾರಿದ್ದಾರೆ.

(ಟಿಪ್ಪಣಿ–ಈ ಒಂದನೆಯ ಲೇಖನದ ಅಭಿಪ್ರಾಯವು ಸಮಂಜಸವಾಗಿದ್ದ ಈ ಪತ್ರಿಕೆಯ ಪ್ರಕಾಶಕನೂ ಬಹಳ ಪೂರ್ವದಲ್ಲಿ ಪಂಚಾಚಾರ್ಯರು ಬಸವೇಶ್ವರನಿಗಿಂತ ಪೂರ್ವದವರೆಂದು ಭಾವಿಸಿದ್ದನು. ಈಚೀಚೆಗೆ ಶೋಧನೆಗಳನ್ನು ಮಾಡುತ್ತಾ ಬಂದಾಗ ಪಂಚಾಚಾರ್ಯರೂ ಬಸವೇಶ್ವರನೂ ಸಮಕಾಲೀನರೆಂಬುದೂ, ಉಭಯರೂ ಕ್ರಿ. ಶ. ೧೨ ನೆಯ ಶತಮಾನದಲ್ಲಿ ಸಮಾಜಾಭಿವೃದ್ಧಿಯೆ ಈಗಿನ ಸಮಾಜ ಸ್ಥಾಪನೆಯ ಕಾರ್ಯವನ್ನು ಮಾಡಿರುವರೆಂಬುದೂ ಐತಿಹಾಸಿಕಾಂಶವಾಗಿ ತಿಳಿದುಬಂದಿರುತ್ತದೆ. ಪಂಚಾಚಾರ್ಯರ ಚರಿತ್ರೆಯ ಮೊದಲನೆಯ ಭಾಗವಾದ 'ಶ್ರೀ ರೇವಣಸಿದ್ಧರ ಚರಿತ್ರೆ' ಎಂಬುದರಲ್ಲಿ ಅವರು ೧೨ನೆಯ ಶತಮಾನ ಮತ್ತು ೧೩ನೆಯ ಶತಕದ ಆದಿಯಲ್ಲಿ ಮಾಡಿದ ಅನೇಕ ಕಾರ್ಯಗಳನ್ನು ಚಾರಿತ್ರಿಕವಾಗಿ ತೋರಿಸುತ್ತಾ ಬಂದಿದೆ. ವೀರಶೈವರ ಅಜ್ಞತೆಯಿಂದ ಇನ್ನೂ ವಾದ ಮಾಡುವುದು ಸರಿಯಲ್ಲ. ಯಾರಾದರೂ ತಮಗೆ ತಿಳಿದ ಯಾವುದೇ ಅಂಶವಾದರೂ ಇದರ ವಿರುದ್ಧವಾಗಿ ನಮಗೆ ಬರೆದಲ್ಲಿ ಸಾಧ್ಯವಾದಷ್ಟು ನಮಗೆ ತಿಳಿದ ಅಂಶಗಳನ್ನು ಪ್ರಕಟಿಸುವೆವು.)

(ಚನ್ನಬಸವೇಶ್ವರರು ಜಂಗಮರಾಗಿ ಬಸವೇಶ್ವರನು ಗುರುವಾಗಿ ರೇಣುಕಾದಿ ಆಚಾರ್ಯರು ಬಸವೇಶ್ವರೆ ಸಹಾಯಕರಾಗಿ ಈಗಿನ ಸಮಾಜ ರಚನೆ ಮಾಡಿದುದನ್ನು "ಅನಾದಿ ವೀರಶೈವ ಸಂಗ್ರಹ" ಎಂಬ ಗ್ರಂಥವು ಚೆನ್ನಾಗಿ ವಿವರಿಸುತ್ತದೆ. ಹೀಗಾಗಿ ಬಸವೇಶ್ವರನು ಪೂರ್ವಾಚಾರ್ಯ ಎಂಬುದನ್ನು ತಿಳಿಯಲಿಕ್ಕೆ ಯಾವ ಆತಂಕವೂ ನಿಲ್ಲಲಾರದು.)

—ಪ್ರಕಾಶಕ.

ಇನ್ನು ಇವರ ಎರಡನೆಯ ಲೇಖನದಲ್ಲಿ—

೧. ॥ಶ್ರೀಗುರುಬಸವ ಲಿಂಗಾಯನಮಃ॥ ಎಂಬುದು ವೀರಶೈವರೆಲ್ಲರಿಗೂ ತಾರಕ ಮಂತ್ರವಾಗಿದೆ. ೨. ಅಷ್ಟಾವರಣಗಳಲ್ಲಿ ಬಹು ಮಹತ್ವದ್ದಾದ ಪಾದೋದಕವು 'ಬಸವ' ಮಂತ್ರವಿಲ್ಲದೆ ನಿರ್ಮಾಣವಾಗಲಾರದು ಎಂದು ಸರ್ವ ಶ್ರುತವಿದೆ. ೩. ಅಕ್ಕ ಮಹಾದೇವಿಯು ಅಂದ ವಚನದಂತೆ ಬಸವಣ್ಣನವರು ೫೨ ಶೀಲ ಅಥವಾ ಆಚಾರ ಗಳುಳ್ಳ ಮಹಾನುಭಾವಿಗಳು. ೪. ಬಸವಣ್ಣನವರು ಷಟ್‌ಸ್ಥಲ ಜ್ಞಾನಿಗಳಾದಾಗ್ಯೂ ಭಕ್ತಸ್ಥಲದಲ್ಲಿ ನಿಂತು ಭಕ್ತಿಭಂಡಾರಿಯಾಗಿ ಬಹುಕಾಲದಿಂದ ಅಸ್ತಿತ್ವದಲ್ಲಿ ಇದ್ದ ಸ್ಥಾವರ ಪೂಜೆ, ವರ್ಣ ಇಲ್ಲವೇ ಜಾತಿಭೇದಗಳಿಂದ ಉಪಲಕ್ಷಿತವಾದ ಶೈವಧರ್ಮವನ್ನು ಖಂಡಿಸಿ ಜಂಗಮಪೂಜೆ, ಸಮತಾವಾದ, ತಾನು ಭಕ್ತ, ಉಳಿದ ಲಿಂಗಾಂಗಿಗಳೆಲ್ಲರೂ ಜಂಗಮ ರೆಂಬ ಭಾವನೆಯೇ ಮುಖ್ಯ ಲಕ್ಷಣವಾಗಿ ಉಳ್ಳ ವೀರಶೈವ ಅಥವಾ ಲಿಂಗಾಂಗಧರ್ಮದ ಶಿವಶರಣರಿಗೆಲ್ಲಾ ಪ್ರಮಥ ಪುಂಗವರು. ೫. ದ್ವಿತೀಯ ಶಂಭು ಎಂದು ಹೆಸರಾಂತ ವರು. ೬. "ಚತುರಾಚಾರ್ಯರು ಬಸವೇಶ್ವರ ದೇವರನ್ನೂ ಪೂರ್ವಾಚಾರ್ಯರೆಂದು ಇಟ್ಟು ಕೊಂಡು ಅವರ ಅನುಯಾಯಿಗಳಾಗಿ ವರ್ತಿಸಿದರು" ಎಂದು ಅನಾದಿ ವೀರಶೈವ ಸಂಗ್ರಹ ಎಂಬ ಗ್ರಂಥವು ಹೇಳುತ್ತಿದೆ. ೭. ಬಸವೇಶ್ವರ ದೇವರ ಬದಲು ವಿಶ್ವಾ ರಾಧ್ಯರೆಂಬ ಐದನೆಯ ಆಚಾರ್ಯರನ್ನು ಕೂಡಿಸಿಕೊಂಡರೆಂದು "ಪಂಚಬ್ರಹ್ಮೋದಯ ಭಾಷ್ಯ" ಎಂಬ ಗ್ರಂಥವು ಹೇಳುತ್ತಿದೆ.

ಈ ಉದಾಹರಣೆಗಳನ್ನು ಕೊಟ್ಟು "ಈ ರೀತಿಯಿಂದ ಪಂಚಾಚಾರ್ಯರು ಪ್ರಮಥರ ಅನುಯಾಯಿಗಳಾಗಿದ್ದರೂ ಪ್ರಮಥರು ಆಚರಿಸಿದ ಜಾತಿ ಇಲ್ಲವೇ ವರ್ಣಭೇದವಿಲ್ಲದ ಸಮತಾವಾದದ ಸಮಾಜ ರಚನೆಯನ್ನು ಬಿಟ್ಟುಕೊಟ್ಟು ಭಕ್ತ, ಮಾಹೇಶ್ವರ ಎಂಬ ಕ್ರಮವಿಡಿದ ಸ್ಥಲಗಳನ್ನು ತಿಳಿದುಕೊಳ್ಳದೆ ಭಕ್ತವರ್ಗ ಮಾಹೇಶ್ವರವರ್ಗ ಎಂಬಿವು ಜನನದ ವಂಶಗಳಿಂದಲೇ ಬಂದುವೆಂದು ರೂಢಿಗೈಯ್ಯಲು ಕೆಲವರು ಪ್ರಯತ್ನಿಸಿದ್ದಾರೆ".

ಬಸವಾದಿ ಪ್ರಮಥರು ಸಮತಾವಾದಿಗಳು. ಜಾತಿಗಳನ್ನಾಗಲೀ ವರ್ಗಗಳನ್ನಾ ಗಲೀ ಮನ್ನಿಸುವುದಿಲ್ಲ ಮತ್ತು ಎಲ್ಲ ಭಕ್ತರು ಭಕ್ತಿಯು ಪರಿಪಕ್ವವಾದಂತೆ ಷಟ್‌ಸ್ಥಲ ಗಳನ್ನು ಅಳವಡಿಸಿಕೊಂಡು ಲಿಂಗಾಂಗ ಸಾಮರಸ್ಯತೆಯನ್ನು ಪಡೆಯಲು ಯಾವ ಅಭ್ಯಂತರವೂ ಇರಲಾರದೆಂದು ಪ್ರತಿಪಾದಿಸುತ್ತಾರೆ.

"ಪ್ರಮಥರ ತರುವಾಯದವರೂ ಅನುಯಾಯಿಗಳೂ ಆದ ಈಗಿನ ಕೆಲವರು ಆಚಾರ್ಯರು ಜಾತಿಭೇದಗಳನ್ನು ಪುನಃ ಪ್ರತಿಪಾದಿಸುತ್ತಾ ಸಮಾಜದಲ್ಲಿರುವ ಕಾಯಕ ಗಳನ್ನೆಲ್ಲಾ ಜಾತಿಗಳೆಂದು ತೋರಿಸುತ್ತಾ ಪುನಃ ಶೈವ ಪದ್ಧತಿಯನ್ನು ರೂಢಿಗೆಯ್ಯಲು ಸಾಧಿಸತೊಡಗಿದ್ದಾರೆ ಮತ್ತು ವಿಗ್ರಹಾರಾಧನೆಗೆ ಬೆಂಬಲಕೊಡುತ್ತಿದ್ದಾರೆ".

ಮತ್ತು ಬಸವಾದಿಪ್ರಮಥರ ಸಮತಾಭಾವದ ಸಮಾಜ ರಚನೆಯಿಂದ ವೀರಶೈವ ಧರ್ಮಕ್ಕೆ ಬಂದ ಶ್ರೇಷ್ಠತೆಯು ಸರ್ವ ಜಾತಿಭಾವನೆಗಳಿಂದ ನಷ್ಟವಾಗಿ ಅನುಕರಿಸಲು ಯೋಗ್ಯವಲ್ಲದ ಶೈವ ಧರ್ಮವಾಗಿ ಪರಿಣಮಿಸುವುದು. ಈ ರೀತಿಯಾದ ಪರಿಣಾಮ

ಗಳನ್ನು ತೋರಿಸಿ ಈಗಿನ ವೀರಶೈವರು ಪ್ರಮಥರ ಆಚರಣೆಯಂತೆ ನಡೆಯಲೋಸ್ಕರ ವಾಗಿ ಕೆಲವು ವಚನಗಳನ್ನು ಪ್ರಕಟಿಸಿದ್ದಾರೆ. ಎಲ್ಲರೂ ಶಿವಾಚಾರ, ಲಿಂಗಾಚಾರ, ಭೃತ್ಯಾಚಾರ, ಸದಾಚಾರ, ನಿತ್ಯಾಚಾರಗಳಲ್ಲಿ ನಡೆಯಬೇಕೆಂದು ಕೆಲವು ವಚನಗಳನ್ನು ಹೇಳಿದ್ದಾರೆ.

ಕೊನೆಯಲ್ಲಿ—ಅಷ್ಟಾವರಣಂಗಳು ಬಹಿರಂಗದ ಕುರುಹುಗಳಾಗಿದ್ದು ಅಂತರಂಗ ದಲ್ಲಿ ಅವುಗಳ ತತ್ತ್ವಂಗಳ ಆಯುತವನ್ನು ಉಂಟುಮಾಡಿಕೊಳ್ಳತಕ್ಕದ್ದು. ಅವುಗಳ ತತ್ತ್ವವನ್ನೂ ಅರಿತು ವೈಸಿರಿ ಮಾಡಿಕೊಳ್ಳತಕ್ಕದ್ದು ಎಂದು ವೀರಶೈವರನ್ನು ಎಚ್ಚ ರಿಸಿದ್ದಾರೆ.

(ಟಿಪ್ಪಣಿ–ಈ ಲೇಖನದ ವಿಮರ್ಶೆಯನ್ನು ನಾವು ಮಾಡಲೆಳಸುವುದಲ್ಲವಾದರೂ ಭಾರತೀಯ ಧರ್ಮಗ್ರಂಥಗಳಲ್ಲಿ ಬಸವಾದಿ ಪ್ರಮಥರ ಆಚರಣೆಗೆ ಶ್ರೇಷ್ಠತೆಯು ಕೊಡ ಲ್ಪಟ್ಟಿರುವುದನ್ನು ನಾವು ನೋಡಬಹುದಾಗಿದೆ. "ಶ್ವಪಚನು ಶಿವಭಕ್ತನಾದರೆ ಅವನು ದ್ವಿಜನಿಗಿಂತಲೂ ಶ್ರೇಷ್ಠನು" ಎಂಬ ವಾಕ್ಯವನ್ನು ನೀವು ಅಲ್ಲಿ ಕಾಣಬಹುದು. "ವರ್ಣಾ ಶ್ರಮ ವಿಭಾಗೋಯಂ ವೃತ್ತಿತೋ ನತು ಜನ್ಮತಃ" ಎಂಬುದನ್ನು ಆಗಮದಲ್ಲಿ ನೋಡ ಬಹುದು. ವೀರಶೈವರೂ ಶ್ರೇಷ್ಠವಾದ ಶಿವಭಕ್ತ ಸಂಪನ್ನರಾಗಿ ಅತಿವರ್ಣಾಶ್ರಮಿ ಗಳಾಗಿ ವರ್ತಿಸಿ ಸರ್ವ ಸಮತಾಭಾವದಿಂದ ವರ್ತಿಸುವರೆಂಬುದನ್ನು ಸರ್ವರೂ ಜ್ಞಾಪಕ ದಲ್ಲಿಟ್ಟಿರಬೇಕು. ಸಂಸ್ಕೃತದಲ್ಲಿ ಕ್ರಿಯಾಸಾರವನ್ನು ಬರೆದ ಶ್ರೀ ನೀಲಕಂಠ ಶಿವಾ ಚಾರ್ಯರೂ ಕೂಡಾ ಇದೇ ಅಭಿಪ್ರಾಯವನ್ನೇ ಸಮರ್ಥಿಸಿದ್ದಾರೆ. ಎಂದಿಷ್ಟು ಮಾತ್ರ ಇಲ್ಲಿ ಈಗ ಪ್ರಕಟಿಸುವೆವು.) —ಪ್ರಕಾಶಕ.

(–ಸಂ. ೧೨೦–೧೨೧)

# ೩. ಶ್ರೀ ಮರು ಸಿದ್ಧಾಂಕ

ಈ ಹೆಸರಿನ ಒಂದು ಪುಸ್ತಕವು ನಮ್ಮ ಹಸ್ತಗತವಾಗಿದೆ. ಇದರ ಸಂಪಾದಕರು ಶ್ರೀ ಪಂಡಿತ ಕವಲಿ ಚೆನ್ನಬಸಪ್ಪನವರು ಮತ್ತು ವೇ. ಮಠದ ಮರಿದೇವಸ್ವಾಮಿಯವರು. ಇದು ರವೀಂದ್ರ ಮುದ್ರಣಾಲಯ ಧಾರವಾಡದಲ್ಲಿ ಶ್ರೀ ಡಿ. ಬಿ. ಕಾಯಸ್ಥ ಎಂಬುವರಿಂದ ಮುದ್ರಿಸಲ್ಪಟ್ಟಿದೆ.

ಇದು ಪಂಚಾಚಾರ್ಯರಲ್ಲಿ ಒಬ್ಬರಾದ ಮರುಳುಸಿದ್ಧರ ವಿಷಯವನ್ನು ತಿಳಿಸುವುದು. ಇದನ್ನು ವಿಮರ್ಶಿಸಿ ನೋಡುತ್ತಾ ಇರುವುದರಿಂದ ಇದರ ವಿಷಯದ ಸಂಪೂರ್ಣಾಭಿಪ್ರಾಯವನ್ನು ಈಗಲೇ ಕೊಡುವುದಕ್ಕೆ ಅನುಕೂಲವಿಲ್ಲ. "ಶ್ರೀ ಮರುಳಾರಾಧ್ಯ ವಿಜಯಕಾವ್ಯ" ಎಂಬ ಗ್ರಂಥವು ಹೂಲಿಯಲ್ಲಿ ಸಿಕ್ಕಿರುವುದಾಗಿಯೂ ಆ ಮೂಲಕವಾಗಿ ಮರುಳುಸಿದ್ಧರ ಚರಿತ್ರೆಯು ಚೆನ್ನಾಗಿ ಗೊತ್ತಾಗುವುದಾಗಿಯೂ ಇದರಿಂದ ತಿಳಿದುಬರುತ್ತದೆ. ಕಾಗದ ಪ್ರತಿಯ ಆ ಮೂಲ ಗ್ರಂಥದ ನಾಲ್ಕು ಪುಟಗಳೂ ಮಾದರಿಗಾಗಿ ಈ ಪುಸ್ತಕದಲ್ಲಿ ಕೊಡಲ್ಪಟ್ಟಿವೆ.

ಈ ಪುಸ್ತಕದಿಂದ ಆದಿಮರುಳುಸಿದ್ಧರು ಅಥವಾ ಮೂಲ ಮರುಳುಸಿದ್ಧರಿಗೆ ಭಿನ್ನರಾದ ಮರುಳಾರಾಧ್ಯರೆಂಬುವರು ದ್ವಾಪರ ಯುಗಾರಂಭದಲ್ಲಿ ಉಜ್ಜಯಿನಿಯ ಸದ್ಧರ್ಮ ಪೀಠದ ಮಠದಲ್ಲಿ ವಿರಾಜಿಸಿ ಅಲ್ಲಿಯ ಅರಸಾದ ಶ್ರೌತಪಾಲ, ಅವನ ಅರ್ಧಾಂಗಿನಿ ಭಾನುಮತಿ ಇವರಿಗೆ ವೀರಶೈವ ದೀಕ್ಷೆಯನ್ನು ಮಾಡಿದರೆಂತಲೂ ಆಮೇಲೆ ಮರುಳುಸಿದ್ಧ ಎಂಬ ಹೆಸರಿನ ಮತ್ತೊಬ್ಬರು ಪ್ರಸಿದ್ಧರಾದರೆಂತಲೂ ತಿಳಿದುಬರುತ್ತದೆ. (ಇದಕ್ಕೆ ಮುಖ್ಯ ಆಧಾರವು ಶ್ರೀ ಮರುಳುಸಿದ್ಧ ವಿಜಯಕಾವ್ಯ.)

ಈ ಅಂಕದಲ್ಲಿ ಮೂಲ ಮರುಳುಸಿದ್ಧರ ಕಾಲವು ಕ್ರಿ. ಶ. ೯೦೨ರ ಮಟ್ಟಕ್ಕೆ ಮುಟ್ಟುವುದು ಎಂಬ ಲೇಖನವಿದೆ. ಇದನ್ನು ಕಂಡುಹಿಡಿದ ರೀತಿಯು ಈ ಪುಸ್ತಕದ ೪೧ನೇ ಪುಟದಲ್ಲಿ ಹೀಗೆ ಕೊಡಲ್ಪಟ್ಟಿರುವುದು.

"ಮೂಲ ಮರುಳುಸಿದ್ಧರು ಕ್ರಿ. ಶ. ೧೦೪೦ ರಲ್ಲಿ ಕಲ್ಯಾಣದ ಅರಸನಾದ ಸೋಮೇಶ್ವರ ಅಥವಾ ಭುವನೈಕಮಲ್ಲನ ಸಹಾಯದಿಂದ ಕೊಟ್ಟೂರು ಬಳಿ ಇರುವ ಉಜ್ಜಯಿನೀ ಕ್ಷೇತ್ರವನ್ನು ಕಟ್ಟಿಸಿದ ಹಾಗೂ ಆತನಿಂದ ೧೨೦ ಗ್ರಾಮಗಳ ಉಂಬಳಿ ಪಡೆದ ಹಾಗೂ ಹೂಲಿಯ ನಂದೀಶ ಕವಿಯ ಮರುಳಾರಾಧ್ಯ ವಿಜಯ (ಸಂ. ೧೫ ಪ. ೫೪) ಪ್ರಮಾಣವಿರುವುದರಿಂದ ಈ ಮರುಳುಸಿದ್ಧರ ಜೀವಿತಕಾಲ ೧೭೦ ವರುಷಗಳ ಅವಧಿಯಲ್ಲಿ ಓರಂಗಲ್ಲಿನಲ್ಲಿ ರಾಜ್ಯವಾಳಿದ ಕಾಗತಿಯ ಗಣಪತಿ ಮಹಾರಾಜನಿಗೆ ದರ್ಶನಕೊಟ್ಟಿರುವುದರಿಂದ ಈ ಗಣಪತಿ ರಾಜನ ಕಾಲಮಾನವು ಸುಮಾರು ಕ್ರಿ.ಶ.೧೦೭೦ ರವರೆಗೂ ಬರಬಹುದು. ಆದರೆ ಕೆಲ ಚರಿತ್ರೆಕಾರರು ಇವನ ಕಾಲಮಾನವು ಕ್ರಿ.ಶ.೧೧೯೯

ಎಂದೂ ಹೇಳುತ್ತಾರೆ. ದೇವಕವಿಯು ಬರೆಯಲೆತ್ನಿಸಿರುವುದು ರೇವಣಸಿದ್ಧರ ಸಮ ಕಾಲದ ಮರುಳಸಿದ್ಧ ಕಾವ್ಯ...ಬಾಳ್ಗಳಿಯ ಕಲಿದೇವನ ಹಾಗೂ ಗದ್ದುಗೆಯ ರಾಮಿ ತಂದೆಯ ಗ್ರಂಥಾಧಾರಗಳಿಂದ ಈ ಮರುಳಸಿದ್ಧ ಕಾವ್ಯವನ್ನು ಬರೆದನೆಂದು ದೇವ ಕವಿಯು ಹೇಳುವನು. ಈ ಕಲಿದೇವನ ಕಾಲಮಾನವು ಉಜ್ಜಯಿನಿಯ ಸಿದ್ಧೇಶ್ವರ ದೇವಾಲಯದ ಆವರಣದಲ್ಲಿರುವ ಶಾಸನದಿಂದ ಕ್ರಿ. ಶ. ೧೧೧೫ ಎಂದು ತಿಳಿಯು ವುದು. ಉಜ್ಜಯಿನಿಯು (ಕೊಟ್ಟೂರು ಬಳಿ) ಪ್ರಾರಂಭವಾದಮೇಲೆ ಇತ್ತೀಚಿನ ಕಲಿದೇವ ಮೊದಲಾದವರ ಕಾಲಮಾನವೇ ಇಷ್ಟೊಂದು ದೂರ ಹೋಗುತ್ತಿರುವಾಗ ಕೊಟ್ಟೂರು ಉಜ್ಜಯನಿಯನ್ನು ಪ್ರಾರಂಭ ಮಾಡಿದ ಮೂಲ ಮರುಳುಸಿದ್ಧನ ಕಾಲ ಕ್ರಿ. ಶ. ೯೦೨ ರಷ್ಟು ಪ್ರಾಚೀನವೆಂದು ಧಾರಾಳವಾಗಿ ಒಪ್ಪಬೇಕಾಗಿದೆ. ಕೊಟ್ಟೂರು ಉಜ್ಜಯನಿಯ ಮರುಳುಸಿದ್ಧೇಶ್ವರ ದೇವಸ್ಥಾನದ ರಚನೆ, ಶಿಥಿಲವಾದ ಉಪ್ಪಡರಿದ ಕೆಲವು ಶೇಷಗಳು ಅಲ್ಲಿ ಹೂಳಿರುವ ನೆಲಮನೆಯ ಶಿವಲಿಂಗ ಶಿಲಾಲೇಖಗಳ ಅಕ್ಷರಗಳು ಇವಲ್ಲವನ್ನೂ ಶೋಧಿಸುವಲ್ಲಿ ಈ ರಚನೆಯು ಇಂದಿಗೆ ಒಂದು ಸಾವಿರದ ನಾಲ್ವತ್ತು ನಾಲ್ಕುವರ್ಷಗಳಷ್ಟು ಪೂರ್ವದ್ದೆಂದು ನಿರ್ಣಯಿಸಬಹುದಾಗಿದೆ".

ಈ ಲೇಖನವನ್ನು ನೋಡಿದರೆ ಮರುಳಾರಾಧ್ಯರು ದ್ವಾಪರ ಯುಗದವರು. ಅವರನ್ನಾಗಲೇ ಅವರ ಕಾಲದ ಶ್ರೌತಪಾಲ ರಾಜನನ್ನಾಗಲಿ ಗುರುತಿಸಲಾಗುವುದಿಲ್ಲ. ಅದು ಚರಿತ್ರೆಗೆ ಸಿಕ್ಕದ ಮಾತು. ಈ ದ್ವಾಪರಯುಗದ ಮರುಳಾರಾಧ್ಯರು ಒತ್ತಟ್ಟಿ ಗಿರಲಿ.

೧. ರೇವಣಸಿದ್ಧರ ಸಮಕಾಲದ ಮೂಲ ಮರುಳುಸಿದ್ಧರ ಕಾಲವು ಕ್ರಿ.ಶ.೯೦೨ ಎಂದು ಇವರು ಹೇಗೆ ನಿರ್ಣಯಿಸಿರುವರೆಂಬುದನ್ನು ತಿಳಿಯುವುದೇ ಕಷ್ಟವಾಗಿದೆ. ಕೊಟ್ಟೂರು ಬಳಿ ಉಜ್ಜಯಿನಿಯಲ್ಲಿ ಹೂಳಿದ ನೆಲಮನೆಯ ಶಿವಲಿಂಗ ಮತ್ತು ಶಿಲಾ ಲೇಖಗಳು ಅಕ್ಷರಗಳು ಇವುಗಳಿಂದ ಕ್ರಿ. ಶ. ಸು. ೯೦೪ ರಲ್ಲಿ ಅವರ ಕಾಲವೆಂದು ಭಾವಿಸಿದಂತೆ ತೋರುತ್ತದೆ. ಆ ಶಿಲಾಲೇಖಗಳ ಅಕ್ಷರಗಳನ್ನು ಪ್ರಕಟಿಸಬೇಕಾಗಿದ್ದಿತು ಮತ್ತು ಅದರಲ್ಲಿ ಕಾಲಮಾನವನ್ನು ಬರೆದಿದ್ದರೆ ಅದನ್ನು ಪ್ರಕಟಿಸಬೇಕಾಗಿದ್ದಿತು. ಅದಾವುದೂ ಇಲ್ಲದಿರುವುದರಿಂದ ಈ ಆಧಾರದಿಂದ ಕ್ರಿ. ಶ. ೯೦೨ ಎಂದು ನಿರ್ಣಯಿಸ ಲಾಗುವುದಿಲ್ಲ.

೨. ಈ ಮರುಳುಸಿದ್ಧರ ಜೀವಿತಕಾಲ ೧೭೦ ವರ್ಷಗಳ ಅವಧಿಯಲ್ಲಿ ಓರಂಗಲ್ಲಿ ನಲ್ಲಿ ರಾಜ್ಯವಾಳಿದ ಕಾಗತಿಯ ಗಣಪತಿ ಮಹಾರಾಜನಿಗೆ ದರ್ಶನಕೊಟ್ಟಿರುವರೆಂದು ಈ ಲೇಖನವು ಹೇಳಿರುವುದರಿಂದ ಈ ಮೂಲ ಮರುಳುಸಿದ್ಧರು ಗಣಪತಿರಾಜನ ಕಾಲದವರಾಗುತ್ತಾರೆ. ಓರಂಗಲ್ಲಿನಲ್ಲಿ ರಾಜ್ಯವಾಳಿದವರಲ್ಲಿ ಗಣಪತಿರಾಜನು ಒಬ್ಬನೇ. ಈ ಗಣಪತಿರಾಜನ ಕಾಲವು ಕ್ರಿ. ಶ. ೧೧೯೯ ರಿಂದ ೧೨೬೦ರ ವರೆಗೂ ಹೋಗುತ್ತದೆ. ಇವನು ಅನೇಕ ಶಾಸನಗಳನ್ನು ಬರೆಸಿದ್ದಾನೆ. ಇವನ ಕಾಲಮಾನವನ್ನು ಭ್ರಮಿಸಿ ಹಾಗೋ ಹೀಗೋ ಎಂದು ಸಂಶಯಪಡುವಂತೆ ಇಲ್ಲ. ಈ ಲೇಖನದಲ್ಲಿ ಈ ಗಣಪತಿ

ರಾಜನ ಕಾಲಮಾನವು ಸುಮಾರು ಕ್ರಿ. ಶ. ೧೦೭೦ರ ವರೆಗೂ ಬರಬಹುದು ಎಂದು ಹೇಳಿರುವುದು ಸರಿಯಲ್ಲ. ಕ್ರಿ. ಶ. ೧೧೯೯ ಎಂದು ಹೇಳುವುದು ಈ ಲೇಖನಕಾರರಿಗೆ ಗೊತ್ತಾಗಿದ್ದರೂ ಅದನ್ನು ಖಂಡಿಸುವ ಪ್ರಯತ್ನಕ್ಕೇ ಹೋಗಿಲ್ಲ. ಇದರಿಂದಲೂ ಮೂಲ ಮರುಳುಸಿದ್ಧರ ಕಾಲವು ಕ್ರಿ. ಶ. ೯೦೨ಕ್ಕೆ ಹೋಗುವುದಿಲ್ಲ.

೩. ಇವರು ಈ ೯೦೨ ಎಂಬುದನ್ನು ಈ ರೀತಿ ಕಂಡುಹಿಡಿದಿರುವಂತೆ ತೋರುತ್ತದೆ. ೧೯೧೫ ನೆಯ ಮೇ ತಿಂಗಳ ಇಂಡಿಯನ್ ರಿವ್ಯು "Indian Review" ನಲ್ಲಿ ಹೇಳಿರುವಂತೆ ಕ್ರಿ. ಶ. ೧೦೭೨ ರಲ್ಲಿ ಪ್ರಸಿದ್ಧರಾದ ಶ್ರೀಪತಿ ಪಂಡಿತಾರಾಧ್ಯರು ಶ್ರೀಕರ ಭಾಷ್ಯವನ್ನು ಬರೆದಿರುವುದರಲ್ಲಿ ಮರುಳುಸಿದ್ಧರನ್ನು ಸ್ತೋತ್ರಮಾಡಿರುವುದರಿಂದ ಶ್ರೀಪತಿ ಪಂಡಿತರ ಕಾಲ ಕ್ರಿ. ಶ. ೧೦೭೨ ರಲ್ಲಿ ಮರುಳುಸಿದ್ಧರ ಜೀವಿತಕಾಲ ೧೭೦ ವರ್ಷಗಳನ್ನು ಕಳೆದರೆ ೯೦೨ ಬರುವುದರಿಂದ ಕ್ರಿ. ಶ. ೯೦೨ ಮೂಲ ಮರುಳುಸಿದ್ಧರ ಕಾಲವೆಂದು ಭಾವಿಸಿದಂತೆ ತೋರುತ್ತದೆ ಇದು ಬಹಳ ವಿಚಿತ್ರ ವಿಷಯ. ಮೂಲ ಮರುಳುಸಿದ್ಧರು ೧೭೦ ವರ್ಷ ಬದುಕಿದ್ದರೆಂಬುದಕ್ಕೆ ಕಾಗದದ ಪ್ರತಿಯು ಮೂಲವನ್ನುಳ್ಳ ಮರುಳಾರಾಧ್ಯ ವಿಜಯದ ಹೇಳಿಕೆಯನ್ನು ನಂಬುವುದು ಅಸಂಗತ. ಆ ಬಗ್ಗೆ ಸರಿಯಾದ ಆಧಾರಗಳು ಇನ್ನೂ ಬೇಕಾಗುವುವು. ಅಂಥಾ ಆಧಾರಗಳನ್ನು ಈ ಲೇಖನದಲ್ಲಿ ತೋರಿಸಿಲ್ಲ ಮತ್ತು ಶ್ರೀಪತಿ ಪಂಡಿತರ ಕಾಲ ಕ್ರಿ. ಶ. ೧೦೭೨ ಎಂದು ಇಂಡಿಯನ್ ರಿವ್ಯೂ ಹೇಳುವುದೂ ಸರಿಯಲ್ಲ. ಈ ಶ್ರೀಪತಿ ಪಂಡಿತರಿಗೆ ಆಶ್ರಯುವನ್ನು ಕೊಟ್ಟ ಅನಂತಪಾಲನು ಸುಮಾರು ಕ್ರಿ. ಶ. ೧೧೩೫–೪೦ ರಲ್ಲಿ ಶಿಲಾಹಾರ ರಾಜ್ಯದಿಂದ ಕಾಶ್ಮೀರಕ್ಕೆ ರಾಯಭಾರಿಯಾಗಿ ಹೋದಂತೆ ದೃಢವಾಗಿ ತಿಳಿಯಬಂದಿದೆ. ಇನ್ನೂ ಅನೇಕ ಸಂಗತಿಗಳಿಂದ ಶ್ರೀಪತಿ ಪಂಡಿತನು ೧೨ನೇ ಶತಮಾನದವನೆಂದು ನಿರ್ಧಾರವಾಗಿ ತಿಳಿದುಬರುತ್ತದೆ. ಅವನ ಕಾಲಮಾನವು ಈ ರೀತಿ ಇದ್ದರೂ ಶ್ರೀಕರ ಭಾಷ್ಯವು ಅವನಿಂದ ಹುಟ್ಟಲಿಲ್ಲವೆಂದೂ ಸುಮಾರು ೧೪ನೇ ಶತಮಾನದಲ್ಲಿ ಅದು ಹುಟ್ಟಿತೆಂದೂ ಶ್ರೀ ಹಯುವದನರಾಯುರು ಆ ಭಾಷ್ಯವನ್ನು ಪ್ರಕಟಿಸುವಾಗ ತಮ್ಮ ಮುನ್ನುಡಿಯಲ್ಲಿ ಹೇಳಿದ್ದಾರೆ. ಇದಲ್ಲದೆ ಶಿವಸುತ ಎಂಬುವರು ಈ ಭಾಷ್ಯವು ಸುಮಾರು ನೂರುವರ್ಷಗಳಿಂದೀಚೆಗೆ ಹುಟ್ಟಿದುದೆಂದು ಆಧಾರಸಹಿತವಾಗಿ ಬರೆದಿದ್ದಾರೆ. ಆದುದರಿಂದ ಆ ಭಾಷ್ಯದಲ್ಲಿ ಬರೆದ ಮಾತನ್ನು ನಂಬಿಕೊಂಡು ಮರುಳುಸಿದ್ಧರ ಕಾಲವನ್ನು ನಿರ್ಣಯಿಸಲಿಕ್ಕೆ ಹೋಗುವುದು ಸರಿಯಲ್ಲ. ಮುಖ್ಯವಾಗಿ ಶ್ರೀಪತಿ ಪಂಡಿತರ ಕಾಲ ಕ್ರಿ.ಶ. ೧೦೭೨ ಎಂಬುದು ಸರಿಯಲ್ಲ. ಅವರಿಂದ ಭಾಷ್ಯವು ಬರೆಯಲ್ಪಟ್ಟಿಲ್ಲ ಮತ್ತು ಮೇಲೆ ಲೇಖನದಲ್ಲಿ ಹೇಳಲ್ಪಟ್ಟಂತೆ ಮರುಳುಸಿದ್ಧರ ಜೀವಿತಕಾಲವು ೧೭೦ ಎಂಬುದಕ್ಕೂ ಸರಿಯಾದ ಆಧಾರವಿಲ್ಲ. ಆದುದರಿಂದ ಈ ಲೆಕ್ಕದ ಪ್ರಕಾರ ೧೭೦ ಕಳೆದು ೯೦೨ ಎಂದು ಮೂಲ ಮರುಳಸಿದ್ಧರ ಕಾಲವನ್ನು ಕಂಡುಹಿಡಿದಿರುವುದಾದರೆ ಅದು ಬಹಳ ವಿಚಿತ್ರವಾದುದೇ ಸರಿ. ಮೂಲ ಮರುಳುಸಿದ್ಧರು ೧೭೦ ವರ್ಷಗಳ ಕಾಲದಲ್ಲಿ ಏನೇನು ಕೆಲಸಗಳನ್ನು

ಮಾಡಿದರೆಂಬುದು ಸಂಕ್ಷಿಪ್ತವಾಗಿ ಅಥವಾ ವಿವರವಾಗಿ ತಿಳಿಯುವವರೆವಿಗೂ ಆ ಮಾತನ್ನು ನಂಬುವಂತೆಯೇ ಇಲ್ಲ.

೪. ವಿಜಯ ಕಾವ್ಯವಲ್ಲಿ ಹೇಳಿದಂತೆ ಸೋಮೇಶ್ವರ ಅಥವಾ ಭುವನೈಕಮಲ್ಲನ ಕಾಲವಲ್ಲಿ ಮೂಲ ಮರುಳುಸಿದ್ಧರಿದ್ದರೆಂದು ತಿಳಿಯುವುದಕ್ಕೂ ಆಗುವಂತಿಲ್ಲ.

ಇದಕ್ಕೂ ಶಾಸನದ ಆಧಾರವೇನೂ ತೋರಿಸಲ್ಪಟ್ಟಿಲ್ಲ. ನಾಲ್ಕನೆಯ ಸೋಮೇಶ್ವರನು ಕ್ರಿ. ಶ. ೧೧೮೧ ಸುಮಾರಿನಲ್ಲಿ ಚಾಲುಕ್ಯ ರಾಜನಾಗಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇವನ ಕಾಲಕ್ಕೂ ಓರಂಗಲ್ ಗಣಪತಿರಾಜನ ಕಾಲಕ್ಕೂ ಸರಿಬರುತ್ತದೆ. ಈ ಸೋಮೇಶ್ವರನ ಕಾಲಕ್ಕೆ ಮರುಳುಸಿದ್ಧರು ಇದ್ದಿರಬಹುದೆಂದು ತೋರುತ್ತದೆ. ಇವನಿಗೂ "ತ್ರಿಭುವನಮಲ್ಲ" ಎಂಬ ಬಿರುದು ಇರುವುದಾಗಿ ಶಾಸನಗಳಿಂದ ತಿಳಿಯುತ್ತದೆ. ಭುವನೈಕಮಲ್ಲ ಎಂಬುದೂ ಇತ್ತೋ ಏನೋ ಎಂಬುದನ್ನು ಇನ್ನೂ ಶೋಧಿಸಿ ನೋಡಬೇಕಾಗಿದೆ. ವಿಜಯ ಕಾವ್ಯದಲ್ಲಿ ಬರೆದ ಬಿರುದೇ ಸರಿಯಾದುದೆಂದೂ ಆ ಪ್ರಕಾರ ಆ ಬಿರುದನ್ನುಳ್ಳ ಮೂರನೇಯ ಸೋಮೇಶ್ವರನ ಕಾಲಕ್ಕೆ ಮರುಳುಸಿದ್ಧರಿದ್ದರೆಂದೂ ಭಾವಿಸುವುದಾದರೆ ೧೭೦ ವರ್ಷಗಳ ಕಾಲ ಮರುಳುಸಿದ್ಧರು ಮಾಡಿದ ಕೆಲಸಗಳು ತಿಳಿಯದೆ ಇರುವುದರಿಂದ ಹೋಲಿಸುವುದಕ್ಕೆ ಸರಿಯಾಗುವುದಿಲ್ಲ. ಸೋಮೇಶ್ವರ ಎಂಬ ಹೆಸರು ಇಬ್ಬರಿಗೂ ಇರುವುದರಿಂದ ಬಿರುದನ್ನು ಆ ಕವಿಯು ಸರಿಯಾಗಿ ತಿಳಿದು ಬರೆದನೋ ತಿಳಿಯದೇ ಬರೆದನೋ ಎಂಬ ಸಂಶಯ ಉಂಟಾಗುತ್ತದೆ. ವಿಜಯದಲ್ಲಿ ಬರೆದಂತೆ ૩ನೆಯ ಸೋಮೇಶ್ವರನು ಉಂಬಳಿಯನ್ನು ಕೊಟ್ಟ ಬಗ್ಗೆ ಶಾಸನವು ಸರಿಯಾದುದು ದೊರಕಿದ್ದರೆ ಯಾರ ಆಕ್ಷೇಪಣೆಯೂ ಇರುತ್ತಿರಲಿಲ್ಲ.

೫. ಬಾಳ್ಗುಳಿಯ ಕಲಿದೇವನ ಗ್ರಂಥಾಧಾರದಿಂದ ದೇವನು ಗ್ರಂಥ ಬರೆದನೆಂದು ತಿಳಿಯುವುದಕ್ಕೆ ಬಲವಾದ ಆಧಾರವು ಬೇಕಾಗಿದೆ. ಕೆಲವು ಕವಿಗಳು ಮಹಾದೇವನು ನುಡಿಸಿದಂತೆ ನಾನು ನುಡಿದೆ ಎಂದು ಹೇಳುವ ಪದ್ಧತಿಯು ವಿಶೇಷವಾಗಿ ಕಂಡುಬಂದಿದೆ. ಆದುದರಿಂದ ದೇವನು ಹೇಳಿದುದೇ ಕಲಿದೇವನ ಹೇಳಿಕೆ ಎಂದು ತಿಳಿಯಲಿಕ್ಕೆ ಬರುತ್ತದೆ. ಕವಿ ಕಲಿದೇವನ ಹೆಸರಿನ ಶಾಸನ ಕ್ರಿ. ಶ. ೧೧೧೫ ಎಂದು ಮೇಲೆ ಹೇಳಲ್ಪಟ್ಟಿದೆ. ಆ ಶಾಸನವನ್ನು ಪ್ರಕಟಿಸಿದ್ದರೆ ಚೆನ್ನಾಗಿರುತ್ತಿತ್ತು.

ಇವೇ ಮುಂತಾದ ಕಾರಣಗಳಿಂದ ಕ್ರಿ. ಶ. ೯೦೨ ಎಂದು ನಿರ್ಣಯಿಸುವುದು ಸೂಕ್ತವಾಗಿಲ್ಲ. ಇದೂವರೆಗೆ ಹೇಳಿದ ಈ ಕಾಲದ ವಿಮರ್ಶೆಯೂ ಇನ್ನೂ ಅಪೂರ್ಣ. ಈ * ತೋರಿಬಂದ ಅಂಶಗಳನ್ನು ಹೊರಗೆಡವಿದೆ. (ಸಂ. ೮೫–೮೬)

# ೪. ಆದಿಯ ಬೋಧೆ

ಈ ಸರ್ವ ಪುರಾತನರ ವಚನಗಳಿಂದ ಸಮಾಜಕ್ಕೆ ಸಾರವಾದ ಬೋಧೆಯು ಯಾವುದೆಂಬುದನ್ನು ಸಂಗ್ರಹಿಸಿ ಬರೆಯಲು ಇಲ್ಲಿ ಉದ್ದೇಶಿಸಿ ಇದೆ. ಈ ಲೋಕದಲ್ಲಿ ತಮಗಾಗಿ ತಮ್ಮ ಸಂಸಾರಕ್ಕಾಗಿ ಯಾವುದಾದರೊಂದು ಉದ್ಯೋಗವನ್ನು ಮಾಡಿ ಧನಸಂಪಾದನೆ ಮಾಡಬೇಕೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಶಿವಶರಣರು ಈ ಉದ್ಯೋಗಕ್ಕೆ ಕಾಯಕ ಎಂದು ಸಂಕೇತ ನಾಮವನ್ನಿಟ್ಟಿದ್ದಾರೆ. ಕಾಯದಿಂದ ಉದ್ಯೋಗ ಮಾಡುವ ಸೇವೆ ಎಂದು ಬೋಧಿಸುವುದೇ ಕಾಯಕ ಪದವು. ಲೌಕಿಕ ಪ್ರಯೋಜನಕ್ಕಾಗಿ ಉದ್ಯೋಗವನ್ನು ಮಾಡದೆ ಮಹಾದೇವನ ಸೇವೆಗಾಗಿ ಕಾಯದಿಂದ ಉದ್ಯೋಗವನ್ನು ಮಾಡುತ್ತೇನೆ ಅದು ಕಾಯಕವಾಗಿ ಪರಿಣಮಿಸುವುದು. ಈ ಪುಸ್ತಕದಲ್ಲಿ ಅನೇಕ ವಿಧದ ಕಾಯಕದವರು ನುಡಿದ ವಚನಗಳಿವೆ. ಉದ್ಯೋಗಗಳಿಗೆ ಗಮನಕೊಟ್ಟು ಮನುಷ್ಯರಲ್ಲಿ ಭೇದವನ್ನು ಕಲ್ಪಿಸುವುದು ಸರಿಯಾದುದಲ್ಲವೆಂದು ಭಾವಿಸಿ ಕಾಯಕವನ್ನು ಮಾಡುವವರು ಎಲ್ಲರೂ ಒಂದೇ ಎಂಬ ಬೋಧೆಯು ಈ ವಚನಗಳಿಂದ ದೊರೆಯುತ್ತದೆ. ಹೆಂಡದ ಮಾರಯ್ಯ ಎಂಬ ಹೆಸರಿನ ಕಾಯಕದವನು ಹೆಂಡವನ್ನು ಮಾರಿಬಂದ ಲಾಭದಿಂದ ಮಹಾದೇವನ ಸೇವೆಯನ್ನು ಮಾಡುವವನಾಗಿದ್ದಾನೆ. ಇವರಂತೆ ಕಾಯಕವನ್ನು ಮಾಡುವವರು ನುಡಿದ ಈ ಪುಸ್ತಕದಲ್ಲಿನ ವಚನಗಳಲ್ಲಿ ಮಹಾದೇವನನ್ನು ತಿಳಿಯುವ ಧರ್ಮವು ಎಲ್ಲರದೂ ಒಂದೇ ವಿಧವಾಗಿದೆ ಎಂದು ಚೆನ್ನಾಗಿ ತಿಳಿಯಲಿಕ್ಕೆ ಬರುತ್ತದೆ. ನಾನು ಮನುಷ್ಯನಲ್ಲ. ಮಹಾದೇವನ ರೂಪನು ಎಂದು ತಿಳಿಯುವುದೇ ಆ ಧರ್ಮಜ್ಞಾನವೆಂಬ ವೃಕ್ಷದ ಮೂಲ ಬೀಜವು. ಭಗವದ್ಗೀತೆಯಲ್ಲಿ ಪಂಡಿತ ಅಜ್ಞ ವೇದಾಂತದಲ್ಲಿ ಜ್ಞಾನಿ-ಕರ್ಮಿ, ಶಿವಶರಣರ ವಚನಗಳಲ್ಲಿ-ಭಕ್ತ-ಭವಿ ಎಂದು ಮನುಷ್ಯರಲ್ಲಿ ಭೇದ ಮಾಡಿದ್ದಾರೆ. ನಾನು ಮನುಷ್ಯನೆಂಬ ಜ್ಞಾನದವರು ಪ್ರಾಕೃತಿಕರು, ಮಹಾದೇವನ ರೂಪರೆಂಬ ಜ್ಞಾನದವರು ಅಪ್ರಾಕೃತಿಕರು ಎಂದು ಶಿವಶರಣರು ತಿಳಿದಿದ್ದಾರೆ. ಈ ರೀತಿಯಲ್ಲಿ ಯಾವ ಕಾಯಕವನ್ನು ಮಾಡಿದರೂ ಮಹಾದೇವನ ರೂಪದವರೇ ಒಂದೇ ವಿಧದವರೇ ಎಂಬ ಭಾವನೆ ಶಿವಶರಣರಿಗೆ ಇರುತ್ತದೆ. ಉಪನಿಷತ್ತುಗಳಲ್ಲಿಯೂ ಜ್ಞಾನಾಚಾರವುಳ್ಳವರು ಅತಿವರ್ಣಿ (ಜಾತಿಗಳನ್ನು ಮೀರಿದವರು) ಅತ್ಯಾಶ್ರಮಿ (ನಾಲ್ಕು ಆಶ್ರಮಗಳನ್ನು ಮೀರಿದವರು) ಎಂದು ಹೇಳಿದ್ದಾರೆ. ಅದೇ ಧರ್ಮವೇ ಶಿವಶರಣರದು. ಯಾವ ಕಾಯಕವನ್ನಾದರೂ ಮಾಡಿದವರ ವಚನಗಳನ್ನು ನೋಡಿದರೆ ಅದೇ ಧರ್ಮದ ಗುರಿಯನ್ನಿಟ್ಟುಕೊಂಡಿವೆ ಎಂಬುದನ್ನು ಚೆನ್ನಾಗಿ ತಿಳಿಯಲಿಕ್ಕೆ ಬರುತ್ತದೆ.

ಈ ಪುಸ್ತಕದ ವಚನಗಳಲ್ಲಿ ವೀರಶೈವರಲ್ಲಿ ಈಗ ಪಂಚಾಚಾರ್ಯರೆಂದು ತಿಳಿಯಲ್ಪಟ್ಟಿರುವವರ ವಚನಗಳೂ ಇರುತ್ತವೆ. ೨೨ನೆಯದಾಗಿ ಮಲ್ಲಿಕಾರ್ಜುನ ಪಂಡಿತಾರಾಧ್ಯರ ವಚನವಿದೆ. ಈ ವಚನಗಳ ಮುದ್ರೆಯು (ಅಂಕಿತವು) ಶ್ರೀ ಮಲ್ಲಿಕಾರ್ಜುನಾ ಎಂದಿದೆ.ಇವುಗಳನ್ನು ಶ್ರೀಶೈಲದ ಪೀಠಾಧಿಕಾರಿಗಳಾದ ಪಂಡಿತಾರಾಧ್ಯರು ನುಡಿದರೆಂದು ತಿಳಿಯಲಿಕ್ಕೆ ಬರುವಂತೆ ಇದೆ. ಏಕೆಂದರೆ, ವೀರಶೈವರ ಗ್ರಂಥಗಳಲ್ಲಿ ಮಠಸ್ಥಲ ಎಂಬ ಬರೆಹದ ಪ್ರತಿಗಳಲ್ಲಿ ಮೊದಲಾಗಿ ಎಲ್ಲವುಗಳಲ್ಲಿಯೂ ಪಂಡಿತಾರಾಧ್ಯರ ಲಿಂಗವೂ ಶ್ರೀ ಚನ್ನಮಲ್ಲಿಕಾರ್ಜುನಾ ಎಂದಿದೆ. ಈ ದೆಶೆಯಿಂದ ಈ ವಚನಗಳು ಅವರು ನುಡಿದವುಗಳೇ ಎಂದು ತಿಳಿಯಲನುಮಾನವಿಲ್ಲ. ೨೦ನೆಯದಾಗಿ ಮರುಳುಶಂಕರದೇವರ ವಚನಗಳಿವೆ. ಶೂನ್ಯಸಂಪಾದನೆಯಲ್ಲಿ ಮರುಳುಶಂಕರದೇವರ ಸಂಪಾದನೆ ಎಂಬ ಪ್ರಕರಣದಲ್ಲಿಯೂ ಇವರ ವಚನಗಳ ಉಲ್ಲೇಖವಿದೆ. ಇವುಗಳ ಮುದ್ರೆ (ಅಂಕಿತ) "ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನದೇವಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ" ಎಂದು ಇತರ ವಚನಗಳ ಅಂಕಿತವಿದೆ. ಶಾಂತ ಮಲ್ಲಿಕಾರ್ಜುನ ಲಿಂಗವೂ ಶ್ರೀ ರೇವಣಸಿದ್ಧರಿಗೆ ಇತ್ತೆಂಬುದು ಎಲ್ಲಾ ಆಧಾರಗಳಿಂದ ಗೊತ್ತಾಗುತ್ತದೆ. ಆದುದರಿಂದ ಶ್ರೀ ರೇವಣರನ್ನು ಗುರುಗಳೆಂದು ಭಾವಿಸಿ ಈ ವಚನಗಳ ಮುದ್ರೆಯನ್ನು ಇಟ್ಟಿದ್ದಾರೆ ಎಂದು ತಿಳಿಯಲನುಮಾನವಿಲ್ಲ. ಈ ಪುಸ್ತಕದಲ್ಲಿನ ೭೧೬ನೆಯ ವಚನ ಮುಂತಾಗಿ ಕೆಲವು ವಚನಗಳು ಶೂನ್ಯಸಂಪಾದನೆಯಲ್ಲಿ ಇರುವುದರಿಂದ ಈ ಎರಡು ಪ್ರತಿಗಳಲ್ಲಿಯೂ ಕಂಡ ಮರುಳುಶಂಕರದೇವರು ಒಬ್ಬ ವ್ಯಕ್ತಿಯೇ ಎಂದು ಗುರುತಿಸಲಿಕ್ಕೆ ಬರುತ್ತದೆ. ರುದ್ರಮುನಿಯ ಕಾಲಜ್ಞಾನ, ಅನಾದಿ ವೀರಶೈವ ಸಂಗ್ರಹ ಇವೇ ಮೊದಲಾದ ಕೆಲವು ಆಧಾರಗಳಲ್ಲಿ ನಾಲ್ಕು ಜನ ಆಚಾರ್ಯರ ಹೆಸರುಗಳನ್ನು ಹೇಳುವಾಗ ಶ್ರೀ ಮರುಳುಸಿದ್ಧ ಎಂಬ ಹೆಸರಿನ ಬದಲಾಗಿ ಮರುಳುಶಂಕರದೇವರು ಎಂದು ಇರುವದನ್ನು ನೋಡಬಹುದಾದುದರಿಂದ ಈ ಮರುಳುಶಂಕರದೇವರೇ ಮರುಳುಸಿದ್ಧರೆಂದು ತಿಳಿಯಲಿಕ್ಕವಕಾಶವಾಗಿದೆ. ಇದೇ ಪುಸ್ತಕದಲ್ಲಿಯೇ ಮರುಳುಸಿದ್ಧೇಶ್ವರ ವಚನ ಎಂಬುದಾಗಿ ೮೨೨ನೆಯ ವಚನವಿದೆ. ಇದರ ಮುದ್ರೆಯು ರೇವಣ್ಣ ಪ್ರಭುವೇ ಎಂದಿದೆ. ಮರುಳುಶಂಕರದೇವರ ವಚನದಲ್ಲಿಯೂ ಪ್ರಸನ್ನಪ್ರಭುವೇ ಎಂದು ಶ್ರೀ ರೇವಣರಿಗಾಗಿ ಸಂಬೋಧಿಸಲ್ಪಟ್ಟಿದೆ. ಈ ವಚನದಲ್ಲಿಯೂ ರೇವಣ್ಣ ಪ್ರಭುವೇ ಎಂದಿರುವುದರಿಂದ ಈ ಎರಡು ವಿಧದ ಮುದ್ರೆಯ ವಚನಗಳನ್ನು ಒಬ್ಬರೇ ನುಡಿದಿದ್ದಾರೆ ಎಂದು ಗುರ್ತಿಸಲಿಕ್ಕೆ ಬರುವಂತೆ ಆಗಿದೆ. ಇಲ್ಲಿ ಎರಡು ವಿಧ ತೋರಿದಂತೆ ಈ ಪುಸ್ತಕದಲ್ಲಿ ಪಂಡಿತಾಚಾರ್ಯಾರಾಧ್ಯರ ವಚನ ಎಂಬುದಾಗಿ ೮೨೬ನೆಯ ವಚನವಿದೆ. ಇದರಲ್ಲಿನ ಮುದ್ರೆ ಗುರುಸಿದ್ಧಮಲ್ಲ ಎಂದಿದೆ. ಮೇಲೆ ಕಂಡ ಮಲ್ಲಿಕಾರ್ಜುನ ಪಂಡಿತಾರಾಧ್ಯರ ವಚನ ಎಂಬಿವುಗಳನ್ನು "ಈ ಗುರುಸಿದ್ಧಮಲ್ಲ" ಅಂಕಿತದ ವಚನವನ್ನೂ ನುಡಿದವರೊಬ್ಬರೇ ಎಂದು ತಿಳಿಯಲಿಕ್ಕೆ ಬರುವಂತೆ ಇದೆ. ಕ್ರಿ. ಶ. ೧೧೮೭ರ ಸಿರಿವಾಳ ಶಾಸನದಲ್ಲಿ ಶ್ರೀ ರೇವಣಸಿದ್ಧರು ರೇಣುಕಾಚಾರ್ಯ ಎಂದು ಕರೆಯಲ್ಪಟ್ಟಿ

ದ್ದಾರೆ. ಈ ವಚನದಲ್ಲಿಯೂ ಪಂಡಿತಾಚಾರ್ಯ ಎಂದು ಮಲ್ಲಿಕಾರ್ಜುನ ಪಂಡಿತರನ್ನು ಕರೆದಿದ್ದಾರೆ. ಆದುದರಿಂದ ಪಂಡಿತಾರಾಧ್ಯ, ಮರುಳುಶಂಕರದೇವ, ರೇವಣಸಿದ್ಧ ಇವರು ಆಚಾರ್ಯರಾದ ಕಾಲವೊಂದಿದ್ದಿತೆಂದೂ ಆ ಕಾಲದಲ್ಲಿಯೇ ಮರುಳುಸಿದ್ಧೇಶ್ವರ ದೇವರ ವಚನ ಎಂಬುದೂ ಪಂಡಿತಾಚಾರ್ಯಾರಾಧ್ಯರ ವಚನ ಎಂಬುದೂ ನುಡಿಯಲ್ಪಟ್ಟುವೆಂದೂ ಮರುಳುಶಂಕರದೇವ-ಮರುಳುಸಿದ್ಧೇಶ್ವರ, ಪಂಡಿತಾರಾಧ್ಯ-ಪಂಡಿತಾಚಾರ್ಯ ಎಂಬುವರು ಒಬ್ಬೊಬ್ಬರೇ ಎಂದು ತಿಳಿಯಲಿಕ್ಕೆ ಬರುತ್ತದೆ. ಇದರಂತೆಯೇ ಬಸವೇಶ್ವರನ ವಚನಗಳು ಈ ಪುಸ್ತಕದಲ್ಲಿ ೧ ರಿಂದ ೧೧ ಇವೆ. ಇವುಗಳ ಮುದ್ರೆ ಕೂಡಲಸಂಗಮದೇವಾ ಎಂದಿದೆ ಮತ್ತು ಇದೇ ಪುಸ್ತಕದಲ್ಲಿ ಗುರುಬಸವೇಶ್ವರ ವಚನಗಳು ಎಂಬುದಾಗಿ ೮೨೭-೮೨೮ನೆಯ ವಚನಗಳಿವೆ. ಇವುಗಳ ಮುದ್ರೆ ಗುರುಬಸವ ಅಥವಾ ಗುರುಬಸವೇಶ್ವರ ಎಂದಿದೆ. ಈ ವಚನಗಳ ಅಭಿಪ್ರಾಯವನ್ನು ನೋಡಿದರೆ ಒಬ್ಬ ಸಮ್ಯಕ್‌ಜ್ಞಾನಿ ಗುರುವು ಬೋಧಿಸುವ ವಿಷಯಗಳೇ ತುಂಬಿಕೊಂಡಿವೆ. ಅದುದರಿಂದ ಸಮ್ಯಜ್ಞಾನಿಯಾದ ಕಲ್ಯಾಣದ ಬಸವೇಶ್ವರನೇ ಈ ವಚನಗಳನ್ನು ನುಡಿದಿದ್ದಾನೆ. ಅನಾದಿ ವೀರಶೈವ ಸಂಗ್ರಹ ಎಂಬ ಗ್ರಂಥದಲ್ಲಿ ಬಸವೇಶ್ವರನು ಗುರುವು ಎಂದು ಹೇಳಲ್ಪಟ್ಟಿದೆ. ಆದುದರಿಂದ ಬಸವೇಶ್ವರನು ಗುರುವಾದಾಗ ಈ ವಚನಗಳನ್ನು ನುಡಿದಿದ್ದಾನೆ ಎಂದು ಗುರ್ತಿಸಲಿಕ್ಕೆ ಬರುತ್ತದೆ. ಹೀಗೆ ಮರುಳುಶಂಕರದೇವ, ಮಲ್ಲಿಕಾರ್ಜುನ, ಪಂಡಿತಾರಾಧ್ಯ, ಬಸವೇಶ್ವರ ಇವರು ಒಬ್ಬೊಬ್ಬರೇ ಬೇರೆ ಬೇರೆ ಕಾಲಗಳಲ್ಲಿ ನುಡಿದ ವಚನಗಳು ಈ ಪುಸ್ತಕದಲ್ಲಿ ಸೇರಿವೆ. ಇವುಗಳಿಂದ ಇತಿಹಾಸ ಶೋಧನೆಗೆ ಅನುಕೂಲವಾಗಿದೆ. ಸೂಜಿಕಾಯಕದ ರಾಮಿತಂದೆಗಳ ವಚನ ಎಂಬುದಾಗಿ ೬೨೬-೬೩೫ನೆಯ ವಚನಗಳಿವೆ. ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮದೇವರಿಗೆ ಮೊದಲು ರಾಮಯ್ಯ ಎಂದು ಹೆಸರಿದ್ದಿತೆಂದು ಅವರು ಶಿವನೊಬ್ಬನೇ ಏಕೋದೇವನೆಂದು ಭಾಸ್ಕರ ರಾಜನ ಸಭೆಯಲ್ಲಿ ವ್ಯಾಸನೆಂಬವನೊಬ್ಬನೊಡನೆ ವಾದಿಸಿ ಜಯಿಸಿದುದರಿಂದ ಅವರಿಗೆ ಏಕೋದೇವ-ರಾಮದೇವ ಎಂಬುದರ ಪರ್ಯಾಯವಾಗಿ ಏಕೋರಾಮದೇವ ಎಂಬ ಹೆಸರು ಬಂದಿತೆಂದು ಗ್ರಂಥಗಳಿಂದ ತಿಳಿಯುಬರುತ್ತದೆ. ವೀರಶೈವಾಚಾರ್ಯರ ಕಲಶಾದಿಗಳನ್ನು ಹಂಚುವಾಗ ಆಚಾರ್ಯರಿಗೆ ಸೂಜಿಗಳನ್ನು (ತಾಂಬ್ರಸೂಜಿ ಬೆಳ್ಳಿಸೂಜಿ ಮೊದಲಾಗಿ) ಹಂಚಿದುದೂ ಗೊತ್ತಾಗಿದೆ. ಆದುದರಿಂದ ಆಚಾರ್ಯರಾದ ಏಕೋರಾಮದೇವರು ಮೊದಲು ಸೂಜಿಯ ಕಾಯಕದವರು ಎಂದು ಗುರ್ತಿಸಲಿಕ್ಕೆ ಬರುತ್ತದೆ. ಇದಲ್ಲದೆ ಏಕೋರಾಮಿತಂದೆ ಎಂಬ ಹೆಸರನ್ನೂ ಇವರಿಗೆ ಅನೇಕ ಕಡೆಗಳಲ್ಲಿ ಕರೆದಿದ್ದಾರೆ. ಇವೆಲ್ಲಾ ಕಾರಣಗಳಿಂದ ಈ ವಚನಕಾರರಾದ ಸೂಜಿಯ ಕಾಯಕದ ರಾಮಿತಂದೆ ಎಂಬವರು ವೀರಶೈವ ಆಚಾರ್ಯರಾದ ಏಕೋರಾಮಯ್ಯ ದೇವರೇ ಎಂದು ಗುರ್ತಿಸುವಂತಾಗಿದೆ. ಗುರುಸಿದ್ಧಮಲ್ಲಿಕಾರ್ಜುನ ಎಂಬ ಹೆಸರಿನ ಲಿಂಗವು ವಿಶ್ವಾರಾಧ್ಯರಿಗೆ ಇದ್ದಿತೆಂದೂ, ಇವರು ಗುರುಗಳಾಗಿದ್ದರೆಂಬೂ ಬರೆಹದ ಪ್ರತಿಗಳು ದೊರಕುತ್ತವೆ. ಮೇಲೆ ಕಂಡ ಗುರುಸಿದ್ಧಮಲ್ಲ ಎಂಬ ಮುದ್ರೆಯು ಗುರು

ವಾದ ಸಿದ್ಧಮಲ್ಲಿಕಾರ್ಜುನಲಿಂಗ ಎಂಬುದಾಗಿ ವಿಶ್ವಾರಾಧ್ಯರನ್ನೇ ತೋರಿಸುತ್ತದೆ. ಹೀಗೆ ರೇವಣಸಿದ್ಧ, ಮರುಳುಸಿದ್ಧ, ಏಕೋರಾಮದೇವ, ಪಂಡಿತಾರಾಧ್ಯ, ವಿಶ್ವಾರಾಧ್ಯ, ಗುರುವಾದ ಬಸವೇಶ್ವರ ಇವರನ್ನು ಈ ಪುಸ್ತಕದಲ್ಲಿನ ವಚನಗಳಿಂದ ಗುರ್ತಿಸಬಹು ದಾದುದರಿಂದ ವೀರಶೈವರಲ್ಲಿ ಪೂಜ್ಯರಾದ ಬಸವೇಶ್ವರ ಮತ್ತು ಪಂಚಾಚಾರ್ಯರ ಇತಿ ಹಾಸವನ್ನೂ ಆ ಮೂಲಕ ಸಮಾಜದ ಆಡಳಿತದ ರಚನೆಯ ಇತಿಹಾಸವನ್ನೂ ತಿಳಿಯು ವುದಕ್ಕೆ ಹೆಚ್ಚಿನ ಅನುಕೂಲವಾಗಿರುತ್ತದೆ.

ಈ ಪುಸ್ತಕದಲ್ಲಿ ಶೀಲಸಂಪಾದನೆಯ ವಚನಗಳು ಎಂಬುದಾಗಿ ೮೪೭–೮೯೮ ನೆಯ ವಚನಗಳಿವೆ. ಮುಂದೆ ಇತರ ಕಡೆಯಿಂದ ಸಂಗ್ರಹಿಸಿದ ಸಂಖ್ಯೆಯಿಲ್ಲದ ಹತ್ತು ವಚನಗಳಿವೆ. ಇವುಗಳೆಲ್ಲವೂ ಸ್ತ್ರೀಯರಿಂದ ಹೇಳಲ್ಪಟ್ಟವುಗಳಾಗಿವೆ. ಪಾಲ್ಕುರಿಕೆ ಸೋಮನಾರಾಧ್ಯರು ೬೩ ಶೀಲದವರೆಂದು ಪ್ರಸಿದ್ಧಿಯನ್ನು ಪಡೆದವರು. ಅವರ ಶೀಲಗಳು ಇಲ್ಲಿ ಹೇಳಲ್ಪಟ್ಟಿಲ್ಲ. ಪೂರ್ವ ಸಿದ್ಧಾಂತಿಗಳು ಅಥವಾ ಪಾಶುಪತ ಸಿದ್ಧಾಂತಿ ಗಳು ಹೇಳುತ್ತಿದ್ದ ಶೀಲಗಳೇ ಬೇರೆ ಈ ಶೀಲಗಳೇ ಬೇರೆ ಆಗಿವೆ.

ಈ ಶೀಲಗಳಲ್ಲಿ ಪಾಶುಪತರು ನಡೆಸುತ್ತಿದ್ದ ಎಂಜಲು ಪ್ರಸಾದಾಚರಣೆ ಒಡೆಯ ರೆಂಬ ಜಂಗಮರ ಅಶುದ್ಧ ಆಚರಣೆ ಇವುಗಳ ನಿಷೇಧ ಮಾಡಲ್ಪಟ್ಟಿದೆ. ಗುರುಲಿಂಗ ಜಂಗಮದ ಭಕ್ತಿಯು ವಿಧಿಸಲ್ಪಟ್ಟಿದೆ. ಇದೇ ವ್ರತವೆಂಬ ಬೋಧೆ ಇದೆ. (ಇದೇ ಶಾಂಭವ ವ್ರತ. ಇದೇ ಪಾಶುಪತವ್ರತ) ಇದಕ್ಕೆ ಆಚಾರವೇ ಪ್ರಾಣ. ಪಂಚಾಚಾರವೇ ಮುಖ್ಯವು. ಚಿಲುಮೆಯ ನೀರಿನ ಶೀಲವು ಮುಖ್ಯವಲ್ಲ. ಹುಸಿ ಕಳವು ಕೊಲೆ, ಪರದಾರ ಇವೇ ಮೊದಲಾದವುಗಳ ನಿರಸನ, ಅಸಿ ಮಸಿ ಕೃಷಿ ವಾಣಿಜ್ಯಾದಿಗಳು ಕಾಯಕ ರೂಪವಾಗಿರಬೇಕು. ಗುರುಲಿಂಗಜಂಗಮದ ಭಕ್ತಿಯ ಹೊರತಾಗಿ ಉಳಿದ ನಿಯಮ ವ್ರತಗಳನ್ನಾಚರಿಸಬಾರದು. ಕಾಯಕದಲ್ಲಿ ಲೌಕಿಕ ವರ್ತನೆಯ ಬೆರೆಸಲಾಗದು ಇವೇ ಮುಂತಾದವುಗಳನ್ನು ಶೀಲವಾಗಿ ಉಳ್ಳವರಾಗಿರಬೇಕು ಎಂಬಬೋಧೆ ಇದೆ. ಹೆಣ್ಣುಮಕ್ಕಳಲ್ಲಿ ಧರ್ಮವು ವ್ಯಾಪಿಸಿದರೆ ಆ ಧರ್ಮದಿಂದ ಸಮಾಜವೇ ಸುಧಾರಣೆ ಯಾಗುತ್ತದೆ ಎಂಬ ಅಭಿಪ್ರಾಯದಿಂದಲೇ ಶೀಲಸಂಪಾದನೆಯ ಭಾಗವು ಸ್ತ್ರೀಯರಿಗೆ ವಹಿಸಲ್ಪಟ್ಟು ಅವರು ಆಚರಿಸಿ ನುಡಿದ ವಚನಗಳೇ ಇಲ್ಲಿ ಬಂದಿವೆ. ಇಂತಹ ಶೀಲ ಸಂಪಾದನೆಯೇ ಈಗಲೂ ಮುಂದೆಯೂ ಇರಬೇಕಾದುದು.

ಈ ಪುಸ್ತಕದಲ್ಲಿನ ಅನೇಕ ವಚನಗಳಿಂದ ಅನೇಕ ಚಾರಿತ್ರಿಕಾಂಶಗಳನ್ನು ತಿಳಿಯು ಲಿಕ್ಕೆ ಬರುವಂತೆ ಆಗಿದೆ. ನೀಲಮ್ಮನ ವಚನ, ಅಕ್ಕನಾಗಮ್ಮಗಳ ವಚನ, ಅಕ್ಕಮ್ಮಗಳ ವಚನ ಮುಂತಾದವುಗಳಿಂದ ಆಯಾಯಾ ಕಾಲದಲ್ಲಿ ನಡೆದ ಶರಣರ ಇತಿಹಾಸಗಳನ್ನು ವಿಮರ್ಶೆಯಿಂದ ತಿಳಿಯಲಿಕ್ಕೆ ಹೆಚ್ಚಿನ ಅನುಕೂಲಗಳು ದೊರಕುತ್ತವೆ.

ಮುಖ್ಯವಾಗಿ ಮನುಷ್ಯನು ಸಮ್ಯಕ್‌ಜ್ಞಾನಿಯಾಗಿ ಯಾವ ಕಾಯಕದಲ್ಲಿದ್ದರೂ ಅದರ ಗಣನೆ ಇಲ್ಲದೆ ಭಾರತೀಯ ಗ್ರಂಥಗಳಲ್ಲಿ ಹೇಳಲ್ಪಟ್ಟ ಶ್ರೇಷ್ಠವಾದ ಧರ್ಮದ ಸಾಧನೆಗೆ ಈ ಪುಸ್ತಕದ ಓದುವಿಕೆಯು ಹೆಚ್ಚಿನ ಅನುಕೂಲವನ್ನು ಉಂಟುಮಾಡಿ ಕೊಡುವುದು. ಆ ಮೂಲಕ ಸರ್ವರ ಆತ್ಮೋದ್ಧಾರವಾಗಲಿ ಎಂಬ ಹಾರೈಕೆಯಿಂದ ಇದನ್ನು ಪ್ರಕಟಿಸಿದ್ದಾಗಿದೆ.

ಶ್ರೀ ಚನ್ನಮಲ್ಲಿಕಾರ್ಜುನ
(ಸಂ. ೧೫೭)

## ೫. ವೀರಭದ್ರ ಪುರಾಣ

ವೀರಭದ್ರ ಪುರಾಣ ಎಂಬುದೊಂದು ಗ್ರಂಥ. ಈ ಗ್ರಂಥವು ಓಲೆಯ ಪ್ರತಿಯಲ್ಲಿ ಇದೆ. ಪ್ರಸಾದನಿಷ್ಠಾಗರಿಷ್ಠರಾದ ಶಿವಶರಣೆಯರಾದ ಸೊಲ್ಲಾಪುರದ ಶರಣಮ್ಮನವರಲ್ಲಿ ಇದ್ದ ಈ ಪ್ರತಿಯನ್ನು ಬ್ಯಾಡಿಗಿ ಮುಪ್ಪಿನ ಸ್ವಾಮಿಮಠದ ಶ್ರೀ ನಿರಂಜನ ಚನ್ನಬಸವಸ್ವಾಮಿಗಳು ಬರೆಯಿಸಿ ತರಿಸಿರುತ್ತಾರೆ. ಇದರಲ್ಲಿ ೨೫ ಸಂಧಿಗಳಿವೆ. ಇವುಗಳಲ್ಲಿ ಪೂರ್ವಾರ್ಧ ಉತ್ತರಾರ್ಧವೆಂದು ಎರಡು ಭಾಗಗಳಿವೆ. ಪೂರ್ವಾರ್ಧದಲ್ಲಿ ೧೧ ಸಂಧಿಗಳಿವೆ. ಉತ್ತರಾರ್ಧದಲ್ಲಿ ೧೪ ಸಂಧಿಗಳಿವೆ. ಪೂರ್ವಾರ್ಧದ ಸಂಧಿಗಳಲ್ಲಿ ಕೈಲಾಸದಲ್ಲಿ ಶಿವನೊಡನೆ ವೀರಭದ್ರನು ನಡೆಸಿದ ಲೀಲಾ ವಿಷಯಗಳು ವಿವರಿಸಲ್ಪಟ್ಟಿದೆ. ಉತ್ತರಾರ್ಧದ ಸಂಧಿಗಳಲ್ಲಿ ಬಸವೇಶ್ವರನ ವಿಷಯವಿದೆ. ಐವಳ್ಳಿಯ ಪಟ್ಟದಕಲ್ಲಿನ ಯಮಿವರನಿಗೆ (ಇವನೇ ಅನಿಮಿಷ ರಾಜ ಇವನ ಪತ್ನಿ ದೇಮಣೆ) ನಿತ್ಯ ಲಿಂಗಪೂಜೆಯ ಪ್ರತಕ್ಕೆ ತನ್ನ ಲಿಂಗವನ್ನು ಕೊಟ್ಟು ಶಿವನನ್ನು ಕಾಣಬೇಕೆಂದು ಹೋದ ನಂದಿನಾಥನಿಗೆ ನೀನು ಭವಿ ಎಂದು ಹೇಳಿದ ಜಯವಿಜಯರಿಗೆ ಭೂಲೋಕದಲ್ಲಿ ಭವಿಯಾಗಿ ಕಲ್ಯಾಣಪುರದ ಚಾಳುಕ್ಯರಾಯನ ಪುತ್ರನಾಗಿ ಜನಿಸಿ ಬಿಜ್ಜಳನೆಂಬ ಅಭಿದಾನವಂ ಪಡೆದು ಬೆಳೆಯುತ್ತಿರಲು ಅದೇ ಕಾಲದಲ್ಲಿ ಕರ್ನಾಟಕದಲ್ಲಿ ಬಾಗೇವಾಡಿಯಲ್ಲಿ ಉದಿಸಿ ಬೆಳೆದು ಬಸವನಾಮದಿಂದ ಮೆರೆದು ಅನೇಕ ಅಸಮಶರಣರ ಮಹಿಮೆಗಳನ್ನು ಹೇಳಿ ತಿಳಿಸಿ ಮಂತ್ರಿಯಾಗಿ ನಿನ್ನ ಭವಿತನವನ್ನು ಕಳೆಯುವೆನೆಂದು ವೃಷಭನು ಹೇಳಲು ಅದರಂತೆ ಕರ್ನಾಟಕ ದೇಶದ ಕಲ್ಯಾಣ ಪಟ್ಟಣದ ಚಾಲುಕ್ಯನ ಧರ್ಮಪತ್ನಿಯಲ್ಲಿ ಉದಿಸಿದನು. ಈ ಬಿಜ್ಜಳನೆಂಬ ಶಿಶುವಿಗೆ ಮುಂದೆ ಐದು ವರುಷದಲ್ಲಿ ತಂದೆಯಾದ ಅರಸು ಚಾಳುಕ್ಯನಿಗೆ ಜ್ವರ ಹುಟ್ಟಿ ತಾಪವು ಹೆಚ್ಚಾಗಲು ತನ್ನ ಮಂತ್ರಿಯಾದ ಸಿದ್ಧಣ್ಣನನ್ನು ಕರೆಯಿಸಿ ತನ್ನ ಐದು ವರುಷದ ಚಿಕ್ಕ ಬಾಲಕನನ್ನು ಆ ಸಿದ್ದಣ್ಣ ಹಸ್ತದಲ್ಲಿ ಕೊಟ್ಟು ಇವನಿಗೆ ಪಟ್ಟವನ್ನು ಕಟ್ಟಿ ರಾಜ್ಯ ಪರಿಪಾಲನೆ ಪ್ರಜಾರಕ್ಷಣೆ ಮಾಡಬೇಕೆಂದು ಅಪ್ಪಣೆ ಮಾಡಿದನು. ಅದರಂತೆ ಬಿಜ್ಜಳನಿಗೆ ಬುದ್ಧಿ ಕಲಿಸಿ ಪಟ್ಟಗಟ್ಟಿ ರಾಜ್ಯವಾಳುತ್ತಿದ್ದನು. ಇತ್ತ ಕರ್ನಾಟಕ ದೇಶದಲ್ಲಿ ಮೆರೆವ ಬಾಗೆವಾಡಿಯಲ್ಲಿ ಶಿವಭಕ್ತಿಸಂಪನ್ನನಾದ ಮಂಡಿಗೆ ಮಾದಿರಾಜನ ಪತ್ನಿ ಮಾದಲಾಂಬಿಕೆಯು ಮಕ್ಕಳಿಲ್ಲದೆ ಜೋಯಿಸರು ಹೇಳಿದ ಪ್ರಕಾರ ಗ್ರಾಮದ ದೇವತೆಯಾದ ಆದಿನಾಥನ ನಂದಿಯ ದೇವಾಲಯಕ್ಕೆ ಹೋಗಿ ಪೂಜಿಸಿ ಪ್ರಸಾದವನ್ನು ತೆಗೆದುಕೊಳ್ಳುವ ವ್ರತವನ್ನು ಹಿಡಿದಳು. ಒಂದು ದಿವಸ ನಂದಿಕೇಶ್ವರನ ಮಸ್ತಕದ ಪುಷ್ಪವು ಉದುರಿ ಅವಳ ಉಡಿಲಲ್ಲಿ ಬಿದ್ದಿತು, ಅದನ್ನು ಸ್ವೀಕರಿಸಿದಳು. ಆಕೆಯ ಗರ್ಭದಲ್ಲಿ ವೃಷಭನು ಮಗನಾಗಿ ಜನಿಸಿದನು. (ಮಾದಲಾಂಬಿಕೆಯ ಮಗ್ಗುಲಲ್ಲಿ ಶಿಶುವಾಗಿ ಆಡುತ್ತಿದ್ದನು.) ಕೂಸು ಮೊಲೆಯನುಣ್ಣದೆ ಅಳುತ್ತಿರಲು ಆ ಕಾಲದಲ್ಲಿ ಆ

ಊರಲ್ಲಿ ಮಗುವನ್ನು ಹಡವವರು ಯಾರಿದ್ದಾರೆ ಎಂದು ವಿಚಾರಿಸಲಾಗಿ ಮಹದೇವ ಶೆಟ್ಟಿ ಎಂಬುವನ ಹೆಂಡತಿ ನಾಗಲಾಂಬಿಕೆ (ನಾಗಮ್ಮ-ನಾಗಮಾಂಬಿಕೆ) ಎಂಬಾಕೆಯು ನಾಗಮ್ಮ ಎಂಬ ಹೆಣ್ಣುಮಗುವನ್ನು ಹಡೆದು ಇದ್ದಾಳೆ. ಈಕೆಯು ಮುಂದೆ ಅಕ್ಕ ನಾಗಮ್ಮ ಎಂಬ ಹೆಸರನ್ನು ಹೊಂದಿದವಳು ೧೦-೧೫ ದಿವಸವಾಗಿದೆ ಎಂಬುದು ಗೊತ್ತಾಯಿತು. ಆಗ ಜನಿಸಿದ ಭಸ್ಮಲಿಂಗಧಾರಕನಾದ ಬಸವ ಶಿಶುವನ್ನು ಮಾದಿ ರಾಜನ ಕಡೆಯುವರು ಮಹಸೇವಶೆಟ್ಟಿಯ ಮನೆಗೆ ತಂದು ಮೊಲೆ ಕುಡಿಸಲು ಕೂಸು ಆಮೇಲೆ ಆನಂದದಿಂದ ಆಡತೊಡಗಿತು. ಮುಂದೆ ಬಸವನೆಂಬ ಅಭಿದಾನವಿತ್ತರು.

ಈ ರೀತಿಯಾಗಿ ಉತ್ತರಾರ್ಧದ ಪ್ರಾರಂಭದಲ್ಲಿ ಬಸವೇಶ್ವರನ ವಿಷಯವು ಹೇಳಲ್ಪಟ್ಟಿದೆ.

ಮುಂದೆ ಮಾದರಸರು ಮಗನಿಗೆ ಮುಂಜಿಯನ್ನು ಮಾಡಬೇಕೆಂದು ಪ್ರಯತ್ನಿಸಿ ದನು. ಆಗ ಬಸವೇಶ್ವರನು ನಿಮ್ಮ ಕುಲದಲ್ಲಿ ಪೂರ್ವಜರಾದ ಮಂಡುಕಋಷಿಯು ಮತ್ತು ಗಾರ್ಗ್ಯಮುನಿಗಳು ಲಿಂಗಧಾರಣೆ ಪಡೆದು ಮೂಲ ಪಂಚಾಕ್ಷರಿ ಮಂತ್ರಸಿದ್ಧಿ ಯನ್ನು ಪಡೆದು ಮುಕ್ತರಾದರು. ಮೌಂಜೀ ಬಂಧನವು ಲಿಂಗಧಾರಿಗಳಿಗೆ ಯುಕ್ತವಲ್ಲ. ಸಾಕ್ಷಾತ್ ಸಂಗಮೇಶ್ವರನೇ ಬಂದು ಲಿಂಗಧರಿಸಿ ಪಂಚಾಕ್ಷರಿ ಮಂತ್ರ ಉಪದೇಶಮಾಡಿದ ಮೇಲೆ ಕರ್ಮಬಂಧನವಾದ ಈ ಮೌಂಜಿಕರ್ಮದಿಂದ ಪ್ರಯೋಜನವಿಲ್ಲವೆಂದು ಹೇಳಿ ದನು. ಹೀಗೆ ತಂದೆ ತಾಯಿಗಳಿಗೆ ವಾದಿಸಿ ಬಸವನು ಮನೆಯಿಂದ ಕೂಡಲಸಂಗಮ ನಲ್ಲಿಗೆ ಹೊರಡಲುದ್ಯುಕ್ತನಾಗಿ ಸಹೋದರಿಯಾದ ಅಕ್ಕನಾಗಮ್ಮನನ್ನು ಕರೆಯಲು ಅವಳು ಹೊರಟಳು. ಅನೇಕರು ಬಸವೇಶ್ವರನನ್ನು ಹಿಂಬಾಲಿಸಿದರು. ಅವರೊಡನೆ ಬಸವೇಶ್ವರನು ನದಿ ದಾಟಿ ಸಂಗಮಕ್ಕೆ ಹೋದನು. ಅಲ್ಲಿ ಸಂಗಮೇಶ್ವರನು ಪ್ರತ್ಯಕ್ಷ ನಾದನು. ಭೂರುದ್ರರಾದ ಜಂಗಮರಿಗೆ ತ್ರಿವಿಧವನ್ನು ಕೊಟ್ಟು ಅವರನ್ನು ಸಾಕ್ಷಾತ್ ಶಿವನೆಂದು ಭಾವಿಸಿ ಸತ್ಯವಂತನಾಗಿ ಶಿವಮತವನ್ನು ಉದ್ಧರಿಸೆಂದು ಉಪದೇಶ ಮಾಡಿ ದನು. ಹೀಗೆ ಬಸವೇಶನು ಸಂಗಮದಲ್ಲಿರುವಾಗ ಅನೇಕರು ಶಿವಭಕ್ತರು ಅವನ ಬಳಿಗೆ ಬಂದರು. ಬಸವೇಶ್ವರನು ಅವರೆಲ್ಲರಿಗೂ ಜಂಗಮದ ಪಾದತೀರ್ಥ ಪ್ರಸಾದ ದೊರಕು ವಂತೆ ಆಚರಿಸುತ್ತಿದ್ದನು. ಪಂಚವರುಷದ ಪವಾಡಗಳನ್ನು ಮಾಡುತ್ತಿದ್ದನು. ಕಲ್ಲು ದೇವರ ಹಿಪ್ಪರಿಗೆಯಿಂದ ಮಡಿವಾಳ ಮಾಚಯ್ಯನೂ ಸಂಗಮಕ್ಕೆ ಬಂದನು. ಹಿಪ್ಪರಿ ಗೆಯ ಶಿವಭಕ್ತರೂ ಬಹಳವಾಗಿ ಬಂದರು. ಅವರು ಕೂಡಲಸಂಗಮಕ್ಕೆ ಬರುವಾಗ ಬೇತಾಳಗುಡ್ಡದಲ್ಲಿನ ಭೂತಗಳು ಬಂದವು. ಅಕ್ಕನಾಗಮ್ಮನು ಕೂಡಲಕ್ಕೆ ಬಂದ ಶಿವ ಶರಣರ ಉಪಚಾರವನ್ನು ಆನಂದದಿಂದ ಮಾಡುತ್ತಿದ್ದಳು. ಹೀಗೆ ಮೂರು ವರುಷ ಗಳ ಕಾಲ ಬಸವೇಶನು ಶಿವಶರಣರು ಕೂಡಲಸಂಗಮದಲ್ಲಿ ವಾಸವಾಗಿದ್ದರು.

ಮೇಲೆ ಕಾಣಿಸಿದ ನಂದಿನಾಥನ (ಇವನು ನಂದಿಮಂಡಲದ ಬಸವಪ್ಪ) ಹೆಂಡ ರಾದ ಯಶೋದೇವಿ, ಸುಕೇಶಿ ಎಂಬುವರು ಕಲ್ಯಾಣದಲ್ಲಿ ಬಲದೇವ ಮಂತ್ರಿಯ ಮಗ ಳಾಗಿ ಗಂಗಾಂಬಿಕೆ ಎಂಬ ಹೆಸರಿನಿಂದಲೂ ಸಿದ್ದಣ್ಣ ಮಂತ್ರಿಯ ಮಗಳಾಗಿ ನೀಲ

ಲೋಚನೆ ಎಂಬ ಹೆಸರಿನಿಂದಲೂ ಹುಟ್ಟಿದ್ದರು. ಇವರಲ್ಲಿ ಗಂಗಾಂಬಿಕೆಯನ್ನು ಬಸವೇಶನಿಗೆ ಮದುವೆಮಾಡಿಕೊಡುವುದಕ್ಕಾಗಿ ಕಲ್ಯಾಣಕ್ಕೆ ಬಸವೇಶ್ವರನು ಬರಬೇಕೆಂದು ಬಲದೇವಮಂತ್ರಿಯು ಪ್ರಾರ್ಥಿಸಿಕೊಂಡ ಪ್ರಕಾರ ಬಸವೇಶ್ವರನೂ ಮಡಿವಾಳ ಮಾಚಯ್ಯ ಮೊದಲಾದ ಶಿವಭಕ್ತ ಗಣಂಗಳೆಲ್ಲರೂ ಕಲ್ಯಾಣಕ್ಕೆ ಹೊರಟರು. ಮಾರ್ಗದಲ್ಲಿ ಪ್ರತಿನಿತ್ಯವೂ ಜಂಗಮದ ಪಾದತೀರ್ಥ ಪ್ರಸಾದವು ನಡೆದಿದ್ದಿತು. ಒಂದು ದಿವಸ ಮುಗ್ಧ ಸಂಗಯ್ಯನವರ ಪಾದಪೂಜೆ ನಡೆದಾಗ ತೀರ್ಥದ ಒಂದು ಬಿಂದು ನೆಲಕ್ಕೆ ಬೀಳಲು ಒಂದು ಮಹಾಸರ್ಪವು ಆ ತಂಪಿನ ಸೋಂಕಿನಿಂದ ತನ್ನ ಪೂರ್ವದ ಶಾಪವನ್ನು ಕಳೆದುಕೊಂಡು ಗಂಧರ್ವ ರೂಪವನ್ನು ತಾಳಿತು. ಮುಂದೆ ಆ ತೀರ್ಥವು ಬಿದ್ದ ಸ್ಥಳವು ಒಣಗಿ ಬಸವೇಶ್ವರನು ಅದರಮೇಲೆ ಹಸ್ತವಿಡಲು ಅದು ಬಸವತೀರ್ಥ ಎಂಬ ನಾಮದಿಂದ ಪ್ರಸಿದ್ಧವಾಯಿತು. ಈಗಲೂ ಅದು ಮಹಾಕ್ಷೇತ್ರವೆನಿಸಿಕೊಂಡಿದೆ.

ಹೀಗೆ ಬಸವೇಶ್ವರನು ಮಡಿವಾಳ ಮಾಚಿದೇವ ಮುಂತಾದ ಶಿವಶರಣಶರಣೆಯರೊಡನೆ ಕೂಡಲಸಂಗಮದಿಂದ ಹೊರಟು ಬಸವತೀರ್ಥಕ್ಕೆ ಬಂದಮೇಲೆ ಅಲ್ಲಿಂದ ಕಲ್ಯಾಣದ ತ್ರಿಪುರಾಂತಕ ಕೆರೆಯ ಮೇಲಿರುವ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಇಳಿದುಕೊಂಡರು. ಬಲದೇವನು ಅವರನ್ನು ಮೆರವಣಿಗೆಯಿಂದ ಬರಮಾಡಿಕೊಂಡು ಗಂಗಾದೇವಿಯನ್ನು ಮದುವೆಮಾಡಿಕೊಟ್ಟು ಸರ್ವರಿಗೂ ಭಸ್ಮ ತಾಂಬೂಲಗಳನ್ನು ಹಂಚಿದನು. ಆಮೇಲೆ ಬಿಜ್ಜಳನ ಸಭೆಯಲ್ಲಿ ತಾಮ್ರಲಿಪಿಯನ್ನು ಬಸವೇಶ್ವರನು ಓದಿ ಮಂತ್ರಿಪದವಿಯ ಅಧಿಕಾರ ಪಡೆದನು. ಆಮೇಲೆ ಬಸವೇಶ್ವರನಿಗೆ ಅನುಕೂಲವಾಗುವಂತೆ "ಅರಮನೆ ಕಟ್ಟಿಸಲ್ಪಟ್ಟಿತು., ಬಿಜ್ಜಳನು ಆಮೇಲೆ ಒಂದು ದಿವಸ ಬಸವೇಶ್ವರನಿಗೆ ಹೀಗೆ ಹೇಳಿದನು". ನಾನು ಐದು ವರುಷದವನಿದ್ದಾಗ ನನ್ನ ತಂದೆ ಚಾಳುಕ್ಯ ರಾಜನು ಮರಣ ಕಾಲದಲ್ಲಿ ನನ್ನನ್ನು ಸಿದ್ದಣ್ಣ ಮಂತ್ರಿಗೆ ಒಪ್ಪಿಸಿದನು. ಆ ಮಂತ್ರಿಯು ತನ್ನ ಮಗಳಾದ ನೀಲಾಂಬಿಕೆಯೊಡನೆ ನನ್ನನ್ನು ಸಲಹಿದನು. ನನಗೆ ರಾಜ್ಯದ ಪಟ್ಟಗಟ್ಟಿ ರಾಜ್ಯವಾಳುವ ಕ್ರಮವನ್ನು ಕಲಿಸಿಕೊಟ್ಟನು. ಈಗ ಆ ನೀಲಲೋಚನೆಯನ್ನು ಮದುವೆಯಾಗಿ ನಿಮ್ಮ ಶರಣರ ಪದ್ಧತಿ ಆಚಾರದಂತೆ ನಡೆಯಬಹುದು". ಈ ರೀತಿ ಬಿಜ್ಜಳನು ಹೇಳಿದುದಕ್ಕೆ ಬಸವೇಶ್ವರನು ಒಡಂಬಟ್ಟು ನೀಲಲೋಚನೆಯನ್ನು ಮದುವೆಯಾದನು. ಹೀಗೆ ಗಂಗಾಂಬಿಕೆ ನೀಲಾಂಬಿಕೆಯರೆಂಬ ಈರ್ವರು ಪತ್ನಿಯರೊಡನೆ ಅಕ್ಕನಾದ ಅಕ್ಕನಾಗಲಾಂಬಿಕೆಯೊಡನೆ ಸುಖವಾಗಿಜಂಗಮ ದಾಸೋಹ ಮಾಡುತ್ತಾ ಕಾಲಹರಣ ಮಾಡುತ್ತ ಬಿಜ್ಜಳನ ರಾಜ್ಯಭಾರದ ಪ್ರಧಾನಿ ಪಟ್ಟವನ್ನು ವಹಿಸಿ ಪ್ರಜಾಪರಿಪಾಲನವನ್ನು ಮಾಡುತ್ತಲಿದ್ದನು.

ಹೀಗೆ ಬಸವೇಶ್ವರನ ವಿಷಯವಾಗಿ ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಮೇಲೆ ಕಂಡ ವಿಷಯಗಳಿಂದ ತಿಳಿದುಬರುವ ಸಂಗತಿಗಳಲ್ಲಿ ಕೆಲವು ಚಾರಿತ್ರಿಕಾಂಶಗಳು ಹೊರಬೀಳುತ್ತಲಿವೆ. ಬಿಜ್ಜಳನ ತಂದೆ ಚಾಲೋಕ್ಯರಾಯನು ಆನೆಗುಂದಿ ಸಂಸ್ಥಾನದ ರಾಜನು. ಇವನು ಕ್ರಿ. ಶ. ಸು. ೧೧೧೭ ರಲ್ಲಿ ಗತಿಸಿದನು. ಇವನು ಸಾಯುವಾಗ

ಬಿಜ್ಜಳನಿಗೆ ೫ ವರ್ಷ ವಯಸ್ಸಾಗಿದ್ದಿತು. ಈ ಚಾಳೋಕ್ಯರಾಯನೇ ಬಳ್ಳಿಗಾವೆಯಲ್ಲಿ ಇರುವ ಗಂಡಭೇರುಂಡ ವಿಗ್ರಹಾಕಾರದ ಧ್ವಜವನ್ನು ಸ್ಥಾಪಿಸಿದವನು. ಈ ಧ್ವಜದ ಬಳಿಯಲ್ಲಿಯೇ ಭೂಗತವಾಗಿದ್ದ ಧನವನ್ನು ಬಸವೇಶನು ಲಿಪಿಯನ್ನೋದಿ ಬಿಜ್ಜಳನಿಗೆ ತೋರಿಸಿದನು. ಸಿದ್ದಣ್ಣ ಹೆಗ್ಗಡೆಯು ಕ್ರಿ. ಶ. ೧೧೨೬ ರಲ್ಲಿ ಇದ್ದಂತೆ ಶಾಸನವು ದೊರಕುತ್ತದೆ.

ಹೀಗೆ ಬಸವೇಶ್ವರನು ಬಳ್ಳಿಗಾವೆಯಲ್ಲಿದ್ದುದು ನಿದರ್ಶನಕ್ಕೆ ಬಂದಿದೆ.

ಮಾದಿರಾಜನು ಮಣಿಗವಳ್ಳಿಯ ಶಾಸನದಲ್ಲಿ ಕಾಣುತ್ತಾನೆ. ಇವನೇ ಮಂಡಿಗೆಯ ಮಾದರಸ ಎಂದು ಈ ಗ್ರಂಥದ ಹೇಳಿಕೆಯಿಂದ ತಿಳಿಯಲಿಕ್ಕೆ ಬರುತ್ತದೆ. ಬಾಗೇವಾಡಿಯಲ್ಲಿನ ನಂದಿನಾಥ ಗುಡಿಯನ್ನು ಮೊದಲು ಆದಿನಾಥನ ಗುಡಿ ಎಂದು ಕರೆಯುತ್ತಿದ್ದರು. ಮಾದಲಾಂಬಿಕೆಯ ಗರ್ಭದಲ್ಲಿ ಬಸವೇಶ್ವರನು ಹುಟ್ಟಲಿಲ್ಲ. ಆಕೆಯ ಮಗ್ಗುಲಲ್ಲಿ ಶಿಶುವಾಗಿ ಕಾಣಿಸಿಕೊಂಡನು ಎಂಬ ಈ ಗ್ರಂಥದ ಹೇಳಿಕೆಯಿಂದ ಮಾದರಸನು ಬಸವೇಶನ ಜನಕ ತಂದೆಯಲ್ಲವೆಂದು ತಿಳಿಯುತ್ತದೆ. ಮಣಿಗವಳ್ಳಿಯ ಶಾಸನದಲ್ಲಿ (ಕ್ರಿ. ಶ. ೧೧೪೨) ಬಸವರಸನು ಚಂದಿಮರಸನ ಮಗನೆಂದು ಹೇಳಲ್ಪಟ್ಟಿದ್ದಾನೆ. ಈ ಬಸವರಸನೇ ಬಸವೇಶ್ವರನೆಂದು ಆ ಶಾಸನವಲ್ಲಿನ "ಸದಾಚಾರತೆಯಿಂ ನಿಮಿರ್ಚಿ ಜಸಮಂ ಬಸವಂ" ಎಂಬ ವಾಕ್ಯದಿಂದ ಆ ಬಸವರಸನೇ ಬಸವೇಶ್ವರನೆಂದು ನಿರ್ಧರಿಸಲ್ಪಟ್ಟಿದೆ. ಈ ಬಸವೇಶ್ವರನನ್ನು ಬೆಳೆಯಿಸಿದ ತಾಯಿ ನಾಗಲಾಂಬೆಯು ಬಾಗೇವಾಡಿ ಗ್ರಾಮದ ಮಹದೇವಶೆಟ್ಟಿಯ ಪತ್ನಿ. ಈ ಮಹದೇವಶೆಟ್ಟಿಯು ಕೂಡಲಸಂಗಮದಿಂದ ಕೊಡೆಯಕಲ್ಲಿಗೆ ಹೋಗುವ ದಾರಿಯಲ್ಲಿ ಹಾರಟಿಗೆ ಎಂಬ ಗ್ರಾಮವಲ್ಲಿರುವ ಶಾಸನವಲ್ಲಿ ಕಂಡ ಮಹದೇವಶೆಟ್ಟಿ ಆಗಿರಬಹುದು. ಇನ್ನೂ ಶೋಧನೆ ನಡೆಸಬೇಕಾಗಿದೆ. ಮುಂಡಕೋಪನಿಷತ್ತು ಅಥವಾ ಮಾಂಡೂಕ್ಯೋಪನಿಷತ್ತಿನಲ್ಲಿ ಶಿರೋವ್ರತದ ವಿಷಯವು ಹೇಳಲ್ಪಟ್ಟಿದೆ. ನಿರಾಕಾರ ಪರವಸ್ತುವಿನ ಅನುಸಂಧಾನವೂ ಹೇಳಲ್ಪಟ್ಟಿದೆ. ಈ ವ್ರತದಲ್ಲಿಲಿಂಗಧಾರಣೆ ವಿಷಯವು ಸೇರಿಕೊಂಡಿದೆ ಎಂದು ಈ ಹಿಂದೆ ಸದ್ಧರ್ಮದೀಪಿಕೆಯಲ್ಲಿ ಪ್ರಕಟವಾಗಿದೆ. ಇದೇ ಆಧಾರವನ್ನೇ ಬಸವೇಶ್ವರನು ಮಾದರಸನಿಗೆ ತೋರಿಸಿ ಜನಿವಾರವನ್ನು ತಿರಸ್ಕರಿಸಿದನು. ಬಸವೇಶ್ವರನಿಗೆ ಸಂಗಮೇಶ್ವರನು ಗುರು, ಎಂಬ ಹೇಳಿಕೆಯಿಂದ ಕೂಡಲಸಂಗಮದಲ್ಲಿರುವ ಸಂಗಮೇಶ್ವರ ದೇವಾಲಯದ ಮೂರ್ತಿಯೇ ಬಸವೇಶ್ವರನ ಗುರುವೆಂದು ಅನೇಕರು ತಿಳಿದಿರುತ್ತಾರೆ. ಆದರೆ ಸರ್ವ ಪುರಾತನರ ವಚನಗಳಲ್ಲಿ ಸಂಗಮೇಶ್ವರಪ್ಪಣ್ಣಗಳ ವಚನಗಳು ಎಂಬಿವು ದೊರಕುತ್ತವೆ. ಇವು ೨೦ ವಚನಗಳಿವೆ. ಇವುಗಳು ವೀರಶೈವ ತತ್ವವನ್ನು ಚೆನ್ನಾಗಿ ಬೋಧಿಸುತ್ತವೆ. "ಮಾತೃದೇವೋಭವ, ಪಿತೃದೇವೋಭವ" ಎಂದು ಹೇಳಲ್ಪಟ್ಟ ಉಪನಿಷತ್ತಿನ ವಾಕ್ಯಗಳಿಗೆ ತಾಯಿ ದೇವರುಳ್ಳವನಾಗಿ ಆಗು, ತಂದೆ ದೇವರುಳ್ಳವನಾಗಿ ಆಗು ಎಂದು ಕೆಲವರು ಅರ್ಥಮಾಡಿದಂತೆ ಈ ಸಂಗಮೇಶ್ವರರು ಮಾಡಿಲ್ಲ. "ಮಾತೃದೇವ್ಯೋಭವಃ" "ಪಿತೃದೇವ್ಯೋಭವಃ" ಮಾತೃದೇವನು ಶಿವನು, ಪಿತೃದೇವನು ಶಿವನು ಎಂದು ಅರ್ಥ

ಮಾಡಿರುತ್ತಾರೆ. ಋಗ್ವೇದದಲ್ಲಿ ರುದ್ರನೇ ತಾಯಿ, ರುದ್ರನೇ ತಂದೆ ಎಂದು ಹೇಳುವ ಮಂತ್ರವಿದೆ. ಹೀಗೆ ನಿರಾಕಾರ ಶಿವನೇ ತಂದೆ ತಾಯಿ ಎಂಬುದನ್ನು ತೋರಿಸುವ ಶಿವಾದ್ವೈತ ಧರ್ಮವು ಸಂಗಮೇಶ್ವರಪ್ಪಣ್ಣಗಳಿಂದ ಪ್ರತಿಪಾದಿಸಲ್ಪಟ್ಟಿದೆ. ಈ ಸಂಗಮೇಶ್ವರನೇ ಬಸವೇಶ್ವರರ ಗುರುಗಳು ಎಂದು ಗುರ್ತಿಸಲಿಕ್ಕೆ ಬರುತ್ತದೆ. ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ರೇವಣಸಿದ್ಧರ ಮಗ ರುದ್ರಮುನಿಗೆ ಲಿಂಗಧಾರಣ ಮಾಡಿದವರು ಸಂಗಮೇಶ್ವರ ಗುರುಗಳೆಂದು ಗ್ರಂಥದ ಹೇಳಿಕೆ ಇದೆ. ಆ ಸಂಗಮೇಶ್ವರರು ಇವರೇ ಆಗಿರಬೇಕು. ಈ ಸಂಗಮೇಶ್ವರರು ಕಲ್ಯಾಣದಲ್ಲಿ ಇದ್ದರೆಂದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಬಸವತೀರ್ಥ ಎಂಬುದು ಹುಮನಾಬಾದಿಗೆ ಸುಮಾರು ೩ ಮೈಲು ದೂರದಲ್ಲಿದೆ. ಈ ಬಸವತೀರ್ಥದ ಕ್ಷೇತ್ರ ಮಹಿಮೆಯು ಈ ಪವಾಡವು ನಡೆದ ೨೦-೩೦ ವರ್ಷಗಳಲ್ಲಿಯೇ ಬಹಳ ಪ್ರಖ್ಯಾತಿ ಹೊಂದಿದ್ದಿತೆಂದು ತಿಳಿಯುಬರುತ್ತದೆ. ಕಾಕತೀಯ ರಾಜನಾದ ೧ನೇ ರುದ್ರದೇವನು ಈ ಬಸವತೀರ್ಥಕ್ಕೆ ಬಂದು ಇದರ ಮಹಿಮೆಯನ್ನು ತಿಳಿದು ಇಲ್ಲಿ ವೀರಭದ್ರ ದೇವಾಲಯವನ್ನು ಕಟ್ಟಿಸಿದನೆಂದು ಈ ಗ್ರಂಥದ ಮತ್ತೊಂದು ಕಡೆಯಲ್ಲಿ ಹೇಳಲ್ಪಟ್ಟಿದೆ. ಇಲ್ಲಿ ಮುಗ್ಧಸಂಗಯ್ಯನ ಗವಿ, ಮೋಳಿಗೆ ಮಾರಯ್ಯಗಳ ಗವಿ ಮುಂತಾದವು ಇರುವುದರಿಂದ ಇದು ಆಗ್ಗೆ ಕೆಲವು ಕಾಲ ಶಿವಶರಣರ ವಾಸಸ್ಥಾನವಾಗಿದ್ದಿತೆಂದು ತಿಳಿಯಲಿಕ್ಕೆ ಬರುತ್ತದೆ. ಈ ಗ್ರಂಥದಿಂದ ಗಂಗಾಂಬಿಕೆಯನ್ನು ಮದುವೆಯಾದಮೇಲೆ ನೀಲಲೋಚನೆಯನ್ನು ಬಸವೇಶ್ವರನು ಮದುವೆಯಾದನೆಂದು ತಿಳಿಯುಬರುತ್ತದೆ. ಆದರೆ ಕೆಲವು ಗ್ರಂಥಗಳಲ್ಲಿ ನೀಲಲೋಚನೆಯೇ ಹಿರಿಯ ಹೆಂಡತಿ ಎಂದು ಹೇಳಲ್ಪಟ್ಟಿದೆ. ಶ್ರೀ ರೇವಣಸಿದ್ಧರ ಕೃಪಾವಿಶೇಷದಿಂದ ವೀರಭದ್ರ ದೇವಸ್ಥಾನವು ಕ್ರಿ. ಶ. ೧೨ನೆ ಶತಮಾನದಲ್ಲಿ ಕಟ್ಟಿಸಲ್ಪಡುತ್ತಿದ್ದಂತೆಯೂ, ಶರಣು ಮಡಿವಾಳ ಮಾಚಯ್ಯನವರು ವೀರಭದ್ರನ ಅವತಾರವೆಂದು ತಿಳಿಯಲ್ಪಟ್ಟು ಅವರ ಪೂಜ್ಯಭಾವದಲ್ಲಿಯೂ ವೀರಭದ್ರ ದೇವಾಲಯವನ್ನು ಕಟ್ಟಿಸುತ್ತಿದ್ದರೆಂದು ಬಸವತೀರ್ಥದ ವೀರಭದ್ರ ದೇವಾಲಯದಿಂದ ವ್ಯಕ್ತವಾಗುತ್ತದೆ. ಭೀಮಕವಿಯ ಕನ್ನಡ ಬಸವ ಪುರಾಣವು ಕ್ರಿ. ಶ. ೧೩೬೯ ರಲ್ಲಿ ಹುಟ್ಟಿದೆ? ಈ ವೀರಭದ್ರ ಪುರಾಣವು ಕಾಕತೀಯ ಮೊದಲನೇಯ ರುದ್ರದೇವನಿಗೆ ಅವನ ಮಂತ್ರಿಯಾದ ಶಿವದೇವನಿಂದ ಹೇಳಲ್ಪಟ್ಟಿರುವದರಿಂದಲೂ ಈ ಕಾಕತೀಯ ರುದ್ರದೇವನು ಕ್ರಿ. ಶ. ೧೧೯೩ರ ವರೆವಿಗೆ ರಾಜ್ಯವನಾಳಿದವನಾದುದರಿಂದಲೂ ಈ ಗ್ರಂಥವು ಬಸವ ಪುರಾಣಕ್ಕಿಂತ ಮೊದಲೇ ಹುಟ್ಟಿದುದೆಂದು ತಿಳಿಯಲವಕಾಶವಾಗಿದೆ. ಈ ಮೊದಲನೆಯ ರುದ್ರದೇವನಿಗೂ ಪ್ರತಾಪರುದ್ರದೇವ ಎಂದು ಕರೆಯುತ್ತಿದ್ದರೆಂದು ಈ ಗ್ರಂಥದಿಂದ ಗೊತ್ತಾಗುತ್ತದೆ. ಈ ರುದ್ರದೇವನು ಬರೆಯಿಸಿದ ಬಸವತೀರ್ಥದಲ್ಲಿನ ವೀರಭದ್ರ ದೇವಾಲಯದೊಳಗಿನ ಶಿಲಾಶಾಸನವು ಪ್ರಕಟವಾದಲ್ಲಿ ಇನ್ನೂ ಹೆಚ್ಚಿನ ವಿಷಯಗಳು ಹೊರಬೀಳಬಹುದು. ಬಸವ ಪುರಾಣವು ಹುಟ್ಟುವಾಗ ಭೀಮಕವಿಯು ಇದನ್ನು ನೋಡಿದ್ದನೆಂದು ತೋರುತ್ತದೆ.

(ಸಂ. ೧೪೮)

# ೬. ದೇವರ ದಾಸಿಮಯ್ಯಗಳ ಮುಂಡಿಗೆಯ ವಚನ

ದಾಸಪ್ರಿಯ ರಾಮನಾಥ ಪ್ರಭುವೆ ಎಂಬ ಮುದ್ರಿಕೆಯುಳ್ಳ ದೇವರ ದಾಸಿಮಯ್ಯಗಳ ವಚನಗಳು ೧ ರಿಂದ ೪೦ ಉಳ್ಳ ಒಂದು ಬರೆಹದ ಪುಸ್ತಕವು ದೊರೆತಿರುತ್ತದೆ. ಇದರಲ್ಲಿ ಮುದ್ರಿಕೆಯು ಆರಂಭವಾಗುವದಕ್ಕೆ ಮುಂಚೆ "ಇಕ್ಕುವೆನು ಮುಂಡಿಗೆಯನು ಇದನೆತ್ತುವರುಂಟೇನು" ಎಂಬ ವಾಕ್ಯವು ಕೆಲವು ವಚನಗಳಲ್ಲಿ ಇದೆ. ೧, ೧೧, ೧೨, ೧೩, ೧೪, ೧೫, ೧೬, ೨೧, ೨೨, ೪೦ ಈ ಹತ್ತು ವಚನಗಳಲ್ಲಿ "ಇಕ್ಕುವೆನು ಮುಂಡುಗೆಯನು......" ಈ ವಾಕ್ಯವಿರುವದರಿಂದಲೂ ಆದಿವಚನ ಕಡೆಯ ವಚನಗಳಲ್ಲಿಯೂ ಈ ವಾಕ್ಯವಿರುವುದರಿಂದಲೂ ಈ ಗ್ರಂಥಕ್ಕೆ "ದೇವರ ದಾಸಿಮಯ್ಯ ಮುಂಡಿಗೆಯ ವಚನ" ಎಂಬುದು ಅನ್ವರ್ಥಕ ನಾಮವಾಗಿದೆ. ಈ ವಚನಗಳಲ್ಲಿ ೧,೨,೩, ನೆಯ ವಚನಗಳು ಈ ಕೆಳಗೆ ಕಂಡಂತೆ ಇವೆ.

೧. ದೇವರ ದಾಸ್ಮೈಯ, ಪರಮ ಲಿಂಗದೊಳಗೆ ಲಿಂಗಯ್ಯ ಅಪರಂಪರಂ. ಕಂಗಳ ನೋಟಕ್ಕೆ ತೋರುವ ಲಿಂಗವು ದೇವಾಂಗನೆಂದರಿಯದು (ದೊ) ಇರಲಿಕ್ಕೆ ಪಂಚಪುರುಷ ಮುಸುಕಿಹುದು ಈರೇಳು ಲೋಕಕ್ಕೆ. ರಸಹಾಸ್ಯವಲ್ಲ; ಈ ಶ್ರುತಿಯನು ಇಕ್ಕುವೆನು ಮುಂಡಿಗೆಯನು. ಇದನೆತ್ತುವರುಂಟೇನು ? ದಾಸಪ್ರಿಯ ರಾಮನಾಥ ಪ್ರಭುವೇ !

೨. ದಾಸನ ಕುಲದವರು ಈಶ್ವರನಲ್ಲದೆ ಪರದೈವಕ್ಕೆ ಶರಣೆನ್ನದೆ ಹೆಸರಿಗೆ ಅನುಗೊಳ್ಳರು ಹೇಸಿದಾಸರಿಗೆ ಅನುಗೊಂಡವರು, ಅದು ದಾಸನ ಕುಲವಲ್ಲ. ಅದು ಹೇಸಿದಾಸರ ಕುಲಕ್ಕಿಂತ ಕನಿಕಷ್ಟಕಾಣಾ ದಾಸಪ್ರಿಯ ರಾಮನಾಥ ಪ್ರಭುವೇ.

೩. "ಗುರುಶಿಷ್ಯಸಂಬಂಧಿ" ಎಂದು ಹೆಸರಿಟ್ಟುಕೊಂಡು ನುಡಿವ ಅಣ್ಣಗಳಿರೇ, ಆ ಗುರುಶಿಷ್ಯಸಂಬಂಧ ಭೇದವೆಂತೆಂದರೆ, ಬಲ್ಲರೆ, ಹೇಳಿರೆ. ಅರಿಯದಿದ್ದರೆ ಕೇಳಿರಿ. ಹಲವು ಜನ್ಮಂಗಳಲ್ಲಿ ಬಳಲಿ ಬಾರದಂತೆ ಅರಿವು ಕುರುಹು ಎಂಬ ಲಿಂಗವನು ಕಟ್ಟಿ ಆಚಾರ ಧರ್ಮವೆಂದು ನಡೆನುಡಿಯ ತೋರಿ, ಕೊಟ್ಟಾತನೆ ಗುರು, ಕೊಂಡಾತನೇ ಶಿಷ್ಯ ಅದು ಎಂತೆಂದೊಡೆ : ಶಿಷ್ಯನ ಅಂತರಂಗದೊಳಗಿದ್ದ ಅವಗುಣಾದಿ ಗುಣಂಗಳನ್ನೆಲ್ಲ ಬಿಡಿಸಿ, ಪ್ರಾಣಲಿಂಗವನು ಪ್ರತಿಷ್ಠವನು ಮಾಡಿ, ಅದರ ಜಾತಿ ಧರ್ಮದ ನೀತಿ ಆಚಾರದ ನಡೆನುಡಿಯ ತೋರಿ ಕೊಟ್ಟಾತನೇ ಗುರುವು, ಕೊಂಡಾತನೇ ಶಿಷ್ಯ, ಅದು ಎಂತೆಂದರೆ :– ತಮ್ಮ ಜಾತಿಧರ್ಮದ ನೀತಿ ಆಚಾರದ ನಡೆನುಡಿಗಳೆಂಬ "ಮೆವ್ವಿನ" (ಮೇರುವೆ ?) ಮಧ್ಯದಲ್ಲಿ ನಿಮ್ಮ ಕುಲಗುರುವಿನ ಪೂಜೆಯನು ಮಾ'ಡಿ'(ಡೆ?) ಕುಲ ಛಲ (ವು?) ಸೂತಕವೆಂಬ ದೀವಿಗೆಯ ಬೆಳಕಿನಲ್ಲಿ ನಿಂದಿರಬಲ್ಲರೇ ಆತನೀಗ ಶಿಷ್ಯನೆಂದೆನಬಹುದು ಕಾಣಿರೋ ! ಇಂತಿ ಇವರಿಬ್ಬರು ಗುರುಶಿಷ್ಯ ಸಂಬಂಧಿಗಳು (ಇವರು ?)

ಮ'ರ' (ಗು?)ಳೊಂದು ಜನ್ಮದಲ್ಲಿ ತಂದೆ ಮಕ್ಕಳಾಗಿ ಹುಟ್ಟಿಬಂದು ಕುಲಬಾಂಧವರೊಳಗೆ ಸೂರ್ಯಚಂದ್ರಾದಿಗಳಂತೆ ಬೆಳಗು ತೋರುತ್ತಿಪ್ಪರು ಕಾಣಿರೋ. ಇಂತೀ ಗುರು ಶಿಷ್ಯ ಸಂಬಂಧದ ಭೇದವರಿಯದೆ ಕಿರುಕುಳ ಮನುಜರು ಇಷ್ಟಲಿಂಗವನು ಕಟ್ಟಿ ಶಿವಭಕ್ತರಾದ ಮೇಲೆ ಕುಲಗುರುವಿನ ಪೂಜೆಯನು ಮಾ'ಡಿ' (ಡೆ?) ಕುಲ ಛಲ ಸೂತಕವನು (ವೆಂದು?) ಹಿಡಿಯಲಾಗದು ಎಂದು ನಿಂದಕ ಮಾತನು ಹೇಳಿ ಲಿಂಗವನು ಕಟ್ಟಿದವ ಗುರುವೇ ? ಗುರುವಲ್ಲ. ಮ'ರ' (ಗು?) ಳೊಂದು ಜನ್ಮದಲಿ ಶಿಷ್ಯಂಗೆ ವೈರಿಯಾಗಿಪ್ಪ, ಅದು ಎಂತೆಂದರೆ; ನಿಂದಕ ಗುರುವಿಡಿದು ಲಿಂಗವನು ಕಟ್ಟಿ ಶಿವಭಕ್ತನಾದೆನೆಂಬುವ (ನು?) ಶಿಷ್ಯನೇ ? ಶಿಷ್ಯನಲ್ಲ. ಮ'ರ'(ಗು?)ಳೊಂದು ಜನ್ಮದಲ್ಲಿ ಗುರುವಿಗೆ ವೈರಿಯಾಗಿಪ್ಪ, ಅದೆಂತೆಂದರೆ, ನಿಂದಕ ಗುರುವಿಡಿದು ಲಿಂಗವನು ಕಟ್ಟಿಕೊಂಡು ನಾನು ಶಿವಭಕ್ತನಾದೆನೆಂದು ತಮ್ಮ ಹಿಂದಿನ ಆಚಾರ ಧರ್ಮವನ್ನೆಲ್ಲ ಅತಿಗಳೆದು ಮುಂದೆ ನಡೆವ ಮಾರ್ಗವನು ನೋಡಿಕೊಂಡು ಇರಬೇಕೆಂದು ತಮ್ಮ ಜಾತಿ ಧರ್ಮದ ನೀತಿ ಆಚಾರದ ನಡೆನುಡಿಗಳೆಂಬ 'ಮೆವ್ವಿ' (ಮೇರುವೆ?)ಯನ್ನು ಕೆಡವಿ ಕುಲಗುರುವಿನ ಪೂಜೆಯನ್ನು ಬಿಟ್ಟು (ಇರದೆ?) ಕುಲಛಲ ಸೂತಕವೆಂಬ ದೀವಿಗೆ ಬೆಳಕನು ನೊಂದಿಸಿ ಕತ್ತಲಮನೆಯೊಳಗೆ ಕುಳಿತುಕೊಂಡು ಕುರುಹ ಕಂಡೆನೆಂಬುವ ಅಂಧಕ ಶಿಷ್ಯ, ನಿಂದಕ ಗುರುವಿಡಿದು ಲಿಂಗವನು ಕಟ್ಟಿಕೊಂಡು ಗುರುವ ಕಂಡೆನೆಂಬವ ಅಂತಹ ಶಿಷ್ಯ. ಇಂತೀ ಇಬ್ಬರೂ ಗುರುಶಿಷ್ಯ ಸಂಬಂಧಿಗಳು. ಮರಳೊಂದು ಜನ್ಮದಲ್ಲಿ ಮಾರ್ಜಾಲ ಮೂಸಕ (ಹುಟ್ಟಿ) ಸಿಂಹ ಗಜರಾಜ ನಾಲ್ಕು ವೈರಿಜಾತಿ ಹೊಟ್ಟೆಲಿ ಹುಟ್ಟಿ ಬಂದು ಒಂದಕ್ಕೆ ಒಂದು ಕಡಿದಾಡಿ ಮುಕ್ತಿಗಳಿಲ್ಲದೆ ಸರಿದು ಹೋದರೆಂದಂತೆ, ದಾಸಪ್ರಿಯ ರಾಮನಾಥ ಪ್ರಭುವೇ.

ಇವುಗಳಲ್ಲಿ ೧ನೆಯ ವಚನದಿಂದ ದೇವರ ದಾಸಿಮಯ್ಯನವರು "ಪರಮ ಲಿಂಗದೊಳಗೆ ಲಿಂಗಯ್ಯ" ಎಂದೂ ದೇವಾಂಗರೆಂದೂ ದೇವಾಂಗವು ಲಿಂಗವೆಂದೂ ಗೊತ್ತಾಗುತ್ತದೆ. ೨ನೆಯ ವಚನದಿಂದ ದೇವರ ದಾಸಿಮಯ್ಯನ ಕುಲದವರು ಈಶ್ವರನೆಂದೂ ಉಳಿದ ದಾಸರು ಅವರಿಗೆ ಸಮಾನರಲ್ಲವೆಂದೂ ತಿಳಿಯಬರುತ್ತದೆ. ೩ನೆಯ ವಚನದಿಂದ ಯೋಗ್ಯರಾದ ಗುರುಶಿಷ್ಯ ಸಂಬಂಧಿಗಳು ಮರುಜನ್ಮದಲ್ಲಿ ತಂದೆ ಮಕ್ಕಳಾಗಿ ಹುಟ್ಟಿ ಬರುವರೆಂದೂ ಕುಲಗುರುವಿನಿಂದ ಲಿಂಗವನ್ನು ಪಡೆದು ಆ ಗುರುವನ್ನು ಪೂಜಿಸಿ ಕುಲಛಲ ಸೂತಕಗಳನ್ನಿಟ್ಟುಕೊಂಡರೆ ಅವರು ನಿಂದಕ ಗುರು ಅಂಧಕ ಶಿಷ್ಯರೆಂದೂ ತಿಳಿಯಬರುತ್ತದೆ. ೮ನೆಯ ವಚನದ ಕೊನೆಯಲ್ಲಿ ಹೀಗೆ ಇದೆ. "ಆ ಓಂಕಾರವೆಂಬ ಗುರು ಮಂತ್ರವ ನೆನೆಯಲಾಗಿ ದೇವರಾಮಯ್ಯ ಲಿಂಗ ದೇವವಿಪ್ರ ದೇವರ ದಾಸಯ್ಯ ಇಂತೀ ಮೂರ್ತಿಗಳು ಕೂಡಿ ಮುದನೂರಪುರಕ್ಕೆ ಬಂದ ಭೇದವ ಬಲಿರೆ ಹೇಳಿ ಅರಿಯದಿದ್ದರೆ ಕೇಳಿ ಮಹಾಜ್ಞಾನವೆಂಬ ಗುರುಮಂತ್ರವನರಿತ ಮಹಾತ್ಮಂಗೆ ದೇವರಾಮಯ್ಯ ಲಿಂಗ, ದೇವವಿಪ್ರದೇವರ ದಾಸಿಮಯ್ಯ ಇಂತೀ ಮೂರ್ತಿಗಳ ನಾಮ ಓಂಕಾರವೆಂಬ ಮೂಲಮಂತ್ರ ಒಂದೇ ಕಾಣಿರೋ ದಾಸಪ್ರಿಯ ರಾಮನಾಥ ಪ್ರಭುವೆ."

ಈ ವಚನದಿಂದ ಓಂಕಾರವೆಂಬ ಗುರುಮಂತ್ರವ ನೆನೆಯಲಾಗಿ ದೇವರಾಮಯ್ಯ

ಲಿಂಗ; ದೇವವಿಪ್ರದೇವರ ದಾಸಿಮಯ್ಯ ಇಂತೀ ಮೂರ್ತಿಗಳು ಕೂಡಿ ಮುದನೂರು ಪುರಕ್ಕೆ ಬಂದರೆಂಬೂ ಏಕೋರಾಮದೇವರೇ ಈ ವಚನದಲ್ಲಿ ಕಂಡ ದೇವರಾಮಯ್ಯ ಲಿಂಗ ಎಂಬೂ ತಿಳಿಯಲಿಕ್ಕೆ ಬರುತ್ತದೆ. ಈ ಏಕೋರಾಮ ದೇವರಿಗೆ ಶೂನ್ಯ ಸಿಂಹಾಸನವನ್ನು ಏರ್ಪಡಿಸಿದ ವಿಷಯವು ಮಠಸ್ಥಲದ ಪ್ರತಿಗಳಿಂದಲೂ ಪಂಚಬ್ರಹ್ಮೋದಯ ಭಾಷ್ಯದಿಂದಲೂ ತಿಳಿಯಲ್ಪಡುತ್ತಿರುವ ಸಂಗತಿಗೆ ಇದು ಸರಿಯಾದುದಾಗಿದೆ. ಸುಜ್ಞಾನ ಬೋಧೆ ಎಂಬ ಗ್ರಂಥ ೭ನೆಯ ಸ್ಥಲದಲ್ಲಿ "ಮುದನೂರಿಗೆ ಹತ್ತು ಯೋಜನ ದೂರದಲ್ಲಿ ಹೊವುಲಕೆರೆ ದೇವರ ದಾಸಿಮಯ್ಯನ ಶಿಷ್ಯ ತಾನೋರ್ವ ತನುಜೆಯ ಪಡೆದು ಸುಗ್ಗಲಾದೇವಿ ಎಂದು ಹೆಸರಿಟ್ಟನು. ಆ ಪಟ್ಟಣದರಸು ದೇಸಿಂಗ ಭೂಕಾಂತನು ಬೆಳೆದ ಬಾಲೆಯನ್ನು ನೋಡಿದನು. ತಂದೆ-ತಾಯಿಗಳನ್ನು ಕೇಳಿ ನಾನು ಶಿವಭಕ್ತನಾಗುವೆನೆಂದು ಭಾಷೆಕೊಟ್ಟು ಮದುವೆಯಾದನು. ಆಕೆಯು ಜೇಡರ ದಾಸಿಮಯ್ಯ ಗುರುವನ್ನು ಕರೆಯಿಸಿ ಜೈನರೊಡನೆ ವಾದ ಮಾಡಿಸಿದಳು." ಎಂಬ ವಿಷಯವಿದೆ. ಈ ದೆಸೆಯಿಂದ ಈ ವಚನದಲ್ಲಿ ದೇವರದಾಸಿಮಯ್ಯನು ದೇವಬ್ರಾಹ್ಮಣ ಎಂದು ಹೇಳಲ್ಪಟ್ಟಿರುವುದು ಶಿವಭಕ್ತ ಎಂಬ ಪದಕ್ಕೆ ಸರಿಯಾಗಿ ಇದೆ. ವೀರಶೈವರಿಗೆ ದೇವ ಬ್ರಾಹ್ಮಣ ಎಂದು ಕೆಲವು ಗ್ರಂಥಗಳಲ್ಲಿ ಕರೆದಿದ್ದಾರೆ ಈ ಪುಸ್ತಕದ ೩೦ನೆಯ ವಚನದಲ್ಲಿ ಈ ರೀತಿ ಇದೆ....ಬಸವಣ್ಣನೆಂಬುವ ಭಕ್ತನು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ನಿಚ್ಚ ಭೋಜನ ಮಾಡುತಿರಲು ನಿಮ್ಮ ಶಿವನೆಂಬುವ ಜಂಗಮರು ಭಡಂಗರೂಪವನು ತಾಳಿ ಸತ್ತಕರುವ ಸುರಾಪಾನದ ಗಡಿಗೆಯನ್ನು ಹೆಗಲಲ್ಲಿ ಹೊತ್ತುಕೊಂಡು ಬರಲಿಕ್ಕೆ ಭವಿ ಬಂದನೆಂದು ಮಿಥ್ಯವನು ಮಾಡಿಕೊಂಡು ಅತ್ತತ್ತ ಸರಿಯಲು ನಮ್ಮ (ತಮ್ಮ ?) ಹಸ್ತದೊಳಗಿನ ಲಿಂಗವನು ಕಸಗಳದಾಭವಿಗಳಾಗಿ ಹೋದರು ಕಾಣಿರೊ- ಇಲ್ಲಿ ಪ್ರಭುದೇವರು ಶ್ರೀ ಬಸವೇಶ್ವರನ ಅರಮನೆಗೆ ಸತ್ತ ಕರುವನ್ನು ಸುರಾನಪಾನದ ಗಡಿಗೆಯನ್ನು ಹೊತ್ತುಕೊಂಡು ಬಂದರೆಂಬ ಹೇಳಿಕೆಯ ಮರ್ಮವು ಈ ರೀತಿ ಇದೆ. ಲೌಕಿಕ ಜೀವ ಭಾವವುಳ್ಳ, ತಾನು ಬದುಕಬೇಕೆಂಬ ಆಸೆಯುಳ್ಳ ಕರುವಿನ ಲಕ್ಷವನ್ನು ಕಳೆದುಕೊಂಡು ಬಂದನೆಂಬರ್ಥದಲ್ಲಿ ಸತ್ತ ಕರುವನ್ನು ಹೊತ್ತುಕೊಂಡಂತೆ ತೋರಿಸಿದ್ದಾರೆ. ಹೆಂಡದ ಗಡಿಗೆ ಎಂದರೆ ಮನುಷ್ಯನಿಗೆ ಮತ್ತನ್ನು (ಅಮಲು) ಉಂಟುಮಾಡುವ ಅಷ್ಟಮದಗಳನ್ನು ತುಂಬಿದ ದೇಹವೆಂಬ ಘಟ, ಆ ಮದಗಳನ್ನು ಹೊರಗೆ ಹಾಕಿದ್ದಾನೆ ಎಂಬ ಅರ್ಥದಲ್ಲಿ ಅದನ್ನು ಹೆಗಲಮೇಲೆ ಹೊತ್ತುಕೊಂಡು ಬಂದವ್ದರ ಗುರುತಾಗಿದೆ. ಅದೇನಾದರೂ ಇರಲಿ. ಕಲ್ಯಾಣಕ್ಕೆ ಪ್ರಭುದೇವರು ಮೊಟ್ಟಮೊದಲು ಬಂದುದರ ಸುದ್ದಿಯನ್ನು ಹೇಳುವುದರಿಂದ ಆ ತರುವಾಯ ಈ ವಚನ ಗ್ರಂಥವು ಹುಟ್ಟಿದೆ ಎಂದು ಹೇಳಲಭ್ಯಂತರವೇನೂ ಇಲ್ಲ.

ಇದೇ ಹೊತ್ತಿಗೆಯ ೫೬ನೆಯ ವಚನದಲ್ಲಿ ಈ ರೀತಿ ಹೇಳಲ್ಪಟ್ಟಿದೆ: ಜಂಗಮ ಘನವೆಂದು ಅಂಗವಿಕಾರಿಗಳು ನೀವು ಕೇಳಿರೋ. ನಿಮ್ಮ ಜಂಗಮಮಯ್ಯಿ ಗರ್ಭದಲ್ಲಿ ಹುಟ್ಟಿ ಮಯ್ಯಿ ಯೋನಿಯಲ್ಲಿ ಬಂದು ಮಯ್ಯಿ ಮೊಲೆವಾಲನುಂಡು ಮಾಯಾಂಗನೆ

ಯಲ್ಲಿ ಜರಿದಾಡುವಂಥಾ ಹೀನ ಚೋಹಕರು ಉಂಡ ಗೃಹವನರಿಯದೆ ನೀಡಿದ ಶಿಷ್ಯರ ಗುರುತುವ ನೆರೆಯುರಿಯದೆ ಬಂಡುವಂತ ಲೆಂಡಪುಂಡರು. ತಮ್ಮಂಗದೊಳಗಿಪ್ಪ ಲಿಂಗವನು ತಾವರಿಯದೆ ಅನ್ಯರ ಅಂಗಕ್ಕೆ ಲಿಂಗವನು ಕಟ್ಟಿ ದೀಕ್ಷವನು ಮಾಡಿದರೇನಯ್ಯಾ......ಬಸವಣ್ಣನೆಂಬುವ ಭಕ್ತಂಗೆ ಪ್ರಭುವೆಂಬುವ ಜಂಗಮವು ಇಂತಿ ಇವರಿಬ್ಬರಿಗೆ ಗುರು ಲಿಂಗ ಜಂಗಮ ಪಾದ ತೀರ್ಥ ಪ್ರಸಾದ ಇಂತಿ ಇವರಿಬ್ಬರಿಗೆ ಅಲ್ಲದೆ ಬಸವನಾವರ್ತೆ ಕೀರ್ತಿಯನು ಕೇಳಿ ನಾನು ಭಕ್ತನೆಂಬುವ ಜೀವಜಂತುಗಳಿಗೆಲ್ಲಾ ಗುರು ಇಲ್ಲ ಲಿಂಗವಿಲ್ಲ ಜಂಗಮವಿಲ್ಲ, ಪಾದತೀರ್ಥ ಪ್ರಸಾದ ಏನೂ ಇಲ್ಲ ಕಾಣಿರೊ ದಾಸಪ್ರಿಯ ರಾಮನಾಥ ಪ್ರಭುವೆ. ಈ ಹೇಳಿಕೆಯಿಂದ ಶ್ರೀ ಅಲ್ಲಮಾಪ್ರಭುಸ್ವಾಮಿಗಳು ಮತ್ತು ಶ್ರೀ ಬಸವೇಶ್ವರರಲ್ಲಿ ಪೂಜ್ಯ ಗೌರವ ಭಾವವನ್ನಿಟ್ಟಿರುವುದು ವ್ಯಕ್ತಪಡುತ್ತದೆ.

ಈ ಪುಸ್ತಕದ ಪೂರ್ಣ ವಿಮರ್ಶೆಯನ್ನು ಮಾಡಲು ಈಗ ಅವಕಾಶವು ದೊರೆತಿಲ್ಲ. ಆದುದರಿಂದ ಇಲ್ಲಿಗೆ ವಿರಮಿಸಿ ಇದೆ.

(ಒಟ್ಟಿನಲ್ಲಿ ಬಸವೇಶ್ವರನ ತರುವಾಯ ಈ ವಚನ ಗ್ರಂಥವು ಹುಟ್ಟಿದೆ ಎಂದು ತಿಳಿಯಲನುಮಾನವಾರಿಗೂ ಬರಲಾರದು.) ಜೇಡರ ದಾಸಿಮಯ್ಯನವರಿಗೆ ದಾಸಿಮಾರ್ಯ ಎಂಬ ಹೆಸರನ್ನು ಬಸವೇಶ್ವರನು ಕೊಟ್ಟನೆಂದು ದಾಸಿಮಯ್ಯನವರ ಪುರಾಣದಲ್ಲಿರುವುದು ತಿಳಿದು ಬಂದಿರುವುದರಿಂದ ಆ ಹೆಸರೇ ದೇವರ ದಾಸಿಮಯ್ಯ ಅಥವಾ ದೇವರ ದಾಸಿಮಾರ್ಯ ಎಂದು ತಿಳಿಯಲಿಕ್ಕೆ ಬರುವಂತಾಗಿದೆ. ಈ ಹೆಸರು ಬಂದ ಮೇಲೆಯೇ ಹುಟ್ಟಿದ ವಚನವಿದು. ಕಲ್ಯಾಣದಲ್ಲಿ ಅನುಭವ ಮಂಟಪದ ಕಾಲದಲ್ಲಿ ವಚನಗಳಲ್ಲಿನ ದೋಷಗಳನ್ನು ತಿದ್ದಿ ಪ್ರಕಾಶಪಡಿಸುವ ರೂಢಿ ಇದ್ದಿತು. ಈ ವಚನಗಳು ಅನುಭವಮಂಟಪದ ಕಾಲವಾದ ಮೇಲೆ ರಚಿಸಲ್ಪಟ್ಟವುಗಳು. ಶ್ರೀ ಏಕೋರಾಮದೇವರನ್ನು ಪ್ರಭು ಎಂದು ಭಾವಿಸಿ ರಾಮನಾಥ ಪ್ರಭುವೇ ಎಂದು ಅವರ ಅಂಕಿತವಲ್ಲಿ ನುಡಿದ ವಚನಗಳಿವು ಎಂದು ತಿಳಿಯಲವಕಾಶವಾಗಿದೆ.

(ಸಂ. ೧೫೫)

# ೭. ಶಿವಯೋಗಿ ಗಣವರನ ಕಾವ್ಯ

'ಶ್ರೀಗುರು ಶಿವಯೋಗಿ ಗಣವರನ ಕಾವ್ಯ' ಎಂಬುದೊಂದು ಗ್ರಂಥ. ಭಾಮಿನಿ ಷಟ್ಪದಿಯಲ್ಲಿ ೧೬ ಸಂಧಿ ೭೨೦ ಪದಗಳುಳ್ಳದು. ಇದರ ಒಂದು ಪ್ರತಿಯು ದೊರಕಿದೆ. ಮೈಸೂರು ಟ್ರೇನಿಂಗ್ ಕಾಲೇಜಿನಲ್ಲಿ ಪಂಡಿತ ಪರೀಕ್ಷೆಗೆ ಅಭ್ಯಾಸಮಾಡುತ್ತಿರುವ ಎರೇಸೀಮೆ ಚೆನ್ನಪ್ಪನವರಿಂದ ಬಂದಿದೆ. ನಡುವೆ ಕೆಲವು ಹಾಳೆಗಳಿಲ್ಲ. ಸಿಕ್ಕಷ್ಟು ಗ್ರಂಥದ ಆಧಾರದಿಂದ ಶಿವಯೋಗಿ ಗಣವರನ ಕಥೆಯನ್ನು ಇಲ್ಲಿ ಬರೆಯಲುಜ್ಜುಗಿಸಲಾಗಿದೆ. ಕವಿ ಚರಿತ್ರೆಯಲ್ಲಿ ಇದರ ಹೆಸರಿಲ್ಲ. ರಾಜಕೀಯ ಪ್ರಾಚ್ಯ ಶೋಧನೆಯ ಮಂದಿರದಲ್ಲಿ ಈ ಪುಸ್ತಕವಿಲ್ಲ.

ಇದನ್ನು ರಚಿಸಿದವನು ಸಿದ್ಧಲಿಂಗ ಕವಿ. ಇವನು ತನ್ನ ಪರಿಚಯವನ್ನು ೧ನೆಯ ಸಂಧಿ ೩೪ನೆಯ ಪದ್ಯದಲ್ಲಿ ಹೇಳುತ್ತಾನೆ. ಅದು ಹೀಗೆ ಇದೆ.

ಮತಿಗೊಡೆಯ ಗುರುಸಿದ್ಧರೇವಣ
ಕೃತಿಗೊಡೆಯ ಶಿವಯೋಗಿ ಎನ್ನಯ
ಪಿತನ ನಾಮಂ ಏನು ಎನಲು ಪೋಮಣ್ಣ ಶಿವಪಾದ
ಸುತರು ಇಲ್ಲದೆ ಬಳಲಿ ಜಟ್ಟಿಗಿ
ಪತಿಯು ಪೂಜಿಸಿ ಪಡೆಯಲುದಿಸಿದೆ
ಚತುರ ಕವಿಗಳ ಚರಣ ಸೇವಕ ಸಿದ್ಧಲಿಂಗಂ ನಾಂ

ಕಾವ್ಯದ ಪ್ರಾರಂಭದಲ್ಲಿ ೪ನೆಯ ಪದ್ಯ ನಮಸ್ಕಾರ ರೂಪವಾದುದು ಹೀಗೆ ಇದೆ.

ವಂದಿಸುವೆ ಶ್ರೀ ಗುರುವಿನಂಘ್ರಿಗೆ
ವಂದಿಸುವೆ ಶ್ರೀ ರೇವಣಾರ್ಯಗೆ
ವಂದಿಸುವೆ ಶ್ರೀ ಮರುಳುಸಿದ್ಧಗೆ ಏಕೋರಾಮನಿಗೆ
ವಂದಿಸುವೆ ಶ್ರೀ ಪಂಡಿತಾರ್ಯಗೆ
ವಂದಿಸುವೆ ಶ್ರೀ ವೃಷಭರಾಜಗೆ
ವಂದಿಸುವೆ ಗೋಡ್ಯಾಳ ವಾಸಗೆ ಮಲ್ಲಿಕಾರ್ಜುನಗೆ

೧ನೆಯ ಪದ್ಯದಲ್ಲಿ ಶಿವಶರಣರನ್ನು ಸ್ತುತಿಸಿದ್ದಾನೆ.

ಬಸವರಾಜಗೆ ಚನ್ನಬಸವಗೆ
ಮುನುಡಿಗೆಯ ಚೌಡಯ್ಯ ಚನ್ನಗೆ
ಕುಶಲತರ ಮಡಿವಾಳ ದೇವಗೆ ಕಿನ್ನರೇಶನಿಗೆ
ವಸುರಿದೇವಗೆ ಪ್ರಭುವಿನಂಘ್ರಿಗೆ
ನೊಸಲದೃಗ ಶಿವಸಿದ್ಧರಾಮಗೆ
ಪಸಹರ (ಪಾಶಹರ ?) ಸಿಂಗಣರಿಗೆ ವಂದಿಸಿ ನಿರ್ಮಿಸುವೆ ಕೃತಿಯ.

ಮುಂದೆ ಜಡೆಯ ಶಂಕರ, ಶಂಕರ ದಾಸಿಮಯ್ಯಗಳನ್ನು ಸ್ತುತಿಸುತ್ತಾನೆ. ಚೆನ್ನ ವೃಷಭೇಶ್ವರನನ್ನು ೯ನೆಯ ಪದ್ಯದಲ್ಲಿಯೇ ಸ್ತುತಿಸಿದ್ದಾನೆ. ಇವನ ಗ್ರಂಥ ರಚನೆಯ ಕಾಲವನ್ನು ನಮೂದಿಸದ ಪದ್ಯವಾವುದೂ ಇಲ್ಲ.

ಮುಂದೆ ೨ನೆಯ ಸಂಧಿಯಲ್ಲಿ ಈಗಿನ ಸಿನಿಮಾ, ನಾಟಕಗಳಂತೆ ಅಥವಾ ಪೂರ್ವದ ಕಾವ್ಯಗಳಂತೆ ಶಿವನ ಸಭೆ ಆರಂಭವಾಗುತ್ತದೆ.

(ಪದ್ಯ ೪೪) ಮಾರಮರ್ದನ ಸಿದ್ಧರಾಮನು
ದಾರುಕಂ ಗಣನಾಥ ರೇಣುಕ
ಸಾರೂಪ್ಯ ಸಾಮಿಪ್ಯ ಸಾಯುಜ್ಯ ಸಾಲೋಕ್ಯ
ಚಾರು ಪದವಿಯ ಪಡೆದ ಪ್ರಮಥರು
ಮೂರು ನಯವರು ಮುಕ್ತಿದಾತರು
ವೀರಶೈವಭಿಮಾನಿಯರು ಆ ಸಭೆಯೊಳಿರುತಿಹರು.

(೪೫) ಕೆಂಬಾವಿ ಭೋಗಯ್ಯನೊಲ್ದಳ
ಕುಂಭಕುಚದೊಳು ವರವ ಪಡೆದವ
ನಂಬಿ ಚಾರಮರಾಯ ಸೊಡ್ಡಳ ಬಾಚಿದೇವಯ್ಯ
ಕುಂಭಿನೀಶ್ವರ ಸಿಂಧು ಬಲ್ಲಳ
ಅಂಬಿಗರ ಚೌಡಯ್ಯ ಕಿನ್ನರ
ರೆಂಬ ಗಣವರರಿರ್ದರಗಣಿತ ಶಿವನ ಸಭೆಯಲ್ಲಿ.

ಈ ಪದ್ಯಗಳ ದೆಸೆಯಿಂದ ಕವಿಯು ಕಾವ್ಯವನ್ನು ರಚಿಸುವಷ್ಟರೊಳಗೆ ಇವರೆಲ್ಲರೂ ಶಿವಾಧೀನರಾಗಿದ್ದರೆಂದು ತಿಳಿಯಬಹುದಾಗಿದೆ.

ಪದ್ಧತಿಯ ಪ್ರಕಾರ ಆ ಸಭೆಗೆ ನಾರದರ ಪ್ರವೇಶ. ಈ ನಾರದರು ಕೇವಲ ಶಿವಭಕ್ತರು. ಇವರು ಭಕ್ತಿಯುಳ್ಳ ಕವಿಯ ಕೈಗೆ ಈಗ ಸಿಕ್ಕಿದ್ದಾರಷ್ಟೆ. ಹರಿಯ ಕುಲದವರು ದೊರೆತನದ ಗರ್ವದಲ್ಲಿ ಶಿವಭಕ್ತರನು ಬಗೆಯರು ನಡತೆಹೀನರು ಕಿರುಕುಳದ ದೈವಕ್ಕೆ ನಡೆದರು. ಸಾಲವಟ್ಟಿಂಬಾ ಪುರದೊಳೋರ್ವಳು ಕೆಟ್ಟ ದೇವತೆ ಇರುತಿಹಳು, ನಾನೇನ ಪೇಳಲಿ, ಕುರಿ ಕೋಣ್ಗಳ ಕಡಿಸಿ ತಿಂಬುದು ಸಾಲದಲ್ಲವಲೆ, ವರುಷದಲಿ ಮತ್ತೊಮ್ಮೆಯೊಂದಿನ ಹಿರಿಯಕಾರ್ಯಕೆ ಪಂಚಮನುಜರ ತರಿಸಿ ತುಂಡ್ರಿಸಿ ತಿನಿಸದಿರ್ದೊಡೆ ಜನರ ಕಾಡುವಳು. ಆದರೆ ತುರುಕಾಣ್ಯದೇಶದಿ ಕ್ಷತ್ರಿಯ ಕುಲದವಳು ಸನ್ನುತಿಯ ಪಟ್ಟಣವನಾಳುವ ಹೊನ್ನಮ್ಮ ಎಂದೆಂಬ ಬಂಜೆಯು ತನ್ನ ಕುಲ ಪಾವನ ಮಾಡುವ ಸುತನ ಸಲಿಬೇಡಿ ಚೆನ್ನ ಸೋಮನಾಥನ ಪೂಜೆ ಮಾಳ್ಪಳು ನಿನ್ನ ನಂಬಿರ್ದವಳಿಗೀವುದು ಚೆಲ್ವ ಬಾಲಕನ. ಅವನಂ ಲಿಂಗವಂತರ ಮಾಡಿ ಕ್ಷತ್ರಿಯರಿಂಗೆ ಉದ್ಧಾರಗೆಯ್ದು ರುದ್ರ ಗಣಂಗಳೊಳು ಬೆರೆಸುವುದು ಶಂಕರ, ಎಂದು ಸ್ತೋತ್ರ ಮಾಡುತ್ತಾನೆ. (೧೧ನೆಯ ಸಂಧಿ ಪದ್ಯ ೫೧–೫೭ರ ಸಾರ) ಹರಿಭಕ್ತರ ಕೈಗೆ ಸಿಕ್ಕಿದ

ನಾರದರು ಶಿವಭಕ್ತರನ್ನು ಜರಿಯುವುದನ್ನು ನಾವು ನೋಡಬಹುದು. ಇವೆಲ್ಲಾ ಕವಿಗಳ ಅಭಿಪ್ರಾಯವೇ ಹೊರತು ನಾರದನದು ಅಲ್ಲವೆಂದು ಚೆನ್ನಾಗಿ ತಿಳಿಯಬೇಕು. ಇಲ್ಲಿ ಹೇಳಿದಂತೆ ಹರಿಕುಲದವರೆಲ್ಲರೂ ನಡತೆಹೀನರೆಂದು ಹೇಳಲಾಗುವುದಿಲ್ಲ. ಶಿವ ಭಕ್ತರಲ್ಲಿಯೂ ಅಂತಹವರಿರುವರೆಂದು ತಿಳಿಯಬೇಕು. ಇಲ್ಲಿ ನಡತೆ ಎಂದರೆ ನೀತಿ ಮಾರ್ಗದಲ್ಲಿ ನಡೆವುದು ಎಂದು ಭಾವಿಸಬೇಕು. ಒಟ್ಟಿನಲ್ಲಿ ಹಿಂದಿನ ಕವಿಗಳಂತೆ ಇತರರ ತಿರಸ್ಕಾರಕ್ಕೆ ಹೋಗದೆ ಯಾವ ಧರ್ಮ ಮಾರ್ಗವು ಜೀವನ ಉನ್ನತಿಗೆ ಸುಲಭ ವಾದುದೂ ವಿಶೇಷ ಫಲಕಾರಿಯಾದುದೂ ಆಗಿದೆಯೋ ಅದನ್ನು ಶೋಧಿಸೋಣ ವೆಂದು ಹುಡುಕಿ, ಬೇಕಾದರೆ ಅದನ್ನು ಹೊಂದಲು ಯತ್ನಿಸಬೇಕು. ಪೂರ್ವಕಾಲದಲ್ಲಿ ಧರ್ಮಗಳಲ್ಲಿನ ಶೋಧನೆಗೆ ಜನರ ಗಮನವು ಹೆಚ್ಚಾಗಿದ್ದಿತು. ಈಗ ಪೂರ್ವದವರಂತೆ ನಡೆಯುವುದೇ ಉತ್ತಮವೆಂಬ ಮುಗ್ಧಭಾವನೆ, ಇಲ್ಲವೇ ಯಾವುದೂ ಬೇಡವೆಂಬ ಧರ್ಮ ಜಿಘಾಂಸಿ ಅಥವಾ ಧರ್ಮ ನಿರಸನ ಇಲ್ಲವೇ ಧರ್ಮದಲ್ಲಿದ್ದಂತೆ ನಟಿಸಿದ ರಾಯಿತು ಎಂಬ ಔದಾಸೀನ್ಯ ಇವೇ ಹೆಚ್ಚಾಗಿವೆ. ಜನಸಾಮಾನ್ಯವು ವಿಚಾರಕ್ಕೆ ಹೋಗುವುದಿಲ್ಲ. ಈ ಪದ್ಧತಿಯು ಸರಿಯಲ್ಲ. ಈಗ ಇರುವುದು ಎಷ್ಟು ಪ್ರಯೋ ಜನಕಾರಿಯಾದುದು ಇತರ ಧರ್ಮಗಳು ಎಷ್ಟು ಪ್ರಯೋಜನಕಾರಿಗಳು ಎಂಬುದನ್ನು ವಿಚಾರಿಸಿ ಅವಶ್ಯಕವಾಗಿ ತಿಳಿದುಕೊಳ್ಳಬೇಕು. ಪರಸ್ಪರ ಒರೆಹಚ್ಚುವ ಕೆಲಸ ಈ ಕಾಲದಲ್ಲಿ ಹೆಚ್ಚಾಗಬೇಕು. ಧರ್ಮಜ್ಞಾನವು ಬಹಳ ಮುಖ್ಯವಾದುದು. ಮನುಷ್ಯನ ಜೀವವು ದೇಹವನ್ನು ಬಿಟ್ಟು ಹೋಗುವಾಗ ಈ ಧರ್ಮಜ್ಞಾನವನ್ನು ಕಟ್ಟಿಕೊಂಡೇ ಹೋಗುತ್ತದೆ.

ನಾರದನು ಹೇಳಿಕೊಂಡಮೇಲೆ ಶಿವನಿಗೆ ಕರುಣೆ ಬಂದಿತು. ಹೊನ್ನಮ್ಮನಿಗೆ ನಾನೇ ಮಗನಾಗಬೇಕೆಂದನು. ಆದರೆ ಮಗನಾಗಿ ಆಗುವುದು ಹೇಗೆ ಎಂದು ಯೋಚಿಸ ತೊಡಗಿದನು. ಆ ಸಾಲವಟ್ಟಿಪುರದಲ್ಲಿ ಸೋಮೇಶ್ವರ ಲಿಂಗದ ನಿರ್ಮಾಲ್ಯದ ಹೂ ಪತ್ರಿಗಳನ್ನು ಹಾಕುವ ಭೀಮರಥಿ ಎಂಬ ಸ್ಥಳವಿದ್ದಿತು. ಅಲ್ಲಿ ಬಾಳೆ ಎಲೆಯ ಮೇಲೆ ಹೂವಿನ ಬಾಲಕೋಶದಲ್ಲಿ ಹುಟ್ಟಿದ ಮಗನ ಹಾಗೆ ಮಲಗುವೆನು ಎಂಬುದಾಗಿ ಪಾರ್ವ ತಿಯು ಎದುರಿಗೆ ಹೇಳಿದನು. ಹಿಂದೆ ಅತ್ರಿ ಋಷಿಯ ಸತಿಗೆ ಕೂಸಾದಿರಿ. ನಿಮ್ಮಂತೆ ವಿಷ್ಣು ಬ್ರಹ್ಮರೂ ಕೂಸಾದರು. ಆಮೇಲೆ ಅವರ ಹೆಂಡಿರಾದ ಮೂವರೂ ಬೇಡಿ ಕೊಂಡು ಗಂಡಂದಿರನ್ನು ಪಡೆದಂತೆ ಈಗ ಪಡೆಯಬೇಕಾದೀತು ಎಚ್ಚರಿಕೆ, ಎಂದಳು. ಆಕೆಯ ಹೊಟ್ಟೆಯಲ್ಲಿ ಹುಟ್ಟಹೆನೆಂದರೆ ಕೀವು ನೆತ್ತರ ಮಲಮೂತ್ರಗಳು ಅಲ್ಲಿ ತುಂಬಿ ರುವುವು. ಅಲ್ಲಿ ಹುಟ್ಟಿದರೆ ಭವರಹಿತನೆಂಬ ನನ್ನ ಬಿರುದಿಗೆ ಬಿಟ್ಟು ಬರುವುದು ಎಂಬು ದಾಗಿ ಚಿಂತಿಸಿದನು. ಇದೇ ಅಭಿಪ್ರಾಯವನ್ನೇ ಕೆಲವು ಕವಿಗಳೂ ಶ್ರೀ ವ್ಯಾಸಾದಿ ಪುರಾಣಿಕರೂ ಯೋಚಿಸಿಕೊಂಡು ಮಹನೀಯರ ಹುಟ್ಟುಗಳನ್ನು ಹೆಂಗಸರನ್ನು ತಪ್ಪಿಸಿ ಇಟ್ಟಿದ್ದಾರೆ ಎಂದು ಭಾವಿಸಬಹುದಲ್ಲವೇ!

ಶಿವನಿಗೆ ನಾನು ಹೇಗೆ ಹುಟ್ಟಬೇಕೆಂಬ ಚಿಂತೆ ಬಹಳವಾಯಿತು. ಅನೇಕ

ವಿಧದಲ್ಲಿ ಆಲೋಚಿಸಿದನು. ಅಷ್ಟರಲ್ಲಿ ಶಿವಯೋಗಿ ಗಣನಾಥನೆಂಬೊಬ್ಬನು ಶಿವನ ಬಲದ ಕಣ್ಣಿನಿಂದ ಹುಟ್ಟಿದನು. ಆ ಕೂಡಲೆ ಅವನು ನನಗೆ ಏನಪ್ಪಣೆ ಎಂದು ಕೇಳಿದನು. ಪತಿವ್ರತೆಯಾದ ಹೊನ್ನಮ್ಮನಿಗೆ (ಚನ್ನಸೋಮರಾಜನ ಪತ್ನಿ) ಬಂಜೆತನವನ್ನು ಕಳೆ, ಇತರ ದೇವತೆಗಳಿಗೆ ನಡೆದುಕೊಳ್ಳುವ ಭವಿಗಳಿಗೆ ಮೇಲು ತನಹೆಯ ಒಳ್ಳೆಯ ಮಾರ್ಗವನ್ನು ತೋರಿಸಿ ಶಿವಭಕ್ತರನ್ನು ಮಾಡು ಎಂದು ಹೇಳಿದನು. ನಾರದನಿಗೆ ನೀನು ಮುಂಚೆ ಹೋಗಿ ಚನ್ನಸೋಮರಾಜನಿಗೂ ಹೊನ್ನಮ್ಮನಿಗೂ ಈ ವಿಷಯವನ್ನು ತಿಳಿಸೆಂದು ಹೇಳಿದನು. ಆ ಪ್ರಕಾರ ಅವನು ಸನ್ನುತಿ ಎಂಬ ಊರ (ಸಾಲವಟ್ಟದ ಮುಖ್ಯ ಪಟ್ಟಣ?) ಅಲ್ಲಿಗೆ ಹೋಗಿ ೧೦೦ ವರ್ಷದ ಮುದುಕನ ವೇಷವನ್ನು ಹಾಕಿಕೊಂಡು ಅಲ್ಲಿನ ಜನರಿಗೂ ರಾಜನಿಗೂ ಹೊನ್ನಮ್ಮನೇ ಮೊದಲಾದವರಿಗೂ ಶಿವನ ಅಪ್ಪಣೆಯನ್ನು ಸಾರಿದನು. ಓದುಗ ಮಹನೀಯರೆ! ಈಗಿನ ಶಾಸ್ತ್ರದ ಬಲ್ಲವರ (Scientists) ಬಳಿಯಲ್ಲಿ ಈವರೆವಿಗೆ ಮೇಲೆ ಹೇಳಿದ ವಿಷಯಗಳನ್ನು ಹೇಳಿದರೆ ಶಿವನಿಗೆ (God) ಬಹಳ ಚಿಂತೆ ಬರುವುದುಂಟೆ ? ಬಲದ ಕಣ್ಣಿನಿಂದ ಗಣನಾಥನು ಹುಟ್ಟುವುದುಂಟೇ ? ಇವನ್ನೆಲ್ಲಾ ನಂಬುವುದಕ್ಕಾಗುವುದಿಲ್ಲ ಎಂದುಬಿಡುತ್ತಾರೆ. ಮುಗ್ಧರಾದ ಭಕ್ತರು ಮಾತ್ರ ನೋಡಿರಿ, ಹೊನ್ನಮ್ಮನ ಶಿವನ ಪೂಜೆಯ ಮಹತ್ತು ಹೇಗಿದೆ ? ಶಿವನು ಮಗನಾಗಿ ಬರಲಾಲೋಚಿಸಿದನು ಎನ್ನುತ್ತಾರೆ. ಇಲ್ಲಿ ಉಭಯರಿಗೂ ಬೇಕಾದ ಒಂದು ಅಂಶಮಾತ್ರವಿದೆ. ಮಹಾದೇವನಲ್ಲಿ ಭಕ್ತಿ ತೋರಿಸಿದರೆ ಅವನು ನಮಗೆ ಬೇಕಾದ್ದನ್ನು ಕೊಡುವನು ಎಂಬುದೊಂದೇ. ಇದಕ್ಕಾಗಿ ಕವಿಯು ತನ್ನ ಮನಬಂದಂತೆ ಕಥೆಯನ್ನು ತಾನೇ ನಿರ್ಮಿಸಿದ್ದಾನೆ. ಆದ್ದರಿಂದ ಮುಗ್ಧಭಕ್ತರೂ ಕೂಡಾ ಈ ಕಥೆಯೆಲ್ಲಾ ನಿಜವೆಂದು ನಂಬಲಾಗದು.

ಒಂದು ದಿನ ಭಾರೀ ಮೋಡ, ಕಣ್ಣುಗಳನ್ನು ಕುಕ್ಕಿ ಮುಚ್ಚಿಸುವಂಥಾ ವಿಶೇಷವಾದ ಮಿಂಚು, ಗುಡುಗು. ಜನರಿಗೆ ಹೊರಗೆ ಹೋಗಲಿಕ್ಕೆ ಹೆದರಿಕೆ. ಬೀದಿಯಲ್ಲಿ ಓಡಾಡಲಿಕ್ಕೆ ಹೆದರಿಕೆ ಧೂಳೆಲ್ಲಾ ಕಣ್ಣಿಗೆ ಬೀಳುವುದು ಆಗ ಶಿವನು ಕೈಲಾಸದಿಂದ ಇಳಿದು ಬಂದನು. ಅದು ಹೇಗೆ ? ಆ ರಾತ್ರಿಯಲ್ಲಿ

ಸುರರು ಹೂವಿನ ಮಳೆಯ ಕರೆದರು
ಪರಿ ಪರಿಯ ವಾದ್ಯಗಳು ನುಡಿದವು
ಉರುಳಿದುವು ತಾರೆಗಳು ಎಂದೆಂಬಂತೆ ನಭದಿಂದೆ
ಆರಳ ತೊಟ್ಟಿಲು ಇಳಿದು ಬಂದಿತು
ಹರನು ಅದರೊಳು ಕೋಟಿಮಿಂಚಿನ
ತೆರದಿ ಥಳ ಥಳ ಹೊಳವುತಿರ್ದನು ಏನಬಣ್ಣಿಪೆನು.

ಆಗ ಊರತುಂಬಾ ಬೆಳಕೇ ಬೆಳಕಾಗಿತ್ತು. ವಿಶೇಷವಾದ ಬೆಳಕು ಜನರೆಲ್ಲರಿಗೂ ಆಶ್ಚರ್ಯ. ಕೋಟೆ ಗೋಡೆಯ ಮೇಲೆ ಏರಿ ಬೆರಗಾಗಿ ಬಿದ್ದರು. ಹೀಗೆ ಹೂವಿನ

ತೊಟ್ಟಿಲು ಇಳಿದು ಬಂದುದರಲ್ಲಿ ಇದ್ದ ದೇವತೆಗಳೂ ಶಿವಗಣಂಗಳೂ ಬೆಳಗಿನ ಜಾವ ದೊಳಗಾಗಿ ವಾಪಸು ಹೋಗಿಬಿಟ್ಟರು. ಹೂವಿನ ತೊಟ್ಟಿಲಲ್ಲಿ ಶಿವಯೋಗಿ ಒಬ್ಬನು ಮಾತ್ರ ಉಳಿದನು. ಆ ತೊಟ್ಟಿಲು ನದಿಯೊಳಗೆ ತೇಲಾಡುತ್ತಿದ್ದಿತು. ಬೆಳಗಿನ ಜಾವ ದಲ್ಲಿ ಅಲ್ಲಿನ ಗಣಂಗಳ ಮಠಗಳೂ ಭಕ್ತರೂ ಜನರೂ ಹೀಗಿದ್ದರು.

ಚರವು ಮಜ್ಜನ ನೀಡಿ ಮಠದೊಳು
ಮರಿಗಳಿಗೆ ಪಾಠಗಳ ಪೇಳ್ವರು
ಹರುಷದಲಿ ವಿದ್ವಾಂಸರು ಉದಯರಾಗವ ಪಾಡುವರು.
ಧರೆಸುರರು ಕಲಿಸುವರು ವೇದವ
ಹರನ ಸಾಸಿರನಾಮ ಜಪಿಸುತ
ಶರಣರಾಲಯದಲ್ಲಿ ಲಿಂಗಾರ್ಚನೆಯ ಮಾಡುವರು.
ಮದನಹರ ಶ್ರೀ ಸೋಮನಾಥನ
ಸದನದೊಳು ಭೇರಿಗಳು ನುಡಿದುವು
ಉದಯ ಪೂಜೆಗೆ ತಡವು ಏತಕೆ ಬನ್ನಿರೆಂದೆನುತ
ಒದರಿದವು ಮತ್ತಂತುಮಲ್ಲದೆ
ಸದವಲಾತ್ಮಕ ಶಿವಮುನೀಷನ
ಪದಕೆ ನಡೆನಡೆ ಎಂಬುವಂದದಿ ಕಹಳೆ ಕೂಗಿದುವು.

ಕೈಲಾಸದ ಶಿವನು ಬಂದುದು ನಿಜವಲ್ಲದಿದ್ದರೂ ಈ ಕವಿಯ ಕಾಲದಲ್ಲಿ ತಿಳಿಯು ತ್ತಿದ್ದಂತೆ ಈ ಕಾರ್ಯಗಳು ಊರಿನಲ್ಲಿ ನಡೆಯುತ್ತಿದ್ದವೆಂಬ ನಂಬಲನುಮಾನವೇನಿದೆ? ಈ ಕಾಲದಲ್ಲಿ ಊರುಗಳಲ್ಲಿ ಸಾಮಾನ್ಯವಾಗಿ ಏನು ನಡೆಯುವುದೆಂಬುವನ್ನು ಒರೆಹಚ್ಚ ಲಿಕ್ಕೆ ಹೋಗುವಿರಾ? ಆಗ ಊರಿನಲ್ಲಿ ಈಗಿನಂತಹ ಹೋಟೆಲುಗಳಿದ್ದವೇ? ಕಾಫಿ ಕ್ಲಬ್ ಇದ್ದವೇ?

ಹೊನ್ನಮ್ಮನು ಎಚ್ಚತ್ತು ಮುಂಚೆ ನಾರದರು ಹೇಳಿದ ಪ್ರಕಾರ ನದಿಯಲ್ಲಿ ತೊಟ್ಟಿಲಲ್ಲಿ ತೇಲಾಡುತ್ತಿರುವ ಶಿವಯೋಗಿ ಗಣವರನನ್ನು ಕರೆದುಕೊಂಡು ಬರಲು ಜನರ ಗುಂಪುಗಳನ್ನು ಕೂಡಿಸಿ ಮೆರವಣಿಗೆ ಮಾಡಿಸಿಕೊಂಡು ಹೋದಳು. ಆಕೆಗೆ ಮೊಲೆಗಳಲ್ಲಿ ಹಾಲು ತುಂಬಿ ತೊರೆಯಲು ಕೂಸಿಗೆ ಕುಡಿಸಹೋದಳು. ಕೂಸಿಗೆ ಉಸಿ ರಿಲ್ಲ. ನೋಡಲಿಕ್ಕೆ ಹೋದವರು ಹಣೆಯ ಕಣ್ಣನ್ನು ನೋಡಿ ಇದೇನು ಹುಣ್ಣು ಎದ್ದಿದೆ ಎಂದರು. ಹಾದರಕ್ಕೆ ಹುಟ್ಟಿದುದೋ! ದುಷ್ಟ ನಕ್ಷತ್ರದಲ್ಲಿ ಈ ಕೂಸನ್ನು ಹಡೆದರೋ! ಎಂದು ಕೆಲವರಾಕ್ಷೇಪಿದರು. ಮುದಿಬ್ರಾಹ್ಮಣನು (ನಾರದ) ಹೇಳಿ ಹೋದ ಮಾತನ್ನು ಮರೆತೆಯಾ? ನಿನಗೆ ಶಿಶುವನ್ನು ಕೊಟ್ಟನು ಎಂದು ಹೇಳಿದುದು ಸುಳ್ಳೇ? ಕರೆದುಕೊಂಡು ಬಾ, ಎಂದು ಸೋಮನಾಥನು, (ಆ ಊರಿನ ಲಿಂಗ) ಕೂಗಿ ದನು, ಆಮೇಲೆ ಮೆರವಣಿಗೆಯಿಂದ ಹೊನ್ನಮ್ಮನು ತನ್ನ ಅರಮನೆಗೆ ಕೊಂಡು ಬಂದಳು. ಮಾರನೆ ದಿನ ರಾತ್ರಿ,

ಮರಣವಿರಹಿತ ಸಿದ್ಧರೇವಣ
ಮರುಳುಸಿದ್ಧಾಚಾರ್ಯ ನಿರುಪಮ
ನಿರಘನೇ ಕೋರಾಮಿ ಪಂಡಿತಾರಾಧ್ಯರೈತಂದು
ಕರಕೆ ಕಂಕಣ ಕಟ್ಟಿ ಲಿಂಗವ
ಧರಿಸಿ ಸದ್ಗುರು ಮಂತ್ರ ಬೋಧಿಸಿ
ಹರಸಿ ಭಸಿತವನಿಟ್ಟು ತಲೆದಡಹಿದರು ಸೋಮೇಶ

ಲಕ್ಷ್ಮಿ ಸರಸ್ವತಿ ಪಾರ್ವತಿಯರು ಜೋಗುಳವನ್ನು ಹಾಡಿ ಕೂಸಿಗೆ ಶಿವಯೋಗಿ ಎಂದು ಹೆಸರಿಟ್ಟರು. ಬಾಗಿನವನ್ನು ಕೊಟ್ಟಾಡಿದರು. ಆಮೇಲೆ ಕೂಸು ಹಾಲು ಕುಡಿಯಿತು.

ಭಲಾ ! ಕೈಲಾಸದಲ್ಲಿದ್ದ ಆಚಾರ್ಯರು ಭೂಮಿಗೆ ಬರುವುದು ಎಷ್ಟು ಹೊತ್ತು ! ಕವಿಯು ಆರೇ ಆರು ಸಾಲಿನ ಪದ್ಯವನ್ನು ರಚಿಸುವಷ್ಟು ಹೊತ್ತು. ಕರೆದುಕೊಂಡು ಬಂದೇಬಿಟ್ಟನು. 'ರವಿ ಕಾಣದುದ ಕವಿ ಕಂಡ' ಎಂಬ ಗಾದೆ ಸಟೆಯೇ ! ಹರೀಶ್ವರ ಕವಿಯು ಹೆಂಗುಸರ ಹೊಟ್ಟೆಯಲ್ಲಿ ಹುಟ್ಟಿದರೆ ಭವಿಗಳಾಗುತ್ತಾರೆ ಭವರಹಿತರಾಗುವುದಿಲ್ಲ ಎಂಬ ಅಭಿಪ್ರಾಯವನ್ನು ಇಟ್ಟುಕೊಂಡು ಆಚಾರ್ಯರಾದ ಶ್ರೀ ರೇವಣಸಿದ್ಧರನ್ನು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ಉದಯವಾದಂತೆ ಹಾಡಿದನು. ಈ ತರಹೆಯ ಯುಕ್ತಿ ಈ ಕವಿಗೆ ಸರಿಬೀಳಲಿಲ್ಲ. ಆ ಉಪಾಯವು ಮತ್ತೊಬ್ಬ ಕವಿಯ ಎಂಜಲೆಂದು ತಿಳಿದನು. ತನ್ನದೊಂದು ಯುಕ್ತಿಯನ್ನು ಹೊರಗೆ ತಂದನು. ಹೂವಿನ ತೊಟ್ಟಿಲಿನಲ್ಲಿ ಕೂಸನ್ನು ನದಿಯ ಮೇಲೆ ಇರಿಸಿದನು. ಆಚಾರ್ಯರನ್ನು ಕರೆಯಿಸಿ ಲಿಂಗವನ್ನು ಧರಿಸಿದನು. ಹರೀಶ್ವರನಿಗೆ ಇವನಷ್ಟೂ ತಿಳಿಯಲಿಲ್ಲ. ಈಗ ಹೆಂಗಸರ ಹೊಟ್ಟೆಯಲ್ಲಿ ಹುಟ್ಟಿದವರು ತಮ್ಮ ಪೂರ್ವಾಶ್ರಯವನ್ನು ಕಿತ್ತೊಗೆದು ಗುರುಕರುಣವನ್ನು (ದೀಕ್ಷೆ) ಹೊಂದಿದರೆ ಅವನು ತಂದೆ ತಾಯಿಯ ಮಗನಾಗುವುದಿಲ್ಲ. ಗುರುವಿನ ಕರದಲ್ಲಿ ಹುಟ್ಟಿದವನಾಗುತ್ತಾನೆ. ಈ ಗುರುಕರಜಾತಕರೇ ಉತ್ತಮರು, ದೈವಿಕ ಮನುಷ್ಯರು (Super Men) ಎಂಬುದು ಅವನಿಗೆ ಹೊಳೆಯದೆ ಹೋಯಿತು. ಇದಲ್ಲದೆ ಲಿಂಗದಲ್ಲಿ ಹುಟ್ಟಿದರೆಂಬುದು ವೀರಶೈವರ ಸಾಂಕೇತಿಕ ಭಾವನೆ. ಆ ಪ್ರಕಾರ ನಿರಾಕಾರನಾದ ಶಿವನೇ ಸಕಲ ರೂಪನಾದ ಗುರುವಾಗಿ ಅವನಿಂದ ಎಂದರೆ ಗುರು ಲಿಂಗದಿಂದ ವೀರಶೈವರು ಉದಿಸಿದರು. ಅದನ್ನು ಬಿಟ್ಟು ಹರೀಶ್ವರನು ಸ್ಥಾವರಲಿಂಗದಲ್ಲಿಯೇ ಹುಟ್ಟಿಸಿದನು. ಇದಕ್ಕೆ ಅವನ ಸಾಂಕೇತಿಕವೇನಿತ್ತೋ ಎಂಬುದನ್ನು ಇನ್ನೂ ತಿಳಿಯಬೇಕಾಗಿದೆ.

೧೨ನೆಯ ದಿನ ಊರಿನ ಶಿವಭಕ್ತೆಯರು ಸೇರಿ ಜೋಗುಳಕಾರ್ಯವನ್ನು ಮಾಡಿದರು. ಕೂಸನ್ನು ಶೃಂಗರಿಸಿದರು. ಮುತ್ತಿನಹಾರವ ಧರಿಸಿದರು. ಜೋಗುಳವನ್ನು ಹಾಡಿದರು.

ಜೋ ಜೋ ಶ್ರೀ ಶಿವಯೋಗಿ ಲಿಂಗನೆ
ಜೋ ಜೋ ಸೋಮೇಶ್ವರ ಕಂದನೆ
ಜೋ ಜೋ ದುಷ್ಕೃತವಾರ್ಧಿ ಭೈತ್ರನೆಕಾಲಹರ ಜೋ ಜೋ
ಜೋ ಜೋ ತಿಂಗಳ ಸೂಡಿದಾತನೆ
ಜೋ ಜೋ ಗಂಗೆಯ ಧರಿಸಿದಾತನೆ
ಜೋ ಜೋ ರಂಗನ ನಯನ ಪಾದನೆ ಮಂಗಳಾತ್ಮಕನೆ
ಜೋ ಜೋ ಗಣವೀರೇಶತಾತನೆ
ಜೋ ಜೋ ಮಾರನ ದಹಿಸಿದಾತನೆ
ಜೋ ಜೋ ಭಾಸ್ಕರ ಕೋಟಿತೇಜನೆ ಬಾಲಕನೆ ಜೋ ಜೋ
ಜೋ ಜೋ ಎನ್ನಿರಿ ಜ್ಯೋತಿಮಯನಿಗೆ
ಜೋ ಜೋ ಎನ್ನಿರಿ ನಾಗಾಭರಣನಿಗೆ
ಜೋ ಜೋ ಎನ್ನಿರಿ ವೃಷಭಾರೂಢಗೆ ಮಹಾಮಹಿಮನಿಗೆ

ಎಂಬಿವೇ ಮುಂತಾದವು ಆ ಜೋಗುಳಗಳು. ಆಮೇಲೆ ಉಡುಗೊರೆಯು ಮಾಡಿದರು. ಬಾಗಿನವ ಕೊಟ್ಟಾಡಿದರು.

ಶಿವಯೋಗಿಯು ಬೆಳೆಯುತ್ತಾ ಬರಲು ಅಕ್ಷರವ ಕಲಿಸಲು ಅಯ್ಯನವರ ಶಾಲೆಗೆ ಕಳುಹಿಸಿದರು. ಹುಡುಗರೊಡನೆ ಆಟವಾಡುತ್ತಲಿದ್ದನು. ಎಳಗರುಗಳನ್ನೂ ಕಾಯ್ದನು. ನೀಲನೂರಿನಲ್ಲಿ ನಂಬಿಯಕ್ಕನ ಮಗನಂತೆ ಸೊನ್ನಲಾಪುರದ ಸಿದ್ಧರಾಮನಂತೆ.

ಕರವೂರಲ್ಲಿ (ಕರಜಗಿ ಹಿಂದೆ ಕರಜಿಗಿಯಲ್ಲಿ ಹುಟ್ಟೆಂದು ಶಿವನು ಗಂಗೆಗೆ ಹೇಳಿದಂತೆ ಬರೆದಿದೆ. ಕರಜಿಗಿಯ ಸಮೀಪದಲ್ಲಿ ಕರೂರ ಎಂಬ ಒಂದು ಊರು ಇದೆ) ಸೂಗಣ್ಣ ಸೌಗಂಧಿಯಮ್ಮ ಎಂಬುವರ ಮಗಳು ಚೆಲುವೆಯಾದ ಗಂಗೆಮುಖಿ ಎಂಬುವಳನ್ನು ಶಿವಯೋಗಿಗೆ ವಧುವನ್ನಾಗಿ ನಿಶ್ಚಯಮಾಡಿ ಉಡಿದುಂಬಿಸಿ ಎರಡು ತಿಂಗಳಿಗೆ ಲಗ್ನವ ನಿಶ್ಚಯಿಸಿದರು. ಆದರೆ ಶಿವಯೋಗಿರಾಯನು ಮದುವೆಯಾಗಲೊಲ್ಲೆ ಎಂದು ಹೇಳಿಬಿಟ್ಟನು. ಕೆಟ್ಟ ಸ್ತ್ರೀಯರನಾಳುವುದು ಬಹಳ ಕಷ್ಟವೆಂದನು. ಗಟ್ಟಿವಾಳಯ್ಯನೇ ಮೊದಲಾದವರ ಕಥೆಯನ್ನು ತಾಯಿಗೆ ಹೇಳಿದನು. ನುಡಿಯಂತೆ ನಡೆಯುವುದರಲ್ಲಿ ಗಟ್ಟಿಗನಾದ ಗಟ್ಟಿವಾಳಯ್ಯನು ಮದ್ದಳೆಯ ಕಾಯಕವನ್ನು ಮಾಡುತ್ತಾ ಜಂಗಮಕ್ಕೆ ತೃಪ್ತಿಪಡಿಸುತ್ತಾ ಇದ್ದನು. ತನ್ನ ಹೆಂಡತಿಯು ಜ್ಞಾನಕ್ರಿಯೆಯಿಂದ ನಡೆಯದಿದ್ದರೆ ಅವಳನ್ನು ಬಿಟ್ಟು ವಿರಕ್ತನಾಗಿ ಕೈಲಾಸಕ್ಕೆ ಬರುವೆನೆಂದು ಶಿವವವನಿಗೆ ಮಾತುಕೊಟ್ಟು ಭೂಲೋಕಕ್ಕೆ ಬಂದಿದ್ದನು. ಇವನ ಹೆಂಡತಿಯು ಜಾರತನವನ್ನು ಕಲಿತಳು. ಒಂದು ದಿನ ಹೊನ್ನು, ಮಣ್ಣು, ಹೆಣ್ಣು ತನ್ನವೆಂಬುವವನು ಬಹಳ ಮೂರ್ಖನು ಎಂದಾಡಿಕೊಂಡನು. ಹೊನ್ನು ನೃಪರಿಗೆ, ಹೆಣ್ಣು ಕಾಮುಕರಿಗೆ, ಮಣ್ಣು ಬಲವಂತರಿಗೆ ಒಲಿಯುವುದು ಎಂದುಕೊಂಡನು. ಮತ್ತೊಂದು ದಿನ ಇವನ ಹೆಂಡತಿಯೂ ಜಾರನೂ ಕೂಡಿ ಹೆಂಡತಿಯ ತವರು ಊರಿಗೆ ಹೊರಟರು. ದಾರಿಯಲ್ಲಿ ಬಾಯಾರಿಕೆಯಾಗಿ

ಒಂದು ಭಾವಿಯಲ್ಲಿ ನೀರು ತಾರೆಂದು ಗಂಡನ ಕಳುಹಿಸಿದಳವಳು. ಅವನು ಭಾವಿಯಲ್ಲಿ ಇದ್ದಾಗ ನೀರೊಳಗೆ ದೂಡಿದಳು. ಸತ್ತನೆಂದು ತಿಳಿದುಕೊಂಡಳು. ತವರೂರಿಗೆ ಹೋಗುವುದರೊಳಗೆ ಅವನು ಮತ್ತೆ ಬದುಕಿ ಮಾವನ ಮನೆಗೆ ಬಂದನು. ಅಲ್ಲಿ ಇಬ್ಬರು ಜಾರರಿಗೆ ತನ್ನ ಹೆಂಡತಿಯನ್ನು ಸೀಳಿ ಎರಡು ಭಾಗಮಾಡಿಕೊಟ್ಟು ವೈರಾಗ್ಯದಿಂದ ಬಸವೇಶ್ವರನು ಇದ್ದ ಕಲ್ಯಾಣಕ್ಕೆ ಹೋದನು. ಅಲ್ಲಿ ಒಂದು ದಿನ ಊಟಕ್ಕೆ ಬರುತ್ತಿದ್ದ ಗಣಂಗಳನ್ನು ನೋಡಿ ಇವರು ಬಸವನೆಂಬ ಮುಸುರೆಯ ಗಡಿಗೆಗೆ ಮುತ್ತುವ ನೊಣ ಗಳೆಂದನು. ಆಗ ಗಣಂಗಳು ಕೆಲವರು ಈತನ ಇಷ್ಟಲಿಂಗವನ್ನು ಕಸಿದುಕೊಂಡು ಒಳಗೆ ಹೋದರು. ಆಗ ಇವನು ದೊಡ್ಡ ಬಂಡೆಗಲ್ಲನ್ನು ಕೊರಳಲ್ಲಿ ಕಟ್ಟಿಕೊಂಡು ಬಾಗಿಲಿಗೆ ಅಡ್ಡವಾಗಿ ನಿಂತುಕೊಂಡು ಹೊರಗಿದ್ದವರನ್ನು ಒಳಗೆ ಬಿಡದೆ ಹೋದನು. ಒಳಗಿದ್ದವರನ್ನೂ ಹೊರಗೆಬಿಡಲಿಲ್ಲ. ಅಲ್ಲಿ ದೊಡ್ಡ ಗಲಭೆಯೇ ನಡೆಯಿತು. ಹೊರಗಿದ್ದ ಬಸವೇಶ್ವರನಿಗೆ ಈ ಸಮಾಚಾರವು ತಿಳಿದು ತನ್ನ ಮಠಕ್ಕೆ ಬಂದು ಗಟ್ಟಿವಾಳಯ್ಯನ ಲಿಂಗವನ್ನು ಗಣಂಗಳಿಂದ ಅವನಿಗೆ ಕೊಡಿಸಿದನು. ನನಗೆ ಇಬ್ಬರು ಗಂಡರು (ಲಿಂಗ ಗಳು) ಅದು ಏತಕ್ಕೆ ಎಂದು ಬಸವೇಶ್ವರನು ಕೇಳಲು ಒಂದು ಎರಡಾಗುವುದು. ಮೂರು ಆರು ಮೂವತ್ತಾರು ಇನ್ನೂರು ಹದಿನಾರು ಹೀಗೆ ಅಗಣಿತವಾಗುವುದು. ಮತ್ತೆ ಎಲ್ಲವೂ ಒಂದೇ ಆಗುವುದು—ಇದು ಈಗಿನ ಶಾಸ್ತ್ರಕಾರರ ಹೇಳಿಕೆಗೆ ಸರಿಬರು ತ್ತದೆ—ಎಂದು ಹೇಳಿ ಒಂದು ಲಿಂಗದಲ್ಲಿ ಮತ್ತೊಂದನ್ನು ಸೇರಿಸಿ ಅಲ್ಲಿನ ಪ್ರಮಥರಿಗೆ ನಮಸ್ಕಾರಮಾಡಿ ಬಯಲಾದನು, ಎಂಬ ಕಥೆಯನ್ನು ಹೇಳಿದನು.

ಮದುವೆಯಾಗಲಿಲ್ಲವೆಂದು ವ್ಯಸನಪಡುತ್ತಿದ್ದ ತಾಯಿಗೆ ನಿನಗೆ ಮುಂದೆ ಬಾಲ ಯೋಗಿ ಎಂಬ ಮಗನಾಗುವನು. ಅವನಿಗೆ ಮದುವೆಯ ಮಾಡಿರಿ ಎಂದು ಹೇಳಿ ಮನೆ ಯನ್ನು ಬಿಟ್ಟು ಹೊರಟನು, ಅದರಂತೆ ಮಗನು ಹುಟ್ಟಿ ಬೆಳೆದನು. ಸಿಂಧುಪುರ (ಸಿಂದೂರು?) ರುದ್ರಮುನಿ ಶಾವಾಗಿ ಎಂಬ ದಂಪತಿಗಳ ಮಗಳು ಗಂಗಮ್ಮ-ನೀಲ ಗಂಗಮ್ಮ-ಎಂಬಾಕೆಯನ್ನು ಮದುವೆಮಾಡಿದರು. ಬಾಲಮುನೀಶ್ವರನು ಕ್ಷತ್ರಿಯ ಕುಲ ತಿಲಕನೆನಿಸಿಕೊಂಡಿದ್ದನು. ಶಿವಯೋಗಿಯ ಕೃಪೆಯಿಂದ ಅವನಿಗೆ ಎರಡು ಮಕ್ಕಳಾ ದುವು. ಒಂದು ದಿನ ಅವನಿಗೆ ವೈರಾಗ್ಯವು ಬರಲು ತನ್ನ ಮನದಣಿಯೆ ಅನೇಕ ಉಪಚಾರಗಳಿಂದ ಲಿಂಗಪೂಜೆಯನ್ನು ಮಾಡಿ ಅರಳೆಯನ್ನು ತನ್ನ ಹತ್ತು ಬೆರಳಿಗೆ ಸುತ್ತಿ ಆಮೇಲೆ ಆ ಅರಳೆಗೆ ಎಣ್ಣೆಯನ್ನು ಉಣಿಸಿ ದೀಪವನ್ನು ಹಚ್ಚಿ ದೀಪಾರತಿ ಯನ್ನು ಬೆಳಗಲು ಶಿವನು ಮೆಚ್ಚಿ ಪ್ರಸನ್ನನಾಗಿ ಏನು ಬೇಕೆಂದು ಕೇಳಲು ಹೊನ್ನಮ್ಮನಿಗೆ ಬೇಡಿದುದನ್ನು ಕೊಟ್ಟು ನನ್ನನ್ನು ನಿನ್ನ ಒಡಲಿನಲ್ಲಿ ಇಟ್ಟುಕೊಳ್ಳೆಂದು ಬೇಡಿಕೊಂಡನು. ಆಮೇಲೆ ಹೊನ್ನಾದೇವಿಯನ್ನು ಕರೆದು ಕೇಳಲು ನನಗೆ ಶಿವಯೋಗಿ ರಾಯನನ್ನು ನನ್ನ ಕಣ್ಣಿಗೆ ತೋರಿಸಿ ಆಮೇಲೆ ನನ್ನನ್ನೂ ಸ್ವರ್ಗಕ್ಕೆ ಒಯ್ಯಬೇಕೆನಲು ಶಿವನು ಅದರಂತೆ ಮಾಡಿದನು. ಸನ್ನುತಿಪುರ ಸಹಿತವಾಗಿ ಅವರನ್ನು ಕೈಲಾಸಕ್ಕೆ ಕರೆದು ಕೊಂಡು ಹೋದನು.

ಇಲ್ಲಿಗೆ ಈ ಕಾವ್ಯದ ಒಂಬತ್ತು ಸಂಧಿಗಳು ಮುಗಿದವು. ಮುಂದೆ ಶಿವಯೋಗಿ ಗಣವರನು ಮಾಡಿದ ಪವಾಡಗಳು ೧೬ನೆಯ ಸಂಧಿಯವರೆವಿಗೂ ವಿವರಿಸಲ್ಪಟ್ಟಿವೆ.

ಕುಸುಮಗಿರಿ, ಸೆಳ್ಳಿಗಿ, ಗಜದಲೆಯನಗರ, ಮಣಿಪುರಕಬೊರಟ (ಬೋರುಟಗಿ) ಸ್ಥಳಗಳಲ್ಲಿ ಮಾಡಿದ ಮಹಿಮೆಗಳು ವರ್ಣಿಸಲ್ಪಟ್ಟಿವೆ. ಕಲುಬುರಿಗಿ ಪಟ್ಟಣದಿಂದ ಜಿಲ್‌ದರ್‌ಖಾನ್ ಎಂಬ ಪಾಚ್ಛಾ (ಪಾದ್‌ಷಹ) ಬೋರಟಗೆಗೆ (ಭೌರಣಪುರ) ಬಂದು ಶಿವಯೋಗಿಗಳ ದರ್ಶನವನ್ನು ತೆಗೆದುಕೊಂಡು ಅವರ ದಯೆಗೆ ಪಾತ್ರನಾದನು. ರೇಣುಕ ಪುರದಲ್ಲಿ ಕೋಣನಿಂದ ವೇದವನೋದಿಸಿದರು ? ಆಮೇಲೆ ಕುರುಬನ್ನಟ್ಟಿಗೆ ಬಂದರು. ಹೀಗೆ ಅನೇಕ ದೇಶಗಳನ್ನು ಸಂಚರಿಸುತ್ತಾ ಕಡೆಯಲ್ಲಿ ಕರಜಿಗಿಗೆ ಬಂದು ಅಲ್ಲಿ ಬಹು ಕಾಲವಿದ್ದರು. ಚನ್ನಗೌಡನ ಪ್ರಾರ್ಥನೆಗೆ ಅನುಸಾರವಾಗಿ ಅವನಿಗೆ ಲಿಂಗವ ಧರಿಸಿದರು. ಆ ಸಂದರ್ಭದಲ್ಲಿ ಕವಿಯು ಹೇಳಿದ ಪದ್ಯಗಳಿವು.

ಸಂಧಿ ೧೪ ಪರ್ದ್ಯ ಪರಮಗುರು ಸಿದ್ಧರೇವಣ
ಮರುಳು ಸಿದ್ಧಾಚಾರ್ಯ ಪಂಡಿತ
ನಿರಘ ನಿರ್ಮಲಮೂರ್ತಿ ಏಕೋರಾಮಿತಂದೆಗಳು
ನೆರೆದು ಬಂದರು ಶಿವಗಣಂಗಳು
ಕರೆದು ಕಂಕಣಗಟ್ಟಿ ಲಿಂಗವ
ಧರಿಸಿ ಭಕ್ತರ ಮಾಡಿಕೊಂಡರು ಸಿದ್ಧಶಿವಯೋಗಿ.

೧೦ ಅನ್ಯ ದೈವವ ಭಜಿಸಿದವರಿಗೆ
ಹಾನಿತಪ್ಪದು ಎಂದು ಬೋಧಿಸಿ
ಮುನ್ನಿದ ನಾಮವ ತೊಲಗಿಸಿ ದೀಕ್ಷೆನಾಮ ಇತ್ತು
ಚನ್ನಬಸವನು ಎಂದು ಕರೆದನು
ಮಣ್ಣೊಳಗೆ ಜನಿಸಿರ್ದ ಮಡಕೆಯು
ಮಣ್ಣು ಕೂಡುವುದುಂಟೆ ಗಣರೊಳು ಬೆರೆದಿರೆಂದಭವ

ಅರಳಗುಂಡಿಗೆ ಎಂಬ ಗ್ರಾಮದಲ್ಲಿನ ಬಡ ಭಕ್ತ ಸಿದ್ಧಣ್ಣನಿಗೆ ಪ್ರಸಾದವ ಕೊಟ್ಟರು ಈ ರೀತಿ ಬೋಧಿಸಿದರು.

ಈ ಪ್ರಸಾದವನುಂಡು ಸುಖಿಸಿರಿ
ಈ ಪ್ರಸಾದವು ಲೋಕ ರಕ್ಷಣ
ಈ ಪ್ರಸಾದವ ಕೊಂಡವರ ಭವರೋಗವಳಿಯುವುದು.
ಈ ಪ್ರಸಾದವೇ ಪುಣ್ಯವೀವುದು
ಈ ಪ್ರಸಾದವೇ ಪಾಪವಳಿವುದು
ಆ ಪ್ರಸಾದವ ನೀಡಿದನು ಹೀಗೆಂದು ಶಿವಯೋಗಿ.

ಇವರ ಪ್ರಸಾದವನುಂಡು ಹಾವು ಕಚ್ಚಿ ಸತ್ತವಳು ಬದುಕೊಂಡಳು. ಇಂತಹ ಪವಾಡಗಳನ್ನೆಲ್ಲಾ ವಿವರಿಸಿ ಈ ಲೇಖನವ ಬೆಳೆಸಬಾರದೆಂದು ಸಂಕೋಚಮಾಡಿ ಇದೆ.

ಶಿವಯೋಗಿ ಗಣವರು ಶಿವಾಧೀನರಾಗುವಾಗ ಲೋಕಕ್ಕೆ ಈ ಉಪದೇಶ ಮಾಡಿದರು.

ಸಂಧಿ ೧೬ ಪದ್ಯ ೩೬

ಕೃತಯುಗದಿ ಚತುಃಷ್ಪದ ಪುಣ್ಯವು
ತ್ರೇತಯುಗದಿ ತ್ರಿಪಾದ ಪುಣ್ಯವು
ದ್ವಿತಿಯ ಪಾದವು ಪುಣ್ಯವಿರ್ದುದು ದ್ವಾಪರಯುಗದಲ್ಲಿ
ಅತಿದಯುವ ಕಲಿಯುಗದ ಮನುಜರು
ಶತರೊಳೊರ್ವರು ಪುಣ್ಯವಂತರು
ಕ್ಷಿತಿಸುರರು ವ್ರತಗೆಟ್ಟು ನಡೆವರು ಕ್ಷತ್ರರಡಗುವರು.

ಇಳೆಯು ನಾರಿಯರ್ಹೀನ ಕುಲಜರು
ನೆಲೆಯಗಾಣದೆ ಕೆಟ್ಟುಹೋದರು
ಕಲಿಯುಗದ ಮಾನವರು ಹುಸಿಗೆಲಸಕ್ಕೆ ಹೊಡೆದಾಡಿ
ಅಳಿದು ಹೋದರು ಸರ್ವ ದೇವರು
ಶಿಲೆಯೊಳಡಗುತ ನಿಜವದೋರರು
ಮಳೆಯು ತೀರ್ಥವು ಬೆಳೆಯು ಪ್ರಸಾದವು ತಿಳಿಯಬಲ್ಲವರು.

ಕಂಗಳ ತ್ರಯವಾಂತು ಬಂದರು
ಅಂಗನಯನವ ಹೊಂದಿ ಬಂದರು
ಸಂಗಮೇಶ್ವರನೆಂದು ಮನವಂಗೊಟ್ಟು ನಂಬದಿರಿ
ಗಂಗೆ ನೀರಾಟಕ್ಕೆ ಸರಿದಿರಿ
ಜಂಗಮಾರ್ಚನೆ ಬಿಡದೆ ನಡೆಸಿರಿ
ಗಂಗೆಧರ ಸೋಮೇಶ ರಕ್ಷಿಪನೆಂದ ಶಿವಯೋಗಿ

ಅವರು ಹೇಳಿದ ಕಾಲಜ್ಞಾನವಿರದು.

ಕಣ್ಣುಮಂ ಪಡಕೊಂಡ ಬಸವನು
ಚನ್ನಬಸವನು ನಮಿಸಿ ಕೇಳ್ದರು
ಇನ್ನು ಮರ್ತ್ಯಕೆ ಪ್ರಕಟಿಸುವುದು ನೀವು ಎಂದೆನಲು
ಸೊನ್ನಲಾಪುರದಲ್ಲಿಯೋರ್ವಳು
ಎಣ್ಣೆಗರ ಗೃಹದಲ್ಲಿ ಪುಟ್ಟಿದ
ಹೆಣ್ಣು ಹನ್ನೊಂದನೆಯ ದಿವಸಕೆ ನುಡಿವುದದೆ ಕುರುಹು

ಇವರು ಶಿವೈಕ್ಯರಾದುದು ಹೀಗೆ—

ಎಂದು ಸೂಚಿಸಿ ಯೋಗಿಪತಿಮುದ
ದಿಂದ ಪೊರಮಟ್ಟು ನಡೆದನು
ಒಂದು ಕೋಶಾಂತರದಿ ಪಥದೊಳು ಕಲ್ಲಬಸವೇಶ

ಒಂದು ವೃಕ್ಷದ ಕೆಳಗೆ ಕುಳಿತಿರೆ
ಒಂದು ಹಸ್ತದಿನೆಳೆದು ಬೇಗೇ
ಳೆಂದು ಎಬ್ಬಿಸಿ ಕುಳಿತು ನಡಸಿದ ಜನರುನೋಳ್ಪಂತೆ

ಭಲಾ–ಹರೀಶ್ವರನ ಲಿಂಗದೊಳಗಿನ ಉತ್ಪತ್ತಿಯೂ ಲಿಂಗದೊಳಗಣ ಐಕ್ಯವೂ ಈ ಕವಿಗೆ ಸರಿಬೀಳಲಿಲ್ಲ. ಕಲ್ಲಬಸವನ ಮೇಲೆ ಕೂಡಿಸಿ ಕೈಲಾಸಕ್ಕೆ ಹಾರಿಸಿದ್ದಾನೆ. ಇದಲ್ಲವೇ ಕವಿಗಳ ಬಾಯ್‌ಚಳಕ.

ಈ ಶಿವಯೋಗಿವರರು ಧಾರವಾಡ ಜಿಲ್ಲಾ ಕರಜಗಿ ಪ್ರಾಂತದವರೆಂದೂ ಸಾಲೊಟಗಿ ಗ್ರಾಮದಲ್ಲಿ ಇರುವ ಪಟ್ಟದಮಠದವರೆಂದೂ ಚಾರಿತ್ರಿಕಾಂಶವಾಗಿ ಗೊತ್ತುಮಾಡಬಹುದಾಗಿದೆ. ಇವರ ಕಾಲ ಸುಮಾರು ಕ್ರಿ. ಶ. ೧೫ನೆಯ ಶತಮಾನ ಎಂದು ಊಹಿಸಬಹುದಾಗಿದೆ. (ಸಂ. ೬೬–೬೭)

## ೮. ಶ್ರೀ ಅನಾದಿ ಜಂಗಮಾಷ್ಟೋತ್ತರ ಶತನಾಮ ಶ್ಲೋಕಾಃ

೧. ಶ್ರೀ ವೀರಶೈವ ಜ್ಞಾನಾವಲಂಬೀ ನಿತ್ಯೋ ನಿರಾಮಯಃ
ಸಿದ್ಧ ಪ್ರಸಾದ ಸಂಲಬ್ಧ ಸಾರವಕ್ತ್ರಶ್ಚ ಚಿನ್ಮಯಃ
೨. ಭಸ್ಮೋದ್ಧೂಳಿತ ಸರ್ವಾಂಗೋ ನವಭಕ್ತಿ ಪ್ರದಾಯಕಃ
ಸಂಸಾರ ಹೇಯ ಮೂಲಶ್ಚ ಮಲತ್ರಯ ವಿದಾರಕಃ
೩. ಪಂಚಾಕ್ಷರೀ ಪರಾವಿದ್ಯಾವಲ್ಲಭೋಲಿಂಗ ಚಿಹ್ನಕಃ
ಪಿಂಡ ಜ್ಞಾನಾವಧಾರೀಚ ಮೂಲಸ್ತಂಭೋ ಜಗದ್ಗುರುಃ
೪. ನಿರ್ಬೀಜ ದೀಕ್ಷಾ ಸಂದೋಹಮೂರ್ತಿ ರುದ್ರಾಕ್ಷಭೂಷಣಃ
ಮುಂಡೀ ವೈರಾಗ್ಯಸಾರಸ್ಚ ಚರಲಿಂಗೋ ಗಣಪ್ರಿಯಃ
೫. ಷಟ್‌ಸ್ಥಲ ಬ್ರಹ್ಮಚಾರೀಚ ಸರ್ವತಂತ್ರಃ ಸ್ವತಂತ್ರಕಃ
ತೀರ್ಥೋಜ್ವಲೋ ಭವಹರೋ ಯಂತ್ರಜ್ಞೋಜಂಗಮೋಗುರುಃ
೬. ಭೂರುದ್ರಪಾದ ಶುಪ್ರೂಷಾ ವರ್ಧನೋ ವರದೋಜಚೀ
ಪಂಚಸ್ಪರ್ಶ ಸ್ವರೂಪಶ್ಚಪಂಚಸೂತಕ ವರ್ಜಿತಃ
೭. ಕ್ಷಮಾಪಾತ್ರಂ ಸಮಾಧೀಶಃ ಪರಿವ್ರಾಡಗ್ರಗಣ್ಯಕಃ
ಲಿಂಗಭೋಗೋಪಭೋಗೀಚ ನಿಷ್ಕಾಮಃ ಪ್ರಣವಾತ್ಮಕಃ
೮. ಕಮಂಡುಲುಕರೋ ಯೋಗಿ ಯೋಗಾಕ್ರಾಂತೋ ಗಣಾಗ್ರಣಿಃ
ಜಾತಿಗೋತ್ರ ವಿಹೀನಶ್ಚ ಮೋಕ್ಷಮಾರ್ಗ ಪ್ರದರ್ಶಕಃ
೯. ಜ್ಞಾನಪಂಜರ ಶಾಯೀಚ ಲಿಂಗಾಲಿಂಗಿತ ವಿಗ್ರಹಃ
ಕೌಪೀನಕಟಿ ಸೂತ್ರಾವಲಂಬೀ ಶೀಲಪ್ರಿಯೋ ವಿಭುಃ
೧೦. ಸಚ್ಚಿದಾನಂದಾದಿರೂಪೋ ನಾದಬಿಂದು ಕಲಾತ್ಮಕಃ
ಅವಾಙ್ಮನೋ ಗೋಚರಶ್ಚ ಷಡಧ್ವಧ್ವಾಂತ ಭಾಸ್ಕರಃ
೧೧. ಅತಿವೇದಾವದಾರೀಚ ಶ್ರುತಿಜ್ಞಶ್ಚೇಂದ್ರಿಯಾಧಿಪಃ
ಶಾಸ್ತ್ರಾಲೋಕ ಪ್ರಮೋದಶ್ಚ ಮನೀಷೀ ತತ್ತ್ವ ಪಾರಗಃ
೧೨. ಜ್ಞಾನ ಸಂಪಾದನೋಲೋಕ ಸುಖ ಹೇತುಶ್ಚ ಶಬ್ದವಿತ್
ಜನ್ಮ ಮೃತ್ಯು ಜರಾತೀತ ದೇಹೋ ದುರ್ಭಾವ ನಿಗ್ರಹಃ
೧೩. ವ್ಯಕ್ತಾವ್ಯಕ್ತ ಶರೀರಶ್ಚ ಭ್ರಾಂತೀನಾಶೋ ದಿಗಂಬರಃ
ಚಕ್ರಾವಾಸಶ್ಚ ದುರ್ದರ್ಷಸ್ಸರ್ವಾವಾಸಶ್ಚಿರಂತನಃ

೧೪. ಸರ್ವಾಂಗಲಿಂಗ ಸಂಗೀಚ ಸರ್ವಾಧಾರಶ್ಚ ತತ್ತ್ವವಿತ್
ವೀರಶೈವ ಕಲಾವಿದ್ಯಾ ಪಂಡಿತೋ ಯೋಗಿ ವಂದಿತಃ
೧೫. ಪ್ರಸಾದಾದನ ಪೂತಶ್ಚ ಕ್ಷೇತ್ರಜ್ಞೋ ದೇವತೋತ್ತಮಃ
ಭಕ್ತಿಪಾಲನ ಶೀಲಶ್ಚ ನಿತ್ಯಕಲ್ಯಾಣ ವಿಗ್ರಹಃ
೧೬. ರೋಮಕೂಪ ಶಿವೋsಜಾತ ಶತ್ರುಶ್ಯಾಂತಿ ಪ್ರಕಾಶಕಃ
ಭಕ್ತಿಪಂಜರ ಮಧ್ಯಸ್ಥ ವಿಹಗೋ ಮೋಕ್ಷನಾಯಕಃ
೧೭. ಭವಹರ್ತಾಚ ವಿಶ್ವಾತ್ಮಾಹ್ಯಜಾತೋsನಾದಿ ಜಂಗಮಃ
ಭಕ್ತಿಮೋಹನ ಮೋಹೀಚ ವಿರಾಟ್ ಕಲ್ಪೋಪಕಲ್ಪತಃ
೧೮. ಲಿಂಗಬ್ರಹ್ಮ ವಿಚಾರೀಚ ಶಾಂತರಾಗೋ ಜಿತೇಂದ್ರಿಯಃ
ಗಂಗಾಂಗುಷ್ಠ ಧರೋಯೋಗ ಪಟ್ಟಾಧಾರಃ ಶುಭಾಂಗತಃ
೧೯. ಅನೇಕಕೋಟಿ ಬ್ರಹ್ಮಾಂಡ ವಿಸ್ಫೋಟನಾಕರಃ ಪಶಃ
ಶಿಖಾಚಕ್ರಾವಧಾರೀಚ ನಾದವೇದ್ಯೋ ನಿರೀಶ್ವರಃ
೨೦. ಷಡ್ವರ್ಗ ಸಾಗರೋತ್ತೀರ್ಣ ಸೇತುಸ್ಸುಗುಣ ನಿರ್ಗುಣಃ
ಮಣಿಪೂರಕ ಲಿಂಗೀಚ ಸರ್ವೋದ್ಧಾರಣ ಧರ್ಮವಿತ್ (೧೦೮)
೨೧. ಅನಾದಿ ಜಂಗಮ ಸ್ಯೈ ತನ್ನಾಮಮಷ್ಟೋತ್ತರಂ ಶತಂ
ಯಃ ಪಠೇತ್ ಪರಯಾ ಭಕ್ತ್ಯಾ ಸರ್ವಸಿದ್ಧಿಮವಾಪ್ನುಯಾತ್

ಇದು ಮೈಸೂರು ಮಹಾಲಿಂಗಪ್ಪನವರಿಂದ ಬಂದ ಒಬ್ಬ ಅರಸು ಮನೆತನದವರಲ್ಲಿನ ಪ್ರತಿಯಿಂದ ಎತ್ತಿದುದು. ಈ ನಮೂನೆ ಪ್ರತಿಯು ಸೋಸಲೆ ತೋಪಿನ ಮಠದ ಶ್ರೀ ನಿರಂಜನ ಸ್ವಾಮಿಗಳಲ್ಲಿ ಇದ್ದ ಕೈಬರಹದ ಪ್ರತಿಯಲ್ಲಿಯೂ ಇದೆ.

ಶಿವಪೂಜೆ, ಪಾದಪೂಜೆ, ಈ ಕಾಲದಲ್ಲಿ ಶಿವಾಷ್ಟೋತ್ತರ ಶತನಾಮವನ್ನು ಹೇಳುವುದುಂಟು. ಇದನ್ನು ಹೇಳುವುದೂ ವೀರಶೈವರಿಗೆ ಮುಖ್ಯವಾದುದು. ೧೦೮ ಪತ್ರೆ ಪುಷ್ಪಗಳನ್ನು ಹೆಸರಿಗೊಂದರಂತೆ ಹೇಳಿ ಧರಿಸುವುದೂ ಒಳ್ಳೆಯದು. ಇತ್ಯನಾದಿ ಜಂಗಮಾಷ್ಟೋತ್ತರ ಶತಮಾನ ಶ್ಲೋಕಾಃ. (ಸಂ. ೬೭)

# ೯. ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರದೇವರು ನಿರೂಪಿಸಿದ ಕ್ಷೇತ್ರಜ್ಞ ಸುಮನೋವಾದಂ

ಎಂಬ ಓಲೆಯ ಪುಸ್ತಕವು ದೊರೆತಿದೆ. ಭಾಮಿನಿಷಟ್ಪದಿ ರೂಪವಾಗಿದೆ. ೨೧ ಸ್ಥಲಗಳೂ ೧೨೪೫ ಪದ್ಯಗಳೂ ಇವೆ.

ಅದರ ಪ್ರಾರಂಭವು ಹೀಗೆ ಇದೆ.

೧ನೆಯ ಸ್ಥಲ, ಪಲ್ಲವ,

ವಸ್ತುನಿರ್ದೇಶವನು ತನ್ನಯ
ಹಸ್ತಕಮಲಭವಂಗೆ ಮುದದಿಂ
ವಿಸ್ತರಿಸಿ ಪೇಳ್ದನು ಕೃಪಾಪೂರ್ಣನನಾದಿದೇಶಿಕನು

ಈಸ್ಥಲದ ಕೊನೆಯ ಪದ್ಯವು ಹೀಗೆ ಇದೆ—

ಇದು ಸಮಸ್ತ ಶಿವಾನುಭಾವದ
ಪದಪಯೋರುಹ ಗಂಧಮದ ಷಟ್
ಪದ ಷಟ್‌ಸ್ಥಲ ಸಾರ್ವಭೌಮಂ ಚನ್ನವೃಷಭೇಂದ್ರ
ವಿದಿತಮಾಗಿ ನಿರೂಪಿಸಿದ ಸಂ
ಮುದ ಮಹಾಕ್ಷೇತ್ರಜ್ಞ ಸಮನೋ(ನಃ)
ಕದನದೊಳು ಸದ್ವಸ್ತು ನಿರ್ದೇಶಕೆ ಪ್ರಥಮ ಸಂಧಿ.

ಇದು ಮಹಾಲಿಂಗ ರಂಗಯೋಗಿಯು ರಚಿಸಿದ ಅನುಭವಸೂತ್ರದ ಪದ್ಯಗಳಂತೆ ಓದುವುದಕ್ಕೆ ಸುಲಭವಾದ ಶೈಲಿಯಲ್ಲಿ ಇದೆ. ಇದೂವರೆವಿಗೂ ಕಂಡುಹಿಡಿಯಲ್ಪಡವ ಗ್ರಂಥವಿದು. ಇದರ ಇನ್ನೊಂದು ಪ್ರತಿ(ಬರೆಹದ ಪ್ರತಿ)ಯಾರಲ್ಲಾದರೂ ಇದ್ದರೆ ದಯವಿಟ್ಟುಕಳುಹಿಸಿ ಕೊಡೋಣವಾಗಬೇಕಾಗಿ ಪ್ರಾರ್ಥನೆ.

ಈಗ ಸಿಕ್ಕ ಒಂದು ಪ್ರತಿಯಿಂದಲೇ ಅದನ್ನು ಮುದ್ರಿಸಲು ಸಾಧ್ಯವಿರುವುದರಿಂದ ಮುದ್ರಣ ಮಾಡಿಸುವ ಮಹನೀಯರು ಮುಂದೆ ಬಂದು ಈ ಕಾರ್ಯವನ್ನು ಕೈಗೊಳ್ಳಬೇಕಾಗಿ ಪ್ರಾರ್ಥನೆ.

—ವ್ಯವಸ್ಥಾಪಕ.

# ೧೦. ಸೂರಸಾನಮ್ಮನ ಚರಿತ್ರೆ

'ಸೂರಸಾನಮ್ಮನ ಚರಿತ್ರೆ' ಎಂಬ ಹೆಸರಿನ ಒಂದು ಗ್ರಂಥವಿದೆ. ಭಾಮಿನಿ ಷಟ್ಪದಿಯ ೧೨೭ ಪದ್ಯಗಳುಳ್ಳದಾಗಿದೆ. ಶಿವರೂಪನಾದ ನಾಗಮಯ್ಯನು ಕೀಳು ಕುಲದವನಾಗಿ ಏಕೆ ವರ್ತಿಸಿದನು ಎಂದು ಬಿಜ್ಜಳನು ಕೇಳಲು ಬಸವೇಶ್ವರನು ಬಿಜ್ಜಳನಿಗೆ ಈ ಸೂರಸಾನಮ್ಮನ ಕಥೆಯನ್ನು ಹೇಳಿದಂತೆ ಕವಿಯು ಪ್ರಾರಂಭಿಸುತ್ತಾನೆ.

ಆ ಕಥೆಯು ಹೀಗೆ :

ಶ್ರೀಶೈಲ ಪರ್ವತಕ್ಕೆ ಪೂರ್ವ ದಿಕ್ಕಿನಲ್ಲಿ ಇರುವ ಪೋರಾಂಡ ಎಂಬ ಗ್ರಾಮದಲ್ಲಿ ಕಾಮವಿಲ್ಲದವಳೂ ಶರಣನ್ನು ಪ್ರೀತಿಸುವವಳೂ ಇನ್ನೂ ಅನೇಕ ಸದ್ಗುಣಗಳಿಂದ ಕೂಡಿದವಳೂ ಆದ ಸೂರಸಾನಿಯು ಶೈವಧರ್ಮದ ಬ್ರಾಹ್ಮಣೋತ್ತಮಳಾಗಿದ್ದಳು. ಮುಖ್ಯವಾಗಿ ಆಕೆಯ ಲಕ್ಷಣವು ಹೀಗೆ :

ಸೂರೆ ಗುರುವಿಗೆ ತನುವ ಸವೆಸುತ
ಸೂರೆ ಲಿಂಗಕೆ ಮನವನರ್ಪಿಸುತ
ಸೂರೆ ಚರಲಿಂಗಕೆ ದ್ರವ್ಯವನೀವ ಎಡೆಯಲ್ಲಿ
ಸೂರೆಷಡ್ ಭ್ರಮೆಗಳನು ಪೊಂದದ
ಸೂರೆಷಡ್ ವರ್ಗವನು ಗ್ರಹಿಸದ
ಸೂರೆ ಶಿವನೊಳಗೈಕ್ಯವಪ್ಪಾ ಸೂರಸಾನಮ್ಮ

ಗಂಡನಲ್ಲಿ ಭಕ್ತಿಯುಳ್ಳವಳಾಗಿಯೂ ಪತಿವ್ರತಾಚಾರವುಳ್ಳವಳೂ ಆಗಿದ್ದಳು. ಬ್ರಾಹ್ಮಣರೇ ಮೊದಲಾದವರೆಲ್ಲರೂ ವಾಸವಾಗಿದ್ದ ಈ ಪುರದೊಳಗೆ ಬ್ರಾಹ್ಮಣರಲ್ಲಿ ತಿಲಕಪ್ರಾಯಳಾಗಿದ್ದಳು. ಈಕೆಯು ಲಿಂಗ ಪೂಜೆಯನ್ನು ಮಾಡುತ್ತಾ ಸಂತೋಷದಿಂದ ಇರುತ್ತಿದ್ದಳು. ಹೀಗಿರುವಲ್ಲಿ ಗಂಡನು ಪರಲೋಕಕ್ಕೆ ಹೋದನು. ಆಗ ಆಕೆಯು ಅದಕ್ಕಾಗಿ ಕಂದಿ ಕಳವಳಿಸದೆ ನನ್ನ ಗಂಡನು ಮುಕ್ತಿಯನ್ನು ಹೊಂದಿದನು. ನನಗೆ ಪತಿವ್ರತಾಧರ್ಮವು ಹೋಗಿಲ್ಲ. ಸ್ತೋತ್ರಾರ್ಹನಾದ ನಿರ್ಮಲನಾದ ಲಿಂಗ ಮೂರ್ತಿಯೇ ನನ್ನ ಗಂಡನು, ನನ್ನ ತನುವಿಗೆ ಲಿಂಗವೇ ಒಡೆಯನು. ನನ್ನ ಪ್ರಾಣಕ್ಕೆ ಪ್ರಾಣಲಿಂಗವೇ ಮುಖ್ಯವು. ನನ್ನನ್ನು ರಕ್ಷಿಸುವ ಲಿಂಗವೇ ನನ್ನ ಗುರುವು. ಎಂದು ಲಿಂಗವನ್ನು ಧರಿಸಿದಳು. "ಶಿವರಹಸ್ಯ" ಎಂಬ ಗ್ರಂಥದಲ್ಲಿ ಲಿಂಗವು ಶ್ರೇಷ್ಟವೆಂದೂ ಲಿಂಗಧಾರಣ ವಿಲ್ಲದ ಹೆಂಗಸರ ಮಕ್ಕಳ ಆಲಿಂಗನ ಚುಂಬನ ಮಾಡಲು ಪಾಪವೆಂದು ಹೇಳಿರುವು ದೆಂದೂ ತಿಳಿದುಕೊಂಡು ತನ್ನ ಮನಸ್ಸಿನಲ್ಲಿ ಪ್ರೀತಿಸಿ ಲಿಂಗದ ಮಹಿಮೆಯನ್ನು ತಿಳಿದು ಲಿಂಗವನ್ನು ಧರಿಸಿ ಲಿಂಗವಂತರ ಕೂಡ ನಡೆನುಡಿಯುಳ್ಳವಳಾಗಿದ್ದಳು. (ಮೇಲೆ ಲಿಂಗ ಪೂಜೆ ಎಂಬಲ್ಲಿ ಬಾಹ್ಯಲಿಂಗವಲ್ಲವೇ ?)

ಮತ್ತು ಭಕ್ತರೆನಗಂ ತಾಯಿ ತಂದೆಯು
ಭಕ್ತರೆನಗಂ ಬಂಧು ಬಳಗವು
ಭಕ್ತರೆನಗಾರಾಧ್ಯರಾ ಭಕ್ತರೇ ಅಸುವೆಂದು
ಭಕ್ತ ಸೇವೆಯ ಮಾಡುತಿರ್ಪಳು
ಭಕ್ತಿಯಲಿ ಮೂರ್ಸಂಜೆಕಾಲದಿ
ಭಕ್ತ ಶೇಷವ ತನ್ನ ಲಿಂಗಕ್ಕಿತ್ತು ಸೇವಿಪಳು

ಈಕೆಯು ಮಾಡುವ ವೀರಭಕ್ತಿಯನ್ನು ನೋಡಿ ಬ್ರಾಹ್ಮಣರು ಸಹಿಸಲಾರದೆ ಕಡಿಮೆ ಜಾತಿಯವರಾರಾದರೂ ಬಂದರೆ ಇಷ್ಟಲಿಂಗ ಸಮಾನವೆಂಬುದಾಗಿ ಭಾವಿಸಿ ಅವರ ಎಂಜಲನ್ನು ಕೈಗೊಂಡು ಈ ಸೂರಸಾನಿಯು ಗರ್ವದಿಂದ ನಮ್ಮ ಜಾತಿಯನ್ನು ಭ್ರಷ್ಟಮಾಡಿದಳು. ನಮ್ಮನ್ನು ಸ್ವಲ್ಪವೂ ಲಕ್ಷ್ಯಮಾಡುವುದಿಲ್ಲ ಎಂದು ಬಹಳ ಕೋಪದಿಂದ ಮಾತನಾಡಿಕೊಳ್ಳುತ್ತಿದ್ದರು.

ಸುಗಂಧ, ಕಸ್ತೂರಿ, ಇವುಗಳ ಸಮೀಪದಲ್ಲಿ ನೊಣಗಳು ಸೇರುವುದಿಲ್ಲ. ಅವು ದುರ್ಗಂಧಕ್ಕೆ ಮಾತ್ರ ಮುತ್ತುತ್ತವೆ. ಬ್ರಾಹ್ಮಣರಿಗೆ ಶಿವಲಿಂಗ (ಇಷ್ಟಲಿಂಗ) ಭಕ್ತಿ ಎಂದರಾಗದು. ಅವರು ತಾವು ತಾವು ಸೇರಿ—ಜಾತಿಯಿಲ್ಲದವರು ಭಸ್ಮ, ರುದ್ರಾಕ್ಷಿ, ಲಿಂಗವನ್ನು ಧರಿಸಿಕೊಂಡು ಬಂದರೇ ಶಿವನೇ ಬಂದನೆನ್ನುತ್ತಾ ಅವರ ಪಾದಗಳನ್ನು ತೊಳೆದು ಪಾದೋದಕವನ್ನು ಪ್ರೀತಿಯಿಂದ ತೆಗೆದುಕೊಳ್ಳುತ್ತಾಳೆ. ಬ್ರಾಹ್ಮಣನೇ ದೈವ ಎಂಬ ನೀತಿಯು ಈ ನೂರಸಾನಿಯ ಭಕ್ತಿಯ ದೆಸೆಯಿಂದ ಕಾಂತಿಗೆಟ್ಟಿತು—ಎಂದಾ ಲೋಚಿಸಿ ಮಾದಂಭಟ್ಟರನ್ನು ಕೇಳಿರೋ, ಓಬಳಯ್ಯನನ್ನು ಕೇಳಿರೋ, ಮಂಚಿ ಭಟ್ಟರು, ಚಂದಿಭಟ್ಟರನ್ನು ಕರೆದುಕೇಳಿರೋ ಪೆದ್ದಿಭಟ್ಟರನ್ನು ಕರೆದುಕೇಳಿರೋ ಗೋಪಿಭಟ್ಟರನ್ನು ಕರೆದುಕೇಳಿರೋ ಎಂದು ಕೂಗಾಡಲಾರಂಭಿಸಿದರು. ಈಕೆಯು ಕುಲವೆಂಬ ಬಳ್ಳಿಗೆ ಕುಡುಗೋಲು, ಕುಲವೆಂಬ ಮರಕ್ಕೆ ಕೊಡಲಿ. ಕುಲವೆಂಬ ಬೆಟ್ಟಕ್ಕೆ ವಜ್ರಾಯುಧ, ಕುಲವೆಂಬ ಬೇರಿಗೆ ಗುದ್ದಲಿ, ಕುಲವೆಂಬ ಬಾಳೆಯಗಿಡಕ್ಕೆ ಆನೆಯು, ಕುಲವೆಂಬ ಹಾಸಿಗೆಗೆ ಗಾಳಿಯು. ಹೀಗೆ ಈಕೆ ಕುಲಕ್ಕೆ ಕಂಟಕವಾಗಿದ್ದಾಳೆ. ಈ ಅಗ್ರ ಹಾರದಲ್ಲಿ ಇರುವವರೆಲ್ಲರೂ ಅಗ್ರವರ್ಣದವರು ನಮ್ಮ ಕುಲದ ಶ್ರೇಷ್ಟತೆಗೆ ಈಕೆಯು ಕೊರತೆಯನ್ನು ತಂದಳು, ಈಕೆಯನ್ನು ಇರಿಸಬಹುದೇ—ಎಂದು ಮಾತನಾಡಿಕೊಂಡು ರಾಜನಲ್ಲಿಗೆ ಹೋಗಿ ದೂರು ಹೇಳಿದರು. ರಾಜನೇ ಕೇಳು ಹದಿನೆಂಟು ಜಾತಿಗಳಿಗೆ ಬ್ರಾಹ್ಮಣ ಜಾತಿ ಶ್ರೇಷ್ಠ–ನಿನ್ನ ಪಟ್ಟಣದಲ್ಲಿ ಒಬ್ಬ ವಿಧವೆಯಿಂದ ಅದು ಹಾಳಾಗಿ ಹೋಯಿತು. ಕಿವಿ ತುಂಬಾ ಕೇಳಬಾರದು ನಾವಿದನ್ನು ಹೇಗೆ ವಿವರಿಸಿ ಹೇಳೋಣ, ಇದಕ್ಕೆ, ನಿರ್ಣಯವು ಯಾವುದೆಂಬುದನ್ನು ಹೇಳು—ಎಂದು ಕೇಳಿದರು.

ಲಿಂಗವೂ ಭಸ್ಮವೂ ಯಾವ ಜಾತಿಯವ ಅಂಗದಲ್ಲಿ ತೋರುತ್ತಿದ್ದರೂ ಅವರನ್ನು ಲಿಂಗವೆಂದೇ ಪೂಜಿಸುತ್ತಾ ಅವರ ಎಂಜಲನ್ನು ಉಂಡು ನಮಗೆ ಭಂಗಕ್ಕೆ ಇಕ್ಕಿದಳು. ನಮ್ಮನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಹೀಗೆ ಜಾತಿ ಸಂಕೀರ್ಣವಾದರೆ ಮಳೆಗಳು

ಹೇಗೆ ಸುರಿಯುವುವು ? ಗೋವುಗಳು ಹೇಗೆ ಹಾಲು ಕರೆಯುವುವು ? ಭೂಮಿಯು ಹೇಗೆ ಬೆಳೆಯುವುದು ? ಇದರ ಪರಿಹಾರವನ್ನು ಕಾಣಲಾರದೆ ನಿಮ್ಮ ಬಳಿಗೆ ಮೊರೆಯನ್ನು ತಂದಿದ್ದೇವೆ, ನಮ್ಮ ಕುಲಕ್ಕೆ ಹಾನಿಯುಂಟಾಯಿತು, ನಮಗೆ ಮುಂದಿನ ಬುದ್ಧಿ ಏನು ? ಎಂದು ರಾಜನನ್ನು ಕೇಳಿದರು.

ರಾಜನು ತಲೆಯನ್ನು ತೂಗುತ್ತಾ—ತಡಮಾಡದೆ ಆಕೆಯನ್ನು ಕರೆಯಿಸಿ ಶಿಕ್ಷೆಯನ್ನು ಮಾಡುತ್ತೇನೆ ಎಂದು ಉತ್ತರವಿತ್ತನು.

ಆ ಊರಿಗೆ ಶಿವನು ವಿಕಾರರೂಪಿನಿಂದ ಚಮ್ಮಾರನ ವೇಷವನ್ನು ತಾಳಿಕೊಂಡು ಬಂದನು. ಶಾಂತನಾಗಿದ್ದನು. ಹಣೆಯಲ್ಲಿ ಭಸ್ಮವನ್ನೂ ಕೊರಳಲ್ಲಿ ರುದ್ರಾಕ್ಷಿಯ ಸರವನ್ನೂ ಎದೆಯಲ್ಲಿ ಶಿವಲಿಂಗವನ್ನು ಧರಿಸಿದ್ದನು. ಚರ್ಮದ ಮಿಣಿಗಳನ್ನು ಹೊತ್ತು ಓಣಿ ಓಣಿಯಲ್ಲಿ ತಿರುಗುತ್ತಾ ಬರುತ್ತಿದ್ದನು.

ಸೂಜಿಗಲ್ಲಿನ ಬಗೆಯನ್ನು ಸೂಜಿಯೇ ಬಲ್ಲುದಲ್ಲದೆ ಅಕ್ಕಸಾಲೆಯಲ್ಲಿರುವ ಕಲ್ಲುಗಳು ಬಲ್ಲವೇ ? ಶಿವನ ಈ ಕಪಟ ವೇಷದ ಸ್ಥಿತಿಯನ್ನು ಶಿವಭಕ್ತರು ತಿಳಿಯುವರಲ್ಲದೆ ಉಳಿದ ತಾಮಸರಾದ ಮರುಳು ಮಾನವರು ಬಲ್ಲರೇ ? ವಿಶ್ವರೂಪನಾದ ವಿಶ್ವೇಶನ ಬಗೆಯನ್ನು ಭಾವಿಸಲಿಕ್ಕೆ ಪ್ರಮಥರು ತಿಳಿಯುವ ಹಾಗೆ ಸೂರಾಂಬಿಕೆಯು ಶಿವನ ಕಪಟ ವೇಷವನ್ನು ನೋಡಿ ಶಿವನೆಂದು ಭಾವಿಸಿ ನಮಸ್ಕರಿಸಿದಳು.

ದೇವ ಬಳಲಿದೆ ಎನ್ನ ತಾತಾ
ದೇವ ಬಳಲಿದೆ ಎನ್ನ ದಾತಾ
ದೇವ ಬಳಲಿದೆ ಎನ್ನ ಮದ್ಗುರುನಾಥ ಮನ್ನಾಥ
ದೇವ ಬಳಲಿದೆ ಎನ್ನ ಪ್ರಾಣ
ದೇವ ಬಳಲಿದೆ ಎನ್ನ ನಿದಾನ
ದೇವ ಬಳಲಿದೆ ದೇವ ದೇವಾ ಚಿತ್ತಯಿಸು

ಎಂದು ಬೇಡಿಕೊಂಡಳು. ನೀನು ಬಳಲಿದೆಯಯ್ಯಾ, ನೀವು ಹೊತ್ತ ಚರ್ಮದ ಹೊರಜಿಯನ್ನು ತನ್ನಿರಿ ಎಂದು ತೆಗೆದುಕೊಂಡು ಹೋಗಿ ತನ್ನ ಮುಂದಿನ ಮನೆಯ ಗೂಟದಲ್ಲಿ ತಗಲು ಹಾಕಿದಳು. ಉಳಿದುವೆಲ್ಲವನ್ನೂ ಹೊರಗೆ ಜಗುಲಿಯ ಪಕ್ಕದಲ್ಲಿಟ್ಟು ಆ ಅಯ್ಯನವರನ್ನು ತಮ್ಮ ಮನೆಯೊಳಕ್ಕೆ ಕರೆದೊಯ್ದಳು. ಇವನ್ನೆಲ್ಲಾ ಬ್ರಾಹ್ಮಣರು ನೋಡಿ ಬೆರಗಾದರು. ಈಗ ಆಯ (ಉಪಾಯ)ವು ದೊರಕಿತು. ಈ ವಿಧವೆಯನ್ನು ಕೊಲ್ಲಿರಿ, ಸಾಯಲೀಸಿರಿ, ಎಂದು ವಿಪ್ರರು ಗಟ್ಟಿಯಾಗಿ ಕೂಗಿ ಕರೆಯಲು ಎಲ್ಲಾ ಜನರು ಸೇರಿದರು.

ರಾಜನು ಈ ಸಂಗತಿಯನ್ನು ಕೇಳುತ್ತಿರೆ, ಆತನ ಪರಿಜನರು ಆಯಾಸಪಟ್ಟುಕೊಂಡು ಬಂದು ಶಿವನು ಕಪಟ ವೇಷವನ್ನು ತಾಳಿಕೊಂಡು ಬಂದ ಅಂದವೆಲ್ಲವನ್ನೂ ವಿವರಿಸಿ ಹೇಳಿದರು. ಬ್ರಾಹ್ಮಣರೆಲ್ಲರೂ ಬಂದು—ಸೂರಸಾನಿಯು ದಿಟ್ಟಳು. ಅಟ್ಟೆ ಚರ್ಮದ ಮಿಣಿ ಮಾರುತ್ತಿದ್ದವನನ್ನು ನಮಸ್ಕರಿಸಿ ತನ್ನ ಮನೆಯಲ್ಲಿ ಇಟ್ಟುಕೊಂಡಳು.

ಈಕೆಗೆ ಸ್ವಲ್ಪವೂ ಭಯವಿಲ್ಲ, ಬ್ರಾಹ್ಮಣರ ನೀತಿಯನ್ನು ಸುಟ್ಟು ಬಿಟ್ಟಳು, ನೀನು ನೋಡು, ಚಿತ್ತಯಿಸು—ಎಂದು ರಾಜನಿಗೆ ಹೇಳಲು ಬಂದು ನೋಡಿ ತನ್ನ ಮೂಗಿನಲ್ಲಿ ಬೊಟ್ಟನಿಟ್ಟುಕೊಂಡು ಬೆರಗಾದನು.

ಇದೇ ನೋಡಿರಿ ಬಾರು ಮಿಣಿಗಳಿವೆ. ಇದೇ ನೋಡಿರಿ ಸಂಬಳಿ ಗೋಲು ಇದೆ. ಇದೇ ನೋಡಿರಿ ಕತ್ತಿ, ಕೊಂಬು, ಉಳಿ, ರಂಬಿಕೆ ಇದೆ ಎಂದು ಜಗುಲಿಯ ಪಕ್ಕದಲ್ಲಿ ಇದ್ದ ಸಾಮಾನುಗಳನ್ನು ರಾಜನಿಗೆ ತೋರಿಸಲು ರಾಜನು ಕೋಪಗೊಂಡವನಾಗಿ ಈ ವಿಧವೆಯು ಭಂಡತನವ ಮಾಡಿದಳು, ಮನೆಗೆ ಮುತ್ತಿಗೆ ಹಾಕಿ ಈಕೆಯನ್ನು ತುಂಡು ಮಾಡಿರಿ ಎಂದು ಅಪ್ಪಣೆ ಕೊಟ್ಟನು. ಕೆಲವರು ಮನೆಯ ಸುತ್ತಲೂ ಕಾಯ್ದು ಕೆಲವರು ಮೇಲಕ್ಕೆ ಹತ್ತಿ ನಿಂತುಕೊಂಡರು. ಕೆಲವರು ಬಾಗಿಲಿನ ಸಮೀಪದಲ್ಲಿ ಗುಂಪಾಗಿ ನಿಂತರು. ಕೆಲವರು ಗುದಿಗೆಗಳನ್ನು ಕೆಲವರು ಬಾಣಗಳನ್ನು ತೆಗೆದುಕೊಂಡು ಸೂರಕ್ಕನನ್ನು ಕೊಲ್ಲುವುದಕ್ಕೆ ಬಂದರು. ಆಕೆಯು ಬಾಗಿಲನ್ನು ಹಾಕಿ ಅಗುಳಿಯನ್ನು ಸರಿದು ಅಷ್ಟರಲ್ಲಿ ಒಳಗೆ ಸರಿಪಡಿಸಿಕೊಂಡಳು.

ಹೆಣ್ಣುಗಳರಸ್ನೆ ಸೂರಮ್ಮನು ತನ್ನ ಮನೆಯಲ್ಲಿ ಕಪಟ ವೇಷದ ಶಿವನಿಗೆ ಉನ್ನತವಾದ ಆಸನವನ್ನು ಕೊಟ್ಟು ಸಕಲ ಉಪಚಾರವನ್ನೂ ಮಾಡಿ ಚಿನ್ನದ ಹರಿವಾಣದಲ್ಲಿ ತುಂಬಿ ಭಿನ್ನ ಭಿನ್ನ ರುಚಿಗಳುಳ್ಳ ಪಂಚಭಕ್ಷ್ಯ, ಶಾಕ (ಕಾಯಿಪಲ್ಯ) ಲೇಹ್ಯ (ನೆಕ್ಕುವ ಪದಾರ್ಥಗಳು) ಚೋಹ್ಯ (ನಂಜಿಕೊಳ್ಳುವ ಪದಾರ್ಥಗಳು) ಪಾನೀಯ (ಕುಡಿಯುವ ಪದಾರ್ಥಗಳು) ಇವುಗಳನ್ನು ಬಡಿಸಿ ಕೈಮುಗಿದು ಆರೋಗಿಸಿರಿ ಎಂದು ಹೇಳಲು ಶಿವನು ಅನೇಕ ವಿಧವಾದ ರುಚಿಕರಗಳಾದ ಪದಾರ್ಥಗಳನ್ನು ಸವಿದು ಚಪ್ಪರಿಸಿ ಉಣ್ಣುತ್ತಿದ್ದನು. ಘುರುಕ್ ಘುರುಕ್ ಎಂಬ ಸಪ್ಪಳವಾಗುವಂತೆ ಭಕ್ಷ್ಯಗಳನ್ನೂ ಪರುಕ್ ಶಬ್ದವಾಗುವಂತೆ ಹಪ್ಪಳ ಸಂಡಿಗೆಗಳನ್ನೂ ಸುರುಕ್ ಸುರುಕ್ ಎಂದು ಕೂಡಿದ ಶಬ್ದವಾಗುವಂತೆ ಹುಳಿ, ಪಳಿದೆ ಮುಂತಾದವುಗಳನ್ನೂ ಗುಳುಕ್ ಗುಳುಕ್ ಎಂಬಂತೆ ಪಾಯಸಗಳನ್ನೂ ಸಲಿಸುತ್ತಾ (ಸೇವಿಸುತ್ತಾ) ಭೋಜ್ಯಗಳನ್ನೂ ಶಾಕಂಗಳನ್ನೂ ತೆಗೆದುಕೊಂಡು ಗಡರ್ ಎಂದು ಉದಾನವಾಯುವಿನಿಂದ ತೇಗುತ್ತಾ ನೀರನ್ನು ಗಳಗಳನೆ ಮುಕ್ಕುಳಿಸಿ ಕೇಕರಿಸುತ್ತಾ ಇರುವ ಸಪ್ಪಳಗಳನ್ನು ಹೊರಗೆ ಕಾದುಕೊಂಡಿದ್ದ ರಾಜನೇ ಮೊದಲಾಗಿ ವಿಪ್ರರು ಕೇಳುತ್ತಾ ಕೋಪದಿಂದ ಘುಡಿ ಘುಡಿಸುತ್ತಾ ಹೂಂಕರಿಸುತ್ತಾ ಖೋ ಎಂದು ಕೂಗುತ್ತಾ ಇರಲು, ಒಳಗೆ ಶಿವನು ಆಕೆಯ ಭಕ್ತಿಯ ಮನಸ್ಸನ್ನು ಪರೀಕ್ಷಿಸಲಿಕ್ಕೆ ಹೀಗೆ ಕೇಳಿದನು—ಸೂರಕ್ಕನೇ ನೀನು ಮಾಡಿಸಿದ ಊಟವು ನನ್ನ ತಲೆಗೆ ಸಂಚಕಾರವ ತಂದಿತು—ಈ ಮಾತನ್ನು ಕೇಳಿ ನೀನು ಭೀತಿಯಿಲ್ಲದೆ ವಿಷವನ್ನು ಕುಡಿದೆ. ಸಿಂಧು ಬಲ್ಲಾಳನ ಹೆಂಡತಿಯನ್ನು ಕೇಳಿದೆ. ಮಾನಕಂಜರನ ಮಗಳ ಮುಡಿಯುನಪೇಕ್ಷಿಸಿದೆ. ಇಂತಹ ಭೀತಿಯಿಲ್ಲದ ಅನೇಕ ಕೆಲಸಗಳನ್ನು ಮಾಡಿದ ನೀನು ಈಗ ಹೆದರಬೇಡ, ಸುಖವಾಗಿ ಮಲಗು ಎಂದು ಹೇಳಿ ಬ್ರಾಹ್ಮಣರನ್ನೆಲ್ಲಾ ಇನ್ನೂ ಹೆದರಿಸುತ್ತೇನೆಂದು

ಬಾಗಿಲಬಳಿಗೆ ಬಂದು ಶಿವಭಕ್ತರು ವಾಸವಾಗಿರುವ ಮನೆಯ ಮುಂದೆ ಭವಿಗಳಾದ ನೀವು ಬರಬಹುದೇ ? ನದಿಗಳಿಗೆ ಸಮುದ್ರವೂ ನಕ್ಷತ್ರಗಳಿಗೆ ಚಂದ್ರನೂ ಎಲ್ಲಾ ಜನರಿಗೂ ರಾಜನೂ ಗತಿಯಾದಂತೆ ಭಕ್ತರಿಗೆ ಭಕ್ತರೇ ಗತಿ. ಈ ರೀತಿ ತಪ್ಪಿ ನಮ್ಮ ಸಮೀಪಕ್ಕೆ ನೀವು ಬರಬಹುದೇ ? ವಿಪ್ರರೇ ಆಚೆಗೆ ಹೋಗಿರಿ, ಸುಮ್ಮನೆ ಎಂದು ಸೂರಸಾರಮ್ಮನು ಕೂಗಿದಳು.

ಶೂದ್ರಜಾತಿಯವರು ಒಂದಿಷ್ಟು ಭಸ್ಮ ರುದ್ರಾಕ್ಷಿ ಮಾಲೆಯನ್ನು ಧರಿಸಿಕೊಂಡು ಬಂದರೆ ಅವರನ್ನು ಚಿದ್ರೂಪನಾದ ಶಿವನೇ ಎಂದು ಭಜಿಸುತ್ತಾ ವೈಷ್ಣವ ಬ್ರಾಹ್ಮಣ ರೆಂಬ ಬೆಟ್ಟಕ್ಕೂ ವಜ್ರ ಸ್ವರೂಪವಾಗಿರುವ ನೀನು ವೈಷ್ಣವ ಬ್ರಾಹ್ಮಣ ಮುದ್ರೆಯನ್ನು ಅಳಿದಿರುವವಳು ನಿನ್ನಂತಹ ಕ್ಷುದ್ರ ಸ್ತ್ರೀಯನ್ನು ನಾವು ನೋಡಬಹುದೇ ಎಂದು ದ್ವಿಜರುತ್ತರವ ಕೊಟ್ಟರು.

ಎಲೈ ಬ್ರಾಹ್ಮಣರಿರಾ, ದೇವತೆಗಳಲ್ಲಿ ಶಿವನು ಬ್ರಾಹ್ಮಣ, ವಿಷ್ಣು ಕ್ಷತ್ರಿಯ, ಬ್ರಹ್ಮ ವೈಶ್ಯ, ಇಂದ್ರ ಶೂದ್ರ ಎಂದು ವೇದಶಾಸ್ತ್ರಗಳು ಸಾರುತ್ತಿವೆ. ಶಿವಗಣಂಗಳು ಶೂದ್ರರೆಂದರೆ ನಿಮಗೆ ನರಕ ತಪ್ಪುವುದಿಲ್ಲ. ಇದು ಸತ್ಯ. ಚಂಡಾಲನಾವರೂ ಶಿವ ಭಕ್ತನು ದ್ವಿಜರಿಗಿಂತ ಶ್ರೇಷ್ಠನು ಎಂದು ಶಾಸ್ತ್ರಗಳೂ ಕೂಗುತ್ತಿವೆ ಎಂದು ಸೂರಕ್ಕನು ನುಡಿದಳು.

ನೀನು ಹಾರುವರ ವಂಶದಲ್ಲಿ ಹುಟ್ಟಿ ಹಾರುವರ ಕರ್ಮದಲ್ಲಿ ನಡೆಯದೆ ಹಾರುವ ರನ್ನು ಕಣ್ದೆರೆದು ನೋಡದೆ ದೂರ ಮಾಡುವುದು ನಿನಗೆ ನೀತಿಯೇ ? ನಿನ್ನ ಜೀವಕ್ಕೆ ಮಾರಿಯನ್ನು ಬರಿಸಿಕೊಳ್ಳುವೆಯಾ ಎಂಬುದಾಗಿ ವಿಪ್ರರ ಗುಂಪು ನುಡಿಯಲು ನೀರಿ ನಿಂದ ಮುತ್ತು ಹಾಲಿನಿಂದ ತುಪ್ಪ ಕೆಸರಿನಿಂದ ಕಮಲ ಇವು ಹುಟ್ಟಿ ತಮ್ಮ ಪೂರ್ವ ವನ್ನು ಬೆರಸುತ್ತವೆಯೇ ? ಶ್ರೇಷ್ಠರಾದ ಶರಣರು ಯಾವ ಕುಲದಲ್ಲಿ ಜನಿಸಿದರೂ ಮನುಷ್ಯರನ್ನು ಕೂಡುವರೇ ? ನಮ್ಮಲ್ಲಿ ಕೀಳು ಮಾತುಗಳನ್ನಾಡಬೇಡಿರಿ ಎಂದು ಸೂರಮ್ಮನು ಬ್ರಾಹ್ಮಣರಿಗೆ ಹೇಳಿದಳು. ಮತ್ತು ಕುಲದ ಮಾತನ್ನು ಕೇಳಿದರೆ ಕುಲವು ಯಾರಿಗೆ ಇಲ್ಲ ? ಈ ಜಗತ್ತಿನಲ್ಲಿ ಪಕ್ಷಿ, ಮೃಗ, ಕುದುರೆ, ಪಶುಜಾತಿಗಳು ಕೂಡಾ ಕುಲ ದಲ್ಲಿ ಇರುತ್ತವೆ. ಕಾಲಕರ್ಮಗಳನ್ನು ಗೆದ್ದ ಶಿವಕುಲದಲ್ಲಿನ ನಮ್ಮ ಶಿವಭಕ್ತರು ಕುಲ ಛಲಕ್ಕೆ ಹೋರಿ ಮತ್ತೆ ಹುಟ್ಟುವ ಬಲೆಗೆ ಬೀಳುವುದಿಲ್ಲ. ಜಾತಿಸೂತಕ, ಜನನ ಸೂತಕ, ರಜಃಸೂತಕ, ಮರಣ ಸೂತಕ, ಎಂಜಲು ಸೂತಕ, ಇವೈದನ್ನೂ ಹೊಂದ ದಿರುವ ಶಿವ ಶರಣರಿಗೆ ಚ್ಯುತಿವುಂಟೇ ? ಇದನ್ನು ತಿಳಿಯದೆ ಈ ರೀತಿಯನ್ನು ಕಾಣದೆ ನೀವು ನಿಂದೆಯ ಮಾತನಾಡಿದರೆ ನೂರು ಜನ್ಮ ಕುಷ್ಠರೋಗದಲ್ಲಿ ಇರುವ ಪಾಪವು ಬರುವುದು. ಇನ್ನೂ ಕೇಳಿರಿ:

ಶ್ರುತಿಗಳೊಳು ಶಾಸ್ತ್ರಾಗಮಂಗಳ
ತತಿಗಳೊಳು ಪೌರಾಣ ದಿವ್ಯಾ
ಕಥನದೊಳು ಶಿವಭಕ್ತಿಯೇ ಘನವೆಂಬುದಂ ಕೇಳಿ

ಮತಿಯು ಮರೆದಿರಿ ಲಿಂಗ ಭಕ್ತಿಯ
ನತಿಗಳೆದು ನಿಂದಿಸಲು ವ್ಯವ
ಸ್ವತನು ನೂಕುವ ಕಲ್ಪಕೋಟಿಯು ತನಕ ನರಕ್ಕೆ.

ಬ್ರಾಹ್ಮಣರೇ, ನಿಮ್ಮ ಜಾತಿಯ ಕರ್ಮ, ಅದರ ರಹಸ್ಯ, ಇವುಗಳಿಂದ ಕೂಡಿದ ಅಹಂಕಾರ (ನಾನುಮಾಡುವೆನೆಂಬ ಹೇಳಿಕೆ) ಭಕ್ತರಿಗೆ ಸರಿಬೀಳುವುದಿಲ್ಲ. ಸುಮ್ಮನೆ ಏತಕ್ಕೆ ವಾದ ? ಶಿವನ ಪ್ರಮಥರ ಮುಂದುಗಡೆಯಲ್ಲಿ ವಿಷ್ಣು, ಬ್ರಹ್ಮ, ದೇವೇಂದ್ರ, ಮೊದಲಾದವರೂ ಮುನಿಕುಲದವರೂ ನಿಲ್ಲಲಾರರೆಂಬಲ್ಲಿ ನಿಮ್ಮ ಪಾಡೇನು ? ವಿಪ್ರ ಜನರೆಲ್ಲರೂ ನಿಮ್ಮ ಮನೆಗಳಿಗೆ ಮರಳಿರಿ. ನಿಮ್ಮ ಮತವೇ ನಿಜವಾದದ್ದಾದರೆ ಬ್ರಹ್ಮನು ಸೃಷ್ಟಿಕಾಲದಲ್ಲಿ ನಿಮ್ಮ ಹಣೆಯ ಅರ್ಧಭಾಗದಲ್ಲಿ ತನ್ನ ಉತ್ಪತ್ತಿ ಸ್ಥಾನವಾದ ಕಮಲದಂತೆ ಇರುವ ವರ್ತುಳವನ್ನು ಏಕೆ ರಚಿಸಲಿಲ್ಲ ? ಶಿವಭಕ್ತಿಯು ಮೊದಲೇ ಇದ್ದಿತು ಎಂದು ಅಗಮ್ಯವಾದ ಮಾತಿಗೆ ಇದೇ ದೃಷ್ಟಾಂತರ ಎಂಬುದಾಗಿ ಶಾಸ್ತ್ರ ಯುಕ್ತಿಯ ಮಾತನ್ನು ಹೇಳಿದುದಲ್ಲಿದೆ ಶರಣರ ವಾರ್ತೆಯನ್ನು ಕೇಳಿದರೆ ದೋಷಗಳು ಸುಟ್ಟು ಹೋಗುತ್ತವೆ. ಶರಣರು ಸೋಂಕಿ ದೇಹವನ್ನು ಸವರಿ ತೀಡಿದ್ದಾದರೆ ಆ ದೇಹವು ಪಾವನವಾಗುತ್ತದೆ, ಶರಣರಿರುವ ಮಂದಿರವೇ ಶಿವನಿರುವ ಕೈಲಾಸವು. ಅವರ ಹೆಸರನ್ನು ಕೀರ್ತಿಸಿದರೆ (ನಾಮಸ್ಮರಣೆ ಮಾಡಿದರೆ) ಮುಕ್ತಿಯಾಗುತ್ತದೆ ಭವ ನಾಶವಾಗುತ್ತದೆ.

ಚಂದ್ರಕಾಂತ ಶಿಲೆಗೆ ಬೆಳುದಿಂಗಳು ವ್ಯಾಪಿಸಿದ ಕೂಡಲೇ ಕರಗಿ ದ್ರವಿಸುವುದು ಅದರಂತೆ ಉಳಿದ ಕಲ್ಲುಗಳು ಚಂದ್ರಿಕೆಗೆ ನೀರು ಸುರಿಸುವುದೇ ? ಶಿವನ ರೂಪಿಗೆ (ಲಿಂಗಕ್ಕೆ?) ಮನಸೋತು ಭಜಿಸುವ ಭಕ್ತರ ಪ್ರಸನ್ನತೆಯನ್ನು ನಿಂದಿಸುವ ಪಾಪಿಗಳು ಆ ಶರಣರ ನೆಲೆಯನ್ನು ಬಲ್ಲರೆ !

ಉರಿಯುವ ದೀಪದ ಮುಂದೆ ಕತ್ತಲೆಯು ನಿಲ್ಲುವುದೇ ? ಕೊಡಲಿಯ ಮುಂದೆ ಮರಗಳ ಬಲ್ಪು ನಿಲ್ಲುವುದೇ ? ಬೆಟ್ಟಗಳ ಆಧಿಕ್ಯವು ವಜ್ರಾಯುಧ ದಮುಂದೆ ನಡೆ ಯುವುದೇ ? ಶಿವಭಕ್ತರಾಚರಣೆಯ ಮುಂದೆ ಭಿನ್ನ ಕರ್ಮಿಗಳಾದ ವೈಷ್ಣವರ ಮಾತಿಗೆ ಜಂಭವು ನಡೆಯುವುದೇ ? ಹೋಗಿರಿ ಹೋಗಿರಿ ಎಂದಾಯಮ್ಮನು ಹೇಳಿದಳು.

ಆಗ ಬ್ರಾಹ್ಮಣರು ಉತ್ತರಕೊಟ್ಟುದೇನಂದರೆ: "ದೈವದಿಂದಾದಾದಿಯ ಬೀಜವು ಜಗತ್ತು. ದೈವವು ಮಂತ್ರದ ಆದಿಯಲ್ಲಿ ಇಹುದು. ಮಂತ್ರವು ಬ್ರಾಹ್ಮಣರ ಆದಿ ಯಲ್ಲಿ ಇರುವುದು. ಈ ವಿಧದಲ್ಲಿ ಬ್ರಾಹ್ಮಣನೇ ದೈವವೆಂದಿತ್ತಿರಲಿಕ್ಕೆ ನೀನು ನಮ್ಮನ್ನು ತಿರಸ್ಕರಿಸಿದೆ, ನಾವು ಭೂಮಂಡಲದಲ್ಲಿ ತಲೆಯೆತ್ತಿ ನೋಡದ ಹಾಗೆ ನಿನ್ನಿಂದ ಆಯಿತು. ಬ್ರಾಹ್ಮಣರ ಗರ್ಭದಲ್ಲಿ ಹುಟ್ಟಿ ನೀನು ಆ ದ್ವಿಜರ ಪೂಜೆಯ ಮಾಡಲೊಲ್ಲದೆ ಕಂಡ ಕಂಡ ಶೂದ್ರ ಜಾತಿಗಳನ್ನು ಭಜಿಸಬಹುದೇ ? ದುಷ್ಟಳೇ ನಿನ್ನ ಪ್ರಾಣವನ್ನು ತೆಗೆದಲ್ಲದೆ

ಸುಮ್ಮನೆ ಬಿಡೆವು" ಹೀಗೆ ಭುಜವನ್ನು ತಟ್ಟುತ್ತಾ ಕೂಗುತ್ತಿರುವ ಆ ಬ್ರಾಹ್ಮಣರನ್ನು ನೋಡಿ ಸೂರಮ್ಮನು ಹೇಳುತ್ತಾಳೆ.

ನೀವು ಬ್ರಾಹ್ಮಣರು. ನಿಮ್ಮ ಹೆಂಡತಿಯರು ಶೂದ್ರರು. ನೀವು ಕರ್ಮದಿಂದ ದ್ವಿಜ (ಕರ್ಮದಾ ದ್ವಿಜ ಉಚ್ಯತೇ) ಎಂದು ಹೇಳುತ್ತೀರಿ. ನೀವು ಓದುವ ಶ್ರುತಿಯ ಅರ್ಥವನ್ನೇ ನೀವು ಮರೆದಿರುತ್ತೀರಿ. ದೇವ ಭಕ್ತರ (ಶಿವಭಕ್ತ) ಮನೆಗೆ ಬಂದು ಯಾವ ಉತ್ತಮ ಗುಣವಿದೆ ಎಂದು ಮಾತನಾಡುತ್ತೀರಿ.

ಕಶ್ಯಪನು ಮೊದಲು ಬ್ರಾಹ್ಮಣರ ಮನೆಯವನೇ ? ವಸಿಷ್ಟನು ಬ್ರಾಹ್ಮಣರ ಮಗನೇ ? ವಿಶ್ವಾಮಿತ್ರನು ಮೊದಲು ಬ್ರಾಹ್ಮಣನೇ ? ವಾಲ್ಮೀಕಿಯು ಮೊದಲು ಬ್ರಾಹ್ಮಣನಹುದೇ ? ಮಾಂಡವ್ಯನು ಮೊದಲು ಬ್ರಾಹ್ಮಣನೇ ? ಅಗಸ್ತ್ಯಾದಿ ಮುನಿಗಳು ಬ್ರಾಹ್ಮಣರೇ ? ನೋಡಿರಿ ನೋಡಿರಿ.

ಬ್ರಾಹ್ಮಣರು ದೈವವೆಂದು ಭಜಿಸಿದ ರಾವಣನು ಸಾಯಲಿಲ್ಲವೇ ? ಬ್ರಾಹ್ಮಣರು ದೈವವೆಂದು ಭಜಿಸಿದ ಬಲಿಚಕ್ರವರ್ತಿಗೆ ಪಾತಾಳದಲ್ಲಿ ಇರುವ ಬಂಧನವಾಗಲಿಲ್ಲವೇ ? ಬ್ರಾಹ್ಮಣರು ದೈವವೆಂದು ನಂಬಿದ ಗೌತಮನು ಗೋವಧೆ ಮಾಡಿದ ಆರೋಪಣೆಗೆ ಗುರಿಯಾಗಲಿಲ್ಲವೇ ? ದೈವವು ಬ್ರಾಹ್ಮಣರೆಂದು ನಂಬಿದ ದಕ್ಷಬ್ರಹ್ಮನು ತಲೆಯನ್ನು ಕಳೆದುಕೊಳ್ಳಲಿಲ್ಲವೇ ? ನಿಮ್ಮ ಗೋತ್ರದ ಋಷಿಗಳೆಲ್ಲರೂ ಯಾರೆಂಬುವನ್ನು ನಿಮ್ಮ ಶಾಸ್ತ್ರವನ್ನು ತಿಳಿದು ನೋಡಿರಿ ಎಲೆಲೋ ವಿಪ್ರರಿರಾ ನೀವೆತ್ತ ? ನಮ್ಮ ಶಿವಭಕ್ತರ ಘನವದೆತ್ತ ? ಶಿವಭಕ್ತರು ಕುಲಛಲದ ಅಹಂಕಾರವನ್ನು ಹಿಡಿಯುವವರಲ್ಲ. (ನಾನಂಥ ಕುಲದವನು, ಛಲದವನು ಎಂದು ಹೇಳುವವರಲ್ಲ.) ಹೀಗೆ ಪರಬ್ರಹ್ಮನ ಪ್ರಸನ್ನತೆಯೊಳಗೆ ಇರುವ ಶರಣರನ್ನು ನೀವು ಶೂದ್ರರೆನ್ನಬಹುದೇ ? ಶಿವಭಕ್ತರನ್ನು ಭಜಿಸಿ ಬಾಹೂರ ಬೊಮ್ಮಯ್ಯನು ಲಿಂಗವಾದನು. ಶಿವಭಕ್ತರನ್ನು ಭಜಿಸಿ ಕೇಶಿರಾಜನು ಶಿವನಾದನು. ಶಿವಭಕ್ತರೇ ಶ್ರೇಷ್ಠರೆಂದು ಕರುಣೆಗಳಾದ ಪಂಡಿತಾರಾಧ್ಯರು ಮೆರೆದರು. ಇಂತಹ ಶಿವಭಕ್ತರನ್ನು ಶೂದ್ರರೆಂದರೆ ನಿಮ್ಮ ಬಾಯಿ ಹುಳಿಯುವುದಿಲ್ಲವೇ ? ಗೌತಮನ ಶಾಪದಿಂದ ಭೂಸುರರು ಶೂದ್ರರಾಗಲಿಲ್ಲವೇ ? ದೇವ ಮಂತ್ರಿಗಳು (ಬ್ರಹಸ್ಪತಿ) ಉತ್ತಮ ಗತಿಯನ್ನು ಪಡೆಯುತ್ತಾನೆಯೇ ? ಧರ್ಮರಾಜನು ತನ್ನ ವ್ರತದಲ್ಲಿದ್ದೂ ಅವನ ತಮ್ಮಂದಿರು ದಿನಕ್ಕೊಬ್ಬೊಬ್ಬರು ಮೃತರಾಗಲಿಲ್ಲವೇ ? ಪರಶುರಾಮನು ಯುವತಿಯ ಶಾಪದಿಂದ ನೋಯಲಿಲ್ಲವೇ ? ನಮ್ಮ ಶಿವಭಕ್ತರು ಶೂದ್ರರಾದರೆ ವಿಷ್ಣುವಿಗೆ ಹತ್ತು ಜನ್ಮವೇಕಾಯಿತು ? ಶಿವಭಕ್ತರು ಶೂದ್ರರಾದರೆ ನಿಮ್ಮ ವೇದವನ್ನು ಶಿವಭಕ್ತರ ಮನೆಯ ನಾಯಿಯು ಓದುವುದೇ ? ಆದುದರಿಂದ ಭಕ್ತರು ಶೂದ್ರರಲ್ಲ.

ಇನ್ನೂ ಕೇಳಿರಿ. ಶಿವಭಕ್ತರು ಶೂದ್ರರಾದರೆ ಗಬ್ಬೂರು ಬ್ರಾಹ್ಮಣರ ಮನೆಗಳು ಸುಡುತ್ತಿದ್ದವೇ ? ಇವೇ ಮುಂತಾದ ಕಾರಣಗಳಿಂದ ಶಿವನ ಭಕ್ತರೇ ಮೂಜಗವು ತಿಳಿಯುವ ಹಾಗೆ ದೈವವು.

ಇದನ್ನೆಲ್ಲಾ ಕೇಳಿ–ಈಕೆಯು ದಿಟ್ಟಳು. ತನ್ನ ಮನೆಯಲ್ಲಿ ಖೊಟ್ಟಿ ಕುಲದವ ನನ್ನಿಟ್ಟುಕೊಂಡು ಕೆಟ್ಟೆನೆಂಬ ಚಿಂತೆಯು ಈಕೆಯ ಮನಸ್ಸಿನಲ್ಲಿ ಸ್ವಲ್ಪವೂ ಇಲ್ಲ— ಹೀಗೆಂದು ಗೋಪಿಚಂದನ ಧಾರಿಗಳು ನುಡಿಯುತ್ತಿರಲು ಅವರಿಗೂ ಆಯಮ್ಮ ನಿಂತೆಂದಳು.

ನಮಗೆ ಲಿಂಗದ ಚಿಂತೆಯುಂಟು, ಭಕ್ತರ ಚಿಂತೆಯುಂಟು. ಆದ್ಯರ ಚಿಂತೆ ಯುಂಟು, ನಿಮಗೆ ನೀರು ಮುಳುಗುವ ಚಿಂತೆ, ನಿಮಗೆ ಮೂಗು ಮುಟ್ಟುವ ಚಿಂತೆ. ನಿಮ್ಮ ಜಾತಿ ಕರ್ಮದ ಚಿಂತೆ. ಈ ಚಿಂತೆಗಳು ನಮಗಿಲ್ಲ.

ಆಗ ಬ್ರಾಹ್ಮಣರು–ತಾನು ನಷ್ಟಪಟ್ಟವಳಾದಾಗ್ಯೂ ನಮ್ಮ ಕುಲಕ್ಕೂ ಕೇಡು ತಂದಳು. ಸೊಕ್ಕಿನಿಂದ ನಮ್ಮ ಕುಲಕ್ಕೂ ಖೋಡಿ ಮಾತುಗಳನ್ನಾಡುತ್ತಿದ್ದಾಳೆ– ಎಂದು ಹೇಳುವ ಘಟಾಟೋಪದ ಮಾತನ್ನು ಭಕ್ತಿಚೂಡಾಮಣಿ ಸೂರಮ್ಮನು ಕೇಳಿ ನೀವು ಹೀಗೆ ಹೇಳಿದುದು ಸಹಜ. ನಾನು ಕಾಮದಲ್ಲಿ ನಷ್ಟಳಾದೆನು. ಕ್ರೋಧದಲ್ಲಿ ನಷ್ಟಳಾದೆನು. ಲೋಭ, ಮೋಹ, ಮದ, ಮತ್ಸರಗಳಲ್ಲಿ ನಷ್ಟಳಾದೆನು. ನಮ್ಮ ಭಕ್ತರ ದಯದಿಂದ ದುರ್ಭವವನ್ನೂ ನಷ್ಟಮಾಡಿಕೊಂಡನು.

ಕೀಳು ಕುಲದವರ ಮನೆಯ ಹೋರಿಯಮೇಲೆ ಲಿಂಗದ ಮುದ್ರೆಯನ್ನೊತ್ತಲು, ಗೂಳಿ ಎಂಬ ಹೆಸರು ಬರುವುದು ಶಿವಭಕ್ತರಿಗೆ ಕುಲ ಮೂಲ ನಾಮಗಳುಂಟೆ ? ನೀವು ಖೂಳತನದಿಂದ ಮಾತಾಡಿದಿರಿ. ಇದು ಶಾಸ್ತ್ರಸಮ್ಮತವಹುದೇ ?

ಕೆಸರಿನಿಂದ ಕಮಲವು ಹುಟ್ಟುವಹಾಗೆ ಎಳ್ಳಿನ ಮರೆಯಲ್ಲಿ ಎಣ್ಣೆಯಿರುವ ಹಾಗೆ ನೆಲದ ಮರೆಯಲ್ಲಿ ನಿಕ್ಷೇಪವಿರುವ ಹಾಗೆ ಕಟ್ಟಿಗೆಯಲ್ಲಿ ಬೆಂಕಿ ಇರುವ ಹಾಗೆ ಶಿವಭಕ್ತನು ಶ್ವಪಚರ ಕುಲದಲ್ಲಿ ಹುಟ್ಟಿದರೆ ಕೊರತೆಯೇ ? ಇದನ್ನು ತಿಳಿಯಲಾರದೆ ಕರ್ಮ ವಿಪ್ರರೇ ಮಾತಾಡದಿರಿ. ಎಲವೋ ರುದ್ರನು ಒಬ್ಬನು ಅದ್ವಿತೀಯನು (ಏಕೋ ರುದ್ರೋನ ದ್ವಿತೀಯಃ) ಎಂದು ತಿಳಿದು ಆ ರುದ್ರನ ವಿಭೂತಿಯನ್ನು ಧರಿಸಿ ರುದ್ರ ರೂಪದಲ್ಲಿ ಇರುವ ಭಕ್ತರ ಮನೆಯಲ್ಲಿ ಇರುವವರೆಲ್ಲರೂ ರುದ್ರರೇ ಅಲ್ಲದೆ ಅಧಮ ಭಕ್ತಿಯ ದರಿದ್ರರಿರುವರೇ ? ಪಾಪಿದ್ವಿಜರೇ ಕ್ಷುದ್ರತನದಿಂದ ನೀವು ಇಲ್ಲಿಗೆ ಬಂದಿರು ವಿರಿ. ಹಿಂದಿರುಗಿ ಹಿಂದಿರುಗಿ ಎಂದು ಸೂರಮ್ಮನು ಹೇಳಲು, ಬ್ರಾಹ್ಮಣರು ಕೋಪ ಗೊಂಡು

–ಮಾದಿಗನನ್ನು ಮನೆಯೊಳಗಿಟ್ಟುಕೊಂಡು ನಮ್ಮಲ್ಲಿ ವಾದಿಸುತ್ತಾ ಇದ್ದಾಳೆ. ಹೀಗಿರುವ ದಿಂಡೆ ಹೆಂಗಸು ಈ ಲೋಕದಲ್ಲಿ ಉಂಟೇ ? ಸಜ್ಜನರಾಡುವ ಸಾಧು ಮಾತುಗಳು ಈಕೆಗೆ ಸಲ್ಲವು–ಎನ್ನುತ್ತಿದ್ದರು.

ಅದಕ್ಕೆ ಸೂರಮ್ಮ ನಿಂತು ಹೇಳಿದಳು–ಬಾಯಿಹೊಯ್ವಂತೆ ಉತ್ತರ ಕೊಟ್ಟಳು– ಅಹುದು, ಈತನು ದೈವಕ್ಕೆ ಮಾದಿಗನು. ಈತನು ಲೋಕಕ್ಕೆ ಮಾದಿಗನು. ಈತನು ಹರಿ ಬ್ರಹ್ಮದೇವ ಸಮೂಹ ಮುನಿಗಳಿಗೆಲ್ಲಾ ಮಾದಿಗನು. ಶ್ರುತಿ ಪುರಾಣಕ್ಕೆ ಮಾದಿಗ

ನಹುದು. ನಮ್ಮ ಶಿವಭಕ್ತರಿಗೆ ಮಾದಿಗನಹುದು. ಮಾದಿಗನಹುದು (ಮಹಾ = ಮಾ + ಆದಿಗ = ಮಾದಿಗ)

ರಾಜನೇ, ನೋಡು ಮನೆಹೊಕ್ಕ ಶ್ವಪಚನಿಗೆ ಆಹಾರವನಿಕ್ಕಿ ನಮ್ಮಲ್ಲಿ ಹೆದರಿಕೆ ಇಲ್ಲದೆ ನಮ್ಮನ್ನು ಸೊಕ್ಕಿನಿಂದ ಜರಿಯುತ್ತಿದ್ದಾಳೆ–ಎಂದು ಹೇಳಿ ಅಃಕುಲಜನನ್ನು ಹೊರಕ್ಕೆ ನೂಕು ಶಿಕ್ಷಿಸುತ್ತೇವೆ ಎಂಬುದಾಗಿ ಎಲ್ಲಾ ಬ್ರಾಹ್ಮಣರೂ ಕಕ್ಕಸಬಡುತ್ತಾ ಸೂರಮ್ಮನಿಗೆ ಹೇಳಿದರು.

ಅಯ್ಯಾ ಬ್ರಾಹ್ಮಣರಿರಾ, ಶ್ವಪಚನಾದರೂ ಶಿವಭಕ್ತನು ಮುನಿಶ್ರೇಷ್ಠನೆಂದು ಉಪಮಾನ ಕೊಟ್ಟು ಹೇಳುತ್ತಿರುವ ಶ್ರುತಿಯನ್ನರಿಯದೆ ಮಾತಾಡುತ್ತೀರಿ. ಮಂದ ಮತಿಗಳಿರಾ, ವಿಶ್ವರೂಪನಾದ ಶಿವನ ಉತ್ತಮವಾದ ಮಾರ್ಗದ ಬಳಿವಿಡಿವುದನ್ನು ನೀವೆತ್ತ ಬಲ್ಲಿರಿ ? ಕಪಟಿಗಳಿರಾ, ಹೀಗಾದರೆ ಶ್ವಪಚಾಧಮರು ನೀವೇ ಆಗುವಿರಿ.

ಭೂಲೋಕದಲ್ಲಿ ಒಬ್ಬ ಹೆಂಗಸು ತನ್ನ ಗಂಡನು ನಾನಾ ರೂಪಗಳನ್ನು ಧರಿಸಿದಾಗ್ಯೂ ತನ್ನ ಗಂಡನೆಂಬುದನ್ನೂ ವೇಷಗಳು ಮಾಯೆ ಎಂಬುದನ್ನೂ ತಿಳಿಯದೆ ಇರುವಳೇ ? ಶಿವನು ನಾನಾ ರೂಪಿನಿಂದ ಸಂಚರಿಸಿ ಬಂದರೆ ಶಿವಭಕ್ತರು ಇವನು ಶಿವನೆಂಬುದನ್ನು ತಿಳಿಯದೇ ಇರುವರೇ ಈ ಮಾತನ್ನು ಚೆನ್ನಾಗಿ ತಿಳಿಯಿರಿ. ತನ್ನ ತಲೆಯಲ್ಲಿ ಸತ್ತ ಕರುವನ್ನು ಹೊತ್ತುಕೊಂಡು ಈಶನು ಬರಲು ಭೋಗಿ ದೇವಯ್ಯನು ತನ್ನ ಮನಸ್ಸಿನಲ್ಲಿಯಾದರೂ ಮರೆದನೇ ? ಸೆಟ್ಟಿ ಸಿರಿಯಾಳನು ಮಗನ ಮಾಂಸವನ್ನು ಶಿವನು ಬೇಡಿದರೂ ಅವನು ಶಿವನೇ ಎಂದು ತಿಳಿದುದಿಲ್ಲವೇ ? ಈಶನ ಲಾಂಛನ (ಕಾವಿ ವಸ್ತ್ರ ಮೊದಲಾದ ಚಿಹ್ನೆಗಳು) ಇದ್ದವರಲ್ಲಿ ಶಿವನು ಇರುವನೆಂದೂ ಭಕ್ತರ ದೇಹದಲ್ಲಿ ಶಿವನಿರುವನೆಂದೂ ಶಿವನ ಶಾಸನದ ದೃಷ್ಟಾಂತವನ್ನು ನೀವು ತಿಳಿಯಿರಿ. ಮಾದರ ದೂಳಯ್ಯನೆಂಬುವನು ಮೈದೊಳೆದ ನೀರಿನಿಂದ ಏಳುನೂರು ಬ್ರಾಹ್ಮಣರ ಕುಷ್ಠ ರೋಗವು ದೂರವಾಗಲಿಲ್ಲವೇ ? ಶಿವನು ಕುಲಹೀನನ ವೇಷದಿಂದ ಸಾಮವೇದಿಗಳು ಮಾಡುವ ಹೋಮದ ಬಳಿಗೆ ಹೋಗಲು ಆಗ ಸಾಮವೇದಿಗಳು ವಂದಿಸಲಿಲ್ಲವೇ ? ಸೋಮ ಸೀಮಾರೆಂಬುವರು ಶಿವನು ಹೊಲೆಯ ವೇಷದಿಂದ ಬರಲು ನೇಮದಿಂದ ಪೂಜಿಸಿ ಜಗತ್ತೆಲ್ಲಾ ತಿಳಿಯುವ ಹಾಗೆ ಮೆರೆದನು.

ದುಂಬಿಗಳು ಸುವಾಸನೆಯ ಪುಷ್ಪಗಳಲ್ಲದೆ ಯಲುವದ ಮರ (ಬೂರಲು) ದ ಹೂವುಗಳಿಗೆ ಹೋಗುತ್ತವೆಯೇ ? ನಮ್ಮ ಮನೆಯಲ್ಲಿ ಗಾರು ಮನುಜರು ಸೇರಲರಿಯರು ಎಂಬುದಾಗಿ ವೀರಶೈವದ ಮನೋಹರವಾದ ಚರಿತ್ರೆಯನ್ನು ವಿವರಿಸುತ್ತಾ ಅನೇಕ ಸಾಕ್ಷಿಗಳನ್ನು (ಶಾಸ್ತ್ರಪ್ರಮಾಣ) ಕೊಟ್ಟು ಸೂರಸಾನಿಯು ಹೇಳುತ್ತಿದ್ದಳು.

ಇದೆಲ್ಲವನ್ನೂ ಕೇಳಿ ದ್ವಿಜರು ಕೋಪದಿಂದ ಗುಂಪಾಗಿ ಕೂಡುತ್ತಾ ರಾಜನ ಸಹಿತ ಈಕೆಯ ಮನೆಯ ಛಾವಣಿಯನ್ನು ಹಿರಿದು ಹಾಕಿರಿ, ಗೋಡೆಗಳನ್ನು ಕೆಡವಿರಿ, ಕೀಳು ಕುಲದವನನ್ನು ಮೊದಲು ಹಿಡಿದು ಆಮೇಲೆ ಈಕೆಗೆ ಶಿಕ್ಷೆಯನ್ನು ಹೇಳಿರಿ.

ಹೊರಗಿನ ಮನೆಯ ಕಂಬದ ಕೊಟ್ಟನ್ನು ಕಳಚಿಬಿಡಿರಿ ಎಂದು ತಾವು ತಾವು ಮಾತಾಡಿ ಕೊಳ್ಳುತ್ತಿದ್ದರು.

ಅಷ್ಟರಲ್ಲಿ ಶಿವಭಕ್ತಿಯ ನಿಷ್ಠೆಗೆ ಮಹತ್ತ್ವವನ್ನು ತೋರಿಸಬೇಕೆಂದು ಈಶ್ವರನು ಒಳಗೆ ಮಾಯವಾದನು. ಈ ಸಂಗತಿಯನ್ನು ತಿಳಿದ ಸೂರಮ್ಮನು ಅಜ್ಞಾನ ಭವಿಗಳ ಮನಸ್ಸಿಗೆ ಶಿವನ ವಾಕ್ಯದ (ಶಾಸ್ತ್ರದ) ದೃಷ್ಟಾಂತವನ್ನು ತೋರಿಸುವೆನೆಂದು ಬೇಗನೆ ಮನೆಯ ಬಾಗಿಲ ಅಗುಳಿಯನ್ನು ಕಳಚಿದಳು. ಪರಬ್ರಹ್ಮನಾಥನಾದ ಶಿವನು ನಿಮ್ಮ ಕಣ್ಣಿಗೆ ತೋರುವನೇ ? ಬನ್ನಿ ನೋಡಿರಿ ಎಂದು ಬಾಗಿಲನ್ನು ತೆರೆದಳು. ಬ್ರಾಹ್ಮಣ ರೆಲ್ಲರೂ ಅಹಂಕಾರದಿಂದ (ನಾನು ಮುಂದೆ ತಾನು ಮುಂದೆ ಎಂದು) ಬೇಗನೆ ಒಳ ಹೊಕ್ಕು ಮನೆಯೊಳಗೆಲ್ಲಾ ದಿಮ್ ದಿಗಿಲ್ ಎಂಬಂತೆ ಓಡಾಡಿದರು.

ಗುಡಾಣಗಳ ಮರೆಯಲ್ಲಿ ದನಗಳ ಗೋದಲೆಯಲ್ಲಿ ದಾರಿ ದಾರಿಯಲ್ಲಿ ಸಂದು ಗೊಂದುಗಳಲ್ಲಿ ಮೇಲುಪ್ಪರಿಗೆಯಲ್ಲಿ ಅಡಿಗೆ ಮನೆಯಲ್ಲಿ ಕಣಜಗಳಲ್ಲಿ ತೊಲೆಸಾಲು ಕಂಬಗಳ ಮರೆಯಲ್ಲಿ ಅಡಕಲು ಗಡಿಗೆಗಳಲ್ಲಿ ಮಂಚದ ಕೆಳಗಡೆಯಲ್ಲಿ ಮಜ್ಜನ ಸಾಲೆ ಜಿಂದಿಗೆ ಸಿಂಹಾಸನದ ಬಳಿಯಲ್ಲಿ ನೋಡುತ್ತಾ ಇದ್ದರು. ಎಲ್ಲಿ ಅವನು ಓಡಿ ಹೋದನು ? ಸುತ್ತಲೂ ನೋಡಿದರೂ ಕಾಣುವುದಿಲ್ಲ. ಗೋಡೆಗಳು ಬಿಗಿಯಾಗಿವೆ. ಮನೆಗೆ ನುಸುಳುಗಂಡಿ (ಗಿಂಡಿ) ಸ್ವಲ್ಪವೂ ಇಲ್ಲ. ಈಕೆ ಏನು ಮಾಯ ಮಾಡಿದಳೋ ಕಾಣಬಾರದು, ಎಂದೆನ್ನುತ್ತಾ ಆಯಮ್ಮನನ್ನು ಮುತ್ತಿಕೊಂಡು ತೋರಿಸು ತೋರಿಸು ಎಂದು ಕೇಳುತ್ತಿದ್ದರಾ ದ್ವಿಜರು.

ಮಾನಿಯಾದ ಸೂರಾಂಬೆಯೇ, ನಿನ್ನ ಪ್ರಾಣಹಾನಿಯಾಗುವುದರೊಳಗೆ ಆ ಕುಲ ಹೀನನನ್ನು ತೋರಿಸು, ಮತ್ತೆಲ್ಲಿ ಅಡಗಿಸಿದ್ದೀಯೇ ಎಂದು ರಾಜನು ಕೇಳಿದ್ದಕ್ಕೆ ಅನು ಮಾನಗೊಳ್ಳದೆ ಶಿವಪೂಜಾ ಗದ್ದುಗೆಯನ್ನೂ ತೆರೆದು ತೋರಿಸಿದಳು.

ಅಲ್ಲಿ ಲಿಂಗರೂಪನಾಗಿ ಶತಕೋಟಿ ಸೂರ್ಯರ ತೇಜವುಳ್ಳವನಾಗಿ ಸೂರ್ಯ ಚಂದ್ರಾಗ್ನಿ ನೇತ್ರವುಳ್ಳವನಾಗಿ ನಿಷ್ಕಳಂಕನಾದ ಸಂಗಮೇಶ್ವರನು ತೋರಿದನು. ಮುನಿ ಗಳು ನಮಸ್ಕರಿಸುತ್ತಿದ್ದರು. ಭೂಮಿಯನೊಡೆದು ಲಿಂಗವು ಉದ್ಭವಿಸಿತು. ಮಹಾ ಧ್ವನಿಯಾಯಿತು. ಈ ಮಹಿಮೆಗೆ ಮಳೆಸುರಿಯುವ ಸಾದೃಶ್ಯವಾಯಿತು. ಬ್ರಾಹ್ಮಣರ ಮತ್ತು ರಾಜನ ಗರ್ವವು ನಾಶವಾಯಿತು. ಊರಿನವರೆಲ್ಲರೂ ಲಿಂಗಮೂರ್ತಿಯನ್ನು ನೋಡಿ ಬೆರಗಾದರು. ಅವರೆಲ್ಲರೂ ಜಾಂಗು, ಭಲರೆ, ಎಂದು ಮಂಗಳವಾಗಿ ಸ್ತುತಿ ಸುತ್ತಿದ್ದರು. ಭಕ್ತಾಂಗನೆಯರೆಲ್ಲರೂ ಸೂರಸಾನಿಗಳಿಗೆ ಆರತಿಯನೆತ್ತಿದರು.

ಆಗ ಸೂರಸಾನಿಯು ಎಲೈ ಜನರೇ, ಇವನೇ ವಿಶ್ವಕರ್ತನು, ಇವನೇ ವಿಶ್ವ ಭರ್ತನು, ಇವನೇ ವಿಶ್ವನಾಥನು, ಏಕೋರುದ್ರನು, ಅದ್ವಿತೀಯನು, ಬ್ರಹ್ಮನೂ ವಿಷ್ಣುವೂ ಹಂಸ ಹಂದಿಗಳಾಗಿ ಹುಡುಕಿದ ಲಿಂಗಮೂರ್ತಿಯೇ ಇವನು ಭರ್ಗೋ ದೇವನೇ ದೇವನು ಎಂದು ಸ್ವರ್ಗಲೋಕ ಭೂಲೋಕವೆಲ್ಲವೂ ತಿಳಿಯುವುದು. ನೀವು ತಿಳಿಯಲಾರದೆ ದುರ್ಗುಣಿಗಳಾದಿರಿ. ನಿಮ್ಮ ಮುಂದಿನ ಉತ್ತಮ ಮಾರ್ಗವನ್ನು

ಅರಿಯದೆ ಜರಿದ ಕಾರಣ ಯಮನು ನಿಮ್ಮನ್ನು ಬಹಳಕಾಲ ನರಕಕ್ಕೆ ಕೆಡವದೆ (ತಾಯಿಯ ಗರ್ಭವಾಸಕ್ಕೆ ತಳ್ಳದೆ) ಬಿಡುವನೇ ?-ಎಂದಳು.

ಆಗ ಜನರು–ಪ್ರಸಾದ ತೀರ್ಥಗಳನ್ನು ಯಾವ ಭಕ್ತನು ಸೇವಿಸುವನೋ ಅವನು ಶ್ರೇಷ್ಠನು, ಆ ರೂಪವನ್ನು ಹೊಂದಿಬಂದ ಪಾರ್ವತಿಯೇ ನೀನು. ನಿಮ್ಮನ್ನು ದಡ್ಡ ತನದಿಂದ ನಿಂದಿಸಿ ನಮಗೆ ನರಕದ ಭಾವಿಯಲ್ಲಿ ಮುಳುಗಿರುವ ವಿಧಿಯಾಯಿತು ಎಂದರು. ಅಯ್ಯೋ ನಾವು ಪಾಪಿಗಳು, ಕೋಪಿಗಳು, ಭ್ರಷ್ಟರು, ದುಷ್ಟರು, ನಷ್ಟರು ಎಂದು ಬ್ರಾಹ್ಮಣರು ನಮಸ್ಕರಿಸಿದರು. ಮೃಡನ ಮಹಿಮೆಯ ಘನತೆಗಳನ್ನು ಜಡ ರಾದ ನಾವೆತ್ತ ಬಲ್ಲೆವು ? ಲಿಂಗಪ್ರಾಣಿಯೇ ಕಾರುಣ್ಯಮೂರ್ತಿಯೇ ಎಂಬುದಾಗಿ ಭಕ್ತರೂ ರಾಜನೂ ಸೂರಸಾನಿಯನ್ನು ಹೊಗಳುತ್ತಾ ಕುಣಿಯುತ್ತಾ ನಮಸ್ಕರಿಸುತ್ತಾ ಓಲೈಸುತ್ತಿದ್ದರು. ಅನೇಕ ಗೋವುಗಳಿದ್ದರೂ (ಕೋಟಿಧೇನು) ಕಾಮಧೇನುವಿಗೆ ಸರಿಯಪ್ಪುದೇ ! ಜ್ಞಾನ ಶೂನ್ಯರೂ ಭಕ್ತಿನಷ್ಟರೂ, ಕೋಟಿಯಿದ್ದರೂ ಶಿವಧ್ಯಾನಿ ಗಳಾದ ಶರಣರ ಸಮಾನವಾಗಿ ಬಾರರು, ಭಕ್ತಕಾಯವೇ ಶಿವನ ಕಾಯ, ಶಿವನ ಪ್ರಾಣವೇ ಭಕ್ತನ ಪ್ರಾಣ ಹೀಗೆ ಶಿವನಿಗೂ ಭಕ್ತರಿಗೂ ಭೇದವಿಲ್ಲ ಎಂಬುದಾಗಿ ದ್ವಿಜರೂ ಭಕ್ತಿಸೇವೆಯನ್ನು ಮಾಡುತ್ತಿದ್ದರು.

ಹಾಲು ಹಾಲಿನಲ್ಲಿ ಬೆರೆದ ಹಾಗೆ ನೀರು ನೀರಿನಲ್ಲಿ ಕೂಡಿದ ಹಾಗೆ, ಕಾಂತಿಯುಳ್ಳ ಜ್ಯೋತಿಯು ಮತ್ತೊಂದು ಜ್ಯೋತಿಯನ್ನು ಅಪ್ಪಿದ ಹಾಗೆ ಜಗತ್ತಿಗೆ ಏಕ ಭಕ್ತಿಯನ್ನು ತಿಳುಹಿಸಿ ಸೂರಸಾನಮ್ಮನೂ ಲಿಂಗದಲ್ಲಿ ಬಯಲಾದಳು.

ಈ ಸೂರಸಾನಮ್ಮನ ಚರಿತ್ರೆಯನ್ನು ಕೇಳಿದರೆ ಬರೆದೋದಿ ರಚಿಸಿರೆ ಅವರಿಗೆ ಕರ್ಮ, ರೋಗ, ಗ್ರಹ, ಮೊದಲಾದವುಗಳ ಬಾಧೆಯಿಲ್ಲ. ಸರ್ವರಿಗೂ ಪುಣ್ಯಬರು ವುದು. ಪಾರ್ವತೀ ರಮಣನು ಸರ್ವರಿಗೂ ಸಾರೂಪ್ಯಪದವನ್ನಿತ್ತು ರಕ್ಷಿಸುತ್ತಾನೆ.

'ಸೂರಸಾನಿ' ಈ ನಾಲ್ಕು ಅಕ್ಷರದ ಹೆಸರನ್ನು ಪಠಿಸಿದವರಿಗೆ ಇಷ್ಟಫಲ ವಾಗುತ್ತದೆ.

ಮೂಜಗದೀಶನಾದ ಮಹೇಶನೇ ಸಂದೀಶನೇ ಲೇಸನ್ನು ಕೊಟ್ಟು ರಕ್ಷಿಸು.

## ವಿಮರ್ಶೆ

ಇಲ್ಲಿನವರೆವಿಗೂ ಹೊತ್ತಗೆಯಲ್ಲಿ ಇದ್ದುದರ ಸಾರಾಂಶವನ್ನು ಅದರಲ್ಲಿದ್ದಂತೆ ಹೇಳಿದುದಾಯಿತು. ಒಂದು ವಾಕ್ಯವೂ ನಮ್ಮದಾಗಿ ಅದರಲ್ಲಿ ಸೇರಿಲ್ಲ.

ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾರಾಧ್ಯರ ದರ್ಶನವನ್ನು ಸೂರಸಾನಮ್ಮನು ಪಡೆದಿದ್ದಳೆಂದು ಪಂಡಿತಾರಾಧ್ಯರ ಚರಿತ್ರೆಯಿಂದ ಗೊತ್ತಾಗುತ್ತದೆ. ಈಕೆಯೇ ಸೂರಸಾನಿ ಎಂದು ನಿರ್ಧರಿಸಲಿಕ್ಕೆ ಬರುತ್ತದೆ. ಉತ್ತರ ಕರ್ನಾಟಕದಲ್ಲಿ 'ಸಾನಿ' ಎಂಬ ಪದವನ್ನು ಮುಖ್ಯಸ್ಥಳು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಉದಾಹರಣೆ 'ಗೌಡಸಾನಿ'. ದೇಸಾಯರ ಮನೆಗಳಲ್ಲಿಯೂ ಪ್ರಮುಖರಾದ ಹೆಣ್ಣು ಮಕ್ಕಳಿಗೆ ಸಾನಿ ಎಂಬ ಉಪಪದವನ್ನು ಉಪಯೋಗಿಸುತ್ತಿದ್ದರೆಂದು ಕೆಲವು

ದೃಷ್ಟಾಂತಗಳಿಂದ ತಿಳಿಯಬಹುದಾಗಿದೆ. ಈಕೆಯು ಶಿವಭಕ್ತಳೆಂಬುದು ಈ ಚರಿತ್ರೆಯಿಂದ ಸ್ಪಷ್ಟವಾಗಿದೆ. ಈಕೆಯ ಲೌಕಿಕ ದೇಹಕ್ಕೆ ಸಂಬಂಧಿಸಿದ ಗಂಡನು ವಿಯೋಗವಾದಾಗ ನನಗೆ ಲಿಂಗಪತಿಯು ಅಂತರ್‌ಹೃದಯಾಧಿಪನಾಗಿರುವುದರಿಂದ ಪತಿವ್ರತಾ ಧರ್ಮವು ಹೋಗಿಲ್ಲವೆಂದು ನಿಶ್ಚಯಿಸಿದುದು ವಿಹಿತವಾದುದೇ ಆಗಿರುತ್ತದೆ. 'ಶರಣ ಸತಿ ಲಿಂಗ ಪತಿ' ಎಂದು ತಿಳಿದು ನಡೆಯಬೇಕಾದುದೇ ವೀರಶೈವ ಧರ್ಮ.

ಮದ್ರಾಸಿನ ಅಡ್ಯಾರ್ ಪುಸ್ತಕಾಲಯದಲ್ಲಿನ ಪಂಡಿತರಿಂದ ಸಂಪಾದಿಸಲ್ಪಟ್ಟು ಡಾ॥ ಕುರಜನ್‌ರಾಜ ಮಹಾಶಯರ ನೇತೃತ್ವದಲ್ಲಿ ಪ್ರಕಟವಾದ "ಅಪ್ರಕಾಶಿತಾ ಉಪನಿಷಧಃ (Unpublished Upanishads) ಎಂಬ ಒಂದು ಪುಸ್ತಕವಿದೆ. ಅದರಲ್ಲಿ 'ಶೈವ ಉಪನಿಷಧಃ' ಎಂಬ ಭಾಗವಲ್ಲಿ ಇರುವ "ರುದ್ರೋಪನಿಷತ್" ಎಂಬುದರಲ್ಲಿ "ಬ್ರಾಹ್ಮಣಃ ಶಿವಪೂಜಾರತಃ ಶಿವಭಕ್ತಿವಿಹೀನಶ್ಚೇತ್‌ಸ ಚಂಡಾಲ ಉಪಚಂಡಾಲಃ... ಅಧಮಶ್ಚಂಡಾಲೋಪಿ ಶಿವಭಕ್ತೋಪಿ ಬ್ರಾಹ್ಮಣಾಚ್ಛ್ರೇಷ್ಠತರಃ" ಇವೇ ಮುಂತಾದ ವಿಷಯಗಳಿವೆ. ಶಿವಮೊಗ್ಗಾ ಡಿಸ್ಟ್ರಿಕ್ಟ್ ಸಾಗರದ ತಾಲ್ಲೂಕು ಕೆಳದಿ ಸಂಸ್ಥಾನ ಹಿರಿಯ ಮಠದಲ್ಲಿ ಆ ಮಠದ ಶ್ರೀ ಸ್ವಾಮಿಗಳ ಕೃಪೆಯಿಂದ ದೊರೆತ ಕೈಬರಹದ ಪ್ರತಿಯಲ್ಲಿಯೂ ಧಾರವಾಡ ಜಿಲ್ಲಾ ಸವದತ್ತಿ ಗ್ರಾಮದಲ್ಲಿರುವ ಶ್ರೀ ಪಟ್ಟದ ಸ್ವಾಮಿಗಳವರಲ್ಲಿನ ಬರೆಹದ ಪ್ರತಿಯಲ್ಲಿಯೂ ಈ ಉಪನಿಷತ್ ಇರುತ್ತದೆ. ಕೆಳದಿ ಪ್ರತಿಯಲ್ಲಿ ಇದಕ್ಕೆ 'ಋಗ್ವೇದೋಪನಿಷತ್' ಎಂದು ಹೆಸರಿಡಲ್ಪಟ್ಟಿದೆ. ಮದರಾಸಿನಲ್ಲಿ ಮುದ್ರಣವಾದ ಉಪನಿಷತ್ತಿಗೂ ಬರೆಹದ ಪ್ರತಿಗಳಿಗೂ ಹೋಲಿಸಿದರೆ ಅಲ್ಲಲ್ಲಿ ಕೆಲವು ಪಾಠಾಂತರಗಳಿರುವುದಾದರೂ ಮೇಲೆ ಕಂಡ ವಾಕ್ಯಗಳು ಸ್ವಲ್ಪ ಹೆಚ್ಚು ಕಡಿಮೆಯಾಗಿ ಅವುಗಳಲ್ಲಿಯೂ ಬಂದು ಇದೇ ಅಭಿಪ್ರಾಯವೇ ವ್ಯಕ್ತವಾಗುತ್ತದೆ. ಆದುದರಿಂದ ಸೂರಸಾನಮ್ಮನು ಪಡೆದ ಶಿವಭಕ್ತಿಯು ಉತ್ತಮವಾದುದೆಂದು ಆಕೆಯು ಹೇಳಿದುದಕ್ಕೆ ಪೂರ್ವ ಪ್ರಮಾಣಗಳು ಈಗಲೂ ಸಿಕ್ಕುವುದೆಂದು ನಂಬಿಕೆಗೆ ಬರುವಂತೆ ಇದೆ. ಆದರೆ ವೀರಶೈವರು ಈಗ ಯಾರನ್ನೂ ನಿಂದಿಸದೆ ತಮ್ಮ ಶಿವಭಕ್ತಿಯನ್ನು ಉತ್ತಮಗೊಳಿಸಲು ಪ್ರಯತ್ನಿಸಬೇಕು. ಶಿವನ ಸಗುಣ ಪೂಜೆಗಿಂತಲೂ ನಿರ್ಗುಣ ಪೂಜೆಯು ಉತ್ತಮವಾದುದೆಂದೂ ಅದೇ ಲಿಂಗಪೂಜೆ ಎಂದು ತಿಳಿದು ಅಂತಹ ಶಿವಭಕ್ತಿಯನ್ನೇ ಹೊಂದಬೇಕು.

ಮೂಲಪ್ರತಿಯಾದ ಪದ್ಯದ ಪುಸ್ತಕದ ಕೊನೆಯ ಸ್ತೋತ್ರ ಪದ್ಯದಲ್ಲಿ 'ನಿರ್ವಾಣೇಶ' 'ನಂದೀಶ' ಎಂಬೆರಡು ಶಬ್ದಗಳು ಇರುವುದರಿಂದ ಈ ಶಬ್ದಗಳಲ್ಲಿನ ಹೆಸರುಳ್ಳ ಯಾರಾದರೊಬ್ಬರ ಶಿಷ್ಯರಾಗಿ ಈ ಕವಿಯಿರಬಹುದೆಂದು ತೋರುತ್ತದೆ. ಹೆಚ್ಚಾಗಿ ಏನೂ ಈಗ ತಿಳಿದುಬಂದಿಲ್ಲ.

ಸೂರಸಾನಮ್ಮನು ಇದ್ದ ಪೋರಾಂಡ ಎಂಬ ಗ್ರಾಮವು ಶ್ರೀಶೈಲಕ್ಕೆ ಪೂರ್ವ ದಿಕ್ಕಿನಲ್ಲಿ ಇರುವುದಾಗಿ ಇಲ್ಲಿ ಹೇಳಲ್ಪಟ್ಟಿದೆ. ಕೃಷ್ಣ (ಮಚಲಿಬಂದರ್) ಡಿಸ್ಟ್ರಿಕ್ಟಿನಲ್ಲಿ ಪೋರಾಂಕಿ ಎಂಬ ಊರಿರುವುದಾಗಿ ತಿಳಿಯಬರುವುದರಿಂದ ಸೂರಾಂಬೆಯು ಬಹುಶಃ ಈ ಪ್ರಾಂತದವಳೇ ಆಗಿರಬಹುದು. (ಸಂ. ೬೦, ೬೧, ೬೨, ೬೩)

# ೧೧. ಎಲ್ಲ ಪುರಾತನರ ಪುರಾಣ

ಈ ಹೆಸರಿನ ಒಂದು ಪುರಾಣವು ಓಲೆಯ ಪ್ರತಿಯಲ್ಲಿ ಇದೆ. ಹಾಸನ ಡಿಸ್ಟ್ರಿಕ್ಟ್ ಅರಸೀಕೆರೆ ಸಮೀಪದಲ್ಲಿ ಇರುವ ಹಾರನಹಳ್ಳಿ ಕೋಡೀ ಮಠದಲ್ಲಿ (ಶ್ರೀ ವಿರಕ್ತಮಠ) ಇದ್ದಿತು. ಇದನ್ನು ಶ್ರೀ ನಿರಂಜನ ನೀಲಲೋಚನ ಸ್ವಾಮಿಗಳವರು ಕೊಟ್ಟುದಕ್ಕಾಗಿ ಅವರ ಉಪಕಾರ ಸ್ಮರಣೆ ಮಾಡುತ್ತೇನೆ.

ಆರಂಭದಲ್ಲಿ "ಶ್ರೀಗುರು ಬಸವಲಿಂಗಾಯನಮಃ" "ಪುರತಗಣಂಗಳ ಪುರಾಣ ಬರೆವುದಕ್ಕೆ ಶುಭಮಸ್ತು" ಎಂದು ಬರೆಯಲ್ಪಟ್ಟಿದೆ.

ಮೊದಲೊಂದು ಪದ್ಯವು ಈ ರೀತಿ ಇದೆ–

ಶ್ರೀ ಗುರುವರನುಪದೇಶಿಸಿ
ದಾ ಘನಮಾರ್ಗದೆ ನಡೆದು ಶಿವೈಕ್ಯವು
ಹಾಗಣದತಿಶಯ ಮನೋನು
ರಾಗದಿ ಬಣ್ಣಿಸುವೆ ಸುಜನರಾಲಿಸಿ ಮುದದಿಂ

ಇದನ್ನು 'ಕಿತ್ತನಕೆರೆ ವೀರ' ಎಂಬವರು ರಚಿಸಿದ್ದಾರೆ.

ನೆರೆ ಶಿವಶರಣರೊಳಿರುವ ಗಣಂಗಳ
ನರಿದಷ್ಟು ಸಕಲ ಭಕ್ತರಿಗೆ
ಕರವ ಮುಗಿದು ಭಕ್ತಿಸರದಿ ಕಿತ್ತನಕೆರೆ
ಪುರದ ವೀರನು ಬಿನ್ನೈಸಿದನು.

ಅಲ್ಲಿಂದ ಮುಂದೆ ಕಲ್ಯಾಣದ ವರ್ಣನೆ. ಅಲ್ಲಿ ಇದ್ದ ಬಸವೇಶ್ವರನೇ ಮೊದಲಾದ ಶಿವಗಣಂಗಳ ಸಂಬಂಧವಾದ ವಿಷಯಗಳಿವೆ.

ಕವಿಯು ಪಾಲ್ಕುರಿಕೆ ಸೋಮ, ಕೆರೆಯ ಪದ್ಮರಸ, ಹಂಪೆಯ ಹರಿದೇವ ಉದ್ಭಟ, ಈ ಕವಿಗಳನ್ನು ಹೊಗಳಿದ್ದಾನೆ. (೧೩-೧೫) ಶೀಲ ಶಿರೋರತ್ನ ಶ್ರೀಶೈಲ ದೇವರನ್ನು ಸ್ತುತಿಸಿದ್ದಾನೆ. (೧೬) ತಾನು ರುದ್ರಮೂರ್ತಿಯಾದ ಗುರುಶಾಂತೇಶನ ಕರಪದ್ಮ ಸಂಭವನಾದ ವೀರಭದ್ರನ ಸುತನೆಂದು ಹೇಳಿಕೊಂಡಿದ್ದಾನೆ. (೧೭)

ಕಲ್ಯಾಣದಲ್ಲಿ ಜಂಗಮಲಿಂಗವಿರುವ ವಿರಕ್ತಮಠಗಳೂ ಪಂಚಪುರುಷವನ್ನು ಪಡೆದ ಮುನಿಗಳೂ ಶೀಲ ಸಂಪನ್ನರ ಮನೆಗಳೂ ಅಲ್ಲಲ್ಲಿ ಪ್ರಕಾಶಿಸುತ್ತಿದ್ದುವೆಂದು ಹೇಳುತ್ತಾನೆ. ಬಸವೇಶ್ವರನ ಮನೆಯ ವರ್ಣನೆ ಇದೆ. ಬಸವೇಶ್ವರನ ಒಡ್ಡೋಲಗಕ್ಕೆ ಶ್ರೇಷ್ಠರಾದ ಗಣಂಗಳು ಬಂದ ವಿಷಯವಿದೆ (೩೩-೩೫). ಚನ್ನ ಬಸವ, ಅಪ್ಪಣ್ಣ, ಅಮುಗಿದೇವ, ಕಿನ್ನರಯ್ಯ, ಕೇಶಿರಾಜ, ಕನ್ನದ ಮಾರಯ್ಯ, ಹೊನ್ನಯ್ಯಗಳು, ಸುಂಕದ ಬಂಕಯ್ಯ, ಅಂಕದ ಮಾರಯ್ಯ, ಢಕ್ಕೆ ಮಾರಯ್ಯ, ಲೆಂಕ ಮಂಚಣ್ಣ, ಹೊಡೆಪುಲ್ಲ ಬಂಕಯ್ಯ, ಮಡಿವಾಳ ಮಾಚಯ್ಯ,

ಮೋಳಿಗಯ್ಯ, ಕೂಗಿನ ಮಾರಯ್ಯ, ಬಾಲಶಾಂತಯ್ಯ, ಶೂಲದ ಬ್ರಹ್ಮಯ್ಯ, ತಿರು ನೀಲಕಂಠಯ್ಯ, ತಿರುನಾಳ್ ಪೋವರು, ತಿರುನೀಲನಕ್ಕರು, ಹೆಂಡದ ಮಾರಯ್ಯ, ಇಂಡೆಯ ಶಾಂತಯ್ಯ, ಗಂಡುಗತ್ತರಿಯ ನಾಚಯ್ಯ, ಕಲಿಕೇತ ಬ್ರಹ್ಮಯ್ಯ, ಇಳಿಹಾಳ ಬಂಕಯ್ಯ, ನಲುಪ ಬೊಂಡಯ್ಯ? ಆಯಿದಕ್ಕಿ ಮಾರಯ್ಯ, ಮಾದಾರ ಕಕ್ಕಯ್ಯ, ಸೇದಿ ರಾಜಯ್ಯ, ಮಂಡಿಗೆಯ ಮಾದಿರಾಜಯ್ಯ, ಗೌಡ ಮಾರಣ್ಣ, ಜಡೆಯ ದಾಸಯ್ಯ, ಕೊಡದ ಮಾರಿತಂದೆ, ಎಚ್ಚರಿಕೆಯ ಮುತ್ತಯ್ಯ, ನಿಜಲಿಂಗ ಚಿಕ್ಕಯ್ಯ, ನಿಜಗುಣ ದೇವರು, ಅಜಗಣ್ಣ, ಆದಯ್ಯ, ಅಕ್ಕನಾಗವ್ವೆ, ಚೋಳಕ್ಕ, ಚಂಗಳೆ, ನಿಂಬಿಯಕ್ಕ, ನೀಲಮ್ಮ, ಕೋಳೂರು ಕೊಡಗೂಸು, ಸತ್ಯಕ್ಕ, ಮುಕ್ತಾಯಿ ಮೊದಲಾದವರು ಒಡ್ಡೋಲಗಕ್ಕೆ ಬಂದಿದ್ದರೆಂತಲೂ ಅಲ್ಲಿ ಕುಳಿತುಕೊಂಡಿದ್ದರೆಂತಲೂ ಹೇಳಲ್ಪಟ್ಟಿದೆ.

ಕೈಲಾಸದ ಪರಮಾನಂದ ಗಣೇಶ್ವರನು ಕೈಲಾಸಕ್ಕೆ ದಾಳಿಯಿಟ್ಟಿತಗರ ರಾಕ್ಷಸ ನನ್ನು ಕೊಂದು ಗರ್ವದಿಂದ ಶಿವನ ಸಭೆಯ ಮುನಿಗಳನ್ನು ಲಕ್ಷಿಸದಿರಲು ನೀನು ಪಡಿ ಹಾರಿಯಾಗಿ ಹುಟ್ಟೆಂದು ಶಾಪಕೊಟ್ಟರು. ಶಿವನು ಭೂಲೋಕದಲ್ಲಿ ಬಸವನಿಂದ ನಿನಗೆ ಶಾಪ ಪರಿಹಾರವಾಗುವುದೆಂದು ಹೇಳಿಕಳುಹಿಸಿಕೊಟ್ಟನು. ಅವನೇ ಪಡಿಹಾರಿ ಕಲಕೇತ ಬ್ರಹ್ಮಯ್ಯ ಎನಿಸಿಕೊಂಡು ಬಸವೇಶ್ವರನ ದರ್ಶನಕ್ಕೆ ಬಂದನು. ನಮಸ್ಕರಿಸಿದನು. ಅಲ್ಲಿ ನಾಟ್ಯವಾಡಿದನು. ಬಸವೇಶನು ಮೆಚ್ಚಿದನು, ಸಭೆಯವರೂ ಮೆಚ್ಚಿದರು. ಆಗ ಕಲಕೇತನು 'ಬಹುರೂಪು ಚೌಡಯ್ಯ' ಎಂಬ ಶರಣನ ವಿಷಯವನ್ನು ಹಾಡಿದನು. ಆಗ ಬಸವರಸನು ಆ ಕಲಕೇತ ಬ್ರಹ್ಮಯ್ಯನನ್ನು ಕರೆದು "ನೀನು ಭೂಮಿಯಲ್ಲಿ ಮೆರೆದ ಶೀಲ ಸಂಪಾದನೆಯ ಸಂಬಂಧಿಗಳನ್ನು ಮೆರೆಯಿಸುವಂತೆ, ಶರಣರು ಕೇಳಲು ಹಾಡು" ಎಂದು ಹೇಳಿದನು. ಆಗ ಬಸವಾದಿ ಪ್ರಮಥರ ಮುಂದೆ ಕಲಕೇತ ಬ್ರಹ್ಮಯ್ಯನು ಶರಣರು ಮಾಡಿದ ಮಹಿಮೆಯನ್ನು ಹೇಳುತ್ತಾನೆ. ಇದೇ ಎಲ್ಲ ಪುರಾತನರ ಪುರಾಣ.

ಇದರಲ್ಲಿ ಮೂರು ಸಂಧಿಗಳಿಗೆ, ೭೧೦ ಪದ್ಯಗಳಿವೆ. ೩ ಸಂಧಿಗಳ ಆರಂಭದ ಸಾಂಗತ್ಯ ಕೂಡಿ ೭೧೩ ಪದ್ಯಗಳಿವೆ. (ಈ ಪುಸ್ತಕವು ಇನ್ನಾರಲ್ಲಿಯೂ ಇದ್ದರೆ ದಯ ವಿಟ್ಟು ಸದ್ಧರ್ಮದೀಪಿಕೆಯ ಕಾರ್ಯಾಲಯಕ್ಕೆ ಕಳುಹಿಸಿಕೊಡೋಣವಾಗಲಿ ಎಂದು ನೋಡಿ ಪುನಃ ವಾಪಸು ಮಾಡಲ್ಪಡುವುದೆಂದೂ ಸಮಾಜದಲ್ಲಿ ಪ್ರಾರ್ಥನೆ.)

–ಪ್ರಕಾಶಕ.

(ಸಂ. ೯೯-೧೦೦)

## ೧೨. ಅಕ್ಕಮಹಾದೇವಿಯ ಕೊರವಂಜಿ ವಚನಗಳು

೧. ಎಲ್ಲವನು ಪೇಳುವೆ ಎಲ್ಲಿರುವೆ ಕೊರವಿ ? ಕಲ್ಯಾಣದಾಚೆ ವೈಕುಂಠವಮ್ಮ. ಅಲ್ಲಿಂದಲೆಲ್ಲವನು ಕೇಳಿ ನಾ ಬಂದೆ. ವೇಳೆಯಾಯಿತು ಹೋಗಿ ಎಡೆಮಾಡಿ ತಾರೆ. ಮೇಲಾದ ಪಂಚ ಭಕ್ಷ್ಯವನೀಡಿ ತಾರೆ. ಚನ್ನಮಲ್ಲಿಕಾರ್ಜುನನ ವರ ಉಂಟೆಯಮ್ಮ.

೨. ಎನ್ನ ಪಿರಿಯಂಗೆ ಎಂಥಾ ನಿಷ್ಠೆಯೇ ಅಮ್ಮ. ಎಂಥಾ ನಿಷ್ಠೆಯೇ ತಾಯಿ, ಅನ್ಯ ದೈವಕ್ಕೆ ತಲೆವಾಗದೆ ಆಚಾರದಲ್ಲಿ ನಡೆಯೆಂದ. ಪ್ರತಿ ಪೂಜೆಯ ಮಾಡದೆ ಪರದಲ್ಲಿ ನಿಂದರೆ ನಿಷ್ಠೆಯಮ್ಮ. ಆ ಕರದೊಳು ಲಿಂಗವಿದ್ದು ಕಾಂಚನಕ್ಕೆ ಕೈಯಾನದೆ ಅರಿವಿನಲ್ಲಿ ನಿಂದರೆ ನಿಷ್ಠೆಯಮ್ಮ. ಅನಾದಿ ಲಿಂಗವೇ ಅಮ್ಮ. ಕರಕ್ಕೆ ಬಂದಿತ್ತು. ಆಲೋಕನವ ಮರೆತು ಕಾಕುದೈವವ ಹಿಡಿದರೆ ತಮಗೆ ಗುರಿಯಾದೆಯಮ್ಮ. ಈ ಲಿಂಗಕ್ಕೆ ನಿಷ್ಠೆ ಬೇಕಮ್ಮ. ನಿಷ್ಠೆಯಿಲ್ಲದೆ ಪೂಜೆಯ ಎಷ್ಟುಕಾಲ ಮಾಡಿದರೇನಮ್ಮ. ನಷ್ಟವಲ್ಲದೆ ದೃಷ್ಟ ಉಂಟೇ ಅಮ್ಮ. ಇದು ಕಾರಣ ಒಂಬತ್ತು ಬಾಗಿಲ ಮುಚ್ಚಿ ಒಳಕೊಬ್ಬರನ್ನು ಬಿಡದೆ ಇಳೆಯ ಕುಂಭಕದೊಳಗಳವಮ್ಮ. ಮನವನೀಡೆ ಗಮ್ಮನೆ ಹೋಗಿ ಸುಮ್ಮನೆ ತಾರೆ. ಸಂಭ್ರಮದ ಪೂಜೆಯ ಕಟ್ಟಿ ಎಡಬಲನ ಮರೆಯೆ. ಬೀಗವ ಕೊಳ್ಳೆ ಕುಂಭಿನಿಯ ಬಾಗಲಿವ ತೆಗೆಯೆ, ಒಳಪೊಕ್ಕು ನಿಲ್ಲೆ. ಪರತತ್ವದೊಳಗೆ ನಿಂದ ನಿಷ್ಠೆಗೆ ನಮೋ ನಮೋ ಎಂಬೆನೆ ಅಮ್ಮ.

೩. ದೇವರ (ಮಹಾದೇವನ) ಮಾಡುವ ಕ್ರಮ ಎಂಥಾದ್ದೆಯಮ್ಮ ? ಸದ್ಭಕ್ತಿ (ಶ್ರದ್ಧಾಭಕ್ತಿ?)ಯಿಂದ ಭಕ್ತಿಸ್ಥಲವನರಿದು ಸುಚಿತ್ತವೆಂಬ ಹಸ್ತದಿಂದ ಘ್ರಾಣವೆಂಬ ಮುಖದಲ್ಲಿ ಲಿಂಗದೇವನಿಗೆ ಗಂಧವನರ್ಪಿಸಬೇಕೆಯಮ್ಮ. ನೈಷ್ಠಿಕಾಭಕ್ತಿಯಿಂದ ಮಹೇಶ್ವರನನರಿದು ಸುಬುದ್ಧಿ ಎಂಬ ಹಸ್ತದಿಂದ ಜಿಹ್ವೆ ಎಂಬ ಮುಖದಲ್ಲಿ ಲಿಂಗದೇವನಿಗೆ ರಸವನುಣಿಸಬೇಕೆ ಅಮ್ಮ. ಅವಧಾನ ಭಕ್ತಿಯಿಂದ ಪ್ರಸಾದಿಯನರಿದು ನಿರಹಂಕಾರ ಹಸ್ತದಿಂದ ನೇತ್ರವೆಂಬ ಮುಖದಲ್ಲಿ ಲಿಂಗದೇವನಿಗೆ ರೂಪವನುಣಿಸಬೇಕೆಯಮ್ಮ.

ಅನುಭಾವ ಭಕ್ತಿಯಿಂದ ಪ್ರಾಣಲಿಂಗವನರಿದು ಸುಮನವೆಂಬ ಹಸ್ತದಿಂದ ತ್ವಕ್ಕೆಂಬ (ಚರ್ಮದ?) ಮುಖದಲ್ಲಿ ಲಿಂಗದೇವನಿಗೆ ಸ್ಪರ್ಶವನುಣಿಸಬೇಕೆ ಅಮ್ಮ. ಆನಂದದಿಂದ ಶರಣಸ್ಥಲವನರಿದು ಸುಜ್ಞಾನವೆಂಬ ಹಸ್ತದಿಂದ ಶ್ರೋತ್ರವೆಂಬ ಮುಖ

ದಲ್ಲಿ ಲಿಂಗದೇವನಿಗೆ ಶಬ್ದವನುಣಿಸಬೇಕೆ ಅಮ್ಮ. ಸಮರತಿಯಿಂದ (ಸಮರಸ ಭಕ್ತಿಯಿಂದ?) ಐಕ್ಯವನರಿದು ಸದ್ಭಾವ ಹಸ್ತದಿಂದ ಆತ್ಮವೆಂಬ ಮುಖದಲ್ಲಿ ಲಿಂಗದೇವನಿಗೆ ತೃಪ್ತಿಯನುಣಿಸಬೇಕೇ ಅಮ್ಮ. ಈ ಲಿಂಗಕ್ಕೆ ಮುಖಗಳು ಎಷ್ಟೆಷ್ಟೆ ಅಮ್ಮ ? ಒಂದೇ ಎಂಟಾದವೆಯಮ್ಮ. ಎರಡೇ ಮೂರಾದವೆ ಅಮ್ಮ. ಆ ಮೂವತ್ತಾರೇ ಇನ್ನೂರ ಹದಿನಾರಾದವೆ ಅಮ್ಮ. ಇನ್ನೂರ ಹದಿನಾರಾಗಿ ಲಿಂಗದೇವರ ತೃಪ್ತಿಯ ನೋಡಿದನೆ ಅಮ್ಮ. ಇಷ್ಟು ದೇವರಿಗೆ ಒಂದೇ ದೇವನ ವರವು ಉಂಟೆ ಅಮ್ಮ. ಆ ದೇವನಲ್ಲಿ ಉಂಟಾದರೆ ಒಂದೇ ಎರಡೇ ಮೂರೇ ನಾಲ್ಕೇ ಐದೇ ಆರೇ ರೂಪಿತವೆಂಬ ಎಕ್ಕಿಯ ಬೆನಕನ ವರದಿಂದ ಪೇಳುತ್ತಿರ್ದನೆ ಅಮ್ಮ.

(ಸಂ. ೪೩)

# ೧೩. ನಿಜಾಚರಣೆ ಸಂಬಂಧ ಬೋಧಾಮೃತ (ನಿಲುಕಡೆ) ಚಿದೈಶ್ವರ್ಯ ಚಿದಾಭರಣ ನಿಜಾಚರಣೆ

ಈ ಹೆಸರಿನ ವಚನಗ್ರಂಥ ಒಂದು ಪೂರ್ವಿಕ ಮಹನೀಯರಿಂದ ರಚಿಸಲ್ಪಟ್ಟಿದೆ. ಇದರಲ್ಲಿ ವೀರಶೈವರು ಒಂಬತ್ತು ಸ್ಥಲಗಳಲ್ಲಿ ಆಚರಿಸುವ ವಿಧಾನವು ನಿರೂಪಿಸಲ್ಪಟ್ಟಿದೆ. ಒಂದೊಂದು ಸ್ಥಲಕ್ಕೂ ಆ ಸ್ಥಲದ ಲಿಂಗಾನುಭಾವ ಎಂಬುದಾಗಿ ಶಿರೋಲೇಖವಿಟ್ಟು ವಚನಗಳು ಸಂಸ್ಕೃತ ಗ್ರಂಥ (ಶ್ಲೋಕ) ಮತ್ತು ಕನ್ನಡ ಗ್ರಂಥರೂಪವಾಗಿ ಆ ಸ್ಥಲಗಳಲ್ಲಿ ಆಚರಿಸುವ ವಿಧಾನವು ಚೆನ್ನಾಗಿ ವಿವರಿಸಲ್ಪಟ್ಟಿದೆ. ಮೊಟ್ಟಮೊದಲು ಸರ್ವಸಂಗಪರಿತ್ಯಾಗಸ್ಥಲ ಎಂಬುದು ಹೇಳಲ್ಪಟ್ಟು ಕೊನೆಯಲ್ಲಿ ಮೂಲಸೂತ್ರ ಸಮಾಧಿಸ್ಥಲ ಎಂಬುದು ಹೇಳಲ್ಪಟ್ಟಿರುವುದರಿಂದ ಒಂಬತ್ತು ಸ್ಥಲದ ವಚನಗಳು ಸೇರಿ ಒಟ್ಟು ಹನ್ನೊಂದು ಸ್ಥಲಗಳು ಇದರಲ್ಲಿವೆ. ಈ ಗ್ರಂಥವನ್ನು ಶಾಂತಮಲ್ಲಸ್ವಾಮಿಗಳ ಕರಕಮಲದಲ್ಲುದ್ಭವರಾದ ಗುರುಸಿದ್ಧಸ್ವಾಮಿಗಳು ಶ್ರೀಶೈಲದಲ್ಲಿದ್ದಾಗ ರಚಿಸಿದಂತೆ ತಿಳಿಯಬರುತ್ತದೆ. ಈ ಸ್ವಾಮಿಗಳು ತಮ್ಮ ಪೂರ್ವಪರಂಪರೆಯನ್ನು ಈ ರೀತಿ ಹೇಳಿಕೊಂಡಿದ್ದಾರೆ–

ಶ್ರೀಮದನೇಕ ಲೋಕವಿಸ್ತಾರ ಕಾರಣರೂಪ, ಸತ್ತುಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ, ಪರತರ ಬ್ರಹ್ಮಾನುಭಾವ ಸಾರ್ವಭೌಮ, ಷಟ್‌ಸ್ಥಲ ಸ್ಥಾಪನಾಚಾರ್ಯ, ಪಂಚಾಚಾರ ಪ್ರಮಥನಾಯಕ, ಸರ್ವಾಚಾರ ನಿಷ್ಠಾಗರಿಷ್ಠ, ಲಿಂಗಲೋಲುಪ್ತ, ಲಿಂಗಭೋಗೋಪಭೋಗಿ, ಜಂಗಮಾನುಭಾವ, ಸದ್ಭಕ್ತ ಹೃನ್ಮಂದಿರವಾಸ, ನಿತ್ಯಕಲ್ಯಾಣೋತ್ಸವ, ಪೂರ್ಣಾವತಾರ್ಯ, ಲಿಂಗಲೀಲಾನಂದ, ಏಕವಿಂಶತಿಯುಗಸ್ಥಾಪನಾಚಾರ್ಯವರ್ಯ, ಮಂಜುಳಾಂತರಂಗ, ಮನುಮುನಿವಂದ್ಯಪ್ರದಾಯಕ, ತ್ರೈದಶ ಪರ್ವತಾಧೀಶ್ವರ, ಮದನಮರ್ದನ, ಮಾಯಾಕೋಲಾಹಲ, ಅಷ್ಟಾವರಣಸ್ವರೂಪ, ತ್ರಿವಿಧಾನುಗ್ರಹ ಪ್ರತಿಪಾದಕ, ತ್ರಿವಿಧಪಾದೋದಕ ಪ್ರಸಾದ ಲೋಲುಪ್ತ, ತ್ರಿವಿಧಾಚಾರ ಸನ್ಮೋಹಿ, ತ್ರಿಗುಣಾನಂದಭರಿತ, ತ್ರಿಮಲದೂರ, ನಿರ್ಮಳ ನಿಃಕಳಂಕ ನಿಃಶೂನ್ಯ ನಿರಂಜನ ಅನಿಮಿಷಾರಾಧ್ಯ ತ್ರಿವಿಧ ಲಿಂಗಾನುಭವ, ಅಖಿಳಾಂಡ ಪ್ರತಿಷ್ಠಾಪ್ರದಾಯಕ, ಸದ್ಧರ್ಮಸ್ವರೂಪ, ಸತ್ಕ್ರಿಯಾ ಸಮ್ಯಕ್‌ಜ್ಞಾನ ಸದಾಭರಿತ, ನಿತ್ಯತೃಪ್ತಾನಂದ, ಮಂತ್ರಸ್ವರೂಪ, ಅನಂತ ಸೂರ್ಯಚಂದ್ರಾಗ್ನಿಪ್ರಕಾಶ, ಅಜ್ಞಾನತಿಮಿರಾಂಧಸ, ಕಾರಣಾವತಾರ್ಯ, ಸರ್ವಾಜ್ಞಾ ಪ್ರದಾಯಕ, ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗೆ ಮಾತೃಸ್ವರೂಪ, ವಾಚಾತೀತ ವರ್ಣಾತೀತ ಭಾವತೀತ, ಜ್ಞಾನಾತೀತ, ಚಿತ್ಕಲಾಸ್ವರೂಪ, ಅಯೋನಿಸಂಭವ, ಅಜಡಸ್ವರೂಪ, ಬತ್ತೀಸಕಳಾಮೂರ್ತಿ, ಜರಾಮರಣ ಸಂಸ್ಕೃತಿದೂರ ಪರವೀರಶೈವಮತ ಸ್ಥಾಪನಾಚಾರ್ಯ, ನಿಜಶಿವಯೋಗ ಭರಿತಾನಂದಮೂರ್ತಿ, ಗುರುಮಾರ್ಗಾಚಾರ ಪ್ರತಿಷ್ಠಾಪ್ರದಾಯಕ, ಅನಾಚಾರಸಂಹಾರ

ಮಹಿಮಾಸ್ವರೂಪ, ಸದ್ಭಕ್ತ ಜಿಹ್ವಾಗ್ರಹೃನ್ಮಂದಿರವಾಸ, ಏಕವಿಂಸತಿ ದೀಕ್ಷಾಬೋಧಾ ಸ್ವರೂಪ, ಷಡ್ಗುಣೈಶ್ವರ್ಯ ಸಂಪತ್ಕರವನುಳ್ಳ ಮುಕ್ತಿಪ್ರದಾಯಕ, ಮೂಲಮಂತ್ರ ಮೂರ್ತಿ, ಲೋಕಪಾವನಾರ್ಥ, ಕೂಡಲಸಂಗಮೇಶ್ವರನ ಚಿದ್ಗರ್ಭೋದಯ ಬಸವ ದಂಡನಾಥಪ್ರಮಥಗಣಂಗಳ ಭಕ್ತಿಹಿತಾರ್ಥವಾಗಿ ಅವತರಿಸಿದಂತಹ.

ವಿರಾಣ್ಮೂರ್ತಿ ಅನಾದಿಗಣೇಶ್ವರ, ಅನಾದಿಗಣೇಶ್ವರರ ಶಿಷ್ಯ ಆದಿಗಣೇಶ್ವರ, ಆದಿಗಣೇಶ್ವರರ ಶಿಷ್ಯನಿರ್ಮಾಯ ಗಣೇಶ್ವರ, ನಿರ್ಮಾಯಗಣೇಶ್ವರರ ಶಿಷ್ಯ ನಿರಂಜನ ಗಣೇಶ್ವರ, ನಿರಂಜನಗಣೇಶ್ವರರ ಶಿಷ್ಯ ಜ್ಞಾನಾನಂದಗಣೇಶ್ವರ, ಜ್ಞಾನಾನಂದಗಣೇಶ್ವರರ ಶಿಷ್ಯ ಆತ್ಮನೆಂಬ ಗಣೇಶ್ವರ, ಆತ್ಮನೆಂಬ ಗಣೇಶ್ವರರ ಶಿಷ್ಯ ಅಧ್ಯಾತ್ಮನೆಂಬ ಗಣೇಶ್ವರ, ಅಧ್ಯಾತ್ಮನೆಂಬ ಗಣೇಶ್ವರರಶಿಷ್ಯ ರುದ್ರನೆಂಬ ಗಣೇಶ್ವರ, ರುದ್ರನೆಂಬ ಗಣೇಶ್ವರರ ಶಿಷ್ಯ ಬಸವಪ್ರಭುದೇವರು, ಬಸವಪ್ರಭುದೇವರ ಶಿಷ್ಯ ಆದಿಲಿಂಗದೇವರು, ಆದಿಲಿಂಗ ದೇವರ ಶಿಷ್ಯ ಚನ್ನವೀರೇಶದೇವರು, ಚನ್ನವೀರೇಶದೇವರ ಶಿಷ್ಯ ಹರದನಹಳ್ಳಿಯ ಗೋಸಲದೇವರು, ಗೋಸಲದೇವರ ಶಿಷ್ಯ ಶಂಕರದೇವರು, ಶಂಕರದೇವರ ಶಿಷ್ಯ ದಿವ್ಯ ಲಿಂಗದೇವರು, ದಿವ್ಯಲಿಂಗದೇವರ ಶಿಷ್ಯ ಚೆನ್ನಬಸವೇಶ್ವರದೇವರು, ಚೆನ್ನಬಸವೇಶ್ವರ ದೇವರ ಶಿಷ್ಯ ಗುರುಸಿದ್ಧೇಶ್ವರಸ್ವಾಮಿಗಳು,(ಇವರೇ ತೋಂಟದ ಸಿದ್ಧಲಿಂಗಸ್ವಾಮಿಗಳು) ಇವರ ಶಿಷ್ಯ ಮರುಳುಸಿದ್ಧೇಶ್ವರ ಸ್ವಾಮಿಗಳು, ಮರುಳುಸಿದ್ಧೇಶ್ವರ ಸ್ವಾಮಿಗಳ ಶಿಷ್ಯ ರೇವಣಸಿದ್ಧೇಶ್ವರ ಸ್ವಾಮಿಗಳು, ರೇವಣಸಿದ್ಧೇಶ್ವರಸ್ವಾಮಿಗಳವರ ಶಿಷ್ಯ ಶಿವಲಿಂಗೇಶ್ವರ ಸ್ವಾಮಿಗಳು, ಶಿವಲಿಂಗೇಶ್ವರ ಸ್ವಾಮಿಗಳವರ ಶಿಷ್ಯ ನಿರಂಜನೇಶ್ವರ ಸ್ವಾಮಿಗಳು, ನಿರಂಜನೇಶ್ವರ ಸ್ವಾಮಿಗಳವರ ಶಿಷ್ಯ ಮರಿಬಸವಲಿಂಗೇಶ್ವರರು,ಮರಿಬಸವಲಿಂಗೇಶ್ವರರ ಶಿಷ್ಯ ಸ್ವತಂತ್ರಸಿದ್ಧಲಿಂಗೇಶ್ವರ ಸ್ವಾಮಿಗಳು, ಸ್ವತಂತ್ರಲಿಂಗೇಶ್ವರ ಸ್ವಾಮಿಗಳವರ ಶಿಷ್ಯ ಚನ್ನಮಲ್ಲೇಶ್ವರ ಸ್ವಾಮಿಗಳು, ಚನ್ನಮಲ್ಲೇಶ್ವರ ಸ್ವಾಮಿಗಳವರ ಶಿಷ್ಯ, ಚನ್ನಂಜೇಶ್ವರ ಸ್ವಾಮಿಗಳವರು, ಚನ್ನಂಜೇಶ್ವರ ಸ್ವಾಮಿಗಳವರ ಶಿಷ್ಯ ಗುರುಶಾಂತೇಶ್ವರ ಸ್ವಾಮಿಗಳು, ಗುರುಶಾಂತೇಶ್ವರ ಸ್ವಾಮಿಗಳ ಶಿಷ್ಯ ಶಾಂತಮಲ್ಲ ಸ್ವಾಮಿಗಳು, ಆ ಶಾಂತಮಲ್ಲ ಸ್ವಾಮಿಗಳ ಕರಮನಭಾವವಲ್ಲುದಯವಾದ ಗುರುಸಿದ್ಧಲಿಂಗ ನಾನಯ್ಯ.

ಈ ಪರಂಪರೆಯಲ್ಲಿ ಅನಾದಿಗಣೇಶ್ವರನ ಮೊದಲು ಮಾಡಿಕೊಂಡು ಸಿದ್ಧೇಶ್ವರ ಸ್ವಾಮಿಗಳು (ಇವರೇ ಪ್ರಸಿದ್ಧರಾದ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು-ಎಡೆಯೂರು ಸಮಾಧಿಗತರಾದವರು) ಎಂಬುವವರಿಗೆ ಹರದನ ಹಳ್ಳಿಯ ಶೂನ್ಯಸಿಂಹಾಸನದ ಮಹಾಸ್ವಾಮಿಗಳ ಪರಂಪರೆಯಾಗಿದೆ. ಆ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ರಚಿಸಿದ ಷಟ್‌ಸ್ಥಲಜ್ಞಾನಸಾರಾಮೃತ (ಸಿದ್ಧೇಶ್ವರ ವಚನ) ಎಂದು ಪ್ರಸಿದ್ಧವಾದ ವಚನಗಳಲ್ಲಿ ಹೇಳಿರುವ ಪರಂಪರೆಗೆ ಇದು ಸರಿಹೋಗುತ್ತದೆ. ಈ ಮಹಾಸ್ವಾಮಿಗಳವರ ತರುವಾಯ ಬೋಳುಬಸವ ಮಹಾಸ್ವಾಮಿಗಳು ಕಲ್ಯಾಣದ ಪರಂಪರೆಯ ಪೀಠವನ್ನು ಅಲಂಕರಿಸಿದರೆಂದು ನಿರಂಜನ ವಂಶರತ್ನಾಕರ ದಿಂದ ತಿಳಿದುಬರುತ್ತದೆ. ಮೇಲೆ ಕಂಡ ಪರಂಪರೆಯಲ್ಲಿ ಸಿದ್ಧಲಿಂಗ ಮಹಾಸ್ವಾಮಿಗಳ

ತರುವಾಯ ಮರುಳು ಸಿದ್ಧೇಶ್ವರ ಸ್ವಾಮಿಗಳು ಹೇಳಲ್ಪಟ್ಟಿರುವುದರಿಂದ ಅಲ್ಲಿಂದ ಈ ಪರಂಪರೆಯು ಬೇರೆಯಾಗಿ ಬಂದಿದೆ. ಬಹುಶಃ ಇದು ಹರದನಹಳ್ಳಿಯ ಪೀಠದ ಮುಂದಿನ ಪರಂಪರೆಯಾಗಿರಬೇಕು. ಏಕೆಂದರೆ ಗುರುಪುರದ ಮೇಲುಮಠದ ಮಹಾ ಮಂದಿರದ ಮೇಲು ಮಂಟಪ ಶೂನ್ಯಸಿಂಹಾಸನಕ್ಕೆ ಮೂಲ ಮೂರ್ತಿಯಾದ ಮರಿಮಹಂ ತೇಶ್ವರ ಸ್ವಾಮಿಗಳಿಂದ ಅನುಗ್ರಹ ಹೊಂದಿದ ಬಸವಪ್ರಭುಸೆಟ್ಟಿಯು ಶಿವೈಕ್ಯನಾದಮೇಲೆ ವೈರಾಗ್ಯವನ್ನು ತಾಳಿ ಈ ಗ್ರಂಥಕರ್ತರಾದ ಗುರುಸಿದ್ದ ಸ್ವಾಮಿಗಳು ಶ್ರೀಶೈಲಕ್ಕೆ ಹೋದಮೇಲೆ ಈ ಗ್ರಂಥವನ್ನು ರಚಿಸಿರುತ್ತಾರೆ ಮತ್ತು ಹರದನಹಳ್ಳಿಯ ಸ್ಥಾಪನಾ ಚಾರ್ಯ ಶಿವಲಿಂಗಶಕ್ತಿ (ಶಿವಲಿಂಗವ್ವ?) ವಲ್ಲಭನಾದ ಬಸವಲಿಂಗ ದೇಶಿಕೋತ್ತಮನು ಸಂಗನಬಸವೇಶ್ವರ ಸ್ವಾಮಿಗಳೊಡನೆ ಹೋಗಿ ಶ್ರೀಶೈಲದಲ್ಲಿ ಇದ್ದ ಗುರುಸ್ವಾಮಿಗಳಿಗೆ ಬಿನ್ನಹಂ ಮಾಡಿಕೊಂಡಮೇಲೆ ಈ ಪುಸ್ತಕದ ಸಂಸ್ಕೃತ ಗ್ರಂಥ (ಶ್ಲೋಕ) ಮತ್ತು ಕನ್ನಡ ಗ್ರಂಥಗಳ ಸಹಿತವಾದ ವಚನಗಳ ಬೋಧೆಯನ್ನು ಮಾಡಿದ್ದಾರೆ. ಈ ವಚನ ಗಳನ್ನು ಯಾರಿಗೆ ಹೇಳಿದರೋ ಅವರ ಹೆಸರೇ ವಚನಗಳ ಕೊನೆಯಲ್ಲಿ ಮುದ್ರಿಕೆಯಂತೆ ಇದೆ (ಇದೊಂದು ನವೀನ ಪದ್ಧತಿ). ಈ ವಚನಗಳಲ್ಲಿ ಈ ಗುರುಸಿದ್ಧಸ್ವಾಮಿಗಳ ಪೂರ್ವಿಕರು ಹೇಳಿದ ವಚನಗಳನ್ನೂ ಸೇರಿಸಿಕೊಂಡಿದ್ದಾರೆ. ಈ ಕಾರಣಗಳಿಂದ ಈ ಗುರುಸಿದ್ಧ ಸ್ವಾಮಿಗಳು ಹರದನಹಳ್ಳಿಯ ಪರಂಪರೆಗೆ ಸೇರಿದ ಸ್ವಾಮಿಗಳೆಂದು ತಿಳಿಯ ಬೇಕಾಗಿದೆ. ಇವರ ಕಾಲವು ಕ್ರಿ. ಶ. ೧೫ನೆಯ ಶತಕದ ಉತ್ತರಾರ್ಧ ಅಥವಾ ೧೬ನೆಯ ಪೂರ್ವಾರ್ಧವಾಗಿರಬೇಕು. ಆದರೆ ಕಲ್ಯಾಣದ ಶೂನ್ಯಸಿಂಹಾಸನದ ಪರಂಪ ರೆಯು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಅವರ ತರುವಾಯ ಬೋಳುಬಸವ ಮಹಾಸ್ವಾಮಿಗಳು ಹೀಗೆ ಈ ಪರಂಪರೆ ಬೇರೆಯಾಗಿದೆ. (ನಿರಂಜನವಂಶ ರತ್ನಾಕರ ನೋಡಿರಿ.)

ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಎಡೆಯೂರಿನ (ತುಮಕೂರು ಡಿಸ್ಟ್ರಿಕ್ಟ್ ಕುಣಿಗಲ್ ತಾಲೂಕು) ಮಠದಲ್ಲಿ ಆ ಮಹಾಸ್ವಾಮಿಗಳವರ ಬಳಿಯಲ್ಲಿ ಇದ್ದ ಶಿಷ್ಯರ ಹೆಸರುಗಳು ಆ ಮಠದಲ್ಲಿರತಕ್ಕ ಶಿಲಾಲಿಪಿಯಲ್ಲಿ ಹೇಳಲ್ಪಟ್ಟಿರುವುದು ಹೀಗೆ ಇದೆ—"ಸಮ್ಯಕ್ ಜ್ಞಾನೋದಯವಾಗಿ ಸಂಸಾರ ಹೇಹಮಂ ಮಾಡಿ ಶರಣುಹೊಕ್ಕ ಶಿಷ್ಯಜನಂಗಳ ನಾಮ ಪರಿಕ್ರಮಂಗಳೆಂತೆಂದಡೆ, ಸಪ್ಪೇದೇವರು, ಉಪ್ಪಿನಹಳ್ಳಿಯ ಸ್ವಾಮಿ, ಸಿದ್ಧೇದೇವರು, ನಂಜೇದೇವರು, ಬೋಳಬಸವರಾಜದೇವರು, ಗುಮ್ಮಳಾ ಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣಸಿದ್ಧೇದೇವರು, ಚಿಟ್ಟಿಗದೇವರು ಇಂತಿ ಇವರು ಮುಖ್ಯವಾದ ಭಕ್ತಮಾಹೇಶ್ವರರ್ಗೆ ಷಟ್‌ಸ್ಥಲ ಜ್ಞಾನಲಿಂಗಾಂಗ ಸಂಬಂಧ ಸಮರಸ ಏಕಾರ್ಥಮಂ ಬೋಧಿಸಿ ಮುಕ್ತರಂ ಮಾಡಿ ಷಡುಸ್ಥಲ ಏಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವ ಯೋಗಿಸಮಾಧಿ ಸನ್ನರ್ಣರಾದರು".

ಈ ಶಾಸನದಲ್ಲಿ ಕಂಡ ಶ್ರೀ ನಿರಂಜನ ಬೋಳಬಸವರಾಜದೇವರೇ ಕಲ್ಯಾಣದ ಶೂನ್ಯಸಿಂಹಾಸನ ಪೀಠಾಧಿಕಾರಿಗಳಾದರು. ಇವರು ಒಂದು ಗ್ರಂಥವನ್ನು ರಚಿಸಿದ್ದಾರೆ.

ಮೇಲೆ ಕಂಡ ಹರದನಹಳ್ಳಿಯ ಪರಂಪರೆಯಲ್ಲಿಯೇ ಶ್ರೀ ನಿರಂಜನ ಸ್ವತಂತ್ರ ಸಿದ್ಧಲಿಂಗೇಶ್ವರ ಸ್ವಾಮಿಗಳವರು ಸೇರಿದ್ದಾರೆ. ಇವರೂ ವಚನ ಗ್ರಂಥವೊಂದನ್ನು ರಚಿಸಿದ್ದಾರೆ. ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ಎಂಬ ಹೆಸರಿನಿಂದ ಅದು ಪ್ರಕಟವಾಗಿದೆ. ಇದೇ ಹರದನಹಳ್ಳಿಯ ಪರಂಪರೆಯಲ್ಲಿಯೇ ಚನ್ನಂಜೇದೇವರು ಸೇರಿದ್ದಾರೆ. ಇವರೂ ವಚನಗಳನ್ನು ಸೇರಿಸಿ ಬರೆದಿದ್ದಾರೆ. ಸಪ್ಪೇದೇವರು ಅಮೃಶ್ವರ ಭಾಷ್ಯ ಎಂಬುದೊಂದು ಗ್ರಂಥವನ್ನು ರಚಿಸಿದ್ದಾರೆ.

ಮೇಲೆ ಕಂಡ ನಿಜಾಚರಣೆಯ ನಿಲುಕಡೆಯಲ್ಲಿ ಈ ಕೆಳಗೆ ಕಂಡಂತೆ ಸ್ಥಲಗಳ ವಚನಗಳೂ ಇವೆ.

| ಸ್ಥಲ | ವಚನ | ಗ್ರಂಥ | ಒಟ್ಟು |
|---|---|---|---|
| ೧. ಸರ್ವಸಂಗ ಪರಿತ್ಯಾಗಸ್ಥಲ | ೩೭ | ೧ | ೩೭ |
| ೨. ಸದ್ಭಕ್ತಾಚಾರ ಲಿಂಗಾನುಭಾವಸ್ಥಲ | ೩೬ | ೯೨ | ೧೨೭ |
| ೩. ಸದ್ವೀರ ಮಾಹೇಶ್ವರ ಗುರುಲಿಂಗಾನುಭಾವಸ್ಥಲ | ೪೮ | ೧೧ | ೫೯ |
| ೪. ಮಹಾಪ್ರಸಾದಿ ಶಿವಸಂಗಾನುಭಾವಸ್ಥಲ | ೪೮ | ೯ | ೫೭ |
| ೫. ಮಹಾಪ್ರಾಣಲಿಂಗಿ ಚರಣಲಿಂಗಾನುಭಾವಸ್ಥಲ | ೪೮ | ೧೮ | ೬೬ |
| ೬. ಚಿದ್‌ಘನ ಶರಣ ಪ್ರಸಾದಲಿಂಗಾನುಭಾವಸ್ಥಲ | ೪೯ | ೭ | ೫೬ |
| ೭. ಚಿದ್‌ಘನ ಮಹಾಲಿಂಗೈಕ್ಯಾನುಭಾವಸ್ಥಲ | ೪೮ | ೮ | ೫೬ |
| ೮. ಚಿದ್‌ಘನ ನಿರಾಲಂಬ ನಿಃಕಳಲಿಂಗಾನುಭಾವಸ್ಥಲ | ೩೬ | ೦ | ೩೬ |
| ೯. ನಿರವಯ ಶೂನ್ಯ ಲಿಂಗಾನುಭಾವಸ್ಥಲ | ೩೬ | ೦ | ೩೬ |
| ೧೦. ನಿರಂಜನ ಜಂಗಮ ಲಿಂಗಾನುಭಾವ ನಿಜೈಕ್ಯ ವಸ್ತುನಿರ್ದೇಶಸ್ಥಲ | | | ೮೭ |
| ೧೧. ಮಲಸೂತ್ರ ಸಮಾಧಿ ಕ್ರಿಯಾವಚನ ಭಾಮಿನಿ ಮಂಗಳಾರತಿ ಪುಷ್ಪಾಂಜಲಿ ಮಿಶ್ರಜಮೆ ಗಣನೆ | | ೧೫ | ೨೧ |
| | | ಒಟ್ಟು | ೬೩೯ |

ತುಮಕೂರು ಡಿಸ್ಟ್ರಿಕ್ ತಿಪಟೂರು ತಾಲೂಕ ನೊಣವಿನಕೆರೆಯಲ್ಲಿ ಶ್ರೀ ನಿ. ಪ್ರ. ಶ್ರೀಮತ್ ಸೋಮೇಕಟ್ಟೆ ಶಿವಾನುಭಾವ ಚರವರ ಕರಿವೃಷಭ ದೇಶಿಕೇಂದ್ರ ಮಹಾಸ್ವಾಮಿಗಳವರ ಸೂತ್ರಾನುವರ್ತಿಗಳಾದಂಥ ಮಾಗಡಿಮಠದ ಶ್ರೀ ನಿ. ಪ್ರ. ರುದ್ರಸ್ವಾಮಿಗಳವರ ಕರಕಂಜಜಾತರಾದ ಹೆಗ್ಗಡೆದೇವನಕೋಟೆ ತಾಲೂಕು ಸರಗೂರಿನಲ್ಲಿರುವ ಶಿವಶರಣರೂ ಶಿವಾನುಭಾವಿಗಳೂ ಆದ ಶ್ರೀ ಬಿ. ವೀರಭದ್ರಯ್ಯನವರು ತಮ್ಮ ಗುರುಗಳಾದ ರುದ್ರಸ್ವಾಮಿಗಳಲ್ಲಿದ್ದ ಹೊತ್ತಿಗೆಯ ಪ್ರತಿಯಿಂದ ಎತ್ತಿ ಕ್ರಿ. ಶ. ೧೯೨೧ ರಲ್ಲಿಯೇ ಬರೆದುಕೊಂಡ ಪ್ರತಿಯನ್ನು ಈ ಕಾರ್ಯದಲ್ಲಿ ತೋರಿಸಿದರು. ಈ ಗ್ರಂಥದ ಮುದ್ರಣದ ಪ್ರತಿಯೊಂದು ರಬಕವಿ ಮಿತ್ರಸಮೂಹ ಮುದ್ರಣಾಲಯದಲ್ಲಿ ಕ್ರಿ. ಶ. ೧೯೩೩ ರಲ್ಲಿ ಮುದ್ರಿಸಲ್ಪಟ್ಟು ಶ್ರೀ ವೀ. ಶಿ. (ವೀರಸಂಗಯ್ಯ ಶಿವಲಿಂಗಯ್ಯ) ಸ್ವಾಮಿ

ಹಿರೇಮಠ, ಬನಹಟ್ಟಿ, ಸಂ. ಜಮಖಂಡಿ ಇವರಿಂದ ಪ್ರಕಟಿಸಲ್ಪಟ್ಟಿದೆ. ಈ ಪ್ರತಿಯಲ್ಲಿ ಸ್ಥಲ ೧೧ಕ್ಕಂ, ವಚನ ೨೪೬ಕ್ಕಂ. ಗ್ರಂಥ ೧೦೬ಕ್ಕಂ ಮಂತ್ರಗೋಪ್ಯ ೩೩ಕ್ಕಂ ಶ್ರೀ ಶ್ರೀ ಮಂಗಳಮಹಾ ಎಂದು ಕೊನೆಯಲ್ಲಿರುವುದರಿಂದ ಈ ಮುದ್ರಣ ಪ್ರತಿಯ ದೃಷ್ಟಿಯಿಂದ ಈ ಪುಸ್ತಕವು ಸಮಗ್ರವಾದಂತೆ ಕಂಡರೂ ಕೈಬರಹದ ಪ್ರತಿಯ ದೃಷ್ಟಿಯಿಂದ ಈ ಮುದ್ರಣ ಪುಸ್ತಕವು ಅಸಮಗ್ರವಾದುದೆಂದು ವ್ಯಕ್ತವಾಗುತ್ತದೆ.

ಈ ಹೊತ್ತಗೆಯ ಇನ್ನೊಂದು ಬರೆಹದ ಪ್ರತಿಯು ಶಿವಮೊಗ್ಗ ಡಿಸ್ಟ್ರಿಕ್ಟ್ ಸಾಗರದ ತಾಲೂಕು ತುದೀಕೊಪ್ಪದ ಮಠದ ಶಿವಮೂರ್ತಿ ಶ್ರೀ ಶಿವಯ್ಯನವರು ಕೊಟ್ಟುದು ಈ ಕಾರ್ಯಾಲಯದಲ್ಲಿ ಇದೆ. ಇದಕ್ಕು ಶರಣರಾದ ಶ್ರೀ ವೀರಭದ್ರಯ್ಯನವರು ತೋರಿಸಿದ ಪ್ರತಿಗೂ ಹೋಲಿಸಿ ನೋಡಿದುದರಲ್ಲಿ ಈ ಎರಡು ಬರೆಹ ಪ್ರತಿಗಳ ಕೊನೆಯಲ್ಲಿ ಬರೆದಿರುವ ವಚನ ಗ್ರಂಥಗಳ ಸಂಖ್ಯೆಯು ಮೇಲಿನ ಗಣನೆಯ ಪಟ್ಟಿಯ ಪ್ರಕಾರ ಸರಿ ಬರುತ್ತದೆ. ಈ ಎರಡು ಬರೆಹ ಗ್ರಂಥಗಳಲ್ಲಿ ಒಳಗೆ ಏನು ವ್ಯತ್ಯಾಸಗಳಿವೆ ಎಂಬುದನ್ನು ಶ್ರೀ ವೀರಭದ್ರಯ್ಯನವರು ಪರಿಶೋಧಿಸುತ್ತಾ ಇದ್ದಾರೆ. ಶ್ರೀ ಚನ್ನಬಸವೇಶ್ವರರ ಪದ ಮಂತ್ರಗೋಪ್ಯ ಗ್ರಂಥವು ಇದರಲ್ಲಿ ಸೇರಿದೆ. ಮುಖ್ಯವಾಗಿ ಬಸವೇಶ್ವರನೇ ಮೊದಲಾದ ಕ್ರಿಯಾಚರಣೆ ಇವುಗಳೂ ಬಹು ಚೆನ್ನಾಗಿ ವಿವರಿಸಲ್ಪಟ್ಟಿದೆ.

ಈ ಗ್ರಂಥದ ಬರೆಹದ ಪ್ರತಿಯ ಸಮಾಪ್ತಿಯ ಕೊನೆಯಲ್ಲಿ ಮುಂದಿನ ವಚನವು ಬರೆಯಲ್ಪಟ್ಟಿದೆ—

ಅಯ್ಯಾ ಅಹಂ (ಹಮ್ಮು) ಎಂಬುದೇ ದೇಹ, ಹಂಸ ಹಂಸ ಎಂಬುದೇ ಜೀವ, ಸೋಹಂ ಸೋಹಂ ಎಂಬುದೇ ಪರಮ, ದಾಸೋಹಂ ದಾಸೋಹಂ ಎಂಬುದೇ ಜೀವ ಪರಿಮುರಕೂಟ, ಈ ನಾಲ್ಕರ ಹೊದ್ದಿಗೆಯ ಗುರುಕರುಣದಿಂ ಮೀರಿ ಕೇವಲ ಶಿವೋಹಂ ಭಾವವಿಡಿದು, ಲಿಂಗಾಂಗ ನಡೆನುಡಿ ಏಕವಾಗಿ, ಭಿನ್ನಭಾವವಳಿದು, ಅಭಿನ್ನಭಾವವು ಮುಂದಾಗಿ, ಸುಟ್ಟಸರವೆಯಂತೆ, ಘೃತವು ಕ್ಷೀರದಲ್ಲಿ ಕೂಡಿದಹಾಗೆ ಅಜ್ಞಾನ ಮಲ ಪಾಶದಲ್ಲಿ ಸಿಲುಕದಿರ್ಪುದೇ ಲಿಂಗಾಂಗವಳಿದುಳಿದ ಚಿದಂಗ ಚಿದ್ಘನ ಲಿಂಗಾಂಗಸಂಗ ಸಮರಸದ ಶಿವಯೋಗಾನುಸಂಧಾನದ ಪರಮ ಪದದ ಬೆಳಗಿಂಗೆ ಚಿದ್ಬೆಳಗು ನೋಡಾ ಎಂಬ ಚಿಕ್ಕದಂಡನಾಥನ ಪ್ರಸಾದ ವಾಕ್ಯವುಂಟು. ಆ ಪ್ರಸನ್ನ ಪ್ರಸಾದ ವಾಕ್ಯಕ್ಕೆ ಶಿವಯೋಗಿ ಸಿದ್ಧರಾಮಯ್ಯನು ಬೆಸಗೊಂಡ ವಿವರ ಉಂಟು. ಅದೆಂತೆಂದೊಡೆ—

ಎಲೆ ಸ್ವಾಮಿ, ಆ ಸುವಿಚಾರದ ನಿಲುಕಡೆ ಸೂತ್ರವೆಂತು ? ಎಂದೊಡೆ, ಕೇಳಯ್ಯಾ ಶಿವಯೋಗಿಯು, ಜಿಹ್ವಾತುರ, ಗುಹ್ಯಾತುರ, ಅರ್ಥಾತುರವೆಂಬ ದೇಹಾಭಿಮಾನವ ಮಹಾಜ್ಞಾನ ಗುರುಕೃಪೆಯ ಸ್ವಾತ್ಮಜ್ಞಾನದಿಂ ತಿರಸ್ಕರಿಸಿ ಅಂತರ್ಗದ ಜೀವ ಪರಮರ ಕೂಟವ ಸ್ವಾನುಭಾವದಿಂ ತಿಳಿದು ಭಕ್ತಿದಾಸೋಹಂ ಎಂಬ ಹೆಬ್ಬಾಗಿಲ ಹೊತ್ತು ನಿರ್ವಂಚಕ ಕಿಂಕುರ್ವಾಣವೆಂಬ ನುಸುಳುಗಂಡಯನುಸಿದು ಅಲ್ಲಿಂದಾಚೆಯಲ್ಲಿ ೧೦೧ ಕವಾಟಗಳಿಂದೊಪ್ಪುವ ಅರಿವೆಂಬ ಅರಮನೆಯೊಳಗೆ ಮಧ್ಯರಂಗಮಂಟಪ, ಏಳು ನೆಲೆಯ ಮೇಲೆ ಬೆಳಗುವ ವರಚೌಕ ಶೂನ್ಯಸಿಂಹಾಸನದ ಮೇಲೆ ಮೂರ್ತಗೊಂಡಿರುವ,

ನಿರಂಜನ ಅಕಾಯ ಚರಿತ್ರಸ್ತಂಭಾಕಾರಮೂರ್ತಿ ಮಹಾಲಿಂಗ ಜಂಗಮದ ಒಡಗೂಡಿ, ಸತ್ತುಚಿತ್ತಾನಂದ ನಿತ್ಯ ಪರಿಪೂರ್ಣವೆಂಬ ಬೆಳಗಿನಲ್ಲಿ ಸರ್ವಾಚಾರ ಸಂಪತ್ತಿನಾಚರಣೆ ಯಿಂದ ದಶವಿಧ ಪಾದೋದಕ, ಏಕದಶಾ ಪ್ರಸಾದ ೩೧೨ ಮೇಲೊಂದು ಮೂಲ ಮಂತ್ರಗಳಿಂದ ಎಲೆಗಳೆದ ವೃಕ್ಷದಂತೆ ಕೂಡಲಚೆನ್ನಸಂಗಯ್ಯನಲ್ಲಿ ಕೂಟಸ್ಥವಾಗಿ, ಘನಗಂಭೀರದಿಂದಿರ್ಪುದೇ ತನ್ನ ತಾನೇ ಬೆಳಗುವ ನಿಜವಸ್ತುವಿನ ನಿಲುಕಡೆಯ ಸೂತ್ರ ನೋಡಾ ಸಿದ್ಧರಾಮಾ ಎಂದು ಚಿಕ್ಕದಂಡ ಪ್ರಭುವು ಶಿವಯೋಗಿ ಸಿದ್ಧರಾಮಯ್ಯಂಗೆ ಗೋಪ್ಯಮುಖದಲ್ಲಿ ಬೋಧಿಸಿದರು ಕಾಣಾ ಮಂತ್ರಜಾತ ಉತ್ತಂಡ ಮಾರ್ತಾಂಡನೇ ಎಂದು ಚನ್ನಂಜೇಸ್ವಾಮಿಗಳು ನಿರೂಪಮಂ ಪಾಲಿಸಿದ ಸ್ವಸ್ವರೂಪಿನ, ನಿಲುಕಡೆಸೂತ ಸಮಾಪ್ತ ಮಂಗಳಮಹಾ ಶ್ರೀ ಶ್ರೀ.

ಈ ವಚನವನ್ನು ನಿರೂಪಿಸಿದ ಚನ್ನಂಜೇಶ್ವರ ದೇವರೇ ಹರದನಹಳ್ಳಿಯ ಪರಂಪರೆಯಲ್ಲಿ ಕಂಡ ಚನ್ನಂಜೇದೇವರೆಂದು ಗುರ್ತಿಸುವಂತೆ ಆಗಿದೆ. ಇದನ್ನೆಲ್ಲಾ ನೋಡಿದರೆ ಶ್ರೀ ನಿ. ಜ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಕಾಲಕ್ಕೆ ಶ್ರೇಷ್ಠ ರಾದ ಶಿವಾನುಭಾವವುಳ್ಳ ಸ್ವಾಮಿಗಳು ಅನೇಕರು ಇದ್ದರೆಂದೂ ಗ್ರಂಥಗಳನ್ನು ಬರೆದ ರೆಂದೂ ತಿಳಿಯುವಂತಾಗಿದೆ. ಈಚೆಗೆ ಪೇಷ್ವೆಗಳು ಮುಂತಾದವರ ಕಾಲದಲ್ಲಿಯೇ ವೀರ ಶೈವರು ವಿದ್ಯೆಯಲ್ಲಿ ಬಹಳ ಹೀನಸ್ಥಿತಿಗೆ ಬಂದಿದ್ದಾರೆ.

ಶಿರೋವ್ರತವುಳ್ಳವರಿಗೆ ಮಾತ್ರ ಹೇಳಬೇಕೆಂದು ವಿಧಿಸಲ್ಪಟ್ಟು ಉಪನಿಷತ್ತುಗಳು ಈಗ ಮುದ್ರಣವಾಗಿವೆ. ಇದರಂತೆ ನಿಜಾಚರಣೆ ಗ್ರಂಥವು ಶಿವಾನುಭಾವಿಗಳಿಗೆ ಮಾತ್ರ ತಿಳಿಸಬೇಕೆಂದು ಹೇಳಲ್ಪಟ್ಟಿದ್ದರೂ, ಈಗಿನ ಶಿವಾನುಭಾವಿಗಳ ಉಪಯೋಗ ಕ್ಕಾಗಿಯಾಗಲಿ ವಾಗಾಡಂಬರದ ಈ ಕಾಲದ ಕೆಲವು ವಿದ್ಯಾವಂತರು ತಮ್ಮ ಹಿರಿಮೆ ಯನ್ನು ಪ್ರಕಾಶಪಡಿಸುವುದಕ್ಕಾಗಲೀ ಈಗ ಮುದ್ರಿಸುವುದು ಅತ್ಯವಶ್ಯಕವಾಗಿದೆ. ನೂರೊಂದು ಸ್ಥಲಗಳ ವಿಚಾರವು ಅಂಗ ಲಿಂಗ ಸಂಗವನ್ನು ತೋರಿಸತಕ್ಕವುಗಳೆಂದು "ಸಿದ್ಧಾಂತ ಶಿಖಾಮಣಿ" ಎಂಬ ಗ್ರಂಥದಿಂದ ನಮಗೆ ಗೊತ್ತಾಗುತ್ತಿವೆಯಷ್ಟೆ. ಚಿದಂಗ ಚಿದ್ಘನಲಿಂಗ ಸಂಬಂಧವಾದ ನೂರೊಂದು ಸ್ಥಲಗಳನ್ನು ಸಾಧಿಸಬೇಕೆಂದು ಈ ಗ್ರಂಥವು ಹೇಳುತ್ತದೆ. ಶ್ರೀ ಚನ್ನಬಸವೇಶ್ವರರ ಪದ ಮಂತ್ರಗೋಪ್ಯದಲ್ಲಿ ಪ್ರಮಾಣ ವಾಗಿ ಕೊಡಲ್ಪಟ್ಟ ಸಂಸ್ಕೃತ ಶ್ಲೋಕಗಳಿಗೆ ಆಧಾರವಾದ ಗ್ರಂಥಗಳಾವುವು ಎಂಬುದನ್ನು ಶೋಧಿಸಬೇಕಾಗಿದೆ. ಇವೇ ಮುಂತಾದ ಕಾರಣಗಳಿಂದ ಈ ಗ್ರಂಥದ ಮುದ್ರಣವು ಬೇಕೇಬೇಕು. —ಸಮಾಜದ ದಾಸಾನುದಾಸನಾದ ಪತ್ರಿಕಾ ಪ್ರಕಾಶಕ.

(ಸಂ. ೧೫೭)

# ೧೪. ಆಂಧ್ರ ದೇಶದಲ್ಲಿ ವೀರಶೈವ ಧರ್ಮಪ್ರಸಾರ

ತೆಲುಗು ದೇಶದಲ್ಲಿ ಮುದ್ರಣವಾದ "ಕಾಕತೀಯ ಸಂಚಿಕೆ" (ಸಂಪಾದಕರು ಮಾರೆಮುಂಡ ರಾಮರಾವು, ಎಂ.ಎ.ಬಿ.ಇಡಿ. ಮದರಾಸು ವಿಶ್ವವಿದ್ಯಾಲಯ ವಿದ್ಯಾರ್ಥಿ ಕ್ರಿ.ಶ. ೧೯೨೮ ರಿಂದ ೩೦ ಭಾರತೀಯ ವಿದ್ಯಾಚರಿತ್ರೆ ಮತ್ತು ಶ್ರೀ ಮಧ್ವಾಚಾರ್ಯ ಚರಿತ್ರೆ ಎಂಬ ಗ್ರಂಥಗಳನ್ನು ಬರೆದವರು) ಎಂಬ ಪುಸ್ತಕದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

"ಕಾಕತೀಯ ೨ನೆಯ ಪ್ರೋಲರಾಜನ ಮೊದಲು ಜೈನನಾಗಿದ್ದು ಅನಂತರ ಶೈವ ನಾದನು (ಕ್ರಿ. ಶ. ೧೧೫೦-೫೮ರ ನಡುವೆ). ಬಸವೇಶ್ವರನಿಂದಾದ ವೀರಶೈವ ಪ್ರಬೋಧೆಯನ್ನು ಕೇಳಿ ಇವನು ವೀರಶೈವನಾಗರಬಹುದು. ಇವನ ಮಗ ರುದ್ರ ದೇವನು ಮಹಾ ಶೈವನಾಗಿದ್ದನು. ಓರುಗಲ್ ಪಟ್ಟಣಕ್ಕೆ ಸೇರಿದ ಹನುಮ ಕೊಂಡದಲ್ಲಿ ಸಿದ್ಧೇಶ್ವರ ದೇವಾಲಯವು ೨ನೆಯ ಪ್ರೋಲರಾಜನ ಕಾಲದಲ್ಲಿ ಆಗಿರ ಬಹುದು... (ಹನುಮಕೊಂಡದ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಕಲಚೂರಿ ಬಿಜ್ಜಳ ರಾಜನು ಮುತ್ತಿಗೆ ಹಾಕಿದನು. ಲಿಂಗವಂತರು ರಾಜ್ಯವನ್ನು ವಶಪಡಿಸಿಕೊಂಡರು. ಹನುಮಕೊಂಡದಲ್ಲಿ ಕ್ರಿ. ಶ. ೧೧೬೨ರಲ್ಲಿ ರುದ್ರದೇವನ ಶಾಸನವಿದೆ. ಇದರಿಂದ ರುದ್ರ ದೇವನು ಶ್ರೀಶೈಲದವರೆವಿಗೂ ರಾಜ್ಯವನ್ನು ಆಕ್ರಮಿಸಿದ್ದನೆಂದು ತಿಳಿಯಬರುತ್ತದೆ. ಈ ರುದ್ರದೇವನು ಕ್ರಿ. ಶ. ೧೧೯೫ರ ವರೆಗೆ ಆಳಿದವನು. ಅನಂತರ ಇವನ ತಮ್ಮ ಮಹಾದೇವರಸನು ಕ್ರಿ. ಶ. ೧೧೯೮ರ ವರೆವಿಗೂ ಆಳಿದನು. ಇವೇ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ. ಇದರಿಂದ ಬಸವೇಶ್ವರನಿಂದ ಧರ್ಮಪ್ರಸಾರವು ಆಂಧ್ರ ದೇಶದಲ್ಲಿಯೂ ನಡೆದಿದೆ ಎಂದು ನಿರ್ಧರಿಸಲಿಕ್ಕೆ ಬಗುತ್ತದೆ. ಕಲಚೂರಿ ಬಿಜ್ಜಳ ಮತ್ತು ಬಸವೇಶ್ವರ ಇಬ್ಬರೂ ಕೂಡಿಯೇ ಕೆಲಸಮಾಡುತ್ತಿದ್ದರೆಂದು "ಬಸವೇಶ್ವರನ ಕಾಲ" ಎಂಬ ಗ್ರಂಥದಿಂದ ಸ್ಪಷ್ಟವಾಗಿ ಗೊತ್ತಾಗಿದೆ. ಬಿಜ್ಜಳನು ಹನುಮಕೊಂಡದ ಪಕ್ಕದ ಪ್ರದೇಶಗಳಿಗೆ ಮುತ್ತಿಗೆಹಾಕಿ ಯುದ್ಧ ಮಾಡಿದಾಗ ಬಸವೇಶ್ವರನು ಆ ಪ್ರಾಂತಕ್ಕೆ ಹೋಗಿರಲೇಬೇಕು. ಅಲ್ಲಿ ವಿಜಯಶಾಲಿಯಾಗಿ ಲಿಂಗವಂತರರಾಜ್ಯವನ್ನು ಪ್ರತಿಷ್ಠಾಪಿಸಿದಾಗ ೨ನೆಯ ಪೋಲರಾಜನು ಲಿಂಗವಂತನಾಗಿರಲಿಕ್ಕೆಬೇಕು. ಇವನ ಮಗ ರುದ್ರ ದೇವನು ಮೇಲೆ ಹೇಳಿದ ಪ್ರಕಾರ ಮಹಾಶೈವನಾಗಿದ್ದನು. ಎಂದರೆ ಲಿಂಗಧಾರಣೆ ಯುಳ್ಳವನೇ ಆಗಿದ್ದನು. ತಂತ್ರಸಂಗ್ರಹ ಎಂಬ ಗ್ರಂಥದಲ್ಲಿ ಸೇರಿದ ಪಾರಮೇಶ್ವರ ತಂತ್ರದಲ್ಲಿ ಅನಾದಿಶೈವ ಮಹಾಶೈವ ಮೊದಲಾದವರಿಗೆ ಲಿಂಗಧಾರಣೆ ಉಂಟೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ರುದ್ರದೇವನಿಗೆ ಶ್ರೀ ರೇವಣಸಿದ್ಧರ ಕೃಪೆಯ ಸಂಬಂಧ ವಿದ್ದಿತೆಂದು ವೀರಶೈವಾಮೃತ ಪುರಾಣದಿಂದ ತಿಳಿಯಬರುತ್ತದೆ. ಹನುಮಕೊಂಡದಲ್ಲಿ ಸಿದ್ಧೇಶ್ವರ ದೇವಾಲಯವು ಶ್ರೀ ರೇವಣಸಿದ್ಧರ ಕೃಪೆಯಿಂದಲೇ ಕಟ್ಟಿಸಲ್ಪಟ್ಟದ್ದಾಗಿರ ಬೇಕು. ಈ ರುದ್ರದೇವನೂ ಕೆಲಕಾಲದ ಮೇಲೆ ವೀರಶೈವನಾಗಿರಬೇಕು ಎಂದು ತಿಳಿಯಲವಕಾಶವಿರುವುದರಿಂದ ಆಂಧ್ರದೇಶದಲ್ಲಿ ಬಸವೇಶ್ವರನಿಂದ ಮತ್ತು ಶ್ರೀ ರೇವಣ ಸಿದ್ಧರಿಂದ ಕ್ರಿ. ಶ. ಸು. ೧೧೬೨ರ ಸುಮಾರಿನಲ್ಲಿಯೇ ವೀರಶೈವ ಧರ್ಮ ಪ್ರಸಾರ ವಾಯಿತೆಂದು ತಿಳಿಯಲನುಮಾನವೇನೂ ಇಲ್ಲ. (ಸಂ. ೧೪೪)

## ೧೫. ಶ್ರೀಕಂಠ ಶಿವಾಚಾರ್ಯರು (ನೀಲಕಂಠ ಶಿವಾಚಾರ್ಯರು) ಬೋಧಿಸಿದ ಶಿವಾದ್ವೈತ

ವ್ಯಾಸಋಷಿಗಳು ರಚಿಸಿದ 'ಬ್ರಹ್ಮಸೂತ್ರ'ಕ್ಕೆ ಸಂಸ್ಕೃತದಲ್ಲಿ ಭಾಷ್ಯಗಳನ್ನು ಬರೆದಿರುವವರಲ್ಲಿ ಶ್ರೀಕಂಠ ಶಿವಾಚಾರ್ಯರು ಒಬ್ಬರು. ಇವರಿಗೆ ನೀಲಕಂಠ ಶಿವಾಚಾರ್ಯರು ಎಂಬ ಹೆಸರೂ ಇತ್ತೆಂದೂ ತಿಳಿಯಬಂದಿದೆ. ಶ್ರೀಕಂಠಭಾಷ್ಯದ ಒಂದು ಕೈಬರೆಹದ ಪ್ರತಿಯನ್ನು ಬೈಲುಹೊಂಗಲದಲ್ಲಿ ರಾ. ಭಾವಪ್ಪನವರು ಮೂಗಿ ಇವರೊಡನೆ ಒಂದು ಮಠದಲ್ಲಿ ನೋಡಿದಾಗ ಅದರ ಪ್ರಾರಂಭದಲ್ಲಿ ಶ್ರೀಕಂಠ ಕೃತ ಎಂತಲೂ ಕೊನೆಯಲ್ಲಿ ಶ್ರೀಕಂಠ ವಿರಚಿತ ಎಂತಲೂ ಬರೆಯಲ್ಪಟ್ಟಿದ್ದಿತು. ಕ್ರಿಯಾಸಾರವನ್ನು ಬರೆದ ನೀಲಕಂಠ ಶಿವಾಚಾರ್ಯ ಬೇರೆ ಹರದತ್ತಾಚಾರ್ಯರ ಶಿಷ್ಯರಾಗಿ ನೀಲಕಂಠ ಶಿವಾಚಾರ್ಯರಿದ್ದರೆಂದು ಪ್ರಸಿದ್ಧವಾಗಿ ಇದೆ. ಈ ಪುಸ್ತಕದಲ್ಲಿ ಶ್ರೀಕಂಠರು ಹರದತ್ತಾಚಾರ್ಯರ ಶಿಷ್ಯರೆಂದು ಹೇಳಿರುವುದರಿಂದಲೂ ಈ ಶ್ರೀಕಂಠರೇ ನೀಲಕಂಠರೆಂದು ಗುರ್ತಿಸಬಹುದಾಗಿದೆ. (ಈಚೆಗೆ ದೊರಕಿರುವ ತಿಪಟೂರು ನಿವಾಸಿಗಳಾದ ಮೈಸೂರು ಮಹಲಿಂಗಪ್ಪನವರಲ್ಲಿ ಇದ್ದ ಓಲೆ ಪ್ರತಿ ಶ್ರೀಕಂಠ ಭಾಷ್ಯದಲ್ಲಿಯೂ ಕೊನೆಯಲ್ಲಿ 'ನೀಲಕಂಠ ವಿರಚಿತೇ' ಎಂದು ಬರೆಯಲ್ಪಟ್ಟಿದೆ.) ಇವರ ಭಾಷ್ಯವನ್ನು ನೋಡಿ ಇವರು ತಿಳಿದುಕೊಂಡ ಶಿವಾದ್ವೈತದ ಅಭಿಪ್ರಾಯವನ್ನು ಗ್ರಹಿಸಿ Sivadvaita of Srikantha ಎಂಬ ಒಂದು ಪುಸ್ತಕವನ್ನು ಮ. ರಾ. ಎಸ್. ಎಸ್. ಸೂರ್ಯನಾರಾಯಣಶಾಸ್ತ್ರಿ, M.A.B.Sc, ಎಂಬುವರು ಇಂಗ್ಲೀಷಿನಲ್ಲಿ ಪ್ರಕಟಿಸಿ ಇರುತ್ತಾರೆ. ಕ್ರಿ. ಶ. ೧೯೨೮ ರಲ್ಲಿ ಮದರಾಸ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆಸಿದ ಏಳು ಉಪನ್ಯಾಸಗಳೇ ಈ ಪುಸ್ತಕ ರೂಪದಲ್ಲಿ ಹೊರಗೆ ಬಂದಿವೆ. ಇದರಲ್ಲಿ ಹೇಳಲ್ಪಟ್ಟ ಪ್ರಕಾರ ಶಿವಾದ್ವೈತ ಅಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ಇಲ್ಲಿ ತೋರಿಸಲು ಪ್ರಯತ್ನಪಟ್ಟದಾಗಿದೆ. (ಮುಂದೆ ಪ್ರಶ್ನೆ ಚಿಹ್ನೆಯನ್ನು ಹಾಕಿ ಬರೆದ ಅಂಶಗಳೂ ಕಂಸದಲ್ಲಿ ಇದ್ದವುಗಳೂ ನಮ್ಮವು.)

ಗ್ರಂಥಕರ್ತರು ಶಿವಾದ್ವೈತ ಮತ್ತು ಭಾಷ್ಯಕರ್ತರ ವಿಷಯವಾಗಿ ಈ ಅಭಿಪ್ರಾಯಪಟ್ಟಿದ್ದಾರೆ—

೧. ತಮಿಳು ದೇಶದ ಶೈವಸಿದ್ಧಾಂತ ಮತ್ತು ಶಿವಾದ್ವೈತದ ತಾರತಮ್ಯವಿಷ್ಟು. ಶೈವಸಿದ್ಧಾಂತದಲ್ಲಿ ಪರಸ್ಪರಚ್ಛಮಯಂ ಪರಚ್ಛಮಯಂ ಅಹಪ್ಪರಚ್ಛಮಯಂ ಅಹಚ್ಛಮಯಂ ಎಂಬುದಾಗಿ ನಾಲ್ಕು ಭೇದಗಳಿವೆ. ಪರಪ್ಪರಚ್ಛಮಯಂ ಎಂಬುದು ನಿಜವಸ್ತುವನ್ನು (Eternal Truth = God) ಬಹಳ ದೂರದವನೆಂದು ತಿಳಿಯುವುದು. (ಸ್ವರ್ಗವೇ ಮೊದಲಾದ ಲೋಕಗಳಲ್ಲಿ ಇರುವನು ?) ಪರಚ್ಛಮಯಂ ಎಂಬುದು ಹೊರಗಿನವನು (ತನಗಿಂತ ಭಿನ್ನನು ?) ಎಂದು ತಿಳಿವುದು. ಅಹಪ್ಪರಚ್ಛಮಯಂ

ಎಂಬುದು ಅರ್ಧಪಾಲು ಹೊರಗಿನವನೂ ಅರೆವಾಸಿ ಒಳಗಿನವನೂ ಆಗಿದ್ದಾನೆ (ಹೊರಗೆ ಮೂರ್ತಿಯಾಗಿಯೂ ಒಳಗೆ ಹೃದಯದಲ್ಲಿಯೂ ಇರುವನು ?) ಎಂದು ತಿಳಿವುದು. ಅಹಚ್ಚಮಯಂ ಎಂಬುದು ಪೂರ್ತಿಯಾದ ಸಾಕ್ಷಾತ್ಕಾರನು (ಸ್ವಸ್ವರೂಪದಲ್ಲಿ ಕಾಣತಕ್ಕವನು ?) ಎಂದು ತಿಳಿವುದು. ಕಡೆಯ ಭೇದದಲ್ಲಿ ಶಿವಾದ್ವೈತವು ಬರುತ್ತದೆ. ಇದೇ ಐಕ್ಯವಾದ ಶೈವ. ಮಹಾದೇವನನ್ನು ಮರೆಮಾಡುವ ಶಕ್ತಿ ಎಂದು ಸಿದ್ಧಾಂತ ದಲ್ಲಿ ಬಹಳವಾಗಿ ರೂಪಿಸಲ್ಪಟ್ಟ ಆಣವ ಮಲವನ್ನು ನಿರಸನ (ನಿಷೇಧ) ಮಾಡುವುದೇ ಈ ಶೈವದ ಮುಖ್ಯ ಕಾರ್ಯ.

೨. ಪಂಚಭೂತಾತ್ಮಕ ದೇಹದ ಕಾರಣನು ಮಹಾದೇವ. ಅವನ ಅಭಿನ್ನ ರೂಪವಾದ ಚಿಚ್ಛಕ್ತಿಯು ಜ್ಞಾನಾನಂದಲಕ್ಷಣಗಳುಳ್ಳದು. ಅದರ ರೂಪಾಂತರವಾಗಿ ಚಿತ್ ಮತ್ತು ಅಚಿತ್ ಎಂಬೆರಡು ಬಗೆಯ ವಸ್ತುಗಳಾಗಿವೆ.

೩. ತಾದಾತ್ಮ್ಯಭಾವದ ಕ್ರಿಯೆ. (ಕಾರಣವೂ ಕಾರ್ಯವೂ ಒಂದೇ) ಎಂದು ತಿಳಿವುದು. ಇದೇ ಅಪೂರ್ಣ ಪರಿಣಾಮ (೧ ಭೇದ) ಮತ್ತು ಗುಣ, ಗುಣಿ ಎಂದು ತಿಳಿಯುವುದು ಒಂದು ಭೇದ ಈ ಎರಡು ಭೇದಗಳಲ್ಲಿ ತಾದಾತ್ಮ್ಯಭಾವದವನೇ ಶಿವನು ಎಂಬುದು ಶ್ರೀಕಂಠ ಶಿವಾಚಾರ್ಯರು ಅಂಗೀಕರಿಸಿದ ಅಭಿಪ್ರಾಯ.

೪. 'ತಿರು ಅರುಳಪಾಯಂ' ಎಂಬುದರಲ್ಲಿ ಪೂರ್ಣಾನುಭವಜ್ಞಾನವುಳ್ಳವರು ದೇಹದ ಕೊನೆಯಲ್ಲಿ ಬರುವ ಜೀವನ್ಮುಕ್ತಿಯನ್ನು ಇಲ್ಲಿಯೇ ಪಡೆಯುತ್ತಾರೆ ಎಂದು ಹೇಳಲ್ಪಟಿರುವುದು. ಶ್ರೀಕಂಠರು ಈ ಅಭಿಪ್ರಾಯವನ್ನು ಒಪ್ಪಲಾರರು ಮತ್ತು ಬಂಧನವು ಅಗ್ನಿಹೋತ್ರ ಮೊದಲಾದವುಗಳಿಂದ ಕಳೆಯಲ್ಪಡಬೇಕು ಎಂದು ಹೇಳುವ ವರು. ಕೊನೆಯಲ್ಲಿ ದೇವಯಾನದ ಮಾರ್ಗದಲ್ಲಿ ಹೋಗಿ ಜೀವನುಬ್ರಹ್ಮವನ್ನು ಹೊಂದ ಬೇಕು. ಆವರೆವಿಗೂ ಬಂಧನದಲ್ಲಿ ಇರುತ್ತಾನೆ ಎನ್ನುವರು.

೫. ಮೆಯ್‌ಕಂಡಾರ್ ಎಂಬುವರು ದೃಷ್ಟಾಂತ ಮತ್ತು ಹೇತು ಎಂಬ ಕಾರಣ ಗಳನ್ನು ಒಪ್ಪುತ್ತಾರೆ. ಶ್ರೀಕಂಠರು ಶ್ರುತಿ ಪ್ರಮಾಣ ಒಂದನ್ನೇ ಒಪ್ಪುತ್ತಾರೆ. (ಮಹಾ ದೇವನನ್ನು ತಿಳಿಯುವುದಕ್ಕಾಗಿ.)

೬. ವೈಷ್ಣವ ವಿಶಿಷ್ಟಾದ್ವೈತಿಗಳು ಹೇಳುವಂತೆ ಜೀವನು ಅಣುಸ್ವರೂಪ ನೆಂಬುದನ್ನು ಶ್ರೀಕಂಠರು ಒಪ್ಪುತ್ತಾರೆ. ಆದರೆ ಸಿದ್ಧಾಂತಿಗಳು ಜೀವನು ವ್ಯಾಪಕನೆಂದು (ವಿಭು) ಹೇಳುತ್ತಾರೆ.

ಈ ರೀತಿಯಲ್ಲಿ ಶೈವಸಿದ್ಧಾಂತವನ್ನು ಮತ್ತು ಶಿವಾದ್ವೈತದ ಅಭಿಪ್ರಾಯವನ್ನು ಗ್ರಂಥಕಾರರು ಸಂಗ್ರಹಿಸಿ ಒಟ್ಟಿನಲ್ಲಿ ಶ್ರೀಕಂಠರು ಸಿದ್ಧಾಂತಿಯಲ್ಲವೆಂದು ಹೇಳಿ ತಮ್ಮ ಅಭಿಪ್ರಾಯವನ್ನು ಮುಂದುವರಿಸಿದ್ದಾರೆ.

## ಶ್ರೀಕಂಠರ ಕಾಲ

ಪರದತ್ತಾಚಾರ್ಯರ ಶಿಷ್ಯರಾಗಿ ಶ್ರೀಕಂಠರು ಇದ್ದರೆಂತಲೂ ಅವರ ಅಂತ್ಯವು ಕ್ರಿ. ಶ. ೧೧೧೯ ರಲ್ಲಿ ಆದುದರಿಂದ ಶ್ರೀಕಂಠರು ರಾಮಾನುಜಾಚಾರ್ಯರ ತರುವಾಯ

ಇದ್ದರೆಂದು ತಿಳಿಯಬಹುದೆಂತಲೂ ಹೇಳಿರುತ್ತಾರೆ. (೧೯೩೪ನೆಯ ಏಪ್ರಿಲ್ ತಿಂಗಳ ಮಿಥಿಕ್ ಸೊಸೈಟಿ ಜರ್ನಲ್(ಬೆಂಗಳೂರಿ)ನಲ್ಲಿ ನೀಲಕಂಠ ಭಾಷ್ಯದ ಕಾಲವು ಕ್ರಿ. ಶ. ೧೧೭೦ ಎಂದು ಹೇಳಲ್ಪಟ್ಟಿದೆ.)

೧. ಭಾಷ್ಯದ ಪ್ರಕಾರ ಶ್ರೀಕಂಠರು ಬೋಧಿಸಿದ ಬ್ರಹ್ಮವಿದ್ಯೆಯ ಆರಂಭದ ಅಂಶವು ಈ ರೀತಿ ಇದೆ—

ಕರ್ಮವು ಅಂಗ ಎನಿಸಿಕೊಂಡಿದೆ. ವಿದ್ಯಾ ಎಂಬುದು ಅಂಗಿ ಎನಿಸಿಕೊಂಡಿದೆ. ಎರಡೂ ಮೋಕ್ಷವನ್ನು ಕೊಡುವುದಕ್ಕೆ ಸಹಾಯ ಮಾಡುತ್ತವೆ. ಆದರೆ ಈ ಎರಡೂ ಒಂದೇ ಫಲಿತಾಂಶವನ್ನು ಕೊಡುವುದಿಲ್ಲ. ಕರ್ಮವು ಈ ಲೋಕ ಅಥವಾ ಪರಲೋಕ ದಲ್ಲಿ ಫಲ ಕೊಡುತ್ತದೆ. ಜ್ಞಾನವು ಮೋಕ್ಷದ ಮಾರ್ಗವಾಗಿದೆ. ಆದರೆ ಶೃತಿಯು ಈ ಎರಡೂ ಸೇರಿ ಒಂದೇ ವಿಧದ ಫಲ ಎಂದರೆ ಮೋಕ್ಷಕ್ಕೆ ಸಹಕಾರಿಯಾಗಿರುವುದಾಗಿ ಹೇಳುತ್ತದೆ.

ವಿದ್ಯಾಂಚಾ ವಿದ್ಯಾಂಚ ಯಸ್ತದ್ವೇದೋಭಯಂ ಸಹ
ಅವಿದ್ಯಾಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತ ಮಶ್ನುತೇ

ಈಶಾವಾಸ್ಯೋಪನಿಷತ್ತಿನ ಈ ಬೋಧೆಯ ಪ್ರಕಾರ ವಿದ್ಯಾ ಎಂದರೆ ಜ್ಞಾನ ಅವಿದ್ಯಾ ಎಂದರೆ ಕರ್ಮ ಎರಡು ಬೇಕು. ಶೂದ್ರನಿಗೆ ಈ ಎರಡರಲ್ಲಿಯೂ ಅಧಿಕಾರ ವಿಲ್ಲ. ಆದರೆ ಅವರಲ್ಲಿ ವಿದುರ ಧರ್ಮವ್ಯಾಧ ಎಂಬವರು ಜ್ಞಾನಿಗಳಾಗಿದ್ದರೆಂದು ಅನುಮಾನವಿಲ್ಲದೆ ತಿಳಿದಿದೆ. ಇವರಿಗೆ ಪೂರ್ವದ ಶ್ರೇಷ್ಠ ಜನ್ಮದಲ್ಲಿ ಜ್ಞಾನವು ಬಂದಿ ದ್ದಿತೆಂದೂ ಕರ್ಮದ ದೆಸೆಯಿಂದ ಈ ಜನ್ಮದಲ್ಲಿ ಕೆಳಗಿನ ದರ್ಜೆಯು ಬಂದಿತೆಂಬುದೂ ಸ್ಪಷ್ಟವಾಗಿದೆ.

ಶೃತಿಯ ಪ್ರಕಾರ ಜ್ಞಾನವು ಎಲ್ಲಾ ಕರ್ಮಗಳನ್ನು ನಾಶಮಾಡುತ್ತದೆ.

"ಕ್ಷಿಯಂತೇ ಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" ಎಂಬ ಮುಂಡಕ ಶೃತಿಯ ಬೋಧೆಯ ಪ್ರಕಾರ ಫಲಾಪೇಕ್ಷೆ ಇಲ್ಲದೆ ಮಾಡಿದ ಕರ್ಮವು ಜ್ಞಾನದ ಅಧೀನವಾಗಿದೆ, ಎಂದರೆ ಜ್ಞಾನವನ್ನು ಹೊಂದುವುದಕ್ಕೆ ಸಾಧನವಾಗಿದೆ. ಇದಕ್ಕೆ ಆಶ್ರಮದ ಅವಶ್ಯಕತೆಯೂ ಇಲ್ಲ. (ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಮೀರಿದುದು ?)

ಹೀಗೆ ಬ್ರಹ್ಮಜಿಜ್ಞಾಸೆಗೆ (ಬ್ರಹ್ಮವಿಚಾರ) ಪೂರ್ವಭಾವಿಯಾದ ಕಾರ್ಯಗಳನ್ನು ಆಲೋಚನೆ ಮಾಡಿಕೊಂಡು ಶ್ರೀಕಂಠರು ನಿಶ್ಚಯಿಸಿದ ಬ್ರಹ್ಮಜ್ಞಾನವನ್ನು ಪಡೆಯುವ ಉಪಾಯಗಳನ್ನು ತಿಳಿಯಬೇಕು.

ಕರ್ಮಕಾಂಡವು ದೇವನನ್ನು ಒಪ್ಪುತ್ತದೆ. ಅದರ ಆತ್ಮನು ಎಂದರೆ ಪರಬ್ರಹ್ಮನು. ಬ್ರಹ್ಮಾಂಡದ ವಸ್ತುಗಳೇ ಆತನ ದೇಹವೆಂದು ತಿಳಿಯಲ್ಪಟ್ಟವನಾಗಿದ್ದಾನೆ. (ವಿರಾಟ್ ಪುರುಷನೇ ದೇವನು ?)

ಕುಂಬಾರನು ಗಡಿಗೆಯನ್ನು ಮಾಡಿದಂತೆ ದೇವನು ಈ ಜಗತ್ತನ್ನು ನಿರ್ಮಿಸಿದನು ಎಂದು ತಿಳಿದರೆ ಈ ಸೃಷ್ಟಿ ಕ್ರಮವು ಭಿನ್ನ (ದ್ವೈತ) ಸೃಷ್ಟಿಕರ್ತರುಂಟೆಂಬ ಅನುಮಾನಕ್ಕೆ ಕಾರಣವಾಗುವುದರಿಂದ ಈ ಅನುಮಾನ ಪ್ರಮಾಣವನ್ನು ನಂಬತಕ್ಕದ್ದಲ್ಲ.

೨. ಶ್ರೀಕಂಠರು ತಿಳಿದ ಪ್ರಕಾರ ಬ್ರಹ್ಮನ ಲಕ್ಷಣವು ಹೀಗೆ—

ಬ್ರಹ್ಮನಿಗೆ ಉತ್ಪತ್ತಿಸ್ಥಾನವಾವುದೂ ಇಲ್ಲ. (ಅಜ?) ಬ್ರಹ್ಮನು ಶಿವಶಬ್ದವಾಚಿ. ಜೀವವು ಸೃಷ್ಟಿಸಲ್ಪಟ್ಟದ್ದಲ್ಲ. ಜೀವಗಳಿಗೆ ಹೆಸರುಗಳೂ ರೂಪಗಳೂ ಇದ್ದಾಗ್ಯೂ ಬ್ರಹ್ಮನು ಪ್ರತಿಯಿಲ್ಲದೆ (ಅದ್ವೈತ?) ಇರುವಿಕೆ ಎಂದರೆ ಹೆಸರುಗಳು ಮತ್ತು ರೂಪ ಮಾತ್ರ ಇಲ್ಲದವನೆಂಬ ಅಭಿಪ್ರಾಯವಾಗುವುದರಿಂದ ಜೀವಗಳು ಸೃಷ್ಟಿಸಲ್ಪಟ್ಟವುಗಳಲ್ಲ.

ಬ್ರಹ್ಮನ ಕಾರ್ಯಗಳು ಐದು. ಸೃಷ್ಟಿ, ಸ್ಥಿತಿ, ಲಯ, ತಿರೋದಾನ, ಅನುಗ್ರಹ.

ಆಹಾರವೇ ಮಾಂಸವೂ ಮತ್ತು ಮನಸ್ಸೂ ಆಗುವಂತೆ ಬ್ರಹ್ಮನು ಹೆಸರು, ರೂಪ ಮತ್ತು ಮೂರು ಭೇದ(ಬ್ರಹ್ಮ, ಹಿರಣ್ಯಗರ್ಭ, ವಿರಾಟ್)ಗಳಿಗೆ ಕರ್ತನಾಗಿದ್ದಾನೆ. ಕೆಲವರು ನಾಲ್ಕು ಮುಖದ ಬ್ರಹ್ಮನಿಗೆ ಮೂರು ಭೇದಗಳುಂಟೆಂದು ತಿಳಿಯುತ್ತಾರೆ. ಇದು ಸರಿಯಲ್ಲ. ಬ್ರಹ್ಮನು (ನಿರ್ಗುಣ?) ಜಲವನ್ನು ಸೃಷ್ಟಿಸಿ ಅದರಲ್ಲಿ ತನ್ನ ವೀರ್ಯವನ್ನಿಟ್ಟನೆಂದು ನಾವು ಕೇಳುತ್ತೇವೆ. ಇದು ಒಂದು ಬಂಗಾರ ಬಣ್ಣದ ಮೊಟ್ಟೆಯಾಗಿ ಬೆಳೆಯಿತು. ಈ ಬ್ರಹ್ಮನ ಅಂಡದಿಂದ ಬ್ರಹ್ಮನು (ಹಿರಣ್ಯಗರ್ಭ) ಹೊರಗೆ ಬಂದನು. ಹೀಗೆ ಬ್ರಹ್ಮನು ಕಾಣುವುದಕ್ಕೆ ಮುಂಚೆಯೇ ಮೂರು ಭೇದದ ರಚನೆಯು ಮುಗಿದಿತ್ತು.

ಬ್ರಹ್ಮನು ಶಿವಶಬ್ದವಾಚಿ ಎಂದು ಮೇಲೆ ಹೇಳಿದೆಯಷ್ಟೇ ಬ್ರಹ್ಮನನ್ನು ಶಿವನೊಡನೆ ಗುರ್ತಿಸುವುದರ ವಿವರವೂ ನಾರಾಯಣ, ಹಿರಣ್ಯಗರ್ಭ ಇವರಾರೂ ಆ ಶ್ರೇಷ್ಠತೆಯನ್ನು ಪಡೆದಿಲ್ಲವೆಂದು ಇಲ್ಲಿ ತೋರಿಸಲ್ಪಟ್ಟಿದೆ ಎಂಬುದರ ವಿವರವೂ ಹೀಗೆ ಇದೆ—

ಜನ್ಮಾದಿ ಸೂತ್ರವು (ಬ್ರಹ್ಮಸೂತ್ರದ ಭಾಗ?) ಶಿವನ ಎಂಟು ಹೆಸರುಗಳನ್ನು ಕೊಡುತ್ತದೆ. ಭವ, ಶರ್ಮ, ರುದ್ರ, ಈಶಾನ, ಪಶುಪತಿ, ಉಗ್ರ, ಭೀಮ ಮತ್ತು ಮಹಾದೇವ ಇವೆಲ್ಲವೂ ಬ್ರಹ್ಮನಿಗೆ ಸಂಬಂಧಿಸಿದವುಗಳಾಗಿ ಜಗತ್ತಿನ ಸೃಷ್ಟಿ ಮೊದಲಾದವುಗಳಿಗೆ ಕಾರಣವಾಗಿವೆ ಎಂದು ಆ ಸೂತ್ರದಲ್ಲಿ ಅರ್ಥವಿವರಣೆಯಾಗಿದೆ.

> ಸಮನ್ವಯ ಸೂತ್ರದಲ್ಲಿ ಮಹೋಪನಿಷತ್ತಿನ
> ಋತಂ ಸತ್ಯಂ ಪರಂಬ್ರಹ್ಮ ಪುರುಷಂ ಕೃಷ್ಣಪಿಂಗಳಂ
> ಊರ್ಧ್ವರೇತ ವಿರೂಪಾಕ್ಷಂ ವಿಶ್ವರೂಪಾಯ ವೈನಮಃ

ಎಂಬುದು ಆಧಾರದ ಮೇಲೆ ಶಿವನು ಬ್ರಹ್ಮನೊಡನೆ ಗುರ್ತಿಸಲ್ಪಟ್ಟಿದ್ದಾನೆ.

ಶೇತಾಶ್ವೇತರೋಪನಿಷತ್ತಿನಲ್ಲಿ ಹೇಳಲ್ಪಟ್ಟ "ಶಿವನನ್ನು ತಿಳಿಯದೆ ಮೋಕ್ಷವನ್ನು ಪಡೆಯಬೇಕೆಂಬವರು ಪ್ರಾಣಿಯ ಚರ್ಮವನ್ನು ಸುರುಳಿಯಾಗಿ ಸುತ್ತಿದಂತೆ ಆಕಾಶವನ್ನು ಸುತ್ತಲಿಕ್ಕೆ ಹೋದವರಾಗುತ್ತಾರೆ" ಎಂಬುದೂ ಒಂದು ಪ್ರಮಾಣ.

ಬ್ರಹ್ಮಸೂತ್ರದ I. ೧ ಮತ್ತು ೧೭ ರಿಂದ ೨೦ನೆಯ ಸೂತ್ರಗಳ ವಿವರಣೆಯಲ್ಲಿ ಬ್ರಹ್ಮನು (ಹಿರಣ್ಯಗರ್ಭ) ಜಗತ್ತಿನ ಕಾರಣವೇನು ಎಂಬ ಶಂಕೆಯನ್ನೆತ್ತಿ ಈ ಬ್ರಹ್ಮನು ಕಾಣಲಾಗಲಾರನು, ಏಕೆಂದರೆ ಶೃತಿಯು ಜಗತ್ತುಗಳಿಂದಾಚೆಗೆ ಪರವಸ್ತು ಉಂಟೆಂದು ಸಾರಿ ಹೇಳುತ್ತದೆ. ಹಿರಣ್ಯಗರ್ಭನು ಈ ಜಗತ್ತನ್ನು ಮಾತ್ರ ವ್ಯಾಪಿಸಿದವನು. ಇದಲ್ಲದೆ ಯಾರು ಕಾರಣವನ್ನು ತಿಳಿದಿರುವರೋ ಅವರು ಮೋಕ್ಷವನ್ನು ಪಡೆಯುತ್ತಾರೆ.

ಮಹೋಪನಿಷತ್ "ಯ ಏವಂ ವಿದುರಮೃತಾಸ್ತೇ ಭವಂತಿ" ಇದು ಬ್ರಹ್ಮನಿಗೆ ಸಂಬಂಧಿಸಿದುದಲ್ಲ. ಶಿವನಿಗೆ ಮಾತ್ರ ಸಂಬಂಧಿಸಿದುದು. ಈ ಶಿವನನ್ನೇ ಧ್ಯಾನಿಸುವುದರಿಂದ ಮೋಕ್ಷವನ್ನು ಪಡೆಯಬಹುದು.

'ಪ್ರಜಾಪತಿ' ಎಂಬ ಪದವಾದರೂ ಬ್ರಹ್ಮನನ್ನು ತಿಳಿಸುವುದಿಲ್ಲ. ಪಶುಪತಿ ಎಂಬ ಅರ್ಥದಲ್ಲಿ ಶಿವನನ್ನೇ ತಿಳಿಸುತ್ತದೆ.

ಮತ್ತು ಶೃತಿಯು "ಬ್ರಹ್ಮನು ಬ್ರಹ್ಮನ (ಚತುರ್ಮುಖ?) ಜನನವನ್ನು ನೋಡಿದನು. ವೇದಗಳ ಮೂಲಕವಾಗಿ ಇವನಿಗೆ ದೀಕ್ಷೆ ಮಾಡಿದನು" ಎಂದು ತಿಳಿಸುತ್ತದೆ. ಇದೇ ರೀತಿಯಲ್ಲಿ ಪ್ರಜಾಪತಿಯ ಉದ್ದೇಶ ಮತ್ತು ಚಿಂತನೆಯಿಂದ ಉಂಟಾದ ಸೃಷ್ಟಿಯು ಮೂಲ ಸೃಷ್ಟಿಯಲ್ಲಿ ಯಾವುದೋ ಒಂದು ಅಥವಾ ಅನೇಕ ಸಾರಿ ನಡೆದ ಮಧ್ಯದ ಸೃಷ್ಟಿಯ ಕೆಲಸವಾಗಿರಬಹುದು.

ಮಹೋಪನಿಷತ್ತಿನಲ್ಲಿ "ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿಃ" ಎಂದು ಹೇಳಿರುವುದರಿಂದ ಈ ಬ್ರಹ್ಮನಿಗೆ ಆ ಬ್ರಹ್ಮನು ಅಧೀನನು ಎಂಬುದು ವ್ಯಕ್ತವಾಗುತ್ತದೆ. (ಹೀಗೆ ಶಿವನಿಗೆ ಪರಂಬ್ರಹ್ಮ ಎಂದೂ ತಿಳಿಯಬಹುದು ?)

ಸೂತ್ರ I. ೧, ೨೧ನೆಯದು ಸೂರ್ಯನಲ್ಲಿ ಇರುವ ಬಂಗಾರ ಬಣ್ಣದ ಪುರುಷನು 'ಶಿವ' ಎಂದು ತೋರಿಸುತ್ತದೆ. ಶೃತಿಯು ಎರಡು ಕಣ್ಣುಗಳನ್ನು ಮಾತ್ರ ತೋರಿಸಿದಾಗ್ಯೂ ಶಿವನ ಮೂರನೆಯ ಕಣ್ಣು ಯಾವಾಗಲೂ ಮುಚ್ಚಲ್ಪಟ್ಟಿರುವುದರಿಂದ ಅದು ಸೂತ್ರದಲ್ಲಿ ವಿವರಿಸಲ್ಪಟ್ಟ ಕಮಲದ ಹೂವಿಗೆ ಸಮಾನವೆಂದು ಹೋಲಿಸಲ್ಪಡಲಾರದು.

ಸೂತ್ರ I. ೧. ೨೨ ರಲ್ಲಿ ನಾರಾಯಣನಿಗಾಗಿ ಆಗಿರಲಾರದೆಂದು ಸ್ಪಷ್ಟಮಾಡಿ ತೋರಿಸಲ್ಪಟ್ಟಿದೆ. ಏಕೆಂದರೆ ನಾರಾಯಣನು ಕಮಲದಂತೆ ಕಣ್ಣುಳ್ಳವನೆಂದೂ ಸೂರ್ಯ ಮಂಡಲದ ಮಧ್ಯ ಭಾಗದಲ್ಲಿ ಇರುವವನೆಂದೂ ಹೇಳಲ್ಪಟ್ಟಿದೆ.

I. ೨, ೨ ರಿಂದ ೪ ಸೂತ್ರಗಳಲ್ಲಿ ನಾರಾಯಣನು ಉಪಾಸಕನೆಂದೂ ಪರಮೇಶ್ವರನೊಬ್ಬನೇ ಧ್ಯೇಯನೆಂದೂ ಹೇಳಲ್ಪಟ್ಟಿದೆ.

ಕೈವಲ್ಯೋಪನಿಷತ್ತಿನಲ್ಲಿ ಶಿವನು ಮೂರು ಕಣ್ಣುಳ್ಳವನೆಂದೂ ಉಮಾಸಹಿತನೆಂದೂ ಹೇಳಲ್ಪಟ್ಟಿದೆ.

ನಾರಾಯಣಾನು ವಾಕ್ಯದಲ್ಲಿ ನಾರಾಯಣ ಪರಂಬ್ರಹ್ಮ ಎಂದಿರುವುದಕ್ಕೆ "ನಾರಾಯಣಾತ್ ಪರಂ ಬ್ರಹ್ಮ" ನಾರಾಯಣನಿಗಿಂತಲೂ ಶ್ರೇಷ್ಠನು ಬ್ರಹ್ಮನು ಎಂದು ಅರ್ಥ

ಮಾಡಬೇಕಾಗುತ್ತದೆ. ಈ ರೀತಿಯು ಸತ್ಯತೆಯು ಸ್ಮೃತಿಯಿಂದಲೂ ಸಾಕ್ಷಿಯಾಗಿ ನುಡಿಯಲ್ಪಟ್ಟಿದೆ.

ಭಗವದ್ಗೀತೆಯಲ್ಲಿ ಕೃಷ್ಣನು ಅರ್ಜುನನಿಗೆ ತೋರಿಸಿದ ಅದ್ಭುತ ರೂಪವು ಪರಮಾರೂಪಂ ಐಶ್ವರಂ ಈಶ್ವರ ಸಂಬಂಧವಾದ ಪರಮರೂಪವು ಎಂದು ಇದೆ.

I. ೨-೬ ಸೂತ್ರದಲ್ಲಿ ಕೃಷ್ಣನು ತನ್ನು ಉಪಾಸಕನೆಂದೂ ಕೃಷ್ಣನಿಗಿಂತ ಪ್ರೀತಿ ಪಾತ್ರರಾದವರು ತನಗೆ ಇನ್ನಾರೂ ಇಲ್ಲವೆಂದೂ ಶಿವನು ಹೇಳಿದನು ಎಂದು ಮಹಾ ಭಾರತದಲ್ಲಿ ಇದೆ ಎಂದು ಉಕ್ತವಾಗಿದೆ.

(ಹೀಗೆ ಈ ಪುಸ್ತಕದ IVನೆಯ ಅಧ್ಯಾಯದಲ್ಲಿ ಶಿವನ ಆಧಿಕ್ಯತೆಯು ಇನ್ನೂ ಹೆಚ್ಚಾಗಿ ವಿವರಿಸಲ್ಪಟ್ಟಿದೆ. ಆ ವಿವರಣದಲ್ಲಿನ ಕೆಲವು ಸಂಗತಿಗಳಿವು.)

ಶಿವನು ಶಾರೀರಕ ಅಥವಾ ಭೌತಿಕರೂಪವನ್ನು ಹೊಂದಿದವನು. ಬರೆಯ ಜ್ಞಾನರೂಪನು ಮಾತ್ರವೇ ಅಲ್ಲ. ಅವಿನಾಶಿ ಮತ್ತು ಅಂತರ್ ಹೃದಯದ ಅಧಿಪತಿ. ಆಕಾಶದೊಡನೆ ಗುರ್ತಿಸಲ್ಪಡುವವನು ದಹರಾಕಾಶದಲ್ಲಿ ಇರುವವನು. ಭೂತಾತ್ಮಕ ಮತ್ತು ಕಾರ್ಯಮಾಡುವವನು ಎಂಬೆರಡೂ ಲಕ್ಷಣಗಳುಳ್ಳವನು ಶಕ್ತಿಗರ್ಭನು ಕಾರ್ಯ ಮತ್ತು ಕಾರಣ ಈ ಎರಡಕ್ಕೂ ವ್ಯತ್ಯಾಸವಿಲ್ಲ. ಅಂತಹ ರೂಪನು—ಪರಮೇಶ್ವರ ಪರಾಶಕ್ತಿ ಇವರ ಪರಸ್ಪರ ಪ್ರತ್ಯಕ್ಷ ಈ ರೂಪನು. ಎಲ್ಲಕ್ಕಿಂತ ದೊಡ್ಡವನು ಮತ್ತು ಎಲ್ಲಕ್ಕಿಂತ ಶ್ರೇಷ್ಠನು ಮುಂತಾದುವು.

೪. ಶಿವಾದ್ವೈತ ತತ್ತ್ವದ ಪ್ರಕಾರ ಜಗತ್ತಿನ ಉತ್ಪತ್ತಿ ಮುಂತಾದ ವಿಷಯ ಗಳಲ್ಲಿ ಈ ಕೆಳಗೆ ಕಂಡಂತೆ ಶ್ರೀಕಂಠರ ಅಭಿಪ್ರಾಯವಿದೆ.

ಜಗದುತ್ಪತ್ತಿಗೆ ಉಪಾದಾನಕಾರಣನೂ ನಿಮಿತ್ತಕಾರಣನೂ ಶಿವನು. ಸಹಕಾರಿ ಕಾರಣದ ಅವಶ್ಯಕತೆಯಿಲ್ಲ. ಆದರೂ ಸೃಷ್ಟಿಯು ಜೀವರಿಗೆ ಒಳ್ಳೆಯದನ್ನು ಮಾಡಲಿ ಕ್ಕಾಗಿ ಆಗಿದೆ. ತತ್‌ಶಕ್ತಿಸಂಹಿತೆಯು ಜಗತ್ತಸೃಷ್ಟಿಗೆ ಕಾರಣ.

೫. ಜೀವನು ಈ ದೇಹದಲ್ಲಿದ್ದಾಗ ಮತ್ತು ಆಮೇಲೆ ಹೊಂದುವ ಸ್ಥಿತಿಯು ಹೀಗೆ—ಜೀವನು ಅನಾದಿ ಅವನು ಅಶುದ್ಧ ವಸ್ತುಗಳೊಡನೆ ಕೂಡಿಕೊಂಡು ಅಜ್ಞಾನ ವನ್ನೂ ಅಧೀನತೆಯನ್ನು ಹೊಂದುತ್ತಾನೆ. ಜೀವ ಬ್ರಹ್ಮರು ಒಂದೇ ಎಂದು ಗುರ್ತಿ ಸುವುದನ್ನು ಬೋಧಿಸುವ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವುದು ಸಾಧ್ಯವಿಲ್ಲವೆಂದು ತೋರುತ್ತದೆ ಎಂದು ಹೇಳುವುದು ಸರಿಯಲ್ಲ. (I ೧, ೧)

ಜೀವನು ನಿಜವಾಗಿ ಅಶುದ್ಧನಾಗಿ ಇರಲಾರನು. ಅಶುದ್ಧತೆಯು ಜೀವನ ವಾಸ್ತವಿಕ ಲಕ್ಷಣವಾದರೆ ಮೋಕ್ಷವು ಸಾಧ್ಯವಾಗಲಾರದು. ಆಗ ಮೋಕ್ಷಕ್ಕಾಗಿ ಆತ್ಮ ನಾಶವಾಗಬೇಕಾಗುವುದು. ಜೀವನು ತಾನೇ ಪರಿಶುದ್ಧನು. ಅಶುದ್ಧತೆಯನ್ನು ಸೃಷ್ಟಿಸಲಾರನು. ಸ್ವೇಚ್ಛೆಯಿಂದ ಅಶುದ್ಧತೆಯನ್ನು ಕೂಡಿಕೊಂಡೂ ಇರಲಾರನು. ಬ್ರಹ್ಮನೂ ಅಶುದ್ಧತೆಯನ್ನು ಸೃಷ್ಟಿಮಾಡಿಲ್ಲ. ಅದರ ಸಂಬಂಧಕ್ಕೆ ಕಾರಣನೂ ಅಲ್ಲ. ಹಾಗಾದರೆ ಬ್ರಹ್ಮನು ನಿರ್ದಯ, ಪಕ್ಷಪಾತ, ಅಜ್ಞಾನ ಮತ್ತು ತನ್ನ ಸ್ವಂತ ಲಕ್ಷಣವಾದ

ಆನಂದವನ್ನು ಪ್ರಸಾರ ಮಾಡುವುದರಲ್ಲಿ ಅಸಮರ್ಥ, ಎಂಬೀ ದೋಷಗಳಿಗೆ ಗುರಿಯಾಗುವನು. ಜೀವನು ಬ್ರಹ್ಮನಿಗಿಂತ ಭಿನ್ನನಲ್ಲ. ಮೋಕ್ಷವನ್ನು ತಿಳಿಸುವ ಗ್ರಂಥಗಳು ಬ್ರಹ್ಮನ ಸಮಾನತೆಯನ್ನು ಹೇಳುತ್ತವೆ. ಐಕ್ಯವನ್ನು (ಒಂದೇ ಎಂಬ ಭಾವ) ಹೇಳುವುದಿಲ್ಲ. (ಮುಂಡಕ III, ೧, ೩) ಜೀವ, ಆತ್ಮ ಇವುಗಳು ಬ್ರಹ್ಮನಿಗೆ ಸಂಬಂಧಿಸುತ್ತವೆ. (ಬ್ರಹ್ಮ ಸಮನ್ವಯದಲ್ಲಿ ಇವೆ.) ಬ್ರಹ್ಮ ಮತ್ತು ಜೀವ ಇವರ ಸಂಬಂಧವು ಭೇದವಾಗಿ ಕಂಡರೂ ಅಭೇದವಾಗಿ ಇರುವುದು. (ಇದೇ ಭೇದಾಭೇದ) ತ್ರೈಮಲಗಳು (ಆಣವ, ಮಾಯಾಕರ್ಮ) ಕಳೆದಮೇಲೆ ಅಪ್ರಮಾಣವಾದ ಜೀವಜ್ಞಾನವು ಪ್ರಕಾಶಿಸುತ್ತದೆ. ಆ ಸ್ಥಿತಿಯಲ್ಲಿ ಬ್ರಹ್ಮಜ್ಞಾನವೂ ಅದೂ ಒಂದೇ ಆಗಿದೆ.

ದೇಹದಿಂದ ಜೀವನು ಬಿಟ್ಟುಹೋಗುವ ವಿಧಾನ, (ಬೃಹದಾರಣ್ಯಕ IV ೪, ೨) ಇತರ ಲೋಕಗಳಲ್ಲಿರುವ ಸ್ಥಿತಿ ಮತ್ತು ಕೊನೆಯಲ್ಲಿ ಇಲ್ಲಿಗೆ ಬರುವ ಸಂಗತಿಗಳ ವಿವರ, (ಅದೇ IV ೪, ೬) ಇವುಗಳಿಂದ ಜೀವನು ಆಕಾರದಲ್ಲಿ ಅಣುರೂಪನಾಗಿದ್ದಾನೆ ಎಂದು ತಿಳಿಯಬರುತ್ತದೆ. ಆತ್ಮನು ಅಣುರೂಪನಲ್ಲಿ ಎಂದು ಹೇಳುವ ಪಾಠಗಳೂ ಇವೆ. (ಅದೇ IV ೪, ೨೨) ಆದರೆ ಅವು ಪರಬ್ರಹ್ಮನಿಗೆ ಸಂಬಂಧಿಸಿದವುಗಳು. ಜೀವನು ಬ್ರಹ್ಮನ ಅಂಶನಾಗಿದ್ದಾನೆ. ಜೀವಗಳು ದೇಹಗಳಿಂದ ಆವೃತವಾಗಿದೆ. ನಾನು ಉದ್ದ, ನಾನು ಗಿಡ್ಡ, ನಾನು ಬ್ರಾಹ್ಮಣ, ಎಂಬ ನಮೂನೆಯ ಅಭಿಪ್ರಾಯಗಳನ್ನು ಒಳಗೊಂಡಿವೆ. ಈ ಸಾಮಾನ್ಯ ಸಂಗತಿಗಳು ಪರಮಾತ್ಮ ಸ್ಥಿತಿಯನ್ನು ಹೊಂದಿ ಬಂಧನದಿಂದ ಬಿಡುಗಡೆಯಾದ ಜೀವನ ಅನುಭವಕ್ಕೆ ಸರಿಬರುವುದಿಲ್ಲ. ಆ ಅನುಭವ ಜ್ಞಾನ ಮೊದಲಾದವು ನಿತ್ಯವಾದುವು ಮತ್ತು ಪರಸ್ಪರ ಮೀರಲಾರದವುಗಳು( Un rurpassable) ಆಗಿವೆ. (II ೩, ೪೬-೪೮).

೬. ಮಲತ್ರಯ ವಿಚಾರ : ಮಲತ್ರಯಗಳು ಜೀವನನ್ನು ಆವರಿಸಿಕೊಂಡಿವೆ. ಇವು ಬ್ರಹ್ಮಜ್ಞಾನ ಮತ್ತು ಆ ಬ್ರಹ್ಮನ ಚಂಚಲವಿಲ್ಲದ ಧ್ಯಾನಗಳಿಂದ ಮಾತ್ರವೇ ದೂರವಾಗುತ್ತದೆ.

೭. ಕರ್ಮ : ಕರ್ಮ ಎಂಬುದು ದಾಸ್ಯಕ್ಕೆ ಮಾತ್ರ ಮುಖ್ಯವಾದುದು, ಎಂದು ತಿಳಿಯಬೇಕು. ಕರ್ಮವೂ ಆರಂಭವಿಲ್ಲದುದು. ಅವರ ನೆಲೆಯಾದ ಕ್ಷೇತ್ರ, ಕ್ಷೇತ್ರಜ್ಞ ಎಂಬ ಹೆಸರು ಪಡೆದ ಆತ್ಮನೂ ಆರಂಭವಿಲ್ಲದವನು. ಇದು ಯಾವಾಗಲೂ ಹರಿಯುವ ಪ್ರವಾಹವು. ಇದರ ಫಲಿತಾಂಶವು ಪುನರ್ಜನ್ಮವೆಂಬ ಚಕ್ರಕ್ಕೆ ಬಂಧಿಸುವುದೇ ಆಗಿದೆ. ಕರ್ಮವು ತನ್ನ ಸ್ವಂತವಾಗಿ ಫಲವನ್ನೇನೂ ಕೊಡಲಾರದು. ಸೇವಕನಿಗೆ ಯಜಮಾನನು ಕೊಡುವ ಬಹುಮಾನದಂತೆ ಇದಕ್ಕೂ ಬಹುಮಾನವಿದೆ. ಇದು ಯಾವ ದೇವನ ಹೆಸರಿನಲ್ಲಿ ಮಾಡಲ್ಪಟ್ಟಿತೋ ಆ ದೇವನ ದಯೆಗೆ ಅಧೀನವಾಗಿದೆ.

ಒಳ್ಳೆಯ ಕರ್ಮಗಳ ಒಂದು ಗುಂಪು ಅಗ್ನಿಹೋತ್ರ ಇದರಂತಿರುವ ಕಾರ್ಯಗಳನ್ನು ಮಾಡುವುದೇ ಆಗಿದೆ. ಇದರ ಸಂಪೂರ್ಣತೆಯು ಜ್ಞಾನದಲ್ಲಿ ಇದೆ. (ಈ ಕರ್ಮವನ್ನು ಮಾಡಿದರೆ ಬ್ರಹ್ಮಜ್ಞಾನವುಂಟಾಗುತ್ತದೆ. ಎಂದರೆ ಬ್ರಹ್ಮಜ್ಞಾನಕ್ಕೆ ಈ ಕರ್ಮಗಳು

ಸಾಧನ.) ಕರ್ಮಗಳ ಇನ್ನೊಂದು ಗುಂಪು ಜ್ಞಾನಾರ್ಜನೆಯನ್ನು ಕಾಣದೆ ಇರುತ್ತದೆ. ಇವಲ್ಲದೆ ಕರ್ಮಗಳ ಗುಂಪು ಮೂರನೆಯದೊಂದು ಇದೆ. ಇದು ಸಂಸಾರಮುಕ್ತ ರಾದವರ ಆಪ್ತರಿಂದ ಪರಂಪರೆಯಾಗಿ (ಪೂರ್ವಾರ್ಜಿತವಾಗಿ) ಬಂದುದು.

ಕಷ್ಟ ಪರಂಪರೆಗಳನ್ನು ದಾಟಬೇಕಾದರೆ ಅಗ್ನಿಹೋತ್ರ ಮೊದಲಾದವುಗಳನ್ನು ಮಾಡಬೇಕಾದುದೇ ಉತ್ತಮ VI. ೧, ೧೭, ೧೮).

ಉತ್ತಮ ಕರ್ಮ (ಪುಣ್ಯ) ಕೆಟ್ಟ ಕರ್ಮ (ಪಾಪ) ಇವುಗಳಿಂದಾಗುವ ಫಲದ ಬಿಡುವಿಕೆಯು ಜ್ಞಾನಿಗಳಿಗೆ ಮಾತ್ರ ಸಂಭವಿಸುತ್ತದೆ. ಮರಣಕಾಲದಲ್ಲಿ ಅಲ್ಲ. ಜೀವನು ಈ ಲೋಕವನ್ನು ಬಿಟ್ಟುಹೋಗುವಾಗ ವಿಷ್ಣುಲೋಕದ ಗಡಿಯಲ್ಲಿ ಇರುವ ವಿರಜಾ ನದಿಯನ್ನು ದಾಟುವುದಕ್ಕೆ ಅನುಕೂಲಿಸುತ್ತದೆ. ಅದನ್ನು ದಾಟಿ (ಅದರಿಂದಾಚೆಗೆ) ಶಿವನ ನೆಲೆ ಇದೆ. ಇದೇ ಕೊನೆಯ ಮೋಕ್ಷ. ಆತ್ಮನು ತನ್ನ ಸಂಪೂರ್ಣತೆಯನ್ನು ಪಡೆಯುವುದು ಇಲ್ಲಿಯೇ.

ಪುಣ್ಯ ಕರ್ಮಗಳೂ ಕೂಡಾ ಫಲವನ್ನು ಉಂಟುಮಾಡುವವುಗಳೇ ಆಗಿವೆ. ಇವು ಕೂಡಾ ಮೋಕ್ಷಾಪೇಕ್ಷೆಯಾದವನಿಂದ ಅಪೇಕ್ಷಿಸಲ್ಪಡತಕ್ಕವುಗಳಲ್ಲ. ಆದುದರಿಂದ ಈ ಅಭಿಪ್ರಾಯದ ಪ್ರಕಾರ ಮೋಕ್ಷಕ್ಕೆ ವಿರೋಧಿಗಳೇ ಆಗಿವೆ. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಕರ್ಮವು ಜ್ಞಾನಕ್ಕೆ ಅನುಕೂಲವಾದ ಸ್ಥಿತಿಗಳನ್ನು ಭದ್ರಪಡಿಸುವ ಕೆಲಸವನ್ನು ಮಾಡುತ್ತದೆ. ಆರೋಗ್ಯವಾಗಿರುವುದು ಮುಂತಾದುದೇ ಅನುಕೂಲ ಸ್ಥಿತಿಗಳು. ಇವು ಆ ವ್ಯಕ್ತಿಯ ಮರಣ ಕಾಲದಲ್ಲಿ ಕಾಣದೆ ಹೋಗುತ್ತವೆ. ಇತರ ಪುಣ್ಯಕಾರ್ಯಗಳು ವಿದ್ಯೆ (Meditation) (ಈ ಅರ್ಥವು ಗ್ರಂಥಕರ್ತರದು) ಅಥವಾ ಅದರ ಸಹಾಯಕ ಭಾಗವಾಗಿ ಸಾಧನಮಾಡಿದವುಗಳು. ಫಲಾಪೇಕ್ಷೆ ಇಲ್ಲದೆ ಮಾಡಿ ದವುಗಳೆಂದು ಗಟ್ಟಿಯಾಗಿ ಹೇಳುವಂತಿಲ್ಲ (IV ೧, ೧೪).

೮. ಮೋಕ್ಷ : ಬ್ರಹ್ಮನ ಅಂತಜ್ಞಾನವುಳ್ಳವನು, ಬ್ರಹ್ಮ ಸಮರೂಪಕ್ಕೆ ಬಂದ ವನು, ಜಗತ್ತನ್ನು ಬ್ರಹ್ಮನೊಂದಿಗೆ ಹೊಂದಿಕೊಂಡುದೆಂಬು ತಿಳಿಯುತ್ತಾನೆ. ಏಕೆಂದರೆ ಅವನು ನೋಡುವುದು ಕೇಳುವುದು ತಿಳಿಯುವುದು ಬ್ರಹ್ಮನೇ ಅಲ್ಲದೆ ಮತ್ತೇನೂ ಅಲ್ಲ. (I ೩, ೮) ಅವನಿಗೆ ಒಟ್ಟಿನಲ್ಲಿ ಜಗತ್ತು ಇಲ್ಲದೆ ಇರುವುದಿಲ್ಲ. ಆದರೆ ಮಿತ (ಮೇರೆಯುಳ್ಳ) ಸ್ಥಿತಿಯಲ್ಲಿರುವುದು ಮತ್ತು ಅಸಂಪೂರ್ಣವಾಗಿರುವುದು, ಇಂತಹ ರೀತಿಯಲ್ಲಿ ಅದನ್ನು ತಿಳಿಯುವುದಿಲ್ಲ.

ಮುಕ್ತಾತ್ಮನು ಬ್ರಹ್ಮನ ಸಮಾನನಾದಾಗ ನಿತ್ಯವಾದ ಪೂರ್ಣಾನಂದಸಾಗರನಾಗು ತ್ತಾನೆ. ಅವನಿಗೆ ಜಗತ್ತಿನ ವಸ್ತುಗಳೂ ಜಗತ್ತಿನ ಸುಖವೂ ನೀರಿನ ಸಣ್ಣ ಹನಿಗಳಾಗಿ ರುತ್ತವೆ. ಮುಕ್ತನು ಜಗತ್ತನ್ನು ತಿಳಿಯಲಾರನು ಮತ್ತು ಅದನ್ನನುಸರಿಸಿಕೊಂಡು ಹೋಗಲಾರನು. ಅದರಲ್ಲಿ ಮಿತವಾದ ಸ್ಥಿತಿಯಿಲ್ಲ. ಈ ಜಗತ್ತಿನ ರೂಪವನ್ನು ಹೊಂದಿರುವ ಪರಮಾನಂದರೂಪ ಬ್ರಹ್ಮನ ಹೊರತಾಗಿ ಮತ್ತೇನನ್ನೂ ನೋಡುವು ದಿಲ್ಲ. ಅವನು ಆತ್ಮನನ್ನು ವಶಪಡಿಸಿಕೊಂಡವನು ಮತ್ತು ತನ್ನ ವಾಕ್ಕು, ಮನಸ್ಸು,

ದೃಷ್ಟಿಗಳನ್ನು ಆಳುವವನು ಎಂದರೆ ಅವನ ಜ್ಞಾನೇಂದ್ರಿಯಗಳು ಶುದ್ಧವಾದುವುಗಳು, ಮತ್ತು ಮುಕ್ತರಾಗದ, ಮೃತ್ಯುವಶರಾದ, ಪ್ರಾಣಿಗಳಿಗಿಂತ ಭಿನ್ನವಾದುವುಗಳು. (ತೈತ್ತಿರೀಯ I. ೬) ಇಂತಹ ಸಾಮರ್ಥ್ಯವನ್ನು ಹೊಂದಿ ಆಕಾಶದೇಹಿಯಾಗಿರುವ ಬ್ರಹ್ಮನಾಗುತ್ತಾನೆ— ಇಲ್ಲಿ ಆಕಾಶವೆಂದರೆ ಪಂಚಭೂತಗಳಲ್ಲಿ ಒಂದಾದ ಆಕಾಶವಲ್ಲ ಚಿದಂಬರ— ಅವನು ಚಿದಂಬರ ಪ್ರಕಾಶ ಶರೀರನಾಗುತ್ತಾನೆ, ಎಂದರ್ಥ— ಹೀಗೆ ಜಗತ್ತನ್ನು ತಿಳಿಯುವುದು ಮುಕ್ತನಾದ ಜೀವನಿಂದ ಮಾತ್ರವೇ ಅಲ್ಲ. ಅವನು ಬ್ರಹ್ಮ ನೊಡನೆ ಐಕ್ಯನಾಗಿ ಇರಲೂಬೇಕು. (I ೩, ೮).

ಈ ಮೋಕ್ಷದ ಸ್ಥಿತಿಯು ಎಂದರೆ ಅಪ್ರಮಾಣಪೂರ್ಣಾನಂದಬಾಗಿಯಾಗಿರುವುದ ದೇವತೆಗಳಿಂದಲೂ ಅಪೇಕ್ಷಿಸಲ್ಪಡತಕ್ಕದಾಗಿದೆ. ಏಕೆಂದರೆ ಅವರ ಸ್ಥಾನವು ಸ್ಥಿತಿ (Status) ಶಾಶ್ವತವಾಗಿ ನಿಲ್ಲದಂತಹದು, ಮತ್ತು ಒಂದು ಕಾಲದಲ್ಲಿ ಬಿಡುಗಡೆ ಹೊಂದುವಂತಹುದು (ಇದರಲ್ಲಿನ ಸಂಖ್ಯೆಗಳು ಯಾವ ಬ್ರಹ್ಮಸೂತ್ರದ ವ್ಯಾಖ್ಯೆಯಲ್ಲಿ ಶ್ರೀಕಂಠರು ಆ ಅಭಿಪ್ರಾಯವನ್ನು ತೋರಿಸಿರುವರೋ ಆ ಸೂತ್ರದ ಸಂಖ್ಯೆ.)

## ಉಪಸಂಹಾರ

ಈ ರೀತಿಯಲ್ಲಿ ಶ್ರೀಕಂಠರ ಶಿವಾದ್ವೈತವನ್ನು ವಿವರಿಸುತ್ತಾ ಗ್ರಂಥಕರ್ತರು ಕೊನೆಯಲ್ಲಿ ಉಪಸಂಹಾರವನ್ನು ಹೀಗೆ ಮಾಡಿರುತ್ತಾರೆ.

ವೇದಾಂತ ಸೂತ್ರಗಳನ್ನು ಒಬ್ಬನೇ ದೇವನುಂಟೆಂದು ತಿಳಿಯುವ ಪದ್ಧತಿಗೆ ಸರಿ ಯಾಗುವಂತೆ— ಇದೇ ಶೈವಾಗಮಗಳಲ್ಲಿ ಹೇಳಲ್ಪಟ್ಟ ಸ್ವಾತಂತ್ರ್ಯ ಆಧಾರವುಳ್ಳುದೂ ಆಗಿದೆ— ವೇದಾಂತದ ಅಭಿಪ್ರಾಯಕ್ಕೆ ಹೊಂದುವಂತೆ ವಿವರಿಸಿರುವುದೇ ಶ್ರೀಕಂಠನ ಕೆಲಸವಾಗಿದೆ. ಮತ ಮತ್ತು ನೀತಿ ಸಂಬಂಧವಾದ ಮುಖ್ಯ ವಿಚಾರಗಳಿಗೆ ನಮ್ಮ ಗ್ರಂಥಕರ್ತನು (ಶ್ರೀಕಂಠ) ತನ್ನ ಪೂರ್ಣ ಗಮನವನ್ನು ಕೊಟ್ಟಿದ್ದಾನೆ. ಜಗತ್ತಿನ ಸತ್ಯತೆ, (The Reclity of the World) ಮತ್ತು ಒಂದೊಂದು ವಸ್ತುವಿನ ಸತ್ಯತೆ, ಮನುಷ್ಯನ ಮನಸ್ಸು ದೇವನೊಡನೆ ಕೂಡಿ ಸ್ವತಂತ್ರವಾಗಿರುವಿಕೆ ಸಹಜವಾಗಿ ಇರುವ ಪ್ರಾಕೃತಿಕ ಕ್ರಮ ಸ್ಥಿತಿ— ಈ ಸ್ಥಿತಿಯನ್ನು ದೇವನ ಸರ್ವಶಕ್ತಿಯೂ ತಪ್ಪಿಸ ಲಾರದೆ ಅನುಸರಿಸಿಕೊಂಡೇ ಇರುತ್ತದೆ. ಇವೆಲ್ಲಾ ಸಂಗತಿಗಳೇ ದೇವನ ಸಂಬಂಧದ ಸಿದ್ಧಾಂತದಲ್ಲಿ (ಧರ್ಮಶಾಸ್ತ್ರ) ಶಾಶ್ವತವಾಗಿ ಬೆಲೆಯುಳ್ಳವುಗಳಾಗಿವೆ. ಅವುಗಳೇ ಶ್ರೀಕಂಠನ ಏಕದೈವವಾದದ ಮುಖ್ಯಾಭಿಪ್ರಾಯಗಳಾಗಿವೆ. (ಇದೇ ಶಿವಾದ್ವೈತ?)

ಈ ಮಾರ್ಗವು ಇತರ ಪದ್ಧತಿಗಳನ್ನು ಹುಚ್ಚು ಹುಚ್ಚಾಗಿ ದೂಷಿಸದೆ, ಶುದ್ಧ ವಾಗಿ ದ್ವೈತವಿಲ್ಲದೆ, (ಶುದ್ಧಾದ್ವೈತ) ಇರುವ ಪದ್ಧತಿಯಲ್ಲಿ ತಾರ್ಕಿಕ ಲಕ್ಷಣ ವಿಚಾರ ಮುಖವಾಗಿ ಬಹಿರಂಗವಾಗಿ ಹೊಂದಲ್ಪಡುವಂತೆ ಇರುವುದೆಂದು ಕಾಣುತ್ತದೆ. ಇವು ಈ ಗ್ರಂಥದ ಯೋಗ್ಯತೆಯ ಪ್ರಾಮುಖ್ಯ ಸಂಗತಿಗಳಾಗಿವೆ. ಶ್ರೀಕಂಠನು ಬ್ರಹ್ಮ

ಸೂತ್ರಗಳಲ್ಲಿ ಮಹಾದೇವನು 'ಶಿವ' ಎಂಬ ಸಿದ್ಧಾಂತವನ್ನು ಕಂಡು ಹಿಡಿಯುವ ವರ ಪುರುಷನಾಗಿದ್ದನು. ಶಿವ ಎಂದರೆ ಮಂಗಳಕರನು– ಆ ಶಿವನ ಕೂಗು ಅವನ ಭಕ್ತರಿಗೆ ಎಲ್ಲಾ ಕಾಲದಲ್ಲಿಯೂ ದಯೆ ತೋರಿಸುವಂತಹುದಾಗಿದೆ. ಜ್ಞಾನ ಮತ್ತು ಆನಂದ ಪ್ರಕಾಶಿನಿಯಾದ ಉಮೆಯು ಸಂಗಡಿಗನಾಗಿ ಇರುವುದು, ಲಯದ ಕಾರಣಕ್ಕಾಗಿ ಮುಕ್ಕಣ್ಣನಾಗಿರುವುದು, ಮುಂದೆ ಜಗತ್ತಿನ ಪುನಃ ಸೃಷ್ಟಿ (ತಿರೋದಾನ) ಮಾಡುವುದು, ಎಲ್ಲ ಕೆಲಸಗಳಿಗೂ ಮುಖ್ಯನಾದ ದೇವನಾಗಿ ಇರುವುದು, ಆದರೂ ಪ್ರತಿಯೊಂದು ಸಾಹಸಕಾರ್ಯದಲ್ಲಿ ಮುಖ್ಯಭಾಗವನ್ನು ವಹಿಸುವುದು, ತನ್ನ ಅಧೀನರಾದ ಕೆಲಸಗಾರರ ಸ್ವಾತಂತ್ರ್ಯದಲ್ಲಿ ಪ್ರವೇಶಿಸದಿರುವುದು, ಈ ಲಕ್ಷಣಗಳುಳ್ಳವನು ಶಿವನು. ಅವರು ತಪ್ಪುಮಾತುಳ್ಳವರಾದರೂ ತನ್ನ ಭಕ್ತರ ಮೇಲೆ ದಯೆಯನ್ನು ತೋರಿಸುವವನಾಗಿ ತನ್ನ ಸ್ವಂತ ರೂಪವನ್ನೇ ಕೊಡುವವನು. ಆದುದರಿಂದ ಅವನು ಸರ್ವಶ್ರೇಷ್ಠನು. ತ್ಯಾಜ್ಯನಲ್ಲ. ಇತರ ದೇವತೆಗಳನ್ನು ಅನುಸರಿಸುವವರಿಗೂ ಕೂಡಾ ಬೇಗನೆಯಾಗಲಿ, ತಡವಾಗಿಯಾಗಲೀ ಮುಕ್ತಿಯನ್ನು ಕೊಡುವವನು.

ಈ ವಿಚಾರ ದೃಷ್ಟಿಯುಳ್ಳವನಾದುದಕ್ಕಾಗಿ ಎಲ್ಲರಿಂದಲೂ ಶ್ರೀಕಂಠನು ಗೌರ ವಾರ್ಹನಾಗಿದ್ದಾನೆ. ಆತನ ತಿಳುವಳಿಕೆಯಲ್ಲಿ ಅರ್ಧಭಾಗ ಮುಚ್ಚಲ್ಪಟ್ಟವರಿಂದ ಅಥವಾ ಸಾಧ್ಯವಾದ ಜ್ಞಾನದ ಬೆಳವಣಿಗೆಯನ್ನು ಹೊಂದಿದವರಿಂದ ಮಾತ್ರವೇ ಅಲ್ಲ.

## ಪ್ರಕಾಶಕನ ವಿಚಾರಗಳು

ಇದೂವರೆವಿಗೆ ಶ್ರೀ ಎಸ್. ಎಸ್. ಸೂರ್ಯನಾರಾಯಣ ಶಾಸ್ತ್ರಿಗಳು M.A.B.Sc. Bor-at-low. ಕೊಟ್ಟ ಏಳು ಉಪನ್ಯಾಸಗಳ ಪುಸ್ತಕದಲ್ಲಿ ಇದ್ದುದನ್ನು ಬಹಳ ಸಂಗ್ರಹಿಸಿ ಕೊಂಚ ಮಟ್ಟಿಗೆ ಪ್ರಕಟಿಸಿದುದಾಯಿತು. ಆ ಪುಸ್ತಕವು ಸುಮಾರು ೩೦೦ ಪುಟಗಳುಳ್ಳದ್ದು. ಶ್ರೀಕಂಠರ ಬ್ರಹ್ಮಸೂತ್ರ ಭಾಷ್ಯಕ್ಕೆ ಅಪ್ಪಯ್ಯ ದೀಕ್ಷಿತರು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಆ ಮೂಲ ಪ್ರತಿಯಿಂದ ತಿಳಿಯಬಹುದಾದ ಕೆಲವು ಅಂಶಗಳನ್ನು ಮುಂದೆ ಸಂದರ್ಭಾನುಸಾರ ಪ್ರಕಟಿಸಬಹುದು. ಆದರೆ ಈ ಪುಸ್ತಕದ ಅಭಿಪ್ರಾಯದಿಂದಲೇ ಶಿವಾದ್ವೈತಕ್ಕೆ ಬಹಳ ಗೌರವವಿರುವುದೂ, ಶ್ರೀಕಂಠ ಶಿವಾಚಾರ್ಯರಿಗೆ ಅಧಿಕವಾಗಿ ಸನ್ಮಾನವಿರುವುದೂ ತಿಳಿಯಬರುತ್ತದೆ. ಶ್ರೀ ನೀಲಕಂಠ ಶಿವಾಚಾರ್ಯರು ವೀರಶೈವರ ಗುರುಗಳೆಂದು ಹೇಳುವವರು ಈಗ ಕೆಲವರು ಇದ್ದಾರೆ. ಕ್ರಿಯಾಸಾರದ ಕರ್ತೃಗಳಾದ ನೀಲಕಂಠರನ್ನು ಬಿಟ್ಟರೆ ಇವರೇ ಮುಂದೆ ನಿಲ್ಲುವ ಭಾಷ್ಯ ಕರ್ತರಾದ ನೀಲಕಂಠರು (ಶ್ರೀಕಂಠರು), ಇವರು ಉಮಾಸಹಿತನಾದ ಶಿವನನ್ನು ತಮ್ಮ ಲಕ್ಷ್ಯದಲ್ಲಿ ಇಟ್ಟುಕೊಂಡು ಆ ಶಿವನ ಅದ್ವೈತ ಲಕ್ಷಣವನ್ನು ತಮ್ಮ ಶಿವಾದ್ವೈತದ ಅಭಿಪ್ರಾಯದಲ್ಲಿ ತೆಗೆದುಕೊಂಡಿದ್ದಾರೆ. ಇದಕ್ಕೆ ವಿಶೇಷವಾದ ಗೌರವವೂ ಕೊಡಲ್ಪಟ್ಟಿದೆ. ವೀರಶೈವರು ನಿರಾಕಾರನಾದ ಶಿವನ ಅದ್ವೈತ ಲಕ್ಷಣವನ್ನು ಅವಲಂಬಿಸಿರುವ ಶಿವಾ

ದ್ವೈತವನ್ನು ನಂಬಿರುವರು. ಶ್ರೀಕಂಠರ ಶಿವಾದ್ವೈತಕ್ಕೂ ವೀರಶೈವ ಶಿವಾದ್ವೈತಕ್ಕೂ ಸಮಾನವಾದ ಹೋಲಿಕೆಗಳೇನಿವೆ ? ವಿರೋಧವಾದ ಸಂಗತಿಗಳೇನಿವೆ ? ಈ ವಿಷಯ ಗಳನ್ನೊಳಗೊಂಡ ವಿಮರ್ಶೆಯನ್ನು ಸದ್ಯದಲ್ಲಿಯೇ ಸ್ವಲ್ಪ ಮಟ್ಟಿಗೆ ಕೊಡಬೇಕೆಂದು ಯೋಚಿಸಿ ಇದ್ದೇನೆ. ಅದನ್ನು ನೋಡಿದಾಗ ಈ ನೀಲಕಂಠರಿಗೂ ವೀರಶೈವಕ್ಕೂ ಎಷ್ಟು ಮಟ್ಟಿಗೆ ಸಂಬಂಧವಿದೆ ಎಂಬುದು ವೀರಶೈವರಿಗೆ ಚೆನ್ನಾಗಿ ಗೋಚರವಾಗುವು ದೆಂದು ನಂಬಲಾಗಿದೆ.

ಸೂಚನೆ: ಈ ಗ್ರಂಥಕರ್ತರು ೧೯೨೯ರಲ್ಲಿ ಮುದ್ರಿಸಿದ "ಶಿವಾದ್ವೈತ ನಿರ್ಣಯ" ಎಂಬ ಗ್ರಂಥದಲ್ಲಿ ಶ್ರೀಕಂಠರ ತರುವಾಯದವರು ರಾಮಾನುಜಾಚಾರ್ಯರೆಂದು ಹೇಳು ತ್ತಾರೆ. (Introduction P. IV)

(–ಸಂ. ೬೪–೬೫)

# ೧೬. ವೇದ ಸಂಜೀವಿನಿ

'ವೇದ ಸಂಜೀವಿನಿ' ಎಂಬುದೊಂದು ಕನ್ನಡ ಗ್ರಂಥ, ಇದನ್ನು ಮೈಸೂರು ಹೊಸಮಠದ ಚರಮೂರ್ತಿ ಶ್ರೀ ಬಸವಲಿಂಗ ಸ್ವಾಮಿಗಳು ಪರಿಶೋಧಿಸಿ ಮೈಸೂರು ಜಿ. ಟಿ. ಎ. ಪ್ರೆಸ್ಸಿನಲ್ಲಿ ೧೯೦೯ರಲ್ಲಿ ಮುದ್ರಿಸಿ ಪ್ರಕಟಿಸಿರುತ್ತಾರೆ. ಇದರಲ್ಲಿ ಹತ್ತು ಅಧ್ಯಾಯಗಳೂ ೧೦೯ ವಚನಗಳೂ ಇವೆ. ಗ್ರಂಥಕರ್ತನು ೧ನೆಯ ಅಧ್ಯಾಯದ ಪೀಠಿಕೆಯ ವಚನದಲ್ಲಿ ಷೋಡಶೋತ್ತರ ಶತ (೧೧೬) ವಚನಗಳಿದ್ದಂತೆ ಬರೆಯುತ್ತಾನೆ. ತಮಗೆ ಸಿಕ್ಕ ಪ್ರತಿಯಲ್ಲಿನ ೧೦೯ ವಚನಗಳನ್ನೆ ಮುದ್ರಿಸಿರುವುದಾಗಿ ಪ್ರಕಟನಕಾರರು ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಇದನ್ನು ರಚಿಸಿದವನು. ಈ ಪುಸ್ತಕದ ಕೊನೆಯಲ್ಲಿ ಹೀಗೆ ಹೇಳುತ್ತಾನೆ.

"ಶ್ರೀಮತ್ ಪರಶಿವೇಶಾನ ಮುಖ ಸಂಜಾತ ಸ್ಥೂಲಗಣೇಶ್ವರ ರೂಪ ಶ್ರೀ ಮಹಾಘನ ದೊಡ್ಡ ದೇಶಿಕಾರ್ಯ ಕರಂಜೋದ್ಭವ ಮಾಸ್ತಿ ಸತ್ಕುಲದೀಪ ಇಮ್ಮಡಿ ಕಾರ್ಯ ಭೂಪತಿ ಭಾರ್ಯಾ ಕುಪ್ಪಮಾಂಬಾಗರ್ಭಾಬ್ಧಿ ಸುಧಾಕರಾಯಮಾನ ಮುಮ್ಮಡಿ ಕಾರ್ಯ ಕ್ಷಿತೀಂದ್ರ ವಿರಚಿತಮಾದ ರೇವಣಸಿದ್ಧೇಶ್ವರ ಮರುಳು ಸಿದ್ಧೇಶ್ವರೈಕೋರಾಮ ಪಂಡಿತಾರ್‍ಯ್ಯಾಲ್ಲಮ ಪ್ರಭು ಚೆನ್ನಬಸವೇಶ್ವರಾದಿ ಪೂಜ್ಯಪಾದ ವಿರಚಿತ ಸಕಲ ಗ್ರಂಥಸಾರ ಭೂತಮಾದ ವೀರಶೈವ ಸಿದ್ಧಾಂತ ರೂಪ ವೇದ ಸಂಜೀವಿನಿಯಲ್ಲಿ ಹತ್ತನೇ ಅಧ್ಯಾಯವು ಮುಗಿದುದು."

ಇದರಿಂದ ಶ್ರೀ ಮಹಾಘನ ದೊಡ್ಡ ದೇಶಿಕಾರ್ಯರವರ ಹಸ್ತದಲ್ಲಿ ಜನಿಸಿದ– ದೀಕ್ಷೆಯಾದ ಮೇಲೆ ಗುರುವಿನ ಹಸ್ತದಲ್ಲಿ ಜನಿಸಿದರೆಂದು ವೀರಶೈವರ ಭಾವನೆ– ಇಮ್ಮಡಿ ಕಾರ್ಯಭೂತಿಯ ಮಗನಾದ ಮುಮ್ಮಡಿ ಕಾರ್ಯಭೂಪತಿಯು ಇದನ್ನು ರಚಿಸಿದ ನೆಂದು ವ್ಯಕ್ತವಾಗುತ್ತದೆ.

ಈ ಮುಮ್ಮಡಿ ಕಾರ್ಯ ಭೂಪತಿಯು ಶ್ರೀ ಮಹಾಘನ ದೊಡ್ಡ ದೇಶಿಕಾರ್ಯರ ವಿಷಯವಾಗಿ ತನ್ನ ೧ನೆಯ ಅಧ್ಯಾಯದ ಪೀಠಿಕಾ ವಚನದಲ್ಲಿ ಶಿವನ ಅಪ್ಪಣೆಯ ಪ್ರಕಾರ ಸ್ಥೂಲಗಣೇಶ್ವರನು ಕೆಂಪ ಭೂಪತಿಯ ಮಗನಾಗಿ ಹುಟ್ಟಿ ೧೬ನೆಯ ವರ್ಷದಲ್ಲಿ ತನ್ನ ಎಡಗೈಯಲ್ಲಿ ಪ್ರಸನ್ನಮಾದ ಜ್ಯೋತಿರ್ಲಿಂಗವನ್ನು ಕಂಡು ಅದನ್ನು ಧರಿಸಿ– ಇದು ಅನುಗ್ರಹವನ್ನು ಹೊಂದಿದ ಕಾಲವಾಗಿರಬೇಕು– ದೊಡ್ಡ ದೇಶಿಕ ಎಂಬ ಹೆಸರಿನಿಂದ ಅನೇಕ ಪವಾಡಗಳನ್ನು ಮಾಡಿ ವೀರಶೈವ ಮತೋದ್ಧಾರಣ ಮಾಡಿದನೆಂದೂ, ಆತನು ಕನಸಿನಲ್ಲಿ ಒಂದು ದೀಕ್ಷೆಯನ್ನು ಮಾಡಿ ಪರತತ್ತ್ವ ವಚನವನ್ನು ರಚಿಸೆಂದು ಹೇಳಿದ ಪ್ರಕಾರ ತಾನು ರಚಿಸಿರುವುದಾಗಿಯೂ, ಹೇಳಿದ್ದಾನೆ.

ಬೆಳಗಾಂವ ಲಿಂಗರಾಜ ಪ್ರೌಢ ವಿದ್ಯಾಲಯದ ಪಂಡಿತರಾದ ಮ. ರಾ. ಎಂ. ಆರ್. ಸಾಖರೆ M.A.T.D. (catab) ಅವರು ಪ್ರಕಟಿಸಿದ ಲಿಂಗಧಾರಣ ಚಂದ್ರಿಕೆಯ ಮುನ್ನುಡಿಯಲ್ಲಿ(Introduction) ವಿಶ್ವಾರಾಧ್ಯರ ವಿಷಯವಾಗಿ (ಪುಟ ೪೧೦-೪೧೧) ಇಂಗ್ಲಿಷ್‌ನಲ್ಲಿ ಬರೆಯುತ್ತಾ ಮುಮ್ಮಡಿ ಕಾರ್ಯಂದ್ರನ ವೀರಶೈವ ಸಂಜೀವಿನಿಯಲ್ಲಿ ೫ನೆಯ ಆಚಾರ್ಯರ ಉತ್ಪತ್ತಿಯ ವಿಷಯವು ಬಂದಿರುವುದಾಗಿಯೂ, ಸ್ಥೂಲಗಣೇಶ್ವರ ನನ್ನು ಶಿವನು ಕೆಂಪ ಭೂಪತಿಯ ಮಗನಾಗಿ ಜನಿಸಲು ಕೈಲಾಸದಿಂದ ಕಳುಹಿಸಿದನೆಂತಲೂ ಅವರೇ ವಿಶ್ವಾರಾಧ್ಯರೆಂತಲೂ, ಆದುದರಿಂದ ಈ ವಿಶ್ವಾರಾಧ್ಯರು ಬಹಳ ಹೊಸಬ ರೆಂತಲೂ ಹೇಳಿದ್ದಾರೆ.

ಮೇಲೆ ಕಂಡ ವೇದ ಸಂಜೀವಿನಿಗೆ ಇವರು ವೀರಶೈವ ಸಂಜೀವಿನಿ ಎಂದು ಕರೆ ದಿರುತ್ತಾರೆಂತಲೂ ಇದರಲ್ಲಿ ಹೇಳಿದ ಕೆಂಪ ಭೂಪತಿಯ ಮಗನ ವಿಷಯವನ್ನೇ ಹೇಳಿರು ತ್ತಾರೆಂತಲೂ ವ್ಯಕ್ತವಾಗುತ್ತದೆ.

ಈ ವೇದ ಸಂಜೀವಿನಿಯಲ್ಲಿ ಕೆಂಪ ಭೂಪತಿಯ ಮಗನಾಗಿ ದೊಡ್ಡ ದೇಶಿಕ ಎಂಬ ಹೆಸರಿನಿಂದ ಹುಟ್ಟಿ ಅನೇಕ ಪವಾಡಗಳನ್ನು ಮಾಡಿದನೆಂದು ಹೇಳಲ್ಪಟ್ಟಿದೆಯೇ ಹೊರತು ವಿಶ್ವಾರಾಧ್ಯ ಎಂಬ ಹೆಸರಿನಿಂದ ಹುಟ್ಟಿದನೆಂದು ಹೇಳಲ್ಪಟ್ಟಿಲ್ಲ. ಈ ದೊಡ್ಡ ದೇಶಿಕಾರ್ಯರನ್ನು ವಿಶ್ವಾರಾಧ್ಯರೆಂದು ಮ. ರಾ. ಸಾಖರೆಯವರು ಹೇಗೆ ಭಾವಿಸಿದರೋ ತಿಳಿಯದಾಗಿದೆ. ಈ ವೇದ ಸಂಜೀವಿನಿಯಲ್ಲಿ ಶಿವನು ನಾರದನಿಗೆ–

"ನನ್ನ ತತ್ಪುರುಷ ಮುಖದಿಂ ರೇವಣ ಸಿದ್ಧೇಶ್ವರನೆಂಬ ಮಹಾಮೂರ್ತಿಯುದ್ಭ ವಿಸಿ ಮರ್ತ್ಯಲೋಕವಂ ಪಾವನ ಮಾಡಿದನು. ಆಮೇಲೆ ನನ್ನ ಅಘೋರ ಮುಖವಲ್ಲಿ ಮರುಳು ಸಿದ್ಧೇಶ್ವರನುದಿಸಿ ಜೀವದ ಪಾಪಮನುಡುಗಿದನು. ನನ್ನ ಸದ್ಯೋಜಾತ ಮುಖದಲ್ಲಿ ಏಕೋರಾಮೇಶ್ವರ ನೊಗೆದು ಧರೆಯಂ ಶುಚಿಮಾಡಿದನು. ನನ್ನ ವಾಮ ದೇವ ಮುಖದಲ್ಲಿ ಪಂಡಿತಾರಾಧ್ಯನು ಜನಿಸಿ ಜಗತ್ತಿನ ವಿಪತ್ತಂ ಪರಿಹರಿಸಿದನು. ಈಗ ನನ್ನ ಈಶಾನ ಮುಖದಲ್ಲಿ...... ಸ್ಥೂಲಗಣೇಶ್ವರಾಹ್ವಯದಿಂ ಮೂರ್ತಿಗೊಂಡು ನಿನ್ನಿಷ್ಟವಂ ತುಷ್ಟಿಬಡಿಸುವೆನು."

ಈ ರೀತಿ ಹೇಳಿದ್ದಾನೆ. ಈ ಶಿವನ ವಾಕ್ಯವನ್ನು ನಂಬಿ ಅವರು ಶ್ರೀ ಮಹಾ ಘನ ದೇಶಿಕಾರ್ಯರನ್ನು ಐದನೆಯ ಆಚಾರ್ಯರೆಂದು ಭಾವಿಸಿದಂತೆ ತೋರುತ್ತದೆ. ಇಲ್ಲಿ ಹಿಂದೆ ನಾಲ್ಕು ಆಚಾರ್ಯರು ಒಬ್ಬರ ತರುವಾಯ ಮತ್ತೊಬ್ಬರು ಮಾಡಿದಷ್ಟು ಮತೋ ದ್ಧಾರ ಕಾರ್ಯವನ್ನು ತನ್ನ ವಂಶದ ಗುರುಗಳು ಮಾಡಿದರೆಂದು ಪ್ರಖ್ಯಾತಿಪಡಿಸಲಿಕ್ಕೆ ಮೇಲೆ ಕಂಡಂತೆ ಕವಿಯು ಚಿತ್ರಿಸಿರುವನೇ ಹೊರತು ದೊಡ್ಡ ದೇಶಿಕಾರ್ಯರು ೫ನೆಯ ಆಚಾರ್ಯರೆಂದೂ ಮೇಲೆ ಕಂಡ ಆಚಾರ್ಯರೊಡನೆ ಕೂಡಿ ಪಂಚಾಚಾರ್ಯರೆಂದೂ ಹೇಳಿಲ್ಲ. ಈ ದೊಡ್ಡ ದೇಶಿಕಾರ್ಯರು ಐದನೆಯ ಆಚಾರ್ಯರೆಂದು ಯಾವ ಗ್ರಂಥವೂ ಹೇಳುವುದಿಲ್ಲ. ಆದರೆ ಆ ದೊಡ್ಡ ದೇಶಿಕಾರ್ಯರು ಪಂಚಾಚಾರ್ಯ ಪೀಠಗಳಲ್ಲಿ ಶಿವನ ಈಶಾನ ಮುಖೋ

ದ್ಭೂತರಾದ ಕಾಶೀ ಪೀಠಕ್ಕೆ ಸೇರಿದವರೆಂದು ಊಹೆ ಮಾಡಲಿಕ್ಕೆ ಬರುತ್ತದೆ. ಕೆಲವು ಗ್ರಂಥಗಳಲ್ಲಿ ವಿಶ್ವಾರಾಧ್ಯರು ಬಹಳ ಕಾಲ ಬದುಕಿರದೆ ನಾಲ್ಕು ಜನ ಆಚಾರ್ಯರಿಗೆ ನೀವೇ ಮತೋದ್ಧರಣ ಕಾರ್ಯ ಮಾಡಿರೆಂದು ಕಡೆಗಾಲದಲ್ಲಿ ಹೇಳಿದಂತೆ ಬರುವುದರಿಂದ, ಈ ದೊಡ್ಡ ದೇಶಿಕಾರ್ಯರು ವಿಶ್ವಾರಾಧ್ಯರಲ್ಲ ಎಂದು ನಿರ್ಧರಿಸಲಿಕ್ಕೆ ಬರುತ್ತದೆ.

ಮೈಸೂರಿನ ದಕ್ಷಿಣದಲ್ಲಿ ಸಂಜನಗೂಡು ಪ್ರಾಂತದಲ್ಲಿ "ಕಾರ್ಯ" ಎಂಬ ಗ್ರಾಮವಿದ್ದು ಆ ಕಾರ್ಯ ಕ್ಷಿತೀಂದ್ರನು ಈ ವಚನ ಗ್ರಂಥವನ್ನು ರಚಿಸಿರುವುದನ್ನು ನೋಡಿದರೆ, ಶೂನ್ಯ ಸಿಂಹಾಸನದ ಮೂರನೆಯ ಅಧಿಕಾರಿಗಳಾದ ಸಿದ್ಧರಾಮೇಶ್ವರನ ತರುವಾಯ ಹರದನಹಳ್ಳಿಯಲ್ಲಿ ಶೂನ್ಯ ಸಿಂಹಾಸನಾಧಿಕಾರವು ಸ್ಥಾಪಿತವಾಯಿತೆಂದು "ನಿರಂಜನ ವಂಶ ರತ್ನಾಕರ" ಎಂಬ ಗ್ರಂಥವು ಹೇಳುವುದರಿಂದ ಮೈಸೂರು ಡಿಸ್ಟ್ರಿಕ್ಟಿನಲ್ಲಿರು ಆ ಹರದನಹಳ್ಳಿಯ ಸಮೀಪದಲ್ಲಿ "ಕಾರ್ಯ"ವಿರುವುದರಿಂದ ಆಮೇಲೆ ಇದು ಈ ಪ್ರಾಂತದಲ್ಲಿ ಹರಡಲ್ಪಟ್ಟ ವೀರಶೈವ ಧರ್ಮ ಗ್ರಂಥವಾಗಿದೆ ಎಂದು ತಿಳಿಯಬಹುದು.

ಕಲ್ಯಾಣದ ಶಿವಶರಣರ ಮತ್ತು ಆಚಾರ್ಯರ ಸಕಲ ಗ್ರಂಥಸಾರ ರೂಪವೆಂದು ಕವಿಯು ತನ್ನ ಗ್ರಂಥದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಇದರೊಳಗಿನ ವಚನಗಳೂ ಒಳ್ಳೆಯ ಅನುಭವದೊಡನೆ ಕೂಡಿದವುಗಳಾಗಿವೆ.

ಉದಾಹರಣೆಗೆ ಒಂದು ವಚನವನ್ನು ಕೊಟ್ಟಿದೆ.

೮ನೆಯ ಅಧ್ಯಾಯ ೭ನೆಯ ವಚನ. "ಹ" ಶಬ್ದಕ್ಕೆ ಹರಣಾರ್ಥವು "ಸ" ಶಬ್ದಕ್ಕೆ ಯೋಗಾರ್ಥವು ಆದುದರಿಂದ ಸಂಹಾರ ಮೂರ್ತಿಯಾದ ರುದ್ರನೇ "ಹ" ಶಬ್ದ, ವಿಶ್ವ ಮೂರ್ತಿಯಾದ ವಿಷ್ಣುವೇ "ಸ" ಶಬ್ದ, ಅವೆರಡೂ ಶಿವಶಕ್ತಿಗಳಾಗಿಹವು, ಒಂದು ಗೂಡಿಸುತ್ತಿಹುದು, ಒಂದು ಅಗಲಿಸುತ್ತಿಹುದು, ಎರಡೂ ಕೂಡಿ ಹಸವಾಗಿಹದು. ಹಸ–ಹಸನೇ ಎಂಬ ಧಾತುವಿನಿಂ ಹಸ ಎಂದರೆ ಕ್ರೀಡೆ, ಅವೆರಡರ ಕ್ರೀಡಾಮಧ್ಯದಲ್ಲೊಂದು ಮಿಥ್ಯಾ ಬಿಂದುವು ಜನಿಸಿತ್ತು, ಅದು ಒಂದರಲ್ಲಿ ಕೂಡಿದಲ್ಲಿದೆ ಕಾರ್ಯಕಾರಿಯಾಗದೆ ಉಚ್ಚಾರಣೆಗೆ ಯೋಗವಲ್ಲದಿಹುದು, ದಶಸ್ಥಾನವೇ ತಾನಾಗಿ ಲೆಕ್ಕಗಳಂ ಸೃಷ್ಟಿಸುತ್ತಿರ್ಪುದರಿಂ ಬಿಂದುನಾದಾದರಿಂದದೇ ಸೃಷ್ಟಿಕರ್ತೃವಾಗಿ ಉತ್ತರ ಮುಖದಲ್ಲಿ ವ್ಯರ್ಥವಾಗಿ ದಕ್ಷಿಣ ಮುಖ್ಯದಲ್ಲಿರ್ಥವಂ ಕೊಡುತೀರ್ಪುದರಿಂ "ಹ"ಕಾರದೊಡನೆ ಕೂಡಿ, "ಹಂ" ಎಂಬುದಾಗಿ ರಜೋಮೂರ್ತಿಯಲ್ಲಿ ವಿರಮಿಸಿ ತ್ರಿಮೂರ್ತ್ಯಾತ್ಮಕವಾದ ಪರ ಬ್ರಹ್ಮವೇ ತಾನೆಂದಹಂಕರಿಸುತ್ತಿರ್ಪುದಾದುದರಿಂ "ಹಂಸ" ಶಬ್ದಕ್ಕಾ ಮೂರ್ತ್ಯಾತ್ಮಕವೇ ಅರ್ಥವು. ಸೂರ್ಯನು ತ್ರಿಮೂರ್ತ್ಯಾತ್ಮಕನಾದುದರಿಂ ಹಂಸವೆಂಬ ನಾಮವಂ ಹೊಂದಿದನು. ತ್ರಿಗುಣಾತ್ಮಕನಾದುದರಿಂ ಜೀವನಿಗೆ ಹಂಸವೆಂಬ ನಾಮವಾಯಿತ್ತು. ಪೂರಕವೇ "ಹ"ಕಾರ, ರೇಚಕವೇ "ಸ"ಕಾರ, ಕುಂಭಕವೇ ಬಿಂದು, ಇಂತಪ್ಪ: ನಿಜ ಸ್ವರೂಪವಾದ "ಹಂಸ" ಶಬ್ದವನ್ನು ನಾಸಿಕಾಗ್ರದಲ್ಲಿ ವಾಯು ರೂಪಿಯಾದ ಜೀವನು ನಡೆಸುತ್ತಿರ್ಪನು. ಪೂರಕನು ಆತ್ಮಚಕ್ರವಂ ಭ್ರಮಿಸಿ ಶರೀರವಂ ರಕ್ಷಿಸುತ್ತಿರ್ಪುದು. ಕುಂಭಕವು ನಾನಾ ಗುಣಂಗಳಂ ಸೃಷ್ಟಿಸುತ್ತಿರ್ಪುದು. ರೇಚಕವು ನಾಸಿಕವಂ ವಿಕಸನ

ಗೊಳಿಸುತ್ತಿರ್ಪುದರಿಂ, ಪೂರಕವು ಮಕುಳಿತನವನ್ನಾಗಿ ಮಾಡುತ್ತಿರ್ಪುದರಿಂ, ಆ ರೇಚಕವೇ ವಿಷ್ಣು ಸ್ವರೂಪವು. ಪೂರಕಪೇ ಶಿವಸ್ವರೂಪು. ರೇಚಕವಂ ಬಿಟ್ಟು ಪೂರಕವಂ ಸಾಧಿಸಿದ ಪುರುಷನೇ ಮಹಾಯೋಗಿಯಾಗಿ ತಾನೇ ಬ್ರಹ್ಮ ಸ್ವರೂಪಿಯಾಗುವನು. ನಿನ್ನಂ ಸಾಧಿಸಿದವರು ನಿನ್ನಂತಪ್ಪರು, ನಿನ್ನನ್ನೇ ಪೂಜಿಸಿ ನಿನ್ನನ್ನೇ ಸಾಧಿಸುತ್ತಿರ್ಪ ಮಹಿಮರು ನಿನ್ನಂತಪ್ಪುದೇನಚ್ಚರಿಯೇ ? ಇಂತಪ್ಪ ನಿಜಾನಂದ ಸುಖವನೆನಗಿತ್ತು ಸಲಹಾ, ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ.

ಈ ವಚನವು "ಹಂಸ" ಎಂಬ ಮಂತ್ರದ ಅರ್ಥವನ್ನು ಚೆನ್ನಾಗಿ ವಿವರಿಸುತ್ತದೆ. ಒಬ್ಬೊಬ್ಬರು ಒಂದೊಂದು ವಿಧವಾಗಿ ವಿಷಯಗಳ ಬೋಧೆ ಮಾಡಿದರೆ ಓದುವವರಿಗೆ ವಿಶೇಷ ಸಹಾಯವಾದಂತಾಗುತ್ತದೆ.

ಈ ಗ್ರಂಥದ ಬರೆಹದ ಒಂದು ಪ್ರತಿಯು ಮಾತ್ರ ಮೈಸೂರಿನ ಆಸ್ಥಾನ ವಿದ್ವಾನ್ ಪಂಡಿತರಾದ ಹೊಸಮಠದ ಶ್ರೀ ನಿ. ಬಸವಲಿಂಗ ಸ್ವಾಮಿಗಳಲ್ಲಿ ಇದ್ದು ಅದನ್ನು ಅವರು ಬಹುಕಷ್ಟದಿಂದ ಪರಿಶೋಧನೆ ಮಾಡಿ ಮುದ್ರಿಸಿದಂತೆ ತಿಳಿಯಬರುತ್ತದೆ. ಇದರ ಸಂಸ್ಕೃತ ಭಾಷೆಯ ಮೂಲವೂ ಇರುವುದಾಗಿ ತಿಳಿದುಬರುತ್ತದೆ. ಇದು ಅಚ್ಚಾಗುವುದೆಂದಿಗೋ! ನಮ್ಮ ಪೂರ್ವಿಕರ ಗ್ರಂಥಗಳನ್ನೆಲ್ಲಾ ನಾವು ಓದಿ ಮುಂದೇನು ಮಾಡಬೇಕು ಎಂಬ ಕಾರ್ಯಾರಂಭಕ್ಕೆ ಸಿದ್ಧರಿಲ್ಲದೆ ಇರುವುದಕ್ಕಾಗಿ ಬಹಳ ವಿಷಾದಿಸಬೇಕಾಗಿದೆ.

ಈ ಪ್ರಾಂತದ ಮುಖ್ಯ ಮಠವಾದ ಸುತ್ತೂರು ವೀರಸಿಂಹಾಸನ ಮಠಕ್ಕೆ ಸೇರಿದ ಘನಲಿಂಗಿದೇವರು ಒಂದು ವಚನ ಗ್ರಂಥವನ್ನು ರಚಿಸಿರುತ್ತಾರೆ. ಅದೂ ಒಳ್ಳೆಯ ಅನುಭವ ಗರ್ಭಿತವಾಗಿದೆ. ಮೈಸೂರು ಪ್ರಾಂತದ ಪೂರ್ವಿಕ ವೀರಶೈವರ ಅನುಭವದ ವಚನಗಳನ್ನು ಉತ್ತರ ಕರ್ನಾಟಕದವರು ಓದಿ ಸವಿಯಲೆಂದು ನಾವು ಆಶಿಸುತ್ತೇವೆ. ಘನಲಿಂಗಿದೇವರ ವಚನವೂ ಈಗ ಅಚ್ಚಿನಲ್ಲಿ ಇದೆ. ಸದ್ಯದಲ್ಲಿ ಹೊರಬೀಳುವುದು.

(-ಸಂ. ೫೪-೫೫)

# ೧೭. ಅಕ್ಕಗಳ ಸೃಷ್ಟಿ ವಚನ

ನಿರವಯ ನಿರಾಕಾರ ನಿರ್ವಾಜ್ಯಮಪ್ಪ ಪರವಸ್ತುವಿನ ಪರಮ ತೇಜೋರಾಶಿಯಿಂದ ಪರಶಿವ ಶಕ್ತಿಗಳು ಉದಯವಾಗಲು, ಆ ಎರಡರೊಳಗೆ ಮೂಲವಾದ ಸಮಸ್ತ ತತ್ವಂಗಳುದಯಿಸಿ ಸ್ಥಿತಿ ವಿಶ್ರಾಂತಿಗೆ ಕಾರಣವಾಗಿ ಆ ಶಿವಸಮೇತವಾದುದರಿಂದ ಶಾಂಭವ ಲೋಕದೊಳಿರ್ದ ಮುಕ್ತಾಯಿಗಳು ತಾವೇ ಮರ್ತ್ಯಲೋಕದ ಉಡುತಡಿ ಎಂಬ ಶಿವಪುರದಲ್ಲಿ ಮಹಾದೇವಿ ಎಂಬಭಿದಾನದಿಂದ ಜಗಹಿತಾರ್ಥವಾಗಿ ಅವತರಿಸಿ, ಕೌಶಿಕರಾಯನ ಉಲ್ಲಂಘಿಸಿ ನಿರ್ವಾಣ ಸ್ಥಲವನನುಕರಿಸಿ ನಿಜಾನುಭಾವೋತ್ಕೃಷ್ಟದಿಂದ ಕೇಶಾವರಣವ ಮಾಡಿಕೊಂಡು ಭಕ್ತಿ ಜ್ಞಾನ ವೈರಾಗ್ಯವಿಡಿದಾಚರಿಸುತ್ತಿರ್ದ ಮಹಾದೇವಿಯಕ್ಕಳು ತಮ್ಮಂಶೀಭೂತವಾದ ಮರ್ತ್ಯಲೋಕದ ಮಹಾಗಣಂಗಳು ಬರೆದೋದಿ ಹಾಡಿ ಕೇಳಿ ಅರಿದಾನಂದಿಸಿ ನಿತ್ಯ ಶಿವಸುಖಿಗಳಾಗಲಿ ಎಂದು ಉಪದೇಶಿಸಿದ ಸೃಷ್ಟಿಯ ವಚನ.

ಷೋಡಶಸ್ಥಲ, ಪರಿಪ್ರಮಾಣವಾಗಿ ಸೃಜಿಸಿ ಹೇಳುವಂತಹ ಸೃಷ್ಟಿಯ ವಾಕ್ಯಾಮೃತವು– ಅದಲ್ಲದೆ ಜಗಸೃಷ್ಟಿ ನಿಮಿತ್ತಾರ್ಥವಾಗಿ ಹಾಡಿದಂಥಾ ವಾಕ್ಯಮಾಲೆ–

ಆದಿ ಎಂದೊಡೆ ದೇಹ, ಅನಾದಿ ಎಂದೊಡೆ ಆತ್ಮನು. ಈ ಎರಡರೊಳಗೆ ಆತ್ಮನೇ ನಿತ್ಯನು ಎಂದು ನಿತ್ಯ ಅನಿತ್ಯವ ತಿಳಿಯಲರಿಯದೆ ಆ ದೇಹವೇ ಅನಿತ್ಯ ಸ್ವರೂಪವೆಂದರಿದು, ಶ್ರೀಗುರು ಪಾವಸ್ಥೆಯಂ ಮಾಡಿ ಗುರು ಕರಣಮಂ ಪಡೆದು ಆ ದೇಹಾತ್ಮರಲ್ಲಿ ಇಷ್ಟಪ್ರಾಣಲಿಂಗ ಸಂಬಂಧವ ಮಾಡಿಕೊಂಡು ಷಟ್‌ಸ್ಥಲ ಜ್ಞಾನಕ್ರಿಯೆ ಹಿಡಿದಾಚರಿಸಲರಿಯದೆ ಮತ್ತಂ ದೇಹಾತ್ಮರುಗಳಿಗೆ ಕರ್ತೃವಾದ ಪರಬ್ರಹ್ಮವನು ಗುರು ಮುಖದಿಂದಂಗದ ಮೇಲೆ ಪ್ರತ್ಯಕ್ಷವ ಮಾಡಿಕೊಂಡು ಆಚರಿಸಲರಿಯದೆ ವಾಯಕ್ಕಗಾಳಿ ಸುದಿಯನು ಮಿಥ್ಯಾ ಜೀವಕ್ಕೆ ಪರಬ್ರಹ್ಮವನು ನುಡಿವ ಅರಿವಿನಿಂದ ನಿರವಯ ಬ್ರಹ್ಮವನು ಕುರುಹಿಟ್ಟು, ಅಹಂ ಬ್ರಹ್ಮ ಎಂದು ವಾಗದ್ವೈತವನು ಬೊಗಳುವ ವಾಯು ಪ್ರಾಣಿಗಳವರು. ಗಾಳಿ ಶುದ್ಧಿಯ ಮಿಥ್ಯ ಜೀವರುಗಳಾದ ಆ ವಾಗದ್ವೈತಿಗಳು, ಎತ್ತ ಬಲ್ಲರೋ, ಆ ಪರಬ್ರಹ್ಮದ ಸ್ವರೂಪವನು ಆವಕಡೆಯಲಿ ತಿಳಿದು ಬಲ್ಲರು ? ಅರಿಯರೆಂಬುವರ್ಥ.

ಆ ನಿಃಕಲ ಪರಬ್ರಹ್ಮದ ನಿಜಸ್ವಭಾವದ ನಿಲುವೆಂತೆಂದೊಡೆ, ನಿಲುಕಡೆಯು ಹೇಗೆಂದೊಡೆ : ಆದಿಯೇ ದೇಹ, ಪಂಚಭೂತಯುಕ್ತವಾದುದೇ ಅಂಗವು, ಅನಾದಿಯೇ ನಿರ್ದೇಹ, ಆ ದೇಹಕ್ಕೆ ಚೈತನ್ಯ ಸ್ವರೂಪವಾದಾತ್ಮನೇ ನಿರಂಗಿಯಾಗಿರ್ಪನು. ಆದಿಯೇ ಸಕಲ ಶುಕ್ಲ ಶೋಣಿತಾತ್ಮ ಸಂಗದಿಂದಾದ ದೇಹವು. (ಸಾಕಾರ ಸ್ವರೂಪು). ಅನಾದಿಯೇ ನಿಃಕಲನು. ಆ ದೇಹಕ್ಕೆ ಚೈತನ್ಯ ಸ್ವರೂಪವಾದಾತ್ಮನೇ ಕಲಾತೀತನು.

ಆದಿಯೇ ಜಡ. ಮಾಂಸ ಬಿಂದು, ಪ್ರವೇಷ್ಠಿತವಾದ ದೇಹವೇ ಜಡ ಸ್ವರೂಪು. ಅನಾದಿಯೇ ಅಜಡ, ಆ ದೇಹಕ್ಕೆ ಚೈತನ್ಯ ಸ್ವರೂಪವಾದಾತ್ಮನೇ ಜಾಡ್ಯದೂರನು ಆದಿಯೇ ಕಾಯ. ದಶವಾಯುಗಳಿಂದ ಬದ್ಧೀಕರಿಸಲ್ಪಟ್ಟುದೇ ಶರೀರವು. ಅನಾದಿಯೇ ಪ್ರಾಣ, ಎಂದರೆ ದೇಹ ಚೈತನ್ಯ ಸ್ವರೂಪವಾದಾತ್ಮನೇ ಪರಣ ಸ್ವರೂಪನು. ಈ ಎರಡರ ಯೋಗದ ಭೇದಿಸಿ ಈ ದೇಹಾತ್ಮರುಗಳ ಹಸುಗೆಯನು ಅನುಭಾವ ಗುರುಮುಖದಿಂದ ಪರಾಂಬರಿಸಿ, ಮತ್ತಂ ಆತ್ಮಾನಾತ್ಮ ತತ್ವಂಗಳ ವಿಭಾಗೆಯನರಿದು, ತನ್ನಿಂ ತಾನೇ ತಿಳಿದು ನೋಡಲು, ತನ್ನ ಸ್ವಾನುಭವ ಜ್ಞಾನದಿಂದ ಆ ವಾಗದ್ವೈತಿಯು ತಾನೇ ಅರಿದು ನಿರೀಕ್ಷಿಸಲು ಆದಿ ಸಂಬಂಧವಪ್ಪ ಭೂತಂಗಳು ನಾನಲ್ಲ– ಈ ದೇಹ ಸಂಬಂಧವಾದ ಪಂಚಭೂತಂಗಳು ನಾನಲ್ಲ, ದಶ ಇಂದ್ರಿಯಂಗಳು ನಾನಲ್ಲ– ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ವಾಗಾದಿ ಕರ್ಮೇಂದ್ರಿಯಂಗಳೈದು, ಇಂತಿ ಹತ್ತಿಂದ್ರಿಯಂಗಳ ಸ್ವರೂಪನು ತಾನಲ್ಲ, ದಶವಾಯುಗಳು ನಾನಲ್ಲ,– ಪ್ರಾಣವಾಯು ಮೊದಲಾದ ಹತ್ತುವಾಯುಗಳ ಸ್ವರೂಪನು ತಾನಲ್ಲ– ಅಷ್ಟಮದಂಗಳು– ಸಂಸ್ಥಿತಾದಿ ಎಂಟು ಮದಂಗಳು, ಅರಿಷಡ್ವರ್ಗಂಗಳು,– ಕಾಮಾದಿ ರಿಪು ಷಡ್ಗೋತ್ರಂಗಳು,– ಜಾತ್ಯಾದಿ ಆರು ಭ್ರಾಂತಿಗಳು, ಷಡ್ಭಾವ ವಿಕಾರಂಗಳು,– ಅಸ್ಥಿತಾದಿ ಆರು ವಿಕಾರಂಗಳು, ಷಟ್‌ಕರ್ಮಂಗಳು– ಕರಣಾದಿ ಆರು ಕರ್ಮಂಗಳು, ಷಟ್‌ಧಾತುಗಳು,– ರಸಾದಿ, ಆರು ಧಾತುಗಳು ಸುಪ್ತ ವ್ಯಸನಂಗಳು,– ತನುವ್ಯಸನಾದಿ ಏಳು ವ್ಯಸನಂಗಳು, ತನುತ್ತ್ರಯಂಗಳು,– ಸ್ಥೂಲ ಸೂಕ್ಷ್ಮ ಕಾರಣವೆಂಬ ತನುಮೂರು ಜೀವತ್ರಯಂಗಳು, ವಿಶ್ವತೈಜಸ ಪ್ರಾಜ್ಞರೆಂಬ ಜೀವಮೂರು, ಆತ್ಮತ್ರಯಂಗಳು, ಜೀವಾತ್ಮ ಅಂತರಾತ್ಮ ಪರಮಾತ್ಮವೆಂಬ ಆತ್ಮ ಮೂರು, ಮನತ್ರಯಂಗಳು— ಮನಮನನ ಮನನೀಯವೆಂಬ ಮನಂಗಳು ಮೂರು, ಗುಣತ್ರಯಂಗಳು— ಸತ್ವರಜತಮವೆಂಬ ಗುಣಂಗಳು ಮೂರು, ಭಾವತ್ರಯಂಗಳು, ಪ್ರಕಾಶನ ಪ್ರವರ್ತನ ಮೋಹನವೆಂಬ ಭಾವಂಗಳು ಮೂರು, ತಾಪತ್ರಯಂಗಳು–- ಅಧ್ಯಾತ್ಮಿಕ ಅಧಿಭೌತಿಕ ಆಧಿದೈವಿಕವೆಂಬ ತಾಪಂಗಳು ಮೂರು, ಅವಸ್ಥಾತ್ರಯಂಗಳು, –ಜಾಗ್ರ ಸ್ವಪ್ನಸುಷುಪ್ತಿ ಎಂಬ ಅವಸ್ಥೆಗಳು ಮೂರು, ಅಂತಃಕರಣಗಳು, ಮನಬುದ್ಧಿ ಚಿತ್ತ ಅಹಂಕಾರಗಳೆಂಬ ಕರಣಂಗಳು ನಾಲ್ಕು ಇಂತಿವು ಹಿಂದೆ ಹೇಳಿದಂತಹ ತತ್ವಂಗಳು ಆದಿಯಾಗಿ ತೋರುವ ತೋರಿಕೆಯು ನಾನಲ್ಲ. ಕಾಣಿಸುವ ದೇಹ ಕರಣಂಗಳ ಸ್ವರೂಪವು ನಿಜಾತ್ಮನಲ್ಲ. ಆ ದೇಹಕರಣಂಗಳೂ ನನ್ನ ಸ್ವರೂಪವಲ್ಲ, ಇಂತಿವೆಲ್ಲವೂ ನನ್ನ ಅಧೀನವಾಗಿರ್ಪವು. ಚತುಃಕರಣಂಗಳೇ ಆದಿಯಾಗಿ ಪಂಚಭೂತಂಗಳೇ ಅಂತ್ಯವಾದ ೧೪ಳ ಕರಣಗಳು. ಇಂತಿವೆಲ್ಲವೂ ನನ್ನ ಅನುಜ್ಞೆಯಲ್ಲಿ ಇರ್ಪವು. ನಾನು ಆತ್ಮನು. ಇವರ ಅಧೀನದವನಲ್ಲ. ಈ ದೇಹಕರಣಂಗಳ ಬೆಂಬಳಿವಿಡಿದು ಆಚರಿಸುವವನಲ್ಲ ಎಂದರೆ ಇಲ್ಲಿ ಕೇಳು ದೇಹವಬಿಟ್ಟು, ನೀನಿರು. ಘ್ರಾಣವ ಬಿಟ್ಟು ಮೂಸಿ ನೋಡಿ. ಜಿಹ್ವೆಯಬಿಟ್ಟು ಉಣ್ಣು. ತ್ವಕ್ಕನ್ನು ಬಿಟ್ಟು ಸೋಂಕು. ನೇತ್ರವಿಲ್ಲದೆ ನೋಡು. ಶ್ರೋತ್ರವ ಬಿಟ್ಟು ಕೇಳು, ಎಂದರೆ ಅದಾಗದು, ಅದಾಗಿ (ಅದುದರಿಂದ) ಆತ್ಮನು ದೇಹ

ಕರಣಂಗಳಲ್ಲಿ ವಶಗತನೆಂಬುದರ್ಥ. ಮತ್ತೆ ಜ್ಞಾನೋದಯದ ಬಲದಿಂದ ನಾನು ಆ ಆತ್ಮ (ತಾನು) ತುರ್ಯ ಆತ್ಮತತ್ತ್ವ ೨೫, ಆತುರ್ಯ ವಿದ್ಯಾತತ್ತ್ವ ೧೦ ಇಂತೀ ೩೫ ತತ್ತ್ವಂಗಳಿಗೆ ಮೀರಿತೋರುತ್ತಿರ್ದಂತಹ ಅದಲ್ಲದೆ ಜ್ಞಾನಾಜ್ಞಾನಂಗಳಿಗೆ ಮೀರಿ ತೋರಲ್ಪಟ್ಟಂತಹ, ಅನಂತಭುವನ ಬ್ರಹ್ಮಾಂಡಗಳೆಲ್ಲವೂ ಅಳಿದು ಹೋಗುವಲ್ಲಿ ಸ್ವರೂಪದ ಕಾರಣಸತ್ತೆಂಬ ಪದ ಲಕ್ಷಣ ಪ್ರಾಪ್ತಿಯಾದ (ಸತ್) ಜ್ಞಾನಸ್ವರೂಪವಾದ (ಚಿತ್) ಸುಖಮಯವಾದ (ಆನಂದ) ಕೇಡಿಲ್ಲದಂತಹ (ನಿತ್ಯ) ವ್ಯಾಪಕವಾದ (ಪರಿಪೂರ್ಣ) ಈ ಪಂಚ ಲಕ್ಷಣವುಳ್ಳ ನಿಃಕಲ ಪರವಸ್ತುವೇ ತನ್ನ ಸ್ವರೂಪವೆಂದರಿಯರಾಗಿ ಆ ತಿಳಿದ ಮಾತ್ರದಲ್ಲಿಯೇ (ಅರಿದಷ್ಟರಲ್ಲಿ) ಅನಿತ್ಯದ ಬೆಸುಗೆಯು ಬಿಟ್ಟು ಆಗ ತೋರಿ ಬೇಗ ಅಡಗಲ್ಪಟ್ಟ ಮಿಥ್ಯಾದೇಹ ಪ್ರಪಂಚವನ್ನು ವಿಸರ್ಜಿಸಿ ನಿರಾಳದಲ್ಲಿ ನಿಜವನೆಯ್ದಲರಿಯದೆ, ಅಡಿಮುಡಿ ಒಡಲ ಘಾತವು ಕಾಣಬಾರದ ಚಿತ್ತಿನಲ್ಲಿ (ತನ್ನಂಗ ಚಿದ್ಘನದಲ್ಲಿ) ತನ್ನ ಪ್ರಾಣವ ಕೂಡಲರಿಯದೆ, ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧವಿಲ್ಲವಾಗಿ ಜ್ಞಾನೋದಯ (ಮಾತ್ರದಿಂ) ಮೋಕ್ಷದಾರಿಗೂ ಇಲ್ಲ.

ಅದಾಗಿ ಮತ್ತೆಯೂ (ಮರಳಿಯೂ) ಭೌತಿಕತತ್ತ್ವ ಸಂಬಂಧ ಎಂದರೆ ೨೫ ತತ್ತ್ವ ಸಂಬಂಧ ಶರೀರಿಯಾಗಿ ಇರುತ್ತಿರಲು ಇಂತೀ ಹಿಂದೆ ಹೇಳಿದ ತತ್ತ್ವದ ಆದಿ ತಾನೆಂತನಲು —

ಆತ್ಮ ತತ್ತ್ವ ೨೫, ವಿದ್ಯಾತತ್ತ್ವ ೧೦, ಈ ೩೫ ತತ್ತ್ವಂಗಳಿಗೆ ತೋರುವ ಪರತತ್ತ್ವ ಸ್ವರೂಪ ತಾನು ಹೇಗೆ ? ಎನಲು

ಆ ಪರಬ್ರಹ್ಮವಹ (ವಾಕ್ಮನಕ್ಕ ಗೋಚರವಹ ಪರಬ್ರಹ್ಮ)ವಾದಂತಹ ಶಾಶ್ವತವಾದ ಭೇದಿಸಬಾರದ ನಿಃಶೂನ್ಯ ಲಿಂಗವೆಂಬಲ್ಲಿಗೆ ನಿಃಕಲಲಿಂಗಸ್ಥಲ (೧ ನೆಯದು),

ತನ್ನ ಲೀಲಾ ವಿಲಾಸದಿಂದ ಆ ನಿಃಕಲ ಪರಬ್ರಹ್ಮವು ತಾನೇ ತನ್ನ ಜಗದ್ವೈಭವದಿಂದ ತಾನೇ ನೆನೆಯಲು ಆ ನೆನೆವ ನನಹೇ ನಿರ್ಧರಿಸಿ ಚಿತ್ತೆನಿಸಿತ್ತು. ಆ ಚಿತ್ತಿನಿಂದ ಲೇಸಾದ (ಸು) ಚೆನ್ನಾದವು (ಸುನಾದ) ಬಿಂದು (ಚಿದ್ಬಿಂದು) ಪ್ರಕಾಶ (ಚಿತ್ಕಳೆಯು) ಈ ಮೂರು ಸಮರಸವಾಗಿ ತೇಜೋಮೂರ್ತಿಯಾಗಿ ಪ್ರಕಾಶ ವಿಗ್ರಹಸ್ವರೂಪವಾಗಿ ಸ್ಥಿರವಾಗಿ ನೆಲಸಿ ಮಹಾಲಿಂಗವೆನಿಸಿತ್ತು— ಅಖಂಡಗೋಳಕಾಕಾರ ತೇಜೋಮೂರ್ತಿ ಸ್ವರೂಪವಾದ ಮಹಾಲಿಂಗವೆನಿಸಿತ್ತು. ಇಲ್ಲಿಗೆ ಮಹಾಲಿಂಗ ಸ್ಥಲ (೨ನೆಯದು).

ಆ ಮಹಾಲಿಂಗವೇ ಪಂಚ ಸಾದಾಖ್ಯಮೂರ್ತಿ ಎಂದೆನಿಸಿತ್ತು. ಆ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರಮಪ್ಪ ವೇಧಾಸ್ವರೂಪನಾದ ಮಹಾಲಿಂಗವೇ ಪಂಚಮುಖವನೆಯ್ದಿ ಪಂಚಕಲಾಶಕ್ತಿಯುಕ್ತವಾಗಿ ಪಂಚ ಸಾದಾಖ್ಯ ಲಿಂಗಮೂರ್ತಿ ಎನಿಸಿತ್ತು. ಇಲ್ಲಿಗೆ ಪಂಚಸಾದಾಖ್ಯ ಲಿಂಗಮೂರ್ತಿ ಸ್ಥಲ (೩ನೆಯದು) ಈ ಪಂಚಸಾದಾಖ್ಯ ಮೂರ್ತಿಯೇ ಪಂಚಲಿಂಗ ಪ್ರಕಾಶವೆಂದೆನಿಸಿತ್ತು. ಆ ಕರ್ಮ ಸಾದಾಖ್ಯವಾದಿ ಐದು ಸಾದಾಖ್ಯಮೂರ್ತಿಯಾದ ಸದಾಶಿವ ತತ್ತ್ವವೇ ಆಚಾರ ಲಿಂಗಾದಿ ಐದು ಲಿಂಗಂಗಳ ಪ್ರಭೆ ಎಂದೆನಿಸಿತ್ತು.

ಆ ಪಂಚಲಿಂಗಂಗಳ ಪ್ರಕಾಶವೇ ಪಂಚಮುಖ ಎಂದೆನಿಸಿತ್ತು. ಆ ಆಚಾರಾದಿ ಐದು ಲಿಂಗಗಳ ಪ್ರಭೆಯೇ ಸದ್ಯೋಜಾತಾದಿ ಐದು ಮುಖಂಗಳೆನಿಸಿತ್ತು. ಆ ಪಂಚ ಮುಖದಿಂದಲೇ ಪಂಚಾಕ್ಷರಂಗಳುತ್ಪತ್ತಿ– ಆ ಸದ್ಯಾದಿ ಐದು ಮುಖಂಗಳಿಂದಲೇ ನಕಾರಾದಿ ಐದಕ್ಷರಂಗಳು ಹುಟ್ಟಿದವು. ಆ ಪಂಚಾಕ್ಷರಂಗಳಿಂದಲೇ ಪಂಚಕಲೆಗಳ ಉತ್ಪತ್ತಿ– ಆ ನಕಾರಾದಿ ಐದಕ್ಷರಗಳಿಂದಲೆ ನಿವೃತ್ತಿಯಾದಿ ಐದುಕಲೆಗಳು ಹುಟ್ಟಿದುವು. ಆ ಪಂಚಕಲೆಗಳಿಂದಲೇ ಪಂಚಶಕ್ತಿಗಳ ಉತ್ಪತ್ತಿ– ಆ ನಿವೃತ್ತಿ ಕಲೆ ಮೊದಲಾದ ಕಲೆಗಳಿಂದಲೇ ಕ್ರಿಯಾಶಕ್ತಿ ಮೊದಲಾಗಿ ಐದುಶಕ್ತಿಗಳು ಹುಟ್ಟಿದುವು. ಆ ಪಂಚಶಕ್ತಿಗಳಿಂದಲೇ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳ ಜನನ– ಆ ಕ್ರಿಯಾದಿ ಐದು ಶಕ್ತಿಗಳಿಂದಲೇ ಜ್ಞಾನಾದ್ಯಂತಃಕರಣಂಗಳು ಹುಟ್ಟಿದುವು. ಆ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಗಳಿಂದಲೇ ಪಂಚ ತನ್ಮಾತ್ರೆಗಳ ಉತ್ಪತ್ತಿ,– ಆ ಜ್ಞಾನಾದ್ಯಂತಃಕರಣಗಳಿಂದಲೇ ಶಬ್ದಾದಿ ೫ ವಿಷಯಂಗಳು (ತನ್ಮಾತ್ರೆ) ಹುಟ್ಟಿದುವು– ಆ ಪಂಚ ತನ್ಮಾತ್ರೆಗಳಿಂದಲೇ ಪಂಚಭೂತಂಗಳ ಉತ್ಪತ್ತಿ– ಆ ಶಬ್ದಾದಿ ಪಂಚ ವಿಷಯಂಗಳಿಂದಲೇ ಆಕಾಶಾದಿ ಐದು ಭೂತಂಗಳು ಹುಟ್ಟಿದುವು. ಆ ಪಂಚ ಭೂತಂಗಳೇ ಪಂಚೀಕರಣವನೆಯ್ದಿ ಆ ಆಕಾಶಾದಿ ಐದು ತತ್ತ್ವಂಗಳು ಜ್ಞಾನಾದಿಕರಣಂಗಳೈದು, ಪ್ರಾಣಾದಿವಾಯುಗಳೈದು, ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಶಬ್ದಾದಿ ವಿಷಯಂಗಳೈದು ವಾಗಾದಿ ಕರ್ಮೇಂದ್ರಿಯಂಗಳೈದು. ಇಂತೀ ೨೫ ಕರಣ ಸ್ವರೂಪವನಾಶ್ರಯಿಸಿ ಆ ಆತ್ಮಂಗಂಗವಾಯಿತ್ತು. ೨೫ ಕರಣಂಗಳು ಕೂಡಿ ಜೀವಾತ್ಮನಿಗೆ ಶರೀರ ಸಂಬಂಧವಾಯಿತ್ತೆಂಬಲ್ಲಿಗೆ ಅಂಗಸ್ಥಲ (೪ನೆಯದು.)

ಆ ಅಂಗಕ್ಕೆ ಜ್ಞಾನೇಂದ್ರಿಯಂಗಳು ಕರ್ಮೇಂದ್ರಿಯಂಗಳು ಪ್ರತ್ಯಂಗವೆಂದೆನಿಸಿತ್ತು, ಆ ಶರೀರಕ್ಕೆ ದೆಶೇಂದ್ರಿಯಂಗಳೇ ಅವಯುವಗಳೆಂದೆನಿಸಿದವು. ಇಂತೀ ಹಿಂದೆ ಹೇಳಿದಂಥಾ ದೇಹಸಂಬಂಧಮಂ– ದೇಹೇಂದ್ರಿಯಗಳೇನು, ಶಿವನಿಷ್ಕಲ ಪರಶಿವನು, ತನ್ನ ಚಿದಂಶಿಕನಪ್ಪಾತ್ಮಂಗೆ– ತನ್ನ ಚಿತ್ತಿನಂಶೀಭೂತವಾದಂಥ ಜೀವಾತ್ಮನಿಗೆ ಸಂಬಂಧಿಸಿದನಾಗಿ– ತೊಡಿಸಿದನಾಗಿ, ಎಂಬಲ್ಲಿಗೆ ಸಂಸಾರ ಸಂಬಂಧಸ್ಥಲ (೫ನೆಯದು).

ಆ ಸಂಬಂಧಿಸಿದ– ಆ ಆತ್ಮಂಗೆ ತೊಡಿಸಿದ– ಕಾಯದ ದೇಹದ ಪೂರ್ವಾಶ್ರಯವು ಮೊದಲಾಶ್ರಯವು– ಎಲ್ಲಿಯಾಯಿತ್ತು. ಎತ್ತಣಿಂದ ಬಂದು ತನಗೆ ಸಂಬಂಧವಾಯಿತ್ತು? ಶಿವಾಗ್ನಿ (ಜ್ಞಾ)ಯಿಂದ ತನಗೆ ಶರೀರ ಸಂಬಂಧವಾಯಿತ್ತು ಎಂಬಲ್ಲಿಗೆ ಪಿಂಡಜ್ಞಾನ ಸ್ಥಲ (೬ನೆಯದು.)

ಅಲ್ಲಿಯೇ ಅಡಗಿಸಿ ಎಂದರೆ "ಯುದ್ದೃಷ್ಟಂ ತನ್ನಷ್ಟಂ" ಎಂದು ಆ ೨೫ ಕರಣಂಗಳಂ ಪಂಚಭೂತಂಗಳಲ್ಲಿ, ಆ ಪಂಚಭೂತಂಗಳಂ, ಪಂಚವಿಷಯಂಗಳಲ್ಲಿ, ಆ ಪಂಚ ವಿಷಯಂಗಳಂ ಪಂಚಕರಣಂಗಳಲ್ಲಿ, ಆ ಪಂಚಕರಣಂಗಳಂ ಪಂಚಕಲೆಗಳಲ್ಲಿ, ಆ ಪಂಚ ಕಲೆಗಳಂ ಪಂಚಾಕ್ಷರಂಗಳಲ್ಲಿ, ಆ ಪಂಚಾಕ್ಷರಂಗಳಂ ಪಂಚಮುಖಗಳಲ್ಲಿ ಆ ಪಂಚಮುಖಂಗಳಂ ಪಂಚಸಾದಾಖ್ಯಂಗಳಲ್ಲಿ, ಆ ಪಂಚಸಾದಾಖ್ಯಂಗಳಂ

ಮಹಾಲಿಂಗದಲ್ಲಿ ಅಡಗಿಸಿ ಮಹಾಲಿಂಗ ಸ್ವರೂಪವೇ ತಾನೆಂದೆರಿದು ತನ್ನಲ್ಲಿ ತೋರಿದ ಸಂಸಾರವನು ತನ್ನ ವಿವೇಕದಿಂದ ನಿವೃತ್ತಿಯ ಮಾಡಿದನೆಂಬಲ್ಲಿಗೆ ಸಂಸಾರ ಹೇಯಸ್ಥಲ (೭ನೆಯದು)

ಆ ಕಾಯದ ಪೂರ್ವಾಶ್ರಯವಳಿದು–ಆ ದೇಹ ಸಂಸಾರದ ಪ್ರಪಂಚ ಮಿಥ್ಯ ವೆಂದರಿದು–ನಿವೃತ್ತಿಯ ಮಾಡಿ ಆ ಶ್ರೀಗುರೂಪಾವಸ್ಥೆಯಂ ಮಾಡಲು ಶಿವ ತಾನೆ ಗುರುವಾಗಿ ಬಂದು ನಿಃಕಲ ಪರಶಿವನು ತಾನು

ನಿಃಕಲೋಹಿ ಮಹಾದೇವೋ ನಿತ್ಯಜ್ಞಾನ ಮಹಾ "ನಧಿ" (ನಿಧಿಃ)
ಸಕಲೋ ಗುರು ರೂಪೇಣ ಶಿಷ್ಯದೀಕ್ಷಾದಿ ಕಾರಣಾತ್

ಎಂದು ಗುರುಮೂರ್ತಿಯಾಗಿ ಬಂದು ಮಹಾಘನ ಲಿಂಗವ ವೇಧಿಸಿಕೊಟ್ಟು ವೇದಾಮಂತ್ರ ಕ್ರಿಯೆ ಎಂಬ ದೀಕ್ಷಾತ್ರಯಗಳಿಂದ ಸ್ಥೂಲ ಕಾರಣವೆಂಬ ತನುತ್ರಯಂ ಗಳಲ್ಲಿ ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳನು ಸಂಬಂಧವ ಮಾಡಿ ಕೊಟ್ಟನೆಂಬ ಲ್ಲಿಗೆ ಗುರುಕರುಣ ಸ್ಥಲವು (೮ ನೆಯದು)

ಮಹಾಲಿಂಗವ ವೇಧಿಸಿಕೊಟ್ಟ ಪರಿಕ್ರಮವೆಂತೆಂದೊಡೆ–ಮುಂದೆ ಷಟ್‌ಸ್ಥಲ ಮಾರ್ಗವನರುಹಿಕೊಟ್ಟ ಚಾರಿತ್ರವು ಹೇಗೆಂಬಲ್ಲಿಗೆ ಲಿಂಗಧಾರಣ ಸ್ಥಲ (೯ ನೆಯದು)

ಆತ್ಮಂಗೂಡಿ ಪಂಚಭೂತಂಗಳನೇ–ಆತ್ಮ ಮೊದಲಾದ ಆರು ತತ್ತ್ವಂಗಳನ್ನೇ ಷಡಂಗವೆಂದೆನಿಸಿ–ಭಕ್ತ್ಯಾದ್ಯೈಕ್ಯಾಂತ್ಯವಾದ ಷಡಂಗವೆಂದೆನಿಸಿ–ಎಂಬಲ್ಲಿಗೆ ಷಟ್ ಸ್ಥಲ. (ಈ ಆರು ಸ್ಥಲಗಳು ೧೦ ರಿಂದ ೧೫ ಸ್ಥಲಗಳು).

ಆ ಲಿಂಗಕ್ಕೆ ಕಲೆಗಳನೇ ಷಡ್ವಿದ ಶಕ್ತಿಗಳೆಂದೆನಿಸಿ ಆ ಷಟ್‌ಸ್ಥಲ ಭಕ್ತರುಗಳಿಗೆ ನಿವೃತ್ತ್ಯಾದಿ ಷಟ್‌ಕಲೆಗಳನೇ ಕ್ರಿಯಾದಿ ಷಡ್ವಿಧ ಶಕ್ತಿಗಳೆಂದೆನಿಸಿ ಆ ಶಕ್ತಿಗಳಿಗೆ ಷಡ್ವಿಧ ಭಕ್ತಿಯನಳವಡಿಸಿ–ಆ ಕ್ರಿಯಾದ ಷಡ್ವಿಧ ಶಕ್ತಿಗಳಿಗೆ ಶ್ರದ್ಧಾದಿ ಷಡ್ವಿಧ ಭಕ್ತಿಯ ಸಂಬಂಧಿಸಿ–ಆ ಭಕ್ತಿಗಳಿಗೆ ಭಾವಜ್ಞಾನ, ಮನ ಬುದ್ಧಿ ಚಿತ್ತ ಅಹಂಕಾರಗಳನೆ ಷಡ್ವಿಧ ಹಸ್ತಗಳೆಂದೆನಿಸಿ–ಆ ಶ್ರದ್ಧಾದಿ ಷಡ್ವಿಧ ಭಕ್ತಿಗಳಿಗೆ ಭಾವಾದೆ ಷಟ್ಕರಣಂ ಗಳನೇ ಸುಚಿತ್ತಾದಿ ಷಡ್ವಿಧ ಹಸ್ತಂಗಳೆಂದೆನಿಸಿ, ಆ ಹಸ್ತಂಗಳಿಗೆ ಮಹಾಲಿಂಗ ದಾದಿಯಾ ಪಂಚ ಲಿಂಗಾಂಗವೇ ಷಡ್ವಿಧ ಲಿಂಗಂಗಳೆಂದೆನಿಸಿ,—ಆ ಸುಚಿತ್ತಾದಿ ಷಡ್ವಿಧ ಹಸ್ತಂಗಳೇ ಮಹಾಲಿಂಗ ಮೊದಲಾದ ಆರು ಲಿಂಗಂಗಳನೆ ಷಡ್ವಿಧ ಲಿಂಗಂಗಳೆಂದೆನಿಸಿ, —ಆ ಲಿಂಗಂಗಳಿಗೆ ಷಡಕ್ಷರನೇ ಷಡ್ವಿಧ ಮಂತ್ರವೆಂದೆನಿಸಿ, ನಕಾರ ಮಂತ್ರ ಮೂರ್ತಯೇ ನಮಃ ಎಂದು, ಆಚಾರ ಲಿಂಗವನೆನೆವುದಕ್ಕೆ ನಕಾರ ಮಂತ್ರವೆಸಿದೆನಿಸಿ ಈ ಮರಿಯಾದೆಯಲ್ಲಿ ಆ ಆಚಾರಾದಿ ಷಡ್ವಿಧ ಲಿಂಗಂಗಳಿಗೆ ನಕಾರಾದಿ ಷಡ್ವಕ್ಷರಂ ಗಳಿನೇ ಷಡ್ವಿಧ ಮಂತ್ರಗಳೆಂದೆನಿಸಿ,–ಆ ಮಂತ್ರಾಂಗಳಿಗೆ ಹೃದಯಂಗೂಡಿ ಪಂಚೇಂ ದ್ರಿಯಂಗಳನೇ ಷಡ್ವಿಧ ಮುಖಂಗಳೆಂದೆನಿಸಿ.–ಆ ಷಡಕ್ಷರಿಮಂತ್ರ ಸ್ವರೂಪವಾದ ಷಡ್ವಿಧ ಲಿಂಗಂಗಳಿಗೆ ಹೃದಯ ಮೊದಲಾದ ಆರು ಇಂದ್ರಿಯಗಳನೇ ಷಡ್ವಿಧ ಮುಖಂ ಗಳೆಂದೆನಿಸಿ– ಆ ಮುಖಂಗಳಿಗೆ ಪಂಚ ತನ್ಮಾತ್ರಂಗಳನೆ ಪ್ರವ್ಯ ಪದಾರ್ಥವೆಂದೆನಿಸಿ–ಆ

ಘ್ರಾಣಾದಿ ಷಡ್ವಿಧ ಮುಖಂಗಳಿಗೆ ಗಂಧಾದಿ ಪಂಚವಿಷಯಂಗಳನೇ ಯೋಗ್ಯವಾದ ಪದಾರ್ಥಂಗಳೆಂದೆನಿಸಿ,– ಆ ಪದಾರ್ಥಂಗಳು–ಆ ಯೋಗ್ಯವಾದ ವಿಷಯ ಪದಾರ್ಥಂಗಳು–ಆಯಾಯ ಮುಖದ ಲಿಂಗಂಗಳಲ್ಲಿ – ಆಯಾಯ ಷಡಿಂದ್ರಿಯ ಮುಖವಲ್ಲಿ ಸಂಬಂಧವಾದ ಷಡ್ವಿಧ ಲಿಂಗಂಗಳಲ್ಲಿ–ನಿರಂತರ,–ಆವಾಗವೂ, ಸಾವಧಾನದಿಂದ ನವವಿಧ ಸಕೀಲಂಗಳಾಚರಣೆಯಲ್ಲಿ ಎರಕಗುಂದದಿರ್ಪ ಸುಯಿಧಾನದಿಂದ, ಅರ್ಪಿತವಾಗಿ, ಪೃಥ್ವಿಯೇ ಅಂಗವಾದ ಭಕ್ತನು, ಗಂಧವೆಂಬ ಪದಾರ್ಥವನು ಸುಚಿತ್ತವೆಂಬ ಹಸ್ತದಲ್ಲಿ ಪಿಡಿದುಕೊಂಡು ನಿವೃತ್ತಿಕಲಾ ಪರಿಯಾಯವನುಳ್ಳ ಕ್ರಿಯಾಶಕ್ತಿಯಿಂದ ಶ್ರದ್ಧಾ ಭಕ್ತಿಯುಕ್ತವಾಗಿ, ಆಚಾರಲಿಂಗಕ್ಕೆ ನಕಾರ ಮಂತ್ರದಿಂದ ಘ್ರಾಣೇಂದ್ರಿಯ ಮುಖವಲ್ಲಿ ಅರ್ಪಿಸಿ ಗಂಧ ಪ್ರಸಾದವನು ಭೋಗಿಸುತ್ತಿಹನು, ಈ ಮರಿಯಾದೆಯಲ್ಲಿ ಸಮರ್ಪಿತವಾಗಿ ಬಿಡಲೊಡನೆ–ಆಚರಣೆ ಸಮಾಪ್ತಿಯ ನೈದಿದ ಕೂಡಲೇ–ಅಂಗಸ್ಥಲಂಗಳಡಗಿ ಭಕ್ತಮಾಹೇಶ್ವರ ನೆಂಬೆರಡು ಸ್ಥಲಗಳು ತ್ಯಾಗಾಂಗ ಸ್ಥಲವಲ್ಲಡಗಿ, ಪ್ರಸಾದಿ ಪ್ರಾಣಲಿಂಗಿ ಎಂಬೆರಡು ಸ್ಥಲಗಳು ಭೋಗಾಂಗದಲ್ಲಡಗಿ, ಶರಣೈಕ್ಯನೆಂಬೆರಡು ಸ್ಥಲಗಳು ಯೋಗಾಂಗದಲ್ಲಿಡಗಿ, ಆಚಾರಲಿಂಗ ಗುರುಲಿಂಗವೆಂಬೆರಡು ಸ್ಥಲಗಳು ಇಷ್ಟ ಲಿಂಗವಲ್ಲಿಡಗಿ, ಶಿವಲಿಂಗ ಜಂಗಮಲಿಂಗವೆಂಬೆರಡು ಸ್ಥಲಗಳು ಪ್ರಾಣಲಿಂಗದಲ್ಲಡಗಿ, ಪ್ರಸಾದಲಿಂಗ ಮಹಾಲಿಂಗವೆಂಬೆರಡು ಸ್ಥಲಗಳು ಭಾವಲಿಂಗದಲ್ಲಡಗಿ, ಈ ಮರಿಯಾದೆಯಲ್ಲಿ ಷಡ್ವಿಧ ಶಕ್ತಿಗಳು, ತ್ರಿವಿಧ ಶಕ್ತಿಗಳಲ್ಲಿ. ಷಡ್ವಿಧ ಭಕ್ತಿಗಳು ತ್ರಿವಿಧ ಭಕ್ತಿಗಳಲ್ಲಿ ಷಡ್ವಿಧ ಹಸ್ತಂಗಳು ತ್ರಿವಿಧ ಹಸ್ತಂಗಗಳಲ್ಲಿ, ಷಡ್ವಿಧ ಮುಖಂಗಳು ತ್ರಿವಿಧ ಮುಖಂಗಳಲ್ಲಿ, ಷಡ್ವಿಧ ಮಂತ್ರಗಳು ತ್ರಿವಿಧ ಮಂತ್ರಗಳಲ್ಲಿ, ಷಡ್ವಿಧ ಪದಾರ್ಥಂಗಳು ತ್ರಿವಿಧ ಪದಾರ್ಥಂಗಳಲ್ಲಿ ಷಡ್ವಿಧ ಪ್ರಸಾದಂಗಳು ತ್ರಿವಿಧ ಪ್ರಸಾದದಲ್ಲಡಗಿ, ತ್ರಿವಿಧ ಲಿಂಗಾಂಸ್ಥಲಂಗಳುಳಿದು,–ತ್ರಿವಿಧಾಂಗ ತ್ರಿವಿಧಲಿಂಗ ತ್ರಿವಿಧಿ ಶಕ್ತಿ. ತ್ರಿವಿಧ ಭಕ್ತಿ, ತ್ರಿವಿಧ ಹಸ್ತ, ತ್ರಿವಿಧ ಮುಖ, ತ್ರಿವಿಧ ಮಂತ್ರ ತ್ರಿವಿಧ ಪದಾರ್ಥ, ತ್ರಿವಿಧಿ ಪ್ರಸಾದಂಗಳು, ಅವಶೇಷಿತವಾಗಿ ಕಾಯವೇ ಗುರು, ಅಂಥಾ–ಶರಣಸಂಗವೆಲ್ಲವೂ, ಗುರು ಸ್ವರೂಪವು, ಪ್ರಾಣವೇ ಲಿಂಗ–ಅಂಥಾ ಶರಣನ ಪ್ರಾಣವೆಲ್ಲವೂ ಲಿಂಗ, ಸ್ವರೂಪವು. ಜ್ಞಾನವೇ ಜಂಗಮು,–ಆ ಶರಣನ ಜ್ಞಾನವೆಲ್ಲವೂ ಜಂಗಮ ಸ್ವರೂಪು. ಗುರುವಿನಲ್ಲಿ ಶುದ್ಧಪ್ರಸಾದ–ಅಂಗ ಸ್ವರೂಪವಾದ ಗುರುವಿಂಗೆ ಗುರು ಭಕ್ತಿಯಿಂದ ತನು ಪದಾರ್ಥವನ್ನು ಸಮರ್ಪಿಸಿ, ಆ ಗುರುಮುಖದಿಂದ ಬರಲ್ಪಟ್ಟಂಥಾದ್ದೇ ಶುದ್ಧ ಪ್ರಸಾದವು. ಲಿಂಗವಲ್ಲಿ ಸಿದ್ಧ ಪ್ರಸಾದ,–ಪ್ರಾಣಸ್ವರೂಪವಾದ ಲಿಂಗಕ್ಕೆ ಲಿಂಗಭಕ್ತಿಯಿಂದ ಮನ ಪದಾರ್ಥವನು ಸಮರ್ಪಿಸಿ ಆ ಲಿಂಗಮುಖದಿಂದ ಬರಲ್ಪಟ್ಟಂಥಾದ್ದೇ ಸಿದ್ಧಪ್ರಸಾದವು, ಜಂಗಮದಲ್ಲಿ ಪ್ರಸಿದ್ಧ ಪ್ರಸಾದ,–ಜ್ಞಾನ ಸ್ವರೂಪವಾದ ಜಂಗಮಕ್ಕೆ ಜಂಗಮ ಭಕ್ತಿಯಿಂದ ಧನ ಪದಾರ್ಥವನು ಸಮರ್ಪಿಸಿ, ಆ ಜಂಗಮ ಮುಖದಿಂದ ಬರಲ್ಪಟ್ಟಂಥಾದ್ದೇ ಪ್ರಸಿದ್ಧ ಪ್ರಸಾದವು, ಇಂತೀ ತ್ರಿವಿಧ ಪ್ರಸಾದವೇಕಾರ್ಥವಾಗಿ–ಹಿಂದೆ ಹೇಳಿದ ಶುದ್ಧ ಪ್ರಸಾದವೇ ತನುವಿನಲ್ಲಿ ಸಿದ್ಧಪ್ರಸಾದವೇ ಮನದಲ್ಲಿ, ಪ್ರಸಿದ್ಧ ಪ್ರಸಾದವೇ ಪ್ರಾಣವಲ್ಲಿ

ಸಂಬಂಧವಾಗಿ – ಮತ್ತಂ – ಈ ಶುದ್ಧ ಪ್ರಸಾದವೇ ಇಷ್ಟಲಿಂಗ ವೃತ್ತದಲ್ಲಿ, ಸಿದ್ಧ ಪ್ರಸಾದವೇ ಇಷ್ಟಲಿಂಗದ ಗೋಮುಖದಲ್ಲಿ, ಪ್ರಸಿದ್ಧ ಪ್ರಸಾದವೇ ಇಷ್ಟಲಿಂಗದ ಗೋಳಕದಲ್ಲಿ, ಸಂಬಂಧವಾಗಿ ಮಹಾಘನ ಪರಿಪೂರ್ಣ ಪ್ರಸಾದವಳವಟ್ಟ ಶರಣನು, ಇಂತೀ ತ್ರಿವಿಧ ಪ್ರಸಾದವನೊಳಕೊಂಡು ತೋರುವ ಇಷ್ಟಮಹಾಲಿಂಗವೇ ಪ್ರಾಣವಾಗಿ ತಾನೇ ಅಂಗವಾಗಿರ್ಪ ಶಿವಶರಣನು ಜ್ಞಾನಿಯಲ್ಲ.—ತಾನೊಬ್ಬನಾಗಿ ಅರಿವೊಂದಾಗಿ ಲಿಂಗವೊಂದಾಗಿ ಅರಿವೆ ಭಿನ್ನಜ್ಞಾನಿಯಲ್ಲ. – ಅಜ್ಞಾನಿ ಮುನ್ನವೇ ಅಲ್ಲ.— ಏನೇನು ಅರಿಯದ ಅಜ್ಞಾನಿಯು ಮೊದಲೆ ಅಲ್ಲ – ದೇಹ ಕರಣೇಂದ್ರಿಯಗಳ ತೋರುವ ತೋರಿಕೆ ಇರ್ದೂ ಇಲ್ಲದಿರ್ಪ ನಿರವಯ ಸ್ವರೂಪವಾದ ಪರಮಾತ್ಮನು ಮೊದಲೇ ಅಲ್ಲ.–ದ್ವೈತಿಯಲ್ಲಿ–ಅಂಗಲಿಂಗಕ್ಕೆ ಭಿನ್ನವಿಟ್ಟರ್ಚಿಸುವ ಸಿದ್ಧಾಂತಿಯಲ್ಲ.– ಅದ್ವೈತಿ ಮುನ್ನವೇ ಅಲ್ಲ–ಅಂಗ ಲಿಂಗ ಸಂಬಂಧವಾದ ಕ್ರಿಯೆ ಜಡವೆಂದು ಬಿಟ್ಟು "ಅಹಂ ಬ್ರಹ್ಮ" ಎಂದು ನುಡಿವ ವೇದಾಂತಿಯು ಮೊದಲೇ ಅಲ್ಲ;–ಇಂತೀ ಉಭಯಾತ್ಮ ತಾನೆಯಾಗಿ ಕ್ರಿಯೆಯಲ್ಲಿ ದ್ವೈತ ಅರಿವಿನಲ್ಲಿ ಅದ್ವೈತವಾಗಿರ್ಪ ಇರವನೊಂದು ಮಾಡಿ ಇಂತೀ ಈ ಪ್ರಕಾರವಾದ ಶರಣ ತಾನೇ ಅಂಗವಾಗಿ ತಾನೇ ಲಿಂಗವಾಗಿ ತಾನೇ ಭಕ್ತಿ ಕ್ರಿಯಾ ರೂಪಕನಾಗಿ, ತನ್ನ ತಾನೇ ಇಂತು ಅರ್ಚಿಸಿ ಪೂಜಿಸಿ ಕೊಳ್ಳುತ್ತಿಹನು. ಸ್ವಲೀಲಾನಂದ ಭಕ್ತಿಯಿಂದ, ಎಂಬಲ್ಲಿಗೆ ಸ್ವಲೀಲಾನಂದ ಭಕ್ತಿ ಸ್ಥಲ (೧೬ ನೆಯದು)

ಇದು ಕಾರಣ– ಇದು ನಿಮಿತ್ಯವಾಗಿ,–ಇದರ–ಈ ಸೃಷ್ಟಿಯು, ಆಗುಹೋಗು ೧೬–ಸ್ಥಲಂಗಳೇ ಆಗು, ೧೬ ಸ್ಥಲಂಗಳೊಂದರೊಳಗೊಂದು ನಿಷ್ಪತಿಯಾಗುವುದೇ ಹೋಗು,—ಅದಲ್ಲದೆ ಲಿಂಗಾಂಗ ಸಂಬಂಧದುತ್ಪತ್ತಿ ಒಂದೆರಡು ಎರಡೇ ಮೂರು ಮೂರೇ ಆರು, ಆರೇ ಮೂವತ್ತಾರು ಮೂವತ್ತಾರೇ ಇನ್ನೂರ ಹದಿನಾರೆಂಬುದೀಗ ಆಗು, ಆ ಇನ್ನೂರ ಹದಿನಾರೇ ಮೂವತ್ತಾರರಲ್ಲಿ ಆ ಮೂವತ್ತಾರೇ ಆರರಲ್ಲಿ ಆ ಆರೇ ಮೂರರಲ್ಲಿ, ಆ ಮೂರೇ ಎರಡರಲ್ಲಿ, ಆ ಎರಡೇ ಒಂದರಲ್ಲಡಗಿ ಒಂದೇ ಉಳಿಯಿತ್ತೆಂಬುದೀಗ ಹೋಗು ಎಂಬುದಕರ್ಥ. ಸಕೀಲ ಸಂಬಂಧವ–ಲಿಂಗಾಂಗ ವೆರಡರ ಹತ್ತಿಗೆಯನು,–ಅದಲ್ಲದೆ ಸಕೀಲವೆಂದೊಡೆ ಅಷ್ಟ ವಿಧ ಸಕೀಲ, ಸಂಬಂಧವೆಂದೊಡೆ ಅವು ಲಿಂಗದಲ್ಲಿ ಸಂಬಂಧವು. ಅದು ಹೇಗೆಂದೊಡೆ ಭಕ್ತ ನಷ್ಟ ವಿಧ ಸಕೀಲ. ಇಷ್ಟಲಿಂಗ ಶಕ್ತಿ ಪೀಠದಲ್ಲಿ (ವೃತ್ತ) ಸಂಬಂಧ, ಮಹೇಶ್ವರ ನಷ್ಟವಿಧ ಸಕೀಲ ಇಷ್ಟಲಿಂಗದ ಕಟಿಯಲ್ಲಿ ಸಂಬಂಧ, ಪ್ರಸಾದಿಯುಷ್ಟವಿಧ ಸಕೀಲ ಇಷ್ಟಲಿಂಗದ ವೃತ್ತದಲ್ಲಿ (ವರ್ತುಳ) ಸಂಬಂಧ. ಪ್ರಾಣಲಿಂಗಿಯಷ್ಟವಿಧ ಸಕೀಲ ಇಷ್ಟಲಿಂಗ ಗೋಮುಖದಲ್ಲಿ ಸಂಬಂಧ, ಶರಣ ನಷ್ಟವಿಧ ಸಕೀಲ ಇಷ್ಟ ಲಿಂಗದ ನಾಳದಲ್ಲಿ ಸಂಬಂಧ, ಐಕ್ಯ ನಷ್ಟವಿಧ ಸಕೀಲ ಇಷ್ಟಲಿಂಗದ ಗೋಳಕದಲ್ಲಿ (ಲಿಂಗದ ಬಾಣ) ಸಂಬಂಧ, ಎಂಬುದಕರ್ಥ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರೇ ಬಲ್ಲರು. ಅಷ್ಟವಿಧ ಸಕೀಲಂಗಳು ಸತ್, ಚಿತ್ ಆನಂದಗಳಲ್ಲಿ ಅಡಗಿದ ಭೇದವನು, ಶಿವನ

ಚಿದಂಗ ಸ್ವರೂಪರಾದ ಶರಣರೇ ಬಲ್ಲರಲ್ಲದೆ ಮಿಕ್ಕಿನ ದ್ವೈತಾದ್ವೈತಿಗಳು ಅರಿಯ ರೆಂಬುದಕರ್ಥ.

ಅಕ್ಕಗಳ ಸೃಷ್ಟಿ ವಚನ ಸಮಾಪ್ತ ಮಂಗಳಂ.

(ಸಂ. ೧೫೦)

ಅಕ್ಕಗಳು ನಿರೂಪಿಸಿದ ಈ ವಚನದಿಂದ ೧೬ ಸ್ಥಲಗಳು ತೋರುತ್ತವೆ. ನಿಷ್ಕಲ ಲಿಂಗಸ್ಥಲವು ಮೊದಲನೆಯದು. ಇದು ಚಿನ್ನಾದ ಚಿಪ್ಪಿಂದು ಚಿತ್ಕಲೆಯಿಂದ ಕೂಡಿ ಸಮರಸವಾಗಿ ತೇಜೋಮೂರ್ತಿಯಾಗಿ ಇರುವ ಮಹಾಲಿಂಗವಾಗುತ್ತದೆ. ಈ ಮಹಾಲಿಂಗವು ಅಖಂಡ ಗೋಳಕಾಕಾರವಾದ ತೇಜೋಮೂರ್ತಿವಿಗ್ರಹ (ಸಾಕಾರ ರೂಪ) ಇದನ್ನೇ ನಾವು ಈಗಿನ ಶಾಸ್ತ್ರಕಾರರು ಕಂಡುಹಿಡಿದ ವಿದ್ಯುದಣುವಿಗೆ (ಎಲೆಕ್ಟ್ರಾನ್) ಹೋಲಿಸಬಹುದಾಗಿದೆ. ಈ ಮಹಾಲಿಂಗದ ಪಂಚ ಸಾದಾಖ್ಯಲಿಂಗ ಪಂಚ ಕಲಾಶಕ್ತಿಯುಕ್ತವಾಗಿ ಸೃಜಿಸಲ್ಪಟ್ಟಿದೆ. ಇದೇ ಸದಾಶಿವ ತತ್ತ್ವ ಇದು ಪ್ರಕಾಶ ಮಯವಾದುದು. (ಐದು ಲಿಂಗಗಳ ಪ್ರಭೆ ಎನಿಸಿಕೊಂಡಿದೆ. ಐದು ಸ್ತಂಭಾಕಾರದ ಪ್ರಕಾಶವನೊಳಗೊಂಡಿದೆ. ಇದು ಸ್ಪರ್ಶಕ್ಕೆ ಸಿಕ್ಕುತ್ತದೆ.) ಈ ಲಿಂಗಗಳಿಂದ ಪ್ರಕಾಶ ರೂಪವಾದ ಸದ್ಯೋಜಾತಾದಿ ಐದು ಮುಖಗಳು ಅವುಗಳಿಂದ ಐದಕ್ಷರಗಳು ಐದು ಕಲೆಗಳು, ಐದು ಶಕ್ತಿಗಳು, ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಗಳೆಂಬ ಐದು ಕರಣಗಳು ಶಬ್ದಾದಿ ಐದು ವಿಷಯಂಗಳು (ತನ್ಮಾತ್ರೆಗಳು ಕ್ರಮದಿಂದ ಆದವು ಮುಂದೆ) ಆಕಾಶಾದಿ ಐದು ಭೂತಗಳಾಗಿವೆ. ಹೀಗೆ ಕ್ರಮವಾಗಿ ಒಂದರಿಂದೊಂದು ಸೃಷ್ಟಿ ಯಾಗಿದೆ. ಭೂತಗಳೇ ಪ್ರಾಣಿಗಳ ಶರೀರದಲ್ಲಿ ಪಂಚೀಕರಣವಾಗಿ ಜ್ಞಾನಾದಿ ಕರಣಂಗಳೈದು ಪ್ರಾಣಾದಿ ವಾಯುಗಳೈದು ಶ್ರೋತ್ರಾದಿ ಜ್ಞಾನೇಂದಿಯಗಳೈದು ಶಬ್ದಾದಿ ವಿಷಯಗಳೈದು ವಾಗಾದಿ ಕರ್ಮೇಂದ್ರಿಯಗಳೈದು, ಹೀಗೆ ೨೫ ಕರಣಗಳ ಸ್ವರೂಪವಾಗಿ ಅಂಗವೆನಿಸಿದೆ (ಇದೇ ನಾಲ್ಕನೆಯ ಅಂಗಸ್ಥಲ) ಈ ಅಂಗಕ್ಕೆ ಜ್ಞಾನೇಂ ದ್ರಿಯಂಗಳು ಕರ್ಮೇಂದ್ರಿಯಗಳು ಪ್ರತ್ಯಂಗವೆನಿಸಿದವು. ಈ ದಶೇಂದ್ರಿಯಂಗಳೇ ಗಳೆನಿಸಿದವು.

ಹೀಗೆ ದೇಹ ಸಂಬಂಧವು ನಿಃಕಲ ಲಿಂಗದ ಚಿತ್ತಿನಿಂದ ಮುಂದೆ ಜೀವಾತ್ಮರೂಪ ವಾಯಿತು. ಇದೇ ಸಂಸಾರ ಸಂಬಂಧ ಸ್ಥಲ. ಇದೇ ಐದನೆಯದು. ಶಿವಾಜ್ಞೆ ಯಿಂದ ತನಗೆ ಶರೀರ ಸಂಬಂಧ (ಸಮರಸ)ವಾಯಿತ್ತೆಂದು ತಿಳಿಯುವುದೇ ಪಿಂಡಜ್ಞಾನ ಸ್ಥಲ. ಮೇಲೆ ಹೇಳಿದ ೨೫ ಕರಣಗಳೇ ಮೊದಲಾದುವುಗಳನ್ನು ಅವುಗಳ ಮೂಲ ವಾದ ಮಹಾಲಿಂಗದಲ್ಲಿ ಕ್ರಮ ಕ್ರಮವಾಗಿ ಅಡಗಿಸಿ (ನಿವೃತ್ತಿ ಮುಖದಲ್ಲಿ ವಿಲೀನ ಮಾಡಿ) ಮಹಾಲಿಂಗ ಸ್ವರೂಪವೇ ತಾನೆಂದು ತನ್ನ ವಿವೇಕದಿಂದ ತಿಳಿಯುವುದೇ ಸಂಸಾರ ಹೇಯಸ್ಥಲ (ಇದು ೭ನೆಯದು). ಈ ಮಹಾಲಿಂಗಕ್ಕೆ ಮೂಲವಾದ ನಿಃಕಲ ಶಿವನೇ ಗುರುವಾಗಿ ಸ್ಥೂಲ ಸೂಕ್ಷ್ಮಕಾರಣ ತನುವಿಗೆ ಇಷ್ಟಪ್ರಾಣ ಭಾವಲಿಂಗಗಳನ್ನು

ಸಂಬಂಧ ಮಾಡಿದನೆಂಬುದೇ ಗುರುಕರುಣಸ್ಥಲ (ಇದು ೮ನೆಯದು) ಮುಂದೆ ಮಹಾ ಲಿಂಗವು ಶರೀರ ಸಂಬಂಧವಾಗಿ ಆರುಸ್ಥಲಗಳ ಮಾರ್ಗವನ್ನು ತಿಳುಹಿಸಿಕೊಟ್ಟ ಚಾರಿತ್ರದ ಆರಂಭವೇ ಲಿಂಗಧಾರಣಸ್ಥಲ (ಇದು ೯ನೆಯದು) ಪೂರ್ವಾಭಾವಿಯಾಗಿ ಈ ೯ ಸ್ಥಲ ಗಳನ್ನು ಸಂಬಂಧಿಸಿದ ಮೇಲೆ ವೀರಶೈವದ ಭಕ್ತ ಮೊದಲಾದ ಆರು ಸ್ಥಲಗಳನ್ನಾಚರಿಸ ಬೇಕು. ಇಲ್ಲಿಗೆ ೧೦ ರಿಂದ ೧೫ ಸ್ಥಲ. ಈ ಆರು ಸ್ಥಲಗಳ ಕೊನೆಯದಾದ ಐಕ್ಯ ಸ್ಥಲದ ನಂತರ ತನ್ನ ತಾನೇ ಪೂಜಿಸಿಕೊಳ್ಳುತ್ತಿರುವ ಸ್ವಲೀಲಾನಂದ ಭಕ್ತಿಯುಳ್ಳ ದಾಸೋಹಂಭಾವವು. (ಇದೇ ೧೬ನೆಯ ಸ್ಥಲ). ಹೀಗೆ ವೀರಶೈವರ ಆರು ಸ್ಥಲಗಳ ಪೂರ್ವಭಾಗ ಮತ್ತು ಮುಂದಿನ ಭಾಗ ಸಂಬಂಧವ ಮಾಡಿ ವೀರಶೈವವನ್ನು ವಿವರಿಸಿ ಈ ವಚನದಿಂದ ತೋರಿಸಲ್ಪಟ್ಟುದಾಗಿದೆ. ಈ ೧೬ ಸ್ಥಲಗಳೇ "ಲಿಂಗಲೀಲಾ ವಿಲಾಸ ಚರಿತ್ರೆ" ಎಂಬ ಗ್ರಂಥದಲ್ಲಿ ವಿವರಿಸಲ್ಪಟ್ಟಿವೆ. ವೀರಶೈವ ೬ ಸ್ಥಲಗಳ (ಷಟ್‌ಸ್ಥಲ) ಆಚರಣೆಯ ಮೂಲವನ್ನು ತಿಳಿಯುವುದಕ್ಕಾಗಿ ೧೦೧ ಸ್ಥಲಗಳು ಏರ್ಪಾಡಾಗಿದ್ದು ಅವು ಗಳ ವಿಷಯವಾಗಿ ತಿಳಿದುಕೊಳ್ಳುವುದು ಕಷ್ಟವೆಂದಾಲೋಚಿಸುವವರಿಗೆ ಸಂಕ್ಷಿಪ್ತ ರೀತಿ ಯಲ್ಲಿ ತಿಳಿಸುವುದಕ್ಕೆ ಇದು ಬಹಳ ಅನುಕೂಲವಾಗಿದೆ. ನಿಃಕಲ ವಚನ ಎಂಬುದಾಗಿ ಒಂದು ವಚನ ಪುಸ್ತಕವೂ ರಚಿಸಲ್ಪಟ್ಟಿದೆ. ಮುಖ್ಯವಾಗಿ ವೀರಶೈವರಲ್ಲಿ ಗುರುಗಳು ತಿಳಿದುಕೊಂಡಿರಬೇಕಾದ ಸಂಗತಿಗಳನ್ನು ತಿಳಿಸತಕ್ಕವುಗಳೇ ಈ ೧೬ ಸ್ಥಲಗಳು. ಇಲ್ಲಿ ತೋರುವ ನಿಃಕಲ ಲಿಂಗ ಸ್ವರೂಪನೆ ಗುರುವಾಗಿದ್ದಾನೆ. ಇದರ ಮುಂದೆ ನಿಃಶೂನ್ಯ ಲಿಂಗವೇ ವೀರಶೈವರ ಅಷ್ಟಾವರಣದೊಳಗಿನ ಲಿಂಗ ಸ್ವರೂಪವು ಮುಂದೆ ನಿರಂಜನ ಲಿಂಗ. ಇದೇ ಜಂಗಮ ಸ್ವರೂಪವು. ನಿಷ್ಕಲಲಿಂಗ ನಿಃಶೂನ್ಯಲಿಂಗ ನಿರಂಜನಲಿಂಗ ಎಂಬಿವು ಚಿದಂಶೀಭೂತನಾದ ಶರಣನ ಮಸ್ತಕದಲ್ಲಿ ಉಂಟೆಂದು ವೀರಶೈವ ಗ್ರಂಥಗಳು ಸಾರಿ ಹೇಳುತ್ತವೆ.

ಈಗಿನ ಶಾಸ್ತ್ರಕಾರರು ವಿದ್ಯುದಣುವಿನಿಂದ ಜಗತ್ತೂ ಸರ್ವವೂ ಆಗಿರುವುದೆಂದೂ ಆ ವಿದ್ಯುದಣುವು ಗೋದಿಯ ಕಾಳಿನ ಆಕಾರವುಳ್ಳದೆಂದು ಪರಿಶೋಧಿಸಿ ಕಂಡುಹಿಡಿದಿರು ವಂತೆ ವೀರಶೈವ ಮಹನೀಯರು ಅಖಂಡ ಗೋಳಕಾಕಾರ (ಮಹಾಲಿಂಗ) ಪ್ರಕಾಶ ದಿಂದಲೇ ಸರ್ವವೂ ಉಂಟಾಗಿ ಕೊನೆಗೆ ಅಲ್ಲಿಯೇ ಲೀನವಾಗುವವೆಂದು ತಿಳಿದಿರುವುದು ಅತ್ಯಂತ ಶ್ರೇಷ್ಠವಾದ ವಿಷಯವಲ್ಲವೇ? ಮತ್ತು ವೀರಶೈವ ಧರ್ಮವು ಜಾಗತಿಕ ಧರ್ಮ ವೆಂದೂ ಯಾರಾದರೊಬ್ಬರು ಹೇಳಿದ ಮತ (ಅಭಿಪ್ರಾಯ) ಅಲ್ಲವೆಂದೂ ಚೆನ್ನಾಗಿ ಗ್ರಹಿಸಬಹುದಲ್ಲವೇ!

ಮುಖ್ಯವಾಗಿ 'ಅಹಂಬ್ರಹ್ಮ' ಎಂದು ತಿಳಿವುದೇ ಅದ್ವೈತಿಗಳ ಜ್ಞಾನ. ನಾನು ಹೇಗೆ ಬ್ರಹ್ಮನಾಗಿದ್ದೇನೆ ಎಂಬುದನ್ನು ತಿಳಿದು (ಇದೇ ಅನುಭವ) ನಿವೃತ್ತಿಯು ಮುಖ ದಿಂದ ಲೀನ ಮಾಡುವುದು. ಆ ಭಾವನೆಯಿಂದ ಲೌಕಿಕರಂತೆ ಆಚರಿಸುವುದೂ ವಿವೇಕ ಎನಿಸಿಕೊಂಡಿದೆ. ವೀರಶೈವರು ಜ್ಞಾನದ ತರುವಾಯ ವಿವೇಕವಿರುವುದೇ ಮುಖ್ಯ

ವೆಂದು ಭಾವಿಸಿ ವಿವೇಕವೇ ಮುಖ್ಯವೆಂಬ ಸಂಕೇತವುಳ್ಳವರು. ಈ ಪರಸ್ಪರ ಭೇದವನ್ನು ಅದ್ವೈತಿಗಳೂ ಶಿವಾದ್ವೈತಿಗಳೂ ಚೆನ್ನಾಗಿ ತಿಳಿದಿರಬೇಕಾಗಿದೆ.

೧. ಈ ವಚನದಲ್ಲಿ ತೋರಿ ಬರುವ ಕೆಲವು ಸಾಂಕೇತಿಕ ಪದಗಳನ್ನು ಚನ್ನಾಗಿ ಗ್ರಹಿಸಿಕೊಂಡಿರಬೇಕಾಗಿದೆ. ಬ್ರಹ್ಮಾಂಡವೆಲ್ಲವೂ ಅಳಿದು ಉಳಿದುದೇ ಪರವಸ್ತುವು ಹೀಗೆ ಉಳಿದುದರಿಂದ ಉಳುಮೆ ಎಂಬ ಪದವು ಅದಕ್ಕೆ ಅನ್ವಯಿಸುತ್ತದೆ. ಆ ರೂಪವೇ ಶೇಷ (ಪ್ರಸಾದ) ಎಂದೂ ಕರೆಯಲ್ಪಟ್ಟಿದೆ.

೨. ನಾನು ಬ್ರಹ್ಮ (ಲಿಂಗ) ಎಂದು ಹೇಳುವಲ್ಲಿ ನಾನು ಎಂದು ಗುರ್ತಿಸುವುದೇ ಕುರುಹು ಎಂಬ ಸಾಂಕೇತಿಕ ಪದವಾಗಿದೆ. ಈ ಕುರುಹು ಎಂಬ ಪದವನ್ನು ಇಷ್ಟಲಿಂಗಕ್ಕಾಗಿ ಉಪಯೋಗಿಸುವುದು ಬೇರೆ ವಿಧದಲ್ಲಿ ಸಾಂಕೇತಿಕವಾಗಿದೆ.

ಈ ವಚನದ ೧೬ನೇ ಸ್ಥಲದಲ್ಲಿ "ಶರಣನು ಕ್ರಿಯೆಯಲ್ಲಿ ದ್ವೈತಜ್ಞಾನದಲ್ಲಿ ಅದ್ವೈತ ಎಂದು ಹೇಳುವ ಎರಡು ಸ್ಥಿತಿಯನ್ನು ಒಂದುಗೂಡಿಸಿ ತಾನೇ ಅಂಗವಾಗಿ ತಾನೇ ಲಿಂಗವಾಗಿ ತಾನೇ ಭಕ್ತಿ ಕ್ರಿಯಾರೂಪಕನಾಗಿ ತನ್ನ ತಾನೆ ಅರ್ಚಿಸಿ ಪೂಜಿಸಿಕೊಳ್ಳುತ್ತಿಹನು. "ಸ್ವಲೀಲಾನಂದ ಭಕ್ತಿಯಿ" ಎಂಬುದಾಗಿ ಹೇಳಲ್ಪಟ್ಟಿದೆ. ಇದು "ನಾರುದ್ರೋ ರುದ್ರಮರ್ಚ್ಯಯೇತ್"— ರುದ್ರನಾಗಿ ರುದ್ರನನ್ನು ಅರ್ಚಿಸಬೇಕು. ಲಿಂಗವಾಗಿ ಲಿಂಗವನ್ನು ಪೂಜಿಸಬೇಕು. ಎಂಬ ಪ್ರಮಾಣಕ್ಕೆ ಅನುಸಾರವಾಗಿ ಮೇಲಿನ ಹೇಳಿಕೆ ಇದೆ. "ದಾತಾಭೋಕ್ತಾ ಸ್ವಯಂ ಶಿವಃ"— ಕೊಡುವವನು ಸ್ವೀಕರಿಸುವವನು ಶಿವನು ತಾನೆ— ಈ ಅಭಿಪ್ರಾಯವೂ ಇಲ್ಲಿ ಕಾಣಬರುತ್ತದೆ. ಇದಕ್ಕೆ ನಿರೀಹಭಾವ, ನಿರಹಂಭಾವ, ಅಕಿಂಚನಭಾವ, ಎಂದು ಮೊದಲಾಗಿ ಕರೆಯುತ್ತಾರೆ. ಈ ಭಾವಕ್ರಿಯೆಯು ಭಗವದ್ಗೀತೆಯಲ್ಲಿ ಹೇಳಿದ ನಿಷ್ಕಾಮ ಕರ್ಮಕ್ಕಿಂತ ಅತ್ಯಂತ ಶ್ರೇಷ್ಠವಾದುದಾಗಿದೆ. ನಿಷ್ಕಾಮಕರ್ಮದಲ್ಲಿ ಮಾಡಿದವನು ತಾನು. ತನಗೆ ಫಲವು ಬೇಡ ಎಂಬ ಅಭಿಪ್ರಾಯವಿದೆ. ಮಾಡಿದವನು ಬೇಡವೆಂದರೂ ಪರೋಕ್ಷವಾಗಿ ಆ ಫಲವು ಬಂದೇಬರುತ್ತದೆ. ಅದರ ಭೋಗಕ್ಕಾಗಿ ಮತ್ತೆ ಅವನು ಹುಟ್ಟಲೇಬೇಕು. ನಿರಹಂಭಾವ ಕ್ರಿಯೆಯಲ್ಲಿ ಮಾಡಿದವನು ದೇವನೇ ಆದುದರಿಂದ ಫಲವನ್ನು ಭೋಗಿಸುವ ಕಾರಣವೇ ಇಲ್ಲ. ಫಲವು ಶಿವನದೇ ಕ್ರಿಯೆಯೂ ಶಿವನದೇ ತಾನೂ ಶಿವನೇ ಆಗಿ ಉಳಿಯುತ್ತಾನೆ. ಶರಣನು ತಾನೇ ಲಿಂಗವಾಗಿ ತನ್ನ ತಾನು ಅರ್ಚಿಸಿ ಪೂಜಿಸಿಕೊಳ್ಳುತ್ತಾನೆ. ಇಲ್ಲಿ ಅರ್ಚಿಸುವುದೆಂದರೆ ತಾನೇ ಶಿವನೆಂಬ ಜ್ಞಾನರೂಪನಾದ ಭಕ್ತಿಯು. ಆ ಜ್ಞಾನ ಆಚರಣೆಯ ರೂಪವಾಗಿ ಅನುಸಂಧಾನ ಮಾಡುವುದೇ ಕ್ರಿಯೆಯು, ಈ ಭಕ್ತಿ ಮತ್ತು ಕ್ರಿಯೆಗಳೇ ಅರ್ಚನೆ ಪೂಜೆಯೆನಿಸಿಕೊಳ್ಳುತ್ತವೆ. ಪೂಜಿಸುವವನು ಪೂಜಿಸಲ್ಪಡತಕ್ಕ ವಸ್ತುವನ್ನು ಶಿವನೆಂದು ತಿಳಿಯುವುದೇ ಅರ್ಚನೆ. ತಾನು ಶಿವನಾಗಿ ಶಿವನ ಪೂಜೆಯನ್ನು ಮಾಡುವುದೇ ಕ್ರಿಯೆ. (ಪತ್ರ ಪುಷ್ಪಧರಿಸುವುದು ಮೊದಲಾದುದೇ ಪೂಜೆ) ಹೀಗೆ ಅರ್ಚನೆ ಪೂಜೆ ಈ ಸಾಂಕೇತಿಕ ಪದಗಳ ಅರ್ಥವನ್ನು ತಿಳಿಯಬೇಕಾಗಿದೆ. ಈ ಅನುಭಾವವನ್ನು ಬಲ್ಲವರೇ ಶಿವಶರಣರು.

ಈ ವಚನವಲ್ಲಿ ೧೪೪೪ ಕರಣವುಂಟೆಂದು ಹೇಳಲ್ಪಟ್ಟಿದೆ. ಅಂಗದಲ್ಲಿ ಮತ್ತು ಬ್ರಹ್ಮಾಂಡದಲ್ಲಿ ಇದ್ದವುಗಳನ್ನೆಲ್ಲಾ ಕರಣ ಎಂದು ಕರೆಯಲ್ಪಟ್ಟಿರುವುದು ಇಲ್ಲಿ ವ್ಯಕ್ತವಾಗುತ್ತದೆ. ಸಂಸಾರ ಹೇಯ ಸ್ಥಲದಲ್ಲಿ ಹೇಳಲ್ಪಟ್ಟಂತೆ ೨೫ ಕರಣ, ೫ ಭೂತ, ೫ ತನ್ಮಾತ್ರೆ, ೫ ಕರಣ, ೫ ಕಲೆ, ೫ ಅಕ್ಷರ, ೫ ಮುಖ, ೫ ಸದಾಶಿವ ತತ್ವಭೇದ ಈ ಅರವತ್ತು ಇದರ ಜೊತೆಯಲ್ಲಿ ದಶವಾಯು (೧೦) ಪಂಚಶಕ್ತಿ (೫) ಸಪ್ತವ್ಯಸನ (೭) ಅಷ್ಟಮದ (೮) ಷಡ್‌ಧಾತು (೬) ಈ ಮೂವತ್ತಾರು ಸೇರಿ ಒಟ್ಟು ೯೬ ಕರಣಂಗಳು ಇವುಗಳೊಡನೆ ಸೇರಿ ೬ ಸ್ಥಲಗಳ ಸಂಬಂಧಪಟ್ಟ ಒಂದೊಂದು ಸ್ಥಲಕ್ಕೆ ೮ ರಂತೆ ಇರುವ ೪೮ ಸಕೀಲ. ಈ ಸಂಖ್ಯೆಯನ್ನು ಸೇರಿಸಿಕೊಂಡು ೧೪೪೪ ಕರಣಗಳೆಂದು ಇಲ್ಲಿ ಹೇಳಿರಬಹುದೆ? ತಜ್ಞರು ಇದನ್ನು ಚೆನ್ನಾಗಿ ವಿಚಾರಿಸಬೇಕಾಗಿದೆ.

ದೇಹಕರಣಂಗಳುಳ್ಳ ಜೀವನು ತಾನೆಂದು ತಿಳಿವುದು ಶೂನ್ಯ ಲಕ್ಷಣ. ದೇಹವು ಆತ್ಮನಲ್ಲ. ಇಂದ್ರಿಯವು ಆತ್ಮನಲ್ಲ ಎಂಬ ನಾಹಂಭಾವವು ಇಲ್ಲಿದೆ. ಇದು ಶೂನ್ಯವಾಗಿದೆ. ದೇಹಕರಣಂಗಳು ಇದ್ದರೂ ಅವು ಇಲ್ಲವೆಂದು ತಿಳಿಯುವುದು ನಿಃಶೂನ್ಯ ಲಕ್ಷಣ. ಹೀಗೆ ಶೂನ್ಯ ನಿಃಶೂನ್ಯಗಳನ್ನು ವಿಂಗಡಿಸಿರುವ ಸಾಂಕೇತಿಕವು ಇಲ್ಲಿ ತೋರಿಬರುತ್ತದೆ. ಇದು ಶೂನ್ಯವಾದಿಗೆ ಸಂಬಂಧಪಟ್ಟ ಮಾತು. ಶೂನ್ಯ ಸಂಪಾದನೆ ಎಂಬಲ್ಲಿ ಇರುವ ಶೂನ್ಯ ಪದಕ್ಕೆ ನಿರಾಕಾರ ಪರವಸ್ತು ಎಂದು ತಿಳಿಯಬೇಕು. ನಿಃಶೂನ್ಯ ಲಿಂಗಕ್ಕೆ ಶಿಖಾಚಕ್ರದಲ್ಲಿ ಉಂಟೆಂಬ ಹೇಳಿಕೆಯೂ ಇದೆ.

ಈ ವಚನದ ಒಂದನೆಯ ಸ್ಥಲದಲ್ಲಿ "ನಿಃಕಪರ ವಸ್ತುವೇ ತಾನೆಂದು ಅರಿದಲ್ಲಿ ಅನಿತ್ಯವಾದ ದೇಹದೊಡನೆ ಕೂಡಿದ್ದೇನೆ ಎಂಬ ಭಾವವ ಬಿಟ್ಟು ತಾನು ನಿಃಕಲವಸ್ತುವೆಂದು ತಿಳಿದಕೂಡಲೆ ಮಿಥ್ಯಾದೇಹದ ಪ್ರಪಂಚವನ್ನು ಬಿಟ್ಟು ನಿರಾಳದಲ್ಲಿ ನಿಜವನೆಯ್ದಬೇಕು" ಎಂಬ ಅಭಿಪ್ರಾಯವಿರುವುದರಿಂದ ದೇಹದಿಂದ ಮಾಡತಕ್ಕ ಲೌಕಿಕ ಕಾರ್ಯವು ಮಿಥ್ಯೆ (ಸುಳ್ಳು) ಎಂದು ತಿಳಿಯಬೇಕೆಂದು ಅಭಿಪ್ರಾಯವಿದೆ. ದೇಹವು ಮಿಥ್ಯೆಯಲ್ಲ ಅದು ನಿಃಕಲ ವಸ್ತು ಸ್ವರೂಪ ಎಂದು ಅರಿವುದೇ ನಿಜಜ್ಞಾನ. ದೇಹವೂ ಮಿಥ್ಯೆ ಪ್ರಪಂಚವೂ ಮಿಥ್ಯೆ ಎಂದು ಹೇಳುವವರು ದೇಹವೂ ನಿಃಕಲ ವಸ್ತು ಪ್ರಪಂಚವೂ ನಿಃಕಲ ವಸ್ತು. ಈ ಜ್ಞಾನವನ್ನು ಮರೆದು ನಿಃಕಲ ವಸ್ತುವಿಗಿಂತ ಭಿನ್ನವಾದ ದೇಹದ ಕಾರ್ಯ ಪ್ರಪಂಚದ ಕಾರ್ಯ ಉಂಟೆಂಬ ತಿಳಿವಳಿಕೆಯೇ ಮಿಥ್ಯವಲ್ಲದೆ ವಸ್ತುಗಳು ಮಿಥ್ಯವಲ್ಲ. ಅವು ನಿರಾಕಾರ ವಸ್ತು (ಶಿವ) ರೂಪಗಳೇ ಅದನ್ನು ಬಿಟ್ಟಂತೆ ದೇಹದ ಕಾರ್ಯವುಂಟೆಂದು ಹೇಳುವುದನ್ನೂ ಬಿಡಬೇಕು. ಇದೇ ನಿತ್ಯಜ್ಞಾನ. ಬ್ರಹ್ಮನಿಗೆ ನಾನಾರೂಪಗಳುಂಟೆಂದು (ಬ್ರಹ್ಮಣಃ ನಾನಾ ರೂಪಾಣಿ ಭವಂತಿ) ಎಂಬ ಉಪನಿಷತ್ತಿನ ಬೋಧೆ ಇದೆ. ಈ ವಿಷಯಕ್ಕೆ ಸರ್ವರೂ ಗಮನಕೊಡಬೇಕಾಗಿದೆ. ಇಂತಹ ಈ ವಚನದ ಮುಖ್ಯ ವಿಷಯಗಳ ಕಡೆಗೆ ತಜ್ಞರ ಗಮನವು ಬೀಳಲಿ.

ಈ ವಚನವನ್ನು ಅಕ್ಕನು ರಚಿಸುವುದರೊಳಗಾಗಿ ಶಿವಶರಣೆ ಮುಕ್ತಾಯಕ್ಕಗಳು ಶಿವಾಧೀನಳಾಗಿದ್ದಳೆಂದು ಚಾರಿತ್ರಿಕವಾಗಿ ತಿಳಿಯಲಿಕ್ಕೆ ಬರುತ್ತದೆ.

ಪ್ರಪಂಚ ಸೃಷ್ಟಿಯನ್ನು ನಿವೃತ್ತಿ ಮುಖವಾಗಿ ತಿರುಗಿಸಿದ ವಚನವಿದು. ಜಗತ್ತಿನ ಪ್ರತಿವಸ್ತುವೂ ನಿವೃತ್ತಿ ಮುಖದಲ್ಲಿ ವಿದ್ಯುದಣುವಾಗುವುದೆಂದು ವಿಜ್ಞಾನ ಶಾಸ್ತ್ರದ ಪರಿಶೋಧನೆ. ಎರಡೂ ಒಂದೇ ವಿಧವಲ್ಲವೇ?

ಅಂಗಲಿಂಗಕ್ಕೆ ಭಿನ್ನವಿಟ್ಟು ಆಚರಿಸುವವನು ಸಿದ್ಧಾಂತಿಯಾಗಿದ್ದಾನೆ. ಎಂದು ವಚನದ ಕೊನೆಯ ಸ್ಥಲದಲ್ಲಿ ಇದೆ. ಇವರು ಪಾಶುಪತ ಸಿದ್ಧಾಂತಿಗಳು. ಇವರ ಸಂಬಂಧದ ಗ್ರಂಥಗಳ ಹೇಳಿಕೆಯು ಅಂಗಲಿಂಗ ಸಮರಸದ ವೀರಶೈವರಿಗೆ ಮಾನ್ಯವಲ್ಲ.

(–ಸಂ. ೧೫೦)

# ೧೮. ಮಠಸ್ಥಲ

'ಮಠಸ್ಥಲ' ಎಂದು ಬರೆಯಲ್ಪಟ್ಟ ಪ್ರತಿಗಳನ್ನು ವೀರಶೈವರಲ್ಲಿ ಅಲ್ಲಲ್ಲಿ ನೋಡ ಬಹುದಾಗಿದೆ. ಐತಿಹಾಸಿಕದ ಅಂಶಗಳನ್ನು ಸಂಗ್ರಹಿಸಬೇಕಾದರೆ ಕೊಳಿಯ ಸಾಧನೆ ಜನವಾರ್ತೆ, ಅದಕ್ಕೂ ಸ್ವಲ್ಪ ಮಿಂಚಿದುದು ಏನಾದರೂ ಬರೆವಣಿಗೆ, ಅದಕ್ಕೂ ಮಿಂಚಿ ದುದು ಗ್ರಂಥ. (ಒಂದು ಪುಸ್ತಕವಾಗಿ ಬರೆದುದು) ಅದಕ್ಕೂ ಮಿಂಚಿದುದು ತಾಮ್ರ ಶಾಸನ, ಶಿಲಾಶಾಸನ ಮುಂತಾದುವು. ಈಗ ನಮಗೆ ಆಚಾರ್ಯರ ವಿಷಯವನ್ನು ಗ್ರಹಿ ಸುವುದಕ್ಕೆ 'ಮಠಸ್ಥಲ' ಎಂದು ಬರೆದಿಟ್ಟ ಪ್ರತಿಗಳೂ ಸ್ವಲ್ಪಮಟ್ಟಿಗೆ ಸಹಾಯ ಮಾಡು ತ್ತವೆ. ಮೇಲೆ ಪ್ರಕಟಿಸಿದ ಪ್ರತಿಯಲ್ಲಿ ಹೇಳಲ್ಪಟ್ಟ ಅಂಶಗಳೆಲ್ಲವೂ ಸರಿ ಎಂದು ಒಪ್ಪಿ ಕೊಳ್ಳಲಾಗುವುದಿಲ್ಲ, ಕೆಲವು ಸಂಗತಿಗಳು ಅದ್ಭುತ ವರ್ಣನೆಯಿಂದ ಕೂಡಿವೆ, 'ಪಾಲ್ಕು ರಿಕಿ' ಎಂಬುದಾಗಿ ಗ್ರಾಮದ ಹೆಸರು ಬರೆದಿರುವುದು 'ಕೊಲ್ಲಿಪಾಕಿ' ಎಂದಾಗಬೇಕಾಗಿದೆ. ಐತಿಹಾಸಿಕ ಅಂಶಕ್ಕೆ ಸಹಾಯ ಮಾಡುವ ಕೆಲವು ಅಂಶಗಳೂ ಇದರಲ್ಲಿ ಇದೆ. ಆಚಾ- ರ್ಯರು ಯುಗಯುಗದಲ್ಲಿ ಪಂಚಾಕ್ಷರ ಪಂಚವಕ್ತ್ರ ವಿಶ್ವಕರ್ಣ ಮುಂತಾದವರು ಇದ್ದರೆಂದು ಕೆಲವು ಪ್ರತಿಗಳಲ್ಲಿ ಇವೆ. ಈ ಪ್ರತಿಯಲ್ಲಿ ಒಂದು ಮುಖ-ಉದಾಹರಣೆಗೆ ಈಶಾನ ಮುಖ-ಅದು ಪಂಚಾಕ್ಷರ ಎಂಬ ಹೆಸರುಳ್ಳದು. ಆ ಮುಖದಲ್ಲಿನ ನಾಲಿಗೆ ಪಂಚವಕ್ತ್ರ ಎಂಬ ಹೆಸರುಳ್ಳದು. ಆ ಮುಖದಲ್ಲಿನ ಕಿವಿ ವಿಶ್ವಕರ್ಣ ಎಂಬ ಹೆಸರುಳ್ಳದು. ಆಚಾ ರ್ಯರ ಹೆಸರು ವಿಶ್ವಾರಾಧ್ಯ (ಉಳಿದವುಗಳು ಅವರ ಹೆಸರಿನಲ್ಲಿ) ಎಂದು ಸ್ಪಷ್ಟವಾಗುತ್ತದೆ. (೧-೨ ಶ್ಲೋಕ ನೋಡಿರಿ) ಅದರ ಸೂತ್ರ ಪಂಚವರ್ಣ. ಈ ಮೇರೆಗೆ ಅವರಿಗೆ ಅಧಿಕಾರ ನಿರ್ಮಾಣ ಕಾಲದಲ್ಲಿ ಯೋಜಿಸಲ್ಪಟ್ಟಿದೆ. ಈ ಪ್ರತಿಯಲ್ಲಿ ಹೇಳಲ್ಪಟ್ಟ ಶ್ರೀ ರೇವಣರು ಅವರ ಮಗ ರುದ್ರಮುನಿ ಇವರೇ ಪಂಚಾಚಾರ್ಯರ ನಿರ್ಮಾಣಕ್ಕೆ ಮುಖ್ಯ ಕಾರಣರೆಂಬುದೂ ರುದ್ರ ಮುನಿಯು ಐವರು ಆಚಾರ್ಯರಿಗೆ ಗುರುವಾಗಿದ್ದನು ಎಂಬುದು ಮುಖ್ಯವಾದ ಐತಿಹಾಸಿಕಾಂಶಗಳು ವಿಶ್ವಾರಾಧ್ಯರ ಪೀಠವು ಕೊಲ್ಲಿಪಾಕಿಯಲ್ಲಿ ಏರ್ಪಡಿ ಸಲ್ಪಟ್ಟಿತ್ತು. ಎಂಬುದನ್ನು 'ವೀರಶೈವ ಧರ್ಮ ಸಿಂಧು; ಆಚಾರ್ಯ ಸಂಭವ ಎಂಬ ಗ್ರಂಥಗಳು ಹೇಳುತ್ತವೆ. ಸೌರಾಷ್ಟ್ರದ ಸೋಮೇಶ್ವರನಲ್ಲಿ ಎಂದರೆ ಪುಲಿಗೆರೆ ಸೋಮೇ ಶ್ವರನಲ್ಲಿ ಅವರ ಉದಯವೆಂದು ಈ ಪ್ರತಿ ಹೇಳುತ್ತದೆ. ಬಸವೇಶ್ವರನ ತರುವಾಯ ಈ ವಿಶ್ವಾರಾಧ್ಯರ ಗುರುತ್ವವು ಏರ್ಪಾಡಾದುದೆಂಬುದು ಮೇಲೆ ಕಂಡ ಗ್ರಂಥಗಳಿಂದ ತಿಳಿಯಬರುತ್ತದೆ. 'ಮಠಸ್ಥಲ' ಎಂದು ಬರೆಯಲ್ಪಟ್ಟ ಪ್ರತಿಗಳಲ್ಲಿ ಮುಖ್ಯವಾಗಿ ಎರಡು ವಿಧ. ೧) ವಿಶ್ವಾರಾಧ್ಯರನ್ನು ಬಿಟ್ಟು ಉಳಿದ ನಾಲ್ವರಾಚಾರ್ಯರ ಸಂಬಂಧ ಪಟ್ಟ ಗೋತ್ರ ಸೂತ್ರ ಕಲಶಾದಿಗಳನ್ನು ಹೇಳುವದು, (೨ನೆಯದು) ವಿಶ್ವಾರಾಧ್ಯರ

ಗೋತ್ರ ಸೂತ್ರ ಕಲಶಾದಿಗಳನ್ನು ಹೇಳುವುದು.

ಒಂದನೆಯ ವಿಧದ 'ಮಠಸ್ಥಲ' ಗಳಲ್ಲಿ ದಿಕ್ಕು, ಮೂಲೆ, ಪರ್ವತ, ವೃಕ್ಷ, ಪೀಠ, ಗದ್ದುಗೆ, ಆಸನ, ಆಚಾರ್ಯರು, ಪ್ರಾಣಲಿಂಗ ಧ್ಯಾನ, ಸ್ಥಲ, ಬೀಜ, ಮಕುಟ, ವಾಹನ, ಕಂಕಣ, ಕಂಥೆ ಸೂಜಿ, ದಾರ, ಖಪ್ಪರ, ಭಿಕ್ಷಾ, ಶಬ್ದ, ಪಥ, ಕ್ರಿಯಾ, ದಾಸೋಹ, ವರ್ಣ, ಮಂತ್ರ, ಗೋತ್ರ, ಗಾಯತ್ರಿ, ಗಂಗೆ, ಸೂತ್ರ, ಪಲ್ಲವ, ಅಕ್ಷರ, ಅರ್ಚನೆ, ಅಧಿದೇವತೆ,ಶಕ್ತಿ, ಯೋಗ, ಕಾಯಕ, ಕಾಯ,ಮುಕ್ತಿ ಮುಂತಾಗಿ ಇವು ಪ್ರತಿಯೊಂದೂ ನಾಲ್ಕು ವಿಧ ಎಂದು ಹೇಳಲ್ಪಟ್ಟಿದೆ, ಅವುಗಳಲ್ಲಿ ವಿಶ್ವಾರಾಧ್ಯರ ಹೆಸರಿಲ್ಲ, ಆದುದರಿಂದ ವಿಶ್ವಾರಾಧ್ಯರು ಇಲ್ಲದೆ ನಾಲ್ಕು ಜನ, ಆಚಾರ್ಯರು ಮಾತ್ರವೇ ಇದ್ದಾಗ ಏರ್ಪಾಡಾದ 'ಮಠಸ್ಥಲ'ಗಳಿವು ಎಂದು ತಿಳಿಯಬಹುದಾಗಿದೆ. ಇವುಗಳಲ್ಲಿ ಒಟ್ಟು ೪೪ × ೪ =೧೭೬ ೪ಸ್ಥಲ (೧೭೬೪) ಎಂದು ಸಂಖ್ಯೆ ಗುರ್ತಿಸಲ್ಪಟ್ಟಿದೆ. ಈ ಸ್ಥಲಗಳು ಬಗೆಗಳೇ ಮೊದ ಲಾದುವು ಕನ್ನಡ ಭಾಷೆಯ ಹೆಸರಿನಿಂದಲೇ ಮೊದಲು ನಿರ್ಮಿಸಲ್ಪಟ್ಟವುಗಳು ಎಂಬು ದನ್ನು ಯಾರೂ ಮರೆಯಬಾರದು. ವಿಶ್ವಾರಾಧ್ಯರು ಆಚಾರ್ಯರಾದ ಮೇಲೆ ೨ನೆಯ ವಿಧದ 'ಮಠಸ್ಥಲ' ಪ್ರತಿ ಹುಟ್ಟಿತೆಂದೂ ನಾಲ್ಕು ಜನ ಆಚಾರ್ಯರು ಬಸವೇಶ್ವರನ ಗುರು ತ್ವದಲ್ಲಿ ಇದ್ದು ಐದನೆಯ ವಿಶ್ವಾರಾಧ್ಯರು ಆಮೇಲೆ ಆದರೆಂದೂ ಈ ವಿಧ 'ಮಠಸ್ಥಲ' ಪ್ರತಿಗಳಿಂದಲೇ ಚೆನ್ನಾಗಿ ತಿಳಿಯಲಿಕ್ಕೆ ಬರುವಂತೆ ಇದೆ.

ಮೇಲಿನ ಗ್ರಂಥಗಳ ಪ್ರಕಾರ ವಿಶ್ವಾರಾಧ್ಯರಿಗೆ ಕೊಲ್ಲಿಪಾಕಿಯಲ್ಲಿ ಚತುರಾಚಾರ್ಯರಿಗೆ ಮುಖ್ಯರನ್ನು ಮಾಡಿ ಗುರುತ್ವದ ಅಧಿಕಾರವು ಕೊಡಲ್ಪಟ್ಟಿತೆಂದು ನಂಬಬಹುದು. ಪುಲಿ ಗೆರೆಯ ಸೋಮೇಶ್ವರ ಸನ್ನಿಧಿಯಲ್ಲಿ ಅವರನ್ನು ಸೇರಿಸಿದ ಐವರಾಚಾರ್ಯರು ಅಥವಾ ಗುರುಗಳಿಗೆ ಪಂಚ ಪೀಠಾಧಿಕಾರವನ್ನು ವಹಿಸಿ ಘನರುದ್ರಮುನೀಶ್ವರರಿಗೆ ಶೂನ್ಯ ಪೀಠಾಧಿಕಾರವನ್ನು ವಹಿಸಿದರೆಂದು ಈ 'ಮಠಸ್ಥಲ' ತಿಳಿಯಬರುತ್ತದೆ. (ಆದರೆ ಪುಲಿಗೆರೆಯದು ಮೊದಲೋ ಹೇಗೆ ? ಎಂಬುದು ಇನ್ನೂ ಶೋಧನೀಯವಾಗಿದೆ.) ಸೊರಟೂರ ಎಂಬುದೇ ಕನ್ನಡ ಪ್ರಾಂತದ ಸೌರಾಷ್ಟ್ರ. ಅದರ ಸಮೀಪದ ಪುಲಿಗೆರೆಯ ಸೋಮೇಶ್ವರನೇ ಅಥವಾ ಸೊರಟೂರಿನ ಸೋಮೇಶನೇ ಸೌರಾಷ್ಟ್ರದ ಸೋಮೇಶ್ವರ (ಈ ಪುಲಿಗೆರೆಯೇ ಈಗಿನ ಲಕ್ಷ್ಮೇಶ್ವರ, ಧಾರವಾಡ ಜಿಲ್ಲೆ.) ಸೊರಟೂರು ವೀರಶೈವರ ಸೌರಾಷ್ಟ್ರವೆಂದು ವೃದ್ಧರು ನಮಗೆ ಹೇಳಿದುದೂ ಉಂಟು.

ಈ ಸೋಮೇಶ್ವರನ ಸನ್ನಿಧಿಯಲ್ಲಿ ಬಸವೇಶ್ವರನ ತರುವಾಯ ಈ ಕೆಲಸವು ನಡೆದಿರಬೇಕು. ಸೌರಾಷ್ಟ್ರ ಸಿದ್ಧ ಸಿಂಹಾಸನವೂ ಗುರುಸಿದ್ಧ ಮಲ್ಲಿಕಾರ್ಜುನ ಎಂಬ ಪ್ರಾಣಲಿಂಗವೂ ವಿಶ್ವಾರಾಧ್ಯರಿಗೆ ಪುಲಿಗೆರೆಯಲ್ಲಿ ಕೊಡಲ್ಪಟ್ಟಿರಬೇಕು. ಈ ಪುಲಿಗೆರೆಯು ಕಲಚೂರ್ಯ ಬಿಜ್ಜಳನ ಕಾಲದಲ್ಲಿ ಬಹು ಪ್ರಸಿದ್ಧವಾದ ಸ್ಥಳ. ಬಿಜ್ಜಳನೂ ಬಸವೇಶ್ವರನೂ ಸಹ ಅಲ್ಲಿ ಕೆಲವು ಕಾಲ ಇರುತ್ತಿದ್ದರು ಎಂಬುದು ತಿಳಿಯ ಬಂದಿದೆ ಬಸವೇಶ್ವರನ ತರು ವಾಯವೂ ಶ್ರೀ ರೇವಣರ ಕೃಪೆಗೆ ಪಾತ್ರನಾದ ಸೋವಿದೇವನೂ ಆ ಕಾಲದಲ್ಲಿ ಪುಲಿಗೆರೆ

ಯಲ್ಲಿ ಇದ್ದಿರಬೇಕು. ಸೋವಿದೇವನು ರುದ್ರಮುನಿಯನ್ನು ವರ್ಣಿಸಿ ಶಾಸನ ಬರೆಯಿಸಿರುವುದೂ ಈ ಹಿಂದೆಯೇ ಪ್ರಕಟವಾಗಿದೆ (ಪಂಚಾಚಾರ್ಯರ ಚರಿತ್ರೆ ಮೊದಲನೆಯ ಭಾಗ) ಶ್ರೀ ರೇವಣರು, ಶ್ರೀ ಮರುಳರು, ಶ್ರೀ ಪಂಡಿತರು ಏಕೋರಾಮರನ್ನು ಕೂಡಿಕೊಂಡು ಬಂದು ಈ ಕಾರ್ಯವನ್ನು ಮಾಡಿದ್ದಾರೆ. ಆದುದರಿಂದಲೇ ಆದಯ್ಯನ ವಚನಗಳಲ್ಲಿ ಆಚಾರ್ಯರ ಹೆಸರನ್ನು ಹೇಳುವ ವಚನಗಳು ದೊರಕುತ್ತವೆ. ಪುಲಿಗೆರೆಯ ಈ ಕಾರ್ಯವಾದ ಮೇಲೆಯೇ ಆದಯ್ಯನ ವಚನಗಳು ಹುಟ್ಟಿರಬೇಕು. ಅವು ಬಸವೇಶ್ವರನೇ ಮೊದಲಾದವರ ವಚನಗಳೊಂದಿಗೆ ಸೇರಿಸಲ್ಪಟ್ಟು ಶ್ರೀ ರುದ್ರಮುನಿಯವರು ಶ್ರೀಶೈಲದಲ್ಲಿ ಕೂಡಿಸಿರಬಹುದಾದ ಸರ್ವಪುರಾತನರ ವಚನಗಳ ಕಟ್ಟಿನಲ್ಲಿ ಸೇರಿರಬೇಕು. ಆ ಕಟ್ಟಿನಲ್ಲಿ ಆದಯ್ಯನ ವಚನಗಳು ಕಡೆಯಲ್ಲಿ ಇರುವುದೇ ಇದಕ್ಕೆ ಸಾಕ್ಷಿ. ವಿಶ್ವಾರಾಧ್ಯರಿಗೆ ಕೊಡಲ್ಪಟ್ಟ ಸೌರಾಷ್ಟ್ರ ಸಿದ್ಧ ಸಿಂಹಾಸನವು ಬಿಜ್ಜಳನ ಮಗ ಸೋವಿದೇವನಿಗೆ ಸೇರಿದ ಪುಲಿಗೆರೆಯ ಪ್ರಾಂತವೇ ಆಗಿದೆ. ಇದರಿಂದ ಸೋವಿದೇವನ ಒಪ್ಪಿಗೆಯೂ ಈ ಕಾರ್ಯಕ್ಕೆ ದೊರೆತಿದೆ ಎಂದು ತಿಳಿಯಬೇಕಾಗುತ್ತದೆ ಬಸವೇಶ್ವರ ಮೊದಲಾದವರ ವಚನಗಳಲ್ಲಿ ಆಚಾರ್ಯರ ಹೆಸರಿಲ್ಲದಿರುವುದರಿಂದ ಆ ವಚನಗಳ ಉತ್ಪನ್ನದ ಕಾಲದಲ್ಲಿ ಆಚಾರ್ಯರು ಪ್ರಾಮುಖ್ಯತೆ ಪಡೆಯುವವರಾಗಿದ್ದರು.ಎಂದು ತಿಳಿಯಲಿಕ್ಕೆ ಬರುತ್ತದೆ.

ಆದಯ್ಯನಿಗೆ ಪುಲಿಗೆರೆಯ ಸಂಬಂಧವೂ ಸೌರಾಷ್ಟ್ರ ಸೋಮೇಶ್ವರನ ಸಂಬಂಧವೂ ವೀರಶೈವ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಅವನಿಗಾಗಿ ಹೇಳಲ್ಪಟ್ಟ ಸೌರಾಷ್ಟ್ರದ ಸೋಮೇಶ್ವರನೇ ವಿಶ್ವಾರಾಧ್ಯರ ಸಂಬಂಧದಲ್ಲಿಯೂ ಹೇಳಲ್ಪಟ್ಟಿದ್ದಾನೆ ಎಂಬುದು ನಿರ್ಣಯವಾದ ಅಂಶ. ಆದಯ್ಯನ ಸಂಬಂಧದ ಸೋಮೇಶ್ವರನು ಉತ್ತರ ಹಿಂದೂಸ್ಥಾನದಲ್ಲಿ ಪೂರ್ವದಲ್ಲಿ ಸೌರಾಷ್ಟ್ರ ಎಂದು ಕರೆಯಲ್ಪಡುತ್ತಿದ್ದ ಈಗಿನ ಗುಜರಾತ್ ದೇಶವಲ್ಲಿನ ಸೋಮೇಶ್ವರನಲ್ಲ. ಗುಜರಾತಿನ ಸಂಬಂಧದ ಸೋಮೇಶ್ವರನು ವೀರಶೈವರು ಐತಿಹಾಸಿಕ ಸಂಬಂಧವಲ್ಲಿ ಯಾವುದಕ್ಕೂ ಸಂಬಂಧಿಸಿದವನಾಗಿ ಇಲ್ಲ. ಗ್ರಂಥಗಳಲ್ಲಿಯೂ ವರ್ಣಿಸಲ್ಪಟ್ಟಿಲ್ಲ. ಆದುದರಿಂದ ಐತಿಹಾಸಿಕಾಂಶವಾಗಿ ವೀರಶೈವರಿಗಾಗಿ ಕನ್ನಡದ ಸೌರಾಷ್ಟ್ರ ಸೋಮೇಶ್ವರ ಎಂದರೆ ಲಕ್ಷ್ಮೇಶ್ವರದ ಸೋಮೇಶ್ವರ.ಎಂದು ತಿಳಿಯಬೇಕಾಗಿದೆ.

ಕಾಶಿಯ ಪೀಠದ ವಿಶ್ವಾರಾಧ್ಯರು ಲಕ್ಷ್ಮೇಶ್ವರದಲ್ಲಿ ಗುರು ಪೀಠದ ಅಧಿಕಾರಿಗಳಾದರೆಂಬುವಕ್ಕೆ ಕೆಲವರಿಗೆ ಸಂಶಯ ಬರಬಹುದು. ಅದಕ್ಕೆ ವಿಶ್ವಾರಾಧ್ಯರನ್ನು ಯಾರೂ ಗುರ್ತಿಸದೆ ಇರುವದೇ ಕಾರಣವಾಗಿದೆ. ಈಗಿನ ಶೋಧನೆಯಲ್ಲಿ ಅವರು 'ಕಾಂಚಿ' ಎಂಬ ಊರಿನಲ್ಲಿ ಇದ್ದರೆಂದು ತಿಳಿಯಬಂದಿದೆ ಅವರ ಕಾಲದಲ್ಲಿ ಭೈರವರಾಜನೆಂಬುವನು ಇದ್ದನು, ಆ ಭೈರವ ರಾಜನನ್ನೂ ಗುರ್ತಿಸಿದುದಾಗಿದೆ. ಆ ಭೈರವರಾಜನು ಶ್ರೀ ರೇವಣರ ಸಂಬಂಧದ ನೀಲಗಳ ಚಕ್ರವರ್ತಿ ಎಂದು ನಾವು ಯಾರನ್ನು ಗ್ರಂಥಗಳಿಂದ ತಿಳಿಯುತ್ತೇವೆಯೋ ಯಾವ ಆ ಚಕ್ರವರ್ತಿಯು 'ನಲ್ಲಸಿದ್ಧ' ಎಂಬ ಹೆಸರಿನಿಂದ ಗುರ್ತಿಸಲ್ಪಟ್ಟಿದ್ದಾನೆಯೋ (ಪಂಚಾಚಾರ್ಯರ ಚರಿತ್ರೆ, ಮೊದಲನೆಯ ಭಾಗ) ಆ ನಲ್ಲಸಿದ್ಧನ

ಸಂಬಂಧಿಕನಾಗಿದ್ದಾನೆ. ಈ ಸಂಗತಿಗಳೆಲ್ಲಾ ವಿವರವಾಗಿ ವಿಶ್ವಾರಾಧ್ಯರ ಚರಿತ್ರೆಯಲ್ಲಿ ಹೊರಬೀಳಲಿದೆ. ಶ್ರೀ ರೇವಣರಿಗೆ ವಿಶ್ವಾರಾಧ್ಯರು ಪರಿಚಿತರು. ಅವರಿಗೆ ವೀರಶೈವರು ಚಿರಋಣಿಗಳು. ಅವರಿಗೂ ಅವರ ಮಗನಾದ ರುದ್ರಮುನಿಗೂ ಕಲಚ್ಯೂರ್ಯ ಬಿಜ್ಜಳನ ಮಗನಾದ ಸೋವಿದೇವನು ಆ ಬಿಜ್ಜಳ ಚಕ್ರವರ್ತಿ ಬದುಕಿದ್ದಾಗಲೂ ಆ ಬಿಜ್ಜಳನು ಗತಿಸಿದ ನಂತರವೂ ಬಹಳ ಭಕ್ತಿಯನ್ನು ತೋರಿಸಿ ಪೂಜ್ಯಭಾವದಿಂದ ನಡೆದುಕೊಂಡಿದ್ದಾನೆ. ಅವನ ಕಾಲದಲ್ಲಿ ಅವನ ರಾಜ್ಯದಲ್ಲಿ ಬಸವೇಶ್ವರನ ತರುವಾಯ ಕೊಲ್ಲಿಪಾಕಿಯಲ್ಲಿ ಏರ್ಪಡಿಸಲ್ಪಟ್ಟ ಮಠವುಳ್ಳ ವಿಶ್ವಾರಾಧ್ಯರಿಗೆ ಲಕ್ಷ್ಮೀಶ್ವರದಲ್ಲಿ ಗುರು ಪೀಠಾಧಿಕಾರವು ಕೊಡಲ್ಪಟ್ಟಿತು ಎಂಬುದುಅಸಂಭವನೀಯವಾಗಿ ಇಲ್ಲ.(ವೀರಶೈವ ಸಮಾಜವು ಐತಿಹಾಸಿಕ ಶೋಧನೆಯನ್ನು ಚೆನ್ನಾಗಿ ನಡೆಯಿಸಿ ವಿಶ್ವಾರಾಧ್ಯರ ಚರಿತ್ರೆಯನ್ನು ಚೆನ್ನಾಗಿ ತಿಳಿಯಬೇಕಾಗಿದೆ.) ವಿಶ್ವಾರಾಧ್ಯರ ಹೊರತಾಗಿ ಉಳಿದ ಆಚಾರ್ಯರಿಗೆ ಶಾಂತಮಲ್ಲಿಕಾರ್ಜುನ ಮುಂತಾದ ಪ್ರಾಣಲಿಂಗಗಳಿರುವಂತೆ "ಗುರುಸಿದ್ಧಮಲ್ಲಿಕಾರ್ಜುನಲಿಂಗ" ಎಂಬ ಪ್ರಾಣಲಿಂಗವು ವಿಶ್ವಾರಾಧ್ಯರಿಗೆ ಆಗಿದ್ದುದು ಇದರಿಂದ ತಿಳಿಯುತ್ತದೆ. ಇದು ಕೊಲ್ಲಿಪಾಕಿಯ ಲಿಂಗದ ಹೆಸರೂ ಅಲ್ಲ ಕಾಶಿಯ ಲಿಂಗದ ಹೆಸರೂ ಅಲ್ಲ. ಇದು ಪುಲಿಗೆರೆಯ ಸಿದ್ಧ ಸೋಮೇಶ್ವರ ಲಿಂಗವೇ ಆಗಿದೆ. ಅಲ್ಲಿ ಆ ಲಿಂಗವಿರುವುದು (ದೇವಾಲಯ) ಈಗಲೂ ಸಾಕ್ಷಿಯಾಗಿದೆ. ಈ ಕಾರ್ಯಗಳು ನಡೆದ ಮೇಲೆ ವಿಶ್ವಾರಾಧ್ಯರ ಮಠವು ಕಾಶಿಯಲ್ಲಿ ಕಟ್ಟಲ್ಪಟ್ಟಿದೆ ಎಂಬುದಕ್ಕೆ ಕಾಶೀಪೀಠದ ಮಧ್ಯಭಾಗದಲ್ಲಿನ ಕಂಬದಲ್ಲಿ ಜಟ್ಟಿಕಾಯಕದ ಶೀಲವಂತ ಚನ್ನಮಲ್ಲಯ್ಯನವರು (ಕಲಕೇತರು) ರೆಕ್ಕೆ ಕಟ್ಟಿಕೊಂಡು ಹಾರಿದ ಗುರ್ತನ್ನು ತೋರಿಸುತ್ತಿರುವುದೇ ಆ ಮಠದ ಕಲಕೇತಯ್ಯನವರ ಕಾಲದಲ್ಲಿ ಆಯಿತೆಂದು ತಿಳಿಯುವುದರ ನಿದರ್ಶನ. ಆ ಕಲಕೇತಯ್ಯನವರು ಈ ಕಾರ್ಯಗಳೆಲ್ಲಾ ಆದ ಮೇಲೆ ಕಾಶಿಯಲ್ಲಿ ಮಠವನ್ನು ಕಟ್ಟಲಿಕ್ಕೆ ಕಾರಣರಾದವರಾಗಿದ್ದಾರೆ.

ಒಟ್ಟಿನಲ್ಲಿ ಸಮಾಜ ಸುಧಾರಣೆಯ ಕಾರ್ಯವೂ ಈಗಿನ ಪಂಚಾಚಾರ್ಯರ ಅಸ್ತಿತ್ವವೂ ಶ್ರೀ ರೇವಣರು ಮತ್ತು ರುದ್ರಮುನಿ ಇದರಿಂದ ನಡೆಯಿತೆಂಬುದನ್ನು ಈ ಮಠಸ್ಥಲವು ಸ್ಪಷ್ಟಪಡಿಸುತ್ತದೆ. ಇದೂವರೆಗೆ ಐತಿಹಾಸಿಕವಾಗಿ ಹೀಗಿರಬೇಕೆಂದು ಊಹಿಸಿದ್ದುದು ನಿಜವೆಂಬುದಕ್ಕೆ ಇದೊಂದು ಆಧಾರವು ದೊರಕಿದಂತಾಗಿದೆ.

ಈ 'ಮಠಸ್ಥಲ' ಪ್ರತಿ ಬರೆದಿದ್ದ ಪುಸ್ತಕದಲ್ಲಿಯೇ ನಾಲ್ಕು ಜನ ಆಚಾರ್ಯರನ್ನು ಹೇಳುವ 'ಮಠಸ್ಥಲ' ಒಂದು ಬರೆಯಲ್ಪಟ್ಟಿದೆ. ಅದರಲ್ಲಿ ಈ ವಿಷಯಗಳಿವೆ :– ಶ್ರೀಮತ್ ಪಡಿವಿಡಿರುದ್ರಮುನಿ ಸ್ವಾಮಿಯವರೇ ವೀರಸಿಂಹಾಸನಕ್ಕೆ ಕರ್ತೃಗಳಾಗಿ ಅವರು ನಿರ್ಮಿಸಿದ ಮುಖ್ಯ ಶಿಷ್ಯರುಗಳ ವಂಶಾವಳಿ :–ಮುಕ್ತಿ ಮುನಿ, ದಿಗಂಬರ ಮುಕ್ತಿ ಮುನಿ, ಚೆನ್ನವೀರಾರ್ಯ, ಶಾಂತವೀರ ದೇಶಿಕೇಂದ್ರರರು ಇದು ಇವರಿಗೆ ರುದ್ರಮುನೀಶ್ವರರು ಅನುಗ್ರಹವ ಮಾಡಿ ಇರುವ'ದು' (ರು ?) ಮುಕ್ತಿ ಮುನೀಶ್ವರರಿಗೆ ಶ್ರೀ ಶೈಲ ಪರ್ವತವಲ್ಲಿ ಪಟ್ಟಾಭಿಷೇಕಮಂ ಗೆಯಿಸಿ ಶಿವಜಾತಕ ಭಿಕ್ಷಾವರ್ತಿ ಎನಿಸಿದರು. ದಿಗಂಬರ

ಮುಕ್ತಿಮುನಿಗಳಿಗೆ ತಂಜಾಪುರಾಧಿಪತಿಯಾಗಿರೆಂದು ನಿರ್ಮಿಸಿದರು. ಮರಿ ಚನ್ನ ವೀರಾರ್ಯರಿಗೆ ಉಜ್ಜಯಿನೀಪುರಕ್ಕಧಿಪತಿಯಾಗಿರು ಎಂಬುದಾಗಿ ನೇಮಿಸಿದರು. ಶಾಂತ ವೀರದೇಶಿ ಕೇಂದ್ರರಿಗೆ ಪೂರ್ವ ದಕ್ಷಿಣಕಾಶಿ ಕಕುದ್ಗಿರಿ ಮೊದಲಾದ ಲೋಕದಲ್ಲಿಹ ಪಟ್ಟಣ ಗ್ರಾಮ ಸುಕ್ಷೇತ್ರಂಗಳಲ್ಲಿ ಶಿಷ್ಯರು ನಿರ್ಮಿಸಿದ ಕಾರಣ ಪಡುವಿಡಿ ಬಗೆವ್ಯಾಘ್ರ ಜರ್ಮಾಸನ ಕರಿಯ ಕಂಬಳಿ ಕುಪ್ಪಸ ಕಂಥೆ ಬಗೆ ಮೊದಲಾಯಿತ್ತು.

ಇನ್ನು ಮಠದ ಸಿಂಹಾಸನ ಕ್ರಮವೆಂತೆಂದಡೆ :– ಕೇತಾರ ಮಠವೇ ವೀರ ಸಿಂಹಾಸನಕ್ಕೆ ಆದಿ. ಉಜ್ಜಯಿನೀಪುರ ಮಠವೇ ಧರ್ಮ ಸಿಂಹಾಸನಕ್ಕೆ ಆದಿ. ಶ್ರೀಶೈಲ ಪರ್ವತ ಮಠವೇ ದೇವಸಿಂಹಾಸನಕ್ಕೆ ಆದಿ. ಚಂಪಾರ(ಣ್ಯ ?) ಮಠವೇ ಶೂನ್ಯ ಸಿಂಹಾಸನಕ್ಕೆ ಆದಿ. ಇದಕ್ಕೆ ಆಚಾರ್ಯರು ರೇವಣಸಿದ್ಧ, ಮರುಳುಸಿದ್ಧ, ಪಂಡಿತಾರಾಧ್ಯ, ಏಕೋರಾಮರು (ಹೀಗೆ ನಾಲ್ವರು) ವೀರಸಿಂಹಾಸನಕ್ಕೆ ರೇವಣ ಸಿದ್ಧದೇವರು, ದೇವಸಿಂಹಾಸನಕ್ಕೆ ಪಂಡಿತಾರಾಧ್ಯರು, ಧರ್ಮಸಿಂಹಾಸನಕ್ಕೆ ಮರುಳಾ ರಾಧ್ಯರು, ಶೂನ್ಯಸಿಂಹಾಸನಕ್ಕೆ ಏಕೋರಾಮ ತಂದೆಗಳು, ಇಂತಪ್ಪ ಚತುರಾಚಾರ್ಯರ ಮಧ್ಯದಲ್ಲಿ ರುದ್ರಮುನಿಸ್ವಾಮಿಯುವರೇ ವಿಶ್ವಾಚಾರ್ಯರಾಗಿ ಪಟ್ಟಾಧಿಕಾರವುಳ್ಳವರೇ ಆಗಿ ಜಪಲೋಕದಲ್ಲಿ ಗೋಪ್ಯರಾಗಿ ಸಂಚರಿಸುವಹರೆಂದು ಆಗಮೋಕ್ತವಾಗಿ ಚತುರಾ ಚಾರ್ಯ ಪುರಾಣೋಕ್ತವಾಗಿ ಇಹುದು".

ನಾಲ್ವರು ಆಚಾರ್ಯರನ್ನೂ ಅವರ ಮಧ್ಯದಲ್ಲಿ ವಿಶ್ವಾಚಾರ್ಯರಾಗಿ ರುದ್ರಮುನಿ ಯನ್ನೂ ಏರ್ಪಡಿಸಿದ ವಿಷಯವನ್ನು ತಿಳಿಸುವ ೧ ನೆಯ ವಿಧಕ್ಕೆ ಸೇರಿದ ಈ 'ಮಠಸ್ಥಲ'ದಿಂದ ವೀರಶೈವ ಸಮಾಜದ ರಕ್ಷಣೆಗಾಗಿ ವೀರಸಿಂಹಾಸನ, ದೇವಸಿಂಹಾಸನ, ಧರ್ಮಸಿಂಹಾಸನ ಮತ್ತು ಶೂನ್ಯ ಸಿಂಹಾಸನ ಎಂಬ ನಾಲ್ಕು ಸಿಂಹಾಸನಗಳಾದುವೆಂದೂ ಇವುಗಳಿಗೆಲ್ಲಾ ಮುಖ್ಯರಾಗಿ ರುದ್ರಮುನಿಗಳು ವಿಶ್ವಾಚಾರ್ಯರಾಗಿ ಇದ್ದರೆಂದೂ ವ್ಯಕ್ತವಾಗುತ್ತದೆ. ಏಕೋರಾಮಾರಾಧ್ಯರಿಗೆ ಶೂನ್ಯಸಿಂಹಾಸನದ ಅಧಿಕಾರವನ್ನು ಕೊಟ್ಟದ್ದು ನಿಜ ಎಂಬುದನ್ನು ತೋರಿಸುವುದಕ್ಕೆ ಪಂಚ ಬ್ರಹ್ಮೋದಯ ಭಾಷ್ಯದಲ್ಲಿ ಏಕೋರಾಮರನ್ನು ಕಲ್ಯಾಣದ ಶೂನ್ಯ ಸಿಂಹಾಸನದ ಮೇಲೆ ಕೂಡಿಸಿ ಅವರಿಗೆ ಮದುವೆ ಮಾಡಿದವರೆಂಬ ಬರವಣಿಗೆಯೂ ದೊರಕುತ್ತದೆ. ಈ ರೀತಿಯಲ್ಲಿ ನಾಲ್ಕು ಸಿಂಹಾಸನಗಳು ಏರ್ಪಾಡಾದಾಗ ಆಚಾರ್ಯರು ಮದುವೆಯಾದವರಾಗಿರಬೇಕು ಎಂಬ ಕಟ್ಟಳೆ ವಿಧಿಸಲ್ಪಟ್ಟಿರಬೇಕು. 'ಪಂಚ ಬ್ರಹ್ಮೋದಯ ಭಾಷ್ಯ'ವು ಈ ಆಚಾರ್ಯರೆಲ್ಲರೂ ಮದುವೆಯಾದವರೆಂದೇ ಹೇಳುತ್ತದೆ. ಈ ಏರ್ಪಾಡೂ ಕೂಡಾ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದಮೇಲೆ ಅಲ್ಲಮಪ್ರಭುಸ್ವಾಮಿಗಳಿಗಾಗಿ ಏರ್ಪಡಿಸಿದ್ದ ಕಲ್ಯಾಣದ ಶೂನ್ಯ ಸಿಂಹಾಸನವನ್ನು ಏಕೋರಾಮರಿಗೆ ವಹಿಸಿದುದು ರುದ್ರಮುನಿ ಯಿಂದಲೇ ಎಂದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಆಚಾರ್ಯ ವರ್ಗಕ್ಕೆ ರುದ್ರಮುನಿ ಗಳೇ ಒಡೆಯರಾಗಿದ್ದಾರೆ. ಹೀಗೆ ನಾಲ್ವರು ಆಚಾರ್ಯರಿಗೆ 'ಮಠಸ್ಥಲ' ಸಂಬಂಧವಾದ ಸ್ಥಳಕುಳಗಳನ್ನು ಏರ್ಪಡಿಸಿದವರೂ ಐದನೆಯ ವಿಶ್ವಾರಾಧ್ಯರಿಗೂ ಇವುಗಳನ್ನು

ಏರ್ಪಡಿಸಿದವರೂ ಶ್ರೀ ರೇವಣರು ಮತ್ತು ಅವರ ಮಕ್ಕಳೆಂದೂ ತಿಳಿಯಲಿಕ್ಕೆ ಬರುವಂತಾಗಿದೆ. ಬಸವೇಶ್ವರನು ಗುರುವಾಗಿ ಅವನ ಗುರುತ್ವದ ಒಳಗೆ ಇದ್ದಮೇಲೆ ಕಂಡ ಇದೇ ನಾಲ್ವರಾಚಾರ್ಯರಿಗೆ ಬಸವೇಶ್ವರನು ಸ್ಥಲ ಕುಳಗಳನ್ನೇರ್ಪಡಿಸಿದ್ದನೇ ಹೇಗೆ ? ಎಂಬುದಕ್ಕೆ ಆಧಾರವು ಇನ್ನೂ ಶೋಧನೀಯವಾಗಿದೆ.

"ಅನಾದಿ ವೀರಶೈವ ಸಂಗ್ರಹ" ದಲ್ಲಿ ನಕಾರಾದಿ ಚತುರಕ್ಷರ ಕಲಶಮೂರ್ತಿಗಳೇ ರೇಣುಕ ಗಣೇಶ್ವರ, ಮರುಳು ಶಂಕೇಶ್ವರ, ಏಕೋರಾಮೇಶ್ವರ, ಪಂಡಿತೇಶ್ವರರೆಂಬ ಚತುಃಕಲಶಾಚಾರ್ಯರು. ಈ ಚತುರ್ಬ್ರಹ್ಮ ಲಿಂಗಮೂರ್ತಿಗಳ ಭಕ್ತ್ಯುಪಚಾರಂಗಳಂ ಕೈಗೊಳ್ಳುತ್ತ ಈಶಾನ ಬ್ರಹ್ಮ ಯಕಾರ ಮಂತ್ರಮೂರ್ತಿ ಕಲಶ, ಸರ್ವಾನುಗ್ರಹ ಕರ್ತ ಸದಾಶಿವ ಗುರು ಮಧ್ಯ ಕಲಶವೇ ಪಂಚಮಕಲಶವೆನಿಸಿ ಗುರು ಬಸವೇಶ್ವರನಿಹನು" ಎಂದಿರುವುದರಿಂದ ಬಸವೇಶ್ವರನ ಕಾಲದ ನಾಲ್ಕು ಆಚಾರ್ಯರಿಗೆ ಕಲಶಗಳ ಒಡೆತನವಿದ್ದಿತೇ ಹೊರತು 'ಮತಸ್ಥಲ'ದಲ್ಲಿ ಹೇಳಿದ ೧೭೬–೪ ಸ್ಥಲಗಳು ಇದ್ದಿಲ್ಲವೆಂದು ವ್ಯಕ್ತವಾಗುತ್ತದೆ. ಇದು ರುದ್ರಮುನಿಯ ದೆಸೆಯಿಂದಲೇ ಆಚಾರ್ಯರಿಗೆ ಬಂದಿರಬೇಕು. ಬಸವೇಶ್ವರನ ತರುವಾಯ ಶ್ರೀ ರೇಣುಕ ಮತ್ತು ಮಗ ಇವರು ವೀರಶೈವ ಗುರು ನಿರ್ಮಾಣಕರು ಎಂದು ಕರೆಯಿಸಿಕೊಳ್ಳಲ್ಪಡಲು ಅರ್ಹರಾಗಿದ್ದಾರೆ.

ಶ್ರೀಗಳಾದ ರೇವಣರು, ಮರುಳು ಸಿದ್ಧರು, ಪಂಡಿತಾರಾಧ್ಯರು, ಏಕೋರಾಮ ದೇವರು ಇವರು ಬಸವೇಶ್ವರನ ಕಾಲದಲ್ಲಿಯೇ ಆಚಾರ್ಯರಾಗಿದ್ದಾರೆಂದೂ (ಅನಾದಿ ವೀರಶೈವ ಸಂಗ್ರಹ) ಈ ನಾಲ್ವರೂ ಘನರುದ್ರಮುನಿಗಳೊಂದಿಗೆ ಸೌರಾಷ್ಟ್ರ ಸೋಮೇಶನಲ್ಲಿಗೆ ಹೋದಮೇಲೆ ವಿಶ್ವಾರಾಧ್ಯರನ್ನೂ ಸೇರಿಸಿದ ಐವರಾಚಾರ್ಯರಿಗೆ ಗುರುವಾಗಿ ಘನಮುನಿರುದ್ರಸ್ವಾಮಿಗಳನ್ನು ಏರ್ಪಡಿಸಿದರೆಂದೂ ಈ ಕೆಲಸವು ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದಮೇಲೆ ಕೆಲವು ವರ್ಷಗಳಲ್ಲಿಯೇ ನಡೆದಿರಬೇಕೆಂದೂ, ಕಲಚೂರಿಯ ಸೋವಿದೇವನೂ ರುದ್ರ ಮುನಿಪನನ್ನು ಹೊಗಳಿ ಮಂಗಳವಾಡದಲ್ಲಿ ಶಾಸನವನ್ನು ಬರೆಯಿಸಿದಮೇಲೆ (ಕ್ರಿ. ಶ. ೧೬೭೭) ಈ ಕೆಲಸವು ನಡೆದಿರಬೇಕೆಂದೂ ಈಗ ತಿಳಿಯಲನುಕೂಲವಾಗಿದೆ.

ವಿಶ್ವಾರಾಧ್ಯರಿಗೆ ಕೊಟ್ಟಿರುವ ಗೋತ್ರ ಸೂತ್ರ ಕಲಶಾದಿಗಳಲ್ಲಿ ಇದೇ ವಿವರವು ಕಂಡುಬಂದಿದೆ. ದಿಗ್ವಳಿಯಲ್ಲಿ ಬರೆದ ಪ್ರಕಾರ ಅಥರ್ವಶೃತಿಯವರೆವಿಗೆ ೧೨–ಮುಂದೆ ಹೆಸರು, ಪರ್ವತಾಶ್ರಯ, ಪಟ್ಟಣ, ವಾಹನ ಈ ನಾಲ್ಕು– ಆಮೇಲೆ ಮುದ್ರೆಗಳ ವಿವರದ ಪ್ರಕಾರ ಸೌರಾಷ್ಟ್ರ ಸಿಂಹಾಸನ ಮೊದಲು ಮಾಡಿಕೊಂಡು ಸುಮಾರು ೨೮ ಹೀಗೆ ಅವರಿಗೂ ನಾಲ್ವಾರಾಚಾರ್ಯರಂತೆ ೪೪ ಸ್ಥಲಕುಳಗಳು ಸಂಬಂಧಿಸಲ್ಪಟ್ಟಿವೆ ಎಂಬುದನ್ನು ತಿಳಿವುದಾದರೆ ಪೂರ್ವ ಸಾಂಪ್ರದಾಯವಿಡಿದೇ ವಿಶ್ವಾರಾಧ್ಯರನ್ನು ಆಚಾರ್ಯರನ್ನಾಗಿ ನಿಯಮಿಸಿದರೆಂಬುದು ಸಿದ್ಧವಾಗುತ್ತದೆ.

ಹೊಯ್ಸಳ ವೀರಬಲ್ಲಾಳನ ರಾಜ್ಯದಲ್ಲಿ ಚಂಪಾರಣ್ಯವಿದ್ದಿತೆಂದು 'ಗುರು ಚಿತ್ತಾರಾಧ್ಯರ ಚರಿತ್ರೆ'ಯಿಂದ ತಿಳಿಯ ಬಂದಿರುವುದರಿಂದ ಮೇಲೆ ಹೇಳಲ್ಪಟ್ಟ

ಚಂಪಾರ ಅಥವಾ ಚಂಪಾರಣ್ಯ ಮಠವೆಂಬುದು ಆ ವೀರಬಲ್ಲಾಳನ ರಾಜ್ಯಕ್ಕೆ ಸೇರಿದ್ದ ಮೈಸೂರು ಡಿಸ್ಟ್ರಿಕ್ಟಿನಲ್ಲಿ ಇರುವ ಹರದನಹಳ್ಳಿಮಠ ಆಗಿರಬೇಕು. ಹೀಗಾಗಿ ಕಲ್ಯಾಣದ ಶೂನ್ಯ ಸಿಂಹಾಸನವು ಹರದನಹಳ್ಳಿಗೆ ಬಂದಿರಬಹುದೆಂದು ಊಹಿಸಲಿಕ್ಕವಕಾಶವಿದ್ದರೂ ಈ ವಿಷಯವಲ್ಲಿ ಇನ್ನೂ ಶೋಧನೆ ನಡೆಯಬೇಕಾಗಿದೆ. ಹೀಗೆ ನಾಲ್ಕು ಸಿಂಹಾಸನಗಳನ್ನು ರುದ್ರಮುನಿಗಳು ಏರ್ಪಡಿಸುವ ಕಾಲದಲ್ಲಿ ಬಾಳೇಹಳ್ಳಿಮಠ, ಕಾಶೀಮಠ, ಇವುಗಳೆಲ್ಲಾ ಕೂಡಿದ ಪಂಚಾಚಾರ್ಯರ ಮಠಗಳು ಈಗ ಇರುವಂತೆ ಆಗಿರಲಿಲ್ಲವೆಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿಡಬೇಕಾಗಿದೆ. ಈಗಿನ ಪದ್ಧತಿಯ ಐದು ಆಚಾರ್ಯಮಠಗಳು ಏರ್ಪಾಡಾದುದು ಮೇಲೆ ಕಂಡಂತೆ ಸಿಂಹಾಸನಗಳು ರಚನೆಯಾದ ೧೦-೧೨ ವರ್ಷಗಳಾದ ಮೇಲೆ ಎಂದು ತಿಳಿಯಬೇಕಾಗಿದೆ. ಚೆನ್ನಾಗಿ ಶೋಧನೆಯಾದ ಮೇಲೆ ಈ ಅಂಶಗಳು ಹೊರಬೀಳಬೇಕಾಗಿದೆ. ಸ್ವಾಯಂಭುದಾಗಮದಲ್ಲಿ ಈಗಿನ ರೂಢಿಯ ಐದು ಆಚಾರ್ಯರ ಮಠಗಳೂ ಶೂನ್ಯ ಸಿಂಹಾಸನವೂ ಸಹ ವರ್ಣಿಸಲ್ಪಟ್ಟಿದೆ. ಆ ಆಗಮವೂ ಕೂಡ ೧೨ ನೆಯ ಶತಮಾನದಿಂದೀಚೆಗೆ ಹುಟ್ಟಿದುದೆಂಬುದಕ್ಕೆ ಶೂನ್ಯ ಸಿಂಹಾಸನದ ಉಲ್ಲೇಖವು ಅದರಲ್ಲಿರುವುದೇ ಸಾಕ್ಷಿ. ಆದರೆ ಅದರಲ್ಲಿ ಹೇಳಲ್ಪಟ್ಟ ವಿಧಾನವು ಹೇಗೆ ಮತ್ತು ಯಾವಕಾಲದಿಂದ ಬಂದಿತೆಂಬುದು ಇನ್ನೂ ಶೋಧನೀಯವಾಗಿಯೇ ಇದೆ. ಆದರೆ ಕ್ರಿ. ಶ. ೧೧೮೭ ರಲ್ಲಿ ಹುಟ್ಟಿದ ಸಿರಿವಾಳ ಶಾಸನದಲ್ಲಿ ಶ್ರೀ ರೇವಣರಿಗೂ 'ರೇಣುಕಾಚಾರ್ಯ' ಎಂದು ಆಚಾರ್ಯತ್ವದ ಲಕ್ಷಣವು ಹೇಳಲ್ಪಟ್ಟಿರುವುದರಿಂದ ಕ್ರಿ. ಶ. ೧೧೮೭ ರ ಒಳಗಾಗಿ ಈ ಕಾರ್ಯಗಳೆಲ್ಲಾ ನಡೆದವು. ಅಷ್ಟೊತ್ತಿಗೆ ಬಸವೇಶ್ವರರು ಕಲ್ಯಾಣವನ್ನು ಬಿಟ್ಟು ಹೋಗಿ ಇಪ್ಪತ್ತು ವರ್ಷಗಳಾಗಿದ್ದುವು ಎಂಬಿಷ್ಟು ಮಾತ್ರ ಹೇಳಬಹುದು. ಆ ಶಾಸನದಲ್ಲಿ ಬಾಳೆಹಳ್ಳಿಯ ಮಠದ ಪ್ರಸ್ತಾಪವಿಲ್ಲ.

ಘನಮುನಿ ರುದ್ರಸ್ವಾಮಿಗಳಿಗೆ ಕಲ್ಯಾಣದಲ್ಲಿ ಸಂಗಮೇಶ್ವರ ದೇವರು ಶಿಶುಲಿಂಗ ಧಾರಣ ಮಾಡಿದರೆಂಬುದು ಸಂಭವನೀಯವಾಗಿದೆ. ಸಂಗಮೇಶ್ವರ ದೇವರು ಬಸವೇಶ್ವರನಿಗೆ ದೀಕ್ಷೆ ಮಾಡಿದರು. ಬಸವೇಶ್ವರನು ಕಲ್ಯಾಣವನ್ನು ಬಿಟ್ಟುಹೋಗುವಾಗ ಸಂಗಮೇಶ್ವರದೇವರು ಇದ್ದರು. ಸರ್ವಪುರಾತನರ ವಚನಗಳಲ್ಲಿ ಸಂಗಮೇಶ್ವರಪ್ಪಣ್ಣಗಳ ವಚನ ಎಂಬುವು ೨೦ ಇವೆ. ಈ ಸಂಗಮೇಶದೇವರು ಯಾರ್ಯಾರು ಎಂಬುದು ಇನ್ನೂ ಶೋಧನೀಯವಾಗಿದೆ. ಕಲ್ಯಾಣದಲ್ಲಿ ಜಂಗಿಣಗಿಲ ಮಂಟಪದಲ್ಲಿ ರುದ್ರಮುನಿಗಳನ್ನಿಟ್ಟು ಶ್ರೀ ರೇವಣರು ಸಲಹಿದರೆಂದೂ ರುದ್ರಮುನಿಗಳೂ ಬಸವೇಶ್ವರ ಸಿದ್ಧರಾಮಾದಿ ಶಿವಶರಣರ ಸಹವರ್ತನದಲ್ಲಿ ಇದ್ದರೆಂದೂ ವಚನ ಕಾಲಜ್ಞಾನ ಮುಂತಾದವುಗಳಿಂದ ಗೊತ್ತಾಗುವುದರಿಂದ ಶ್ರೀ ಘನಮುನಿ ರುದ್ರಸ್ವಾಮಿಗಳ ಜನನವೂ ಕಲ್ಯಾಣದಲ್ಲಿಯೇ ಆಯಿತೆಂದೂ ಕಲ್ಯಾಣದ ತ್ರಿಪುರಾಂತಕ ಕೆರೆಯೇರಿಯಲ್ಲಿಯೇ ರುದ್ರಮುನೀಶ್ವರರ ಶಿಶುಪಿಂಡವು ಹೂತಿಡಲ್ಪಟ್ಟಿದ್ದಿತೆಂದೂ ಐತಿಹಾಸಿಕಾಂಶವಾಗಿ ನಿರ್ಣಯಿಸುವಲ್ಲಿ ಬಾಧಕವೇನೂ ಬರಲಾರದು.

ಶ್ರೀಶೈಲದ ಪೀಠವು ಈಗ 'ಸೂರ್ಯ ಸಿಂಹಾಸನ' ಎಂದು ಕರೆಯಲ್ಪಡುತ್ತಲಿದೆ.

ಈ ಪುಸ್ತಕದಲ್ಲಿನ ೧ ನೆಯ ವಿಧದ ಮಠಸ್ಥಲದಲ್ಲಿ ಅದು 'ದೇವ ಸಿಂಹಾಸ' ಎಂದು ಕರೆಯಲ್ಪಟ್ಟಿದೆ. ಸೂರ್ಯ ಸಿಂಹಾಸನ ಎಂಬ ಹೆಸರು ಯಾವಾಗಿನಿಂದ ಬಂದಿತು ? ಎಂಬುದನ್ನು ಶೋಧಿಸುವುದಲ್ಲಿ ಒಂದು ಕೆಲಸವಾಗಿದೆ. ಹೀಗೆ ವೀರಶೈವರಲ್ಲಿ ಶೋಧನೆಯ ಕೆಲಸಗಳು ಬಹಳವಾಗಿ ಇವೆ. ಪೂರ್ವಿಕರ ಗ್ರಂಥ ಮತ್ತು ಬರವಣಿಗೆ ಗಳನ್ನು ಇನ್ನೂ ಹುಡುಕಿ ಪರಿಶೀಲಿಸುವುದಾದರೆ ನಿಜಾಂಶವು ಹೊರಬೀಳುತ್ತದೆ ಸಮಾಜವು ಈ ಕಡೆಗೆ ಚೆನ್ನಾಗಿ ಗಮನಕೊಡಬೇಕಾಗಿದೆ.

ಶ್ರೀ ರುದ್ರಮುನಿಯವರು ಶ್ರೀಶೈಲದಲ್ಲಿ ತಮ್ಮ ಶಿಷ್ಯರಾದ ಮುಕ್ತಿಮುನೀಶ್ವರ ರಿಗೆ ಪಟ್ಟಾಭಿಷೇಕ ಮಾಡಿ ಶಿವಜಾತಕ ಭಿಕ್ಷಾವರ್ತಿ ಎಂದು ಹೆಸರು ಕೊಟ್ಟ ವಿಷಯವು ಇಲ್ಲಿನ ಒಂದನೇಯ ವಿಧದ ಮಠಸ್ಥಲದಲ್ಲಿ ಹೇಳಲ್ಪಟ್ಟುದು ನಿಜ ಎಂದು ನಂಬಬೇಕಾ ಗುತ್ತದೆ. ಈ ವಿಷಯವು ನಿರಂಜನವಂಶರತ್ನಾಕರದಲ್ಲಿಯೂ (ವಿಜಾಪುರ ಮುದ್ರಣ) ಹೇಳಲ್ಪಟ್ಟಿದೆ. ಇದರಂತೆ ದಿಗಂಬರ ಮುಕ್ತಿ ಮುನೀಶ್ವರರಿಗೆ ತಂಜಾಪುರ ಅಥವಾ ತಂಜಾಪೂರಿಗೆ ಅಧಿಕಾರಿಗಳನ್ನು ಮಾಡಿ ಕಳುಹಿಸಿದರೆಂಬುದೂ ನಂಬತಕ್ಕ ಸಂಗತಿ ಯಾಗಿದೆ. (ತಂಜಾವೂರು ಪ್ರಾಂತದಲ್ಲಿ ಇರುವ ಕುಂಭಕೋಣ ಮಠವು ದಿಗಂಬರ ಮುಕ್ತಿಮುನಿಗಳ ಅಧಿಕಾರಕ್ಕೆ ಸೇರಿರಬಹುದು.) ಈ ದಿಗಂಬರ ಮುಕ್ತಿಮುನಿಗಳೇ ಮುಂದೆ ಬಾಳೇಹೊನ್ನೂರಿನಲ್ಲಿ (ಬಾಳೆಹಳ್ಳಿ) ವೀರ ಸಿಂಹಾಸನ ಮಠವನ್ನು ಸ್ಥಾಪಿಸ ಲಿಕ್ಕೆ ಕಾರಣರಾದವರು. ರುದ್ರಮುನೀಶ್ವರರು ನಿರಂಜನ ಮೂರ್ತಿಗಳಾಗಿ ತಂಜಾಪೂರು ಪ್ರಾಂತಕ್ಕೆ ತಮ್ಮ ಶಿಷ್ಯರನ್ನು ಕಳುಹಿಸಿ ಅಲ್ಲಿ ಮಠಗಳನ್ನು ಸ್ಥಾಪಿಸಿದುದರಿಂದ ಅವು ವಿರಕ್ತ ಮಠಗಳೆಂದು ಕೆಲವರೂ ಆ ದಿಗಂಬರ ಮುಕ್ತಿಮುನಿಗಳಿಂದಲೇ ಬಾಳೆಹಳ್ಳಿಮಠ ಸ್ಥಾಪಿತವಾದುದರಿಂದ ತಂಜಾಪೂರು ಪ್ರಾಂತದ ಮಠಗಳು ಬಾಳೆಹಳ್ಳಿ ಸಂಸ್ಥಾನಕ್ಕೆ ಸೇರಿದವುಗಳೆಂದು ಕೆಲವರೂ ಹೇಳುತ್ತಿರಬಹುದು. ಇದರಂತೆ ಮರಿಜನ್ನದೀರಾರ್ಯನ್ನು ಉಜ್ಜಯಿನಿಪುರಕ್ಕೆ ಪತಿಯಾಗಿರು ಎಂದು ಕಳುಹಿಸಿದುದೂ ಶಾಂತವೀರದೇಶಿ ಕೇಂದ್ರರಿಗೆ ಪೂರ್ವ ದಕ್ಷಿಣಕಾಶಿ, ಕಕುದ್ಗಿರಿ (ಶಿವಗಂಗೆ) ಪ್ರಾಂತಗಳಲ್ಲಿ ಶಿಷ್ಯರ ನಿರ್ಮಾಣ ಮಾಡಲು ಕಳುಹಿಸಿದುದೂ ನಿಜವೆಂದು ನಂಬಬೇಕಾಗಿದೆ. ಶಾಂತಮಲ್ಲಿಕಾರ್ಜುನರು ಶ್ರೀ ರೇವಣರ ಅವತಾರವಾಗಿ ಶಿವಗಂಗೆಗೆ ಬಂದರೆಂಬುದು ಪ್ರಸಿದ್ಧವಾಗಿದೆ. ಅವರ ಸಮಾಧಿಯೂ ಅಲ್ಲಿ ಇದೆ. ಆದರೆ ಅವರೇ ಶಾಂತವೀರದೇಶಿಕೇಂದ್ರರೋ ಹೇಗೆ ಎಂಬುದನ್ನು ಇನ್ನೂ ಶೋಧಿಸಬೇಕಾಗಿದೆ.

ಇಷ್ಟೆಲ್ಲಾ ಕೆಲಸ ನಡೆಯುವಾಗಲೂ ಈಗಿನ ಪದ್ಧತಿಯ ಪ್ರಕಾರದ ಪಂಚಪೀಠ ಗಳೂ ಸ್ಥಾಪಿತವಾಗಿರಲಿಲ್ಲವೆಂಬುದು ಈ 'ಮಠಸ್ಥಲ' ಪ್ರತಿಗಳ ಸಾರಾಂಶವನ್ನು ಗ್ರಹಿಸಿದಾಗ ಚೆನ್ನಾಗಿ ಗೊತ್ತಾಗುತ್ತದೆ. ವಿಶ್ವಾರಾಧ್ಯರ ವಿಷಯವನ್ನು ತಿಳಿಸುವ ೨ ನೆಯ ವಿಧದ 'ಮಠಸ್ಥಲ'ವಾದ ಮೇಲಿನ ಪ್ರತಿಯಲ್ಲಿ ಕಟ್ಟಕಡೆಯಲ್ಲಿ ಬಾಳೆಹಳ್ಳಿಯ ವೀರಸಿಂಹಾಸನ ಮಠ ಎಂಬ ಹೆಸರಿದ್ದರೂ ಅಲ್ಲಿಗೇನೇ ಆ ಪ್ರತಿಯು ಮುಗಿಸಲ್ಪಟ್ಟಿ ದ್ದರೂ ಆ ವಿಷಯವು ಹೊಸದಾಗಿ ಸೇರಿಸಲ್ಪಟ್ಟುದೇ ಎಂದು ತಿಳಿಯಬೇಕಾಗುತ್ತದೆ.

ಏಕೆಂದರೆ ಸ್ವಾಯಂಭುವಾಗಮದಲ್ಲಿ ಹೇಳಿದಂತೆ ವಿಶ್ವಾರಾಧ್ಯರಿಗೆ ಕಾಶೀಮಠವು ಉಂಟೆಂದು ಈ ಮಠಸ್ಥಲ ಹೇಳುವುದಿಲ್ಲ. ಸೌರಾಷ್ಟ್ರ ಸಿಂಹಾಸನವನ್ನು ಹೇಳುತ್ತದೆ.

ಸಿದ್ಧ ಸೋಮೇಶ್ವರ ಲಿಂಗದಲ್ಲಿಗೆ ಶ್ರೀ ರೇಣುಕರು ಮತ್ತು ಅವರ ಮಗ ಹೋಗುವಾಗ್ಗೆ ನಾಲ್ವರಾಚಾರ್ಯರೂ ಕೂಡಿದ್ದರೆಂಬುದನ್ನು ತಿಳಿಯುವುದಾದರೆ ನಾಲ್ವರು ಆಚಾರ್ಯರು ಆ ಕಾಲಕ್ಕೆ ಮುಂಚೆಯೇ ಎಂದರೆ ಬಸವೇಶ್ವರನ ಕಾಲದಲ್ಲಿ ಇದ್ದರು ಎಂದು ಯೋಚಿಸುವುದಕ್ಕೂ ಅನುಕೂಲವಾಗಿದೆ.

ಬಸವೇಶ್ವರನು ಭಕ್ತ ಎನಿಸಿಕೊಂಡಿದ್ದಾನೆ. ಅವನ ಗುರುವು ಹೇಗೆ ಎಂಬ ಶಂಕೆ ಬರಬಹುದು. ಆ ಶಂಕೆಯು ಅನಾದಿ ವೀರಶೈವ ಸಂಗ್ರಹದಲ್ಲಿ ಈ ರೀತಿ ಪರಿಹರಿಸಲ್ಪಟ್ಟಿದೆ. (ಪುಟ ೮೪)

"ಸೃಷ್ಟಿಕಲಶವು ಒಂದು, ಸ್ಥಿತಿಕಲಶವು ಮತ್ತೊಂದು, ಸಂಹಾರಕಲಶವೊಂದು, ತಿರೋಧಾನ ಕಲಶವೊಂದು ಇವು ನಾಲ್ಕು ಕಲಶಂಗಳು, ನಾಲ್ಕು ದೆಸೆಯಲ್ಲಿ ಇರುವುವು. ರೇವಣಾರಾಧ್ಯ, ಮರುಳುಶಂಕರ, ಏಕೋರಾಮ, ಪಂಡಿತರೆಂಬ ನಾಲ್ವರಾಚಾರ್ಯರಾಗಿ, ನಾಲ್ಕು ದೆಸೆಯಲಿ ನಿಂದು, ನಾಲ್ಕು ವೇದಂಗಳಂ ಪಠಿಸಿ ವೇದಮಾತಾ ಗಾಯತ್ರೀ ವಲ್ಲಭ ಶ್ರೀ ನಂದೀಶ ಗುರುದೇವನಂ ಪೂಜಿಸುತಂ ಪುಣ್ಯ ಸುಕೃತಿಗಳಾಗುತಂ ಗುರುವಾಜ್ಞೆವಿಡಿದು, ಗುರುಸೇವೆ, ಮಾಡುತಲಿ ಗುರುವ ಕೊಂಡಾಡುತಂ ಪಾಡುತಂ ಗುರು ಕರುಣ ಸುಖದಲ್ಲಿ ನಾಲ್ವರಾಚಾರ್ಯರು ನಾಲ್ದೆಸೆಯೊಳಿರುತಿರ್ಪರು ನಾಲ್ವ ರಾಚಾರ್ಯರ ಮಧ್ಯದೊಳು ಧರ್ಮಗುರು ಶ್ರೀ ನಂದಿಯು ಭಕ್ತಿದಯಾಪರನಾಗಿರ್ಪನು ಗುರುವಿನ ಗುರು ಪರಮಗುರು ಪರಬ್ರಹ್ಮ ಪರದೇಶಿ ಜಂಗಮ ಪರಮ ಪ್ರಭುಸ್ವಾಮಿ ಪ್ರಣವ ಸೂತ್ರಧಾರಿ ಪಂಚಕಲಶಕ್ಕೆ ಪ್ರಾಣಚೈತನ್ಯನಾಗಿ ಇಹನು. ಇದು ಶ್ರೀ ವೀರಶೈವ ದೀಕ್ಷಾವಿಧಾನಕ್ಕೆ ಮೂಲವಿದು".

ಈ ಬರವಣಿಗೆಯಿಂದ ಬಸವೇಶ್ವರನು ತನ್ನ ನಾಲ್ಕು ದೆಸೆಯಲ್ಲಿ ವೇದ ಪಠಣ ಮಾಡುವ ನಾಲ್ವರಾಚಾರ್ಯರ ಮಧ್ಯದಲ್ಲಿ ಧರ್ಮಗುರುವಾಗಿ ಪಂಚಕಲಶಕ್ಕೆ ಪ್ರಾಣ ಚೈತನ್ಯನಾದ ಪರಮ ಪ್ರಭುಸ್ವಾಮಿಯಲ್ಲಿ ಭಕ್ತಿಯುಳ್ಳವನಾಗಿದ್ದನು. ಈ ಭಕ್ತಿಯಲ್ಲಿ ಆಚಾರ್ಯರೂ ಸಹವರ್ತಿಗಳಾಗಿದ್ದರು ಎಂದು ವ್ಯಕ್ತಪಡುತ್ತದೆ. ಅವನು ಗುರು ಆಗ ದಿದ್ದರೆ ಬರೆಹದ ಪುಸ್ತಕಗಳ ಆದಿಯಲ್ಲಿ ಬರೆಯಲ್ಪಟ್ಟ "ಶ್ರೀ ಗುರು ಬಸವಲಿಂಗಾಯ ನಮಃ" ಎಂಬ ವಾಕ್ಯವೂ ಬಸವೇಶ್ವರನ ದ್ವಾದಶ ಸ್ತೋತ್ರ

ಪ್ರಥಮಂ ಧರ್ಮರೂಪಂಚ ದ್ವಿತೀಯಂ ನಂದಿಕೇಶ್ವರಃ
ತೃತೀಯಂ ಪಶುಪಃ ಸಾಕ್ಷಾತ್ ಚತುರ್ಥಂ ವೃಷಭೇಶ್ವರಃ

(ಸಂ. ೧೨೩)

## ೧೯. ಗೀತಾ ರಹಸ್ಯ

'ಆತ್ಮ ವಿಚಾರ' ಪತ್ರಿಕೆಯ ಪ್ರಕಾಶಕರಾದ ಶ್ರೀ M. L. ನಾಗಣ್ಣನವರು "ಗೀತಾ ರಹಸ್ಯ" ಎಂಬ ಆತ್ಮ ವಿಚಾರ ಗ್ರಂಥಮಾಲೆಯ ೮ನೆಯ ಪುಷ್ಪವಾದ ಪುಸ್ತಕ ವನ್ನು ವಿಮರ್ಶೆಗೆ ಕಳುಹಿಸಿ ಇರುತ್ತಾರೆ. ಇದರಲ್ಲಿ ೧ ರಿಂದ ೨೩ ಪುಟಗಳವರೆವಿಗೆ "ಗೀತಾ ರಹಸ್ಯ" ಎಂಬ ವಿಷಯವಿದೆ. ಮುಂದೆ ಸಾಂಖ್ಯ (ಜ್ಞಾನ) ಯೋಗವು ೨೩ ರಿಂದ ೩೫ನೆಯ ಪುಟ. ಕರ್ಮ (ಬುದ್ಧಿ) ಯೋಗವು ೩೫ ರಿಂದ ೩೯ ನೆಯ ಪುಟ. ಭಕ್ತಿಯೋಗ ಎಂಬುದು ೩೯ ರಿಂದ ೪೪ನೆಯ ಪುಟದವರೆವಿಗೆ ಇರುತ್ತದೆ.

ದ್ವಾಪರಯುಗದ ಅಂತ್ಯದಲ್ಲಿ ಧರ್ಮಕ್ಕೆ ಹಾನಿಯೂ, ಅಧರ್ಮಕ್ಕೆ ಅಭಿವೃದ್ಧಿಯೂ ಉಂಟಾದುದರಿಂದ ಶಿಷ್ಟರ ಸಂರಕ್ಷಣೆಗೆ ಶ್ರೀ ಕೃಷ್ಣನು ಅವತರಿಸಿ ಬಗವದ್ ಗೀತೆಯನ್ನು ಅರ್ಜುನನಿಗೆ ಬೋಧಿಸಿದನೆಂಬುದಾಗಿ ಗೀತೆಯ ಪ್ರಾರಂಭದ ಸಂಗತಿಯು ಇದರಲ್ಲಿ ಹೇಳಲ್ಪಟ್ಟಿದೆ. (ಪುಟ ೨-೩)

ಲೋಕದಲ್ಲಿ ನಿಷ್ಠೆಯು ಎರಡು ವಿಧ. ಸಾಂಖ್ಯರ ಜ್ಞಾನ ಯೋಗ, ಯೋಗಿಗಳ ಕರ್ಮಯೋಗ. ಈ ಎರಡರಿಂದ ಪಡೆಯಲ್ಕ ಸ್ಥಾನ ಒಂದೇ (ಗೀತಾ ೪೫) ಎಂಬ ಆಧಾರವನ್ನು ಕೊಟ್ಟು ಮುಂದೆ "ಭಗವಂತನು ಗೀತೆಯಲ್ಲಿ ಮೋಕ್ಷವನ್ನು ಹೊಂದುವು ದಕ್ಕೆ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ, ಅಭ್ಯಾಸಯೋಗ ಇವೇ ಮುಂತಾದ ಅನೇಕ ಯೋಗಗಳನ್ನು ಹೇಳುವಾಗ ಆಯಾಯಾ ಯೋಗಗಳನ್ನೇ ಪ್ರಶಂಸಿಸಿ ಇರುವುದ ರಿಂದಲೂ ಒಬ್ಬೊಬ್ಬ ಮುಮುಕ್ಷುವಿಗೆ ಒಂದೊಂದು ಯೋಗದಲ್ಲಿ ಅಭಿರುಚಿಯಿರುವುದ ರಿಂದಲೂ ಗೀತೆಯು ಸರ್ವ ಮುಮುಕ್ಷುಗಳಿಗೂ ಗ್ರಾಹ್ಯವಾಗಿದೆ" ಎಂದು ವಿವರಿಸಿದ್ದಾರೆ. (ಪುಟ ೪.)

ಆಹಾರ, ನಿದ್ರೆ, ಭಯ, ಮೈಥುನ ಇವುಗಳು ಪಶುಗಳಿಗೂ ಮನುಷ್ಯರಿಗೂ ಸಮಾನವಾದರೂ ಧರ್ಮವು ಮನುಷ್ಯನಲ್ಲಿನ ಒಂದು ವಿಶೇಷವಾಗಿದೆ. ಆದುದರಿಂದ ಮನುಷ್ಯನು ಧರ್ಮದಿಂದ ನಡೆಯಬೇಕೆಂಬುದನ್ನು ತೋರಿಸಿದ್ದಾರೆ. (ಇದಕ್ಕೆ ಆಧಾರ ವಾಗಿ ಕೊಟ್ಟಿರುವ ಶ್ಲೋಕವು ಗೀತೆಯದಲ್ಲ) (ಪುಟ ೫) ಈ ಧರ್ಮದಲ್ಲಿ ಮಕ್ಕಳ ಧರ್ಮ, ಸತಿ ಧರ್ಮ, ಪತಿ ಧರ್ಮ, ಸೇವಕ ಧರ್ಮ, ಯಜಮಾನ ಧರ್ಮ, ರಾಜ ಧರ್ಮ, ಪ್ರಜಾ ಧರ್ಮ, ಬ್ರಹ್ಮಚರ್ಯಾಶ್ರಮ ಧರ್ಮ, ಗ್ರಹಸ್ಥಾಶ್ರಮ ಧರ್ಮ, ವಾನ ಪ್ರಸ್ಥಾಶ್ರಮ ಧರ್ಮ, ಸನ್ಯಾಸಾಶ್ರಮ ಧರ್ಮ; ಇಷ್ಟಲ್ಲದೆ ಕ್ಷಮೆ, ಸತ್ಯ, ದಮ, ಶೌಚ, ದಾನ, ಇಂದ್ರಿಯ ಸಂಯಮನ, ಅಹಿಂಸೆ, ಗುರು ಶುಶ್ರೂಷೆ, ತೀರ್ಥಾನುಸರಣ (ಇದಕ್ಕೆ ಗಂಗಾ ಮುಂತಾದ ಪುಣ್ಯ ನದಿಗಳಿಗೆ ಹೋಗಿ ಅಲ್ಲಿ ಶ್ರದ್ಧಾ ಭಕ್ತಿಯಿಂದ ಸ್ನಾನ ಮಾಡುವುದೆಂದು ಶ್ರೀ ನಾಗಣ್ಣನವರ ಅರ್ಥ.) ಆರ್ಜವ (ಪ್ರಾಮಾಣಿಕತೆಯಿಂದ

ವ್ಯವಹಾರ ಮಾಡುವುದು) ಲೋಭರಹಿತತ್ವ, ದೇವ-ಬ್ರಾಹ್ಮಣ ಪೂಜೆ, (ಇದಕ್ಕೆ ಈಶ್ವರನನ್ನು ಮತ್ತು ಜ್ಞಾನಿಗಳನ್ನು ಭಕ್ತಿಪೂರ್ವಕವಾಗಿ ಪೂಜಿಸುವುದು ಎಂದು ಶ್ರೀ ನಾಗಣ್ಣನವರ ಅರ್ಥ) ಮತ್ತು ಅಸೂಯಾರಾಹಿತ್ಯ ಇವೆಲ್ಲವೂ ಸರ್ವ ಮನುಷ್ಯರ ಧರ್ಮ, (ಇದಕ್ಕೆ ಕೊಟ್ಟಿರುವ ಆಧಾರ ಶ್ಲೋಕವು ಗೀತೆಯದಲ್ಲ) ಅಹಿಂಸಾ ಪರಮೋ ಧರ್ಮಃ ಎಂಬ ಪ್ರಮಾಣದಿಂದ ಇತರ ಸಾಮಾನ್ಯ ಧರ್ಮಗಳಿಗಿಂತ ಅಹಿಂಸೆಯು ಉತ್ಕೃಷ್ಟ ಧರ್ಮ. ಇತರ ಪ್ರಾಣಿಗಳಿಗೆ ದುಃಖವನ್ನುಂಟು ಮಾಡುವುದಕ್ಕೆ ಬದಲಾಗಿ ಅವುಗಳಿಗೆ ಸಂತೋಷವನ್ನುಂಟು ಮಾಡುವುದು ಸರ್ವೋತ್ಕೃಷ್ಟ ಧರ್ಮ. ಯಾವ ಜೀವಿಗಾದರೂ ಯಾವ ವಿಧದಿಂದಲಾದರೂ ಸಂತೋಷಪಡಿಸಬೇಕು. ಅದೇ ಈಶ್ವರ ಪೂಜೆ. ಇದಕ್ಕೆ ಕೊಟ್ಟ ಪ್ರಮಾಣದ ಶ್ಲೋಕವೂ ಗೀತೆಯದಲ್ಲ). ಮನುಷ್ಯನು ಈಶ್ವರನ ಅಂಶ.

ಮಮೈವಾಂಶೋ ಜೀವಲೋಕೇ ಜೀವ ಭೂತ ಸ್ಸನಾತನಃ ಎಂಬ ಗೀತಾ ವಚನದಂತೆ ಮನುಷ್ಯನೇ ಆದಿಯಾಗಿ ಸರ್ವ ಪ್ರಾಣಿಗಳಿಗೆ ಸಂತೋಷಪಡಿಸಿದರೆ ಈಶ್ವರ ನಿಗೆ ಸಂತೋಷವಾಗುತ್ತದೆ ಎಂದು ತೋರಿಸಿದ್ದಾರೆ. (ಪುಟ ೯)

ಮುಂದೆ ನಾಲ್ಕು ವರ್ಣಗಳ ವಿಚಾರವಿದೆ.

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ
ತಸ್ಯ ಕರ್ತಾರಮಪಿಮಾಂ ವಿದ್ಧ್ಯಂ ಕರ್ತಾರಮವ್ಯಯಂ (IV ೧೩)

ಎಂಬ ಗೀತೆಯ ಉದಾಹರಣೆಯನ್ನು ಕೊಟ್ಟು– ವರ್ಣಗಳನ್ನು ಉಳಿಸಿಕೊಳ್ಳ ಬೇಕೆನ್ನುತ್ತಾರೆ. ಋಷಿಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ, ಎಂಬ ಐದು ಯಜ್ಞಗಳನ್ನು ಮಾಡಬೇಕೆನ್ನುತ್ತಾರೆ. (ಪುಟ ೧೨) ವರ್ಣಗಳ ಸಾಂಕರ್ಯದಿಂದ ಇತರ ಜಾತಿಗಳು ಹುಟ್ಟಿದುವೆಂದು ಹೇಳುತ್ತಾರೆ. ಈಗಿನ ಪ್ರಜಾಸರ್ಕಾರದವರು ಅಸ್ಪೃಶ್ಯರನ್ನು ಸ್ಪೃಶ್ಯರ ಗುಂಪಿನಲ್ಲಿ ಸೇರಿಸುತ್ತಿರುವುದು ಭಗವಂತನ ಆಗ್ರಹಕ್ಕೆ ಪಾತ್ರರಾಗುವುದಕ್ಕೆ ಕಾರಣವೆಂದು ಅವರನ್ನು ಹೆದರಿಸುತ್ತಿದ್ದಾರೆ. ಪುಟ ೧೭.

ಮುಂದೆ ದೇಹದ ಅತ್ಯಂತ ಹೇಯತ್ವವನ್ನೂ ಮರಣ ದುಃಖ ಮೊದಲಾದವು ಗಳನ್ನೂ ವಿವರಿಸುತ್ತಾರೆ. (ಪುಟ ೧೩-೨೩) ಇವುಗಳಲ್ಲಿ ಆಧಾರವಾಗಿ ಕೊಟ್ಟ ಶ್ಲೋಕ ಗಳು ಒಂದೂ ಭಗವದ್ಗೀತೆಯಲ್ಲಿ ಇದ್ದವುಗಳಲ್ಲ.

ಮುಂದೆ ಸಾಂಖ್ಯಯೋಗ, ಕರ್ಮಯೋಗ, ಭಕ್ತಿಯೋಗಗಳ ವಿಷಯವಿರುವುದ ರಿಂದ ಅವುಗಳ ವಿಮರ್ಶೆಯನ್ನು ಮಿಸಲು (Reserved) ಇಟ್ಟುಕೊಂಡು ಮೇಲೆ ಬರೆದವುಗಳ ವಿಮರ್ಶೆಯನ್ನು ಮಾಡಲಿಚ್ಛಿಸಿದ್ದೇವೆ.

ಈ ಗೀತಾ ರಹಸ್ಯವು ತಮ್ಮ ಪತ್ರಿಕೆಯ ೬ ಮತ್ತು ೭ನೆಯ ಸಂಚಿಕೆಗಳನ್ನು ಪ್ರಕಟಿಸಲ್ಪಟ್ಟಿರುವುದಾಗಿಯೂ ಅದನ್ನೇ ಪುಸ್ತಕ ರೂಪವಾಗಿ ಮಾಡಿರುವುದಾಗಿಯೂ ಗ್ರಂಥಕರ್ತರು ಇದರ ಮುನ್ನುಡಿಯಲ್ಲಿ ಹೇಳಿದ್ದಾರೆ. ಶ್ರೀ M. L. ನಾಗಣ್ಣನವರು

ಜನರಲ್ಲಿ ಧರ್ಮಜಾಗ್ರತೆಯನ್ನುಂಟು ಮಾಡುವುದಕ್ಕಾಗಿ ವಿಶೇಷವಾಗಿ ಪ್ರಯತ್ನಿಸುತ್ತಿರುವುದನ್ನು ನೋಡಿ ನಮಗೆ ಬಹಳ ಸಂತೋಷವಾಗುತ್ತದೆ. ಧರ್ಮದಲ್ಲಿ ಅಭಿರುಚಿಯಿಲ್ಲದ ಈ ಕಾಲದಲ್ಲಿ ಅಷ್ಟಿಷ್ಟು ಹೇಳಿದರೂ ಅದು ದೊಡ್ಡದೇ ಎಂದು ಭಾವಿಸುವ ಕಾಲವಿದು. ಶ್ರೀ ನಾಗಣ್ಣನವರು ಗೀತೆಯನ್ನು ಬಿಟ್ಟು ಉಳಿದ ಗ್ರಂಥಗಳ ಆಧಾರವನ್ನು ಬಹಳವಾಗಿ ಕ್ರೋಢೀಕರಿಸಿ 'ಗೀತಾ ರಹಸ್ಯ' ಎಂಬ ಶಿರೋಲೇಖದಿಂದ ಪುಸ್ತಕವನ್ನು ಹೊರಡಿಸಿದುದಕ್ಕಾಗಿ ವಿಷಾದಪಡಬೇಕಾಗಿದೆ. ಗೀತೆಯು ವರ್ಣಗಳ ತಳಹದಿಯ ಕಟ್ಟು ಎಂಬುದನ್ನು ಯಾರು ಬೇಕಾದರೂ ಹೇಳಬಹುದು. ಈಗಿನ ರಾಜಕೀಯವು ವರ್ಣಗಳ ತ್ಯಾಜ್ಯದ ಬುಡಕಟ್ಟು ಎಂಬುದನ್ನು ಎಲ್ಲರೂ ಬಲ್ಲರು. ನಾವೀಗ ಈಗಿನ ರಾಜಕೀಯವು ಭಗವದ್ಗೀತೆಗೆ ವಿರೋಧವಾದುದು ಎಂದು ಹೇಳಿದರೆ ಯಾರೂ ಅದನ್ನು ಅಲ್ಲಗಳೆಯಲಾರರು. ಆದರೆ ಭಗವದ್ಗೀತೆಯೇನೋ ಭಾರತೀಯರ ಮುಖ್ಯ ಧರ್ಮಗ್ರಂಥ, ಅದರ ಹಿರಿಮೆಯನ್ನು ತಗ್ಗಿಸಬೇಕೆಂದರೆ ಪ್ರತಿಯೊಬ್ಬ ಭಾರತೀಯನಿಗೂ ಇಷ್ಟವಲ್ಲದ ಕೆಲಸ. ವರ್ಣಗಳ ಕಟ್ಟನ್ನು ಭಗವದ್ಗೀತೆಯು ಬೋಧಿಸಿದಂತೆ ವರ್ಣಗಳ ತೊಡಕಿಲ್ಲದೆ ಜೀವಿಸುವ ವಿಧಾನವನ್ನು ಬೋಧಿಸುವುದೋ ಇಲ್ಲವೋ ಎಂಬುದನ್ನು ತಿಳಿಯಬೇಕಾದುದೂ ನಮ್ಮೆಲ್ಲರ ಕರ್ತವ್ಯವಾಗಿದೆ. ಗೀತೆಯೊಳಗಿನ ವಾಕ್ಯಗಳನ್ನೇ ತೆಗೆದುಕೊಂಡು ಧಾರ್ಮಿಕ ಸ್ಥಿತಿಯಲ್ಲಿ ಅವು ಜನತೆಗೆ ಉತ್ತಮಪಡಿಸುವುದನ್ನು ಹೇಳಿದರೆ ಅವು ಗೀತಾ ರಹಸ್ಯವಾಗುವುದೇ ಹೊರತು ೫೦೦೦ ವರ್ಷಗಳ ಹಿಂದಿನ ನಡವಳಿಕೆಯೇ ಮುಖ್ಯವೆಂದು ಇತರ ಗ್ರಂಥಗಳ ಉದಾಹರಣೆಯಿಂದ ಈಗಲೂ ಪ್ರತಿಪಾದಿಸಿದರೆ ಅದು ಜನರ ಹಿತಕಾರಿಯಾಗಲಾರದು. ಗೀತಾ ರಹಸ್ಯವೂ ಆಗಲಾರದು. ಶ್ರೀ ನಾಗಣ್ಣನವರು ಯಾವ ಗ್ರಂಥಗಳನ್ನೇ ಬರೆದರೂ ಲೇಖನಗಳನ್ನೇ ಬರೆದರೂ ಮನುಷ್ಯನ ದೇಹವು ದುಃಖಮಯ ಅವನ ಲೌಕಿಕ ಸಂಬಂಧಿಕರು ದುಃಖಕಾರಿಗಳು, ವರ್ಣಗಳು ಅತ್ಯವಶ್ಯಕ (ಬೇರೆ ಬೇರೆ ವರ್ಣಗಳಲ್ಲಿದ್ದರೂ ಅವರೆಲ್ಲರೂ ಒಬ್ಬ ದೇವನ ಮಕ್ಕಳೇ ಹೀಗೆ ಹೇಳಿ ಎಲ್ಲರೂ ಒಂದೇ ಎಂದು ಸಮನ್ವಯ ಮಾಡುವುದೂ ಒಂದು ಹೆಗ್ಗುರಿ) ಮುಂತಾದ ಅಭಿಪ್ರಾಯ ದೃಢವಾಗಿ ಮತ್ತೆ ಮತ್ತೆ ಸಾಧಿಸುತ್ತಿರುವುದಕ್ಕಾಗಿ ಎಷ್ಟು ಸಂತೋಷಪಟ್ಟರೂ ತೀರದು. ಸಂಸಾರ ಹೇಯವು ಮೊದಲುಬೇಕು. ನಿಜಜ್ಞಾನದ ಇಚ್ಛೆಯನ್ನು ಪಡೆಯಬೇಕಾದ ನಡತೆಗೆ ಇದೂ ಒಂದು ಅಂಶ. ಆ ಇಚ್ಛೆಯೇ ಪೂರ್ಣಜ್ಞಾನವಲ್ಲ ಎಂಬುದನ್ನು ಶ್ರೀ ನಾಗಣ್ಣನವರು ಇನ್ನೂ ತಿಳಿಯದಿರುವುದಕ್ಕಾಗಿ ನಾವು ಮತ್ತೆ ಮತ್ತೆ ವಿಷಾದಪಡಬೇಕಾಗಿದೆ. ಯಾವ ದೇಹವು ಅತ್ಯಂತ ಹೇಯವೆಂದು ತಿಳಿದಿರುವೆವೋ ಅದೇ ದೇಹದಿಂದಲೇ ಆತ್ಮಜ್ಞಾನವನ್ನು ಸಂಪಾದಿಸುವ ಮನಸ್ಸನ್ನು ಪಡೆಯಬೇಕೆಂಬುದನ್ನೂ ಯಾವ ಹೆಂಡತಿಯಿಂದ ದುಃಖವುಂಟೋ ಅದೇ ಹೆಂಡತಿಯಿಂದಲೇ ಆತ್ಮಜ್ಞಾನ ಸಾಧನವಾದ ಶಾಸ್ತ್ರಗಳನ್ನು ಓದುವ ಹೊತ್ತನ್ನು ಉಳಿಸಿಕೊಳ್ಳುವುದಕ್ಕಾಗಿ ಮತ್ತು ಅತಿಥಿ ಸತ್ಕಾರಕ್ಕಾಗಿ ಸಹಾಯಪಡೆಯಬಹುದೆಂಬುದನ್ನೂ ಯಾವ ವರ್ಣಗಳು ನಮ್ಮನ್ನು ಲೋಕದ ನಿರ್ಬಂಧಗಳಿಗೆ ಹಾಕಿ ದುಃಖಪಡಿಸುವುವೋ

ಅದೇ ವರ್ಣಗಳೇ ನಮಗೆ ಆತ್ಮಜ್ಞಾನ ಸಂಪಾದನೆಗಾಗಿ ಅತಿವರ್ಣವಾಗುವುವೆಂಬುದನ್ನೂ ಅವರು ಯೋಚಿಸುವುದೇ ಇಲ್ಲವಲ್ಲಾ! ಜ್ಞಾನವಾದ ಮೇಲೆ ಹೇಯತ್ವವೆಲ್ಲಿ? ಇದಕ್ಕೆ ಎಷ್ಟು ವಿಷಾದಪಟ್ಟರೂ ತೀರದು. ಮೇಲಾಗಿ ಹಿಂದು ವಿದ್ಯುದಣುವೇ ಪ್ರಪಂಚ ವಾಗಿದೆ, ದೇಹವಾಗಿದೆ, ಎಂಬ ಈಗಿನ ಶಾಸ್ತ್ರಜ್ಞರ ಹೇಳಿಕೆಯೂ 'ಸರ್ವಂ, ಖಲ್ವಿದಂ ಬ್ರಹ್ಮಾ' ಎಂಬ ಪೂರ್ವಿಕರ ಆತ್ಮಶಾಸ್ತ್ರ ಬೋಧೆಯೂ ಇವರ ಮನಸ್ಸಿನಲ್ಲಿ ಗಟ್ಟಿಯಾಗಿ ನಿಲ್ಲಲೊಲ್ಲದಲ್ಲಾ! ಹಾಗೆ ನಿಂತಿದ್ದರೆ ದೇಹವು ದುಃಖಮಯ ಎಂದು ಅದನ್ನು ಬೇರ್ಪಡಿಸುವರೇಕೆ? ಇವೇ ಮುಂತಾದ ವಿಚಾರಾಂಶಗಳು ನಮ್ಮ ಮುಂದೆ ಬಂದು ನಿಲ್ಲುತ್ತವೆ. ನಾಲ್ಕು ವರ್ಣಗಳೂ ಒಬ್ಬ ದೇವನ ಮಕ್ಕಳೇ ಎಂದು ಒಪ್ಪ ಮಾಡುವ ನಾಗಣ್ಣನವರು ವರ್ಣಗಳು ತಮ್ಮ ತಮ್ಮ ಕೆಲಸಗಳನ್ನು ಹೊರಗೆ ಮಾಡಿದರೂ ಒಳಗೆ ಅವರೆಲ್ಲರೂ ಒಂದೇ ಪಂಕ್ತಿಯಲ್ಲಿ ಊಟ ಮಾಡುವುದು ಏಕೆ ರೂಢಿಯಲ್ಲಿ ಬರಲಿಲ್ಲ ಎಂಬುದನ್ನು ಏಕೆ ಶೋಧಿಸಿ ನೋಡುವುದಿಲ್ಲ? ಇನ್ನಾದರೂ ಇದಕ್ಕೆ ಉತ್ತರಿಸುವರೇ?

ಮೇಲೆ ಕಂಡಂತೆ ಗೀತೆಯು ಕರ್ಮಯೋಗ, ಜ್ಞಾನಯೋಗ ಈ ಎರಡಕ್ಕೆ ಹೆಚ್ಚಾಗಿ ವಿವರಿಸುತ್ತಾ ಭಕ್ತಿಯೋಗ, ಯೋಗ ಎಂದರೆ ಉಪಾಯ ಎಂದು ಅರ್ಥ ಮಾಡಿರುವುದೂ ಒಂದೊಂದು ಯೋಗದವರು ತಮ್ಮದನ್ನೇ ಪ್ರಶಂಸಿರುವುದೂ ಮುಂತಾದ ವಿಷಯಗಳನ್ನು ಮಿಾಸಲು ವಿಮರ್ಶೆಯಲ್ಲಿ ವಿವೇಚನೆ ಮಾಡಲಿಕ್ಕಾಗಿ ಇಲ್ಲಿ ಕೈಬಿಟ್ಟಿದೆ.

ಧರ್ಮದ ವಿಷಯವಾಗಿ ಹೇಳುತ್ತಾ ಅನೇಕ ಧರ್ಮಗಳನ್ನು ತೋರಿಸಲಿಕ್ಕೆ ಹೊರಟಿದ್ದಾರೆ. ರಾಜಧರ್ಮ ಎಂದರೆ ರಾಜರ ಕೆಲಸ, ಪ್ರಜೆಗಳ ಕೆಲಸ (ಪ್ರಜಾ ಬ್ರಹ್ಮಚಾರಿಯ ಕೆಲಸ, ಗೃಹಸ್ಥನ ಕೆಲಸ ಇವುಗಳೆಲ್ಲವೂ ಲೌಕಿಕ ವ್ಯವಹಾರವನ್ನು ಸಾಧಿಸುವುದಕ್ಕೆ ಬೇಕಾದವುಗಳು ಆದುದರಿಂದ ಇವು ಕರ್ಮಗಳಾಗುತ್ತವೆ. ಯಾವುವು ಆತ್ಮಜ್ಞಾನಿಗೆ ಸಂಬಂಧಿಸಿದ ಕೆಲಸಗಳುಂಟೋ ಅವು ಪಾರಮಾರ್ಥಿಕದ ಕಡೆಗೆ ತಿರುಗಿರುತ್ತದೆ. ಆತ್ಮಜ್ಞಾನಿಗೆ ಪರಾತ್ಪರ ವಸ್ತುವಿನ ಸಂಬಂಧವು ಜಗತ್ತಿಗೂ ತನಗೂ ಸರ್ವರಿಗೂ ಹೇಗೆ ಉಂಟು ಎಂಬುದನ್ನು ತಿಳಿಯುವುದು ಮುಖ್ಯವೇ ಹೊರತು ರಾಜರ ಕೆಲಸವೇನು? ಪ್ರಜೆಗಳ ಕೆಲಸವೇನು? ಇವುಗಳನ್ನು ತಿಳಿಯುವುದು ಬೇಕಾಗಿಲ್ಲ. ಪರಾತ್ಪರ ವಸ್ತುವಿನ ಸಂಬಂಧದಿಂದಲೇ ಧರ್ಮವು ಪ್ರಾಪ್ತವಾಗುತ್ತದೆ. 'ಧರತಿ ಲೋಕಾನಿತಿ ಧರ್ಮಃ' ಎಂದು ಧರ್ಮ ಶಬ್ದದ ಅರ್ಥವನ್ನು ನಾಗಣ್ಣನವರೇ ಹೇಳಿದ್ದಾರೆ. ಆ ಪ್ರಕಾರ ಲೋಕಗಳನ್ನು ಪ್ರವೃತ್ತಿ ಮಾರ್ಗಕ್ಕೆ ಬಿಡದಂತೆ ಉದ್ಧರಿಸುವುದೇ ಧರ್ಮ. ಅದು ದೇವನ ಸಂಬಂಧದಿಂದ ದೊರಕುವುದೇ ಹೊರತು ಲೌಕಿಕ ಕಾರ್ಯದಿಂದ ದೊರಕುವುದಿಲ್ಲ. ಪೂರ್ವ ಮಿಾಮಾಂಸೆಯಲ್ಲಿಯೂ ಧರ್ಮ ಶಬ್ದಕ್ಕೆ ಇದೇ ರೀತಿ ವ್ಯಾಖ್ಯಾನವು ಮಾಡಲ್ಪಟ್ಟಿದೆ. ಅದರೆ ಹೆಂಡತಿಯು ಗಂಡನಲ್ಲಿ ನಡೆಯಬೇಕಾದ ಸತೀತ್ವ, ಯಜಮಾನನು ತನ್ನ ಮನೆತನದವರನ್ನು ಸಾಗಿಸುವ ಕುಟುಂಬ ಭರಣ, ಮುಂತಾದುವುಗಳಲ್ಲಿ ಲೌಕಿಕವು ತುಂಬಿರುವುದೇ ಹೊರತು ಪಾರಮಾರ್ಥಿಕವಿಲ್ಲ. ಈ ಕೆಲಸಗಳಲ್ಲಿ ದೇವ ಭಾವನೆ ಬಂದಾಗ ಆಗ ಅವು ಧರ್ಮ ಎನಿಸಿಕೊಳ್ಳಬಹುದು. ಆದುದರಿಂದ ಅನೇಕ

ಧರ್ಮಗಳನ್ನು ವಿಂಗಡಿಸುವುದಕ್ಕಿಂತಲೂ ಧರ್ಮದ ವ್ಯಾಪನೆಯು ಎಲ್ಲಾ ಕೆಲಸಗಳಲ್ಲಿಯೂ ಯಾವ ರೀತಿ ಎಷ್ಟು ಮಟ್ಟಿಗೆ ಇರುವುದೆಂಬುದನ್ನು ತಿಳಿಯಪಡಿಸಲು ಪ್ರಯತ್ನಿಸುವುದು ಉತ್ತಮವಾಗಿದೆ. ಏಕೆಂದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಧಾರ್ಮಿಕ ಪೂರ್ಣವರ್ತನೆಯು ಮೇಲೆ ಕಂಡ ಒಂದೊಂದು ಕೆಲಸವಲ್ಲಿ ಎಂದಿಗೂ ಬರಲಾರರು. ಅವನು ಗಂಡ, ನಾನು ಹೆಂಡತಿ. ಅವನು ರಾಜ, ನಾನು ಪ್ರಜೆ, ಈ ಭಾವನೆಗಳು ಧಾರ್ಮಿಕದ ಕಡೆಗೆ ತಿರುಗಿದರೂ ಎಲ್ಲಿ ದ್ವಂದ್ವಗಳುಂಟೋ ಅಲ್ಲಿ ಧಾರ್ಮಿಕದ ಒಂದು ಅಂಶವಾಗುವುದೇ ಹೊರತು ಪೂರ್ಣತ್ವವಲ್ಲ. ಕೆಲವು ಗ್ರಂಥಗಳಲ್ಲಿ ಕರ್ಮಕ್ಕೆ ಧರ್ಮ ಎಂದು ಹೇಳಿರುವುದು ಕಂಡುಬರುತ್ತದೆಯಾದರೂ ಕರ್ಮ ಧರ್ಮಗಳ ವ್ಯತ್ಯಾಸವನ್ನು ಜನತೆಯು ಸ್ಪಷ್ಟವಾಗಿ ತಿಳಿಯುವಂತೆ ತೋರಿಸಬೇಕಾದುದು ಅವಶ್ಯವಾದ ಕೆಲಸವಾಗಿದೆ.

ಬ್ರಹ್ಮಚರ್ಯಾಶ್ರಮ ಧರ್ಮ ಮುಂತಾದ ನಾಲ್ಕು ಆಶ್ರಮ ಧರ್ಮಗಳಿಂದ ಪರಾತ್ಪರ ವಸ್ತುವಿನ ಸಂಬಂಧವು ಸ್ವಲ್ಪ ಸ್ವಲ್ಪವಾಗಿ ಬೆಳೆಯುತ್ತಾ ಬರುವುದು. ಸನ್ಯಾಸದಿಂದ ವೈರಾಗ್ಯವು ಪ್ರಾಪ್ತಿವಾಗಿ ಅದ್ವೈತ (ಬ್ರಹ್ಮ) ಜ್ಞಾನಕ್ಕೆ ಅದು ಸಹಾಯ ಮಾಡುತ್ತದೆ. ಕ್ಷಮೆ, ಸತ್ಯ ಮೊದಲಾದವುಗಳಿಂದ ಕೂಡಿದ ಯಮ ನಿಯಮಾಚರಣೆಗಳೂ ಅದ್ವೈತ ಜ್ಞಾನಕ್ಕೆ ಸಾಧನಗಳಾಗಿವೆ. ತೀರ್ಥಾನುಸರಣ ಎಂಬಲ್ಲಿ ಗುರುವಿನ ಪಾದತೀರ್ಥದ ಸಂಬಂಧದ ಆಚಾರ ಎಂದೂ ಅರ್ಥಮಾಡಲಿಕ್ಕೆ ಬರುತ್ತದೆ. ದೇವ-ಬ್ರಾಹ್ಮಣ ಪೂಜೆ ಎಂಬಲ್ಲಿ ದೇವರೂಪನಾದ ಬ್ರಹ್ಮಜ್ಞಾನಿಯ ಪೂಜೆ ಎಂದು ಅರ್ಥ ಮಾಡಲಿಕ್ಕೆ ಬರುತ್ತದೆ. "ಅಹಿಂಸಾ ಪರಮೋಧರ್ಮಃ" ಎಂಬ ಉತ್ಕೃಷ್ಟ ಧರ್ಮವು ಸರ್ವ ಪ್ರಾಣಿಗಳಲ್ಲಿಯೂ ಮಹಾದೇವನಿದ್ದಾನೆ, ಪ್ರಾಣಿಗಳ ಸೃಷ್ಟಿಯು ಮನುಷ್ಯನಿಂದ ಆಗದೆ ಇರುವುದರಿಂದ ಪ್ರಾಣಿ ಹಿಂಸೆ ಮಾಡಬಾರದು, ಎಂಬುದು ತನಗೂ ಮಹಾದೇವನಿಗೂ ಇರುವ ಸಂಬಂಧವನ್ನು ತೋರಿಸುವುದರಿಂದ ಇದನ್ನು ಕೇವಲ ಧರ್ಮ ಎಂದು ಒಪ್ಪಲಿಕ್ಕೆ ಬರುತ್ತದೆ. ಶಿವಾದ್ವೈತದಲ್ಲಿ ಈ ಧರ್ಮವು ಮುಖ್ಯವಾಗಿ ಅಂಗೀಕರಿಸಲ್ಪಟ್ಟಿದೆ. ಪ್ರಾಣಿಗಳಿಗೆ ಸಂತೋಷಪಡಿಸುವುದೆಂಬ ಇವರ ಪರಮೋತ್ಕೃಷ್ಟ ಧರ್ಮವೂ ಪ್ರಾಣಿದಯೆ ಎಂಬುದರಲ್ಲಿ ಸೇರಿಕೊಂಡಿದೆ. "ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ" ಎಂಬುದೂ ಶಿವಶರಣರ ಮುಖ್ಯ ಧ್ಯೇಯ. ಬ್ರಹ್ಮಾಂಡವು ಶಿವರೂಪ ಎಂಬುದನ್ನು ತೋರಿಸುವುದಕ್ಕೆ ಅಹಿಂಸೆ, ಭೂತದಯೆ ಇವು ಮುಖ್ಯಗಳಾಗಿವೆ. ಹೀಗೆ ಧರ್ಮದಲ್ಲಿನ ಸ್ಥೂಲ ಸೂಕ್ಷ್ಮ ಭಾಗಗಳನ್ನು ವಿಚಾರ ಮಾಡಿಕೊಂಡು ನಡೆಯಬೇಕಾಗಿದೆ. ಹೀಗೆ ಶ್ರೀ ನಾಗಣ್ಣನವರು ಒಪ್ಪುವ ಉತ್ಕೃಷ್ಟ ಧರ್ಮ ಪರಮೋತ್ಕೃಷ್ಟ ಧರ್ಮ ಇವುಗಳನ್ನು ಇಟ್ಟುಕೊಂಡೇ ತಮ್ಮ ಅಷ್ಟಾವರಣ ಪಂಚಾಚಾರ ನಿಷ್ಠೆಯನ್ನು ಶಿವಶರಣರು ಪಡೆದಿದ್ದಾರೆ. ಶ್ರೀ ನಾಗಣ್ಣನವರು ಗೀತೆಯಲ್ಲದ (ಇತರ) ಭಾರತೀಯ ಗ್ರಂಥಗಳಿಂದ ಹೇಳಿದ ಅಂಶಗಳಾದರೂ ಅವುಗಳನ್ನೂ ಯಥೋಚಿತವಾಗಿ ವಿಮರ್ಶೆಮಾಡಲಾಗಿದೆ.

ಚಾತುರ್ವರ್ಣ್ಯವು ನನ್ನಿಂದ ಸೃಷ್ಟಿಸಲ್ಪಟ್ಟಿತು. ಅದರ ಕರ್ತನು ನಾನೇ ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿರುವುದರಿಂದ ನಾಲ್ಕು ಜಾತಿಗಳನ್ನು ವಿಂಗಡಿಸಿದವನು ಶ್ರೀ ಕೃಷ್ಣನೇ ಎಂದು ದೈತ್ಯವಾಗಿ ಹೇಳಲಿಕ್ಕೆ ಬರುವಂತೆ ಇದೆ. ಆದರೆ ನನ್ನನ್ನು ಅಕೃರ್ತನವೆಂದೂ ಅವ್ಯಯವೆಂದೂ ಅವ್ಯಯನೆಂದೂ ತಿಳಿ ಎಂದೂ ಹೇಳಿ ಶ್ರೀಕೃಷ್ಣನು ತನ್ನ ಲೌಕಿಕ ವ್ಯಾಪ್ತಿಯ ದೋಷವನ್ನು ಕಳೆದುಕೊಂಡಿದ್ದಾನೆ. ಇದರಿಂದಲೇ ವರ್ಣಗಳು ಲೌಕಿಕರಿಗಾಗಿ ಇವೆ ಎಂದೂ ನಿಜಜ್ಞಾನಿಗೆ ಬೇಕಾಗಿಲ್ಲವೆಂದೂ ತಿಳಿಯಲಿಕ್ಕೆ ಬರುವಂತೆ ಇದೆ. ಇದು ಗೀತೆಯ ರಹಸ್ಯ. ಗೀತೆಯೊಳಗೆ ಇರುವ ವಾಕ್ಯಗಳಿಂದಲೇ ಉದ್ಧರಿಸಿ ತೆಗೆದುದು. ಇಂತಹ ರಹಸ್ಯಗಳನ್ನು ಶ್ರೀ ನಾಗಣ್ಣನವರು ಎತ್ತಿ ತೋರಿಸಿದ್ದರೆ ಜನತೆಗೆ ಬಹು ದೊಡ್ಡ ಉಪಕಾರವಾದಂತಾಗುತ್ತಿದ್ದಿತು. ಇರಲಿ. ಇಂತಹ ಕೆಲವು ಅಂಶಗಳನ್ನು ನಾವಿಲ್ಲಿ ತೋರಿಸಲಿಚ್ಛಿಸುತ್ತೇವೆ.

ಭಗವದ್ಗೀತೆಯನ್ನೆಲ್ಲಾ ಬುಡಮೇಲಾಗಿ ಶೋಧಿಸಿದರೂ ಅದರಲ್ಲಿ "ಅಹಂ ಬ್ರಹ್ಮಾಸ್ಮಿ" (ನಾನು ಬ್ರಹ್ಮನಿದ್ದೇನೆ) ಎಂಬ ವಾಕ್ಯವಿಲ್ಲ. ಇದರಿಂದ ಅದು ದ್ವೈತ ಗ್ರಂಥವೆಂದು ನಾವು ಸ್ಪಷ್ಟವಾಗಿ ಹೇಳಬಹುದಾದರೂ ಅದರಲ್ಲಿನ ಕೆಲವು ವಾಕ್ಯಗಳು ಮನುಷ್ಯನಲ್ಲಿ ಈಶ್ವರನಿದ್ದಾನೆ ಎಂಬ ನಿಜಾಂಶವನ್ನು ಹೊರಗೆ ತರುತ್ತವೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶರ್ಜುನ ತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ
ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ
ತತ್ ಪ್ರಸಾದಾತ್ ಪರಾಂ ಶಾಂತಿಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ

(xviii61-62)

ಈ ಎರಡು ಶ್ಲೋಕಗಳು ಭಗವದ್ಗೀತೆಯ ಕೊನೆಯ ಭಾಗದಲ್ಲಿ ಇವೆ. "ಈಶ್ವರನು ಸರ್ವ ಪ್ರಾಣಿಗಳ ಹೃದಯದಲ್ಲಿ ಇದ್ದಾನೆ. ಅವನು ತನ್ನ ಮಾಯೆಯಿಂದ ಪ್ರಾಣಿಗಳನ್ನು ಯಂತ್ರಕ್ಕೆ ಸಿಕ್ಕಿಸಿ ಭ್ರಮಿಸುವಂತೆ ಮಾಡುತ್ತಾನೆ. ಅವನನ್ನೇ ಸರ್ವಭಾವದಿಂದಲೂ ಶರಣಹೋಗು. ಆತನ ಪ್ರಸಾದದಿಂದ ಶಾಶ್ವತವಾದ ಶ್ರೇಷ್ಠವಾದ ಶಾಂತಿಯನ್ನು ಪಡೆಯುತ್ತೀಯೆ" ಎಂದು ಅರ್ಜುನನಿಗೆ ಹೇಳಿದ್ದಾನೆ. ಇಲ್ಲಿ ಹೇಳಲ್ಪಟ್ಟ ಈಶ್ವರನು ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಲ್ಪಟ್ಟ ಈಶನೇ. "ಈಶಾವಾಸ್ಯಮಿದಂ ಸರ್ವಂ" (ಈ ಜಗತ್ತೆಲ್ಲವೂ ಈಶನಿಂದ ವಾಸಸ್ಥಾನವಾಗಿ ಮಾಡಲ್ಪಟ್ಟುದು). ಇದು ಸರ್ವಂ ಖಲ್ವಿದಂ ಬ್ರಹ್ಮಾ ಎಂಬ ಅಭಿಪ್ರಾಯವುಳ್ಳುದು. ಅರ್ಜುನನೊಡನೆ ಕಾಲ ಕಳೆದ ಶ್ರೀ ಕೃಷ್ಣನು ಸು. ೫೦೦೦ ವರ್ಷಗಳ ಹಿಂದೆ ಇದ್ದನೆಂಬುದು ನಿರ್ಣಯವು. ಆಗ ಶಿವಭಕ್ತಿಯು ಭಾರತವಲ್ಲಿ ವ್ಯಾಪಿಸಿದ್ದಿತೆಂದು ಹೇಳುವುದಕ್ಕೆ ಬೇಕಾದಷ್ಟು ಆಧಾರಗಳಿವೆ. ಪ್ರಾಣಿಗಳ ಹೃದಯದಲ್ಲಿನ ನಿರಾಕಾರ ಶಿವನು ಮಾಯಾ (ಶಕ್ತಿ) ಸಮೇತನೆಂದೂ ಆ ಮಾಯೆಯು ಪ್ರಪಂಚ ಕಾರ್ಯವನ್ನು ಮಾಡಿಸುವುದೆಂದೂ ಶಿವಾದ್ವೈತಿಗಳಾದ ಶಿವಶರಣರು ಚೆನ್ನಾಗಿ ತಿಳಿದಿದ್ದಾರೆ. ಶಿವನೇ ನಿನ್ನ ಮಾಯೆಯಿಂದ ಜಗತ್ತನ್ನು

ಏಕೆ ಹಾಳು ಮಾಡುವೆ ಎಂದು ಹಾಡಿಕೊಂಡಿದ್ದಾರೆ. ಶಿವನೂ 'ಮನ್ಮಾಯಾ ಮೋಹಿತಾತ್ಮನಾಂ' ಎಂದು ಪ್ರಾಣಿಗಳಿಗಾಗಿ ಹೇಳಿರುವುದು ಆಗಮದಿಂದ ಗೊತ್ತಾಗುತ್ತದೆ. ಇದೇ ಅಭಿಪ್ರಾಯವೇ ಮೇಲೆ ಕಂಡ ಗೀತಾಶ್ಲೋಕಗಳಲ್ಲಿ ಇದೆ. ಶ್ರೀಕೃಷ್ಣನು ಶಿವ ಭಕ್ತನೆಂಬುದಕ್ಕೂ ಶಿವನ ಪಾದ ಪೂಜೆ ಮಾಡಿದನೆಂಬುದಕ್ಕೂ ಪುರಾಣದಲ್ಲಿ ಹೇಳಿಕೆಗಳಿವೆ. ಇಲ್ಲಿಯೂ ಕೂಡ ಹೃದಯದಲ್ಲಿನ ಶಿವನ ಪ್ರಸಾದದಿಂದ ಶಾಶ್ವತವಾದ ಶಾಂತಿಯು ದೊರಕುತ್ತದೆ, ಎಂಬ ಪ್ರಥಮ ಪುರುಷ (Brd Person) ಶಬ್ದದ ಪ್ರಯೋಗವಿರುವುದರಿಂದ ಶ್ರೀ ಕೃಷ್ಣನಿಗಿಂತ ಶಿವನು ಬೇರೆ ಎಂಬುದು ಚೆನ್ನಾಗಿ ಗೊತ್ತಾಗುತ್ತದೆ. ಇವರಿಬ್ಬರ ಪ್ರತ್ಯೇಕತೆಯನ್ನು ತೋರಿಸುವುದಕ್ಕಾಗಿ ಇಲ್ಲಿ ಈ ಶ್ಲೋಕಗಳ ಉದಾಹರಣೆಯನ್ನು ಕೊಟ್ಟಿಲ್ಲ. ಮೇಲೆ ಕಂಡಂತೆ ಭಗವದ್ಗೀತೆಯಲ್ಲಿ ಹೇಳಲ್ಪಟ್ಟ ಈಶ್ವರನೂ ಮಾಯಾ ಸಹಿತನು. ಇವನನ್ನೇ ಶಕ್ತಿ (Energy) ಸಮೇತನಾದ ಶಿವನೆಂದು ಶಿವಶರಣರು ತಿಳಿದಿದ್ದಾರೆ. ಹೀಗಾಗಿ ಈಶ್ವರನೂ ಶಿವನೂ ಒಂದೇ ಎಂದು ಸ್ಪಷ್ಟವಾಗುತ್ತದೆ. ಇದರಿಂದ ವರ್ಣಗಳ ತೊಡಕು ಹಾರಿಹೋಗುತ್ತದೆ. ಹೃದಯದಲ್ಲಿ ಶಿವನನ್ನು ಉಳ್ಳವನು ಸಾಮಾನ್ಯ ಮನುಷ್ಯ ಪ್ರಾಣಿಯಾಗುವುದು ಹೇಗೆ? ಶೂದ್ರನಾಗುವುದು ಹೇಗೆ ? ವೇದದೊಳಗಿನ ಒಂದು ಭಾಗವಾದ 'ಬ್ರಾಹ್ಮಣ'ದಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಮಾಡುವ ಬ್ರಾಹ್ಮಣನಾಗುವುದು ಹೇಗೆ ? ಇದೇ ವಿಷಯವೇ ಇದೇ ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಿದ ಉತ್ತರ ಗೀತೆಯಲ್ಲಿ (ಮಹಾಭಾರತದಲ್ಲಿ ಇರುವ ಒಂದು ಗೀತೆ) ಇದೆ. ನಿರಾಕಾರ ನಿರಂಜನನಾದ ಶಿವನು ಹೃದಯದಲ್ಲಿ ಇರುತ್ತಾನೆ. ನಿರಾಕಾರವನ್ನು ಅನುಸರಿಸಬೇಕೆಂಬುವವರು ಹೃದಯದಲ್ಲಿ ಭಜಿಸಬೇಕೇ ಹೊರತು ಕಲ್ಲು ಲೋಹ ಕಟ್ಟಿಗೆ ಮೊದಲಾದುವುಗಳಿಂದ ಮಾಡಿದ ಪ್ರತಿಮೆಗಳಲ್ಲಿ ಎಂದೂ ಅವನು ಸಿಕ್ಕುವುದಿಲ್ಲ ಎಂದು ಅಲ್ಲಿ ಹೇಳಲ್ಪಟ್ಟಿದೆ. ಪ್ರತಿಮೆಗಳನ್ನು ಪೂಜಿಸುವವರು ದಡ್ಡರು (ಮೂಢರು) ಎಂದೂ ಇದೆ. ಶಿವಶರಣರು ಈ ಪ್ರಕಾರ ತಮ್ಮ ಹೃದಯದಲ್ಲಿ ಶಿವನು ಉಂಟೆಂದು ತಿಳಿಯುವವರೂ ಹೃದಯದಲ್ಲಿನ ಪ್ರಾಣಲಿಂಗವೇ (ಶಿವನೇ) ದೇಹಕ್ಕೆ ಪೂಜ್ಯನಾದ ಇಷ್ಟಲಿಂಗವಾಗಿದ್ದಾನೆ ಎಂದೂ ತಿಳಿಯುವವರೂ ಆಗಿದ್ದಾರೆ. (ಮೇಲೆ ಕಂಡ ಈಶಾವ್ಯಾಸ್ಯೋಪನಿಷತ್ತಿನ ಶಿವನು ಲಿಂಗ ಎಂದು ಅದರ ಮೊದಲ ಶ್ಲೋಕದಲ್ಲಿಯೇ ಇದೆ. ಜಗತಿಯಲ್ಲಿ ಭುವನಾಧ್ವವುಳ್ಳದು ಲಿಂಗ.) ಯಾವುದರಲ್ಲಿ ತಾನಿಲ್ಲವೋ ಅದು ಪ್ರತಿಮೆ ಎಂದು ಬ್ರಹ್ಮಸೂತ್ರದiv ನೆಯ ಭಾಗದ "ನ ಪ್ರತೀಕೇನ ಹಿಸಃ" ಎಂಬ ಸೂತ್ರದಿಂದ ತಿಳಿಯುವಂತೆ ತಾನಿಲ್ಲದುದು ಪ್ರತೀಕ.(ಪ್ರತಿಮೆ). ವೀರಶೈವರ ಇಷ್ಟಲಿಂಗದಲ್ಲಿ ತಾನು ಇರುವುದರಿಂದ ಇವರು ಧರಿಸಿದ ಇಷ್ಟಲಿಂಗವು ಪ್ರತಿಮೆಯಲ್ಲ. ಈ ಎಲ್ಲ ವಿವರಗಳಿಂದ ಶಿವಾದ್ವೈತದ ವಿಷಯವೂ ಭಗವದ್ಗೀತೆಯಲ್ಲಿ ಬಂದಿದೆ ಎಂದು ನಾವು ಒಪ್ಪಲೇಬೇಕು. ಭಗವದ್ಗೀತೆಯಲ್ಲಿನ ಇಂತಹ ರಹಸ್ಯಗಳನ್ನು ಹೊರಗೆ ತೆಗೆದು ತೋರಿಸಿದರೆ ಜನಸಾಮಾನ್ಯಕ್ಕೆ ದೊಡ್ಡ ಉಪಕಾರವಾಗುತ್ತದೆ. ಮೂರ್ತಿ ಪೂಜೆ ಮಾಡುವ ಬ್ರಾಹ್ಮ

ಣಾದಿ ವರ್ಣಗಳು ಇರಬೇಕೆಂದು ಬೋಧಿಸಹೋದರೆ ಉತ್ತರ ಗೀತೆಯಲ್ಲಿ ಹೇಳಿದಂತೆ ದಡ್ಡರು ದಡ್ಡರು ಸೇರಿ ಮಾಡುವ ಕಾರ್ಯಗಳು ಶ್ರೇಷ್ಠವಾದ ಫಲವನ್ನು ಕೊಡದೆ ಮತ್ತೆ ಹುಟ್ಟಿ ಬರುವುದಕ್ಕೆ (ಪುನರ್ಭವಕ್ಕೆ) ಕಾರಣವಾಗಿ ಪರಿಣಮಿಸುವುವು. ನಿರಾಕಾರವು ಅವರ ಕೈಗೆ ಸಿಕ್ಕಲಿಲ್ಲ. ಧಾರ್ಮಿಕದ ಶ್ರೇಷ್ಠ ಫಲವನ್ನು ಪಡೆಯಲಿಲ್ಲ. ಹೀಗಾಗುತ್ತದೆ. ವರ್ಣಗಳ ಕಟ್ಟು ಹೃದಯದಲ್ಲಿ ಅಥವಾ ತನ್ನಲ್ಲಿ ಶಿವನಿದ್ದಾನೆ ಎಂಬ ಜ್ಞಾನವಾಗುವ ವರೆವಿಗೇ ಹೊರತು ಆ ಜ್ಞಾನವಾದ ಮೇಲೆ ಬೇಕಾಗಿ ಇಲ್ಲ. ಅನೇಕ ಉಪನಿಷತ್ತು ವರ್ಣಗಳು ಆತ್ಮಜ್ಞಾನಿಗೆ ಅವಶ್ಯವಿಲ್ಲ ಎಂದು ಹೇಳುತ್ತವೆ. ಆದುದರಿಂದ ಮೂರ್ತಿ (ಪ್ರತಿಮೆ) ಪೂಜೆ ಮಾಡುವ ಕರ್ಮಗಳು 'ಅಹಂ ಬ್ರಹ್ಮಾಸ್ಮಿ' (ನಾನು ಬ್ರಹ್ಮನಿದ್ದೇನೆ) ಶಿವೋಹಂ (ನಾನು ಶಿವನು) ಎಂದು ತಿಳಿಯುವ ಜ್ಞಾನ ಬರುವುದಕ್ಕೆ ಸಾಧನೆಗಳೇ ಹೊರತು ಜ್ಞಾನವು ದೃಢಪಟ್ಟ ಮೇಲೆ ಮಾಡಬೇಕಾದ ಕಾರ್ಯಗಳಲ್ಲ. ಆದುದ ರಿಂದಲೇ ಶಿವ ಶರಣನು ತಾನು ತುಂಬಿಕೊಂಡಿರುವ (ತನ್ನ ಸ್ವರೂಪವಾದ) ಇಷ್ಟ ಲಿಂಗದ ಹೊರತು ದೇವಸ್ಥಾನದ ಪ್ರತಿಮೆಗಳನ್ನು ಪೂಜಿಸುವುದಿಲ್ಲ. ಅದರ ವಚನ ಗಳಲ್ಲಿ ಈ ವಿಷಯವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಹೀಗೆ ಭಗವದ್ಗೀತೆ ಉತ್ತರ ಗೀತೆ ಗಳ ಅಭಿಪ್ರಾಯವೂ ಶಿವಶರಣರ ಅಭಿಪ್ರಾಯವೂ ಒಂದೇ ಆಗಿದೆ. ಮೇಲೆ ಕಂಡ ಭಗವದ್ಗೀತೆಯ ಶ್ಲೋಕದಲ್ಲಿಯೂ ಶರಣ, ಪ್ರಸಾದ ಈ ಶಬ್ದಗಳು ಶಿವಶರಣರ ಬಳಕೆಯಲ್ಲಿ ಇರುವುವುಗಳೇ ಆಗಿವೆ. ಹೀಗಾಗಿ ಶಿವಶರಣರ ಆಚರಣೆಗಳು ೫೦೦೦ ವರ್ಷಗಳ ಹಿಂದೆ ಇದ್ದವುಗಳೆಂದು ನಿರ್ಣಯಿಸಲಿಕ್ಕೆ ಬರುವಂತೆ ಇದೆ. ಭಗವದ್ಗೀತೆ ಯನ್ನು ಭಾರತದಲ್ಲಿ ಓದಲಿಕ್ಕೆ ಪ್ರಾರಂಭಿಸಿ ಸಾವಿರಾರು ವರ್ಷಗಳಾದರೂ ಇನ್ನಾದರೂ ಜನರು ನಿರಾಕಾರನನ್ನು ಅನುಭಾವಿಸುವ ಪ್ರಯತ್ನ ಮಾಡಬಾರದೇ ? ಇನ್ನೂ ಜಾತಿ ಜಾತಿ ಎಂದು ಬಡಿದಾಡುತ್ತಾ ಕರ್ಮಕಾಂಡದಲ್ಲಿ ಬಿದ್ದು ದಡ್ಡರಾಗಬೇಕೇ ?

"ವರ್ಣಾಶ್ರಮ ವಿಭಾಗೋಯಂ ವೃತ್ತಿತೋ ನತು ಜನ್ಮತಃ" ಎಂಬ ಆಧಾರದ ಪ್ರಕಾರ ವರ್ಣಾಶ್ರಮ ವಿಭಾಗಗಳು ಅವರವರ ಕೆಲಸದಿಂದ ಏರ್ಪಟ್ಟವುಗಳೆಂದು ತಿಳಿಯದೆ ಜನ್ಮದಿಂದಲೂ ಮರಣದವರೆವಿಗೂ ಜಾತಿಯುಂಟೆಂದು ಕಟ್ಟನ್ನು ಬಿಗಿ ಮಾಡಿ, ಒಬ್ಬೊಬ್ಬರು ಸೇರಿ ಒಂದೇ ಪಂಕ್ತಿಯಲ್ಲಿ ಭೋಜನ ಮಾಡಲಾಗದ, ಸಪ್ತ ಧಾತು 'ಸಮಂಪಿಂಡಂ' ಎಂದು ಹೇಳಲ್ಪಡುವ ಎಲ್ಲಾ ಮನುಷ್ಯರಲ್ಲಿಯೂ ನಾನು ಬೇರೆ ನೀನು ಬೇರೆ ಎಂದು ನಿರ್ಣಯ ಮಾಡುವ, ಮತ್ತು ಒಂದು ಜನ್ಮ ಕಾಲವೆಲ್ಲಾ ಉನ್ನತಿಯನ್ನು ಪಡೆಯಲಾಗದೆ ಹುಟ್ಟಿದ ಕಾಲದಂತೆ ಕಡೆಗೂ ಇರಬೇಕೆಂದು ಆಚರಿಸ ಲ್ಪಡುವ, ವರ್ಣಗಳ ಕಟ್ಟು ಈಗಿನ ಜನತೆಗೆ ತೊಂದರೆ ಕೊಡುವವುಗಳಲ್ಲದೆ ಮತ್ತೇನು ?

ಭಗವದ್ಗೀತೆಯ vi ನೆಯ ಅಧ್ಯಾಯದ ೨೩ ನೆಯ ಶ್ಲೋಕದಲ್ಲಿ ಯುಕ್ತನಾಗಿ ಜ್ಞಾನದಲ್ಲಿ ಇರುವ ಚೇತನನಿಗೆ ಯಜ್ಞದಲ್ಲಿ ಆಚರಿಸುವ ಎಲ್ಲ ಕರ್ಮಗಳೂ ವಿಲೀನ ವಾಗುತ್ತವೆ ಎಂದು ಹೇಳಿ ಅನಂತರ



ಪ್ರಥಮತಃ ಶ್ರೀ ಚನ್ನಮಲ್ಲಿಕಾರ್ಜುನರು ಮೈಸೂರಿಗೆ ಬಂದಾಗ ಸುತ್ತೂರು
ಜಗದ್ಗುರುಗಳವರ ಆಶ್ರಯಪಡೆದು ವಾಸಿಸುತ್ತಿದ್ದ
ವಾಣಿವಿಲಾಸ ರಸ್ತೆಯಲ್ಲಿರುವ ಕ್ಯಾಕನಹಳ್ಳಿ ಸಾಹುಕಾರ ಸಿದ್ಧಪ್ಪನವರ
ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿ ನಿಲಯ.

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ
ಬ್ರಹ್ಮೈವತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ

ಬ್ರಹ್ಮ ಎಂಬ ಹವಿಯನ್ನು ಬ್ರಹ್ಮ ಎಂಬ ಅಗ್ನಿಯಲ್ಲಿ ಬ್ರಹ್ಮ ಎಂಬ ಅರ್ಪಣ ಮಾಡಿದಲ್ಲಿ ಆ ಬ್ರಹ್ಮಕರ್ಮ ಸಮಾಧಿಯಿಂದ ಬ್ರಹ್ಮನೇ ಅವನಿಂದ ಹೊಂದಲ್ಪಡತಕ್ಕ ಸ್ಥಾನ.

ಇದರಂತೆ ಶಿವಶರಣರು ಲಿಂಗಕ್ಕೆ ಲಿಂಗ ಪದಾರ್ಥವನ್ನು ಅರ್ಪಿಸಿ ಲಿಂಗವೇ ಆಗುವದೆಂದು ತಿಳಿದಿದ್ದಾರೆ. ಎಂದಮೇಲೆ ಜ್ಞಾನ ಚೇತನವುಳ್ಳವರು ಇವರಲ್ಲವೇ. ಇವರಿಗೆ ಋಷಿಯಜ್ಞ ಮೊದಲಾದ ಪಂಚಯಜ್ಞಗಳೇತಕ್ಕೆ ? ಎಲ್ಲಾ ಯಜ್ಞಗಳ ವಿಲೀನ ಭಾವವೇ ಇದಲ್ಲದೇ ಇದರಿಂದ ಶಿವಶರಣರು ಸರ್ವ ಯಜ್ಞಗಳನ್ನು ಮಾಡಿ ದವರೆಂದು ತಿಳಿಯಬೇಕಲ್ಲವೇ.

ವಿಷಯಾ ವಿನವರ್ತಂತೇ ನಿರಾಹಾರಸ್ಯ ದೇಹನಃ
ರಸವರ್ಜ್ಯಂ ರಸೋಪ್ಯಸ್ಯ ಪರಂ ದೃಷ್ಟ್ವಾ ನಿರ್ವತತೇ (೧೧೫೯)

ಜೀವನ ಆಹಾರವನ್ನು ಕೊಡದೇ ಇದ್ದರೆ ಅವನ ಇಂದ್ರಿಯ ವಿಷಯಗಳು ತಿರುಗಿಬಿಡುತ್ತವೆ. ಪರವಸ್ತುವನ್ನು ಕಂಡು ಅವನ ಮನಸ್ಸೂ ಕೂಡ ಚಂಚಲವಿಲ್ಲದೆ ತಿರುಗುತ್ತದೆ.

ಇಲ್ಲಿ ಜೀವನ ಆಹಾರವನ್ನು ತಪ್ಪಿಸಿ (ಹಸಿವಿಗೆ ಊಟ ಮಾಡುವುದನ್ನು ಬಿಟ್ಟು) ಬ್ರಹ್ಮ ಪ್ರಸಾದವನ್ನು ಅರ್ಪಿಸಿದರೆ ಪರವಸ್ತುವನ್ನು ನೋಡಿ ಜೀವನ ವಿಷಯಗಳೂ ಅವನ ಮನಸ್ಸೂ ಪರವಸ್ತುವಿನ ಕಡೆಗೆ ತಿರುಗುತ್ತವೆ ಎಂದು ಹೇಳಿದ ಪ್ರಕಾರ ಶಿವಶರಣರು ಇಂದ್ರಿಯ ವಿಷಯ ಭಾವನೆಯನ್ನು ತಪ್ಪಿಸಿ ಶಿವಭಾವನೆಯಿಂದ ಶಿವ ಪದಾರ್ಥವನ್ನು ಶಿವನಿಗೆ ಅರ್ಪಿಸುವುದು ಈ ಶ್ಲೋಕಕ್ಕೆ ಅನುಸಾರವಾದ ಕೆಲಸವೇ ಅಲ್ಲವೇ ! ಪರವಸ್ತುವನ್ನು ಕಂಡು ಎಂಬಲ್ಲಿ ಶಿವಶರಣರ ಇಷ್ಟಲಿಂಗವೇ ಪರವಸ್ತು ವಲ್ಲವೇ ! ಇಂತಹ ಉದಾಹರಣೆಗಳು ಇನ್ನೂ ಇರುವುವಾದರೂ ಜಾತಿಗಳನ್ನು ಮೀರಿದ ಶಿವಶರಣರ ಆಚರಣೆಯೂ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿದೆ ಎಂದು ದೃಢ ವಾಗಿ ನಂಬಬೇಕಾಗಿದೆ.

ಇವೆಲ್ಲಾ ಇರಲಿ. ಮುಖ್ಯವಾಗಿ ಈ ಶ್ಲೋಕವನ್ನು ನೋಡಿರಿ.

ನ ಬುದ್ಧಿ ಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ
ಜೋಷಯೇತ್ ಸರ್ವ ಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್
(iii ೨೬)

ಪಂಡಿತನಾದವನು ಅಜ್ಞಾನಿಗಳಾದ ಕರ್ಮಸಂಗಿಗಳಿಗೆ ಬುದ್ಧಿ ಬೇಧವನ್ನು ಹುಟ್ಟಿಸಬಾರದು. ತಾನು ಸರ್ವಕರ್ಮಗಳನ್ನು ಯೋಗದಿಂದ ಕೂಡಿ ಆಚರಿಸಿ ದೇವ ನನ್ನು ಪ್ರೀತಿಪಡಿಸಬೇಕು.

ಕರ್ಮಸಂಗಿಗಳು ಅಜ್ಞಾನಿಗಳೆಂದೂ ಅವರಿಗೆ ಬುದ್ಧಿ ಭೇದವನ್ನು (ಕರ್ಮ ತ್ಯಾಜ್ಯದ ಬುದ್ಧಿಯನ್ನು) ಹುಟ್ಟಿಸಬಾರದೆಂದೂ ಏಕೆ ಹೇಳಿದರು ? ಭಗವದ್ಗೀತೆಯನ್ನು ರಚಿಸಿದ ಶ್ರೀ ಕೃಷ್ಣನಾಗಲೀ ಅಥವಾ ಕವಿಯಾಗಲೀ ತಾವು ಗೀತೆಯಲ್ಲಿ ಏನು ಹೇಳುತ್ತವೆ ಎಂಬುದನ್ನು ತಿಳಿದವರು. ತಮ್ಮ ವರ್ಣಗಳ ಕಟ್ಟನ್ನು ಬಿಗಿಪಡಿಸುವವಕ್ಕಾಗಿ, ಮೊದಲೇ ವಿದ್ವಾಂಸರನ್ನು ಅವರಿಂದ ಬೇರ್ಪಡಿಸಿ ಅವರಿಗೆ ಬುದ್ಧಿ ಬೇಧವನ್ನು ಹುಟ್ಟಿಸಬಾರದೆಂದು ಎಚ್ಚರಿಸಿದ್ದಾರೆ. ಶ್ರೀ ಬಸವೇಶ್ವರನು ಹೀಗೆ ಮಾಡಿದ್ದಾನೆ ಏನು ? ನಿರಾಕಾರನಾದ ಪರವಸ್ತುವಿನ ಯೋಗವನ್ನು ಎಂತಹ ಮೂಢನಾದರೂ ಹೊಂದಬಹುದೆಂದು ಹೇಳಿದ್ದಾನೆ. ಸೂರ್ಯ, ಆತ್ಮ, ಬ್ರಹ್ಮ, ಶಿವ ಮುಂತಾದವರ ಜ್ಞಾನವನ್ನು ಯಾರು ಬೇಕಾದರೂ ಹೊಂದಬಹುದಲ್ಲವೇ ? ಹಾಗೆ ಆಗಬಾರದೆಂದು ಕಟ್ಟನ್ನೇಕೆ ಹಾಕಬೇಕು ? ಯೋಗದಿಂದ ಆಚರಿಸು, ಅದನ್ನು ಇತರರಿಗೆ ಹೇಳಬಾರದೆಂದು ರಹಸ್ಯದಲ್ಲಿರಿಸುವುದು ಏತಕ್ಕೆ ? ಇದಲ್ಲವೇ ಭಗವದ್ಗೀತೆಯ ರಹಸ್ಯ ! ಇದಲ್ಲವೇ ವಿಚಿತ್ರ ! ಇಂತಹ ರಹಸ್ಯ ವಿಷಯಗಳನ್ನು ಬಯಲಿಗೆ ತರುವವರು ಈಗ ಬೇಕಾಗಿದ್ದಾರೆ.

ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ (ii ೬೯) ಈ ಶ್ಲೋಕದ ಪ್ರಕಾರ ಪ್ರಾಣಿಗಳಿಗೂ ಸಂಯಮಿಗೂ ವಿರುದ್ಧ ಲಕ್ಷಣಗಳೇ ಇವೆ. ಮೇಲೆ ಕರ್ಮಸಂಗಿ ವಿದ್ವಾಂಸ ಎಂದು ಎರಡು ಭೇದ ಮಾಡಿದ್ದಾರೆ. ಶ್ರೀ ಅರವಿಂದ ಘೋಷರು ಮನುಷ್ಯ, ದೈವಿಕ ಮನುಷ್ಯ ಎಂದು ಎರಡು ವಿಭಾಗ ಮಾಡಿರುವುದೂ ಶಿವಶರಣರು ಭವಿ, ಭಕ್ತ ಎಂದು ಎರಡು ತೆರ ವಿಂಗಡಿಸಿರುವುದೂ ಇದೇ ಮಾದರಿಯಿಂದಲೇ.

ಗೀತೆಯ ix ನೆಯ ಅಧ್ಯಾಯದಲ್ಲಿ ಯಜ್ಞಗಳನ್ನು ಮಾಡಿದವರು ಇಂದ್ರ ಲೋಕದಲ್ಲಿ ಪುಣ್ಯವನ್ನು ಅನುಭವಿಸಿ ಮತ್ತೆ ಭೂಮಿಗೆ ಬರುತ್ತಾರೆ ಎಂದಿದೆ (ಶ್ಲೋಕ ೨೦) ಮೇಲೆ ಹೇಳಿದಂತೆ ಹೃದಯದೊಳಗಿನ ಈಶ್ವರನನ್ನು ಭಜಿಸಿದರೆ ಶಾಶ್ವತವಾದ ಶಾಂತಿಯನ್ನು ಪಡೆಯುತ್ತೀ ಎಂಬಿಷ್ಟು ಮಟ್ಟಿಗಿನ ಹೆಚ್ಚಿನ ಫಲವು ಯಜ್ಞಗಳನ್ನು ಮಾಡುವುದರಲ್ಲಿ ಇಲ್ಲ. ಸರ್ವ ಯಜ್ಞಗಳ ಪ್ರವಿಲೀನವಾದ ಬ್ರಹ್ಮಯಜ್ಞವನ್ನೇ (ಬ್ರಹ್ಮನಿಗೆ ಬ್ರಹ್ಮನನ್ನೇ ಅರ್ಪಿಸುವುದು) ಶಿವಶರಣರು ಲಿಂಗಕ್ಕೆ ಲಿಂಗ ಪದಾರ್ಥವನ್ನು ಅರ್ಪಿಸುವೆವೆಂದು ಆಚರಿಸುತ್ತಾರೆ. ಹೀಗೆ ಶಿವಶರಣರ ತತ್ವವಾದ ಶಿವಾದ್ವೈತವು ಭಗವದ್ಗೀತೆಯಲ್ಲಿ ಗೋಪ್ಯವಾಗಿ ಮುದುಗಿಕೊಂಡಿದೆ. ಅದು ಶ್ರೇಷ್ಟವಾದುದೆಂಬ ಅಭಿಪ್ರಾಯವೂ ಅಲ್ಲಿ ಬಂದಿದೆ. (ಇನ್ನೂ ಅನೇಕ ಉದಾಹರಣೆಗಳಿವೆ.) ಇಂತಹ ಶ್ರೇಷ್ಠ ಆಚರಣೆಯನ್ನು ಬಿಟ್ಟು ಕರ್ಮಸಂಗಿಗಳಾದ ಅಜ್ಞಾನಿಗಳು ಆಚರಿಸತಕ್ಕ ವರ್ಣಗಳ ಆಚರಣೆ ಯಜ್ಞಮಾಡುವಿಕೆ ಇಂತಹವುಗಳನ್ನು ಏಕೆ ಮಾಡಲಿಕ್ಕೆ ಹೋಗಬೇಕು ? ಗೀತೆಯೊಳಗಿನ ಶ್ಲೋಕಗಳಿಂದಲೇ ಗೀತಾರಹಸ್ಯವನ್ನು ಹೊರಗೆ ತಂದುದಾಗಿದೆ.

ಗೀತೆಯಲ್ಲಿಯೇ ಕರ್ಮಸಂಗಿಗಳು ಯೋಗಿಗಳು (iii ೨೬) ಎಂದು ಎರಡು ವಿಭಾಗ ಮಾಡಿರುವಾಗ ಕರ್ಮಸಂಗಿಗಳ ಆಚರಣೆಯನ್ನೇ ಎಲ್ಲರೂ ಅನುಸರಿಸಬೇಕೆಂದೂ ಇಲ್ಲದಿದ್ದರೆ ಅವರು ಭಗವಂತನ ಆಗ್ರಹಕ್ಕೆ ಪಾತ್ರರಾಗುತ್ತಾರೆಂದೂ ಹೆದರಿಸುತ್ತಿರುವುದನ್ನು ನೋಡಿದರೆ ಭಗವಂತನೆಂಬ ಸಿಂಹವನ್ನು ಶ್ರೀ ನಾಗಣ್ಣನವರು ತಮ್ಮ ಪಂಜರದಲ್ಲಿಟ್ಟುಕೊಂಡು ತಮ್ಮ ಮನಸ್ಸಿನಂತೆ ನಡೆಯದಿದ್ದವರ ಮೇಲೆಲ್ಲಾ ಹಾರಲಿಕ್ಕೆ ಪ್ರೋತ್ಸಾಹಿಸುವಂತೆ ತೋರುತ್ತದೆ. ಅಮೇರಿಕಾದಲ್ಲಿ ಭಾರತೀಯ ಧರ್ಮದಂತೆ ವರ್ಣಗಳಿಲ್ಲ. ಅವರು ಬದುಕಿಲ್ಲವೇ ? ಅವರ ಮೇಲೆ ಭಗವಂತನು ಆಗ್ರಹ ಮಾಡಿ ಏನು ಮಾಡಿದ್ದಾನೆ ? ಇಂತಹದರಲ್ಲಿ ಕರ್ಮ ಸಂಗವನ್ನು ಬಿಟ್ಟು ದೇವನ ಸಂಗದಿಂದ ಇರಬೇಕೆಂದು ಬೋಧಿಸುವ ಭಾರತೀಯ ಧರ್ಮಶಾಸ್ತ್ರವನ್ನು ಹೇಳಿದರೆ ಅದರಂತೆ ಆಚರಿಸಿದರೆ ಭಗವಂತನು ಆಗ್ರಹಗೊಳ್ಳುವನೇ ? ಸುಮ್ಮನೆ ಏಕೆ ಹೆದರಿಸಬೇಕು ? ಗೀತೆಯಲ್ಲಿಯೇ ವರ್ಣಗಳ ತ್ಯಾಜ್ಯದ ಬೋಧೆ ಇದೆಯಲ್ಲಾ !

ಮೇಲೆ ಕಂಡ ಗೀತೆಯ (ii ೫೯) ಶ್ಲೋಕದ ಪ್ರಕಾರ ಮನುಷ್ಯನು ಇಂದ್ರಿಯ ವಿಷಯಗಳಿಗೆ ಪ್ರಾಪಂಚಿಕ ಆಹಾರವನ್ನು ಕೊಡದೇ ಇದ್ದರೆ ಅವು ಪರವಸ್ತುವಿನ ಕಡೆಗೆ ತಿರುಗಾಡುವಂತೆ ಮನಸ್ಸು ದೇಹ ಮೊದಲಾದವುಗಳನ್ನು ಆ ನಿರಾಕಾರ ಮಹಾದೇವನ ಕಡೆಗೆ ತಿರುಗಿಸಿ ನಡೆದರೆ ದೇಹದ ಅತ್ಯಂತ ಹೇಯತ್ವವೆಲ್ಲಿ ಉಳಿಯುವುದು ?

ಕೆಲವು ಉಪನಿಷತ್ತುಗಳ ಉದಾಹರಣೆಯನ್ನು ತೆಗೆದುಕೊಂಡು ವರ್ಣಗಳು ಆತ್ಮನಿಗೆ ಬಂಧಕಾರಿಗಳೆಂಬುದನ್ನು ತೋರಿಸಬಹುದಾಗಿದೆ. ಮುದ್ಗಲೋಪನಿಷತ್ತಿನಲ್ಲಿ

ಕುಲ ಗೋತ್ರ ಜಾತಿ ವರ್ಣಾಶ್ರಮ ರೂಪಾಣಿ ಷಡ್‌ಭ್ರಮಾಃ
ಏಕದ್ಯೋಗೇನ ಪರಮ ಪುರುಷೋ ಜೀವೋ ಭವತಿ

ಈ ಶ್ಲೋಕವಿದೆ. ಇದರಿಂದ ಕುಲ, ಗೋತ್ರ, ಜಾತಿ, ವರ್ಣ, ಆಶ್ರಮ ಈ ರೂಪಗಳಲ್ಲಿ ಆರು ಭ್ರಮೆಗಳಿವೆ. ಈ ಭ್ರಮೆಗಳನ್ನು ಹಚ್ಚಿಕೊಂಡಾಗ ಪರಮ ಪುರುಷನು ಜೀವನಾಗುತ್ತಾನೆ ಎಂಬಭಿಪ್ರಾಯವು ವ್ಯಕ್ತವಾಗುತ್ತದೆ. ಈ ರೀತಿಯಲ್ಲಿ ಪರಮ ಪುರುಷನನ್ನು ಜೀವನನ್ನಾಗಿ ಮಾಡುವ ವರ್ಣಾಶ್ರಮಗಳನ್ನು ಮತ್ತೆ ಅವಲಂಬಿಸಿಕೊಂಡು ಜೀವನು ನಡೆಯುವುದಾದರೆ ಇವನು ಪರಮ ಪುರುಷನು ಹೇಗೆ ಆಗಬೇಕು ? ಹೀಗೆ ಉಪನಿಷತ್ತುಗಳಿಂದ ನೂರಾರು ಉದಾಹರಣೆಗಳನ್ನು ಕೊಡಬಹುದು. ಇದೆಲ್ಲವೂ ಹಾಗಿರಲಿ. ನಾಲ್ಕು ವರ್ಣಗಳ ವಿಧಿಯನ್ನೂ ಕಟ್ಟುಗಳನ್ನೂ ಹೇಳುವ ಮನುಸ್ಮೃತಿಯ ಗ್ರಂಥದಲ್ಲಿ ಪ್ರಾರಂಭದಿಂದ ವರ್ಣದ ಕಟ್ಟುಗಳು ಹೇಳಲ್ಪಟ್ಟು ಕೊನೆಯ ಅಧ್ಯಾಯದಲ್ಲಿ ಈ ವರ್ಣಾಶ್ರಮದ ಕಟ್ಟುಗಳು ಆತ್ಮಜ್ಞಾನಿಗೆ ಸಂಬಂಧಿಸುವುದಿಲ್ಲವೆಂದು ಹೇಳಿದ್ದಾರೆ. ವರ್ಣಾಶ್ರಮಗಳನ್ನು ಮೀರಿದ (ಅತಿವರ್ಣಾಶ್ರಮಿಯಾದ) ಆತ್ಮಜ್ಞಾನಿಗೆ ವರ್ಣಗಳ ನಿರ್ಬಂಧವು ಇರಕೂಡದೆಂದು ಸ್ಮೃತಿ ಗ್ರಂಥಕಾರರೇ ಹೇಳುತ್ತಿರುವಾಗ ಶ್ರೀ ನಾಗಣ್ಣನವರು ಆತ್ಮಜ್ಞಾನಿಯಾಗುವ ಸಾಧನ

ಗಳನ್ನು ಜನರಲ್ಲಿ ಬೀರಿ ಅವರನ್ನು ಧಾರ್ಮಿಕ ಮಟ್ಟದಲ್ಲಿ ಉನ್ನತಿಗೆ ತರುವುದನ್ನು ಬಿಟ್ಟು ಅಧೋಮಾರ್ಗಗಾಮಿಗಳಾಗಿ ಪುನಃ ಭವ ಭವಕ್ಕೆ ಬರುವ ವರ್ಣಾಶ್ರಮಗಳಿಗೆ ಸೇರಿಕೊಂಡು ನಡೆಯಿರಿ ಎಂದು ಬೋಧಿಸಿ ಭಗವಂತನ ಆಗ್ರಹಕ್ಕೆ ವರ್ಣಗಳನ್ನು ಬಿಟ್ಟವರು ಪಾತ್ರರಾಗುತ್ತಾರೆ. ಎಂದು ಹೆದರಿಸುತ್ತಿರುವರಲ್ಲಾ ! ಈ ಹೆದರಿಕೆ ಉಪನಿಷತ್‌ಕಾರರಿಗೆ ಸ್ಮೃತಿ ಗ್ರಂಥಕಾರರಿಗೆ ಇರಲಿಲ್ಲವೇನು ? ಹಾಗಿದ್ದರೆ ಅವರೇಕೆ ಬರೆಯಲಿಲ್ಲ ! ವರ್ಣಗಳು ಭ್ರಮಾತ್ಮಕಗಳೆಂದು ಏಕೆ ಬರೆದರು ? ಇವೆಲ್ಲ ಸಂಗತಿಗಳನ್ನು ಅವರು ಚೆನ್ನಾಗಿ ವಿಮರ್ಶಿಸಲಿ.

ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಿದ ಉತ್ತರ ಗೀತೆಯಲ್ಲಿ (ಮಹಾ ಭಾರತದಲ್ಲಿ ಇರುವುದು) ಈ ಶ್ಲೋಕವಿದೆ.

ಅಂಗುಷ್ಠ ಮಾತ್ರಃ ಪುರುಷಃ ಅಂಗುಷ್ಠಂಚ ಸಮಾಶ್ರಿತಃ
ತ್ಯಜೇದಜ್ಞಾನ ನಿರ್ಮಾಲ್ಯಂ ಸೋಹಂ ಭಾವೇನ ಪೂಜಯೇತ್

ಹೆಬ್ಬೆರಳಿನಷ್ಟಿರುವ ಪುರುಷನು (ಪುರೀಶತಿಶೇತೇ ಇತಿ ಪುರುಷಃ) ಕೈ ಹೆಬ್ಬೆರಳನ್ನು ಆಶ್ರಯಿಸಿಕೊಂಡು ತೋರುತ್ತಾನೆ (ಲಿಂಗ ರೂಪವಾಗಿ) ಅಜ್ಞಾನ ನಿರ್ಮಾಲ್ಯವನ್ನು ಬಿಟ್ಟು ಸೋಹಂಭಾವದಿಂದ ಪೂಜಿಸಬೇಕು. ೫೦೦೦ ವರ್ಷಗಳ ಹಿಂದೆ ಲಿಂಗ ಪೂಜೆಯಿತ್ತೆಂಬುದನ್ನು ಐತಿಹಾಸಿಕವಾಗಿ ನಾವು ಗ್ರಹಿಸಲಿಕ್ಕೆ ಬರುವಂತಿದೆ. ಆ ಲಿಂಗಪೂಜೆಯು ಸೋಹಂಭಾವದಿಂದ ನಡೆಯಿಸಲ್ಪಡಬೇಕು ಎಂದು ಹೇಳಿದ ಶ್ಲೋಕವಿದು. ಶಿವಶರಣರು ತಮ್ಮ ಇಷ್ಟಲಿಂಗವನ್ನು ಸೋಹಂಭಾವದಿಂದಲೇ ಪೂಜಿಸುತ್ತಾರೆ. ಇಂತಹ ರಹಸ್ಯವಾದ ಅಭಿಪ್ರಾಯಗಳಿಗೆ ಶ್ರೀ ನಾಗಣ್ಣನವರು ತಮ್ಮ ಗಮನವನ್ನೇಕೆ ಕೊಡುವುದಿಲ್ಲ ? (ಮುಂದುವರೆದುದು)

(ಸಂ. ೧೧೮-೧೧೯)

# ೨೦. Sayings of Basavanna

ಗ್ರಂಥಕರ್ತರು: ಮ. ರಾ. ವೆಂಕಟೇಶ ಅಯ್ಯಂಗಾರ್ M.A.
ಪ್ರಕಾಶಕರು: ವೀರಶೈವ ತರುಣ ಸಂಘದವರು, ಗದಗ
ಕ್ರಯ ೦-೮-೦ ಪುಟ ೬೪ ಕ್ರೌನ್ ೧/೮

ಇದನ್ನು ಗದುಗಿನ ವೀರಶೈವ ತರುಣ ಸಂಘದವರು ವಿಮರ್ಶೆಗಾಗಿ ಕಳುಹಿಸಿ ಇರುತ್ತಾರೆ. ಬಸವೇಶ್ವರ ಉದಾರ ತತ್ವಗಳು ಇಡೀ ಜಗತ್ತಿನ ಜನರಿಗೆ ತಿಳಿಯಬೇಕಾದುದು ಅತ್ಯವಶ್ಯಕವಾದ ಕೆಲಸ. ಇದಕ್ಕಾಗಿ ಅವುಗಳನ್ನು ಇಂಗ್ಲಿಷ್‌ನಲ್ಲಿ ಭಾಷಾಂತರಿಸುವುದೂ ಅವಶ್ಯಕ. ಏಕೆಂದರೆ ಇಂಗ್ಲಿಷ್ ಭಾಷೆಯು ಜಗತ್ತನ್ನೆಲ್ಲಾ ವ್ಯಾಪಿಸಿ ಇರುವುದರಿಂದ ಅದರಲ್ಲಿ ಬರೆದ ವಿಷಯಗಳು ಜಗತ್ತಿನ ಜನರೆಲ್ಲರಿಗೂ ತಿಳಿಯಲಿಕ್ಕೆ ಅನುಕೂಲವಾಗುತ್ತದೆ. ಇಂತಹ ಕೆಲಸವನ್ನು ಮಾಡಿದ ಮಾಸ್ತಿ ವೆಂಕಟೇಶಯ್ಯಂಗಾರರನ್ನು ಮಾಡಿಸಿದ ಗದುಗಿನ ವೀ. ತ. ಸಂಘದವರನ್ನೂ ಎಷ್ಟು ಶ್ಲಾಘಿಸಿದರೂ ತೀರದು. ಕನ್ನಡ ವಚನಗಳನ್ನು ಇಂಗ್ಲಿಷ್‌ನಲ್ಲಿ ರಚಿಸುವುದಕ್ಕೆ ಕೆಲವು ಮಟ್ಟಿಗೆ ಸಾಂಕೇತಿಕ ಪದಗಳಿಗೆ ತಕ್ಕ ಇಂಗ್ಲಿಷ್ ಪದಗಳನ್ನು ನಿರ್ಧರವಾಗಿ ತಿಳಿದುಕೊಂಡಿರಬೇಕಾಗುತ್ತದೆ. ಇದಕ್ಕಾಗಿ ವೀರಶೈವರು ಉಪಯೋಗಿಸುವ ಇತರರಲ್ಲಿ ಬಳಕೆಯಲ್ಲಿ ಇಲ್ಲದ ಕೆಲವು ಸಾಂಕೇತಿಕ ಪದಗಳಿಗೆ ಅವುಗಳ ನಿಜಾರ್ಥವನ್ನು ತಿಳಿದವರಾದ ಕೆಲವು ಮಹನೀಯರು ಒಂದು ಸಂಘವನ್ನು ಏರ್ಪಡಿಸಿಕೊಂಡು ಅದಕ್ಕೆ ತಕ್ಕ ಇಂಗ್ಲಿಷ್ ಪದಗಳನ್ನು ನಿರ್ಧರಿಸುವುದು ಮೇಲು. ಇಲ್ಲದಿದ್ದರೆ ವಚನ ಕರ್ತರ ನಿಜವಾದ ಅಭಿಪ್ರಾಯವು ಹೊರಬೀಳುವುದಿಲ್ಲ. ಈ ಪುಸ್ತಕದಲ್ಲಿಯೂ ಇಂತಹ ಕೊರತೆಗಳು ಕಂಡು ಬರುತ್ತಲಿವೆ.

ಉದಾ: ಪುಟ ೯, ವಚನ ೧೦ 'ಜಂಗಮಕ್ಕೆ ಸವೆಸುವಾತ ಆತ ಜಾಣನು' ಎಂಬ ವಾಕ್ಯಕ್ಕೆ "He is wire who servies the servants of God." ಎಂಬುದಾಗಿ ಭಾಷಾಂತರವು ಮಾಡಲ್ಪಟ್ಟಿದೆ. ಜಂಗಮ ಶಬ್ದಕ್ಕೆ "ಜಾನಂತ್ಯತಿಶಯಾದ್ ಯೇತು ಶಿವಂ ವಿಶ್ವಪ್ರಕಾಶಕಂ॥ ಸ್ವ ಸ್ವರೂಪತಯಾ ತೇತು ಜಂಗಮಾ ಇತಿ ಕೀರ್ತಿತಾಃ" ಎಂಬುದಾಗಿ ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲ್ಪಟ್ಟಿದೆ.

ಆ ಅರ್ಥಕ್ಕೂ ಇಲ್ಲಿ ಭಾಷಾಂತರಿಸಿ ಇರುವುದರ ಅರ್ಥಕ್ಕೂ ಬಹಳ ವ್ಯತ್ಯಾಸವಾಗುತ್ತದೆ.

ಪುಟ ೨೬ ವಚನ ೪೪ "ಎನಗಿಂತ ಕಿರಿಯರಿಲ್ಲ. ಶಿವ ಭಕ್ತರಿಗಿಂತ ಹಿರಿಯರಿಲ್ಲ" ಎಂಬ ವಾಕ್ಯಕ್ಕೆ "Smaller than I there in none. Greater tham your servants, there is none." ಹೀಗೆ ಭಾಷಾಂತರವು ಮಾಡಲ್ಪಟ್ಟಿದೆ.

ಇಲ್ಲಿ ಶಿವಭಕ್ತ ಎಂದರೆ ನಿಮ್ಮ Servant (ಸೇವಕ) ಎಂದು ಹೇಳಿದುದು ಸರಿಯಾದರೆ ಈ ಮೊದಲು ತೋರಿಸಿದ ವಚನದ ಪ್ರಕಾರ ಜಂಗಮವು ಶಿವಭಕ್ತರ (Servants) ಸೇವೆಯನ್ನು ಮಾಡುವವನು ಎಂಬ ಅರ್ಥವಾಗುತ್ತದೆ. (ಪುಟ ೨೭, ವಚನ ೪೬)

"ಆನು ಭಕ್ತನಲ್ಲಯ್ಯಾ ಎಂಬ ವಾಕ್ಯಕ್ಕೆ No devotee own I" ಎಂದು ಭಾಷಾಂತರಿಸಲ್ಪಟ್ಟಿದೆ. ಇಲ್ಲಿ ಭಕ್ತ ಎಂಬುದಕ್ಕೆ Devotee ಎಂಬ ಪದವೂ, ಅಲ್ಲಿ Servant ಎಂಬ ಪದವೂ ಉಪಯೋಗಿಸಲ್ಪಟ್ಟಿದೆ. (ಪುಟ ೨೯ ವಚನ ೫೦.)

"ನಿಮ್ಮ ಶರಣರಿಗಲ್ಲದೆ ಮತ್ತೊಂದವನರಿಯೆ" ಎಂಬ ವಾಕ್ಯವು "Except for the use of your Servants I dexise motting" ಎಂದು ಭಾಷಾಂತರ ಮಾಡಲ್ಪಟ್ಟಿದೆ. ಇಲ್ಲಿ ಶರಣ ಎಂಬುದಕ್ಕೆ Servant ಪದ ಉಪಯೋಗವಾಗಿದೆ. ಭಕ್ತ, ಶರಣ, ಜಂಗಮ, ಇವರಿಗೆ, ಬೇರೆ ಬೇರೆ ಅರ್ಥದಲ್ಲಿ ತಿಳಿಯುವ ಯೋಜನೆಯು ವೀರಶೈವರಿಗೆ ಇರುವಲ್ಲಿ ಎಲ್ಲಕ್ಕೂ "Servant" ಎಂದು ಭಾಷಾಂತರಿಸಿದರೆ ನಿಜವಾದ ಅಭಿಪ್ರಾಯವು ಹೊರಬೀಳದು. ಏನೇ ಆಗಲಿ, ಬಹುಕಾಲದಿಂದಲೂ ಇಂಗ್ಲೀಷಿನಲ್ಲಿ ಶರಣರ ವಚನಗಳನ್ನು ನೋಡಬೇಕೆಂಬ ವೀರಶೈವರ ಬಯಕೆಯು ಈಗ ಸ್ವಲ್ಪಮಟ್ಟಿಗೆ ಸಿದ್ಧಸ್ಥಿತಿಗೆ ಬಂದುದನ್ನು ನೋಡಿ ಬಹಳ ಸಂತೋಷಿಸಬೇಕಾಗಿದೆ. ಇದರಲ್ಲಿ ಬಸವೇಶ್ವರನ ೧೦೦ ವಚನಗಳು ಭಾಷಾಂತರಿಸಲ್ಪಟ್ಟಿದೆ. ಸಕ್ಕರೆಯ ಯಾವ ಭಾಗವನ್ನು ತಿಂದರೂ ಸಿಹಿ ಎಂಬುವಂತೆ ಬಸವೇಶ್ವರನ ವಚನವು ಹೇಗೆ ಭಾಷಾಂತರಿಸಲ್ಪಟ್ಟರೂ ಮಾನವ ಕೋಟಿಗೆ ಉದ್ಧಾರಕವಾದುದು. ಇಂಗ್ಲಿಷ್ ಬಲ್ಲವರು ಈ ಗ್ರಂಥವನ್ನು ಕೊಂಡು ಕೊಂಡು ಇದರ ಪ್ರಯೋಜನವನ್ನು ಪಡೆಯಬೇಕೆಂದು ಪ್ರಾರ್ಥನೆ. ಬೆಲೆಯು ಸಾಮಾನ್ಯವಾಗಿ ಇಂಗ್ಲಿಷ್ ಪುಸ್ತಕಗಳಿಗೆ ಹೆಚ್ಚು ಇರುವಂತೆ ಇದಕ್ಕೆ ಇಲ್ಲ. ಇದನ್ನು ಇಂಗ್ಲಿಷ್ ಬಲ್ಲ ವೀರಶೈವರು ಅತ್ಯವಶ್ಯಕವಾಗಿ ಗ್ರಹಿಸಬೇಕು.

(ಸಂ. ೩೫, ೩೬, ೩೭.)

## ೨೧. Lingayat Movement

(ಲಿಂಗಾಯತರ ಚಳುವಳಿ) ಎಂಬ ಒಂದು ಪುಸ್ತಕವನ್ನು ಇಂಗ್ಲೀಷ್ ಭಾಷೆಯಲ್ಲಿ ಶ್ರೀಯುತ ಎಸ್. ಎಂ. ಹುಣಶ್ಯಾಳ್ ಎಂಬವರು ರಚಿಸಿರುತ್ತಾರೆ. ಇವಕ್ಕೆ ಡಾಕ್ಟರ್ ಸಿ. ರಾಮಲಿಂಗ ರೆಡ್ಡಿಯವರು ಮುನ್ನುಡಿಯನ್ನು ಬರೆದಿದ್ದಾರೆ. ಕರ್ಣಾಟಕ ಸಾಹಿತ್ಯ ಮಂದಿರ, ಧಾರವಾಡ ಇವರಿಂದ ಪ್ರಕಟವಾಗಿದೆ. ಐದು ರೂಪಾಯಿ ಇವರ ಬೆಲೆ.

ಈ ಪುಸ್ತಕವ ವಿಮರ್ಶೆಯು ಮದ್ರಾಸ್ ಹಿಂದೂ ಪತ್ರಿಕೆಯಲ್ಲಿ (೧೩-೬-೪೮) ಮಾಡಲ್ಪಟ್ಟಿದೆ.

ಹರಪ್ಪ ಮೊಹಂಜೋದಾರೋ ಪಟ್ಟಣಗಳಿದ್ದ ಕಾಲದಲ್ಲಿ ಸಿಂಧೂನದಿಯ ಕಣಿವೆಗಳಲ್ಲಿ ಪ್ರಚಲಿತವಾಗಿದ್ದ ಲಿಂಗಪೂಜಾ ಪದ್ಧತಿಯು ವೇದ ದರ್ಶನಕಾರರ ಕಾಲದಲ್ಲಿ ಪ್ರೀತಿ ಪಾತ್ರವಾಗಿರಲಿಲ್ಲವಾದರೂ ಕನ್ನಡ ದೇಶದಲ್ಲಿ ಕ್ರಿ. ಶ. ೧೨ನೆಯ ಶತಮಾನದಲ್ಲಿ ರಾಜ್ಯಾಪಹಾರಿಯಾದ ಕಲಚೂರಿ ಬಿಜ್ಜಳನ ಮಂತ್ರಿ ಬ್ರಾಹ್ಮಣನಾದ ಬಸವನಿಂದ ಪುನಃ ಜೀವಿಸಲ್ಪಟ್ಟಿತು. ಅವನ ಅನುಯಾಯಿಗಳು ಲಿಂಗಾಯತರು ಅಥವಾ ವೀರಶೈವರು ಎಂದು ತಿಳಿಯಲ್ಪಡುತ್ತಾರೆ. ಬಸವನು ತನ್ನ ಮತವನ್ನು ಜೈನ ಬೌದ್ಧರ ಮತದವರಿಗೆ ತಮ್ಮ ಮತತ್ಯಾಗ ಮಾಡುವಂತೆ ಜನರಿಗೆ ಪ್ರೇರಿಸಿ ಪ್ರೀತಿಪಾತ್ರರಾಗಿರುವಂತೆ ಮಾಡಿದನು. ಮತ್ತು ಕನ್ನಡ ವಾಙ್ಮಯವನ್ನು ಬೆಳೆಸಿದನು. ಲಿಂಗಾಯತರ ಮತವು ಶಿವಲಿಂಗವನ್ನು ಪೂಜಿಸುವುದು, ವೇದವ ಪ್ರಾಮಾಣ್ಯದ ತಿರಸ್ಕಾರ, ಕರ್ಮವನ್ನಾಚರಿಸುವ ಸಿದ್ಧಾಂತ, ಬ್ರಾಹ್ಮಣರ ಪ್ರೀತಿಯಿಲ್ಲದಿರುವಿಕೆ ಮೊದಲಾದುವನ್ನು ಒಳಗೊಂಡಿದೆ. ಲಿಂಗಾಯತ ಮತದ ಭವಿಷ್ಯವನ್ನು ವಿಮರ್ಶಿಸುತ್ತಾ ಗ್ರಂಥಕರ್ತರು ಹೀಗೆ ಹೇಳುತ್ತಾರೆ.—ಬಸವೇಶ್ವರನು ಈಗ ಬದುಕಿದ್ದರೆ ಒಬ್ಬ ಮಾರ್ಕ್ಸ್ ಅಥವಾ ಒಬ್ಬ ರಾಯ್ ಆಗಿ ಕೆಲಸ ಮಾಡುತ್ತಿದ್ದನು. (ಪುಟ ೨೫೩) ಅವನ ಶಾಸ್ತ್ರದ ಆಚರಣೆಯು ತೂಕವು ಜಗನ್ಮಾನ್ಯವಾದ ಹೊಸ ರೀತಿಯು ಸಮಾಜವನ್ನು ಮಾಡುತ್ತಿದ್ದಿತು. ಇದಲ್ಲದೆ ಮೊದಲಿನ ಜಾಗತಿಕ ಯುದ್ಧವಾದ ಮೇಲೆ ಜರ್ಮನ ಪಂಡಿತನಾದ ಜಾರ್ಜ್ ಗ್ರಿಮ್ ಎಂಬುವನು ಬುದ್ಧಮತವು ಅದರ ಮೂಲರೂಪವಲ್ಲಿ ಜಗತ್ತಿನ ಎಲ್ಲ ದೈವಿಕ ಬೋಧೆಯ ಕೊರತೆ (ದುಃಖ)ಗಳಿಗೆ ಗುಣಕಾರಿಯಾದುದು ಇದೊಂದೇ ಆಗಿದ್ದಿತು. ಎಂದಿದ್ದನು. ಹೆಚ್. ಜಿ. ವೆಲ್ಸ್ ಎಂಬುವನು ಬುದ್ಧನ ಬೋಧೆಯನ್ನು ಶುದ್ಧಗೊಳಿಸಿದರೆ ಜನರ ಅದೃಷ್ಟದ ಬೋಧೆಯು ದೊಡ್ಡ ಭಾಗವಾಗಿ ಆಚರಿಸಲ್ಪಡುತ್ತಿದ್ದಿತು. ಜಗತ್ತಿನ ಮತವು ಒಂದೇ ಆಗುವುದು ಸಾಧ್ಯವಾದರೆ ಹೀನಯಾನ ಎಂಬುದನ್ನು—ಅದರ ಪರಿಶುದ್ಧ ರೀತಿಯಲ್ಲಿ ತಿರಸ್ಕರಿಸುವಂತಿಲ್ಲ, ಎಂದು ಹೇಳಿದ್ದಾನೆ.

ಶ್ರೀ ಹುಣಶ್ಯಾಳ್‌ರು ಜ್ಞಾನದಾಯಕವಾದ ಮತ್ತು ಪ್ರಯೋಜನವುಳ್ಳ ತಮ್ಮ ಪುಸ್ತಕದಲ್ಲಿ ಲಿಂಗಾಯತ ಮತದ ಬಹು ವಿಷಯಗಳನ್ನು ಗ್ರಹಿಸಿ ಸರಿನೋಡಿ ನಿಶ್ಚಯಿಸಿದ ವಿಚಾರವನ್ನು ಹೇಳಿರುತ್ತಾರೆ. ಆ ಮತದ ವೇದಾಂತ ಜ್ಞಾನ, ಬ್ರಹ್ಮ ವಿದ್ಯಾ, ನೈತಿಕ ವಿಷಯಗಳು, ಸಾಮಾಜಿಕ ಕ್ರಾಂತಿಕಾರಕವಾದ ಆಚರಣೆ, ಮಿತವ್ಯಯದ ದೃಶ್ಯ, ಮನಃಶಾಸ್ತ್ರ ಪ್ರವೃತ್ತಿ, ಇವು ಹೇಳಲ್ಪಟ್ಟಿವೆ. ಬಸವ ಮತ್ತು ಪ್ಲೇಟೋ ಮನೋಗತ ಸ್ಥಿತಿ ವಿಚಾರಗಳನ್ನು ಗ್ರಂಥಕರ್ತರು ಹೋಲಿಸಿದ್ದಾರೆ. ಮತ್ತು ಲಿಂಗಾಯತ ಮತವನ್ನು ಜೈನಮತ, ಬುದ್ಧಮತ, ಲೋಕಾಯತನಾದ, ವೈಷ್ಣವ ಮತ, ಗೀತೆಯೊಳಗಿನ ವೇದಾಂತ, ಇಸ್ಲಾಂಮತ. ಶೀಖ್‌ಮತ, ಕ್ರಿಸ್ತಮತ, ಪಾರಸಿಕ ಮತ, ಗಾಂಧಿಮತ, ಇವುಗಳೊಡನೆ ಹೋಲಿಸಿದ್ದಾರೆ. ಗಾಂಧೀಜಿಯವರು ಕ್ರಾಂತಿಕಾರರಲ್ಲ. ಹಿಂಬಾಲಿಸುವವರೆಂದು ಅಭಿಪ್ರಾಯಪಟ್ಟಿದ್ದಾರೆ. ಬಸವನು ಕ್ರಾಂತಿಕಾರಕನೂ ಪ್ರಗತಿಪರನೂ ಆಗಿದ್ದನು (ಪುಟ ೨೫೨) ಎಂದಿದ್ದಾರೆ. ಗಾಂಧಿಮತವನ್ನೂ ಅದರ ಬೋಧೆಯನ್ನೂ, ಭಗವದ್ಗೀತೆಯನ್ನೂ ಅವು ಜಾತಿ ಪದ್ಧತಿಯನ್ನು ಬೋಧಿಸುವುದರಿಂದ ತಳ್ಳಿಹಾಕಿದ್ದಾರೆ. ಆದರೆ ಗುಣಕರ್ಮ ವಿಭಾಗಶಃ ಎಂಬ ಪದಗಳ ಪ್ರಯೋಗವು ಜಾತಿಯ ಸಾರವನ್ನು ತಿಳಿಸುವ ಅಭಿಪ್ರಾಯ ಸೂಚಕವಾಗಿದೆ. ಮತ್ತು ಗ್ರಂಥಕರ್ತರು ಹೇಳುವುದೇನಂದರೆ—ಗಾಂಧೀಜಿಯು ಬಸವನಂತೆ ಧರ್ಮೋಜ್ಜೀವನವನ್ನು ಬೋಧಿಸಲಿಲ್ಲ. ಬಸವನು ಪ್ರಾಚೀನ ಮತವನ್ನೇ ಉದ್ಧರಿಸಿದ್ದಾನೆ. ಈ ಪುಸ್ತಕದಲ್ಲಿ ಅಶೋಕನು ಹಿಂದೂ ದೇಶದ ನೆಪೋಲಿಯನ್ ಎಂದು ವಿವರಿಸಿರುವುದು ವಿಪರೀತವಾಗಿದೆ.

ಈ ರೀತಿ 'ಹಿಂದೂ' ಪತ್ರಕರ್ತರ ವಿಮರ್ಶೆಯಾಗಿದೆ.

ಆ ಪುಸ್ತಕವನ್ನೂ ನೋಡಿದುದಾಯಿತು. ಅದರಲ್ಲಿ ೨೬ ಅಧ್ಯಾಯಗಳಿವೆ. ಆಂಧ್ರ ವಿಶ್ವವಿದ್ಯಾಲಯದ ಉಪಾಧ್ಯಕ್ಷರಾದ ಡಾ|| ಸಿ. ರಾಮಲಿಂಗಂ ರೆಡ್ಡಿಯವರ ಮುನ್ನುಡಿ ಮುಂತಾಗಿ XXI ಪುಟಗಳೊಡನೆ ೨೬೪ ಪುಟಗಳುಳ್ಳದ್ದಾಗಿದೆ. ಜಗದ್ಗುರು ಮೂರುಸಾವಿರಮಠ ೧೨ನೆಯ ಪ್ರಕಟನೆಯಾಗಿದೆ. ಧಾರವಾಡದ ಶ್ರೀ ಟಿ. ಡಿ. ಶಿವಲಿಂಗಯ್ಯನವರು ಕರ್ಣಾಟಕ ಸಾಹಿತ್ಯ ಮಂದಿರ, ಧಾರವಾಡ ಇವರು ಪ್ರಕಟನಕಾರರು. ಧಾರವಾಡದಲ್ಲಿ ಮರಾಠಾ ಕಾಲನಿಯಲ್ಲಿ ಇರುವ ಗ್ರಂಥಕರ್ತರಲ್ಲಿ ಈ ಪುಸ್ತಕಗಳು ದೊರೆಯುತ್ತವೆ.

ಈ ಪುಸ್ತಕವು ವೀರಶೈವರ ತತ್ತ್ವವನ್ನು ಯಥಾಸ್ಥಿತವಾಗಿ ತಿಳಿಸುತ್ತದೆ. ಬಸವೇಶ್ವರನ ಕಾಲದ ಈ ಸಮಾಜ ರಚನೆ, ಶರಣರಿಗೆ ಬಂದ ತೊಂದರೆಗಳು ಮುಂತಾದವು ವಿವರಿಸಲ್ಪಟ್ಟಿವೆ. ಶಿವಶರಣರ ವಚನಗಳು ಉದಾಹರಿಸಲ್ಪಟ್ಟಿವೆ. ೧೪೮ ನೆಯ ಪುಟದಲ್ಲಿ "Basava's revolt too failed. For sufficient propaganda was not undertaken to organise and mobilise the masses on the country-wide Scale. Besides the leaders

had a very short time at their dishporal. Lastly, political lacking was lacking. Hence the movement was too young to stem the tide of orthodoxy''— ಹೀಗೆ ಹೇಳಲ್ಪಟ್ಟಿದೆ ಇಷ್ಟು ತೊಂದರೆಯಿದ್ದರೂ ಇದು ಬೇರೂರಿ ನಿಂತಿರುವುದಕ್ಕೆ ಒದಗಿದ ಅನುಕೂಲಗಳನ್ನು ತೋರಿಸಬೇಕಾಗಿತ್ತು. ಒಟ್ಟಿನಲ್ಲಿ ಈ ಪುಸ್ತಕವನ್ನು ಇಂಗ್ಲೀಷ್ ಬಲ್ಲ ವೀರಶೈವ ತರುಣರು ಅವಶ್ಯಕವಾಗಿ ಓವತಕ್ಕದು. ವೀರಶೈವವು ಜಾಗತಿಕ ಮತ ಅಥವಾ ವ್ರತವಾಗಿರುವುದರಿಂದ ಸರ್ವರ ಗಮನವೂ ಈ ಪುಸ್ತಕವನ್ನು ಓದುವುದರ ಕಡೆಗೆ ಬೀಳಬೇಕೆಂದಿಷ್ಟೇ ಹೇಳಿ ಇಲ್ಲಿಗೆ ವಿರಮಿಸೋಣ.

ಈ ಪುಸ್ತಕವು ಇಂಗ್ಲಿಷ್‌ನ್ನು ಬಲ್ಲ ಗ್ರೇಟ್‌ಬ್ರಿಟನ್, ಜರ್ಮನಿ, ರಷ್ಯಾ, ಅಮೇರಿಕಾ, ಆಸ್ಟ್ರೇಲಿಯಾ ಮೊದಲಾದ ದೇಶಗಳಲ್ಲಿ ಹರಡುವಂತೆ ಮಾಡುವುದು ಪ್ರಚಾರಕರ ಕರ್ತವ್ಯ. ವೈದಿಕರಿಗೆ ವಿರುದ್ಧವಾದುದು ಲಿಂಗಾಯತ ಮತವು ಎಂದು ಹೇಳುವ ಬದಲಾಗಿ ವೈದಿಕರೂ ಅನುಸರಿಸತಕ್ಕ ವೇದಾಂತಮತವಾಗಿ ಇರುವುದಿದು ಎಂಬುದನ್ನು ತೋರಿಸಿದ್ದರೆ ಹಿಂದೂ ದೇಶವಲ್ಲಿಯೂ ಸರ್ವರಿಗೂ ಓದಲಿಕ್ಕೆ ಒಪ್ಪಿಗೆ ಯಾಗಿ ಇರುತ್ತಿದ್ದಿತು. ಹಿಂದೂ ದೇಶದ ಜನತೆಯು ಈ ಅಭಿಪ್ರಾಯವನ್ನಿಟ್ಟು ಕೊಂಡು ಓದುವುದು ಅವಶ್ಯಕವೆಂದು ಈಗಲೂ ನಾವು ಒತ್ತಿ ಹೇಳುತ್ತೇವೆ 'ಹಿಂದೂ' ಪತ್ರಕರ್ತರು "ಚಾತುರ್ವರ್ಣ್ಯಂಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ಎಂಬ ಭಗವದ್ಗೀತೆಯ ವಾಕ್ಯವು ಜಾತಿಗಳ ಸಾರವನ್ನು ಬೋಧಿಸುವುದಕ್ಕೆ ಎಂದು ಅಭಿಪ್ರಾಯ ಪಟ್ಟಿರುವುದು ಬರಿಯ ಸಮಾಧಾನ. ಜಾತಿಗಳು ಜನ್ಮದಿಂದಲೇ ಬಂದುವೆಂದು ಈಚಿಗೆ ಗ್ರಂಥಗಳು ಹುಟ್ಟಿ ಒಂದು ಜಾತಿಯವರು ಮತ್ತೊಂದು ಜಾತಿಯವರೊಡನೆ ಬಳಕೆ ಮಾಡದೆ ಇರುವುದು ಹಿಂದೂ ದೇಶದ ಪ್ರಗತಿಗೆ ದೊಡ್ಡ ತೊಂದರೆಯಾಗಿದೆ. ಗುಣಕರ್ಮದಲ್ಲಿ ಉತ್ತಮನಾದ ಒಬ್ಬ ಶೂದ್ರನನ್ನು ಬ್ರಾಹ್ಮಣ ಎಂದು ಈಗ ಯಾರೂ ಬ್ರಾಹ್ಮಣ ಸಂಸ್ಕಾರ ಕೊಡುತ್ತಿಲ್ಲ. ಈ ಭೇದ ಭಾವವು ಧಾರ್ಮಿಕವಾಗಿ ಈಗ ಅಳಿಯಲೇಬೇಕಾಗಿದೆ. (ಸಂ. ೭೨-೭೩)

# ೨೨. ಶಾಕುಂತಲ ನಾಟಕ

ಶ್ರೀ ವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿ ಧಾರವಾಡ ಇವರ ಪರವಾಗಿ ಮ॥ ರಾ॥ ವೆಂಕಟೇಶ ರಾಮಚಂದ್ರ, ನಗರ ಎಂಬುವವರು ಶ್ರೀ ವಿದ್ಯಾರಣ್ಯ ಗ್ರಂಥ ಮಾಲೆಯ ೧ನೇಯ ಗ್ರಂಥವಾದ ಚುರಮರಿಕೃತ ಶಾಕುಂತಲ ನಾಟಕವನ್ನು ವಿಮರ್ಶೆಗಾಗಿ ಕೊಟ್ಟಿರುತ್ತಾರೆ. ಈ ಗ್ರಂಥವನ್ನು ಸಂಸ್ಕೃತದಿಂದ ಕನ್ನಡಕ್ಕೆ ಚುರಮರಿ ಶೇಷಗಿರಿರಾಯರು ಎಂಬುವವರು ರಚಿಸಿ ಇದನ್ನು ಕ್ರಿ. ಶ. ೧೮೬೯-೭೦ನೆಯ ಶುಕ್ಲ ಸಂವತ್ಸರದ ಪುಷ್ಯ ಬ. ೪ ಶುಕ್ರವಾರದ ದಿನ ಪೂರ್ತಿ ಮಾಡಿದರೆಂದು ಇದರ ಈಗಿನ ಮುನ್ನುಡಿಯಿಂದ ತಿಳಿದುಬರುತ್ತದೆ. ಇದು ೧೯೪ ಪುಟಗಳುಳ್ಳದ್ದಾಗಿದೆ. ನಾಲ್ಕನೆಯ ಮುದ್ರಣದ ಬೆಲೆ ಒಂದು ರೂಪಾಯಿ.

ಇದರಲ್ಲಿ ಈಗ ಗ್ರಂಥದ ಮತ್ತು ಶೇಷಗಿರಿರಾಯರ ಕಿಂಚಿತ್ ಪರಿಚಯ ಎಂಬ ಮುಂಭಾಗದ ಲೇಖನದಲ್ಲಿ "ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರಾಗಿದ್ದ ಸ್ವರ್ಗಸ್ಥರಾದ ಬಿ. ಕೃಷ್ಣಪ್ಪ ಎಂ.ಎ. ಇವರು ಹೊಸಗನ್ನಡದ ಗದ್ಯದಲ್ಲಿ ಶಾಕುಂತಲವನ್ನು ಭಾಷಾಂತರಿಸಿ ಕಾಲಿದಾಸ ಕೃತಿಯ ಯಥಾರ್ಥ ಭಾವವನ್ನು ಕನ್ನಡಿಗರಿಗೆ ಸುಲಭವಾಗಿ ತಿಳುಹಿಸಿಕೊಡುವ ಅನುಗ್ರಹ ಮಾಡಿರುತ್ತಾರೆ. ಸ್ವ॥ ಬಸವಪ್ಪ ಶಾಸ್ತ್ರಿಗಳು ಹಾಗು ಸ್ವ॥ ಬಿ. ಕೃಷ್ಣಪ್ಪನವರ ಭಾಷಾಂತರಗಳಲ್ಲಿ ಮೂಲವನ್ನು ಪ್ರತಿಕೃತಿಯಲ್ಲಿ ಇದ್ದಕ್ಕಿದ್ದಂತೆಯೇ ಆದರೂ ಸೊಗಸಾಗಿ ಸುಂದರವಾಗಿ ಸುಮನೋಹರವಾಗಿ ಒಡಮೂಡಿಸಿ ಕೊಡಬಲ್ಲ ಛಾಯಾ ಚಿತ್ರಕಾರನ (Photographer) ಕಲಾಭಿಜ್ಞತೆಯೂ ನೈಪುಣ್ಯ ವಿಶೇಷವೂ ಕಂಡುಬರುತ್ತವೆ. ಸ್ವ॥ ಚುರಮರಿಯವರ ಭಾಷಾಂತರದ ಕ್ರಮವು ಇವುಗಳಿಂದ ಭಿನ್ನವಾಗಿದೆ. ಮೂಲ ಶಾಕುಂತಲದಲ್ಲಿರುವ ಅಗಾಧವಾದ ಕಲ್ಪನಾ ಚಮತ್ಕೃತಿ, ಅಸದೃಶವಾದ ವರ್ಣನ ಚಾತುರ್ಯ, ಅನನ್ಯಸಾಧಾರಣವಾದ ಅಲಂಕಾರ ನಿಯೋಜನೆ ಮೊದಲಾದ ಕಾಲಿದಾಸನ ಕಲಾ ವೈಶಿಷ್ಟ್ಯಗಳನ್ನು ಅಚ್ಚಗನ್ನಡತನದ ಮೂಸೆಯಲ್ಲಿ ಎರಕಹೊಯ್ಯುವಾಗ ಸ್ವ॥ ಶೇಷಗಿರಿರಾಯರು ತಮಗೆ ನಿಸರ್ಗಸಿದ್ಧವಾದ ಕವಿತ್ವ ಪ್ರತಿಭೆಯ ಪ್ರಭಾವದಿಂದ ಚೆನ್ನಾಗಿ ವಿಕಾಸಗೊಳಿಸಿ ಮೂಲಕೃತಿಯ ಅಂದ ಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿದ್ದಾರೆ. ಕಾಲಿದಾಸನ ಸೂತ್ರರೂಪವಾದ ಒಂದೆರಡು ಮಾತುಗಳನ್ನು ವಿಸ್ತಾರಗೊಳಿಸಿ ವಿಶದಪಡಿಸುವಾಗ ಕನ್ನಡ ಕವಿ ಕುಲದ ಕಲಾಭಿಸಂಧಾನಕ್ಕೆ ಒಪ್ಪುವ ತೆರನಾಗಿ ಭಾಷ್ಯಕಾರನ ಜಾಣ್ಮೆಯನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಇದು ಹೇಗೆಂಬುದನ್ನು ತೋರಿಸಿಕೊಡುವುದಕ್ಕಾಗಿ ಒಂದೆರಡು ಮಾದರಿಗಳನ್ನು ಇಲ್ಲಿ ಕೊಡುವುದು ಅಪ್ರಸ್ತುತವಾಗಲಾರದು."

ಎಂಬುದಾಗಿ ನಾಲ್ಕು ಉದಾಹರಣೆಗಳನ್ನು ಕೊಟ್ಟಿರುತ್ತಾರೆ. ಇವುಗಳಲ್ಲಿ ೧ನೆಯ ಉದಾಹರಣೆ–

ಗಚ್ಛತಿ ಪುರಃ ಶರೀರಂ ಧಾವತಿ ಪಶ್ಚಾತ್ ಅಸಂಸ್ತುತಂ ಚೇತಃ
ಚೀನಾಂಶುಕಮಿವ ಕೇತೋಃ ಪ್ರತಿವಾತಂ ನೀಯಮಾನಸ್ಯ ॥

ಎಂಬುದಕ್ಕೆ ಈ ಗ್ರಂಥದಲ್ಲಿ ಜೋಡಿಸಿರುವ ಪದವು ಕಾಲಿದಾಸ ಕವಿಯ ಅರ್ಥ ಗಾಂಭೀರ್ಯವನ್ನು ಮುಂದಕ್ಕೆ ತರಲಾರದು. ಎದುರುಗಾಳಿಯ ಹೊಡೆತದಿಂದ ಧ್ವಜದ ಬಟ್ಟೆಯು ಹಿಂದಕ್ಕೆ ಎಳೆಯುವಂತೆ ಶಕುಂತಲೆಯನ್ನು ಕಂಡ ದುಷ್ಯಂತನ ಮನಸ್ಸು ಹಿಂದಕ್ಕೆ ಓಡುವುದೆಂಬ ಕವಿಯ ಅಭಿಪ್ರಾಯಕ್ಕೆ "ಲಲಿತರೂಪದ ಸರದೊಳು ನೇತ್ರ ನಳಿನದಳದ ಮೋಹದ ಲತಾವಲಯದಿ ಸಿಲುಕಿ" ಎಂಬ ಉಪಮಾನವಿದೆ. ಇದರಲ್ಲಿ ಎದುರುಗಾಳಿಯ ಹೊಡೆತ ಎಂಬ ಲಕ್ಷಣವೇ ತೋರಿಸಲ್ಪಟ್ಟಿಲ್ಲ. ಚೀನಾಂಶುಕದ ಆಕಾರ ದಂತೆ ಇರುವ ಉಪಮಾನವು ಇರದೆ ಲತಾವಲಯ (ಬಳ್ಳಿಯ ಮಂಡಲ=ದುಂಡು) ಎಂಬುದು ಇದೆ. ಧ್ವಜಸ್ತಂಭವು ಮುಂದಕ್ಕೆ ತೆಗೆದುಕೊಂಡು ಹೋಗಲ್ಪಡುತ್ತಿದ್ದಾಗ್ಯೂ ಅದಕ್ಕೆ ಕಟ್ಟಿದ ನಿಶಾನಿಯು ಅದನ್ನು ಹಿಂದಕ್ಕೆ ಎಳೆಯುತ್ತಿರುತ್ತದೆ. ಶ್ರೀ ಕಾಲಿದಾಸನ ಕವಿತೆಯಲ್ಲಿ ದುಷ್ಯಂತನ ಶರೀರವು ಮುಂದಕ್ಕೆ ಹೋಗುವ ಮತ್ತು ನಿಶಾನೀ ಪಟದಂತೆ ಮನಸ್ಸು ಶರೀರದಲ್ಲಿದ್ದಾಗ್ಯೂ ಹಿಂದಕ್ಕೆ ಎಳೆಯುತ್ತಿರುವ ಉಪಮಾನೋಪಮೇಯಗಳು ರಮ್ಯವಾಗಿ ಇರುವವು. ಈ ರಮ್ಯತೆಯ ಉಪಮಾನೋಪಮೇಯುಗಳು ಶೇಷಗಿರಿ ರಾಯರ ಈ ಮೂಲ ಗ್ರಂಥದಲ್ಲಿ ಇಲ್ಲ.

ಮೂಲ ಸಂಸ್ಕೃತದ ಅಭಿಪ್ರಾಯವನ್ನೇ ಏನೂ ಬದಲಾವಣೆ ಮಾಡದೆ ಬಸವಪ್ಪ ಶಾಸ್ತ್ರಿಗಳು ತೋರಿಸಿ ಇರುತ್ತಾರೆ.

ಮುಂದಕ್ಕೆ ಪೋಪುದು ತನುವಿದು ।
ಪಿಂದೆಸೆಗೋಡುವದು ಒಳಕಿಗೆಯ್ಯದ ಮನವೇ ॥
ನೆಂದಪೆನೊ ಪವನನಿದಿರೊಳ್ ।
ತಂದ ಪತಾಕಿಕೆಯ ಜೀನವಸನವಿದೆಂಬೋಲ್ ॥

ಈ ಕಾಲದಲ್ಲಿ ಶ್ರೀ ಕಾಳಿದಾಸ ಕವಿಯ ಅಭಿಪ್ರಾಯವನ್ನು ಇದ್ದಕ್ಕಿದ್ದಂತೆ ಹೊರಗೆ ತರುವರು ಸಿಕ್ಕರೆ ಸಾಕಾಗಿದೆ. ಇಂತಹ ಕೆಲಸವನ್ನು ಮಾಡುವಲ್ಲಿ ಶಾಸ್ತ್ರಿಗಳು ಜಾಣ್ಮೆಯನ್ನು ಉಪಯೋಗಿಸಿ ಇರುತ್ತಾರೆ ಎಂದು ಈ ಲೇಖನಕಾರರೇ ಒಪ್ಪಿಕೊಂಡಿರು ತ್ತಾರೆ. ಆದರೆ ಶೇಷಗಿರಿರಾಯರು "ಸಂಸ್ಕೃತ ಕೃತಿಯ ಅಂದ ಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿದ್ದಾರೆ." ಎಂದು ಹೇಳುವ ವಿಷಯವು ಮಾತ್ರ ಅತಿ ವರ್ಣನೆಯೂ ಕಲ್ಪನೆಯೂ ಆಗಿರುತ್ತದೆ. ಎಂಬುದು ಈ ಉದಾಹರಣೆಯಿಂದ ತಿಳಿದು ಬರುತ್ತದೆ ಮಾತ್ರ. ೨ನೆಯ ಉದಾಹರಣೆಯಲ್ಲಿ–

ಸ್ತ್ರೀರತ್ನ ಸೃಷ್ಟಿರಪರಾ ಪ್ರತಿಭಾತಿ ಸಾಮೇ ।
ಧಾತುರ್ವಿಭುತ್ವಮನುಚಿಂತ್ಯ ವಪುಶ್ಚ ತಸ್ಯಾಃ ॥

ಇದಕ್ಕೆ ಬಸವಪ್ಪ ಶಾಸ್ತ್ರಿಗಳು
ಜಾಣಂ ಬ್ರಹ್ಮನ ಮತ್ತು ಮಾತೆಯೊಡಲಂ ನೋಡಲ್ಕದೇ ನೆಂದಪೆಂ ॥
ಕ್ಷೋಣೀ ಭಾಗದೆ ಬೇರೆ ತೋರ್ಕುಮೆನಗಾ ಸ್ತ್ರೀರತ್ನ ಸೃಷ್ಟಿ ಕ್ರಮಂ ॥
ಎಂದು ಭಾಷಾಂತರಿಸಿದ್ದಾರೆ.

ಇದರಲ್ಲಿ ಸ್ತ್ರೀರತ್ನದ ಸೃಷ್ಟಿಯು ಬೇರೆ ಎಂದರೆ ಈಕೆಯು ವಿಶೇಷ ಸ್ತ್ರೀ ಎಂದು ಹೇಳಿದುದಕ್ಕೆ ಶೇಷಗಿರಿರಾಯರು ಸಹನಗೊಳ್ಳದೆ–

"ಇಂದಿರಾ ರೂಪವ ಚಂದದಿ ಕಲಿತವ
ಳಂದದೊಳಿಸಿಹ ನಿಂದೀವರಾಕ್ಷಿಯು"

ಎಂದರೆ ಲಕ್ಷ್ಮಿಯಂತೆ ಈಕೆ ಇದ್ದಾಳೆ ಎಂಬ ಒಂದು ಉಪಮೆಯನ್ನು ಜೋಡಿಸಿ ಇರುತ್ತಾರೆ. ಈ ಸ್ತ್ರೀರತ್ನದ ಸೃಷ್ಟಿಯೇ ಬೇರೆ ಎಂದು ಹೇಳುವ ಸೌಂದರ್ಯವು ಉಪಮೆಯನ್ನು ಹೇಳುವುದರಲ್ಲಿ ಬರಲಾರದು. ಅದು ಎರಡನೆಯ ಮಾದರಿ ಎಂಬು ದಾಗಿ ಅದರಲ್ಲಿ ಇರುವ ಗೌರವವು ಎಷ್ಟೋ ಕಡಿಮೆಯಾಗುವುದು.

'ಬಣ್ಣಿಸಲ್ ಹ್ಯಾಂಗಿನ್ನು' 'ಖಣಿಯನ್ನು' 'ಥೇನಿಸಿ' 'ಪ್ಯಾಲಿಳೆ' ಎಂಬ ಪದ ಗಳು ಇದರಲ್ಲಿ ಉಪಯೋಗವಾಗಿವೆ. ನಾಡಿನ ಜನಗಳಿಗೆ ನಾಡ ನುಡಿಯಲ್ಲಿ ರಸಾನು ಭವವನ್ನು ಉಂಟು ಮಾಡಿಕೊಡುವುದು ಸಾಹಿತ್ಯದ ಮುಖ್ಯ ಪ್ರಯೋಜನವಾಗಿದ್ದಾಗ್ಯೂ ರಸಜ್ಞರು ಒಪ್ಪುವಂತಹ ರಸಿಕತೆಯಲ್ಲಿ ಅದು ಇರಬೇಕೇ ಹೊರತು ಬರಿಯ ಗ್ರಾಮ್ಯ ಪದಗಳನ್ನು ತುಂಬುವಲ್ಲಿ ಆ ರಸಿಕತೆಯು ಬರಲಾರದು.

ಇನ್ನೂ ಈ ವಿಷಯದಲ್ಲಿ ಹೆಚ್ಚಾಗಿ ಬರೆಯಲಿಕ್ಕೆ ವಿಮರ್ಶೆಯು ದೊಡ್ಡದಾಗುವು ದೆಂದು ಇಲ್ಲಿಗೆ ನಿಲ್ಲಿಸಿ ಈ ಗ್ರಂಥದಲ್ಲಿ ಇರುವ ಪದಗಳ ಉಪಯೋಗವನ್ನು ನೋಡೋಣ.

೩ನೆಯ ಪುಟದಲ್ಲಿ 'ಕ್ರೀಡಿಂಗೆ' ೫ನೆಯ ಪುಟದಲ್ಲಿ "ಸೈಲ್‌ಬಟ್ಟಿರಲ್" ೧೨ನೆಯ ಪುಟದಲ್ಲಿ 'ವಪುಂ' ೧೪ನೆಯ ಪುಟದಲ್ಲಿ 'ಕೆಂದುಬಿಂಗಳ್' ಇಂತಹ ಉಪಯೋಗಗಳು ಹಳಗನ್ನಡ ವ್ಯಾಕರಣದಲ್ಲಿ ಇವೆಯೇ ಹೊಸಗನ್ನಡ ವ್ಯಾಕರಣದಲ್ಲಿ ಇವೆಯೇ ಎಂಬು ವನ್ನು ಹುಡುಕಿ ಹುಡುಕಿ ಈ ಪ್ರಯೋಗಗಳನ್ನು ಕಂಡು ಹಿಡಿಯುವುದೇ ಕಷ್ಟವಾಗಿದೆ. ಇನ್ನು ಮೇಲೆ ಇಂತಹ ಪ್ರಯೋಗಗಳಿಗಾಗಿ ವ್ಯಾಕರಣವು ಹುಟ್ಟಬೇಕಾಗಿದೆ. (ಮುಂದು ವರಿವುದು). (ಸಂ. ೪೧)

# ೨೩. ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ

ಸರಸ ಕವಿಗಳಾದ ಮ॥ ರಾ॥ ಅ. ನ. ಕೃಷ್ಣರಾಯರು ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ ಎಂಬೊಂದು ಗ್ರಂಥವನ್ನು ರಚಿಸಿರುವುದು ಸರಿಯಷ್ಟೆ. ಅದರ ಒಂದು ಪ್ರತಿಯನ್ನು ವಿಶ್ವಾಸಪೂರ್ವಕವಾಗಿ ಕಳುಹಿಸಿರುತ್ತಾರೆ. ಇದುವರೆಗೂ ಸದ್ಧರ್ಮ ದೀಪಿಕೆಯು ಪ್ರಕಟವಾಗದಿದ್ದುದರಿಂದ ಆ ಗ್ರಂಥದ ವಿಷಯವಾಗಿ ನಮ್ಮ ಅಭಿಪ್ರಾಯವನ್ನು ಕೊಡುವುದು ಸಾವಕಾಶವಾಗಿ ಈಗ ಪ್ರಕಟಿಸಬೇಕಾಗಿದೆ.

ವೀರಶೈವ ಸಾಹಿತ್ಯದ ವಿಷಯದಲ್ಲಿ ಬರೆಯುತ್ತಾ ಬಸವೇಶ್ವರನೇ ಮುಂತಾದವರ ವಚನಗಳು, ಹರಿಹರನ ಗಿರಿಜಾಕಲ್ಯಾಣ, ಮತ್ತು ಕೆಲವು ರಗಳೆಗಳು, ರಾಘವಾಂಕನ ಹರಿಶ್ಚಂದ್ರ ಕಾವ್ಯ ಮತ್ತು ಸಿದ್ಧರಾಮ ಚರಿತ್ರ, ಪುಲಿಗೆರೆಯ ಸೋಮನ ಸೋಮೇಶ್ವರ ಶತಕ, ಭೀಮಕವಿಯ ಬಸವಪುರಾಣ, ಪದ್ಮಣಾಂಕನ ಪದ್ಮರಾಜನ ಪುರಾಣ, ವಿಜಯನಗರ ಪ್ರೌಢ ದೇವರಾಯನ ಕಾಲದ ಕೆಲವು ವೀರಶೈವರ ಗ್ರಂಥಗಳು, ಶಂಕರ ಕವಿಯ ಚೋರ ಬಸವ ಚರಿತ್ರೆ, ಬೊಮ್ಮರಸನ ಸೌಂದರ ಪುರಾಣ ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣ, ಸುರಂಗಕವಿಯ ತ್ರಿಪುಷ್ಠಿಪುರಾತನರ ಚರಿತ್ರೆ (ಚಂಪೂಕಾವ್ಯ), ಗೂಳೂರು ಸಿದ್ಧವೀರಣಾರ್ಯನ ಶೂನ್ಯ ಸಂಪಾದನೆ, ಸಿಂಗಿರಾಜನ ಮಲ ಬಸವರಾಜ ಚರಿತ್ರ ಅಥವಾ ಸಿಂಗಿರಾಜಪುರಾಣ, ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿ ಮುಂತಾದ ಗ್ರಂಥಗಳು, ಮುಪ್ಪಿನ ಷಡಕ್ಷರಿಯ ವಚನ, ಗುಬ್ಬಿ ಮಲ್ಲಣಾರ್ಯನ ಭಾವಚಿಂತಾರತ್ನ ಮತ್ತು ವೀರಶೈವಾಮೃತ ಪುರಾಣ, ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಸಿದ್ಧಾನೃಶ್ಯ ಅಥವಾ ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಸರ್ವಜ್ಞನ ಜಾನಪದ ಕಾವ್ಯ, ಸಿದ್ಧನಂಜೇಶನ ರಾಘವಾಂಕ ಚರಿತ್ರೆ, ಷಡಕ್ಷರಿ ದೇವನ ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ ಮತ್ತು ಶಬರ ಶಂಕರ ವಿಳಾಸ, ಈ ಗ್ರಂಥಗಳ ಕೆಲವು ವಿಷಯಗಳನ್ನು ಸಂಕ್ಷಿಪ್ತ ರೀತಿಯಲ್ಲಿ ಆದರೆ ಅತಿಮಧುರವಾಗಿ ವಿವರಿಸಿ, ಓದುವವರಿಗೆ ಹೃದಯಂಗಮವಾಗುವಂತೆ, ಶಿವನ ಮತ್ತು ಶಿವಶರಣರ ಮಹಿಮೆಯನ್ನು ತಿಳಿದ ಆನಂದದಿಂದ ಸಂತೋಷದ ಕಣ್ಣೀರು ಬರುವಂತೆ ಮಾಡಿದ್ದಾರೆ. ಇದರ ಜೊತೆಯಲ್ಲಿ ಕೆಲವು ವೀರಶೈವ ಕವಿಗಳ ಹೆಸರನ್ನೂ ಅವರ ಗ್ರಂಥಗಳ ಹೆಸರನ್ನೂ ಉಳ್ಳ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ.

'ಹರಿಶ್ಚಂದ್ರ ಕಾವ್ಯ' ಎಂಬ ಭಾಗದಲ್ಲಿ ರಾಘವಾಂಕನ ಕವಿತ್ವದ ನೈಪುಣ್ಯತೆಯನ್ನು ವಿವರಿಸುತ್ತಾ ಓದುಗರಿಗೆ ಕಾವ್ಯರಸವು ಸೋಸುವಂತೆ ಮಾಡಿದ್ದಾರೆ. ಉಳಿದ ಭಾಗಗಳು ಈ ಮೊದಲೇ ಬೇರೆ ಬೇರೆ ಕಡೆಗಳಲ್ಲಿ ಪ್ರಕಟವಾಗಿರುವುದರಿಂದ ಅನೇಕ

ವಿಮರ್ಶಕರ ದೃಷ್ಟಿಗೆ ಅವು ಬಂದಿರಬೇಕೆಂದು ಭಾವಿಸಿ ಇಲ್ಲಿ ಬರೆಯಲಾಗಿಲ್ಲ. ವೀರಶೈವರೇ ಮಾಡಬೇಕಾಗಿದ್ದ ಈ ಕೆಲಸವನ್ನು ಅವರು ನಿರ್ಲಕ್ಷ್ಯರಾಗಿದ್ದಾರೆ. ಎಂಬ ಕಾರಣ ದಿಂದಲೋ ಅಥವಾ ಬೇರೊಂದು ರೂಪಕದಲ್ಲಿ ಓದುಗರ ಚಿತ್ತಾಕರ್ಷಣೆ ಮಾಡ ಬೇಕೆಂಬ ಕಾರಣದಿಂದಲೋ ಈ ಗ್ರಂಥಕರ್ತರು ಗ್ರಂಥವನ್ನು ರಚಿಸಿದುದು ವೀರಶೈವ ಮತದಲ್ಲಿನ ಇವರ ಅಭಿಮಾನವನ್ನು ವ್ಯಕ್ತಪಡಿಸುತ್ತದೆ. ಒಂದು ಕಡೆಯಲ್ಲಿ ಬಹಿರಂಗ ವಾಗಿ ಸಭೆಯಲ್ಲಿ ಭಾಷಣ ಮಾಡುವಾಗ ವಿಶ್ವಧರ್ಮವಾಗಿ ಮಾಡುವುದಕ್ಕೆ ವೀರಶೈವವು ೧೬ ಆಣೆ ಸರಿಯಾಗಿದೆ ಎಂದು ಇವರು ಹೇಳಿದುದು ಅಕ್ಷರಶಃ ನಿಜ ವಾಗಿರುವ ಸಂಗತಿಯಾಗಿದೆಯಲ್ಲದೆ ವೀರಶೈವ ಧರ್ಮಗ್ರಂಥಗಳ ವಿಶೇಷಾಭ್ಯಾಸವು ಇವರಿಗೆ ಆಗಿದೆ ಎಂಬುದನ್ನು ವ್ಯಕ್ತಪಡಿಸುತ್ತದೆ.

ಈ ಗ್ರಂಥವಲ್ಲಿ ಅಕ್ಕಮಹಾದೇವಿಯ ಆಧ್ಯಾತ್ಮಿಕ ಪ್ರಗತಿ ಎಂಬ ಭಾಗವಲ್ಲಿ 'ಉಮ್ಮರ್ ಖಯ್ಯಂ' ಮೊದಲಾದ ಸೂಫಿ ಕವಿಗಳ ಪುರೋಗಾಮಿಯಾದ 'ರಾಬಿಯಾ'ಳ ಕೆಲವು ವಾಕ್ಯಗಳನ್ನು ಉದಾಹರಿಸಿ ಮಹಾದೇವಿಯಕ್ಕನ ಪ್ರೇಮ ಕಲ್ಪನೆ 'ರಾಬಿಯಾ'ಳ ಕಲ್ಪನೆಯಂತೆ ನಿಷ್ಕಾಮದಿಂದ ಕೂಡಿತ್ತು ಎಂಬುದಾಗಿ ಹೋಲಿಸಿ ದೃಷ್ಟಾಂತವನ್ನೂ ತೋರಿಸುವುದಲ್ಲದೆ ಸೂಫಿ ಮತಕ್ಕೂ ವೀರಶೈವ ಮತಕ್ಕೂ ಇರುವ ತಾದಾತ್ಮ್ಯತೆ ಯನ್ನು ತೋರಿಸುವುದಕ್ಕಾಗಿ ಸೂಫಿ ಮತ ಎಂಬ ಒಂದು ಅನುಬಂಧವನ್ನೂ ಸೇರಿಸಿರುತ್ತಾರೆ.

ವೀರಶೈವರು ನಿರಾಕಾರ ವಸ್ತುವನ್ನೇ ಮಹಾದೇವ (God) ಎಂದು ತಿಳಿದಿರು ವಂತೆ ಮಹಮ್ಮದೀಯರೂ ತಿಳಿದಿರುವರಿಂದ ಈ ದೈವಿಕ ಜ್ಞಾನದಲ್ಲಿ ಎರಡು ಮತಗಳೂ ಹೋಲುತ್ತವೆ. ಆದರೆ ದೈವಿಕಾಚರಣೆಯಲ್ಲಿ ಇಬ್ಬರಿಗೂ ಭಿನ್ನತೆ ಇದೆ. 'ರಾಬಿಯಾ'ನ ಯಾರೋ ಕೇಳಿದರೆ ಆಕೆ ಹೇಳಿದ ಉತ್ತರದಲ್ಲಿ (ಇದೇ ಗ್ರಂಥ ಪುಟ ೧೪೩) "ಅವನು (ದೇವರು) ನಿನ್ನ ಕಡೆ ತಿರುಗಿದರೆ ನೀನು ಅನಂತರ ಅವನ ಕಡೆ ತಿರುಗುವೆ" ಎಂಬ ವಾಕ್ಯದಲ್ಲಿ 'ನೀನು ಅವನು' ಎಂಬ ಭಿನ್ನಭಾವವಿದೆ. 'ಅನಂತರ' ಎಂಬ ಕಾಲ ವ್ಯತ್ಯಾಸವಿದೆ. ಹೀಗೆ ದೇವನೂ ರಾಬಿಯಾನೂ ಭಿನ್ನರು. ಆದರೆ ದೇವನಿಗೆ ಚಿರ ಸೌಂದರ್ಯವನ್ನೂ ಅನುಗ್ರಹಿಸೆಂದು ಬೇಡುವವಳು. (ಅದೇ ಪುಟ) ಅಕ್ಕಮಹಾದೇವಿಯಾದರೋ ಹಾಗಲ್ಲ. "ಸಂಗವೆನ್ನೆ, ಸಮರಸವೆನ್ನೆ,... ನಾನೆನ್ನೆ, ನೀನೆನ್ನೆ, ಚನ್ನಮಲ್ಲಿಕಾರ್ಜುನನಲ್ಲಿ (ಮಹಾದೇವನಲ್ಲಿ) ಲಿಂಗೈಕ್ಯವಾದ ಬಳಿಕ ಏನೂ ಎನ್ನೆ. (ಇದೇ ಗ್ರಂಥ, ಪುಟ ೧೫೧) ಎಂದು ದೇವನ ಒಂದಾದ ಸಾಮರಸ್ಯದಾಚರಣೆ ಯುಳ್ಳವಳು. ಹೀಗಿರುವುದರಿಂದ ಸೂಫಿ ಮತವನ್ನು ವೀರಶೈವ ಮತಕ್ಕೆ ಸಂಪೂರ್ಣ ವಾಗಿ ಹೋಲಿಸುವುದು (ತಾದಾತ್ಮ್ಯಕ ಭಾವವಿಡುವುದು) ಅಂದವಾಗಿರದು. ಮಹಾ ದೇವಿಯಕ್ಕನು ಮಹಾದೇವನನ್ನು ಭಿನ್ನವಾಗಿ ತಿಳಿದ ವಚನಗಳು ಕಾಣಬರುವವಾದರೂ ಅಲ್ಲಿ ಸರ್ವವ್ಯಾಪಿ ಎಂಬ ಅರ್ಥವುಳ್ಳವುಗಳು (ಇದೇ ಗ್ರಂಥ ಪುಟ ೧೪೮) ಆದರೆ ಅಕ್ಕನ ಸಾಮರಸ್ಯದ ವಚನದಂತಹ ಒಂದು ವಚನವೂ 'ರಾಬಿಯಾ'ನಲ್ಲಿ ಇರಲಾರದು.

ಎರಡನೆಯದಾಗಿ ದೇವನನ್ನು ಹೆಂಗೂಸೆಂದು ಭಾವಿಸುವುದು ಯುಕ್ತವಲ್ಲ. ಹೆಂಗೂಸು ಎಂಬುದೇ ಶಕ್ತಿಯು. ಒಂದು ವಸ್ತುವಿನಲ್ಲಿರುವ ಶಕ್ತಿಯು ಆ ವಸ್ತುವಿಗಿಂತ ಮುಖ್ಯ ವಾದುದು ಎಂದು ಹೇಳುವುದಾದರೆ ಆಧುನಿಕ ಶಾಸ್ತ್ರವು (Science) ಅದನ್ನು ವಿರೋಧಿಸುತ್ತದೆ.

ಶಕ್ತಿಯನ್ನು ಪೂಜೆಮಾಡುವ ಶಾಕ್ತೇಯ ಮತವು ಹಿಂದೂ ದೇಶದಲ್ಲಿ ಈಗಲೂ ಇದ್ದೇ ಇದೆ. ಇವರಲ್ಲಿ ಶಕ್ತಿ ಎಂಬ ಹೆಣ್ಣಿಗೆ ಪೂಜಕನು ಗಂಡನೆಂಬ ಭಾವದಿಂದ ಪೂಜೆಯನ್ನು ಮಾಡುತ್ತಲಿಲ್ಲ. ಶಿವ, ಶಕ್ತಿ, ಈ ಎರಡು ಪೂಜ್ಯ ವಸ್ತುಗಳಲ್ಲಿ ಶಿವ ವನ್ನು ಆರಾಧಿಸುವ ಶೈವಮತವೇ ಶಾಕ್ತೇಯ ಮತಕ್ಕಿಂತಲೂ ಉತ್ತಮವಾದುದೆಂದು ಶಾಕ್ತೇಯ ಮತದ ಗ್ರಂಥಗಳಲ್ಲಿಯೇ ಹೇಳಲ್ಪಟ್ಟಿದೆ. ಶಕ್ತಿ ವಿಶಿಷ್ಟನಾದ ಶಿವನನ್ನೇ ವೀರಶೈವರು ತಮ್ಮ ಅಧಿದೈವವಾಗಿ ಆಚರಿಸುವುದರಿಂದ ವೀರಶೈವ ಮತಕ್ಕೆ ಸೂಫಿ ಮತದ ಹೋಲಿಕೆ ಸರಿಬರುವುದಿಲ್ಲ.

ಒಟ್ಟಿನಲ್ಲಿ ಮ॥ ರಾ॥ ಅ. ನ. ಕೃಷ್ಣರಾಯರು ವೀರಶೈವರಿಗಾಗಿ ಮಾಡುತ್ತಿರುವ ಉಪಕಾರವು ಶ್ಲಾಘ್ಯವಾಗಿದೆ.

—ಪ್ರಕಾಶಕ
(ಸಂ. ೫೨)

## ೨೪. ತುಂಗಭದ್ರಾ

(ಎರಡನೆಯ ಮುದ್ರಣ)

---

ಇದೊಂದು ನಾಟಕ. ಇವನ್ನು ಬರೆದವರು ಶ್ರೀ ಹೆಚ್. ದೇವೀರಪ್ಪನವರು. ಪ್ರಕಾಶಕರು, ಶ್ರೀ ಗೌರಿಶಂಕರ ಬುಕ್ ಡಿಪೋ, ಮೈಸೂರು ಇವರು. ಈ ನಾಟಕವು ಪ್ರಸಿದ್ಧ ಕವಿಯಾದ ಹಂಪೆಯ ಹರೀಶ್ವರನಿಗಾಗಿಯೇ ಮುಖ್ಯವಾಗಿ ಬರೆಯಲ್ಪಟ್ಟುದು. ಹಂಪೆಯ ಶ್ರೀ ವಿರೂಪಾಕ್ಷ ದೇವಾಲಯದಲ್ಲಿ ಮಾಯಾದೇವಿ (ಮಹಾದೇವಿ), ಮತ್ತು ಮೋಹಿನಿ ಎಂಬುವರು ಶಿವದಾಸಿಯರು. ಇವರಿಬ್ಬರೂ ಕೂಡಿದುದು ಹಂಪೆಯಲ್ಲಿ ಹರಿಯುವ ತುಂಗಭದ್ರಾ ಎಂಬ ನದಿಗೆ ತುಂಗ ಮತ್ತು ಭದ್ರ ಎಂಬ ಸಾಮ್ಯವನ್ನು ತೋರಿಸುವುದಕ್ಕಾಗಿ ಈ ಹೆಸರು ಇಡಲ್ಪಟ್ಟಿದೆ. ಈ ನಾಟಕವನ್ನು ಅಭಿನಯಿಸಿದಾಗ ನೋಡುವವರ ದೃಷ್ಟಿಗೆ ಆನಂದವನ್ನುಂಟುಮಾಡುವಂತೆ ನಾಟಕವು ರಚಿತವಾಗಿದೆ. ಸುಮ್ಮನೆ ಓದುವವರಿಗೆ ಮನೋಹರವಾಗಿಯೂ ಇದೆ. ಉಪಲಭ್ಯ ಸಾಮಗ್ರಿಯಲ್ಲಿ ಹುದುಗಿರುವ ಚಾರಿತ್ರಾಂಶಗಳಿಗೆ ಹೆಚ್ಚು ಪ್ರಾಧಾನ್ಯವಿತ್ತು. ಅದೇ ಚೌಕಟ್ಟಿನೊಳಗೆ ಕೆಲವು ಸಣ್ಣ ಮಾರ್ಪಾಟುಗಳನ್ನು ಮಾಡಿಕೊಂಡಿರುವುದಾಗಿ ಲೇಖಕರು ತಿಳಿಸಿದ್ದಾರೆ. ಈ ನಾಟಕದಲ್ಲಿ ರಸಾವೇಶವು ಚೆನ್ನಾಗಿ ಮೂಡಿದೆ. ಈಗಿನ ಕಾಲದ ನಾಟಕಗಳಲ್ಲಿ ಲೌಕಿಕ ವಿಷಯಾತುರತೆಯ ಕಡೆಗೆ ಹೆಚ್ಚು ಗಮನಕೊಡಲ್ಪಟ್ಟಂತೆ ಈ ನಾಟಕವಿರುವುದಿಲ್ಲ. ವಿಷಯಗಳ ಕಡೆಗೆ ಮನಸ್ಸನ್ನೆಳೆದರೂ ಕೊನೆಗೆ ಧಾರ್ಮಿಕದಲ್ಲಿ ಪರಿಣಮಿಸುತ್ತದೆ. ಭಾರತೀಯ ಧರ್ಮವನ್ನು ಬೋಧಿಸತಕ್ಕ ನಾಟಕಗಳು ಮುಂದೆ ಬರುವುದಕ್ಕಾಗಿ ಈ ನಾಟಕವು ಆದರ್ಶವಾಗಿದೆ. ಇದು ಧಾರ್ಮಿಕ ನಾಟಕವೆಂದೇ ತಿಳಿಯಬೇಕಾಗಿದೆ. ಹರಿಹರನ ಐಕ್ಯವು ದೇವ ಸನ್ನಿಧಿಯಲ್ಲಿ ನಡೆದುದು ವಿಚಿತ್ರವಾಗಿಯೂ ಧರ್ಮ ನಿಷ್ಠಾಸಹಿತವಾಗಿಯೂ ಕಂಗೊಳಿಸುತ್ತಿದೆ. ಶ್ರೀ ಹರೀಶ್ವರ ಕವಿಯ ಜೊತೆಗೆ ಅವನ ಅಳಿಯ ಶ್ರೀ ರಾಘವಾಂಕನ ವಿಷಯವೂ ಅಲ್ಲಲ್ಲಿ ತೋರಿದೆ. ಕಾವ್ಯಗಳನ್ನು ಬರೆಯುವವರು ರಾಜಸಭೆಯಲ್ಲಿ ವಾದಿಸಿ ಗೆಲ್ಲಬೇಕೆಂಬುವವರು ಈ ನಾಟಕವನ್ನು ಓದುವುದು ಅತ್ಯವಶ್ಯಕವಾಗಿದೆ. ಈ ನಾಟಕದಲ್ಲಿ ೨೨ ತರಂಗಗಳಿವೆ. ಸಾಮಾನ್ಯವಾಗಿ ಎಳೆಂಟು ತರಂಗಗಳಲ್ಲಿ ಅನೇಕ ಸಂಸ್ಕೃತ ನಾಟಕಗಳು ಮುಗಿಯುತ್ತಿದ್ದರೂ ಇದರಲ್ಲಿ ತರಂಗಗಳು ಹೆಚ್ಚಾಗಿರುವುದು ಶೋಚನೀಯವಾಗಿಯೇ ಇದೆ. ಅಭಿನಯಿಸುವವರು ಹೆಚ್ಚು ತೆರೆಗಳನ್ನು ಉಪಯೋಗಿಸಬೇಕೆಂಬ ಶ್ರಮೆಯಿದ್ದರೂ ಆ ತೆರೆಗಳ ಮೂಲಕ ಆಗುವ ಧರ್ಮ ಬೋಧೆಯು ನೋಡುವವರಲ್ಲಿ ಮೂಡುವುದಕ್ಕೆ ಅನುಕೂಲವಾಗಿಯೇ ಇದೆ. ಇಂತಹ ನಾಟಕವನ್ನು ರಚಿಸಿದುದಕ್ಕಾಗಿ ಶ್ರೀ ದೇವೀರಪ್ಪನವರಿಗೆ ಅಭಿನಂದನೆಯನ್ನರ್ಪಿಸಬೇಕಾಗಿದೆ. ನಾಟಕಾಭಿಲಾಷಿಗಳು ಈ ನಾಟಕವನ್ನು ಓದುವುದು

ಅಭಿನಯಿಸುವುದು ಅತ್ಯವಶ್ಯಕವಾಗಿದೆ. ಈ ನಾಟಕದ ಲೇಖಕರಿಗೆ ಮಹಾದೇವನು ಇನ್ನೂ ಹೆಚ್ಚಾಗಿ ಸುಖ ಸಂತೋಷವನ್ನು ಉಂಟು ಮಾಡಲಿ ಎಂದು ಪ್ರಾರ್ಥಿಸುತ್ತೇನೆ. ಇದು ಈಗಾಗಲೇ ಎರಡನೆಯ ಮುದ್ರಣವನ್ನು ಕಂಡಿರುವುದು. ವಿಶ್ವವಿದ್ಯಾನಿಲಯದವರು ಇದನ್ನು ಪಠ್ಯಪುಸ್ತಕವಾಗಿ ನಿಯಮಿಸಿದುದೂ ಸಹ ಈ ಗ್ರಂಥದ ಪ್ರಯೋಜನವು ಜನಸಾಮಾನ್ಯಕ್ಕೆ ಗೋಚರವಾಗಿರುವುದರ ನಿದರ್ಶನವಾಗಿದೆ.

ಈ ಲೇಖಕರು ಬರೆದ ಕೃತಿಗಳಲ್ಲಿ ಸುವರ್ಣ ಸಂಪುಟ (ಸಣ್ಣ ಕಥೆಗಳು). ಹಳ್ಳಿಯ ಬದುಕು (ಕಾದಂಬರಿ), ಬೆಳುವಲದ ಮಡಿಲಲ್ಲಿ (ಕಾದಂಬರಿ), ಕಲಾಯೋಗಿ (ನಾಟಕ), ಇವುಗಳಿವೆ. ಕಿರೀಟಾಕಾರದ ೧೪೬ ಪುಟಗಳುಳ್ಳ ಈ ಪುಸ್ತಕದ ಬೆಲೆಯನ್ನು ಎರಡು ರೂಪಾಯಿ ಇಟ್ಟಿರುವುದು ಹೆಚ್ಚಿನದಲ್ಲ. ಈ ಪುಸ್ತಕವು ಪ್ರಕಾಶಕರಲ್ಲಿ ದೊರೆಯುತ್ತದೆ. (ಈ ನಾಟಕದ ಕಥಾಗರ್ಭವು ಆವಶ್ಯಕವಾಗಿ ಮೊದಲು ನೋಡಲ್ಪಡತಕ್ಕದ್ದಾಗಿದೆ.)

(ಸಂ. ೧೫೩)

# ೨೫. ಮದ್ದೂರಿನ ಶ್ರೀ ಎಂ. ಎಸ್. ಪುಟ್ಟಣ್ಣನವರ ಶೋಧನೆ

ಜೀವಜ್ಯೋತಿ ಆತ್ಮ ಅನುಭವರಾದ ಮಂಡ್ಯ ಡಿಸ್ಟ್ರಿಕ್ಟ್ ಮದ್ದೂರು ವಾಸಿಗಳಾದ ಶ್ರೀ ಎಂ. ಎಸ್. ಪುಟ್ಟಣ್ಣನವರು 'ವಿಚಾರ ತರಂಗ' ಎಂಬ ಒಂದು ಪುಸ್ತಕವನ್ನು ರಚಿಸಿರುತ್ತಾರೆ. ಶ್ರೀ ಗೌತಮ ಬುದ್ಧನು ಬಹಳಕಾಲ ತಪಸ್ಸುಮಾಡಿ ಕೆಲವು ವಿಷಯ ಗಳನ್ನು ಕಂಡುಹಿಡಿದು ಪ್ರಕಟಿಸಿದಂತೆ ಈ ಪುಟ್ಟಣ್ಣನವರು ಬಹಳ ವರ್ಷಗಳ ಕಾಲ ಯೋಚನೆಮಾಡಿ ಭಾರತದ ಅನೇಕ ಕಡೆಗಳಲ್ಲಿ ಸಂಚರಿಸಿ ಪ್ರಪಂಚದ ಕಷ್ಟಸುಖಗಳನ್ನು ದುಃಖಾನಂದಗಳನ್ನೂ ಅನುಭವಕ್ಕೆ ತಂದುಕೊಂಡು ಜನಸಾಮಾನ್ಯರಿಗೂ ತಮ್ಮ ಅನು ಭವವನ್ನು ವ್ಯಕ್ತಪಡಿಸಿ ಅವರ ಜೀವನವನ್ನು ಉನ್ನತಗೊಳಿಸಬೇಕೆಂಬ ಅಭಿಪ್ರಾಯ ದಿಂದ ಈ 'ವಿಚಾರ ತರಂಗ' ಪುಸ್ತಕವನ್ನು ರಚಿಸಿದಂತೆ ತಿಳಿಯಬರುತ್ತದೆ. ಸತ್ಯ ಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಇವರು ಈ ಪುಸ್ತಕದ ಪ್ರಕಾಶಕರು. (ಬೆಲೆ......) "ಕತೆಗಾರರ ಪುಸ್ತಕದಂತೆ ಈ ಗ್ರಂಥವು ರುಚಿಸುವುದಿಲ್ಲ. ಮುಕ್ತಿ ಮಾರ್ಗದವರಿಗೆ ಮಾತ್ರ ಪ್ರಯೋಜನವಿದೆ. ವಿಷಯುಗಳನ್ನು ಚರ್ಚಿಸುವವರಿಗೂ ಆಶ್ರಮದ ಮೆಂಬರುಗಳಿಗೂ ಅವಕಾಶವುಂಟು, ಪ್ರಶ್ನೆಗಳನ್ನು ಕಳುಹಿಸಿದವರಿಗೆ ಉತ್ತರ ಗಳನ್ನು ಕಳುಹಿಸಲಾಗುವುದು ಎಂದು ಗ್ರಂಥಕರ್ತರು ತಿಳಿಸಿದ್ದಾರೆ. (ರಟ್ಟಿನ ಕಡೆಯ ಪುಟ.)

'ಜೀವಚಿತ್ರಗಳ ನಿಜಸ್ವರೂಪ' ಎಂಬ ಶಿರೋಲೇಖದಿಂದ ಪುಸ್ತಕವು ಈ ಆರಂಭ ವಾಗುತ್ತದೆ. ಇವರ ಶೋಧನೆಯ ಅಂಶಗಳಲ್ಲಿ ಮುಖ್ಯವಾದುವುಗಳೆಂದು ಕಂಡು ಬಂದವುಗಳನ್ನು ಇಲ್ಲಿ ತೋರಿಸಲಾಗಿದೆ.

೧. ಮಾನವ ನಿರ್ಮಾಣಕರನ್ನು ಮರೆತು ವಿಶ್ವಕರ್ಮರ ಶಿಲಾಮೂರ್ತಿಗಳು ಪರಮಾತ್ಮನ ಸ್ವರೂಪವೆಂದು ಫಲ ಪುಷ್ಪಗಳಿಂದಲೂ ನಾನಾ ವಿಧವಾದ ಮಂತ್ರ ಗಳಿಂದಲೂ ಪ್ರಾರ್ಥಿಸುವುದು ನೋಡಿದರೆ ನಗುಬರುವಂಥಾಗಿದೆ. ಪ್ರಪಂಚವೆಂದು ಕರೆಯಲ್ಪಡುವ ಅಮೇರಿಕಾ ಹಿಂದೂಸ್ಥಾನ ಮುಂತಾದ ಅನೇಕ ಪ್ರದೇಶಗಳಲ್ಲಿ ಪರ ಮಾತ್ಮನೆಂದು ಕರೆಯಲ್ಪಡುವ ಜ್ಞಾನೇಶ್ವರನು ಒಬ್ಬನಲ್ಲದೆ ಪ್ರತಿಯೊಂದು ಜನಾಂಗ ದವರಿಗೂ ವಿವರ(ಭಿನ್ನ?)ವಾಗಿರುವುದುಂಟೇ? ಆಕಾಶದಲ್ಲಿರುವ ಸೂರ್ಯ ದೇವನು ಜಗತ್ತಿನ ಪ್ರಾಣಿ ವರ್ಗಕ್ಕೆ ಒಬ್ಬನಲ್ಲದೆ ಶಿಲಾಮೂರ್ತಿಯಂತೆ ವಿಶಾಲ(ಅನೇಕ?)ವಾಗಿರು ವುದೇ? ಯುಗಾಂತರಗಳಿಂದಲೂ ಮೂಢಾತ್ಮರಿಗೆ ಕಲ್ಪನೆಯಾಗಿರುವ ವಿಗ್ರಹವು ಕಾಡಿನಲ್ಲಿ ಕಲ್ಲಾಗಿ ಜಗತ್ತಿನ ವ್ಯವಹಾರವನ್ನು ಬಿಟ್ಟಿರುವ ಬಂಡೆಗಳಾಗಿವೆ. ಪಾತ್ರೆಗಳಿಗೆ ಉಪ

ಯೋಗಿಸಲ್ಪಡುವ ತಾಮ್ರ, ಹಿತ್ತಾಳೆ, ಬೆಳ್ಳಿ, ಬಂಗಾರಗಳೇ ಚಾಮುಂಡೇಶ್ವರಿ ಪಾರ್ವತಿ ಪರಮೇಶ್ವರ ಮುಂತಾದ ಸಹಸ್ರನಾಮರೂಪಗಳಾಗಿವೆ. ಮಾನವನು ತನಗೆ ಇರುವ ಬುದ್ಧಿಶಕ್ತಿಯಿಂದ ಜಗತ್ತಿನ ವಿಚಿತ್ರವನ್ನು ಪರ್ಯಾಲೋಚಿಸದೆ ಬಾಲಕರಂತೆ ಅವಿದ್ಯಾವಂತರಂತೆ ವರ್ತಿಸಿದರೆ ಪ್ರಯೋಜನವೇನು? ಶಿಲ್ಪಿಯ ಬೊಂಬೆಗಳಿಗೆ ಮಾನವ ಬೊಂಬೆಯು ಪ್ರೇಮಿಸುವುದು ನ್ಯಾಯ ಸೂಕ್ತವಾಗಿರುವುದೇ? ದೇವಾಲಯಗಳಲ್ಲಿ ಅಲಂಕಾರವಾಗಿರುವ ಶಿಲಾಮೂರ್ತಿಗಳಿಗೆ ಜೀವ ಆದಿ (ಅಂತ್ಯ?) ಪರ್ಯಂತರ ಪೂಜಿಸಿದರೆ ಜಡ ಮೂರ್ತಿಗಳಿಗೆ ವಿಚಿತ್ರ ಪೂಜೆಯು ತಿಳಿದುಬರುವುದೇ? (ಪುಟ ೭)

## ಈ ಅಂಶದ ವಿಮರ್ಶೆ

ಇವರು ಭಾರತೀಯ ಧರ್ಮ ಗ್ರಂಥಗಳನ್ನು ಓದುವುದರ ಕಡೆಗೆ ಲಕ್ಷ್ಯಕೊಡದೆ ತಾವೇ ಆಲೋಚಿಸಿ, ಆಲೋಚಿಸಿ ಕೊನೆಯಲ್ಲಿ ಈ ವಿಧವಾದ ತೀರ್ಮಾನಕ್ಕೆ ಬಂದಿರುವುದಕ್ಕಾಗಿ ಬಹಳ ಸಂತೋಷಪಡಬೇಕಾಗಿದೆ. ಭಾರತೀಯರು ಬಹಳವಾಗಿ ಅಜ್ಞತೆಯಲ್ಲಿ ಇದ್ದಾಗ ಅವರಿಗೆ ದೈವ ಭಾವನೆ (ದೇವನಿದ್ದಾನೆ ಎಂದು ಅರಿದಾಚರಿಸುವುದು) ಉಂಟಾಗಲೆಂದು ಮೂರ್ತಿ ಪೂಜೆಯನ್ನು ಏರ್ಪಡಿಸಿದರು– ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ– ಅಜ್ಞಾನಿಗಳ ಭಾವನೆಗಾಗಿ ಮೂರ್ತಿಗಳು ಕಲ್ಪಿಸಲ್ಪಟ್ಟಿವೆ– ಎಂದು ಮೂರ್ತಿಪೂಜೆಯ ಕಿರಿಯ ಭಾವವನ್ನು ಶ್ರೀ ಜಾಬಾಲದರ್ಶನೋಪಪತ್ತಿನಲ್ಲಿ ತೋರಿಸಿದ್ದಾರೆ. ಭಗವದ್ಗೀತೆ ಮತ್ತು ಮಹಾಭಾರತದಲ್ಲಿನ ಒಂದು ಭಾಗವಾದ ಉತ್ತರ ಗೀತೆಗಳಲ್ಲಿ ನಿರಾಕಾರನನ್ನು ಮನುಷ್ಯನು ತನ್ನ ಹೃದಯ ಮಧ್ಯದಲ್ಲಿ ಆಚರಿಸಬೇಕೇ ಹೊರತು ಪ್ರತಿಮೆಗಳ ಪೂಜೆಯಿಂದ ನಿರಾಕಾರನು ಸಿಕ್ಕುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಅನೇಕ ಉಪನಿಷತ್‌ಗಳಲ್ಲಿ ಮೂರ್ತಿ ಪೂಜೆಯ ಖಂಡನೆ ಇದೆ. ಸದ್ಧರ್ಮ ದೀಪಿಕೆ ಸಂಚಿಕೆ ೮೭–೮೮ ರಲ್ಲಿ ನಿರಾಕಾರನನ್ನು ಒಂದು ಸಾವಯವದ ಮೂರ್ತಿಯಲ್ಲಿ (ಕೈಕಾಲುಗಳುಳ್ಳದರಲ್ಲಿ) ಲೋಹ, ಕಲ್ಲು, ಕಟ್ಟಿಗೆ, ಮೊದಲಾದ ವಸ್ತುಗಳಲ್ಲಿ ಮಾಡಿದವುಗಳಲ್ಲಿ ಕಾಣಲಿಕ್ಕೆ ಆಗುವುದೇ ಇಲ್ಲ ಎಂಬ ವಿಷಯವು ವಿವರವಾಗಿ ಹೇಳಲ್ಪಟ್ಟಿದೆ. ಆತ್ಮ ಚೈತನ್ಯವು ಮೂರ್ತಿಗಳಲ್ಲಿ ಯಾವ ಸಂದರ್ಭದಿಂದಲೂ, ಯಾವ ಕಾರ್ಯದಿಂದಲೂ, ಯಾವ ಸಂಕಲ್ಪದಿಂದಲೂ ಇನ್ನಾವ ಸಾಧನದಿಂದಲೂ ಎಂದೆಂದೂ ಬರುವುದಿಲ್ಲ. ಮನುಷ್ಯನ ಹೃದಯದಲ್ಲಿನ ಅಂತರಾತ್ಮನ ನೆನಹು, ಜ್ಞಾನ, ಭಾವ ಇವುಗಳಿಂದ ಮಾತ್ರವೇ ಆ ಚೈತನ್ಯ ಕಲೆಯನ್ನು ಆಕರ್ಷಿಸಬಹುದಲ್ಲದೆ ಮತ್ತಾವ ವಿಧದಿಂದಲೂ ಸಾಧ್ಯವೇ ಇಲ್ಲ. ಇದು ಚೈತನ್ಯ ಕಲೆಯ ಅನುಭವಮಾಡಿಕೊಳ್ಳಲು ಹೋದವರಲ್ಲಿ ನಿಪುಣರಾದವರು ಹೇಳಿದ ಸಂಗತಿ. ನಿರಾಕಾರ ವಸ್ತುವಿನ ಜ್ಞಾನವು ಆಧುನಿಕ ಶಾಸ್ತ್ರದಿಂದ (Science) ಬೆಳೆದು ಬಂದಿರುವ ಈ ಕಾಲದಲ್ಲಿ ಪೂರ್ವಕಾಲದ ಅಜ್ಞತೆಯ ಭಾವನೆಯಲ್ಲಿಯೇ ಭಾರತವು ಇರುವುದು ಸರಿಯಲ್ಲ. ಬರಬರುತ್ತಾ ಮನುಷ್ಯನು ಲೌಕಿಕದಲ್ಲಿ ಹೆಚ್ಚಿನ ತಿಳುವಳಿಕೆಯನ್ನು ಹೊಂದಲು

ಪ್ರಯತ್ನಿಸುವಂತೆ ಧಾರ್ಮಿಕ ಸಂಬಂಧದ ತಿಳುವಳಿಕೆಯನ್ನೂ ಮುಂದುವರಿಸಿಕೊಂಡು ಭಾರತೀಯರೆಲ್ಲರೂ ಮೂರ್ತಿ ಪೂಜೆಯನ್ನು ಸಂಪೂರ್ಣವಾಗಿ ತ್ಯಾಜ್ಯಮಾಡುವುದೇ (ಬಿಟ್ಟು ಬಿಡುವುದೇ) ಅತ್ಯಂತ ಅವಶ್ಯಕ ಕಾರ್ಯವಾಗಿದೆ ನಿರಾಕಾರನಾದ ದೇವನೇ ಮುಖ್ಯನು, ಅವನು ಒಬ್ಬನೇ, ಅವನೇ ಮಹಾದೇವ ಎಂಬ ಜ್ಞಾನವು ಜನರಲ್ಲಿ ಹೆಚ್ಚಾಗಿ ಚೆನ್ನಾಗಿ ಮೂಡಬೇಕಾಗಿದೆ.

೨. ಬ್ರಹ್ಮ, ವಿಷ್ಣು, ಮಹೇಶ್ವರ ಮುಂತಾದ ಸಹಸ್ರ ನಾಮರೂಪಗಳನ್ನು ಕಲ್ಪಿಸಿ ಪ್ರಪಂಚದ ಮಹಾರಾಜರುಗಳಿಗೂ ಮಹಾಜನರಿಗೂ ಶ್ರೀ ಗುರು ಪೂಜ್ಯರು ಭ್ರಾಂತಿಯನ್ನು ಉಂಟು ಮಾಡುವುದರಲ್ಲಿ ಸಂಶಯವೇನು ? (ಪುಟ ೪)

## ವಿಮರ್ಶೆ

ಸಾವಿರಾರು ಮೂರ್ತಿಗಳ ಪೂಜೆಯು ಭಾರತದಲ್ಲಿ ಈಗ ಇರುವುದಕ್ಕಾಗಿ ಎಷ್ಟು ವಿಷಾದಪಟ್ಟರೂ ತೀರದು. ಪರಮೇಶ್ವರನು ಕೈಲಾಸದಲ್ಲಿ ಮಹಿಮೆಗಳನ್ನು ತೋರಿದನು. ವಿಷ್ಣುವು ವೈಕುಂಠದಲ್ಲಿ ಮಹಿಮೆಗಳನ್ನು ತೋರಿದನು. ಅವರ ಸ್ಮಾರಕವನ್ನು ನಾವು ಇಟ್ಟುಕೊಂಡಿರುವುದು ಒಳ್ಳೆಯದು. ವಿಕ್ಟೋರಿಯಾ ರಾಣಿಯು ಭಾರತದ ಚಕ್ರವರ್ತಿನಿಯಾಗಿ ಚನ್ನಾಗಿ ರಾಜ್ಯಭಾರ ಮಾಡಿದಳು. ಆಕೆಯ ಪ್ರತಿಮೆ ಗಳೂ ಕೆಲವು ಕಡೆಗಳಲ್ಲಿ ಇಡಲ್ಪಟ್ಟಿವೆ. ಆದರೆ ಆ ಪ್ರತಿಮೆಗಳನ್ನು ದೈವ ಭಾವನೆ ಯಲ್ಲಿ ಪೂಜಿಸಬೇಕೆಂದು ಇಂಗ್ಲೆಂಡಿನವರೇ ಏರ್ಪಡಿಸಿಲ್ಲ. ನಿರಾಕಾರನಾದ ದೇವನು ಆ ಪ್ರತಿಮೆಯಲ್ಲಿ ಇದ್ದಾನೆ ಎಂಬ ಭಾವನೆಯಲ್ಲಿ ಇಂಗ್ಲೆಂಡಿನವರಲ್ಲಿಯೇ ಇಲ್ಲ. ಆದರೆ ಭಾರತದಲ್ಲಿ ಮಾತ್ರ ದೈವ, ದೈವ ಎಂದು ಕಂಡ ಕಂಡದ್ದನೆಲ್ಲಾ ಪೂಜಿಸುತ್ತಾರೆ. ಇದು ಬಹಳ ಮೌಢ್ಯದ ಮಾತು. ಇಂತಹ ಮೌಢ್ಯವನ್ನು ತಿಳಿದೇ ಮಹನೀಯರಾದ ಗಾಂಧೀಜಿಯವರು ತಮ್ಮ ಪ್ರತಿಮೆಯನ್ನು ಮಾಡಿಸಬಾರದೆಂದು ತಾವಿದ್ದಾಗಲೇ ಹೇಳುತ್ತಿದ್ದರು. ಈಗಲಾದರೂ ಪ್ರತಿಮೆಗಳ ಪೂಜೆಯನ್ನು ಬಿಟ್ಟರೆ ತಮಗೆ ಒಳ್ಳೆಯದಾಗುವುದಿಲ್ಲವೆಂದು ಯಾರು ಭಾವಿಸಬಾರದು. ಮೂರ್ತಿ ಪೂಜೆ ಇಲ್ಲದಿರುವ ಇಂಗ್ಲೆಂಡ್ ಮುಂತಾದ ದೇಶಗಳಲ್ಲಿನ ಜನರಿಗೆ ಮಕ್ಕಳು ಆಗಿಲ್ಲವೇ ? ಐಶ್ವರ್ಯ ಇಲ್ಲವೇ ? ಆರೋಗ್ಯ ಇಲ್ಲವೇ ? ಭಾರತದಲ್ಲಿ ಇವುಗಳನ್ನು ಹೊಂದುವುದ ಕ್ಕಾಗಿಯೇ ಮೂರ್ತಿ ಪೂಜೆ ಮಾಡುತ್ತಾರೆ. ಆ ಪೂಜೆಯಿಂದಲೇ ತಮಗೆ ಅವು ದೊರಕಿದುವೆಂಬುದೊಂದು ಭ್ರಾಂತಿಯು ಇಲ್ಲಿನ ಜನರಿಗೆ ಬಹಳವಾಗಿ ಹತ್ತಿಕೊಂಡಿವೆ. ಇವರು ಮೂರ್ತಿ ಪೂಜೆ ಮಾಡುವುದಕ್ಕೆ ಹೋಗಿ ಕೆಲವು ಮೂರ್ತಿಗಳ ಮೇಲೆ ಆ ಗುಡಿಯ ಕಲ್ಲಿನ ಮೇಲೆ ಅಲ್ಲಿನ ಶಾಸನಗಳ ಮೇಲೆ ಎಣ್ಣೆಯನ್ನು ಸುರಿದು ಅವುಗಳನ್ನು ಮೊಬ್ಬುಮಾಡಿದ ಉದಾಹರಣೆಗಳೂ ಅನೇಕ ಇವೆ. ಹೀಗೆ ಮೊಬ್ಬಾದ ದೇವನು ಜನರಿಗೆ ಬೆಳಕನ್ನು ಕೊಡುತ್ತಾನೆ ಎಂದು ಈ ಮೂಢರು ಏಕೆ ನಂಬುವರು ತಿಳಿಯ ದಾಗಿದೆ. ಒಂದು ಇಲಿಯು ಆ ಮೂರ್ತಿಯನ್ನು ಕಂಡರೆ ಹೆದರದೆ ತನ್ನ ಮಲ

ಮೂತ್ರವಿಸರ್ಜನೆಯನ್ನು ಅಲ್ಲಿ ಮಾಡುತ್ತಿರುವಾಗ ಆ ಮೂರ್ತಿಯೂ ಅದಕ್ಕೆ ಅಂಜಿಕೆಯನ್ನುಂಟು ಮಾಡದಿರುವಾಗ ಮನುಷ್ಯನು ಮಾತ್ರ ಅದಕ್ಕೆ ಹೆದರಿ ನಡೆಯುವುದರಲ್ಲಿ ಆ ಮನುಷ್ಯನ ದಡ್ಡತನವು ಎಷ್ಟಿರುವುದೆಂಬುದನ್ನು ಈಗಲಾದರೂ ಭಾರತವು ಕಂಡುಕೊಂಡು ಎಚ್ಚರದಿಂದಿರುವುದು ಬಹಳ ಉತ್ತಮವಾದ ಧಾರ್ಮಿಕ ಕಾರ್ಯವಾಗಿದೆ.

೩. ಈಗಿನ ? ತ್ರಿಮೂರ್ತಿಗಳೆಂದು ಕರೆಯಲ್ಪಡುವ ಬ್ರಹ್ಮ ಜ್ಞಾನ, ವೇದಾಂತ ರಹಸ್ಯ (ವೇದಾಂತಿ ?) ಪಾರಮಾರ್ಥಿಕರಿಗೆ (ಜಗತ್ತು ಮಿಥ್ಯೆ ಎಂಬುವನು ?) ಜಗತ್ತಿನ ವಿಚಿತ್ರಗಳು ತೋರಿ ಬಂದರೂ ಸರೋವರದಲ್ಲಿ ಪ್ರಕಾಶವಾದ ತಾವರೆ ಎಲೆಗೆ ನೀರು ಅಂಟದೇ ಇರುವ ಪ್ರಕಾರ (ಈ ?) ತ್ರಿಮೂರ್ತಿಗಳಿಗೆ ಪ್ರಪಂಚದ ವಿಚಿತ್ರವೇ ಹುಟ್ಟಿಲ್ಲವೆಂಬ ಜ್ಞಾನ ಮಾರ್ಗವು ವಿಶಾಲವಾಗಿರುವುದರಿಂದ ಆ ವಿದ್ಯೆಯಿಂದ ಜಗತ್ತಿನ ವಿಚಿತ್ರವು ತೋರಲ್ಪಡುವುದೆಂದು ಭಾವಿಸಿದ್ದಾರೆ.

## ವಿಮರ್ಶೆ

ಈ ಜಗತ್ತು ಮಿಥ್ಯೆ (ಸುಳ್ಳು) ಎಂದು ತಿಳಿದು ಈ ಜಗತ್ತಿನಲ್ಲಿ ವ್ಯವಹರಿಸುವುದಕ್ಕೆ ಬರುವುದಿಲ್ಲ. ದೇಹವು ಸುಳ್ಳಾದರೆ ಇಲ್ಲದ ದೇಹದಲ್ಲಿ ಸತ್ಯನಾದ (ಇರುವ) ಆತ್ಮನು ಹೇಗೆ ಇರಲಿಕ್ಕೆ ಸಾಧ್ಯವಿದೆ ಎಂಬ ಶಂಕೆ ಬಂದೇ ಬರುತ್ತದೆ. ಬುದ್ಧಿಯು ಸಾತ್ವಿಕವಾಗಿ ಇರುವುದಕ್ಕಾಗಿ ಸಾತ್ವಿಕ ಆಹಾರದಿಂದ ದೇಹವನ್ನು ಬೆಳೆಯಿಸಬೇಕು ಎಂದು ಗ್ರಂಥಗಳು ಹೇಳುತ್ತಿರುವಾಗ ಆತ್ಮಜ್ಞಾನವನ್ನು ಹೊಂದಲು ದೇಹಕ್ಕೆ ತಕ್ಕ ಸಾಧನೆಗಳೂ ಸಂಸ್ಕಾರವೂ ಇರಲೇಬೇಕು. ಅದನ್ನು ಬಿಟ್ಟು ದೇಹವು ಮಿಥ್ಯೆ ಎಂದು ಅವರ ಕಡೆಗೆ ಲಕ್ಷ್ಯವನ್ನು ಕೊಡದಿದ್ದರೆ ಆತ್ಮಜ್ಞಾನದ ಶುದ್ಧತೆಗೆ ಭಂಗ ಬರುವುದು ಸಿದ್ಧವಾದ ಮಾತು. ಈಗಿನ ಶಾಸ್ತ್ರಕಾರರು (Scientists) ನಿರಾಕಾರದ ಸೂಕ್ಷ್ಮರೂಪ ಅಣುವಿನಿಂದಲೇ ಸಾಕಾರದ ವಸ್ತುಗಳಾಗಿವೆ ಎಂದು ನಿರ್ಧರಮಾಡಿ ಪ್ರಯೋಗದಿಂದ ತೋರಿಸುತ್ತಿರುವಾಗ ದೇಹವೂ ಪ್ರಪಂಚವೂ ಆ ಪರವಸ್ತುವಿನಿಂದ ಆಗಿದೆ ಎಂದು ತಿಳಿದು ಯಾವ ಯಾವ ವಸ್ತುವನ್ನು ಯಾವ ಯಾವ ರೀತಿಯಲ್ಲಿ ತರಬೇಕೋ ಆ ರೀತಿಯಲ್ಲಿ ದೇಹವನ್ನೂ ಮನಸ್ಸನ್ನೂ ಭಾವವನ್ನೂ ಬುದ್ಧಿಯನ್ನೂ ಜ್ಞಾನವನ್ನು ಆಯಾ ವಸ್ತುಗಳ ಉತ್ತಮ ವಿಧದ ಬಳಕೆಯಲ್ಲಿ ತರುವುದು ಮನುಷ್ಯನ ಕರ್ತವ್ಯ. ಆದುದರಿಂದ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂದು ಹೇಳುವ ಅದ್ವೈತಿಯಾಗುವುದು ಉತ್ತಮವಲ್ಲ. ಈಶಾವಾಸ್ಯೋಪನಿಷತ್ತಿನಲ್ಲಿ ವಿದ್ಯಾಂಚಾಽವಿದ್ಯಾಂಚ ಯಸ್ತದ್ವೇದೋಭಯಂ ಸಹ" ವಿದ್ಯೆ ಅವಿದ್ಯೆಗಳೆರಡನ್ನೂ ಬ್ರಹ್ಮರೂಪವಾಗಿ ತಿಳಿಯಬೇಕೆಂದು ಬೋಧೆ ಇದೆ. ಇದರಂತೆ ತೇಜೋಬಿಂದೂಪನಿಷತ್ ಮೊದಲಾದವೂ ಹೇಳುತ್ತವೆ. ಶ್ರೀ ಶಂಕರಾಚಾರ್ಯರು ಬೋಧಿಸಿದ ಬ್ರಹ್ಮವಿದ್ಯೆ ಅಥವಾ ವೇದಾಂತ ಎಂಬುದು ಉಪನಿಷತ್ತುಗಳ ಒಂದು ಭಾಗವೇ ಹೊರತು ಸಂಪೂರ್ಣವಾದ ಉಪನಿಷದ್ ಅಭಿಪ್ರಾಯವುಳ್ಳದಲ್ಲ. ಈಗಲೂ ಪಂಡಿತರು ಉಪನಿಷತ್ತುಗಳ ವಿಮರ್ಶೆಮಾಡಿ ಶ್ರೇಷ್ಠ

ವಾದ ಆಚರಣೆಗಳನ್ನು ಅನುಸರಿಸುವುದು ಬಹಳ ಉತ್ತಮವಾದ ಕಾರ್ಯ. ಇದೂ ಅತ್ಯಂತ ಅವಶ್ಯಕವಾಗಿ ಆಗಬೇಕಾಗಿದೆ.

೪. ಪುರಾಣ ಪ್ರಸಿದ್ಧವಾದ ಗ್ರಂಥ'ಗಳಲ್ಲಿ' (ಗಳಿಂದ ?) ಮಾನವನ ದಾನ ಧರ್ಮಗಳ ಅನುಸಾರವಾಗಿ ಪಾಪ ಪುಣ್ಯಗಳು ನಿರ್ಮಾಣವಾಗಿರುವುದಾಗಿ ತಿಳಿಯಲ್ಪಡು ವುದಾದರೆ ಹಸು, ಜಿಂಕೆ, ಗಿಳಿ ಇರುವೆ'ಗೆ' (ಗಳಿಗೆ ?) ಮುಕ್ತಿ ಮಾರ್ಗವನ್ನು ವಿವರಿಸದೆ ಇರಲು ಕಾರಣವೇನು ? ಮಾನವನು ಒಬ್ಬನೇ ಪರಮಾತ್ಮನಿಂದ ರಚಿಸಲ್ಪ ಟ್ಟಿದ್ದರೆ ಉಳಿದ ಜೀವ ಚಿತ್ರಗಳ ನಿರ್ಮಾಣಕರು ಯಾರು ? ಮಾನವನು ಪಾಪ ಪುಣ್ಯಗಳಿಂದ ನಿರ್ಮಾಣವಾಗಿದ್ದರೆ ಪ್ರಪಂಚದಲ್ಲಿರುವ ಜೀವಚಿತ್ರಗಳು ಗಣಿತ ಶಾಸ್ತ್ರಕ್ಕೆ ಮೀರಿ ಆಕಾಶದಂತೆ ವಿಶಾಲವಾಗಿರುವುದಕ್ಕೆ ಕಾರಣವೇನು ? ಮಾನವ ಚಿತ್ರವು ೮೪ ಲಕ್ಷ ಜೀವಚಿತ್ರದಲ್ಲಿ ಒಂದಾಗಿರುವಾಗ್ಗೆ ಉಳಿದ ಪ್ರಾಣಿ ವರ್ಗದ ಸಂಖ್ಯೆಯನ್ನು ಮಾನವರು ಯೋಚಿಸದೆ ಪಾಪ ಪುಣ್ಯಗಳಿಗೆ ಅನುಸಾರವಾಗಿ ಅನೇಕ ಜನ್ಮಾಂತರಗಳು ಉಂಟಾಗುವದೆಂದು ಹೇಳುವ ಮಹನೀಯರು ವಿಶಾಲರಾಗಿರುವರು. ಪುರಾಣ ಪ್ರಸಿದ್ಧವಾದ ೮೪ ಲಕ್ಷ ಜೀವರಾಶಿಯು ಒಂದೇ ಸಾರಿ ಉತ್ಪತ್ತಿಯಾಗಿರುವುದರಿಂದ ಜೀವ ಚಿತ್ರಗಳಿಗೆ ಪ್ರಾಣಿಗಳಿಂದ ಪ್ರಾಣಿಗಳಿಗೆ ಆಹಾರವು ನಿರ್ಮಾಣವಾಗಿದೆ. ಬೆಕ್ಕಿಗೆ ಇಲಿ ಆಹಾರವೂ, ಗಿಡಗ ಪಕ್ಷಿಗೆ ಪಾರಿವಾಳವೂ, ಹುಲಿಚಿರತೆಗಳಿಗೆ ಸಾರಂಗ ಮೊಲ ಗಳೂ ಆಹಾರವಾಗಿರುವುವು. ಮೀನುಗಳಿಗೆ ಮೀನೇ ಆಹಾರ ಆಗಿರುವ ರಹಸ್ಯವು ಮಾಯಾ ವಿಚಿತ್ರಗಳಾಗಿವೆ. ಮಾನವರಲ್ಲಿ ಬಡವ ಸಾಹುಕಾರ, ನೀರಿನಲ್ಲಿ ಸಿಹಿ ನೀರು ಉಪ್ಪು ನೀರು, ಲೋಹಗಳಲ್ಲಿ ಕಬ್ಬಿಣ ಬಂಗಾರ, ಪಕ್ಷಿಯಲ್ಲಿ ಕಾಗೆ, ಗಿಳಿ (ಹೀಗೆ ?) ಪ್ರಾರಂಭದಲ್ಲಿ ಇಲ್ಲದ ವಿಚಿತ್ರವು (ವಿಭೇದ ?) ತೋರಿ ಕಾಲ ಕ್ರಮೇಣದಲ್ಲಿ ಕಳೆದು ಹೋಗುವುದು ಸ್ವಾಭಾವಿಕ ಗುಣ.

## ವಿಮರ್ಶೆ

ಇವರ ಈ ಹಿಂದಿನ ೩ ಅಂಶಗಳ ಶೋಧನೆಗೆ ಪೂರ್ವಿಕ ಮಹನೀಯರ ಬೆಂಬಲ ವಿರುವುದನ್ನೂ ಅವು ವಾಸ್ತವಿಕಾಂಶಗಳೆಂಬುದನ್ನೂ ಮೇಲೆ ತೋರಿಸಿ ಇದೆ. ಆದರೆ ಇವರು ಯೋಚಿಸಿದಂತೆ ಪಾಪ ಪುಣ್ಯಗಳು ಇಲ್ಲವೇ ಇಲ್ಲ ಎಂದು ಹೇಳುವ ಗ್ರಂಥಾ ಧಾರವಿಲ್ಲ. ಇನ್ನು ನಿಜವಾದ ಅಂಶವನ್ನು ಕಂಡು ಹಿಡಿಯುವುದಕ್ಕೆ ಪಾಪ ಪುಣ್ಯಗಳು ಮನುಷ್ಯನಿಗೆ ಕಣ್ಣಿಗೆ ಕಾಣುವ ವಸ್ತುಗಳೂ ಅಲ್ಲ. ಆದುದರಿಂದ ಇವುಗಳ ವಿಷಯ ವಾಗಿ ಇವರಿಗೆ ತಿಳಿಸುವುದು ಕಷ್ಟದ ಕೆಲಸವೇ ಆಗಿದೆ ಇರಲಿ. ವ್ಯಾಸ ಋಷಿಗಳು ಈ ಪಾಪ ಪುಣ್ಯಗಳ ವಿಷಯವಲ್ಲಿ ಒಂದು ಅರ್ಧ ಶ್ಲೋಕವನ್ನು ಹೇಳಿರುತ್ತಾರೆ. ಅದು ಹೀಗೆ ಇದೆ—

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥ ಕೋಟಿಭಿಃ
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ

ಇವರಿಂದ ಪರೋಪಕಾರವೇ ಪುಣ್ಯ ಪರರಿಗೆ ತೊಂದರೆಕೊಡುವುದೇ ಪಾಪ ಎಂಬ ಅಭಿಪ್ರಾಯವು ವ್ಯಕ್ತವಾಗಿ ಪಾಪ ಪುಣ್ಯಗಳನ್ನು ಕಂಡುಹಿಡಿಯುವ ಒಂದು ವಿಧಾನವು ಹೊರಬೀಳುತ್ತದೆ. ಇನ್ನೊಬ್ಬನಿಗೆ ಉಪಕಾರವನ್ನು ಮಾಡಿದರೆ ಅವನು ಸಂತೋಷಪಡುತ್ತಾನೆ. ತೊಂದರೆಕೊಟ್ಟರೆ ಅವನು ವ್ಯಸನಪಡುತ್ತಾನೆ. (ಅಳು ತ್ತಾನೆ.) ಮಾವಿನ ಬೀಜವನ್ನು ಬಿತ್ತಿದರೆ ಆ ಗಿಡವು ಮಾವಿನ ಹಣ್ಣನ್ನೇ ಕೊಡು ತ್ತದೆ. ಬೇವಿನ ಬೀಜವನ್ನು ಬಿತ್ತಿದರೆ ಅದರಿಂದಾದ ಗಿಡವು ಬೇವಿನ ಹಣ್ಣನ್ನೇ ಕೊಡುತ್ತದೆ. ಇವರಂತೆ ಪರರ ಸಂತೋಷವನ್ನು ಉಂಟು ಮಾಡಿದವನಿಗೆ ಸಂತೋ ಷದ ಫಲವೇ ಬರುವುದು. ಇದು ಸಹಜವಾದ ಸಂಗತಿ. ಈ ಮೇರೆಗೆ ಮನುಷ್ಯರಲ್ಲಿ ಕೆಲವರು ಬಹಳ ಸಂತೋಷಿಗಳಾಗಿಯೂ ಕೆಲವರು ಬಹಳ ದುಃಖಿಗಳಾಗಿಯೂ ಪ್ರತಿ ದಿನವೂ ಆಹಾರಕ್ಕಾಗಿ ಶ್ರಮ ಅದಿಲ್ಲದೆ ವ್ಯಥೆಪಡುವವರಾಗಿಯೂ ಇರುವುದಕ್ಕೆ ಕಾರಣವು ಅದರ ಪುಣ್ಯಪಾಪಗಳೇ ಎಂದು ನಿರ್ಧರಿಸಲಿಕ್ಕೆ ಬರುತ್ತದೆ. ಪ್ರಾಣಿಗಳು ಅಸಂಖ್ಯಾತ ವಾಗಿರುವರು, ಅವರಲ್ಲಿ ಮನುಷ್ಯ ಒಬ್ಬ, ಹೀಗೆ ಗಣಿಸಲಿಕ್ಕೆ ಹೋಗಿ ಪಾಪ ಪುಣ್ಯ ಗಳಿಲ್ಲವೆಂದು ನಿರ್ಧರಿಸಲಾಗುವುದಿಲ್ಲ. ಧರ್ಮ ಗ್ರಂಥಗಳಲ್ಲಿ "ಕ್ರಿಮಿಕೀಟ ಪತಂಗೇಭ್ಯಃ ಪಶವಃ ಪ್ರಜ್ಞಯಾಧಿ ಕಾಃ ಪಶು ಭ್ಯೋಪಿ ನರಾಃ ಶ್ರೇಷ್ಠಾ" ಹೀಗೆ ಪ್ರಜ್ಞೆಯಲ್ಲಿ ಮನುಷ್ಯನು ಅಧಿಕ ಎಂದು ಹೇಳಲ್ಪಟ್ಟಿದೆ. ಮನುಷ್ಯನಿಗೆ ದೇವನನ್ನು ಹುಡುಕುವ ಜ್ಞಾನವಿದ್ದಂತೆ ಪಶು ಪ್ರಾಣಿಗಳಿಗೆ ಇಲ್ಲ. ಅವು ತಮ್ಮ ಸೌಖ್ಯವನ್ನಷ್ಟೇ ಹುಡುಕುವ ತ್ತವೆ. ಮನುಷ್ಯನಾದರೆ ಈ ಪ್ರಪಂಚಕ್ಕೆ ಕಾರಣನಾರು ? ನಾನು ಯಾರು ? ಎಂಬು ದನ್ನು ಯೋಚಿಸಿ ಕೆಲವು ಮಟ್ಟಿಗೆ ನಿರ್ಧರಿಸುವ ಪ್ರಜ್ಞೆಯುಳ್ಳವನಾಗಿದ್ದಾನೆ. ಈ ಪ್ರಜ್ಞೆ ಬರುವುದೂ ಪುಣ್ಯದಿಂದಲೇ. ಆದುದರಿಂದ ಮನುಷ್ಯನು ಪುಣ್ಯಜೀವಿ ಎಂದು ಪಶುಗಳಿಗಿಂತ ಭಿನ್ನವಾಗಿ ಗಣಿಸಲಿಕ್ಕೆ ಬರುತ್ತದೆ. ಕ್ರಿಮಿಕೀಟಾದಿ ಪ್ರಾಣಿಗಳಿಗೂ ಮನುಷ್ಯರಿಗೂ ಜೀವ ಚಿತ್ರ ಎಂದು ಕರೆದಿರುವುದು ಸರಿಯಾಗಿದೆ. ಉಳಿದ ಪ್ರತಿಮೆಯೂ ಚಿತ್ರ ಮೊದಲಾದವುಗಳೂ ಜೀವವಿಲ್ಲದ ಚಿತ್ರಗಳು. ಜೀವ ಚಿತ್ರಗಳಲ್ಲಿಯೇ ಎಲ್ಲವೂ ಒಂದೇ ಸಮನಾಗಿಲ್ಲ. ಪ್ರಜ್ಞೆಯಲ್ಲಿ ಹೆಚ್ಚು, ಕಡಿಮೆಯುಳ್ಳವುಗಳಾಗಿವೆ. ದೈವ ಭಾವನೆ ಮನುಷ್ಯೇತರ ಪ್ರಾಣಿಗಳಲ್ಲಿ ಇಲ್ಲದಿರುವುದರಿಂದ ಮನುಷ್ಯ ಜೀವವು ಪುಣ್ಯ ದಿಂದ ಬಂದುದೆಂದು ಪೂರ್ವಿಕರು ಭಾವಿಸಿದ್ದಾರೆ. "ಮಹತಾ ಪುಣ್ಯ ಪುಣ್ಯೇನ ಕ್ರೀತೋಯಂ ಕಾಯನೌಸ್ತ್ವ" ಎಂಬ ಶ್ಲೋಕವಿದೆ. ಈ ದೆಸೆಯಿಂದ ಪಾಪ ಪುಣ್ಯ ಗಳುಂಟೆಂದು ನಿರ್ಧರಿಸುವಲ್ಲಿ ಅನುಮಾನವೇನೂ ಬಾರದು. ಅವು ಇಲ್ಲದಿದ್ದರೆ ಒಬ್ಬ ನನ್ನು ಪಲ್ಲಕ್ಕಿಯಲ್ಲಿ ಕೂಡುವಂತೆಯೂ ಇನ್ನೊಬ್ಬನನ್ನು ಹೊರುವಂತೆಯೂ ಮಾಡಿದ ದೋಷಕ್ಕೆ ಮಹಾದೇವನು ಗುರಿಯಾಗಬೇಕಾಗುವುದು.

ಇವೆಲ್ಲಾ ಕಾಲಕ್ರಮದಲ್ಲಿ ಬದಲಾವಣೆಯಾಗಬಹುದೆಂದು ಶ್ರೀ ಪುಟ್ಟಣ್ಣನವರು ತಿಳಿದಿದ್ದಾರೆ. ತೊಪ್ಪೆಯನ್ನೂ (ಸಗಣಿ) ಸಕ್ಕರೆಯನ್ನೂ ಒಂದು ಮರದ ಬೈರಿಗೆ

ಹಾಕಿದರೆ ಅದು ಸುಮ್ಮನೆ ಆ ಆಹಾರವನ್ನು ತೆಗೆದುಕೊಳ್ಳುತ್ತದೆ. ಮನುಷ್ಯನ ಮುಂದೆ ಆ ಎರಡನ್ನೂ ಇಟ್ಟಾಗ ತೊಪ್ಪೆಯನ್ನು ಬಿಟ್ಟು ಸಕ್ಕರೆಯನ್ನೇ ತಿನ್ನುತ್ತಾನೆ. ಇದು ಕಾಲಕ್ರಮದಲ್ಲಿ ಬದಲಾವಣೆಯಾಗುವುದೇ ಇಲ್ಲ. ಪ್ರಪಂಚದಲ್ಲಿ ಒಬ್ಬ ಮನುಷ್ಯನಿಗೆ ಅಹಿಂಸೆಯ ಕಡೆಗೆ ಪ್ರೀತಿಯಿದ್ದರೆ ಇನ್ನೊಬ್ಬನಿಗೆ ಹಿಂಸೆ ಮಾಡುವುದರಲ್ಲಿಯೇ ಪ್ರೀತಿ. ತನ್ನ ಜನ್ಮವಿರುವವರೆಗೂ ಅವರವರು ತಮ್ಮ ಪ್ರೀತಿಯನ್ನು ಬದಲಾಯಿಸುವುದೇ ಇಲ್ಲ. ಇಂತಹ ಉದಾಹರಣೆಗಳೂ ಸಿಕ್ಕುತ್ತವೆ.

ಪುಣ್ಯದಿಂದ ಮೋಕ್ಷವುಂಟಾಗುತ್ತದೆ. ಎಂದು ಭಾವಿಸಿ ಜನರು ಪುಣ್ಯವನ್ನು ಮಾಡುತ್ತಾರೆ ಎಂಬುದು ಸರಿಯಲ್ಲ. ಪುಣ್ಯದ ಫಲವು ಸುಖವನ್ನು ಕೊಡುವುದಿಷ್ಟೇ ಹೊರತು ಮೋಕ್ಷವನ್ನು ಕೊಡುವುದಿಲ್ಲ. ದೊಡ್ಡ ದೊಡ್ಡ ಯಜ್ಞಗಳನ್ನು ಮಾಡಿ ಪುಣ್ಯವನ್ನು ಪಡೆದವರು ಸ್ವರ್ಗದ ಸುಖವನ್ನು ಅನುಭವಿಸಿ ಪುನಃ ಭೂಲೋಕಕ್ಕೆ ತೆರಳುವದು ಎಂದು ಭಗವದ್ಗೀತೆಯು ಹೇಳುತ್ತದೆ. ಪೂರ್ವ ಕಾಲದಲ್ಲಿ ಸ್ವರ್ಗಲೋಕ ವೆಂದರೆ ಈಗಿನ ಹಿಮಾಲಯ. ಆ ಕಡೆಗೆ ಇಲ್ಲಿ ಯಜ್ಞ ಮಾಡಿದವರನ್ನು ಕರೆದು ಕೊಂಡು ಹೋಗುತ್ತಿದ್ದರೋ ಏನೋ ! ಅದನ್ನು ನೋಡಿ ಮುಂದೆ ಗ್ರಂಥದ ಬೋಧೆ ಆರಂಭವಾಗಿರಬೇಕು.

ಜೀವನು ಪುನಃ ದೇಹವನ್ನು ಪಡೆಯದಂತೆ ಮಾಡಿಕೊಳ್ಳುವುದು 'ಮೋಕ್ಷ' ಎನಿಸಿಕೊಳ್ಳುತ್ತದೆ. ಕೆಲವರು ಇಂದ್ರಿಯಗಳು ತಮ್ಮ ಇಂದ್ರಿಯಾರ್ಥವನ್ನು ಬಿಟ್ಟರೆ ಅದು ಮೋಕ್ಷ ಎನ್ನುವರು. ಅದೂ ಸರಿಯಾದ ಮೋಕ್ಷವಲ್ಲ. ಜೀವನು ಮಹಾ ದೇವನ ಲಕ್ಷಣವುಳ್ಳವನಾಗಿ ಮಹಾದೇವನೇ ಆಗಬೇಕು. ಅದು ಸರಿಯಾದ ಮೋಕ್ಷ ಎಂದು ತಿಳಿಯಬೇಕು. ಅದನ್ನು ಪಡೆಯುವ ಸಾಧನವು ಪಾಪ ಪುಣ್ಯಗಳನ್ನು ಪಡೆ ಯುವುದಕ್ಕಿಂತ ಭಿನ್ನವಾಗಿರುವುದೆಂದು ಚೆನ್ನಾಗಿ ತಿಳಿಯಬೇಕು. ಜ್ಞಾನಿಗಳಾದರೂ ಪಾಪ ಪುಣ್ಯಗಳ ಕಡೆಗೆ ಗಮನ ಕೊಡುವುದಿಲ್ಲವೆಂದು ಧರ್ಮ ಗ್ರಂಥಗಳಲ್ಲಿ ಬರೆಯಲ್ಪ ಟ್ಟಿರುವುದನ್ನು ನೋಡುತ್ತೇವೆ. ಪಾಪದಿಂದ ಪುನರ್ಜನ್ಮದಲ್ಲಿ ಹೀನದೆಸೆ ಬರುವು ದೆಂಬುದೇನೋ ಸಿದ್ಧ. ಪುಣ್ಯವನ್ನು ಅನುಭವಿಸುವುದಕ್ಕಾಗಿ ಪುನರ್ಜನ್ಮವನ್ನು ಪಡೆ ಯುವುದೂ ಅವಶ್ಯವಿಲ್ಲವೆಂಬ ಯೋಚನೆಯಿಂದ ಪುಣ್ಯದ ಫಲವೂ ತಮಗೆ ಬಾರದೆ ಇರುವಂತಹ ಜ್ಞಾನಾಚರಣೆ ಯಾವುದು. ಎಂಬುದನ್ನೇ ಜ್ಞಾನಿಗಳು ಹುಡುಕುತ್ತಾರೆ. ಅಂತಹ ಆಚರಣೆಯೂ ಧರ್ಮಗ್ರಂಥಗಳಲ್ಲಿ ಬೋಧಿಸಲ್ಪಟ್ಟಿರುವುದನ್ನು ನಾವು ಕಾಣು ತ್ತೇವೆ. ಮನುಷ್ಯದೇಹವನ್ನು ಬಿಟ್ಟ ಜೀವನಿಗೆ ಸೂಕ್ಷ್ಮರೂಪ ಬರುವುದೆಂದು ಈಗಿನ ನವೀನ ಶಾಸ್ತ್ರಜ್ಞರು (Scientists) ಕಂಡುಹಿಡಿದು ಅವರ ಪರಿಶೋಧನೆ ನಡೆಸುತ್ತಾ ಇರುವುದರಿಂದ ಪುನರ್ಜನ್ಮವಿಲ್ಲ ಎಂಬ ಶಂಕೆಗೆ ಇಲ್ಲಿ ಸಮಾಧಾನ ಬರೆ ಯಲು ಪ್ರಯತ್ನ ಪಟ್ಟಿಲ್ಲ—ಪುಣ್ಯ ಪಾಪಗಳು ಉಂಟೆಂದು ತೋರಿಸಲಿಕ್ಕೆ ಮುಖ್ಯ ವಾದ ಇನ್ನೊಂದು ಗುರುತು ಇದೆ. ಬೇಕು, ಬೇಡ, ಎಂಬೆರಡು, ಪ್ರಾಣಿಗಳಲ್ಲಿ ತುಂಬಿಕೊಂಡಿವೆ. ಬೇಕು ಎಂಬುದೇ ಸುಖ, ಬೇಡ ಎಂಬುದೇ ದುಃಖ. ಸುಖವೇ

ಪುಣ್ಯ, ದುಃಖವೇ ಪಾಪ. ಬಹಳ ಅಳುವವರನ್ನು ಕಂಡು ನಮಗೂ ಅಳಬೇಕೆನಿಸುತ್ತದೆ, ಅಳುತ್ತೇವೆ. ನಗುವವರನ್ನು ಕಂಡು ನಾವೂ ಸುಮ್ಮನೆ ನಗುತ್ತೇವೆ. ಇದರಿಂದ ಪಾಪದಿಂದ ಪಾಪವೂ, ಪುಣ್ಯದಿಂದ ಪುಣ್ಯವೂ ಉಂಟಾಗುತ್ತದೆ, ಎಂದು ನಿರ್ಧರಿಸಬೇಕಾಗುತ್ತದೆ. ಪಾಪ ಪುಣ್ಯಗಳು ಜೀವನ ಮೋಕ್ಷಕ್ಕೆ ಕಾರಣಗಳಲ್ಲದಿದ್ದರೂ ಅವುಗಳಲ್ಲಿಯೇ ಪ್ರಾಣಿಗಳು ಮುಳುಗಿ ತೇಲುವುವರಿಂದ ಅವುಗಳಿಂದಾಗುವ ಫಲದ ಬಿಡುಗಡೆ ಆಗುವುದಕ್ಕಾಗಿ ಮನುಷ್ಯನು ಪ್ರಯತ್ನಿಸಬೇಕೇ ಹೊರತು ಅವುಗಳಿಲ್ಲವೆಂದು ತಿಳಿದು ಪ್ರಪಂಚ ವರ್ತನೆಯಲ್ಲಿರುವುದು ಸರಿಯಲ್ಲವೆಂಬುದನ್ನು ಒಟ್ಟಿನಲ್ಲಿ (ಮುಖ್ಯವಾಗಿ) ತಿಳಿಯಬೇಕಾಗಿದೆ.

೮೪ ಲಕ್ಷ ಜೀವರಾಶಿಗಳು ಒಂದೇ ಸಾರಿ ಉತ್ಪನ್ನರಾದರು. ಮನುಷ್ಯನ ಹೆಚ್ಚುಗಾರಿಕೆ ಏನು ? ಎಂದು ಶೋಧಿಸಿದುದರಲ್ಲಿ ಕೊಂಚ ಆಲೋಚಿಸತಕ್ಕದು ಇದೆ. ಡಾರ್ವಿನ್ ಪದ್ಧತಿಯಲ್ಲಿ ಮಂಗದಿಂದ ಮನುಷ್ಯನಾದನೆಂದು ಹೇಳಿರುವುದು, ಪ್ರಪಂಚದಲ್ಲಿ ಮೊದಲು ಇದ್ದ ಕೆಲವು ಪ್ರಾಣಿಗಳು ಈಗ ಇಲ್ಲದೆ ಇರುವುದು (extinct) ಹೀಗೆ ಆಗಿರುವುದು ತಿಳಿಯಬರುತ್ತದೆ. ಶರಣನು ಅನಾದಿ ಎಂದು ಶ್ರೀ ನಿ. ಜ. ತೋಂಟದ ಸಿದ್ಧಲಿಂಗ ಸ್ವಾಮಿಗಳು ಅಪ್ಪಣೆ ಕೊಡಿಸಿರುತ್ತಾರೆ. ಆ ಅಭಿಪ್ರಾಯವು ಮನುಷ್ಯನು ಅನಾದಿ ಎಂದು ತಿಳಿಯಬೇಕೆಂದಲ್ಲ. ಮನುಷ್ಯನಲ್ಲಿರುವ ಎಲುಬು ಮುಂತಾದ ಕಠಿಣ ವಸ್ತುಗಳು ಬ್ರಹ್ಮಾಂಡವಲ್ಲಿನ ಪೃಥವೀ ತತ್ತ್ವದಿಂದಲೂ, ರಕ್ತ ಮೊದಲಾದವು ಜಲ ತತ್ತ್ವದಿಂದಲೂ, ಶರೀರದಲ್ಲಿನ ಉಷ್ಣವು ಅಗ್ನಿ ತತ್ತ್ವದಿಂದಲೂ, ಶ್ವಾಸೋಚ್ಛ್ವಾಸದ ಗಾಳಿಯು ವಾಯು ತತ್ತ್ವದಿಂದಲೂ, ನಾನು ಜೀವಿ ಎಂಬ ಶಬ್ದಜ್ಞಾನವು (ಮಾತಾಡುವಿಕೆ) ಆಕಾಶ ತತ್ತ್ವದಿಂದಲೂ ಬಂದಿವೆ ಎಂದು ಹೇಗೆ ತಿಳಿಯಲವಕಾಶವಿದೆಯೋ ಹಾಗೆಯೇ ಮನುಷ್ಯನಲ್ಲಿನ ಜೀವ ಎಂಬುದು ಬ್ರಹ್ಮಾಂಡದ ಆತ್ಮ ತತ್ತ್ವ ಎಂಬುದರಿಂದ ಬಂದಿದೆ ಎಂದು ತಿಳಿಯಬೇಕು. ಆ ಮುಂದೆ ಜೀವನ ಮೂಲವನ್ನು ಹುಡುಕಲಿಕ್ಕೆ ಹೋಗಿ ಮನುಷ್ಯನು ತನ್ನ ಜ್ಞಾನವನ್ನು ಹೇಗೆ ಹೇಗೆ ದೃಢೀಕರಿಸುವನೋ ಆ ದೃಢ ಜ್ಞಾನವೂ ಬ್ರಹ್ಮಾಂಡದಿಂದಲೇ ಬಂದುದೆಂದು ತಿಳಿಯಬೇಕು. ಶರಣನು ತಾನು ಶಿವರೂಪನೆಂದು ತಿಳಿಯುತ್ತಾನೆ. ಲೌಕಿಕರಂತೆ ನಾನು ಜೀವವುಳ್ಳವನಲ್ಲ ಎಂದು ತಿಳಿಯುತ್ತಾನೆ. ಈ ಜ್ಞಾನವೂ ಬ್ರಹ್ಮಾಂಡದಿಂದಲೇ ಬಂದುದು. ಇಂತಹ ಜ್ಞಾನವು ಅನಾದಿಯಾದುದರಿಂದ ಶರಣನು 'ಅನಾದಿ' ಎಂದು ಆ ಜಗದ್ಗುರುಗಳ ಅಭಿಪ್ರಾಯ. ನಾನೊಬ್ಬ ಜೀವಿ ಎಂಬ ಮನುಷ್ಯನೂ ನಾನೊಂದು ಪ್ರಾಣಿ ಎಂಬ ಒಂದು ಪ್ರಾಣಿಯೂ ಒಂದೇ ಕಾಲದಲ್ಲಿ ಹುಟ್ಟಬಹುದು. ಆದರೆ ಜ್ಞಾನದ ವಿವಿಧ ಭೇದಗಳಲ್ಲಿ ಯಾವುದು ಮೊದಲು ಇದ್ದಿತೆಂದು ತಿಳಿಯುವುದಕ್ಕೆ ಹೋದಾಗ ನಿರಾಕಾರನಾದ ಮಹಾದೇವನೇ ಮೊಟ್ಟಮೊದಲು (ಅನಾದಿ) ತೋರಿದನೆಂಬುದು ವ್ಯಕ್ತವಾಗುತ್ತದೆ. ಇಂತಹ ಜ್ಞಾನವನ್ನು ಹೊಂದುವ ಮನುಷ್ಯಜಾತಿ ಅಧಿಕ. (ಸಶೇಷ).

(ಸಂ. ೯೧–೯೨)

# ೨೬. ವೀರ ರಹಸ್ಯ

'ವೀರ ರಹಸ್ಯ' ಎಂಬುದೊಂದು ಗ್ರಂಥವು ದೇವನಾಗರಿ ಲಿಪಿಯಲ್ಲಿ ಮುದ್ರಿತ ವಾಗಿದೆ. ಶ್ರೀ ದೇಶಿಕೇಂದ್ರ ಪ್ರೆಸ್ (ಛಾಪಖಾನಾ) ಲಾತೂರು ಎಂಬಲ್ಲಿ ಮುದ್ರಿಸ ಲ್ಪಟ್ಟಿದೆ. ಶ್ರೀಗುರು ಗಂಗಾಧರ ಸ್ವಾಮಿ ಸಮರ್ಥ ಪಿ. ಚಾ. ಮು. ಮಾ. ಸಂ. ವಡಗಾಳಿ, (ಜಿಲ್ಲಾ ನಾಸಿಕ) ಇವರ ಅಂಕಿತದಲ್ಲಿ ಪ್ರಕಟಿಸಲ್ಪಟ್ಟಿದೆ. ಈ ಗ್ರಂಥದಲ್ಲಿ ಸಂಸ್ಕೃತ ಶ್ಲೋಕಗಳುಳ್ಳ ೨೩ ಅಧ್ಯಾಯಗಳಿವೆ. ಈ ಅಧ್ಯಾಯಗಳಲ್ಲಿನ ಶ್ಲೋಕಗಳಿಗೆ ಮರಾಠಿ ಭಾಷೆಯ ಓವಿಬದ್ಧವಾದ ಪದ್ಯ (ಪದ) ಗಳು ಬರೆಯಲ್ಪಟ್ಟಿವೆ. ಒಂದೊಂದು ಅಧ್ಯಾಯದ ಕೊನೆಯಲ್ಲಿ— "ಇತಿ ಶ್ರೀ ವೀರರಹಸ್ಯಾವೃತ ಗ್ರಂಥ ಪಾರಮೇಶ್ವರಿತಂತ್ರ ವಿರಚಿತ" ಎಂಬ ವಾಕ್ಯವಿದೆ. ಇದರಿಂದ ಈ ಗ್ರಂಥಕ್ಕೂ ಪಾರಮೇಶ್ವರತಂತ್ರ ಎಂಬ ಆಗಮ ಗ್ರಂಥಕ್ಕೂ ಸಂಬಂಧ ಇರುವುದೆಂದು ಸ್ಪಷ್ಟವಾಗುತ್ತದೆ.

ಹುಬ್ಬಳ್ಳಿ ಶ್ರೀ ನಿರಂಜನ ಜಗದ್ಗುರು ಮೂರುಸಾವಿರಮಠ ಸಂಸ್ಥಾನದ ಜಗದ್ಗುರುಗಳಾದ ಗಂಗಾಧರ ಮಹಾಸ್ವಾಮಿಗಳವರು "ತಂತ್ರ ಸಂಗ್ರಹ" ಎಂಬ ಗ್ರಂಥ ವನ್ನು ಬಹಳ ಶ್ರಮಪಟ್ಟು ತಾವೇ ಖುದ್ದು ಪರಿಶೋಧಿಸಿ ಮುದ್ರಿಸಿದ್ದಾರೆ. ಅದರಲ್ಲಿ "ಪಾರಮೇಶ್ವರ ತಂತ್ರ" ಎಂಬುದೊಂದು ತಂತ್ರವಿದೆ. ಇಪ್ಪತ್ತೆರಡು ಪಟಲಗಳಿವೆ. ಈ ಪಟಲ ಎಂಬ ಪದಕ್ಕೂ ವೀರರಹಸ್ಯದೊಳಗಿನ ಅಧ್ಯಾಯ ಎಂಬ ಪದಕ್ಕೂ ಸರಿ ಹೋಲುತ್ತದೆ.

ವೀರರಹಸ್ಯದೊಳಗಣ ಒಂದನೆಯ ಅಧ್ಯಾಯದಲ್ಲಿ ೧೦೭ ಶ್ಲೋಕಗಳಿವೆ. ವೈಷ್ಣವಾದಿ ಮತಭೇದಗಳ ನಿರೂಪಣೆ ಇದೆ. ಎರಡನೆಯ ಅಧ್ಯಾಯದಲ್ಲಿ ೧೦೬ ಶ್ಲೋಕಗಳಿವೆ. ಲಿಂಗಧಾರಣಲಕ್ಷಣ ಸಜ್ಜಿಕಾ, ಶಿವದಾರ ಇವುಗಳ ವಿವರವಿದೆ. ಮೂರನೆಯ ಅಧ್ಯಾಯದಲ್ಲಿ ೯೨ ಶ್ಲೋಕಗಳಿವೆ. ದೀಕ್ಷಾವಿಧಾನದ ವಿಷಯವಿದೆ. ಇವೇ ವಿಷಯಗಳೇ ತಂತ್ರ ಸಂಗ್ರಹದಲ್ಲಿ ಇರುವ ಪಾರಮೇಶ್ವರ ತಂತ್ರದ ಮೊದಲಿನ ಮೂರು ಪಟಲಗಳಲ್ಲಿ ಇವೆ. ಶ್ಲೋಕಗಳು ಒಂದು ಹೆಚ್ಚು ಕಡಿಮೆ ಸರಿಯಾಗಿ ಇವೆ.

ನಾಲ್ಕನೆಯ ಅಧ್ಯಾಯದಲ್ಲಿ ವೀರಶೈವ ದೀಕ್ಷಾಬೋಧೆ ಎಂಬ ವಿಷಯವಿದ್ದು ಸಂಸ್ಕೃತ ಶ್ಲೋಕಗಳು ಏಳು ಮಾತ್ರ ಇವೆ. ಆದರೆ ಅವಕ್ಕೆ ಮರಾಠಿ ಭಾಷೆಯಲ್ಲಿ ಓವಿ ಬದ್ಧವಾದ ೨೬೬ ಪದ್ಯಗಳ ಅರ್ಥವು ಬರೆಯಲ್ಪಟ್ಟಿದೆ. ತಂತ್ರ ಸಂಗ್ರಹದೊಳ ಗಿನ ಪಾರಮೇಶ್ವರ ತಂತ್ರದಲ್ಲಿ ನಾಲ್ಕನೆಯ ಪಟಲದಲ್ಲಿ ೮೬॥ ಶ್ಲೋಕಗಳಿವೆ. ವೀರ ರಹಸ್ಯದ ಐದನೆಯ ಅಧ್ಯಾಯದಲ್ಲಿ ಸಜ್ಜಿಕಾ, ಗುಣ, ಲಿಂಗ ಇವುಗಳ ಸಂಯೋಗ ವಿಷಯವಿದೆ. ೧೦೫ ಶ್ಲೋಕಗಳಿವೆ. ಆದರೆ ಪಾರಮೇಶ್ವರ ತಂತ್ರದ ಐದನೆಯ ಪಟಲದಲ್ಲಿ ಇವೇ ವಿಷಯಗಳಿದ್ದು ಶ್ಲೋಕಗಳು ೧೦೭ ಮಾತ್ರ ಇವೆ. ವೀರರಹಸ್ಯದ

ಆರನೆಯ ಅಧ್ಯಾಯದಲ್ಲಿ ಷಟ್‌ಸ್ಥಲ ಜ್ಞಾನ ವಿಷಯವಿದ್ದು ೧೧೦ ಶ್ಲೋಕಗಳಿವೆ. ಪಾರಮೇಶ್ವರ ತಂತ್ರದ ಆರನೆಯ ಪಟಲದಲ್ಲಿಯೂ ಇದೆ ವಿಷಯವಿದ್ದು ಇಷ್ಟೇ ಶ್ಲೋಕಗಳಿವೆ. ಪಾರಮೇಶ್ವರ ತಂತ್ರದ ಏಳನೆಯ ಪಟಲದಂತೆ ವೀರರಹಸ್ಯದ ಏಳನೆಯ ಅಧ್ಯಾಯದಲ್ಲಿಯೂ "ವೀರಶೈವ ರಹಸ್ಯ" ಎಂಬ ವಿಷಯವಿದ್ದು ೧೦೬ ಶ್ಲೋಕಗಳಿವೆ. ಎಂಟನೆಯ ಪಟಲದಂತೆ ಎಂಟನೆಯ ಅಧ್ಯಾಯದಲ್ಲಿ ವೀರಶೈವ ಲಕ್ಷಣ, ಆಚಾರ ಎಂಬ ವಿಷಯವಿದ್ದು ೧೦೫ ಶ್ಲೋಕಗಳಿವೆ. ಒಂಬತ್ತನೆಯ ಪಟಲದಂತೆ ಒಂಬತ್ತನೆಯ ಅಧ್ಯಾಯದಲ್ಲಿ ವೀರಶೈವ ಮತಕ್ಕೆ ಪ್ರವೇಶಿಸಿದಾಗ ಫಲವೇನು ? ಎಂಬ ವಿಷಯವೂ, ವೀರಶೈವ ಮಹಾತ್ಮ್ಯ ಎಂಬ ವಿಷಯವೂ ೧೦೨॥ ಶ್ಲೋಕಗಳೂ ಇವೆ. ಹತ್ತನೆಯ ಪಟಲದಂತೆ ಹತ್ತನೆಯ ಅಧ್ಯಾಯದಲ್ಲಿ ಶಿವಯೋಗದ ಲಕ್ಷಣ, ಶಿವಯೋಗದ ದಾನವಿಧಾನ ಮುಂತಾದ ವಿಷಯಗಳಿವೆ. ೯೯ ಶ್ಲೋಕಗಳಿವೆ. ಹನ್ನೊಂದನೆಯ ಪಟಲದಂತೆ ಹನ್ನೊಂದನೆಯ ಅಧ್ಯಾಯದಲ್ಲಿ ಪಂಚಾಕ್ಷರಿ ಮಹಾತ್ಮೆ ಎಂಬ ವಿಷಯ ವಿದೆ. ಆದರೆ ಪಟಲದಲ್ಲಿ ೧೦೯ ಶ್ಲೋಕಗಳೂ ಅಧ್ಯಾಯದಲ್ಲಿ ೧೧೩ ಶ್ಲೋಕಗಳೂ ಇವೆ. ಹನ್ನೆರಡನೆಯ ಪಟಲದಂತೆ ಹನ್ನೆರಡನೆಯ ಅಧ್ಯಾಯದಲ್ಲಿ ಜ್ಞಾನಯೋಗದ ವಿಷಯವಿದೆ. ಆದರೆ ಪಟಲದಲ್ಲಿ ೧೦೬ ಶ್ಲೋಕಗಳೂ, ಅಧ್ಯಾಯದಲ್ಲಿ ೧೦೮ ಶ್ಲೋಕಗಳೂ ಇವೆ. ಹದಿಮೂರನೆಯ ಪಟಲದಂತೆ ಹದಿಮೂರನೆಯ ಅಧ್ಯಾಯ ದಲ್ಲಿಯೂ "ಕರಪಂಕಜ" ವಿಧಾನವು ಹೇಳಲ್ಪಟ್ಟಿದೆ. ೯೮ ಶ್ಲೋಕಗಳಿವೆ. ಹದಿ ನಾಲ್ಕನೆಯ ಪಟಲದಂತೆ ಹದಿನಾಲ್ಕನೆಯ ಅಧ್ಯಾಯದಲ್ಲಿ ಲಿಂಗಲಕ್ಷಣವಿದೆ. ಆದರೆ ಪಟಲದಲ್ಲಿ ೯೮ ಶ್ಲೋಕಗಳೂ ಅಧ್ಯಾಯದಲ್ಲಿ ೧೦೦ ಶ್ಲೋಕಗಳೂ ಇವೆ. ಹದಿನೈದ ನೆಯ ಪಟಲದಂತೆ ಹದಿನೈದನೆಯ ಅಧ್ಯಾಯದೆಲ್ಲಿ ತುರ್ಯ ವೀರಮತ ವಿಷಯವಿದೆ. ೯೬॥ ಶ್ಲೋಕಗಳಿವೆ. ಹದಿನಾರನೆಯ ಪಟಲದಂತೆ ಹದಿನಾರನೆಯ ಅಧ್ಯಾಯದಲ್ಲಿ ಷಡ್ವಿಧಲಿಂಗ ನಿರೂಪಣವಿದೆ. ಆದರೆ ಪಟಲದಲ್ಲಿ ೧೦೪ ಶ್ಲೋಕಗಳೂ ಅಧ್ಯಾಯದಲ್ಲಿ ೧೧೩ ಶ್ಲೋಕಗಳೂ ಇವೆ. ಹದಿನೇಳನೆಯ ಪಟಲದಂತೆ ಹದಿನೇಳನೆಯ ಅಧ್ಯಾಯದಲ್ಲಿ ವೀರಶೈವ ಬ್ರಾಹ್ಮಣನಿಗೂಪಣವಿದೆ. ಆದರೆ ಪಟಲ ೮೬॥ ಶ್ಲೋಕಗಳೂ ಅಧ್ಯಾಯದಲ್ಲಿ ೮೭ ಶ್ಲೋಕಗಳೂ ಇವೆ ಹದಿನೆಂಟನೆಯ ಪಟಲದಂತೆ ಹದಿನೆಂಟನೆಯ ಅಧ್ಯಾಯದಲ್ಲಿ ನಿರ್ಯಾಣಯೂಗದವಿಷಯವಿದೆ. ಆದರೆ ಪಟಲದಲ್ಲಿ ೧೧೭ ಶ್ಲೋಕಗಳೂ ೧೨೩ ಶ್ಲೋಕ ಗಳೂ ಇವೆ. ಹತ್ತೊಂಬತ್ತನೆಯ ಪಟಲದಂತೆ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಅಂತ್ಯೇಷ್ಟಿ ವಿಧಾನವು ಹೇಳಲ್ಪಟ್ಟಿದೆ. ಆದರೆ ಪಟಲದಲ್ಲಿ ೧೧೧॥ ಶ್ಲೋಕಗಳೂ ಅಧ್ಯಾ ಯದಲ್ಲಿ ೧೧೨ ಶ್ಲೋಕಗಳೂ ಇವೆ. ಇಪ್ಪತ್ತನೆಯ ಪಟಲದಂತೆ ಇಪ್ಪತ್ತನೆಯ ಅಧ್ಯಾ ಯದಲ್ಲಿ ಲಿಂಗವು ಕಳೆದು ಹೋದ ವಿಷಯವಿದೆ. ೯೬ ಶ್ಲೋಕಗಳಿವೆ. ಇಪ್ಪತ್ತೊಂದ ನೆಯ ಪಟಲದಂತೆ ಇಪ್ಪತ್ತೊಂದನೆಯ ಅಧ್ಯಾಯ ಇದ್ದರೂ ಪಟಲದಲ್ಲಿ ೯೬ ಶ್ಲೋಕ ಗಳೂ ಅಧ್ಯಾಯದಲ್ಲಿ ೯೧ ಶ್ಲೋಕಗಳೂ ಇವೆ. ಇಪ್ಪತ್ತೆರಡನೆಯ ಪಟಲದಂತೆ ಇಪ್ಪ ತ್ತೆರಡನೆಯ ಅಧ್ಯಾಯದಲ್ಲಿ ಪರಮಯೋಗದ ವಿಷಯವಿದೆ. ೧೦೬ ಶ್ಲೋಕಗಳಿವೆ.

ಇಲ್ಲಿನವರೆಗೂ ಪಾರಮೇಶ್ವರ ತಂತ್ರದ ಪಟಲಗಳೂ ವೀರರಹಸ್ಯದ ಅಧ್ಯಾಯುಗಳೂ ಒಂದನ್ನೊಂದು ಹೋಲುತ್ತವೆ. ಆದರೆ ವೀರರಹಸ್ಯದಲ್ಲಿ ೨೩ ನೆಯ ಅಧ್ಯಾಯ ಒಂದಿದೆ. ಇದರಲ್ಲಿ ೩೪ ಶ್ಲೋಕಗಳಿವೆ. ಇವುಗಳಲ್ಲಿನ ವಿಷಯುಗಳನ್ನು ಹೇಳತಕ್ಕ ಪಾರಮೇಶ್ವರ ತಂತ್ರದ ೨೩ ನೆಯ ಪಟಲವು ಇಲ್ಲ. ಈ ಅಧ್ಯಾಯುದಲ್ಲಿ ಈಗ ವೀರಶೈವದಲ್ಲಿರುವ ಪಂಚಾಚಾರ್ಯ ಗೋತ್ರ, ಸೂತ್ರ, ಉಪಸೂತ್ರಗಳ ವಿವರವು ಹೇಳಲ್ಪಟ್ಟಿದೆ. (ಕಾಶಿಪೀಠದ ವಿಶ್ವಾರಾಧ್ಯರ ಗೋತ್ರ, ಸೂತ್ರ, ಉಪಸೂತ್ರಗಳೂ ಹೇಳಲ್ಪಟ್ಟಿದೆ).

ಒಟ್ಟಿನಲ್ಲಿ ಪಾರಮೇಶ್ವರ ತಂತ್ರವು ಮೊದಲು ರಚಿತವಾಯಿತೇ ಅಥವಾ ವೀರ ರಹಸ್ಯವು ಮೊದಲು ರಚಿತವಾಯಿತೇ ಎಂಬುದನ್ನು ಶೋಧಿಸಬೇಕಾಗಿದೆ. ಪಾರಮೇಶ್ವರ ತಂತ್ರ ಎಂಬ ಪದವು ವೀರ ರಹಸ್ಯದ ಪ್ರತಿ ಅಧ್ಯಾಯದ ಕೊನೆಯಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಪಾರಮೇಶ್ವರ ತಂತ್ರದ ೭ ನೆಯ ಪಟಲದ ಕೊನೆಯುಲ್ಲಿಯೂ ವೀರಶೈವ ರಹಸ್ಯ ಎಂಬ ಪದವು ಉಪಯೋಗಿಸಲ್ಪಟ್ಟಿದೆ. ಹೀಗೆ ಎರಡೂ ಒಂದನ್ನೊಂದು ಬಹಳವಾಗಿ ಹೋಲುತ್ತವೆ. ಈ ಕಡೆಗೆ ಸಮಾಜದ ಗಮನವು ಹೆಚ್ಚಾಗಿ ಬಿದ್ದು ಪರಿಶೋಧನೆ ಚೆನ್ನಾಗಿ ನಡೆಯಬೇಕಾಗಿದೆ. (ಈ ವೀರರಹಸ್ಯ ಎಂಬ ಗ್ರಂಥದ ಪ್ರತಿಯು ಬ್ಯಾಡಿಗಿ ಶ್ರೀ ಮುಪ್ಪಿನಸ್ವಾಮಿ ಮಠದ ಶ್ರೀ ನಿರಂಜನ ಚನ್ನಬಸವಸ್ವಾಮಿಗಳಲ್ಲಿ ಇರುತ್ತದೆ. ಈ ಸ್ವಾಮಿಗಳವರು ಇಂತಹ ಸಂಶೋಧನಾತ್ಮಕ ಗ್ರಂಥಗಳನ್ನು ಬಹಳವಾಗಿ ಹುಡುಕಿ ತಮ್ಮ ಮಠದ ಗ್ರಂಥಭಂಡಾರದಲ್ಲಿ ಸೇರಿಸಿದ್ದಾರೆ. ಇವರ ಉಪಕಾರವನ್ನು ಸಮಾಜವು ಸ್ಮರಣೆಮಾಡುವುದು ಅವಶ್ಯಕವಾಗಿದೆ.

–(ಸಂ. )

# ೨೭. ಅಷ್ಟಾವರಣದ ವಿಧಗಳು

## ಬ್ರಹ್ಮಾಂಡದ ಅಷ್ಟಾವರಣ

ನಾದವೇ ಗುರು, ಬಿಂದುವೇ ಲಿಂಗ, ಕಲೆಯೇ ಜಂಗಮ, ಜಲವೇ ಪಾದೋದಕ, ಬೆಳೆಯೇ ಪ್ರಸಾದ, ಕಾಣಿಸುವ ಪ್ರಕಾಶವೇ ವಿಭೂತಿ, ಸೂರ್ಯ ಚಂದ್ರಾದಿಗಳೇ ರುದ್ರಾಕ್ಷಿಗಳು, ಪೂರ್ಣ ಬ್ರಹ್ಮಾಂಡದ ರೂಪವೇ ಮಂತ್ರ.

## ಪಿಂಡಾಂಡದ ಅಷ್ಟಾವರಣ

ಕಾಯವೇ ಗುರು, ಪ್ರಾಣವೇ ಲಿಂಗ, ಜ್ಞಾನವೇ ಜಂಗಮ ಗುರುಲಿಂಗ ಜಂಗಮದಲ್ಲಿ ಪಡೆದು ತಕ್ಕೊಳ್ಳತಕ್ಕವೇ ಪಾದೋದಕ ಪ್ರಸಾದಗಳು, ನೇತ್ರಗಳಲ್ಲಿ ವಿಭೂತಿ ರುದ್ರಾಕ್ಷಿಗಳು, ಮಂತ್ರ ಸ್ವರೂಪನೇ ತಾನು.

## ಪಿಂಡಾಂಡ ಬ್ರಹ್ಮಾಂಡಕ್ಕೆ ಸಹಜ ಅಷ್ಟಾವರಣ

ಅರಿವೇ ಗುರು, ಬಿಂದು (ಗೋಳಕಾಕಾರ) ವೇ ಲಿಂಗ, ನಿಜದ ಎಚ್ಚರವೇ ಜಂಗಮ, ಈ ಮೂರು ಒಂದಾದುದೇ ಪಾದೋದಕ, ಆನಂದ ಲೀಲೆಯೇ ಪ್ರಸಾದ ಬಟ್ಟಬಯಲೇ ವಿಭೂತಿ, ಇಷ್ಟು ಒಂದಾದುದೇ ರುದ್ರಾಕ್ಷಿ ಮತ್ತು ಮಂತ್ರ ಹೀಗೆ ಈ ಮೂರನ್ನು ತಿಳಿದುದೇ ಆಚರಣೆ, ಇಂತಿಷ್ಟು ತಾತ್ಪರ್ಯವನ್ನು ತಿಳಿದುದೇ ನಿಜದ ಅಷ್ಟಾವರಣ.

## ಬಹಿರಂಗದ ಅಷ್ಟಾವರಣ

ಕ್ರಿಯೆಯಲ್ಲಿ ಗುರು, ಕರದಲ್ಲಿ ಲಿಂಗ, ಆಚರಣೆಯಲ್ಲಿ ಜಂಗಮ, ಪಾದದಲ್ಲಿ ಪಾದೋದಕ, ಜಿಹ್ವೆಯಲ್ಲಿ ಪ್ರಸಾದ, ಲಲಾಟದಲ್ಲಿ ವಿಭೂತಿ, ಕೊರಳಿನಲ್ಲಿ ರುದ್ರಾಕ್ಷಿ, ವಾಕ್ಕಿನಲ್ಲಿ ಮಂತ್ರ.

## ಅಂತರಂಗದ ಅಷ್ಟಾವರಣ

ಅರಿವಿನಲ್ಲಿ ಗುರು, ಪ್ರಾಣದಲ್ಲಿ ಲಿಂಗ, ಸುಜ್ಞಾನದಲ್ಲಿ ಜಂಗಮ, ಜಿಹ್ವೆಯಲ್ಲಿ ಪಾದೋದಕ. ನಾಸಿಕದಲ್ಲಿ ಪ್ರಸಾದ, ತ್ವಕ್ಕಿನಲ್ಲಿ ವಿಭೂತಿ, ನೇತ್ರದಲ್ಲಿ ರುದ್ರಾಕ್ಷಿ, ಕರ್ಣದಲ್ಲಿ ಮಂತ್ರ.

(ಈ ಐದು ವಿಧಗಳನ್ನು ಪೂರ್ವಿಕ ಮಹನೀಯರ ಲೇಖನದಿಂದ ತಿಳಿದು ಬಂದಂತೆ ಇಲ್ಲಿ ಕೊಡಲಾಗಿದೆ).

—(ಸಂ.)

# ೨೮. ಅಥರ್ವಣ ವೇದ ಸಂಬಂಧದ ಹನ್ನೊಂದು ಉಪನಿಷತ್ತುಗಳು

(ಅಥರ್ವಣವೇದೀಯಾ ಉಪನಿಷದಃ) "Eleven Athorovono uponishonds" ಎಂಬ ಪುಸ್ತಕವು ಮುಂಬಯಿ ಇಲಾಖೆಯವರಿಂದ ೧೮೯೨ ರಲ್ಲಿ ಪ್ರಕಟವಾಗಿದೆ. (ಮೈಸೂರು ಪ್ರಾಚ್ಯ ಪುಸ್ತಕಾಲಯದ ಸಂಖ್ಯೆ ಬಿ. ೩೦೫) ಇದರಲ್ಲಿ ಇರುವ ಕಾಲಾಗ್ನಿ ರುದ್ರೋಪನಿಷತ್, ಕೃಷ್ಣೋಪನಿಷತ್ ಆತ್ಮಬೋಧೋಪನಿಷತ್, ನಾರಾಯಣೋಪನಿಷತ್, ವಾಸುದೇವೋಪನಿಷತ್, ಗರುಡೋಪನಿಷತ್, ಮಹೋಪನಿಷತ್, ಸ್ಕಂದೋಪನಿಷತ್, ಎಂಬ ಎಂಟು ಉಪನಿಷತ್ತುಗಳು ಮುಂಬಯಿಯಲ್ಲಿ ಮುದ್ರಣವಾದ "ಅಷ್ಟೋತ್ತರಶತೋಪನಿಷದಃ" ಎಂಬ ಪುಸ್ತಕದಲ್ಲಿ ಪ್ರಕಟವಾಗಿದೆ. ಕರ್ನಲ್ ಜಿ. ಎ. ಜಾಕಬ್ ಎಂಬುವರು ಅನೇಕ ಬರಹ ಪ್ರತಿಗಳೊಂದಿಗೆ ಹೋಲಿಸಿ ಪಾಠಾಂತರಗಳನ್ನು ಕೊಟ್ಟು ಟಿಪ್ಪಣಿಗಳೊಡನೆ ಈ ಪುಸ್ತಕವನ್ನು ಮುದ್ರಿಸಿ ಪ್ರಕಟಿಸಿ ಇರುತ್ತಾರೆ. ೧೦೮ ಉಪನಿಷತ್‌ಗಳಲ್ಲಿ ಮೇಲೆ ಕಂಡ ಎಂಟು ಉಪನಿಷತ್‌ಗಳನ್ನು ಹೋಲಿಸಿ ನೋಡಿದರೆ ಮುಂಬಯಿ ಪ್ರತಿಯು ಚೆನ್ನಾಗಿ ಪರಿಶೋಧಿಸಲ್ಪಟ್ಟಂತೆ ತೋರುವುದಿಲ್ಲ.

ಮೇಲೆ ಕಂಡ ಕಾಲಾಗ್ನಿರುದ್ರೋಪನಿಷತ್ತಿನ ವಿಷಯವಾಗಿ ಪ್ರಕಾಶಕರು ತಮ್ಮ ಪೀಠಿಕೆಯಲ್ಲಿ ಹೀಗೆ ಹೇಳುತ್ತಾರೆ :– ಪ್ರೊಫೆಸರ್ ವೇಬರ್ (Weber) ಎಂಬುವರು ಬರೆದ ಹಿಂದೂ ದೇಶದ ಗ್ರಂಥಗಳ ಚರಿತ್ರೆ History of Indian Liturature) ಎಂಬುದರಲ್ಲಿ ಈ ಉಪನಿಷತ್ತಿನ ಮೂರು ಬಗೆಯ ಶೋಧಿಸಿದ ಪ್ರತಿಗಳಿವೆ, ಎಂದು ಹೇಳಿರುತ್ತಾರೆ. ನನಗೆ ಎರಡು ಬಗೆ ಮಾತ್ರ ಸಿಕ್ಕಿವೆ. ಈ ಪುಸ್ತಕದಲ್ಲಿ ಪ್ರಕಟಿಸಿರುವುದೊಂದು ನಮೂನೆ. ಇನ್ನೊಂದು ನಂದಿಕೇಶ್ವರ ಪುರಾಣೋಕ್ತ ಎಂಬುದಾಗಿ ಶಿರೋಲೇಖದಲ್ಲಿ ತೋರಿಸಲ್ಪಟ್ಟಿದೆ. ಈ ಎರಡನೆಯದರಲ್ಲಿನ ಮುಖ್ಯ ವ್ಯತ್ಯಾಸವಿಷ್ಟು.

ಇದರೊಳಗೆ ಕರನ್ಯಾಸ ಮೊದಲಾದ ವಿಷಯಗಳು ಜೋಡಿಸಲ್ಪಟ್ಟಿವೆ. ಮಹಾನಾರಾಯಣೋಪನಿಷತ್ತಿನ ಪ್ರಮಾಣಗಳನ್ನು ಸಂಪೂರ್ಣವಾಗಿ ತುಂಬಿಕೊಂಡಿದೆ ಮತ್ತು ತ್ರಿಪುಂಡ್ರ, ಭಸ್ಮಸ್ನಾನ ಈ ವಿಷಯಗಳ ಸ್ತೋತ್ರದೊಡನೆ ಕೂಡಿದೆ. ಈ ಪ್ರಕಟಿಸಿದ ಪುಸ್ತಕದಲ್ಲಿ ಸನತ್ಕುಮಾರ, ಕಾಲಾಗ್ನಿರುದ್ರ, ಇವರಲ್ಲಿ ನಡೆದ ಸಂವಾದವಿದೆ. ತ್ರಿಪುಂಡ್ರ ವಿಷಯವಾಗಿ ಅದರಲ್ಲಿ ಎಷ್ಟು ರೇಖೆಗಳಿವೆ. ಅವುಗಳನ್ನು ಎಲ್ಲಿ ಧರಿಸಬೇಕು, ಇದಕ್ಕಾಗಿ ಯಾವ ವಸ್ತುವು ಬೇಕು ? ಯಾವ ಮಂತ್ರಗಳನ್ನು ಹೇಳಬೇಕು ? ಇವನ್ನು ಸರಿಯಾಗಿ ನಡೆಸಿದರೆ ಅದರ ಫಲವಾಗಿ ಜನ್ಮಾಂತರದಿಂದ ಬಿಡುಗಡೆ ಆಗುವ

(ಮೋಕ್ಷ) ಆಗುವ ವಿಚಾರ ಈ ಸಂಬಂಧವ ಸಂವಾದವು ನಡೆದಿದೆ— ಇದನ್ನು ನೋಡಿದರೆ ಪಾಶ್ಚಾತ್ಯ ಮಹನೀಯರು ಹಿಂದೂ ದೇಶದಲ್ಲಿ ಇರುವ ಧರ್ಮದ ಜ್ಞಾನವನ್ನು ಮಾಡಿಕೊಳ್ಳಲಿಕ್ಕೆ ಎಷ್ಟು ಸಾಹಸಪಡುತ್ತಿದ್ದರು ? ಎಷ್ಟು ಪರಿಶೋಧನೆ ಮಾಡುತ್ತಿದ್ದರು ? ಎಂಬುದು ವ್ಯಕ್ತಪಡುತ್ತದೆ. ವೀರಶೈವರು ಅತ್ಯಾಸಕ್ತಿಯಿಂದ ಈ ಕಾರ್ಯವನ್ನು ಈಗ ನಡೆಯಿಸಬೇಕಾಗಿದೆ. ಈ ಉಪನಿಷತ್ತಿನಲ್ಲಿ ಹೇಳಲ್ಪಟ್ಟಂತೆ ತ್ರಿಪುಂಡ್ರ ಧಾರಣ ಕ್ರಮವೂ ಮಂತ್ರಗಳೂ ಈಗ ವೀರಶೈವರಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಬಳಕೆಯಲ್ಲಿ ಇವೆ. ಮ॥ ರಾ॥ ಜಾಕಬ್‌ರವರು ನೋಡಿರುವ ಭಸ್ಮಸ್ನಾನಾದಿಗಳನ್ನೂ ಕರನ್ಯಾಸಗಳನ್ನೂ ವಿವರಿಸಿರುವ ಕಾಲಾಗ್ನಿರುದ್ರೋಪನಿಷತ್ತು— ಕರ್ನಲ್ ವೇಬರ್‌ರವರು ನೋಡಿರುವ ಇನ್ನೊಂದು ಬಗೆಯ ಕಾಲಾಗ್ನಿರುದ್ರೋಪನಿಷತ್ತು ದೊರೆತರೆ ವಿರಶೈವರಿಗೆ ಇನ್ನೂ ಹೆಚ್ಚಿನ ಜ್ಞಾನವುಂಟಾಗುವುದು. ಈ ವಿಧದ ಶೋಧನ ಮತ್ತು ಮುದ್ರಣದ ಕೆಲಸವೂ ವೀರಶೈವರಿಂದ ಆಗಬೇಕು. ಮೇಲೆ ಕಂಡ ಉಪನಿಷತ್ತನ್ನು ನೋಡಿದುದರಲ್ಲಿ ಮಾನಸ್ತೋಕ ಮಂತ್ರದಿಂದ ಭಸ್ಮವನ್ನು ಕೈಗೆ ತೆಗೆದುಕೊಂಡು "ತ್ರ್ಯಂಬಕಂ ಯಜಾಮಹೇ" ಎಂಬ ಮಂತ್ರದಿಂದ ತ್ರಿಪುಂಡ್ರವನ್ನು ಶಿರಸ್ಸು, ಹಣೆ, ಎದೆ, ಭುಜಾದಿಗಳಲ್ಲಿ ಧಾರಣೆ ಮಾಡಬೇಕೆಂದಿದೆ. ಇದು ಶಾಂಭವ ವ್ರತ ಎಂತಲೂ ಹೀಗೆ ಸರ್ವ ವೇದಗಳಲ್ಲಿ ವೇದವಾದಿಗಳಿಂದ ಹೇಳಲ್ಪಟ್ಟಿರುವುದೆಂತಲೂ ಮೊದಲನೆಯ ರೇಖೆಗೆ ಮಹೇಶ್ವರನು ದೇವತೆ, ಎರಡನೆಯ ರೇಖೆಗೆ ಸದಾಶಿವನು ದೇವತೆ, ಮೂರನೆಯ ರೇಖೆಗೆ ಶಿವನು ದೇವತೆ, ಎಂತಲೂ ಹೇಳಲ್ಪಟ್ಟಿದೆ. ವಾತುಲಾಗಮದಲ್ಲಿ ಶಿವತತ್ವ ಸಾದಾಶಿವತತ್ತ್ವ, ಮಹೇಶ್ವರತತ್ತ್ವ ಎಂಬುದಾಗಿ ಮೂರು ತತ್ತ್ವಗಳನ್ನು ಮುಖ್ಯವಾಗಿ ಮೊದಲು ಹೇಳಿರುವುದಕ್ಕೂ ವಚನಕಾರರು ಈ ಮೂರು ಹೆಸರುಗಳನ್ನು ಉಪಯೋಗಿಸಿಕೊಂಡಿರುವುದಕ್ಕೂ ಈ ವಿಷಯವು ಸರಿಹೋಗುತ್ತದೆ.

ಪರವಸ್ತುವೇ ಮೇಲೆ ಕಂಡ ತತ್ವವಾಗಿ ಗುರುಲಿಂಗ ಜಂಗಮವೆನಿಸಿಕೊಂಡಿರುವುದೆಂದು ವೀರಶೈವರ ಭಾವನೆ. ತ್ರಿಪುಂಡ್ರವನ್ನು ಧರಿಸಿದವನು ದೇವತೆಗಳಿಂದ ತಿಳಿಯಲ್ಪಡುವವನಾಗುತ್ತಾನೆ. ಎಂದರೆ ದೇವತೆಗಳೂ ತ್ರಿಪುಂಡ್ರಧಾರಿಗಳ ವಿಷಯವಾಗಿ ತಿಳಿಯಬೇಕೆಂದು ಅಪೇಕ್ಷಿಸುತ್ತಾರೆ. ಎಂಬುದೇ ಮುಂತಾದ ವಿಷಯವು ಧಾರಣದ ಫಲಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಆದರೆ ೧೦೮ ಉಪನಿಷತ್ತುಗಳಲ್ಲಿನ ಕಾಲಾಗ್ನಿರುದ್ರೋಪನಿಷತ್ತಿನಲ್ಲಿ ಹೇಳಿದ ಮನೋಮಹಂತ ಮಿತಿ ಮಂತ್ರದಿಂದ ಭಸ್ಮವನ್ನು ನೀರಿನೊಡನೆ ಮಿಶ್ರಮಾಡಬೇಕು ಎಂಬ ವಿಷಯವಿಲ್ಲ. ಮತ್ತು ಅದರಲ್ಲಿ ತ್ರಿಪುಂಡ್ರಧಾರಿಯು ದೇವತೆಗಳನ್ನು ತಿಳಿದವನಾಗುತ್ತಾನೆ ಎಂದಿದೆ. ಮಹೇಶ್ವರ ಸದಾಶಿವ ಶಿವ ಎಂಬ ಹೆಸರು ಆಗಮದಂತೆ ಹೇಳಲ್ಪಟ್ಟಿಲ್ಲ. ಇವನ್ನೆಲ್ಲಾ ನೋಡಿದರೆ ೧೦೮ ಉಪನಿಷತ್ತುಗಳನ್ನು ಪ್ರಕಾಶಕ್ಕೆ ತಂದವರು ಅನೇಕ ಪ್ರತಿಗಳನ್ನು ಪರಿಶೋಧಿಸಿ ಬರೆದಿಲ್ಲ. ಕೆಲವು ಅಂಶಗಳನ್ನು ಸೇರಿಸಲಿಕ್ಕೂ ಕಳೆಯಲಿಕ್ಕೂ ಪ್ರಯತ್ನಿಸಿ ಇದ್ದಾರೆ ಎಂದು ವ್ಯಕ್ತವಾಗುತ್ತದೆ. ವೇಬರ್‌ರವರು ೧೨ ಪ್ರತಿಗಳನ್ನು ನೋಡಿ ಇವನ್ನು

ಮುದ್ರಿಸಿರುವುದಾಗಿ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದುದರಿಂದ ಈ ಉಪನಿಷತ್ತು ನಂಬತಕ್ಕುದಾಗಿದೆ.

ನಾವು ಕೆಲವು ಉಪನಿಷತ್ತುಗಳ ಎರಡು, ಮೂರು, ನಾಲ್ಕು, ಬರೆಹದ ಪ್ರತಿಗಳನ್ನು ನೋಡಿ ವ್ಯತ್ಯಾಸಗಳನ್ನು ಗುರ್ತಿಸಿ ಇಟ್ಟಿದ್ದೇವೆ. ಸಂದರ್ಭಗಳು ಅನುಕೂಲವಾದಂತೆ ಅವುಗಳನ್ನು ಪ್ರಕಟಿಸಬಹುದು. ೧೦೮ ರಲ್ಲಿ ಮತ್ತು ಇದರಲ್ಲಿ ಇರುವ ಎಂಟು ಉಪನಿಷತ್ತುಗಳನ್ನು ಹೋಲಿಸುವಲ್ಲಿ ನಾವು ಪ್ರಯತ್ನಿಸಿದಾಗ ಅನೇಕ ವ್ಯತ್ಯಾಸಗಳು ತೋರಿಬಂದಿವೆ. ಈ ದೆಸೆಯಿಂದ ಈಗ ಮುದ್ರಣವಾದ ೧೦೮ ಉಪನಿಷತ್ತುಗಳ ಪರಿಶೋಧನೆಯೂ ಇನ್ನೊಮ್ಮೆ ನಡೆಯಬೇಕೆಂದು ನಮ್ಮ ಅಭಿಪ್ರಾಯ.

ಮೇಲೆ ಕಂಡ ಉಪನಿಷತ್ತುಗಳಲ್ಲಿದೆ. ಆಶ್ರಮೋಪನಿಷತ್, ವರದತಾಪನಿ ಉಪನಿಷತ್ತು ಈ ಎರಡು ಉಪನಿಷತ್ತುಗಳು ಮೇಲೆ ಕಂಡ ಹನ್ನೊಂದರಲ್ಲಿ ಸೇರಿ ಇವೆ. ಇವುಗಳಲ್ಲಿ ವರದ ತಾಪನಿ ಉಪನಿಷತ್ತು ಪೂರ್ವ, ಉತ್ತರ ಎಂಬುದಾಗಿ ಎರಡು ಭಾಗವಾಗಿ ವಿಭಾಗಿಸಲ್ಪಟ್ಟು ಅವು ಗಣಪತಿಯ ವಿಷಯವನ್ನು ಒಳಗೊಂಡಿದೆ. ಇವೆರಡರ ಒಳಭಾಗವಾಗಿ ಒಂಬತ್ತು ಉಪನಿಷತ್ತುಗಳಿವೆ. ಆಶ್ರಮೋಪನಿಷತ್ತಿನಲ್ಲಿ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಲ್ಲಿ ಒಂದೊಂದು ನಾಲ್ಕರಂತೆ ಹದಿನಾರು ಭಾಗಗಳು ಮಾಡಲ್ಪಟ್ಟಿವೆ. ನಾಲ್ಕನೆಯ ಪರಿವ್ರಾಜಕ ಆಶ್ರಮದಲ್ಲಿ ಕುಟೀಚರ, ಬಹೂದಕ ಹಂಸ, ಪರಮಹಂಸ ಎಂಬುದಾಗಿ ನಾಲ್ಕು ಭಾಗಗಳು ವಿಂಗಡಿಸಲ್ಪಟ್ಟು ಅವರಲ್ಲಿ ಪರಮಹಂಸರು ದಂಡವನ್ನು ಕೈಲಿ ಹಿಡಿದಿರುವವರಲ್ಲವೆಂತಲೂ, ಕಂಥಾ ಕೌಪೀನವುಳ್ಳವರೆಂತಲೂ, ಅವ್ಯಕ್ತಲಿಂಗರು ಅವ್ಯಕ್ತಾಚಾರವುಳ್ಳವರೆಂತಲೂ ಕಮಂಡಲು ಯಜ್ಞೋಪವೀತ ಮೊದಲಾದವುಗಳನ್ನು ತ್ಯಾಗಮಾಡಿದವರೆಂತಲೂ ವಿವರಿಸಲ್ಪಟ್ಟಿದೆ. ವೀರಶೈವರಲ್ಲಿ ಪ್ರಚಾರದಲ್ಲಿರುವ ಶೂನ್ಯ ಸಂಪಾದನೆಯಲ್ಲಿ ಜಂಗಮರು ಅವ್ಯಕ್ತಲಿಂಗರು ಅವ್ಯಕ್ತಾಚಾರವುಳ್ಳವರು ಎಂಬುದಾಗಿ ಬರೆಯಲ್ಪಟ್ಟಿದೆ. ಇದಲ್ಲವೆ ಇಲ್ಲಿ ಹೇಳಿದ ಮಿಕ್ಕ ಲಕ್ಷಣಗಳೂ ವೀರಶೈವ ಜಂಗಮರಲ್ಲಿವೆ.

"ಪರಮಹಂಸ ಪರಿವ್ರಾಜಕಾಚಾರ್ಯ" ಎಂಬುದಾಗಿ ಬೆಳಗಾಂವ ಜಿಲ್ಲಾ ಹೂಲಿ ಎಂಬ ಗ್ರಾಮದಲ್ಲಿನ ಮಠಾಧಿಕಾರಿಗಳೂ ವಿಶೇಷಿಸಲ್ಪಡುತ್ತಿದ್ದಾರೆ. ಈ ಮಠವು ಬಹಳ ಪೂರ್ವ ಕಾಲದುದೆಂದು ಅವರು ಬರೆಯುತ್ತಲೂ ಇದ್ದಾರೆ. ಇವನ್ನೆಲ್ಲಾ ನೋಡಿ ಈ ವಿಧದ ಪರಿವ್ರಾಜಕಾಶ್ರಮವನ್ನೇ ಹಿನ್ನೆಲೆಯಾಗಿ ಇಟ್ಟುಕೊಂಡು ಮುಂದುವರೆಸಿ ಈಗಿನ ವೀರಶೈವ ಜಂಗಮವು ಪ್ರಚಾರಕ್ಕೆ ಬಂದಿತೆಂದು ತಿಳಿಯಬಹುದಾಗಿದೆ.

ಆದರೆ ವೀರಶೈವ ಎಂಬುದು ಈ ಉಪನಿಷತ್ತಿನ ಕಾಲಕ್ಕಿಂತಲೂ ಪೂರ್ವದು ಎಂದು ನಿಶ್ಚಯಿಸಬೇಕಾದರೆ ಇನ್ನೂ ಶೋಧನೆಗಳನ್ನು ನಡೆಯಿಸಬೇಕಾಗಿದೆ.

ಹನ್ನೊಂದರಲ್ಲಿ ಉಳಿದಿನ್ನೊಂದು ಗೋಪಿಚಂದನೋಪನಿಷತ್ ಅದು ಗೋಪಿಚಂದನವನ್ನು ಹೇಗೆ ಧರಿಸಬೇಕೆಂಬುದನ್ನೂ ಅದು ಹೇಗೆ ಹುಟ್ಟಿತೆಂಬುದನ್ನೂ ಧರಿಸುವುದರಿಂದಾಗುವ ಫಲವನ್ನೂ ವಿವರಿಸುತ್ತದೆ.

ಹಣೆಯಲ್ಲಿನ ಭಸ್ಮವಾಗಲೀ, ಗೋಪಿಚಂದನವಾಗಲೀ ಇವರ ಹಣೆಯ ಗುರುತು ಗಳಾಗಲೀ ಹೊರಗೆ ಅವರನ್ನು ನೋಡುವ ಜನರಿಗೆ ಇವರು ಇಂತಹ ಧರ್ಮದವರು ಎಂಬುದು ವ್ಯಕ್ತಪಡಲಿ ಎಂಬುದಕ್ಕೆ ಏರ್ಪಟ್ಟುದೇ ಮುಖ್ಯವಾದ ಕಾರಣವೆಂದೂ ಅದರ ಮಹಿಮೆಯು ವಿಶೇಷವೆಂಬ ಮೂಢಭಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಮಿತಿ ಮೀರಿದ ವರ್ಣನೆಯು ಉಪನಿಷತ್ತುಗಳಲ್ಲಿ ಮಾಡಲ್ಪಟ್ಟಿರುವುದೆಂದೂ ಅದರೂ ಅವುಗಳ ಧಾರಣೆಯಿಂದ ಕೆಲವು ಮಟ್ಟಿಗೆ ಪ್ರಯೋಜನವುಂಟೆಂದೂ ಆ ಪ್ರಯೋಜನವೂ ಹೆಚ್ಚು ಕಡಿಮೆ ತರಹೆಯಲ್ಲಿ ಇರಬಹುದೆಂದೂ ನಾವು ನಂಬುತ್ತೇವೆ.

ಅನೇಕವಾದ ಧರ್ಮ ವಿಷಯಗಳು ಉಪನಿಷತ್ತುಗಳಲ್ಲಿ ಬಂದಿರುವುದರಿಂದ ಅವುಗಳೆಲ್ಲವನ್ನೂ ಪರಿಶೀಲಿಸಿ ವೇದಾಗಮಗಳನ್ನೂ ನೋಡಿ ಹಿಂದೂದೇಶಕ್ಕೆ ಒಂದೇ ಧರ್ಮ ಪದ್ಧತಿಯನ್ನು ಉಂಟು ಮಾಡುವುದು ಅವಶ್ಯಕವಾಗಿದೆ. ಹಾಗಿಲ್ಲದೆ ಮನ ಬಂದಂತೆ ಏರ್ಪಡಿಸುವುದೂ ಧರ್ಮವೇ ಬೇಡವೆಂದು ಬಿಟ್ಟುಬಿಡುವುದೂ ಒಳ್ಳೆಯದಲ್ಲ.

(ಸಂ. ೫೬-೫೭)

# ೨೯. ಕೋಳೂರು ಕೊಡಗೂಸು

"ಕೋಳೂರು ಕೊಡಗೂಸು" ಎಂಬ ಬಾಲಿಕೆಯು ಶಿವನಲ್ಲಿ ಭಕ್ತಿಯನ್ನು ತೋರಿಸಿ ಮುಕ್ತಿಯನ್ನು ಪಡೆದಳೆಂದು ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಪ್ರಸಿದ್ಧ ಶಿವ ಕವಿಯಾದ ಹಂಪೆಯ ಹರೀಶ್ವರ (ಹರಿಹರ) ದೇವನು ಈ ಕೊಡಗೂಸಿನ ವಿಷಯವಾಗಿ ಒಂದು "ರಗಳೆ" ಗ್ರಂಥವನ್ನು ಬರೆದಿದ್ದಾನೆ. ಕೋಳೂರು ಕೊಡಗೂಸಿನ ರಗಳೆ ಎಂಬ ಹೆಸರು ಅದಕ್ಕೆ ಇದೆ. ಈ ಗ್ರಂಥವನ್ನು ಸದ್ಧರ್ಮ ಗ್ರಂಥಮಾಲೆ ೩ ನೆಯದಾಗಿ ಹಾವೇರಿಯಲ್ಲಿ ಕ್ರಿ. ಶ. ೧೯೩೧ ರಲ್ಲಿ ಮುದ್ರಿಸಿದುದಾಗಿದೆ. ಈಗಲೂ ಸದ್ಧರ್ಮ ದೀಪಿಕೆಯ ಕಾರ್ಯಾಲಯದಲ್ಲಿ ದೊರೆಯುತ್ತದೆ. ಈ ಕೊಡಗೂಸಿನ ಸಂಬಂಧದಲ್ಲಿ ಒಂದು ಹಾಡು ಪ್ರಚಲಿತವಾಗಿ ರೂಢಿಯಲ್ಲಿದೆ.

ಹಾಡಿನಿಂದ ಕೊಡಗೂಸಿನ ತಂದೆಯ ಹೆಸರು ಶಿವದೇವನೆಂದು ಗೊತ್ತಾಗುತ್ತದೆ. ಭೀಮಕವಿಯು ಬಸವ ಪುರಾಣದಲ್ಲಿ ಈ ಕೊಡಗೂಸಿನ ಹೆಸರು ಚನ್ನಕ್ಕ ಎಂದು ಹೇಳಿರುತ್ತಾನೆ. ಉಡುತಡಿಯ ಮಹಾದೇವಿಯಕ್ಕನ ಪುರಾಣವಲ್ಲಿಯೂ ಈ ಕೋಳೂರು ಕೊಡಗೂಸಿನ ಹೆಸರು ಚನ್ನವ್ವೆ ಎಂದಿದೆ. ಆದರೆ ಹರೀಶ್ವರನು ಕೊಡಗೂಸಿನ ತಂದೆಯ ಹೆಸರನ್ನು ಹೇಳಿಲ್ಲ ತಾಯಿಯ ವಿಷಯವಾಗಿ ಹೀಗೆ ಹೇಳಿದ್ದಾನೆ—

ಉತ್ತರದಿಶಾ ಭಾಗದೊಳಗೊಂದು ಶಿವಪುರಂ
ಬಿತ್ತರಿಪ ಕೋಳೂರೆನಿಪ್ಪ ಪೆರ್ಮೆಯ ಪುರಂ
ಅಲ್ಲಿರ್ಪಳೋರ್ವ ಶಿವಭಕ್ತೆ ಶಂಕರಯುಕ್ತೆ
ಸಲ್ಲಲಿತ ಸತ್ಯ ಭಾಷಣೆ ಭೂಮಿಗತಿ ಶಕ್ತೆ

(ಇಲ್ಲಿ ಶಂಕರಯುಕ್ತೆ ಎಂಬ ಪದದಿಂದ ಲಿಂಗಧಾರಣ ಮಾಡಿದವಳು ಎಂಬ ಅಭಿಪ್ರಾಯವಾಗುತ್ತದೆ). ಇಷ್ಟು ಮಾತ್ರ ಹೇಳಿರುವುದರಿಂದ ಹರಿಹರನಿಗೆ ಕೋಳೂರು ಎಲ್ಲಿರುವುದೆಂಬುದಾಗಲೀ ಕೊಡಗೂಸಿನ ತಂದೆ ತಾಯಿಗಳಾರೆಂಬುದಾಗಲೀ ಐತಿಹಾಸಿಕ ವಾಗಿ ತಿಳಿದಂತೆ ತೋರುವುದಿಲ್ಲ. ಇವಲ್ಲದೆ ಹಾಡು ಮತ್ತು ಇತರ ಗ್ರಂಥಗಳಲ್ಲಿ ಕೊಡಗೂಸಿನ ವಿಷಯವಾಗಿ ಹೇಳಿದುದಕ್ಕೂ ಹರಿಹರ ಕವಿಯು ಹೇಳಿದುದಕ್ಕೂ ಕೆಲವು ವ್ಯತ್ಯಾಸಗಳಿವೆ. ಕಲ್ಲಿನಾಥನಿಗೆ ಹಾಲಿನಭಿಷೇಕವನ್ನು ಮಾಡಿ ಬರಬೇಕೆಂದು ನೊರೆಹಾಲನ್ನು ಕೊಡದಲ್ಲಿ ತುಂಬಿ ಕೊಡಗೂಸನ್ನು ಕಳುಹಿಸಿದಂತೆ ಹರಿಹರನು ಹೇಳುತ್ತಾನೆ, ಕಲ್ಲಿನಾಥನ ಗುಡಿಗೆ ಹೋಗಿ ೩–೪ ದಿವಸದಲ್ಲಿ ವಾಪಸು ಬರುತ್ತೇವೆ. ಅಲ್ಲಿನವರೆವಿಗೂ ನೀನು ಕೋಳೂರಿನ ಶಿವದೇವಾಲಯಕ್ಕೆ ಹಾಲನ್ನು ನಿವೇದನ ಮಾಡಿ ಬರಬೇಕೆಂದು ತಂದೆ ತಾಯಿಗಳು ಕೋಳೂರನ್ನು ಬಿಟ್ಟು ಹೋದಂತೆ ಹಾಡಿನಲ್ಲಿ ಹೇಳಲ್ಪಟ್ಟಿದೆ. ಇತರ ಗ್ರಂಥಗಳು ನೈವೇದ್ಯಕ್ಕಾಗಿ ಹಾಲನ್ನು ತೆಗೆದುಕೊಂಡು

ಹೋದಂತೆ ಹೇಳುತ್ತವೆ. ಮೊದಲು ೨-೩ ದಿನಗಳು ಹಾಲು ಕುಡಿಸಿ ತಂದೆಯು ಬಂದ ದಿನ ಶಿವನೊಪ್ಪಿಕೊಂಡಂತೆ ಹಾಡಿನಲ್ಲಿ ಇದೆ. ತೆಗೆದುಕೊಂಡು ಹೋದದಿನವೇ ಕೈಲಾಸದ ಪ್ರಯಾಣವಾದಂತೆ ಹರಿಹರನು ಹೇಳುತ್ತಾನೆ. ಇವೇ ಮೊದಲಾದ ವ್ಯತ್ಯಾಸ ಗಳನ್ನು ನೋಡಿದರೆ ಹರಿಹರ ಕವಿಯು ವರ್ಣನಾ ಕವಿಯೇ ಹೊರತು ನಿಜ ವಿಷಯದ ಗಣನಾ ಕವಿಯಲ್ಲವೆಂದು ಗೊತ್ತಾಗುತ್ತದೆ. ಮತ್ತು ತನ್ನ ಮನಸ್ಸಿಗೆ ಮೆಚ್ಚುಗೆ ಯಾಗುವಂತೆ ಗ್ರಂಥರಚನೆ ಮಾಡುವವನೆಂದೂ ತಿಳಿದು ಬರುತ್ತದೆ.

ಈ ಕೊಡಗೂಸಿದ್ದ ಕೋಳೂರು ಗ್ರಾಮವು ಬಳ್ಳಾರಿ ಪ್ರಾಂತದಲ್ಲಿನ ಕೋಳೂರು ಎಂಬುದಾಗಿ ಈ ಹಿಂದೆ ತಿಳಿಯಲ್ಪಟ್ಟಿದ್ದಿತು. ಈಚಿಗಿನ ಶೋಧನೆಯಿಂದ ಶಿವಮೊಗ್ಗ ಜಿಲ್ಲೆಯ ಸಾಗರದ ತಾಲ್ಲೂಕು ಇಕ್ಕೇರಿ ಹೋಬಳಿಗೆ ಸೇರಿದ ಕೋಳೂರು ಗ್ರಾಮ ಒಂದು ಇರುವುದಾಗಿ ಗೊತ್ತಾಗಿದೆ. ಶಿವಮೊಗ್ಗ ಡಿಸ್ಟ್ರಿಕ್ಟಿನ ಶಾಸನಗಳ ಪುಸ್ತಕ (ಎಪಿಗ್ರಾಫಿಯಾ ಕರ್ನಾಟಕಾ ನಂ. ೮) ಎಂಬ ಪುಸ್ತಕದಲ್ಲಿ ಸಾಗರ ತಾಲೂಕಿನ ೧೦೫ ನೆಯ ಸಂಖ್ಯೆಯ ಶಾಸನವು ಹೀಗೆ ಇದೆ. ಅದೇ ಹೋಬಳಿ (ಇಕ್ಕೇರಿ) ಕೋಳೂರು ಗ್ರಾಮದ ಕೊಡಗೂಸು ದೇವಾಲಯದ ಬಳಿ ಕಾನಿನಲ್ಲಿ ನೆಟ್ಟಿರುವ ಬಸವನ ಕಲ್ಲು "ಸ್ವಸ್ತಿಶ್ರೀಮತು ಜಯಂತಿ ವೈಜಯಂತಿ ಕನಕಾಪುರ ಬನವಾಸೆಯಲ್ಲಿ ಚಾತುಲಯ್ಯಗದಲು ಯಾದಿ ಮುದುಕನಾಥ ದೇವರಿಗೆ ರುಧಿರೋದ್ಗಾರಿ ಸಂವತ್ಸರದಲ್ಲಿ ಶ್ರೀ ಮನು ಮಹಾಮಂಡಲೇಶ್ವರಂ ಶಡಿಯುಂಕಂಗೆ ಸೂರ್ಯಮಂಡಲಮಂ ನತಂ ಮಸೆಡೆಯುರು ಕೋಳೂರನು ಗೋಪೊ ಬಡಗಿನಾಡ ಸಮಸ್ತ ಪ್ರಭುಗಳು ಮುಂತಾಗಿ ಸರ್ಬ ಅಧಿಕಾರಿ ಗೋಪಣ್ಣನವರು ಸಹಿತ ಮಧುಕ್ಯ ದೇವರಿಗೆ ಧಾರಾಪೂರ್ವಕವಾಗಿ ಕೊಟ್ಟರು ಮಂಗಳ ಮಹಾ ಶ್ರೀ ಶ್ರೀ ಶ್ರೀ"

ಈ ಶಾಸನವು ಕೋಳೂರು ಕೊಡಗೂಸಿನ ದೇವಾಲಯದ ಬಳಿ ಇರುವುದಾಗಿ ಶಾಸನದ ಪುಸ್ತಕದಿಂದ ತಿಳಿಯುಬರುತ್ತದೆ. ಮತ್ತು ಕೋಳೂರನ್ನು ಧಾರಾಪೂರ್ವಕ ವಾಗಿ ದಾನ ಮಾಡಿದರೆಂದು ಶಾಸನದಿಂದ ಗೊತ್ತಾಗುತ್ತದೆ. ಬನವಾಸಿ ಜಯಂತಿ ವೈಜಯಂತಿ ಕನಕಾಪುರ ಬನವಾಸೆ ಎಂಬ ನಾಡಿನ ಮುಖ್ಯ ನಗರವಾದ ಬನವಾಸೆ ಗ್ರಾಮದಲ್ಲಿ ಪ್ರಸಿದ್ಧವಾದ ಮಧುಕೇಶ್ವರ ದೇವರಿಗೆ ಕೊಟ್ಟಿದ್ದಾರೆ. ಈ ಕಲ್ಲು ಕೋಳೂರಿನ ಕಾನಿನಲ್ಲಿ (ತೋಟಕ್ಕಾಗಿ ಬೆಳೆಸುವ ಸೊಪ್ಪಿನ ಗಿಡಗಳುಳ್ಳ ಚಿಕ್ಕ ಅಡಿವಿ) ಇರುವ ಕೋಳೂರು ಕೊಡಗೂಸಿನ ದೇವಾಲಯದ ಬಳಿ ನೆಟ್ಟಿರುವ ಬಸವನ ಕಲ್ಲು ಆಗಿದೆ. ಬಡಗಿ ನಾಡಿನ ಸಮಸ್ತ ಪ್ರಭುಗಳು ಮುಂತಾಗಿ ಸರ್ವ ಅಧಿಕಾರಿಯಾದ ಗೋಪಣ್ಣನವರು ಸಹಿತವಾಗಿ ಈ ಊರನ್ನು ಕೊಟ್ಟಿದ್ದಾರೆ.

ಇದಲ್ಲದೆ ಇದೇ ತಾಲೂಕಿನ ೭೨ ನೆಯ ಶಾಸನವು ಹೀಗೆ ಇದೆ- ಅದೇ ಹೋಬಳಿ (ಇಕ್ಕೇರಿ) ಕೊಳೂರು ಮಜರೆ ಆಣದೂರು ಈಶ್ವರ ದೇವಸ್ಥಾನದ ಬಳಿ

.........ಸಂವತ್ಸರದ.........ಸ್ವಸ್ತಿ

..........ಚಾಳುಕ್ಯ............ದಿತ್ಯ

(ಇಲ್ಲಿ ೧೫ ಪಂಕ್ತಿಗಳು ಕಾಣಲಿಲ್ಲ)

ನ್ತಿದ ಮಲ್ಲ ಮಿರ್ದನೆ......ತಮ್ಮಂಬಾಸಯಣಂ......ಗೆಯ್ಯುತ್ತಿರೆ ಕೂಗವಾಡಿ ಯೊಳ್ ಮಾಣಂದೂರೊಳ್ ...... ಆಗ ಸರ್ವಾಭ್ಯಂತರ ನಿಧಿಯಾಗಿ ದೇವರ್ಗೆ ಕೊಟು ಕಲ್ಲನಿರಿಸಿದ ...... ಕಾಳಕಾಳಾಂತರದಿ ...... ನಡೆಯಿಸಿದನಾತನಂಗೆ ಗಯೆ ಕಡಿಯೊಳ್ಸಾಯಿರ ಕವಿಲೆಯುಂ ದಾನಂಗೊಟ್ಟ...... ಸಾಯಿರ ಕಪಿಲೆಯುಂ ಕೊಂದು ಸಾಯಿರಲಿಂಗನ ಕಿಳ್ಳ

ಬ್ರಹ್ಮೇತಿಕಾರನ ಪಂಚಮಹಾ ಪಾತಕನುಮಕ್ಕಂ ಕಳ್ಪರಯ್ನೂರಕ್ಕೆ ಸೆಟ್ಟಿ ಸಾತೆಯುಮ್ಮನ ದಮ್ಮ ಸೆಟ್ಟಿ ಭೂಬಳ ಚಕ್ರವರ್ತಿ ಸೇನಬೋವಕಮೂಕಯ್ಯಂ ಬರೆದಂ ಬಡಗಿ ಅಂಣೋಜ ಕಲವಸೆಗೆಯ ಕೊಳಗಿಯ ಮಿಣ್ಣೋ

ಜನಮಗಂ ಮೂಕನಕ್ಕರಮಂಕಂಡರನಿದಂ ಮಂಗಳಂ ॥

ಈ ಶಾಸನವು ಕೋಳೂರಿನ ಬಳಿಯಲ್ಲಿ ಉಪಗ್ರಾಮವಾದ (ಮಜರಿ) ಆಣದೂರಿನ ಈಶ್ವರ ದೇವಾಲಯದ ಸಮೀಪದಲ್ಲಿರುವ ಕಲ್ಲಿನಲ್ಲಿ ಕೆತ್ತಲ್ಪಟ್ಟುದಾಗಿದೆ. ಇದರಿಂದ ಕೋಳೂರಿನ ಸಮೀಪದಲ್ಲಿನ ಆಣದೂರಿನಲ್ಲಿ ಈಶ್ವರ ದೇವಾಲಯವಿರುವುದಾಗಿ ಗೊತ್ತಾಗುತ್ತದೆ. ಸಮೀಪದ ಮಾಣಂದೂರಿನಲ್ಲಿ ಯಾವ ತೊಂದರೆಯೂ ಇಲ್ಲದಂತೆ ಎಂದರೆ ಕಂದಾಯ ಮೊದಲಾದ ಯಾವ ರಾಜಕೀಯಾದಿ ಬಾಧೆಯೂ ಇಲ್ಲದಂತೆ (ಸರ್ವಾಭ್ಯಾಂತರ ಸಿದ್ಧಿಯಾಗಿ) ಮಧುಕೇಶ್ವರ ದೇವರಿಗೆ ಕೊಟ್ಟು ಕಲ್ಲನ್ನು ನಡೆಸಿದ್ದಾರೆ. ಈ ದಾನವನ್ನು ನಡೆಸಿದವರಿಗೆ ಗಂಗೆಗಯೆಯಲ್ಲಿ ಸಾವಿರ ಗೋವುಗಳನ್ನು ದಾನ ಮಾಡಿದ ಪುಣ್ಯವು ಬರುತ್ತದೆ. ನಡೆಸದೇ ಇದ್ದವರಿಗೆ ಸಾವಿರ ಗೋವುಗಳನ್ನು ಕೊಂದ ಮತ್ತು ಸಾವಿರ ಲಿಂಗವನ್ನು ಕಿತ್ತು ಹಾಕಿದ ಬ್ರಹ್ಮೇತಿ ಪಂಚಮಹಾ ಪಾತಕವು ಪ್ರಾಪ್ತವಾಗುತ್ತದೆ ಎಂದು ಹೇಳಿದ್ದಾರೆ. ಈ ದಾನವನ್ನು ಕಲ್ಪಿಸಿದ ಒನೂರಕ್ಕೆ ಸೆಟ್ಟಿ ಸಾತೆಯುಮ್ಮನ ದಮಸೆಟ್ಟಿ ಭೂಬಲ ಚಕ್ರವರ್ತಿ ಶ್ಯಾನಬೋಗ ಮೂಕಯ್ಯನು ಈ ಶಾಸನವನ್ನು ಬರೆದಿದ್ದಾನೆ. ಬಡಗಿ ಅಣ್ಣೋಜನು ಕಲ್ಲನ್ನು ಸರಿಪಡಿಸಿದ (ಕಲ್ಲಹಸಮಾಡಿದ) ಕೋಳಗಿಯ ಮಿಣ್ಣೋಜನ ಮಗ ಮೂಕನು ಅಕ್ಷರವನ್ನು ಕೆತ್ತಿದನು. ಈ ಶಾಸನದಲ್ಲಿ ೧೫ ಪಂಕ್ತಿಗಳು ಕಾಣದೇ ಇರುವವುಗಳಲ್ಲಿ ಕೋಳೂರು ಕೊಡಗೂಸಿನ ವಿಷಯವು ಇರಬಹುದೇ ಎಂಬ ಅನುಮಾನವು ತೋರುತ್ತದೆ.

ಮೇಲೆ ಕಂಡ ಎರಡು ಶಾಸನಗಳಲ್ಲಿ ಮೊದಲನೆಯ ಶಾಸನವು ಕ್ರಿ. ಶ. ೧೧೦೬ ರಲ್ಲಿ ಆಗಿರಬಹುದೆಂದು ಶಾಸನದ ಇಲಾಖಾ ಅಧಿಕಾರಗಳ ಅಭಿಪ್ರಾಯವಿದೆ. ಇದು ಪ್ರಸಿದ್ಧನಾದ ಚಾಲುಕ್ಯ ವಿಕ್ರಮಾದಿತ್ಯ ೬ ಈ ಚಕ್ರವರ್ತಿಯ ಕಾಲದಲ್ಲಿ ಆದುದು ಇದು ಕೋಳೂರು ಕೊಡಗೂಸಿನ ದೇವಾಲಯದ ಸಮೀಪದಲ್ಲಿ ಇರುವುದರಿಂದ ದೇವಾಲಯದ ನಿರ್ಮಾಣವಾದ ಮೇಲೆ ನಿರ್ಮಿಸಲ್ಪಟ್ಟಿರಬಹುದು. ಆದುದರಿಂದ ಕೋಳೂರು ಕೊಡಗೂಸು ಬಸವೇಶ್ವರನ ಕಾಲಕ್ಕಿಂತ ಮೊದಲಿನವಳು ಎಂದು

ತಿಳಿಯಲವಕಾಶವಾಗಿದೆ. ಕೋಳೂರು ಕೊಡಗೂಸು ಹಾಡಿನಲ್ಲಿ ಹೇಳಿದಂತೆ ಕೋಳೂರಿನ ಸಮೀಪದ ಆಣದೂರಿನಲ್ಲಿ ಈಶ್ವರನ ದೇವಾಲಯುವಿರುವುದು. ಮೇಲೆ ಕಂಡ ೭೨ ನೆಯ ಶಾಸನದಿಂದ ಗೊತ್ತಾಗುತ್ತದೆ. ಇಲ್ಲಿನ ಈಶ್ವರ ದೇವಾಲಯಕ್ಕೆ ಕೊಡಗೂಸು ಹಾಲಿನ ನೈವೇದ್ಯವನ್ನು ಅರ್ಪಿಸುವುದಕ್ಕೆ ಹೋಗುತ್ತಿರಬಹುದು. ಈ ಶಾಸನದಲ್ಲಿ ೧೫ ಸಾಲುಗಳು ಕಾಣದೇ ಇರುವುದರಿಂದ ಯಾವುದನ್ನು ಖಂಡಿತವಾಗಿ ಹೇಳಲಿಕ್ಕೆ ಬರುವಂತಿಲ್ಲ. ಈ ಕೋಳೂರು ಕೊಡಗೂಸಿನ ತಂದೆ ತಾಯಿಗಳು ಧಾರವಾಡ ಜಿಲ್ಲಾ ಹಾವೇರಿ ಸಮೀಪದಲ್ಲಿರುವ ಕರ್ಜಗಿ ರೇಲ್ವೆ ನಿಲ್ದಾಣಕ್ಕೆ ಸುಮಾರು ೨ ಫರ್ಲಾಂಗ ದೂರದಲ್ಲಿರುವ ಕೋಳೂರಿನಲ್ಲಿರುವ ಹುಲ್ಲೇಶ್ವರ (ಕಲ್ಲೇಶ್ವರ) ಜಾತ್ರೆಗೆ ಹೋಗಿರಬಹುದು. ಇಲ್ಲಿ ಈಗಲೂ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಇಲ್ಲಿ ವರದಾ ನದಿಗೆ ಸೇತುವೆ ಕಟ್ಟಲ್ಪಟ್ಟಿದೆ. ಈ ವರದಾ ನದಿಯು ಆ ಸಾಗರ ತಾಲೂಕಿನಿಂದಲೇ ಈ ಕೋಳೂರಿಗೆ ಹರಿದು ಬಂದಿದೆ. ಸಾಗರ ತಾಲೂಕಿನ ಇಕ್ಕೇರಿ ಹೋಬಳಿ ಕೋಳೂರು ಆ ವರದಾ ನದಿಯ ಉಗಮಸ್ಥಾನದ ಸಮೀಪದಲ್ಲಿರಬೇಕು. ಒಟ್ಟಿನಲ್ಲಿ ಈ ಕೋಳೂರು ಕೊಡಗೂಸಿನ ಸಂಬಂಧದ ಇತಿಹಾಸಕ್ಕೆ ಸಂಬಂಧಿಸಿರುವುದಾಗಿ ತಿಳಿಯಲಿಕ್ಕೆ ಬರುವಂತೆ ಇದೆ.

ಮೇಲೆ ಕಂಡ ಕೋಳೂರು ಕೊಡಗೂಸಿನ ಹಾಡಿನಲ್ಲಿ ಆಕೆಯ ತಂದೆಯ ಹೆಸರು ಶಿವದೇವ ಎಂದು ಹೇಳಲ್ಪಟ್ಟಿದೆ. ತಾಯಿಯ ಹೆಸರಿಲ್ಲ. ಹರೀಶ್ವರನು ಕೊಡಗೂಸಿನ ತಾಯಿಗೆ ಶಿವಭಕ್ತೆ ಎಂದು ಕರೆದಿದ್ದಾನೆ. ತಂದೆಯು ನಾಲ್ಕನೆಯ ದಿವಸದಲ್ಲಿ ಬರುವೆನೆಂದು ಹೇಳಿದುದಾಗಿ ಹಾಡಿನಿಂದ ಗೊತ್ತಾಗುತ್ತದೆ. ಸಾಗರಕ್ಕೂ ಹಾವೇರಿ ಸಮೀಪದ ಕೋಳೂರಿಗೂ ಸುಮಾರು ೪೦-೫೦ ಮೈಲು ದೂರವಾಗುವುದರಿಂದ ನಾಲ್ಕು ದಿವಸದ ವಾಯಿದೆಗೆ ಸರಿಬರುವುದರಿಂದ ಆ ಕೋಳೂರಿಗೆ ಹೋಗಿರಬೇಕೆಂದು ಊಹಿಸಲಾಗಿದೆ. ಕೋಳೂರು ಕೊಡಗೂಸು ಶಿವನಲ್ಲಿ ತೋರಿದ ಭಕ್ತಿಯ ಮನಸ್ಸಿನ ದೆಸೆಯಿಂದ ಬಹಳ ಪ್ರಖ್ಯಾತಳಾಗಿದ್ದಾಳೆ. ಆ ಕಾಲದಲ್ಲಿ ಜನರು ದೈವಭಕ್ತಿಗೆ ಬಹಳ ಗಮನವನ್ನು ಕೊಡುತ್ತಿದ್ದರು. ಹರೀಶ್ವರ ಕವಿಯು ಸಹ ಈ ವರ್ಗಕ್ಕೆ ಸೇರಿದವನೇ ಆಗಿದ್ದಾನೆ. ಅವನು ಬರೆದ ಕೋಳೂರು ಕೊಡಗೂಸಿನ ರಗಳೆಯು ಹಾವೇರಿಯಲ್ಲಿ ಮುದ್ರಿಸಲ್ಪಟ್ಟಿರುವಲ್ಲಿ ಮೇಲೆ ಕಂಡ ಹಾಡನ್ನು ಸಹ ಮುನ್ನುಡಿಯಲ್ಲಿ ಸೇರಿಸಲಾಗಿದೆ. ಈ ಚನ್ನಕ್ಕನ ದೈವಭಕ್ತಿಯನ್ನು ಲಾಲಿಸಿ ಅನುಕರಿಸುವುದು ಧರ್ಮದ ಅನುಪಾಲನೆಗೆ ಉತ್ತಮವಾದುದಾಗಿದೆ. (ಇತಿಹಾಸ ಶೋಧಕರು ಚನ್ನಾಗಿ ಶೋಧಿಸಲಿ).

(ಸಂ. ೧೫೪)

ಈ ರೀತಿ ಇದೆ.

ರಾಗ–ಶಂಕರಾಭರಣ–ಆದಿತಾಳ

ವಿಳಸಿತ ತಿಳಿಗೊಳ ಬಳಸಿದಗಳು ಗಿಳಿ । ಹೊಳೆವಹಂಸ ಮಿಥುನಗಳಿಂದ ।
ಥಳಥಳಿಸುವ ಉಪವನಯುತ ಕೋಳೂ । ರಿಳೆಯಲಿ ನೋಡಲು ಬಹುಚಂದ
೧. ನಳಿನಾಂಬಕಿ ಎಳೆತಳಿರಡಿ ಸುಳಿಗುರುಳ್ । ಸುಳಿನಾಭಿಯು ಸೊಗಸಿಂದವಳು
ಬಲಯುತ ಶಿವದೇವನ ಸತಿಯುಳಸುತೆ । ಇರುವಳು ಕೊಡಗೂಸೆಂಬವಳು
೨. ಬಾಲೆ ಹಾಲನು ಶಿಲೆ ಶಿವಾಲಯ । ಕಾಲಸವಿಲ್ಲದೆ ನೀ ಪೋಗಿ
ಬಾಲ ಚಂದ್ರಧರಗರ್ಪಿಸಿ ಯೊಲವಂ । ದಾಲಯದೊಳಗಿರು ನೀ ತಂಗಿ
೩. ಕಾಲಮೂಲ ಕುದ್ದಾಲ ಕಲುಷಹರ । ಫಾಲನೇತ್ರ ಹರಪುರದಲ್ಲಿ
ಕಲ್ಲಿನಾಥಂ ಪೂಜಿಸಿ ಬರುವೆನು । ನಿಲ್ಲದೆ ನಾಲ್ಕನೆ ದಿನದಲ್ಲಿ
೪. ಸಡಗರದಿಂ ಮೈದೊಳೆದು ಮಡಿಯನು । ಟ್ಟುಡುಪತಿಮುಖಿ ಪಿಡಿವಳು ಪಾಲ
ಕಡು ತವಕದಿ ಗುಡಿಯ ಪೊಕ್ಕು ನುಡಿವಳು । ಮೃಡ ಒಡಲಿಗ ಕುಡಿ ನೀ ಹಾಲ
೫. ಅಡಿಯೊಳಿಡುತ ನಡುಗಂಬದ ಮರೆಯೊಳು ಅಡಗಿ ನೋಡೆ ಕುಡಿಯದೆ ಇರಲು
ಮಿಡುಕುತ ಮನದೊಳು ಬಲು ತಡಬಡಿಸುತ । ಕುಡಿಯದ ಕಾರಣವೇನೆನಲು
೬. ಬಾಲಿಕೆ ಹಾಲಿದು ಸಾಲದಸಲು । ನಾಲಿಗೆ ಸವಿಯೆಂದೇನೊಲ್ಲೆ
ಕಾಲಬೀಳ್ವೆ ಕರೆದೊಯ್ವನು ತೇರಿಗೆ । ನೀಲದ ಮಣಿಯಂ ಗುರ ಕೊಡುವೆ
೭. ವಂಚನೆ ಮಾಡುವಳಲ್ಲವೊ ನಾಗರ । ಪಂಚಮೀಗೆ ಹೊಸ ಕುಂಚಿಗೆಯು
ಪಂಚಮುಖನೆ ತಿಳಿ ಹೊಲಿಸಿ ಕೊಡುವೆ ನಾ । ಮುಂಚೆ ತೂಗುವೆನುಯ್ಯಾಲೆಯು
೮. ಉಡುಪತಿಧರನಾ ನುಡಿಗಳನಾಲಿಸಿ । ಕಡು ಸಂತೋಷವ ತಾಳುತಲಿ
ಕುಡಿಯದಿರಲ್ಕೆಸು ಬಿಡುವಳೆನುತಮೃಡ । ದಡಬಡಿಸುತ ನಿಶ್ಚಯಿಸುತಲಿ
೯. ಫಾಲನೇತ್ರ ಪರಮೇಶ್ವರ ಮೆಚ್ಚುತ । ಹಾಲ ಕುಡಿದು ಹರಷದೊಳೆಂದ
ಬಾಲಿಕೆ ನುಡಿಯಿದು ಹಾಲಿನ ರುಚಿಯುಂ । ಮೇಲಿದು ಸೊಗಸಾಗಿಹುದೆಂದ
೧೦. ಚಂದದಿ ಬಂದನು ತಂದೆಯು ಊರಿಂ । ದೆಂದನು ತಂದೆಯ ಬರಿ ತಳಿಸಿ
ಇಂದುವಂದನೆಯಿದರಂದವ ನುಡಿನಾ । ಕೊಂದೆನು ಸೈರಿ ಸದರಗಳಿಗೆ
೧೧. ಹುಡುಗಿ ಎನುತ ಮೃಡ ಕುಡಿಯದ ಕಾಡಿದ । ಕಡೆಗೆ ಕುಡಿದ ಬಿಡದಾ ಹಾಲ
ಬಡಿವುದು ನಡತೆಯೆ ? ನಡೆಯೆನ್ನೊಡೆಯನ ಗುಡಿಗೆ ಕುಡಿವ ವೊಡಲಿಗೆ ಹಾಲ
೧೨. ಎಂದಿನಂದದಿ ವಂದಿಸಿ ಮುಂದಿಡೆ । ಸುಂದರ ಮೃಡ ತಾ ಸುಮ್ಮನಿರೆ
ತಂದೆಯು ಕೊಲ್ಲುವೆನೆಂದೊಡೆ ಶಿವತಾ ಹೊಂದಿಸಿಕೊಂಡನು ತನ್ನೊಳಗೆ
೧೩. ಪಿತಸತಿಭಕ್ತಿಯ ಹಿತಕರದಿಂದಲಿ । ಸಂತೆಯುತಿ ಸದ್ಗುಣ ನೆನೆ ನೆನೆದ
ಯತಿನುತ ಕಾಶೀ ಚರಗುರುವರ ಸ । ನ್ನುತ ಚರಣವ ಸಂತತವಿಡಿದ

ಈ ಹಾಡಿನಲ್ಲಿ ಕೊಲ್ಲು ಎಂಬು ಇರುವಲ್ಲಿ ಹೊಡೆಯುವುದು ಎಂದು ಅರ್ಥ ಮಾಡಿಕೊಳ್ಳಬೇಕು. (ಕೊಲ್ಲು ಎಂಬುದಕ್ಕೆ ಹೊಡೆ ಎಂಬುದೊಂದು ಅರ್ಥವೂ ಇದೆ).

ಈ ಹಾಡಿನಲ್ಲಿ ಹೇಳಿದಂತೆ ಕರ್ಜಗಿ ರೇಲ್ವೆ ನಿಲ್ದಾಣದ ಹತ್ತಿರವಿರುವ ಕೋಳೂರಿಗೆ ಜಾತ್ರೆಗಾಗಿ ಹೋಗಿ ನಾಲ್ಕನೆಯ ದಿನದಲ್ಲಿ ಬಂದುದೇ ನಿಜವಾದ ಸಂಗತಿ ಎಂದು ತಿಳಿಯಲಿಕ್ಕೆ ಬರುವಂತೆ ಇದೆ. ಏಕೆಂದರೆ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಎಪ್ರಿಲ್ ೧೯೨೮ ರಲ್ಲಿ ಪ್ರಕಟವಾದುವರಲ್ಲಿ ವರದಾನದಿಯ ವಿಷಯದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

"ಇಕ್ಕೇರಿ ಸೀಮೆಯಲ್ಲಿ ಪಾರ್ವತಿದೇವಿಯ ಕಾಲೊಳಗೆ ಹುಟ್ಟಿದ ವರದಾ ನದಿಯು ಗಳಗನಾಥನ ಬಳಿಯಲ್ಲಿ ತುಂಗಭದ್ರೆಗೆ ಕೂಡಿಹೋಗಿದೆ".

ಈ ಲೇಖನದಲ್ಲಿ ಕಂಡಂತೆ ಇಕ್ಕೇರಿ ಸೀಮೆಯಲ್ಲಿಯೇ ವರದಾನದಿ ಉಗಮವಾಗಿರುವುದರಿಂದಲೂ, ಅದೇ ವರದಾ ನದಿ ಮೇಲ್ಕಂಡ ಕರ್ಜಗಿ ಹತ್ತಿರದ ಕೋಳೂರಿಗೆ ಸ್ವಲ್ಪ ದೂರದಲ್ಲಿ ಗಳಗನಾಥದಲ್ಲಿ ತುಂಗಭದ್ರೆಗೆ ಕೂಡುವುದರಿಂದಲೂ, ಈ ವರದಾ ನದಿಯು ಪಾರ್ವತಿಯ ಪಾದದಲ್ಲಿ ಹುಟ್ಟಿತೆಂದೂ ಪ್ರಖ್ಯಾತವಾಗಿರುವುದರಿಂದಲೂ, ಈ ನದಿಯ ಉಗಮಸ್ಥಾನವಾದ ಇಕ್ಕೇರಿಯ ಹೋಬಳಿಯಲ್ಲಿ ಕೋಳೂರಿರುವುದರಿಂದಲೂ, ಆ ಕೋಳೂರಿನಲ್ಲಿ ಕೊಡಗೂಸಿನ ದೇವಾಲಯವಿರುವುದರಿಂದಲೂ, ಅದರ ಮಜರೆ ಗ್ರಾಮದಲ್ಲಿ ಈಶ್ವರ ದೇವಾಲಯವಿರುವುದು ಶಾಸನದ ಪುಸ್ತಕದಿಂದ ತಿಳಿಯುವುದರಿಂದಲೂ, ಈ ಇಕ್ಕೇರಿಯ ಸಮೀಪದ ವರದಾ ನದಿಯ ಉಗಮದ ಕೋಳೂರಿನಿಂದಲೇ ವರದಾ ನದಿಯ ಸಂಗಮದ ಕೋಳೂರಿಗೆ ಕಲ್ಲೇಶ್ವರ ಜಾತ್ರೆಗಾಗಿ ಕೊಡಗೂಸಿನ ತಂದೆಯು ಹೋಗಿ ಬಂದನೆಂದು ನಿರ್ಧರಿಸುವಲ್ಲಿ ಅನುಮಾನವು ಬರಲಾರದು. ಹಾಡಿನಲ್ಲಿ ಹೇಳಿದಂತೆ ನಾಲ್ಕು ದಿನಗಳಲ್ಲಿ ಈ ಕೋಳೂರಿನಿಂದ ಆ ಕೋಳೂರಿಗೆ ಹೋಗಿ ಬರಬಹುದೆಂದು ಈ ಹಿಂದೆ ತೋರಿಸಿರುವುದರಿಂದ ಕೊಡಗೂಸಿನ ಹಾಡಿನಲ್ಲಿ ಹೇಳಲ್ಪಟ್ಟ ಸಂಗತಿಯೇ ನಿಜವೆಂದು ಸ್ಪಷ್ಟವಾಗುತ್ತದೆ.

ಹರೀಶ್ವರನು ರಚಿಸಿದ ರಗಳೆಯಲ್ಲಿ ತಾಯಿಯು ಕಲ್ಲಿನಾಥನ ಗುಡಿಗೆ ಹೋಗಿ ಹಾಲನ್ನು ದಿನಾಲೂ ಅಭಿಷೇಕ ಮಾಡಿ ಬರುತ್ತಿದ್ದಳೆಂದು ಹೇಳಿದ್ದಾನೆ. ಆ ಪದ್ಯಗಳಿವು.

ಸೋಮವಾರ ನೇಮದ ಕಲ್ಲಿನಾಥಂಗೆ
ಸೋಮವಾರದೆ ಹಾಲೊಳಭಿಷೇಕ ಈಶಂಗೆ
ಇರಲೊಂದು ಸೋಮವಾರದೊಳು ಹಾಲಂ ಕೊಂಡು
ಚರಿತದಿಂದಭಿಷೇಕಂ ಮಾಡಿ ಬರೆಕಂಡು

ಹೀಗೆ ತಾಯಿಯು ಅಭಿಷೇಕ ಮಾಡುತ್ತಿದ್ದ ಕಾಲದಲ್ಲಿ ಒಂದು ದಿವಸ ತಾಯಿಯು ಮನೆಗೆ ಬಂದಾಗ ಮಗಳು ಎಲ್ಲಿಗೆ ಹೋಗಿದ್ದೆ ಎಂದು ಕೇಳಿದಾಗ ತಾಯಿಯು ಕಲ್ಲಿನಾಥನ ಗುಡಿಗೆ ಹೋಗಿದ್ದೆನೆಂದು ಹೇಳಿ ಶಿವನ ಮಹಿಮೆಯನ್ನು ಹೇಳುತ್ತಾಳೆ. ಆ ಪದ್ಯಗಳಿವು.

ಕೊಡಗೂಸು ಬೆಸಗೊಂಡಳೆಲ್ಲಿರ್ದ ಎಲೆ ತಾಯೆ
ಗಡಿಗೆವಾಲಂ ಕೊಂಡು ಹೋದಿರೆಲ್ಲಿಗೆ ತಾಯೆ

ಆರ್ಗೆ ಕೊಂಡೊಯ್ದು ನೊರೆವಾಲ ನಿಂತೆಲೆಯುವ್ವ
ಕಲ್ಲಿನಾಥಂಗೆ ಶರ್ವಂಗೆ ಸರ್ವೇಶ್ವರಂಗೆ
ಹಾಲನೊಯ್ದೆರೆದು ಬಂದೆಂ ಮಗಳೆ ಕೇಳೆನಲು

ಇದನ್ನು ಕೇಳಿ ಕಲ್ಲಿನಾಥನನ್ನು ನೋಡಬೇಕೆಂಬ ಮನಸ್ಸು ಚನ್ನವ್ವನಿಗೆ ಹುಟ್ಟುತ್ತದೆ.

ಎಂದಲ್ಲಿ ಪೇಳ್ದ ಮಾತೆಯ ಮಾತು ಗುರುವಾಗಿ
ಇಂದುಧರ ಮೂರ್ತಿ ತನ್ನೊಳಗೆ ವಾಸರಿಕವಾಗಿ
ಎಡೆಗೊಂಡಳಿದೆ ಗೊಂಡಳಭವನಂ ಕೊಡಗೂಸು
ನುಡಿಯ ನುಡಿಗಿದಳಲ್ಲಿ ತಾಯೊಡನೆ ಕೊಡಗೂಸು

ಮನಸ್ಸಿನಲ್ಲಿ ಶಿವನು ನೆಲೆಗೊಂಡ ಮೇಲೆ ಒಂದಾನೊಂದು ದಿನ ತಾಯಿಯು "ನಾನು ಬೇರೆ ಊರಿಗೆ ಹೋಗುತ್ತೇನೆ, ನೀನು ಕಲ್ಲಿನಾಥ ದೇವರಿಗೆ ಹಾಲನ್ನು ತೆಗೆದು ಕೊಂಡು ಹೋಗು ಎಂದು ಹೇಳುತ್ತಾಳೆ :--

ಒಂದು ದೇವಸಂ ಮಾತೆ ಪರವೂರ ಪೊಗಲಿರ್ದ
ಇಂದುಧರನಭಿಷೇಕದತ್ತ ಚಿಂತಿಪುತಿರ್ದು
ಮಗಳೆ ಎನ್ನವ್ವ ನಲವಿಂ ಕಲ್ಲಿನಾಥಂಗೆ
ಬಗೆಗಗೋಚರ ನೆನಿಪ ಲೋಕೈಕನಾಥಂಗೆ
ನೀಲಕಂಠಂಗೆ ನಿತ್ಯಂಗೆ ನಿರ್ಮಾಯಂಗೆ
ಹಾಲನೆರೆಹೋಗವ್ವ ಸದ್ಗುಣರೆ ಕಾಯಂಗೆ

ಹೀಗೆ ಹೇಳಿದ ಮೇಲೆ ಕೊಡಗೂಸು ಕಲ್ಲಿನಾಥನ ಗುಡಿಗೆ ಹೋಗುತ್ತಾಳೆ. ಅಲ್ಲಿ ರಂಗಮಂಟಪದಲ್ಲಿ ಹಾಲಿನ ಗಡಿಗೆಯ ಮೇಲೆ ಮುಚ್ಚಿದ್ದ ಬಟ್ಟಲೊಳಗೆ ಗಡಿಗೆ ಯಿಂದ ಹಾಲನ್ನು ಹಾಕಿಕೊಂಡು ಈ ಹಾಲನ್ನು ಕುಡಿ ಎಂದು ಕಲ್ಲಿನಾಥನಿಗೆ ಹೇಳು ತ್ತಾಳೆ. (ಹರೀಶ್ವರನ ತಿಳುವಳಿಕೆಯ ಪ್ರಕಾರ ಹತ್ತು ವರ್ಷ ವಯಸ್ಸಿನ ಕೊಡುಗೂಸು ತಾನು ಹಾಲನ್ನು ತಂದಿರುವುದು ಅಭಿಷೇಕಕ್ಕೆ ಎಂದರೆ ಕುಡಿಸುವುದಕ್ಕೆ ಎಂಬಭಿಪ್ರಾಯ ವುಳ್ಳವಳಾಗಿದ್ದಾಳೆ.) ಆ ಕೊಡಗೂಸಿನ ಭಕ್ತಿಗೆ ಶಿವನು ಮೆಚ್ಚಿ ಆಕೆಯ ಕೈಯೊಳಗಿನ ಬಟ್ಟಲನ್ನು ತೆಗೆದುಕೊಂಡು ಹಾಲು ಕುಡಿಯುತ್ತಾನೆ : ಹಾಲನಾರೋಗಿಸಿದ ಗಿಳಿ ಕೌತುಕಂ ಒಡಲು ಹೀಗೆ ಕುಡಿದ ಮೇಲೆ ಕೊಡಗೂಸನ್ನು ಪುಷ್ಪಕ ವಿಮಾನದಲ್ಲಿ ಕೂಡಿಸಿ ಕೈಲಾಸಕ್ಕೆ ಕರೆದುಕೊಂಡು ಹೋಗಿ ಹಾಲಿನ ಬಟ್ಟಲನ್ನು ತನ್ನ ಉಗ್ರಾಣವಲ್ಲಿ ಸೇರಿಸುತ್ತಾನೆ. ಆ ಕೊಡಗೂಸನ್ನು ರುದ್ರಕನ್ನಿಕೆಯರೊಳಗೆ ಸೇರಿಸುತ್ತಾನೆ.

ಇದೀಗ ಹರಿಹರನು ಚಿತ್ರಿಸಿದ ಕೊಡಗೂಸಿನ ಕಥೆಯ ಚಿತ್ರ. ಪಂಪೆಯ ಹರಿಹರನ ಈ ಚಿತ್ರದಿಂದ ಕೋಳೂರಿನ ಕೊಡಗೂಸಿನ ಕಥೆಗೆ ತಂದೆಯ ಆವಶ್ಯ ಕತೆಯೇ ಇಲ್ಲ. ತಾಯಿ ಬೇರೆ ಊರಿಗೆ ಹೋಗಲಿಕ್ಕೆ ಕಾರಣವೇನೋ ತಿಳಿಯದು.

ತಾಯಿಯು ಹಾಗೆ ಪರಸ್ಥಳಕ್ಕೆ ಹೋದಾಗ ತಂದೆಯು ಕೂಸಿನೊಡನೆ ದೇವಾಲಯಕ್ಕೆ ಹೋಗಬೇಕಾಗಿದ್ದಿತು. ಅವನ ಕಥೆಗೆ ತಂದೆ ಬೇಕಾಗದೆ ಹೋಗಿರುವುದು ಒಂದ್ಕು ಕೊರತೆಯಾಗಿದೆ. ಈಗ ಕಲ್ಲಿನಾಥನ ಗುಡಿ ಇರುವ ವರದಾ ನದಿಯ ಸಂಗಮದ ಸಮೀಪದ ಕೋಳೂರಿನಲ್ಲಿಯೇ ಕೊಡಗೂಸು ಇದ್ದು ಕಲ್ಲಿನಾಥನ ಗುಡಿಗೆ ಹೋದುದೇ ನಿಜವಾಗಿದ್ದರೆ ಆ ವರದಾ ನದಿಯ ಉಗಮಸ್ಥಾನದಲ್ಲಿರುವ ಕೋಳೂರಿನಲ್ಲಿ ಕೊಡ ಗೂಸಿನ ದೇವಾಲಯವಿರುತ್ತಿದ್ದಿಲ್ಲ. ಅಭಿಷೇಕಕ್ಕಾಗಿ ಕೊಡದಲ್ಲಿ ಹಾಲನ್ನು ತೆಗೆದು ಕೊಂಡು ಹೋಗಿ ತಾಯಿ ಪೂರ್ತಿ ಹಾಲನ್ನು ಖರ್ಚುಮಾಡುತ್ತಿದ್ದಂತೆ ಮಗಳು ಮಾಡಿಲ್ಲ, ಪುರಾಣದ ಪದ್ಧತಿಯ ಕಡೆಗೆ ತಿರುಗಿಸಿ ಈ ಕಥೆಯನ್ನು ಚಿತ್ರಿಸಿದ್ದಾನೆ.

ಅದರೊಳಗಿನ ಹಸಿಯ ಹಾಲನ್ನೇ ನೈವೇದ್ಯಕ್ಕೊಪ್ಪಿಸಿರುವುದು ಅಸಂಗತವಾದ ಮಾತು ಹಾಲಿನ ಬಟ್ಟಲಿನ ಸಹಿತ ಕೂಸನ್ನು ಪುಷ್ಪಕ ವಿಮಾನದಲ್ಲಿ ಕೂಡಿಸಿಕೊಂಡು ಹೋಗಿ ಕೈಲಾಸದ ಶಿವನ ಅರಮನೆಯ ಉಗ್ರಾಣದಲ್ಲಿ ಬಟ್ಟಲಿಟ್ಟುದನ್ನು ಹರಿಹರನು ನೋಡಿಯೇ ಇಲ್ಲ. ಇದು ಅವನ ಕಲ್ಪಿತ ಮಾತಾಗಿದೆ. ಕೋಳೂರಿನ ವಿಚಾರವೇ ಅವನಿಗೆ ಏನೇನೂ ತಿಳಿಯದು. ಕೊಡಗೂಸಿನ ನಿಜಸಂಗತಿಯನ್ನೂ ತಿಳಿಯಲು ಅವನು ಪ್ರಯತ್ನಿಸಿಲ್ಲ. ಹಾಗೆ ತಿಳಿಮೂ ಈ ರಗಳೆಯನ್ನು ಹೇಳಿಲ್ಲ. ಒಂದುವೇಳೆ ನಿಜ ವಿಚಾರ ತಿಳಿದಿದ್ದರೂ ತಂದೆಯು ಹೊಡೆದಾನೆಂಬ ಅಂಜಿಕೆಯಿಂದ ತಪ್ಪಿಸಿ ಕೈಲಾಸಕ್ಕೆ ಕರೆದುಕೊಂಡು ಹೋದನೆಂದು ಹೇಳುವುದಕ್ಕಿಂತಲೂ ಪ್ರೀತಿಯಿಂದ ಒಪ್ಪಿಸಿದ ಹಾಲನ್ನು ಕುಡಿದ ಕೂಡಲೇ ಕೈಲಾಸಕ್ಕೆ ತೆಗೆದುಕೊಂಡು ಹೋದನೆಂದು ಹೇಳಿದರೆ ಆ ಕೂಸಿನ ಭಕ್ತಿಗೆ ಹೊಳಪು ಬರುವುದೆಂಬ ಉದ್ದೇಶವನ್ನೇ ಮುಖ್ಯವಾಗಿಟ್ಟು ಕೊಂಡು ತನ್ನ ರಗಳೆಯಲ್ಲಿ ಹೇಳಿದ್ದಾನೆ ಎಂದು ಊಹಿಸಲಿಕ್ಕೆ ಬರುವಂತಾಗಿದೆ. ಹಾಡನ್ನು ರಚಿಸಿದ ಕಾಶೀಚರವರ ಗುರುಚರಣವನ್ನು ಆಶ್ರಯಿಸಿದ ಕವಿಯು ತಂದೆಯ ಹೆಸರನ್ನು ಹೇಳಿದ್ದಾನೆ. ಅವರು ಇದ್ದ ಕೋಳೂರಿನಲ್ಲಿ ಈಶ್ವರ ದೇವಾಲಯವಿರು ವುದನ್ನು ಹೇಳಿದ್ದಾನೆ. ನೈವೇದ್ಯಕ್ಕೆ ಪದ್ಧತಿಯಂತೆ ಹಾಲನ್ನು ಈಶ್ವರ ದೇವಾ ಲಯಕ್ಕೆ ತೆಗೆದುಕೊಂಡು ಹೋದಂತೆ ಹೇಳಿದ್ದಾನೆ. ತಂದೆ ತಾಯಿಗಳಿಬ್ಬರೂ ಬೇರೆ ಊರಿಗೆ ಕಲ್ಲಿನಾಥನ ಗುಡಿಗೆ ಹೋಗಿ ನಾಲ್ಕು ದಿನಗಳಲ್ಲಿ ವಾಪಸು ಬರುವುದಾಗಿ ಹೇಳಿ ದ್ದಾನೆ. ಈ ಹಾಡು ಚಿಕ್ಕದಾದರೂ ಹಾಡಿನಲ್ಲಿರುವ ಸಂಗತಿಗಳು ನಿಜಾಂಶವನ್ನು ತಿಳಿದು ಬರೆಯಲಿಕ್ಕೆ ಪ್ರಯತ್ನಪಟ್ಟಿದ್ದಾನೆ. ಹರೀಶ್ವರನು ವಿದ್ಯಾವಂತನಾದರೂ ಧರ್ಮಶಾಸ್ತ್ರವನ್ನು ಓದಿದ ಪಂಡಿತನಾದರೂ ಮೂಢಭಕ್ತಿಯವನೆಂದೇ ತಿಳಿಯಲು ಅನುಮಾನವು ಯಾರಿಗೂ ಬರಲಾರದು. ಇವನ ಮೌಢ್ಯ ಭಕ್ತಿಯ ಮತ್ತು ಪೌರಾಣಿಕ ಪದ್ಧತಿಯ ಪ್ರಕಾರದ ಗ್ರಂಥಗಳ ಕಡೆಗೆ ಓದು ಮಹನೀಯರು ಚನ್ನಾಗಿ ಗಮನವಿಟ್ಟು ನಿಜಾಂಶವನ್ನು ಪರಿಶೋಧಿಸಿ ತಿಳಿದುಕೊಳ್ಳಬೇಕಾಗಿದೆ.

(ಸಂ.೧೯೫೫)

## ೩೦. ಗುರುವರ್ಗದ ವಚನಗಳು ಪ್ರಾರಂಭದ ಮುಖ್ಯ ವಿಷಯ

ಇದುವರೆವಿಗೆ ವೀರಶೈವರಲ್ಲಿ ಬಸವೇಶ್ವರ ಸಿದ್ಧರಾಮೇಶ್ವರ ಮಹಾದೇವಿಯಕ್ಕ ಮುಂತಾದ ಶಿವಶರಣರ ಶರಣೆಯರ ವಚನಗಳು ಸಮಾಜದಲ್ಲಿ ಪ್ರಕಟವಾಗಿವೆ. ಇವರು ೧೨ ನೆಯ ಶತಮಾನದವರು. ಗುರುವರ್ಗದವರು ವಚನಗಳನ್ನು ಬರೆದಿಲ್ಲ ಎಂಬ ಪ್ರತೀತಿಯು ಸಮಾಜವಲ್ಲಿ ವ್ಯಾಪಿಸಿ ಇದೆ. ಆದರೆ ಪುರಾತನರ ವಚನಗಳು, ಸರ್ವ ಪುರಾತನರ ವಚನಗಳು, ಮುಕ್ತಿ ಕಂಠಾಭರಣ, ಮುಂತಾದವುಗಳಲ್ಲಿ ಈಗಿನ ವೀರಶೈವ ಚತುರಾಚಾರ್ಯರ ಅವರ ಗುರುಗಳ ವಚನಗಳು ಕಾಣಬರುತ್ತಿವೆ. ಆ ಪುಸ್ತಕಗಳು ಇನ್ನೂ ಮುದ್ರಣವಾಗದೆ ಇರುವುದರಿಂದ ಸಮಾಜಕ್ಕೆ ಅವು ತಿಳಿಯದಂತೆ ಆಗಿವೆ. ಈ ಕೊರತೆಯನ್ನು ಪರಿಹಾರಮಾಡುವುದಕ್ಕಾಗಿ ಈ ಪುಸ್ತಕವನ್ನು ಪ್ರಕಟಿಸಬೇಕಾಯಿತು. ಇದರಲ್ಲಿ ಪುರಾತನರ ವಚನಗಳಲ್ಲಿ ಸೇರಿದ ಪ್ರಸಾದಿ ಭೋಗಣ್ಣಗಳ ವಚನ ಶಿವಲೆಂಕ ಮಂಚಣ್ಣಗಳ ವಚನ ಎಂಬಿವು ಮುಖ್ಯವಾಗಿ ಹೊರಬಿದ್ದಿವೆ. ಸರ್ವಪುರಾತನರ ವಚನಗಳಲ್ಲಿ ಕಂಡ ಸಂಗಮೇಶ್ವರ ಅಪ್ಪಣ್ಣಗಳೇ ಮುಂತಾದ ಗುರುಗಳ ವಚನಗಳೂ ಕೆಲಕೆಲವು ಇದರಲ್ಲಿ ಪ್ರಕಟವಾಗಿವೆ. ಇದೇ ಸರ್ವ ಪುರಾತನರ ವಚನ ಎಂಬ ಗ್ರಂಥದಲ್ಲಿ ಪಂಚಾಚಾರ್ಯರಲ್ಲಿ ಸೇರಿದವರಾದ ಮರುಳುಸಿದ್ಧರ ವಚನವೂ ಪಂಡಿತಾರಾಧ್ಯರ ವಚನವೂ ಸೇರುತ್ತವೆ. ಮರುಳುಸಿದ್ಧರ ವಚನವಿದು :—

ಆಲಿ ಆಲಯದಲ್ಲಿ ಕರಿಗೊಳಲು ಆಲಿಸುವ ಶ್ರವಣವು ಮೇಲಪ್ಪ ಆಕಾಶವ ನಡರಲು ಉಲುಹು ನಿರ್ಭೂತ ಚಿತ್ತ ಸಮಾಧಾನವನೆಯಿದಲು ಕಾಲಕರ್ಮ ಭವಂಗಳ ಗೆಲಿವುದಿದೇನು ಸೋಜಿಗವು ಹೇಳಾ ರೇವಣ್ಣ ಪ್ರಭುವೇ.

ಪಂಡಿತಾರಾಧ್ಯರ ವಚನವಿದು : ಇಲ್ಲದ ಕುತ್ತವ ಕೊಂಡ ಬಲ್ಲವರ ಬಾಯ ಹೋಗಹೋದರೆ ಆ ಬಲ್ಲ ಬಲ್ಲವರೆಲ್ಲಾ ಆ ಬಲ್ಲಲ್ಲಿಯೇ ಅಲ್ಲತ್ತಗೊಳ್ಳುತ್ತಿದ್ದರು. ಇದೆಲ್ಲಿಯ ಕುತ್ತವೆಂದು ತಿಳಿದು ವಿಚಾರಿಸಲು ಅದಲ್ಲೇ ಬಯಲಾಯ್ತು ಗುರುಸಿದ್ಧಮಲ್ಲ.

ಮುಕ್ತಿ ಕಂಠಾಭರಣ ಎಂಬ ಗ್ರಂಥದಲ್ಲಿ ಶ್ರೀ ರೇವಣಸಿದ್ಧರು ಅವರ ಪತ್ನಿಯರು ನುಡಿದ ವಚನಗಳಿವೆ. ಇವು ಈ ಪುಸ್ತಕದಲ್ಲಿ ಪ್ರಕಟವಾದ ಪ್ರಸಾದಿ ಭೋಗಣ್ಣಗಳ ವಚನದ ಆರಂಭದಲ್ಲಿರುವ ಮೊದಲಿನ ತಿಳಿವಳಿಕೆ ಎಂಬ ಭಾಗದಲ್ಲಿ ಪ್ರಕಟವಾಗಿವೆ.

ನಾಲ್ಕು ಜನ ಆಚಾರ್ಯರು ಎಂದರೆ ಶ್ರೀಗಳಾದ ರೇವಣಸಿದ್ಧ ಮರುಳಸಿದ್ಧ ಏಕೋರಾಮಿ ತಂದೆ ಪಂಡಿತಾರಾಧ್ಯ ಈ ನಾಲ್ವರು ಉಪಚಾರಕರಾಗಿ ಬಸವೇಶ್ವರನು ಗುರುವಾಗಿ ಈಗಿನ ಸಮಾಜದಲ್ಲಿ ರೂಢಿಯಿರುವಂತೆ ಆಚಾರ್ಯ ಗುರು ಸಂಪ್ರದಾಯವು

ಬಸವೇಶ್ವರನ ಕಾಲವಲ್ಲಿಯೇ ಏರ್ಪಾಡಾದಂತೆ "ಅನಾದಿ ವೀರಶೈವ ಸಂಗ್ರಹ" ಎಂಬ ಗ್ರಂಥದಿಂವಲೂ ಈ ಪುಸ್ತಕವಲ್ಲಿನ ಅನೇಕ ವಚನಗಳಿಂದಲೂ ಸ್ಪಷ್ಟವಾಗಿ ತಿಳಿಯಲಿಕ್ಕೆ ಬರುವಂತೆ ಆಗಿದೆ. ಈ ದೆಸೆಯಿಂದ ಈ ಪುಸ್ತಕದ ಉಪಯೋಗವು ಚನ್ನಾಗಿ ಆಗುವುದೆಂಬ ನಿರೀಕ್ಷಣೆ ಇದೆ.

ಈಗ ತಾನೇ ಹೊರಬಿದ್ದಿರುವ "ಪಂಚಾಚಾರ್ಯರ" ಚರಿತ್ರೆ ಮೊದಲನೆಯ ಸಂಪುಟದಲ್ಲಿ ಶ್ರೀ ರೇವಣಸಿದ್ಧರ ಚರಿತ್ರೆ ಇದೆ. ಈ ವೀರಶೈವರು ಪೂಜ್ಯರೆಂದು ತಿಳಿಯುವ ಪಂಚಾಚಾರ್ಯರಲ್ಲಿ ಶ್ರೀ ರೇವಣಸಿದ್ಧರೇ ಮೊದಲನೆಯವರು. ಇವರ ಚರಿತ್ರೆಯು ವಿಸ್ತಾರವಾದುದು. ಈ ಶ್ರೀ ರೇವಣರ ಸಂಬಂಧದಲ್ಲಿ ರಚಿತವಾದ ಪುರಾಣ ಮತ್ತು ಗ್ರಂಥಗಳಲ್ಲಿ ಕಂಡುಬಂದ ಅವರು ಮಾಡಿದ ಕೆಲಸಗಳನ್ನೆಲ್ಲಾ ಇತಿಹಾಸ ಶೋಧನೆ ಮಾಡಿ ಅನೇಕ ಶಾಸನಗಳು ಮುಂತಾದವುಗಳ ಆಧಾರದಿಂದ ಅವರು ಕ್ರಿ. ಶ. ೧೭ ನೆಯ ಶತಮಾನ ಮತ್ತು ೧೩ ನೆಯ ಶತಮಾನದ ಮೊದಲನೆಯ ೧೭ ವರ್ಷ (ಕ್ರಿ. ಶ. ೧೨೧೭) ಈ ಒಳಗೆ ನಡೆದವುಗಳೆಂದು ಸಿದ್ಧಮಾಡಿ ತೋರಿಸಿ ಇದೆ. ಇವರ ಸಹವರ್ತಿಗಳಾದ ಉಳಿದ ನಾಲ್ವರಾಚಾರ್ಯರು ಎಂದರೆ ಮರುಳಸಿದ್ಧರು, ಏಕೋರಾಮರು, ಪಂಡಿತಾರಾಧ್ಯರು, ವಿಶ್ವಾರಾಧ್ಯರು, ಇವರು ಶ್ರೀ ರೇವಣಸಿದ್ಧರ ಸಮಕಾಲೀನರೇ ಆಗಿರುತ್ತಾರೆ. ಈ ಕಾರಣಗಳಿಂದ ಬಸವೇಶ್ವರನೂ ಪಂಚಾಚಾರ್ಯರೂ ಸಹ ಕ್ರಿ. ಶ. ೧೨ ನೆಯ ಶತಮಾನ ಮತ್ತು ೧೩ ನೆಯ ಶತಮಾನದ ಆದಿಯಲ್ಲಿ ವೀರಶೈವ ಧರ್ಮವನ್ನು ಊರ್ಜಿತಗೊಳಿಸಿದರೆಂದು ನಿಃಸಂಶಯವಾಗಿ ತಿಳಿಯಲಿಕ್ಕೆ ಬರುತ್ತದೆ. ಶ್ರೀ ರೇವಣಸಿದ್ಧೇಶ್ವರ ಪುರಾಣದಲ್ಲಿ ಅವರು ಮಾಡಿದ ವೀರಶೈವದ ಕಾರ್ಯವು ತಿಳಿಯದೆ ಇದ್ದರೂ ಕೆಲವು ಗ್ರಂಥಗಳ ಮತ್ತು ಶಿಲಾಶಾಸನಗಳ ಆಧಾರದಿಂದ ಅವರು ವೀರಶೈವವನ್ನು ಉದ್ಧರಿಸಿದ ವಿಷಯವು ಚರಿತ್ರೆಯಲ್ಲಿ ಬಹಿರಂಗಪಡಿಸಲ್ಪಟ್ಟಿದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯರೂ ಬಸವೇಶ್ವರನೂ ಸಹಕಾಲೀನರಾಗಿ ಮಾಡಿದ ಕೆಲಸಗಳು ಗೊತ್ತಾಗಿದೆ. ಮರಳುಸಿದ್ಧರು ಚಿಕ್ಕವರಾಗಿದ್ದಾಗ ರೇವಣಸಿದ್ಧರ ಹಿಂದುಗಡೆಯಲ್ಲಿ ತಿರುಗಿದವರು. ಏಕೋರಾಮಿ ತಂದೆಗಳು ಕೊಲ್ಲಿಪಾಕಿಯಲ್ಲಿಯೂ ಐವಳ್ಳಿಯಲ್ಲಿಯೂ ಶ್ರೀ ರೇವಣರ ಸಹವರ್ತನದಲ್ಲಿ ಕೆಲಸಮಾಡಿದವರು. ಕಲ್ಯಾಣದಲ್ಲಿ ಪ್ರಭುದೇವರ ಶೂನ್ಯ ಸಿಂಹಾಸನದ ಮೇಲೆ ಕೂತುಕೊಂಡು ಉಳಿದ ಆಚಾರ್ಯರ ಸಹಾಯದಿಂದ ಮದುವೆಯಾದವರು. ವಿಶ್ವಾರಾಧ್ಯರು ಪಂಡಿತಾರಾಧ್ಯರೊಡನೆ ಸಹವರ್ತಿಗಳಾಗಿ ಕಂಚಿ ಮೊದಲಾದ ಕಡೆಯಲ್ಲಿ ವೀರಶೈವ ಧರ್ಮವನ್ನು ಊರ್ಜಿತ ಮಾಡಿದವರು. ಹೀಗೆ ಇವರೆಲ್ಲರೂ ಕ್ರಿ. ಶ. ೧೨ ನೆಯ ಶತಮಾನದವರೆಂಬುವುದಕ್ಕೆ ಪ್ರಬಲವಾದ ಅನೇಕ ಆಧಾರಗಳು ದೊರಕಿರುತ್ತವೆ. ಆಚಾರ್ಯರು ಯುಗ ಯುಗದವರೆಂದು ಕೆಲವು ಗ್ರಂಥಕಾರರು ಪ್ರಾಚೀನತೆ ಎಂಬ ಮೂಢನಂಬಿಕೆಗೆ ಸಿಲ್ಕಿ ಗ್ರಂಥಗಳನ್ನು ಬರೆದಿರುವುದು ನಿಜವೆಂದು ಭಾವಿಸುವುದಾದರೆ ಬಸವೇಶ್ವರನೂ ಪ್ರಭುದೇವರೂ ಯುಗ ಯುಗದವರೆಂದು ಮೂಢನಂಬಿಕೆಯ ಶ್ರದ್ಧೆಯಿಂದ ಬರೆದಿರುವ ಗ್ರಂಥಗಳ ಮಾತನ್ನೂ ನಿಜವೆಂದು

ನಂಬಲೇಬೇಕಾಗುವುದು. ಆದರೆ ನಿಜವಾದ ಇತಿಹಾಸವು ಈ ಮೂಢ ನಂಬಿಕೆಯನ್ನು ಕಿತ್ತೊಗೆಯುತ್ತದೆ. ಈಗಿನ ವೀರಶೈವ ಸಮಾಜದ ರೂಢಿಯಲ್ಲಿ ಮದುವೆ ಮುಂತಾದ ಕಾರ್ಯಗಳನ್ನು ಮಾಡುವಾಗ ಓಂಕಾರಕಲಶ ಎಂದರೆ ಗಾಂಗೇಯ ಅಥವಾ ಷಣ್ಮುಖ ಕಲಶ (ಇದಕ್ಕೆ ಅನೇಕರು ಪ್ರಭುದೇವರ ಶೂನ್ಯ ಕಲಶ ಎಂದೂ ಕರೆಯುತ್ತಾರೆ. ಇಲ್ಲಿ ಶೂನ್ಯ ಎಂದರೆ ನಿರಾಕಾರ ಪರವಸ್ತು.) ಉಳಿದ ಐವರು ಆಚಾರ್ಯರ ಕಲಶಗಳು ಹೀಗೆ ಕಲಶ ಸ್ಥಾಪನೆಮಾಡಿ ಕಾರ್ಯವನ್ನು ಸಾಗಿಸುವ ಪದ್ಧತಿಯು ಇವರೆಲ್ಲರನ್ನೂ ಕೂಡಿ ಆರಂಭಿಸಲ್ಪಟ್ಟಿತೆಂದು ಅನೇಕ ಮಠಸ್ಥಲ ಮುಂತಾದ ಗ್ರಂಥಗಳಿಂದ ಸಿದ್ಧಪಡುತ್ತದೆ. ಆದುದರಿಂದ ವೀರಶೈವ ಸಮಾಜದವರು ಆಚಾರ್ಯರು ಹಿಂದೆ, ಬಸವೇಶ್ವರನು ಮುಂದೆ, ಅಥವಾ ಬಸವೇಶ್ವರನು ಹಿಂದೆ, ಆಚಾರ್ಯರು ಮುಂದೆ ಎಂಬ ಸಂಕುಚಿತ ಭಾವವನ್ನು ಬಿಟ್ಟು ಇವರೆಲ್ಲರಲ್ಲಿಯೂ ಪೂಜ್ಯಭಾವನೆಯಿಂದ ಪೂರ್ವ ಸಂಪ್ರದಾಯದಂತೆ ಏಕೀಭವಿಸಿ ಆಚರಿಸಿಕೊಂಡು ಹೋಗುವುದೇ ಅತ್ಯವಶ್ಯಕವಾದುದಾಗಿದೆ.

ಬೆಳಗಾಂವ ಜಿಲ್ಲೆಯ ಕಿತ್ತೂರು ಸಂಸ್ಥಾನದ ಕಲ್ಮಠದ ಈಗಿನ ಅಧ್ಯಕ್ಷರಾದ ಶ್ರೀ ನಿ. ಪ್ರಣವ ಸ್ವರೂಪಿಗಳಾದ ಗುರುಸಿದ್ಧೇಶ್ವರ ಸ್ವಾಮಿಗಳವರು ಧಾರ್ಮಿಕ ವಿಷಯದಲ್ಲಿ ಐಕ್ಯಮತವನ್ನುಂಟುಮಾಡಲು ಹಿಂದೆ ಯಕ್ಕುಂಡಿ ಮಠದ ಸ್ವಾಮಿಗಳಾಗಿದ್ದ ಶ್ರೀ ನಿ. ಪ್ರಣವ ಸ್ವರೂಪಿಗಳಾದ ಸಿದ್ಧರಾಮ ಸ್ವಾಮಿಗಳೇ ಮುಂತಾದವರೊಡನೆ ಸಹವರ್ತಿಗಳಾಗಿ ಕಾರ್ಯಮಾಡುತ್ತಿದ್ದುದು ಸಮಾಜದವರಿಗೆ ತಿಳಿದ ವಿಷಯವಾಗಿದೆ. ಈ ನಿ. ಪ್ರಣವ ಸ್ವರೂಪಿಗಳಾದ ಗುರುಸಿದ್ಧ ಸ್ವಾಮಿಗಳವರೇ ಈ ಗ್ರಂಥದ ಪ್ರಕಟನೆಗೆ ಈ ಪ್ರಕಾಶಕನಿಗೆ ಮೊದಲು ೨೦೦ ರೂಪಾಯಿಗಳನ್ನು ದಯಪಾಲಿಸಿದವರು. ಇವರ ಕೃಪಾ ಬಲದಿಂದಲೇ ಅನೇಕ ಶೋಧನೆಗಳನ್ನು ಮಾಡಿ ಈ ಗ್ರಂಥವನ್ನು ಬಯಲಿಗೆ ತಂದುದಾಗಿದೆ. ಜಾತ್ಯಾತೀತ ರಾಷ್ಟ್ರವಾಗಿರುವ ಈಗಿನ ರಾಜ್ಯದಲ್ಲಿ ವೀರಶೈವರು ಅಲ್ಲಸಲ್ಲದ ಆಲೋಚನೆಗಳಿಂದ ಒಬ್ಬರೊಬ್ಬರು ವೈಮನಸ್ಯವನ್ನು ತಾಳದೆ ಐಕಮತ್ಯದಿಂದ ನಡೆದುಕೊಂಡು ತಮ್ಮ ಸಂಸ್ಕೃತಿ ಮತ್ತು ಅಭಿಮಾನವನ್ನು ಬಿಡದೆ, ಇದು ಇಡಿ ಜಗತ್ತಿಗೆ ಅನ್ವಯಿಸುವಂತಹ ಧರ್ಮವೆಂದು ತೋರಿಸಿಕೊಡುವುದಕ್ಕೆ ಮಾದರಿ ರೂಪದವರಾಗಿ ಇದ್ದು ಈ ಜಗತ್ತಿನಲ್ಲಿ ಚನ್ನಾಗಿ ಮೆರೆಯಲಿ, ಎಂಬ ಸುಭಾಶಯದೊಡನೆ ಈ ಪ್ರಾರಂಭದ ಮುಖ್ಯ ವಿಷಯವನ್ನು ಸಂಕ್ಷಿಪ್ತದಲ್ಲಿ ಮುಗಿಸಲು ಬಯಸುವೆನು. ಇನ್ನೂ ಮುದ್ರಣವಾಗದೆ ಇದ್ದ ಕೆಲವು ಗ್ರಂಥಗಳನ್ನು ಮುದ್ರಣ ಮಾಡಿಸಿದರೆ ಸಮಾಜದಲ್ಲಿ ಐಕ್ಯಮತ್ಯವು ಚೆನ್ನಾಗಿ ಬೆಳೆಯುವುದೆಂದು ಈ ದೀನನ ಹಂಬಲವಿದೆ. ಪಂಚಾಚಾರ್ಯ ಚರಿತ್ರೆಯ ೭ ನೆಯ ಸಂಪುಟವನ್ನು ಪ್ರಕಾಶಪಡಿಸಲು ಸಮಾಜದವರು ತಕ್ಕ ಪ್ರಯತ್ನಗಳನ್ನು ಮಾಡಿದುದಾದರೆ ಸಮಾಜದ ಐಕಮತ್ಯವು ಬಹಳ ಬೇಗನೆ ಉಂಟಾಗುವುದೆಂದು ನಂಬಿ ಅದರ ಸಾರ್ಥಕಪಡಿಸಲು ಶಿವನ ಕೃಪೆಯಾಗಲೆಂದು ಪ್ರಾರ್ಥಿಸುವೆನು.

ಈಗ ತರುಣರು ಪ್ರೌಢ ಶಾಲೆಗಳಲ್ಲಿ (ಕಾಲೇಜು) ಓದುತ್ತಿರುವುದು ಬಹಳ

ವಾಗಿದೆ. ಮಧ್ಯಮ ಶಾಲೆಗಳಲ್ಲಿಯೂ ಆದ್ಯ ಶಾಲೆಗಳಲ್ಲಿಯೂ ಚರಿತ್ರೆಯ ಅಭ್ಯಾಸ ವಿದೆ. ಈ ವಿದ್ಯಾರ್ಥಿಗಳು ಇತಿಹಾಸದ ಕಡೆಗೆ ಗಮನಕೊಡುವುದು ಹೆಚ್ಚಾಗಿದೆ. ಇಂತಹವರಲ್ಲಿ ಮೂಢನಂಬಿಕೆಯನ್ನು ಬೆಳೆಯಿಸುವುದು ಒಂದು ವಿಧದಲ್ಲಿ ಅವರ ಕೊಲೆಯನ್ನು ಮಾಡಿದಂತೆ ಎಂದು ಒಬ್ಬ ಇತಿಹಾಸ ಶೋಧಕರು ಹೇಳಿದ್ದಾರೆ. ವೀರಶೈವರಲ್ಲಿ ಪೂಜ್ಯರಾದ ಗುರು ಜಂಗಮರ ಇತಿಹಾಸವನ್ನು ಸಂಶೋಧನದ ರೂಪದಲ್ಲಿ ತಿಳಿದುಕೊಳ್ಳುವುದೇ ಸರ್ವರಿಗೂ ಅತ್ಯವಶ್ಯಕವಾದ ಕಾರ್ಯವಾಗಿದೆ. ಈ ದೃಷ್ಟಿಯಿಂದಲೇ ಈ ಗ್ರಂಥವು ಇತಿಹಾಸ ಸಂಶೋಧನ ರೂಪದಲ್ಲಿ ಪ್ರಕಟಿಸಲ್ಪಟ್ಟಿದೆ. ಈಗಿನ ಗುರುವರ್ಗದವರಿಗೂ ವಿರಕ್ತ ಮೂರ್ತಿಗಳಿಗೂ ಸಹ ಮಾನ್ಯವಾದ ವಿಷಯ ಗಳೂ ಈ ಗ್ರಂಥದಲ್ಲಿ ಇರುವುದೆಂದು ನಂಬಲಾಗಿದೆ.

ಗುರುವರ್ಗದವರ ಗ್ರಂಥವೆಂದು ಪರಿಭಾವಿಸಲ್ಪಟ್ಟ ವೀರರಹಸ್ಯ ಎಂಬುದು ೨೩ ಪಟಲಗಳುಳ್ಳದಾಗಿ ಮರಾಠಿ ಭಾಷೆಯ ವ್ಯಾಖ್ಯಾನದೊಡನೆ ಪ್ರಕಟವಾಗಿದೆ. ಅದರ ೨೩ ನೆಯ ಪಟಲದಲ್ಲಿ ಪಂಚಾಚಾರ್ಯರ ಗೋತ್ರ ಸೂತ್ರಗಳ ವಿಷಯವಿದೆ. ಉಳಿದ ೨೨ ಪಟಲಗಳೇ ಪಾರಮೇಶ್ವರ ತಂತ್ರ ಎಂಬ ಹೆಸರಿನಿಂದ ವಿರಕ್ತ ವರ್ಗದವ ರಿಂದ ಪ್ರಕಟಿಸಲ್ಪಟ್ಟಿದೆ. ಹೀಗೆ ಗುರುವಿರಕ್ತ ವರ್ಗದವರ ಗ್ರಂಥಗಳೂ ಒಂದೇ ರೂಪದಲ್ಲಿ ಇರುವುದು ನವೀನ ಗ್ರಂಥಶೋಧನೆಯಿಂದ ಹೊರಬೀಳುತ್ತಲಿದೆ. ಇಂತಹ ಗ್ರಂಥ ಪ್ರಕಟನೆಯ ಶ್ರೇಷ್ಠವಾದ ಕಾರ್ಯಕ್ಕೆ ಸಮಾಜದವರ ಗಮನವು ಇನ್ನೂ ಚೆನ್ನಾಗಿ ಬೀಳಬೇಕಾಗಿದೆ. ಗುರುವರ್ಗದವರಿಗಾಗಲಿ ವಿರಕ್ತ ವರ್ಗದವರಾಗಲಿ, ಭಕ್ತರಿ ಗಾಗಲಿ, ಮಹಿಳೆಯರಿಗಾಗಲಿ ವೀರಶೈವ ಸಂಸ್ಕೃತಿಯು ಒಂದೇ ವಿಧವಾಗಿ ಇರುತ್ತದೆ. ಈ ಸಂಸ್ಕೃತಿಯನ್ನು ಸಮಾಜದವರು ಚೆನ್ನಾಗಿ ತಿಳಿದು ಐಕ್ಯಮತ್ಯದಿಂದ ಒಂದೇ ವಿಧ ವಾಗಿ ಆಚರಿಸಿ ಧನ್ಯರಾಗಲಿ ಎಂಬುದೇ ಈ ದಾಸಾನುದಾಸನ ಹಿರಿಯ ಬಯಕೆಯಾಗಿದೆ.

—ಪ್ರಕಾಶಕ

(ಸಂ. ೧೪೮)

# ೩೧. ನೂರೆಂಟು ತೆರದ ಅರ್ಪಣ

೩೩. ರೂಪು ರುಚಿ ತೃಪ್ತಿಗಳು ಮಹಲಿಂಗದೊಳಗಾರು
ರೂಪು ರುಚಿ ತೃಪ್ತಿಗಳು ಶೇಷ ಲಿಂಗದೊಳಾರು
ರೂಪು ರುಚಿ ತೃಪ್ತಿಗಳು ಚರಲಿಂಗದೊಳಗಾರು ಮುಖ ಹಸ್ತಭೇದವರಿದು
ರೂಪು ರುಚಿ ತೃಪ್ತಿಗಳು ಶಿವಲಿಂಗದೊಳಗಾರು
ರೂಪು ರುಚಿ ತೃಪ್ತಿಗಳು ಗುರುಲಿಂಗದೊಳಗಾರು
ರೂಪು ರುಚಿ ತೃಪ್ತಿಯಾಚಾರದಾರು ಲಿಂಗದೊಳಗೆಂದೊರೆದ ಗುರುವೇ ಶರಣು
ಇನ್ನೂರ ಹದಿನಾರು ತೆರೆದ ಅರ್ಪಣ.

೩೪. ಮೂವತಾರು ಗಂಧವ ಮೂವತಾರು ಲಿಂಗಕೆ
ಮೂವತಾರು ರುಚಿಗಳ ಮೂವತಾರು ಲಿಂಗಕೆ
ಮೂವತಾರು ವರ್ಣವ ಮೂವತಾರು ಲಿಂಗಕೆ ಮೂವತಾರು ಪರುಶನವ
ಮೂವತಾರು ಲಿಂಗಕೆ ಮೂವತಾರು ಶಬ್ದವ
ಮೂವತಾರು ಲಿಂಗಕೆ ಮೂವತಾರು ತೃಪ್ತಿಯ
ಮೂವತಾರು ಲಿಂಗಕ್ಕಿತ್ತಾ ಪ್ರಸಾದವನು ಸುಖಿಸೆಂದ ಗುರುವೆ ಶರಣು

## ಮಂತ್ರ ಸ್ವರೂಪ

೩೫. ಚಿರಕಳೆಯು ಪರಕಳೆಯು ಮಹಕಳೆಯು ಪಶ್ಚಿಮದಿ
ಪರಬಿಂದು ಚಿದ್ ಬಿಂದು ಮಹಬಿಂದು ಶಿಖಿಯಲ್ಲಿ
ಪರನಾದ ಸುಹನಾದ ಮಹನಾದ ರಂಧ್ರದಲಿ ಆಧಾರವಾಜ್ಞಾಂತ್ಯದ
ಸರ ಚಕ್ರದಲಿ ಷಟ್‌ಕೃತಿ ಷಡಕ್ಷರ ಪ್ರಣವ
ನಿರುತ ಪಟ್ಪ್ರಸಾದದ ಮಂತ್ರ ಸಂಬಂಧದಿಂ
ಪರಮ ಮಂತ್ರ ಸ್ವರೂಪನ ಮಾಡಿ ತೋರಿದಾ ಗುರುವಿಂಗೆ ಶರಣೆಂಬೆನು.

## ಲಿಂಗದಲ್ಲಿ ಪ್ರಣವ

೩೬. ಆಧಾರದಲಿ ನಾಲ್ಕು ಸ್ವಾಧಿಷ್ಠ ಚತುರ್ವಿಧ
ಭೇದಿಸಿದ ಮಣಿಪೂರವನಾಹತದಲ್ಲಿ ನಾ
ಲ್ಕಾದ ವಿಶುದ್ಧಿಯಲಿ ಚತುರ್ವಿಧವಾಜ್ಞೆಯಲಿ ನಾಲ್ಕು ರಂಧ್ರದಲಿ ನಾಲ್ಕು
ಸಾಧಿಸಿದ ಶಿಖಿಯಲ್ಲಿ ನಾಲ್ಕು ಪಶ್ಚಿಮದಿ ನಾ
ಲ್ಕಾದ ಪ್ರಣವ ರೂಪ ನಾಲ್ವತ್ತು ಎಂಟು ಎಂ
ಟಾದ ಪ್ರಣವತ್ರಯುವ ಲಿಂಗದೊಳು ಹುದುಗೊಳಿಸಿದಾಚಾರ್ಯ ಶರಣು ಶರಣು

(ಸಂ. ೧೨೨)

## ೩೨. ಮುಗಿಯುವಲ್ಲಿನ ಮಾತುಗಳು

ಶಿವಮೊಗ್ಗಾ ಡಿಸ್ಟ್ರಿಕ್ಟ್ ಸಾಗರ ತಾಲ್ಲೂಕು ಉಳುವೆ ಮಠದ ಶ್ರೀ ಗುರು ಬಸವಯ್ಯನವರಲ್ಲಿ ಸಿಕ್ಕ ಬರೆಹದ ಪ್ರತಿಯಿಂದ ಇದನ್ನು ಉದ್ಧರಿಸಿದುದಾಗಿದೆ. ಇದನ್ನು ರಚಿಸಿದ ಶಿವಲಿಂಗ ದೇವರು ಯಾರೆಂಬುದು ತಿಳಿಯದಾಗಿದೆ. ಇದರಲ್ಲಿ ಕಂಡ ಉದ್ಧರಣೆಗಳನ್ನು ಚಿತ್ರಿಸಿ ಬರೆದ ಪಟಗಳು ವೀರಶೈವರಲ್ಲಿ ಅಲ್ಲಲ್ಲಿ ದೊರೆಯುತ್ತವೆ. ಅವಕ್ಕೆ 'ಉದ್ಧರಣೆಯ ಪಟಲ' ಎಂದು ಕರೆಯುತ್ತಾರೆ. ಈ ಚಿತ್ರಿಸಿದ ಪಟಲಗಳಲ್ಲಿ ಒಂದೊಂದನ್ನು ವಿವರಿಸಿ ಬರೆದ ಲೇಖನಗಳ ಪುಸ್ತಕವೂ ಬರೆಹದಲ್ಲಿ ಅಲ್ಲಲ್ಲಿ ಇವೆ. ಇವಕ್ಕೆ "ಉದ್ಧರಣೆಯ ವಾಚ್ಯ" ಎನ್ನುತ್ತಾರೆ. ಈ ವಾಚ್ಯಗಳನ್ನು ಮೊಟ್ಟಮೊದಲು ಶ್ರೀ ಚನ್ನಬಸವೇಶ್ವರರು ಬರೆಸಿಟ್ಟರೆಂಬುದಕ್ಕೆ ಇದರಲ್ಲಿ ಕೊನೆಯ ಪದ್ಯವೂ ಒಂದು ಆಧಾರವಾಗಿ ಇದೆ.

ಈ ಬರೆಹದ ಪ್ರತಿಯು ಛಂದೋಬದ್ಧವಾದ ಷಟ್ಪದಿಗಳಿಂದ ಕೂಡಿದ್ದಾಗ್ಯೂ ಬರೆದವರ ದೋಷದಿಂದಲೋ ಏನೋ ಬಹಳ ತಪ್ಪುಗಳಿದ್ದವು. ಮೂಲಾಭಿಪ್ರಾಯಕ್ಕೆ ಭಿನ್ನವಿಲ್ಲದಂತೆ ಶಬ್ದಗಳನ್ನು ಮಾತ್ರ ಸುಧಾರಿಸಿ ಛಂದಸ್ಸಿಗೆ ಅನುಗುಣವಾಗಿರುವಂತೆ ಸರಿಪಡಿಸಿ ಮುದ್ರಿಸುವುದು ಒಂದು ಕಷ್ಟಕರವಾದ ಕೆಲಸವೇ ಆಯಿತು. ಓದುಗ ಮಹನೀಯರ ಉಪಯೋಗಕ್ಕೆ ಬರುವುದಾದರೆ ಆ ಕಷ್ಟವು ಸಾರ್ಥಕವಾದಂತಾಗುವುದು.

ಉದ್ಧರಣೆಯ ಪಟಲ, ಅದರಲ್ಲಿ ಸೂಚಿಸಿದ ವಿಷಯಗಳನ್ನು ವಿವರಿಸುವ ವಾಚ್ಯ ಇವುಗಳೆರಡನ್ನೂ ಸಮನ್ವಯ ಮಾಡಿಕೊಂಡು ವಿಷಯವನ್ನು ಗ್ರಹಿಸುವುದು ಪ್ರತಿಯೊಬ್ಬ ವೀರಶೈವ ಪುರುಷನಿಗೂ ಸ್ತ್ರೀಗೂ ಅವಶ್ಯಕವಾದ ಕೆಲಸ. ಅನೇಕ ಮಹನೀಯರು ಶ್ರಾವಣ ಮಾಸದಲ್ಲಿ ಅಥವಾ ತಮ್ಮ ವಿಶ್ರಾಂತಿಯ ದಿನಗಳಲ್ಲಿ ಈ ಜ್ಞಾನಾನುಭವವನ್ನು ಉಂಟುಮಾಡಿಕೊಳ್ಳಲು ಬಹಳವಾಗಿ ಪ್ರಯತ್ನಿಸುತ್ತಾರೆ. ಈಗಲೂ ಪ್ರಯತ್ನಿಸುವವರಿದ್ದಾರೆ. ಇವುಗಳ ಜ್ಞಾನದಿಂದ ಭಾರತೀಯ ಧರ್ಮ ಗ್ರಂಥಗಳಲ್ಲಿ ಹೇಳಲ್ಪಟ್ಟ ಧಾರ್ಮಿಕ ತತ್ವಭಾವಗಳನ್ನೆಲ್ಲಾ ಸಂಗ್ರಹವಾಗಿ ತಿಳಿದು ಕೊಂಡಂತೆ ಆಗುತ್ತದೆ. ಭಾರತೀಯ ಧಾರ್ಮಿಕ ತತ್ವಗಳನ್ನನುಸರಿಸಿ ಈ ವಾಚ್ಯ ಪಟಲಗಳ ಬೋಧೆ ಇದೆಯೇ ಹೊರತು ಕಲ್ಪಿಸಿಕೊಂಡು ಸ್ವೇಚ್ಛೆಯಾಗಿ ಬರೆಯಲ್ಪಟ್ಟದ್ದಲ್ಲ. ಇವನ್ನು ಪ್ರತಿಯೊಂದು ಮಠದವರೂ ಶ್ರಾವಣ ಮಾಸದಲ್ಲಿ ಪಠಿಸಿ ಪುರಾಣ ಕೀರ್ತನೆಗಳನ್ನು ಕೇಳಿ ಮನೋರಂಜನೆ ಹೊಂದುವುದಕ್ಕಿಂತಲೂ ಈ ಬೋಧೆಯನ್ನು ತಿಳಿದು ಆತ್ಮರಂಜನೆಯನ್ನು ಪಡೆಯುವಂತೆ ಏರ್ಪಡಿಸುವುದು ಮೇಲಾದ ಕೆಲಸವಾಗಿದೆ. ಆದುದರಿಂದಲೇ ಪಾರಾಯಣದ ಹೊತ್ತಗೆಯಲ್ಲಿ ಇದು ಸೇರಿಸಲ್ಪಟ್ಟಿದೆ.

ಇದರಲ್ಲಿ ೩೨ ಉದ್ಧರಣೆಗಳ ವಿಷಯವು ಸಂಗ್ರಹವಾಗಿ ಹೇಳಲ್ಪಟ್ಟಿದೆ. ಇವುಗಳ ಶಿರೋಲೇಖಗಳು ಮೂಲ ಪ್ರತಿಯಲ್ಲಿ ಇದ್ದಿಲ್ಲವಾದರೂ ಶೋಧಿಸಿ ಇದರಲ್ಲಿ ಅವುಗಳನ್ನು ತೋರಿಸಿದುದಾಗಿದೆ. ಕೊನೆಯ ಜ್ಞಾನ ಚಕ್ರೋದ್ಧರಣೆಯು ಭಾರತೀಯ ಧರ್ಮಗ್ರಂಥಗಳ ಬಹು ಭಾಗಗಳನ್ನೊಳಗೊಂಡಿರುವುದು. ಅದಕ್ಕಾಗಿ ಇದರಲ್ಲಿ ೨೫, ೩೫, ೩೬, ಮತ್ತು ೩೭ ನೆಯ ಪದ್ಯಗಳು ಇವೆ. ಇವುಗಳನ್ನು ವಾಕ್ಯದೊಡನೆ ಅನುಭವ ಮಾಡಿಕೊಂಡು ಆಚರಿಸುವುದು ಪ್ರತಿಯೊಬ್ಬ ಭಾರತೀಯನಿಗೂ ಆವಶ್ಯಕವಾದ ಕೆಲಸವಾಗಿದೆ.

ಕೆಲವು ಉದ್ಧರಣೆಯ ಪಟಲಗಳಲ್ಲಿ ಮೊಟ್ಟ ಮೊದಲು ರಥೋದ್ಧರಣೆಯು ಆರಂಭವಾಗುತ್ತದೆ. ಅಂಗವೇ (ಶರೀರ) ರಥವೆಂದು ಅದರಲ್ಲಿ ಹೇಳಲ್ಪಟ್ಟಿದೆ. ಇದಲ್ಲದೆ ಇನ್ನು ಮೂರು ಉದ್ಧರಣೆಗಳನ್ನು ಸೇರಿಸಿ ಒಟ್ಟು ೩೬ ಉದ್ಧರಣೆ ಎಂಬುದಾಗಿಯೂ "ಉದ್ಧರಣೆಯ ಪಟಲ"ಗಳು ಕೆಲವು ಬರೆಯಲ್ಪಟ್ಟಿವೆ.

ಬ್ರಹ್ಮನ ಲಕ್ಷಣವು "ಸಚ್ಚಿದಾನಂದ ನಿತ್ಯ ಪರಿಪೂರ್ಣ" ಎಂಬ ಐದು ವಿಧವುಳ್ಳುದೆಂದು ಅದ್ವೈತ ಶಾಸ್ತ್ರವು ಬೋಧಿಸುತ್ತಿರುವುದು ಪ್ರಸಿದ್ಧವಾದ ವಿಷಯ. "ಪರಿಪೂರ್ಣ" ಎಂಬುದು ಆದಮೇಲೆ "ಅಖಂಡ" ಎಂಬುದೊಂದು ವಿಧ ಉಂಟೆಂದೂ ಅದೇ ಭಕ್ತಸ್ಥಲ ಸಂಬಂಧವೆಂದೂ ಅನಾದಿ ಭಕ್ತೋದ್ಧರಣೆಯಲ್ಲಿ ಹೇಳಲ್ಪಟ್ಟಿದೆ. 'ಅಖಂಡ' ಎಂಬ ಆರನೆಯ ಲಕ್ಷಣವೂ ಬ್ರಹ್ಮನಿಗೆ ಉಂಟೆಂದು ಉಪನಿಷತ್ತುಗಳ ಬೋಧೆಯೂ ಇದೆ. ಇದೇ ರೀತಿ ಭಾರತೀಯ ಧರ್ಮದ ಉಚ್ಚತರವಾದ ವಿಷಯಗಳ ಬೋಧೆಯು ಈ ಪಟಲ ಮತ್ತು ವಾಕ್ಯಗಳಲ್ಲಿ ಇರುವುದರಿಂದ ಅನುಭಾವಿಗಳೊಡನೆ ಇದರ ವಿರಚನೆಯನ್ನು ನಡೆಯಿಸುವ ವೀರಶೈವರ ಅತ್ಯಗತ್ಯವಾದ ಕೆಲಸ. ಧಾರ್ಮಿಕ ಜ್ಞಾನ ಮತ್ತು ಅದರಾಚರಣೆಯು ಲಾಭಕ್ಕಿಂತ ಹೆಚ್ಚಿನದು ಯಾವುದನ್ನೂ ಈ ಜನ್ಮದಲ್ಲಿ ಹೊಂದಬೇಕಾಗಿಲ್ಲ. ಉಳಿದ ಸಂಪಾದನೆ ಎಲ್ಲವೂ ಇಲ್ಲಿಯೇ ಉಳಿಯತಕ್ಕವುಗಳು. ಆದುದರಿಂದ ಇದರ ಕಡೆಗೆ ಸರ್ವರ ಗಮನವೂ ಅತ್ಯವಶ್ಯಕವಾಗಿ ಬೀಳಲಿ.

ಇದರಲ್ಲಿನ ಲಿಂಗ ಷಡಕ್ಷರೋದ್ಧರಣೆಯ (೨೨ ನೆಯ ಪದ್ಯ) ಅನುಭಾವವನ್ನು ಪ್ರಾಣವಾಗಿಯೂ ಅಂಗ ಷಡಕ್ಷರೋದ್ಧರಣೆಯ (೨೩ ನೆಯ ಪದ್ಯ) ಅನುಭಾವವನ್ನು ದೇಹವಾಗಿಯೂ ಇದ್ದಂತೆ ಇಟ್ಟುಕೊಂಡು ಆಚರಿಸುವುದು ಅವಶ್ಯಕ. ಈ ಬಗೆಗೆ ಶ್ರೀ ನಿ. ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳು ನಿರೂಪಿಸಿದ 'ಸಿದ್ಧೇಶ್ವರ ವಚನ' ಎಂಬ ಪುಸ್ತಕದಲ್ಲಿ ವಿವರಗಳಿವೆ. ಲಿಂಗದಲ್ಲಿ ನಾಲ್ವತ್ತೆಂಟು ಪ್ರಣವಗಳಿರುವ ವಿಷಯುವನ್ನು ಮೇಲೆ ೩೬ ನೆಯ ಪದ್ಯವು ಹೇಳುತ್ತದೆ. ಲಿಂಗ, ಹಸ್ತ, ಶಕ್ತಿ, ಪ್ರಸಾದ ಈ ನಾಲ್ಕು ಸ್ಥಳ ಭೇದಗಳೆಂದೂ ಅಂಗ, ಮುಖ ಭಕ್ತಿ ಪದಾರ್ಥ ಈ ನಾಲ್ಕು ಕುಳ ಭೇದಂಗಳೆಂದೂ ತಿಳಿಯಲ್ಪಡುತ್ತವೆ. ಒಂದೊಂದು ಸ್ಥಲಕ್ಕೆ ಈ ಎಂಟರ ಪ್ರಣವಗಳನ್ನು ಸಂಬಂಧಿಸಿಕೊಂಡರೆ ನಾಲ್ವತ್ತೆಂಟು ಪ್ರಣವಗಳಾಗುತ್ತವೆ.

ಇಂತಹ ವಿವರಣೆಗಳನ್ನು ವೀರಶೈವರು ತಿಳಿದಾಚರಿಸುವುದು ಅವಶ್ಯ. ದೇವ ಭಾವನೆಯು ಮನುಷ್ಯನಲ್ಲಿ ಬೆಳೆಯಬೇಕೆಂದು ಭಾರತೀಯ ಧರ್ಮಜ್ಞರು ಹೇಳುವಂತೆ ಶಿವಾನುಭವಿಯು ಪ್ರತಿಯೊಂದು ಅಂಗಭೇದ, ಲಿಂಗಭೇದಗಳಲ್ಲಿ ಶಿವನ ಐಕ್ಯತೆಯನ್ನು ಸಂಬಂಧಿಸಿಕೊಂಡು ಇವೇ ಸಕೀಲಗಳೆಂಬ ಸಾಂಕೇತಿಕ ನಾಮಗಳನ್ನು ಪಡೆದಿವೆ ಎಂದು ಭಾವಿಸಿ ಆಚರಿಸುವುದು ಶ್ರೇಷ್ಠವಾದ ಧಾರ್ಮಿಕಾಚರಣೆಯಾಗಿದೆ. ಇದನ್ನು ಸರ್ವರೂ ಗ್ರಹಿಸಲಿ.

(ಸಂ. ೧೨೨)

೫೨

# ಗ್ರಂಥ ಸಂಗ್ರಹ-ಸಂಪಾದನೆ

## ಪ್ರಾಚೀನ ಕಾವ್ಯಗಳು

[ಶರಣ ಸಾಹಿತ್ಯವನ್ನು ಪ್ರಕಟಗೊಳಿಸುವುದು 'ಸದ್ಧರ್ಮದೀಪಿಕೆ'ಯ ಪ್ರಧಾನೋದ್ದೇಶದಲ್ಲಿ ಒಂದು. ಬಸವಾದಿ ಪ್ರಮಥರ ಕಾಲದಲ್ಲೂ ಅನಂತರದಲ್ಲೂ ಕರ್ನಾಟಕದಲ್ಲಿ ಹುಲುಸಾಗಿ ಬೆಳೆದುನಿಂತ ಹಲವು ಪ್ರಕಾರದ ಸಾಹಿತ್ಯವನ್ನು ಶ್ರೀ ಚನ್ನಮಲ್ಲಿಕಾರ್ಜುನರು ದೇಶಮುದ್ದಗಲಕ್ಕೂ ಸಂಚರಿಸಿ ಸಂಗ್ರಹಿಸಿ, ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಲೇ ಇದ್ದರು. ಕೆಲವು ಲಘುಕೃತಿಗಳನ್ನು ಇಲ್ಲಿ ಆಯ್ದು ಕೊಟ್ಟಿದೆ. ಆ ಕೃತಿಗಳಿಗೆ ಸಂಬಂಧಿಸಿದಂತೆ ಅವರೇ ಬರೆದಿರುವ ಟೀಕೆ, ಟಿಪ್ಪಣಿ, ಪರಿಚಯ, ಉಪಲಬ್ಧ ಸ್ಥಳಗಳು ಮೊದಲಾದುವನ್ನು ಅಲ್ಲಲ್ಲಿಯೇ ಕೊಟ್ಟಿದೆ. ಇವುಗಳಲ್ಲಿ ಕೆಲವು ಅಚ್ಚಾಗಿವೆಯಾದರೂ ಅವು ಈಗ ದೊರೆಯುವುದಿಲ್ಲವಾದ ಕಾರಣ ಅವುಗಳನ್ನು ಇಲ್ಲಿ ಸೇರಿಸುವ ಅವಶ್ಯಕತೆ ಕಂಡುಬಂದಿದೆ. ಇಲ್ಲಿ ನಾವು ಕೊಟ್ಟಿರುವಂತಹ ಸಣ್ಣದೊಡ್ಡ ಹಾಡುಗಬ್ಬಗಳು ಅವರ ಸದ್ಧರ್ಮದೀಪಿಕೆಯಲ್ಲಿ ಸಾವಿರಾರು ಪ್ರಕಟಗೊಂಡಿವೆ. ಅಚ್ಚಾಗದೆ ಉಳಿದಿರುವ ಇನ್ನೂ ಅನೇಕ ಕೃತಿಗಳು ಅವರ ಸಂಗ್ರಹದಲ್ಲಿ ಇದ್ದುವು. ಅವೆಲ್ಲವುಗಳನ್ನು ಸಂಗ್ರಹಿಸಿ, ವರ್ಗೀಕರಿಸಿ ಸಮುಚಿತ ಟೀಕೆ ಟಿಪ್ಪಣಿಗಳೊಂದಿಗೆ ಸ್ವತಂತ್ರ ಕೃತಿಯಾಗಿ ಹೊರತರುವುದಾದರೆ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಅದೊಂದು ದೊಡ್ಡ ಕೊಡುಗೆಯಾದೀತು. ಇವರು ಸಂಪಾದಿಸಿ ಪ್ರಕಟಿಸಿರುವ 'ಉಡುತಡಿಯ ಮಹಾದೇವಿಯರ ರಗಳೆ'ಯ ಬಗೆಗೆ ಬೇರೆ ಒಂದು ಲೇಖನದಲ್ಲಿ ಪ್ರಸ್ತಾಪಿಸಿದೆ.]

# ೧. ಪುರಾತನ ದೇವಿಯರ ಸಾರ್ಥಕ ಮೊದಲಿನ ಕಾಣಿಕೆ

ಶಿರಾಳಕೊಪ್ಪದಲ್ಲಿ ಹಳೆಯ ಪ್ರತಿಗಳನ್ನು ಓದುತ್ತಿದ್ದಾಗ, ಈ ಪುಸ್ತಕದೊಳಗಿನ ಷಟ್ಪದಿಯ ಪದಗಳು ಕೆಲವು ದೊರೆತವು... ಆ ಪದ್ಯಗಳಿಗೆ ಕೊನೆಯಿಲ್ಲದಿದ್ದುದರಿಂದ ಇನ್ನೂ ಇರಬಹುದು ಹುಡುಕಬೇಕೆಂಬ ಯೋಚನೆಯುಂಟಾಯಿತು. ಶಿವಮೊಗ್ಗಾ ಡಿ. ಸೊರಬದ ತಾಲ್ಲೂಕು ಚಿಕ್ಕಕಬ್ಬೂರಲ್ಲಿ ಇದ್ದ ಷಟ್‌ಸ್ಥಲ ನಿಷ್ಠಾಗರಿಷ್ಠರಾದ ಲಿಂಗಪ್ಪ ಶರಣರವರಿಂದ ಓದಲಿಕ್ಕೆ ತೆಗೆದುಕೊಂಡು ಬಂದಿದ್ದ ಒಂದು ಪ್ರತಿಯಲ್ಲಿ ಈ ಪದ್ಯಗಳು ದೊರೆತವು. ಅವು ಛಂದಸ್ಸು ಮೊದಲಾದುವು ಸರಿಯಿಲ್ಲದೆ ಇದ್ದುದರಿಂದ ಇನ್ನೊಂದು ಪ್ರತಿಯನ್ನು ನೋಡಬೇಕೆಂಬ ಆಸೆಯು ಹುಟ್ಟಿತು. ಶ್ರೀಮನ್ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳವರ ಬೃಹನ್ಮಠ ಚಿತ್ರದುರ್ಗದಲ್ಲಿ ಓಲೆಯ ಗರಿಯ ಪ್ರತಿಗಳನ್ನು ನೋಡುತ್ತಿದ್ದಾಗ ಅಲ್ಲಿ ಒಂದು ಓಲೆಯ ಪ್ರತಿಯು ಸಾಂಗವಾಗಿದ್ದುದು ದೊರಕಿತು. ಅದರ ಸಹಾಯದಿಂದ ಪದ್ಯಗಳನ್ನು ಸರಿಪಡಿಸಿಕೊಂಡದ್ದಾಯಿತು. ಈ ಪ್ರತಿಗಳನ್ನು ದೊರಕಿಸಿ ಕೊಟ್ಟವರ ಉಪಕಾರ ಸ್ಮರಣೆಯನ್ನು ಮಾಡುತ್ತೇನೆ...

ಪೂರ್ವಿಕರಿಂದ ರಚಿಸಲ್ಪಟ್ಟ ೧೧೮ ದೇವಿಯರ ಹೆಸರುಳ್ಳ ಸಾರ್ಥಕ ಷಟ್ಪದಿಯ ಪದ್ಯಗಳು ಈ ಕೆಳಗೆ ಕೊಡಲ್ಪಟ್ಟಿವೆ.

[ಈ ಚಿಕ್ಕ ಕೃತಿಯು ಪುಸ್ತಿಕೆಯ ರೂಪದಲ್ಲಿಯೂ ಪ್ರಕಾಶಿತವಾಗಿದೆ. ಸಂಶೋಧನಾ ದೃಷ್ಟಿಯಿಂದ ಮುಖ್ಯವಾದುದೆಂದು ಮತ್ತೊಮ್ಮೆ ಇಲ್ಲಿ ಮುದ್ರಿಸಿದೆ ಸಂ.]

ಪಲ್ಲವಿ

ಪರಮ ಪಾವನ ಚಾರು ಚರಿತರೆನಿಸುವಾ ಶಿವ
ಶರಣೆಯರ ನಾಮಸ್ಮರಣೆಯ ಮಾಡಲಿಹ ಪರವು
ದೊರೆಕೊಂಡು ಮರಣಬಾಧೆಯ ಗೆದ್ದು ಮುಕ್ತಾಂಗನೆಯ
ಬೆರಸಿ ಸುಖಿಸಿರ್ಪರು

ನೀಲಲೋಚನೆ ನಿಂಬಿಯಕ್ಕ ನಿಜ ಸಂಗವ್ವೆ
ಕೋಳೂರು ಕೊಡಗೂಸು ವೀರ ಸುಗ್ಗಲದೇವಿ
ಕೇಳಿಕೆಯ ಮಹದೇವಿ ಸತ್ಯಕ್ಕ ನಂಬವ್ವೆ ಗುಡ್ಡವ್ವೆ ಸಾಯಿದೇವಿ

ಸೂಳೆ ಪದ್ಮಲದೇವಿ ಸೂಳೆ ಬೊಮ್ಮಲದೇವಿ
ಸೂಳೆ ನಂಬಕ್ಕ ಚೋಳವ್ವೆ ಚಾಕಲದೇವಿ
ಕಾಳವ್ವೆ ಕಮಲವ್ವೆ ತಿಲಕವ್ವೆ ಬಿಜ್ಜಮಹದೇವಿ ಚಂಗಳೆ ದುಗ್ಗಳೆ ೧

ಕಾರಿಕಾಲಮ್ಮ ಕೇತಲದೇವಿ ವೈಜವ್ವೆ
ವೀರ ರೆಮ್ಮವ್ವೆ ರೇಕವ್ವೆ ಹೊಟ್ಟಲ ಕೆರೆಯ
ಚೋಳಾದೇವಿ ರೇಚವ್ವೆ ಶೆಬ್ಬವ್ವೆ ಪಿಟ್ಟವ್ವೆ ಮಾಯಿದೇವಿ
ವೀರ ಶಿವದೇವಿ ಶಿವದಾಸವ್ವೆ ಸೇವಕದ
ಗೌರವ್ವೆ ಕಲಿದೇವಿ ಮಾಳಾಯಿ ಶಿವದೇವಿ
ವೀರ ಸಂಗವ್ವೆ ಸೋಮರಸಿ ಬೊಂತಲದೇವಿ ಮುಕ್ತಾಯಿ ನಾಗಲಾಂಬೆ ೨

ಬಲದೇವಿ ಬೀಚವ್ವೆ ಬಲ್ಲವ್ವೆ ಕೊಲ್ಲವ್ವೆ
ಮಲುಹಣೆಯು ಮಹದೇವಿ ವೀರ ಮಹದೇವಿ ಬಾ
ಚಲದೇವಿ ಆದವ್ವೆ ಅರಸವ್ವೆ ಚಂದ್ರಮಹದೇವಿ ವೀರಾದೇವಿಯು
ಮಲಿದೇವಿ ದೇವಲಾಂಬಿಕೆ ಕನ್ನಮ್ಮರಸಿ ಗೋ
ಚಲದೇವಿ ಗೊಗ್ಗವ್ವೆ ಪರವೆ ಸಂಕಲೆಯು ಭೊ
ತಲದೇವಿ ಲಕ್ಕಮ್ಮ ಉಡುತಡಿಯ ಮಹದೇವಿ ಧವಳಾರದಾ ಪಾರ್ವತಿ ೩

ಬೊಮ್ಮವ್ವೆ ಹೂವಿನಲ್ಲಮದೇವಿ ಸೋಮಾಯಿ
ಅಮ್ಮ ಬೊಮ್ಮಲದೇವಿ ಗಂಗಾಯಿ ಕಮಲಾಯಿ
ಅಮ್ಮವ್ವೆ ಚೆಕ್ಕಲಿಗೆ ಮುದ್ದಾಯಿ ಲಿಂಗಾಯಿ
ಕಾಮಲಾಂಬಿಕೆಯು ಕದಿರಿನಾ
ರೆಮ್ಮವ್ವೆ ಘೃತದ ನಾಗಾಯಿ ಗುರುಭಕ್ತಿ ಲಿಂ
ಗಮ್ಮ ವೀರನಾರಿಯು ನಾಪತಿಗೆ ಗುಡ್ಡಮ್ಮ
ನೇಮುದಾ ವೀರಸಂಗವೆ ಸೂರಸಾನಾಂಬೆಯಾ ಮುಗ್ಗಿಯಾ ದುಗ್ಗಳೆ ೪

ಮಾಚವ್ವೆ ಮಹದೇವಿ ಗಾಣದಾ ದಾಸವ್ವೆ
ರಾಚವ್ವೆ ಪದ್ಮವತಿ ತಿಲವಾಯಿ ಶಿವಪ್ರಿಯ
ನಾಚಿ ಬೊಪ್ಪಲದೇವಿ ಪ್ರೌಢವತಿ ಗಂಗಾಂಬೆ ವಿಮಳಾಯಿ ತಿಲ್ಲವಲ್ಲಿ
ನಾಚಿಯುಸ್ಯಜ್ಞಾನದೇವಿ ಚೊಲ್ಲದ ನಾಚಿ
ಪೋಚವ್ವೆ ಸಿದ್ದಾಯಿ ರಾಮಾಯಿ ಸೌಂದರದ
ನಾಚಿ ನೀರಾಜನದ ಧವಳಾಯಿ ಚಿಕ್ಕಪಾರ್ವತಿ ಸುಗ್ಗಲಾದೇವಿಯು ೫

ಶರಣೆ ಮಹಸೋವಳೆಯು ಸೋಮವ್ವೆ ಕಾಳವ್ವೆ
ಹರಭಕ್ತೆ ಎನಿಪ ಮಾಂಗಾಯಕ್ಕರಸಿಯು ಸ
ಚ್ಚರಿತೆಯ ಮಹಾಗುರುವೆ ಪಾತರದ ರೇಚವ್ವೆ ಅಣ್ಣಲಾದೇವಿ ಎನಿಪ
ಶರಣ ಸತಿಯರನಾಮ ನೂರೆಂಟನೊಲಿದು ವಿ
ಸ್ತರಿಸಿದೆಂ ಸಕಲ ಶರಣರ್ಗೆ ಮುದದೊಪ್ಪಿನಿಂ
ದುರುತರದ ಸಕಲ ಸಂಪದಕೆ ಕಾರಣವೆಂದು ಸದ್ಭಕ್ತರವಧರಿಪುದು ೬

(ಸಂ. ೧೩)

## ೨. ಕಲ್ಯಾಣಕ್ಕೆ ಬಂದ ಉಡುತಡಿಯ ಮಹಾದೇವಿಯರನ್ನು ಅರ್ತಿಯಿಂದ ಎದುರುಗೊಂಡ ಶರಣೆಯರು

---

ಅಕ್ಕಮಹದೇವಿಯರ ದರುಶನಾರ್ಥಕ್ಕೆಳಸಿ
ಚಕ್ಕಚಕ್ಕನೆ ವೆಲ್ಲಗೊಂಡದ ಮಹಾದೇವಿ
ಯಕ್ಕ ಬೊಂತಾದೇವಿ ಬಲದೇವಿಯುಂ ವೀರಗುಡ್ಡವ್ವೆ
ಜಕ್ಕಲಬ್ಬೆಯು ಶಿವಪುರಾಣಮಂ ಸ್ತ್ರೀಯರೊಳು
ಒಕ್ಕಣಿಪ ರೆಬ್ಬವ್ವೆ ರೆಮ್ಮವ್ವೆ ಮಠಗಳ
ಲ್ಲಿಕ್ಕುತಿಹ ರಂಗವಾಲೆಯ ಸಾಯಿದೇವಿಯರ್ ಬಂದರಾನಂದದಿಂದ ೧

ವೀರ ರೆಮ್ಮವ್ವೆ ಟೊಂಗಿನ ಮಹಾದೇವಿ ಧವ
ಳಾರ ಮಜ್ಜಗದ ಪಾರ್ವತಿ ಶಿರನಿವಾಳಿಯಂ
ಮಾರಾರಿಗೆತ್ತುತಿಹ ಚಿಕ್ಕ ಪಾರ್ವತಿಯು ಪಂಚಾಕ್ಷರಿಯ ಶಿವನಮ್ಮನು
ಚಾರು ಮಣಿಗನ್ನಡಿಯ ಕಾಮಲಾಂಬಿಕೆ ನೇತ್ರ
ದಾರತಿಯ ಕಮಳವ್ವೆ ಜ್ಞಾನದೀಕ್ಷೆಯ ನೀವ
ನಾರಿ ವಿಮಳವ್ವೆ ಮುಕ್ತಾಯಿ ಮಂಜೂರ ಶಿವದಾಸವ್ವೆಯರ್ ಬಂದರು ೨

ಕದಿರ ರೆಬ್ಬವ್ವೆ ರೇಕವ್ವೆ ಗಂಗಾದೇವಿ
ಯಧಿಕ ಮಸಣಮ್ಮ ಕೇತಲದೇವಿ ಮುಂತಾದ
ಸುವತಿಯರ್ ಬಂದೆರಗಿ ಮಹದೇವಿಯಾ ವಿರಾಗವ ಕಾಣುತದ್ಭುತಕ್ಕೆ
ಪದವಾಗಿ ಪರಿತೋಷದಿಂದ ತಮತಮಗೆಲ್ಲ
ಪದವಿಟ್ಟು ಕೊಂಡಾಡಿ ನೀಲಲೋಚನೆಯ ಸತಿ
ಮುದದಿಂದ ಕೇಳ್ದರ್ ಮಹಾದೇವಿಯಕ್ಕನೇಳ್ತಂದುದಕ್ಕಳ್ತಿ ಪಟ್ಟು ೩

(–ಸಂ. ೧೩)

[ಆಧಾರ : 'ನೂರೆಂಟು ದೇವಿಯರ ವಾರ್ಧಕ'ದೊಂದಿಗೇ ಇದ್ದುದೆಂದು ತೋರುವುದು. ಸಂಪಾದಕರು ಈ ಎರಡು ಕೃತಿಗಳಿಗೂ ಒಂದೇ ಟಿಪ್ಪಣಿ ಬರೆದಿರುವರು.]

## ೩. ಅಂಬಿಗ
(ಕನ್ನಡ ಶಿವಯೋಗ ಪ್ರದೀಪಿಕೆಯಿಂದ)

---

ಪಲ್ಲವಿ ರಾಗ : ನಾದ ನಾಮಕ್ರಿಯೆ

ನಂಬಿದೆ–ಗುರುವೆ–ನಂಬಿದೆ
(ನಂಬಿದೆ–ಸ್ವಾಮಿ–ನಂಬಿದೆ)
ಅಂಬಿಕಾ–ರಮಣ–ನೀನಂಬಿಗ

ಹೊಳೆಯು ಭರವ ನೋಡಂಬಿಗ
ಸೆಳೆಹು ಬಹಳ ಕಾಣಂಬಿಗ
ಸುಳುಹಿನೊಳು ಬಿದ್ದೆನಂಬಿಗ ಎನ್ನ
ಸೆಳೆದು ಕೊಳ್ಳೋ ನೀನಂಬಿಗ ೧

ಆರುತೆರೆಯ ನೋಡಂಬಿಗ
ಮೀರಿ ಬರುತಲಿದೆಯಂಬಿಗ
ಹಾರಲೊದೆದು ಎನ್ನ ತಡಿಗೆ ಸೇರಿಸು ನೀ
ದೂರ ಮಾಡದಿರು ಅಂಬಿಗ ೨

ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರನೋಡಂಬಿಗ ಇದ
ಸಂಭ್ರಮದ ನೋಡಂಬಿಗ ಇದ
ರಿಂಬನರಿದು ತೆಗೆಯಂಬಿಗ ೩

ಹತ್ತು ಹತ್ತು ನೋಡಂಬಿಗ
ಹತ್ತಿದರೈವರು ಅಂಬಿಗ–
ಮುತ್ತಿಗೆಗೊಳಗಾದೆನಂಬಿಗ– ಎನ್ನ
ನೆತ್ತಿಕೊಳ್ಳೊ ನೀನಂಬಿಗ ೪

ಸತ್ಯವೆಂಬ ಹುಟ್ಟಂಬಿಗ– ಸದ್
ಭಕ್ತಿಯೆಂಬ ಪಥವಂಬಿಗ
ನಿತ್ಯ ಮುಕ್ತ ನಮ್ಮ ಮಲ್ಲಿಕಾರ್ಜುನನ
ಮುಕ್ತಿ ಮಂಟಪಕೊಯ್ಯೊ ಅಂಬಿಗ ೫

(–ಸಂ. ೫೨)

# ೪. ಶರಣು ಶ್ರೀಗುರುಲಿಂಗ

ಪಲ್ಲವಿ

ಶರಣು ಶ್ರೀ ಗುರುಲಿಂಗ ಶರಣು ಸಜ್ಜನಸಂಗ
ಶರಣು ಜಂಗಮಲಿಂಗ ಚಲ್ವ ಸಂಗಯ್ಯ

ನಿತ್ಯ ನಿರ್ಮಲಮೂರ್ತಿ ಮತ್ತಾರಿನ್ನೆನಗೆಗತಿ
ಅತ್ಯಂತ ಕರುಣದಿಂದೆ ನೋಡು ಲಿಂಗಯ್ಯ ೧

ಸತ್ಯ ಶರಣರ ಮನೆಯ ಭೃತ್ಯರಾಳಿನಾಳಿನ
ತೊತ್ತೆನ್ನ ಮಾಡಿ ಸಲಹು ಚಲ್ವ ಲಿಂಗಯ್ಯ ೨

ಘೋರ ಸಂಸಾರವೆಂಬ ಹಿರಿದಡವಿಯೊಳ್ ಬಿದ್ದು
ದಾರಿತಪ್ಪಿದೆ ನಿಮ್ಮ ಅರೆಯದೆ ಲಿಂಗಯ್ಯ ೩

ಮಾರಾರಿ ಎನ್ನ ಗುಣವನಾರಯ್ಯದಿರು ವಿಧಿ
ಮೀರಲು ಕೃಪಾಬ್ಧಿ ನೀನು ಚಲ್ವ ಲಿಂಗಯ್ಯ ೪

ಬೆಟ್ಟಕ್ಕೆ ಬಾಣ ಹೂಡಿಬಿಟ್ಟರೆ ತಪ್ಪುವುದೆ
ಕೆಟ್ಟವರು ಉಂಟೆ ನಿಮ್ಮ ಕೂಡಿ ಲಿಂಗಯ್ಯ ೫

ಘಟ್ಟಿಯಿ (ಘಟ್ಯಾಗಿ) ಪಟ್ಟಕಟ್ಟಿದ ಮೇಲೆ
ಬಿಟ್ಟು ಹೋಗುವರೇನೊ ಚಲ್ವಲಿಂಗಯ್ಯ ೬

ಜಲಧಿ ಮೀರುಕ್ಕಿದರೆ ಮೊಲೆ ಹಾಲು ನಂಜಾದರೆ
ಸತಿಯೊಡಲ ಅಗ್ನಿ ಸುಟ್ಟರೆ ಲಿಂಗಯ್ಯ ೭

ಸೇರಿದೆನ್ನಯ ಹಸ್ತ ಸೂರೆಗೊಂಡಿರ್ದ ಮೇಲೆ
ಬೇರೆಂಬುದೆನ್ನೊಳುಂಟೆ ನೋಡು ಲಿಂಗಯ್ಯ ೮

ಸಾರಿದೆನ್ನೈ ನೆಲೆಯ ಚನ್ನವೀರಾರ್ಯ ಎನ್ನ ನೀಂ
ಕಾರುಣ್ಯ ನಿಧಿಯೆ ಕಾಯೋ ಚಲ್ವಲಿಂಗಯ್ಯ ೯

ಟಿಪ್ಪಣಿ : ಇದರಲ್ಲಿ ಮೈಲಾರದ ಬಸವಲಿಂಗಪ್ಪನವರ ಅಂಕಿತವಾದ 'ಚನ್ನವೀರ' ಎಂಬ ಪದವಿದೆ –ಪ್ರ. (–ಸಂ. ೫೨)

## ೫. ಶಾಂಭವೀ ವಿವರ

(ನಾಗಲಿಂಗಸ್ವಾಮಿ ವಿರಚಿತ)

---

ಪಲ್ಲವಿ

ಕಂಡು ಸುಖಿಯಾದೆ ನಾ ಕರಕಂಜದೊಳಗೆಶಿವ
ಮಂಡಲತ್ರಯದಲ್ಲಿ ಮಿನುಗುತಿಹ ಮಹಲಂ (?)
ಚಂಡಕರ ಕೋಟಿಪ್ರಭೆಯೆನೆ ಮೀರಿ ರಾಜಿಸುವ ಶ್ರೀಗುರುವಿನಾಕಾರದ

ಕನಕಮಯ ರತ್ನದಿಂದಲ್ಲಿ ಶೋಭಿಸುವಂಥ
ದಿನಕರನ ಉದಯ ಪಟ್ಟದ ಚೌಕ ಮಧ್ಯದಲಿ
ಮಿನುಗುತಿಹ ಸೆಜ್ಜೆಯರಮನೆಯ ಮುಂಗಡೆಯಲ್ಲಿ ವಜ್ರ
ಗದ್ದುಗೆಯ ಮೇಲೆ
ಸನುಮತದಿ ಸಾಂಬ ಶಿವನಂ ನೆನೆದು ನೆಲೆಗೊಳಿಸಿ
ಮನದ ಸಂಚಲ ಬಿಡಿಸಿ ಮಾರುತನ ಪಥಗೆಡಿಸಿ
ಬಿನುಗು ಮಾಯೆಯ ಗೆಲಿದು ಮೂಲಾಗ್ರದಲಿ ನಿಲ್ಲೆ
ಚಿತ್‌ಪ್ರಕಾಶವ ಮುಟ್ಟಿತು ೧

ಕುಂಭಿನಿಯ ಚತ್ರಂಗಳಲ್ಲಿ ತೋರುವ ನಿಜದ
ಡಿಂಬಿನೊಳು ದೀಪಿಸುವ ಪಿಂಡಾಂಡ ಬ್ರಹ್ಮಾಂಡ
ತುಂಬಿರುವ ದೇಗುಲದಿ ಏಕಯುತ ಸಹಸ್ರಕ್ಕೆ ಲೆಕ್ಕವಿಲ್ಲದ ಬಾಗಿಲು
ಮುಂಬಾಗಿಲಿಂ ಪೂರ್ವದೊಳು ಹೊಳೆವ ಗೋಪುರದ
ಸ್ತಂಭಿಕಾ ಮಧ್ಯದಲಿ ಸೂಕ್ಷ್ಮಗೋಪ್ಯದ ಕೋಣೆ
ಯೆಂಬುದರ ನಡುವೆ ಮಂಡಿಸಿ ಇರುವ ಪರಮಗುರುವಾರ್ಯನಂ
ಕಂಡೆರಗುವೆ ೨

ತನುತ್ರಯಂಗಳ ಮಧ್ಯದೊಳ ಹೊರಗೆ ಶೋಭಿಸುವ
ಘನತರದ ಪರಮಾಮೃತ ಕೋಣೆಯೊಳುರಿವುತಿಹು
ದನುನಯದಿ ನೋಡಲದು ಅಜರಂಧ್ರ ಚಿನುಮಯದ ಕಳೆ ಬೀರುತ್ತ
ಮಿನುಗುವರೆ ನಯನದೊಳ್ ಶತಕೋಟಿ ಸೂರ್ಯಪ್ರಭೆ
ಕನಕದೊಳು ಭೋರ್ಗರೆವ ಪ್ರಣವ ಸೂತ್ರವ ಪಿಡಿಯೆ
ಸನುಮತಿಯು ಶಾಂಭವಿಯ ಇರವು ತೋರುವುದು
ಈ ಕರದಿಷ್ಟಲಿಂಗದಲ್ಲಿ ೩

ಒಂದು ಕಂಬದೊಳು ಒಂಬತ್ತುನೆಲೆಯಪ್ಪರಿಗೆ
ಬಂಧಿಸಿದುವದಕೆ ಸ್ವರ್ಣಕಲಶಗಳೆಸೆವ ಶತ
ಕುಂದಣದಿ ಕೆತ್ತಿದುವು ಮಕರತೋರಣಗಳಿಂ ರಂಜಿಸುವುದಷ್ಟಶತದಿ
ಚಂದದಿಂ ನೋಡಲಿದಕೊಳಗೆಲ್ಲ ತೋರುತಿಹ
ಒಂದುಸಲೆ ಸಾಹಸ್ರದೈವತ್ತೆರಡು ಲಿಪಿಯು
ಸಂದಿಲ್ಲದೇಕಪ್ರಭೆ ತುಂಬಿಕೊಂಡಾ ಸ್ವಯಂ ಜ್ಯೋತಿ ತಾರಕಬ್ರಹ್ಮವು ೪

ಮೂರು ಮಂಡಲದಲ್ಲಿ ಆರು ಚಕ್ರಂಗಳಿರೆ
ತೋರುತಿಹ ಉನ್ಮನಿಯ ವರ್ಣಗಳ ಹೇಳುವೆ(ನು)
ಕಾರುಮಿಂಚಿನ ಪ್ರಭೆಯನೊಳಕೊಂಡು ಸೇರಿರುವ
ಚಿತ್ರಕೃಷ್ಣದ ತಾರದ
ತಾರಕವ ನೋಡಲನು ಷಡುವರ್ಣದಿಂದೆಸೆಯೆ
ಭೋರನದರೊಳು ನಿಲ್ಲೆ ಭುವನತ್ರಯಂಗಳನು
ಮೀರಿ ತೋರಿದ ಗುರುವಿನ ಪ್ರಸಾದ ಹ್ರೋಂಕಾರ
ತಿಳುಪಿದಾರ್ಯನಿಗೆ ಶರಣು ೫

ಶಿವನ ಸದ್ಭಕ್ತರುಗಳಾಚಾರದನುವಿಡಿದು
ತವೆ ವಿಚಾರದಲಿ ಮಹಜ್ಞಾನಿಗಳ ಸಂಗದಿಂ
ದವಿರತಂ ಹೃದಯ ಕಲ್ಮಷ ಕಳೆದು ನಿರ್ಮಲ
ಸ್ವಯಂ ಚಿತ್ತರಾಗಿರಲ್ಕೆ
ಭವದ ಬಳ್ಳಿಯು ಸುಟ್ಟ ಶ್ರೀಗುರುವಿನಡಿಗೆರಗಿ
ಕವಿದ ಮಾಯೆಯು ಗೆಲಿದು ನಿಜಪ್ರಕಾಶದಿ ಬೆರೆದು
ನವನೀತದಂದದಲಿ ಶಿವನಹುದು ಏನರಿದೆಂದು (?)
ಆದ್ಯರ ವಚನವುಂಟು ೬

ಇಂತಪ್ಪ ಕೋಣೆಯೊಳಗಿಪ್ಪ ಗುರುಲಿಂಗವನು
ಕಂತುಹರ ಶರಣ ಬಲ್ಲನಲ್ಲದೆ ಮೂರರಾ
ಸಂತೋಷದೊಳು ಮುಳುಗಿ ಆರರೊಳಗಿರುತಿಹ
ಭ್ರಾಂತರಿಗೆ ತಿಳಿಯಲರಿದು
ಎಂತು ಬಲ್ಲರು ನಿಮ್ಮ ಹರಿಯಜಾಸುರರೆಲ್ಲ
ನಂತ ಭವಬಂಧನದ ಪಾಶದಲಿ ತಿರುಗಿದರು
ಚಿಂತೆ ದೂರನು ಚೆನ್ನ ಶ್ರೀ ಗುರುಶಾಂತನೇಕಾಂತ ರಕ್ಷಿಪುದೆನ್ನನು ೭

ಟಿಪ್ಪಣಿ: 'ಗುರುಶಾಂತಾಂಕಿತ' ಕಂದ ಪದ್ಯಗಳು ಶ್ರೀ ನಾಗಲಿಂಗಸ್ವಾಮಿ ವಿರಚಿತವೆಂದು ಲೇಖನ ದೊರಕಿದೆ. ಆದುದರಿಂದ ಈ ಪದ್ಯಗಳೂ ನಾಗಲಿಂಗಸ್ವಾಮಿಯವೆಂದು ಯೋಜಿಸಲಾಗಿದೆ. (–ಸಂ. ೬೦-೬೧)

## ೬. ಅಷ್ಟಾವಧಾನ

(ಪೂರ್ವಿಕ ಮಹನೀಯರ ಬರೆಹದ ಪ್ರತಿಯಿಂದ)

---

ಪಲ್ಲವಿ

ಅಷ್ಟಾವಧಾನ ತಾನೆಂತೆನಲು ಪೇಳ್ವೆನವ
ಅಷ್ಟತನುವಿನ ಹಂಗನಳಿದುಳಿದು ಒಳಹೊರಗೆ
ಅಷ್ಟಾವರಣಭಕ್ತಿ ಪೂರ್ಣವಾಗಳವಡಲು ಅಷ್ಟಾವಧಾನಿ ಶರಣ

### ೧. ಸಿಂಹಾವಧಾನ

ಸಿಂಗ ತಾನೊಂದು ಕಡೆ ಮುಖವಾಗಿ ನೋಡುತಲಿ
ಲಂಘಿಪುರು ಮತ್ತೊಂದು ಕಡೆಗೆ ಎಂಬಂದದಿಂ
ಲಿಂಗಭಕ್ತನು ಸಕಲ ಸಂಸಾರದಲ್ಲಿ ಕೂಡಿರ್ದು ಬಹಿರಂಗದಲ್ಲಿ
ಹಿಂಗದೆಯೆ ತನ್ನಾದಿ ಶಿವತತ್ತ್ವದಲಿ ಮನವ
ಸಂಗಿಸಿಯೆ ಸಮರಸದಿ ಭೇದಭಾವವನಳಿದ
ಮಂಗಳೋನ್ನತ ಭಕ್ತಗೊಂದನೆಯ ಅವಧಾನವೆಂದು
ಪೊಗಳ್ವರು ಶರಣರು

### ೨. ಗಜಾವಧಾನ

ಮದಸೊಕ್ಕಿದಾನೆ ಎಡಬಲ ಹಿಂದು ಮುಂದೆಂಬ
ಸಂದು ಸಂಶಯವಳಿದು ಸ್ವಾತ್ಮ ಹರುಷದಿ ಚರಿಸು
ವಂದದಿಂ ಹಿಂದಾದ ಪ್ರಾಪಂಚು ಮುಂದೆಂಬ ಕಾಲಭೀತಿಗಳ ಮರೆದು
ನಿಂದೆ ಸುತಿ ಸುಖ ದುಃಖವಿಹಪರಗಳೆಂಬುಭಯ
ದ್ವಂದ್ವ ಕರ್ಮವನಳಿದು ಶಿವಭಕ್ತಿಯಾನಂದ
ದಿಂದ ಚರಿಸುವ ಭಕ್ತಗೆರಡನೆಯ ಅವಧಾನವೆಂದು
ಪೊಗಳ್ವರು ನಲ್ಮೆಯಿಂ

### ೩

ಮರದ ಕೊಂಬಿನ ಶಾಖೆಯುಗ್ರಹದಲಿ ಪಣ್ಣಿರಲು
ಎರಗುವುದು ದಾನರನು ಸಂಚು ತಪ್ಪದ ತೆರದಿ
ಪರಿವಿಡಿದು ಷಟ್‌ಸ್ಥಲದ ಮಾರ್ಗದೊಳುನೆರೆಗಮಿಸಿ
ಮೋಕ್ಷಫಲವಂ ಗ್ರಹಿಸುವ

ನಿರಿಗೆ ನೆಲೆಗೊಂಡಿರಲು ಪರಮ ಮಾಹೇಶ್ವರಗೆ
ಮೂರನೆಯ ಅವಧಾನ ದೊರಕಿತೀತಂಗೆನುತ
ಶರಣಗಣವತಿ ಪುಳಕವೆರಸಿ ಪರಮಾನಂದ ಹರುಷಭಾವದಿ ಪೊಗಳ್ವರು

### ೪. ಮಯೂರಾವಧಾನ

ಮುಂದಳೆಚ್ಚರದೊಡನೆ ನಿದ್ರೆಗೆಯ್ಯುತ ನವಿಲು
ಒಂದು ಸಂಚಾರವಾಗಲು ಕೂಗುವಂದದಿಂ
ಸಂದು ಜಾಗ್ರದವಸ್ಥೆ ಮುಂದೆ ಸ್ವಪ್ನಾವಸ್ಥೆಯಲ್ಲಿ ಮೈಮರೆಯದಂತೆ
ಬಂದು ದುಃಸ್ವಪ್ನಗಳು ತನುವ ತಟ್ಟದ ಹಾಂಗೆ
ಸಂದು ಮಹಲಿಂಗದೆಚ್ಚರದೊಡನೆ ಕರಿಗೊಂಡು
ಒಂದೊಂದು ಮಂತ್ರವಂ ಸ್ಮರಿಸುತಿಹ ಪರಮ ಪ್ರಸಾದಿಗವಧಾನ ನಾಲ್ಕು

### ೫. ಬಕಾವಧಾನ

ಜಲಚರಾದಿಯ ಬಕನು ಚಲನೆಯಿಲ್ಲದ ಪಿಡಿದು
ನಲುಮೆಯಿಂ ಚಿತ್ತವನು ಲಯಿಸಿರ್ಪ ತೆರನಂತೆ
ಸುಲಲಿತಾನಂದ ತನ್ನಿಷ್ಟಲಿಂಗ ಧ್ಯಾನವನ್ಯ ಚಿಂತನಗಳಿಂದ
ತೊಲಗದೊಳ್ ಧ್ಯಾನವೇ ಸ್ಥಿರಗೊಂಡು ಹೃದಯದಲಿ
ನೆಲೆಗೊಳಿಸಿ ಲಿಂಗವನು ಮಂತ್ರವನೆ ದೃಢವಿಡಿದು
ಗೆಲುವಿ ನಾ ಪ್ರಾಣಲಿಂಗಿಗೈದನೆಯವಧಾನ ದೊರಕಿತಹುದಹುದೆಂಬರು

### ೬. ವರಾಹಾವಧಾನ

ಒಂದು ಕಡೆಗಂ ಪೋಪೆನೆಂದು ದಂಷ್ಟ್ರನು ತಾನು
ನಿಂದು ಜಂಘೆಯ ತೂಗಿ ಲಘುವಾಗಿ ಗಮಿಸುವುದು
ಮುಂದವಾಗಲು ಗಮಿಸದೆಂಬ ದೃಷ್ಟಾಂತಮಂ ತಿಳಿದು ವ್ರತನೇ ಮಂಗಳ
ಒಂದೊಂದನಾರೈದು ನೋಡಿ ಅಹುದಾಗದೆಂ
ಬುದ ತಿಳಿದು ತನಗೆ ಸಲು ವಾಚಾರವಂ ಪಿಡಿದು
ಚಂದದಿಂದಾಚರಿಸುತಿಹ ಶರಣ ಸಂಕುಳಕೆ ಸಂದುದವಧಾನವಾರು

### ೭. ಸರ್ಪಾವಧಾನ

ಸರ್ಪಂಗಳೆರಡು ಕೂಡುವ ವಿಷಯ ಮರ್ಮವನು
ಬೇರ್ಪಡಿಸಿ ಕಾಣಬಾರದು ಎಂಬ ತೆರನಂತೆ
ಕೂರ್ಪ ಶರಣಂ ತನ್ನ ಧ್ಯಾನವನ್ಯರಿಗೆ ಕಾಣ(ದಂತಾವ ಕಾಲದೊಳಗಂ?)

ಅಪ್ಪಿ ಷಡ್ವಿಧಲಿಂಗವನು ಷಡ್ವಿಧಾಂಗದಲಿ
ಒಪ್ಪವಿಸಿ ಛತ್ತೀಸ ಇನ್ನೂರು ಹದಿನಾರು
ಅಪ್ಪಿಯಗಲದ ಶರಣಗೇಳನೆಯ ಅವಧಾನ ವೊಪ್ಪಿತಾತಂಗೆಂಬರು

## ೮. ರಾಜಾವಧಾನ

ಧರೆಯೊಳಗೆ ಧರ್ಮಿಷ್ಠರಾಜ ಗದ್ದುಗೆಯಲ್ಲಿ
ಇರವನರಿದಾಸಸಂಗೆಯ್ವುದೊಂದವಧಾನ
ಪರಿವಿಡಿದು ಪಾಳ್ಯರಾಹಸ್ಯಾರ್ಥ ಕೇಳಿಕೆಯು (ಮತಿ ಚಿತ್ರದಾಟ ನೋಟಂ)
ಅರಿದು ದೇಶವ ಕೋಶಗಳನು ರಕ್ಷಿಸುತಿರ್ಪ
ಪರದೊರೆಗಳಿಂದ ಬಂದವರ ಮನ್ನಿಸುತಿಹನು
ಬರೆ ಮುಂದು ಮುಂದಕ್ಕೆ ಪ್ರಜೆಗಳಂ ಪಾಲಿಸುವನರಿನೃಪದಳವ ಹರಿಸುವಂ

## ೯. ಭಕ್ತನಲ್ಲಿ ರಾಜಾವಧಾನ

ಅಷ್ಟಾವಧಾನ ತನಗುಳ್ಳ ರಾಜನ ತೆರದಿ
ಇಷ್ಟಲಿಂಗದ ಪೂಜೆ ಗುರುಭಕ್ತಿ ಜಂಗಮಕೆ
ಕೊಟ್ಟು ದ್ರವ್ಯಾದಿಗಳ ವೀಭೂತಿ ರುದ್ರಾಕ್ಷಿ ತೀರ್ಥ ಪ್ರಸಾದಂಗಳ
ನಿಷ್ಠೆಯಿಂದಂ ಧರಿಸಿ ಮಂತ್ರಮಂ ಜಪಿಸುತ್ತ
ಅಷ್ಟತನು ವರ್ತನೆಯನಳಿದುಳಿದ ಭಕ್ತಂಗೆ
ಅಷ್ಟಾಂಗ ಪೂರ್ವಕದಿ ನಮಿಸುತಿಹ ಭಕ್ತಿಯನೆ ಕೊಡು ನಮಗೆ ಬಸವಲಿಂಗ

(-ಸಂ. ೬೨, ೬೩)

## ೭. ಪಂಚಾಕ್ಷರೀ ಸ್ತೋತ್ರ

(ಪ್ರಾಚೀನ ಮಹನೀಯರ ಬರೆಹದ ಪ್ರತಿಯಿಂದ)

---

ಪಲ್ಲವಿ

ಸುರಿದು ಕರುಣಾಮೃತವ
ಪೊರೆವುದೈ ಭಕ್ತರನು
ಪುರದ ಮಲ್ಲನ ನಾಮ ಪಂಚಾಕ್ಷರಿ

ತಾಯಿ ಶ್ರುತಿಗಳ ಮೊತ್ತ
ದಾಯು ಭಕ್ತಾಂಗನೆಯು
ಶ್ರೀಯುಖಿಳ ಭುವನ ಭವನವ ಸಲಹುವ
ಈಯಲಿಕೆ ಬೇಡಿದುದ
ಕಾಯಲಿಕೆ ತನ್ನುವನು
ತಾಯಿಂದಲನು ತಂದೆ ಪಂಚಾಕ್ಷರಿ ೧

ಕರಗಿ ಮನ ಕಂಗಳೊಳು
ಸುರಿಯೆ ಸುಖ ವರುಷವಂ
ಕುರಿಸಿ ಪುಳಕಂಗಳಿಗೆ ಕಾರಣವಿದು
ಹರುಷದಿಂ ನೆನೆವರಿಗೆ
ಪರಮ ತೇಜೋನಿಧಿಯ
ಕರೆದು ತೋರುವುದು ಶ್ರೀ ಪಂಚಾಕ್ಷರಿ ೨

ಓದು ವಾದಗಳಲ್ಲಿ
ಕಾದ್ಧ ರಿಪು ದುರ್ಗದಲಿ
ಸಾಧಿಸುವ ತಪಸಿದ್ಧಿ ವಿದ್ಯೆಗಳಲಿ
ವೇದವಲಿ ಹಿರಿದು ಹೆಸ
ರಾದ ಹೆಪ್ಪಳ್ಳ ಶಿವ
ನಾದಿ ನಾಮವು ನೋಡು ಪಂಚಾಕ್ಷರಿ ೩

ದಣಿವರಿದು ದುಃಖ ಸಂ
ದಣಿಸಿ ಕರಣಂಗಳುರ
ವಣಿಸಿ ನೆನೆವರಿಗೆ ಸುರ ಧೇನುವಾಗಿ
ಮಣಿ ಮಕುಟರಾಸಿಗಳ
ಅಣಿಮಾದಿ ಗುಣಗಳನು
ಅಣಿಗೊಳಿಸಿ ತೋರುವುದು ಪಂಚಾಕ್ಷರಿ ೪

ಅರಿಮಿತ್ರ ತಪಪುರ
ಶ್ಚರಣೆ ಸಿದ್ಧಾಸಿದ್ಧ
ಕರದ ಪಂಗೇತಕವರಿವರೆನ್ನದೆ
ಸ್ಮರಣೆ ಮಾತ್ರದಲೆಯು
ಚ್ಚರಣೆ ಮಾತ್ರದಲಿ ಶಂ
ಕರನ ತೋರುವುದು ಶ್ರೀ ಪಂಚಾಕ್ಷರಿ ೫

ಪ್ರಣವರಾಜನ ಹೊಳೆವ
ಮಣಿ ಮಕುಟದಲ್ಲಿ ಕೇ
ವಣ ರತುನದಾ ತೊಡಿಗೆಯಾಭರಣ
ತ್ರಿಣಯ ನೊಲಿದಿಪ್ಪಗುಣ
ಮಣಿಯ ಚಿಂತಾಮಣಿಯು
ಕಣಿಯು ಕರಡಿಗೆ ನೋಡು ಪಂಚಾಕ್ಷರಿ ೬

ದಯೆಯ ನಿಧಿ ಪುಣ್ಯ ಸಂ
ಜಯದ ಸಿರಿ ಶ್ರುತಿಯು ನಿ
ಶ್ಚಯದ ನಿಜ ಧರ್ಮಂಗಳಾಪ್ತ ಜನದ
ಪ್ರಿಯನಾಮ ಭಕ್ತರಿ
ಚ್ಛೆಯ ನಾಮವಿದು ನೀತಿ
ನಯನದಾ ನಾಮ ನೋಡು ಪಂಚಾಕ್ಷರಿ ೭

ಶರಣರಿಟ್ಟಡಿಗಳನು
ಶರಣರಾಪತ್ತುದದು
ಶರಣರಿಗೆ ಮುನಿವ ಕಡು ಪಾತಕರನು
ಒರಸುವುದು ಕಡಿದುಕ
ತ್ತರಿಸುವುದು ಉಃಪೆಂದು
ಉರುಹುವುದು ನೋಡು ಶ್ರೀ ಪಂಚಾಕ್ಷರಿ ೮

ಏಳು ಕೋಟಿಯ ಮಂತ್ರ
ಗಳ ಪಡೆದ ಮಹತಾಯಿ
ತ್ರೈಲೋಕ್ಯಪತಿಯು ಮಹಮಂತ್ರರಾಜ
ಕಾಲಹರ ಕರ್ಮಹರ
ಮೇಲೆಯಗ್ಗದ ಸಿರಿಯು
ಲೋಲ ಶಿವನಾ ನಿಜದ ಪಂಚಾಕ್ಷರಿ ೯

ಹರಿಹರಿದು ಮೆಲ್ಲಡಿಯ
ಸರಿಸಿಜೋದ್ಭವ ಮುಡಿಯ
ಭರದಿಂದಲರಸಿದ ಡುಂ(ಡೆಯುಂ?) ಕಾಣರು
ಹರನ ತಾನಿರ್ದೆಡೆಗೆ
ಬರಿಸಿ ತೋರುವ ಜಗದ್
ಗುರುವೆನ್ನ ಪೊರೆವ ಶ್ರೀ ಪಂಚಾಕ್ಷರಿ ೧೦

ಗುರುದೈವ ತಂದೆ ತಾಯ್
ಪೊರೆವ ಸಖ ತೇಜ ಬಲ
ಹರನ ಸಿರಿ ಸೌಭಾಗ್ಯದಾನಂದದ
ಪರಿಪರಿಯ ತನುಮನದಿ
ನೆರೆವವರ ಸಲಹುವುದು
ಗುರುಪುರ (+ದ?) ಮಲ್ಲ ನಾಮ(ಶ್ರೀ?) ಪಂಚಾಕ್ಷರಿ ೧೧

(–ಸಂ. ೬೨, ೬೩)

[ಈ ಪದ್ಯಗಳನ್ನು ಬರೆದವನು ಪುರದ (ವೇದಾವತಿ ತೀರದಲ್ಲಿರುವ ಯುಗಟಿ ಪುರದ) ಮಲ್ಲಿಕಾರ್ಜುನನ ಭಕ್ತನೆಂದು ತೋರುತ್ತದೆ. –ಸಂ.]

# ೮. ಶಿವ ಪ್ರಾರ್ಥನೆ – ಶಾರದ

(ಪೂರ್ವಿಕ ಮಹನೀಯರ ಬರೆಹದ ಪ್ರತಿಯಿಂದ)

---

(ಪ್ರಕಾಶಕರ ಟಿಪ್ಪಣಿ : 'ಕನ್ನಡ ಕೈಪಿಡಿ' ಎಂಬ ಪುಸ್ತಕದಲ್ಲಿ ಸುಲಿಯ ಚಂದಯ್ಯನ ಶಾರದ ಎಂದು ಹೆಸರು ಇದೆಯೇ ಹೊರತು ಅದರ ಲಕ್ಷಣವು ವಿವರಿಸಲ್ಪಟ್ಟಿಲ್ಲ...... ಮೊದಲನೆಯ ಪಾದದಲ್ಲಿ ೧೦ + ೧೦ ಹೀಗೆ ಎರಡು ಭಾಗ ಕೂಡಿರುವ ೨೦ ಮಾತ್ರೆಗಳು ೨, ೩, ೪ ನೆಯ ಪಾದಗಳಲ್ಲಿ ೧೩ ಮಾತ್ರೆಗಳು ೫ ನೆಯ ಪಾದದಲ್ಲಿ ೧ ನೆಯ ಪಾದದಂತೆ ೧೦ + ೧೦ = ೨೦ ಮಾತ್ರೆಗಳು ೬ ನೆಯ ಪಾದದಲ್ಲಿ ೧೩ ಮಾತ್ರೆಗಳು. ಹೀಗೆ ಸಾಮಾನ್ಯವಾದ ನಿಯಮವು. ೨ ಮತ್ತು ೩ ನೆಯ ಪಾದಗಳ ಕಡೆಯಲ್ಲಿ ಮುಂದಿನ ಪಾದಗಳನ್ನು ಹೇಳುವ ಸಲುವಾಗಿ ೩–೪ ಮಾತ್ರೆಗಳ ಒಂದು ಪದವು ಸಹಾಯಕವಾಗಿ ಇರುತ್ತದೆ. ಸಾಮಾನ್ಯವಾಗಿ ೨, ೩, ೪, ೬ನೆಯ ಪಾದಗಳ ಅಂತ್ಯದಲ್ಲಿ ಒಂದೇ ನಮೂನೆಯ ಅಕ್ಷರಗಳಿರುತ್ತವೆ. ೧ ನೆಯ ಪಾದವು ೨ ನೆಯ ಪಾದದ ಅಂಗವಾಗಿಯೂ ೫ ನೆಯ ಪಾದವು ೬ ನೆಯ ಪಾದದ ಅಂಗವಾಗಿಯೂ ಒಟ್ಟಿಗೆ ಹೇಳಬಹುದಾದವುಗಳಾಗಿವೆ.

ಇದನ್ನು ಹೇಳತಕ್ಕ ದಾಟಿಯು ಹೀಗೆ : ಮೊದಲನೆಯ ಪಾದದ ೧೦ ಮಾತ್ರೆ (ಅರ್ಧ ಪಾದ) ಹೇಳಿದ ಒಡನೆಯೇ ಒಂದು ಮಾತ್ರೆಯನ್ನು ಉಚ್ಚರಿಸುವಷ್ಟು ಕಾಲ ವಿರಾಮವನ್ನು ತೆಗೆದುಕೊಳ್ಳಬೇಕು... ಮುಂದೆ ಹತ್ತು ಮಾತ್ರೆ ಹೇಳಿ ಪಾದವನ್ನು ಪೂರೈಸುವಾಗ ೧ ಮಾತ್ರೆಯಷ್ಟುಕಾಲ ವಿರಾಮ. ೨ನೆಯ ಪಾದದ ೧೩ ಮಾತ್ರೆಗಳನ್ನು ಹೇಳಿದ ಮೇಲೆ ೩ ಮಾತ್ರೆ ಕಾಲ ದೀರ್ಘರಾಗವ ಮಾಡಬೇಕು. ಆಮೇಲೆ ೩–೪ ಮಾತ್ರೆಗಳುಳ್ಳ ಸಹಾಯಕ ಪದವನ್ನು ಹೇಳಿ ಮತ್ತೆ ೩ ಮಾತ್ರೆಗಳ ಕಾಲ ದೀರ್ಘರಾಗವ ಮಾಡಬೇಕು. ೩ ನೆಯ ಪಾದವನ್ನು ೨ ನೆಯ ಪಾದದಂತೆಯೇ ಹೇಳಬೇಕು. ೪ ನೆಯ ಪಾದವನ್ನು ಹೇಳುವಾಗ ಕೊನೆಯ ೨ ಮಾತ್ರೆಯ ಕಾಲದ ರಾಗವು ಬೇಕು. ೫–೬ ನೆಯ ಪಾದಗಳನ್ನು ಎಲ್ಲಿಯೂ ನಿಲ್ಲದಂತೆ ಕೂಡಿಸಿ ಉದ್ದಕ್ಕೆ ಹೇಳಿ ಬಿಡುವುದು. ಕಟ್ಟಕಡೆಯಲ್ಲಿ ೧ ಮಾತ್ರೆಯ ಕಾಲದ ರಾಗವಿರಬಹುದು)

ಶ್ರೀಗುರು ಚಿದಾನಂದ ಯೋಗಿಮನದಾನಂದ
ನಾಗಾಸುರಾಜಿರ ವಿಚೇಲಾ– ದಿವ್ಯ–
ಭೋಗಿ ಕುಂಡಲ ಕಟಕಮಾಲಾ – ಕೃಪಾ –
ಸಾಗರಾ ಪ್ರತಿಮ ಗುಣ ಜಾಲಾ
ರಾಗದಿಂ ಪೊರೆಯೋ ಭವರೋಗ ವೈದ್ಯನೆಯೆನ್ನ
ಭೋಗಲಿಂಗೇಶ ಸ್ವಲೀಲಾ– ತ್ವಂ ಶಾರದ ೧

ಏಕೆ ಎನ್ನೊಳಗಿಂಥ ವ್ಯಾಕುಲವನೊಡ್ಡಿ ನೀ
ಬೇಕೆಂದು ಮುನಿದು ಕಾಡುವರೆ – ಜಗಕೆ –
ನೀ ಕಳುಹಿ ಹೀಂಗೆ ಮಾಡುವರೆ – ಏನ್ನ –
ನೀ ಕರಿಸಿ ಕಡೆಗೀಡಾಡುವರೆ
ಲೋಕದೊಳಗಪಕೀರ್ತಿ ಏಕೋ ದೇವನೆ ನಿಮ್ಮ
ಕೋಕನಿಗೆ ನೋಯಿಸಿ ನೋಡುವರೆ – ತ್ವಂ ಶಾರದ ೨

ಧರಣಿಯೊಳಗವತರಿಸಿ ತೆರಹಿಲ್ಲದವಸರದ
ಹೊರೆಯಿಂದೆ ಬಹುನೊಂದೆ ಭವಕೆ – ಬಿಡಲು –
ಕೊರತೆ ನಾನಹೆನು ಇಹಪರಕೆ – ಅಂಜಿ –
ಶಿರಬಾಗಿ ನುಡಿದೆ ನೀ ಜಗಕೆ
ಇರುಳು ಹಗಲತಿರೋಗ ದುರಿಯಿಂದೆ ಮೊರೆಯಿಡುವೆ
ಅರಿಕೆ ಇಲ್ಲವೆ ನಿಮ್ಮ ಮನಕೆ ತ್ವಂ ಶಾರದ ೩

ಪ್ರಾರಬ್ಧ ಕರ್ಮಗಳು ಆರಿಗೆಯು ಬಿಡವೆಂದು
ಸಾರುವುದು ಶ್ರುತಿ ಜಗಕೆ ಇತ್ತ– ವ್ಯೋಮ–
ನಾರಾಧ್ಯ ರಾಜಗಸುವಿತ್ತ– ಸುತಗೆ–
ಧೀರವಾದರಸನಸುವಿತ್ತ
ಮಾರಾರಿ ಎನ್ನೊಳತಿ ಘೋರಿಸುವ ವ್ಯಜಿನವ ವಿ
ದಾರಿಸಲಿಕಾಗದೇ ಅತ್ತ ತ್ವಂ ಶಾರದ ೪

ಹಿಂದೆ ಮಾಡಿದ ಪಾಪವಿಂದು ವ್ಯಾಧಿಯು ರೂಪ
ದಿಂದೆ ಕಾಡಲು ನೊಂದೆನಯ್ಯಾ– ಕಷ್ಟ–
ಬಂಧನದೊಳಾಂ ಬೆಂದೆನಯ್ಯಾ– ಕಾಯು–
ಕಂದಿ ಕರಗುತ ನಿಂದೆನಯ್ಯಾ
ತಂದೆ ನೀ ಕಳುಪಲೈತಂದೆಯೆನ್ನನು ಕರುಣ
ದಿಂದೆ ಕೈವಿಡಿದು ಕಾಯೆನ್ನ ತ್ವಂ ಶಾರದ ೫

ಸೊಕ್ಕು ಜವ್ವನದಿ ಮದವುಕ್ಕಿ ಸತಿಯರ ಬಲೆಗೆ
ಸಿಕ್ಕಿ ಸೊಗಸಿನ ಸುಖಕೆ ತಿರುಗಿ– ಅವರ–
ತೆಕ್ಕೆ ರತಿ ಕೂಟದೊಳು ಕೊರಗಿ– ಚಲ್ವ–
ಸಕ್ಕ್ರೆವಿಲ್ಲನ ಶರಕೆ ಸೊರಗಿ
ಲೆಕ್ಕವಿಲ್ಲದ ದ್ರೋಹ ಕಿಕ್ಕೆಯಾದನು ದೇವ
ರಕ್ಕಿಸೈ ನಿಮ್ಮ ಮನ ಕರಗಿ ತ್ವಂ ಶಾರದ ೬

ವಾರಿಧಿಯ ಮಥನದೊಳು ಮೀರಿಬರುತಿಹ ವಿಷವ
ಆರಿಸುತ ನುಂಗಲಿಕೆ ಬಂತೇ– ಕನಲಿ–
ಮೂರು ಪುರಗಳ ಮುರಿಯ ಬಂತೇ– ವಿಧಿಯು–
ಸಾರ ಸಿರಿವರಿಯಲಿಕೆ ಬಂತೇ
ಮೇರು ಚಾಪನೆ ಎನ್ನ ಕ್ರೂರ ಕರ್ಮಂಗಳ ಸಂಗ
ಹಾರಿಸಲಿಕಾಗದೇ ಮುಂಚೆ ತ್ವಂ ಶಾರದ ೭

ಭಾಳಾಕ್ಷ ನಿಮ್ಮ ಭಕ್ತಾಳಿಯೊಳಗೋರ್ವ ಸ
ತ್ತೇಳು ವರುಷಕ್ಕೆ ಪಾಣ ಕೊಡನೇ– ಶರಧಿ–
ಜ್ವಾಲೆಯನು ತಿಲಕವಾಗಿಡನೇ– ರೋಗ–
ಜಾಲಗಳ ಸೆರೆಯ ಹಾಕಿದನೆ
ಆಳಿನಪಮಾನ ಹಿಡಿದಾಳುವರಿಗಲ್ಲದೆ
ಸ್ಥೂಲವೇ ನಿಮಗೆ ಎನ್ನೊಡರು ತ್ವಂ ಶಾರದ ೮

ಸೂನೆಗಾರನ ಮನೆಗೆ ಹಾನಿ ಬಂದರೆ ಜನರು
ಏನೆಂದು ಕೇಳರಾ ಕೇಡ– ಹಾಂಗೆ
ನಾನಾದೆ ಕಷ್ಟಗಳಿಗೀಡ ಹೊಕ್ಕೆ–
ನೂನ ಸಂಸಾರದಾಕಾಡ
ನೀನಾಗಿ ಒಲಿದೆನ್ನ ಸೂನುಬಾರೆಂದು ಸು
ಜ್ಞಾನ ಬೋಧಿಸಿ ದಯದಿ ನೋಡ ತ್ವಂ ಶಾರದ ೯

ಸತ್ಯ ಶರಣರೊಳೊಲಿದು ನಿತ್ಯ ನಾಂ ಕೂಡಿರದೆ
ಮಿಥ್ಯ ಸುಖಕೆಳಸಿ ನಾಂ ಕೆಟ್ಟೆ– ಅವರ–
ಭೃತ್ಯನಾಗಿರದೆ ನಾಂ ಬಿಟ್ಟೆ– ದುಷ್ಟ–
ಕೃತ್ಯಗಳಿಗಾನು ಮನವಿಟ್ಟೆ
ಅತ್ಯಂತ ಕಾಡುವಾದಿತ್ಯನಣುಗಗೆ ಕೊಡದೆ
ಪ್ರತ್ಯಕ್ಷವಾಗು ನೀ ಗಟ್ಟಿ ತ್ವಂ ಶಾರದ ೧೦

ವಿದಳನಿಗೆ ಶ್ವೇತನಿಗೆ ಪದವನಿತ್ತುದ ಬಲ್ಗೆ
ಅದರಿಂದೆ ಮೊರೆಯಿಡುವೆ ತಂದೆ– ಎನ್ನ–
ದಧಿಕಪಾಪವೆ ಅವರಿಗಿಂದೆ– ಹೊಲ್ಲ–
ದುನಕೇನು ಗತಿ ಹೇಳು ಮುಂದೆ
ಕುದಿ ಕುದಿದು ಕ್ಲೇಶದಂಬುಧಿಯೊಳಗೆ ಮುಳುಗಿದೆನು
ಒದಗಿ ತೆಗೆ ಎನ್ನ ದಯದಿಂದೆ ತ್ವಂ ಶಾರದ ೧೧

ಕಿಚ್ಚಿಗಾಹುತಿಯಾದ ಮಚ್ಚನೇತ್ರೆಯ ಮಯ್ಯ
ನಿಶ್ಚಲದಿರಿಸಿದರಂದು– ಕಾಡ–
ಕಿಚ್ಚ ಹಿಮ ಮಾಡಿದರು ಇಂದು– ಕಮಲ–
ಕಿಚ್ಚಿನೊಳು ಬೆಳೆದರವರಂದು
ಕಿಚ್ಚುಗಣ್ಣನೆ ಒಡಲ ಕಿಚ್ಚ ಮಾಣಿಸಲಿಕ್ಕೆ
ಆಶ್ಚರ್ಯವೇನು ನಿಮಗಿಂದು ಶ್ವಂ ಶಾರದ ೧೨

ತಲೆಗೆ ತಲೆಯಿತ್ತಪರ ತಲೆ ತನು ಪಡೆವವರ
ತಲೆಯಿಂದೆ ಹಾದಿ ನಡೆದವರ– ಏಳು–
ತಲೆಗೊಟ್ಟು ಜೀವ ಪಡೆದವರ– ನಿಮಗೆ
ತಲೆಯಿತ್ತು ಕೀರ್ತಿ ಪಡೆದವರ
ಸಲೆ ಪಾದಗಕ್ಷೆಗಳ ಹೊಲಿವವರ ಮಗನೆನಿಸಿ
ಸಲಹೈಯ ಶಿವನೆ ಬಿಡೆನವರ ತ್ವಂ ಶಾರದ ೧೩

ಕ್ರೂರ ಮನವೆಂಬ ಕಾಂತಾರದೊಳು ಮದವೆಂಬ
ವಾರಣದ ಸಂಚಲವಿಹಾರ– ಅಲ್ಲಿ–
ಮೂರು ಗುಣವೆಂಬ ಮೃಗಜಾಲ– ಭೂಮಿ–
ದಾ (ಭಾ) ರ ವೇಳೆನಗೆ ಬಹುಕಾಳ
ಧೀರ ಪೂರ್ವದ ಬೇಟೆಕಾರ ನೀನಟ್ಟಿ ಸಂ
ಹಾರಿಸಿ ನೊರೆಯ ನೀ ಕೇಳ ತ್ವಂ ಶಾರದ ೧೪

ಮನವೆಂಬ ಕಪಿಯಂಗ ಮನದೊಳಗೆ ಚರಿಸುತಲಿ
ಘನ ಚೇಷ್ಟೆಗಳ ತೋರುತಿಹುದು– ಮೂರು–
ಇನಿದಾದ ಫಲಕೆ ಹಾರುವುದು– ಮೆಲಲು–
ತನುವುಬ್ಬಿ ತಾನೇ ಚೀರುವುದು
ಎನಗೆ ವಿೂರಿರ್ಪುದತ್ತ ವಚನದನ ಪಿಡಿದು ವಶ
ವನೆ ಮಾಡು ನಿಮಗೆ ಸೇರುವುದು ತ್ವಂ ಶಾರದ ೧೫

ಶ್ರೀ ಕರ್ಶೈನಿಲಯಪುರ ದೇಕ ಲೋಕೈಕ ಸು
ಶ್ಲೋಕ ಗುರು ಚನ್ನವೀರೇಂದ್ರ– ಸಕಲ–
ಲೋಕಪಾಲಕ ಸತ್ಯ ಸಾಂದ್ರ– ದಿವ್ಯ–
ನಾಕಜನ ನಮಿತ ಪ್ರಮಥೇಂದ್ರ
ಲೋಕ ಹಿತಸಾತ್ಮಘನ ಭೀಕರವ ಪರಿಹರಿಸಿ
ಸಾಕಾರವಾಗು ಧೃತ ಚಂದ್ರ ತ್ವಂ ಶಾರದ ೧೬

ಕಂದ

ಸಿರಿಗೆ ಹರಿ ಮೋಹ ಮಾಳ್ಪನು
ಸಿರಿ ಹರಿಯುಂ ಬಿಟ್ಟನ್ಯರಿಗೆಳಸುತ್ತಿಹಳೈ
ಹರಗಿಂದ ನೀನು ಅಧಿಕನೆ
ಸಿರಿ ತೊಲಗದ ಮುನ್ನ ಮಾಡು ಕೃತಿಯುಂ ೧೭

ದೇಶಾಧಿಪಗಾಹಾರಂ
ಲೇಸಿರ್ದುಂ ಸೆರೆಯುಕ್ಕಿಯು ಮಿನಿತುಂ ತುಪ್ಪಂ
ಡಾಸಿಗೆಯೊಳಿರ್ಪ ಮಿಕ್ಕದು
ಏಸಿದ್ದರು ಪರರ ಒಡವೆ ಗುರು ನಂದೀಶ

ಟಿಪ್ಪಣಿ : ಪದ್ಯ ೨, ಕೋಕ=ಕೂಸು; ಪ. ೧೪, ದಾರ=ಬಲಿ.

(ಸಂ. ೪೪, ೪೫)

[ನುಲಿಯ ಚಂದಯ್ಯನ ಶಾರದ, ದೇವನಾಯಕನ ಶಾರದ– ಇವೂ ಇದೇ ಮಟ್ಟಿನಲ್ಲಿಯೇ ಇವೆ. ಆದರೆ ಪ್ರತಿ ಪದ್ಯವನ್ನೂ ಹೇಳಿ ಕಡೆಯಲ್ಲಿ 'ತ್ವಂ ಶಾರದ' ಎನ್ನುವುದು ಮಾತ್ರ ಅಲ್ಲಿರುವುದಿಲ್ಲ. 'ಕಲಿಗಣನಾಥ ಶಾರದ' ಎಂಬ ಮತ್ತೊಂದು ಗ್ರಂಥವೂ ಇದೆ ಎಂದು ಶ್ರೀ ಚ. ಅವರು ಹೇಳಿರುತ್ತಾರೆ–ಸಂ.]

# ೯. ಗುರುಸ್ತೋತ್ರ ತ್ರಿವಿಧಿ

(ಪೂರ್ವಿಕ ಮಹನೀಯರ ಬರೆಹದ ಪ್ರತಿಯಿಂದ)

---

[ಈ ಸ್ತೋತ್ರದ ಒಂದೇ ಒಂದು ಪ್ರತಿ ಸಿಕ್ಕಿದ್ದು, ಬೆಡಗಿನ ಪದ್ಯಗಳೇ ಇರುವುದರಿಂದ ಅವು ಶಿವ ಭಕ್ತರ ಅನುಭವಕ್ಕೆ ಬರಲೆಂದು ಅಕ್ಷರಗಳು ಲೋಪವಾದೆಡೆಯಲ್ಲಿ ಚುಕ್ಕೆ ಹಾಕಿ ಪ್ರಕಟಿಸಿದ್ದೇವೆ. ಈ ತ್ರಿವಿಧಿಗಳನ್ನು ಓದುವಾಗ ೨ನೆಯ ಸಾಲು (೨) ಹಾಕಿರುವವರಗೆ ಎರಡು ಸಾರಿ ಹೇಳಬೇಕು. ಈ ನಮುನೆಯ ತ್ರಿವಿಧಿಗಳಿಗೆ 'ಮಾಸಾಳು ತ್ರಿವಿಧಿ' ಎಂದು ಕರೆಯುತ್ತಾರೆ. ಈ ನಮೂನೆ ತ್ರಿವಿಧಿಗಳು ಹಿಂದಿನ ಕಾಲದಲ್ಲಿ ಒರಳಲ್ಲಿ ಒಡಕಲು ಭತ್ತವನ್ನು ಹಾಕಿ ಕುಟ್ಟುವಾಗ ಹೇಳಲ್ಪಡುತ್ತಿದ್ದವು. –ಪ್ರ.]

## ಗುರುಸ್ತೋತ್ರ ತ್ರಿವಿಧಿ (ಮಾಸಾಳು ತ್ರಿವಿಧಿ)

ಗುರುಸ್ತೋತ್ರವೆಂದೆಂಬ । ಪರಮತ್ರಿವಿಧಿಯನೀಗ
ವಿರಚಿಸುವೆ ಬಲ್ಲ– ತೆರದಿಂದ
ವಿರಚಿಸುವೆ ಬಲ್ಲ ತೆರದಿಂದ (೨) ಶರಣರು
ಪರುಷದಿಂದೋದಿ ಮೆರೆವುದು ೧

ಆದಿಯುಹಂ ಭಾವವ । ಭೇದಿಸಿ ತಾತಂದು
ಮೇದಿನಿಯ ಮೇಲೆ– ಸ್ಥಿರಗೊಳಿಸಿ (೨) ತತ್ತ್ವದಾ
ಹಾದಿಯಾ ರಾಟಿ ಮೆರೆದಿಹುದು ೨

ರಂಭೆ ತನ್ನ ಕರದಲಿ । ಕುಂಭವನು ನೆಲೆಗೊಳಿಸಿ
ಕೊಂಬವರ ನೋಡಿ– ಕರೆಯಲು (೨) ಕೊಂಡವರು
ಕುಂಭದೊಳಗಡಗಿ ಮರುಳವರು ೩

ಶಿಶುವಿನಾ ಹೃದಯದೊಳು । ಶಶಿಯುದಯವಾಗಲ್ಕೆ
ಶಿಶುವೆದ್ದು ತಾಯನೊಡಗೂಡಿ (೨) ದೊಡೆಕಂಡು
ಅಸಮಾಕ್ಷನೊಳಗೆ ಬಯಲಾದೆ ೪

ಉಡುವಿನಾ ಭಾವವಲಿ । ಹಡೆದಿಹರು ಎಮ್ಮವರು
ಉಡುವೆದ್ದು ತಾಯ ನೊಡಗೂಡಿ (೨) ದೊಡೆ ಕಂಡು
ಕಿಡಿಗಣ್ಣ ನೊಡನೆ ಬಯಲಾದೆ ೫

ಕಾಮನಾ ಬಾಣವದು । ಕಾಮಿನಿಯ ತಗಲಲ್ಕೆ
ಪ್ರೇಮದಲಿ ಮೂರು ಶಿಶುವಾಗಿ (೨) ಇರುತಿರಲು
ಕಾಮನನು ಕೊಂದು ಬರುತಿರ್ದೆ ೬

ಬಂಜೆಯಾ ಮಗನಿಗೆ । ಕೆಂಜೆಡೆಯ ಕಣ್ಬರಲು
ಮುಂಜಾರ ದಹಿಸಿ– ನಡುವಿರ್ದ (೨) ಕೋಡಗನ
ಅಂಜದಲೆ ಸುಟ್ಟು ಬರುತಿರ್ದೆ ೭

ಅಭ್ರಮದ ಮೇಲೊಂದು । ಶುಭ್ರವರ್ಣದ ಹೆಣ್ಣು
ವಿಭ್ರಮರ ನೋಡಿ– ಕರೆಯಲು (೨) ಹೋದವರು
ಶುಭ್ರದೊಳಗಡಗಿ ಮರಳಿದರು ೮

ಶುಭ್ರ ಮೇಲಣ ಬಳ್ಳಿ । ಸ್ವರಗೆಯ್ದು ಬರಲಾಗಿ
ಪುರದ ಮನ್ನೆಯರು– ಮಡಿಯಲು (೨) ನಾ ಕಂಡು
ಉರಿಲಿಂಗದೊಳಗೆ ಬಯಲಾದೆ ೯

ನೀರೊಳಗಣ ಜ್ಯೋತಿ । ಧಾರಿಣಿಗೆ ಬರಲಾಗಿ
ಆರು ಮನ್ನೆಯರು– ಮಡಿದಿರಲು (೨) ನಾ ಕಂಡು
ಮಾರಹರನೊಳಗೆ ಬಯಲಾದೆ ೧೦

ಮಂಜರದ ಹೃದಯದೊಳು । ಕುಂಜರವು ಮೂಡಲ್ಕೆ
ಕುಂಜರದ ಮದವ– ನಡುಗಿಸಿ (೨) ನಾ ಮುಂದೆ
ಮಂಜಿನಾ ಮನೆಯು ದಹಿಸಿದೆ ೧೧

ಭಾನುವಿನ ಮದವನ್ನು । ಮೌನದಿಂದ ದಹಿಸಲ್ಕೆ
ಕಾನನದ ಒಳಗೆ– ಕಿಡಿಯೆದ್ದು (೨) ಸುಡುವಾಗ
ಆನೆಗಳೆಲ್ಲಾ ಮಡಿದಾವು ೧೨

ಮೂರು ಮನೆಯುನು ನೋಡಿ । ಮೂರು ಪಕ್ಷಿಯು ತಂದು
ಮೂರು ಮುಖದಲ್ಲಿ– ಅಡಗಿಸಿ (೨) ನಾಮುಂದೆ
ಧೀರನೋಳ್ ಬೆರೆದು ಬಯಲಾದೆ ೧೩

ಬಟ್ಟ ಬಯಲೊಳಗೊಂದು । ಕತ್ತುರಿಯ ಮೃಗ ತಾನು
ನೆಟ್ಟನೆಯೆ ಬಂದು– ಸುಳಿಯಲು (೨) ನಾನದನು
ದೃಷ್ಟಿಯಿಂ ನೋಡಿ ಬರುತಿರ್ದೆ (ಬದುಕಿರ್ದೆ?) ೧೪

ಅರಳಿಯಾ ಮರದಲ್ಲಿ । ಅರಗಿಳಿಯು ತಾ ಹೋಗಿ
ಮರಿಗಳನು ಇಕ್ಕಿ– ಬರಲಾಗಿ (೨) ಮಾರ್ಜಾಲ
ಮರಿಗಳನು ನುಂಗಿ ಮೆರದೂ (ದಿಹು?) ದು ೧೫

ಸರ್ಪನಾ ಹೆಡೆ ಮೇಲೆ । ಕರ್ಪೂರವು ಉರಿಯಲ್ಕೆ
ಮುಪ್ಪುರವು ಬೆಂದು– ಬಯಲಾಗಿ (೨) ಹೋಗಲ್ಕೆ
ಕರ್ಪೂರವ ನೋಡಿ ನಗುತಿರ್ದೆ ೧೬

ತಾರಕ ಬ್ರಹ್ಮವನು । ಆರೈದು ನೋಡಲ್ಕೆ
ತಾರೆಗಳು ಎಲ್ಲ– ಉದುರಲು (೨) ನಾ ಕಂಡು
ನೀರನೊಳ್ ಬೆರೆದು ಬಯಲಾದೆ ೧೭

ಪಂಚ ತನುಗಳ ನಡುವೆ । ಪಂಚವರ್ಣವನರಿದು
ಪಂಚಕರಣಗಳ– ನಳಿವುತಲಿ (೨) ನಾ ಮುಂದೆ
ಸಂಚಿತವ ತಡೆದು ಬರುತಿರ್ದೆ ೧೮

ಚಿತ್ತಿನಾಮನೆಯೊಳಗೆ । ಸತ್ತವನ ನೋಡುತ್ತ
ಎತ್ತ ಹೋದಾತ– ಮಡಿಯುಲು (೨) ನಾ ಕಂಡು
ಸತ್ತವನ ಕಂಡು ನಗುತಿರ್ದೆ ೧೯

ತಲೆಯಲ್ಲದ ತಲೆಯನು । ಪಿಡಿದು ಬರುತಿರಲಾಗಿ
ತಲೆಯಿಲ್ಲದವಳು– ಗ್ರಹಿಸಲ್ಕೆ (೨) ನಾ ಕಂಡು
ತಲೆಯೊಳಗೆ ಬೆರೆದು ಬರುತಿರ್ದೆ ೨೦

ನೆತ್ತಿಯೂ ಅಮೃತಕ್ಕೆ । ಎತ್ತಿರ್ದ ಸರ್ಪವನು
ಅತ್ತ ಮುಖವಾಗಿ– ನಡೆಯುತ್ತೆ (೨) ಅಮೃತವನು
ಚಿತ್ತದಿಂದುಂಡು ದಣಿ ದೂ (ದಿಹು ?) ದು ೨೧

ಆರು ಕಮಲಂಗಳೊಳ । ಗಾರುವರ್ಣವನರಿದು
ಆರು ಲಿಂಗಗಳ– ತಿಳಿಯುತ್ತ (೨) ಭಕ್ತಿಯ
ಸಾರಿ ಲಿಂಗದೊಳು ಬಯಲಾದೆ ೨೨

ಎಂಟಾರು ದೇಶವೇಳ । ದಾಂಟಿ ಭಕ್ತಿಯ ರಸವ
ನೀಂಟಿ ಪ್ರಣಯದೊಳು– ಬೆರೆಸುತ್ತ (೨) ಕರಣಗಳ
ಬೇಂಟೆಯ ನಾಡಿ ಮೆರೆದೂದು ೨೩

ಎರಳೆ ಪುಲಿ ಮೃಗವನ್ನು । ಭರದಿಂದ ಸಂಪರಿಸಿ
ಹರಿಯಜರ ಮೆಟ್ಟಿ– ಕುಣಿಯುತ್ತೆ (೨) ರುದ್ರನ
ಉರಿಗಣ್ಣ ತೊಡೆದು ಬರುತಿರ್ದೆ ೨೪

ನೀಲಗಿರಿಗಳ ಮೆಟ್ಟಿ । ಲೀಲೆಯಿಂದಾಡುತ್ತ
ಬಾಲೆಯರ ಭ್ರಮೆಯ– ತುಳಿಯುತ್ತ (೨) ಕಾಲನ
ನಾಲಿಗೆಯ ಕೊಯ್ದು ಬರುತಿರ್ದೆ ೨೫

ಗಗನದೊಳ್ ಮಾರುತನ । ಬಿಗಿದು ಗಂಟನೆ ಹೂಡಿ
ನಗಮೂರು ಮೀರಿ– ಕುಣಿಯುತ್ತ (೨) ಭಕ್ತಿಯ
ಬಗೆಯೊಳಗೆ ಬೆರೆದು ಬಯಲಾದೆ ೨೬

ವ್ಯೋಮ ಚಕ್ರದೊಳಿರ್ದ । ಸೋಮನ ಪ್ರಭೆ ಬಂದು
ಭೂಮಿಯಾ ಮೇಲೆ– ಬೆಳಗಲ್ಕೆ (೨) ಪ್ರಭೆಯನ್ನು
ಪ್ರೇಮದಿಂ ನೋಡಿ ನಿಜವಾದೆ ೨೭

ಸುಜ್ಞಾನಿ ಕವಳವನು । ಪ್ರಾಜ್ಞತ್ವದಿಂ ಕೊಂಡು
ಅಜ್ಞಾನ ಮದವ– ಹಳಿ (ಣಿ ?) ಯುತ (೨) ಮಾಯೆಯಾ
ವಿಜ್ಞಾನ ಗೆಲಿದು ಬರುತಿರ್ದೆ ೨೮

ಭವಮಾಲೆಗಳ ಸುಟ್ಟು । ಭಕ್ತಿ ತಿಲಕವನಿಟ್ಟು
ಸುವಿವೇಕದೊಳಗೆ– ಮನವಿಟ್ಟು (೨) ನಾ ಮುಂದೆ
ತ್ರಿವಿಧವನು ಬಿಟ್ಟು ಬರುತಿರ್ದೆ ೨೯

ಕಣ್ಣಿನಾ ಮನೆಯಲ್ಲಿ । ಬಣ್ಣದಾ ಗರತಿಯು
ಅಣ್ಣಗಳ ನೋಡಿ– ಕರೆಯಲು (೨) ಹೋದವರು
ಬಣ್ಣವನು ನೋಡಿ ಮರೆಯದರು ೩೦

ನಾಲ್ಕು ಸ್ಥಾನವ ಮೇಲೆ । ನಾಲ್ಕು ಲಿಂಗವನಿರಿಸಿ
ನಾಲ್ಕು ಜ್ಯೋತಿಗಳ– ಬೆಳಗುತ್ತ (೨) ನಾಮುಂದೆ
ನಾಲ್ಕು ಕಮಲದೊಳು ಲಯವಾದೆ ೩೧

ಮೇಲೆ ಬಾಲವನಿಟ್ಟು । ನಾಲಿಗೆಯು ಕೆಳಗಿಟ್ಟು
ಕಾಲಕೂಟವನು– ಉಗುಳುವ (೨) ಸರ್ಪನ
ಹೇಳಿಗೆಯು ಮುರಿದು ಬರುತಿರ್ದೆ ೩೨

ಸಾಗರದ ತಡಿಯಲ್ಲಿ । ಕೋಗಿಲೆ ಸ್ವರವಿಡಲು
ಯೋಗಿಗಳು ಕೇಳಿ– ಅಳಿಯಲು (೨) ನಾ ಕಂಡು
ಕೋಗಿಲೆಯು ಕಂಡು ನಿಜವಾದೆ ೩೩

......... । ... ನವಪಸ್ತದಿಂ
ನವಭಕ್ತಿಯಿಂದ– ಪವಣಿಸಿ (೨) ಧರಿಸಲ್ಕೆ
ನವನೇತ್ರನೊಡನೆ ಬಯಲಾದೆ ೩೪

ನೆಲದ ಹಾಪೆಯ ಮಾಡಿ । ಉಲಿವಗೆಜ್ಜೆಯ ಕಟ್ಟಿ
ನಲಿನಲಿದು ಸೂತ್ರ– ಗಳ ಹೂಡಿ (೨) ಆಡಿಸುವ
ಹೊಲೆಯಂ ನೋಡಿ ನಗುತಿರ್ದೆ ೩೫

ಅರ್ಥ : ಹಾಪೆ– ಬೊಂಬೆ

ಸೊಕ್ಕಿದ ಮರ್ಕಟನು । ಅರ್ಕನಾ ಕೃತಕವನು
ಧಿಕ್ಕರಿಸಿ ಜಪವ– ನೆಣಿಸುವ (೨) ಅರ್ಕನಾ
………… ಪಿಡಿದುದು ೩೬

ಬಿಟ್ಟ ಮಂಡೆಯ ಹೆಣ್ಣು । ಬೆಟ್ಟವನು ಅಡರಲು
ಕೊಟ್ಟದವರೆಲ್ಲ– ಮಡಿಯಲ್ಕೆ (೨) ನಾ ಕಂಡು
ದಿಟ್ಟನೊಳ್ ಬೆರೆದು ಬಯಲಾದೆ ೩೭

ಜ್ಯೋತಿಯ ಪ್ರಭೆಯನ್ನು । ಜೋಕೆಯಿಂ…
ಜ್ಯೋತಿ ಜ್ಯೋತಿಗಳು– ರತಿಯಾಗಿ (೨) ಕೂಡಲು
ಜ್ಯೋತಿಯಾ ಬೆಳಗನರಿದೆ (ದಿಹೆ) ನು ೩೮

ಆಗು ಹೋಗುಗಳೆಂಬ । ಸಾಗರವ ನೆರೆ ದಾಂಟಿ
ಆಗಾಗಿ ಗುರುವಿ– ನೊಳು ನಿಂದು (೨) ಲಿಂಗದಲಿ
ಹೋಗಿ ಸಂಸೃತಿಯ ಗೆಲಿದೆ (ದಿಹೆ) ನು ೩೯

ಸಂಗ ನಿಜಭಕ್ತರಾ ಅಂಗಮನ ಪ್ರಾಣದೊಳು
ಸಂಗ ಚಿದ್ಘನದ– ಪ್ರಭೆಯಲಿ (೨) ರಮಿಸುವ
ಸಂಗದೇಶಿಕನೊಳಿಳಿದೆನು ೪೦

ಸಂಗಮೇಶ್ವರನ ನಿಜ । ದಂಗದ ತ್ರಿವಿಧಿಯ
ಹಿಂಗದೆ ನೋಡಿ– ಪಠಿಸುವ (೨) ಶರಣರು
ಲಿಂಗಭೋಗದೊಳು ಮೆರೆಯುವರು

-(ಸಂ. ೭೦, ೭೧)

## ೧೦. ಇಷ್ಟಲಿಂಗವು ಗುರುವನ್ನು ಬೇಡುವುದು ತ್ರಿವಿಧಿ ?

ಶ್ರೀ ಗುರುವೆ ಕೇಳಯ್ಯ । ರಾಗದಿಂ ಕೇಳಿನ್ನು
ಆಗಮವರಿಯದ– ಹೆಗ್ಗಪಾತಕರಿಗೆ
ಬೇಗದೊಳು ಎನ್ನ ಕೊಡಬೇಡ ೧

ಕೊಡು ನಿಮ್ಮ ಕೃಪೆಯುಳ್ಳ । ದೃಢವುಳ್ಳ ಭಕ್ತರಿಗೆ
ಬಿಡದೆ ಪೂಜಿಸುವ– ಮಡದಿಪುರುಷರಿಗೆ
ತಡಮಾಡದೆನ್ನ, ಕೊಡು ನೀನು ೨

ಕಟ್ಟಿದಾ ಲಿಂಗವನು । ನೆಟ್ಟಗೂಟಕೆ ಹಾಕಿ
ನಿಟ್ಟಿಸದೆ ಮನೆಯ– ಮಡದಿಗೆ ಪುರುಷನಿಗೆ
ತಡಮಾಡದೆನ್ನ, ಕೊಡು ನೀನು ೩

ಎದೆಯ ಮೇಲಣಲಿಂಗ । ಕುಸುರೆ ಮುಖದಲಿ ಹಾಕಿ
ಹೆದರದಲೆ ಮನೆಯ– ಕೆಲಸವನು ಮಾಡುಂಬ
ನಿದೆ ಮಾರಿಗೆನ್ನ, ಕೊಡಬೇಡ ೪

ಎರ ಕೊಂಬರೆ ಲಿಂಗವ । ಹೊರಸು ಕಾಲಿಗೆ ಹಾಕಿ
ಅರಿಕೆಯಿಲ್ಲದೆ ಮನೆ– ಕೆಲಸವನು ಮಾಡುಂಬ
ನರಕಿಗೆ ಎನ್ನ, ಕೊಡಬೇಡ ೫

ಮೋರೆಯನು ತೊಳೆಯಳು । ತೋರಳು ಅನ್ನವನು
ಆರರಿಯದಂತೆ– ಒಳಗೊಳಗೆ ತಿನುವ ಛೀಃ
ಮಾರಿಗೆ ಎನ್ನ, ಕೊಡಬೇಡ ೬

ಹಬ್ಬ ಹುಣ್ಣಿಮೆ ಎಂದು । ಉಬ್ಬಿ ನಂಟರ ಕರೆದು
ದುರ್ಬುದ್ಧಿಯಿಂದ– ಲಿಂಗವನು ಬಿಟ್ಟುಂಬ
ಗೊಬ್ಬಿಗೆ ಎನ್ನ, ಕೊಡಬೇಡ ೭

ಟಕ್ಕು ಟವಳಿಯ ಮಾಡಿ । ಡಕ್ಕೆಯನು ಹೊರಕೊಂಬ
ಮುಕ್ಕಣ್ಣ ಶಿವನ– ಅರಿಯದಾ ಅಜ್ಞಾನಿಗೆ
ಚಕ್ಕನೆ ಎನ್ನ, ಕೊಡಬೇಡ ೮

ಗಂಡ ಬುದ್ಧಿಯ ಹೇಳೆ। ಬಂಡನ್ನೆ ಮಾಡುವಳು
ಕಂಡವರ ಕೂಡೆ– ಒಳಹೊಕ್ಕು ತಿರುಗುವ
ಭಂಡಗೆ ಎನ್ನ, ಕೊಡಬೇಡ ೯

ಬಂದು ಜಂಗಮಲಿಂಗ। ನಿಂದು ಭಿಕ್ಷವ ಬೇಡೆ
ಒಂದು ತುತ್ತನ್ನ– ಇದ್ದು ಇಲ್ಲೆಂಬುವ
ಹಂದೆಗೆ ಎನ್ನ, ಕೊಡಬೇಡ ೧೦

ಯಕ್ಕಲದ ಜೋಗಿಗೆ। ಅಕ್ಕರದಿ ಇಕ್ಕುವಳು
ರಕ್ಕಸನಾಡಾ– ಕೊಳಕಿಯಾ ಕೊರಳಿಗೆ
ಕಟ್ಟಿಕೋ ಎಂದು, ಕೊಡಬೇಡ ೧೧

ಅತ್ತೆಗೆ ಬಿರಿ ನುಡಿವಳು। ಪುತ್ರರನು ಜರಿಯುವಳು
ಹೆತ್ತ ಪುತ್ರರುಗಳು– ಬಯುಸಿ ಬಾಯಾರುವ
ಕತ್ತೆಗೆ ಎನ್ನ, ಕೊಡಬೇಡ ೧೨

ತನ್ನ ಲಿಂಗವ ಬಿಟ್ಟು। ಅನ್ಯದೈವಕೆ ಹೋಗಿ
ಬಣ್ಣ ಬಿಳಿದುಟ್ಟು– ಮೀಸಲನು ಮಾಡುಂಬ
ಕುನ್ನಿಗೆ ಎನ್ನ, ಕೊಡಬೇಡ ೧೩

ಹೆತ್ತವರ ಜರಿಯುವಳು। ಭಕ್ತಿಯನು ಮಾಡಳು
ಚಿತ್ತ ಕಂಡಂತೆ– ಸರ್ವರಿಗೆ ಬಗುಳುವಾ
ಕತ್ತೆಗೆ ಎನ್ನ, ಕೊಡಬೇಡ ೧೪

ಜಂಗಮನ ನಿಂದಿಸುವ। ರಂಗಜ ಹರನರಿಯರು
ಭಂಗಬಿಟ್ಟು ತಮ್ಮ– ಲಿಂಗವನು ಅರಿಯದ
ಭಂಗಿ ಬಡುಕನಿಗೆ ಕೊಡಬೇಡ ೧೫

ಶಿವಭಕ್ತರೆನಿಸುವರು। ಭವಿಗನ್ನವಿಕ್ಕುವರು
ಭವಿಪಾತಕ ಸೋಂಕಿ– ಭವಭವಕೆ ಬೀಳುವ
ಭವಿ ಕೇಡಿಗೆನ್ನ, ಕೊಡಬೇಡ ೧೬

ಎತ್ತು ಕುದುರೆಯ ತೊತ್ತ। ಹೆತ್ತ ಮಕ್ಕಳನೆಲ್ಲ
ಮತ್ತೆ ಹಂಟುಳ್ಳ– ಗೋದಲಿಗೆ ಕಟ್ಟೆಂಬ
ಅರ್ಥ ಮಾತುಂಟು, ಗುರುಸ್ವಾಮಿ ೧೭

ಕೊಟ್ಟರೆ ಕೊಡು ನಿನ್ನ । ನಿಷ್ಠೆಯುಳ್ಳವರಿಗೊಂ
ದಿಷ್ಟು ಗುಣವಿಲ್ಲ– ದಧಮಪಾತಕರಿಗೆ
ಕಟ್ಟಿಕೋ ಎಂದು ಕೊಡಬೇಡ ೧೮

ಚಂದದಿಂ ಗುರು ಬಂದು । ಹೋಂದಿ ಲಿಂಗವ ಕಟ್ಟಿ
ಬಂಧ ಭವಗಳನು– ಪರಿಹರಿಸಲರಿಯದಾ
ಹಂದೆಗೆ ಎನ್ನ, ಕೊಡಬೇಡ ೧೯

ನಾರಿ ತನಲಿಂಗವನು । ಸೀರೆ ಸೆರಗಿಲಿಕಟ್ಟಿ
ಸೀರೆ ಮಾಸಿದರೆ– ಅಗಸಗೆ ಹಾಕುವ ಹೇಸಿ
ಮಾರಿಗೆ ಎನ್ನ, ಕೊಡಬೇಡ ೨೦

ಉಡುಗೊರೆಯು ಮುಯ್ಯೆಂದು । ಕೊಡುತಿಹರು ನಂಟರಿಗೆ
ಕೊಡರು ನಿನಗೊಂದು– ವಸ್ತ್ರವನು ನೀ ಬೇಡೆ
ಕೊಡುವರೆ ಎನ್ನ, ಗುರುಸ್ವಾಮಿ ೨೧

ಅನ್ನ ಹಚ್ಚಡ ತೇಜಿ ಹೊನ್ನಿಗಾಸೆಯ ಮಾಡಿ
ಚೆನ್ನಾಯಿತೆನುತ– ನೀನೆನ್ನ ಕೊಟ್ಟರೆ
ಗನ್ನಘಾತಕವು, ಗುರುಸ್ವಾಮಿ ೨೨

ನೀನೆನ್ನ ಕೊಟ್ಟರೆ । ನಾನೇನು ಎನಲಾರೆ
ನೀನೋಡದೆನ್ನ– ಕೊಟ್ಟರೆ ಗುರುಸ್ವಾಮಿ
ಬೆನ್ ಹತ್ತದೆ ಬಿಡದು, ಈ ಪಾಪ ೨೩

ಆಸೆಗೇ ಕೊಟ್ಟರೆ । ಗಾಸಿಯಾಗುವೆ ನಾನು
ಮೋಸವನು ಮಾಡಿ– ಕೊಡಬೇಡ ಶರಣರಾ
ಬಾಸೆಯಿಲ್ಲದಿರೆ, ಗುರುಸ್ವಾಮಿ ೨೪

ಕೊಡುವವರು ಆರೆಂದು । ಕೊಂಬುವರು ಆರೆಂದು
ಎರಡರಾ ನಡುವೆ– ಇರುವವನು ಆರೆಂದು
ಬಿಡದೆ ನೀ ನೋಡು, ಗುರುಸ್ವಾಮಿ ೨೫

ಭಕ್ತಿಯಿಂದಲಿ ಪೂಜ್ಯ । ಭಕ್ತಿಯಿಂದಲಿ ರಾಜ್ಯ
ಭಕ್ತಿಯೇ ತನಗೆ– ಮುಕ್ತಿ ಕೈಲಾಸವದು
ಸತ್ಯ ಸದ್ಗುರುವೆ, ಬೋಧಿಪುದು ೨೬

ಭಕ್ತಿಯಾ ಪಥವಿಡಿದು । ಮುಕ್ತಿ ಸಾಧಿಸುತ
ಭಕ್ತಿಯಲಿ ನಡೆದು– ಶರಣರನು ಕೂಡಿರುವ
ಯುಕ್ತಿಯುಳ್ಳರಿಗೆ, ಪಾಲಿಪುದು ೨೭

ಶರಣು ಶರಣೆಲೆ ದೇವ । ಶರಣು ಶ್ರೀಗುರುರಾಯ
ಶರಣು ಶರಣಾರ್ಥಿ– ನೀನೆನ್ನ ಭವಮಾಲೆ
ಯೊರಸಿದಾ ಸದ್ಗುರುವೆ, ಶರಣು ೨೮

ಅಷ್ಟಾವರಣವೆ ರೂಪ । ಪಂಚಾಚಾರವೆ ಪ್ರಾಣ
ಶ್ರೇಷ್ಠವಾಗಿಹರ– ದೃಷ್ಟಿಯೊಳಗಿರುವುದೆ
ನಿನ್ನಿಷ್ಟ ಪಾಲಿಪುದು, ಗುರುಬಸವ ೨೯

ಇಷ್ಟಲಿಂಗ ಸ್ತೋತ್ರ । ನಿಷ್ಠೆಯಿಂ ಜಪಿಸಿದೊಡೆ
ಕಷ್ಟದಾರಿದ್ರ್ಯ– ಹಿಂಗಿಸುತೆ ನೀನೆನ್ನ
ಇಷ್ಟವೀಯುವೆ ಇದು, ಸಿದ್ಧಾಂತಂ ೩೦

ಇಷ್ಟಲಿಂಗವು ಸ್ತುತಿಸಿದ ಸ್ತೋತ್ರ ಸಂಪೂರ್ಣಂ

(–ಸಂ. ೫೮-೫೯).

# ೧೧. ಹಳಗನ್ನಡದಿ ಶಿವಸ್ತೋತ್ರ

(ಪ್ರಾಚೀನ ಪ್ರತಿಯೊಂದರಿಂದ)

ರಾಗ–ತೆಲಗು ಕಾಂಭೋಜಿ ಪಲ್ಲವಿ

ಮಿಡನೆ ಮುಚ್ಚುಳಿ ಜೀಯ ಮಿಗೆ ರಕ್ಕಿಸಯ್ಯ್
ಕಡವಸ ಬಸನ ಕೋಟ(ಡ?)ಕ ಕಳಿ ಜೊಳದಲೆಯ

ಗಂದರಗಿವಿಯ ಸಬ್ಬ ಗಾಳಿ ಗೂಳನವೆದೆಯ
ಪಂದಲೆಯ ಬಚ್ಚ ಮುಪ್ಪೊಳಲುರಿಕ ಗೊರವ
ಗೊಂದೆವಳಯಿಗೆಯ ಕರಿಗೊರಲ ಬಾಂಬೊಳೆದಲೆಯ
ಇಂದಿರಾರಡಿಗಬ್ಬವಿಕ್ಕಿದೆಳೆದೇರ ೧

ಬಿಗುರ್ವರಿಜನಪ್ಪ ಸಗ್ಗಿಗರಡಬಳಂ ಬದಿಜ
ವಗೆಯ ಪಗಲೆರೆಯುಚ್ಚಿ ಪೊಗರಪ್ಪ ಸಂಬು
ಮುಗಿಲ್ ನವಿರ ಗನಹನರುಮುಗನಯ್ಯನಾ ಬಗ್ಗ
ದೊಗುಲಡಿಯ ಚಳಿವೆಟ್ಟಣುಗಿಯ ಮನದನ್ನ ೨

ತಿರೆಯಪ್ಪೆಲರ್ಗಳೆಯ ನರುವಳಾಗಸ ನೇಸ
ರರಿಲಾಳ್ ಮಾತುಮಡೊಕ್ಕೆಯರನ ಮರುವಸಲ (?)
ಪರಿಸರಿಯೊಳ್ಪೆನೆಲೆಯಪುರ ಚನ್ನವೀರೇಶ
ನೆರೆಗಬ್ಬಗುಂಚ ಮುದ್ದರಿಸಿ ಜಗದಜ್ಜ ೩

ಟಿಪ್ಪಣಿ ೧: ಮುಚ್ಚುಳಿ=ತ್ರಿಶೂಲಿ, ಕಡವಸ=ಚರ್ಮ, ಕೊಡಕ=ಶೀತ, ಚಳಿ, ಇಂದಿರ=ಇಂದ್ರ, ಆರಡಿ=ಶತ್ರು, ಬಿಗುರ್ವರಿಜ=ಭೀಕರಾಕಾರವುಳ್ಳವನು (ಭೈರವ), ಗಬ್ಬ=೧ ಗರ್ವ, ೨ ಕಾವ್ಯ, ಬದಿಜ=ಕೆಸರಿನಲ್ಲಿ ಹುಟ್ಟಿದುದು, ಗಂದರ=ಗಾನ, ಪಂದಲೆ ವಚ್ಚ=ರುಂಡಮಾಲಾಧರ, ಗನಹ=ಹಿರಿಯ, ಅರಿಲಾಳುಮ=ನಕ್ಷತ್ರಗಳೊಡೆಯ, ಗುಂಚ=ಗುಚ್ಛ, ಡೊಕ್ಕೆ=ಶರೀರ.

೨: ಶಿವನು ಅನೇಕ ಲೀಲೆಗಳಲ್ಲಿದ್ದಾನೆ. ಅವುಗಳಲ್ಲಿ ಶಿವ–ಯೋಗೀಶ್ವರ ಎಂಬ ಲೀಲೆಯ ಅನುಕರಣವನ್ನು ವೀರಶೈವರು ವರ್ತನದಲ್ಲಿ ಅಳವಡಿಸಿಕೊಂಡವರು ಎಂಬುದನ್ನು ಮರೆಯದಿರಬೇಕು. (–ಸಂ.೫೬–೫೭)

# ೧೨. ದೊಡ್ಡಣ್ಣಾಚಾರ್ಯರ ವಚನ

(ಮೈಸೂರು ಮಹಾಲಿಂಗಪ್ಪನವರಿಂದ ಬಂದ ಪುಸ್ತಕದಿಂದ)

---

ಪಲ್ಲವಿ

ಹರಸ್ತುತಿ ಜಿಹ್ವೆಯೊಳಗೆ ನರಸ್ತುತಿ ಮಾಡಬಾರದು
ಧರಣಿಯು ಕಲ್ಲಿಗೆ ಮನಮುಟ್ಟಿ ಪೂಜೆಯ ಮಾಡಬಾರದು

ಗುರುವಾಕ್ಯ ವೇದಾಂತ ಸಿದ್ಧಾಂತವ ಉಲ್ಲಂಘನೆ ಮಾಡಬಾರದು
ಗುರುಭಕ್ತ ಮಾರ್ಗರಾಯತ ಮೂಢರುಗಳೊಡನಾಡಬಾರದು
ಗುರುಮಹಾಜ್ಞಾನದಿಂ ಪರಚಿಂತೆಯ ಮಾಡಬಾರದು
ಗುರುವಿತ್ತ ಲಿಂಗವು ಇರದಂಥವರ ಕರಕೊಂಡಾಡಬಾರದು ೧

ಬಡತನ ಬಂದ ಕಾಲದಿ ಸಂಟರಿಷ್ಟರ ಬೇಡಬಾರದು
ಬಡಗ ಪಶ್ಚಿಮ ದೆಸೆಯಲಿ ಸಿರವಿಟ್ಟು ನಿದ್ದೆಯ ಮಾಡಬಾರದು
ಬಡವನ ಕಂಡು ಬಲ್ಲಿದ ಮಾತ ಗರ್ವದಿ ಆಡಬಾರದು
ಬಡವರ ಬಾಯನ್ನು ಬಡಿದು ಅನ್ಯಾಯ ಮಾಡಬಾರದು ೨

ಲಿಂಗ ಮುಖಾರ್ಪಿತವಲ್ಲದೆ ಬೇರೊಂದ ಮೆಲ್ಲಬಾರದು
ಲಿಂಗ ಜಂಗಮ ಗುರು ನಿಂದಕರೆಡೆಯೊಳು ನಿಲ್ಲಬಾರದು
ಜಂಗಮ ತೀರ್ಥಪ್ರಸಾದದ ಬಯಲೊಳು ಚಲ್ಲಬಾರದು
ಲಿಂಗಕರ್ಪಿತವಲ್ಲದನ್ಯ ಪದಾರ್ಥಂಗಳ ಕೊಳ್ಳಬಾರದು ೩

ನಡೆ ನುಡಿಯಿಲ್ಲದಾತನ ಮಾತ ಸಭೆಯೊಳಗೆ ಆಡಬಾರದು
ತಡೆಯದೆ ತಿಂಬ ರೋಗಿಗೆ ಮಾತ್ರ ವೈದ್ಯವ ಮಾಡಬಾರದು
ಕೂಡ ತಿಂಬುವಳು ಮಾಸಲಡಿಗೆ ಮಾಡುವಳೆಂದು ನೋಡಬಾರದು
ಬಡಮನದವರಿಗೆ ಬ್ರಹ್ಮ ಉಪದೇಶವ ಮಾಡಬಾರದು ೪

ಪರಮೈಶ್ವರ್ಯ ಅಹಂಕಾರ ಸುಸ್ಥಿರವೆಂದು ಬೆರೆಯಬಾರದು
ಪರಮ ವ್ರತಂಗಳಾಚರಣೆಯ ಹಿರಿಯರ ಜರಿಯಬಾರದು
ಪರಧನ ಪರಸತಿ ಕಾಮಿನಿಯರ ಮನಕೆ ಕರೆಯಬಾರದು
ಪರಮ ಸದ್ಗುರು ದೊಡ್ಡಣ್ಣಾಚಾರ್ಯರ ಪಾದ ಮರೆಯಬಾರದು ೫

ಟಿಪ್ಪಣಿ : ದೊಡ್ಡಣ್ಣಾಚಾರ್ಯರು ಯಾರೆಂಬುದು ತಿಳಿದಿಲ್ಲ. (ಸಂ. ೬೬-೬೭)

# ೧೩. ತತ್ತ್ವಪದ

(ಮೈಸೂರು ಮಹಾಲಿಂಗಪ್ಪನವರಿಂದ ಬಂದ ಪುಸ್ತಕ)

---

ಪಲ್ಲವಿ

ಬೆಳಗಿನ್ನೆಲ್ಲಿಹುದೋ ಲಿಂಗದ ಕಳೆಯಿನ್ನೆಲ್ಲಿಹುವುದೋ
ಬೆಳಗಿನೊಳಗಣ ಸುಳಿಗಳನರಿಯದೆ
ಬರಿದೆ ಕೂಗುವ ಕುರಿ ಮನುಜರಿಗೆ

ಆರ ನೋಡಿದರೇನು ಹೈಮತರನು ಸಾಧಿಸಿ
ಕಿವಿಯೊಳು ಕೇಳಿದರೇನು
ಕಾಮವ ಕಳೆಯದೆ ಕ್ರೋಧವ ಮರೆಯದೆ
ಹೋರಾಡಿ ಮುಳುಗುವ ಹಂದೆ ಮನುಜರಿಗೆ ೧

ಮಾತಿನ ಬಣಬೆಯು ಮುಂದಿಟ್ಟುಕೊಂಡು
ನೀತಿಶಾಸ್ತ್ರವಪೊಂದೊಂದನೆ ಹೇಳುತಲಿ– ತಮ್ಮ
ಆತುಮದೊಳಗಿರುವ ಅರಿವ ತಾ ತಿಳಿಯದೆ
ಮೂತ್ರದ ಕುಳಿಯೊಳು ಮುಳುಗಾಡುವನಿಗೆ ೨

ಕಾಯದೊಳಿರುವ ಅಮೇಯವ ಲಿಂಗವ– ಅದ
ದಾಯವ ತಿಳಿಯದ ಮಗುಳ ಜನರು
ಬಾಯ ಮಾತಿಲೊಂದೊಂದೋದುತಲಿ
ಮಾಯದ ಮೋಹಕೆ ಸಣ್ಣಿಸಿ ಮುಳುಗುವ– ಅಣ್ಣಂಗಳಿಗೆ ೩

ತನ್ನೊಳು ಗುರುಲಿಂಗ ಜಂಗಮವಿರಲು
ಅನ್ಯದೈವಕಡ್ಡ ಬೀಳುತಲಿ– ಮಿಗೆ
ತನ್ನ ತತ್ತ್ವವ ತಾ ತಿಳಿಯದೆ ಹೆಣ್ಣಳ
ಬಣ್ಣಿಸಿ ಮುಳುಗುವ ಅಣ್ಣಂಗಳಿಗೆ ೪

M·43-2

ಅಂಗದ ಬೆಳೆಹವ ಲಿಂಗಕೆ ತೋರುತ
ಲಿಂಗದ ಬೆಳಕನು ತಾ ನೋಡುತಲಿ
ಮಂಗಳ ಬೆಳಗಿನ ನಮ್ಮ ನಿಜಗುಣ
ಸಂಗನ ಬಸವಣ್ಣನಿಗಲ್ಲದೆ ೫

ಹೈಮತರು=ಹಿಮಾಲಯದಲ್ಲಿನ ಸಂಗೀತ ನಿಪುಣರು; ಚಳಿಸೀಮೆಯ ಗಂಧರ್ವರು.
(–ಸಂ. ೬೬–೬೭)

[ಪದ್ಯದಲ್ಲಿ ಕೆಲವು ದೋಷಗಳಿರುವಂತೆ ತೋರುತ್ತಿದೆ. ಬೇರೆ ಹಸ್ತಪ್ರತಿಗಳ ಸಿಕ್ಕರೆ ಸರಿಪಡಿಸಬಹುದು. ಸಂ.]

## ೧೪. ಜಾಣನಲ್ಲವೆ?

(ಮೈಸೂರು ಮಹಾಲಿಂಗಪ್ಪನವರಿಂದ ಬಂದ ಪುಸ್ತಕದಿಂದ)

---

ಪಲ್ಲವಿ

ಜಾಣನಲ್ಲವೇ ಶರಣ ಜಾಣನಲ್ಲವೇ
ಪ್ರಾಣಲಿಂಗವಿಪ್ಪ ಹೃದಯ ಕೋಣೆಯೊಳಗೆ ಮನವನಿತ್ತ– ಶರಣ

ಆವುದೊಂದು ಸುಖವು ತನುವನಾವರಿಸದ ಮುನ್ನಲಿಂಗ
ದೇವಗೂಡಿಸುತಿರ್ಪ ಚಿತ್ ಕಲಾವಲಂಬಿಯಾದ– ಶರಣ ೧

ಮನದ ಕೊನೆಯ ಮೊನೆಯ ಮೇಲೆ ಮನವನೆ ದೇಹ ಮಾಡಿ
ಕೊಂಡು ಲಿಂಗ
ತನುವಿನೊಳಗೆ ಹೊರಗೆ ತೀವಿ ಚಿನುಮಯಾತ್ಮನಾದ– ಶರಣ ೨

ಪ್ರಣವ ಮಂತ್ರದೊಳಗೆ ಪ್ರಾಣ ಪರಮೈಕ್ಯರಹಿತ– ಪರ
ಪರಾಣು ತತ್ತ್ವ ತುರ್ಯಾತೀತ ಶಾಂತನಲ್ಲಿ ಬೆರಸಿ
ಭೇದವಳಿದ– ಶರಣ ೩

ಟಿಪ್ಪಣಿ : ಇದು ಕರಸ್ಥಲದ ನಾಗಲಿಂಗದೇವರಿಂದ ರಚಿಸಲ್ಪಟ್ಟುದೇನು ?

(–ಸಂ. ೬೬-೬೭)

# ೧೫. ಚಂದಮಾಮ

(ಮೈಸೂರು ಮಹಾಲಿಂಗಪ್ಪನವರಿಂದ ಬಂದ ಪುಸ್ತಕದಿಂದ)

ಪಲ್ಲವಿ

ಶರಣನಂಗವೆ ಲಿಂಗಕ್ಷೇತ್ರವೆಂದರಿವುದು ಚಂದಮಾಮ ಐ ! ಅ
ವರ ಶರೀರವೆ ಇಷ್ಟಲಿಂಗವೆಂದರಿವುದು ಚಂದಮಾಮ

ಶಿರ ಸೂಕ್ಷ್ಮತನು ಪ್ರಾಣಲಿಂಗವೆಂದರಿವುದು ಚಂದಮಾಮ
ಪರಮ ಕಾರಣಕಳೆ ಭಾವಲಿಂಗವೆಂದರಿವುದು ಚಂದಮಾಮ
ಶರಣನ ಘ್ರಾಣವು ಆಚಾರಲಿಂಗದ ಮನೆ ಚಂದಮಾಮ
ಗುರು ಲಿಂಗದಾದಿಯು ಜಿಪ್ವೆ ತಿಳಿದು ನೋಡು ಚಂದಮಾಮ ೧

ಶಿವಲಿಂಗವಾಶ್ರಯ ನಯನಸುಬದ್ಧವು ಚಂದಮಾಮ
ಭವನವೇ ತ್ವಕ್ಕು ಜಂಗಮಲಿಂಗದೇವಗೆ ಚಂದಮಾಮ
ಶ್ರಮಣ ಪ್ರಸಾದ ಲಿಂಗದ ಸುಧಾಮವು ಚಂದಮಾಮ
ಅವಿರಳ ಹೃದಯ ಮಹಾಲಿಂಗದ ಮನೆ ಚಂದಮಾಮ ೨

ಆಧಾರದೊಳಗೆ ಸದ್ಯೋಜಾತ ಲಿಂಗವು ಚಂದಮಾಮ
ಸ್ವಾಧಿಷ್ಠವೆ ವಾಮ ಲಿಂಗದ ಗೃಹ ಚಂದಮಾಮ
ಮುಂದೆ ಮಣಿಪೂರಕವೆ ಅಘೋರ ಲಿಂಗ ಮುಖ ಚಂದಮಾಮ
ಭೇದವಿಲ್ಲದೆ ಪುರುಷನನಾಹತದಿ ತೋರ್ಪ ಚಂದಮಾಮ ೩

ಅನಘ ನೀಶಾಸ್ಯ ಮೂರುತಿ ವಿಶುದ್ಧಿ ಚಕ್ರದೊಳಿಪ ಚಂದಮಾಮ
ಅನುಪಮ ಮಹಾಲಿಂಗ ಆಜ್ಞಾ ಚಕ್ರದ ದೊರೆ ಚಂದಮಾಮ
ಒಂದಿಪ್ಪ ಬ್ರಹ್ಮ ಚಕ್ರದಲಿ ನಿಃಖಲ ಲಿಂಗ ಚಂದಮಾಮ
ನೆತ್ತಿನು (?) ಶಿಖೆಯೊಳು ಪರಮ ಶೂನ್ಯದಲಿಂಗ ಚಂದಮಾಮ ೪

ಪಶ್ಚಿಮದೊಳಗಿರುವುದು ನಿರಂಜನಲಿಂಗ ಚಂದಮಾಮ
ಕಿಚ್ಚುಗಣ್ಣ ಭವಗಾಲಯುವಾಗಿ ಶರಣನು ಚಂದಮಾಮ
ಸತ್ಯದ ನಡೆನುಡಿ ಲಿಂಗದ ಕರಣಕಿರಣ ಚಂದಮಾಮ
ಚಿಚ್ಛಕ್ತಿ ಗುರು ಚನ್ನಬಸವನೆ ತಾನಾದ ಚಂದಮಾಮ ೫

(ಸಂ. ೬೬-೬೭)

ಅಚ್ಚುಗಣ್ಣು=ಜ್ಞಾನನೇತ್ರ

# ೧೬. ಮಂಗಳಾರತಿ

(ಮೈಸೂರು ಮಹಾಲಿಂಗಪ್ಪನವರ ಪ್ರತಿಯಿಂದ)

ಪಲ್ಲವಿ

ಜಯಮಂಗಳಂ ನಿತ್ಯಶುಭಮಂಗಳಂ
ಜಯ ಜಯತು ಮುನಿಜನರ ರಕ್ಷಿಪಂಗೆ

ಆರು ಚಕ್ರದ ಮೇಲೆ ತೋರುತಿಹ ಗಂಧವನು
ಆರಾಧಿಸುತ್ತಿರ್ಪ ಆಚಾರ ಲಿಂಗಕ್ಕೆ
ಸಾರವನು ಸವಿಗೊಳಿಸಿ ಮಾಗಾರಿ ನಿಜತತ್ತ್ವ
ಸಾರಿಯೇಳುತಲಿರ್ಪ ಗುರುಲಿಂಗಕೆ ೧

ಕರಿದು ಬಿಳಿವೆನಿಸಿ ಕಂಗಳ ಕಳೆಗಳಾಚರಿಸಿ
ಹಿರಿದಾಗಿ ನೋಡುತಿಹ ಶಿವಲಿಂಗಕೆ
ಉರಿಸಹಿತ ಮೃದು ಕಠಿಣವೊಲಿದು ರಾಜಿಸುತಿರ್ಪ
ಕರಸ್ಥಲಕೆ ನೆರೆದ ಜಂಗಮಲಿಂಗಕೆ ೨

ಗೀತ ಪಂಚಾಕ್ಷರಿಯ ಸ್ತೋತ್ರ ಮುಖದೊಳು ನಿಂದು
ಭೂತೇಶನಂತಿರ್ಪ ಪ್ರಸಾದ ಲಿಂಗಕ್ಕೆ
ನೀತಿ ನಿಜ ನೆರೆ ಗುಣವ ತಾಳಿದಾ ಹೃದಯಕ್ಕೆ
ಶ್ವೇತಾಂಗನಾಗಿರ್ದ ಮಹಾಲಿಂಗಕ್ಕೆ ೩

ಉರವಣಿಸಿ ಎರಗುತಿಹ ಆಚಾರ ಗುರುಲಿಂಗಗಳು
ಎರಡು ಕೂಡೊಂದಾದ ಇಷ್ಟಲಿಂಗಯ್ಯಗೆ
ಮೆರೆವ ಶಿವಲಿಂಗ ಜಂಗಮಲಿಂಗ ಕೂಡೊಂದಾಗಿ
ಒಲಿದು ರಾಜಿಸುತಿರ್ಪ ಪ್ರಾಣಲಿಂಗಯ್ಯಗೆ ೪

ಪಾವನದೊಳಿಹ ಪ್ರಸಾದ ಮಹಲಿಂಗಗಳು
ಎರಡು ಕೂಡೊಂದಾದ ಭಾವಲಿಂಗಯ್ಯಗೆ
ತ್ರಿವಿಧ ಲಿಂಗವು ಕೂಡಿ ಹೃದಯವೊಂದಾಗಿರ್ಪ
ಭುವನ ಸೂತ್ರಿಕ ಮಹಾ ಗುರುನಾಥಗೆ ೫

(ಸಂ. ೬೬-೬೭)

## ೧೭. ರೇಚರಸರ ಹಾಡು

(ಶ್ರೀಮತಿ ಸಿದ್ಧಲಿಂಗಮ್ಮ ತಿಪಟೂರು ಇವರ ಪುಸ್ತಕದಿಂದ)

ರಾಗ–ಕಲ್ಯಾಣಿ ಪಲ್ಲವಿ

ಏಕೆ ದಯವನು ಮಾಡೆ ರೇಚಿತಂದೆ ಅ
ನೇಕ ಮುಖದೊಳು ನಿಮ್ಮ ಪೊಗಳುತಿಹೆನು

ಕಲ್ಯಾಣಪುರದೊಳಗೆ ಎಲ್ಲ ಪ್ರಮಥರ ಮಧ್ಯೆ
ಅಲ್ಲಿ ಬಾಲಕನಿಗೆ ಒಂದೆಲೆಯ ಕೊಡಲಾಗಿ
ಕಲಿಯೊಳಗೆ ನಿಂತು ನಿಮ್ಮ ಮಹಿಮೆಗಳ ಭಕ್ತರಿಗೆ
ಒಲಿದು ತೋರಿಸಿಹ ಘನ ರೇಚಿತಂದೆ ೧

ಚಂಗಲ್ಲ ಮಂಟಪದ ರುದ್ರಮುನಿಗಳ ನಿರೂಪವ
ಕೈಗೊಂಡು ಅಲ್ಲಿರ್ದ ಪ್ರಮಥರಿಗೆ ಬಿನ್ನವಿಸಿ ಘನ ಪ
ರ್ವಗಳ ಮಾಡಿ ಮಿಕ್ಕ ಶೇಷವ ಕೈಗೊಂಡು ನಮಸ್ಕರಿಸಿ
ಮಿಗೆ ಅಡವೀಶನೆಂದೆನಿಸಿದಾ ಘನ ರೇಚಿತಂದೆ ೨

ಕೆಲವು ಕಾಲದೊಳು ಗೋಪ್ಯದೊಳು ಆಚರಿಸಿ ಮತ್ತೆ ಶಿ
ವಲಿಂಗ ಜಂಗಮದ ರೂಪ ಧರಿಸಿ ಅಂ
ಕಲಿಯ ಮಠದ ಅಡವಿಯೊಳು ನೆಲಸಿ ದೇವ ದೇಶಿಕ
ಸುಲಭ ಅಡವೀಶನೆಂದೆನಿಸಿದಾ ಘನ ರೇಚಿ ತಂದೆ ೩

ಘೋರಾರಣ್ಯ ನದಿಗಳ ಮಧ್ಯ ದೇ
ವಾಲಯ ಮಠ ಕ್ಷೇತ್ರಗಳ ಘನವಾಗಿ ನಿರ್ಮಿಸಿ ಭಕ್ತ ಮಹೇ
ಶ್ವರರಿಗೆ ಮನದ ಬಯಕೆಯ ಸಲಿಸಿ
ಉರೆ ಅಡವೀಶನೆಂದೆನಿಸಿದಾ ಘನ ರೇಚಿ ತಂದೆ ೪

ಬಹುಕಾಲದಿಂದ ಮಹಿಮೆಗಳ ತೋರುತಲಿ
ಬಹಳ ದೇಶದ ಭಕ್ತರಿಗೆ ಒಲಿದುದ್ಧರಿಸಿ ಆ
ಶೀರ್ವಾದವನಿತ್ತು ತಿರುಗಿ ಜಾಜಿ ವೃಕ್ಷದ
ಬಳಿಗೆ ದಯಮಾಡಿ ಬಯಲಾದ ಘನ ರೇಚಿ ತಂದೆ ೫

ಉದಯಕಾಲದಿ ಮಧ್ಯಾಹ್ನ ಸಂಜೆಯೊಳು
ಮದಹರನ ಧ್ಯಾನದೊಳು ಶಿವಯೋಗಿಗಳಿಗೆ
ಸದ್ಗುರುಶನಾಮೃತವಿತ್ತು ತತ್ವದನುವನು ತೋರಿ
ಮುದದಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೬

ಕಾಲಕಲ್ಪನೆಯಳಿದು ಮೂಲ ಮಂತ್ರವ ತಿಳಿದು
ಕಾಲನಂ ಎದೆಗೆಡಿಸಿ ಕಾಮನಂ ಸುಟ್ಟು ವಿ
ಮಲ ಭಸಿತವ ಧರಿಸಿ ಶಿವಯೋಗದೊಳು ಆಚರಿಸಿ
ಸಲೆ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೭

ಪಂಚ ಪರುಷವ ತೋರಿ ಮಿಸುನಿಯನು ಜಯಿಸಿ
ಪಂಚ ಕಳಸಗಳ ರಚಿಸಿ ಪಂಚ ಶಿಖರದೊಳು ನಿಲಿಸಿ
ಪಂಚ ಭಕ್ಷ್ಯವ ಪ್ರಮಥರಿಗೆ ಸವಿಗೊಳಿಸಿ
ಮುಂಚೆ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೮

ಚೋರ ಧೀರರು ಕಳ್ಳತನಕೆ ಬಂದು ನಿಲಲು ಅಡವೀಶನ
ಕರುಣಾದೃಷ್ಟಿ ಬೆಚ್ಚು ಭ್ರಮೆಗಳ ಮಿಡಿದು ನಿಲಲು
ಅರರೆ ಹುಚ್ಚು ಮಾನವರೆ ಎಚ್ಚರಿಲ್ಲವೆ ಎಂದು ನುಡಿಸಿ
ವರ ಅಡಪೀಶನೆಂದೆನಿಸಿದಾ ಘನರೇಚಿ ತಂದೆ ೯

ಹಲವು ದೇಶಾದಿಗಳ ಭಕ್ತಾದಿಗಳು ತಾವೆಲ್ಲ ಬಂದು
ಅಡವೀಶನಾ ಶ್ರೀ ಚರಣ ಕಮಲಗಳಿಗೆರಗಿ ನಿಂದು
ನಲಿಯೆ ಪಂಚಮುಖ ಪರಶಿವನು ವಂಚನೆಗಳಳಿದು
ಸುಲಲಿತದಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೦

ಘನತರದ ಮಹಿಮೆಗಳ ಮೂಢ ಮನುಜರು ಬಲ್ಲರೆ
ಪರಮ ಪಾವನ ಲೋಕ ಸಲಹುವದ ಕಾಡೊಳಗೆ
ನೀನು ತೋರ್ಪಡಿಸಿ ಮಾನ್ಯದ ಬಯಕೆ ಕೊಡಿಸಿ
ಘನ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೧

ನವಚಕ್ರಗಳ ಮೆಟ್ಟಿ ನವಕೋಣೆಗಳ ತುಳಿದು
ನವಮಾಲಿಕೆಗಳ ಹಿಡಿದು ನವಕೃಪೆಯ ಪಟ್ಟು
ನವಪ್ರಮಥರೊಳಗೆ ಏಕನಸಮಾನವೆನಿಸಿ ಮಹಿಮೆಯ ತೋರಿ
ನವ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೨

ಅಷ್ಟಾಂಗಯೋಗಗಳ ನಿಷ್ಠೆಯಿಂದಲಿ ತೋರಿ
ಸೃಷ್ಟಿ ಸ್ಥಿತಿಲಯಕೆ ಕರ್ತನೆಂದೆನಿಸಿ ಸ್ಥಲವಾರು ಮೂರರಲಿ
ಅಷ್ಟ ಕೋಣೆಯು ಹೊಕ್ಕು ಮೀರಿದಾ ಅಣುಚಕ್ರ
ಮೆಟ್ಟಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೩

ಅಣುವಿಗೇ ಅಣುವಾಗಿ ಘನಕೆ ನೀ ಘನವಾಗಿ
ಪ್ರಮಥರಿಗೆ ಸಖನಾಗಿ ಘನನಿಷ್ಠೆ ಪರನಾಗಿ
ಘನವಾಗಿ ಭಕ್ತರಿಗೆ ಮುಕ್ತಿಯ ಕೊಡಿಸಿಗೋಪ್ಯದೊಳು
ಸನುಮತದಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೪

ಅಷ್ಟದಳ ಕಮಲದಿಂ ಮೇಲಣ ಚಿದಾತ್ಮನ ಗೋಪ್ಯದೊಳು
ಪಶ್ಚಿಮದ ಸ್ಥಲದೊಳಗೆ ಇರುವ ಪರಮಾತ್ಮನ ಕೂಡಿಸಿ
ನಿಶ್ಚಲದಿ ಶಿವಯೋಗದೊಳು ನಿಲಿಸಿ
ಸ್ವಚ್ಛದಲಿ ಅಡವೀಶನೆಂದೆನಿಸಿದಾ ಘನಸೇಚಿ ತಂದೆ ೧೫

ಧನಕನಕ ವಸ್ತು ವಾಹನಗಳು ವೃಷಭ ತುರಂಗ
ವನೇಕ ಮುಖದೊಳು ಬಂದ ನಿಂತು ಇರಲು
ನೀನು ಸುತ್ತ ನೋಡಲು ಭಕ್ತ ಶಿವಜಂಗಮ ಪ್ರಮಥರ ನಡುವೆ
ನೆನಹಿನಿಂ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೬

ಹದಿನಾಲ್ಕು ಲೋಕದೊಳು ಅಡವೀಶನ ಸಮಾನ
ಮುದದಿ ಐವತ್ತಾರು ದೇಶದಲಿ ಪೂಜೆಗೊಳ್ಳುತ್ತ
ಒದಗಿ ಗುರುಲಿಂಗ ಜಂಗಮಕೆ ಭಕ್ತಿಯೊಳು ಅರೋಗಣೆಯು
ನಡೆಸಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೭

ದಿನವೊಂದರೊಳು ಭಕ್ತ ಮಹೇಶ್ವರರಿಗೆ ಧೀರ
ತನದೊಳಗೆ ಪಂಚಭಕ್ಷ್ಯವ ಮಾಡಿ ನೀಡಿಸುತಲಿ
ದಿನದೊಳಗೆ ಅಪ್ಪಣೆ ಪಿಡಿದು ಪೋಗುವ ಭಕ್ತರಿಗೆ ಆಶೀರ್ವಾದ
ಘನ ಬುತ್ತಿ ಕೊಡಿಸಿ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೮

ತ್ರಾಹಿ ಸದ್ಗುಣವರ್ಯ ತ್ರಾಹಿ ಭಕ್ತರ ಪೋಷ
ತ್ರಾಹಿ ಅಡವೀಶ ತ್ರಾಹಿ ಜಗದೊಳಗೆ ಸರಿಯಾರು ನಿನಗೆ
ತ್ರಾಹಿ ಮಹಿಮೆಯು ಪುರುಷ ತ್ರಾಹಿ ಜಗದೀಶ
ತ್ರಾಹಿ ಅದೃಶ್ಯ ಅಡವೀಶನೆಂದೆನಿಸಿದಾ ಘನರೇಚಿ ತಂದೆ ೧೯

ಶರಣು ಬಸವಪ್ರಿಯು ಶರಣ ಪ್ರಮಥರ ದೇವ
ಶರಣು ಅಲ್ಲಮನ ಘನ ಪ್ರಸಾದಿ
ಶರಣು ಅಡವಿಯೊಳು ನೆಲಸಿ ಶರಣು ಭಕ್ತರಗೆಲಿಸಿ
ಶರಣು ಅಡವೀಶನೆಂದೆನಿಸಿದಾ ಘನರೇಚಿ ತಂದೆ ೨೦

ತೊದಲು ನುಡಿಯೊಳು ನಿಮ್ಮನು ಸ್ತುತಿಸಿ ಕೀರ್ತಿಸಿ ಹಲವು ಮು
ಖದೊಳು ಪೊಗಳಿ ಮುದದಿ ಗುರು ತೋಂಟದಾರ್ಯರ ಮರಿಯಾಗಿ
ಅದರಂಗಿ ಗ್ರಾಮದಾ ಮಠದ ಆರಾಧ್ಯ ಚನ್ನನಿ
ಗೆ ದಯವಿಟ್ಟು ಅಂಕಲಿಯ ಅಡವಿಯೊಳು ನೆಲಸಿದಾ
ಘನರೇಚಿ ತಂದೆ ೨೧

(ಸಂ. ೮೫-೮೬)

# ೧೮. ಜಂಗಮನು ಯಾರು ?

(ಪೂರ್ವಿಕರ ಬರೆಹದ ಪ್ರತಿಯಿಂದ)

---

ಪಲ್ಲವಿ

ಆದಿ ಅನಾದಿಯಿಂದತ್ತಲಿಂದಾದ ಜಂಗಮಲಿಂಗ
ಆದಿ ಎಂತಹುದಯ್ಯ ಬೋಧಿಸೆನಗೆ ಜ್ಞಾನ ಜಂಗಮಲಿಂಗ

ಅಂತರಂಗದಿ ಬಹು ಜ್ಞಾನಿಯಾಗಿರುವನೇ ಜಂಗಮಲಿಂಗ
ಶಾಂತಿ ಸೈರಣೆ ಬಹಿರಂಗದೊಳಿರ್ಪನೆ ಜಂಗಮಲಿಂಗ
ಪಿಂತೆ ನಾನಾರೆಂದು ತಿಳಿದಾಚರಿಪನೆ ಜಂಗಮಲಿಂಗ
ಕಂತುಹರನ ಧ್ಯಾನ ಮುಂದುಗೊಂಡಿರುವನೆ ಜಂಗಮಲಿಂಗ ೧

ಲಿಂಗದೊಳು ಸತಿ ಪತಿಯಂದದಿ ನಡೆವನೆ ಜಂಗಮಲಿಂಗ
ಹಿಂಗದೆ ಶರಣ ಸಂಗದಿ ಇರುವನೆ ಜಂಗಮಲಿಂಗ
ಲಿಂಗಾಣತಿಯಿಂದ ಬಂದುದನು ಉಂಬನೆ ಜಂಗಮಲಿಂಗ
ಅಂಗದಿಚ್ಛೆಗೆ ಪರಿದಾಡದೆ ಇರುವನೆ ಜಂಗಮಲಿಂಗ ೨

ಆಸೆ ರೋಷಗಳೆಲ್ಲ ನಾಶವಾಗಿರುವನೆ ಜಂಗಮಲಿಂಗ
ರಾಶಿ ಜೀವಗಳಿಗೆ ಲೇಸ ಹಾರೈಪನೆ ಜಂಗಮಲಿಂಗ
ಸೂಸದೆ ತ್ರಿವಿಧಕ್ಕೆ ದೂರನಿಂದಿಹ ಜಂಗಮಲಿಂಗ
ದೇಶ ಪಾವನವಾಗಲೆಂದು ಚರಿಪನೆ ಜಂಗಮಲಿಂಗ ೩

ಕೊಡುವ ಕೊಂಬೆಡೆಗೆ ತಾನಡೆಯದೆ ಇರುವನೆ ಜಂಗಮಲಿಂಗ
ಕೊಡದವರು ಸರಿ ಕೊಟ್ಟವರು ತಾ ಸರಿ ಎಂಬ ಜಂಗಮಲಿಂಗ
ಒಡಲ ಇಚ್ಛೆಗೆ ಒಬ್ಬರೆಡೆಯಿರುವವನಲ್ಲ ಜಂಗಮಲಿಂಗ
ನಡೆಯೊಳಗೆ ತಾ ಘನವೆಂದು ನುಡಿವನಲ್ಲ ಜಂಗಮಲಿಂಗ ೪

ವಂದನೆ ನಿಂದನೆ ಸಮನೆಂದು ಕಾಣ್ಬನೆ ಜಂಗಮಲಿಂಗ
ಕುಂದು ಹೆಚ್ಚುಗಳಿಗೆ ಹೆಣಗುವವನಲ್ಲ ಜಂಗಮಲಿಂಗ
ಸಂದೇಹವಿಲ್ಲ ಸಂಕಲ್ಪ ಬಗೆಗೊಳ್ಳ ಜಂಗಮಲಿಂಗ
ಮುಂದು ಹಾರುವನಲ್ಲ ಮುದುಡಗಾರನಲ್ಲ ಜಂಗಮಲಿಂಗ ೫

ಧರ್ಮಾರ್ಥಕಾಮ ಮೋಕ್ಷಗಳ ಕಾಂಕ್ಷಿಪನಲ್ಲ ಜಂಗಮಲಿಂಗ
ಪೆರ್ಮೆಯ ನಾಲ್ಕು ಪದದ ಬಟ್ಟೆಯನೊಲ್ಲ ಜಂಗಮಲಿಂಗ
ನಿರ್ಮಲ ಹೃದಯ ನಿಶ್ಚಿಂತನಾಗಿರಲವ ಜಂಗಮಲಿಂಗ
ನಿರ್ಮೋಹನಾಗಿ ನಿಸ್ಸೀಮನಾಗಿರ್ಪನೆ ಜಂಗಮಲಿಂಗ ೬

ಕಡು ಸಣ್ಣದುಂ ಸರಿ ಕಂಬಳಿಯು ಸರಿಯೆಂಬ ಜಂಗಮಲಿಂಗ
ಷಡುರಸಾನ್ನವು ಸರಿ ಅಂಬಲಿಯು ಸರಿಯೆಂಬ ಜಂಗಮಲಿಂಗ
ಒಡವೆಯು ಸರಿ ಒಡೆದೋಡು ತಾ ಸರಿಯೆಂಬ ಜಂಗಮಲಿಂಗ
ಪೊಡವಿಯು ಸರಿ ಕೈಲಾಸವು ಸರಿಯೆಂಬ ಜಂಗಮಲಿಂಗ ೭

ಭಕ್ತರಾ ಗುರುಲಿಂಗ ಭಕ್ತರಾ ಚರಲಿಂಗ ಜಂಗಮಲಿಂಗ
ಭಕ್ತರ ಜನಕ ಭಕ್ತರ ಜೀವಾಧಾರ ಜಂಗಮಲಿಂಗ
ಭಕ್ತರಿಚ್ಛೆಗೆ ವಶವಾಗಿ ತೋರ್ಪನೆ ಜಂಗಮಲಿಂಗ
ಭಕ್ತರ ಕುಲದೈವ ಭಕ್ತರ ಮನೆದೈವ ಜಂಗಮಲಿಂಗ ೮

ಕಂತು ಕಾಲರ ಎದೆಯ ಮೆಟ್ಟಿನಿಂದಿಹನೆ ಜಂಗಮಲಿಂಗ
ಸಂತತ ಷಡುಸ್ಥಲ ಮಾರ್ಗದಿ ನಡೆವನೆ ಜಂಗಮಲಿಂಗ
ಮಂತ್ರಂಗಳೊಳು ಮನ ಮಗ್ನನಾಗಿರುವನೆ ಜಂಗಮಲಿಂಗ
ಇಂತೀಯನಾದಿ ಜಂಗಮ ಚನ್ನಬಸವನೆ ಜಂಗಮಲಿಂಗ

(ಸಂ. ೮೫-೮೬)

# ೧೯. ಧಾರ್ಮಿಕ ಗೀತೆ

(ಶ್ರೀ ನಿರಂಜನ ಸಿದ್ಧಬಸವ ಸ್ವಾಮಿಗಳು ದೊಡ್ಡಮೇಟಿ ಕುರ್ಕೆ ಅವರಿಂದ–
ಗುರುಪುತ್ರಿಯಾದ ಸುಜ್ಞಾನದೇವಿಯು ತನ್ನ ಸೋದರಿಯಾದ
ಸತ್‌ಕ್ರಿಯಾದೇವಿಗೆ ತಿಳಿಸಿದುದು)

---

ಪಲ್ಲವಿ

ಪ್ರಣವ ಪಂಚಾಕ್ಷರಿ ಗುರುವನ್ನು
ಮನದಲ್ಲಿ ನೆನೆಯಮ್ಮ ತಂಗೀ– ಇದ
ಘನವೆಂದು ತಿಳಿ ಮಂಗಳಾಂಗೀ

ಬಿಡದೆ ಮುಚ್ಚಿದ ಜಡ ಮೋಹವನು ನೀಗಿ
ಕಡುಮುಕ್ತಿ ಕೊಡುವನು ತಂಗೀ– ಇದ
ಬಿಡಬೇಡ ತಿಳಿ ಮಂಗಳಾಂಗೀ ೧

ಕರ್ಮ ರಹಿತನು ಗುರು ನಿರ್ಮಳ ನಿರ್ಗುಣ
ಧರ್ಮ ಸ್ವರೂಪನು ತಂಗೀ– ಇದರ
ಮರ್ಮವ ತಿಳಿ ಮಂಗಳಾಂಗೀ ೨

ಹಿಂದಿನ ಜನ್ಮದಲಿ ಬಂದ ಪುಣ್ಯದ ರಾಶಿ
ಇಂದಿನಲಿ ದೊರಕಿದೆ ತಂಗೀ– ನಿತ್ಯಾ
ನಂದವು ತಿಳಿ ಮಂಗಳಾಂಗೀ ೩

ನ ಗುರೋರಧಿಕವೆಂದು ಜಗದಲ್ಲಿ ಸಾರುವ
ಬಗೆ ಶ್ರುತಿ ಮತವಮ್ಮಾ ತಂಗಿ– ಇದು
ಜಗದೀಶ ನುಡಿ ಮಂಗಳಾಂಗೀ ೪

ಆವಕಾಲದೊಳು ಗುರುದೇವನ ಪದವನು
ಭಾವದಿ ಭಜಿಸಮ್ಮ ತಂಗಿ– ಇದು
ಕೇವಲವು ತಿಳಿ ಮಂಗಳಾಂಗೀ ೫

ಇಷ್ಟಲಿಂಗವು ನಿನ್ನ ಶ್ರೇಷ್ಠ ಚಿತ್ಕಳೆಯೆಂದು
ಮುಟ್ಟಿ ಪೂಜಿಸಬೇಕು ತಂಗಿ– ಗುರು
ಕೊಟ್ಟನು ತಿಳಿ ಮಂಗಳಾಂಗೀ ೬

ಗುರುಕೊಟ್ಟ ಲಿಂಗವನು ಕರಮನ ಭಾವದಲಿ
ಇರಿಸಿ ನೀ ಭಜಿಸಮ್ಮ ತಂಗಿ– ಇದು
ಪರತತ್ವ ತಿಳಿ ಮಂಗಳಾಂಗೀ ೭

ಸಂಗ ರಹಿತ ಮಹಲಿಂಗವೆ ನಿರುಪಮ
ಜಂಗಮ ಮೂರ್ತಿಯೇ ತಂಗಿ– ಅಂತ
ರಂಗದಿ ತಿಳಿ ಮಂಗಳಾಂಗೀ ೮

ಧರೆಯ ತೀರ್ಥಗಳೆಲ್ಲ ಗುರುಪಾದ ತೀರ್ಥಕ್ಕೆ
ಸರಿಯಲ್ಲ ಕೇಳಮ್ಮ ತಂಗಿ– ಇದ
ನರಿತು ಸೇವಿಸು ಮಂಗಳಾಂಗೀ ೯

ಆದಿ ವಸ್ತುವಿನಿಂದಲಾದುದು ಶುದ್ಧ ಪ್ರ
ಸಾದವೆಂದರಿಯಮ್ಮ ತಂಗಿ– ಜನ್ಮ
ಬಾಧೆಯ ಕಳೆ ಮಂಗಳಾಂಗೀ ೧೦

ವ್ಯಸನ ಸಪ್ತಕವಳ ದೆಸೆವ ಚಿದ್ಭಸಿತವ
ನೊಸಲೊಳು ಧರಿಸಮ್ಮ ತಂಗೀ– ಮುಕ್ತಿ
ವಶವಪ್ಪದೆಲೆ ಮಂಗಳಾಂಗೀ ೧೧

ಕ್ಷುದ್ರ ಗುಣಂಗಳ ಛಿದ್ರಿಸುವನುಪಮ
ರುದ್ರಾಕ್ಷಿ ಧರಿಸಮ್ಮ ತಂಗಿ– ಜ್ಞಾನ
ಮುದ್ರೆಯೊಳಿದು ಮಂಗಳಾಂಗೀ ೧೨

ವೇದಮಂತ್ರಂಗಳಾದಿ ಷಡಕ್ಷರಿ
ಮೋದದಿ ಭಜಿಸಮ್ಮ ತಂಗಿ– ಜನ್ಮ
ಬಾಧೆಯ ಕಳೆ ಮಂಗಳಾಂಗೀ ೧೩

ಅಷ್ಟಾವರಣದಿ ನಿಷ್ಠೆ ಇದ್ದರೆ ಭವ
ಬಿಟ್ಟೋಡುವುದು ಕೇಳೇ ತಂಗೀ– ಮತ್ತೆ
ತಟ್ಟದು ತಿಳಿ ಮಂಗಳಾಂಗೀ ೧೪

ಗುರುವಿನ ಕರಣವು ದೊರಕದಿದ್ದರೆ ಘೋರ
ನರಕ ತಪ್ಪದು ಕೇಳೆ ತಂಗಿ– ಇದ
ನರಿತು ನೀ ಪಡೆಯಮ್ಮ ತಂಗಿ ೧೫

ಗುರು ತಂದೆ ತಾಯಿ ಗುರು ಬಂಧು ಬಳಗವ
ಗುರು ಪರಮಾತ್ಮ ಕೇಳ್ ತಂಗಿ– ಇದು
ಪರತತ್ವ ತಿಳಿ ಮಂಗಳಾಂಗೀ

–(ಸಂ. ೯೫–೯೬)

# ೨೦. ನೀಲವ್ಮನ ಉರುಟಣೆಯ ಹಾಡು

ರಾಗ–ಉರುಟಣೆ ಪಲ್ಲವಿ

ಶ್ರೀ ಗುರುವೆ ಜಯುಜಯು । ಶ್ರೀ ಗುರುವೆ ನಿರ್ಮಾಯು
ಶ್ರೀ ಗುರುವೆ ಸಲಹಯ್ಯ । ಶ್ರೀ ಗುರು ಶರಣಯ್ಯ

ಕಡಿವು ಪಂಚೇಂದ್ರಿಯಂಗಳ ಷಡುವರ್ಗಾದಿ
ತಿಳಿವಂತಹವರು ಕೇಳಿ ಶರಣರಾ ಸ್ತುತಿಯ ೧

ಬಿಡದೆ ಲಿಂಗಾಂಗ ಸಂಗವ ಬಲ್ಲವರಾಲಿಸಿ
ಕಡು ಮುದ್ದು ಬಸವ ನೀಲವ್ಮನುರುಟಣೆಯು ೨

ಆರು ಚಕ್ರದ ಪೀಠ ಏರಿ ಬಸವನಿರಲು
ನಾರಿಯುರು ತಂದು ನೀರೆರೆವ ರಾಕ್ಷಣದಿ ೩

ಧರಿಸಿದರು ಭಸಿತ ರುದ್ರಾಕ್ಷಿ ಪಂಚಾಕ್ಷರಿಯು
ಸ್ಮರಿಸುತ ಶಿವಲಿಂಗಾರ್ಚನೆಯು ಮಾಡಿದರು ೪

ಗುರು ಚರಣವೆಂಬಾ ಪ್ರಸಾದವ ಸೇವಿಸಿ
ಹರಗಣಂಗಳ ಪಾದಕ್ಕೆರಗಿ ನಿಂದಿರಲು ೫

ಪರಮ ಪತಿವ್ರತೆಯು ನೀಲಲೋಚನೆ ಬಸವಯ್ಯಗೆ
ವರ ಮುಕ್ತಾಂಗನೆಯುರು ಶೃಂಗರಿಸಿದರಾಗ ೬

ಸರ್ವ ಸಂಪತ್ತೆಂಬ ಸೀರೆಯಾ ಸಿಂಗರಿಸಿ
ಸರ್ವ ಜ್ಞಾನವೆಂಬ ರವಿಕೆಯು ತೊಡಿಸಿ ೭

ಶಿವಮಂತ್ರವೆಂದೆಂಬ ಕರ್ಣದಾ ಓಲೆಯುನಿಟ್ಟು
ಭವರೋಧನದ ತೋಳ್ ಬಂದಿಯುನು ಧರಿಸಿ ೮

ಕಾಲ ಕರ್ಮಗಳೆಂಬ ಕೀಲುಗಳ ಮುರಿದಿಟ್ಟು
ನಾರಿಯುರು ಧರಿಸಿದರು ಕೀಲು ರ್‍ಯಾಗಟೆಯು ೯

ಸತ್ಕ್ರಿಯೆ ಎಂದೆಂಬ ಚರಣದಂದುಗೆಯಿಟ್ಟು
ನಿತ್ಯ ನೇಮಗಳೆಂಬ ಹೊಸಮುತ್ತ ಧರಿಸಿದರು ೧೦

ಷಣ್ಮುಖಿಯ ಶಾಂಭವಿಯು ಖೇಚರಿಯು
ಮುದ್ರೆಯ ಉಂಗುರವನಿಟ್ಟಾರು ಗುರುಸಂಗನಾ ಬಸವಗೆ ೧೧

ಭಕ್ತಿ ಜ್ಞಾನದ ಹೊಸ ಮುತ್ತಿನ ಹಾರವ ಧರಿಸಿ
ಭಕ್ತಿ ವೈರಾಗ್ಯದ ಹಾವುಗೆಯ ಮೆಟ್ಟಿದರು ೧೨

ಅಷ್ಟಮದಂಗಳ ನಟ್ಟು ಚಪ್ಪರವನಿಟ್ಟು
ಅಷ್ಟಯೋಗಗಳ ಮೇಲ್ಕಟ್ಟ ಕಟ್ಟಿದರು ೧೩

ಪಂಚ ಪ್ರಾಣಗಳೆಂಬ ಪಂಚಕಳಸವ ಹೂಡಿ
ಪಂಚಾಕ್ಷರಿ ಎಂಬ ಸುರಿಗೆ ಸುತ್ತಿದರು ೧೪

ಸದ್ ಭಾವವೆಂದೆಂಬ ಹಸ್ತದಾ ಬಳೆಯನಿಟ್ಟು
ಏಕೋ ಭಾವದ ನಿಷ್ಠೆ ತಾಳಿಯ ಧರಿಸಿ ೧೫

ತಿಳಿದು ಜೀವನ ಗುಣವನೆಳಿದಂತರಂಗದಲಿ
ಶರಣರು ಧರಿಸಿದರು ತೊಂಡಿಲು ಬಾಸಿಂಗ ೧೬

ಅತ್ಯಂತ ಸುಜ್ಞಾನ ಜ್ಯೋತಿಯ ಮುಂಟಪದಿ
ನಿತ್ಯ ನಿರಂಜನಾತ್ಮಕನು ನೀಲವ್ವನ ೧೭

ಹಿಂಗದೆಯೆ ಕೂಡಲ ಸಂಗಮೇಶ್ವರ ಬಂದು
ಮಂಗಳ ವಿವಾಹವಾಗಲು ಮೂರ್ತವನು ಮಾಡಿದರು ೧೮

ಗುರು ಸಂಗಮೇಶ್ವರನು ಶರಣನಿಗೆ ಧಾರೆಯನೆರೆದು
ಗುರು ಉಪದೇಶಂಗಳ ಮಾಡಿ ತೆರಳಿದರಾಗ ೧೯

ಶರಣನಾ ಸುಜ್ಞಾನಿ ಕಡು ಚೆಲ್ವೆ ನೀಲವ್ವ
ಗುರುವ ವಂದನೆ ಮಾಡಿ ಕುಳಿತರಾಕ್ಷಣದಿ ೨೦

ಪತಿಲಿಂಗ ಸತಿ ತಾನೆಂಬೀರ್ವರಂದು
ಅತಿಶಯದಿಂದಲಿ ಕುಳಿತರಾ ಹಸೆಯ ಮೇಲೆ ೨೧

ಅಂಗಭೋಗವನೆಲ್ಲ ಲಿಂಗಕ್ಕೆ ಅರ್ಪಿಸಿದಂತಾ
ವಂತಹ ಸಂಗನಾ ಬಸವ ನೀಲಮ್ಮನುತ್ಸಾಹ ೨೨

ತನ್ನ ತಾನೇ ತಿಳಿದು ತನ್ನ ತಾನೇ ಮರೆದು
ತನ್ನ ಲಿಂಗದೊಳ್ ಬೆರೆದರು ಸಂಪನ್ನೆಯರೆಲ್ಲಾ ೨೩

ಭಕ್ತರಂಗನೆಯರು ಸದ್ಭಕ್ತ ಸಂಪನ್ನೆಯರು
ಮುಕ್ತಿದಾಯಕ ಬಸವಗೆತ್ತಿದರಾರತಿಯಾ ೨೪

ಯೋಗಿ ನಿರಂಜನ ಶಿವಯೋಗಿ ನಿರಂಜನ ಶಿವ
ಯೋಗಿ ಸಿದ್ವೀರನೇ ಯತಿರಾಯನ ವರಪುತ್ರ ಪೇಳ್ದ ನೀ ಸ್ತುತಿಯ ೨೫

(ಸಂ. ೧೪೬)

[ಸೂಚನೆ: ಕೆಲವು ಛಂದೋ ದೋಷಗಳಿವೆ. ತಿದ್ದಿಲ್ಲ. ಸಂ.]

# ೨೧. ಕಹೇ ಸಿದ್ಧಲಿಂಗ

(ಹಿಂದಿ)

ತಖ್ತೆ ವಡವಾಳ ನಾಗಲಿಂಗದೇವರ ಶಿಷ್ಯ ಸಿದ್ಧಲಿಂಗದೇವರು ಹಿರಿಯ ಸುಲ್ತಾನ ಸಿಕಂದರ್ ಅರಸ ತಖ್ತೆ ಬಿಜಾಪೂರ, ಅರಸಂಗೆ ಬೋಧಿಸಿದ ಗುರುಬೋಧೆ ೨೫ ವಚನಗಳಿಂದ ಮುಕ್ತಿ ಪಥವನು ತೋರಿದುದು. ಮತ್ತು ಬಯಲ ಸಮಾಧಿಯಲ್ಲಿ ಬಯಲಾಗಿ ಹೋದುದು.

ಹಿಂದೂ ದೇಶದ ಧರ್ಮವುಳ್ಳವರಲ್ಲಿ ವೀರಶೈವರು ನಿರಾಕಾರ ತತ್ತ್ವವನ್ನೇ ನಂಬಿ ಆಚರಿಸುವರಲ್ಲಿ ಮುಖ್ಯರಾದವರು. ಮಹಮ್ಮದೀಯರೂ ನಿರಾಕಾರ ಮಹದೇವನನ್ನೇ (Allah) ನಂಬಿದವರು. ಆ ವಿಷಯದಲ್ಲಿ ಇವರ ಅಭಿಪ್ರಾಯಗಳು ಒಂದುಗೂಡುತ್ತವೆ. ಆದುದರಿಂದ ಶ್ರೀ ಸಿದ್ಧಲಿಂಗ ಗುರುವು ಉಪದೇಶಿಸಿದುದು ಬಿಜಾಪುರ ಸುಲ್ತಾನರಿಗೆ ಯೋಗ್ಯವಾಗಿ ಕಂಡಿರಬೇಕು.

ಒಂದು ಓಲೆಯ ಪ್ರತಿಯಲ್ಲಿ ಇದ್ದ ಈ ಪದ್ಯಗಳನ್ನು ಉದ್ಧರಿಸಿದಾಗ ಮೈಸೂರು ವಿಶ್ವವಿದ್ಯಾನಿಲಯದ ಹಿಂದೀ ಉಪಾಧ್ಯಾಯರಾದ ಮ. ರಾ. ನಾಗಪ್ಪನವರು ಎಂ.ಎ. ಇವರು ಬರೆಹದ ತಪ್ಪುಗಳನ್ನು ತಿದ್ದಿಕೊಟ್ಟುದಕ್ಕಾಗಿ ಅವರ ಉಪಕಾರವನ್ನು ಸ್ಮರಿಸುತ್ತೇನೆ- ಪ್ರಕಾಶಕ.

ಅನು ಹಾತ್ ಲಗಾ ರಹಮ್‌ಸೆ ಬಜಾವೆ
ಗಗನ ಮಹಾಲಮೆ ಬಜ್ಯೋತಿ ಜಗಾವೆ
ಜಹಾಚಂದ್ರ ಸೂರಜ ಬನಾಯಾ ಉಜಲಾ
ಶಹಾ ಸಿದ್ಧಲಿಂಗ ಸದಾಮತವಾಲಾ ೧

ಪೀರ್ ಮೇ ಮುಝೆ ಪ್ರೇಮ ಪ್ಯಾಲಾ ಪಿಲಾಯಾ
ಉಸ್ ಖೇಲಮೆ ಬಿಹಿಸ್ತ್ ಮೇವಾ ಖಿಲಾಯಾ
ದಿಯಾ ದಸ್ತ ಪಂಜಾಕಿಯಾ ಫೇರವಾಲಾ ೨

ನಹೀಸ್ಥಮೆ ನಹಿಹೈಂ ನ ದೇಖ ದಿಖಾಯಾ ನಿರಂಜನ್
ಗುರು ಪೀರ್ ಮೇರಾವಹಿ ಸೇಖ್ ನಸರುದ್ದೀನ್
ಪಲಕ್ ಮೆ ಅಲ್ಲಾಕೊ ಸೋಕಿಯಾ ದಿಲ್ ಯಾರೆ
ಕಹೆ ಸಿದ್ಧಲಿಂಗ ಕದಮ್‌ಮೇ ಪರವಾರಿ(ರೆ?) ೩

ಬಡಾ ಪೀರ್ ಮೇರಾ ಖಡಾ ಸಬ್‌ಹಿ ಜಾಗಹ್
ಜಹಾದೇಖ ತಹಾ ಹಕ್ ಭರಪೂರ್ ಲಾಗ್
ಲಗಾ ಇಸಕೊ ಮುಝೊ ಇಲಾಹಿ ನೂರ್ ನಾ
ಕಹೆ ಸಿದ್ಧಲಿಂಗ ಪೀರಕಾ ಜೋ ದಿವಾನಾ ೪

ದಿವಾನಾ ಹು ಅ ದಿನ್ ದೀದಾರ್ ಪಾಯಾ
ದುನಿಯಾ ಚೋಡ್‌ಕರ್ ನೂರ್ ಮೈನೆ ಸಮಾಯಾ
ದಿಲಾ ಜೊ ಮುಝೊ ಗೈಬ್‌ಕಿ ಬಾದ್‌ಶಾಹಿ
ಕಹೆ ಸಿದ್ಧಲಿಂಗ ಪೀರ್‌ಕೀ ಕಮಾಯೀ ೫

ನಜರ್ ಕೇ ಹುಜೂರ್ ನೂರ್‌ನೆ ಮಮತಾ ದಿಖಾಯಾ
ಝಲಕತಾ ಚಮಕತಾ ಚಸ್ತ್ರಂ ? ಚಿರಕಾಲ ಗಯಾ
ಜಗದ್ಗುರು ಜಾನತಾ ಪೀರ್ ಮೇರಾ
ಕಹೆ ಸಿದ್ಧಲಿಂಗ ಸುನೋ ದೀನ್ ದಾರಾ ೬

ದೀನಮೇ ದಿಸಪುತ್ರರ ಪ್ರೇಮ ಮೇರಾ
ಖುದಾಯೀ ಭರೆ ಕುಲ್ ಆಲಂ ಸಾರಾ
ಅಲ್ಲಾಕೆ ಆಲಂ ಮೈನೆ ಹೇರೀ ಜುದಾಯೀ
ಕಹೆ ಸಿದ್ಧಲಿಂಗ ಸುನೋ ಪೀರ್ ಭಾಈ ೭

ಸುನೋಯಾರ್ ದೀದಾರ್ ದಿವಾನ್ ಖಾಸಾ
ಸದಾಸನಂ ಮೆ ದೇಖತಾಹೈ ತಮಾಶಾ
ಕರೋ ಬಂದಗೀ ಗಂದಗೀ ದೂರ ಹೋವೇ
ಕಹೆ ಸಿದ್ಧಲಿಂಗ ಕುದರತ್ ಪಾವೆ ೮

ಖುದಾ ಛೋಡದೆ ಖುಸಾದೇಖ ದಿವಾನೀ
ದಿಯಾಸೋ ದರ್ದಬಾತ ಬಿಸರ ಜಾನೀ
ಹೌ ಹೇರಾ ಸಕಲ ತಸ್ಕರ ಬಂದೆ
ಕಹೆ ಸಿದ್ಧಲಿಂಗ ಮಿಾರ್ ಸಬ ದಂಧೇ ೯

ದುನಿಯಾ ಛೋಡದೇ ದೀನಸೆ ಕರದೋಸ್ತಿ
ತನುಮನ ಜೋ ಧನಕೀ ಛೋಡದೇ ಮಸ್ತೀ
ನ ಅಪಕೋ ಪಹಚಾನೆ ಆಪಲಿಯೇ ಇಲಾಹೀ
ಕಹೆ ಸಿದ್ಧಲಿಂಗ ಖುದಾಕೀ ಹೋದಾಯಿ ೧೦

ಪಿಕರ ಛೋಡ್ ಫಕೀರ್ ಹೋಯೆ ಜಿಕರ ಕರ್ ಖುದಾಕೀ
ಮಕರ ಮಾಫ್ ದುನಿಯಾ ಪನಸುನೋತಿಲ್ ಘಡೀಕೀ
ಶಕರಸೆ ಮಿಠ್ ಪೀರಕೇ ನಾಮಲೇನಾ
ಕಹೆ ಸಿದ್ಧಲಿಂಗ ಕಮಾಯೀ ಸೋಕಮಾನಾ ೧೧

ದರದ್ ದೂರಕರ್ ದಿಲ್ ದರವೇಶಾ ಹೋನಾ
ಹರದಮ್ ಕದಮ್ ಪೋ ಪಿಪನು? ಜೀವಲೆನಾ
ಹರಫ್ ಲೋ ಅವುಜುದಾ ಪತಖ್‌ಕಿಯಾ ಬನಾನಾ
ಕಹೆ ಸಿದ್ಧಲಿಂಗ ಪೀರಕೊ ಮಾನ ಮಾನನಾ ೧೨

ಪೀರ್‌ಶೇಖ್ ನಸರುದ್ದೀನ್ ಚಿರಾಗ್ ದೆಹಲೀ
ಕರಮತ ಕಾಫಿರವೋಃ ಪೋಕ ಪೋಲಿ ?
ಕಹೆ ಲಾಖ ಬಂದಗೀ ಜೋ ನವಾಜ್ ನಬೀನ
ಕಹೆ ಸಿದ್ಧಲಿಂಗ ರಹಮ್ ಕದಮ್ ಜಾನೇ ೧೩

ಕದಮ್ ಮೆ ಆದಮಿ ಖಾಕ್‌ಹು ಆ ಖಿವ್‌ಗಯಾ
ವಹೀ ಸೇಖ್ ಆವುಜುದಾ ಹುಜೂದ್ ಚಢಾಯಾ
ಹುವಾ ಜೋಗಿಯು ಜೂಗತ್ ಸುಜೋಗೀ ಜಾಗೆ
ಕಹೆ ಸಿದ್ಧಲಿಂಗ ತು ಪರದಾರ ಭಾಗೆ ೧೪

ಮದನ ಮಾರ್‌ಕೆ ಖೂಬ್ ನಕಿ ಖಾಲಾ ಕಾಫೇ
ಮನಮು ಬಂದಾ ಬಕರ ಅಲಾಪ್ ಧೋಫೇ
ಗಗನ ಗುಂಪಮೇ? ಮಗ್ನದಿಲ್ ಮೇರಾ
ಕಹೆ ಸಿದ್ಧಲಿಂಗ ಡರೆ ಜಲ್ವಾ ಫೇರಾ ೧೫

ಗುರುಜ್ಞಾನ ಕೀ ಗೂದಡೀ ಹಮೇ ಬನಾಯೆ
ವಪವನಕೀ? ಧಗ ಪಲಕ್ ಮೈನೆ ಭರ್ ಯೆ
ನಿರಾಲಂಬ (ರಳೋಲಿ) ಲಿಯಾ ಹಾಥ್ ಮೈನೇ
ಕಹೆ ಸಿದ್ಧಲಿಂಗ ಭಿಕಾರೀ ಕನಾನೆ ೧೬

ಭಿಕಾರೀ ಗುರುಕಾ ಭಜನ ಭೀಕ್ ಮಾಂಗೇ
ಅವಲ್ ಭೀಕ ದೇ ಧನೀ ಪೀರ್ ಭೂಜಂಗೆ
ದಿಯಾದಾನ ನಿದಾನ ಮಗ್ನ ಕಿಯಾ
ಕಹೆ ಸಿದ್ಧಲಿಂಗ ಸಹಜ ವೈನೆ ಸಮಾಯಾ ೧೭

ಸಹಾಜಾತಾ ಸಹಜಸಿದ್ಧಕಾ ದೂಧ ಪಾಯೆ
ಪಹಾ ತಿಲಗೆ ? ಡಂಗ್ ಹೋಕರ ರಹೆ
ಡಾಹಾಪುಂ ನಮನಿ ಗೈಬ್ ಡಂಕಾ ಬಜಾಯೀ
ಕಹೆ ಸಿದ್ಧಲಿಂಗ ಹಕೀ ಗುರೂಕೆ ಬಢಾಯೇ ೧೮

ಗುರುನಾಮು ಸೌಬತ್ ಉಸದಿನ ಜಾಗೆ
ಗುರುಕಾ ಚರಣ ಸದಾಲಕ್ಷ ಲಾಗೆ
ಫಕೀರ ಕಹೇ ದೇಖತಾ ಹೈ ಲಕ್ಷ ಯಾರಾ
ಕಹೆ ಸಿದ್ಧಲಿಂಗ ಹಕೀಕತ್ ಸಾರಾ ೧೯

ಗುರುಸಿದ್ಧ ನಾಗೇಶ ಸಾಹ್ಯಮೇರಾ
ಹರ್ ವಕ್ತ್ ಮಾಮಾರ್ ದರಬಾರ್ ತೇರಾ
ದಿಯಾ ಮಸಾರವೋ(ದೋ?) ಮುರ್ಷೀನೆ ಹಾಲ್ ಕಿಯಾ
ಕಹೆ ಸಿದ್ಧಲಿಂಗ ಖಜಾನಾ ಪುರಾಯಾ ೨೦

ಹಜೂರ್ ನಾಮ್ ಏಕ್ ಮಾಪ್ಲಲೊ ಇಲ್ಲಿಲ್ಲಾ
ಚಾರ್ ಕೋಹೀ ನಹೀ ತೇರೇ ಖುದಾಹಕ್ತಾಲಾ
ಯೇಖಸ ಸೋಮಿಲೋ ಫಿರಾಕ್ ದಸ್ತಗೀರಾ
ಕಹೆ ಸಿದ್ಧಲಿಂಗ ಕಹೆ ಯಾದಗಾರ ೨೧

ಕುರಾನ್ ಕಬಾಂಯೆ ಭೇದ ನಾರ(ಶ?) ರ್ಝೂಲೇ
ಗುರುಗೈಬ್ ಗಲೀಫ್ ವೋ ಪರಮಿಲೇ
ನಾ ಭೀಕ ದಾರೀ ನಾ ಬ್ರಹ್ಮಚಾರೀ
ಕಹೆ ಸಿದ್ಧಲಿಂಗ ಸಹೋ ಫರಬಾರೀ ೨೨

ನಹಿ ಭೀಕ ಮಾಂಗನಾ ವಕ್ತ್ ಮಾಯಾ
ನಹೋಂ ಶೂರಾ ಮತ್ ಆಲಂಕು ಜಾಗಾಯಾ
ನಾ ಹೋನಾ ರಂಗ್ ರೂಪ್ ವೋ ಜಾಗೋ
ಕಹೆ ಸಿದ್ಧಲಿಂಗ ಗುರುಕಾರ ಸಚ್ಚಾಕೋ ೨೩

ನಿರಾಕಾರ ಆಕಾರ ಕರತಾರ ಮಾಲಾ
ಖುಲ ನಹಿನ ಮೇ(ವೋ?) ಹಿತಹುವಾ
ನಿರಾಲಾ ಜಬಾಂಸೆ ಕಹೂ ಆಂಖೇ ಖೋಲಕೆ ದೇಖೊ
ಕಹೆ ಸಿದ್ಧಲಿಂಗ ಕದಮ್ ಮತ್ ಕಾಳ್ದ್(ಢ್) ವಾಕೊ ೨೪

ವಡವಾಳ ತಖ್ತೆ ಉಪರ ಬೈಠಾ ಬಢಾ
ಪೀರ್ ನಾಗೇಶವೋ ಪೀರ್ ಅಧಿಷ್ಠಾ
ಖಡಾ ತೋ ಖಡಾ ಗುರು ಗುಬ್ಬವಾನೀ
ಕಹೇ ಸಿದ್ಧಲಿಂಗ ನಿಃಶಬ್ದವಾನೀ ೨೫

ನಿಃಶಬ್ದಂ ಬ್ರಹ್ಮ ಉಚ್ಯತೇ

(ಸಂ. ೬೨-೬೩)

# ೬

### ಪತ್ರಿಕೋದ್ಯಮ (೧)

## ಲಿಂಗವಂತ ಸಮಾಜದ ಏಳಿಗೆ

**(ಸಲಹೆ, ಶ್ಲಾಘನೆ, ಭರ್ತ್ಸನೆ, ಖಂಡನೆ........ಇತ್ಯಾದಿ)**

[ಸದ್ಧರ್ಮದೀಪಿಕೆಯು ಮತ್ತು ಅದರ ಸಂಪಾದಕರಾಗಿದ್ದ ಶ್ರೀ ಚನ್ನಮಲ್ಲಿಕಾರ್ಜುನರ ಮುಖ್ಯೋದ್ದೇಶಗಳಲ್ಲಿ ಲಿಂಗವಂತ ಸಮಾಜದ ಸರ್ವಾಂಗೀಣ ಉನ್ನತಿಯ ಬಗೆಗೆ ಪ್ರಚಾರ ಮಾಡುವುದೂ, ಸಮಾಜಕ್ಕೆ ಸೂಕ್ತ ಸಲಹೆಗಳನ್ನು ಸಕಾಲಿಕವಾಗಿ ನಿರ್ಭಯದಿಂದಲೂ ನಿರ್ಮಾತ್ಸರ್ಯದಿಂದಲೂ ಕೊಡುತ್ತಿದ್ದುದೂ ಕಂಡುಬರುತ್ತದೆ. ಸಮಾಜದ ಲೋಪದೋಷಗಳನ್ನು ಎತ್ತಿತೋರಿಸಿ ಅವುಗಳ ಪರಿಹಾರಕ್ಕೆ ಸೂಕ್ತ ಮಾರ್ಗದರ್ಶನಮಾಡುತ್ತಿದ್ದರು. ಸಮಾಜದ ಆದರ್ಶ ವ್ಯಕ್ತಿಗಳ ಮತ್ತು ಸಮಾಜಾಭಿಮಾನಿಗಳ, ಶಿವಾನುಭವಿಗಳ ಜೀವನ ಚರಿತ್ರೆಗಳನ್ನು ಸಂಕ್ಷೇಪವಾಗಿ ತಮ್ಮ ಪತ್ರಿಕೆಯ ಮೂಲಕ ಪರಿಚಯ ಮಾಡಿಕೊಡುತ್ತಿದ್ದರು. ಈ ಸಂಬಂಧದ ಕೆಲವು ಬರವಣಿಗೆಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.]

# ವೀರಶೈವ ಮಹಾಸಭೆಯ ವಿಚಾರಗಳು

ಬೆಂಗಳೂರಿನಲ್ಲಿ ಮಹಾ ಸಭೆಯಾದಂದಿನಿಂದೀಚೆಗೆ ೪ ವರ್ಷಗಳಿಂದ ನಿಂತಿದ್ದು ಈ ವರ್ಷ (೧೯೩೩) ಮಹಾಸಭೆಯು ಧಾರವಾಡವಲ್ಲಿ ಆದದ್ದು ಸಂತೋಷಕರವಾದ ಕೆಲಸವು, ಶಿಕ್ಷಣಸಭಾ, ತರುಣರ ಪರಿಷತ್ತು, ಮಹಿಳಾ ಸಭಾ, ಪ್ರದರ್ಶನ, ಮುಂತಾದ ಕೆಲಸಗಳು ಈ ಮಹಾಸಭೆಯ ಅಂಗವಾಗಿ ನಡೆಯುವಂತೆ ಏರ್ಪಡಿಸಿದುದು ಹೊಸ ಮಾದರಿಯನ್ನು ತೋರಿಸಿಕೊಟ್ಟಂತಾಗಿದೆ.

ಮಹಾಸಭೆಗೆ ಹೋಗಿಬರುವ ಖರ್ಚು ಕೂಡಿ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳು ಸಮಾಜದಿಂದ ಖರ್ಚಾಗಿರಬಹುದು. ಇಷ್ಟು ಮೊಬಲಗೂ ಅಂದ ಚಂದಕ್ಕಾಗಿ ಖರ್ಚಾಗದೆ ಯೋಗ್ಯವಾದ ರೀತಿಯಲ್ಲಿ ಖರ್ಚಾಯಿತೆಂದು ಗೊತ್ತು ಮಾಡುವುದು ಒಳ್ಳೆಯದಲ್ಲವೆ ?

ಈ ಮಹಾಸಭೆಗಾಗಿ ಆದ ಜಮಾ ಖರ್ಚು ಈ ವರೆವಿಗೂ ಪ್ರಕಟವಾಗಲಿಲ್ಲ. ಮಹಾಸಭೆಯ ಚಿರಸ್ಥಾಯಿ ಫಂಡ್‌ಸಂಘದವರೂ ತಮ್ಮ ವಾರ್ಷಿಕ ಲೆಖ್ಖವನ್ನು ಪ್ರಕಟಿಸುತ್ತಿರುವುದಿಲ್ಲ. ಮಹಾಸಭೆಯ ಉತ್ಪತ್ತಿ ಎಷ್ಟು ಯಾವಯಾವ ಉದ್ದೇಶಕ್ಕಾಗಿ ಎಷ್ಟೆಷ್ಟು ಖರ್ಚುಮಾಡುವರು ಎಂಬುದು ತಿಳಿದೇ ಇಲ್ಲ. ಇವನ್ನೆಲ್ಲ ಸಮಾಜದವರಿಗೆ ತಿಳಿಯುವಂತೆ ಮಾಡುವುದರಿಂದ ಸಮಾಜದವರ ಅಭಿಮಾನವು ಹೆಚ್ಚಾಗುತ್ತದೆ.

(—ಸಂ. ೧೧-೧೨.)

# ವೀರಶೈವ ಮಹಾಸಭೆ ಮತ್ತು ಅಸ್ಪೃಶ್ಯತಾ ವಿಚಾರ

ಈ ಹಿಂದೆ ೧೧-೧೨ ನೆಯ ಸಂಚಿಕೆಯಲ್ಲಿ ೧೯೩೩ ನೆಯ ಮೇ ತಿಂಗಳಲ್ಲಿ ಧಾರವಾಡದಲ್ಲಿ ನಡೆದ ಮಹಾಸಭೆಯ ವಿಷಯವಾಗಿ ಬರೆದಾಗ ಮಹಾಸಭೆಯವರು ತಮ್ಮ ಆದಾಯ ಮತ್ತು ವೆಚ್ಚದ ಲೆಖ್ಖದ ವಿವರವನ್ನು ಪ್ರಕಟಿಸಬೇಕೆಂದು ವಿಜ್ಞಾಪಿಸಿದ್ದಕ್ಕೆ ಈ ವರೆವಿಗೂ ಗಮನಕೊಟ್ಟಂತೆ ತೋರಲಿಲ್ಲ. ಮಹಾಸಭೆಯು ವೀರಶೈವರೆಲ್ಲರ ಹಿತವನ್ನು ಸಾಧಿಸುವಂಥದ್ದಿದ್ದು ಅವರಲ್ಲಿನ ಹಣದ ವ್ಯವಸ್ಥೆಯ ವಿಷಯವನ್ನು ಪ್ರಕಟಿಸುತ್ತಾ ಬಂದರೆ ಜನಸಾಮಾನ್ಯದ ಪ್ರೀತಿಯು ಅದರ ಕಡೆಗೆ ಒಲಿಯುವುದಕ್ಕೆ ಹೆಚ್ಚು ಸಹಾಯಕವಾದೀತೆಂದು ಪುನಃ ವಿನಂತಿ.

ಈ ಮಹಾಸಭೆಯಲ್ಲಿ ಆದ ಕೆಲವು ನಿರ್ಣಯಗಳನ್ನು ತಿಳಿದಾಗಲೇ ಒಂದು ವಿಧವಾದ ಯೋಚನೆಯುಂಟಾಗಿದ್ದಿತ್ತು. ವೀರಶೈವರಲ್ಲಿ ಮುಂದಾಳುವಾದ ಮಹಾಸಭೆಯು ತನ್ನ ಓಂದೆ ಇರುವ ಮತೀಯರನ್ನು ಬಿಟ್ಟು ತಾನೇ ಮುಂದೆ ಹೋಗಿ, ಹಿಂದಿನ ಗಾಡಿಗಳನ್ನು ಹಿಂದೆ ಬಿಟ್ಟು ಮುಂದೆ ಹೋದ ಕಬ್ಬಿಣದ ಪಟ್ಟಿಯ ದಾರಿಯ (Railway) ಉಗಿಯ ಯಂತ್ರ (Engine) ದಂತೆ ಆಗುತ್ತಿರುವುದು ಎಂಬುದೇ ಆ ಯೋಚನೆಯು ಇಂಥಾ ಒಂದು ನಿರ್ಣಯವನ್ನು ಉದಾಹರಣೆಗೆ ತೆಗೆದುಕೊಳ್ಳೋಣ.

ವೀರಶೈವ ಮಹಾಸಭೆಯಲ್ಲಿ ಅಸ್ಪೃಶ್ಯತೆಯ ಸಂಬಂಧವಾಗಿ ಈ ಕೆಳಗೆ ಕಂಡಂತೆ ನಿರ್ಣಯವು ಮಾಡಲ್ಪಟ್ಟಿರುತ್ತದೆ.

"ಅಸ್ಪೃಶ್ಯತೆಯು ಸನಾತನ ಹಿಂದೂ ಧರ್ಮಕ್ಕೂ ವೀರಶೈವ ತತ್ವಗಳಿಗೂ ವಿರುದ್ಧವಾದುದೆಂದು ಈ ಮಹಾಸಭೆಯು ಅಭಿಪ್ರಾಯಪಡುತ್ತಾ ಅದನ್ನು ನಿರ್ಮೂಲಗೊಳಿಸಲು ಪ್ರತಿಯೊಬ್ಬ ವೀರಶೈವನೂ ಪ್ರಯತ್ನಪಡುವುದು ಅತ್ಯವಶ್ಯಕವಿರುವುದೆಂದು ಸುಚಿಸುತ್ತದೆ".

ಈ ನಿರ್ಣಯವು ಎಷ್ಟರ ಮಟ್ಟಿಗೆ ಆಚರಣೆಗೆ ಬರುವುದೋ ನೋಡಬೇಕೆಂದು ಈ ವರೆವಿಗೂ ಪರೀಕ್ಷಿಸಿದ್ದಾಯಿತು. ಸಮಾಜವೇ ಒಂದು ಕಡೆ ನಿರ್ಣಯವೇ ಒಂದು ಕಡೆ ಆಗಿದೆ. ಇದಕ್ಕೆ ನಿದರ್ಶನವಾಗಿ ಸುಮಾರು ೧-೨ ತಿಂಗಳ ಹಿಂದೆ ಹುಬ್ಬಳ್ಳಿಯ ತರುಣ ಕರ್ನಾಟಕದಲ್ಲಿ 'ತರುಣ ಹೃದಯದ ಕೊರಗು' ಎಂಬ ಲೇಖನದಲ್ಲಿ ಮ. ರಾ. ಪಾಟೀಲರವರು ಈ ಸಂಬಂಧದಲ್ಲಿ ಅನೇಕ ಪ್ರಶ್ನೆಗಳನ್ನು ಹಾಕಿರುತ್ತಾರೆ. ಸಮಾಜದ ಮುಂದಾಳುಗಳಿಗೆ ಅಂಗಲಾಚಿ ಬೇಡಿಕೊಂಡಿರುತ್ತಾರೆ. ಒಳಗೊಂದು ಹೊರಗೊಂದು ಎಣಿಸುವ ಸಮಾಜದ ಮುಖಂಡರಿಂದ ಸಂಶಯಕ್ಕೊಳಗಾಗಿರುವುದಾಗಿ ಹೇಳುತ್ತಾರೆ. ಮಹಾಸಭೆಯಿಂದ ಏನೂ ಪ್ರಯೋಜನವಾಗಲಿಲ್ಲವೆಂದು ಬಡಬಡಿಸಿರುತ್ತಾರೆ.

ವೀರಶೈವ ಮಹಾಸಭೆಯು ಮೇಲಿನ ನಿರ್ಣಯ ಮಾಡುವಾಗ ಈ ವಿಷಯುಗಳನ್ನೆಲ್ಲಾ ಆಲೋಚಿಸಿತೇನು ? ಇನ್ನೂ ಸುಮ್ಮನೆ ಇದ್ದರೆ ಸಮಾಜದಲ್ಲಿ ಅನೈಕ್ಯತಾಭಾವ ತೋರಬಹುದೆಂಬ ಶಂಕೆಯಿಂದ ಕೆಲವು ವಿಷಯುಗಳನ್ನು ಇಲ್ಲಿ ಹೇಳಬೇಕಾಗಿದೆ.

ಅಸ್ಪೃಶ್ಯತೆಯ ವಿಷಯದಲ್ಲಿ ವೀರಶೈವ ತತ್ವವು ಏನಿರುತ್ತದೆ ? ವೀರಶೈವರು ಶಿವಾದ್ವೈತವನ್ನು ನಂಬಿದವರು ಎಂದರೆ-ಎಲ್ಲ ಅದ್ವೈತಿಗಳಂತೆ ಏಕೋ ದೇವಸು ಎಂದರೆ ದೇವರು ಒಬ್ಬನೇ ಎಂತ ನಂಬತಕ್ಕವರು. ಆದರೆ ಕೆಲವರು ಅದ್ವೈತಿಗಳು ಹೇಳುವಂತೆ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ'—ಬ್ರಹ್ಮ ಒಂದೇ ನಿಜ ಜಗತ್ತು ಸುಳ್ಳು, ಎಂದು ಹೇಳತಕ್ಕವರಲ್ಲ. ಬ್ರಹ್ಮನು ನಿರಾಕಾರವೆಂದೂ ಅವನು ಸಾಕಾರವಾಗಿ ಜಗತ್ತಿನ ರೂಪನಾದನೆಂದೂ ಬ್ರಹ್ಮ, ಜಗತ್ತು ಎರಡೂ ಒಂದೇ ವಸ್ತುವಿನ ಬೇರೆ ಬೇರೆ ರೂಪಗಳೆಂದೂ ಹೇಳುವವರಾಗಿದ್ದಾರೆ.

ಈಗ ಶಾಸ್ತ್ರಕಾರರು ( Scientists ) ಆಕಾರವಿಲ್ಲವೆಂದು ನಂಬಿರುವ ಎರಡು ವಾಯುಗಳಿಂದ ನೀರು ಉಂಟಾಗಿ ಕಡೆಗೆ ಅದು ನೀರ್ಗಲ್ಲು ಆಗುತ್ತದೆ ಎಂದು ಸಿದ್ಧ ಮಾಡಿಕೊಂಡಿರುವುದರಿಂದ ಇದರಂತೆ ನಿರಾಕಾರ ವಸ್ತುವಿನಿಂದ ಸಾಕಾರರೂಪವಾದ ಜಗತ್ತಾಗಿದೆ ಎಂದುಹೇಳುವುದು ನಿಜ (ಸಹಜ)ವಾದ ಮಾತೆಂದು ಎಲ್ಲರೂ ಸುಲಭವಾಗಿ ತಿಳಿಯಬಹುದು.

ಹಿಂದೂ ಮತದಲ್ಲಿ ಇರುವ ಧರ್ಮಗಳ ಭಿನ್ನ ಭಿನ್ನ ಆಚರಣೆಗಳು ಆಯಾ ಧರ್ಮದವರು ತಿಳಿದಿರುವ ಮಹಾದೇವನ ವಿಚಾರ, ಜಗತ್ತಿನ ಸೃಷ್ಟಿಯ ವಿಚಾರ, ಇಂಥಾ ಕೆಲವು ಮೂಲ ತತ್ವಗಳನ್ನು ಅವಲಂಬಿಸಿಕೊಂಡು ಏರ್ಪಡಿಸಲ್ಪಟ್ಟಿವೆ. ಸತ್ಯವಾದ ಬ್ರಹ್ಮದ (ಮಹಾದೇವನ) ಜ್ಞಾನವನ್ನು ಹೊಂದಿ ಮಿಥ್ಯವಾದ ಜಗತ್ತಿನಲ್ಲಿ ಹೇಗೆ ವ್ಯವಹಾರ ಮಾಡಿದರೂ ಅಡ್ಡಿಯಿಲ್ಲವೆಂದು ಹೇಳುವ ಅದ್ವೈತಿಗಳ ಆಚರಣೆಯನ್ನು ವೀರಶೈವಾದ್ವೈತಿಗಳು ಒಪ್ಪುವದಿಲ್ಲ. ಇವರ ತತ್ವದ ಪ್ರಕಾರ ಜಗತ್ತನ್ನು, ತನ್ನನ್ನು, ಮಹಾದೇವನನ್ನು ಒಂದೇ ರೂಪವಾಗಿ ತಿಳಿದು ನಡೆಯಬೇಕಾದ್ದರಿಂದ ಅಂಥಾ ಆಚರಣೆಗೆ ಸಾಧನವಾದ ಲಿಂಗವನ್ನು ಧರಿಸಿದವನನ್ನು ಮಾತ್ರ ಸಮ್ಯಗ್ ಜ್ಞಾನಿ ಎಂದೂ, ಶಿವಾದ್ವೈತಿ ಎಂದೂ ಮರಳಿ ಜನ್ಮಕ್ಕೆ ಬಾರದವನು ಎಂದೂ ನಂಬುತ್ತಾರೆ. ಲಿಂಗಧಾರಿಗಳಾಗಿ ಈ ಜ್ಞಾನ ಮತ್ತು ಆಚರಣೆಗಳನ್ನಿಟ್ಟುಕೊಂಡಿರುವವರೆಲ್ಲರನ್ನು ಒಂದೇ ಎಂದು ನಂಬುತ್ತಾರೆ.

ಇಂಥಾ ಅದ್ವೈತವಲ್ಲದೆ ಬೇರೆ ಯಾವ ವಿಧವಾದ ಅದ್ವೈತಿಯಾಗಲೀ ದ್ವೈತಿಯಾಗಲೀ, ಮತದವನಾಗಲೀ, ಧರ್ಮಕ್ಕೆ ಸೇರದ (ಮಹಾದೇವನನ್ನು ತಿಳಿಯದ) ಮನುಷ್ಯನಾಗಲೀ ಮಹಾದೇವನ ಸ್ಥಿತಿಯನ್ನು ತಿಳಿದಿಲ್ಲವಾದ್ದರಿಂದ ಅವನು ಸತ್ತು ಮತ್ತೆ ಮತ್ತೆ ಹುಟ್ಟಿಬರುವನೆಂದು ಭಾವಿಸಿ ಅವನಿಗೆ ಭವಿ ಎಂದು ಕರೆಯುತ್ತಾರೆ.

ಈ ಕಾರಣದಿಂದಲೇ ಮಹಾನುಭಾವಿಯಾದ ಬಸವೇಶ್ವರನೂ ಕೂಡಾ ತನ್ನ ವಚನಗಳಲ್ಲಿ ಭವಿ ಭಕ್ತ ಎಂಬ ಎರಡು ಭೇದಗಳು ಇರುವವೆಂಬುದನ್ನು ಮತ್ತೆ

ಮತ್ತೆ ಆಡಿತೋರಿಸಿರುತ್ತಾನೆ. ಭವಿಗಳಾದರೂ ಹಾಗೆಯೇ ಇದ್ದು ಕೆಟ್ಟುಹೋಗಲಿ ಎಂಬುದಾಗಿ ಆತನ ಅಭಿಪ್ರಾಯವಿರಲಿಲ್ಲ. ಅವರೂ ಉತ್ತಮವಾದ ಜ್ಞಾನ ಮತ್ತು ಆಚರಣೆಗಳನ್ನು ಹೊಂದಿ ಧನ್ಯರಾಗಲೆಂದು ಬಹಳವಾಗಿ ಹಂಬಲಿಸಿದ್ದಾನೆ. ಹಾಗೆ ಹೊಂದದೆ ಇರತಕ್ಕವರಿಗಾಗಿ ವ್ಯಥೆಪಡುತ್ತಲೂ ಚಿಂತಿಸುತ್ತಲುಕಟ್ಟಕಡೆಯಲ್ಲಿ ಅಳುತ್ತಲೂ ಇದ್ದನೆಂಬುದು ಗೊತ್ತಾಗಿದೆ. ಈ ವಿಧವಾದ ವ್ಯಥೆಯನ್ನು ಕಂಡೇ ಬಸವೇಶ್ವರನು ವ್ಯಸನದಲ್ಲಿ ತನ್ನ ಆಯುಷ್ಯವನ್ನೆಲ್ಲಾ ಕಳೆದನೆಂದು ಕೆಲವರು ಭಾವಿಸುತ್ತಿದ್ದಾರೆ......

ಸಾಮಾನ್ಯವಾಗಿ ಮನುಷ್ಯನು ತಾನು ಇತರ ಪ್ರಾಣಿಗಳಂತೆ ವ್ಯವಹಾರ ಮಾಡುವ ವರೆವಿಗೂ ಅವನಿಗೆ ವರ್ಣಗಳಿರುತ್ತವೆ. ಆದರೆ 'ಅಹಂ ಬ್ರಹ್ಮಾಸ್ಮಿ' 'ಶಿವೋಹಂ' ಎಂಬ ತತ್ವವನ್ನು ಅವಲಂಬಿಸಿ ತಾನು ಶಿವ (ಬ್ರಹ್ಮ)ನಾದ ಮೇಲೆ ಅವನು ವರ್ಣಗಳ ಗೋಜು ಇಲ್ಲದೆ ಅತಿವರ್ಣಿಯಾಗಿ ಇದ್ದು, ಆ ಅತಿವರ್ಣಿಗೆ ಹೇಳಿರುವ ಧರ್ಮಗಳನ್ನು ಪಾಲಿಸುತ್ತಿರಬೇಕೆಂದು ಅನೇಕ ಉಪನಿಷತ್ತುಗಳು ಒಪ್ಪು ವಂತೆ ವೀರಶೈವರೂ ತಾವು ವರ್ಣಗಳ ಗೋಜಿನಲ್ಲಿ ಬೀಳದೆ ತಮ್ಮಂತೆ ಶಿವಜ್ಞಾನಿ ಗಳಾದವರನ್ನು ಎಲ್ಲರನ್ನು ಒಂದೆ ಸಮನಾಗಿ ಕಂಡು ಆಚರಿಸತಕ್ಕವರಾಗಿರುತ್ತಾರೆ. ಆದ್ದರಿಂದ ಅಂಥಾ ಅಸ್ಪೃಶ್ಯರನ್ನು ಶಿವಜ್ಞಾನಿಗಳನ್ನಾಗಿ ಮಾಡಿ ಅವರನ್ನು ವೀರಶೈವ ರನ್ನಾಗಿ ಮಾಡಿ ಬರೀ ಮುಟ್ಟುವುದೇಕೆ, ಕೂಡಿ ಉಣ್ಣುವುದೇ ಮೊದಲಾದ ಕೆಲಸ ಗಳನ್ನು ನಡೆಸಬಹುದು. ಇಂಥಾ ಉದಾರವಾದ ತತ್ವವನ್ನು ತಮ್ಮಲ್ಲಿ ಇಟ್ಟುಕೊಂಡು ಸಂಕುಚಿತ ಭಾವದಿಂದ ಬರೀ ಮುಟ್ಟುವುದಕ್ಕೆ ಮಾತ್ರ ಪ್ರಯತ್ನ ಮಾಡಿದವರಂತೆ ನಟಿಸಿ ಹೊರಗೆ ಅವರನ್ನು ದೂಡುವುದು ಯೋಗ್ಯವೇನು ?

ತಮ್ಮ ಉದಾರ ಧರ್ಮತತ್ವದ ಸ್ಥಿತಿಯನ್ನು ಆಲೋಚಿಸಿ ಮಹಾಸಭೆ ಯವರು ಅಸ್ಪೃಶ್ಯರಿಗೆ ತಕ್ಕ ಶಿವಜ್ಞಾನವನ್ನು ಕೊಟ್ಟು ಅವರನ್ನು ವೀರಶೈವರನ್ನಾಗಿ ಮಾಡುವುದಕ್ಕೆ ತಕ್ಕ ಯತ್ನವನ್ನು ಮಾಡಿದ್ದರೆ ತಮ್ಮ ಧರ್ಮದ ಸಹಜಭಾವವನ್ನು ಹೊರಪಡಿಸಿದಂತಾಗುತ್ತಿದ್ದಿತು. ಮಹಾತ್ಮಾ ಗಾಂಧಿಯವರು ಹೇಳಿದ್ದಕ್ಕಿಂತಲೂ ಒಂದು ಹೆಜ್ಜೆ ಮುಂದಕ್ಕೆ ಹೋದಂತೆ ಆಗುತ್ತಿದ್ದಿತು. ಮತ್ತು ಬಸವಣ್ಣನವರನ್ನು ನೆನೆಸುವಂತೆ ಆಗುತ್ತಿದ್ದಿತು.

ಮೊದಲು ಹೇಳಿದಂತೆ ಮ॥ ಪಾಟೀಲರವರು ತರುಣ ಕರ್ನಾಟಕದಲ್ಲಿ ಬರೆದ ಪ್ರಕಾರ ತತ್ತ್ವಕ್ಕೆ ವಿರೋಧವೆಂದು ಈಗ ಅನೇಕರು ಅಸ್ಪೃಶ್ಯರನ್ನು ಮುಟ್ಟುವಂತಿಲ್ಲ, ಇಲ್ಲವೇ ಅಸ್ಪೃಶ್ಯರು ಶುದ್ಧರಾಗಿ ವೀರಶೈವ ಧರ್ಮದಲ್ಲಿ ಕೂಡುವಂತೆ ಇಲ್ಲ. ಹೀಗೆ ನಿರ್ಣಯಗಳು ವ್ಯರ್ಥವಾಗದಂತೆ ಆಲೋಚನೆಯನ್ನು ಮಾಡಿ ಸಮಾಜವು ಸರ್ವ ಸಮಯಗಳಲ್ಲಿ ಅಭಿವೃದ್ಧಿ ಹೊಂದುವ ಧ್ಯೇಯವನ್ನಿಟ್ಟುಕೊಂಡು ಮಹಾಸಭೆಯವರು ನಿರ್ಣಯಗಳನ್ನು ಮಾಡಲಿ ಎಂಬುದೇ ಪ್ರಕೃತದ ಪರ್ಯಾಲೋಚನೆಯಾಗಿದೆ.

(ಸಂ. ೧೬–೧೯)

# ಹಿಂದೂಗಳೇ ಜಾಗೃತರಾಗಿರಿ

ಅಧ್ಯಕ್ಷರೇ ಮತ್ತು ಸಭ್ಯ ಮಹನೀಯರೆ,

ಹಿಂದೂಸ್ಥಾನದ ಮುಖ್ಯ ಧ್ಯೇಯವಾದ ಧರ್ಮದ ಪ್ರಸಾರದಲ್ಲಿ ಮುಖ್ಯವಾದ ಹಿಂದೂ ಮತವನ್ನು ಪ್ರಕಾಶಗೊಳಿಸುವ ಉದ್ದೇಶವು ಈ ಹಿಂದೂ ಮಹಾಸಭೆಯಲ್ಲಿ ಇರುವುದೆಂಬುದನ್ನು ತಿಳಿದು ನಾನು ಬಹಳವಾಗಿ ಸಂತೋಷಪಡುತ್ತೇನೆ.

ಧರ್ಮ ಶಬ್ದಕ್ಕೆ ಅನೇಕರು ಅನೇಕಾರ್ಥಗಳನ್ನು ಮಾಡುತ್ತಿದ್ದಾಗ್ಯೂ ಪೂರ್ವ ಮೀಮಾಂಸದಲ್ಲಿ ಹೇಳಲ್ಪಟ್ಟಂತೆ ಮಹಾದೇವನನ್ನು ಅನುಸರಿಸುವ ಮಾರ್ಗವೇ ಧರ್ಮ ಎಂಬುದನ್ನು ಎಲ್ಲಾ ಹಿಂದೂಗಳೂ ಒಪ್ಪುವುದರಲ್ಲಿ ಲೇಶವೂ ಅನುಮಾನವಿಲ್ಲವೆಂದು ಭಾವಿಸುತ್ತೇನೆ.

ಮಹಾದೇವನನ್ನು ತಿಳಿವುದು ಮತ್ತು ಅವನನ್ನು ಅನುಸರಿಸಿಕೊಂಡು ಹೋಗುವುದು ಈ ಜಗತ್ತಿನಲ್ಲಿ ಎಲ್ಲಾ ದೇಶಗಳವರೂ ಅಪೇಕ್ಷಿಸುವ ಕೆಲಸವಾಗಿದೆ. ಈ ದೆಸೆಯಿಂದಲೇ ಹಿಂದೂ ದೇಶವು ಪ್ರಪಂಚದಲ್ಲಿ ಅತ್ಯಂತ ನಾಗರಿಕತೆಯುಳ್ಳದೆಂದು ತಿಳಿಯಲ್ಪಡುವ ಕಾಲದಲ್ಲಿ ತನ್ನ ಧರ್ಮ ಜ್ಞಾನವು ಶ್ರೇಷ್ಠವೆಂಬುದನ್ನು ಇತರರಿಗೂ ತೋರಿಸಿಕೊಟ್ಟಿತ್ತೆಂಬುದನ್ನು ಬಹುಶಃ ಇಡೀ ಭೂಮಿಯೇ ಒಪ್ಪುತ್ತಾ ಇದೆ.

ಈ ಕಾಲದಲ್ಲಿ ಅಂತಹ ಜ್ಞಾನವು ಜಗತ್ತಿನಲ್ಲೆಲ್ಲಾ ಹರಡಲ್ಪಡಬೇಕಾದರೂ ಆಚರಿಸಲ್ಪಡಬೇಕಾದುದೂ ಅತ್ಯಂತ ಅವಶ್ಯ. ಹಿಂದೂ ಧರ್ಮದ ಪದ್ಧತಿಯನ್ನು ತಿಳಿಯಲಿಕ್ಕೆ ಹೋಗುವುದಾದರೆ ಅದು ಯಾವ ತರಹದ ಮನುಷ್ಯನನ್ನಾದರೂ ತನ್ನಲ್ಲಿ ಒಳಗೊಳ್ಳುವುದಕ್ಕೆ ಸಿದ್ಧವಾಗಿ ಇದೆ.

ಒಬ್ಬನು ಮಹಾದೇವನೇ ಇಲ್ಲ ಎಂಬ ನಾಸ್ತಿಕವಾದವನ್ನು ಹೊಂದಿದ್ದರೂ ಕೂಡಾ ಹಿಂದೂ ಧರ್ಮಕ್ಕೆ ಸಂಬಂಧಿಸಲ್ಪಟ್ಟ ಚಾರ್ವಾಕವಾಗಿ ಇರಬಹುದು. ಒಬ್ಬನು ನಾನೇ ಮಹಾದೇವ ಎಂದು ಭಾವಿಸುವುದಾದರೆ ಅವನೂ ಕೂಡ ಉತ್ತರ ಮೀಮಾಂಸ ಶಾಸ್ತ್ರದ ಅಧಿಕಾರಿಯಾಗಿ ಬ್ರಹ್ಮ ವಿದ್ಯೆಯನ್ನು ತಿಳಿದಾಚರಿಸುವವನಾಗಿ ಇರಬಹುದು.

ಇಂತಹ ಹಿಂದೂ ಮತವು ಇದೂವರೆವಿಗೆ ಇಡೀ ಪ್ರಪಂಚದಲ್ಲೆಲ್ಲಾ ವ್ಯಾಪಿಸಿ, ಜಗತ್ತೆಲ್ಲಾ ಹಿಂದೂ ಮತದಿಂದಲೇ ತುಂಬಿ ತುಳುಕಬಹುದಾಗಿದ್ದಿತು. ಹಿಂದೂ ಜನರ ಸಂಕುಚಿತ ದೃಷ್ಟಿಯ ವರ್ತನೆಯಿಂದ ಹಿಂದೂ ಧರ್ಮ ಶಾಸ್ತ್ರವು ಮೂಲೆಗೆ ಬೀಳುವಂತೆ ಆಗಿರುವುದಲ್ಲದೆ ಈಗಿನ ವಿದ್ಯಾವಂತರಾದ ಹಿಂದೀಯರು ಕೂಡಾ ಹಿಂದೂ ಧರ್ಮವು ಶ್ರೇಷ್ಠವಲ್ಲವೆಂದು ಹೇಳುವಂತೆ ಆಗಿದೆ. ಹಿಂದೂಗಳಲ್ಲಿ ಇರುವ ಶೂದ್ರನು ಬ್ರಾಹ್ಮಣನಾಗಲಿಕ್ಕೆ ಶಾಸ್ತ್ರವು ಒಪ್ಪಿಗೆ ಕೊಡುತ್ತಲಿದ್ದಾಗ್ಯೂ ಅದನ್ನನುಸರಿಸಿ ಶೂದ್ರನು ಬ್ರಾಹ್ಮಣನಾಗಲಿಕ್ಕೆ ಬರುವುದಿಲ್ಲ, ಎಂದು ಜಾತಿಗಳ ಕಟ್ಟುಗಳನ್ನು ಏರ್ಪಡಿಸಿಕೊಂಡುದೇ ಈ

ಅನರ್ಥಕ್ಕೆ ಕಾರಣವಾಗಿದೆ. ಸಾವಿರಾರು ವರ್ಷಗಳ ಪೂರ್ವದಲ್ಲಿ ಹೆಚ್ಚು ಖರ್ಚು ಉಳ್ಳ ರೀತಿಯಲ್ಲಿ ಯಜ್ಞಯಾಗಾದಿಗಳನ್ನು ಅನೇಕ ದೇವತೆಗಳ ಆಡಂಬರವ ಪೂಜೆಗಳನ್ನೂ ಶ್ರಾದ್ಧಾದಿ ಕರ್ಮಗಳನ್ನೂ ಹಿಂದೂಗಳು ನಿರ್ಬಂಧವಾಗಿ ಏರ್ಪಡಿಸಿಕೊಂಡುದೇ ಬೌದ್ಧ ಜೈನ ಮತಗಳು ಹಿಂದೂ ದೇಶದಲ್ಲಿ ವ್ಯಾಪಿಸಲಿಕ್ಕೆ ಅವಕಾಶವಾಯಿತು. ಇದಲ್ಲದೆ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಅಂಗೀಕರಿಸದೆ ಅವನ್ನು ಮೀರಿದ ಅತಿವರ್ಣವೆಂಬುದೊಂದು ಹಿಂದೂ ಮತದಲ್ಲಿಯೇ ಸೇರಿಕೊಂಡಿದೆ, ಇದರಂತೆಯೇ ಅತ್ಯಾಶ್ರಮವೆಂಬುದೂ ಒಂದಿದೆ. ಈ ಅತಿವರ್ಣಾಶ್ರಮಗಳನ್ನು ಅನುಸರಿಸುವವರಿಗೆ ಉಳಿದ ನಾಲ್ಕು ವರ್ಣಾಶ್ರಮಗಳ ತೊಂದರೆಯೇ ಇಲ್ಲ. ಇವರು ನಾರದ ಪರಿವ್ರಾಜಕ ಉಪನಿಷತ್ತು ಆರನೆಯ ಉಪದೇಶ ೧೦ ನೆಯ ಶ್ಲೋಕದಲ್ಲಿ ಹೇಳಿದಂತೆ.

ವರ್ಣಾಶ್ರಮಾದಯೋ ದೇಹೇ ಮಾಯಯಾಪರಿಕಲ್ಪಿತಾಃ

ತಾತ್ಪರ್ಯ–ವರ್ಣ ಆಶ್ರಮ ಮೊದಲಾದವುಗಳನ್ನು ದೇಹದಲ್ಲಿ ಮಾಯೆಯಿಂದ ಕಲ್ಪಿಸುತ್ತಾರೆ.

ಎಂಬುದಾಗಿಯೂ, ಮೈತ್ರೇಯಿಉಪನಿಷತ್ ೧ನೆಯ ಅಧ್ಯಾಯ ೧೦ನೆಯ ಶ್ಲೋಕದಲ್ಲಿ ಹೇಳಿದಂತೆ.

ವರ್ಣಾಶ್ರಮಾಚಾರಯುತಾ ವಿಮೂಢಾಃ ಕರ್ಮಾನು ಸಾರೇಣ ಫಲಂ ಲಭಂತೇ
ವರ್ಣಾದಿ ಧರ್ಮಂ ಹಿ ಪರಿತ್ಯಜಂತಃ ಸ್ವಾನಂದ ತೃಪ್ತಾಃ ಪುರುಷಾ ಭವಂತಿ

ತಾತ್ಪರ್ಯ– ವರ್ಣಾಶ್ರಮಾಚಾರಗಳಿಂದ ಕೂಡಿದ ಮೂಢರು ತಮ್ಮ ಕರ್ಮಕ್ಕೆ ಸರಿಯಾದ ಫಲವನ್ನು ಹೊಂದುತ್ತಾರೆ. ವರ್ಣಾಶ್ರಮಾದಿ ಧರ್ಮವನ್ನು ಬಿಡುವವರು ತಮ್ಮ (ಆತ್ಮನ) ಆನಂದವಲ್ಲಿ ತೃಪ್ತರಾದ ಪುರುಷರು ಆಗುತ್ತಾರೆ.

ಎಂಬುದಾಗಿಯೂ ಒಪ್ಪತಕ್ಕವರು ಆಗಿದ್ದಾರೆ.

ಹೀಗೆ ಅತಿವರ್ಣಾಶ್ರಮಿಯಾಗಿ ಇರುವುದಕ್ಕೆ ನಿರಾಕಾರ ವಸ್ತುವನ್ನು ಪೂಜ್ಯವನ್ನಾಗಿಯೂ ಆತ್ಮರೂಪವಾಗಿಯೂ ತಿಳಿಯುವುದೇ ಮುಖ್ಯ ಕಾರಣವಾಗಿದೆ.

ಇಂಥ ಅತಿವರ್ಣಾಶ್ರಮವನ್ನು ಹಿಂದೂಗಳು ಪ್ರಚಾರಕ್ಕೆ ತರುವುದನ್ನು ಬಿಟ್ಟಿದ್ದರ ದೆಸೆಯಿಂದಲೇ ಹಿಂದೂಗಳು ಬಹಳ ಹಿಂದೆ ಬೀಳುತ್ತಾ ಇದ್ದಾರೆ. ನಿರಾಕಾರನಾದ ಮಹಾದೇವನನ್ನು ನಂಬಿದವನಿಗೆ ಬ್ರಾಹ್ಮಣಾದಿ ವರ್ಣ ಭೇದಗಳ ಗೋಜೇ ಇಲ್ಲ. ಆತನು ಸ್ವತಂತ್ರವಾಗಿ ಇರಲಿಕ್ಕೆ ಅವಕಾಶವಿದೆ ಈ ಅತಿವರ್ಣಾಶ್ರಮದ ಪ್ರಚಾರವು ಹೆಚ್ಚಾದ ಹಾಗೆಲ್ಲಾ ಹಿಂದೂ ಮತದ ಕಡೆಗೆ ಜನದ ಒಲುಮೆಯು ಹೆಚ್ಚಾಗಿ ಆಗುವುದರಲ್ಲಿ ಏನು ಸಂಶಯವಿಲ್ಲ.

ಈ ಅತಿವರ್ಣಾಶ್ರಮವು ಶ್ರೇಷ್ಠವು, ಇದು ಬ್ರಾಹ್ಮಣಾದಿ ವರ್ಣಗಳನ್ನು ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಮೀರಿದುದು. ಎಂಬುದಕ್ಕೆ ಕೆಳಗೆ ಕಂಡ ಉದಾಹರಣೆಗಳೂ ಇವೆ.



ಶ್ರೀ ಚನ್ನಮಲ್ಲಿಕಾರ್ಜುನರಿಗೆ ಜನ್ಮವಿತ್ತ ಅವರ ಪೂರ್ವಜರ ಹಳೆಯ ಮನೆ
ಶಿರಾಳಕೊಪ್ಪ.

ಯಂ ಶರೀರೇಂದ್ರಿಯಾದಿ ಭ್ಯೋಃ ವಿಹೀನಂ ಸರ್ವಸಾಕ್ಷಿಣಂ
ಪಾರಮಾರ್ಥಿಕ ವಿಜ್ಞಾನಂ ಸುಖಾತ್ಮಾನಂ ಸ್ವಯಂ ಪ್ರಭಂ
ಪರತತ್ವಂ ವಿಜಾಥಾತಿ ಸೋತಿ ವರ್ಣಾಶ್ರಮೀ ಭವೇತ್
.....................................................
ಇತಿಯೋ ವೇದ ವೇದಾಂತೈಸ್ಸೋತಿ ವರ್ಣಾಶ್ರಮಿ ಭವೇತ್ ।
ಯಸ್ಯ ವರ್ಣಾಶ್ರಮಾ ಚಾರೋ ಗಲಿತಂ ಸ್ವಾತ್ಮದರ್ಶನಾತ್
ಸವರ್ಣಾನಾಶ್ರಮಾನ್ ಸರ್ವಾನ್ ಅತೀತ್ಯ ಸ್ವಾತ್ಮನಿ ಸ್ಥಿತೇಃ ।
ಯೋತೀತ್ಯ ಸ್ವಾಶ್ರಮಾನ್ ವರ್ಣಾನ್ ಆತ್ಮನ್ಯೇವ ಸ್ಥಿತಃ ಪುಮಾನ್
ಸೋತಿ ವರ್ಣಾಶ್ರಮಿ ಪ್ರೋಕ್ತಃ ಸರ್ವವೇದಾರ್ಥ ವೇದಿಭಿಃ
ತಸ್ಮಾ ದನ್ಯಗತಾ ವರ್ಣಾ ಆಶ್ರಮಾ ಅಪಿ ನಾರದ
ಆತ್ಮನ್ಯಾರೋ ಪಿತಾಃ ಸರ್ವೇ ಭ್ರಾತ್ಯಾ ತೇನಾತ್ಮ ವೇದಿನಾ
ನವಿಧಿನಗನಿಷೇಧಶ್ಚ ನವಜಾಗ್ಯ ವರ್ಜ್ಯ ಕಲ್ಪನಾ
ಬ್ರಹ್ಮ ವಿಜ್ಞಾನಿ ನಾಮಸ್ತಿ ತಥಾ ನಾನ್ಯಶ್ಚ ನಾರದ

ತಾತ್ಪರ್ಯ: ಶರೀರ ಇಂದ್ರಿಯಗಳಿಲ್ಲದವನಾಗಿ, ಸರ್ವವನ್ನೂ ನೋಡತಕ್ಕವನಾಗಿ ಪರಮಾರ್ಥದಿಂದ ತಿಳಿಯಲ್ಪಡತಕ್ಕವನಾಗಿ, ಸುಖಾತ್ಮನಾಗಿ, ತಾನಾಗಿ ಬೆಳಗತಕ್ಕವನಾಗಿ ಇರುವ ಪರತತ್ವವನ್ನು ಯಾವನು ತಿಳಿಯುತ್ತಾನೆಯೋ ಅವನು ಅತಿವರ್ಣಿ, ಅತ್ಯಾ ಶ್ರಮಿ ಆಗಿರುತ್ತಾನೆ...........ವೇದಾಂತಗಳಿಂದ ಹೀಗೆ ಯಾರು ತಿಳಿಯುತ್ತಾರೋ ಅವರು ಅತಿವರ್ಣಾಶ್ರಮಿಗಳು ಆಗಿರುತ್ತಾರೆ. ಯಾವನಿಗೆ ತನ್ನ ಆತ್ಮ (ತನ್ನಲ್ಲಿ ಶಿವರೂಪ) ದರ್ಶನದಿಂದ ವರ್ಣಾಶ್ರಮಾಚಾರಗಳು ಕಳಚಿ ಹೋಗುತ್ತವೆಯೋ ಅವನು ಎಲ್ಲಾ ವರ್ಣಗಳನ್ನೂ ಆಶ್ರಮಗಳನ್ನೂ ಮೀರಿ ತನ್ನ ಆತ್ಮನಲ್ಲಿಯೇ (ಶಿವರೂಪ ದಲ್ಲಿಯೇ) ಇರತಕ್ಕವನು. ಯಾವನು ತನ್ನ ಆಶ್ರಮಗಳನ್ನೂ ವರ್ಣಗಳನ್ನೂ ಮೀರಿ ತನ್ನ ಆತ್ಮನಲ್ಲಿಯೇ (ತನ್ನಲ್ಲಿಯೇ=ಬ್ರಹ್ಮನಲ್ಲಿಯೇ=ಶಿವನಲ್ಲಿಯೆ) ಕೂಡಿರುವನಾಗಿ ಶ್ರೇಷ್ಠನಾಗಿರುವನೋ ಅವನು ಸಮಸ್ತ ವೇದಗಳ ಅರ್ಥವನ್ನು ತಿಳಿದವರಿಂದ ಅತಿ ವರ್ಣಾಶ್ರಮಿ ಎಂದು ಹೇಳಲ್ಪಡುತ್ತಾನೆ. ಆದ್ದರಿಂದ ಆತ್ಮನಿಗಿಂತ ಬೇರೆಯಾಗಿ ಇರುವ ವರ್ಣಗಳಾಗಲೀ ಆಶ್ರಮಗಳಾಗಲೀ ಆತ್ಮನಲ್ಲಿ (ಮನುಷ್ಯನಲ್ಲಿ) ಭ್ರಾಂತಿಯಿಂದ ಆರೋಪಿಸಲ್ಪಟ್ಟಿವೆ. ಎಂದು ಆತ್ಮವೇದಿಗಳು (ಸ್ವಸ್ವರೂಪ ಬ್ರಹ್ಮಜ್ಞಾನಿಗಳು= ಅಂಗಲಿಂಗ ಸಾಮರಸ್ಯವುಳ್ಳವರು) ತಿಳಿಯುತ್ತಾರೆ. ಇಂತಹ ಬ್ರಹ್ಮ ಜ್ಞಾನಿಗಳಿಗೆ ವಿಧಿ, ನಿಷೇಧ, ವರ್ಜ್ಯ (ಬಿಡಲ್ಪಡತಕ್ಕದ್ದು) ಅವರ್ಜ್ಯ, ಇದರಂತೆ ಉಳಿದ ಯಾವುದಾದರೂ ಕಲ್ಪನೆಯು ಇರುವುದಿಲ್ಲ ನಾರದನೇ ಕೇಳು. (ಹೀಗೆ ನಾರದ ಪರಿವ್ರಾಜಕ ಉಪನಿಷತ್ತಿನಲ್ಲಿ ಹೇಳಿದೆ)

ಈ ಅತಿವರ್ಣಾಶ್ರಮವು ಶ್ರೇಷ್ಠವೆಂಬುದನ್ನೇ ಕರ್ನಾಟಕದಲ್ಲಿ ಪ್ರಸಿದ್ಧನಾದ ಬಸವೇಶ್ವರನು ೧೨ನೆಯ ಶತಮಾನದಲ್ಲಿ ಬೋಧಿಸಿದನು. ಈ ಅತಿವರ್ಣವು

ಎಲ್ಲರನ್ನೂ ಸಮಾನ ಸ್ಥಿತಿಯಲ್ಲಿ ಇರಿಸುವುದು. ಅತಿವರ್ಣವೆಂದರೆ ವರ್ಣಗಳನ್ನೊಲ್ಲದೆ ಮನಸ್ಸು ಬಂದ ಹಾಗೆ ಇರುವುದಲ್ಲ. ಇದಕ್ಕೂ ಕೆಲವು ಲಕ್ಷಣಗಳಿವೆ. ಈ ಲಕ್ಷಣಗಳು ಸಂಸ್ಕಾರದಿಂದ ಆಗಬೇಕು.

ಈಗ ಬ್ರಾಹ್ಮಣ ಮೊದಲಾದ ನಾಲ್ಕು ವರ್ಣಗಳನ್ನು ಬಿಟ್ಟುಬಿಡಬೇಕೆಂದು ಇವು ರಾಷ್ಟ್ರದ ಪ್ರಗತಿಗೆ ಹಾನಿಕಾರಕವೆಂದೂ ಈ ನಾಲ್ಕು ವರ್ಣಗಳು ಈಗ ಕ್ರಮವಾಗಿ ನಡೆಯುತ್ತಾ ಇಲ್ಲವೆಂತಲೂ ರಾಷ್ಟ್ರದ ಮುಂದಾಳುಗಳಾದ ಮೋಹನದಾಸ್ ಕರಮಚಂದ್ ಗಾಂಧೀಜಿಯವರು ೧೬-೧೧-೩೫ನೆಯ ಹರಿಜನಪತ್ರಿಕೆಯಲ್ಲಿ ಬರೆದಿರುತ್ತಾರೆ. ಆದರೆ ಹೀಗೆ ವರ್ಣಗಳನ್ನು ಬಿಡುವಕಾಲದಲ್ಲಿಯಾದರೂ ಈ ಅತಿವರ್ಣವನ್ನು ಜನರು ಮನಃಪೂರ್ತಿಯಾಗಿ ಆಲೋಚಿಸಿ ಹೊಂದುವುದು ಒಳ್ಳೆಯದು.

ಬಸವೇಶ್ವರನು ಬೋಧಿಸಿದ ಅತಿವರ್ಣಕ್ಕೆ 'ವೀರಶೈವ' ಎಂದು ಕರೆಯುತ್ತಾರೆ. ಇದರಲ್ಲಿ ಬ್ರಾಹ್ಮಣರು ಮೊದಲಾಗಿ ಎಲ್ಲಾ ವರ್ಣದವರೂ ಸೇರಬಹುದು. ಎಲ್ಲರೂ ಒಂದೇ ಸಮಾನರು ಎಂಬ ಭಾವನೆಯಿಂದ ನಡೆದುಕೊಳ್ಳಬಹುದು. ಸೂತಕಗಳು ಶ್ರಾದ್ಧಗಳು ಇವುಗಳ ಬಾಧೆ ಇಲ್ಲ. ಯಜ್ಞಯಾಗಾದಿಗಳನ್ನು ಮಾಡಬೇಕಾದುದಿಲ್ಲ. ಶ್ರೀ ಅರವಿಂದ ಘೋಷರವರು ವಿವರಿಸಿದ ಪೂರ್ಣಯೋಗದ ಅಭಿಪ್ರಾಯವು ಇದರಲ್ಲಿ ನೆಲೆಗೊಂಡಿದೆ.

ಇದು 'ಅಹಂ ಬ್ರಹ್ಮಾಸ್ಮಿ' 'ಸೋಹಂ' 'ಶಿವೋಹಂ' ಎಂಬ ಅಭಿಪ್ರಾಯವನ್ನು ಅನುಸರಿಸಿಕೊಂಡು ನಡೆಯುವ ಪದ್ಧತಿಯುಳ್ಳದು. ಮನುಷ್ಯನು ಹೀಗೆ ಹೇಳಿಕೊಂಡು ನಡೆವುದಕ್ಕೆ ಬರುತ್ತದೆ. ಹಿಂದೆ ಹೀಗೆ ನಡೆದಿದ್ದಾರೆ, ಕನ್ನಡದಲ್ಲಿ ಇರುವ ಬಸವೇಶ್ವರ ವಚನ ಮೊದಲಾದ ಶರಣರ ವಚನಗಳನ್ನು ಓದುವುದರಿಂದ ಈ ವಿಷಯಗಳು ಚನ್ನಾಗಿ ಮನನವಾಗುತ್ತವೆ.

ಹಿಂದೂ ಮಹಾಸಭೆಯವರು ಈಗ ಮಾಡತಕ್ಕ ಕೆಲಸಗಳು ಬಹಳವಾಗಿ ಇವೆ. ಹಾಗೆ ಮಾಡುವುದರಿಂದ ಹಿಂದೂ ಮತವು ಜಗತ್ತಿನೊಳಗೆಲ್ಲಾ ವ್ಯಾಪಿಸಬಹುದಾಗಿದೆ.

೧. ಅತಿ ವರ್ಣವನ್ನು ಪ್ರಚಾರ ಮಾಡುವುದು.

೨. ಹಿಂದೂ ಧರ್ಮದ ಎಲ್ಲಾ ಭಾಗಗಳನ್ನೂ ಬೋಧಿಸತಕ್ಕ ಒಂದು ಶಾಲೆಯನ್ನು ಏರ್ಪಡಿಸುವುದು.

೩. ಹಿಂದೂ ಧರ್ಮವು ಪ್ರಪಂಚದ ಜನರಿಗೆಲ್ಲಾ ಆಕರ್ಷಕವಾಗುವಂತೆ ಅದರ ತತ್ವಗಳನ್ನು ಪ್ರಚಾರಪಡಿಸುವುದು.

೪. ಆರ್ಯಸಮಾಜದವರು ಏರ್ಪಡಿಸಿ ಇರುವಂತೆ ಜಗತ್ತಿನ ನಾನಾ ಕಡೆಗಳಲ್ಲಿ ಹಿಂದೂ ಮತದ ಶಾಖೆಗಳನ್ನು ಏರ್ಪಡಿಸುವುದು.

೫. ಮೊದಲಿನ ನಾಲ್ಕು ವರ್ಣಾಶ್ರಮಗಳ ಕಟ್ಟುಗಳನ್ನು ಸಡಿಲಮಾಡಿ ತಕ್ಕ ಯೋಗ್ಯತೆಯುಳ್ಳವರು ಬೇಕಾದವರ್ಣದಲ್ಲಿ ಇರಬಹುದೆಂದು ಗೊತ್ತುಮಾಡು

ವುದು. ಯಾವನೊಬ್ಬ ಮನುಷ್ಯನಿಗಾದರೂ ಇದು ಮುಕ್ತದ್ವಾರ (ತೆರೆಯಲ್ಪಟ್ಟ ಬಾಗಿಲು) ಉಳ್ಳದು ಎಂಬವನ್ನು ಪ್ರಚಾರಪಡಿಸುವುದು.

೬. ಮುಖ್ಯವಾಗಿ ದ್ವೈತ, ಅದ್ವೈತ, ಈ ಎರಡು ಸಂಗಡಗಳಲ್ಲಿ ಎಲ್ಲ ಹಿಂದೂಗಳೂ ಸೇರುವಂತೆ ಏರ್ಪಡಿಸುವುದು.

೭. ಮಾಂಸಾಹಾರಿಗಳು, ಶಾಕಾಹಾರಿಗಳು ಎಂಬ ಎರಡು ಭಾಗಗಳು ಇರುವಂತೆ ಏರ್ಪಡಿಸುವುದು.

೮. ಹಿಂದೂಶಾಸ್ತ್ರವು ಒಂದೇ ಗುರಿಯನ್ನು ಉಳ್ಳದಾಗಿದೆ, ಎಂಬುದನ್ನೂ ಕೊನೆಯ ಗುರಿಗೆ ಹೋಗಲಿಕ್ಕೆ ಉಳಿದೆಲ್ಲವುಗಳೂ ಮೆಟ್ಟಲುಗಳು ಎಂಬುದನ್ನು ತೋರಿಸಿಕೊಡುವುದು

೯. ಒಬ್ಬರಿಗೊಬ್ಬರು ಭಿನ್ನವೆಂದು ತಿಳಿಯದೆ ಎಲ್ಲರೂ ಒಂದೇ ದಾರಿಯಲ್ಲಿ ಒಂದೇ ಗುರಿಗೆ ನಡೆಯುತ್ತಾ ಇದ್ದೇವೆ ಎಂಬ ಒಮ್ಮುಖದ ಅಭಿಪ್ರಾಯವನ್ನು ಹಿಂದೂಗಳಲ್ಲಿ ಉಂಟುಮಾಡುವುದು.

ಇವುಗಳೆಲ್ಲವನ್ನೂ ಹಿಂದೂ ಮಹಾಸಭೆಯವರು ಆಲೋಚಿಸಿ ಕಾರ್ಯ ನಡೆಸುವವರಾಗಬೇಕು.

ಈ ಅಭಿಪ್ರಾಯವನ್ನು ಮುಂದಿಟ್ಟುಕೊಂಡು ಹಿಂದೂ ಸಮಾಜಸಂಸ್ಕರಣವನ್ನು ಮಾಡಬೇಕೆಂದು ತಮ್ಮೆಲ್ಲರನ್ನು ಅತಿವಿನಯದಿಂದ ಬೇಡುತ್ತೇನೆ.

ತಮ್ಮೆಲ್ಲರ ವಿಧೇಯನಾದ
ಪ್ರಕಾಶಕ, ಸದ್ಧರ್ಮದೀಪಿಕೆ ಹಾವೇರಿ

(೧೯೩೫ ರ ಡಿಸೆಂಬರ್ ತಿಂಗಳಲ್ಲಿ ಪುಣೆ ನಗರದಲ್ಲಿ ಸೇರಿದ ಹಿಂದೂ ಮಹಾಸಭೆಯ ಅಧ್ಯಕ್ಷರಿಗೆ ಬರೆದ ಇಂಗ್ಲಿಷ್ ಲೇಖನದ ಮೂಲ)

(—ಸಂ. ೩೩–೩೪)

# ಸಾ. ದಿ. ಬ. ಎಸ್. ಟಿ. ಕಂಬಳಿ ಅವರ ಧರ್ಮ ಜಾಗೃತಿ

ಸಾವುದಾರ್ ದಿವಾನ್ ಬಹದ್ದೂರ್ ಸಿದ್ದಪ್ಪ ತೋಟಪ್ಪ ಕಂಬಳಿ ಅವರು ರಾಯಚೂರಿನಲ್ಲಿ ನಡೆದ ೧೨ನೆಯ ವೀರಶೈವ ಮಹಾಸಭೆಯಲ್ಲಿ ೨-೬-೩೬ರಲ್ಲಿ ಮಾಡಿದ ಭಾಷಣದಲ್ಲಿ ವೀರಶೈವರು "ಅತಿವರ್ಣಿಗಳು ಅತ್ಯಾಶ್ರಮಿಗಳು" ಎಂಬುದನ್ನು ಗ್ರಂಥಗಳ ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಿ ಇರುವುದು, ವೀರಶೈವ ಸಮಾಜಕ್ಕೇ ಅಲ್ಲದೆ ಇಡೀ ಹಿಂದೂ ಧರ್ಮಕ್ಕೇನೆ ಆನಂದವನ್ನು ಕೊಡತಕ್ಕ ಸಂಗತಿಯಾಗಿದೆ.

ಉತ್ತರ ಹಿಂದೂ ದೇಶದಲ್ಲಿ ೫೦-೬೦ ವರ್ಷಗಳಿಂದ ಧರ್ಮಸಂಬಂಧದ ಸಭೆಗಳು ಅನೇಕವಾಗಿ ಆಗಿರುತ್ತವೆ. ಅದರಲ್ಲಿ ಒಬ್ಬ ಮಹಾರಾಯನಾದರೂ ಹಿಂದೂಗಳಲ್ಲಿ ಅತಿವರ್ಣ ಉಂಟೆಂಬುದನ್ನು ಹೇಳಿಲ್ಲ.

೧೯೩೫ ರಲ್ಲಿ ನಡೆದ ಹಿಂದೂ ಮಹಾಸಭೆಯಲ್ಲಿ ವರ್ಣಸಂಬಂಧದ ತೊಡಕುಗಳನ್ನು ನಿವಾರಣೆ ಮಾಡಬೇಕೆಂದು ಮಿ. ಜಯಕರ್ ಅವರು ಕೇಳಿದ್ದಕ್ಕೆ ವರ್ಣಗಳ ಸಂಬಂಧದಲ್ಲಿ ಹೆಚ್ಚು ಕಡಿಮೆ ಮಾಡುವುದಕ್ಕೆ ಹಿಂದೂ ಮಹಾಸಭೆಗೆ ಅಧಿಕಾರ (Scope) ಇಲ್ಲವೆಂದೂ, ಚಾತುರ್ವಣ್ಯವೇ ಹಿಂದೂಗಳ ಮುಖ್ಯ ನಡತೆ ಎಂದೂ ಪಂಡಿತ ಮದನಮೋಹನ ಮಾಳವೀಯ ಅವರು ಹೇಳಿಬಿಟ್ಟರು.

ಸ್ಮೃತಿಗಳನ್ನು ನೋಡಿದರೆ ಬ್ರಾಹ್ಮಣನು ಕಾಲಕ್ಕೆ ತಕ್ಕಂತೆ ನಾಲ್ಕು ವರ್ಣಗಳಲ್ಲಿ ಏನಾದರೂ ಬದಲಾವಣೆ ಮಾಡಲಿಕ್ಕೆ ಅವನಿಗೆ ಸಂಪೂರ್ಣ ಅಧಿಕಾರವು ಕೊಡಲ್ಪಟ್ಟಿದೆ, ಎಂದು ತಿಳಿಯುತ್ತದೆ.

ಹೀಗಿದ್ದು ಹಿಂದೂಗಳಲ್ಲಿ ಬ್ರಾಹ್ಮಣ ವರ್ಣದಲ್ಲಿ ಮುಖ್ಯರೆನಿಸಿಕೊಂಡು ಮುಂದಾಳುಗಳಾದ ಪಂಡಿತ ಮದನ ಮೋಹನ ಮಾಳವೀಯರವರು ಅವಕಾಶವಿಲ್ಲವೆಂದು ಹೇಳಿದುದು ಸಖೇದಾಶ್ಚರ್ಯವನ್ನುಂಟು ಮಾಡತಕ್ಕ ಸಂಗತಿಯಾಗಿದೆ.

ಈ ನಾಲ್ಕು ವರ್ಣಗಳ ಮಾತು ಹಾಗಿರಲಿ ಅತಿವರ್ಣವೆಂಬುದು ಹಿಂದೂಗಳ ಉದಾರ ಭಾವವನ್ನು ಮುಂದಿಡುವ ಮುಖ್ಯವರ್ಣ.

ಈ ಅತಿವರ್ಣವನ್ನು ಅನುಸರಿಸಿದವರು ಎಲ್ಲರೂ ಸಮಾನರು. ಅತ್ಯಾಶ್ರಮವನ್ನು ಅನುಸರಿಸಿದವರು ಯಾವ ಕೆಲಸವನ್ನಾದರೂ ಮಾಡಿಕೊಂಡು ಮಹಾದೇವನ ಅನುಭಾವಿಯಾಗಿ ಇರತಕ್ಕವರು. ಸನ್ಯಾಸಿಗಳ ಹಾಗೆ ವೈರಾಗ್ಯದಿಂದಾಗಲೀ ಗ್ರಹಸ್ಥರ ಹಾಗೆ ಮದುವೆ ಮಾಡಿಕೊಂಡಾಗಲೀ ವಾನಪ್ರಸ್ಥರ ಹಾಗೆ ಅರಣ್ಯದಲ್ಲಿ ಇರಬೇಕೆಂದಾಗಲೀ ಬ್ರಹ್ಮಚಾರಿಯಂತೆ ಜಿತೇಂದ್ರಿಯಾಭ್ಯಾಸಿಯಾಗಿರಬೇಕೆಂದಾಗಲಿ, ಒಂದೇ ಒಂದು

ನಿಯಮದಲ್ಲಿ ಇರುವವರಲ್ಲ. ಕಾಯಾ, ವಾಚಾ, ಮನಸಾ ಮಹಾದೇವನ ಸಂಗಡಿಗರೆಂದೆನಿಸಿಕೊಂಡಿರುವುದೇ ಇವರ ಮುಖ್ಯ ಕರ್ತವ್ಯ (ಇಲ್ಲಿ ಮಹಾದೇವನೆಂದರೆ ನಿರಾಕಾರನೂ ನಿರ್ಗುಣನೂ ಆದ ಪರಾತ್ಪರ ವಸ್ತುವೆಂದು ತಿಳಿಯಬೇಕು)

ಅತಿವರ್ಣಿಗಳಿಗೆ ಅಶೌಚ (ಸೂತಕ) ಮೊದಲಾದ ಭಿನ್ನಭಾವನೆಗಳಿಲ್ಲ. ಆದರೂ ಇವರು ಬ್ರಾಹ್ಮಣ ವರ್ಣವನ್ನು ಮೀರಿದ ಸ್ಥಿತಿಯವರು. ಏಕೆಂದರೆ ಬ್ರಾಹ್ಮಣರು. ತ್ರಿಸಂಧ್ಯೆಯಲ್ಲಿ ಮಹಾದೇವನನ್ನು ಪೂಜಿಸು, ಜಪಿಸು, ಎಂದು ಹೇಳುವುದಾದರೆ ಇವರು ಯಾವಾಗಲೂ ಮಹಾದೇವನ ಧ್ಯಾನಜಪಾದಿಗಳಲ್ಲಿ ಕೂಡಿ ಲೌಕಿಕರಂತೆ ಕೆಲಸ ಮಾಡುತ್ತಾ ಇರಬೇಕೆಂಬುವವರು.

ಇಂತಹ ಅತಿವರ್ಣ ಅತ್ಯಾಶ್ರಮಗಳನ್ನು ಇದುವರೆಗೂ ಹಿಂದೂಗಳು ನಿರ್ಲಕ್ಷ್ಯ ಮಾಡಿ ಅದಕ್ಕೆ ಗಮನಕೊಡದೆ ಆ ಆಚರಣೆಯವರನ್ನು ಮುಂದಕ್ಕೆ ತಾರದೆ ಬಿಟ್ಟದ್ದೇ ಹಿಂದೂಗಳ ಅವನತಿಗೆ ಕಾರಣವು. ಹಿಂದೂಗಳು ಭಿನ್ನಭಾವದವರೆಂಬ ಅಪಖ್ಯಾತಿಯನ್ನು ಹೊರಲಿಕ್ಕೆ ನಾಲ್ಕು ವರ್ಣಗಳಷ್ಟೇ ಹಿಂದೂ ಎಂಬ ಭಾವನೆಯೇ ಮುಖ್ಯ ಕಾರಣವು.

ಹೀಗೆ ಬಹಳ ವರ್ಷಗಳಿಂದಲೂ ಬಹಿರಂಗಕ್ಕೆ ಬಾರದೆ ಇದ್ದ ಅತಿವರ್ಣ ಅತ್ಯಾಶ್ರಮಿಗಳ ಹೆಸರನ್ನು ಪ್ರಕಟಪಡಿಸಿದ ಹಿಂದೂದೇಶದ ಪ್ರಮುಖರಾದ ಮುಂದಾಳುಗಳಲ್ಲಿ ದಿವಾನ್ ಬಹದ್ದೂರ್ ಅವರೇ ಮೊದಲನೆಯವರು, ಈ ದೆಸೆಯಿಂದ ಅವರು ವೀರಶೈವ ಮಹಾಸಭೆಯ ಅಧ್ಯಕ್ಷರಾಗುವುದು ಒತ್ತಟ್ಟಿಗಿರಲಿ, ಇಡೀ ಹಿಂದೂ ಧರ್ಮದ ಮಹಾಸಭೆಗೆ ಅಥವಾ ಜಗತ್ತಿನ ಧಾರ್ಮಿಕ ಪರಿಷತ್ತಿಗೆ ಅಧ್ಯಕ್ಷರಾಗಲು ತಕ್ಕವರಾಗಿರುತ್ತಾರೆ.

ಈ ಅತಿವರ್ಣ ಅತ್ಯಾಶ್ರಮಗಳ ಲಕ್ಷಣವನ್ನೂ ಮಹಿಮೆಯನ್ನು ಹಿಂದೀ ಭಾಷೆಯಲ್ಲಿ ಇಂಗ್ಲಿಷ ಭಾಷೆಯಲ್ಲಿ ಪ್ರಚಾರಪಡಿಸುವುದಾದರೆ ಇಡೀ ಹಿಂದೂಸ್ಥಾನದ ಮತ್ತು ಜಗತ್ತಿನ ದೃಷ್ಟಿಯು ಈ ಕಡೆಗೆ ಎಳೆಯಲ್ಪಟ್ಟು ಇದು ಸರ್ವಮಾನ್ಯವಾಗುವುದೆಂಬುವರಲ್ಲಿ ಲೇಶವೂ ಸಂಶಯವಿಲ್ಲ.

ಮೆಹರ್ಬಾನ್ ಕಂಬಳಿಯವರಾದರೂ ಗುರುತತ್ತ್ವ, ಲಿಂಗತತ್ವ, ಜಂಗಮ ತತ್ತ್ವ, ಇವು ಯಾವ ಲಕ್ಷಣವನ್ನು ಉಳ್ಳವುಗಳು, ಎಂಬುದನ್ನು ಅತಿವರ್ಣಾಶ್ರಮದ ಸೂಕ್ಷ್ಮ ವಿಷಯಗಳು ಹೇಗಿರುವುವು ಎಂಬುದನ್ನು ಇನ್ನೂ ಚನ್ನಾಗಿ ಪರಿಶೋಧಿಸಿ ಜಗತ್ತಿನ ಧರ್ಮಗಳ ಆದರ್ಶ ಪುರುಷರಾಗಲೆಂದು ಕೋರುವೆನು.

(—ಸಂ. ೩೫, ೩೬, ೩೭ ಸಂಗ್ರಹ)

# ಆದರ್ಶ ವಿವಾಹ

## ರಾವ್‌ಬಹದ್ದೂರ್ ದೇವೀಹೊಸೂರು ಸೆಟ್ಟರು, ಚನ್ನಬಸವಪ್ಪ ಪಂಚಪ್ಪ ಇವರ ಆದರ್ಶ

ಜನರಲ್ಲಿ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಂಡು ತಮ್ಮ ತಮ್ಮ ಹೆಂಡಿರು ಮಕ್ಕಳ ಸಂಸಾರದ ಪೋಷಣೆಯನ್ನು ಮಾಡಿಕೊಂಡು ಪರರ ಕಡೆಗೆ ಸ್ವಲ್ಪವೂ ಗಮನಿಸದೆ ಪರರ ದ್ರವ್ಯವನ್ನೇ ಸೆಳೆದುಕೊಳ್ಳುವವರೇ ಬಹಳ. ಪರರಿಗೆ ಸುಖ, ಹಿತ, ಇವುಗಳನ್ನು ಬಯಸಿ ಅನಕ್ಕಾಗಿ ಕೆಲಸಮಾಡುವವರು ವಿರಳ. ಯಾವ ಮನುಷ್ಯನು ಸ್ವಾರ್ಥಿಯಾಗದೆ ಪರೋಪಕಾರಿಯಾಗಿ ಇರುವನೋ ಅವನ ಜನ್ಮವೇ ಸಾರ್ಥಕ, ಪರೋಪಕಾರ ಮಾಡುವುದು ಈಶ್ವರನ ಸೇವೆಯೆಂದು ತಿಳಿಯ ಬೇಕೆಂದು ಧರ್ಮಶಾಸ್ತ್ರವು ಹೇಳುತ್ತದೆ. ಇಂತಹ ಮಹನೀಯರಲ್ಲಿ ರಾವ್‌ಬಹದ್ದೂರ್ ದೇವೀ ಹೊಸೂರು ಸೆಟ್ಟರವರು ಒಬ್ಬರು. ಇವರು ಆಗರ್ಭ ಶ್ರೀಮಂತರು. ಆದರೂ ತಮ್ಮ ಶ್ರೀಮಂತಿಕೆಯ ಬೆಡಗಿನಲ್ಲಿಯೇ ಕಾಲವನ್ನು ಕಳೆಯದೆ ವೀರಶೈವ ಮಹಾಸಭಾ ಮುಂತಾದ ದೊಡ್ಡ ದೊಡ್ಡ ಕಾರ್ಯಗಳಲ್ಲಿ ತಾವು ಸೇರಿ ಸಮಾಜದ ಉನ್ನತಿಯನ್ನು ಮಾಡುವರು. ಈ ಮಹನೀಯರ ಸಹಾಯ ಸಂಪತ್ತಿಯು ದೊರ ಕಿದುದರಿಂದಲೇ ಶಿವಯೋಗ ಮಂದಿರದಂತಹ ದೊಡ್ಡ ಸಂಸ್ಥೆಯ ಉದಯ ಮತ್ತು ಇರುವಿಕೆಗೆ ಅನುಕೂಲವಾಗಿದೆ. ಶಿವಯೋಗ ಮಂದಿರಕ್ಕೆ ಬಂದ ಅನೇಕ ಎಡರು ಗಳಲ್ಲಿ ಸೆಟ್ಟರವರು ಸಾವಿರಾರು ರೂಪಾಯಿಗಳನ್ನು ಅನೇಕ ಸಾರಿ ಸಹಾಯಮಾಡಿ ಅದರ ತೊಂದರೆಗಳನ್ನು ತಪ್ಪಿಸಿರುತ್ತಾರೆ. ಶಿವಯೋಗ ಮಂದಿರದ ಸ್ಥಾಪಕರಾದ "ಶ್ರೀ ನಿರಂಜನವರ್ಯ ಹಾನಗಲ್ ಸದಾಶಿವ ಸ್ವಾಮಿಗಳವರಿಗೆ" ಇವರು ಬಲಭುಜ ದಂತೆ ಇದ್ದುದರಿಂದಲೇ ಅವರ ಅನೇಕ ಕಾರ್ಯಗಳು ಜಯಶೀಲತೆಯನ್ನು ಪಡೆ ದುವು. ಹರಿಜನರ ಅಸ್ಪೃಶ್ಯತೆಯನ್ನು ದೇವೀಹೊಸೂರಿನಲ್ಲಿಯೂ, ಆ ಪ್ರಾಂತದಲ್ಲಿಯೂ ಹೋಗಲಾಡಿಸಲಿಕ್ಕೆ ಈ ಸೆಟ್ಟರೇ ಮೊದಲನೆಯವರು. ಇತರರಿಗೆ ಸಿಕ್ಕುವುದಕ್ಕೆ ಸುಲಭಸಾಧ್ಯವಲ್ಲದೆ ಇದ್ದ ತಮ್ಮ ಮನೆಯೊಳಗಿನ ಸೇದುವ ಬಾವಿಯ ನೀರನ್ನು ಹರಿಜನರು ನಿರಾತಂಕವಾಗಿ ಸೇದಿಕೊಂಡು ಒಯ್ಯಲಿಕ್ಕೆ ಇವರು ಅನುಜ್ಞೆಯನ್ನು ಕೊಟ್ಟರು. ಹಾವೇರಿ ಮುನಿಸಿಪಾಲಿಟಿ, ಡಿಸ್ಟ್ರಿಕ್ಟ್ ಲೋಕಲ್ ಬೋರ್ಡ್ ಇವುಗಳಿಗೆ ಸದಸ್ಯರಾಗಿ ಬರಲು ಇರುವ ಅನೇಕ ವೇಳೆ ಯೋಗ್ಯರಿಗೆ ಸಹಾಯಮಾಡಿ ಇರುವರು. ಹೀಗೆ ಅನೇಕ ಉದಾರ ಕಾರ್ಯಗಳನ್ನು ಮಾಡುತ್ತ ಇರುತ್ತಾರೆ.

ಇವರು ಈ ವರ್ಷ ಕಾರ್ತಿಕ ಬ॥೨ ಸೋಮವಾರ ಎಲ್ಲರಿಗೂ ಮಾದರಿಯಾ ಗಿರುವಂತೆ ತಮ್ಮ ಮಗನಾದ "ಬಸೆಟ್ಟೆಪ್ಪನಿಗೂ, ಗದುಗಿನ ರಾವ್ ಸಾಹೇಬ್

ಶಿವಪ್ಪನವರ ಸುಪುತ್ರಿ ಸುಶೀಲವ್ವನಿಗೂ" ಮದುವೆಯನ್ನು ಮಾಡಿಸಿದರು. ರಾವ್ ಸಾಹೇಬ್ ಮಾನವಿಯವರಾದರೂ ಇವರ ಈ ಮಾದರಿಯ ಏರ್ಪಾಡಿಗೆ ಅನುಕೂಲ ಮಾಡಿ ಇದ್ದುದು ಅವರ ಉದಾರ ಹೃದಯವನ್ನು ತೋರ್ಪಡಿಸುತ್ತದೆ.

ಜನರು ಮದುವೆಯ ಕಾಲದಲ್ಲಿ ವೃದ್ಧಾಚಾರ ಎಂಬುದಾಗಿ ಗಿಂಡಿ ಕದಿಯು ವುದೇ ಮೊದಲಾದ ಅಲ್ಲಸಲ್ಲದ ಕೆಲಸಗಳನ್ನು ದುಂದುವೆಚ್ಚವನ್ನೂ ಮಾಡುತ್ತಾರೆ. ವಿವಾಹ ಸಂಬಂಧವು ಒಂದು ದೈವಿಕ ಯೋಜನೆಯೇ ಹೊರತು ಮನುಷ್ಯಕೃತವಲ್ಲ (ಪಕ್ಷಿಗಳು ದಾಂಪತ್ಯವನ್ನು ಹೊಂದುವಾಗ ಯಾವ ವೈಭವವನ್ನೂ ಮಾಡುವುದಿಲ್ಲ) ಲಕ್ಷಗಟ್ಟಲೆ ರೂಪಾಯಿ ಖರ್ಚುಮಾಡಿದ ವಧೂವರರು ೧೦೦-೧೨೦ ವರ್ಷ ಬಾಳುತ್ತಾರೆಂಬ ಭರವಸೆ ಪತ್ರವನ್ನೇನೂ ಪಡೆದಿರುವುದಿಲ್ಲ. ಮದುವೆಗಾಗಿ ಸ್ವಲ್ಪ ಹಣ ಖರ್ಚುಮಾಡಿದವರು ಜಾಗ್ರತೆ ಸಾಯುವರೆಂಬ ಭೀತಿಯೂ ಇಲ್ಲ. ಗಂಭೀರ ವಾದ ಮತ್ತು ಸುಖಮಯವಾದ ದಾಂಪತ್ಯವು ಸತಿಪತಿಗಳ ಪ್ರೇಮದಲ್ಲಿರುವುದೇ ಹೊರತು ಆಡಂಬರದ ಖರ್ಚಿನಲ್ಲಾಗಲೀ ಒಳ್ಳೆಯ ಮುಹೂರ್ತದಲ್ಲಿಯಾಗಲೀ ಇರು ವುದಿಲ್ಲ.

ಈ ಸೆಟ್ಟರವರ ಲಗ್ನಕ್ಕೆ ಇವರ ತಂದೆಯವರಾದ ಪಂಚಪ್ಪನವರು ೩೦-೪೦ ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದ್ದರಂತೆ. ಅನೇಕರು ಮದುವೆ ಯಲ್ಲಿ ದುಂದು ವೆಚ್ಚ ಮಾಡಿ ಆ ಸಾಲವನ್ನು ತೀರಿಸಲಿಕ್ಕೆ ತಮ್ಮ ಜೀವನ ಕಾಲದ ಲ್ಲೆಲ್ಲಾ ದುಡಿದರೂ ತೀರಿಸಲಾಗದೆ ತಮ್ಮ ಮಕ್ಕಳ ಮೇಲೆ ಆ ಸಾಲದ ಹೊರೆ ಯನ್ನು ಹೇರಿರುವ ಉದಾಹರಣೆಗಳು ಇವೆ. ಇಂತಹ ಅನಿಷ್ಟ ಪ್ರಸಂಗವು ಈ ಕಾಲದಲ್ಲಿ ದೂರವಾಗಿ ಮದುವೆ ಎಂಬುದು ಆನಂದಕರವಾಗಿ ಅಲ್ಪಖರ್ಚಿನಲ್ಲಿಯೇ ಆಗಿ ದಂಪತಿಗಳಿಗೆ ಅಥವಾ ಅವರ ಸಂಸಾರಕ್ಕೆ ಯಾವುದೊಂದು ಕಷ್ಟ ಅಥವಾ ವ್ಯಥೆಯನ್ನು ಉಂಟು ಮಾಡದೇ ಇದ್ದರೆ ಅದೇ ಉತ್ತಮವಾದ ಮಾದರಿ.

ಇಂತಹ ಮಾದರಿಯನ್ನೇ ಸೆಟ್ಟರವರು ಹಾಕಿತೋರಿಸಿದರು. ಅವರೂ ಮದು ವೆಯ ವಿಧಾನದಲ್ಲಿ ಅವಶ್ಯಕವಾದುವುಗಳಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ಮದುವೆಯಲ್ಲಿ ದಶಕರ್ಮವಿಧಾನವು ಅವಶ್ಯಕವಾದುದೆಂದು ಹಿಂದೂ ವಿವಾಹ ವಿಧಿಯು ಹೇಳುತ್ತದೆ. ಈ ವಿಧಿಯು ಎಲ್ಲಾ ನಿಯಮಗಳೂ ಇದ್ದವು, ಅಶುದ್ಧ ನಿಯಮಗಳಿರಲಿಲ್ಲ. ಮತ್ತು ಕಾರ್ಯಕ್ರಮದಲ್ಲಿ ಗೊತ್ತಾದ ಕಾಲಕ್ಕೆ ಒಂದು ನಿಮಿಷವೂ ಹೆಚ್ಚು ಕಡಮೆ ಆಗದಂತೆ ವ್ಯವಸ್ಥೆಯನ್ನು ಮಾಡಿದ್ದರು ಮದುವೆಯ ಕಾರ್ಯಕ್ರಮ ಹೀಗೆ ಇದ್ದಿತು.

ಸೋಮವಾರ ಮುಂಜಾನೆ ೬ ರಿಂದ ೭ ಘಂಟೆಯೊಳಗಾಗಿ ಹರಿದ್ರಾಲೇಪನ
,, ೭ ರಿಂದ ೮ ರ ಒಳಗಾಗಿ—ಗುರುದೇವತಾವಕಾರ್ಯ
,, ೮ ರಿಂದ ೮-೪೫ ರ ಒಳಗಾಗಿ ದಶಕರ್ಮ ವಿಧಾನ
ಮದುವೆ ನಡೆದ ವಿಧಾನವು ಹೀಗೆ—

ಮನೆಯ ಮುಂಭಾಗದಲ್ಲಿ ಮಾವಿನ ತಳಿರು ತೆಂಗಿನಗರಿಗಳಿಂದ ಕೂಡಿದ ಒಂದು ಚಪ್ಪರವು ಹಾಕಲ್ಪಟ್ಟಿದ್ದಿತು. ಮನೆಯ ಒಳಗಡೆಯಲ್ಲಿಯೇ ಮದುವೆಯ ಮಂಟಪವು ಇದೇ ರೀತಿಯಲ್ಲಿ ಸಿದ್ಧವಾಗಿದ್ದಿತು. ಹಡದಿಗಾಗಿ ಅಗಸನ ಮರ್ಜಿಯನ್ನು ಕಾಯುವ ಸ್ಥಿತಿ ಇರಲಿಲ್ಲ. ಐರಣಿ ಕುಂಭಕ್ಕಾಗಿ ಕುಂಬಾರನನ್ನು ಕಾಯುವ ಸ್ಥಿತಿ ಇರಲಿಲ್ಲ. ಬೀಗರನ್ನೂ, ಲಗ್ನಕ್ಕಾಗಿ ಬರುವ ಮಹನೀಯರನ್ನೂ ಹಾವೇರಿಯಿಂದ ಕರೆದುಕೊಂಡು ಬರುವುದಕ್ಕೆ ಅನೇಕ ಮೋಟಾರುಗಾಡಿಗಳೂ ರಥಗಳೂ ಬೆಳಿಗ್ಗೆ ೬ ಗಂಟೆ ಹೊತ್ತಿಗೆ ಸಿದ್ಧವಾಗಿದ್ದವು. ಸಾವಿರಾರು ಜನರು ಕೂಡಿದ್ದರು. ಗಲಾಟೆಯೇ ಇರಲಿಲ್ಲ. ಅವರವರ ಬಿಡಾರಗಳಲ್ಲಿ ವ್ಯವಸ್ಥೆಯು ಉತ್ತಮ ರೀತಿಯಿಂದ ಏರ್ಪಡಿಸಲ್ಪಟ್ಟಿದ್ದಿತು.

ಗುರುದೇವತಾ ಕಾರ್ಯಕ್ಕಾಗಿ ಗುರುಗಳ ಪಾದಪೂಜೆ ಮಾಡಿ ಪಾದೋದಕವನ್ನು ಪಡೆದುಕೊಂಡು ವಧೂವರರು ಸಲ್ಲಿಸಿದ್ದಾಯಿತು ೯-೪೫ಕ್ಕೆ ಸರಿಯಾಗಿ ವಧೂವರರ ಮೇಲೆ ಅಕ್ಷತಾರೋಪಣಗಳಾದುವು. ಮಂಟಪವೆಲ್ಲವೂ ಶುಭ ಮುಹೂರ್ತಸಾವಧಾನ ಎಂಬ ಶಬ್ದದಿಂದ ತುಂಬಿ ಹೋಗಿದ್ದಿತು. ಈ ಮದುವೆಯಲ್ಲಿ ಮದ್ದು ಸುಡುವುದಾಗಲೀ ನಾಟ್ಯಗಾತಿಯರ ನಾಟ್ಯವಾಗಲೀ ಯಾವರೀತಿಯ ಮೆರವಣಿಗೆಯಾಗಲೀ ಇರಲಿಲ್ಲ. ಬಂದವರಿಗೆಲ್ಲಾ ಊಟ ಉಪಚಾರದ ವ್ಯವಸ್ಥೆಯು ಸರಿಯಾಗಿ ಆಗಿದ್ದಿತು. ಆ ಊಟವಾದ ಮೇಲೆ ಮಧ್ಯಾಹ್ನ ೩ ಘಂಟೆಯಿಂದ ಜನರನ್ನು ವಾಪಸು ಕರೆದುಕೊಂಡು ಹೋಗುವುದಕ್ಕೆ ಮೋಟಾರು ಗಾಡಿಗಳೂ ರಥಗಳೂ ಸಿದ್ಧವಾಗಿದ್ದುವು.

ಸಾಯಂಕಾಲ ೭ ಘಂಟೆಯೊಳಗಾಗಿ ಮದುವೆಯ ಮನೆಯು ಕೆಲವು ಜನರಿಂದ ಮಾತ್ರವೇ ಕೂಡಿದ್ದಿತು.

ಈ ಮದುವೆಯಲ್ಲಿ ವರದಕ್ಷಿಣೆಯಾಗಲೀ ಕನ್ಯಾಶುಲ್ಕ (ತೆರ) ವಾಗಲೀ ಹೆಸರೆತ್ತುವಂತಿರಲಿಲ್ಲ. ಬೀಗರಲ್ಲಿ ಒಡವೆಗಳ ಕಾಟವಾಗಲೀ ಯಾವ ವಿಧವಾದ ವಿವಾದವಾಗಲೀ ಇರಲಿಲ್ಲ. ಎಲ್ಲರೂ ಗಂಭೀರವಾಗಿ ಶಾಂತವಾಗಿ ಪ್ರತಿದಿನ ಇರುವಂತೆ ಇದ್ದರು.

ಇಂತಹ ಮದುವೆಯನ್ನು ಮಾಡಿ ಎಲ್ಲರಿಗೂ ಮಾರ್ಗವನ್ನು ತೋರಿಸಿಕೊಟ್ಟ ರಾವ್ ಬಹದ್ದೂರರವರೂ ರಾವ್ ಸಾಹೇಬರವರೂ ಧನ್ಯರಲ್ಲವೇ ?

"ಒಬ್ಬ ಹಾವೇರಿ ನಿವಾಸಿ" (ಶ್ರೀ. ಚ).

(—ಸ. ೩೮)

# ವೀರಶೈವ ಮಹಾಸಭೆ ಹುಬ್ಬಳ್ಳಿ

ನಾವು ಈ ಮುಂಚೆ ೪೩ನೆಯ ಸಂಚಿಕೆಯಲ್ಲಿ ಹುಬ್ಬಳ್ಳಿಯ ಮಹಾಜನಂಗಳು ವೀರಶೈವ ಮಹಾಸಭೆಯನ್ನು ಕೂಡಿಸಲು ಪ್ರಯತ್ನಮಾಡಬೇಕೆಂದು ವಿಜ್ಞಾಪಿಸಿ ಕೊಂಡಂತೆ ಅಲ್ಲಿ ಮಹಾಸಭೆಯನ್ನು ಯಶಸ್ವಿಯಾಗಿ ನಡೆಸಲು ಈಗ ವಿಶೇಷ ಪ್ರಯತ್ನವು ನಡೆಯುತ್ತಾ ಇದೆ. ಸುಮಾರು ೧೯೩೮ನೆಯ ಡಿಸೆಂಬರ್ ೨೬-೨೭ ರಲ್ಲಿ ಈ ಮಹಾಸಭೆಯು ಕೂಡುವುದೆಂದು ಸುದ್ದಿ ಇದೆ. ಇದರ ಅಂಗವಾಗಿ ಮಹಿಳಾಸಭೆ, ವೃತ್ತ ಪತ್ರಿಕಾ ಸಂಪಾದಕರ ಸಭೆ, ಚಿತ್ರಗಳ ಪ್ರದರ್ಶನ ಮೊದಲಾ ದುವುಗಳೂ ನಡೆಯಬೇಕೆಂದು ಗೊತ್ತಾಗಿದೆ. ವೀರಶೈವರಲ್ಲಿ ಇರುವ ಅನೇಕ ಕೊರತೆಗಳನ್ನು ನಿವಾರಣೆಮಾಡುವ ಉಪಾಯವನ್ನು ಈ ಮಹಾಸಭೆಯವರು ಯೋಚಿಸಿ ಅದು ಕಾರ್ಯರೂಪಕ್ಕೆ ಬರುವಂತೆ ಯೋಚನೆ ಮಾಡುವರೆಂದು ನಂಬು ತ್ತೇವೆ. ಈ ಸಮಾಜದಲ್ಲಿ ಇರುವ ಒಡಕು (ಗುರುವಿರಕ್ತರ ಕಲಹ ಮುಂತಾದುವು) ಗಳನ್ನು ಪರಿಹರಿಸುವುದಕ್ಕಾಗಿಯೂ ತಕ್ಕ ಪ್ರಯತ್ನವನ್ನು ಈ ಮಹಾಸಭೆಯವರು ಮಾಡಬೇಕಾಗಿದೆ.

ಇನ್ನು ಎರಡನೇಯದಾಗಿ ವೀರಶೈವರಲ್ಲಿ ಬ್ರಾಹ್ಮಣ ಕ್ಷತ್ರಿಯಾದಿ ಜಾತಿಭೇದ ಕುಲಭೇದಗಳುಂಟೋ ಇಲ್ಲವೋ ಎಂಬುದು ಮುಂದೆ ಬಂದು ನಿಲ್ಲುತ್ತದೆ ಅನು ಕೂಲವಾದರೆ ಇದನ್ನೂ ಈ ಮಹಾಸಭೆಯಲ್ಲಿಯೇ ನಿರ್ಣಯ ಮಾಡುವುದು ಅವಶ್ಯಕ.

ಮುಖ್ಯವಾಗಿ ವೀರಶೈವವು ಸ್ವಾತಂತ್ರ್ಯವುಳ್ಳಮತ. ಈಗ ಇದರಲ್ಲಿ ಇರುವವರು ಪಾರತಂತ್ರ್ಯರಾಗಿ ಪೇಚಾಡುತ್ತ ಇರುವುದನ್ನು ನೋಡಿ ಬಹಳ ವ್ಯಸನಪಡಬೇಕಾಗಿದೆ. ಇಡೀ ಜಗತ್ತೇ ಲಿಂಗಸ್ವರೂಪ ಎಂದು ಹೇಳುವ ವೀರಶೈವರು ತಮ್ಮ ಒಂದೊಂದು ವ್ಯಕ್ತಿಯಲ್ಲಿ ಲಿಂಗವನ್ನು ಉಳಿಸಿಕೊಳ್ಳುವುದೇ ಕಷ್ಟವಾಗಿದೆ. ಇವರು ಪ್ರಪಂಚದಲ್ಲಿ ಧಾರ್ಮಿಕ ವೃತ್ತಿಯು (ಮಹಾದೇವನನ್ನು ತಿಳಿದಾಚರಿಸುವ ವಿಧಾನವು) ಹೇಗೆ ಇದೆ ಎಂಬುದನ್ನು ವಿಚಾರ ಮಾಡಿದ್ದಾರೆ ಇಂತಹ ಬೇಸರಿಕೆಯನ್ನು ಎಂದಿಗೂ ಹೊಂದುತ್ತಿದ್ದಿಲ್ಲ. ಏಕೆಂದರೆ ಪ್ರಪಂಚದವರ ವಿಚಾರಕ್ಕಿಂತಲೂ ಇವರ ಧಾರ್ಮಿಕ ವಿಚಾರವು ಬಹಳ ಮುಂದೆ ಹೋಗಿದೆ. ಈಗಿನ ಕಾಲದ ಪಾಠಶಾಲೆಗಳಲ್ಲಿ ಧಾರ್ಮಿಕ ಬೋಧೆಯು ಸರಿಯಾಗಿ ಇಲ್ಲದಿರುವುದರಿಂದಲೂ ಶಾಳೆ ಬಿಟ್ಟು ಹೋದ ಮೇಲೆ ಬಹು ಮಟ್ಟಿಗೆ ಜಗಳದಲ್ಲಿ ಅಥವಾ ಹೊಟ್ಟೆ ಪಾಡಿಗಾಗಿ ದುಡಿಯುವ ಕಷ್ಟಗಳಲ್ಲಿ ಇವರ ಕಾಲವು ಕಳೆಯಲ್ಪಡುತ್ತಿರುವುದರಿಂದಲೂ ಧಾರ್ಮಿಕಕ್ಕಾಗಿ ವಿಚಾರ ಮಾಡದೆ ಬಹಳ ಹಿಂದೆ ಬಿದ್ದಿದ್ದಾರೆ.

ಇವರ ಲೌಕಿಕ ವರ್ತನೆಯಾದರೂ ಹೇಗೆ ಇದೆ ಎಂದು ನೋಡುವುದಾದರೆ ಅದರಲ್ಲಿಯೂ ಇವರು ಬಹಳ ಹಿಂದೆ. ಇದರಲ್ಲಿ ಸಾಂಘಿಕ ಘಟನಾಶಕ್ತಿಯು ಬಹಳ ಕಡಿಮೆಯಾಗಿದೆ. ಖರ್ಚಿನ ಹಣಕ್ಕೆ ಏರ್ಪಡಿಸಿದರೂ ವಾರ್ಷಿಕ ಮಹಾ ಸಭೆಗಳು ಮೂವತ್ನಾಲ್ಕು ವರ್ಷಕ್ಕೆ ೧೨ ಆಗಿರುವುದು, ಇದಕ್ಕೆ ದೊಡ್ಡ ಉದಾ ಹರಣೆ. ಇವರ ಉದ್ಯೋಗವು ಮುಖ್ಯವಾಗಿ ವ್ಯವಸಾಯ, ವ್ಯಾಪಾರ, ಈ ಎರಡ ರಲ್ಲಿಯಾದರೂ ಕರ್ಣಾಟಕವನ್ನು ತುಂಬುವಷ್ಟು ಇವರ ಕೆಲಸಗಳಿಲ್ಲ. ಕರ್ಣಾಟಕದ ವ್ಯಾಪಾರವು ಪರರ ಕೈಗೆ ಹೋಗಿದೆ. ಕೆಲವರು ತಮ್ಮ ಊರಿನಲ್ಲಿ ಒಂದೊಂದು ಅಂಗಡಿ ಇಟ್ಟುಕೊಂಡು ಅದರಲ್ಲಿಯೇ ನಾವು ದೊಡ್ಡವರೆಂದು ಹೆಮ್ಮೆಪಡುತ್ತಿದ್ದಾರೆ. ತಮ್ಮ ಊರಿನ ದೊಡ್ಡಸ್ತಿಕೆಯಂತೆ ನಾಡಿನ ದೊಡ್ಡಸ್ತಿಕೆಯನ್ನು ಹೇಗೆ ಸಂಪಾದಿಸ ಬೇಕೆಂಬುದರ ಯೋಜನೆಯೇ ಇರುವುದಿಲ್ಲ.

ವ್ಯವಸಾಯದಲ್ಲಿಯೂ ಇವರ ಚಟುವಟಿಕೆ ಬಹಳ ಕಡಿಮೆ ಅಮೇರಿಕಾ ಸಂಯುಕ್ತ ಸಂಸ್ಥಾನದವರು ತಮ್ಮ ಹತ್ತಿಯ ಬೆಳೆಯನ್ನು ಹೆಚ್ಚಿಸಲಿಕ್ಕಾಗಿ ಯಂತ್ರ ಗಳಿಂದ ಊಳುವುದು ಗೊಬ್ಬರಗಳನ್ನು ಭೂಗುಣಕ್ಕೆ ಅನುಗುಣವಾಗಿ ಜಾಗ್ರತೆ ವ್ಯಾಪಿಸುವಂತವುಗಳನ್ನು ಹಾಕುವುದು, ಯಂತ್ರಗಳ ಮೂಲಕ ಪೈರು ರೇಖೆ ಮಾಡು ವುದು ಈ ಪದ್ಧತಿಗಳಿಂದ ವಿಶೇಷ ಪ್ರಯತ್ನ ಮಾಡಿದಾರೆ. ಅವರ ಪ್ರಯತ್ನದಿಂದ ಇಡೀ ಭೂಮಿಯ ಜನರಿಗೆ ಸಾಕಾಗುವಷ್ಟು ಹತ್ತಿಯನ್ನು ಒದಗಿಸಿಕೊಡಲು ಆ ಒಂದು ದೇಶದವರು ಸಿದ್ಧರಾಗಿದ್ದಾರೆ. ಇಲ್ಲಿ ವೀರಶೈವರ ವ್ಯವಸಾಯವು ಬರ ಬರುತ್ತಾ ಕುಗ್ಗುತ್ತಲಿದೆ. ಕಳೆದ ವರ್ಷದ ಬೆಳೆಗಿಂತ ಈ ವರ್ಷದ ಬೆಳೆ ಹೆಚ್ಚಿಸ ಬೇಕೆಂಬುದಕ್ಕೆ ತಕ್ಕ ಯೋಜನೆಯನ್ನೇ ಮಾಡುವುದಿಲ್ಲ. ಇವರಿಗೆ ಯಾವ ಉದ್ಯೋಗ ಮಾಡುವುದಕ್ಕಾದರೂ ಮತಸಂಬಂಧದ ಯಾವ ನಿರ್ಬಂಧವೂ ಇಲ್ಲ. ಹೀಗಿದ್ದರೂ ಇವರಲ್ಲಿ ಉದ್ಯೋಗವಿಲ್ಲದೆ ತೊಂದರೆಪಡುವವರೇ ಬಹಳ ಇವಕ್ಕೆಲ್ಲಾ ಸಂಘ ಗಳನ್ನು ಏರ್ಪಡಿಸಿಕೊಂಡು ಒಮ್ಮುಖವಾಗಿ ಮುಂದಕ್ಕೆ ಹೋಗುವ ಯೋಜನೆ ಯಾಗಬೇಕು.

ಇಂತಹ ಘಟನೆಗಳನ್ನು ಮಾಡಿಕೊಳ್ಳುವ ಯೋಜನೆ ವೀರಶೈವರಿಗೆ ಎಂದಿಗೆ ಬರುವುದೋ ?

ಈ ವರ್ಷದ ಸಭೆಯು ಬರೀ ಮಾತಿನಲ್ಲಿಯೇ ತೀರಿಹೋಗದೆ ಕಾರ್ಯಕಾರಿಯಾಗಿ ವೀರಶೈವರು ಯಾವಾಗಲೂ ಹುಬ್ಬಳ್ಳಿಯನ್ನು ನೆನೆಸುವಂತೆ ಏರ್ಪಾಡುಗಳನ್ನು ಮಾಡಿ ಯಶಸ್ಸುಪಡೆಯಲೆಂದು ನಾವು ಆಶಿಸುತ್ತೇವೆ.

— ಪ್ರಕಾಶಕ

(ಸಂ. ೪೫–೪೬ ಸಂಗ್ರಹ)

# ಶರಣರ ಅನುಭಾವ ಮಂದಿರಗಳೂ ವೀರಶೈವ ಸಮಾಜವೂ

ಕಲಘಟಗಿ ತಾಲ್ಲೂಕು ಪೈಕಿ ಹಿರೇ ಹೊನ್ನಿಹಳ್ಳಿ ಗ್ರಾಮದ ಅನುಭವ ಮಂಟಪ ದಲ್ಲಿ ೧-೮-೪೮ ನೆಯ ದಿನ ೮-೧೦ ಗ್ರಾಮಗಳಿಂದ ಶರಣರ ಬಳಗವು ಕೂಡಿದಾಗ ನಡೆದ ಭಾಷಣಗಳಲ್ಲಿ ಈ ಕೆಳಗೆ ಕಂಡ ವಿಷಯುಗಳಿದ್ದುವು.

೧. ಪ್ರತಿಯೊಬ್ಬರೂ ದುಡಿತದಿಂದಲೇ ತಮ್ಮ ಜೀವನವನ್ನು ಸಾಗಿಸತಕ್ಕದ್ದು. ಭಿಕ್ಷೆ ಕಳವು ಇತ್ಯಾದಿಗಳನ್ನು ಮಾಡಬಾರದು. ಕಾಯಕ(ಸತ್ಯವಾದ ಉದ್ಯೋಗ)ವೇ ಕೈಲಾಸವೆಂದು ಶರಣರು ಸಾರಿದ್ದಾರೆ. ಜ್ಯೋತಿಷ್ಯ, ಶಕುನ ಇತ್ಯಾದಿಗಳನ್ನು ನಂಬಬಾರದು.

೨. ಗುಡಿ ಗುಂಡಾರಗಳಲ್ಲಿಯೂ, ತೀರ್ಥಕ್ಷೇತ್ರಾದಿಗಳಲ್ಲಿಯೂ ದೇವರು ಇರುವುದಿಲ್ಲ. ಸರ್ವರ ಹೃದಯದಲ್ಲಿ ದೇವರಿದ್ದಾನೆ. ಆದ್ದರಿಂದ ಸರ್ವರ ಸೇವೆ ಯನ್ನು ಮಾಡತಕ್ಕದ್ದು.

೩. ಗುಡಿಗಳನ್ನು ಕಟ್ಟಿಸುವುದರ ಬದಲು ಮನೆಯಿಲ್ಲದ ಬಡವರಿಗೆ ಗುಡಿಸಲು ಗಳನ್ನು ಕಟ್ಟಿಸತಕ್ಕದ್ದು. ಗುಡಿಗಳ ಮೇಲಿರುವ ಭಕ್ತಿಯನ್ನೂ ಅವುಗಳಿಗಾಗಿ ನಿರರ್ಥಕ ವಾಗಿ ಮಾಡುವ ಖರ್ಚನ್ನೂ ತಡೆದು ಬಡ ಜನರ ಮೇಲೆ ಭಕ್ತಿ ಪ್ರೇಮವನ್ನಿಟ್ಟು ಅವರಿಗಾಗಿ ಖರ್ಚನ್ನು ಮಾಡಿದರೆ ಅದು ದೇವರಿಗೆ ಸಲ್ಲಿಸಿದಂತೆಯಾಗುವುದು ಮತ್ತು ಜಗತು ಉದ್ಧಾರವಾಗುವುದು.

೪. ಜಾತ್ರೆ, ಉತ್ಸವ, ಯಜ್ಞಯಾಗಾದಿಗಳಲ್ಲಿಯೂ, ಘಟಸ್ಥಾಪನ, ನಂದಾ ದೀವಿಗೆ ಮುಂತಾದವುಗಳಲ್ಲಿಯೂ ವ್ಯರ್ಥವಾಗಿ ಸುಟ್ಟು ಹೋಗುತ್ತಿರುವ ಎಣ್ಣೆ, ತುಪ್ಪ, ಗಳನ್ನು ಬಡಜನರ ಮಕ್ಕಳು ವಿದ್ಯೆ ಕಲಿಯಲಿಕ್ಕೆ ಕೊಡಿರಿ. ಅಂದರೆ ಜ್ಞಾನ ಜ್ಯೋತಿ ಬೆಳಗುತ್ತದೆ. ಮತ್ತು ಅವರಿಂದ ಲೋಕ ಕಲ್ಯಾಣವಾಗುತ್ತದೆ.

೫. ಕಾಲ್ಪನಿಕವಾದ ಗಣಪತಿ, ಕಾಮನಹಬ್ಬ ಇತ್ಯಾದಿಗಳಲ್ಲಿ ಮಾಡುವ ವ್ಯರ್ಥ ಖರ್ಚನ್ನೂ ಮದ್ದು ಪಟಾಕಿ, ಮಹಾಲು, ಮಂಟಪ, ಒಕಳೀ ಆಡುವದು, ಅಶ್ಲೀಲ ಪದಗಳನ್ನು ಹಾಡುವುದು, ಕುಳ್ಳು ಕಟ್ಟಿಗೆ ಇತ್ಯಾದಿಗಳನ್ನು ಸುಡುವುದೇ ಮುಂತಾದ ಯಾವತ್ತೂ ಅನಾಚಾರಗಳನ್ನು ಅತ್ಯವಶ್ಯ ಬಂದುಮಾಡಿ ಜನರು ನೀತಿಮಾರ್ಗ ಅಥವಾ ಶರಣ ಮಾರ್ಗವನ್ನು ಹಿಡಿದಲ್ಲಿ ಲೋಕ ಕಲ್ಯಾಣವಿದೆ.

೬. ಶರಣ ಮಾರ್ಗವು ಮಾನವನ ಹಾಗೂ ಸರ್ವ ಪ್ರಾಣಿಗಳ ಕಲ್ಯಾಣಕಾರ ವಿದ್ದು, ಶರಣರ ವಚನ ಭಾಂಡಾರದಲ್ಲಿ ದಿವ್ಯ ಜ್ಞಾನಜ್ಯೋತಿ ಬೆಳಗುತ್ತಿದೆ ಕಾರಣ ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಗಳಲ್ಲಿ 'ಅನುಭವ ಮಂಟಪ'ಗಳನ್ನು ಸ್ಥಾಪಿಸಿ

ಕೊಂಡು ಆ ಮುಖಾಂತರ ಶರಣರ ಅನುಭವ ಪರವಾದ ವಚನಗಳ ಅರ್ಥವನ್ನೂ ಶರಣರ ಮಾರ್ಗವನ್ನೂ ತಿಳಿದುಕೊಂಡು ಅದರಂತೆ ನಡೆಯತಕ್ಕದ್ದು.

ಈ ವಿಷಯಗಳನ್ನು ವಿವರಿಸುವ ಭಾಷಣಗಳು ಕರ್ನಾಟಕದ ಮುಖ್ಯ ಮುಖ್ಯ ಭಾಗಗಳಲ್ಲಿ ನಡೆದು ಅದರಂತೆ ಆಚರಿಸುವುದಕ್ಕಾಗಿ ನಿರ್ಣಯಗಳು ಕೂಡಾ ಆಗುವುದು ಅತ್ಯಂತಾವಶ್ಯಕವಾಗಿದೆ. ವೀರಶೈವ ಸಮಾಜವು ಬಹಳ ಹಿನ್ನೆಲೆಯಲ್ಲಿ ಇದೆ. ತಾವು ಯಾವ ರೀತಿಯಲ್ಲಿ ದೇಶದಲ್ಲಿ ಮಿತವ್ಯಯವುಳ್ಳವರಾಗಿ ದೇಶೋನ್ನತಿಯ ಕಾರ್ಯಗಳನ್ನು ಮಾಡಿ ಜನಸೇವೆಯೆ ಈಶಸೇವೆ ಎಂಬ ತತ್ವ ಪ್ರಚಾರಕ್ಕೆ ಆದರ್ಶರಾಗಿ ಇರಬೇಕೆಂಬು ದನ್ನು ಯೋಚಿಸುವವರೇ ಅಪರೂಪ. ತಮ್ಮ ಸ್ವತಂತ್ರ ವಿಚಾರದಿಂದ ಧರ್ಮೋನ್ನತಿ ಮುಂತಾದ ಕಾರ್ಯಗಳಿಗೆ ಹಣವನ್ನು ಖರ್ಚು ಮಾಡುವ ಸೌಭಾಗ್ಯವನ್ನು ಎಂದು ಈ ಸಮಾಜ ಪಡೆಯುವುದೋ ! ನೋಡಬೇಕಾಗಿದೆ. ಮೊಟ್ಟಮೊದಲು ಪಟ್ಟಣ ವಾಸದ ವರ್ತಕರು ಮುಂದಾಳುಗಳಾಗಿ ತಮ್ಮ ಧರ್ಮ, ಸಂಸ್ಕೃತಿ, ಕನ್ನಡ ಭಾಷೆಯ ಪ್ರಚಾರ ಮುಂತಾದವುಗಳಿಗೆ ತಮ್ಮ ಗಮನವನ್ನು ಕೊಟ್ಟು ಅವುಗಳ ಪ್ರಚಾರವು ಸದಾ ಆಗುವ ದಕ್ಕೂ ಶರಣರ ಅನುಭಾವ ಮಂದಿರಗಳನ್ನು ಸ್ಥಾಪಿಸಲಿಕ್ಕೂ ಉದಾರವಾಗಿ ಧನಸಹಾಯ ಮಾಡುವದು ಅತ್ಯವಶ್ಯಕವಾಗಿದೆ. ಹಾಗಾದರೆ ಆಯಾ ಪ್ರಾಂತದ ಗ್ರಾಮಾಂತರ ಗಳಲ್ಲಿಯೂ ಆ ರೀತಿ ನಡೆಸಲು ಅವರು ಮಾರ್ಗದರ್ಶಕರಾದಂತೆ ಆಗುತ್ತದೆ.

–(ಸಂ. ೭೪–೭೫)

# ವೀರಶೈವ ಮಹಾಸಭೆ

ವೀರಶೈವ ಮಹಾಸಭೆಯು ಬಸವಕಲ್ಯಾಣದಲ್ಲಿ ನಡೆಯುವುದಕ್ಕೆ ಅವಕಾಶವೀಯ ಲಾಗಿದೆ ಎಂದೂ; ಮಂಗಳೂರಿನವರು ಅಖಿಲ ಭಾರತ ವೀರಶೈವ ಸಭೆ ನಡೆಸಲು ಅವಕಾಶವು ಕೊಡಲ್ಪಟ್ಟಿಲ್ಲವೆಂದೂ ಅಖಿಲ ಭಾರತ ವೀರಶೈವ ಮಹಾಸಭಾ (A India Veerasaiva Mahasabha) ಕಾರ್ಯಾಲಯ– ತುಮಕೂರು ಇವರಿಂದ ಪ್ರಕಟ ಣೆಯು ಹೊರಟಿದೆ.

ಆದುದರಿಂದ ವೀರಶೈವರು ಹೈದರಾಬಾದು ದೇಶದಲ್ಲಿನ ಬಸವಕಲ್ಯಾಣವಲ್ಲಿಯೇ ಮಹಾಸಭೆಯು ನಡೆಯುವುದೆಂದು ಚನ್ನಾಗಿ ತಿಳಿದಿರಬೇಕಾಗಿದೆ.

ಕಲ್ಯಾಣದಲ್ಲಿ ಬಸವಾದಿ ಪ್ರಮಥರು ಪುನಃ ವೀರಶೈವ ಮತವನ್ನು ಉದ್ಧರಿಸಲು ಬರುವ ಕಾಲವು ಒದಗಿ ಬಂದಿದೆ ಒಂದೂ ಅದಕ್ಕೆ ತಕ್ಕಂತೆ ಪರುಷಗಟ್ಟೆಯಲ್ಲಿ ನಡೆಯು ತ್ತಿದ್ದ ಪ್ರಾಣಿವಧೆಯು ತಪ್ಪಿಸಲ್ಪಟ್ಟಿರುವುದೆಂದೂ ಪರುಷಗಟ್ಟೆಯ ಸಮೀಪದಲ್ಲಿ ಸಹಾ ಪ್ರಾಣಿವಧೆ ಮಾಡುವವರಿಗೆ ಮನೆಗಳು ಕೊಡಲ್ಪಟ್ಟಿಲ್ಲವೆಂದೂ ಈಗ ಉತ್ತಮ ರಿಗಾಗಿ ಆ ಮನೆಗಳು ಕಾದಿಡಲ್ಪಟ್ಟವೆಯೆಂದೂ ಇದೇ ಮುಂತಾದ ಕಾಲಜ್ಞಾನದ ವಿಷಯಗಳು ಒಂದಕ್ಕೊಂದು ಸರಿಗೂಡಿ ಇರುವದರಿಂದ ವೀರಶೈವ ಸಮಾಜೋದ್ಧಾರವು ಬೇಗನೆ ಮುಂದುವರಿಯಲಿರುವುದೆಂದೂ ಅನೇಕರು ಭಾವಿಸುತ್ತಲಿದ್ದಾರೆ.

ಆ ಪ್ರಕಾರ ಬಸವಕಲ್ಯಾಣದಲ್ಲಿ ವೀರಶೈವ ಮಹಾಸಭೆ ನಡೆಯುವುದು ಬಹಳ ಮುಖ್ಯವಾದುದೆಂದು ಭಾವಿಸುವುದು ಅವಶ್ಯಕವಾದುದೇ ಸರಿ.

ಈ ವರ್ಷದ ಮಹಾಸಭೆಯಲ್ಲಿ ಯಾವ ಯಾವ ವಿಷಯಗಳ ಚರ್ಚೆಯಾಗಬೇಕು ? ಯಾವ ಯಾವ ವಿಷಯಗಳ ಮೇಲೆ ಭಾಷಣಗಳಾಗಬೇಕು ? ಇವೇ ಮುಂತಾದ ಅನೇಕ ವಿಷಯಗಳು ಈಗಾಗಲೇ ಹೊರಬೀಳಬೇಕಾಗಿದ್ದುದು ಇನ್ನೂ ಆ ಕೆಲಸವು ನಡೆದಿರುವುದಿಲ್ಲ. ಪ್ರತಿವರ್ಷವೂ ಕಲ್ಯಾಣದಲ್ಲಿ ಮಹಾಸಭೆ ಮೂರುದಿನಗಳು ನಡೆ ಯುವಂತೆ, ಕಲ್ಯಾಣದ ಒಂದು ಯಾತ್ರಾಕಾಲವು ಏರ್ಪಡಿಸಲ್ಪಡಬೇಕು. ಈ ಯಾತ್ರಾ ಕಾಲದಲ್ಲಿ ವೀರಶೈವರ ಸುಖ ದುಃಖಗಳನ್ನು ಪರ್ಯಾಲೋಚಿಸಿ ಇವರಿಗೆ ಉನ್ನತಿಯು ನೆಯ್ದಲಿಕ್ಕೆ ತಕ್ಕ ಸಲಹೆ ಮುಂತಾದವುಗಳೊಡನೆ ಪ್ರತಿವರ್ಷ ಒಂದು ಯಾತ್ರಾವರದಿಯೂ ತಯಾರಾಗಬೇಕು. ಇದಕ್ಕೆಲ್ಲಾ ಈ ವರ್ಷದ ಮಹಾಸಭೆಯಲ್ಲಿಯೇ ತಕ್ಕ ಪ್ರಯತ್ನಗಳು ನಡೆದು ಕಾರ್ಯವಾಗುವಂತಾಗಬೇಕು. ಬರೀ ಒಂದು ವರ್ಷ ಸಭೆಮಾಡಿ ಪ್ರಮಥರ ಆಚರಣೆ ಮಾಡಿದಂತಾದರೆ ಸಾಲದು. ಯಾವ ಬಸವೇಶ್ವರನು ವೀರಶೈವರ ಒಂದೊಂದು ಚಿಕ್ಕ ಚಿಕ್ಕ ಅಂಶದ ಉನ್ನತಿಗೂ ಗಮನವನ್ನು ಕೊಟ್ಟು ಮುಂದಕ್ಕೆ ತಂದರೂ ಆ ಮಹನೀಯನು

ನಡೆದ ದಾರಿಯಲ್ಲಿಯೇ, ಆ ಮಹನೀಯನು ಇದ್ದ ಕಲ್ಯಾಣದಲ್ಲಿಯೇ ಅವನ ಕೃಪೆಯಿಂದ ವೀರಶೈವ ಸಮಾಜದ ಉನ್ನತಿಯು ಮುಂದುವರಿಯಲೆಂದು ಈಗಿನ ಮಹನೀಯರು ಪ್ರಯತ್ನ ಮಾಡಿದರೆ ಅದು ಸಫಲವಾದ ಕಾರ್ಯವಾಗುತ್ತದೆ.

ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳವರು ಇನ್ನೂ ಅನೇಕ ಶ್ರೀಗಳೊಡನೆ ಈಗಾಗಲೇ ಕಲ್ಯಾಣದಲ್ಲಿ ಬಸವಾದಿ ಪ್ರಮಥರ ನೆನಹು ತೋರಿ ಬರುವಂತಹ ಕೆಲಸವನ್ನು ಮಾಡಿ ಶರಣರ ವಚನಗಳ ರಚನೆಯ ಮೂಲಾರ್ಥವನ್ನು ಬೀರಿ ವೀರಶೈವ ಸಮಾಜಕ್ಕೆ ಮಹದುಪಕಾರವನ್ನು ಮಾಡಿರುತ್ತಾರೆ.

ಈಗಲಾದರೂ ಮಹಾಸಭೆಯ ಕಾರ್ಯವನ್ನು ಆ ಸ್ವಾಮಿಗಳು ಸೇರಿ ಮಾಡಿದರೆ ಸುಸೂತ್ರವಾಗಿಯೂ ಸುಗಮವಾಗಿಯೂ ಆಗಿ ಮಹಾಸಭೆಯು ದಿವ್ಯ ತೇಜಸ್ಸಿನಿಂದ ನಡೆಯಲವಕಾಶವಾಗುತ್ತದೆ.

ಈಗ ಬೇಗನೆ ಮಹಾಸಭೆಯವರ ಒಂದು ಪ್ರಕಟನೆ ಹೊರಬೀಳಬೇಕು. ಮುಂದೆ ಆ ಬಗ್ಗೆ ನಡೆಯುವ ಕಾರ್ಯ ಕಲಾಪಗಳು ಆಗಾಗ ಪ್ರಕಟವಾಗಬೇಕು. ಈ ಮಹಾ ಸಭೆಯ ಕಾರ್ಯ ಕಲಾಪಗಳು ಇಡೀ ವೀರಶೈವ ಸಮಾಜದಲ್ಲಿ ವ್ಯಾಪಿಸುವಂತಾಗಬೇಕು. ಬೆಳೆಯುವ ವೃಕ್ಷವಾಗುವುದಕ್ಕಾಗಿ ಚಿರಸ್ಥಾಯಿಯಾಗಿ ಧಾರ್ಮಿಕ ಬೀಜವನ್ನು ಈಗ ಬಿತ್ತಿದಂತಾಗಿರಬೇಕು. ಇಂತಹ ಕಾರ್ಯಗಳನ್ನು ಬೇಗನೆ ಕೈಗೊಳ್ಳಲಿ ಎಂದು ನಮ್ಮ ಸವಿನಯ ಪ್ರಾರ್ಥನೆಯು.

ಈ ಸಲದ ಮಹಾಸಭೆಯಿಂದ ವೀರಶೈವ ಸಮಾಜಕ್ಕೆ ಒಳ್ಳೆಯ ಕಾರ್ಯಗಳು ನಡೆಯುವುವೆಂದು ಬಹಳ ಜನರು ನಿರೀಕ್ಷಿಸುತ್ತಿದ್ದಾರೆ. ಮಹಾಸಭೆಯವರು ಆಲೋಚನೆ ಮಾಡುತ್ತಾ ಕೂಡುವ ಕಾಲವಿದಲ್ಲ. ಯಾವ ಒಳ್ಳೆಯ ಕೆಲಸಕ್ಕಾದರೂ ವೀರಶೈವರಲ್ಲಿ ವಿಘ್ನಗಳು ಬಹಳ. ಮಂಗಳೂರಿನವರು ಈ ವರ್ಷವೇ ತಮ್ಮಲ್ಲಿ ಮಹಾಸಭೆ ನಡೆಸಬೇಕೆಂಬ ಬಲವಾದ ಆಸೆಯನ್ನು ಬಿಟ್ಟುಕೊಟ್ಟು ಈಗಿಗಿಂತಲೂ ಚನ್ನಾಗಿ ಮುಂದಿನ ವರ್ಷದಲ್ಲಿ ತಮ್ಮಲ್ಲಿ ವೀರಶೈವ ಮಹಾಸಭೆಯನ್ನು ಏರ್ಪಡಿಸ ಬಹುದು. ನೂರಾರು ವರ್ಷಗಳಿಂದ ನಿರೀಕ್ಷಿಸಿದರೂ ಮಾಡಿದರೂ ಕಲ್ಯಾಣದಲ್ಲಿ ಆಗದೆ ಇದ್ದಂತಹ ಕೆಲಸಗಳು ಈಗ ಸುಸೂತ್ರವಾಗಿ ಆಗುವುದಕ್ಕೆ ತಕ್ಕ ಅನುಕೂಲ ಗಳು ಒದಗಿವೆ. ಇಂತಹ ಸನ್ನಿವೇಶವನ್ನು ವ್ಯರ್ಥವಾಗಿ ಕಳೆಯದಂತೆ ಮಂಗಳೂರಿ ನವರೂ ಸಹ ಕಲ್ಯಾಣದ ಮಹಾ ಸಭಾಕಾರ್ಯಕರ್ತರಿಗೆ ತಮ್ಮ ಕೈಲಾದ ಸಹಾಯ ವನ್ನು ನೀಡಿ ಕಲ್ಯಾಣದಲ್ಲಿ ಈ ವರ್ಷದ ಮಹಾಸಭೆಯು ಯಶಸ್ವಿಯಾಗಿ ನಡೆಯುವು ದಕ್ಕೆ ನೆರವು ಕೊಟ್ಟು ಕೀರ್ತಿ ಭಾಜನರಾಗಬೇಕೆಂದು ಮಂಗಳೂರಿನ ಮಹಾಸಭೆಯ ಏರ್ಪಾಡಿನ ಸದಸ್ಯರನ್ನು ನಾವು ಬಲು ಒತ್ತಾಯವಾಗಿ ಪ್ರಾರ್ಥಿಸುತ್ತೇವೆ.

(ಸಂ. ೧೧೮-೧೧೯)

# ಅಖಿಲ ಭಾರತ ವೀರಶೈವ ಮಹಾಸಭೆ

(ಮಂಗಳೂರಿನಿಂದ ಒಬ್ಬರು ಬಾತಮಿದಾರರು ತಾಯಿನಾಡು ೧೧-೪-೫೪ ರ ಪತ್ರಿಕೆಗೆ ಎಪ್ರಿಲ್ ೬ ರಲ್ಲಿ ಬರೆದಿರುವುದು)

---

ಲಕ್ಷಾಂತರ ರೂಪಾಯಿಗಳ ಖರ್ಚು ವೀರಶೈವ ಮಹಾಸಭೆಯನ್ನು ನಡೆಯಿಸಲು ಬೇಕಾಗುವುದೆಂದೂ ಸಹಸ್ರಾರು ವೀರಶೈವರ ದೀಕ್ಷಾಕಾರ್ಯ, ವೀರಶೈವ ಬ್ಯಾಂಕಿನ ಸ್ಥಾಪನೆ, ಕೋಟ್ಯಂತರ ರೂಪಾಯಿಗಳ ಆಸ್ತಿಯುಳ್ಳ ವೀರಶೈವ ಮಠಗಳನ್ನು ಪರಾಧೀನದಿಂದ ವಶಪಡಿಸಿಕೊಳ್ಳುವಿಕೆ, ವೀರಶೈವ ಗುರುಕುಲ ಸ್ಥಾಪನೆ, ಅಖಿಲ ಭಾರತ ವೀರಶೈವ ಮಹಾಸಭಾ ಕೇಂದ್ರ ಕಛೇರಿಗು ಕಟ್ಟಡ ಹಾಗೂ ಖಾಯಂ ಆಫೀಸು-ಮತ್ತು ಸಿಬ್ಬಂದಿ ವ್ಯವಸ್ಥೆ, ವೀರಶೈವ ಮಿಷನ್ ಸ್ಥಾಪನೆ, ಅಖಿಲ ಭಾರತ ಗುರುವಿರಕ್ತ ವರ್ಗದವರ ಪ್ರತ್ಯೇಕ ಸಮ್ಮೇಳನಗಳು, ಈ ಎಲ್ಲಾ ಯೋಜನೆಗಳು ಯಶಸ್ವಿಯಾಗಿ ನಡೆಯಲಿರುವ ಮಹಾನುಷ್ಠಾನ ವ್ರತ ವಗೈರೆ ಇನ್ನೂ ನಾನಾ ತರಹೆಯ ಕಾರ್ಯಗಳು ಯಶಸ್ವಿಯಾಗಿ ನಡೆಯುವಂತೆ ಏರ್ಪಡಿಸಬೇಕೆಂದೂ ಪ್ರಕಟನೆ ಯಾಗಿದೆ.

ವೀರಶೈವರು ಇಷ್ಟು ಕೆಲಸಗಳನ್ನು ನೆರವೇರಿಸುವಷ್ಟು ಸುಸಂಸ್ಕೃತರೂ ದಕ್ಷರೂ ಆಗಿರುವರೇ ?

ಮಂಗಳೂರಿನವರು ಮುಂದೆ ನಡೆಯಿಸಲಿರುವ ಶಿವಮೊಗ್ಗೆಯಲ್ಲಿನ ಸಭೆಯಲ್ಲಿನ ತೀರ್ಮಾನಗಳನ್ನು ನೋಡಿದಮೇಲೆ ವಿಷಯಗಳ ವಿಮರ್ಶೆಯನ್ನು ಆಗ ಮಾಡ ಬೇಕಾಗಿದೆ ಮಹಾ ಸಭೆಯ ಜ್ಞಾನದಾಸೋಹಕ್ಕಿಂತ ಮೊದಲು ಅನುಷ್ಠಾನ ವ್ರತದ ಪ್ರಸಾದ ತೃಪ್ತಿಯಾಗಲಿರುವುದು ಹಿಂದೆಂದೂ ಆಗದ ವಿಶಿಷ್ಟ ಲಕ್ಷಣ.

(ಸಂ. ೧೨೨)

# ಅಸ್ಪೃಶ್ಯತೆಯನ್ನು ಬಿಟ್ಟು ಬಿಡಿರಿ

ಅಸ್ಪೃಶ್ಯತೆಯನ್ನು ನಿವಾರಣೆ ಮಾಡುವುದಕ್ಕಾಗಿ ಈ ಕೆಳಗಿನ ಪ್ರಕಟಣೆಯು ಪೋಸ್ಟಾಫೀಸ್‌ಗಳ ಪ್ರಕಟನೆಯ ಹಲಗೆಯಲ್ಲಿ ಸೇರಿಸಲ್ಪಟ್ಟಿದೆ.

ಭಾರತ ಸಂವಿಧಾನದ ೧೭ನೆಯ ನಿಬಂಧನೆಯ ಪ್ರಕಾರ ಅಸ್ಪೃಶ್ಯತೆಯು ದಂಡನೀಯ ಅಪರಾಧ.

ಹರಿ ಜನರು ಹರಿಯ ಮಕ್ಕಳು
ದೇವರ ದೃಷ್ಟಿಯಲ್ಲಿ ಸರ್ವರೂ ಸಮಾನರು
ಆಚಾರವೇ ಕುಲ ಅನಾಚಾರವೇ ಹೊಲೆ

ಉತ್ತಮರು ಪಾಲ್ಗಡಲೊಳೆತ್ತಿದರೆ ಜನ್ಮವನು ?
ಉತ್ತಮರು ಅಧಮರೆನಬೇಡ– ಹೊಲೆಯಿಲ್ಲ
ದುತ್ತಮರು ಇಲ್ಲ ಸರ್ವಜ್ಞ

ಅಸ್ಪೃಶ್ಯತೆಯನ್ನು ತೊಲಗಿಸಿರಿ

(Sd) ಬಿ. ರಾಚಪ್ಪ
ನಿಮ್ನ ವರ್ಗಾಭಿವೃದ್ಧಿ ಕಮಿಷನರ್ ಬೆಂಗಳೂರು.

ಟಿಪ್ಪಣಿ : ಈ ವಿಷಯದಲ್ಲಿ ಬಸವೇಶ್ವರನ ವಚನವನ್ನೀಗ ಚನ್ನಾಗಿ ಜ್ಞಾಪಕಕ್ಕೆ ತರಬೇಕಾಗಿದೆ.

"ಕುಲಜನೆಂಬುದಕ್ಕಾಗುವುದು ದೃಷ್ಟ ?
'ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ
ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂಪ್ರಯೋಜನಂ'
ಎಂಬುದಾಗಿ... ಲಿಂಗಸ್ಥಲವನರಿದವನೇ ಕುಲಜನು"

ಈ ವಚನದಿಂದ ನಿರಾಕಾರ ಪರವಸ್ತುವಿನ ಅನುಸಂಧಾನ ಮಾಡುವನೇ ಕುಲಜನೆಂದು ಚೆನ್ನಾಗಿ ವ್ಯಕ್ತವಾಗುತ್ತದೆ.

ಈಗಿನ ರಾಜಕೀಯವು ಅಸ್ಪೃಶ್ಯತೆಯನ್ನು ತೊಲಗಿಸಿದರೆ ಮುಂದೆ ಅಸ್ಪೃಶ್ಯರೊಡನೆ ಹೆಣ್ಣು ಕೊಟ್ಟು ತರುವ ಪ್ರಸಂಗವೂ ಬಂದೀತು. ಬ್ರಾಹ್ಮಣಾದಿ ಜಾತಿಗಳೂ ಅಳಿಸಿಹೋಗುವ ಸಂಭವವೂ ಬಂದೀತು. ಅದೇ ಬಸವೇಶ್ವರನ ಸಂಕೇತ (Motto), ಅದೇ ಬಸವೇಶ್ವರನ ಅಂತಿಮಧ್ಯೇಯ, ಅದೇ ಹರಳಯ್ಯ ಮಧುವಯ್ಯಗಳ ಸಂಬಂಧ, ಅದೇ ಅತಿವರ್ಣ. ಅದೇ ಈ ಪ್ರಕಟನೆಯಲ್ಲಿ ಕಂಡ 'ಆಚಾರವೇ ಕುಲ' ಎಂಬ ಮಾತಿನ ಅಭಿಪ್ರಾಯ. ಭಾರತದಲ್ಲಿನ ಸರ್ವರೂ ಇಂತಹ ಆಚಾರ

ವನ್ನು ಕಲಿಯುವುದಾದರೆ ಅದೇ ಭಾರತದ ಶುಭೋದಯ. ಓ ವಿರಶೈವರೇ ನೀವು ಧೀರರು !

ನೀವು ನಿಮ್ಮ ಅಂಗವನ್ನು ಎಂದರೆ ಸರ್ವಾಂಗವನ್ನು ಲಿಂಗಕ್ಕೆ ಒಪ್ಪಿಸಿ ಅಂಗಲಿಂಗಿಗಳಾಗಬೇಕೆಂಬಿರಿ, ಮತ್ತು ಲಿಂಗದ ಅಂಗವು ನಿಮ್ಮ ಅಂಗದಲ್ಲಿ ವ್ಯಾಪಿಸುವಂತೆ ಮಾಡಿ ಲಿಂಗಾಂಗಿಗಳಾಗಬೇಕೆಂಬಿರಿ. ಅಂಗವನ್ನು ಲಿಂಗಕ್ಕೆ ಒಪ್ಪಿಸಬೇಕೆಂಬುದು, ಅಂಗಕ್ಕೆ ಲೌಕಿಕ ಪ್ರವೃತ್ತಿ ಮಾರ್ಗ ತಪ್ಪಿಸಿ ನಿವೃತ್ತಿಮಾರ್ಗವನ್ನು ತೋರಿಸಬೇಕೆಂಬ ಉದ್ದೇಶವುಳ್ಳದಾಗಿದೆ. ಲಿಂಗಾಂಗಿಗಳಾಗಬೇಕೆಂಬುದು ನಿವೃತ್ತಿರೂಪದಲ್ಲಿರುವ ಲಿಂಗದ ಅಂಗವಾಗಿಯೇ ನಿಮ್ಮ ಅಂಗವು ಯಾವಾಗಲೂ ಇರುವಂತೆ ಮಾಡುವ ಉದ್ದೇಶವುಳ್ಳದಾಗಿದೆ. ಈ ಕಾರ್ಯವು ಸಾಮಾನ್ಯವೆಂದು ತಿಳಿಯಬೇಡಿರಿ. ಭಾರತ ದೇಶದಲ್ಲಿ ಬಹಳ ಜನರು ಮಹಾದೇವನಿದ್ದಾನೆ ಎಂದು ನಂಬಿಕೊಂಡು ಅವನಲ್ಲಿ ಭಕ್ತಿಯನ್ನು ತೋರಿಸಬೇಕೆಂದು ಪಾರಮಾರ್ಥಿಕ ಕೆಲಸವನ್ನು ಮಾಡತಕ್ಕವರಾಗಿದ್ದಾರೆ. ಈ ಕೆಲಸದಲ್ಲಿ ನಿಮ್ಮದು ಹೆಚ್ಚಿನದು. ಏಕೆಂದರೆ ಲೌಕಿಕರು ತಮ್ಮದೆಂದು ತಿಳಿದುಕೊಂಡಿರುವ ವಸ್ತುಗಳಲ್ಲಿ ಸ್ವಲ್ಪವನ್ನು ಅಥವಾ ಬಹಳ ಭಾಗವನ್ನು ಒಪ್ಪಿಸುವವರು. ಉದಾಹರಣೆಗೆ ಒಬ್ಬ ದೇವಪೂಜಕನು ಜಲದಿಂದ ಅಭಿಷೇಕ ಮಾಡಿ ಗಂಧವನ್ನು ಧರಿಸಿ, ಅಕ್ಷತೆಯನ್ನು ಎರಚಿ, ಹೂವುಪತ್ರೆ ಧರಿಸಿ, ಧೂಪವನ್ನು ಬೀಸಿ ದೀಪವನ್ನು ಬೆಳಗಿ, ನೈವೇದ್ಯವನ್ನು ತೋರಿಸಿ, ತಾಂಬೂಲವನ್ನು ಅರ್ಪಿಸುವನು. ಇಲ್ಲಿಗೆ ಅವನ ಅಷ್ಟವಿಧದ ಪೂಜೆ (ಅಷ್ಟವಿಧಾರ್ಚನೆ) ಮುಗಿಯುತ್ತದೆ. ಇದರಿಂದ ಅವನು ತನ್ನಲ್ಲಿರುವ ಹೆಚ್ಚು ವಸ್ತುಗಳನ್ನು ತನ್ನ ದೇವನಿಗೆ ಕೊಟ್ಟಂತಾಗಲಿಲ್ಲ. ಹೀಗೆ ಪೂಜೆ ಮಾಡುವದರಿಂದ ಒಪ್ಪಿಸತಕ್ಕ ವಸ್ತುಗಳನ್ನು ತನ್ನ ದೇವನಿಗೆ ಕೊಟ್ಟಂತಾಗಲಿಲ್ಲ. ಹೀಗೆ ಪೂಜೆಮಾಡುವುದರಿಂದ ಒಪ್ಪಿಸತಕ್ಕ ವಸ್ತುವನ್ನು ಲೌಕಿಕರು ಕಾಣುವಂತೆ ದೇವಸ್ಥಾನದ ಮೂರ್ತಿಯು ಎದುರಿಗೆ ನಿಂತು ಗ್ರಹಿಸುವುದೂ ಇಲ್ಲ. ಹೀಗಾಗಿ ಈ ಪೂಜೆಯ ವಸ್ತುಗಳು ದೇವನಿಗೆ ಮುಟ್ಟಿದುವೆಂಬ ಪೂಜಕನಲ್ಲಿನ ಕಲ್ಪನೆಯಿಂದ ಕೂಡಿದವುಗಳಾಗಿ ಆ ಪೂಜೆಯು ಕಾಲ್ಪನಿಕ ಪೂಜೆಯೇ ಆಗುತ್ತದೆ. ಇದನ್ನೆ ಬಹಳ ವೈಭವದಿಂದ ಮಾಡಿದರೆ ಆಡಂಬರದ ಪೂಜೆಯಾಗುತ್ತದೆ.

ಇನ್ನೊಂದು ವಿಧದಲ್ಲಿ ಪೂಜಕನು ಇಂತಹ ಪೂಜೆಯನ್ನು ಮಾಡಿ ದೇವನಿಗೆ ತೃಪ್ತಿಯಾಗಲಿ ಎಂದು ಒಬ್ಬರಿಗೆ, ಐದು ಜನರಿಗೆ, ನೂರಾರುಜನರಿಗೆ, ಸಾವಿರಾರು ಜನರಿಗೆ ಊಟಮಾಡಿಸುತ್ತಾನೆ. ಇದರಿಂದ ಪೂಜಕನು ಬಹಳ ಖರ್ಚು ಮಾಡಿದಂತೆ ಆಗುತ್ತದೆ. ಸರ್ವಚೈತನ್ಯನಾದ ಮಹಾದೇವನಿಗೆ ತೃಪ್ತಿಪಡಿಸಿದಂತೆ ಆಗುವುದಾದರೂ ಇದರಲ್ಲಿ ವಿಚಾರಪೂರ್ವಕ ತಿಳಿಯಬೇಕಾದ ಅಂಶಗಳು ಕೆಲವು ಇವೆ. ಆಹಾರ ವಸ್ತುಗಳನ್ನು ಅವಶ್ಯಕವುಳ್ಳವರಿಗೆ ಕೊಡುವುದರ ಬದಲಾಗಿ ಆಡಂಬರದಿಂದ

ಮುಂದು ಖರ್ಚು ಮಾಡಿದಂತೆ ಆಗುತ್ತದೆ. ಮಹಾದೇವನನ್ನು ಆರಾಧಿಸುವವನು ಇಂತಹ ಆರಾಧನೆಯನ್ನು ಮಾಡಿದರೂ ತನ್ನಲ್ಲಿರುವ ದ್ರವ್ಯ ಮೊದಲಾದುವನ್ನು ಒಪ್ಪಿಸಿದಂತೆ ಆಗುವುದೇ ಹೊರತು ತನ್ನನ್ನು ಒಪ್ಪಿಸಿದ ಕೆಲಸವೇನೂ ಆಗಲಿಲ್ಲ.

ವೀರಶೈವನು ತನ್ನ ತನುವನ್ನೂ ಮನವನ್ನೂ ಮಹಾದೇವನಿಗೊಪ್ಪಿಸಬೇಕಲ್ಲದೆ ತನಗೆ ಸೇರಿದ ದ್ರವ್ಯ ಮೊದಲಾದ ಎಲ್ಲವನ್ನೂ ಮಹಾದೇವನಿಗೊಪ್ಪಿಸಬೇಕು. ಇದರಿಂದ ವೀರಶೈವನ ಧರ್ಮಮಾರ್ಗವು ಬಹಳ ಉತ್ತಮವಾದುದೆಂದು ಚೆನ್ನಾಗಿ ತಿಳಿದು ಬರುತ್ತದೆ. ಲೌಕಿಕರಂತೆ ಅಷ್ಟಿಷ್ಟಾಗಲಿ (ಸ್ವಲ್ಪ) ಬಹಳವಾಗಲಿ ಕೊಟ್ಟು ಇನ್ನೂ ನಾನು ಉಳಿಸಿಕೊಂಡಿರುವೆನೆಂದರೆ ಅದು ವೀರಶೈವ ಧರ್ಮವಾಗುವುದಿಲ್ಲ. ನಾನುನನ್ನದು ಎಂಬುದು ಸಂಪೂರ್ಣವಾಗಿ ಇಲ್ಲದಂತೆ ಆಗಬೇಕು. ವೀರಶೈವರ ಉತ್ಕೃಷ್ಟತೆಯು ಈ ರೀತಿಯಲ್ಲಿ ಇದೆ.

ತನುವನ್ನು ಮಹಾದೇವನಿಗೆ ಒಪ್ಪಿಸುವುದನ್ನು ವೀರಶೈವರು ಚೆನ್ನಾಗಿ ತಿಳಿದುಕೊಂಡಂತೆ ಇತರರು ತಿಳಿದುಕೊಂಡಿಲ್ಲ. ತನುವನ್ನು ನೋಡಿ ನಾನು ದೇಹವುಳ್ಳವನು ಎಂಬ ಜ್ಞಾನದಿಂದ ಸಂಸಾರ ಸುಖದುಃಖಗಳಿಗೆ ಕಾರಣವಾಗುತ್ತದೆ, ಎಂದೂ ಇದರ ಪರಿಣಾಮವು ಹೇಗೆ ಆಗುವುದೆಂದೂ ವಿಚಾರಮಾಡುವವನ ದೇಹವು ಅಂಗ ಎನಿಸಿಕೊಳ್ಳುತ್ತದೆ. ವಿಚಾರದಿಂದ ಅಂಗವನ್ನು ಮಹದೇವನೊಡನೆ ಬೆರಸಬೇಕೆಂಬುದೇ ಭಾರತದಲ್ಲಿ ಧರ್ಮಜ್ಞಾನಿಗಳು ಮಾಡಬೇಕಾದ ಮುಖ್ಯ ಕೆಲಸ. ಇದನ್ನೇ ವೀರಶೈವನು ಮಾಡುತ್ತಾರೆ. ಇವರ ಅಂಗವು ಲಿಂಗವಾಗಬೇಕೆಂಬ ನಿಯಮದ ಆಚರಣೆಯು ಈ ಕೆಲಸವನ್ನೇ ಒಳಗೊಂಡಿದೆ.

ಎರಡೂ ಸಾವಿರ ವರ್ಷಗಳಿಂದಲೂ ಪೂರ್ವದ ಉಪನಿಷತ್ಕಾರರು ಈ ಧರ್ಮವನ್ನೇ ಚನ್ನಾಗಿ ತಿಳಿದುಕೊಂಡಿದ್ದರು ಎಂಬುದಕ್ಕೆ ಉದಾಹರಣೆಯು ದೊರುಕುತ್ತದೆ. ಯಜುರ್ವೇದಿ ಎನಿಸಿಕೊಂಡ ಕೇನೋಪನಿಷತ್ತಿನಲ್ಲಿ ಈ ಸಂಬಂಧದ ವಿಷಯವು ಹೇಳಲ್ಪಟ್ಟಿದೆ.

ಓಂ ಅಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷುಃ ಶ್ರೋತ್ರ ಮಥೋ ಬಲಮಿಂದ್ರಿಯಾಣಿಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ।

ಮಾಹಂ ಬ್ರಹ್ಮ ನಿರಾಕುರ್ಯಾಂ ಮಾಮಾ ಬ್ರಹ್ಮನಿರಾಕರೋದ ನಿರಾಕರಣಮಸ್ತು ಅನಿರಾಕರಣಂ ಮೇ ಅಸ್ತು । ತದಾತ್ಮನಿ ನಿರತೇಯ ಉಪನಿಷತ್ಸುಧರ್ಮಾಸ್ಸಂತಿ ತೇಮಯಿ ಸಂತು ತೇಮಯಿ ಸಂತು ಓಂ ಶಾಂತಿಃ ಶಾಂತಿಃ ಶಾಂತಿಃ ॥

ಈ ಶಾಂತಿಮಂತ್ರದಲ್ಲಿ ಸರ್ವಾಂಗಗಳೂ (ಕಿವಿ ಮೊದಲಾದ ಸರ್ವೇಂದ್ರಿಯಗಳು ಬ್ರಹ್ಮನಲ್ಲಿ ವ್ಯಾಪನೆಯಾಗಲಿ ಎಂಬ ಪ್ರಾರ್ಥನೆ ಇದೆ. ಇದನ್ನು ಯಾವ ರೀತಿಯಲ್ಲಿ ಮಾಡಬೇಕೆಂಬುದನ್ನು ಈ ಉಪನಿಷತ್ತಿನಲ್ಲಿ ವಿವರಿಸಿದ್ದಾರೆ. ಅದು ಈ ರೀತಿ ಇದೆ.

"ಮನಸ್ಸು, ಮಾತು, ಕಣ್ಣು, ಶ್ರೋತ್ರ, ಮತ್ತು ಬಲ ಇವುಗಳು ಯಾರ ಅಪೇಕ್ಷೆಯಿಂದ ನಡೆಯುತ್ತವೆ ಎಂದು ವಿಚಾರಿಸುವುದಾದರೆ ಮನಸ್ಸಿನ ಮನೋರೂಪ ನಾಗಿಯೂ, ಮಾತಿಗೆ ಮೂಲ ಮಾತಿನರೂಪನಾಗಿಯೂ, ಕಣ್ಣಿಗೆ ಕಣ್ಣಾಗಿಯೂ ಕಿವಿಗೆ ಕಿವಿಯಾಗಿಯೂ ನಡೆಸತಕ್ಕವನು ಒಬ್ಬನಿದ್ದಾನೆ. ಅವನೇ ಬ್ರಹ್ಮ ಎಂಬು ದಾಗಿ ತಿಳಿಯಬೇಕು. ಹೀಗೆ ಯಾರೂ ತಿಳಿಯುವವರೋ ಅವರೇ ಧೀರರು. ಅವರು ಈ ಲೋಕದಿಂದ ಬಿಡಲ್ಪಟ್ಟವರಾಗಿ ಅಮೃತರು (ಮರಣವಿಲ್ಲದವರು-ಶುದ್ಧರು) ಆಗುತ್ತಾರೆ".

ಈ ಬ್ರಹ್ಮವನ್ನು ಯಾರು ಚೆನ್ನಾಗಿ ತಿಳಿದಿರುವೆನೆಂದು ಹೇಳುವರೋ ಅವರು ಬ್ರಹ್ಮರೂಪವನ್ನು ಬಹು ಸ್ವಲ್ಪವಾಗಿ (ಕಡಿಮೆಯಾಗಿ) ತಿಳಿದವರಾಗಿದ್ದಾರೆ. ಯಾರು ಬ್ರಹ್ಮವನ್ನು ತಿಳಿದಿಲ್ಲವೆಂದು ಭಾವಿಸುವರೋ ಅವರು ಬ್ರಹ್ಮವನ್ನು ತಿಳಿದವರು. ಈ ರೀತಿಯಲ್ಲಿ ತಿಳಿಯುತ್ತಾ ಈ ಬೋಧೆಯ ಪ್ರತಿವಂಶದ ಬೋಧೆ ಯನ್ನೂ ತಿಳಿದವರು ಅಮೃತತ್ವವನ್ನು ಪಡೆಯುತ್ತಾರೆ. ಅವರು ತಮ್ಮ ಆತ್ಮನಿಂದ ವೀರ್ಯವನ್ನೂ (ಇದೇ ಶಾಂತಿಮಂತ್ರದಲ್ಲಿ ಹೇಳಲ್ಪಟ್ಟ ಬಲ) ಜ್ಞಾನದಿಂದ ಅಮೃ ತತ್ವವನ್ನೂ ಪಡೆಯುತ್ತಾರೆ. ಯಾರು ಇಲ್ಲಿ ತಿಳಿದಿಲ್ಲವೆಂದು ಹೇಳುವರೋ ಅವರ ಮಾತು ಸತ್ಯವಾದುದು. ಯಾರು ತಿಳಿದಿಲ್ಲವೆಂದು ಹೇಳುವುದಿಲ್ಲವೋ ಅವರ ಮಾತು ವಿನಾಶಕ್ಕೆ ಕಾರಣವಾದುದು ಸರ್ವಭೂತಗಳಲ್ಲಿಯೂ (ಪ್ರಾಣಿಗಳು) ಬ್ರಹ್ಮನಿದ್ದಾ ನೆಂದು ತಿಳಿಯುವವರೋ ಅವರು ಧೀರರು. ಅವರು ಈ ಲೋಕದಿಂದ ಬಿಡಲ್ಪಟ್ಟ ವರಾಗಿ ಅಮೃತರು ಆಗುತ್ತಾರೆ.

ಬ್ರಹ್ಮನಿಗೂ ದೇವತೆಗಳಿಗೂ ಒಂದು ವಿವಾದವು ಯಾರು ದೊಡ್ಡವರೆಂಬ ವಿಷಯವಾಗಿ ನಡೆಯಿತು. ದೇವತೆಗಳು ತಾವು ದೊಡ್ಡವರೆಂದು ಹೇಳಿದರು ಆಗ ಬ್ರಹ್ಮನು ಯಕ್ಷರೂಪನಾಗಿ ಬಂದ, ಒಂದು ಹುಲ್ಲು ಕಡ್ಡಿಯನ್ನು ಹಾಕಿ ಅದನ್ನು ಸುಡಬೇಕೆಂದು ಅಗ್ನಿಗೆ ಹೇಳಿದನು. ಬೆಂಕಿಗೆ ಸುಡುವುದಾಗಲಿಲ್ಲ. ಆಮೇಲೆ ವಾಯುವನ್ನು ಕಂಡು ನಿನ್ನ ವೀರ್ಯ (ಬಲ), ಏನೆಂದು ಕೇಳಿದನು, ನಾನು ಭೂಮಿಯಲ್ಲಿ ಎಲ್ಲವನ್ನೂ ಹಾರಿಸುತ್ತೇನೆ ಎಂದು ಹೇಳಿದನು. ಹುಲ್ಲುಕಡ್ಡಿಯನ್ನು ಹಾರಿಸುವುದು ಗಾಳಿಯಿಂದ ಆಗಲಿಲ್ಲ. ಆಮೇಲೆ ಇಂದ್ರನನ್ನು ಕೇಳಿದನು. ಇದ್ರನು ಹೆದರಿ ಆಕಾಶದಲ್ಲಿ ಹೋಗುತ್ತಿದ್ದ ಉಮಾದೇವಿಯಾದ ಹೈಮವತಿಯನ್ನು ಕೇಳಿದನು, ಆಕೆಯು ಬ್ರಹ್ಮನೇ ವಿಜಯಶಾಲಿಯೆಂದೂ ಅವನೇ ದೊಡ್ಡವನೆಂದೂ ಹೇಳಿದಳು. ಈ ರೀತಿಯಲ್ಲಿ ಬ್ರಹ್ಮನು ದೊಡ್ಡವನೆಂದು ದೇವತೆಗಳಿಗೆ ಗೊತ್ತಾಯಿತು. ಹೀಗೆ ಬ್ರಹ್ಮನು (ಅಧಿದೈವ-ಒಡೆಯನಾದದೇವ) ಆದನು. ಅಧ್ಯಾತ್ಮವಾಗಿ ಬ್ರಹ್ಮದಲ್ಲಿ (ದೇಹದಲ್ಲಿ ಇರುವಿಕೆ) ಮನಸ್ಸೆಂದೂ ಆ ಮನಸ್ಸಿನಲ್ಲಿ ಬ್ರಹ್ಮಸ್ಮರಣೆಯಿಂದ ಲೌಕಿಕ ರಲ್ಲಿ ಅಪೇಕ್ಷಿಸುವ ಸಂಕಲ್ಪ (ಬೇಕೆಂಬುದು) ಹುಟ್ಟುವುದೆಂದೂ ತಿಳಿಯಲ್ಪಟ್ಟಿತು.

ಅದಕ್ಕೆ ತಪಸ್ಸೂ ಬಾಹ್ಯೇಂದ್ರಿಯ ನಿಗ್ರಹಗಳು ಕರ್ಮಗಳೆಂದೂ ಗೊತ್ತಾದವು. ಸಮಸ್ತ ಅಂಗಗಳು ಬ್ರಹ್ಮದ ಆಯತನವುಳ್ಳವು ಬ್ರಹ್ಮಾಯತನಂ (ಲಿಂಗಾಯತ ?) ಆಗಿವೆ. ಇದನ್ನು ತಿಳಿದವನು ಪಾಪವನ್ನು ಕಳೆದುಕೊಂಡು ಸ್ವರ್ಗಲೋಕದಲ್ಲಿ ಇರುತ್ತಾನೆ.

ಹೀಗಿರುವ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಬ್ರಹ್ಮವು ನಿರಾಕಾರವಾದುದು, ನಿರ್ಗುಣವಾದುದು. ಸಗುಣ ಸಾಕಾರ ಮೂರ್ತಿಗಳಾದ ಇಂದ್ರ ಅಗ್ನಿ ಮೊದಲಾದವರೆಲ್ಲರೂ ಈ ಬ್ರಹ್ಮನಿಗಿಂತಲೂ ಕಡಿಮೆ ಸ್ಥಿತಿಯವರು ಎಂಬುದನ್ನು ಮಕ್ಕಳ ಕಥೆಯ ರೂಪವಾದ ಹೇಳಿಕೆಯಲ್ಲಿ ಒಂದು ಹುಲ್ಲು ಕಡ್ಡಿಯನ್ನು ಉದಾಹರಣೆಯಾಗಿ ತೋರಿಸಿ ಬ್ರಹ್ಮನ ಬಲವಿಲ್ಲದೆ ಇದ್ದರೆ ದೇವತೆಗಳ ಬಲ ನಡೆಯುವದಿಲ್ಲವೆಂದು ತೋರಿಸಿದ್ದಾರೆ.

ಎರಡು ಸಾವಿರ ವರ್ಷಗಳಿಗಿಂತ ಪೂರ್ವದಲ್ಲಿ ಮನುಷ್ಯನ ಶರೀರವಲ್ಲಿ ಮಾತು, ಪ್ರಾಣ, ನೇತ್ರ, ಕಿವಿ, ಮತ್ತು ಬಲ (ಶಕ್ತಿ = ವೀರ್ಯ) ಇವು ಮುಖ್ಯವಾದುವುಗಳೆಂದು ತಿಳಿಯಲ್ಪಡುತ್ತಿದ್ದುವು. ಅವುಗಳೂ ಮತ್ತು ಎಲ್ಲ ಇಂದ್ರಿಯಗಳೂ ಬ್ರಹ್ಮವಾಗಲಿ ಎಂಬುದೇ ಈ ಉಪನಿಷತ್‌ಕಾರರ ಮುಖ್ಯ ಧ್ಯೇಯವಾಗಿದೆ. ವೀರಶೈವರಾದರೋ ಎಲ್ಲ ಅಂಗಗಳೂ ಲಿಂಗವಾಗಲಿ ಎಂಬ ಧ್ಯೇಯವುಳ್ಳವರೇ. ಮೇಲೆ ಕಂಡ ನೇತ್ರ ಮೊದಲಾದ ಅಂಗಗಳಲ್ಲಿ ಬ್ರಹ್ಮ ಭಾವನೆಯುಳ್ಳವರು ಧೀರರೆಂದೂ ಅಮೃತರೆಂದೂ ಹೇಳಲ್ಪಟ್ಟಂತೆ ವೀರಶೈವರ ಧೀರರೂ ಮತ್ತು ಅಮೃತರೂ (ಮರಣವಿಲ್ಲದ ದಿವ್ಯ ಸ್ವರೂಪರು) ಆಗಿದ್ದಾರೆ. ಈ ದೆಸೆಯಿಂದಲೇ ಇವರಿಗೆ ರುದ್ರದೇವರು ಭದ್ರದೇವರು ಮುಂತಾದ ಹೆಸರುಗಳಿಂದ ಕರೆಯುವುದು ಬಳಕೆಯಲ್ಲಿದೆ. ಈ ಉಪನಿಷತ್ತಿನಲ್ಲಿ ಹೇಳಲ್ಪಟ್ಟ ಬ್ರಹ್ಮವೇ ಲಿಂಗರೂಪವೆಂದೂ ವೀರಶೈವರೆಲ್ಲರೂ ಲಿಂಗರೂಪವಾದ ಅಂಗವುಳ್ಳವರು (ಅಂಗಲಿಂಗಿಗಳು ಮತ್ತು ಲಿಂಗಾಂಗಿಗಳು) ಎಂದೂ ಚೆನ್ನಾಗಿ ತಿಳಿದಿರಬೇಕು.

ಈ ಉಪನಿಷತ್ತಿನಲ್ಲಿ ಹೇಳಲ್ಪಟ್ಟಂತೆ ನಿರಾಕಾರ ಬ್ರಹ್ಮನ ವಿಷಯವನ್ನು ತಿಳಿದ ಮನುಷ್ಯರಿಗೆ ತಪಸ್ಸು ಮೊದಲಾದ ಕರ್ಮಗಳನ್ನು ಮಾಡುವುದರಿಂದ ಸ್ವರ್ಗ ಲೋಕವು ಪ್ರಾಪ್ತವಾಗುತ್ತದೆ. (ಅಲ್ಲಿ ಅವರ ಕರ್ಮದ ಪುಣ್ಯವು ತೀರಿದ ಮೇಲೆ ಅವರು ಪುನಃ ಭೂಲೋಕಕ್ಕೆ ಜನ್ಮತಾಳಿ ಬರುತ್ತಾರೆ ಎಂದು ಗೀತೆಯು ಹೇಳುತ್ತದೆ) ಇದರಂತೆ ಲಿಂಗಸ್ಮರಣೆ ಮಾಡುವ ಲಿಂಗಧಾರಿಗಳಲ್ಲದ ಮನುಷ್ಯರಿಗೆ ಸ್ವರ್ಗಲೋಕ ವನ್ನು ಹೊಂದುವ ಮೋಕ್ಷವು ದೊರಕುತ್ತದೆ. ಬ್ರಹ್ಮಮಯರಾದವರಿಗೆ (ಲಿಂಗ ತನ್ಮಯ ಭಾವವುಳ್ಳವರಿಗೆ) ಮೋಕ್ಷವು ಈ ಲೋಕದಲ್ಲಿಯೇ ದೊರಕಿರುತ್ತದೆ. ಅವರಿಗೆ ಭೂಲೋಕವೇ ಸ್ವರ್ಗರೂಪವಾಗಿದೆ. ಅವರಿಗೆ ಶಾಶ್ವತವಾದ ಸುಖವಿದೆ. ಆ ಸುಖದಿಂದ ಅವರು ತಿರುಗಿ ಹುಟ್ಟಿಬರುವ (ಜನ್ಮ ತಾಳುವ) ಮತ್ತು ಸಾಯುವ ತೊಡಕಿಗೆ ಒಳಪಟ್ಟವರಲ್ಲ. ಆದುದರಿಂದ ಲಿಂಗವಂತರು ತಮ್ಮ ಮಹತ್ವವನ್ನು ಚೆನ್ನಾಗಿ ತಿಳಿದುಕೊಂಡು ಅದಕ್ಕೆ ತಕ್ಕ ಆಚರಣೆಯಿಂದ ನಡೆಯುವವರಾಗಬೇಕು.

ಶಿವನು ಪಾರ್ವತಿಗೆ ಧರ್ಮ ಬೋಧೆಯನ್ನು ಮಾಡಿದಂತೆ ಅನೇಕ ಆಗಮಗಳಿವೆ. ಈ ಉಪನಿಷತ್ತಿನಲ್ಲಿ ಪಾರ್ವತಿಯು ದೇವತೆಗಳಿಗೆ ಇದು ಬ್ರಹ್ಮ ಎಂದು ತೋರಿಸಿ ಕೊಟ್ಟಿದ್ದಾಳೆ, ಎಂದು ತಿಳಿಯಬರುತ್ತದೆ. ಆದುದರಿಂದ ಆ ಕಾಲದಲ್ಲಿ ಪಾರ್ವತಿ (ಹೈಮವತಿ) ಯು ಬ್ರಹ್ಮವಿದ್ಯಾನಿಪುಣಳಾಗಿದ್ದಳೆಂದು ಚೆನ್ನಾಗಿ ವ್ಯಕ್ತವಾಗುತ್ತದೆ. ಈಗಿನ ವೀರಶೈವ ಮಹಿಳೆಯರು ಶಿವಾದ್ವೈತ ಜ್ಞಾನ ಮತ್ತು ಆಚರಣೆಗಳನ್ನು ಚನ್ನಾಗಿ ತಿಳಿದುಕೊಂಡು ಬ್ರಹ್ಮ ವಿದ್ಯೆಯನ್ನು (ಲಿಂಗ ಜ್ಞಾನ) ಇತರರಿಗೆ ಬೋಧಿಸು ವಂತೆ ಮೇಲ್ಮೆಯನ್ನು (ದೊಡ್ಡಸ್ತಿಕೆ) ಪಡೆಯುವುದು ಆವಶ್ಯಕವಾಗಿದೆ. ಉಡುತಡಿಯ ಮಹಾದೇವಿಯಕ್ಕನವರು ಈ ಬಗೆಗೆ ನಮಗೆ ಮಾದರಿ (ಮೇಲುಪಙ್ತಿ) ಆಗಿದ್ದಾಳೆ. ಈ ಉಪನಿಷತ್ತಿನಲ್ಲಿ ಮನುಷ್ಯನ ಕಿವಿಗೆ ಕಿವಿಯಾಗಿ ಬ್ರಹ್ಮನಿದ್ದಾನೆ ಎಂದು ಮುಂತಾಗಿ ತಿಳಿಯುವುದೇ ವೀರಶೈವರ ಲಿಂಗರೂಪವು. ಆದುದರಿಂದ ವೀರಶೈವ ಧರ್ಮವು ಸಕಲ ಭಾರತೀಯ ಧರ್ಮಸಾರವೆಂದು ತಿಳಿಯಬೇಕು.

ಈ ಉಪನಿಷತ್ತಿನಲ್ಲಿನ ಬ್ರಹ್ಮಾಯತನ ಶಬ್ದವು 'ಲಿಂಗಾಯತ' ಶಬ್ದಕ್ಕೆ ಸರಿಯಾಗಿ ಇದೆ. ಧೀರ ಎಂಬ ಪದವು 'ವೀರಶೈವ' ಎಂಬ ಪದದಲ್ಲಿ ಇರುವ ವೀರ ಎಂಬ ಪದಕ್ಕೆ ಸರಿಯಾಗಿ ಇದೆ. ಆದುದರಿಂದ ಇವರನ್ನು ವೀರರು ಎಂದೂ ಕರೆಯಲಿಕ್ಕೆ ಬರುತ್ತದೆ. ಒಟ್ಟಿನಲ್ಲಿ ವೀರಧರ್ಮದವರು ಇವರಾಗಿದ್ದಾರೆ. ತಮ್ಮ ಧರ್ಮದ ಶ್ರೇಷ್ಠತೆಯನ್ನು ವೀರಶೈವರು ಚನ್ನಾಗಿ ತಿಳಿದುಕೊಳ್ಳಬೇಕಾಗಿದೆ.

ಮೇಲೆ ಹೇಳಿದ ಶಾಂತಿ ಮಂತ್ರವು ಪ್ರಾರ್ಥನೆಯ ರೂಪದಲ್ಲಿ ಇದೆ. ಈ ಶಾಂತಿ ಮಂತ್ರದಲ್ಲಿ "ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಧರ್ಮಗಳು ನನ್ನಲ್ಲಿ ಇರಲಿ" ಎಂದು ಪ್ರಾರ್ಥನೆ ಮಾಡಿಕೊಂಡಿದ್ದಾರೆ. ವೀರಶೈವರಲ್ಲಿ ಈಗ ಇರುವ ಅಷ್ಟಾವರಣವು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ಭಸ್ಮ ಜಾಬಾಲೋಪನಿಷತ್ತಿನಲ್ಲಿ ತ್ರಿಪುಂಡ್ರ ಭಸ್ಮಧಾರಣೆ ಮಾಡಬೇಕೆಂದು ಇದೆ. ವಿಷ್ಣುವು ಕೂಡಾ ಭಸ್ಮಧಾರಣೆ ಮಾಡಿದ ವಿಷಯವೂ ಇದೆ. ರುದ್ರಾಕ್ಷ ಜಾಬಾಲೋಪನಿಷತ್ತಿನಲ್ಲಿ ರುದ್ರಾಕ್ಷಿಗಳನ್ನು ಧರಿಸಲು ಹೇಳಿದೆ. ಅಥರ್ವಶಿರ ಅಥರ್ವಶಿಖಾ ಉಪನಿಷತ್ತುಗಳಲ್ಲಿ ಓಂಕಾರ ಮಂತ್ರ ಜಪದ ವಿಷಯವಿದೆ. ರಾಮರಹಸ್ಯ ಉಪನಿಷತ್ತಿನಲ್ಲಿ ಶಿವಷಡಕ್ಷರ ಮಂತ್ರದ ಹೋಲಿಕೆಯು ತೋರಿಸಲ್ಪಟ್ಟಿದೆ. ಜಾಬಾಲದರ್ಶನೋಪನಿಷತ್ತಿನಲ್ಲಿ ಪಾದೋದಕ ವಿಷಯವಿದೆ. ಪ್ರಸಾದದ ವಿಷಯವೂ ಗುರುಭಕ್ತಿ ವಿಷಯವೂ ಅನೇಕ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ಲಿಂಗದ ವಿಷಯವು ಯೋಗಸಂಬಂಧದ ಉಪನಿಷತ್ತುಗಳು ಈಶಾವಾಸ್ಯ, ಮುಂಡಕ ಮೊದಲಾದ ಉಪನಿಷತ್ತುಗಳಲ್ಲಿ ಇದೆ. ಜಂಗಮದ ವಿಷಯವು 'ಜಂಗಮ' ಪದವನ್ನು ತೋರಿಸಿ ಹೇಳಲ್ಪಡದೆ ಇದ್ದರೂ ಯೋಗಿ ಎಂಬ ಪದದಲ್ಲಿ ಜಂಗಮದ ವಿವರಣೆ ದೊರಕುತ್ತದೆ. ವೀರಶೈವರಲ್ಲಿ ಸ್ವಯ ಜಂಗಮ, ಚರಜಂಗಮ, ಪರ ಜಂಗಮ ಎಂದು ಜಂಗಮದಲ್ಲಿ ಮೂರು ವಿಧವನ್ನು ಮಾಡಿ ತೋರಿಸಿದಂತೆ ಸ್ವಯ ಯೋಗಿ, ಬ್ರಹ್ಮಯೋಗ, ಪರಯೋಗಿ ಎಂದು ಯೋಗಿಗಳಲ್ಲಿ ಮೂರು ವಿಧ ಯೋಗಿ

ಗಳನ್ನು ಹೇಳಿದ್ದಾರೆ. ಪರಯೋಗಿಯ ಪೂಜೆ ಮಾಡಿದವನು ತನ್ನ ವಂಶ ಪರಂಪರೆಯು ೨೧ ತಲಾಂತರದ ಜನ್ಮದಲ್ಲಿರುವ ಜನರ ಉದ್ಧಾರ ಮಾಡುತ್ತಾನೆ ಎಂದು ಹೇಳಿದ್ದಾರೆ. ವೀರಶೈವರಲ್ಲಿಯೂ ಪರಜಂಗಮರ ಪೂಜೆಯಿಂದ ತನ್ನ ೨೧ ಕುಲದವರು ಉದ್ಧಾರ ವಾಗುತ್ತಾರೆ ಎಂಬ ತಿಳುವಳಿಕೆ ಇವೆ. ಒಟ್ಟಿನಲ್ಲಿ, ಈ ಉಪನಿಷತ್ತಿನಲ್ಲಿ ಕಂಡುಬರುವ ಪರಯೋಗಿಯೇ ಜಂಗಮವೆಂದು ಹೋಲಿಸಲಿಕ್ಕೆ ಬರುತ್ತದೆ. ಜಂಗಮನು ಶಿವ ಯೋಗಿಯು. ಇವನೂ ಉಪನಿಷತ್ತಿನಲ್ಲಿ ಹೇಳಲ್ಪಟ್ಟಂತಾಗಿದೆ. ಈ ದೆಸೆಯಿಂದ ವೀರಶೈವರ ಅಷ್ಟಾವರಣ ಧರ್ಮವು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಧರ್ಮವೇ ಆಗಿದೆ.

ಈ ಎಲ್ಲ ಕಾರಣಗಳಿಂದ ವೀರಶೈವರು ಭಾರತೀಯ ಧರ್ಮದ ಶ್ರೇಷ್ಠವಾದ ಆಚರಣೆಗಳನ್ನೇ ಉಳ್ಳವರಾಗಿದ್ದಾರೆ ಎಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಇವರು ವರ್ಣಾಶ್ರಮಗಳಿಲ್ಲದವರು, ಭಾರತೀಯ ಧರ್ಮದವರಲ್ಲಿ, ಎಂದು ಹೇಳುವುದು ತಪ್ಪಿನ ತಿಳುವಳಿಕೆಯಾಗಿದೆ. ಅನೇಕ ಉಪನಿಷತ್ತುಗಳಲ್ಲಿ ವರ್ಣಾಶ್ರಮ ಧರ್ಮ ಗಳನ್ನು ಮೀರಿದ ಧರ್ಮಾಚರಣೆಯುಳ್ಳವರೇ ( ಅತಿವರ್ಣ ಅತ್ಯಾಶ್ರಮಿಗಳೇ ) ವರ್ಣಾಶ್ರಮ ಧರ್ಮಗಳನ್ನುಳ್ಳವರಿಗಿಂತ ಶ್ರೇಷ್ಠರೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಈ ಎಲ್ಲ ಕಾರಣಗಳಿಂದ ವೀರಶೈವರು ತಾವು ಶ್ರೇಷ್ಠವಾದ ಭಾರತಧರ್ಮಿಗಳು ಎಂದು ತಿಳಿದುಕೊಂಡು, ನಾವು ಕಡಿಮೆ ಧರ್ಮದವರು, ಧರ್ಮಕ್ಕೆ ಸೇರದೇ ಇದ್ದ ವರು ಕಲ್ಪನೆಯ ಮತದವರು, ಆಚಾರ್ಯರ ಧರ್ಮದವರು, ಬಸವೇಶ್ವರನ ಧರ್ಮ ದವರು, ಬಸವಕುಲದವರು ಎಂಬ ಸುಕುಚಿತ ಜ್ಞಾನವೇನಾದರೂ ಇದ್ದರೆ ಅದನ್ನು ಸಂಪೂರ್ಣವಾಗಿ ಹೃದಯದಿಂದ ಕಿತ್ತೊಗೆದು ತಾವು ಧರ್ಮಶ್ರೇಷ್ಠರು, ಜಾತ್ಯಾತೀತರು, ಎಂಬ ಪರಮಾನಂದವನ್ನು ಹೊಂದಿ ತಮ್ಮ ಆಚರಣೆಯನ್ನು ಜಗತ್ತಿಗೆಲ್ಲ ತೋರಿಸು ವವರಾಗಿ ಜಗತ್ತಿನಲ್ಲಿ ತಮ್ಮ ಶ್ರೇಷ್ಠ ಧರ್ಮವನ್ನು ಬೀರುವವರಾಗಿ ನಡೆಯಬೇಕು. ಆಗ ವೀರಶೈವರು ಧೀರರೆಂಬುದು ಸ್ಪಷ್ಟವಾಗುವುದಿಲ್ಲವೇ ?

ಹಿಂದೂ ಧರ್ಮದ ಪದ್ಧತಿಯನ್ನು ತಿಳಿಯಲಿಕ್ಕೆ ಹೋಗುವುದಾದರೆ ಅದು ಯಾವ ತರಹದ ಮನುಷ್ಯನನ್ನಾದರೂ ತನ್ನಲ್ಲಿ ಒಳಗೊಳ್ಳುವುದಕ್ಕೆ ಸಿದ್ಧವಾಗಿ ಇದೆ.

ಒಬ್ಬನು 'ಮಹದೇವನೇ ಇಲ್ಲ' ಎಂಬ ನಾಸ್ತಿಕವಾದವನ್ನು ಹೊಂದಿದ್ದರೂ ಕೂಡಾ ಹಿಂದೂ ಧರ್ಮಕ್ಕೆ ಸಂಬಂಧಪಟ್ಟ ಚಾರ್ವಾಕನಾಗಿ ಇರಬಹುದು. ಒಬ್ಬನು 'ನಾನೇ ಮಹಾದೇವ' ಎಂದು ಭಾವಿಸುವುದಾದರೆ ಅವನೂ ಕೂಡ ಉತ್ತರವಾಗಿ ಮೀಂಸಾ ಶಾಸ್ತ್ರದ ಅಧಿಕಾರಿಯಾಗಿ ಬ್ರಹ್ಮ ವಿದ್ಯೆಯನ್ನು ತಿಳಿದಾಚರಿಸುವವನಾಗಿ ಇರಬಹುದು.

ಇಂತಹ ಹಿಂದೂ ಮತವು ಇದುವರೆವಿಗೆ ಇಡೀ ಪ್ರಪಂಚದಲ್ಲೆಲ್ಲಾ ವ್ಯಾಪಿಸಿ ಜಗತ್ತೆಲ್ಲಾ ಹಿಂದೂ ಮತದಿಂದಲೇ ತುಂಬಿ ತುಳುಕಬಹುದಾಗಿದ್ದಿತು. ಹಿಂದೂ ಜನರ ಸಂಕುಚಿತ ದೃಷ್ಟಿಯ ವರ್ತನೆಯಿಂದ ಹಿಂದೂ ಧರ್ಮ ಶಾಸ್ತ್ರವು ಮೂಲೆಗೆ ಬೀಳುವಂತೆ

ಆಗಿರುವುದಲ್ಲದೆ ಈಗಿನ ವಿದ್ಯಾವಂತರಾದ ಹಿಂದೀಯರು ಕೂಡಾ ಹಿಂದೂ ಧರ್ಮವು ಶ್ರೇಷ್ಠವಲ್ಲವೆಂದು ಹೇಳುವಂತೆ ಆಗಿದೆ. ಜಾತಿಗಳ ಕಟ್ಟುಗಳನ್ನು ಬಲವಾಗಿ ಏರ್ಪಡಿಸಿ ಕೊಂಡುದೇ ಈ ಅನರ್ಥಕ್ಕೆ ಕಾರಣವಾಗಿದೆ. ಸಾವಿರಾರು ವರ್ಷಗಳ ಪೂರ್ವದಲ್ಲಿ ಹೆಚ್ಚು ಖರ್ಚು ಉಳ್ಳ ರೀತಿಯಲ್ಲಿ ಯಜ್ಞಯಾಗಾದಿಗಳನ್ನೂ ಅನೇಕ ದೇವತೆಗಳ ಆಡಂಬರದ ಪೂಜೆಗಳನ್ನು ಇನ್ನೂ ಅನೇಕ ನಿಷ್ಪ್ರಯೋಜಕ ಕರ್ಮಗಳನ್ನೂ ಹಿಂದೂಗಳು ನಿರ್ಬಂಧ ವಾಗಿ ಏರ್ಪಡಿಸಿಕೊಂಡುದೇ ಬೌದ್ಧ ಜೈನ ಮತಗಳು ಹಿಂದೂ ದೇಶವಲ್ಲಿ ವ್ಯಾಪಿಸಲಿಕ್ಕೆ ಅವಕಾಶವಾಯಿತು. ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಅಂಗೀಕರಿಸದೆ ಅವನ್ನು ಮೀರಿದ ಅತಿವರ್ಣವೆಂಬುದೊಂದು ಹಿಂದೂ ಮತದಲ್ಲಿಯೇ ಸೇರಿಕೊಂಡಿದೆ. ಇದ ರಂತೆಯೇ ಅತ್ಯಾಶ್ರಮವೆಂಬುದೂ ಒಂದಿದೆ. ಈ ಅತಿವರ್ಣಾಶ್ರಮಗಳನ್ನು ಅನುಸರಿಸು ವವರಿಗೆ ಉಳಿದ ನಾಲ್ಕು ವರ್ಣಾಶ್ರಮಗಳ ತೊಂದರೆಯೇ ಇಲ್ಲ.

ನಾರದ ಪರಿವ್ರಾಜಕೋಪನಿಷತ್ತಿನಲ್ಲಿ "ವರ್ಣ ಆಶ್ರಮ ಮೊದಲಾದವುಗಳನ್ನು ದೇಹದಲ್ಲಿ ಮಾಯೆಯಿಂದ ಕಲ್ಪಿಸುತ್ತಾರೆ" ಎಂಬುದಾಗಿಯೂ ಮೈತ್ರೇಯ ಉಪನಿಷತ್ತಿ ನಲ್ಲಿ "ವರ್ಣಾಶ್ರಮಾಚಾರಗಳಿಂದ ಕೂಡಿದ ಮೂಢರು ತಮ್ಮ ಕರ್ಮಕ್ಕೆ ಸರಿಯಾದ ಫಲವನ್ನು ಹೊಂದುತ್ತಾರೆ. ವರ್ಣಾಶ್ರಮಾದಿ ಧರ್ಮಗಳನ್ನು ಬಿಡುವವರು ತಮ್ಮ (ಆತ್ಮನ) ಆನಂದದಲ್ಲಿ ತೃಪ್ತರಾದ ಪುರುಷರು ಆಗುತ್ತಾರೆ" ಎಂಬುದಾಗಿಯೂ ಹೇಳಲ್ಪಟ್ಟಿದೆ.

ಹೀಗೆ ಅತಿವರ್ಣಾಶ್ರಮಿಯಾಗಿ ಇರುವುದಕ್ಕೆ ನಿರಾಕಾರ ವಸ್ತುವನ್ನು ಪೂಜ್ಯ ವನ್ನಾಗಿಯೂ ಆತ್ಮರೂಪವಾಗಿಯೂ ತಿಳಿಯುವುದೇ ಮುಖ್ಯ ಕಾರಣವಾಗಿದೆ.

ಇಂಥ ಅತಿವರ್ಣಾಶ್ರಮವನ್ನು ಹಿಂದೂಗಳು ಪ್ರಚಾರಕ್ಕೆ ತರುವುದನ್ನು ಬಿಟ್ಟಿ ದ್ದರ ದೆಸೆಯಿಂದಲೇ ಹಿಂದೂಗಳು ಬಹಳ ಹಿಂದೆ ಬೀಳುತ್ತಾ ಇದ್ದಾರೆ. ನಿರಾಕಾರ ನಾದ ಮಹಾದೇವನನ್ನು ನಂಬಿದವನಿಗೆ ಬ್ರಾಹ್ಮಣಾದಿ ವರ್ಣಭೇದಗಳ ಗೋಜೇ ಇಲ್ಲ. ಅತನು ಸ್ವತಂತ್ರನಾಗಿ ಇರಲಿಕ್ಕೆ ಅವಕಾಶವಿದೆ. ಈ ಅತಿವರ್ಣಾಶ್ರಮದ ಪ್ರಚಾರವು ಹೆಚ್ಚಾದ ಹಾಗೆಲ್ಲಾ ಹಿಂದೂ ಮತದ ಕಡೆಗೆ ಜನರ ಒಲುಮೆಯು ಹೆಚ್ಚಾಗಿ ಆಗುವುದ ರಲ್ಲಿ ಏನೂ ಸಂಶಯವಿಲ್ಲ.

ಯಾವನಿಗೆ ತನ್ನ ಆತ್ಮ (ತನ್ನಲ್ಲಿ ಶಿವರೂಪ) ದರ್ಶನದಿಂದ ವರ್ಣಾಶ್ರಮಾಚಾರ ಗಳು ಕಳಚಿ ಹೋಗಿರುತ್ತವೆಯೋ ಅವನು ಎಲ್ಲಾ ವರ್ಣಗಳನ್ನು ಆಶ್ರಮಗಳನ್ನು ಮೀರಿ ತನ್ನ ಆತ್ಮನಲ್ಲಿಯೇ (ಶಿವರೂಪದಲ್ಲಿಯೇ ಇರತಕ್ಕವನು). ಯಾವನು ತನ್ನ ಆಶ್ರಮಗಳನ್ನು ವರ್ಣಗಳನ್ನೂ ಮೀರಿ ಆತ್ಮನಲ್ಲಿಯೇ ( ತನ್ನಲ್ಲಿಯೇ = ಬ್ರಹ್ಮ ನಲ್ಲಿಯೇ = ಶಿವನಲ್ಲಿಯೇ) ಕೂಡಿರುವವನಾಗಿ ಶ್ರೇಷ್ಠನಾಗಿರುವನೋ ಅವನು ಸಮಸ್ತ ವೇದಗಳ ಅರ್ಥವನ್ನು ತಿಳಿದವರಿಂದ ಅತಿವರ್ಣಾಶ್ರಮಿ ಎಂದು ಹೇಳಲ್ಪಡುತ್ತಾನೆ. ಆದ್ದರಿಂದ ಆತ್ಮನಿಗಿಂತ ಬೇರೆಯಾಗಿ ಇರುವ ವರ್ಣಗಳಾಗಲಿ, ಆಶ್ರಮಗಳಾಗಲಿ ಆತ್ಮನಲ್ಲಿ (ಮನುಷ್ಯನಲ್ಲಿ) ಭ್ರಾಂತಿಯಿಂದ ಆರೋಪಿಸಲ್ಪಟ್ಟಿವೆ ಎಂದು ಆತ್ಮವೇದಿಗಳು (ಸ್ವಸ್ವರೂಪ

ಬ್ರಹ್ಮಜ್ಞಾನಿಗಳು— ಅಂಗಲಿಂಗ ಸಾಮರಸ್ಯವುಳ್ಳವರು) ತಿಳಿಯುತ್ತಾರೆ. ಇಂತಹ ಬ್ರಹ್ಮಜ್ಞಾನಿಗಳಿಗೆ ವಿಧಿ, ನಿಷೇಧ, ವರ್ಜ್ಯ (ಬಿಡಲ್ಪಡತಕ್ಕದ್ದು), ಅವರ್ಜ್ಯಗಳೂ ಇದರಂತೆ ಉಳಿದ ಯಾವುದಾದರೂ ಕಲ್ಪನೆಯು ಇರುವುದಿಲ್ಲ. (ಹೀಗೆ ನಾರದ ಪಾರಿವ್ರಾಜಕ ಉಪನಿಷತ್ತಿನಲ್ಲಿ ಹೇಳಿದೆ).

ಈ ಅತಿವರ್ಣಾಶ್ರಮವು ಶ್ರೇಷ್ಠವೆಂಬುದನ್ನೇ ಕರ್ನಾಟಕದಲ್ಲಿ ಪ್ರಸಿದ್ಧನಾದ ಬಸವೇಶ್ವರನು ೧೨ ನೆಯ ಶತಮಾನದಲ್ಲಿ ಬೋಧಿಸಿದನು. ಈ ಅತಿವರ್ಣವು ಎಲ್ಲರನ್ನೂ ಸಮಾನ ಸ್ಥಿತಿಯಲ್ಲಿ ಇರಿಸುವುದು. ಅತಿವರ್ಣವೆಂದರೆ ವರ್ಣಗಳನ್ನೊಲ್ಲದೆ ಮನಸ್ಸು ಬಂದ ಹಾಗೆ ಇರುವುದಲ್ಲ. ಇದಕ್ಕೂ ಕೆಲವು ಲಕ್ಷಣಗಳಿವೆ. ಈ ಲಕ್ಷಣಗಳು ಸಂಸ್ಕಾರದಿಂದ ಆಗಬೇಕು. ಇದೇ ವೀರಶೈವರಲ್ಲಿ ಈಗ ಬಳಕೆಯಲ್ಲಿ ಇದೆ. ಇದನ್ನು ಚೆನ್ನಾಗಿ ತಿಳಿದುಕೊಂಡು ವೀರಶೈವರು ತಮ್ಮ ಧರ್ಮದಲ್ಲಿ ನಿರತರಾಗಿ ಇರಬೇಕಾಗಿದೆ. ಇದೇ ಜಾತ್ಯತೀತವಾಗಿರಲಿಕ್ಕೆ ಶ್ರೇಷ್ಠ ಸ್ಥಿತಿ ಎಂದೂ ತಿಳಿದುಕೊಂಡಿರಬೇಕಾಗಿದೆ.

—(ಸಂ. ೧೪೦)

# ಶಿವಾನುಭವ

(ಬಿಜಾಪುರದ ಡಿಸ್ಟ್ರಿಕ್ ಬಾದಾಮಿ ತಾಲ್ಲೂಕು ಶಿವಯೋಗ ಮಂದಿರದಲ್ಲಿ ನಡೆದ ಶಿವಾನುಭವ ಗೋಷ್ಠಿಯಲ್ಲಿ ಅಧ್ಯಕ್ಷರಾದ ಶ್ರೀ ನಿ. ಪ್ರವಣ ಸ್ವರೂಪಿ ಶಿವಲಿಂಗಸ್ವಾಮಿಗಳು, ಹುಕ್ಕೇರಿಮಠ, ಹಾವೇರಿ ಇವರು ಮಾಡಿದ ಅಧ್ಯಕ್ಷ ಭಾಷಣದ ವರದಿ)

---

"ಇಂದು ಈ ಪುಣ್ಯ ಭೂಮಿಯಲ್ಲಿ ನೆರವೇರುತ್ತಿರುವ ಶಿವಾನುಭವ ಗೋಷ್ಠಿಯ ಅಧ್ಯಕ್ಷತೆಯನ್ನು ನನಗೆ ವಹಿಸಿಕೊಟ್ಟುದು ತಮ್ಮೆಲ್ಲರ ಪ್ರೀತಿ ವಿಶ್ವಾಸಗಳ ದ್ಯೋತಕವಾಗಿದೆ ಎಂಬುದನ್ನು ಕೃತಜ್ಞತೆಯಿಂದ ನೆನೆದು ಈ ಸುಪ್ರಸಂಗದಲ್ಲಿ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ.

ಶಿವಾನುಭವವೆಂದರೇನು? ಶಿವನ ಯಥಾರ್ಥವಾದ ಅನುಭವವನ್ನು ಉಂಟು ಮಾಡಿಕೊಳ್ಳುವುದೇ ಶಿವಾನುಭವ. ಈ ದೇಹದ ಪೋಷಣೆಗೆ ಅನ್ನವು ಆವಶ್ಯಕವಾಗಿರುವ ಹಾಗೆ ಆತ್ಮನ ಪೋಷಣೆಗೆ ಶಿವಾನುಭವದೋಗರವು ಅತ್ಯಾವಶ್ಯಕವಾಗಿದೆ. ಅದು ಪ್ರಪಂಚದ ತಾಪತ್ರಯದಲ್ಲಿ ಬೆಂದು ಬೆಂಡಾಗುತ್ತಿರುವ ಪ್ರತಿಯೊಬ್ಬ ಮಾನವನ ಮನದ ಸಂತಾಪವನ್ನು ಕಳೆದು ಅವನಿಗೆ ಚಿರಶಾಂತಿಯನ್ನು ಮಾಡುವ ಅಮೃತ ಸಂಜೀವಿನಿಯಾಗಿದೆ. ವೇದಾಗಮಗಳಿಗೆ, ಅಪ್ರಮೇಯನೂ ಅಗಮ್ಯನೂ, ಅನಿರ್ವಚನೀಯನೂ ಆದ ಪರಶಿವ (ಪರಬ್ರಹ್ಮ)ನನ್ನು ಒಂದು ಹೊಸಬಗೆಯಿಂದ, ಒಂದು ಹೊಸ ದೃಷ್ಟಿಯಿಂದ ನಮ್ಮ ಅನುಭವಕ್ಕೆ ನಿಲುಕಿಸಿಕೊಡುವುದು ಶಿವಾನುಭವಿಗಳ ಮಹೋದ್ದೇಶವಾಗಿದೆ.

ಕಾಣಲಾಗದ ವಸ್ತುವನ್ನು ಪ್ರತ್ಯಕ್ಷ ತೋರಿಸುವ ಸಾಮರ್ಥ್ಯ ಮಾತು ಮನಗಳಿಗೆ ಅಗೋಚರವಾದುದನ್ನು ಗೋಚರಿಸಿಕೊಡುವ ಶಕ್ತಿ ಈ ಶಾಸ್ತ್ರದಲ್ಲಿದೆಯೆಂದು ಹೇಳಬಹುದಾಗಿದೆ.

ಅಷ್ಟಾವರಣ ಸಂಪನ್ನನೂ ಪಂಚಾಚಾರ ಪಾರಾಯಣನೂ ಆದ ವೀರಶೈವನು ಸದಾಕಾಲವೂ ಶಿವಚಿಂತನೆಯಲ್ಲಿದ್ದು, ತನ್ನ ಅಂಗಗುಣಗಳನ್ನು ಲಿಂಗಗುಣಗಳನ್ನಾಗಿ ಮಾರ್ಪಡಿಸಿಕೊಂಡು, ಲಿಂಗ ಭೋಗೋಪಭೋಗಿಯಾಗಿ, ನಿತ್ಯಾನಂದದಲ್ಲಿ ಲೋಲಾಡುತ್ತಿರುವನು. ಈ ವಿಚಾರವನ್ನು ಮಾಯಾ ಕೋಲಾಹಲನಾದ ಮಗ್ಗೆಯ ಮಾಯಿದೇವನು ತನ್ನ ಶತಕತ್ರಯದಲ್ಲಿ ಬಹುಸುಂದರವಾಗಿ ನಿರೂಪಿಸಿದ್ದಾನೆ.

ನುಡಿವೆಡೆಯಲ್ಲಿ ನೋಡುವೆಡೆಯಲ್ಲಿ ರಮಿಪ್ಪೆಡೆಯಲ್ಲಿ ವಸ್ತುವಂ
ಪಿಡಿವೆಡೆಯಲ್ಲಿ ಭೋಗಿಪೆಡೆಯಲ್ಲಿ ಸುಖಂ ಬಡುವಲ್ಲಿ ದೇಹಮಂ

ಬಿಡುವೆಡೆಯಲ್ಲಿ ಲಿಂಗಕಳೆ ಲಿಂಗಸುಖಂ ಘನಲಿಂಗ ಯೋಗ ಮಾ
ದೊಡೆ ಬಳಿಕಾ ಮಹಾತ್ಮನನದೇನೆನ ಬರ್ಪುದದಂ ಶಿವಾಥವಾ

ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೂ ಮಾಡುವ ಪ್ರತಿಯೊಂದು ಕೃತಿಯಲ್ಲಿ ಲಿಂಗಕಲೆ ಲಿಂಗಗುಣಗಳನ್ನು ಅಳವಡಿಸಿಕೊಂಡು, ಲಿಂಗಮಯ ಜೀವನವನ್ನು ಸಾಗಿಸ ಬೇಕೆಂದು ಹೇಳುತ್ತಾನೆ.

ಈ ಬಗೆಯ ಪರಿಶುದ್ಧಾಂತಃಕರಣವುಳ್ಳ ಜೀವನು ಷಟ್‌ಸ್ಥಲ ಕ್ರಮವಿಡಿದು ನಡೆದು, ಕೊನೆಗೆ ಹಾಲಿನಲ್ಲಿ ಹಾಲು ಬೆರೆದಂತೆ, ನೀರಿನಲ್ಲಿ ನೀರು ಬೆರೆದಂತೆ, ಆಣೆಕಲ್ಲು ಗಳೆರಡು ಒಂದುಗೂಡಿದಂತೆ, ಉರಿ ಕರ್ಪೂರಗಳೆರಡು ಏಕಾಕಾರವಾದಂತೆ ಶಿವನಲ್ಲಿ ಸಮರಸ ಹೊಂದುವುದೇ ವೀರಶೈವರ ಚರಮಧ್ಯೇಯವಾಗಿದೆ.

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿತಾ ।
ತಸ್ಯಾಂ ರಮತೇ ಯೇಶೈವಾ ವೀರಶೈವಾಸ್ತುತೇ ಮತಾಃ ॥

ಎಂಬ ಸಿದ್ಧಾಂತ ಶಿಖಾಮಣಿಯ ಶ್ಲೋಕವೂ ಸಹ ಇದೇ ಅರ್ಥವನ್ನು ಸ್ಪಷ್ಟ ಪಡಿಸುತ್ತದೆ.

ಶಿವಾನುಭವ ಪರಮಾನಂದವನ್ನು ಬಯಸುವವರು ಅದನ್ನು ಆಚರಿಸಿ, ಅನು ಭವಿಸಿ ಅರಿಯಬೇಕು. ಅದು ಬರಿಯ ಬಣ್ಣಬಣ್ಣದ ಮಾತುಗಳಿಂದಾಗಲೀ ಬೌದ್ಧಿಕ ಚರ್ಚಾಕೂಟಗಳಿಂದಾಗಲೀ ದೊರಕುವುದಲ್ಲ. ಕಲ್ಲುಸಕ್ಕರೆಯನ್ನು ಎಷ್ಟು ಬಣ್ಣಿಸಿ ದರೂ ಉಪಯೋಗವಿಲ್ಲ. ಅದನ್ನು ಸ್ವತಃ ಸೇವಿಸಿದಾಗಲೇ ಅದರ ರುಚಿ ತಿಳಿಯು ವುದು. ಅದರ ಮಾಧುರ್ಯದ ಅರಿವಾಗುವುದು. ಶಿವಾನುಭವದ ವಿಷಯವೂ ಹಾಗೆಯೇ ಇದೆ.

"ನುಡಿಯಬಹುದು ಅದ್ವೈತವನೊಂದು ಕೋಟಿವೇಳೆ
ನಡೆಯಬಹುದೆ ಸಜ್ಜನ ಸದಾಚಾರ ಶುದ್ಧವಾಗಿ......"

ಎಂದು ಕೇಳುತ್ತಾರೆ ಶರಣರು.

ಶಿವಾನುಭವದ ಸವಿಜೇನನ್ನು ಸೇವಿಸಬಯಸುವವರು ಆ ದಿಸೆಯಲ್ಲಿ ಬರುವ ವಿಘ್ನವಿಪತ್ತುಗಳನ್ನು ಧೈರ್ಯದಿಂದ ಎದುರಿಸಿ, ಮುಂದುವರಿಯಬೇಕಾಗುತ್ತದೆ. ಆಗ ಮಾತ್ರ ಅದು ಅಂಗೈ ನೆಲ್ಲಿಕಾಯಾಗುತ್ತದೆ. ಇಲ್ಲಿ ಸಂತ ಕಬೀರನ ಒಂದು ಮಾತು ನೆನಪಾಗುತ್ತದೆ.

ಸಾಂ ಯೀಕಾ ಘರ ದೂರ ಹೈ ಹೈಸಾ ಲಂಬಾ ಖಜೂರ ।
ಚಢೇತೋ ಚಾಖೇ ಪ್ರೇಮರಸ ಗಿರೇತೋ
ಚಕನಾಚೂರ

ಆದ್ದರಿಂದ ಈ ಅನುಭವದ ಮಾರ್ಗವು ಬಹುದುಸ್ತರವಾದುದು. ಬಹು ಎಚ್ಚರದಿಂದ ನಡೆಯಬೇಕಾಗುವುದು. ಇದಕ್ಕೆ ನಿರಂತರ ಸಾಧನೆ, ಗೀತೋಕ್ತವಾದ ಯುಕ್ತಾಹಾರ ವಿಹಾರಗಳು ಆಚಾರ–ವಿಚಾರಗಳು ಅತ್ಯವಶ್ಯವಾಗಿ ಬೇಕು.

ರಾಜನಾಗಲಿ ರಂಕನಾಗಲಿ, ಭೋಗಿಯಾಗಲಿ ತ್ಯಾಗಿಯಾಗಲಿ, ಸ್ತ್ರೀಯಾಗಲಿ, ಪುರುಷನಾಗಲಿ ಯಾರಾದರೂ ಸಹ ಶಿವಾನುಭವದ ರಸದೂಟವನ್ನು ಮಾಡಬಹುದಾಗಿದೆ."

ಎಂದ ಶ್ರೀಗಳವರು ಸರ್ವಜ್ಞನ ಮತ್ತು ಬಸವಣ್ಣನವರ ವಚನಗಳನ್ನು ಉಲ್ಲೇಖಿಸಿ, "ಪ್ರತಿಯೊಬ್ಬರೂ ತಮಗೆ ಸಾಧ್ಯವಿದ್ದ ಶಿವಾನುಭವವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಿತ್ಯ ಸುಖವನ್ನು ಪಡೆಯಲಿಕ್ಕೆ ಪ್ರಯತ್ನಿಸಬೇಕು.

ಆತ್ಮನ ಹಸಿವನ್ನು ಹಿಂಗಿಸುವ ಶಾಸ್ತ್ರವನ್ನು ಈ ಇಪ್ಪತ್ತನೆಯ ಶತಮಾನದಲ್ಲಿ ಮೊಟ್ಟಮೊದಲು ಪ್ರಚಾರ ಮಾಡಿದ ಶ್ರೇಯಸ್ಸು ಲಿಂಗೈಕ್ಯ ಪರಮಪೂಜ್ಯ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರಿಗೆ ಸಲ್ಲತಕ್ಕದ್ದಾಗಿದೆ. ಅವರು ತಮ್ಮ ಪಾವನ ಜೀವನವನ್ನೆಲ್ಲ ಶಿವಾನುಭವದ ತತ್ವದ ಪ್ರಚಾರ ಪ್ರಸಾರಗಳಿಗಾಗಿ ಮುಡುಪಾಗಿಟ್ಟಿದ್ದರು. ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ, ಸುಪ್ತ ಸಮಾಜದಲ್ಲಿ ಒಂದು ಹೊಸ ಚೈತನ್ಯವನ್ನುಂಟು ಮಾಡಿದರು. ಅವರು ನುಡಿದು ನಡೆಯುವವರಾಗಿರಲಿಲ್ಲ. ನಡೆದು ನುಡಿಯುವವರಾಗಿದ್ದರು. ಅಂತೆಯೇ ಅವರ ಮಾತು ಜ್ಯೋತಿರ್ಲಿಂಗವಾಗಿ ಪರಿಣಮಿಸಿ, ಜನಜಾಗೃತಿಯನ್ನು ಉಂಟು ಮಾಡುತ್ತಿದ್ದಿತು.

ಅವರ ಆಗಿನ ಕಾಲದಲ್ಲಿ ನಡೆಯುತ್ತಿದ್ದ ಚರ್ಚಾ ಕೂಟಗಳೂ ಸಭೆ ಸಮ್ಮೇಲನಗಳೂ ಮಾತಿನ ಮಾಲೆಯಾಗಿರದೆ ಪ್ರತಿಯೊಂದೂ ಪ್ರಯೋಗ ಶಾಲೆಗಳಾಗುತ್ತಿದ್ದುವು.

ಇಂತಹ ಮಹತ್ವಪೂರ್ಣವಾದ ಶಿವಾನುಭವ ಗೋಷ್ಠಿಯೊಂದನ್ನು ಮೊಟ್ಟಮೊದಲು ಅಂದರೆ ೧೯೧೪ನೆಯ ಇಸ್ವಿಯಲ್ಲಿ ಶ್ರೀಗಳವರು ನೆರವೇರಿಸಿದರು.

ಶಿರಾಳಕೊಪ್ಪದ ಸಮೀಪದಲ್ಲಿ ಅನಿಮಿಷಾರ್ಯನ ಕೊಪ್ಪವೆಂದು ಇಂದಿಗೂ ಪ್ರಸಿದ್ಧವಾಗಿರುವ ಪವಿತ್ರ ಸ್ಥಾನದಲ್ಲಿ ಈ ಕಾರ್ಯಕ್ರಮವು ಎಡೆಬಿಡದೆ ಹದಿನೈದು ದಿನಗಳವರೆವಿಗೆ ನಡೆಯಿತು. ಅಲ್ಲಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಯೋಗ, ನೀತಿ, ಧರ್ಮ ಮುಂತಾದ ವಿಷಯಗಳ ತಾತ್ವಿಕವಾದ, ಶಾಸ್ತ್ರ ಸಮ್ಮತವಾದ ಚರ್ಚೆ ನಡೆಯಿತು. ಆಗ ಅಲ್ಲಿ ಎಷ್ಟೋ ಜನ ಶಾಸ್ತ್ರಿಗಳು, ಸಾಧಕರು, ಮುಮುಕ್ಷುಗಳು ಒಂದುಗೂಡಿದ್ದರು. ಅವರಲ್ಲಿ ಈಗ ನವಿಲುಗುಂದ ಗವಿಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಬಸವಲಿಂಗ ಸ್ವಾಮಿಗಳು, ಇಲಕಲ್ಲಿನ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು, ಕೆಳದಿಯ ಪಟ್ಟಾಧ್ಯಕ್ಷರು, ಬಿದಿರೆಯ ಶ್ರೀ ಪಟ್ಟಾಧ್ಯಕ್ಷರು, ಪಂ. ಸೋಮನಾಥ ಶಾಸ್ತ್ರಿಗಳು ಮತ್ತು ಕಬ್ಬೂರು ಶರಣರು ಮೊದಲಾದವರು ಪ್ರಮುಖರಾಗಿದ್ದರು.

ಈ ಕಾರ್ಯಕ್ರಮ ಮುಗಿದ ಒಂದುವರ್ಷದ ನಂತರ ಅದೇ ಭಾಗದ ಮತ್ತೊಂದು ಗ್ರಾಮದಲ್ಲಿ ಸಮಗ್ರ ಒಂದು ತಿಂಗಳವರೆಗೆ ಶಿವಾನುಭವಗೋಷ್ಠಿಯು ತುಂಬಾ ಯಶಸ್ವಿಯಾಗಿ ಜರುಗಿತು.

ಈ ರೀತಿಯಾಗಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಶಿವಾನುಭವದ ಉಜ್ವಲ ತತ್ತ್ವಗಳನ್ನು ನಾನಾ ಮುಖವಾಗಿ ಪ್ರಸಾರ ಮಾಡಿದರು.

ವೀರಶೈವ ಸಿದ್ಧಾಂತದ ವ್ಯಾಪಕವಾದ ತತ್ತ್ವಗಳನ್ನು ಭಾರತದ ತುಂಬೆಲ್ಲ ಪ್ರಚಾರಗೊಳಿಸುವ ಮಹೋದ್ದೇಶವನ್ನಿಟ್ಟುಕೊಂಡೇ "ಅಖಿಲ ಭಾರತ ವೀರಶೈವ ಮಹಾಸಭೆ"ಯನ್ನು ಕ್ರಿ. ಶ. ೧೯೦೪ರಲ್ಲಿ ಸ್ಥಾಪಿಸಿದರು. ಕ್ರಿ. ಶ. ೧೯೦೯ರಲ್ಲಿ ಶ್ರೀ ಶಿವಯೋಗ ಮಂದಿರ ಸಂಸ್ಥೆಯನ್ನು ನಿರ್ಮಿಸಿದರು.

"ಪರದೇಶದಲ್ಲಿಯೂ ಸಹ ಶಿವಾನುಭವದ ಸೂಕ್ಷ್ಮ ತತ್ವಗಳನ್ನು ಹೇಳಲು ಯೋಗ್ಯರಾದವರನ್ನು ತಯಾರಿಸಬೇಕೆಂಬ ದೂರದೃಷ್ಟಿಯನ್ನಿಟ್ಟುಕೊಂಡಿದ್ದರು. ಈ ಮಾತನ್ನು ಆಗಿನ ಕಾಲದಲ್ಲಿ ಅಂದರೆ ಸುಮಾರು ಇಂದಿಗೆ ಅರ್ಧಶತಮಾನದ ಹಿಂದೆಯೇ ಅವರು ಮಾಡಿದ ಶಿವಯೋಗ ಮಂದಿರದ ಘಟನಾ ನಿಯಮಗಳನ್ನು ನೋಡಿದಾಗ ಸ್ಪಷ್ಟವಾಗಿ ತಿಳಿಯಬಹುದಾಗಿದೆ."

ಎಂದು ಮುಂತಾಗಿ ಉಪದೇಶವಿತ್ತ ಶ್ರೀಗಳವರು "ಶ್ರೀ ಕುಮಾರೇಶ್ವರನ ಕೃಪೆಯಿಂದ ಈ ಪವಿತ್ರ ಕಾರ್ಯವು ಇನ್ನೂ ಭರದಿಂದ ನಡೆದು, ನಾಡಿನ ಜನತೆಗೆ ಸಮೃದ್ಧಿಯುಂಟಾಗಲಿ, ಸುಖ-ಶಾಂತಿಗಳು ದೊರೆಯಲಿ" ಎಂದು ಹಾರೈಸಿ ತಮ್ಮ ಭಾಷಣವನ್ನು ಮುಕ್ತಾಯಗೊಳಿಸಿದರು. (-ಸಂ. ೧೫೦)

# ಶಿವಯೋಗ ಮಂದಿರದಲ್ಲಿ

(೧೭ನೆಯ ವೀರಶೈವ ಮಹಾಸಭೆ ಮತ್ತು ಇತರ ಕಾರ್ಯಕ್ರಮಗಳು)

---

೧೯೬೦ನೆಯ ಫೆಬ್ರುವರಿ ೨೧ ಮತ್ತು ೨೨ನೆಯ ದಿನಾಂಕಗಳಲ್ಲಿ ವೀರಶೈವ ಮಹಾಸಭೆಯ ೧೭ನೆಯ ಅಧಿವೇಶನವು ಶ್ರೀ ಶಿವಯೋಗ ಮಂದಿರದಲ್ಲಿ ನಡೆಸಲ್ಪಡುವುದೆಂದು ಈ ಮೊದಲೇ ನಿಶ್ಚಯ ಮಾಡಲ್ಪಟ್ಟ ಪ್ರಕಾರ ಈ ಮಹಾಸಭೆಯ ಅಧಿವೇಶನ ಸಮಿತಿಯವರು ಏರ್ಪಾಡು ಮಾಡಿದ್ದರು. ಶಿವಯೋಗ ಮಂದಿರದ ರಸ್ತೆಯ ಎರಡೂ ಪಕ್ಕಗಳಲ್ಲಿಯೂ ಸುಸ್ವಾಗತ ಮಂಟಪಗಳು ಬಹಳ ಅಂದವಾಗಿ ಏರ್ಪಡಿಸಲ್ಪಟ್ಟಿದ್ದುವು. ಮಂದಿರದ ಒಳಗಿನ ದಾರಿಗಳಲ್ಲಿ ನೀರಿನ ಚಳೆಯವನ್ನು ಕೊಟ್ಟು ಪ್ರತಿದಿನ ೧೦ ಘಂಟೆಯಿಂದ ಸಾಯಂಕಾಲ ೪ ಘಂಟೆಯವರೆಗೂ ತಂಪಾಗಿ ಇರುವಂತೆ ಏರ್ಪಡಿಸಲು ಮಿಷನ್ನುಗಳ ಮೂಲಕವಾಗಿ ಸಿದ್ಧಮಾಡಲಾಗಿದ್ದಿತು. ಮಲಾಪಹಾರಿ ನದಿಯಿಂದ ನೀರನ್ನೆತ್ತಿ ಭೋಜನ ಶಾಲೆಗಳಿಗೆ ನಲ್ಲಿಗಳ ಮೂಲಕ ನೀರನ್ನು ಹಂಚಲಾಗಿದ್ದಿತು. ಪತ್ರಿಕಾ ಪ್ರತಿನಿಧಿಗಳಿಗೆ ಇಳಿದುಕೊಳ್ಳುವುದಕ್ಕಾಗಿ ಪ್ರತ್ಯೇಕ ಸ್ಥಳ ಏರ್ಪಡಿಸಲ್ಪಟ್ಟಿದ್ದಿತು. ಮಹಾಸಭೆಗಾಗಿ ಭವ್ಯವಾದ ಭವನವು ವಿಧವಿಧವಾದ ಬಣ್ಣಗಳಿಂದ ಕೂಡಿದ ಬಟ್ಟೆಯಿಂದಲೂ ಮೇಲು ಹೊದಿಕೆಯಿಂದಲೂ ಏರ್ಪಡಿಸಲಾಗಿದ್ದಿತು. ಧ್ವನಿವಾಹಕ ಯಂತ್ರಗಳ ತೃಪ್ತಿಕರವಾದ ಏರ್ಪಾಡು ಮಾಡಲ್ಪಟ್ಟಿದ್ದಿತು. ಪ್ರತಿನಿಧಿಗಳಾಗಿ, ಅವರ ಊಟಕ್ಕಾಗಿ ೨-೩ ಕಡೆ ಭೋಜನ ಶಾಲೆಗಳು, ಕೋಣೆಗಳು ಏರ್ಪಡಿಸಲ್ಪಟ್ಟಿದ್ದುವು. ನದಿಯ ದಡದಲ್ಲಿನ ಈ ಕೋಣೆಗಳು ಮನೋಹರವಾಗಿ ವಿರಾಜಿಸುತ್ತಿದ್ದುವು. ಮಹಿಳೆಯರಿಗಾಗಿ ಪ್ರತ್ಯೇಕ ಸ್ಥಳಗಳೂ ಭೋಜನ ಶಾಲೆಗಳೂ ಏರ್ಪಡಿಸಲ್ಪಟ್ಟಿದ್ದುವು. ಬೆಂಗಳೂರಿನಿಂದ ಬಂದ ಮಹಾಜನಂಗಳಿಗೆ ಶಿವಯೋಗ ಮಂದಿರದ ಪುಸ್ತಕ ಭಂಡಾರದ ಶಾಲೆಯೇ ಬಿಡಲ್ಪಟ್ಟಿದ್ದಿತು. ಮಂದಿರದ ಉಳಿದ ಕಟ್ಟಡಗಳು ಮಹಾಸಭೆಯ ಗಣ್ಯವ್ಯಕ್ತಿಗಳಿಗಾಗಿ ಬಿಡಲ್ಪಟ್ಟಿದ್ದುವು. ರಾತ್ರಿಯಲ್ಲಿ ಎಲ್ಲ ಕೋಣೆಗಳೂ ಸಭಾಮಂಟಪ ಮೊದಲಾದುವುಗಳೂ ಎಲ್ಲ ದಾರಿಗಳೂ ವಿದ್ಯುಚ್ಛಕ್ತಿಯ ದೀಪಗಳಿಂದ ರಾತ್ರಿಯಲ್ಲಿ ಶೋಭಿಸುತ್ತಿದ್ದುವು.

ಮಂದಿರದೊಳಗೆ ಪ್ರವೇಶಿಸಿದ ಕೂಡಲೆ ಒಂದು ಸ್ವಾಗತ ಮಂಟಪವು ಅನೇಕ ರಂಗಿನ ವಿದ್ಯುದ್ದೀಪಗಳೊಡನೆ ಬಹುಮನೋಹರವಾಗಿ ಶೋಭಿಸುತ್ತಿದ್ದಿತು. ಕಕ್ಕಸಗಳು ಸುಮಾರು ೪೦೦ ಏರ್ಪಾಡಾಗಿದ್ದುವು. ಪ್ರೇಕ್ಷಕರಿಗೆ ಅನುಕೂಲ ಮಾಡುವುದಕ್ಕಾಗಿ ಒಂದು ಉಚಿತವಾದ ಭೋಜನ ಶಾಲೆಯೂ ಏರ್ಪಾಡಾಗಿದ್ದಿತು. ಮಂದಿರಕ್ಕೆ ಬಂದ ಎಲ್ಲ ಜನರಿಗೂ ಊಟ ಮಾಡಿಸಲಿಕ್ಕೆ ಮಂದಿರದ ದಾಸೋಹ ಮನೆಯೂ ಬಹು ಉಪಕರಣಗಳಿಂದ ಸಿದ್ಧವಾಗಿದ್ದಿತು.

ಶ್ರೀ ಕುಮಾರ ಯೋಗಿಗಳಿಂದ ಸ್ಥಾಪಿಸಲ್ಪಟ್ಟು ಇಂತಹ ವೈಭವವನ್ನು ಹೊಂದಿ ಮದರಿಂದ ಇದಕ್ಕೆ 'ಕುಮಾರ ನಗರ' ಎಂಬ ಹೆಸರು ಕೊಡಲ್ಪಟ್ಟಿರುವುದು ಅನ್ವರ್ಥಕ ನಾಮವಾಗಿರುವುದಲ್ಲವೆ ?

೨೦-೨-೬೦ನೆಯ ದಿನ ಬೆಳಿಗ್ಗೆ ೯ ಘಂಟೆ ಸುಮಾರಿನಲ್ಲಿ ಅಧ್ಯಕ್ಷರಾದ ಶ್ರೀ ದಾನಪ್ಪ ಜಿಂತಪ್ಪ ಪಾವಟೆ ರ್‍ಯಾಂಗ್ಲರ್, ಉಪಕುಲಪತಿಗಳು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರು ಮಹಾಸಭೆಯ ಮಂಟಪಕ್ಕೆ ದಯಮಾಡಿಸಿದರು. ಶ್ರೀ ನಿ. ಪ್ರ. ಸ್ವರೂಪಿ ಬಸವಲಿಂಗ ಸ್ವಾಮಿಗಳು ನವಿಲಗುಂದ ಗವಿಮಠ ಇವರು ಸ್ವಾಗತ ಸಮಿತಿಯ ಅಧ್ಯಕ್ಷ ಭಾಷಣ ಮಾಡಿದರು. ಶ್ರೀ ನಿ. ಪ್ರ. ಸಂಗನಬಸವ ಸ್ವಾಮಿಗಳು ಕಮರೀಮಠ ಬಂಥನಾಳ ಇವರು ವೀರಶೈವ ಮಹಾಸಭೆಯ ೧೬ನೆಯ ಅಧಿವೇಶದ ಕಲ್ಯಾಣದ ಮಹಾ ಸಭೆಯ ಅಧ್ಯಕ್ಷರಾದಂದಿನಿಂದ ನಡೆದ ಕೆಲಸಗಳ ಮತ್ತು ವರದಿಯನ್ನು ಓದಿದರು.

ಆಮೇಲೆ ಶ್ರೀ ರ್‍ಯಾಂಗ್ಲರ್ ಡಿ. ಸಿ. ಪಾವಟೆ ಅವರ ಅಧ್ಯಕ್ಷ ಭಾಷಣವಾಯಿತು. ಅದು ವೀರಶೈವ ಧರ್ಮವು ಕ್ರಿ. ಶ. ೧೨ನೆಯ ಶತಮಾನದಲ್ಲಿ ಸರ್ವಾಂಗ ಸುಂದರವಾಗಿ ಸರ್ವರಿಗೂ ಹಿತದಾಗಿ ಕಾಯಕವನ್ನು ಮಾಡಬೇಕೆಂಬ ತಳಹದಿಯಲ್ಲಿ ಬಸವಾದಿ ಶಿವಶರಣ ರಿಂದ ನಿರ್ಮಾಡಿಸಲ್ಪಟ್ಟು ಆಮೇಲೆ ಕುಗ್ಗುತ್ತ ಹಿಗ್ಗುತ್ತ ಈಗ ಹೀನಸ್ಥಿತಿಗೆ ಇಳಿದಿರುವು ದೆಂದೂ ಇದರ ಪುನರ್ಘಟನೆ ಮಾಡುವುದು ಅವಶ್ಯವೆಂದೂ ಇವೇ ಮೊದಲಾದ ವಿಷಯಗಳಿಂದ ಕೂಡಿದುದಾಗಿ ಬಹಳ ಚನ್ನಾಗಿ ಇದ್ದಿತು.

ಅನಂತರ ವಿಷಯ ನಿಯಾಮಕ ಸಮಿತಿ, ಸಾಹಿತ್ಯಗೋಷ್ಠಿ, ಪತ್ರಿಕಾಗೋಷ್ಠಿ, ಮಹಿಳಾಗೋಷ್ಠಿಗಳ ಕಾರ್ಯಕ್ರಮಗಳು ಯಥೋಚಿತವಾಗಿ ನಡೆದುವು.

ಒಟ್ಟಿನಲ್ಲಿ ಈ ೧೭ನೆಯ ಅಧಿವೇಶನವು ಈ ಹಿಂದೆ ನಡೆದ ಬಸವಕಲ್ಯಾಣದ ಅಧಿ ವೇಶನಕ್ಕಿಂತಲೂ ಚೆನ್ನಾಗಿ ಇದ್ದಿತೆಂದು ಅನೇಕರು ಉದ್ಗಾರ ತೆಗೆದರು.

ಇದೇ ತಿಂಗಳಲ್ಲಿ ಶಿವಯೋಗ ಮಂದಿರದ ಸುವರ್ಣ ಮಹೋತ್ಸವವೂ ಶಿವ ರಾತ್ರಿಯ ಯಾತ್ರಾ ಮಹೋತ್ಸವವೂ ಜರುಗಿದುವು. (–ಸಂ. ೧೫೭)

# ಶ್ರೀ ಶಿವಕುಮಾರ ಸ್ವಾಮಿಗಳವರ ಧರ್ಮಪ್ರಚಾರ

ಈಗಿನ ನವ ಮೈಸೂರು ದೇಶದ ಶಿವಮೊಗ್ಗಾ ಜಿಲ್ಲೆಗೆ ಸೇರಿದ ಶಿರಾಳಕೊಪ್ಪ ಎಂಬ ಊರಿನ ಕೋರಿ ಟೊಪ್ಪಿಗೆಯ ವಿರಕ್ತ ಮಠಕ್ಕೆ ಅಧ್ಯಕ್ಷರಾದ ಶ್ರೀ ನಿರಂಜನ ಶಿವಕುಮಾರ ಸ್ವಾಮಿಗಳವರು ಶ್ರೀ ನಿರಂಜನ ಜಗದ್ಗುರುಗಳಾದ ಅಲ್ಲಮಾ ಪ್ರಭು ಸ್ವಾಮಿಗಳವರಿಂದ ರಚಿಸಲ್ಪಟ್ಟ ಪ್ರಭುದೇವರ ವಚನಗಳು ಎಂದು ಪ್ರಸಿದ್ಧವಾದ ವಚನ ಗಳಿಗೆ ಹಿಂದೀ ಭಾಷೆಯಲ್ಲಿ ಅನುವಾದ ಬರೆದು "ಪ್ರಭುದೇವ ವಚನಾಮೃತ" ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಕಾಶಿ ನಾಗರಿ ಪ್ರಚಾರಿಣೀ ಸಂಘದ ಮೂಲಕವಾಗಿ ಈ ಗ್ರಂಥವು ಪ್ರಚಾರಕ್ಕೆ ಬಂದಿದೆ; ಶ್ರೀ ನಿರಂಜನ ಜಗದ್ಗುರು ಜಯದೇವ ಮಹಾಸ್ವಾಮಿ ಗಳವರು, ಸಂಸ್ಥಾನ ಬೃಹನ್ಮಠ ಚಿತ್ರದುರ್ಗ, ಇವರಿಗೆ ಸಮರ್ಪಿಸಲ್ಪಟ್ಟಿದೆ. ಈ ಮಹಾ ಸ್ವಾಮಿಗಳ ಭಾವ ಚಿತ್ರವು ಇದರಲ್ಲಿದೆ.

ಮೊಟ್ಟಮೊದಲು ಈ ಶಿವಕುಮಾರ ದೇವರ ನಿವೇದನ (೫ ಪುಟ) ಎಂಬ ಲೇಖನವಿದೆ. ಆ ತರುವಾಯ ಶ್ರೀ ವಿಶ್ವನಾಥ ಪ್ರಸಾದ ಮಿಶ್ರ ಅವರ ಅನುವಚನ (೫ ಪುಟ) ಎಂಬ ಲೇಖನವಿದೆ. ಮುಂದೆ ಅನುಕ್ರಮಣಿಕೆಯಲ್ಲಿ ತೋರಿಸಿದ ಪ್ರಕಾರ ಪಿಂಡಸ್ಥಲ ೨, ಪಿಂಡ ಜ್ಞಾನಸ್ಥಲ, ೩, ಮಾಯಾ ವಿಲಾಸ ವಿಡಂಬನ ಸ್ಥಲ ೮, ಸಂಸಾರ ಹೇಯಸ್ಥಲ ೩೩, ಗುರುಕಾರುಣ್ಯ ಸ್ಥಲ ೩೭, ಭಕ್ತಸ್ಥಲ ೪೬, ಮಹೇಶ್ವರ ಸ್ಥಲ ೭೮, ಪ್ರಸಾದಿಸ್ಥಲ ೯೯, ಪ್ರಾಣಲಿಂಗಿ ಸ್ಥಲ ೧೦೭, ಶರಣಸ್ಥಲ ೧೮೩, ಐಕ್ಯಸ್ಥಲ ೩೪೧– ಈ ಪುಟಗಳಲ್ಲಿ ಆರಂಭವಾಗಿ ೩೮೮ನೆಯ ಪುಟಕ್ಕೆ ಈ ಅನುವಾದವು ಮುಗಿದಿರುತ್ತದೆ.

ಇದಲ್ಲದೆ ಶ್ರೀ ನಿ. ಕುಮಾರ ಸ್ವಾಮಿಗಳವರು 'ವೇದಾಂತಸಾರ' ಎಂಬ ಗ್ರಂಥ ವನ್ನು ತಮ್ಮ ಸಂಪಾದಕತ್ವದಲ್ಲಿ ಪ್ರಕಾಶಪಡಿಸಿದ್ದಾರೆ.

ಇದು ನಿಜವಾಗಿಯೂ ವೀರಶೈವ ಜನಾಂಗಕ್ಕೆ ಸಂತೋಷದ ವಾರ್ತೆ.

(–ಸಂ. ೧೬೪)



ಹಾವೇರಿಯಲ್ಲಿದ್ದಾಗ ತಮ್ಮ ಕಾರ್ಯಕ್ಷೇತ್ರವಾಗಿದ್ದ ವಾಲಿಮಠದ ಮುಂಭಾಗದಲ್ಲಿರುವ
ಈ ಬಾವಿಯಿಂದ ಸ್ವತಃ ತಾವೇ ನೀರು ಸೇದಿ ಸ್ನಾನ ಮಾಡುತ್ತಿದ್ದರು.
(ಆಗ ಈ ಬಾವಿಯ ಸುತ್ತಮುತ್ತಲಿನ ಯಾವ ಕಟ್ಟಡ ವಗೈರೆ ಇರಲಿಲ್ಲ)

# ೭

## ಪತ್ರಿಕೋದ್ಯಮ (೨)

(ವರದಿ, ಟಿಪ್ಪಣಿ, ಜೀವನಾನುಭವ...... ಇತ್ಯಾದಿ)

[ಸದ್ಧರ್ಮ ದೀಪಿಕೆಯು ನಾಡುನುಡಿಗಳ ಏಳಿಗೆ ಮತ್ತು ಧರ್ಮ, ಸಂಸ್ಕೃತಿ, ರಾಷ್ಟ್ರೀಯತೆಗಳ ಪ್ರಚಾರೋದ್ದೇಶಗಳನ್ನುಳ್ಳದ್ದಾಗಿತ್ತು. ಈ ಸಂಬಂಧದ ನಿವೇದನೆಗಳು, ವರದಿಗಳು, ವರದಿಗಳ ಮೇಲೆ ಟಿಪ್ಪಣಿಗಳು, ಕುತೂಹಲಕಾರಕ ಸಂಗತಿಗಳು, ಸ್ವಾರಸ್ಯಕರ ಸಮಾಚಾರಗಳು, ನೀತಿ ವಾಕ್ಯಗಳು, ಒಗಟುಗಳು ಈ ಮುಂದೆ ಮಾದರಿಗಾಗಿ ಕೊಡಲ್ಪಟ್ಟಿವೆ. ಇಲ್ಲಿಯೂ ಕೂಡ ಸಂಪಾದಕರ ಔಚಿತ್ಯಪ್ರಜ್ಞೆ, ಹಾಸ್ಯಪ್ರಿಯತೆ ಮೊದಲಾದುವನ್ನು ಕಾಣಬಹುದಾಗಿದೆ.]

# ಈ ಪತ್ರಿಕೆಯನ್ನು ಓದುವ ಮಹನೀಯರಲ್ಲಿ ವಿಜ್ಞಾಪನೆಗಳು

ಶ್ರೀಮನ್ ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ ಇವರ ಆಶೀರ್ವಾದ ಬಲದಿಂದ ಆರಂಭಿಸಲ್ಪಟ್ಟ ಈ ಸದ್ಧರ್ಮ ದೀಪಿಕೆಯು ಎರಡುವರ್ಷದ ಕೊನೆಯನ್ನು ಈ ಸಂಚಿಕೆಗೆ ಕಂಡಂತಾಯಿತು. ಈ ಎರಡು ವರ್ಷದ ಹಿಂದೆ ಸುಮಾರು ಅಶ್ವಯುಜ ಮಾಸದಿಂದ ಕಳುಹಿಸಲಾರಂಭಿಸಲ್ಪಟ್ಟ ಈ ಪತ್ರಿಕೆಯು ಸ್ವಲ್ಪ ಹೆಚ್ಚು ಕಡಿಮೆ ಈ ವರೆವಿಗೆ ೨೪ ಸಂಚಿಕೆಗಳನ್ನು ಮುಂದೆ ತಂದಿದ್ದಾಗ್ಯೂ ಮೊದಲ ವರ್ಷದ ಚೈತ್ರ ಮಾಸದಿಂದ ಆರಂಭವಾದಂತೆ ಪತ್ರಿಕೆಯಲ್ಲಿ ನಮೂದಿಸಿದ ಪ್ರಕಾರ ಹಿಂದಿನ ಸಂಚಿಕೆಗಳನ್ನು ಈ ವರೆವಿಗೂ ಕೂಡಿಸಿಕೊಳ್ಳುವುದು ಆಗಿಲ್ಲ. ಇದಕ್ಕೆ ಈಗಿನ ಹಣದ ಪೇಚಾಟದ ಕಾಲದ ದುರ್ದಸೆಯು ಈ ಪತ್ರಿಕೆಗೂ ತಗಲಿ ಇತರ ಕೆಲಸಗಳಿಗೆ ಗಮನಕೊಟ್ಟದ್ದೇ ಕಾರಣವಾಗಿದೆ.

ಕಳೆದ ವರ್ಷದ ಕೊನೆಯಲ್ಲಿ ವಿಜ್ಞಾಪಿಸಿದಂತೆ ಮುದ್ರಣಾಲಯದ ಕೆಲಸಕ್ಕಾಗಿ ಮಾಡಿದ ಸಾಲವು ತೀರಿಸಲ್ಪಡುತ್ತಾ ಬಂದಿದೆ. ಬೊಮ್ಮನಹಳ್ಳಿ ಸಾಹುಕಾರ್‍ರು ಮ. ರಾ. ನೆಲವಗಿ ಪ್ರಭಾವಪ್ಪನವರಲ್ಲಿ ಮಾಡಿದ ಒಂದು ನೂರು ರೂಪಾಯಿಗಳ ಸಾಲವನ್ನು ತೀರಿಸಲಿಕ್ಕೆ ಇನ್ನೂ ಅನುಕೂಲವಾಗಿಲ್ಲ. ಈ ಮುದ್ರಣಾಲಯದ ಕಾರ್ಯಗಳಿಗಾಗಿ ಇದೂವರೆವಿಗೆ ಸಹಾಯಮಾಡಿದವರೆಲ್ಲರ ಉಪಕಾರವನ್ನು ಬಹಳವಾಗಿ ಸ್ಮರಣೆ ಮಾಡುತ್ತೇವೆ.

ಈ ಮುದ್ರಣಾಲಯದಲ್ಲಿ ಕತ್ತರಿಸುವಯಂತ್ರ (Cutting Press ) ಮೊದಲಾದ ಕೆಲವು ಸಲಕರಣೆಗಳು ಇಲ್ಲದ ಕೊರತೆಯು ಇನ್ನೂ ಸರಿಪಟ್ಟಿಲ್ಲ. ಒಳ್ಳೆಯ ಒಳ್ಳೆಯ ಕಾಗದವಿಲ್ಲ. ಕಾಲಕಾಲಕ್ಕೆ ಪತ್ರಿಕೆ ಹೊರಡುವುದಿಲ್ಲ. ಇವೆಲ್ಲವೂ ಹಣದ ಕೊರತೆಯಿಂದಲೇ ಎಂಬುದನ್ನು ವಾಚಕರು ಲಕ್ಷ್ಯದಲ್ಲಿ ಇಟ್ಟು ಈ ಸಂಬಂಧದ ಪತ್ರಿಕೆಯಲ್ಲಿನ ನಮ್ಮ ದೋಷಗಳನ್ನು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇವೆ. ಇನ್ನು ಮುಂದೆ ಒಳ್ಳೆಯ ಕಾಗದಗಳನ್ನು ಉಪಯೋಗಿಸಬೇಕೆಂದು ನಿರ್ಧರಿಸಿರುವೆವು.

ಇದೂವರೆವಿಗೆ ಪೂರ್ವಿಕರ ಗ್ರಂಥಗಳನ್ನು ಇದ್ದ ರೀತಿಯಲ್ಲಿ ಪ್ರಕಟಕ್ಕೆ ತರುವುದರಲ್ಲಿ ಪ್ರಯತ್ನವು ನಡೆದಿತ್ತು. ಈಗಿನ ಕಾಲದ ನಾಗರಿಕತೆಗೆ ತಕ್ಕಂತೆ ತಿಳಿಗನ್ನಡದಲ್ಲಿ ವಚನ ರೂಪವಾಗಿ ಗ್ರಂಥಗಳು ಬೇಕೆಂಬುವ ವಿಷಯವನ್ನು ಆಲೋಚಿಸಿ "ವೀರಶೈವ ಮೊದಲನೆಯ ಪುಸ್ತಕ" ಎಂಬುದನ್ನು ಮುದ್ರಿಸಲು ಆರಂಭ ಮಾಡಿಇವೆ. ಈ ಪತ್ರಿಕೆಯ ಉದ್ದೇಶವಲ್ಲಿ ಮೊದಲು ವಿಜ್ಞಾಪಿಸಿಕೊಂಡಂತೆ ಇದೂವರೆವಿಗೆ ಪ್ರಕಟವಾಗದೆ ಇರುವ ಲಿಂಗ ಅಥವಾ ಲಿಂಗಧಾರಣ ಉಪನಿಷತ್ ಮೊದ

ಲಾದ ಉಪನಿಷತ್ತುಗಳನ್ನು ಪ್ರಕಟಿಸಲಿಕ್ಕೆ ಪ್ರಯತ್ನವು ನಡೆದಿದೆ. ಇನ್ನೂ ಕನ್ನಡ ವಚನರೂಪ ಪದ್ಯರೂಪ ಗ್ರಂಥಗಳು, ಸಂಸ್ಕೃತ ಗ್ರಂಥಗಳು ಈ ಎಲ್ಲ ಬಗೆಯು ಧರ್ಮಗ್ರಂಥಗಳು ಪ್ರಕಟವಾಗಬೇಕಾಗಿದೆ. (ಸಂಸ್ಕೃತ ಗ್ರಂಥಗಳ ಪ್ರಮಾಣವನ್ನು ಬಹಳವಾಗಿ ಅಪೇಕ್ಷಿಸುವವರೂ ಇದ್ದಾರೆ.) ಲಾವಣಿಪದಗಳು ಸಣ್ಣ ಸಣ್ಣ ಹಾಡು ಗಳು ಇವುಗಳ ಮೂಲಕವಾಗಿಯೂ ಧರ್ಮ ತತ್ವವು ಪ್ರಚಾರವಾಗಬೇಕು. ಹೆಂಗಸರು, ಹುಡುಗರು, ದನಕಾಯುವವರು, ಆದಿಯಾಗಿ ತಮ್ಮ ಕೆಲಸಗಳನ್ನು ಮಾಡುವಾಗ ಧರ್ಮ ಸಂಬಂಧದ ಹಾಡುಗಳು ವಚನಗಳು ಮೊದಲಾದವುಗಳನ್ನು ಎಂದು ಕೊಳ್ಳುವಂತೆ ಆಗಬೇಕು. ಆರೋಗ್ಯ ವಿಚಾರಗಳೂ ನಿಜಗುಣ ಶಿವಯೋಗಿಗಳ ನಿಜತತ್ವ ಪ್ರಚಾರವೂ ಪ್ರಕಟವಾಗಬೇಕು. ಇದಕ್ಕಾಗಿ ಲೇಖಕರ ಸಹಾಯವೂ ಬೇಕು. ಇವಕ್ಕೆಲ್ಲಾ ಅನುಕೂಲವನ್ನು ಮಹಾದೇವನು ಒದಗಿಸಲಿ ಎಂಬುದಾಗಿ ಪ್ರಾರ್ಥಿಸುತ್ತೇವೆ.

ಈ ಮಾಸಪತ್ರಿಕೆಯು ವಾರಪತ್ರಿಕೆಯಾಗಿ ಪರಿಣಮಿಸಿ ಧಾರ್ಮಿಕ ಸಂಗತಿಗಳು ಬಹಳವಾಗಿ ಪ್ರಚಾರಕ್ಕೆ ಬರಬೇಕೆಂದು ಕೆಲವರು ಅಪೇಕ್ಷಿಸುತ್ತಾರೆ. ಇವೆಲ್ಲಾ ಸಾಮಾನ್ಯ ಕೆಲಸಗಳಲ್ಲ; ಬಹಳ ಹಣದ ಸಹಾಯದಿಂದ ನಡೆಸಲ್ಪಡತಕ್ಕ ಕೆಲಸಗಳು. ಇಡೀ ವೀರಶೈವ ಸಮಾಜದ ಒಂದು ದ್ರವ್ಯ ನಿಧಿಯು ಏರ್ಪಾಟಾಗಿ ಅದರ ಉತ್ಪತ್ತಿಯಿಂದ ಗ್ರಂಥಗಳು ಪತ್ರಿಕೆಗಳು ಮೊದಲಾದವು ಪ್ರಕಟವಾಗುವಂತೆ ಆಗು ವುದು ಅವಶ್ಯಕ. ಈ ಕಡೆಗೆ ಸಮಾಜ ಬಂಧುಗಳು ಹೆಚ್ಚು ಗಮನಕೊಡಬೇಕಾ ಗಿದೆ. ಆದರೆ ಅನುಕೂಲವು ದೊರೆತಹಾಗೆಲ್ಲಾ ಈ ಪತ್ರಿಕೆಯ ಬೆಳವಣಿಗೆಗೆ ಗಮನ ಕೊಡುತ್ತೇವೆ.

ಈ ಪತ್ರಿಕೆಯು ತನ್ನ ಚಂದಾದಾರರ ಬಲದಿಂದಲೇ ತಾನು ನಿಲ್ಲುವ ಸ್ಥಿತಿಯು ಇನ್ನೂ ಬಂದಿಲ್ಲ. ಹೋದವರ್ಷಕ್ಕಿಂತ ಈ ವರ್ಷ ಚಂದಾದಾರರ ಬಲವು ಹೆಚ್ಚಾಗಿ ತಿರುಗಿರುವುದು. ಆದರೂ ಕೆಲವರು ಹೋದವರ್ಷದ ಚಂದಾದಾರರು ಅನೇಕ ತಿಂಗಳುಗಳ ಪತ್ರಿಕೆಗಳನ್ನು ಸ್ವೀಕರಿಸಿ ನಾವು ಮಾಸಪತ್ರಿಕೆಯ ಮೇಲುಭಾಗದ ಹಾಳೆ ಯಲ್ಲಿ "ವಿ. ಪಿ. ಕಳುಹಿಸಲ್ಪಡುತ್ತದೆ, ಬೇಡವಾದರೆ ಬರೆಯಿರಿ" ಎಂದು ವಿಜ್ಞಾಪನೆ ಮಾಡಿಕೊಂಡಾಗ್ಯೂ ಒಂದು ಕಾರ್ಡನ್ನಾದರೂ ಬರೆಯದೆ ವಿ. ಪಿ. ಯನ್ನು ವಾಪಸು ಕಳುಹಿಸಿರುತ್ತಾರೆ. ಇದಕ್ಕಾಗಿ ಎಷ್ಟು ವಿಷಾದಪಟ್ಟರೂ ತೀರದು. ಗ್ರಂಥ ಪ್ರಸಾರಣೆಯ ಕೆಲಸಕ್ಕೆ ಪೂರ್ವದಲ್ಲಿ ರಾಜರು ಶ್ರೀಮಂತರು ಸಾವಿರಾರು ರೂಪಾಯಿ ಗಳು ಖರ್ಚು ಮಾಡುತ್ತಿದ್ದರು. ಈಗ ಜನರು ವರ್ಷಕ್ಕೆ ಎರಡು ರೂಪಾಯಿ ಗಳನ್ನು (ಮಿಕ್ಕ ನಾಲ್ಕಾಣೆ ಟಪಾಲಖರ್ಚಿಗೆ ಹೋಗುತ್ತದೆ) ಧರ್ಮಕ್ಕಾಗಿ ಉಪಯೋಗಿ ಸಿದೆವೆಂದು ತಿಳಿದು ಕೊಡಬಹುದಾಗಿದ್ದಾಗ್ಯೂ ಅಂಥ ಯೋಚನೆಯು ಬಾರದೆ ಇದ್ದದ್ದು ಈ ಸಮಾಜದ ಗ್ರಂಥಗಳ ದುರ್ದೈವವೆಂದು ಭಾವಿಸಬೇಕಾಗಿದೆ. ಧರ್ಮವು ನಾಶವಾಗುತ್ತಿರುವ ಈ ಕಾಲದಲ್ಲಿ ಒಣಗಿದ ಪೈರಿಗೆ ಮಳೆ ಬಂದಂತೆ ಧರ್ಮಾಭಿ

ಮಾನಿಗಳ ಸಹಾಯವು ಅತ್ಯವಶ್ಯಕವಾಗಿದೆ. ಇನ್ನು ಮೇಲಾದರೂ ಸಹಾಯವು ದೊರಕಿ ಇನ್ನೂ ಹೆಚ್ಚು ಗ್ರಂಥಗಳು ಮುದ್ರಣವಾಗಲಿ ಎಂದು ಬಯಸುವೆವು. ಅನುಕೂಲವು ದೊರೆತಷ್ಟು ಹೆಚ್ಚಿನ ಕೆಲಸಗಳು ನಡೆಸಲ್ಪಡುತ್ತವೆ, ಎಂಬ ಅಂಶವನ್ನು ದೃಢವಾಗಿ ಹೇಳುವೆವು.

ಈ ವರ್ಷದಲ್ಲಿ ಪತ್ರಿಕೆಗಳ ಪ್ರಚಾರಕಾರ್ಯವನ್ನು ನಡೆಸುವ ಬಗ್ಗೆ ಯಾರಾದರೂ ಮುಂದಾಳುಗಳಾದರೆ ಅವರ ಸಹಾಯವನ್ನು ಹೊಂದಿ ಗ್ರಂಥಗಳನ್ನು ಬರೆಯುವ ಕೆಲಸವೊಂದರಲ್ಲಿಯೇ ಇರಬೇಕೆಂದು ಯೋಚಿಸಿ ಅಂತಹ ಪ್ರಕಟಣೆಯನ್ನು ಮಾಡಿದ್ದೆವು. ಆ ಬಗ್ಗೆ ತಕ್ಕ ಅನುಕೂಲವು ಈ ವರೆವಿಗೂ ಆಗಿಲ್ಲ. ಗ್ರಂಥಗಳ ಮುದ್ರಣಕ್ಕೆ ಸಹಾಯವು ದೊರೆತಷ್ಟೂ ಮಾಸಪತ್ರಿಕೆಗಳನ್ನು ಮುದ್ರಿಸಿ ಪ್ರಕಟಿಸುವುದಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ ಈ ಕಡೆಗೆ ಮಹನೀಯರ ದೃಷ್ಟಿಯು ವಿಶೇಷವಾಗಿ ಬೀಳಬೇಕಾಗಿದೆ.

ಈ ಪತ್ರಿಕೆಯು ಓದುಗರ ಲೌಕಿಕ ಕೆಲಸಗಳಂತೆ ಧಾರ್ಮಿಕವೂ ಒಂದು ಕೆಲಸವೆಂದು ತಿಳಿದು ಇದನ್ನು ಓದುವ ಧರ್ಮದ ಕಡೆಗೆ ಗಮನಕೊಟ್ಟದ್ದಕ್ಕಾಗಿ ಬಹಳವಾಗಿ ವಂದಿಸುವೆವು.

ಹಿಂದೂ ದೇಶವು ಧಾರ್ಮಿಕರಾಜ್ಯವೆಂದು ಬಹಳ ಪೂರ್ವದಿಂದಲೂ ಪ್ರಖ್ಯಾತಿಯನ್ನು ಪಡೆದಿರುವಂತೆ ಯಾವಾಗಲೂ ಧರ್ಮದೊಡನೆ ಕೂಡಿದ ರಾಜ್ಯವಾಗಿರಲಿ.

(ಸಂ-೨೪)

# ಸದ್ಧರ್ಮ ದೀಪಿಕೆಯ ವಿಚಾರ

## ಸದ್ಧರ್ಮ ದೀಪಿಕೆಯನ್ನು ಓದುವ ಮಹನೀಯರೇ ದಯವಿಟ್ಟು ಪರಾಂಬರಿಸಿರಿ

ನಾವು ಅಂತೂ ಇಂತೂ ಪತ್ರಿಕೆಯ ೩ನೆಯ ವರ್ಷವನ್ನು ದಾಟಿದೆವು. ಈ ಪತ್ರಿಕೆಯು ಪ್ರಾರಂಭವಾಗುವಾಗ ಹೊರಡಿಸಿದ ಪ್ರಸಿದ್ಧ ಪತ್ರಿಕೆಯಂತೆ ವೀರಶೈವ ಮತವು ವೇದ, ಆಗಮ, ಉಪನಿಷತ್ತುಗಳ ಪ್ರಮಾಣವುಳ್ಳದು ಎಂಬುದನ್ನು ಇದೂ ವರೆವಿಗೆ ಕೆಲವು ಮಟ್ಟಿಗೆ ಇದರಲ್ಲಿ ತೋರಿಸುತ್ತಾ ಬಂದಿದೆ.

ಈ ಪತ್ರಿಕೆಯು ಪ್ರಾರಂಭವಾಗುವ ಮುಂಚೆ ವೀರಶೈವರು ಹಿಂದೂಗಳಿಗಿಂತ ಭಿನ್ನರು ಎಂಬ ತಿಳುವಳಿಕೆಯು ಪ್ರಬಲವಾಗಿದ್ದು ಆ ಭಾವನೆಯು ಈಗೀಗ ಕಡಿಮೆ ಯಾಗಿ ಹಿಂದೂ ಸಮಾಜದ ಒಳಗಿನ ಒಂದು ಭಾಗವೇ ಎಂಬುದು ಪ್ರಕಟವಾಗುತ್ತಾ ನಡೆದಿದೆ. ರಾ॥ ದಿ. ಬ. ಕಂಬಳಿಯವರೂ ಸಹಾ ವೀರಶೈವರು ಅತಿವರ್ಣಿಗಳು ಅತ್ಯಾಶ್ರಮಿಗಳು ಎಂದು ಪ್ರಕಟಿಸಿ ಈ ಭಾವನೆಯನ್ನು ಬಲಪಡಿಸಿ ಇರುತ್ತಾರೆ.

ವೀರಶೈವ ಮತದಲ್ಲಿ ಇದರ ನಿಜಸ್ಥಿತಿ ಏನು ? ಯಾತಕ್ಕಾಗಿ ಈ ಮತ ವನ್ನು ನಾವು ಅನುಸರಿಸಬೇಕು, ಎಂಬ ತಿಳಿವು ಉಳ್ಳವರು ಬಹಳ ಅಪರೂಪ, ಎಂದರೆ ೧೦೦೦ ಕ್ಕೆ ೧೦ ಜನರು ಇದ್ದಾರೋ ಇಲ್ಲವೋ ಎಂಬಷ್ಟು ಸಂಶಯ ವುಂಟಾಗುವಂತೆ ತೋರಿಬಂದಿದೆ. ಒಂದೆರಡು ಪತ್ರಿಕೆಗಳೂ ಕೂಡ ವೀರಶೈವ ತತ್ವಕ್ಕೆ ವಿರೋಧವಾಗಿ ಇರುವ ಕೆಲವು ಅಭಿಪ್ರಾಯಗಳನ್ನು ಹರಡಿ ಜನರನ್ನು ಮೊಬ್ಬುಗೊಳಿಸುತ್ತಲಿವೆ. ಇಂತಹ ಕಾಲದಲ್ಲಿ ಯಥಾರ್ಥ ಸಂಗತಿಯನ್ನು ಪ್ರಕಟಿಸಿ ಜನರಲ್ಲಿ ಅವರು ಅಹುದು (ಹೌದು) ಎಂದು ಹೇಳಿ ಒಡಂಬಡುವ ಹಾಗೆ ಮಾಡು ವುದು ಬಹಳ ಕಷ್ಟದ ಕೆಲಸ. ಇಂತಹ ಕೆಲಸದ ಕೊಂಚ ಭಾಗವನ್ನು ಈ ಪತ್ರಿಕೆಯು ಮಾಡುತ್ತಲಿದೆ, ಎಂದು ಧೈರ್ಯವಾಗಿ ಹೇಳಲು ಯಾವ ಅಡ್ಡಿಯೂ ಇರುವುದಿಲ್ಲ.

ಈ ಕಾಲದಲ್ಲಿ ವೀರಶೈವರಲ್ಲಿ ಅನೇಕರಿಗೆ ಪರತಂತ್ರರಾಗಿ ಇನ್ನೊಬ್ಬರ ಬೆನ್ನು ಹತ್ತಿ ಹೋಗುತ್ತಿರುವವರಿಗೆ, ತಮ್ಮ ಮತದಲ್ಲಿ ಸ್ವಾರಸ್ಯವಿಲ್ಲೆಂದು ದೃಢಭಾವನೆ ಯುಳ್ಳವರಿಗೆ,—ಈ ಮತದ ಪುಸ್ತಕಗಳನ್ನು ಓದಬಾರದೆಂದಿರುವವರಿಗೆ, –ದಯ ವಿಟ್ಟು ಓದಬೇಕೆಂದು ಪುಸ್ತಕಗಳನ್ನು ಒಪ್ಪಿಸುವುದು ರೋಗವನ್ನು ಗುಣಪಡಿಸ ಲಿಕ್ಕಾಗಿ ವೈದ್ಯನು ರೋಗಿಗೆ ಅವನು ಬೇಡವೆಂದರೂ ಕಹಿಯಾದ ಔಷಧವನ್ನು ಕುಡಿಸಿದಂತೆ ಆಗಿದೆ.

ವೀರಶೈವ ಮತವು ಪ್ರಪಂಚದಲ್ಲೆಲ್ಲಾ ಹರಡಲ್ಪಡುವಷ್ಟು ಉದಾರ ಭಾವನೆಯುಳ್ಳದು ಎಂಬುದು ಈ ಮತತತ್ತ್ವಗಳಿಂದ ತಿಳಿದು ಬರುವ ಸಂಗತಿ, ಮತ್ತೆ ಕೆಲವರಿಂದ ಒಪ್ಪಲ್ಪಡುವ ಸಂಗತಿ, ಆದಾಗ್ಯೂ ಅದನ್ನು ಹೊರಗಿಟ್ಟು ದೃಢಪಡಿಸಿ ತೋರಿಸುವುದು ಬಹಳ ಕಷ್ಟವಾದ ಕೆಲಸವಾಗಿದೆ. ಇದಕ್ಕೆ ಹಿರಿಯರು ಬರೆದಿಟ್ಟ ಕೈಬರಹ ಗ್ರಂಥಗಳು ಅಷ್ಟೂ ಮುದ್ರಣವಾಗದೆ ಮೂಲೆಗೆ ಬಿದ್ದಿರುವುದೇ ಕಾರಣವಾಗಿದೆ. ಇವುಗಳನ್ನು ಬೇಗನೇ ಉದ್ಧರಿಸಲಿಕ್ಕೆ ಸಮಾಜದವರು ಬಹಳವಾಗಿ ಆತುರಪಡಬೇಕಾಗಿದೆ. ಇಂತಹ ಕೆಲಸದ ಸ್ವಲ್ಪ ಭಾಗವನ್ನು ಈ ಪತ್ರಿಕೆಯು ಮಾಡುತ್ತಲಿದೆ.

ಇದನ್ನು ಸಾಗಿಸುವ ವ್ಯವಸ್ಥೆಯ ಅನುಕೂಲಗಳನ್ನು ಕುರಿತು ಯೋಚಿಸಿದರೆ ಇದಕ್ಕಾಗಿ ಬಹಳ ವ್ಯಸನವಾಗುತ್ತದೆ. ಈಗಿನ ಹಣದ ಸಂಪಾದನೆಯು ಬಿಕ್ಕಟ್ಟಿನ ದೆಸೆಯಿಂದ ಕೆಲಸಮಾಡುವ ನವಕರರುಗಳಿಗೆ ಹಣ ಪಾವತಿ ಮಾಡುವ ಏರ್ಪಾಡಿಗಾಗಿ ಇತರ ಕೆಲಸಗಳನ್ನು ಮಾಡುವುದರಲ್ಲಿ ವೇಳೆಯು ಬಹಳ ಖರ್ಚಾಗಿ ಮೂಲ ಉದ್ದೇಶದ ಕೆಲಸಗಳು ಬಹಳ ನಿಧಾನವಾಗಿ ಸಾಗುತ್ತಲಿವೆ. ಮಾಸಪತ್ರಿಕೆಯ ಚಂದಾದಾರರಿಂದಲೇ ಬರುವ ಹಣದಿಂದ ಈ ಕೆಲಸವು ನಡೆಸಲ್ಪಡುವುದಾದರೆ ಈಗಿನ ಕೆಲಸಕ್ಕೆ ಎರಡರಷ್ಟು ಧರ್ಮಗ್ರಂಥಗಳ ಮುದ್ರಣವು ನಡೆಯಬಹುದು.

ಈಗ ಸುಮಾರು ೧೬೦ ಚಂದಾದಾರರಿಂದ ಮಾತ್ರ ಹಣ ದೊರೆಯುತ್ತಿರುವುದು. ಇದು ಸಾಲದು. ಪ್ರಚಾರ ಕಾರ್ಯವನ್ನು ಯಾರಾದರೂ ವಹಿಸಿಕೊಂಡು ಗ್ರಂಥಮುದ್ರಣಕ್ಕೆ ಅನುಕೂಲವಾಗಿ ಹಣದ ಸಹಾಯ ಮಾಡುವುದಾದರೆ ಅಷ್ಟೇ ಸಾಕು, ಎಂದು ಈ ಹಿಂದೆ ಪ್ರಕಟಪಡಿಸಿದ್ದಾಗ್ಯೂ ಆ ಅನುಕೂಲವೂ ದೊರೆಯುಲಿಲ್ಲ. ಪತ್ರಿಕಾ ಪ್ರಚಾರಕ್ಕಾಗಿ ಇಲ್ಲಿಂದ ಯಾರು ಹೊರಟಿಲ್ಲ. ಈ ಸ್ಥಿತಿಯಲ್ಲಿ ಪತ್ರಿಕೆಯನ್ನು ನಡೆಸಿಕೊಂಡು ಹೋಗುವುದು ದಿನದಿನಕ್ಕೆ ಬಹಳ ದುಸ್ತರವಾಗಿ ತೋರುತ್ತಲಿದೆ. ಈ ದೆಸೆಯಿಂದ ಪತ್ರಿಕೆಯು ಸಾವಕಾಶವಾಗಿ ಬರುತ್ತಿರುವ ದೋಷವನ್ನು ಕ್ಷಮಿಸಬೇಕಾಗಿ ಬೇಡುತ್ತೇನೆ.

ಚಂದಾದಾರರು ತಾವಾಗಿಯೇ ಹೆಚ್ಚಾಗಲಿ ಎಂಬ ಉದ್ದೇಶದಿಂದ ಇನ್ನು ಮುಂದೆ ಮುಂಗಡವಾಗಿ ಮನಿಯಾರ್ಡರ್ ಮಾಡಿಕಳುಹಿಸುವವರಿಂದ ವರ್ಷಕ್ಕೆ ೨ ರೂಪಾಯಿ ಮಾತ್ರ ತೆಗೆದುಕೊಳ್ಳಲು ಸಿದ್ಧರಿರುವೆವು. ವಿ. ಪಿ. ಕಳುಹಿಸಿದರೆ ಏಳು ಆಣೆ ಹೆಚ್ಚು ಬೀಳುವುದು.

ಈ ಪತ್ರಿಕೆಯನ್ನು ಉಳಿಸುವುದು ಸಮಾಜದವರ ವಶದಲ್ಲಿ ಇದೆ. ಇದೊಂದು ಪ್ರಕಾಶಕನ ಕಾಯಕ. ಮಹಾದೇವನ ಕೃಪೆ ಇರುವವರೆವಿಗೂ ನಡೆಯಲಿ.

(–ಸಂ. ೩೫–೩೬–೩೭)

# "ಸದ್ಧರ್ಮ ದೀಪಿಕೆ" ಮಾಸಪತ್ರಿಕೆಯ ವಿಷಯ

ಮಹನೀಯರಾದ ಓದುಗರೇ*

ಈಚೆಗೆ ಬಹಳ ಅನನುಕೂಲಗಳು ಒದಗಿದ ಪ್ರಯುಕ್ತ ಈಗ ಸದ್ಧರ್ಮ ದೀಪಿಕೆಯ ೪೭–೪೮ನೆಯ ಸಂಚಿಕೆಗಳನ್ನು ಬಹಳ ಸಾವಕಾಶವಾಗಿ ಹೊರಡಿಸಿದುದಾಗಿದೆ. ಅಂತೂ ಇಂತೂ ನಾಲ್ಕು ವರ್ಷಗಳ ಸಂಚಿಕೆಗಳು ಪೂರ್ಣವಾದಂತಾದುವು. ಈ ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಈ ಪ್ರಕಾಶಕನು ಕೆಲಸಕ್ಕೆ ಪ್ರಾರಂಭಿಸಿ ಎಂಟು ವರುಷ ಐದು ತಿಂಗಳೂ, ಮಾಸಪತ್ರಿಕೆಯನ್ನು ಹೊರಡಿಸುವುದಕ್ಕೆ ಪ್ರಾರಂಭಿಸಿ ಏಳು ವರುಷದ ಐದು ತಿಂಗಳೂ ಆದವು. ಇಷ್ಟು ಹೊತ್ತಿಗೆ ೮೯ನೆಯ ಸಂಚಿಕೆಯಾಗಬೇಕಾಗಿದ್ದಿತು. ಅದರ ಬದಲಾಗಿ ೪೮ನೆಯ ಸಂಚಿಕೆಯು ಪೂರ್ತಿಯಾಗಿರುತ್ತದೆ. ಈ ಮುದ್ರಣಾಲಯದಲ್ಲಿ ಕೆಲಸಮಾಡಿ ಅದೇ ಶಿವನ ಕಾಯಕವೆಂದು ಬಗೆದು ಅದರ ಉತ್ಪತ್ತಿಯನ್ನೇ ಮೈಸೂರು ಸರಕಾರದ ಕೆಲಸದಲ್ಲಿನ ವಿಶ್ರಾಂತಿಯ ಸಂಬಳದ ಉತ್ಪತ್ತಿ ಮುಂತಾದವುಗಳ ಜೊತೆಯಲ್ಲಿ ಕೂಡಿಸಿಕೊಂಡು ಇದೂವರೆವಿಗೂ ಮಾಸಪತ್ರಿಕೆಯ ಕೆಲಸವನ್ನು ಸಾಗಿಸುತ್ತಾ ಬಂದುದಾಯಿತು. ಚಂದಾದಾರ ಸಂಖ್ಯೆ ಸುಮಾರು ಮುನ್ನೂರು ಇರುವುದಾಗಿಯೂ ಪತ್ರಿಕಾ ಪ್ರಚಾರದ ಕೆಲಸವನ್ನು ಯಾರಾದರೂ ಅಭಿಮಾನಿಗಳು ವಹಿಸಿಕೊಂಡು ಮಾಸಪತ್ರಿಕೆಯ ಮುದ್ರಣಕ್ಕಾಗಿ ತಿಂಗಳೊಂದಕ್ಕೆ ೫೦-೬೦ ರೂಪಾಯಿಗಳನ್ನು ಮಾತ್ರ ಕೊಟ್ಟು ಉಳಿದ ಹಣವನ್ನು ಲಾಭ ಮಾಡಿಕೊಳ್ಳಬಹುದೆಂದೂ ಒಂದೆರಡು ಸಾರಿ ಪತ್ರಿಕೆಯಲ್ಲಿ ಪ್ರಕಟಿಸಿದಾಗ್ಯೂ ಅಂತಹ ಅಭಿಮಾನಿಶಾಲಿಗಳಾರೂ ಮುಂದೆ ಬರಲಿಲ್ಲ. ಪ್ರಕಾಶಕನೇ ಪ್ರಚಾರಕ್ಕೆ ಹೊರಡುವುದಾದರೆ ಗ್ರಂಥಗಳನ್ನು ಅಚ್ಚಿಗೆ ಸಿದ್ಧಪಡಿಸುವ ಕೆಲಸವು ನಿಂತು ಹೋಗುವುದೆಂಬ ಭೀತಿಯಿಂದ ಹೊರಡಲೂ ಇಲ್ಲ. ಮೇಲಾಗಿ ಯಾರಿಗೂ ನೋವಾಗದಂತೆ ಎಂದರೆ ಮನಸ್ಸಿಗೆ ಅಸಮಾಧಾನ ಉಂಟಾಗದಂತೆ ಶಿವನ ಕೃಪೆಯಿಂದ ಬರುವ ದ್ರವ್ಯದಿಂದಲೇ ಇದನ್ನು ಸಾಗಿಸಬೇಕೆಂಬ ಸಂಕಲ್ಪದಿಂದ ಒದಗಿದಷ್ಟು ಅನುಕೂಲತೆಯಿಂದ ಸಾಗಿಸುತ್ತಲೇ ಬಂದಿದೆ. ೩೦೦ ಚಂದಾದಾರರಿದ್ದರೂ ೪ನೆಯ ವರ್ಷದ ಪತ್ರಿಕೆಗಳ ಬಗ್ಗೆ ಚಂದಾ ಮೊಬಲಗು ಸುಮಾರು ೧೫-೨೦ ಮಹನೀಯರಿಂದ ಮಾತ್ರವೇ ಬಂದಿದೆ. ಇಂತಹ ಸಂಭವದಲ್ಲಿ ಬೇರೆ ಉತ್ಪತ್ತಿಯು ದೊರಕದ ವಿನಾ ಪತ್ರಿಕೆಯನ್ನು ನಡೆಸಲು ಸಾಧ್ಯವಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿಯೇ ಇದೆ. ಇಂತಹ ಉತ್ಪತ್ತಿಯು

---

* ೪೭-೪೮

ಕಡಿಮೆಯಾಗುವ ಸಂಭವವು ತೋರಿದುದರಿಂದಲೇ ಹೋದ ವರುಷದಿಂದಲೂ ಪ್ರತಿ ಮಾಸಪತ್ರಿಕೆಯಲ್ಲಿ ಈ ಮಾಸಪತ್ರಿಕೆಯನ್ನು ಉಳಿಸುವುದು ಚಂದಾದಾರರ ಕೈಯಲ್ಲಿ ಇದೆ ಎಂದು ಪ್ರಕಟಿಸುತ್ತಾ ಬಂದರೂ ಅವರಿಂದಲೂ ಉತ್ತೇಜನವೇನೂ ದೊರೆಯು ಲಿಲ್ಲ.

ಹಿಂದೆ ಬಿದ್ದಷ್ಟು ಸಂಚಿಕೆಗಳನ್ನು ಹೊರಡಿಸಲಿಕ್ಕೆ ಬರೆಯಬೇಕಾದ ವಿಷಯಗಳ ಅಥವಾ ಗ್ರಂಥಗಳ ಅಭಾವವೇನೂ ಇಲ್ಲ. ತಕ್ಕಷ್ಟು ಅನುಕೂಲಗಳು ದೊರೆತಿದ್ದರೆ ಈ ಮಾಸಪತ್ರಿಕೆಗಳಷ್ಟಲ್ಲದೆ ಇನ್ನೂ ಹೆಚ್ಚಿನ ಕೆಲಸಗಳು ಆಗುತ್ತಿದ್ದವೆಂದೂ ಈಗಿನ ಕೆಲಸವು ಮಂದವಾಗಿ ನಡೆದಿದೆ ಎಂದೂ ಹೇಳಲು ಅನುಮಾನವೇನೂ ಇಲ್ಲ. ಆದರೂ ಈಗ ನೂರಾರು ವರ್ಷಗಳಿಂದಲೂ ಪ್ರಕಟವಾಗದೆ ಇದ್ದ ಗ್ರಂಥಗಳು ಹೊರಬಿದ್ದು ಶಿವನ ಸೇವೆಯು ಸಮುದ್ರದ ಪ್ರಮಾಣದಷ್ಟಿದೆ ಎಂದು ಭಾವಿಸಿದರೆ ಅದರಲ್ಲಿ ಸಣ್ಣ ಹನಿಯಷ್ಟಾದರೂ ಸಾಗಿತೆಂಬ ಆನಂದವು ತುಂಬಿಕೊಂಡಿದೆ.

ಈ ಮಾಸಪತ್ರಿಕೆಯನ್ನು ಹೊರಡಿಸುವ ಪ್ರಾರಂಭದಲ್ಲಿ ವೀರಶೈವ ಮತವು ಹಿಂದೂ ಮತದ ಸಾರವಾದ ಭಾಗವಾಗಿದೆ ಎಂದೂ ವೇದ, ಉಪನಿಷತ್ತು ಆಗಮ ಮೊದಲಾದವುಗಳ ಆಧಾರವನ್ನು ತೋರಿಸಿ ಈ ಪತ್ರಿಕೆಯಲ್ಲಿ ಲೇಖನಗಳು ಬರೆಯ ಲ್ಪಡುವವೆಂದೂ ಪ್ರಕಟನ ಪತ್ರಿಕೆಯನ್ನು ಹೊರಡಿಸಲಾಗಿತ್ತು. ಈ ಉದ್ದೇಶ ವನ್ನು ಸಾಧಿಸಿಕೊಂಡೇ ಈ ಮಾಸಪತ್ರಿಕೆಯು ನಡೆದಿರುತ್ತದೆ. ವೀರಶೈವ ಮತವು ಹಿಂದೂ ದೇಶದ ಧರ್ಮ ಗ್ರಂಥಗಳಲ್ಲಿ ಬೋಧಿಸಲ್ಪಟ್ಟ ತತ್ತ್ವಗಳನ್ನುಳ್ಳದು ಎಂಬುದು ಈ ಪತ್ರಿಕೆಯ ಪ್ರಚಾರದಿಂದಲೇ ಜನರಲ್ಲಿ ಬಿಂಬಿಸಿತೆಂದು ಒಟ್ಟಿನಲ್ಲಿ ಹೇಳ ಬಹುದು.

ಪೂರ್ವದ ಪ್ರತಿಗಳಲ್ಲಿ ಇರುವ ಸಿದ್ಧೇಶ್ವರ ವಚನ, ನೀಲಮ್ಮನ ತ್ರಿವಿಧಿ, ಮಹದೇವಿಯಕ್ಕನ ರಗಳೆ ಮುಂತಾದ ಪುಸ್ತಕಗಳನ್ನು ಮುದ್ರಿಸುವ ಕೆಲಸ ಮಾತ್ರವೇ ಅಲ್ಲದೆ ಪೂರ್ವದ ಪ್ರತಿಗಳ ಮೇಲೆ ಭಾವಾರ್ಥ ಉಪನಿಷತ್ತುಗಳ ಪ್ರಮಾಣ ಮುಂತಾದು ದನ್ನು ವಿವರಿಸುವ "ವಾಗದ್ವೈತ ನಿರಸನ ತ್ರಿವಿಧಿ"ಯೋಗಿ ಅರವಿಂದ ಘೋಷರ ಪೂರ್ಣ ಯೋಗದ ವಿಷಯವು ವೀರಶೈವರಲ್ಲಿ ಉಂಟೆಂದು ತೋರಿಸುವ "ಪೂರ್ಣ ಯೋಗವೂ ವೀರಶೈವವೂ" ಎಂಬ ಪುಸ್ತಕ, ಹಿಂದಿನವರ ಅಭಿಪ್ರಾಯಗಳನ್ನು ವ್ಯಕ್ತ ಪಡಿಸುವಂತೆ ಸ್ವತಂತ್ರವಾಗಿ ಬರೆಯಲ್ಪಟ್ಟ "ವೀರಶೈವ ಮೊದಲನೆಯ ಪುಸ್ತಕ" ಕನ್ನಡ ವಿವರಣದೊಡನೆ ಕೂಡಿ ಲಿಂಗತತ್ವ ಮೊದಲಾದವುಗಳನ್ನು ಬೋಧಿಸುವ "ಲಿಂಗೋಪನಿ ಷತ್ತು" ಸಂಸ್ಕೃತ ಗ್ರಂಥಗಳಿಗೆ ಹೊಸದಾಗಿ ಕನ್ನಡದ ತಾತ್ಪರ್ಯವನ್ನು ಬರೆದಿರುವ "ಶಿವಯೋಗ ದರ್ಪಣ", "ಜ್ಯೋತಿರ್ಮಯ ಶಾಂಭವ ಜ್ಞಾನ ದೀಕ್ಷಾ ಬೋಧೆ", ಇವುಗಳು ವೀರಶೈವರಿಗೆ ಬಹು ಮುಖ್ಯವಾದ ಮೂಲಾಭಿಪ್ರಾಯಗಳನ್ನು ಬೋಧಿಸುವ "ಪ್ರಭುದೇವರ ಮಂತ್ರಗೋಪ್ಯ" ಮೊದಲಾದ ಗ್ರಂಥಗಳನ್ನು ಈ ಮಾಸಪತ್ರಿಕೆಯು ಪ್ರಕಟಿಸಿ ಸಮಾಜ ಸೇವೆಯನ್ನು ಮಾಡಿರುತ್ತದೆ.

ಈಗ ಈ ಪತ್ರಿಕೆಯನ್ನು ಹೊರಗೆಡವುತ್ತಿರುವ ಶಿವಲಿಂಗ ವಿಜಯ ಮುದ್ರಾಲಯವನ್ನು ಶಿವಯೋಗ ಮಂದಿರಕ್ಕೆ ತೆಗೆದುಕೊಂಡು ಹೋಗುವ ಆಲೋಚನೆಯನ್ನು ಹಾವೇರಿ ಹುಕ್ಕೇರಿ ಮಠದ ಶ್ರೀಗಳವರೇ ಮುಂತಾದವರು ನಡೆಸಿ ಇರುವುದರಿಂದ ಹಾಗೆ ಆದಮೇಲೆ ಈ ಪತ್ರಿಕೆಯನ್ನು ಹೊರಡಿಸಲಿಕ್ಕೆ ತಕ್ಕ ಅನುಕೂಲಗಳು ದೊರಕುವ ಸಂಭವವನ್ನು ನಿರೀಕ್ಷಿಸಿಕೊಂಡಿರಬೇಕಾಗಿದೆ.

ಇದೂವರೆವಿಗೆ ಈ ಮಾಸಪತ್ರಿಕೆಯಲ್ಲಿ ಮುದ್ರಣವಾಗಿರುವ ಪುಸ್ತಕಗಳಲ್ಲಿ ಕೆಲವು ಅಪೂರ್ಣವಾಗಿರುತ್ತವೆ. ಕೆಲವು ಪುಸ್ತಕಗಳ ಮುನ್ನುಡಿ ಮೊದಲಾದವು ಬರೆಯಲ್ಪಟ್ಟಿಲ್ಲ. ಕೆಲವು ಪುಸ್ತಕಗಳಲ್ಲಿ ಕಡೆಯ ನುಡಿಗಳನ್ನು ಬರೆಯಬೇಕಾಗಿದೆ. ಆದುದರಿಂದ ಮುಂದೆ ದೊಡ್ಡದಾದ ಹೊಸ ಕೆಲಸಕ್ಕೆ ಕೈ ಹಾಕದೆ ಹಿಂದಿನ ವಿಷಯಗಳನ್ನೇ ತುಂಬಿರುವ ಮಾಸ ಪತ್ರಿಕೆಗಳನ್ನು ಸಧ್ಯ ಮುದ್ರಾಲಯವು ಶಿವಯೋಗ ಮಂದಿರಕ್ಕೆ ಹೋಗುವುದಕ್ಕೆ ಮುಂಚೆಯೇ ಪ್ರಕಟಿಸಿ, ಈಗ ಚಂದಾದಾರರಾಗಿರುವವರಿಗೆಲ್ಲಾ ಕಳುಹಿಸಬೇಕೆಂಬ ಯೋಚನೆ ಇದೆ. ಅಷ್ಟರೊಳಗೆ ಚಂದಾ ಕೊಟ್ಟವರಿಗೆ ೧೨ ಸಂಚಿಕೆಗಳು ಬಾರದಿದ್ದರೆ (ಇಂತಹ ಸಂಖ್ಯೆ ಬಹುಃಶಃ ೮–೧೦ ಇರಬಹುದು) ನಮಗೆ ಬರೆದು ಹಿಂದಿನ ಸಂಚಿಕೆಗಳನ್ನಾಗಲೀ ಇಲ್ಲಿ ದೊರೆಯುವ ಪುಸ್ತಕಗಳನ್ನಾಗಲಿ ತರಿಸಿಕೊಳ್ಳಬಹುದು. ಅವು ಬೇಡವೆಂದರೆ ಹಣವು ವಾಪಸು ಕೊಡಲ್ಪಡುವುದು.*

ಒಂದು ಮುದ್ರಾಲಯದ ಮುಖಾಂತರವಾಗಿ ಈ ಅಲ್ಪವಾದ ಸಮಾಜ ಸೇವೆಯು ನನಗೆ ದೊರಕಲು ಅನುಕೂಲ ಮಾಡಿ ಕೊಟ್ಟುದಕ್ಕಾಗಿ ಶಿವಯೋಗ ಮಂದಿರದ ಅಧ್ಯಕ್ಷರಾದ ಹಾವೇರಿಯ ಶ್ರೀಗಳವರಿಗೂ ಶಿವಯೋಗ ಮಂದಿರದ ವಿಶ್ವಾಸಿಕ ಸಂಘ (Trust Committee) ಶ್ರೀಗಳವರಿಗೂ ನನ್ನ ಕೃತಜ್ಞತೆಯ ಬಿನ್ನಹಂಗಳನ್ನು ಅರ್ಪಿಸುವೆನಲ್ಲದೆ ಉಳಿದವರಿಗೂ ಅಭಿನಂದ ಮಾಡುವೆನು. ಪೂಜ್ಯರಾದ ಲಿಂಗೈಕ್ಯ ಹಾನಗಲ್ ಸದಾಶಿವ ಸ್ವಾಮಿಗಳವರ ಕೃಪೆಯಿಂದ ಇಷ್ಟು ಮಟ್ಟಿಗೆ ಸಮಾಜ ಸೇವೆಯ ಕೆಲಸ ನಡೆದುದಕ್ಕಾಗಿ ಆನಂದವುಳ್ಳವನಾಗಿಯೇ ಇರುವೆನು.

ಚಂದಾದಾರರುಗಳೂ, ಆಶ್ರಯದಾತರೇ ಮೊದಲಾದವರೂ ಪುಸ್ತಕಗಳನ್ನು ಅಚ್ಚು ಹಾಕಿಸಿದವರೂ ಇದೂವರೆವಿಗೂ ಈ ಪತ್ರಿಕೆಗಾಗಿ ಸಹಾಯ ಮಾಡಿದುದಕ್ಕೆ ಕೃತಜ್ಞನಾಗಿದ್ದೇನೆ.

ಶಿವನೇ ಈ ಪತ್ರಿಕೆಯನ್ನು ನನ್ನೊಳಗೆ ಪ್ರೇರಿಸಿ ಹೊರಡಿಸುವನೆಂಬ ಭಕ್ತಿ ಭಾವನೆಯಿಂದ ಈ ಪತ್ರಿಕೆಯ ಪ್ರಕಾಶಕನು 'ಶ್ರೀ ಚನ್ನಮಲ್ಲಿಕಾರ್ಜುನ' ಎಂದು ಆ ಮಹಾದೇವನ ಭಾವನೆಯಲ್ಲಿ ಬರೆಯಲ್ಪಟ್ಟಿತೇ ವಿನಾ ಒಂದು ಶ್ರೀಕಾರದ ಗೌರವವು ಸೇವಕನಾದ ನನಗೆ ಬೇಕೆಂದಲ್ಲ.

---

* ಇಲ್ಲಿ ಶ್ರೀ ಚ. ಅವರ ಪ್ರಾಮಾಣಿಕತೆಯನ್ನು ಊಹಿಸಬಹುದು.

ವೀರಶೈವದ ಸಮಾಜದ ಮುಖ್ಯವಾದ ಮೂಲಾಭಿಪ್ರಾಯಗಳು ಇಡೀ ಜಗತ್ತಿಗೇನೇ ಮಾನ್ಯವಾಗುವಂತಿರುವುದರಿಂದ ವೀರಶೈವರು ತಮ್ಮ ಜನಾಂಗದ ಉಪಯೋಗಕ್ಕಾಗಿ ಹೆಚ್ಚು ಕೆಲಸ ಮಾಡುವಂತಹುದೊಂದು ಮುದ್ರಾಲಯ ಧರ್ಮ ಗ್ರಂಥಗಳು ಮಾಸಪತ್ರಗಳು, ವಾರಪತ್ರಗಳೇ ಮೊದಲಾದುವನ್ನು ಸಧ್ಯ ಇಂಗ್ಲಿಷ್, ಕನ್ನಡ, ಹಿಂದೀ ಭಾಷೆಗಳಲ್ಲಿ ಪ್ರಕಟಿಸುವ ಏರ್ಪಾಡು, ವೀರಶೈವರು ರಚಿಸಿದ ಸಂಸ್ಕೃತ ಗ್ರಂಥಗಳ ಪ್ರಕಟಣೆಗಳ ಏರ್ಪಾಡು, ವೀರಶೈವರ ಇತಿಹಾಸ ಸಂಶೋಧನೆ– ಇವುಗಳಿಗಾಗಿ ಒಂದು ದೊಡ್ಡ ನಿಧಿಯನ್ನು ಏರ್ಪಡಿಸಿ ಕಾರ್ಯವು ನಡೆಯುವಂತೆ ಮಾಡಿ ಸುಖವಂತರಾಗಿ ಬಾಳಲೆಂದು ಮಹಾದೇವನನ್ನು ಪ್ರಾರ್ಥಿಸುವ.

ತಮ್ಮಗಳ ವಿಧೇಯ ಸೇವಕ,
ಚನ್ನಮಲ್ಲಿಕಾರ್ಜುನ

(–ಸಂ. ೪೭, ೪೮)

# ಈ ಮಾಸಪತ್ರ (ಸದ್ಧರ್ಮ ದೀಪಿಕೆ)ಯ ವಿಚಾರ*

ಮಹನೀಯರೇ : ೪೭-೪೮ನೆಯ ಸಂಚಿಕೆಯಲ್ಲಿ ಈ ಸದ್ಧರ್ಮ ದೀಪಿಕೆಯನ್ನು ಮುದ್ರಿಸುತ್ತಿರುವ ಶಿವಲಿಂಗ ವಿಜಯ ಮುದ್ರಾಲಯವನ್ನು ಹಾವೇರಿಯಿಂದ ಶಿವಯೋಗ ಮಂದಿರಕ್ಕೆ ತೆಗೆದುಕೊಂಡು ಹೋಗುವ ಆಲೋಚನೆಯನ್ನು ಶಿವಯೋಗ ಮಂದಿರದ ಅಧ್ಯಕ್ಷರಾದ ಹಾವೇರಿ ಶ್ರೀಗಳೇ ಮುಂತಾದ ವಿಶ್ವಾಸಿಕ ಸಂಘ (Trust Committee) ದವರು ನಡೆಸುತ್ತಿರುವರೆಂದು ಪ್ರಕಟಿಸಿದ್ದುದು ಸರಿಯಷ್ಟೆ. ಆ ಪ್ರಯತ್ನವು ಈಗ ನಡೆದಿದೆ. ಹಾವೇರಿಯಿಂದ ಕಳುಹಿಸಲ್ಪಡುವ ಸಂಚಿಕೆಗಳಲ್ಲಿ ಇವೇ ಕಡೆಯವು. ಮೂರು ತಿಂಗಳ ಸಂಚಿಕೆಗಳು (೪೯ ರಿಂದ ೫೦) ಒಟ್ಟಿಗೆ ಹೊರಟಿರುತ್ತವೆ. ಮುಂದೆ ಶಿವಯೋಗ ಮಂದಿರದಿಂದ ಈ ಮಾಸಪತ್ರಿಕೆ ಹೊರಡುವುದಕ್ಕೆ ತಕ್ಕ ಅನುಕೂಲಗಳು ಮಾಡಲ್ಪಡುವುವು. ಆದುದರಿಂದ ಅಲ್ಲಿಂದ ಸಂಚಿಕೆಗಳು ಕ್ರಮವಾಗಿ ಹೊರಡುತ್ತವೆ ಎಂಬ ಭರವಸೆ ಇದೆ. ಹಿಂದೆ ಕಡಿಮೆಯಾದ ಸಂಚಿಕೆಗಳನ್ನು ಸಾಧ್ಯವಾದಾಗಲೆಲ್ಲಾ ಹೆಚ್ಚಾಗಿ ಮುದ್ರಿಸಿ ಮಹನೀಯರಲ್ಲಿ ಅರ್ಪಿಸಬೇಕೆಂಬುವ ಯೋಚನೆಯೂ ಇದೆ.

ಶಿವಯೋಗ ಮಂದಿರದಲ್ಲಿ (ಹೆಚ್ಚು ಜನರಿಲ್ಲದ ಆ ಕ್ಷೇತ್ರದಲ್ಲಿ) ಮೊಳೆ ಜೋಡಿಸುವವರು ಮೊದಲಾದವರನ್ನು ದೊರಕಿಸಿಕೊಂಡು ಕೆಲಸ ನಡೆಸಬೇಕಾದರೆ ಹೆಚ್ಚು ಖರ್ಚು ಬರುವುದೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೂ ಧಾರ್ಮಿಕ ಉನ್ನತಿಗಾಗಿ ಏರ್ಪಟ್ಟ ಈ ಸಂಸ್ಥೆಯಲ್ಲಿ ಈ ಕಾರ್ಯವು ನಡೆದರೆ ಧಾರ್ಮಿಕಾಭಿಮಾನಿಗಳ ಒಲವು ಇದರ ಕಡೆಗೆ ಹೆಚ್ಚು ಬೀಳುವುದೆಂದೂ ಮಂದಿರದಲ್ಲಿ ಇರುವ ಶ್ರೀಗಳು ಶಾಸ್ತ್ರಿಗಳೇ ಮೊದಲಾದವರು ಮಂದಿರದ ಅಭಿಮಾನಿಗಳ ವಿಶ್ರಾಂತಿ ಪಡೆದ ಉಪಾಧ್ಯಾಯರಾದ ಮ. ರಾ. ಹಾಲಕೆರೆ ಲಿಂಗಪ್ಪ ಮಾಸ್ತರರು ಮುಂತಾದವರು ಈ ಕೆಲಸಕ್ಕೆ ನೆರವಾಗುವುದರ ಮೂಲಕ ಈ ಮಾಸಪತ್ರಿಕೆಯ ರಚನೆಯ ಕಾರ್ಯವು ಇನ್ನೂ ಚೆನ್ನಾಗಿ ನಡೆಯುವುದೆಂದೂ ಯೋಚಿಸಿ ಹೆಚ್ಚು ಖರ್ಚಿನ ಕಡೆಗೆ ಲಕ್ಷ್ಯ ಕೊಡದೆ ಅಲ್ಲಿಯೇ ನಡೆಸಬೇಕೆಂದು ಹಾಲಕೆರೆ ನಿ. ಪ್ರ. ಶ್ರೀ ಅನ್ನದಾನ ಸ್ವಾಮಿಗಳೇ ಮೊದಲಾದವರು ನಿರ್ಣಯಿಸಿದುದಕ್ಕೆ ಕೃತಜ್ಞನಾಗಿದ್ದೇನೆ.

ಇನ್ನು ಮುಂದೆ ಇದರಲ್ಲಿ ಪ್ರಕಟವಾಗುವ ವಿಷಯಗಳನ್ನು ಬರೆದು ಕಳುಹಿಸುವುದಕ್ಕೆ ಲೇಖಕ ಮಂಡಲಿಯನ್ನೂ ಸ್ಥಾಪಿಸಬೇಕೆಂಬ ಯೋಚನೆ ಇದೆ. ಕಾಗದಗಳನ್ನು ಟೈಪನ್ನೂ ಇನ್ನೂ ಉತ್ತಮವಾದವುಗಳನ್ನು ಹಾಕಬೇಕೆಂದೂ ಯೋಚಿಸಿದೆ.

---

*ಸಂ. ೪೯-೫೦

ಇಷ್ಟೆಲ್ಲಾ ಖರ್ಚು ಹೆಚ್ಚಾದರೂ ಚಂದಾ ದರವನ್ನು ಹೆಚ್ಚಿಸಬೇಕೆಂಬ ಯೋಚನೆ ಇಲ್ಲಿ ಚಂದಾದಾರರ ಸಂಖ್ಯೆ ಬಹಳ ಹೆಚ್ಚಾಗಬೇಕೆಂಬುದೇ ಮುಖ್ಯ ಬಯಕೆ.

ಈಗ ಸುಮಾರು ಮುನ್ನೂರು ಚಂದಾದಾರರಿರುತ್ತಾರೆ. ಇವರಲ್ಲಿಯೂ ನಾಲ್ಕನೆಯ ವರುಷದ ಅಂದರೆ ೩೭ ರಿಂದ ೪೮ ಸಂಚಿಕೆಯ ವರೆಗಿನ ೧೨ ಸಂಚಿಕೆಗಳ ಚಂದಾ ಕೊಟ್ಟವರು ೨೦–೨೫ ಮಾತ್ರ ಇದ್ದಾರೆ. (ಈಗ ಪ್ರಕಾಶಕನಿಗೆ ಗ್ರಂಥಗಳನ್ನು ಬರೆವುದಕ್ಕೆ ಕಾಲ ಕಳೆಯಬೇಕೆಂಬ ಯೋಚನೆ ಇದೆಯೇ ಹೊರತು ಈ ಲೆಖ್ಖವನ್ನು ಕ್ರಮವಾಗಿ ಇಟ್ಟಿದ್ದರೂ ಇಷ್ಟೇ ಸಂಖ್ಯೆ ಎಂದು ನಿಗದಿಯಾಗಿ ಹೇಳುವುದಕ್ಕೆ ಎಣಿಕೆ ಮಾಡುವ ಕಾಲದ ವ್ಯಯವೂ ಕೂಡ ವ್ಯರ್ಥವೆಂಬ ಭಾವನೆ ಇದೆ.) ಈ ರೀತಿಯ ಚಂದಾದಾರರ ಉದಾಸೀನ ಸ್ಥಿತಿಯು ಮುಂದೆ ಬದಲಾಯಿಸಲ್ಪಡಬೇಕು, ಹಿಂದಿನ ಚಂದಾದಾರರೂ ತಮ್ಮ ಚಂದಾ ಹಣವನ್ನು ಕೊಡಬೇಕು, ಮತ್ತು ಮುಂದೆ ಸಾವಿರಾರು ಚಂದಾದಾರ ಬೇಕು, ಹೀಗಾದರೆ ಮಾತ್ರ ಶಿವಯೋಗ ಮಂದಿರದಲ್ಲಿನ ಹೆಚ್ಚು ಖರ್ಚುಗಳನ್ನು ಸಹಿಸಿಕೊಂಡು ಪತ್ರಿಕೆಯನ್ನು ಮುಂದೆ ನಡೆಸುವುದಕ್ಕೆ ಸಾಧ್ಯವಾಗುತ್ತದೆ.

ಈಗ ಹೊರಡುತ್ತಿರುವ ಪತ್ರಿಕೆಯನ್ನು ಸಾವಕಾಶ ಮಾಡಿದುದಕ್ಕೆ ಅನೇಕರು ಕೂಡಲೆ ಕಳುಹಿಸಬೇಕೆಂದು ಬರೆದಿರುತ್ತಾರೆ. ಕೆಲವರು ನಿಲ್ಲಿಸಿ ಬಿಟ್ಟರೆಂದು ವಿಷಾದ ವ್ಯಕ್ತಮಾಡಿ ಪತ್ರ ಬರೆದಿರುತ್ತಾರೆ. ಇವರಲ್ಲಿ ಚನ್ನಗಿರಿ ತಾಲ್ಲೂಕು ಬಿಲ್‌ಹಳ್ಳಿ ವಿರಕ್ತ ಮಠದ ನಿ. ಶ್ರೀ ಸಂಗಮ ಸ್ವಾಮಿಗಳು ಬರೆದುದು ಮುಖ್ಯವಾಗಿದೆ. ಅವರ ಬರೆವಣಿಗೆ ಹೀಗೆ : “(ತಾ. ೨೩–೬–೪೦) ನೀವು ನಮ್ಮ ಸಮಾಜದಲ್ಲಿ ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿ ತೋರಿದ ತತ್ವಗಳನ್ನು ಮತ್ತು ಹಿಂದೂ ಧರ್ಮದ ಮುಖ್ಯ ವಿಷಯುಗಳನ್ನು ಪ್ರಕಟಿಸುತ್ತಾ ಇದ್ದದ್ದನ್ನು ನೋಡಿ ಬಹಳ ಆನಂದಪಡುತ್ತಿದ್ದೆವು. ಹಾಗೂ ನಿಮ್ಮ ಸದ್ಧರ್ಮ ದೀಪಿಕೆ ಓದಿ ವೀರಶೈವ ಮತ ತತ್ವಗಳನ್ನು ತಿಳಿದುಕೊಳ್ಳುತ್ತಾ ಮನಸ್ಸಿನಲ್ಲಿ ಬಹಳ ಹಿಗ್ಗುತ್ತಿದ್ದೆವು. ಆದರೆ ಈ ಪತ್ರಿಕೆಯನ್ನು ಪ್ರಕಟಿಸುವುದನ್ನು ನಿಲ್ಲಿಸಿದ್ದು ತಿಳಿದು ಬಹಳ ಸಂತಾಪಪಡುತ್ತೇವೆ. ಇದನ್ನು ನಿಲ್ಲಿಸಬಾರದು.”

ಮಹನೀಯರೇ, ಈ ಮಾಸಪತ್ರವು ಧಾರ್ಮಿಕಾಭಿಮಾನಿಗಳಾದವರಿಗೆ ಬೇಕಾಗಿರುವುದೆಂಬುದೇನೋ ಗೊತ್ತಾಗಿದೆ. ಆದರೆ ಅದು ತಕ್ಕಷ್ಟು ಧನವಂತನಲ್ಲದ ಮತ್ತು ಯಾಚಿಸಿ ಧನ ಸಹಾಯವನ್ನೂ ಪಡೆಯದವನಾದ ನನ್ನ ಕೈಗೆ ಸಿಕ್ಕಿ ಅದು ನರಳುತ್ತಿರುವುದಕ್ಕೆ ನಾನೂ ಬಹಳವಾಗಿ ವಿಷಾದಪಡುತ್ತಿದ್ದೇನೆ, ಧರ್ಮಾಭಿಮಾನಿಗಳೇ ಒಟ್ಟಿನಲ್ಲಿ ನನ್ನ ಬಿನ್ನಹದ ಒಂದು ಮಾತು.

“ಇಂತಹ ಪತ್ರಿಕೆಯನ್ನು ನಿಲ್ಲಿಸುವುದಕ್ಕೆ ಅವಕಾಶ ಕೊಡಬೇಡಿರಿ.”

ಇದನ್ನು ಮೇಲೆ ಆಶ್ರಯದಾತರೂ ಪೋಷಕರೂ ಸಹಾಯಕರೂ ಸಹಾ ಉದಾರ ಭಾವದಿಂದ ಸಹಾಯ ಮಾಡಬೇಕೆಂದೂ ಇದಕ್ಕಾಗಿ ಒಂದು ನಿಧಿಯನ್ನೂ ಸಂಘವನ್ನೂ ಸ್ಥಾಪಿಸಬಹುದೆಂದೂ ಪ್ರಾರ್ಥಿಸುವೆನು. ಅಂತು ಈ ಮಾಸಪತ್ರಿಕೆಯು ನನ್ನ ಅವಶ್ಯಕತೆಯೇ ಇಲ್ಲದಂತೆ ಹೊರಡುವುದಾದರೆ ಆಗ ಬಲು ಸಂತೋಷಿಸುವೆನು.(ಸಂ.೪೯-೫೦)

# ಮಹನೀಯರಾದ ಓದುಗರ ಗುಂಪಿನಲ್ಲಿ ಸದ್ಧರ್ಮ ದೀಪಿಕೆಯು ವಿನಯದಿಂದ ಶಿರವ ಬಗ್ಗಿಸಿ ಬಿನ್ನವಿಸುವುದು ಹೀಗೆ

---

ಹಿಂದೂ ಧರ್ಮದ ಮುಖ್ಯ ವಿಷಯಗಳ ಸಾರವನ್ನೂ ಬಸವೇಶ್ವರನೇ ಮೊದಲಾದ ಪ್ರಮಥರು ಆಚರಿಸಿ ತೋರಿದ ತತ್ತ್ವಗಳನ್ನೂ ಪ್ರಕಟಿಸುವವನಾಗಿ ಹಾವೇರಿಯಿಂದ ಹೊರಡುತ್ತಿದ್ದ ಮಾಸಪತ್ರಿಕೆಯಾದ ನನಗೆ ೫೧ ನೆಯ ಸಂಚಿಕೆಗೇನೇ ಕೊಂಚ ತೊಂದರೆಯು ಸಂಭವಿಸಿ ಆ ಸಂಚಿಕೆಯಲ್ಲಿಯೇ ಮುಂದೆ ಶಿವಯೋಗ ಮಂದಿರದಿಂದ ನಾನು ಹೊರಡುವ ಅನುಕೂಲ ಮಾಡಲ್ಪಡುವುದೆಂದು ತಮಗೆ ಬಿನ್ನವಿಸಿಕೊಂಡೆನು.

ಧರ್ಮಕ್ಕೆ ಯಾವಾಗಲೂ ಕರ್ಮದ ಬಾಧೆಯಿರುವಂತೆ ನನಗೆ ಶಿವಯೋಗ ಮಂದಿರದಲ್ಲಿ ಆಗ ಅವಕಾಶವು ಸಿಕ್ಕುವುದಕ್ಕೆ ಅಲ್ಲಿ ಹಣದ ಕೊರತೆಯಿಂದ ವಿಶ್ವಾಸಿಕ ಸಂಘ (Trust Committee)ದ ಅನುಮತಿಯು ದೊರೆಯದೆಹೋಯಿತು. ಆ ಸಂಘದಲ್ಲಿ ಮುಖ್ಯ ಸದಸ್ಯರಾದ ರಾ. ಬ. ದೇವೀಹೊಸೂರು ಚನ್ನಬಸಪ್ಪ ಶೆಟ್ಟರವರು ನನ್ನ ಪ್ರಕಟಣೆಯನ್ನು ಮುಂದಕ್ಕೆ ಎಸೆದರು. ಆಗ ಮೂಲೆಯಲ್ಲಿ ನರಳುತ್ತಿದ್ದ ನಾನು ಧರ್ಮಕರ್ಮ ಸಂಯೋಗದಿಂದ ಮೈಸೂರಿನಲ್ಲಿ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳವರ ಪರಮ ಕರುಣಾಬಲದಿಂದ ಚೇತರಿಸಿಕೊಂಡೇಳಲಿಕ್ಕೆ ಪ್ರಾರಂಭಿಸಿದೆನು. ಚೇತರಿಸುವ ಚೆಚ್ಚರದಲ್ಲಿ ಈಗಿನ ಜಾಗತಿಕ ಯುದ್ಧ, ಮೈಸೂರುದೇಶದ ವಿದ್ಯುಚ್ಛಕ್ತಿಯ ಪ್ರಧಾನ ಕಾರ್ಯಾಲಯದ ಅಪಘಾತ ಮುಂತಾದ ಕಾರಣಗಳಿಂದ ಕಾಗದಗಳ ನಿರ್ಮಾಣಕ್ಕೆ ಕೊರತೆ ಬಂದು ನನ್ನ ಆಹಾರವಾದ ಕಾಗದಗಳಿಲ್ಲದೆ ಮತ್ತೆ ಗಟ್ಟಿಯಾದ ಪೆಟ್ಟನ್ನು ತಿಂದು ಮಲಗಿದೆನು. ಇಂತಹ ತೊಂದರೆಯಲ್ಲಿಯೂ ಮೈಸೂರು ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟರಾದ ಮ॥ ರಾ॥ ಕೆ. ಸಿ. ಸುಬ್ಬಣ್ಣನವರು ನನ್ನ ಪ್ರಕಟಣೆಗಾಗಿ ವೀರಶೈವ ಸಮಾಜ ಬಾಂಧವರಲ್ಲಿ ವಿನಯಪೂರ್ವಕವಾದ ವಿನಂತಿಯನ್ನು ಪ್ರಸಿದ್ಧ ಪತ್ರಿಕೆಯ ಮೂಲಕ ಪ್ರಕಟಿಸಿದುದರ ಬಲದಿಂದಲೂ ಸುತ್ತೂರು ವೀರಸಿಂಹಾಸನ ಮಠದ ಸ್ವಾಮಿಗಳವರ ಆಶ್ರಯದ ಬಲದಿಂದಲೂ ಮೆಹರ್ಬಾನ್ ಮೈಸೂರು ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರ್‌ರವರ ಸಹಾನುಭೂತಿಯ ಬಲದಿಂದಲೂ ನಾನು ಹೊರಬೀಳುವುದಕ್ಕೆ ಮೈಸೂರಿನ ರಾಜಕೀಯಾಜ್ಞೆಯು ಸರಬರಾಜು ಇಲಾಖೆಯ ಮಿತಪಡಿಸುವ ಅಧಿಕಾರಿಗಳಿಂದ (Controller of Civil Supplies) ದೊರೆತು ಮುದ್ರಣದ ಕಾಗದಗಳು

ದೊರೆತ ಬಲದಿಂದಲೂ ನಾನು ಮೆಲ್ಲ ಮೆಲ್ಲನೆ ಎದ್ದು ಈಗ ಕಣ್‌ಬಿಟ್ಟು ನೋಡುವಲ್ಲಿ ನನಗೆ ಮಹಾನಿಭವವು ತೋರಿಬರುತ್ತಲಿದೆ.

ಕರ್ಣಾಟಕದಲ್ಲಿ ಮುಖ್ಯ ಪ್ರಭುಗಳಾದ ಶ್ರೀ ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರರವರು, ಇದರ ರಾಜಧಾನಿಯ ಸ್ಥಳ, "ಸತ್ಯಮೇವೋದ್ಧರಾಮ್ಯಹಂ" ಎಂಬ ಬಿರುದನುಳ್ಳ ಆ ಶ್ರೀಮನ್ಮಹಾರಾಜರವರ ಕೃಪಾಛತ್ರದ ಆಶ್ರಯ ಸ್ಥಳ ಚಿನ್ನದ ಬೀಡು, ಸುಂದರ ನಾಡಿನ ಮುಖ್ಯಸ್ಥಳ–ಇಂತಹ ಸ್ಥಳದಲ್ಲಿ (ಮೈಸೂರಿನಲ್ಲಿ) ನಾನು ಹೊರಬೀಳುವುದು ನನ್ನ ಸುದೈವವೆಂದು ಭಾವಿಸಿದೆನು. ಈಗಲೀಗ ನನ್ನ ಪರಿಚಯುವನ್ನೂ, ಕಾರ್ಯವನ್ನೂ ಇನ್ನೂ ಚೆನ್ನಾಗಿ ಬಿನ್ನವಿಸುವೆನು. ದಯವಿಟ್ಟು ಮನ್ನಿಸಿರಿ.

ನನ್ನ ಮೊದಲಿನ ಧ್ಯೇಯವನ್ನು ನಾನು ಬಿಟ್ಟಿಲ್ಲ. ವೀರಶೈವ ಸಂಸ್ಕೃತಿಯು ವೇದಾಗಮೋಪನಿಷತ್ ಪ್ರತಿಪಾದಿತವಾದುದೆಂಬುದನ್ನು ಸಿದ್ಧಮಾಡಲು ಹಾವೇರಿಯಲ್ಲಿದ್ದುದಕ್ಕಿಂತಲೂ ಹೆಚ್ಚಿನ ಬಲವು ನನಗೆ ಒದಗಿದೆ. ವೀರಶೈವ ಸಂಬಂಧದ ಉಪನಿಷತ್ತುಗಳನ್ನೂ ಆಗಮುಗಳನ್ನೂ ಪ್ರಕಟಿಸುವೆನೆಂಬ ನನ್ನ ೧ನೆಯ ಸಂಚಿಕೆಗೆ ಮುಂಚೆಯೇ ಪ್ರಕಟನವಾದ ಪ್ರಸಿದ್ಧ ಪತ್ರಿಕೆಯುಂತೆ ನಡೆಯಲು ಬದ್ಧಕಂಕಣನಾಗಿದ್ದೇನೆ. ಹಾವೇರಿಯಲ್ಲಿದ್ದಾಗ ಲಿಂಗ ಉಪನಿಷತ್ತೊಂದನ್ನೇ ಹೊರಗೆಡವಿದೆನು. ಈಗ ಇನ್ನೂ ಕೆಲವು ಉಪನಿಷತ್ತುಗಳನ್ನು ಪ್ರಕಟಿಸಲುಳ್ಳವನು, ಅಲ್ಲಿ ಕನ್ನಡ ಗ್ರಂಥಗಳೇ ಹೆಚ್ಚಾಗಿ ಪ್ರಕಟಣೆಗೊಂಡವು. ಇಲ್ಲಿ ಕನ್ನಡ ಗ್ರಂಥಗಳ ಜೊತೆಯಲ್ಲಿ ವೀರಶೈವ ಸಂಬಂಧವಾದ ಕೆಲವು ಸಂಸ್ಕೃತ ಗ್ರಂಥಗಳನ್ನೂ ಪ್ರಕಟಿಸಲಿರುವೆನು. ನನ್ನ ಸಹವರ್ತಿಯಾದ ಸದ್ಧರ್ಮ ಗ್ರಂಥಮಾಲೆಯ ಪುಸ್ತಕಗಳ ಸಂಖ್ಯೆಯನ್ನೂ ಹೆಚ್ಚಿಸಲಿರುವೆನು. ಅಲ್ಲದೆ ಈ ಪ್ರಾಂತದಲ್ಲಿ ನಡೆಯುತ್ತಿರುವ ವಿದ್ಯಾರ್ಥಿನಿಲಯ ವಿಚಾರ, ಸಮಾಜೋನ್ನತಿ ಧಾರ್ಮಿಕ ಸಮ್ಮೇಲನ, ಸ್ತ್ರೀ ಸಮಾಜದ ಉನ್ನತಿ, ಮೊದಲಾದ ವಿಷಯುಗಳ ಪ್ರಕಟನೆಗೂ ನನ್ನಲ್ಲಿ ಅವಕಾಶವುಂಟು. ಕನ್ನಡವು ವೀರಶೈವರ ತಾಯಿನುಡಿ, ಕರ್ಣಾಟಕದ ಮಕ್ಕಳ ಮುದ್ದುನುಡಿ, ಈ ನುಡಿಯ ಮುನ್ನಡೆಗೂ ಅವಕಾಶ ಕೊಡಬೇಕೆಂದಿರುವೆನು.

ಮೈಸೂರು ಪ್ರಾಂತ್ಯದಲ್ಲಿ ಮತ್ತು ಇತರ ಕಡೆಗಳಲ್ಲಿ ಹಳ್ಳಿಗಳಲ್ಲೆಲ್ಲಾ ವ್ಯಾಪಿಸುವಷ್ಟು ಧರ್ಮಪ್ರಚಾರವಾಗಬೇಕೆಂಬುವವನು ನಾನು. ಜನಪದದ ಹಾಡುಗಳು, ಲಾವಣಿ ಕುಟ್ಟುಬೀಸುವ ಪದಗಳು ವೀರಶೈವದ ಧರ್ಮವನ್ನು ತಿಳಿಸುವುವುಗಳಾಗಬೇಕೆಂದು ನನ್ನ ಬಯಕೆ.

ಇಂತಹ ಅಹಮುಹಮಿಕೆಯ ಅನೇಕ ಮಾತುಗಳನ್ನಾಡಿದರೂ ನಾನು ದಾಸೋಹಂ ಭಾವದವನು. ಶಿವನು ನಡೆಯಿಸಿದರೆ ಭಕ್ತನ ದಾಸೋಹಂಭಾವವು ಶಿವನೊಲಿಯದಿರೆ ಮಾಯೆಯ ಕಾಯುವು. ನನಗೆ ಶಿವಸ್ವರೂಪರೇ ಶ್ರೀ ಶಿವರಾತ್ರಿ ರಾಜೇಂದ್ರ

ಸ್ವಾಮಿಗಳು. ಅವರ ಉದಾರಾಶ್ರಯವನ್ನೇ ನಾನು ಸಂಪೂರ್ಣವಾಗಿ ನಂಬಿರುವುದು. ಚಂದಾದಾರರು, ಉಪಸಹಾಯಕರು, ಸಹಾಯಕರು, ಉಪಪೋಷಕರು, ಪೋಷಕರು, ಮೊದಲಾದವರು ನನ್ನನ್ನು ಬಿಗಿಹಿಡಿದು ನಿಲ್ಲಿಸುವವರೆಗೂ ನನ್ನ ಕಾಲ್ ಬಲದ ಮೇಲೆ ನಾನು ನಿಲ್ಲಲಾರೆ.

ನನ್ನಲ್ಲಿ ಪ್ರಕಟವಾಗುವ ವಿಷಯಗಳನ್ನು ತುಂಬುವ ಮುಖ್ಯ ಪ್ರಕಾಶಕರು ಶ್ರೀ ಚನ್ನಮಲ್ಲಿಕಾರ್ಜುನರಾದರೂ ಉಳಿದ ಮಹನೀಯರ ಲೇಖನಗಳನ್ನೂ ನಾನು ಬಯಸುವೆನು.

ನನ್ನಲ್ಲಿನ ಯಾವ ಲೇಖನವಾದರೂ ಮುಂದೆ ವಿಮರ್ಶೆಗೆ ಅವಕಾಶವುಳ್ಳುದೆಂದೇ ತಿಳಿಯಬೇಕು. ಮುಂದೆ ಮುಂದೆ ವಿಮರ್ಶೆಯಾದರೆ ನಿರ್ಣಯವು ತಾನೇ ಹೊರ ಬೀಳುವುದು. ಅಲ್ಲಿನವರೆಗೂ ಮೊದಲು ಪ್ರಕಟವಾದುದೇ ಮುಖ್ಯವಾದುದು. ಆದರೆ ಬರೆಯುವವರು ತಮಗೆ ತಿಳಿದ ಮಟ್ಟಿಗೆ ಶೋಧಿಸಿದ ಅಂಶಗಳನ್ನೇ ಬರೆಯ ಲೆಂದು ಬೇಡುವೆನು.

ವೀರಶೈವ ಸನಾತನತ್ವವನ್ನು ಪ್ರಕಟಿಸಬೇಕೆಂಬುದು ನನ್ನ ಹಿರಿಯಾಸೆ. ಸಂದರ್ಭ ಪೊದಗಿದಾಗಲೆಲ್ಲಾ ಈ ವಿವರವನ್ನು ತೀವ್ರವಾಗಿ ಹೊರಬೀಳಿಸಲು ಯತ್ನಿಸುವೆನು. ಇದಕ್ಕಾಗಿ ಚರಿತ್ರ ಶೋಧಕರ ಮಿತ್ರತೆಯೂ ಬರವಣಿಗೆಗಳೂ ನನಗೆ ಬಹಳವಾಗಿ ಬೇಕು. ಗ್ರಂಥದ ಆಧಾರಗಳೂ ಬೇಕು.

೧೨ನೆಯ ಶತಮಾನಕ್ಕಿಂತ ಪೂರ್ವದಲ್ಲಿನ ವೀರಶೈವರ ಇತಿಹಾಸ, ಲಿಂಗಿ ಜನಾಂಗದ ವಿವರ, ಮುಂತಾದುವುಗಳನ್ನು ಬರೆದು ಕಳುಹಿಸುವ ಲೇಖನಕಾರರನ್ನೂ ನಾನು ಬಹಳ ಸನ್ಮಾನಿಸುವೆನು. ಆದರೆ ಪೌರ್ವಿಕವೆಂದು ಚರಿತ್ರೆಯಿಂದ ಸಿದ್ಧ ವಾಗದ ಆಗಮೋಪನಿಷತ್ತು ಮುಂತಾದ ಗ್ರಂಥ ಪ್ರಮಾಣಗಳು ಅಮುಖ್ಯವಾದ ವುಗಳು. ಆದುದರಿಂದ ಅಂತವುಗಳಲ್ಲದ ನಿಜ ಸಂಗತಿಯನ್ನು ಬೋಧಿಸುವ ಅಂಶ ಗಳೇ ಮುಂದೆ ಬಂದಲ್ಲಿ ಅಂತಹ ಲೇಖನಕಾರರಿಗೆ ನಾನು ಚಿರಋಣಿಯಾಗಿರುವೆನು ಮತ್ತು ಅವರನ್ನು ವೀರಶೈವ ಪೂರ್ವೇತಿಹಾಸ ಪ್ರಕಾಶಕ ದ್ವಿಜ್ಯೋತಿಗಳೆಂದು ತಿಳಿವೆನು.

ವೀರಶೈವ ಸಾಹಿತ್ಯವು ಪ್ರಚಾರವಾಗಬೇಕೆಂದು ಇದುವರೆವಿಗೆ ಕೆಲವು ಸಾಹಿತ್ಯ ಸಮ್ಮೇಳನಗಳು ತೀರ್ಮಾನಿಸಿ ಇವೆ. ಶರಣಸಂದೇಶ, ಶರಣಸಾಹಿತ್ಯ, ಬಸವರಾಜ ಪತ್ರಿಕೆ, ನವಸಂದೇಶ ಮೊದಲಾದ ಪತ್ರಿಕೆಗಳು ಆಗಾಗ ಈ ವಿಷಯವನ್ನೇ ಎತ್ತಿ ಎತ್ತಿ ಬರೆಯುತ್ತಲಿವೆ. ಅಂಥ ಸಾಹಿತ್ಯ ಪ್ರಚಾರದ ಒಂದು ಅಂಗವಾಗಿಯೇ ನನ್ನ ಸೇವೆ ಯನ್ನು ಅರ್ಪಿಸಬೇಕೆಂದಿದ್ದೇನೆ.

ಜ್ಞಾನದಾನವು ಎಲ್ಲಾ ದಾನಗಳಿಗಿಂತ ದೊಡ್ಡದು. ಉಳಿದ ದಾನಗಳು ಕೆಲಕಾಲದ ಮಟ್ಟಿಗೆ ತೃಪ್ತಿಯನ್ನು ಉಂಟುಮಾಡತಕ್ಕವುಗಳು ಜ್ಞಾನದಾನವಾದರೋ ಯಾವಜ್ಜೀವವೂ ಮನುಷ್ಯನನ್ನು ಆನಂದದಲ್ಲಿ ತೃಪ್ತಿಯಲ್ಲಿ ಇರಿಸುವುದು. ಒಬ್ಬನು

ತನ್ನ ಜನ್ಮದಲ್ಲಿ ಸಂಪಾದಿಸಿದ ಜ್ಞಾನವನ್ನು ಜೀವನು ಈ ದೇಹವನ್ನು ಬಿಟ್ಟು ಹೋಗುವಾಗಲೂ ತೆಗೆದುಕೊಂಡೇ ಹೋಗುತ್ತಾನೆ. ಈ ದೆಸೆಯಿಂದಲೇ ಬಾಲ್ಯದಲ್ಲಿ ಕೌಮಾರ್ಯದಲ್ಲಿ ಅನೇಕರಿಗೆ ಪಾಂಡಿತ್ಯವು ಲಭಿಸಿರುವುದೇ ಮುಂತಾದ ಉದಾಹರಣೆಗಳು ತೋರಿಬಂದಿದೆ. ಈ ಜ್ಞಾನದಾನಕ್ಕೆ ಎಲ್ಲರೂ ಪ್ರಯತ್ನಪಡಬೇಕು. ಎಲ್ಲರೂ ಬೋಧೆ ಮಾಡುವವರಾಗಿ ಇರಲು ಸಾಧ್ಯವಿಲ್ಲ. ಅಂತಹವರು ಪುಸ್ತಕಗಳನ್ನು ಪ್ರಕಟಿಸುವುದು ಪುಸ್ತಕಗಳನ್ನು ಕೊಂಡುಕೊಂಡು ಇತರರಿಗೆ ಉಚಿತವಾಗಿ ಹಂಚುವುದು ಮುಂತಾದ ಕಾರ್ಯವನ್ನು ಮಾಡಿ ಜ್ಞಾನ ಪ್ರಸಾರ ಮಾಡಬೇಕು. ಅದರಲ್ಲಿಯೂ ಧರ್ಮ ಜ್ಞಾನ ಪ್ರಸಾರವು ಬಹಳ ಮುಖ್ಯವಾದುದು. ಧರ್ಮವೆಂದರೆ ಮಹದೇವನನ್ನು ತಿಳಿದಾಚರಿಸುವುದು. ಧರ್ಮ ಜ್ಞಾನದಿಂದಲೇ ಮನುಷ್ಯನು ತನ್ನ ನಿಜವನ್ನೂ ತಿಳಿಯುತ್ತಾನೆ. ಲೌಕಿಕ (ಭೌತಿಕ) ಜ್ಞಾನದಿಂದ ಬಾಹ್ಯ ಜಗತ್ತಿನ ಸುಖವನ್ನೂ ಸಂಪತ್ತಿನ ಉಗಮವನ್ನು ತಿಳಿಯುತ್ತಾನೆ. ತನ್ನ ನಿಜ ಜ್ಞಾನದಿಂದ ತನಗೆ ಉಂಟಾದಷ್ಟು ಸುಖವು ಬಾಹ್ಯ ಸುಖದಿಂದಾಗದು. ನಿಜ ಜ್ಞಾನದ ಸುಖವು ಶಾಶ್ವತವಾದುದು. ಬಾಹ್ಯ ಸುಖವು ಕೆಲವು ಕಾಲದ ವರೆಗಿನದು. ಆದುದರಿಂದ ಧರ್ಮಜ್ಞಾನ ಪ್ರಸಾರಕ್ಕೆ ವಿಶೇಷವಾಗಿ ಗಮನ ಕೊಡಬೇಕು. ಈ ದೆಸೆಯಿಂದಲೇ ಪೂರ್ವದ ಮಹನೀಯರು ತಮ್ಮ ಕಾಲದಲ್ಲಿ ಕಷ್ಟದಿಂದ ಬರೆಯಬಹುದಾಗಿದ್ದರೂ ಓಲೆಯ ಪ್ರತಿಯಲ್ಲಿ ಧರ್ಮ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಅವುಗಳ ಉದ್ಧಾರವನ್ನು ಎಂದರೆ ಮುದ್ರಣವಾಗಿ ಓದಲಿಕ್ಕೆ ದೊರೆಯುವಂತಾಗುವುದನ್ನು ಮಾಡಬೇಕಾದುದು ಅವಶ್ಯಕ ಕರ್ತವ್ಯವಾಗಿದೆ. ಈಗಿನ ನಮ್ಮ ಸಮಾಜ ಬಾಂಧವರಲ್ಲಿ ಅನೇಕರು ಈ ಕರ್ತವ್ಯವನ್ನೇ ಮರೆತು ಬಿಟ್ಟಿರುತ್ತಾರೆ. ಪೂರ್ವದಲ್ಲಿ ಬರೆದಿಡಲ್ಪಟ್ಟ ಗ್ರಂಥಗಳೆಲ್ಲವೂ ಮೊದಲು ಮುದ್ರಣವಾಗಬೇಕು. ಅದರ ಜೊತೆಯಲ್ಲಿ ಈಗಿನ ಕಾಲದ ನಾಗರಿಕತೆಗೆ ತಕ್ಕಂತೆ ಪೂರ್ವದವರ ಸದುದ್ದೇಶವನ್ನು ಗುರಿಯಾಗಿಟ್ಟುಕೊಂಡು ನವೀನ ಗ್ರಂಥಗಳು ನಿರ್ಮಾಣವಾಗಬೇಕು. ಧಾರ್ಮಿಕ, ಕಾರ್ಮಿಕ, ದೈಹಿಕ, ಸಾಂಪತ್ತಿಕ, ರಕ್ಷಕ, ಸ್ವಾತಂತ್ರಿಕ ಮುಂತಾದ ಗ್ರಂಥಗಳೆಲ್ಲವೂ ಬಯಲಿಗೆ ಬರಬೇಕು. ಇಂತಹ ಕೆಲಸಗಳನ್ನೆಲ್ಲಾ ಮಾಡಲು ನನ್ನಂತಹ ಒಂದು ಪತ್ರಿಕೆಯು ಸಾಲದು. ಇನ್ನೂ ಪತ್ರಿಕೆಗಳು ಹೆಚ್ಚಾಗಬೇಕು. ಆದುದರಿಂದ ನನ್ನನ್ನು ಅಂತಹ ಪತ್ರಿಕೆಗಳಲ್ಲಿ ಒಂದೆಂದು ಭಾವಿಸಿ ಸಮಾಜ ಬಂಧುಗಳು ಪ್ರೋತ್ಸಾಹವನ್ನೀಯಲಿ.

ವೀರಶೈವ ಸಂಸ್ಕೃತಿಯು ಭಾರತದ ಧಾರ್ಮಿಕ ಸಂಸ್ಕೃತಿಗಿಂತ ಪ್ರತ್ಯೇಕವಾಗಿ ಇರುವುದೆಂದು ಕೆಲವರು ಹೇಳುತ್ತಾರೆ. ಶೈವ ಸಂಸ್ಕೃತಿಯು ಭಾರತ ದೇಶವಲ್ಲಿಯೇ ಉಗಮವಾದುದೆಂದು ಆ ಸಂಸ್ಕೃತಿಯೇ ಮೊಟ್ಟಮೊದಲಿನ ಧಾರ್ಮಿಕ ಸಂಸ್ಕೃತಿ ಎಂದೂ ಇತಿಹಾಸಕಾರರು ಕಂಡುಹಿಡಿದಿದ್ದಾರೆ. (ಹರಪ್ಪ ಮಹಂಜೋದಾರೋ ಸಂಬಂಧದ ಗ್ರಂಥವನ್ನು ನೋಡಿರಿ.) ಈ ಶೈವ ಸಂಸ್ಕೃತಿಯಲ್ಲಿ ಲಿಂಗಪೂಜೆಯು ಮುಖ್ಯವಾದ ಅಂಗವಾಗಿರುವುದರಿಂದ ಲಿಂಗವನ್ನು ಪೂಜಿಸುವ ವೀರಶೈವ ಸಂಸ್ಕೃತಿಯು ಭಾರತದ

ಸಂಸ್ಕೃತಿಗಿಂತ ಭಿನ್ನವಾದುದೆಂದು ತಿಳಿಯಲಾಗುವುದೇ ಇಲ್ಲ. ವೀರಶೈವರು ಭಾರತ ಸಂಸ್ಕೃತಿಯಲ್ಲಿ ಒಂದು ವೈಶಿಷ್ಟ್ಯವುಳ್ಳುದೆಂದು ಮತ್ತೆ ಕೆಲವರು ಹೇಳುತ್ತಾರೆ. ಆದರೆ ಈ ವೈಶಿಷ್ಟ್ಯವು (ಹೆಚ್ಚುಗಾರಿಕೆ) ವಿಲಕ್ಷಣ (ಭಿನ್ನರೂಪ) ವಾದುದು ಅಲ್ಲವೆಂಬುದನ್ನು ಅವರು ತಿಳಿದಿರಬೇಕಾಗಿದೆ. ಹರಪ್ಪ ಮಹಂಜೋದಾರೋ ಪಟ್ಟಣದಲ್ಲಿ ಈಗಿನ ವೀರ ಶೈವರು ಧರಿಸುವಂತಹ ಲಿಂಗಗಳೂ ಸಿಕ್ಕಿರುವುದರಿಂದ ಆಗಲೂ ಲಿಂಗವನ್ನು ಶರೀರದಲ್ಲಿ ಧರಿಸುವ ಪದ್ಧತಿ ಇತ್ತೆಂದು ವ್ಯಕ್ತವಾಗುತ್ತದೆ. ಆದುದರಿಂದ ಈ ಸಂಸ್ಕೃತಿಯು ಭಾರತದ ಅತೀ ಪ್ರಾಚೀನವಾದುದೆಂದೂ ವಿಲಕ್ಷಣ ವೈಶಿಷ್ಟ್ಯವುಳ್ಳದಲ್ಲವೆಂದೂ ತಿಳಿಯ ಬಹುದಾಗಿದೆ. ಇನ್ನು ಪರಿಷ್ಕರಣ ವೈಶಿಷ್ಟ್ಯವು ಕಾಲಾನುಗುಣವಾಗಿ ಕೆಲವು ಮಟ್ಟಿಗೆ ಆಗಿರಬೇಕು. ಇಂತವುಗಳ ವಿವರವನ್ನು ಸಾಧ್ಯವಾದಷ್ಟು ಪ್ರಕಟಿಸಲು ನಾನು ಹಂಬಲಿಸುತ್ತೇನೆ.

ಇದು ೫೨ನೆಯ ಸಂಚಿಕೆ. ನನ್ನ ಹಿಂದಿನ ಸಂಚಿಕೆಗಳಲ್ಲಿ ಅಪೂರ್ಣವಾದ ಪುಸ್ತಕ ಗಳನ್ನು ಪೂರ್ಣಮಾಡುವ ಸಂಕಲ್ಪವೂ ನನಗಿದೆ.

ಈಗ ವೀರಶೈವ ಜನಾಂಗವು ಪಕ್ಷಗಳ (Parties) ಬೀಡು ಆಗಿದೆ. ಹೀಗಾಗಲು ಈ ಜನಾಂಗವು ತನ್ನ ಧಾರ್ಮಿಕ ನಿಜಜ್ಞಾನವನ್ನು ತಿಳಿಯದಿರುವುದೇ ಮುಖ್ಯಕಾರಣವು. ಉತ್ತಮ ನಾಗರಿಕ ಸಂಸ್ಕೃತಿಯಲ್ಲಿಯೂ ಇವರಲ್ಲಿ ಬಹಳ ಜನರು ಪಳಗಿಲ್ಲ. ಈ ಕಾರಣ ದಿಂದ ಸಂಕುಚಿತ ಭಾವನೆಯಿಂದಲೂ ಕೆಲವು ಪಕ್ಷಗಳಾಗಿವೆ. ನಾನು ಈ ಪಕ್ಷಗಳಿಗೆ ಒಳಪಡದೆ ಯಥಾರ್ಥವನ್ನೇ ಪ್ರಕಟಿಸಲುಳ್ಳವನು. ಹಾವೇರಿಯಲ್ಲಿ ನನ್ನ ಹಿಂದಿನ ಸಂಚಿಕೆಗಳಲ್ಲಿ ಹೊರಬಿದ್ದ ವಿಷಯುಗಳಿಗೆ ಆಕ್ಷೇಪಣೆಗಳು ಪ್ರಕಟವಾಗದಿರುವುದೇ ಇದಕ್ಕೆ ದೃಷ್ಟಾಂತರ ಮುಂದೂ ಈ ನನ್ನ ಧ್ಯೇಯವನ್ನೇ ಬಲಪಡಿಸಿಕೊಂಡು ಈ ರಂಗಭೂಮಿ ಯಲ್ಲಿ ಕಾಲಿಡುವೆನು.

ಅನೇಕ ಧರ್ಮಾಭಿಮಾನಿಗಳು (ಚನ್ನಗಿರಿ ತಾಲ್ಲೂಕು ಬಿಲ್‌ಹಳ್ಳಿ ಮಠದ ಶ್ರೀ ಸಂಗಮನಾಥ ಸ್ವಾಮಿಗಳೇ ಮೊದಲಾದವರು) ನಾನು ಹಾವೇರಿಯಿಂದ ವಿರಮಿಸುತ್ತಿದ್ದು ದಕ್ಕೆ ವಿಷಾದಪಟ್ಟು ಲೇಖನಗಳನ್ನು ಬರೆದಿದ್ದರು. ಅಂತಹ ಅಭಿಮಾನಿಗಳಿಗೆ ಮುಂದೆ ನನ್ನ ಸೇವೆಯನ್ನು ಅರ್ಪಿಸುವನೆಂದು ಭಕ್ತಿಪೂರ್ವಕವಾಗಿ ಬಿನ್ನವಿಸಿ ಅವರ ವಿಷಾದ ಕ್ಕಾಗಿ ನನ್ನ ಕೃತಜ್ಞತಾ ವಂದನೆಗಳನ್ನರ್ಪಿಸುವೆನು.

ವೀರಶೈವ ಗ್ರಂಥಗಳನ್ನು ಶುದ್ಧಪಡಿಸಿ ಮುದ್ರಣಕ್ಕೆ ತರುವುದರಲ್ಲಿ ಮೈಸೂರು ಪಟ್ಟಣವೇ ಮೊದಲಿನದೆಂಬ ಉಪಕಾರ ಸ್ಮರಣೆಯನ್ನು ಈಗ ಮಾಡುವುದು ನನ್ನ ಕರ್ತವ್ಯ ವಾಗಿದೆ. ಕೈ. ವಾ. ವೇ. ಪಿ. ಆರ್. ಕರಿಬಸವಶಾಸ್ತ್ರಿಗಳವರು ಮ. ರಾ. ಯಜಮಾನ್ ವೀರಸಂಗಪ್ಪನವರು ಮುಂತಾದವರು ವೀರಶೈವ ಗ್ರಂಥಗಳನ್ನು ಪರಿಶೋಧಿಸಿ ಮುದ್ರಿಸು ವುದರಲ್ಲಿ ಬಹಳ ಶ್ರಮವನ್ನು ತೆಗೆದುಕೊಂಡಿದ್ದಾರೆ. ವೀರಶೈವವು ಗಣ್ಯವಾದ ಜನಾಂಗವೆಂದು ಸ್ಥಾಪಿಸಲಿಕ್ಕೆ ತಮ್ಮ ಶಕ್ತಿ ಮೀರಿದಷ್ಟು ಪ್ರಯತ್ನ ಮಾಡಿರುತ್ತಾರೆ. ಆ ಕಾಲದಲ್ಲಿ ವೀರಶೈವ ಜನಾಂಗವೇ ಅವರ ಮುಂದಾಳುತನದಲ್ಲಿ ನಡೆಯಿತು. ವೀರಶೈವ

ಶ್ರೇಷ್ಠತೆಯನ್ನು ತಿಳಿಯಪಡಿಸುವ ಅವರ ಧ್ಯೇಯವೇ ಮುಂದೆ ಚೆನ್ನಾಗಿ ವ್ಯಕ್ತಪಡಲೆಂಬ ಭಾವನೆಯನ್ನು ನಾನು ತುಂಬಿಕೊಂಡಿದ್ದೇನೆ. ಮೈಸೂರು ಪಟ್ಟಣವು ಮುಂದೂ ವೀರಶೈವರ ಆದರ್ಶ ಮುಖ್ಯ ಸ್ಥಳವಾಗಲೆಂದು ನನ್ನ ಹಾರೈಕೆ.

ಮೈಸೂರು ದೇಶವನ್ನಾಳುವ ಶ್ರೀ ಜಯಚಾಮ ರಾಜೇಂದ್ರ ಒಡೆಯರವರಿಗೂ ಅವರ ಸಂಸಾರಕ್ಕೂ ರಾಜ ಬಂಧುಗಳಿಗೂ ಸುತ್ತೂರು ವೀರ ಸಿಂಹಾಸನ ಮಠದ ಶ್ರೀ ಶಿವರಾತ್ರೀಶ್ವರ ಸ್ವಾಮಿಗಳವರಿಗೂ ಶಿವಭಕ್ತರಿಗೂ ಸರ್ವ ಜನರಿಗೂ ಸುಖ ಸಂಪದಾಯುರಾರೋಗ್ಯಾದಿಗಳು ವರ್ಧಿಸಲೆಂದೂ ಶಾಂತಿಕರವಲ್ಲದ ಯುದ್ಧವು ಬೇಗನೆ ಶಾಂತಿಯಾಗಲೆಂದು ನಿರುಪಮನಲ್ಲಿ ಹರಕೆಯನ್ನು ಬೇಡಿಕೊಂಡು ನನ್ನೀ ಬಿನ್ನಪವನ್ನು ಮುಗಿಸುವೆನು.

ಪ್ರಸಿದ್ಧ ಶಿವಶರಣರಾದ ಮೈಲಾರದ ಬಸಪ್ಪನವರು ರಚಿಸಿದ ಸಂಸ್ಕೃತ ಶ್ಲೋಕಗಳು. (ಕೈ ಬರಹದ ಪ್ರತಿಯಿಂದ)

ಶ್ರೀ ಕಿಂಕರಃ ಕಿಂಕರಶ್ಚೈವ ಕಿಂಕರೊ ನಿಜರೂಪಕಃ ।
ಕಿಂಕರಃ ಶಿವಭಕ್ತಶ್ಚ ಕಿಂಕರಃ ಶಂಕರೋ ಗುರುಃ ॥
ಭೃತ್ಯೋ ಭೃತ್ಯಃ ಶಿವಶ್ಚೈವ ಭೃತ್ಯಾಚಾರಾಡ್ ಗಣಃ ಪದಃ ।
ಭೃತ್ಯನಾಮಂ ಶಿವರೂಪಂ ಭೃತ್ಯಾಚಾರಃ ಸ್ವಯಂ ಪ್ರಭುಃ ॥
ಸದ್‌ಭಕ್ತಿರ್ಮುಕ್ತಿ ರೂಪಾ ಚ ಸದ್ಭಕ್ತಿರ್ಮೋಕ್ಷ ಮಂದಿರಂ ।
ಸದ್ ಭಕ್ತಿಶ್ಚಿತ್ ಸ್ವರೂಪಾಯ ಸದ್ಭಕ್ತಿಃ ಸಾಕ್ಷಿ ಕೇವಲಾ ॥

ಕಿಂಕರನು ಶಂಕರನಾಗುತ್ತಾನೆ, ಆಳಾಗಬಲ್ಲವನು ಅರಸಾಗಬಲ್ಲ– ಎಂಬ ಅಭಿಪ್ರಾಯವನ್ನು ತೋರಿಸುವ ಶ್ಲೋಕಗಳಿವು, ಭಕ್ತನೇ ಶಿವಸಾಮರಸ್ಯವನ್ನು ಹೊಂದುವನು.

ಇಂತೀ ದಾಸೋಹಂಭಾವಿ
ಸದ್ಧರ್ಮ ದೀಪಿಕೆ

(ಸಂ. ೫೨)

# ಸದ್ಧರ್ಮ ದೀಪಿಕೆಯ ತೊಂದರೆ

೧೯೪೬ನೆಯ ಸೆಪ್ಟೆಂಬರಿನಿಂದ ಡಿಸೆಂಬರಿಗೆ ಅಂತ್ಯವಾಗುವ ಕನ್ನಡ ಸಾಹಿತ್ಯ ಪರಿಷತ್ತು ಪತ್ರಿಕೆಯ ೩೧ನೆಯ ಸಂಪುಟದ ೩-೪ನೆಯ ಸಂಚಿಕೆಗಳು ೪-೧೨-೧೯೪೭ರಲ್ಲಿ ಬಂದಿವೆ. ಇಂತಹ ಪತ್ರಿಕೆಗಳೇ ಸಾವಕಾಶದಿಂದ ಹೊರಡುತ್ತಿರುವಾಗ ಹರಕಂಗಿಯುವನಿಂದ ನಡೆಸಲ್ಪಡುತ್ತಿರುವ ಸದ್ಧರ್ಮ ದೀಪಿಕೆಯ ಪಾಡೇನು ?

ಈ ಸಂಚಿಕೆಯು ಕೆಲವು ಅನನುಕೂಲಗಳಿಂದ ಸಾವಕಾಶವಾಗಿ ಹೊರಟಿದೆ. ಈ ಪತ್ರಿಕೆಯ ೧೪ನೆಯ ಪುಟದಲ್ಲಿ ಮುದ್ರಣದ ತಪ್ಪು ಕೆಲವನ್ನು ತಿದ್ದಿ ಇದೆ. ೩೩ ರಿಂದ ೫೬ರ ವರೆಗಿನ ಪುಟಗಳಲ್ಲಿ ತಪ್ಪುಗಳು ಅನೇಕವಾಗಿವೆ. ವ ಎಂಬುದರ ಕಾಗುಣಿತಾಕ್ಷರದ ಬದಲು ಪ, ತೇಗೆರೇ, ಮಾರಾರಿ ಬದಲಾಗಿ ಮುರಾರಿ (೩೯) 'ಹೇ'ಗೆ 'ಯೇ' 'ತೇ'ಗೆ 'ಕೇ' ೪೮ರ ನಿಧನ ಸುದ್ದಿಯಲ್ಲಿ 'ಚಾ'ಗೆ 'ಜಾ', 'ರು'ಗೆ 'ರೂ' ಹೀಗೆ ಬಿದ್ದಿವೆ. ಮುಂದೆ ಹೀಗಾಗುವುದಿಲ್ಲವೆಂಬ ಭರವಸೆ ಇದೆ.

(ಸಂ. ೬೬-೬೭)

# ಧರ್ಮ ರಕ್ಷಣೆ ಮತ್ತು ಈ ಪತ್ರಿಕೆಯ ಸೇವೆ*

ಧರ್ಮ ಎಂದರೆ ದಾನವಾಗಿ ಕೊಡುವುದಕ್ಕೆ ಹೆಸರಾಗುತ್ತದೆ ಎಂದು ಕೆಲವರು ತಿಳಿದಿರುತ್ತಾರೆ. ಧರ್ಮ ಶಬ್ದದ ಅರ್ಥವು ಬಹಳ ವಿಶಾಲವಾದ ಅಭಿಪ್ರಾಯವುಳ್ಳದು. ಪೂರ್ವ ಮೀಮಾಂಸ ಶಾಸ್ತ್ರದಲ್ಲಿ ಯಾವುದು ಮಹಾದೇವನನ್ನು (God) ಕುರಿತು ವಿಚಾರವುಳ್ಳದೋ ಅದು 'ಧರ್ಮ' ಎಂದು ಹೇಳಲ್ಪಟ್ಟಿದೆ. ಈ ಪ್ರಕಾರ ತಿಳಿಯುವುದೇ ಸರಿಯಾದುದಾಗಿದೆ. ಹೀಗೆ ತಿಳಿಯುವುದಾದರೆ ಧರ್ಮ ಎಂದರೆ ಮತ ಎಂದು ಅರ್ಥ ಹೇಳುವುದೂ ಸರಿಯಲ್ಲವೆಂದು ಗೊತ್ತಾಗುತ್ತದೆ. ಕೆಲವು ಮತಗಳಲ್ಲಿ ದೇವನ ವಿಚಾರವೇ ಇಲ್ಲ. ಬುದ್ಧಿಯೇ ಪ್ರಧಾನವಾಗಿ ಉಳ್ಳ ಬೌದ್ಧ ಮತವು ಬೌದ್ಧಧರ್ಮ ಎಂದು ಕರೆಯಿಸಿಕೊಳ್ಳುವುದಕ್ಕೆ ಯೋಗ್ಯವಾಗಲಾರದು. ಮಹಾದೇವನ ವಿಚಾರವೇ 'ಧರ್ಮ' ಎಂದು ಅಭಿಪ್ರಾಯವನ್ನಿಟ್ಟುಕೊಂಡು ಆ ಧರ್ಮವನ್ನು ಭಾರತದಲ್ಲಿ ರಕ್ಷಣೆ ಮಾಡುವುದು ಈಗ ಅತ್ಯವಶ್ಯಕವಾಗಿದೆ. ಪ್ರಪಂಚದಲ್ಲಿ ಮಹದೇವನಿಲ್ಲ ಎಂದು ಹೇಳುವ ನಾಸ್ತಿಕರು ಕಡಿಮೆ. ಮಹಾದೇವನಿದ್ದಾನೆ ಎಂದು ನಂಬುವವರೇ ಬಹಳ. ಆದುದರಿಂದ ಧರ್ಮ ರಕ್ಷಣೆಯು ಪ್ರಪಂಚಕ್ಕೇ ಬೇಕು.

ಧರ್ಮದ ವಿಚಾರದಲ್ಲಿ ತಿಳಿದುಕೊಳ್ಳತಕ್ಕ ಅಂಶಗಳು ಬಹಳವಾಗಿ ಇವೆ. ಮಹಾದೇವನು ಸಗುಣನೇ ? ನಿರ್ಗುಣನೇ ? ಸಾಕಾರನೇ ? ನಿರಾಕಾರನೇ ? ಅವನ ಲಕ್ಷಣವೇನು ? ಸುಗುಣ ಮೂರ್ತಿಯನ್ನು ಪೂಜಿಸಿದರೆ ಏನು ಫಲ ? ನಿರಾಕಾರನನ್ನು ಪೂಜೆಗೆ ತರುವುದಕ್ಕೆ ಆಗುವುದೇ ಹೇಗೆ ? ಹಾಗೆ ತರಬೇಕಾದರೆ ಏನು ವಿಚಾರ ಮಾಡಬೇಕು ? ಪೂಜೆಯಾದರೂ ಹೇಗೆ ಇರಬೇಕು ? ನಿರಾಕಾರನ ಪೂಜೆಯಿಂದ ಏನು ಫಲ ? ಇವೇ ಮುಂತಾದ ಅನೇಕ ವಿಷಯುಗಳನ್ನು ಧರ್ಮ ಜಿಜ್ಞಾಸೆ ಮಾಡುವವರು ತಿಳಿದಿರಬೇಕು.

ಮೇಲಿನ ಸಂಗತಿಗಳೇ ಮೊದಲಾದವುಗಳ ವಿಮರ್ಶಾತ್ಮಕವಾದ ವಿವಾದಗಳೂ ಭಾರತದ ಸ್ವಾತಂತ್ರ್ಯದ ಈ ಕಾಲದಲ್ಲಿ ಧಾರ್ಮಿಕದ ಸ್ವಾತಂತ್ರ್ಯವನ್ನೂ ತಿಳಿಯುವುದಕ್ಕಾಗಿ ನಡೆಯಲೇಬೇಕು. ಅನೇಕ ಸಭೆಗಳು ಕೂಡಿ ಅವುಗಳಲ್ಲಿ ನಿರ್ಣಯವಾಗುವಂತೆಯೂ ಆಗಬೇಕು.

ಧಾರ್ಮಿಕ ವಿಚಾರದಲ್ಲಿ ಪ್ರಖ್ಯಾತಿಯನ್ನು ಗಳಿಸಿದ ಈ ಭಾರತದಲ್ಲಿ ಈಗ ಧಾರ್ಮಿಕ ವಿಚಾರವು ಬಹಳ ಹೀನ ದೆಸೆಯನ್ನು ಹೊಂದಿದೆ. ಮಹಾದೇವನ ವಿಚಾರವೇ ಜನರಿಗೆ ಬೇಕಾಗಿಲ್ಲ. ಆದರೆ ಅದರಿಂದ ಪ್ರಯೋಜನವಿಲ್ಲ ಎಂದು ಹೇಳುವಷ್ಟು ಮಟ್ಟಕ್ಕೆ ಇನ್ನೂ ಬಂದಿಲ್ಲ. ಆ ಮಟ್ಟಕ್ಕೆ ಬರುವದರೊಳಗಾಗಿಯೇ ಅದರ ಪುನರುದ್ಧಾರ

* ಸಂ. ೭೪.೭೫

ವಾಗುವುದು ಬಹಳ ಒಳ್ಳೆಯದು. ಆಗ ಭಾರತದ ಪೂರ್ವದ ಪ್ರಖ್ಯಾತಿಯನ್ನು ಉಳಿಸಿದಂತೆಯೇ ಆಗುತ್ತದೆ. ಧರ್ಮ ರಕ್ಷಣೆ ಮಾಡಿದಂತೆಯೇ ಆಗುತ್ತದೆ.

ಈಗ ಗಾಂಧಿ ಧರ್ಮ ಎಂಬುದೊಂದನ್ನು ಹೊಸದಾಗಿ ಭಾರತದಲ್ಲಿ ಸ್ಥಾಪಿಸಲು ಪ್ರಯತ್ನವು ನಡೆಯುತ್ತಿರುವುದಾಗಿ ತಿಳಿಯುತ್ತದೆ. ಮಹನೀಯರಾದ ಗಾಂಧೀಜಿಯವರು ಭಾರತ ಸ್ವಾತಂತ್ರ್ಯಕ್ಕಾಗಿ ಬಹಳ ಶ್ರಮಪಟ್ಟವರು. ದೈವಭಕ್ತರೂ ಅಹುದು. ನಿರಾಕಾರ ದೇವನನ್ನು ನಂಬಿದವರು. ಅವರ ಹೆಸರಿನ ದೇವಾಲಯವನ್ನು ಕಟ್ಟಿಸಲಿಕ್ಕೆ ಹೋದವರಿಗೆ ಹಾಗೆ ಮಾಡಬಾರದೆಂದು ಬೋಧೆ ಮಾಡಿದವರು.

ಗಾಂಧೀಜಿಯವರಲ್ಲಿ ಪ್ರೇಮವನ್ನು ತೋರಿಸದೆ ಇರುವ ಧಾರ್ಮಿಕ ಪ್ರೇಮಿಗಳೂ ಭಾರತದಲ್ಲಿ ಕೆಲವರಿದ್ದಾರೆ. ಅವರ ಸರಳ ಪ್ರೇಮದಿಂದ ಇಸ್ಲಾಂ ಮತದ ವರ್ಧನೆಗೆ ಅನುಕೂಲವಾಗಿ ಹಿಂದೂ ದೇಶದ ಧಾರ್ಮಿಕ ಪದ್ಧತಿಗೆ ತೊಂದರೆಯುಂಟಾಯಿತೆಂದು ಅವರನ್ನು ಆಕ್ಷೇಪಿಸುವವರೂ ಇದ್ದಾರೆ. ಆದುದರಿಂದ ಅವರ ಹೆಸರಿನ ಧರ್ಮವನ್ನು ಪ್ರತ್ಯೇಕವಾಗಿ ಸ್ಥಾಪಿಸುವುದಕ್ಕಿಂತಲೂ ಅವರ ಸ್ಮಾರಕದಲ್ಲಿ ಭಾರತ ಧರ್ಮವನ್ನು ಶುದ್ಧಿಗೊಳಿಸುವುದೇ ಉತ್ತಮವಾದುದು.

ಸಾಮಾನ್ಯವಾಗಿ ಧರ್ಮವು ಜಗತ್ತಿಗೆಲ್ಲಾ ವ್ಯಾಪಿಸಬೇಕಾಗಿರುವುದರಿಂದ ಗಾಂಧೀಜಿಯವರು ಹೇಳಿದ ಅಭಿಪ್ರಾಯಗಳನ್ನು ಅನುಸರಿಸುವ ಪದ್ಧತಿಯ ಧರ್ಮವನ್ನು ವಿಶ್ವಧರ್ಮ (Universal Religion) ಎಂದು ಕರೆಯಬಹುದು. ಗಾಂಧಿಯವರು ಮಹಾದೇವನಿಲ್ಲವೆಂದು ಹೇಳುವವರಲ್ಲವಾದುವರಿಂದ ಅವರ ಮತವು 'ಧರ್ಮ'ವಾಗಿಯೇ ಇರುವುದು. 'ವಿಶ್ವಧರ್ಮ' ಎಂಬ ಹೆಸರಿಡುವುದರಿಂದ ವಿಶಾಲವಾದ ಭಾವನೆಯು ಜನತೆಗೆ ಬಂದು ಅದರಲ್ಲಿ ಪ್ರೇಮವು ಉಂಟಾಗುವುದು.

ಗಾಂಧೀಜಿಯವರು ಯಾರು ಯಾವುದನ್ನು ಬೇಕಾದರೂ ಪೂಜಿಸಲಿ ಎಂಬ ಅಭಿಪ್ರಾಯವುಳ್ಳವರಿದ್ದರೆಂದು ತಿಳಿಯುತ್ತದೆ. ಆ ಪ್ರಕಾರ ಏರ್ಪಡಿಸಿದರೆ ವಿಶ್ವಧರ್ಮವು ಎಲ್ಲ ಧರ್ಮವನ್ನೂ ಒಳಗೊಳ್ಳುವುದು. ಕ್ರೈಸ್ತರೂ ಮಹಮ್ಮದೀಯರೂ ಮುಂತಾದವರು ಯಾರು ಯಾರು ಬೇಕಾದರೂ ವಿಶ್ವಧರ್ಮಕ್ಕೆ ಸೇರಿ ತಮ್ಮ ಇಷ್ಟ ಬಂದಂತೆ ಮಹಾದೇವನನ್ನು ಆರಾಧಿಸಿಕೊಂಡು ಇರಬಹುದು.

ಭಾರತದಲ್ಲಿ ಇನ್ನೊಂದು ವಿಶೇಷವಿದೆ. ಅದೇ "ನಾನೇ ಬ್ರಹ್ಮ" ಎಂದು ತಿಳಿಯುವ ಅದ್ವೈತ. ನಿರಾಕಾರನು ನನ್ನಲ್ಲಿ ಇದ್ದಾನೆ ಎಂದು ತಿಳಿಯುವ ಮಟ್ಟದವರಾಗಿ ಗಾಂಧೀಜಿಯವರು ಇದ್ದರೆ ಹೊರತು "ನಾನೇ ಬ್ರಹ್ಮ" ಎಂದು ಹೇಳುವ ಮಟ್ಟಕ್ಕೆ ಅವರು ಇನ್ನೂ ಬಂದಿರಲಿಲ್ಲವೆಂದು ತಿಳಿಯಬರುತ್ತದೆ. ಹಾಗೆ ಹೇಳಿದುದಿದ್ದ ಯಾವ ಮಹನೀಯರಾದವರೂ ಅದನ್ನು ಪುನಃ ಪ್ರಕಟಿಸಿ ಜನತೆಗೆ ವಿದಿತಪಡಿಸಿದರೆ ಬಹಳ ಉಪಕಾರವಾಗುತ್ತದೆ.

"ನಾನೇ ಬ್ರಹ್ಮ" ಎಂದು ಹೇಳುವುದೂ ತಪ್ಪಿಲ್ಲ. ಅಣುವಿನಿಂದ ಸಮಸ್ತವೂ ಆಗಿದೆ ಎಂದು ಈಗಿನ ಭೌತಶಾಸ್ತ್ರಜ್ಞರು ಕಂಡುಹಿಡಿದಿರುವಂತೆ ಅಣೋರಣೀಯಾನ್

(ಅಣುವಿಗಿಂತಲೂ ಅಣುವು) ಆದ ಮೂಲವಸ್ತುವೇ ನಾನು ಎಂದು ಹೇಳುವುದು ಸಹಜವಾಗಿಯೇ ಇದೆ. ಹೀಗೆ ಹೇಳುವವರೂ ಧರ್ಮದವರೇ, ಧರ್ಮಕ್ಕೆ ಸೇರಿದವರೇ. ಇವರು ಸಗುಣ ಪೂಜೆಗೆ ಒಡಂಬಡರು. ಸರ್ವ ಜೀವವೂ (ಪ್ರಾಣಿಗಳೂ) ಮೂಲ ವಸ್ತುವೇ ಎಂದು ತಿಳಿದವರು ಪ್ರಾಣಿಹಿಂಸೆಯನ್ನು ಮಾಡುವುದಿಲ್ಲ. ಆದುದರಿಂದ ಇವರ ಗುಂಪನ್ನು "ಶೋಧಿಸಿ ವಿಶ್ವಧರ್ಮ" (Refined of Reformed Universal Religion) ಎಂದು ಅಂಗೀಕರಿಸಬೇಕು.

ಇವುಗಳಲ್ಲದೇ ನಾನೇ ಬ್ರಹ್ಮ ಎಂದು ಹೇಳುವವರು ಅದರಂತೆ ನಡೆಯುವ ಪದ್ಧತಿಯುಳ್ಳ ಕ್ರಮದವರೂ ಭಾರತದಲ್ಲಿ ಇದ್ದಾರೆ. ಇವರು ಕೇವಲ ಧರ್ಮನಿಷ್ಠರು. ಪ್ರಾಣಿಹಿಂಸೆ ಗಿಂಸೆ ಒಂದು ಕಾಲ, ಒಂದು ಸಂದರ್ಭದಲ್ಲಿಯೂ ಮಾಡರು. ಅಚ್ಚ ದೈವಭಕ್ತರು. ಇಂತಹವರ ಪಂಗಡವನ್ನು "ವೀರವಿಶ್ವಧರ್ಮ" (Heroie Universal Religion) ಎಂದು ಅಂಗೀಕರಿಸಬೇಕು.

ಹೀಗೆ ಮೂರು ವಿಧವಾಗಿ ಮಾಡಲ್ಪಟ್ಟ ವಿಶ್ವಧರ್ಮವನ್ನು ಪ್ರಚಾರಕ್ಕೆ ತರುವುದಾದರೆ ಇಡೀ ಜಗತ್ತೇ ಈ ಮೂರರಲ್ಲಿ ಸಮಾವೇಶವಾಗಿ ಹೋಗುವುದು.

ಭಾರತದಲ್ಲಿ ಕೋಮುವಾರು ಗಲಭೆಯು ಬಹಳ ಗೊಂದಲವನ್ನೆಬ್ಬಿಸಿ ಇದೆ. ಇಸ್ಲಾಂ ಧರ್ಮವನ್ನೇ ಭಾರತದಲ್ಲಿ ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷಿಗಳೂ ಅನೇಕರಿದ್ದಾರೆ. ಅವರಿಗೆ ಗಾಂಧೀ ಧರ್ಮವು ರುಚಿಸುವುದಿಲ್ಲ. ಮೇಲೆ ಕಂಡ ತರಹೆಯ ವಿಶ್ವಧರ್ಮವಾದರೆ ಯಾರಿಗೆ ಯಾವ ರೀತಿ ಇರಲಿಕ್ಕೂ ಬಾಧಕವಿಲ್ಲ. ಭಾರತದಲ್ಲಿನ ಹಿಂದೂ ಇಸ್ಲಾಮರನ್ನು ಕೂಡಿಸಲಿಕ್ಕೆ ಇದೊಂದೇ ಮುಖ್ಯ ಉಪಾಯವಾಗಿ ಪರಿಣಮಿಸುತ್ತದೆ.

ಧರ್ಮ ಮತ್ತು ಅದರ ಸಂರಕ್ಷಣೆಗೆ ಈಗ ಎಷ್ಟು ತೊಂದರೆ ಇದೆ ಎಂಬುದನ್ನು ಹೇಳತೀರದು. ಹೈದರಾಬಾದಿನ ಗಲಭೆಯು ಭಾರತದಲ್ಲಿನ ಎಲ್ಲರ ಮನಸ್ಸನ್ನೂ ನೋಯಿಸುತ್ತಲಿದೆ. ರಜಾಕರರು ಬಟ್ಟೆ ಒಗೆಯುತ್ತಿದ್ದ ೫೦ ಜನ ತರುಣಿಯರನ್ನು ಕೊಂದರು, ಅತ್ಯಾಚಾರ ಮಾಡಿದರು, ಎಂಬ ನಿನ್ನೆ ಮೊನ್ನೆ ಸುದ್ದಿಯು ಭಾರತೀಯರ ಎದೆಯನ್ನು ತಲ್ಲಣಗೊಳಿಸುತ್ತಲಿದೆ. ಶ್ರೀ ಪಂಡಿತ ನೆಹರೂ ಅವರು ಈ ಗಲಭೆಯು ಸರಿಪಡಿಸುವುದಾಗಿ ವಾಗ್ದಾನ ಮಾಡುತ್ತಲಿದ್ದರೂ ಅದು ಕಾರ್ಯಕಾರಿಯಾಗಿ ಇನ್ನೂ ಪರಿಣಾಮಿಸಿಲ್ಲ.

ಹೈದರಾಬಾದಿನಲ್ಲಿ ವೀರಶೈವರ ಸಂಖ್ಯೆ ಬಹಳ ಇದೆ ಎಂಬುದು ತಿಳಿದ ಸಂಗತಿ ಅವರಿಗೆ ಯಾವ ಗತಿ ಆಗಿದೆ ? ಎಂಬುದನ್ನು ವಿಚಾರಿಸುವ ವೀರಶೈವರ ಸೊಲ್ಲೇ ಹೊರಬಿದ್ದಿಲ್ಲ. ಎಲ್ಲ ಪತ್ರಿಕೆಯವರೂ ಎಲ್ಲ ಮುಖಂಡರೂ ತಣ್ಣಗೆ ಇದ್ದಾರೆ. ಈಗ ಯಾರ ಯಾರ ಮರಣವಾಗಿದೆ ಎಂಬುದು ವಿವರವಾಗಿ ರಾಜಕೀಯದಿಂದ ಗೊತ್ತಾಗುವದಿಲ್ಲ. ವಿವರವನ್ನು ತಿಳಿದಾಗ ಮಾತ್ರ ಬಹಳ ವ್ಯಸನವಾಗಬಹುದು. ನಿರಾಶ್ರಿತವಾದ ಲಿಂಗಾಯತರು ಮೈಸೂರಿಗೂ ಬಂದಿರುವರೆಂಬ ಸುದ್ದಿ ಮಾತ್ರ ಹರಡಿದೆ. ಕೊಲೆ

ಎಷ್ಟಾಗಿದೆಯೋ ತಿಳಿದಿಲ್ಲ. ಶಿವಭಕ್ತರೇ ನಮ್ಮ ಬಂಧುಗಳೆಂದು ಹೇಳುವ ವೀರಶೈವರು ಇವೆಲ್ಲವನ್ನು ವಿಚಾರಿಸದೆ ಸುಮ್ಮನೆ ಕಾಲಹಾಕುತ್ತಿರುವುದಕ್ಕಾಗಿ ಎಷ್ಟು ವಿಷಾದಪಟ್ಟರೂ ತೀರದು.

ಇಂತಹ ಗಲಭೆಗಳಿಗೆ ಅವಕಾಶವನ್ನು ಕೊಡದೆ ಇರುವಂತಹ ಧರ್ಮವೇ ಭಾರತವಲ್ಲಿ ಪ್ರಚಾರವಾಗಬೇಕಾಗಿದೆ. ಭಾರತವ ಧರ್ಮವು ಸಂಕುಚಿತವಾದುದಲ್ಲ. ಒಬ್ಬನು ಮಹಾದೇವನಿಲ್ಲ ಎಂದು ಹೇಳಿದರೂ ಅವನನ್ನು ಚಾರ್ವಾಕ ಎಂಬ ಪಂಗಡ ದೊಳಗೆ ಸೇರಿಸಿ ತನ್ನೊಳಗೆ ತುಂಬಿಕೊಳ್ಳುತ್ತದೆ.

ಇಸ್ಲಾಂ ಧರ್ಮ ಬೌದ್ಧ ಜೈನ ಮತಗಳೆಲ್ಲವೂ ಭಾರತವ ಧರ್ಮವಲ್ಲಿ ಸಮಾ ವೇಶವಾಗುವಂತಹ ಸನ್ನಿವೇಶವೂ ಧರ್ಮಶಾಸ್ತ್ರವಲ್ಲಿ ತೋರಿ ಬರುತ್ತಲಿದೆ.

ಮಹನೀಯರು ಪ್ರಯತ್ನಪಟ್ಟು ಎಲ್ಲ ಮನುಷ್ಯರು ಒಂದೇ ಎಂದು ಅವರವರು ತಮ್ಮ ತಮ್ಮ ಮಹಾದೇವನ ಜ್ಞಾನಕ್ಕೆ ಸರಿಯಾಗಿ ಬೇಕಾದ ಮಟ್ಟದಲ್ಲಿ ಇರಬಹು ದೆಂದೂ ಎಲ್ಲರೂ ಎಲ್ಲವನ್ನೂ ಹೊಂವಲಿಕ್ಕೆ ಅರ್ಹರೆಂದೂ ಒಬ್ಬರನ್ನು ಕಂಡು ಇನ್ನೊಬ್ಬರು ಅಸಹ್ಯಪಡಬಾರದೆಂದೂ ದ್ವೇಷಿಸಬಾರದೆಂದೂ ಜನತೆಯಲ್ಲಿ ರೂಢಿಗೆ ಬರುವಂತೆ ಮಾಡಿ ಧರ್ಮ ರಕ್ಷಣೆಯನ್ನು ಮಾಡಲಿ ಎಂದು ಪುನಃ ಪುನಃ ಪ್ರಾರ್ಥನೆ.

ಸದ್ಧರ್ಮ ದೀಪಿಕೆಯು ಧರ್ಮ ಸಂಬಂಧದ ವಿಷಯಗಳನ್ನು ಬರೆಯಲು ಬದ್ಧ ಕಂಕಣವಾಗಿ ಕೂತಿದೆ. ಯಾವ ಮಹನೀಯರಾದರೂ ಈ ವಿಷಯದಲ್ಲಿ ತಮಗೆ ತೋರಿದ ಜನಗಳ ಐಕಮತ್ಯದ ಸೂಕ್ತವಾದ ಅಭಿಪ್ರಾಯಗಳನ್ನು ಬರೆದು ಕಳುಹಿಸಿ ದರೆ ಅದನ್ನು ಪ್ರಕಟಿಸಲು ಸಿದ್ಧವಿದೆ.

ಈ ವರ್ಷವಲ್ಲಿ ಅದು ಮಾಡಿರುವ ಸೇವೆಯನ್ನು ಈ ರೀತಿ ಸಂಗ್ರಹಿಸಿ ಹೇಳ ಬಹುದು. ಕನ್ನಡ ಶಿವಯೋಗ ಪ್ರದೀಪಿಕೆ ಎಂಬ ಗ್ರಂಥವನ್ನು ಪ್ರಕಟಿಸಿ ಇದೆ. ಕನ್ನಡದಲ್ಲಿ ಧರ್ಮವನ್ನು ಬೋಧಿಸುವ ವಿನೋದ ರೂಪದ ಗ್ರಂಥವು ಇದೊಂದೇ ಎಂದು ಹೇಳಬಹುದು. ಭಾರತವಲ್ಲಿನ ಧರ್ಮದ ಸಾರವನ್ನು ಲೀಲಾ ಮಾತ್ರದಲ್ಲಿ ಹೇಳುವ ಗ್ರಂಥವಿದು. ಇದನ್ನು ಮುದ್ರಿಸುವ ಮುಖಾಂತರ ಭಾರತ ಧರ್ಮದ ವಿವಿಧ ವಿಷಯಗಳ ವಿಮರ್ಶೆಯನ್ನು ಮಾಡಲಿಕ್ಕೆ ಜನತೆಗೆ ಅನುಕೂಲವಾಗುತ್ತದೆ.

ಶಿವಶರಣೆಯಾದ ಅಕ್ಕಮಹಾದೇವಿಯ ವಚನಗಳಿಗೆ ಅವು ಹುಟ್ಟಿದ ಮೊದಲು ಗೊಂಡು (ಸುಮಾರು ೮೦೦ ವರ್ಷ) ಅವುಗಳ ಅರ್ಥವನ್ನು ಯಾರು ಬರೆದಿರಲಿಲ್ಲ. ಅಲ್ಪ ಸ್ವಲ್ಪ ಆ ಮಾರ್ಗದಲ್ಲಿನ ಅಭಿಪ್ರಾಯವನ್ನು ಪ್ರಕಟಿಸಿದರೆ ಮುಂದೆ ಮಹ ನೀಯರು ವಿಶೇಷವಾಗಿ ಪ್ರಕಟಿಸುವುದಕ್ಕೆ ಅನುಕೂಲವಾಗುವುದೆಂದು ಆ ವಚನಗಳಲ್ಲಿ ಕೆಲವಕ್ಕೆ ಸುಮಾರಾಗಿ ತಾತ್ಪರ್ಯವನ್ನು ಹೊರಗೆಡವಿದಂತಾಗಿದೆ. ಈಗಿನ ಕಾಲದ ಆಚರಣೆಗೆ ತಕ್ಕ ಹೋಲಿಕೆಗಳನ್ನು ತಿಳಿಯುವುದಕ್ಕಾಗಿ "ರಷ್ಯಾ ದೇಶದ ಸಮತಾ ವಾದವೂ ವೀರಶೈವವೂ" ಎಂಬ ದೊಡ್ಡ ಲೇಖನವನ್ನು ಬಯಲಿಗೆ ತಂದಿದೆ. ಈಗಿನ ಸಮತಾವಾದದ ಆಚರಣೆಯೇ ವೀರಶೈವರ ಧಾರ್ಮಿಕ ಮಾರ್ಗ ಎಂಬುದನ್ನು ಸಿದ್ಧ ಮಾಡಿ ತೋರಿಸಿ ಇದೆ.

ಪೂರ್ವಿಕರು ಹೇಳುತ್ತಿದ್ದ ನಿರಾಕಾರ ಮೂಲವಸ್ತುವಿನ ಮಂಗಳ ಸ್ವರೂಪವಾದ ಮಂಗಳಾರತಿಗಳು ಇಷ್ಟಲಿಂಗಾಷ್ಟಕ, ಪ್ರಾಣಲಿಂಗಾಷ್ಟಕ, ಭಾವ ಲಿಂಗಾಷ್ಟಕಗಳು ಮುಂತಾದವುಗಳನ್ನು ಪ್ರಕಟಿಸಿ ಇದೆ.

ಶ್ರೀ ಕರಸ್ಥಲದ ನಾಗಲಿಂಗದೇವರು ರಚಿಸಿದ "ಶಾಂತಶತಕ" ಎಂಬುದು ಅದು ಹುಟ್ಟಿದ ಮೊದಲುಗೊಂಡು ಈವರೆವಿಗೂ ಮುದ್ರಣದ ಮುಖವನ್ನೇ ಕಾಣದದು. ಇಂತಹ ಗ್ರಂಥವನ್ನು ಪ್ರಕಟಿಸಿ ಇದೆ.

ಮಹನೀಯರಾದ ಗಾಂಧೀಜಿಯವರ ಅಭಿಪ್ರಾಯಗಳನ್ನು ಅವರಿದ್ದಾಗಲೇ ವಿಮರ್ಶಿಸಿದ್ದಲ್ಲದೆ ಆಗಲೇ ಅವರ ಸನ್ನಿಧಿಗೆ ಕಳುಹಿಸಿದ್ದೂ ಆಗಿದೆ.

ಈಗ ನಡೆಯುತ್ತಿರುವ ಕೋಮುವಾರು ಗಲಭೆ–ಮುಂತಾದ ಧಾರ್ಮಿಕ ವಿಷಯ ಗಳ ಟಿಪ್ಪಣಿ ರೂಪವಾಗಿ ಕೆಲವು ವಿಷಯಗಳನ್ನು ಪ್ರಕಟಿಸಿ ಇದೆ.

ಇಷ್ಟೆಲ್ಲಾ ಮಾಡಿದರೂ ೧೯೪೭ ನೆಯ ಅಗಷ್ಟ ೧೫ ರಿಂದ ಭಾರತದ ಸ್ವಾತಂತ್ರ್ಯವು ಪ್ರಾಪ್ತವಾದಂದಿನಿಂದ ಈ ಪತ್ರಿಕೆಯೂ ಸ್ವಾತಂತ್ರ್ಯವನ್ನು ಹೊಂದಿ ಚಂದಾದಾರರಿಂದ ಬರುವ ಕೇವಲ ಸ್ವಲ್ಪ ದ್ರವ್ಯದ ಸಹಾಯದಿಂವಲೇ ಸಮಾಜದಲ್ಲಿ ಯಾರೊಬ್ಬರನ್ನೂ ಬೇಡದೆ ತನ್ನ ಕೆಲಸವನ್ನು ನಡೆಸಿಕೊಂಡು ಬಂದಿದೆ.

ಆದರೂ ಒಂದು ವಿಷಯವನ್ನು ಇಲ್ಲಿ ವಿಜ್ಞಾಪಿಸದೆ ಬಿಡುವಂತಿಲ್ಲ.

ಈ ಪತ್ರಿಕೆಯು ಪ್ರಸಾದ ದ್ರವ್ಯದಿಂದಲೇ ನಡೆದಿದೆ. ಶಿರಾಳಕೊಪ್ಪದಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಶಿವಯೋಗ ಮಂದಿರವನ್ನು ಸ್ಥಾಪಿಸಿ ಸಮಾಜೋದ್ಧಾರದಲ್ಲಿ ಅತ್ಯಂತ ಲವಲವಿಕೆಯುಳ್ಳ ಶ್ರೀ ನಿರಂಜನವರ್ಯರಾದ ಹಾನಗಲ್ ಸದಾಶಿವ ಸ್ವಾಮಿಗಳಿಗೆ ಅರ್ಪಿಸಿದ ಭೂಮಿಗಳಿಂದ ಬರುವ ಸಂಪಾದನೆಯ ಹಣವು (ವರ್ಷಕ್ಕೆ ಸುಮಾರು ೩೦೦–೪೦೦) ಇದಕ್ಕೆ ಸೇರಿದೆ ಎಂದು ಹೇಳಲಿಕ್ಕೆ ಆನಂದವಾಗು ತ್ತದೆ. ವೀರಶೈವರಲ್ಲಿ ಜಂಗಮರನ್ನು ಮನೆಗೆ ಕರೆದುಕೊಂಡು ಬಂದಾಗ ಮನೆಯಲ್ಲಿ ಮಾಡಿದ ಪದಾರ್ಥಗಳನ್ನೆಲ್ಲಾ ಅವರಿಗೆ ಅರ್ಪಿಸಿ ಅವರು ಪ್ರಸಾದ ರೂಪವಾಗಿ ಕೊಟ್ಟುದನ್ನು ತಾವು ಉಣ್ಣುವಂತೆ, ಅವರಿಗೆ ವಸ್ತ್ರವನ್ನು ಹೊದ್ದಿಸಿ ಅವರು ಕೊಟ್ಟು ದನ್ನು ತಾವು ಹೊರುವಂತೆ ಈ ಭೂಮಿಗಳನ್ನು ಅರ್ಪಿಸಿ ಅವರು ಕೊಟ್ಟ ಪ್ರಸಾದವೇ ಈ ಭೂಮಿಗಳ ಉತ್ಪನ್ನವೆಂದು ಆ ದ್ರವ್ಯವನ್ನು ಪ್ರಸಾದ ದ್ರವ್ಯವಾಗಿ ಭಾವಿಸಿ ಇದಕ್ಕೆ ಉಪಯೋಗಿಸಿ ಇದೆ.

ಗುರು, ಲಿಂಗ, ಜಂಗಮ ಸೇವೆಗಾಗಿ ಕಾಯಕ ಎಂಬ ರೀತಿಯಲ್ಲಿ ಈ ಪತ್ರಿಕೆ ಯನ್ನು ಹೊರಡಿಸಿ ಅವರು ಕೊಡುವ ಚಂದಾಹಣವೇ ಗುರು ಲಿಂಗ ಜಂಗಮವು ಕೊಟ್ಟ ಪ್ರಸಾದ ದ್ರವ್ಯವೆಂದು ಗ್ರಹಿಸಿ ಆ ಮೂಲಕವೂ ಈ ಕಾಯಕವನ್ನು ನಡೆಸಿದು ದಾಗಿದೆ.

ಹೀಗೆ ಒದಗಿದ ಅಲ್ಪ ಸಂಖ್ಯೆಯ ಪ್ರಸಾದ ದ್ರವ್ಯದಲ್ಲಿಯೇ ಮಹತ್ತರವಾದ ಪತ್ರಿಕಾ ಪ್ರಸರಣವನ್ನು ನಡೆಸುತ್ತಿರುವುದು ಶಿವನ ಕೃಪೆಯೂ ಸಮಾಜದ ಪುಣ್ಯವೂ

ಆಗಿದೆ. ಈ ದಾಸೋಹಂಭಾವದ ಕಾಯಕವು ಕಷ್ಟವೆಂದು ಇತರರಿಗೆ ತೋರಿ ಬಂದರೂ ಸಹನವನ್ನು ಮಾಡಿಕೊಳ್ಳುವ ಸ್ಥಿತಿಯಾಗಿಯೇ ಪರಿಣಮಿಸಿ ಇದೆ.

ಇದರ ಮುಂದಿನ ಆಗು ಹೋಗುಗಳು ಸಮಾಜವನ್ನೇ ಅವಲಂಬಿಸಿ ಇದೆ. ಬೇಡುವುದಕ್ಕೆ ರೂಢಿಯು ಇಲ್ಲದೆ ಇರುವುದರಿಂದ ಬೇಡದೆ ಕೊಡುವ ರೂಢಿಯುಳ್ಳವರೇ ಹೆಚ್ಚು ಕೃಪೆಯಿಂದ ಸಾಗಿಸಿಕೊಂಡು ಹೋಗಬೇಕಾಗಿದೆ. ಕಾಯಕದ ದ್ರವ್ಯವನ್ನು ಕೊಡುತ್ತಿರುವ ಚಂದಾದಾರರಿಗೂ ಈ ಮಾತು ಅನ್ವಯಿಸುತ್ತದೆ.

ಆದರೂ ಸಾಮಾನ್ಯವಾಗಿ ಮುಂದೆ ಒಂದು ವರ್ಷ ನಡೆಯುವುದೆಂಬ ಅಂದಾಜನ್ನಿಟ್ಟುಕೊಂಡೇ ವರ್ಷಾರಂಭದಲ್ಲಿ ಪ್ರಯತ್ನವು ಮಾಡಲ್ಪಡುವುದೆಂಬುದನ್ನು ಯಾರು ಮರೆಯಬಾರದು.

(ಸಂ. ೭೪-೭೫)

# ಆತ್ಮ ನಿವೇದನ

ಇದೂವರೆವಿಗೆ ಒಂದೊಂದು ಸಂಚಿಕೆಗೆ ೪೦ ಪುಟಗಳಂತೆ ೭೫ ಸಂಚಿಕೆಗಳು "ಸದ್ಧರ್ಮ ದೀಪಿಕೆ" ಮಾಸಪತ್ರದ ಮಾಲೆಯಲ್ಲಿ ಪ್ರಕಟವಾಗಿವೆ. ಅಂದಂದಿಗೆ ಹೊಸ ಕೆಲಸಗಳೆಂದು ಅನೇಕ ಪುಸ್ತಕಗಳನ್ನೂ ಧಾರ್ಮಿಕ ವಿಷಯಗಳನ್ನೂ ಇತರ ವಿಷಯಗಳನ್ನೂ ಪ್ರಕಟಿಸುತ್ತಾ ಬಂದಾಗ್ಯೂ ಇಂದಿಗೂ ಇನ್ನು ಮೇಲೂ ಪ್ರಕಾಶಪಡಿಸಬೇಕಾಗುವ ಗ್ರಂಥಗಳೂ ತಾತ್ತ್ವಿಕ ವಿಷಯಗಳೂ ಮಹದೇವನ ವಿಚಾರದ ಸಂಗತಿಗಳೂ ಅನೇಕ ವಾಗಿದೆ. ಇನ್ನು ಲೌಕಿಕವಲ್ಲಂತೂ ಕ್ಷಣಕ್ಷಣಕ್ಕೆ ಬದಲಾಯಿಸುತ್ತಿರುವ ಪ್ರಾಪಂಚಿಕ ವಿಷಯಗಳು ಅನೇಕಾನೇಕಗಳು ಇದ್ದಾಗ್ಯೂ ಅವುಗಳನ್ನು ಪ್ರಕಟಿಸುವ ಪತ್ರಗಳೂ ಅನೇಕಾನೇಕವಾಗಿ ಇರುತ್ತವೆ. ಸಾವಿರಾರು ವರ್ಷಗಳಿಂದಲೂ ಭಾರತವಲ್ಲಿ ಪ್ರಚಾರ ವಾದ ಧರ್ಮಗ್ರಂಥಗಳನ್ನು ಒಂದನ್ನೊಂದು ಹೋಲಿಸುವ ದೃಷ್ಟಿಯಿಂದಾಗಲೀ ಸಾರಾಸಾರ ವಿವೇಚನ ದೃಷ್ಟಿಯಿಂದಾಗಲೀ ಈ ಕಾಲಕ್ಕೆ ಅನುಗುಣವಾಗಿ ಎಲ್ಲದರ ಸಾರವನ್ನೂ ಒಳಗೊಂಡಿರುವ ಒಂದೇ ಒಂದು ಗುರಿಯುಳ್ಳ ಧಾರ್ಮಿಕ ಪ್ರಚಾರದ ಅವಶ್ಯಕತೆಯು ಉಂಟೆಂಬ ದೃಷ್ಟಿಯಿಂದಾಗಲೀ ಧಾರ್ಮಿಕ ಪತ್ರಿಕೆಗಳು ಹೊರಡು ತ್ತಿರುವುದು ಬಹಳ ಅಪರೂಪ ಇದ್ದ ಕೆಲವು ಪತ್ರಿಕೆಗಳಾದರೂ ಯಾವುದಾದರೊಂದು ಧಾರ್ಮಿಕ ಪದ್ಧತಿಯನ್ನೇ ವಿಶೇಷವಾಗಿ ವಿವರಿಸಿ ಬರೆವುದೂ, ಒಂದೊಂದೇ ತಾತ್ತ್ವಿಕ ಅಭಿಪ್ರಾಯವನ್ನೇ ವಿಷೇಷವಾಗಿ ವರ್ಣಿಸಿ ಬರೆವುದೂ ಸಾಮಾನ್ಯವಾಗಿ ನಿಶ್ಚಿತವಾದ ಸಂಗತಿಗಳು (Settled facts) ಎಂದು ತಿಳಿದಿದ್ದಾಗ್ಯೂ ಮತ್ತೆ ಮತ್ತೆ ಆ ಹಿಂದಿನ ಚರ್ಚೆಗಳನ್ನು ಮಾಡುತ್ತಲೇ ಇರುವುದೂ, ಮುಂತಾದ ಸಂಗತಿಗಳಿಗೆ ಹೆಚ್ಚುಗಮನ ವನ್ನು ಕೊಡುತ್ತಲಿವೆ. ಉದಾಹರಣೆಗೆ ಮಹಾಭಾರತದ ಕಥೆಗಳು ವಿಧ ವಿಧವಾದ ಶೈಲಿಯಲ್ಲಿ ಇನ್ನೂ ಬರೆಯಲ್ಪಡುತ್ತಲಿವೆ. ಕರ್ಮವನ್ನು ಮಾಡಿದರೆ ಅದರಿಂದಾಗುವ ಫಲವುಸೋಹಂ ಎಂಬ ಜ್ಞಾನದ ಉತ್ಪತ್ತಿಗೆ ಕಾರಣವೆಂದು ಉಪನಿಷತ್ತುಗಳ ಬೋಧೆ ಇದ್ದಾಗ್ಯೂ ಈ ಹೊತ್ತಿಗೂ ಕರ್ಮವೇ ಒಂದೇ ಸಾಕೆಂದೂ ಅದೇ ಮುಖ್ಯವೆಂದು ಪ್ರಚಾರಗೊಳಿಸುವುದು ನಡೆದೇ ಇದೆ. ಹೀಗಾಗಿ ಧರ್ಮದ ಕಡೆಗೆ ಜನರ ಅಭಿರುಚಿಯೇ ಇಲ್ಲ. ಈಗ ಹೆಚ್ಚಿನ ವಿಚಾರ ಸಾರದ ಅಭಿಪ್ರಾಯಗಳು ಹೊರಬಿದ್ದು ಜನರ ಮನಸ್ಸನ್ನು ಆಕರ್ಷಿಸಬೇಕಾಗಿದೆ. ಅದರಲ್ಲಿ ಜನರಿಗೆ ಧರ್ಮದ ಅಭಿರುಚಿಯುಂಟಾಗಿ ಆ ಗ್ರಂಥಗಳನ್ನು ಪತ್ರಿಕೆಗಳನ್ನು ಓದಬೇಕೆಂಬ ಲವಲವಿಕೆ ಹೆಚ್ಚಾಗುತ್ತದೆ. ಶ್ರೀ ವ್ಯಾಸ ಋಷಿಗಳು ಹದಿನೆಂಟು ಮಹಾಪುರಾಣಗಳನ್ನು ರಚಿಸಿರು ವರೆಂದು ಭಾರತೀಯರು ಅವರಲ್ಲಿ ಕೃತಜ್ಞತೆಯುಳ್ಳವರಾಗಿದ್ದಾಗ್ಯೂ ಅವುಗಳಲ್ಲಿನ

ಅಭಿಪ್ರಾಯದ ಸಾರವೇನು ? ಯಾವ ರೀತಿಯಲ್ಲಿ ಒಬ್ಬ ಮನುಷ್ಯನು ನಡೆದರೆ ಆ ಸಾರವೇ ಅವನಿಗೆ ದೊರಕುತ್ತದೆ ? ಎಂಬುದನ್ನು ಬರೆದವರೇ ಈಗ ಒಬ್ಬರೂ ಇಲ್ಲ. ಪುರಾಣಗಳ ವಿಮರ್ಶೆಗೆ ಒಬ್ಬರೂ ಹೋಗಿಲ್ಲ. ತಮ್ಮ ಹಿರಿಯರ ಧಾರ್ಮಿಕ ಜ್ಞಾನದ ಬಂಡವಾಳವೇ ಹಿಂದೂ ದೇಶಿಯರಿಗೆ ಬೇಡವಾಗಿ ಹೋಗಿದೆ. ಯಾರಾದರೊಬ್ಬರಿಗೆ ಅವರು ಸ್ವಂತ ತಿಳಿದುಕೊಂಡಷ್ಟು ದೈವಿಕಜ್ಞಾನ; ಅಥವಾ ಲೌಕಿಕ ಸಂಪತ್ತನ್ನು ರೂಢಿಸಿ ಆ ಲೌಕಿಕ ಸ್ವಾತಂತ್ರ್ಯ ಪಡೆಯುವುದಕ್ಕೆ ತಕ್ಕ ಧರ್ಮಜ್ಞಾನ, ಈ ಬಂಡವಾಳದ ಮೇಲೆಯೆ ಧಾರ್ಮಿಕ ವ್ಯವಹಾರವು ಈಗ ಸಾಗಿದೆ. ಇದಿಷ್ಟೇ ಸಾಲದು. ನಮ್ಮ ಹಿರಿಯರು ಸಂಪಾದಿಸಿದ ಧಾರ್ಮಿಕ ಜ್ಞಾನವು ಎಷ್ಟು ಮಟ್ಟದ ವರೆವಿಗೂ ಏರಿದ್ದಿತು ? ಅವರ ನಿಶ್ಚಿತಾಂಶಗಳು ಎಷ್ಟು ಮಟ್ಟಿಗೆ ಇದ್ದುವು ? ಆ ನಿಶ್ಚಿತಾಂಶಗಳ ಮುಂದೆ ಈಗ ನಾವೇನನ್ನು ನಿಶ್ಚಯ ಮಾಡಬೇಕಾಗಿದೆ ? ಎಂಬ ಸಾರತರ ವಿಚಾರದ ಕಡೆಗೆ ಭಾರತೀಯರ ಗಮನವು ಬಿದ್ದು ಆ ವಿಧವಾದ ಪ್ರಚಾರವು ಹೆಚ್ಚಾಗಬೇಕಾಗಿದೆ. ಅಂತಹ ಪ್ರಚಾರ ವಿಷಯಗಳು ಜಗತ್ತಿನ ಜನರಿಗೆ ಧಾರ್ಮಿಕ ಅಭಿರುಚಿಯನ್ನು ಉಂಟುಮಾಡುವುಗಳಾಗುತ್ತವೆ.

ಭಗವದ್ ಗೀತೆಯಲ್ಲಿ ಹೇಳಲ್ಪಟ್ಟ ಅಂಶಗಳೇ ಹಿಂದೂ ದೇಶಿಯರ ಸರ್ವ ಸಾರವೆಂಬ ಭಾವನೆ ಇಡೀ ಭರತಖಂಡದಲ್ಲಿಯೇ ವ್ಯಾಪಿಸಿ ಇದೆ. ಕೈಲಾಸವಾಸಿ ರಾ. ಪಾವಟೆ ಸಿದ್ಧರಾಮಪ್ಪನವರು ಪಾರಮೇಶ್ವರಾಗಮದ ಶ್ಲೋಕಗಳು ಭಗವದ್ಗೀತೆಯಲ್ಲಿ ಇರುವುದಾಗಿಯೂ ಆಗಮವು ಗೀತೆಗಿಂತ ಪೂರ್ವಕಾಲದ್ದೆಂದೂ ಪ್ರತಿಪಾದಿಸಿದ್ದರು. ಆ ಗೀತೆಯಲ್ಲಿ ಹೇಳಿದ ಅಂಶಗಳಿಗಿಂತ ಇನ್ನೂ ಹೆಚ್ಚಿನ ಅಂಶಗಳು ಧರ್ಮಗ್ರಂಥಗಳಲ್ಲಿ ಇವೆಯೇ ಎಂಬುದನ್ನೂ ಪರಿಶೋಧಿಸಬೇಕಾಗಿದೆ.

ಮೇಲೆ ಕಂಡ ಅಂಶಗಳ ಸಾಗರದೊಳಗಿನ ಒಂದು ಕಂಕಣದಷ್ಟಾದರೂ ಸದ್ಧರ್ಮ ದೀಪಿಕೆಯು ಪ್ರಕಟಪಡಿಸುವ ಸೇವೆಯು ಆದೀತೇ ? ಎಂಬ ಯೋಚನೆಯೂ ಇದರ ಪ್ರಕಾಶಕರಿಗೆ ಇರತಕ್ಕುದೇ ಆಗಿದೆ. ಇದರಿಂದ ಸದ್ಧರ್ಮ ದೀಪಿಕೆಯ ಕಾರ್ಯವಿಸ್ತಾರವು ಎಷ್ಟರವರೆವಿಗೂ ವ್ಯಾಪಿಸಿದೆ ಎಂಬುದು ವಾಚಕ ಮಹನೀಯರಿಗೆ ತಿಳಿಯದಿರಲಾರದು.

ಒಂದು ವರ್ಷಕ್ಕೆ ಪ್ರಕಟವಾಗುವ ೪೮೦ ಪುಟಗಳಿಗೆ ಟಪಾಲು ಖರ್ಚು ಸೇರಿ ೪-೮-೦ ಚಂದಾ ಇಟ್ಟಿರುವುದು ಹೆಚ್ಚಲ್ಲವೆಂಬುದನ್ನೂ ಜನತೆಯು ಗ್ರಹಿಸಬೇಕಾಗಿದೆ.

ಮಹಾದೇವನ ವಿಷಯದಲ್ಲಿ ಮನುಷ್ಯನ ಭಾವನೆಯೂ ಆ ಭಾವನೆಗನುಸಾರವಾಗಿ ಅವನು ಮಾಡುವ ಕೆಲಸವೂ ಸೇರಿ 'ಧರ್ಮ' ಎನಿಸಿಕೊಳ್ಳುವುದು. ಉದಾಹರಣೆಗೆ ಒಬ್ಬನು ಒಂದು ಕುರಿಯ ಹಿಕ್ಕೆಯನ್ನು ಮಹಾದೇವ ಎಂದು ಭಾವನೆ ಮಾಡಿದರೆ ಅವನ ಧಾರ್ಮಿಕ ಭಾವನೆಯು ಅಂದಿನಿಂದ ಅಲ್ಲಿ ಪ್ರಾರಂಭವಾಗುತ್ತದೆ. ಆ ಹಿಕ್ಕೆಯನ್ನು ಅವನು ಪೂಜೆ ಮಾಡುವುದಕ್ಕೆ ಕೆಲಸಮಾಡಿದರೆ ಅದು ಧಾರ್ಮಿಕ ಕಾರ್ಯವಾಗುತ್ತದೆ. ಈ ಧಾರ್ಮಿಕ ಸಂಬಂಧದ ಲೌಕಿಕವೇ ಮನುಷ್ಯನ ದೈವಿಕ ಸಂಬಂಧವಾದ ಭಾವನಾ ಪ್ರಪಂಚವು. ಈ ಭಾವನಾ ಪ್ರಪಂಚಕ್ಕೆ ಸಿಕ್ಕಿಬೀಳದೆ ಇರುವ ಹಿಂದೂ ದೇಶದ

ಮೂಲಿಗನು ಒಬ್ಬನೂ ಇಲ್ಲವೆಂದು ಹೇಳಲಾತಂಕವೇನೂ ಬರಲಾರದು. ಆದರೆ ಧಾರ್ಮಿಕ ಭಾವನೆಯಲ್ಲಿ ಇನ್ನೂ ಉಚ್ಚತರದ ಭಾವನೆಗಳಿವೆ. ಉಚ್ಚತಮದ ಭಾವನೆಯೂ ಇದೆ. ಮಹಾದೇವನ ವಿಷಯದಲ್ಲಿ ಉಚ್ಚತಮವಾದ ಭಾವನೆಯುಳ್ಳವರು ವೀರಶೈವರು ಎಂಬುವನ್ನು ಒಬ್ಬ ಸಾಧಾರಣ ಮನುಷ್ಯನಿಗೂ ತೋರಿಸಿಕೊಡುವಷ್ಟು, ಅನೇಕ ವಿಧಗಳಿಂದ ಸಿದ್ಧಮಾಡುವಷ್ಟು ವ್ಯಕ್ತ ಸಂಗತಿಗಳೂ ಇರುವುದೆಂಬುದನ್ನು ಜನತೆಯು ಚೆನ್ನಾಗಿ ತಿಳಿದಿರಬೇಕಾಗಿದೆ.

ವೀರಶೈವರ ಅನುಭಾವದ ಶಿವಾದ್ವೈತ ತತ್ತ್ವದ ಅಭಿಪ್ರಾಯವು ಅಥವಾ ಶರಣ ಮಾರ್ಗವು ಹಳೆಯದರೊಳಗೆ ಹಳೆಯದೂ ಹೊಸದರೊಳಗೆ ಹೊಸದೂ ಆಗಿದೆ. ಎಂದರೆ ಪೂರ್ವಕಾಲದಲ್ಲಿ ಹಿಮಾಲಯ ಪ್ರಾಂತದಲ್ಲಿ ಇದ್ದ ದೇವತೆಗಳ ತಿಳುವಳಿಕೆಗೆ ಅನುಸಾರವಾದುದೂ ಈಗಿನ ಶಾಸ್ತ್ರಕಾರರೂ (Scientists) ಹೊಸ ಹೊಸದಾಗಿ ಕಂಡುಹಿಡಿಯುವ ಶೋಧನೆಗಳ ತಾತ್ಪರ್ಯವನ್ನು ಅನುಸರಿಸಿದುದೂ ಆಗಿದೆ. (ಅಣುವೂ ಅದರ ಲಕ್ಷಣ ಎಂಬ ಪ್ರಕರಣ ಓದಿರಿ ೭೪-೭೫ ಸಂಚಿಕೆ) ಬಹಳ ಹಳೆಯದಾದ ಈಶಾವಾಸ್ಯೋಪನಿಷತ್ತಿನ ವಾಕ್ಯವಾದ ವಿದ್ಯೆಯನ್ನೂ ಅವಿದ್ಯೆಯನ್ನೂ ಉಭಯವನ್ನೂ ಬ್ರಹ್ಮವಾಗಿ ತಿಳಿಯಬೇಕೆಂಬ ಅಭಿಪ್ರಾಯವು ವೀರಶೈವರದು. ಇದಲ್ಲದೆ ಈಗಿನ ಲೌಕಿಕ ಸ್ವಾತಂತ್ರಪ್ರಿಯರಾದವರು ಆರಿಸುವಂತಹ ಲೌಕಿಕ ಉದಾತ್ತ ತತ್ತ್ವಗಳನ್ನು ಒಳಗೊಂಡ ಧಾರ್ಮಿಕ ತತ್ವವೂ ಇದೇ ಆಗಿದೆ. ರಷ್ಯಾದೇಶದ ಸಮತಾವಾದವೂ ವೀರಶೈವರೂ ಎಂಬ ಲೇಖನವನ್ನು ಓದಿರಿ. (ಸಂಚಿಕೆ ೫೮–೫೯)

ಇಂತಹ ವೀರಶೈವ ಧರ್ಮದ ಜ್ಞಾನ ಪ್ರಸಾರಕ್ಕಾಗಿ ಈ ಪತ್ರಿಕೆಯು ಬಹಳವಾಗಿ ಪಾಟು ಪಡುತ್ತಾ ಇದೆ.

ವೀರಶೈವ ತತ್ವಕ್ಕೆ ವಿರೋಧವಾದ ಅಭಿಪ್ರಾಯವನ್ನು ಪ್ರಕಟಿಸಿದ ವಿಶ್ವಗುಣಾದರ್ಶ ಚಂಪೂ ಎಂಬ ಗ್ರಂಥದಲ್ಲಿನ ಆ ಭಾಗಕ್ಕೆ ಖಂಡನೆಯನ್ನು ಪ್ರಕಟಿಸಿ ಇದೆ. ಅನಾದಿ ವೀರಶೈವ ತತ್ತ್ವವನ್ನು ಹೊರಗೆಡಹುವ 'ಅನಾದಿ ವೀರಶೈವ ಸಂಗ್ರಹವನ್ನು ಪ್ರಕಟಿಸಿ ಇದೆ. ಇದೂವರೆವಿಗೆ ಸುಮಾರು ೨೫–೩೦ ಗ್ರಂಥಗಳನ್ನು ಪ್ರಕಟಿಸಿ ಇದೆ. ಇನ್ನೂ ಪ್ರಕಟನವಾಗಬೇಕಾದ ಗ್ರಂಥಗಳು ಬರೆಹದ ಪ್ರತಿಗಳಲ್ಲಿ ಬಹಳವಾಗಿ ಇವೆ. (ಅವೆಲ್ಲವೂ ಮುದ್ರಣವಾದರೆ ವೀರಶೈವರ ಧಾರ್ಮಿಕ ಸಂಬಂಧದ ಜಗಳವೇ ತಪ್ಪಿಹೋಗುವುದೆಂದು ನಮ್ಮ ಭಾವನೆ)

ಇಷ್ಟೆಲ್ಲಾ ಕೆಲಸಗಳ ಜೊತೆಯಲ್ಲಿ ಈ ಕಾಲಕ್ಕೆ ತಕ್ಕಂತೆ ಧಾರ್ಮಿಕ ಸುಧಾರಣೆಯಲ್ಲಿ ವೀರಶೈವರ ಪಾತ್ರಕೆ ಎಷ್ಟು ಮಟ್ಟಿಗೆ ಅನುಕೂಲವಿದೆ ಎಂಬುದನ್ನು ತೋರಿಸಿಕೊಡುವುದೂ ಒಂದು ಮುಖ್ಯವಾದ ಕಾರ್ಯವಾಗಿದೆ.

ಸದ್ಧರ್ಮ ದೀಪಿಕೆಯ ಕಾರ್ಯ ವಿಸ್ತಾರವು ಶಿವನ ಕೃಪೆಯನ್ನೂ ಮಹನೀಯರ ನೆರವನ್ನೂ ಅವಲಂಬಿಸಿಕೊಂಡು ಇದೆ.

ಮೈಸೂರಿನಲ್ಲಿನ ೨ನೆಯ ವರ್ಷಾರಂಭದ ವಿನಂತಿ ವಿಷಯಗಳಲ್ಲಿ ಕಾಲೋಚಿತವಾಗಿ ಇಷ್ಟನ್ನು ಮುಂದಿಟ್ಟು ಓದುಗ ಮಹನೀಯರ ಮಂಗಳವನ್ನು ಕೋರುವೆವು.

# ಆತ್ಮನಿವೇದನ*

ಹಿಂದೆ ಈ ಮಾಸಪತ್ರಿಕೆಯನ್ನು ೧೦–೯–೫೩ ರಂದು ಕಳುಹಿಸಿದ ಮೇಲೆ ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದಲ್ಲಿ "ಶ್ರೀ ಸಿದ್ಧೇಶ್ವರ ನಿಲಯ" ಎಂಬ ವಿದ್ಯಾರ್ಥಿ ನಿಲಯದ ಹಳೆಯ ಕಟ್ಟಡವು ಆ ವರ್ಷದ ಜೂನ್, ಜುಲೈಗಳಲ್ಲಿ ಸುರಿದ ಹೆಚ್ಚು ಮಳೆಯ ದೆಸೆಯಿಂದ ಬಿದ್ದು ಹೋದುದನ್ನು ಸರಿಪಡಿಸುವುದಕ್ಕಾಗಿ ಪ್ರಕಾಶಕನು ಹೋದುದರಿಂದ ಮುಂದಿನ ಸಂಚಿಕೆಗಳು ಹೊರಬೀಳುವುದು ಸಾವಕಾಶವಾಯಿತು. ಪದ್ಧತಿ ಪ್ರಕಾರ ಮದರಾಸ್ ಪೋಸ್ಟ್ ಮಾಸ್ಟರ್ ಜನರಲ್‌ರವರಿಗೆ ೧೯೫೪ನೆಯ ವರ್ಷದ ಬಗೆಗೆ ಈ ಮಾಸಪತ್ರದ ರಿಜಿಸ್ಟರ್ ಆಗುವಿಕೆಯನ್ನು ನೂತನಪಡಿಸುವುದಕ್ಕೆ ೧೯೫೩ ನೆಯ ನವಂಬರಿನಲ್ಲಿ ಪದ್ಧತಿಯಂತೆ ಶಿರಾಳಕೊಪ್ಪದಿಂದಲೇ ಮನವಿ ಮಾಡಿಕೊಂಡಿದ್ದರೂ ನೂತನ ಪಡಿಸಿದ (Renewal) ಅಪ್ಪಣೆ ದೊರೆಯಲಿಲ್ಲ.

ಆ ಮನವಿಯನ್ನು ಈ ಸಾರಿ ಪತ್ರಿಕೆಯನ್ನು ರವಾನಿಸುವ ಸಬ್ ಪೋಸ್ಟ್ ಮಾಸ್ಟರ್‌ರವರ ಮುಖಾಂತರ ಕಳುಹಿಸಬೇಕೆಂಬುದು ಪ್ರಕಾಶಕನಿಗೆ ತಿಳಿಯದೆ ಹೋಯಿತು. ಪುನಃ ೧೯೫೩ ಡಿಸೆಂಬರ್ ಕೊನೆಯಲ್ಲಿಯೂ ಮತ್ತೊಮ್ಮೆ ೧೯೫೪ ಫೆಬ್ರವರಿ ೧೦ರಲ್ಲಿಯೂ ಮನವಿ ಮಾಡಿಕೊಂಡ ಮೇಲೆ ಅಪ್ಪಣೆ ದೊರೆತಿದೆ (೨೩–೨–೫೪). ಈ ದೆಸೆಯಿಂದ ಆರು ತಿಂಗಳ ಕಾಲ ಈ ಪತ್ರಿಕೆಯ ಸಂಚಿಕೆಗಳು ಹೊರಬೀಳದೆ ಸಾವಕಾಶವಾದುದಕ್ಕಾಗಿ ಓದುಗ ಮಹನೀಯರ ಕ್ಷಮೆಯನ್ನು ಪ್ರಕಾಶಕನು ಬೇಡುತ್ತಲಿದ್ದಾನೆ.

ಪ್ರಕಾಶಕನಿಗೆ ಈಗ ಸುಮಾರು ೭೫ ವರ್ಷ. ಈ ಪತ್ರಿಕೆಯ ಪ್ರಕಾಶನದ ಉದ್ಯೋಗದಲ್ಲಿ ಪ್ರವೇಶಿಸಿ ೨೫ ವರ್ಷಗಳಾಗುತ್ತಾ ಬಂದಿದೆ. ಇದು ಶಿವನ ಸೇವೆ, ಪ್ರಕಾಶಕನು ಶಿವನ ಸೇವಕನು ಎಂದು ಕೆಲಸ ಮಾಡಿದರೂ ಈ ಸೇವೆಯಿಂದಲೂ ವಿರಾಮವನ್ನು ಪಡೆಯಬೇಕೆಂದು ಬೋಧಿಸುವ ತೊಂದರೆಗಳು ಒದಗುತ್ತಲಿವೆ. ಕೆಲಸ ಮಾಡುತ್ತಿದ್ದ ಒಂದು ಕಣ್ಣಿಗೆ ಪರೆ ಬಂದು ಲೇಖನಗಳು ಬಹಳ ನಿಧಾನವಾಗಿ ಬರೆಯಲ್ಪಡುತ್ತಲಿವೆ. ಪೂರ್ವದಂತೆ ಮೊಳೆ ಜೋಡಿಸಿದ ಪ್ರತಿಗಳನ್ನು ತಿದ್ದಲು ತೊಂದರೆ ಬಂದಿದೆ. ಈ ದೆಸೆಯಿಂದ ಬರೆಯುವವರು ಮುಂತಾದವರನ್ನು ಹೆಚ್ಚಾಗಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಈ ಪತ್ರಿಕೆಯ ಚಂದಾದಾರರ ಹಣ ಸಹಾಯವು ಬಹಳ ಕಡಿಮೆಯಾಗಿ ಇದೆ.

ಪ್ರಕಾಶಕನು ತನಗಾದ ಅನುಭವದ ದೆಸೆಯಿಂದ "ಭಾರತ ಧರ್ಮಸಾರ", "ಗೀತೆಯ ತಿರುಳು" ಮುಂತಾದ ಗ್ರಂಥಗಳನ್ನು ಬರೆಯಬೇಕಾಗಿದೆ. ಇದುವರೆವಿಗೂ

* ೧೨೦–೧೨೧

ಅಚ್ಚಾಗದಿರುವ "ಕ್ಷೇತ್ರಜ್ಞ ಸುಮನೋವಾದ" (ಉತ್ತಮವಾದ ಗ್ರಂಥ) ಮುಂತಾದ ಗ್ರಂಥಗಳನ್ನು ಅಚ್ಚಿಗೆ ಸಿದ್ಧಪಡಿಸಬೇಕಾಗಿದೆ. ಇದುವರೆಗೆ ಕೆಲವು ಭಾಗಗಳು ಅಚ್ಚಾಗಿರುವ ಗ್ರಂಥಗಳನ್ನು ಪೂರ್ಣಗೊಳಿಸಬೇಕಾಗಿದೆ.

ಸಮಾಜವು ಇನ್ನು ಮೇಲೆ ಈ ಮಾಸಪತ್ರಿಕೆಯ ಕಡೆಗೆ ಚೆನ್ನಾಗಿ ಗಮನಕೊಟ್ಟು ಇದರ ಪ್ರಕಾಶನಕ್ಕೆ ತಕ್ಕ ಏರ್ಪಾಡನ್ನು ಮಾಡದೇ ಹೋದರೆ ಈ ಪತ್ರಿಕೆಯು ಬಹಳ ಕಾಲ ನಡೆಯಲಾರದು. ಮತ್ತು ಪ್ರಕಾಶಕನ ಅನುಭವವು ಜನಸಾಮಾನ್ಯಕ್ಕೆ ತಿಳಿಯುವುದಕ್ಕಾಗದೆ ಹೋಗಬಹುದು. ವೀರಶೈವರಲ್ಲಿ ಮಾರ್ಗಕ್ರಿಯೆ, ಮಿಾರಿದ ಕ್ರಿಯೆ ಎಂದು ಎರಡುಂಟೆಂದು ಧರ್ಮ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಈ ಕ್ರಿಯೆಗಳಾವುವು? ಇವುಗಳ ಆಚರಣೆ ಹೇಗೆ ಎಂಬುದನ್ನು ಸಮಾಜದವರು ಯೋಚಿಸಿದ್ದಾರೆಯೇ? ಎಂಬುದಕ್ಕೆ ಗುರುತುಗಳೇ ಕಂಡು ಬರುತ್ತಿಲ್ಲ. ಪ್ರಭುಲಿಂಗ ಲೀಲೆಯಲ್ಲಿ ಇಷ್ಟಲಿಂಗದ ಗತಿ ಸಾಧನಕಾಂಗನ ಗತಿ ಎಂಬುದಾಗಿ ಎರಡು ಗತಿಗಳಿವೆ. ಇವುಗಳಲ್ಲಿ ಹೇಳಲ್ಪಟ್ಟ ಅಂಶಗಳನ್ನು ವಿಚಾರಮಾಡಿ ಆಚರಣೆಗೆ ತರುವವರು ಬೇಕಾಗಿದ್ದಾರೆ. ಗ್ರಂಥಗಳನ್ನು ಓದಿ ಮೂಢ ಭಕ್ತಿಯಿಂದ ಹೇಳುವ ಮಾತುಗಳು ಇವಲ್ಲ. ನಿರಾಕಾರ ಪರವಸ್ತುವಿನ ಅನುಸಂಧಾನವು ಭಾರತ ಧರ್ಮದ ಉತ್ತಮ ಅಭಿಪ್ರಾಯಕ್ಕೆ ಅನುಸಾರವಾಗಿ ಯಾವ ರೀತಿಯಾಗಿ ಆಗಬೇಕೆಂಬ ಕುಶಲತೆಯನ್ನು ಕಂಡು ಹಿಡಿಯುವ ಸಾಧನೆಗಳು ಮೇಲೆ ಕಂಡವುಗಳ ಮತ್ತು ಇತರ ಧಾರ್ಮಿಕಾಭಿಪ್ರಾಯಗಳ ದೆಸೆಯಿಂದ ತಿಳಿಯಲ್ಪಡಬೇಕಾಗಿವೆ.

ಈಗಿನ ವೀರಶೈವ ಸಮಾಜವು ತಾನು ಸರ್ವಾಂಗ ಸುಂದರನಾಗಿ ಬೆಳೆದಿದ್ದೇನೆ ಎಂದು ಯೋಚಿಸುವುದಾದರೆ ವಿನೋದಗಳಲ್ಲಿಯೂ, ವಿಜೃಂಭಣೆಗಳಲ್ಲಿಯೂ ಕಾಲವನ್ನು ಕಳೆಯಲಿ ಶಿವಾದ್ವೈತ ತತ್ತ್ವದ ನಿಜಸ್ವರೂಪವೇನೆಂಬುದನ್ನು ಇನ್ನೂ ತಿಳಿಯಬೇಕೆಂದು ಯೋಚಿಸುವುದಾದರೆ ಇದೂವರೆವಿಗೆ ಪ್ರಚಾರವಾದ ವಿಷಯುಗಳ ಜೊತೆಗೆ ಪ್ರಾಮುಖ್ಯ ವಿಷಯುಗಳೂ ಪ್ರಚಾರವಾಗಬೇಕೆಂದು ಹೆಚ್ಚಿನ ಸಾಹಸದಿಂದ ಪ್ರಯತ್ನಿಸಲಿ.

ಪ್ರಕಾಶಕನು ಈ ಇಳಿವಯಸ್ಸಿನಲ್ಲಿಯೂ ಬಹಳ ಕೊಂಚ (ಸಮುದ್ರದಲ್ಲಿ ಒಂದು ನೀರಿನ ಬಿಂದುವಿನಷ್ಟು) ಸೇವೆ ಮಾಡಬೇಕೆಂಬ ಲವಲವಿಕೆಯನ್ನು ಬಿಟ್ಟವನಲ್ಲ.

ಈ ವರ್ಷ ೫೦ ಅಥವಾ ೬೦ ಚಂದಾದಾರರಿಂದ ಮಾತ್ರವೇ ವರ್ಗಣಿ ಹಣವು ಬಂದಿದೆ ಎಂದು ಪ್ರಕಟಪಡಿಸಬೇಕಾದ ಕಾಲವು ಈಗ ಬಂದಿದೆ.

ಸಮಾಜದ ದಾಸಾನುದಾಸ,

ಶ್ರೀ ಚನ್ನಮಲ್ಲಿಕಾರ್ಜುನ

# ಈ ಪತ್ರಿಕೆಯು ವಿಚಾರ*

ವಾಚಕ ಮಹಾಶಯರಲ್ಲಿ ವಿನಯಾರ್ಥಿಗಳು.

ಈ ಮಾಸಪತ್ರಿಕೆಯು ೧೩೫ನೆಯ ಸಂಚಿಕೆಯನ್ನು ೧೦-೧-೫೭ರಲ್ಲಿ ಹೊರಡಿಸಿದ ಮೇಲೆ ಇದರ ಪ್ರಕಾಶಕನಿಗೆ ಶಿವಮೊಗ್ಗಾ ಡಿಸ್ಟ್ರಿಕ್ ಶಿರಾಳಕೊಪ್ಪಕ್ಕೆ ಹೋಗಿ ಅಲ್ಲಿ "ಶ್ರೀ ಸಿದ್ಧೇಶ್ವರ ನಿಲಯ"ದ ಕೆಲಸಗಳನ್ನು ಮಾಡುವ ಸಂಭವವು ಒದಗಿದುದರಿಂದ ಪತ್ರಿಕೆಯನ್ನು ಹೊರಡಿಸುವುದಕ್ಕೆ ಅನನುಕೂಲವಾಯಿತು. ಈ ಬಗ್ಗೆ ಓದುಗ ಮಹನೀಯರ ಕ್ಷಮೆ ಇರಲಿ. ಈ ಪತ್ರಿಕೆಯು ಪ್ರಕಾಶಕನೊಬ್ಬನಲ್ಲಿ ಒದಗಿದ ಶಿವ ದ್ರವ್ಯದ ಖರ್ಚಿನಿಂದಲೇ ನಡೆಯುತ್ತಿತ್ತು. ಈಗ ಪ್ರಕಾಶಕನಿಗೆ ಕಣ್ಣಿನಲ್ಲಿ ಪರೆ ಬೆಳೆದು ಪುಸ್ತಕಗಳನ್ನು ಓದುವುದಕ್ಕೆ ಕೂಡ ಸುಲಭದಲ್ಲಿ ಅನುಕೂಲವಿಲ್ಲದಂತೆ ಕಣ್ಣು ಮಂಜಾಗಿರುವುದರಿಂದ ಇನ್ನು ಮುಂದೆ ಓದುವವರು, ಬರೆಯುವವರು, ಅಚ್ಚಿನ ಪ್ರತಿಗಳನ್ನು ತಿದ್ದುವವರು ಮುಂತಾದ ಕೆಲಸಗಳಿಗೆ ಒಬ್ಬೊಬ್ಬ ನೌಕರರನ್ನೇ ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕಾಗಿರುವುದರಿಂದ ಪ್ರಕಾಶಕನಿಗೆ ಮೊದಲಿನ ಮೂರರಷ್ಟಕ್ಕಿಂತಲೂ ಹೆಚ್ಚಾಗಿ ದ್ರವ್ಯದ ಖರ್ಚಿನಿಂದ ಪತ್ರಿಕೆಯು ಹೊರಡಬೇಕಾಗುತ್ತದೆ. ಈ ಪತ್ರಿಕೆಗೆ ಯಾರಾದರೊಬ್ಬರು ಕಾರ್ಯನಿರ್ವಾಹಕರು (ಏಜಂಟ್) ಆಗಿ ಚಂದಾ ಮೊಬಲಗನ್ನು ಅವರೇ ತೆಗೆದುಕೊಂಡು ಪತ್ರಿಕೆಯ ಮುದ್ರಣ ಮುಂತಾದುದಕ್ಕಾಗಿ ಅವರೇ ಖರ್ಚು ಮಾಡಿಕೊಂಡು ಲಾಭವನ್ನು ಅಥವಾ ಧರ್ಮೋದ್ಧರಣಕ್ಕಾಗಿ ಸಮಾಜ ಸೇವೆ ಮಾಡಿದ ಭಕ್ತಿಯ ಕೃತಾರ್ಥತೆಯನ್ನು ಹೊಂದಲಿ ಎಂದು ಈ ಹಿಂದೆ ಎರಡು ಮೂರು ಸಾರಿ ಪ್ರಕಟಿಸಿದ್ದಾಗ್ಯೂ ಯಾರು ಮುಂದೆ ಬರಲಿಲ್ಲ. ಮುಂದೆ ಈ ಪತ್ರಿಕೆಯ ಪ್ರಚಾರಕ್ಕೆ ಹೆಚ್ಚಿನ ಖರ್ಚು ಬೇಕೆಂಬುದರಲ್ಲಿ ಇತರರು ಇದೇ ರೀತಿ ಮಾಸಪತ್ರಿಕೆಗಳನ್ನು ಹೊರಡಿಸುವವರು ಖರ್ಚು ಮಾಡುವುದಕ್ಕಿಂತಲೂ ಕಡಿಮೆ ಆಗಿ ಆಗುವುದೇ ಹೊರತು ಹೆಚ್ಚೇನು ಅಲ್ಲ. ಇನ್ನುಮೇಲಾದರೂ ಪೂಜ್ಯರಾದ ಸ್ವಾಮಿಗಳಾಗಲಿ, ಶ್ರೀಮಂತರಾಗಲಿ ವಹಿಸಿಕೊಂಡು ಈ ಪತ್ರಿಕೆಯನ್ನು ಮುಂದೆ ಬಹುಕಾಲ ನಡೆಯುವಂತೆ ಏರ್ಪಾಡಿಸುವುದಾದರೆ ಪ್ರಕಾಶನಿಗೆ ಖರ್ಚಿನ ದ್ರವ್ಯದ ಯೋಚನೆ ತಪ್ಪಿ ಪತ್ರಿಕೆಯು ಸುಗಮವಾಗಿ ನಡೆಯಲಿಕ್ಕೆ ಅವಕಾಶವಾಗುತ್ತದೆ. ಇಲ್ಲದಿದ್ದರೆ ಈ ಪತ್ರಿಕೆಯನ್ನು ಹೊರಡಿಸುವುದರ ಬದಲಾಗಿ ಪ್ರಕಾಶಕನಿಗೆ ಒದಗಿದ ಅಲ್ಪ ಸ್ವಲ್ಪ ಶಿವ ದ್ರವ್ಯದಲ್ಲಿಯೇ ಚಿಕ್ಕ ಅಥವಾ ದೊಡ್ಡ ಧರ್ಮಗ್ರಂಥಗಳನ್ನೇ ಪ್ರತ್ಯೇಕವಾಗಿ ಪ್ರಕಟಿಸುವ ಸಂಭವವು ಒದಗುತ್ತದೆ. ವೀರಶೈವ ಸಮಾಜವು ಈ ವಿಷಯವನ್ನು ಚೆನ್ನಾಗಿ ಯೋಚಿಸಿ ಈ ಪತ್ರಿಕೆಯು ಬಹುಕಾಲ ನಡೆಯುವುದಕ್ಕೆ ತಕ್ಕ ಏರ್ಪಾಡನ್ನು ಮಾಡುವವರಾಗಲಿ.

ಈ ಪತ್ರಿಕೆಯು ಮಾಡಿದ ಅಲ್ಪ ಸೇವೆಯನ್ನು ಸ್ವಲ್ಪಮಟ್ಟಿಗೆ ಸಮಾಜದ ಮುಂದೆ ಇಡಬೇಕಾದುದು ಅವಶ್ಯಕವೆಂದು ತೋರಿ ಬಂದದ್ದರಿಂದ ಹಾಗೆ ಮಾಡಲಾಗಿದೆ.

---

ಸಂ. ೧೩೬

ಅನೇಕ ಮಹಾಸಭೆಗಳಲ್ಲಿ ವೀರಶೈವ ಸಮಾಜದ ಮೂಲಿಗರಾದ ಬಸವೇಶ್ವರ, ಅಲ್ಲಮಪ್ರಭು, ಪಂಚಾಚಾರ್ಯರು ಮೊದಲಾದವರ ಚರಿತ್ರೆಯನ್ನು ಪ್ರಕಟಿಸಬೇಕೆಂದು ಠರಾವುಗಳನ್ನು ಮಾಡುತ್ತಿದ್ದರೂ ಯಾವ ಮಹಾಸಭೆಯಾದರೂ ಅಂತಹ ಚರಿತ್ರೆ ಯನ್ನು ಬರೆಯಿಸಿ ಪ್ರಕಟಮಾಡಲಿಲ್ಲ. ಈ ಪತ್ರಿಕಾ ಪ್ರಕಾಶಕನು ಇದೊಂದು ಮುಖ್ಯ ವಾದ ಸಮಾಜ ಸೇವೆಯೆಂದು "ಬಸವೇಶ್ವರನ ಕಾಲ" ಎಂಬ ಗ್ರಂಥವನ್ನು ಪ್ರಕಟಿಸಿದನು. ಇದನ್ನು ಧಾರವಾಡದ ಬಂಧುಗಳಾದ ಶ್ರೀ ಹಾಲಭಾವಿಯವರು, ಶ್ರೀ ಹಿರೇಮಠರು, ಶ್ರೀ ಪುರಾಣಿಕರು ಮುಂತಾದವರು ಪರಿಶೀಲಿಸಿ ಬಸವೇಶ್ವರನ ಚರಿತ್ರೆಗೆ ಮುಖ್ಯ ಗ್ರಂಥ ವೆಂದು ಮುಂಬೈ ಸರಕಾರಕ್ಕೆ ತಿಳಿಸಿದ್ದಾರೆ. ಆ ಸರಕಾರವೂ ಅದನ್ನು ಅಂಗೀಕರಿಸಿ ಇದೆ. ಇದಲ್ಲದೆ ಪ್ರಕಾಶಕನು ಪಂಚಾಚಾರ್ಯರ ಚರಿತ್ರೆಯನ್ನು ಬರೆಯಲಾರಂಭಿಸಿ ಇದುವರೆವಿಗೆ ಆಚಾರ್ಯರಲ್ಲಿ ಮೊದಲಿಗರಾದ ಶ್ರೀ ರೇವಣಸಿದ್ಧರ ಚರಿತ್ರೆಯನ್ನು ೫೦೦ ಪುಟಗಳಿಗಿಂತಲೂ ಹೆಚ್ಚಾಗಿ ಪ್ರಕಟಿಸಿದ್ದಾನೆ. ಸಧ್ಯ ಈ ಪುಸ್ತಕವೂ ಹೊರ ಬೀಳುವುದರಲ್ಲಿ ಇದೆ.

ಹೀಗೆ ಮಹಾಸಭೆಯವರು ೨೦-೩೦ ಸಾವಿರ ರೂಪಾಯಿಗಳ ಖರ್ಚಿನಿಂದಲೂ ಪ್ರಕಟಿಸುವುದಕ್ಕೆ ಸಾಧ್ಯವಿಲ್ಲದೆ ಇರುವುದನ್ನು ಅಲ್ಪ ಸೇವೆಯೆಂದು ಈ ಸೇವಕನು ಪ್ರಕಟಿಸಿದ್ದಾನೆ. (ಈ ಎರಡು ಪುಸ್ತಕಗಳ ಪ್ರಕಟಣೆಗೆ ಬೇಕಾದ ಮುದ್ರಣದ ಖರ್ಚಿನ ಸಹಾಯವನ್ನು ಬ್ಯಾಡಿಗಿ ಶ್ರೀ ಮುಪ್ಪಿನ ಸ್ವಾಮಿ ಮಠದ ಶ್ರೀ ನಿರಂಜನ ಚನ್ನಬಸವ ಸ್ವಾಮಿಗಳು ವಹಿಸಿಕೊಂಡಿರುವುದಕ್ಕಾಗಿ ವೀರಶೈವ ಸಮಾಜವು ಅವರಿಗೆ ಚಿರಋಣಿ ಯಾಗಿ ಇರಬೇಕಾಗಿದೆ.) ಮುಂದಾದರೂ ಉಳಿದ ಆಚಾರ್ಯರ ಚರಿತ್ರೆಗಳನ್ನು ಪ್ರಕಟಿಸುವುದಕ್ಕೆ ಸಾವಿರಗಟ್ಟಲೆ ರೂಪಾಯಿಗಳು ಬೇಕಾಗುವುವು ಎಂಬುದನ್ನು ಈಗ ಮಹಾಸಭೆಯವರು ಬರೆಯಿಸಲಿಕ್ಕೆ ಪ್ರಯತ್ನಪಟ್ಟು ಪ್ರಕಟಿಸುವುದಾದರೆ ಅವರ ಅನು ಭವಕ್ಕೆ ಬರುವುದೆಂಬುದನ್ನು ನಿರ್ಧಾರವಾಗಿ ಹೇಳಬೇಕಾಗಿದೆ. ಇಂತಹ ಚಾರಿತ್ರಿಕ ಸೇವೆಯನ್ನು ಮಾಡಿರುವುದಲ್ಲದೆ ಉಡುತಡಿಯ ಮಹಾದೇವಿಯಕ್ಕನ ರಗಳೆ, ಆಕೆಯ ವಚನಾರ್ಥ, ತಾರಕತ್ರಯ, ಜ್ಯೋತಿರ್ಮಯ ಶಾಂಭವ ಜ್ಞಾನ, ದೀಕ್ಷಾಬೋಧೆ, ಲಿಂಗೋಪನಿಷತ್, ವಾಗದ್ವೈತನಿರಸನ ತ್ರಿವಿಧಿ, ಶಿವಯೋಗ ದರ್ಪಣ, ವೀರಶೈವ ಮೊದಲನೆಯ ಪುಸ್ತಕ, ತೋಂಟದ ಸಿದ್ಧೇಶ್ವರ ವಚನ, ಸ್ತೋತ್ರ ಪಾರಾಯಣ, ಅನಾದಿ ವೀರಶೈವ ಸಂಗ್ರಹ, ಶ್ರೀ ಅರವಿಂದಘೋಷರ ಯೋಗವು ವೀರಶೈವಕ್ಕೆ ಹೋಲುವ ವಿವರದ ಗ್ರಂಥ- ಮುಂತಾದ ಉದ್ಗ್ರಂಥಗಳನ್ನೂ, ಯೋಗಾಂಗ ತ್ರಿವಿಧಿ, ಗುರು ಶಂಕರೇಶ್ವರಾ ಶತಕ, ಮುಕ್ತ್ಯಂಗ ಸಾಕಂಠಮಾಲೆ, ಗುರುಕರಣ ತ್ರಿವಿಧಿ ಮುಂತಾದ ಅನೇಕ ಚಿಕ್ಕಚಿಕ್ಕ ಗ್ರಂಥಗಳನ್ನೂ ಈ ಗ್ರಂಥಗಳನ್ನೂ ಈ ಪತ್ರಿಕೆಯು ಪ್ರಕಟಿಸಿ ಇದೆ. ಇದಲ್ಲದೆ ಹಿಂದೆ ಯಾವ ಪತ್ರಿಕೆಯವರೂ ಪ್ರಕಟಿಸಲಿಕ್ಕೆ ಅಸಾಧ್ಯವೆಂದು ಬಿಟ್ಟು ಬಿಟ್ಟ ಶತಕತ್ರಯದ ಮೂಲ ಸಂಸ್ಕೃತ ಗ್ರಂಥ ಯಾವ ಪತ್ರಿಕೆಯವರೂ ಓಲೆಯ ಪ್ರತಿಯನ್ನು

ನೋಡಿ ಪ್ರಕಟಸಲಾರದೆ ಕೈಬಿಟ್ಟ ಒಂಭೈನೂರರ ಕಟ್ಟು ಎಂದು ಹೆಸರಾದ ಈಗ ಸುಮಾರು ಸಾವಿರ ವಚನಗಳುಳ್ಳ ಸರ್ವ ಪುರಾತನರ ವಚನ ಎಂಬ ಗ್ರಂಥವನ್ನು ಮುದ್ರಿಸಿ ಬೇಗನೆ ಹೊರಗೆಡುವುದರಲ್ಲಿ ಈ ಪತ್ರಿಕೆಯು ತನ್ನ ಸೇವೆಯನ್ನು ಸಲ್ಲಿಸುತ್ತಾ ಇದೆ.

ಈ ರೀತಿಯಲ್ಲಿ ಅಲ್ಪಸೇವೆಯೆಂದು ಆರಂಭಿಸಿ ವೀರಶೈವ ಸಮಾಜದ ಮುಖ್ಯ ಕೆಲಸಗಳನ್ನು ಮಾಡಿರುವ ಈ ಪತ್ರಿಕೆಯು ಬಹುಕಾಲ ನಡೆಯುವಂತೆ ಏರ್ಪಡಿಸುವುದು ಈ ಸಮಾಜದ ಮುಖ್ಯ ಕಾರ್ಯವೆಂಬುದನ್ನು ವೀರಶೈವ ಮಹಾಸಭೆಯವರೇ ಮುಂತಾದವರು ಇನ್ನು ಮೇಲಾದರೂ ನಿರ್ಧರಿಸುವವರಾಗಲಿ. ಈ ಅಲ್ಪ ಸೇವೆಯನ್ನು ಈಗ ನಿರ್ಲಕ್ಷಮಾಡಿ ಪುನಃ ಯಾವಾಗಲೊ ಇಂತಹ ಸೇವೆ ಬೇಕೆಂದು ಅಪೇಕ್ಷಿಸುವುದಾದರೆ ಆಗ ಬಹಳ ಕಷ್ಟವೂ ಧನವ್ಯಯವೂ ಆದೀತೆಂಬುದನ್ನು ಈಗಲೇ ಚೆನ್ನಾಗಿ ಯೋಚಿಸಿ ಸರ್ವರೂ ನಿರ್ಧರಿಸುವವರಾಗಲಿ.

## ಈ ಪತ್ರಿಕೆಯ ಅಜ್ಞಾತವಾಸದಲ್ಲಿ ವೀರಶೈವ ಸಮಾಜ ವಿಚಾರ

ಈ ಹಿಂದಿನ ಲೇಖನದಲ್ಲಿ ಕಂಡಂತೆ ಈ ಪತ್ರಿಕೆಯು ಹೊರಡಲಿಕ್ಕೆ ಅನುಕೂಲ ಒದಗಿದ ಕಾಲವನ್ನು ಈ ಪತ್ರಿಕೆಯ ಅಜ್ಞಾತವಾಸದ ಕಾಲವೆಂದು ಭಾವಿಸಬೇಕಾಗಿದೆ. ಈ ಕಾಲದಲ್ಲಿ ಈ ಪತ್ರಿಕೆಯ ಪ್ರಕಾಶಕನು ಸಮಾಜ ವಿಚಾರವನ್ನು ಗಮನಕ್ಕೆ ಬರೆಯುವುದಕ್ಕಾಗಲಿ ಪ್ರಕಟಿಸುವದಕ್ಕಾಗಲಿ ಅವಕಾಶವಿರಲಿಲ್ಲ. ಈ ಪ್ರಕಾಶಕನಿಲ್ಲದೆ ಹೋದಾಗ ಸಮಾಜವು ಯಾವ ರೀತಿಯಲ್ಲಿ ಮುಂದುವರಿಯುವುದೆಂಬುದನ್ನು ನೋಡುವ ಒಂದು ಅವಕಾಶವೂ ಪ್ರಕಾಶಕನಿಗೆ ದೊರೆತಂತೆ ಆಗಿದ್ದಿತು. ಪ್ರಕಾಶಕನ ಈ ಅರ್ಧ ನಿದ್ರೆಯ ಅವಲೋಕನವು ಪೂರ್ಣ ನಿದ್ರೆಯ ಕಾಲದ ಸಮಾಜದ ವಿಚಾರವನ್ನು ಊಹಿಸಲಿಕ್ಕೆ ಅವಕಾಶವುಳ್ಳದೂ ಆಗಿದ್ದಿತು.

೧. ಈ ಸಮಾಜವು ಜಗತ್ತಿನಲ್ಲಿ ಸಂಪೂರ್ಣವಾಗಿ ಹರಡುವ ಸ್ಥಿತಿಯುಳ್ಳದಾಗಿದ್ದರೂ ಉದಾಹರಣೆಗೆ ಪ್ರತಿಯೊಬ್ಬ ಮನುಷ್ಯನ ಪುಸ್ತಕದಲ್ಲಿನ ಚಿತ್ಕಲೆಯನ್ನು (ಪ್ರಾಣ ಪ್ರಕಾಶ) ಲಿಂಗರೂಪವಾಗಿ (ಗೋಳಕ ವಸ್ತು) ಕೊಡುವ ಆಚರಣೆ ಉಳ್ಳದಾಗಿದ್ದರೂ ಪ್ರಪಂಚದ ಮನುಷ್ಯರಿಗೆಲ್ಲಾ ಮಸ್ತಕವಿದ್ದು ಅವರ ಚಿತ್ಕಲೆಯನ್ನೇ ಅವರು ಆರಾಧಿಸುವ ಮಹತ್ತರವಾದ ತತ್ವಬೋಧೆಯುಳ್ಳದಾಗಿದ್ದರೂ ಆ ವಿಷಯವನ್ನು ಜಗತ್ತಿಗೆ ತಿಳಿಸುವಂತಹ ಸಾಹಸದ ಕಾರ್ಯವನ್ನು ಸಮಾಜದವರು ಮಾಡಲಿಲ್ಲ. ಶ್ರೀ ರಾನಡೆಯವರು ಧಾರವಾಡದಲ್ಲಿ ಮಾಡಿದ ಭಾಷಣವನ್ನೇ ಮುಖ್ಯವಾಗಿಟ್ಟುಕೊಂಡು ಅವರು ತೋರಿಸಿದ ಧಾರ್ಮಿಕ ಜೀವನ ಉನ್ನತಿಯು ಸರ್ವಭೂಷಣ ಕವಿಗಳ ಗ್ರಂಥದಲ್ಲಿ ಇರುವುದನ್ನು ಎತ್ತಿ ತೋರಿಸಿ ಜಗತ್ತಿನ ಪಂಡಿತರನ್ನೇ ದಂಗು ಬಡಿಸುವಂತೆ ಮಾಡುವುದಾಗುತ್ತಿದ್ದಿತು. ಇಂತಹ ರೀತಿಯಲ್ಲಿ ಈ ಸಮಾಜವು ಜಾತ್ಯತೀತವೆಂದು ತೋರಿಸಿ ಅಂತಹ ವಿಷಯಗಳ ಪ್ರಕಟನೆಯನ್ನು ಹೆಚ್ಚಾಗಿ ಮಾಡಬೇಕಾಗಿದ್ದಿತು.

೨. ಶಿವಾನುಭವ ಸಮ್ಮೇಳನಗಳಲ್ಲಿ ಸಮಾಜದವರಿಗೆ ಇಷ್ಟಲಿಂಗದ ಅವಶ್ಯಕತೆಯನ್ನು ಚೆನ್ನಾಗಿ ತೋರಿಸಿ ಇಷ್ಟಲಿಂಗದ ದೆಸೆಯಿಂದಲೇ ಪ್ರಾಣಲಿಂಗ, ಭಾವಲಿಂಗಗಳು ವ್ಯಕ್ತವಾಗಿ ಅನುಭವದಲ್ಲಿ ಬರುವುವೆಂಬುದನ್ನು ತೋರಿಸಿ, ಲಿಂಗಪೂಜೆಯಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳ ಅನುಸಂಧಾನದ ಲಿಂಗಪೂಜಾ ವಿಧಾನವನ್ನು ಚೆನ್ನಾಗಿ ತಿಳಿಯುವಂತೆ ಪ್ರಚಾರ ಮಾಡಬೇಕಾಗಿದ್ದಿತು. ಶ್ರೀ ಮೂಕಪ್ಪ ಸ್ವಾಮಿಗಳ ಜಾತ್ರೆಯಲ್ಲಿ ಇಷ್ಟಲಿಂಗದ ಅವಶ್ಯಕತೆಯನ್ನು ಪ್ರತಿಪಾದಿಸಿದುದು ಉತ್ತಮವಾದ ಕೆಲಸ. ಆದರೆ ಮೇಲೆ ಕಂಡಂತೆ ಇಷ್ಟ, ಪ್ರಾಣ, ಭಾವಲಿಂಗಗಳನ್ನು ಸಂಬಂಧಿಸಿ ಆಚರಿಸುವ ವಿಧಾನವು ಸಮಾಜದಲ್ಲಿ ಹೆಚ್ಚಾಗಿ ಪ್ರಚಾರಪಡಿಸಬೇಕಾಗಿದೆ.

೩. ವೀರಶೈವ ಮಹಾಸಭೆಯವರು ಸಮಾಜದ ವಿಷಯವಾಗಿ ಒಂದು ಪುಸ್ತಕವನ್ನು ಪ್ರಕಟಿಸಬೇಕೆಂದು ಉದ್ದೇಶಪಟ್ಟಿರುವುದು ಸ್ತುತ್ಯವಾದ ಕೆಲಸವಾಗಿದೆ. ಇದರ ಪ್ರಕಟನೆಯ ಸಮಿತಿಗೆ ಅಧ್ಯಕ್ಷರಾಗಿ ಶ್ರೀ ನಂದೀಮಠ ಇವರು ಆರಿಸಲ್ಪಟ್ಟಿದ್ದಾರೆ. ಇವರು ವೀರಶೈವರಲ್ಲಿನ ಆರು ಸ್ಥಲಗಳಲ್ಲಿನ ಮೊದಲಿನ ಎರಡು ದ್ವೈತವೆಂತಲೂ, ಉಳಿದವು ಅದ್ವೈತವೆಂತಲೂ ಪ್ರಕಟಿಸಿದ ಉದಾಹರಣೆ ಇದೆ. ಸ್ಥಲಗಳಲ್ಲಿ ಮೊದಲನೆಯದಾದ ಭಕ್ತಸ್ಥಲವೇ ಶಿವಾದ್ವೈತವೆಂದು ಗ್ರಂಥಗಳ ಬೋಧೆ ಇದೆ. ಶ್ರೀ ಮೊಗ್ಗೆಯ ಮಾಯಿದೇವರು "ಶಿವನೆ ಶಿವಾರ್ಚನೈಕರತನಾಗಿರಲೋಸುಗ ಮಾತ್ಯಲೋಕದಿಂದವತರಿಸಿ ಸ್ವಕೀಯ ಘನಲೀಲೆಯೊಳೊಯ್ಯನೆ ಮಾನುಷಾಯಮಪ್ಪ ವಿಮಳವೇಷಮಂ ಧರಿಸಿ— ಪರಮ ಭಕ್ತಮುಯುಸ್ಥಳದೊಳ್—" ಎಂದು ಶಿವಾಧವಾ ಶತಕದಲ್ಲಿ ಹೇಳಿದ್ದಾರೆ. ಇದರಿಂದ ಸ್ಥಲಗಳ ಮೊದಲಿನಿಂದಲೇ ಶಿವಾದ್ವೈತವು ಆರಂಭವಾಗುತ್ತದೆ ಎಂಬುದನ್ನು ಚೆನ್ನಾಗಿ ತಿಳಿಯಬಹುದಾಗಿದೆ. ಇದಲ್ಲದೆ ಬಸವೇಶ್ವರ, ಅಲ್ಲಮಪ್ರಭು ಮೊದಲಾದವರು ಕ್ರಿ. ಶ. ೧೨ ನೆಯ ಶತಮಾನದವರೆಂದು ಶ್ರೀ ರೇವಣಸಿದ್ಧರೇ ಮೊದಲಾದ ಪಂಚಾಚಾರ್ಯರು ಎರಡು ಸಾವಿರ ವರ್ಷಗಳ ಪೂರ್ವದವರೆಂದು ಪ್ರಕಟಿಸಿದ್ದಾರೆ. ಈಗಿನ ವೀರಶೈವರ ಆಚರಣೆಯನ್ನು ನೋಡಿದರೆ ಈ ಪಂಚಾಚಾರ್ಯರ ಮತ್ತು ಶ್ರೀ ಅಲ್ಲಮಾ ಪ್ರಭು ಸ್ವಾಮಿಗಳ ಶೂನ್ಯಪೀಠ (ನಿರಂಜನ) ಇವರ ಸಂಬಂಧವ ಇವರ ಕಲಶಗಳು ಇವುಗಳನ್ನಿಟ್ಟುಕೊಂಡೇ ದೀಕ್ಷಾದಿ ವಿವಾಹಾದಿ ಕಾರ್ಯಗಳು ನಡೆಯುತ್ತವೆ. ಹೀಗಿರುವಲ್ಲಿ ಪಂಚಾಚಾರ್ಯರ ಮತ್ತು ವಿರಕ್ತಪೀಠದ ಒಂದುಗೂಡುವಿಕೆಯು ಯಾವ ಕಾಲದಲ್ಲಿ ಯಾವ ರೀತಿಯಲ್ಲಿ ಉಂಟಾಯಿತೆಂಬುದನ್ನು ಇವರು ಚಾರಿತ್ರಿಕವಾಗಿ ಶೋಧಿಸಿಲ್ಲ. ಸಮಾಜದಲ್ಲಿ ಭಿನ್ನ ಭಾವನೆಗಳು ಉಂಟಾಗುವುದು ಇಂತಹ ಪ್ರಚಾರದಿಂದ ಹೆಚ್ಚಾಗುತ್ತದೆ. ಇಂತಹ ರೀತಿಯಲ್ಲಿ ಇರುವ ಅಧ್ಯಕ್ಷರಿಂದ ವೀರಶೈವ ಸಮಾಜದ ವಿಷಯದ ಪುಸ್ತಕವು ಯಾವ ರೀತಿಯಲ್ಲಿ ಸಿದ್ಧವಾಗುವುದೋ ಎಂಬ ಭೀತಿಯುಂಟಾಗಿದೆ. ಸಮಾಜವಾದರೋ "ಹೊಯ್ಯೆಲೋ ಡಂಗುರವಾ" ಎಂದು ಡೊಳ್ಳು ಬಾರಿಸುತ್ತಾ ಇದೆ. ಪಂಚಾಚಾರ್ಯರು ಯುಗಗಳಿಂದ

ಇದ್ದವರೆಂದು ಭಾವಿಸುವವರಾದರೆ, ಬಸವೇಶ್ವರನು ಶ್ರೀ ಅಲ್ಲಮಪ್ರಭು ಸ್ವಾಮಿಗಳೂ ಯುಗಗಳಿಂದ ಇದ್ದವರೆಂಬ ಗ್ರಂಥವನ್ನು ಮಾನಿಸಲೇಬೇಕು. ಹಾಗಿಲ್ಲದೆ ಅವರು ೧೨ ನೆಯ ಶತಮಾನದವರೆಂದು ಚಾರಿತ್ರಿಕವಾಗಿ ಭಾವಿಸುವುದಾದರೆ ಪಂಚಾಚಾರ್ಯರು ೧೨ ನೆಯ ಶತಮಾನದವರಾಗಿ ಚಾರಿತ್ರಿಕವಾಗಿ ಇರಲಿಕ್ಕೇಬೇಕು. ಇಂತಹ ಐಕಮತ್ಯದ ವಿಷಯವನ್ನು ವೀರಶೈವ ಮಹಾಸಭೆಯು ಶೋಧಿಸಿ, ಪ್ರಕಟಿಸದೇ ಇದ್ದರೆ ಮಹಾಸಭೆಯು ಕೂಡಾ ಸಮಾಜದಲ್ಲಿ ಒಡಕನ್ನು ಹುಟ್ಟಿಸುವುದಕ್ಕೆ ಅವಕಾಶವುಳ್ಳದಾಗಿ ಪರಿಣಮಿಸುವುದು. ಈ ಪುಸ್ತಕದ ರಚನೆಗೆ ಉಪಸಮಿತಿಗಳು ಸೇರಿ ಒಂದೆರಡು ದಿನಗಳಲ್ಲಿ ನಿರ್ಣಯ ಮಾಡಿದ ಕೆಲವು ಅಂಶಗಳೂ ಹೊರಬಿದ್ದಿವೆ. ಇವುಗಳಿಂದ ಪುಸ್ತಕದ ರಚನೆಯ ಪೂರ್ಣ ಭಾಗವೂ ದೊರಕುವುದಿಲ್ಲ. ವೀರಶೈವ ಸಮಾಜದಲ್ಲಿ ನಿರ್ಧಾರವಾಗಿ ಪ್ರಕಟವಾಗಬೇಕಾದ ವಿಷಯಗಳು ಇನ್ನೂ ಹೆಚ್ಚಾಗಿವೆ. ಉಪಸಮಿತಿಯವರು ಕನಿಷ್ಟ ಪಕ್ಷ ಒಂದು ತಿಂಗಳಾದರೂ ಸೇರಿ ಈ ಪುಸ್ತಕದ ರಚನೆಗೆ ನಿಜವಾದ ವಿಷಯವನ್ನು ಒದಗಿಸಿಕೊಡಬೇಕಾಗಿದೆ. ಹಾಗಿಲ್ಲದಂತೆ ಸಿದ್ಧವಾದ ಪುಸ್ತಕದಿಂದ ವೀರಶೈವರ ಒಡಕು ಎಂದೆಂದಿಗೂ ತೀರುವುದೇ ಇಲ್ಲ. ಚಾರಿತ್ರಿಕ ವಿಷಯಗಳಿಂದ ಮತ್ತು ಧಾರ್ಮಿಕ ರೀತಿಯಿಂದ ಸಹಜವಾದ ವಿಷಯಗಳ ಸಂಗ್ರಹವುಳ್ಳ ಪುಸ್ತಕವಾಗದಿದ್ದರೆ ಆ ಮಹಾಸಭೆಯ ಪುಸ್ತಕವೂ ಖಂಡನೆಗೆ ಒಳಗಾಗುವುದು ಮತ್ತು ಮಹಾಸಭೆಯು ಆ ಬಗ್ಗೆ ಖರ್ಚು ಮಾಡಿದ ದ್ರವ್ಯವೂ ಅನ್ಯಾಯವಾಗಿ ಪೋಲುಮಾಡಿವಂತಾಗುವುದು. ಇವನ್ನೆಲ್ಲಾ ಯೋಚನೆಗೆ ತೆಗೆದುಕೊಂಡರೆ ಈಗಿನ ವೀರಶೈವ ಸಮಾಜವು ತಪ್ಪುದಾರಿಯಲ್ಲಿ ಹೆಜ್ಜೆಯನ್ನು ಇಡುತ್ತಾ ಇದೆಯೆಂಬುದು ವ್ಯಕ್ತವಾಗುತ್ತದೆ. ಮಹಾಸಭೆಯವರು ಈ ಬಗ್ಗೆ ತಕ್ಕ ಗಮನ ತೆಗೆದುಕೊಳ್ಳುವುದು ಆವಶ್ಯಕವಾಗಿದೆ.

೩. ಈ ಪತ್ರಿಕೆಯು ಸಹಜವಾದ ವಿಷಯಗಳನ್ನೇ ಪ್ರಕಟನಕ್ಕೆ ತರಬೇಕೆಂಬ ಉದ್ದೇಶ ಉಳ್ಳದಾಗಿದೆ. ನವ ಸಂದೇಶದಲ್ಲಿ ಪ್ರಕಟವಾಗುತ್ತಿದ್ದ ಹೊಯ್‌ಸಳರ ಬಸವಣ್ಣನು ಕಲ್ಯಾಣದ ಬಸವಣ್ಣನೆಂಬ ವಿಷಯದ ಭ್ರಾಂತಿಯನ್ನು ದೂರಮಾಡಿ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದು ತೋರ್ಪಡಿಸಿ ಇದೆ.

ವೀರಶೈವವು ಭಾರತೀಯ ಧರ್ಮಕ್ಕೆ ಸೇರಿದುದಾಗಿದ್ದು ಭಾರತೀಯ ಧರ್ಮದಲ್ಲಿನ ಶ್ರೇಷ್ಠವಾದ ತತ್ವಗಳ ಆಚರಣೆಯನ್ನು ಇದು ಒಳಗೊಂಡಿದೆ. ಎಂಬುದನ್ನು ಈ ಪತ್ರಿಕೆಯು ಹುಟ್ಟಿದ ಲಾಗಾಯಿತು ಇದುವರೆವಿಗೂ ಪ್ರಸಿದ್ಧಪಡಿಸುತ್ತಾ ಬಂದಿದೆ.

೪. ಗುರುವರ್ಗ ಭಕ್ತವರ್ಗದಲ್ಲಿರತಕ್ಕ ಭಿನ್ನಾಭಿಪ್ರಾಯಗಳನ್ನು ದೂರ ಮಾಡುವ ಉದ್ದೇಶದಿಂದ ಅನೇಕ ಲೇಖನಗಳನ್ನು ಪ್ರಕಟಿಸಿ ಇದೆ ಮತ್ತು ಪುಸ್ತಕಗಳ ವಿಮರ್ಶೆಯನ್ನು ಮಾಡಿ ಇದೆ. ಪರದೇಶದಲ್ಲಿ ಎಂದರೆ ಮುಖ್ಯವಾಗಿ ಸೋವಿಯತ್ ರಾಜ್ಯದಲ್ಲಿ ಪ್ರಚಾರವಾಗಿರುವ ಲೌಕಿಕ ಆರ್ಥಿಕ ಪದ್ಧತಿಯು ವೀರಶೈವರಲ್ಲಿ ಧಾರ್ಮಿಕವಾಗಿ ನೆಲೆಗೊಂಡಿರುವುದೆಂಬುದನ್ನು ತೋರಿಸಿ ಇದೆ. ಇವರ ಶಿವಾದ್ವೈತದ ಲಕ್ಷಣದ ಆಚಾರವು ಹೇಗಿರಬೇಕೆಂಬುದನ್ನು ವಿವರಿಸುತ್ತಾ ಬಂದಿದೆ. ಗುರುವರ್ಗದವರು

ಜಾತರಲ್ಲ ಅಜಾತರೇ ಎಂಬುದನ್ನು ಸ್ಪಷ್ಟಪಡಿಸಿ ಇದೆ. ಉಪನಿಷತ್ತಿಗಳಿಗೂ ಶಿವ ಶರಣರ ವಚನಗಳಿಗೂ ಇರುವ ಹೋಲಿಕೆಯನ್ನು ತೋರಿಸುತ್ತಾ ಬಂದಿದೆ. ಇದರಲ್ಲಿ ಪ್ರಕಟವಾದ ವಿಷಯಗಳು ಇದುವರೆವಿಗೆ ಖಂಡನೆಗೆ ಸಿಕ್ಕಿಲ್ಲ. ಧರ್ಮವನ್ನು ಸಪ್ತಾ ವರಣಕ್ಕೆ ತಿರುಗಿಸಬೇಕೆಂಬ ಲೇಖನಗಳನ್ನು ವಿಮರ್ಶೆಮಾಡಿ ನಿಜ ತತ್ವವನ್ನು ತೋರಿಸಿ ಇದೆ.

ಆಚಾರ್ಯರ ಚರಿತ್ರೆಯನ್ನು ಬರೆಯಲಾರಂಭಿಸಿ ಧಾರ್ಮಿಕ ಗ್ರಂಥಗಳಲ್ಲಿ ಬರುವ ಹೆಸರುಗಳಿಗೆ ಚಾರಿತ್ರಿಕ ರೀತಿಯಲ್ಲಿ ಇರುವ ಹೆಸರುಗಳನ್ನು ಗುರ್ತಿಸಿ ಅವರ ಚರಿತ್ರೆ ಯನ್ನು ಕೊಟ್ಟಿದೆ. "ಚಾರಿತ್ರಿಕ ಲೇಖನಗಳು" ಎಂಬ ಟಿಪ್ಪಣಿಯ ರೂಪದ ಗ್ರಂಥದಲ್ಲ ಶಾಸನದ ಇಲಾಖೆ, ಪ್ರಾಚ್ಯ ಪುಸ್ತಕಾಲಯ, ಸಕಲ ವಿದ್ಯಾನಿಲಯದ ಪುಸ್ತಕ ಭಂಡಾರ ಶ್ರೀ ಮನ್ಮಹಾರಾಜರವರ ಘನಪಾಠಶಾಲೆಯಲ್ಲಿ (ಕಾಲೇಜು) ಪುಸ್ತಕ ಭಂಡಾರ ಮುಂತಾದವುಗಳಿಂದ ಸಂಗ್ರಹಿಸಿದ ಅನೇಕ ವಿಷಯಗಳನ್ನು ಪ್ರಕಟಿಸುತ್ತಾ ಇದೆ. ಹೀಗೆ ಯಾವ ಅಭಿಮಾನಕ್ಕೂ ಬೀಳದೆ ಇದ್ದುದನ್ನು ಇದ್ದಹಾಗೆ ಪ್ರಕಟಿಸಿ ಸಮಾಜವು ಸಹಜವಾದ ನಿಜಸ್ಥಿತಿಯನ್ನು ತಿಳಿಯಲೆಂದು ಬಹಳ ಸಾಹಸವನ್ನು ಮಾಡುತ್ತಾ ಇದೆ. ಇಂತಹ ಸೇವೆಯನ್ನು ನಿರ್ಲಕ್ಷ್ಯ ಮಾಡಿದರೆ ಪರಿಣಾಮವು ಹೇಗೆ ಆಗುವುದೆಂಬುದನ್ನು ಸಮಾಜವು ಯೋಚಿಸಲೇಬೇಕಾಗುವುದು. ಸಮಾಜದಿಂದ ಧನವನ್ನು ಪಡೆಯಬೇಕೆಂಬ ಉದ್ದೇಶದಿಂದ ಈ ಪತ್ರಿಕೆಯು ಪ್ರಕಟವಾಗುತ್ತಿಲ್ಲ. ನಿಜವಾದ ಪ್ರಕಟನೆಗೆ ಸಮಾಜವು ಅವಕಾಶಕೊಟ್ಟು ತಾನೇ ಪ್ರಕಟಿಸಲಿ ಎಂಬ ಉದ್ದೇಶದಿಂದ ಈ ಲೇಖನವು ಹೊರ ಬಿದ್ದಿದೆ. ಇಂತಹ ಪತ್ರಿಕೆಯ ಪ್ರಚಾರವನ್ನು ಮುಂದುವರಿಸುವುದು ಆವಶ್ಯಕವೆಂಬು ದನ್ನು ಸಮಾಜವವರು ನಿರ್ಧರಿಸುವವರಾಗಲಿ.

(ಸಂ. ೧೩೬)

# ವಾಚಕ ಮಹಾಶಯರಲ್ಲಿ ವಿನಯಾರ್ಥಿಗಳು*

ಈ ಮಾಸಪತ್ರಿಕೆಯು ಕಳೆದ ಸಂಚಿಕೆಯು (೧೩೬ನೆಯದು) ಪ್ರಕಟವಾಗುವುದಕ್ಕೆ ಸಾವಕಾಶವಾದ ಕಾರಣವನ್ನು ತಮ್ಮ ಮುಂದೆ ಇಟ್ಟಿರುವುದು ಸರಿಯಷ್ಟೆ. ಸುಮಾರು ೧ ವರ್ಷ ೪ ತಿಂಗಳಕಾಲ ಶಿರಾಳಕೊಪ್ಪದಲ್ಲಿ ಇದ್ದುದರಿಂದ ಅಲ್ಲಿ ಪ್ರಕಾಶಪಡಿಸಲು ತಕ್ಕ ಅನುಕೂಲ ದೊರಕದೆ ಪ್ರಕಾಶಕನಿಗೆ ವ್ಯಸನವೂ ಪತ್ರಿಕೆಗೆ ಅಜ್ಞಾತವಾಸವೂ ಪ್ರಾಪ್ತವಾಗಿದ್ದಿತು.

ಈ ಅಜ್ಞಾತವಾಸ ಕಾಲದಲ್ಲಿ ಪ್ರಕಾಶಕನು "ಶೂನ್ಯ ಸಂಪಾದನೆಯ ಅನುವಾದ" ಮುಂತಾದ ಕೆಲಸಗಳಲ್ಲಿ ತೊಡಗಿದ್ದನು. ಇದಲ್ಲದೆ ವೀರಶೈವರಿಗೆ ಅವರ ಧಾರ್ಮಿಕಾಭಿಪ್ರಾಯದ ಶಿವಾದ್ವೈತ ತತ್ವಗಳಿಗೆ ಅನುಸಾರವಾಗುವಂತೆ ಲಿಂಗಪೂಜೆ ಮಾಡುವ ವಿಧಾನ, ಲಿಂಗಾನುಸಂಧಾನ ಮುಂತಾದವುಗಳಲ್ಲಿ ಯಾವುದು ಉತ್ತಮ ಮಾರ್ಗವೆಂದು ಯೋಚಿಸುವವನೂ, ಅನುಸಂಧಾನದ ಸಾಧನೆಗಳನ್ನು ಮಾಡುವವನೂ ಆಗಿದ್ದನು. ಗೌತಮ ಬುದ್ಧನು ೧೨ ವರ್ಷಗಳ ಕಾಲ ಯೋಚಿಸಿ ಸಮಾಜವನ್ನು ಏರ್ಪಡಿಸಲು ಕೆಲವು ಸಂಗತಿಗಳನ್ನು ನಿರ್ಧಾರ ಮಾಡಿ ಮುಂದೆ ಆ ಸಮಾಜರಚನೆ ಮಾಡಿ ಪ್ರಖ್ಯಾತನಾದನು. ಆ ಮಹನೀಯನಷ್ಟು ದೊಡ್ಡ ಕೆಲಸವನ್ನು ಮಾಡದಿದ್ದರೂ ಆತ್ಮನು ಆತ್ಮನನ್ನು ಉದ್ಧರಿಸಬೇಕು (ಉದ್ಧರೇದಾತ್ಮನಾತ್ಮಾನಂ) ಎಂಬ ಉಪದೇಶ ವಾಕ್ಯದಂತೆ ನನ್ನನ್ನು ನಾನು ಉನ್ಮನೀಭಾವಕ್ಕೆ ತರುವುದಕ್ಕೆ ಬಹು ಪ್ರಯತ್ನಪಟ್ಟೆನು. ನನ್ನ ಈ ಕೆಲಸದಲ್ಲಿನ ಹೆಚ್ಚು ಕುಂದುಗಳ ವಿಚಾರಕ್ಕಾಗಿ ಆಗಾಗ ಹಿರೇಕೆರೂರಿನಲ್ಲಿ ಇದ್ದ ಶ್ರೀ ಹಳಕಟ್ಟಿ ಅಂದಾನಪ್ಪ ಶರಣರವರ ದರ್ಶನವನ್ನು ಪಡೆಯುತ್ತಿದ್ದೆನು. ಆ ಶರಣರು ಶಿವಾನುಭಾವದ ನಡೆ, ಲಿಂಗಪೂಜಾ ವಿಧಾನ ಮುಂತಾದುವುಗಳ ವಿಷಯಗಳಲ್ಲಿ ಸಾಧನೆ ಪ್ರಯತ್ನವನ್ನು ಬಹಳವಾಗಿ ಮಾಡಿ ಆತ್ಯಾನಂದವನ್ನು ಪಡೆಯುತ್ತಿರುವವರಾಗಿದ್ದರು. ಅವರು ನನ್ನ ಲಿಂಗಪೂಜೆಯ ಮಾರ್ಗ, ಮಂತ್ರ ಸಂಬಂಧದ ವಿಷಯಶೋಧನೆ ಮುಂತಾದುವುಗಳನ್ನು ತಿಳಿದು ತಮ್ಮ ಸಲಹೆಯನ್ನು ಕೊಡುತ್ತಾ ಇಬ್ಬರೂ ಒಂದೇ ವಿಧವಾದ ಲಿಂಗಪೂಜಾಕ್ರಮ ಮುಂತಾದುವನ್ನು ಇಟ್ಟುಕೊಂಡುದಾಗಿತ್ತು. ನಾನು ಹುಬ್ಬಳ್ಳಿಗೆ ಹೋಗಿ ಕೆಲವು ದಿನಗಳ ಕಾಲ ಕಳೆಯುತ್ತಿರುವಲ್ಲಿ ದೈವವಶಾತ್ ಆ ಶರಣರು ಶಿವಾಧೀನರಾದುದನ್ನು ತಿಳಿದು ಅವರಿಂದ ಸಮಾಜಕ್ಕೆ ಬಹಳ ಹಿತವಾಗುವುದು ತಪ್ಪಿತಲ್ಲಾ ಎಂದು ಬಹಳ ಚಿಂತೆಗೆ ಒಳಗಾದೆನು. ಈಗ ನಮ್ಮಿಬ್ಬರ ಒಡನಾಟದ ಶೋಧನೆ ಕ್ರಮದಿಂದಲೇ ಲಿಂಗಪೂಜೆಯಲ್ಲಿ ಶಿವಶಕ್ತಿಗಳ ಸಂಬಂಧ, ಭಸ್ಮ ರುದ್ರಾಕ್ಷಧಾರಣ ಮಂತ್ರ ಸಂಬಂಧ, ಇಷ್ಟ ಪ್ರಾಣ ಭಾವ ಲಿಂಗಗಳ ಪ್ರತ್ಯೇಕ ಭಾವ ಮತ್ತು ಸಮರಸ, ಗುರುಲಿಂಗ ಜಂಗಮಾಚರಣೆಯ ಸಂಬಂಧ ಸ್ವಯಚರ ಪರಜಂಗಮದ ನಿಲುಕಡೆಯ ಪರಿಣಾಮ

* ಸಂ. ೧೩೭

ಮುಂತಾದ ವಿಷಯಗಳೊಡನೆ ಕೂಡಿದ ಲಿಂಗಪೂಜಾ ವಿಧಾನವನ್ನು ಆಚರಣೆಯಲ್ಲಿ ಇಟ್ಟುಕೊಂಡಿದ್ದೇನೆ.

ಈ ಕ್ರಮದ ಲಿಂಗಪೂಜೆಯ ವಿಧಾನದ ಪುಸ್ತಕವೊಂದನ್ನು ಪ್ರಕಟಿಸಬೇಕೆಂಬ ಪ್ರಯತ್ನದಲ್ಲಿ ಇದ್ದೇನೆ. ಈ ನನ್ನ ಅಜ್ಞಾತವಾಸದ ಪ್ರಯೋಜನವು ಸಮಾಜಕ್ಕೆ ಯುಕ್ತವಾಗಿ ಕಂಡು ಬಂದರೆ ಅದು ನನ್ನ ಶಿವನ ಸೇವೆಯ ಫಲವೆಂದು ತಿಳಿಯುತ್ತೇನೆ ನನಗೆ ಕಣ್ಣು ಮಂಜು ಬಂದು, ಪ್ರವಾಸಕ್ಕೆ ಹೊರಡಲು ಅನನುಕೂಲವೂ ಒದಗಿದೆ. ನಾನು ಸಮಾಜದಲ್ಲಿ ಸೇರಿ ನನ್ನ ಪ್ರಯತ್ನದ ವಿಶೇಷ ಸಂಗತಿಗಳನ್ನು ಅವರಲ್ಲಿ ಬಿನ್ನವಿಸಿ ಕೊಳ್ಳಬೇಕು; ಇಲ್ಲವೆ ಅವರು ವಿಚಾರ ವಿಮರ್ಶೆಯಿಂದ ನನ್ನಿಂದ ವಿಷಯವನ್ನು ಗ್ರಹಿಸಿ ಕೊಳ್ಳಬೇಕು. ಈ ಎರಡರಲ್ಲಿ ಒಂದು ವಿಧದಿಂದ ಒಬ್ಬ ತಿಳುವಳಿಕೆ ಮತ್ತೊಬ್ಬರಲ್ಲಿ ವ್ಯಾಪಿಸಬೇಕಾಗಿದೆ. ಹಾಗೆ ವಿಮರ್ಶೆ ಮಾಡಿ ಸಾಧಿಸುವುದರಿಂದ ಬರಿ ಪುಸ್ತಕವನ್ನೋದಿ ಮಾಡುವ ಶಿವಪೂಜೆಗಿಂತಲೂ ಸಂಸ್ಕೃತಿಯ ಸಾಧನೆಯಿಂದ ಹೆಚ್ಚಿನ ಪ್ರಯೋಜನವು ದೊರಕುತ್ತದೆ. ಒಟ್ಟಿನಲ್ಲಿ ಶಿವಾನುಭಾವದ ನಡೆವಳಿ, ಶಿವಪೂಜೆ, ಶಿವಮಂತ್ರ ಜಪ, ಶಿವಪ್ರಸಾದ ಸೇವನೆ ಶಿವಪಾದೋದಕಾಮೃತ ಸ್ವೀಕಾರ ಮುಂತಾದ ಶ್ರೇಷ್ಠ ಆಚರಣೆಯು ಸರ್ವರಲ್ಲಿಯೂ ವ್ಯಾಪಿಸಿ ಸರ್ವರೂ ಉದ್ಧಾರವಾಗಲಿ ಎಂಬ ಹಿರಿಯ ಬಯಕೆಯು ಈ ಬಡ ಸೇವಕನಿಗೆ ಇದೆ ಎಂಬುದು ಸರ್ವರಿಗೂ ವಿದಿತವಾಗಿರಲಿ.

—ಪ್ರಕಾಶಕ

# ಶಿವಾಗಮಗಳನ್ನು ಪ್ರಕಟಿಸುವುದು

ಯಾವ ಜನಾಂಗವೇ ಆಗಲಿ ತನ್ನ ಧಾರ್ಮಿಕ ವಿಷಯಗಳನ್ನು ಸಕಲರೂ ತಿಳಿಯು ವಂತೆ ಗ್ರಂಥಗಳ ರೂಪವಾಗಿ ಪ್ರಕಟಿಸಿನ ವಿನಾ ಅದರ ನಿಜ ತತ್ವಗಳು ಹೊರಬೀಳುವು ದಿಲ್ಲ. ವೀರಶೈವರಲ್ಲಿ ಇಂಥಾ ಪ್ರಕಟನೆಗಳಿಲ್ಲದೆ ಇರುವದರಿಂದಲೇ ಧಾರ್ಮಿಕ ಸಂಬಂಧದಲ್ಲಿ ಅನೈಕಮತ್ಯತೆಯುಂಟಾಗಿರುವುದು. ವೀರಶೈವರು ತಮ್ಮ ಧರ್ಮವು ಕಾಮಿಕಾದಿ ವಾತೂಲಾಂತವಾದ ಇಪ್ಪತ್ತೆಂಟು ಶಿವಾಗಮಗಳಲ್ಲಿ ಹೇಳಲ್ಪಟ್ಟಿರುವುದಾಗಿ ಈಚೆಗೆ ರಚಿಸಲ್ಪಟ್ಟ ಸಂಗ್ರಹ ಗ್ರಂಥಗಳಿಂದ ತಿಳಿಯುತ್ತಾರೆ. ಆದರೆ ಈ ಆಗಮಗಳು ಎಲ್ಲಿವೆ? ಅವುಗಳಲ್ಲಿ ವೀರಶೈವ ಧರ್ಮವು ಏನು ಹೇಳಲ್ಪಟ್ಟಿರುವುದು? ಅವುಗಳನ್ನು ಪರಿಶೋಧಿಸಿ ನೋಡಬೇಕು, ಎಂಬ ಯೋಚನೆಯುಳ್ಳವರು ಬಹು ವಿರಳರೆಂದು ಯೋಚಿಸಬೇಕಾಗಿದೆ.

ಕಾಶ್ಮೀರದ ಸರಕಾರದವರು ಕೆಲವು ಆಗಮಗಳನ್ನು ಪ್ರಕಟಿಸುತ್ತಿರುವರು. ಇವ ರಲ್ಲಿ ಶಿವಾಗಮಗಳುಂಟೇ ಎಂಬುದನ್ನು ಪರಿಶೋಧಿಸಬೇಕಾಗಿದೆ. ಮತ್ತು ಬಂಗಾಳಾ ರಾಯಲ್ ಏಷ್ಯಾಟಿಕ್ ಸೊಸೈಟಿಯ ಪ್ರಧಾನ ಸದಸ್ಯರೂ ಅಧಿಕಾರಿಗಳೂ ಆಗಿದ್ದ ಮಹಾ ಮಹೋಪಾಧ್ಯಾಯ ಹರಿಪ್ರಸಾದ ಶಾಸ್ತ್ರಿ M.A., D.Lit., I.C.E. ಯವರು ನೇಪಾಳದಲ್ಲಿ ಶಿವಾಗಮ ಗ್ರಂಥಗಳು ಅಖಂಡವಾಗಿರುವವೆಂದು ಬರೆದಿರುತ್ತಾರೆ. ಆಗಮ ಸ್ವರೂಪ ದೇಶ ಕಾಲ ಇವುಗಳ ವಿಚಾರಗಳಿಂದ ಭಾರತೀಯರ ಸಂಶೋಧನ ಕಾರ್ಯ ಗಳಿಗೆ, ತುಂಬಾ ಸಹಾಯವಿರುವದಾಗಿ ತಿಳಿಯ ಬಂದಿದೆ. ಈ ಆಗಮಗಳಲ್ಲಿ ಒಂದು ಬಾಲ್ಕ (ಬ್ಯಾಕ್ಟ್ರಿಯಾ=ಅಫಗಾಣಿಸ್ತಾನದ) ಪ್ರಾಂತದಿಂದ ನೇಪಾಳಕ್ಕೆ ಬಂದಿದೆಯಂತೆ ಇವುಗಳನ್ನು ವೀರಶೈವರು ಬರೆದು ತರಿಸುವುದಕ್ಕೆ ಪ್ರಯತ್ನ ಮಾಡುವುದು ಅತ್ಯವಶ್ಯಕ ವಾಗಿರುತ್ತದೆ.

ಪೂರ್ವಿಕ ಮಹನೀಯರು ಅಚ್ಚಿನ ಸೌಲಭ್ಯಗಳಿಲ್ಲದ ಕಾಲದಲ್ಲಿ ಬಹು ಕಷ್ಟಪಟ್ಟು ಓಲೆಯುಗರಿಯ ಪ್ರತಿಗಳನ್ನು ಬರೆದು ಅಥವಾ ಬಹಳ ಹಣಕೊಟ್ಟು ಬರೆಸಿ ಗ್ರಂಥಗಳನ್ನು ಪ್ರಚಾರಪಡಿಸುತ್ತಿದ್ದರು. ಈಗಿನ ಮಹನೀಯರು ಇಂಥಾ ಮುಖ್ಯ ಲೇಖನಗಳನ್ನು ಬರೆಯಿಸಿ ಅವುಗಳನ್ನು ಅಚ್ಚುಮಾಡಿಸಿ ಧರ್ಮೋದ್ಧಾರ ಮಾಡುವುದರ ಮೂಲಕ ಶಿವನ ಸೇವೆಯನ್ನು ಮಾಡಿ ಧನ್ಯರಾಗುವುದು ಶ್ರೇಷ್ಠ ಕಾರ್ಯವು.

ಜ್ಞಾನ ಪ್ರಸಾರ ಕಾರ್ಯವು ಶ್ರೇಷ್ಠವಾದ ಧರ್ಮವೆಂದು ಚನ್ನಬಸವಣ್ಣನವರೇ ಮೊದಲಾದ ಶಿವಶರಣರ ಅಭಿಪ್ರಾಯವಿರುವುದು. ವೀರಶೈವರು ಇಂಥಾ ಜ್ಞಾನ ಪ್ರಸಾರಣ ಕಾರ್ಯಕ್ಕೆ ಮುಂದಾಳುಗಳಾಗಿ ಕಾರ್ಯ ನಡೆಸಬಾರದೇ? ವೇದ ಉಪನಿಷತ್ತು ಮೊದಲಾದವುಗಳನ್ನು ಇದುವರೆಗೆ ಮುದ್ರಿಸಿವಂತೆ ಆಗಮಗಳು ಮುದ್ರಿಸಲ್ಪಟ್ಟಿಲ್ಲ.

ಇವು ವೀರಶೈವರ ಹಕ್ಕಿನ ಗ್ರಂಥಗಳಾಗಿ ಪರಿಣಮಿಸಿ ಇವೆ. ತಮ್ಮ ಮೂಲ ಗ್ರಂಥಗಳನ್ನೇ ತಾವು ಪ್ರಕಟಿಸದೆ ಇರುವುದು ವೀರಶೈವರಿಗೆ ಒಂದು ಕೊರತೆಯಲ್ಲವೇ?

ಇಂಥಾ ಮುಖ್ಯ ಕೊರತೆಗಳನ್ನು ಮುಚ್ಚಿಟ್ಟುಕೊಂಡು ಲೌಕಿಕರಲ್ಲಿ ಹೆಮ್ಮೆ ಪಡೆಯಬೇಕೆಂದು ವೀರಶೈವ ಮತವು ಶ್ರೇಷ್ಠವಾದದ್ದೆಂದು ಹೇಳುತ್ತಿರುವವರು, ಆ ಹೇಳಿಕೆಗೆ ಏನು ಪ್ರಮಾಣಗಳನ್ನು ಒದಗಿಸುವರು? ಆದ್ದರಿಂದ ಇದೊಂದು ಮುಖ್ಯ ಕಾರ್ಯವೆಂದು ಮೊದಲು ನಡೆಸಬೇಕಾಗಿದೆ.

ವೀರಶೈವವು ಜಗತ್ತಿಗೆಲ್ಲಾ ಬೇಕಾದ ಧರ್ಮವಾದಾಗ್ಯೂ ಇಂಥಾ ಪ್ರಕಟನೆಗಳು ಇಲ್ಲದ್ದರಿಂದ ಒಂದು ವಿಶಿಷ್ಟ (ಕೆಲವರಿಗೆ ಬೇಕಾದ) ಮತವಾಗಿ ಪರಿಣಮಿಸಿ ಇದೆ. ಈ ಕೊರತೆಯನ್ನು ಪರಿಹಾರಮಾಡಲು ಮಹನೀಯರು ಈಗಲೇ ಯತ್ನಿಸಬಾರದೇ?

(ಸಂ. ೨೦-೨೧)

# ಶಿವಯೋಗ ಮಂದಿರದ ಶಿವರಾತ್ರಿಯ ಯಾತ್ರಾ ಮಹೋತ್ಸವ

ಈ ಧಾತುನಾಮ ಸಂ। ರ ಮಾಘ ಬ. ೧೪ (೧೧-೩-೩೭) ಮೊದಲ್ಗೊಂಡು ೩ ದಿನಗಳವರೆವಿಗೂ ಮಹಾಶಿವರಾತ್ರಿಯ ಉತ್ಸವವು ನಡೆಯಿತು. ಪದ್ಧತಿಯಂತೆ ಶಿವರಾತ್ರಿಯ ದಿವಸ ಜಂಗಮ ಮಹಾಪೂಜೆಯೂ ಕೀರ್ತನೆಗಳೂ ಮನೋಹರವಾಗಿ ನಡೆಸಲ್ಪಟ್ಟವು. ಮಾರನೆಯ ದಿವಸ ಶಿವಯೋಗ ಸಾಧಕರ ಆಸನ ಪ್ರದರ್ಶನವು ನಡೆದು ಮಧ್ಯಾಹ್ನ ಶ್ರೀ ನಿ. ಗವಿಮಠದ ಬಸವಲಿಂಗ ದೇಶಿಕರವರ ಒಳ್ಳೆಯ ಹುರುಪಿನ ಭಾಷಣ, ಶಿವಯೋಗ ಮಂದಿರದ ವಟುಗಳ ಭಾಷಣ ಮುಂತಾದವುಗಳ ಮೂಲಕ ಸಭಾಕಾರ್ಯವು ಗಜೇಂದ್ರಗಡದ ನಿ. ಪ್ರ. ಸಿದ್ಧರಾಮಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆದಿದ್ದಿತು. ರಥೋತ್ಸವವೂ ಮಹಾ ವೈಭವದಿಂದ ನಡೆಯಿತು.

ರಾತ್ರಿ ಹಾನಗಲ್ಲ ಶ್ರೀಗಳವರ ಗದ್ದುಗೆಯ ಮುಂಭಾಗದಲ್ಲಿ ಬೆಂಗಳೂರಿನ ಸರ್ಪಭೂಷಣ ಶಿವಯೋಗೀಶ್ವರ ಮಠದ ಅಧಿಕಾರಿಗಳಾದ ಶ್ರೀ ಮಹಾದೇವ ಸ್ವಾಮಿಗಳವರ ಶಿಷ್ಯರೂ ವೀರಶೈವ ಸೇವಾದಲದ ಕಾರ್ಯದರ್ಶಿಗಳೂ ಆದ ಕನ್ನಡ ಜಟ್ಟಿಗಳೆಂದು ಪ್ರಸಿದ್ಧಿ ಹೊಂದಿದ ಪ್ರೊ. ಬಸವರಾಜ ಇವರು ಕೆಲವು ಆಶ್ಚರ್ಯಕರವಾದ ವ್ಯಾಯಾಮ ಸಾಧನೆಗಳನ್ನು ಮಾಡಿ ತೋರಿಸಿದುದಲ್ಲದೆ ಈ ಸಾಧನೆಯನ್ನು ಗಂಡಸರು, ಹೆಂಗಸರೂ, ಹುಡುಗರೂ, ಹುಡಿಗೆಯರು ಸಹ ಮಾಡಬಹುದೆಂದೂ ಇದೂ ದೇಹಾರೋಗ್ಯ, ಬಲ, ಮುಂತಾದವುಗಳನ್ನು ಹೆಚ್ಚಿಸುವುದೆಂದೂ ಭಾಷಣ ಮಾಡಿದರು. ಇವರು ಕಬ್ಬಿಣದ ಸರಳುಗಳನ್ನು ಬಗ್ಗಿಸುವುದನ್ನು ನೋಡಿದರೆ ದೇಹವು ಉಕ್ಕಿನಿಂದ ಮಾಡಲ್ಪಟ್ಟಿದೆಯೋ ಎಂಬಂತೆ ತೋರುತ್ತಿದ್ದಿತು. ಗುಳೇದಗುಡ್ಡದ ದತ್ತಾತ್ರಯ ವ್ಯಾಯಾಮ ಮಂಡಲದವರೂ ಅನೇಕ ಸಾಧನೆಮಾಡಿ ವ್ಯಾಯಾಮದ ಪ್ರಯೋಜನವನ್ನು ತೋರಿಸಿ ಕೊಟ್ಟರು. ಒಬ್ಬ ಎಂಟು ವರ್ಷದ ಬಾಲಕನು ತನಗೆ ಎಲವುಗಳೇ ಇಲ್ಲ ಎಂಬಷ್ಟು ಯೋಚನೆ ಬರುವಂತೆ ಮಣಿದು ತೋರಿಸಿದನು. ಇವನಿಗೆ ಹಾವೇರಿ ಶ್ರೀಗಳು ಹಾಳಕೇರಿ ಶ್ರೀ ಶ್ರೀ ಗಳು ಹಾನಗಲ್ ಶ್ರೀ ಶ್ರೀ ಮೊದಲಾದವರು ಪ್ರತ್ಯೇಕ ಪ್ರತ್ಯೇಕವಾಗಿ ಬಹುಮಾನವನ್ನು ಕೊಟ್ಟರು.

ಕೆಲವರು ಯಾತ್ರೆಗಳಲ್ಲಿ ಕುಸ್ತಿಯನ್ನು ಆಡಿಸುತ್ತಾರೆ. ಅದು ಪೂರ್ವಕಾಲದ ಮಲ್ಲಯುದ್ಧವು. ಒಬ್ಬರಿಗೊಬ್ಬರು ತಿಕ್ಕಾಡಿ ಹೊಸೆದಾಡಿ ತುಳಿದಾಡಿ ಒದೆದಾಡಿ ದೇಹದ ಬಲವನ್ನು ಬೆಳೆಸುವ ಸಾಧನವದು. ಪೂರ್ವದ ಕೆಲವು ಯುದ್ಧಗಳಲ್ಲಿ ಆ ಮೂಲಕ ಜಯಾಪಜಯಗಳನ್ನು ನಿಶ್ಚಯಿಸುತ್ತಿದ್ದರು. ಈಗಿನ ಕಾಲದಲ್ಲಿ

ಯುದ್ಧಕ್ಕೆ ಆ ಕುಸ್ತಿಯು ಬೇಕಾಗಿಲ್ಲ. ಈಗಿನ ಯುದ್ಧವು ವಿಮಾನದಿಂದ ಬಾಂಬು ಗಳನ್ನು ಎಸೆಯುವುದರವರೆಗೂ ಏರಿಹೋಗಿದೆ.

ಈ ವ್ಯಾಯಾಮಪಟುಗಳಂತೆ ಪ್ರತಿಯೊಬ್ಬರೂ ಸಾಧನೆಮಾಡಿ ತಮ್ಮ ತಮ್ಮ ಬಲವನ್ನೂ ಆರೋಗ್ಯವನ್ನೂ ಹೆಚ್ಚಿಸಿಕೊಂಡರೆ ಮುಂದೆ ಯಾವ ವಿಧವಾದ ಯುದ್ಧ ವಿದ್ಯೆಯನ್ನಾದರೂ ಕಲಿಯಲಿಕ್ಕೆ ಇದು ಅಡಿಗಲ್ಲಾಗಿ ಪರಿಣಮಿಸುತ್ತದೆ. ಆದುದ ರಿಂದ ಇಂಥ ವ್ಯಾಯಾಮಶಾಲೆಗಳು ಪ್ರತಿಯೊಂದು ಊರಿನಲ್ಲಿಯೂ ಇದ್ದು ಅಲ್ಲಿ ಪ್ರತಿಯೊಬ್ಬರೂ ವ್ಯಾಯಾಮ ಶಾಲೆಯಲ್ಲಿ ಸಾಧನ ಮಾಡಿಯೇ ತೀರಬೇಕೆಂಬ ನಿರ್ಬಂಧವನ್ನು ಇಟ್ಟುಕೊಂಡಿರುವುದು ಉತ್ತಮ.

ಕೆಲವರು ವೀರಶೈವರು ಕುಸ್ತಿ ಆಡಿಸುವುದರಲ್ಲಿ ಬಹಳ ಪ್ರೇಮವುಳ್ಳವರಾಗಿ ರುತ್ತಾರೆ. ಇದಕ್ಕಾಗಿ ಸಾವಿರಾರು ರೂಪಾಯಿಗಳನ್ನು ಪ್ರತಿವರ್ಷವೂ ಖರ್ಚು ಮಾಡುತ್ತಾರೆ. ಅದೆಲ್ಲವೂ ಒಂದೆರಡು ದಿನಗಳ ಮೋಜಿಗಾಗಿ ತಾವು ಮಾತ್ರ ಯಾವ ಸಾಧನೆಯನ್ನೂ ಮಾಡುವುದಿಲ್ಲ. ಅದು ಯೋಗ್ಯವಲ್ಲ. ಪ್ರತಿಯೊಂದು ಕಡೆಯ ಲ್ಲಿಯೂ ವೀರಶೈವರ ಬಲ ಮತ್ತು ಆರೋಗ್ಯ ವರ್ಧನೆಗಾಗಿ ವ್ಯಾಯಾಮ ಮಂದಿರ ವನ್ನು ಸ್ಥಾಪಿಸಿದರೆ ಅಂಥವರು ವೀರಶೈವ ಸಮಾಜಕ್ಕೆ ಶಾಶ್ವತವಾದ ಉಪಕಾರ ವನ್ನು ಮಾಡಿದಂತೆ ಆಗುತ್ತದೆ. ಇಂತಹ ವ್ಯಾಯಾಮ ಪಟುಗಳಿಗೆ ಬಹುಮಾನ ಕೊಡುವ ಪದ್ಧತಿಯನ್ನೇ ಇನ್ನು ಮುಂದೆ ಎಲ್ಲ ಯಾತ್ರೆಗಳಲ್ಲಿಯೂ ಉತ್ಸವಗಳಲ್ಲಿಯೂ ಹಬ್ಬಗಳಲ್ಲಿಯೂ ಅನುಸರಿಸುವದು ಉತ್ತಮ. ಇದರಿಂದ ವ್ಯಾಯಾಮದ ಬೆಳ ವಣಿಗೆಗೆ ಹೆಚ್ಚು ಪ್ರೋತ್ಸಾಹವನ್ನು ಕೊಟ್ಟಂತೆ ಆಗುತ್ತದೆ. "ಅಹಿಂಸಾ ಪರಮೋ ಧರ್ಮ:" ಎಂಬ ವಾಕ್ಯವನ್ನು ಅಕ್ಷರಶಃ ಪಾಲಿಸತಕ್ಕ ವೀರಶೈವರಿಗೆ ಯುದ್ಧ ವಿದ್ಯೆಯು ಏಕೆ ಬೇಕೆಂದು ಕೆಲವರು ಕೇಳಬಹುದು. ವೀರಶೈವರು ಧರ್ಮ ಸಂಸ್ಥಾ ಪನೆಯಲ್ಲಿ ಅಗ್ರಗಣ್ಯರು. ಧರ್ಮಕ್ಕೆ ದ್ರೋಹ ಬರುವಂತಹ ಸಂದರ್ಭದಲ್ಲಿ ಯುದ್ಧ ವನ್ನು ಮಾಡಿಯಾದರೂ ಧರ್ಮವನ್ನು ರಕ್ಷಿಸುವ ಕರ್ತವ್ಯವು ಅವರಿಗೆ ಇರುತ್ತದೆ. ಈ ದೆಸೆಯಿಂದಲೇ ಅವರಲ್ಲಿ ಗಣಾಚಾರ ಎಂಬ ಪದ್ಧತಿಯು ನೆಲೆಗೊಂಡಿರುತ್ತದೆ.

ಈ ಯಾತ್ರೆಯ ವಿಶೇಷ ಸಂಗತಿಗಳೇ ಮೂರನೆಯ ದಿನ ನಡೆದ ಕಾರ್ಯಗಳು. ಮ॥ ರಾ॥ ಪಂಡಿತಪ್ಪನವರು ಚಿಕ್ಕೋಡಿ (ಬೆಳಗಾವ ವಾಸಿ) ಇವರು ಸಭೆಯ ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು. ಇವರ ಅಧ್ಯಕ್ಷತೆಯಲ್ಲಿ ನಡೆದ ಭಾಷಣಗಳಲ್ಲಿ ನಾದ ಗಡ ಶ್ರೀ ಶ್ರೀ ಗಳ ಭಾಷಣವು ಗುರುವರ್ಗ ವಿರಕ್ತವರ್ಗಗಳಿಗೆ ಉದ್ಬೋಧಪರ ವಾಗಿ ಇದ್ದಿತು. ಇವರು ತಮ್ಮ ತಮ್ಮ ಒಡಕುಗಳಲ್ಲಿ ಕಾಲವನ್ನು ಕಳೆಯದೆ ಶಿವಯೋಗ ಮಂದಿರದ ಉದ್ಧಾರ, ಸಮಾಜದ ಉದ್ಧಾರ ಈ ಕಡೆಗೆ ಹೆಚ್ಚು ಗಮನವನ್ನು ಕೊಡಬೇಕೆಂದು ಸರಸವಾಗಿ ಭಾಷಣಮಾಡಿದರು. ಶ್ರೀ ಸುಬುದ್ಧಿ ಯವರು ಹೀರೆಮಠ ಬೆಳಗಾವ ಕಾಲೇಜಿನ ಬಿ. ಎ. ವಿದ್ಯಾರ್ಥಿ ಇವರು ವೀರಶೈವ ಸಮಾಜದಲ್ಲಿನ ನ್ಯೂನತೆಗಳ ವಿಷಯದಲ್ಲಿ ಬಹಳ ಚೆನ್ನಾಗಿ ಮಾತನಾಡಿದರು. ಅರ್ಧ

ಸಮಾಜ, ಕ್ರೈಸ್ತರು, ಮಹಮ್ಮದೀಯರು ಮುಂತಾದವರಿಂದ ವೀರಶೈವರು ವಿಧರ್ಮಿಗಳಾಗಿ ಮಾಡಲ್ಪಡುವ ಅಂಶವನ್ನೂ ಅವರು ತಮ್ಮ ಸಮಾಜವನ್ನು ಎಷ್ಟು ಚುರುಕಾಗಿ ಬೆಳೆಸುತ್ತಿರುವರೆಂಬುದನ್ನೂ ವೀರಶೈವ ಸಮಾಜವು ಐಕಮತ್ಯವಿಲ್ಲದೆ ಅನುಭವಿಸುತ್ತಿರುವ ತೊಂದರೆಗಳನ್ನೂ ಧಾರ್ಮಿಕ ದೃಷ್ಟಿಯು ಇವರಲ್ಲಿ ಕಡಿಮೆಯಾಗಿದೆ ಎಂಬ ಅಂಶವನ್ನೂ ವಿಶದವಾಗಿ ಹೇಳಿದರು. ಶಿವೈಕ್ಯರಾದ ಹಾನಗಲ್ಲ ಶ್ರೀ ಶ್ರೀ ಗಳವರ ಗದ್ದುಗೆಯ ಕಟ್ಟಡಕ್ಕೆ ಸಹಾಯ ಮಾಡಬೇಕೆಂದು ಮ। ರಾ। ಬಾಗಲಕೋಟಿ ಸೋಮಲಿಂಗಪ್ಪನವರು ಭಾಷಣ ಮಾಡಲು ಅನೇಕರು ಆಗಲೇ ಹಣವನ್ನುಕೊಟ್ಟರು. (ಇದೊಂದು ಮುಖ್ಯ ಕೆಲಸವು ವೀರಶೈವರಿಂದ ತೀವ್ರವಾಗಿ ಆಗತಕ್ಕದ್ದಿದೆ. ಪ್ರಕಾಶಕ.) ಆಮೇಲೆ ಈ ಯಾತ್ರೆಗೆ ಸಹಾಯ ಮಾಡಿದವರ ಆಭಾರ ಮನ್ನಿಸಿದ ನಂತರ ಅಧ್ಯಕ್ಷರು ತಮ್ಮ ಸಮಾರೋಪದ ಭಾಷಣದಲ್ಲಿ ರಾಜಕೀಯಕ್ಕೂ ಧಾರ್ಮಿಕಕ್ಕೂ ನಿಕಟ ಸಂಬಂಧವಿರುವುದಾಗಿಯೂ ವೀರಶೈವರು ಪುರುಷವರ್ಗವನ್ನೂ ಸ್ತ್ರೀ ವರ್ಗವನ್ನೂ ಸಹಾ ಸುಧಾರಿಸುವುದಕ್ಕೆ ತಕ್ಕಷ್ಟು ಪ್ರಯತ್ನವನ್ನು ಮಾಡಬೇಕೆಂತಲೂ ಧಾರ್ಮಿಕ ಪ್ರಚಾರಕ್ಕಾಗಿ ವರ್ತಮಾನ ಪತ್ರಿಕೆಗಳೇ ಮೊದಲಾದವು ಇನ್ನೂ ಹೆಚ್ಚಾಗಿ ಬೆಳೆಯಬೇಕೆಂತಲೂ ಅವುಗಳಲ್ಲಿ ಹಿಂದಿನ ಪುಸ್ತಕಗಳನ್ನು ಮುದ್ರಣಮಾಡುವ ಕೆಲಸ ಮಾತ್ರವಲ್ಲದೆ ಇತರ ಧರ್ಮ ತತ್ವಗಳ ಮತ್ತು ವೀರಶೈವ ತತ್ವದ ತುಲನಾತ್ಮಕ ದೃಷ್ಟಿಯಿಂದ ಲೇಖಗಳು ಹೆಚ್ಚಾಗಿ ಬರೆಯಬೇಕೆಂತಲೂ ವೀರಶೈವ ಧರ್ಮವು ಉದಾರ ತತ್ವವುಳ್ಳದಾಗಿ ಇರವುದರಿಂದಲೇ ಇದಕ್ಕೆ ಜೈನರು, ಬೌದ್ಧರು, ಶ್ರೀ ಶಂಕರಾಚಾರ್ಯರು ಮೊದಲಾದವರಿಂದ ಅನೇಕ ಅಘಾತಗಳು ಬಂದಿದ್ದರೂ ಲಯವಾಗದೆ ಇನ್ನೂ ಜೀವಿಸಿಗುವುದೆಂತಲೂ ಇದರ ಉನ್ನತಿಗೆ ತಕ್ಕಷ್ಟು ಪ್ರಯತ್ನಗಳು ಮಾಡಲ್ಪಡಬೇಕೆಂದೂ ದೇಶಭಕ್ತರಾದ ತಿಲಕರೇ ಮೊದಲಾದವರು ರಾಜಕಾರಣ ಪಟುಗಳಾಗಿದ್ದರೂ ಭಗವದ್ಗೀತೆಯ ಪ್ರಚಾರವೇ ಮೊದಲಾದ ಧಾರ್ಮಿಕ ಕಾರ್ಯಗಳನ್ನು ನಡೆಸಿದಂತೆ ತಾವೂ ಇನ್ನು ಮೇಲೆ ಧಾರ್ಮಿಕ ಕಾರ್ಯಗಳ ಕಡೆಗೆ ಹೆಚ್ಚು ಲಕ್ಷ್ಯಕೊಡುವುದಾಗಿಯೂ ಮುಂತಾಗಿ ಭಾಷಣ ಮಾಡಿದರು.

ಅನಂತರ ಶ್ರೀ ನಿರಂಜನ ಜಗದ್ಗುರು ಮೂರುಸಾವಿರ ಮಠದ ಶ್ರೀ ಮಹಾಸ್ವಾಮಿಗಳವರು ರಾಜಕೀಯದಲ್ಲಿ ಧಾರ್ಮಿಕವೂ ಸೇರಿರಲೇಬೇಕೆಂದೂ ಗುರುವರ್ಗದವರೂ ಇಂಗ್ಲಿಷನ್ನು ಕಲಿತು ರಾಜಕೀಯ ಸಂಸ್ಥೆಗಳಲ್ಲಿ ಸೇರಿದರೆ ಧಾರ್ಮಿಕ ಕಳೆಯು ಇನ್ನೂ ಹೆಚ್ಚಾಗಿ ಏರುವದೆಂತಲೂ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಸಂಸ್ಕೃತವನ್ನೂ ಚೆನ್ನಾಗಿ ಕಲಿತು ಧಾರ್ಮಿಕ ಗ್ರಂಥಗಳ ಅಭ್ಯಾಸ ಮಾಡಿ ತಕ್ಕ ಆಚಾರವುಳ್ಳವರೊಬ್ಬರಿಗೆ ಹುಬ್ಬಳ್ಳಿಯ ಭಕ್ತರು ಒಪ್ಪುವದಾದರೆ ತಮ್ಮ ಮಠದ ಮುಂದಿನ ಅಧಿಕಾರವನ್ನು ಕೊಡಲಿಕ್ಕೆ ತಮ್ಮ ಒಪ್ಪಿಗೆ ಇರುವುದೆಂತಲೂ ಲೌಕಿಕರಂತೆ ಗುರುವರ್ಗದವರಿಗೆ ಸಂಸಾರದ ತೊಂದರೆಗಳು ಇಲ್ಲವಾದ್ದರಿಂದ ಇವರು ತಾಲ್ಲೂಕು ಬೋರ್ಡ್ ಜಿಲ್ಲಾ ಬೋರ್ಡ್ ಕಾಯಿದೆ ಕೌನ್ಸಿಲ್ ಮೊದಲಾದವುಗಳಲ್ಲಿ ಸೇರಿ ದೇಶ

ಸೇವೆ ಮಾಡುವುದಕ್ಕೆ ಹೆಚ್ಚು ಅವಕಾಶವಿರುವುದೇತಲೂ ಶಿವೈಕ್ಯರಾದ ಹಾನಗಲ್ ಶ್ರೀಗಳ ಧ್ಯೇಯವೂ ಸ್ತ್ರೀಯರ ಸುಧಾರಣೆ, ಅಸ್ಪೃಶ್ಯರ ಉದ್ಧಾರ, ಧಾರ್ಮಿಕ ಗ್ರಂಥಗಳ ಪ್ರಚಾರ ಮೊದಲಾದವುಗಳ ಕಡೆಗೆ ವಿಶೇಷವಾಗಿ ಇದ್ದಿತೆಂತಲೂ ಅವರು ಹಾಕಿದ ತಳಹದಿಯನ್ನು ಅನುಸರಿಸಿ ತಾವು ಮುಂದೂ ಸಮಾಜದ ಸಹಾಯವನ್ನು ಪಡೆದು ಶಿವಯೋಗ ಮಂದಿರದ ಉನ್ನತಿಯ ಕಡೆಗೆ ಗಮನ ಕೊಡುವುದಾಗಿಯೂ ಮುಂತಾಗಿ ಅಪ್ಪಣೆಕೊಟ್ಟರು. ಸಭಾಸದರು ಈ ವಿಷಯವನ್ನು ಕೇಳಿ ಆನಂದವುಳ್ಳವರಾಗಿ ಆಗಾಗ ಚಪ್ಪಾಳೆಗಳ ಮೂಲಕ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಾ ಇದ್ದರು. ಅನಂತರವೇ ಬಾಗಲಕೋಟೆ ಜಂಗಿನ ಮುರಿಗಯ್ಯನವರು ಈ ಯಾತ್ರೆಯ ಕಾರ್ಯಕ್ಕೆ ಸೇರಿದವರ ಆಭಾರವನ್ನು ಮನ್ನಿಸುತ್ತಾ ವೀರಶೈವರು ಬಹಳ ಹೀನಸ್ಥಿತಿಯಲ್ಲಿ ಇರುವರೆಂದೂ ಅದರಲ್ಲಿಯೂ ಮಹೇಶ್ವರರು ಬಹಳ ಕೊರತೆಯಲ್ಲಿರುವರೆಂದೂ ಲಿಂಗಗಳನ್ನು ಮಾಡುವುದೇ ಮೊದಲಾದ ಸಣ್ಣ ಸಣ್ಣ ಉದ್ಯೋಗಗಳನ್ನು ಕೂಡಾ ಇತರ ಮತದವರ ಪಾಲಿಗೆ ಬಿಟ್ಟು ಕೊಟ್ಟು ಕೇವಲ ಉದರಂಭರಣಕ್ಕಾಗಿ ಭಿಕ್ಷೆ ಬೇಡುವುದರಲ್ಲಿಯೇ ಕಾಲವನ್ನು ಕಳೆಯುತ್ತಿದ್ದಾರೆ ಎಂದೂ ಕೈಗಾರಿಕೆ ವ್ಯಾಪಾರ ಮೊದಲಾದವುಗಳಲ್ಲಿ ವೀರಶೈವರು ಇನ್ನೂ ಅಭಿವೃದ್ಧಿಯಾಗುವುದಕ್ಕೆ ಜಾಗ್ರತೆ ಪ್ರಯತ್ನಪಡಬೇಕೆಂದೂ ಭಾಷಣಮಾಡಿ ಅಧ್ಯಕ್ಷರಾದ ಶ್ರೀಮಾನ್ ಪಂಡಿತಪ್ಪನವರಿಗೆ ಶಿವಯೋಗ ಮಂದಿರದ ಉನ್ನತಿಗಾಗಿ ತಮ್ಮ ಸಾಧ್ಯವಾದ ಯಾವುದಾದರೊಂದು ಕಾರ್ಯವನ್ನು ಮಾಡಬೇಕೆಂದು ಪ್ರಾರ್ಥಿಸಿ ಹೂವಿನಹಾರವನ್ನು ಅರ್ಪಿಸಿದರು. ಅವರು ಈ ಹೂವಿನ ಮಾಲೆಯು ಭಾರವನ್ನು ಹೊರಿಸುವುದೆಂದು ಹೇಳುತ್ತಾ ಅದನ್ನು ಅಂಗೀಕರಿಸಿದರು.

ಹೀಗೆ ಈ ವರ್ಷದ ಜಾತ್ರೆಯು ಬಹಳ ಆನಂದಕರವಾಗಿ ಮುಗಿಯಿತು. ವ್ಯವಸ್ಥೆಯಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ಈ ವರ್ಷ ಜನರು ಹೆಚ್ಚಾಗಿ ಸೇರಿದರು. ಮಹಿಳಾ ಪರಿಷತ್ತೂ ಚೆನ್ನಾಗಿ ನಡೆಯಿತು.

ಈ ಯಾತ್ರೆಯಲ್ಲಿ ನಡೆದ ಕಾರ್ಯಕಲಾಪಗಳಿಂದ ವೀರಶೈವರು ಪ್ರತಿಯೊಂದು ಕಡೆಯಲ್ಲಿಯೂ ಈ ಕೆಳಗೆ ಕಂಡ ವಿಚಾರಗಳಿಗೆ ಹೆಚ್ಚು ಗಮನ ಕೊಟ್ಟು ಕಾರ್ಯ ನಡೆಸಬೇಕೆಂದು ನಿರ್ಧರಿಸುವಂತೆ ಆಗಿದೆ.

೧) ಕೈಗಾರಿಕೆ, ಒಕ್ಕಲತನ, ವ್ಯಾಪಾರ, ಇವುಗಳ ಅಭಿವೃದ್ಧಿಗಾಗಿ ವೀರಶೈವರು ಸಹಕಾರಿಗಳಾಗಿ ಕೆಲಸ ಮಾಡುವಂತೆ ಏರ್ಪಡಿಸುವುದು.

೨) ವೀರಶೈವ ಜನಾಂಗದವರು ಪರಧರ್ಮಕ್ಕೆ ಹೋಗುತ್ತಿದ್ದರೆ, ಅದನ್ನು ತಡೆಯುವುದು.

೩) ವ್ಯಾಯಾಮ ಶಾಲೆಗಳನ್ನು ಸಣ್ಣಹಳ್ಳಿಗಳ ಮೊದಲ್ಗೊಂಡು ದೊಡ್ಡ ಪಟ್ಟಣಗಳಲ್ಲಿ ಸಹಾ ಸ್ಥಾಪಿಸುವುದು.

೪) ಮಠಸ್ಥರು (ಮಹೇಶ್ವರರು) ಶಿಷ್ಯರಿಗೆ ಧರ್ಮಬೋಧೆಯನ್ನು ಮಾಡುವುದಕ್ಕೆ ತಕ್ಕವರಾಗಿರುವಂತೆ ಅವರಿಗೆ ಧಾರ್ಮಿಕ ಶಿಕ್ಷಣ ಕೊಡಿಸುವುದು. ಮತ್ತು ಈಗ ದೊರಕತಕ್ಕ ಯೋಗ್ಯರಾದವರಿಂದ ಶಿವಶರಣರ ವಚನಗಳನ್ನು ಪ್ರತಿ ನಿತ್ಯವೂ ಓದಿಸಿ ಅವುಗಳ ವಿಚಾರವನ್ನು ಸರ್ವರೂ ತಿಳಿದುಕೊಳ್ಳುವಂತೆ ಏರ್ಪಡಿಸುವುದು. ಮತ್ತು ವಿರಕ್ತ ಮಠದಲ್ಲಿ ಇರತಕ್ಕ ಶ್ರೀ ಗಳೂ ಸಹಾ ಪ್ರತಿ ನಿತ್ಯ ೨-೩ ಘಂಟೆಗಳ ಕಾಲ ಶಿವಶರಣರ ವಚನಗಳನ್ನು ವಿವರಿಸುವಂತೆ ಮಾಡುವುದು. ಮತ್ತು ಆಗಾಗ ಧಾರ್ಮಿಕ ಸಂಬಂಧದ ಉಪನ್ಯಾಸಗಳನ್ನು ಏರ್ಪಡಿಸುವುದು.

೫) ಗುರುವರ್ಗ ವಿರಕ್ತವರ್ಗಗಳ ಮಠಗಳಿಗೆ ಅಧಿಕಾರಿಗಳನ್ನು ಹೊಸದಾಗಿ ಮಾಡುವಾಗ ಹಿಂದಿನ ಸ್ವಾಮಿಗಳು ಸಾಕಿದ ಮರಿಗಳಿಗೆ ಅಥವಾ ಯಾರಾದರೊಬ್ಬರಿಗೆ ಆದರೆ ಆಯಿತೆಂದು ಭಾವಿಸದೆ ಮತತತ್ವವನ್ನು ತಿಳಿದು ಧಾರ್ಮಿಕ ಭಾವನೆಯೂ ಆಚಾರವೂ ಜಿತೇಂದ್ರಿಯತ್ವವೂ ನೆಲೆಗೊಂಡ ಬಿ. ಎ. ಮೊದಲಾದ ಆಂಗ್ಲೇಯ ಪದವೀಧರರಿಗೆ ಅಧಿಕಾರವು ದೊರಕುವಂತೆ ಕೆಲವು ಮಠಗಳಲ್ಲಿ ಏರ್ಪಡಿಸಿ ಅದರ ಪರಿಣಾಮವು ಹೇಗಾಗುವುದೆಂದು ಪರೀಕ್ಷಿಸುವುದು.

(ಈಗ ಸಿದ್ಧಗಂಗಾ ಕ್ಷೇತ್ರದ ಮಠಕ್ಕೆ ಅಧಿಕಾರಿಗಳಾದ ಶ್ರೀ ನಿರಂಜನ ಶಿವ ಕುಮಾರಸ್ವಾಮಿಗಳು ಬಿ. ಎ. ಪದವೀಧರರಿದ್ದು, ಅವರು ಮಾಡುವ ಸಮಾಜೋದ್ಧಾರ ಕಾರ್ಯಗಳು ಅತ್ಯುತ್ತಮವಾಗಿದೆ. ಎಂಬ ಉದಾಹರಣೆಯು ದೊರಕಿ ಇರುತ್ತದೆ. ೭೦-೭೫ ವಿದ್ಯಾರ್ಥಿಗಳುಳ್ಳ ಸಂಸ್ಕೃತಶಾಲೆಯನ್ನು ನಡೆಸುತ್ತಿರುವರಲ್ಲದೆ ಅಲ್ಲಲ್ಲಿ ಧಾರ್ಮಿಕ ಸಂಬಂಧವಾದ ಭಾಷಣಗಳನ್ನು ಮಾಡುತ್ತಾ ಅಜ್ಞಾನದೆಸೆಯಲ್ಲಿ ಇರುವ ಜನರನ್ನು ಬಡಿದೆಬ್ಬಿಸುತ್ತಾ ಇದ್ದಾರೆ.)

೬) ಆಂಗ್ಲೇಯ ಭಾಷಾ ಪದವೀಧರರಾದವರೂ ಸಹ ಸರಕಾರಿ ನವಕರರಾಗಬೇಕೆಂಬ ಇಚ್ಛೆಯನ್ನು ಹೊಂದದೆ ಯೋಗ್ಯ ಮಠಾಧಿಪತ್ಯವನ್ನು ಹೊಂದಿಧಾರ್ಮಿಕ ರೂಪವಾಗಿ ಸಮಾಜ ಸೇವೆ ಮಾಡುವುದೂ ಒಂದು ಅವಶ್ಯಕ ಕರ್ತವ್ಯವೆಂದು ಯೋಚಿಸುವುದು.

೭) ವೀರಶೈವ ಮತ ತತ್ವವನ್ನು ಇತರ ಮತ ತತ್ವಗಳೊಂದಿಗೆ ಹೋಲಿಸಿ ಇದರಲ್ಲಿ ಇರುವ ವಿಶೇಷ ಲಕ್ಷಣವನ್ನು ತಿಳಿದುಕೊಳ್ಳುವಂತೆ ಏರ್ಪಡಿಸುವುದು.

೮) ಈ ಕಾಲಕ್ಕೆ ತಕ್ಕಂತೆ ವೀರಶೈವ ಧರ್ಮ ಬೋಧೆಯ ಗ್ರಂಥಗಳನ್ನು ಮುದ್ರಿಸಿ ಪ್ರಚಾರ ಮಾಡುವುದು, ಪೂರ್ವಿಕರ ಗ್ರಂಥಗಳನ್ನು ಮುದ್ರಣ ಮಾಡಿಸುವುದು. ಮತ್ತು ಧಾರ್ಮಿಕ ಗ್ರಂಥಗಳನ್ನು ಓದುವ ಅಭಿರುಚಿಯನ್ನು ಹೆಚ್ಚಿಸುವುದು.

೯) ವೀರಶೈವರು ಒಬ್ಬರಿಗೊಬ್ಬರು ಅಸೂಯೆಪಟ್ಟು ತಮ್ಮ ತಮ್ಮಲ್ಲಿ ಒಡಕುಗಳನ್ನು ಹೆಚ್ಚುಮಾಡಿಕೊಂಡು ತಾವೇ ನಷ್ಟಕಷ್ಟಕ್ಕೆ ಗುರಿಯಾಗಿ ಕಡೆಯಲ್ಲಿ ತಿರಸ್ಕಾರವನ್ನು ಹೊಂದದೆ ಇರುವಂತೆಯೂ ಸಮಾಜವನ್ನು ಸುಧಾರಿಸುವುದಕ್ಕಾಗಿ ಐಕ ಮತ್ಯದಿಂದ ಇರುವಂತೆಯೂ ಪ್ರಯತ್ನಿಸುವುದು.

೧೦) ಶಿವಯೋಗ ಮಂದಿರವು ಇಡೀ ವೀರಶೈವ ಸಮಾಜಕ್ಕೆ ಸೇರಿದುದೆಂದು ಅಭಿಮಾನವನ್ನಿಟ್ಟು ದರವರ್ಷವೂ ಯಾತ್ರೆಗೆ ಬಂದು ಅಲ್ಲಿ ತಮಗೆ ತೋರಿದ ಸಮಾಜ ಸುಧಾರಣೆಯ ಅಂಶಗಳನ್ನು ವಿವರಿಸುವುದು. ಮತ್ತು ಏರ್ಪಡಿಸುವುದು ಮತ್ತು ಶಿವಯೋಗ ಮಂದಿರದಲ್ಲಿರುವ ಸಾಧಕರ ಯೋಗಸಾಧನೆಯು ಪ್ರಾಣಾಯಾಮ ಮುಂತಾದ ಇನ್ನೂ ಹೆಚ್ಚಿನ ಸಾಧನೆಗಳಲ್ಲಿ ಪ್ರವರ್ತಿಸುವಂತೆ ಆಗಲಿಕ್ಕೆ ತಕ್ಕ ಸಹಾಯ ಮಾಡುವುದು.

೧೧) ಶಿವಯೋಗ ಮಂದಿರದಲ್ಲಿ ಅಭ್ಯಾಸಮಾಡಿ ಈಗ ಮಠಾಧಿಕಾರವನ್ನು ಹೊಂದಿರತಕ್ಕ ಪ್ರತಿಯೊಬ್ಬರೂ ಯಾತ್ರೆಯ ಕಾಲದಲ್ಲಿ ಸೇರಿ ತಮ್ಮಿಂದ ಸಮಾಜದ ಉನ್ನತಿ ಮತ್ತು ಶಿವಯೋಗ ಮಂದಿರದ ಉನ್ನತಿ ಇವುಗಳಿಗಾಗಿ ಯಾವ ಯಾವ ಕೆಲಸಗಳನ್ನು ಮಾಡಲಿಕ್ಕೆ ಸಾಧ್ಯವಿದೆಯೋ ಅದನ್ನು ಗೊತ್ತುಮಾಡಿ ಅದರಂತೆ ಕಾರ್ಯನಡೆಸುವುದು. ಮತ್ತು ಶಿವಯೋಗ ಮಂದಿರದ ಚಾಲಕರಿಗೆ ತಮ್ಮ ಸಾಧ್ಯವಾದಷ್ಟು ಸಹಾಯ ಮಾಡುವುದು.

೧೨) ಸಮಾಜ, ಸಮಾಜದ ಉದ್ಧಾರ, ಎಂದು ಕನವರಿಸುತ್ತಾ ಶಿವೈಕ್ಯರಾದ ಹಾನಗಲ್ ಶ್ರೀ ನಿ. ಪ. ಸದಾಶಿವ ಕುಮಾರಸ್ವಾಮಿಗಳವರ ಧ್ಯಾನವನ್ನು ಮಾಡಿ ಸಮಾಜ ಸುಧಾರಣೆಗೆ ಪ್ರಯತ್ನಿಸುವುದು.

(ಯಾತ್ರೆಯನ್ನು ನೋಡಿದವನೊಬ್ಬನು)

(ಸಂ. ೩೯)

# ಕ್ರಿಸ್ತಮತ ಸ್ಥಾಪಕನಾದ ಯೇಸು ಕ್ರಿಸ್ತನು ಮೊದಲು ಶೈವಪಂಥದವನು*

ಪ್ರಖ್ಯಾತ ರಷ್ಯನ್ ಪಂಡಿತರಾದ ಡಾಕ್ಟರ್ ನೋತೋವಿಲ್ ಎಂಬುವವರು ೪೫ ವರ್ಷಗಳ ಕಾಲಶೋಧನೆ ಮಾಡಿ ಯೇಸು ಕ್ರಿಸ್ತನು ತನ್ನ೧೩ನೆಯ ವರ್ಷದಿಂದ ೩೦ನೆಯ ವರ್ಷದವರೆಗೆ ಆರ್ಯಾವರ್ಷ (ಉತ್ತರ ಹಿಂದೂಸ್ಥಾನ) ಟಿಬೆಟ್ ಮತ್ತು ಈ ಪಕ್ಕದ ಪ್ರಾಂತಗಳಲ್ಲಿ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದನೆಂತಲೂ ಇವನು ಎಸ್ಸೆನೆ (Essene) ಪಂಥದವನಾಗಿದ್ದನೆಂತಲೂ ನಿಶ್ಚಯಿಸಿ ಇರುತ್ತಾರೆ.

ಇವರು ಹಿಮೀಸ [ಟಿಬೆಟ್ಟಿನ ಭಾಗ] ಎಂಬಲ್ಲಿಗೆ ಹೋದಾಗ ಅಲ್ಲಿ ಬೌದ್ಧ ಗುರು (ಲಾಮ) ಇವರಲ್ಲಿ ದೊರೆತ ಒಂದು ಗ್ರಂಥದ ಆಧಾರದಿಂ:ದ ಕ್ರಿಸ್ತನ ಅಜ್ಞಾತ ಚರಿತ್ರೆ ಎಂಬ ಹೆಸರಿನ ಮೇಲೆ ಕಾಣಿಸಿದ ೧೭ ವರ್ಷಗಳ ಚರಿತ್ರೆಯ ಒಂದು ಗ್ರಂಥವನ್ನು ಪ್ರಕಟಿಸಿ ಇರುತ್ತಾರೆ.

ಆ ಗ್ರಂಥದಲ್ಲಿ "ಯೇಸು ೧೩ ವರ್ಷದವನಿದ್ದಾಗ ಅವನಿಗೆ ಲಗ್ನ ಮಾಡಲಿಕ್ಕೆ ಯತ್ನಿಸಲು ಅದಕ್ಕೆ ಒಪ್ಪದೆ ತಾನು ಬ್ರಹ್ಮಚಾರಿಯಾಗಿರಬೇಕೆಂದು ಮನೆಬಿಟ್ಟು ಹೊರಟನು. ವ್ಯಾಪಾರಿ ಸಂಘದವರ ಜೊತೆಗೆ ಸಿಂಧೂ ನದಿ ಸಮೀಪಕ್ಕೆ ಬಂದನು. ಅಲ್ಲಿಂದ ಆರ್ಯಾವರ್ತದಲ್ಲಿ ಸಂಚರಿಸಿ ಜಗನ್ನಾಥಪುರೀ ವರೆಗೂ ಹೋದನು. ಅಲ್ಲಿ ಒಬ್ಬ ಬ್ರಾಹ್ಮಣನಿಂದ ವೇದ ಮತ್ತು ಸ್ಮೃತಿ ಇವುಗಳನ್ನು ೨೦ನೆಯ ವಯಸ್ಸಿಗೆ ಕಲಿತನು. ಮುಂದೆ ಸಾಧು ಸಂತರ ಜೊತೆ ಬಿದ್ದು ರಾಜಗೃಹ, ಕಾಶಿ, ಪ್ರಯಾಗ ಮೊದಲಾದ ಕ್ಷೇತ್ರಯಾತ್ರೆ ಮಾಡಿದನು. ಅನಂತರ ೬ ವರ್ಷ ಬಿಹಾರದಲ್ಲಿ ಇದ್ದು ಬೌದ್ಧ ತತ್ವದ ಜ್ಞಾನ ಮಾಡಿಕೊಂಡನು. ಅಲ್ಲಿಂದ ಅವನು ನೇಪಾಳ ಟಿಬೇಟ್ ದೇಶಗಳ ಪ್ರವಾಸ ಮಾಡಿ ತನ್ನ ೩೦ನೆಯ ವಯಸ್ಸಿನಲ್ಲಿ ತನ್ನ ದೇಶವಾದ ಇರಾಣಕ್ಕೆ ಹೋಗಿ ಅಲ್ಲಿ ಜನರಿಗೆ ತತ್ವಜ್ಞಾನ ಪ್ರಸಾರಕ್ಕಾಗಿ ಬೋಧೆ ಮಾಡಿದನು." ಎಂಬ ಸಾರಾಂಶದ ಬರವಣಿಗೆ ಇದೆ.

ನಾಥನಾಮಾವಳಿ ಎಂಬ ಗ್ರಂಥದಲ್ಲಿ "ಯೇಸುವು ೧೪ ವರ್ಷದವನಿದ್ದಾಗ ಹಿಂದುಸ್ಥಾನಕ್ಕೆ ಬಂದು ಈಶಾನ (ಶಿವ)ನ ಉಪಾಸನೆ ಮಾಡಲಿಕ್ಕೆ ಆರಂಭಿಸಿದನು. ಇವನ ಹೆಸರು ಆಗ ಈಶನಾಥ ಎಂಬುದಾಗಿತ್ತು. ಇವನು ತನ್ನ ದೇಶದಲ್ಲಿ ತತ್ವ ಪ್ರಸಾರ ಮಾಡುವಾಗ ಆ ದೇಶದ ಚಮತ್ಕಾರಿಕ ಜನರು ಇವನನ್ನು ಶೂಲಕ್ಕೆ ಏರಿಸಿದರು.

* ಸಂ. ೪೩



ಶ್ರೀ ಚನ್ನಮಲ್ಲಿಕಾರ್ಜುನರು ಅಸಿಸ್ಟಂಟ್ ಮಾಸ್ತರರಾಗಿ,
ಹೆಡ್‌ಮಾಸ್ತರರಾಗಿ ಕೆಲಸ ಮಾಡಿದ ಶಿರಾಳಕೊಪ್ಪದಲ್ಲಿನ ಶಾಲೆ.



ಶ್ರೀ ಚನ್ನಮಲ್ಲಿಕಾರ್ಜುನರ ಸ್ವಯಾರ್ಜಿತ ಪೂರ್ವದ ಮನೆಯ ಸ್ಥಳ
ಈಗ ಕಾಣುವ ಈ ಕಟ್ಟಡ 'ಸಿದ್ಧೇಶ್ವರ ನಿಲಯ'ನೆಂಬ ಹೆಸರಿನ ವಿದ್ಯಾರ್ಥಿನಿಲಯದ
ಹೊಸ ಕಟ್ಟಡ.

ಆದರೆ ನಾಥ ಸಂಪ್ರದಾಯದ ಇವನ ಗುರುವು ಶೂಲದಿಂದ ಹೊರಗೆ ತೆಗೆದನು. ಆಮೇಲೆ ಗುರುಶಿಷ್ಯರು ಹಿಮಾಲಯದ ಉತರಣಿ ಮೇಲೆ ಒಂದು ಮಠವನ್ನು ಸ್ಥಾಪಿಸಿದರು. ಈಶನಾಥನು ಇಲ್ಲಿ ೩ ವರ್ಷ ತಪಸ್ಸು ಮಾಡಿ ತನ್ನ ೪೯ನೆಯ ವಯಸ್ಸಿನಲ್ಲಿ ಮರಣ ಹೊಂದಿದನು." ಎಂಬುದಾಗಿ ಬರೆದಿದೆ. ಈಶನಾಥ (ಯೇಸು) ನಿಂದ ಉಪಾಸನೆ ಮಾಡಲ್ಪಡುತ್ತಿದ್ದ ಈಶಾನ ಎಂಬ ದೇವನ ಹೆಸರು ರೂಪಾಂತರ ಹೊಂದಿ ಎಸ್ಸೆನಿ (Essene) ಎಂಬುದಾಗಿದೆ. ಈ ದೆಸೆಯಿಂದ ಮೇಲೆ ಕಂಡ ರಷ್ಯಾ ಪಂಡಿತನು ಯೇಸುವು, ಎಸ್ಸೆನಿ ಪಂಥದವನೆಂದು ಬರೆದಿರುತ್ತಾನೆ. ಈ ಎರಡು ಗ್ರಂಥಗಳನ್ನು ನೋಡಿ ಶೋಧಕರು ಈ ವಿಚಾರವನ್ನು ನಿರ್ಣಯಿಸಿಕೊಳ್ಳಬೇಕು.

# ಬದೋಡಾದಲ್ಲಿ ಓಲೆಯು ಪ್ರತಿಗಳು

ಡಾಕ್ಟರ್ ಎಸ್. ಎಮ್. ಕಾತರೆಯವರು 'Oriental Literary Digest' ಎಂಬ ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಬರೋಡ ದೇಶದ ಪುರಾತನ ಪ್ರತಿಗಳ ಸಂಸ್ಥೆಯವರು (Oriental Institute) ಪ್ರಕಟಿಸಿದ ಓಲೆಯುಗರಿಯು ಕೈಬರಹದ ಪ್ರತಿಗಳ ನಾಮಾವಳಿಗಾಗಿ ಸದರಿಯವರನ್ನು ಸ್ವಾಗತಿಸಿರುತ್ತಾರೆ. ಪಟ್ಟಣ ಎಂಬ ಊರಿನಲ್ಲಿ ಇರುವ ಜೈನ ಭಂಡಾರದಲ್ಲಿ ಇರುವ ಕೈಬರಹದ ಪುಸ್ತಕಗಳ ವಿವರವಾದ ಹೆಸರಿನ ಪಟ್ಟಿಯು ಕೈ.ವಾ. ಸಿ. ಡಿ. ದಲಾಲ ಇವರ ಟಿಪ್ಪಣಿಯೊಡನೆ ಮತ್ತು ಶ್ರೀ ಲಾಲಚಂದ್ರ ಭಗವಾನದಾಸ ಗಾಂಧಿ ಎಂಬ ಈ ಸಂಸ್ಥೆಯ ಪಂಡಿತರ ಸಂಸ್ಕೃತ ಮತ್ತು ಇಂಗ್ಲಿಷ್ ಪೀಠಿಕೆಯೊಡನೆ ರಚಿಸಲ್ಪಟ್ಟಿದೆ.ಈ ಪುಸ್ತಕವು ೫೦೦ ಪುಟಗಳ ಮೇಲೆ ಇದ್ದು ೮ ರೂ. ಬೆಲೆ ಇಡಲ್ಪಟ್ಟಿದೆ. ಮೇಲೆ ಕಂಡ ವಿಮರ್ಶಕರು ಹೀಗೆ ಬರೆಯುತ್ತಾರೆ:

ಆಶ್ಚರ್ಯಕರವಾದ ಜೈನ ಸಾಹಿತ್ಯದ ಬಹುಭಾಗವು (ಪೂರ್ವಿಕರು ಸಂಪಾದಿಸಿದುದು) ನಮಗಾಗಿ 'ಪಟ್ಟಣ' ಎಂಬಲ್ಲಿ ಇರುವ ಅದ್ವಿತೀಯವಾದ ಜೈನ ಭಂಡಾರದಲ್ಲಿ ಈಗಿನ ವರೆವಿಗೂ ಕಾದಿಡಲ್ಪಟ್ಟಿದೆ. ಮತ್ತು ಜನರ ಜ್ಞಾನವನ್ನು ಹೆಚ್ಚಿಸುವ ಬಡೋದಾ ಸರಕಾರವು ಈ ಅಸಾಧ್ಯವಾದ ಕೈಬರಹದ ಪ್ರತಿಗಳ ಹೆಸರನ್ನು ಸಾಮಾನ್ಯವಾಗಿ ಜಗತ್ತಿಗೆ ಕೊನೆಯ ಪಕ್ಷ ಸ್ವಲ್ಪ ಮಟ್ಟಿಗಿನ ವಿವರಣೆಯಾದರೂ ಸಾಧ್ಯವಾಗುವಂತೆ ಪ್ರಕಟ ಮಾಡಿದುದಕ್ಕಾಗಿ ವಂದಿಸಬೇಕಾಗಿದೆ. ಈ ನಾಮಾವಳಿಯುಲ್ಲಿ ನಮೂದಿಸಿದ ಅನೇಕ ಪುಸ್ತಕಗಳು ಅಪಭ್ರಂಶ ಎಂಬ ಭಾಷೆಯಲ್ಲಿ ಬರೆಯಲ್ಪಟ್ಟಿವೆ ಮತ್ತು ಇವುಗಳಲ್ಲಿ ಅನೇಕ ಪುಸ್ತಕಗಳು ಮುದ್ರಣವಾಗಿಲ್ಲ.

ತರ್ಕ, ವೇದಾಂತ, ಯೋಗ, ಇತಿಹಾಸ್ಯ, ಕಾವ್ಯ, ಜನಪದದ ಕಥೆಗಳು, ಆಟಗಳು, ವ್ಯಾಕರಣ, ರಾಜ್ಯಭಾರ, ಜ್ಯೋತಿಷ್ಯ, ಮತ್ತು ಇತರ ಅನೇಕ ವಿಷಯುಗಳನ್ನೊಳಗೊಂಡ ಕೈಬರಹದ ಅನೇಕ ಪ್ರತಿಗಳು ಸಂಸ್ಕೃತ ಭಾಷೆಯಲ್ಲಿ ಇವೆ. ಇವಲ್ಲದೆ ಗುಜರಾತಿ ಭಾಷೆಯ ಪೂರ್ವಕಾಲದ, ಮಧ್ಯಕಾಲದ ಮತ್ತು ನವೀನ ಕಾಲದ ಕೈಬರಹದ ಪ್ರತಿಗಳು ಬಹಳವಾಗಿ ಸೇರಿಸಲ್ಪಟ್ಟಿರುತ್ತವೆ.

ಈ ಪುಸ್ತಕದಲ್ಲಿ ವೀರಶೈವರಿಗೆ ಬೇಕಾದ ಆಗಮ ವಗೈರೆ ಗ್ರಂಥಗಳು ದೊರಕಬಹುದೇನು? ವೀರಶೈವರು ಈ ನಾಮಾವಳಿಯನ್ನು ತರಿಸಿ ನೋಡಿದರೆ ಗೊತ್ತಾಗಬಹುದು.

—ಪ್ರಕಾಶಕ

(ಸಂ. ೪೫, ೪೬)

# ಈಗಿನ ಸಮಾಚಾರಗಳು

ಕಲಕತ್ತೆಯ ಸರ್ವ ವಿದ್ಯಾನಿಲಯದವರು ಇದುವರೆವಿಗೂ ಮುದ್ರಣವಾಗದಿರುವ ಸಂಸ್ಕೃತ ಕೈಬರಹದ ಪ್ರತಿಗಳನ್ನು ಒಂದು ಲಕ್ಷ ರೂಪಾಯಿಗಿಂತಲೂ ಹೆಚ್ಚು ವೆಚ್ಚ ಮಾಡಿ ಕೂಡಿಸಿ ಇಟ್ಟಿರುವವುಗಳನ್ನು ಪ್ರಕಟಪಡಿಸುವುದಕ್ಕಾಗಿ ಯೋಚಿಸಿದ್ದಾರೆ. ಪ್ರಸಿದ್ಧರಾದ ಸಂಸ್ಕೃತಜ್ಞರ ಈ ಯೋಜನೆಯನ್ನು ಆಲೋಚಿಸುವುದಕ್ಕಾಗಿ ಏರ್ಪಡಿಸಲ್ಪಟ್ಟಿದೆ. ಸಂಸ್ಕೃತ ಪ್ರೌಢ ವಿದ್ಯಾನಿಲಯ (University) ದ ಅಧ್ಯಕ್ಷರೂ ಸಹ ಇದಕ್ಕೆ ಅನುಕೂಲವಾಗಿ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಪ್ರಕಟವಾದ ಗ್ರಂಥಮಾಲೆಗೆ "ಅಶುತೋಷ ಸಂಸ್ಕೃತ ಗ್ರಂಥಮಾಲೆ" ಎಂದು ಹೆಸರಿಡಬೇಕೆಂದು ನಿಶ್ಚಯಿಸಲ್ಪಟ್ಟಿದೆ. ದಿವಂಗತರಾದ ಸರ್ ಆಶುತೋಷ ಮುಖರ್ಜಿಯವರು ಬಂಗಾಳದಲ್ಲಿ ಸಂಸ್ಕೃತ ಅಭ್ಯಾಸವನ್ನು ಮುಂದಕ್ಕೆ ತಂದವರಾದ್ದರಿಂದ ಅವರ ಗೌರವಾರ್ಥವಾಗಿ ಈ ಹೆಸರು ಇಡಲ್ಪಡುತ್ತದೆ.

ವೀರಶೈವವೇ ನಿನ್ನ ಸಂಸ್ಕೃತ ಗ್ರಂಥ ಭಾಂಡಾರವನ್ನು ನೋಡಿ ಕೇಳುವವರೇ ದಿಕ್ಕಿಲ್ಲವೆಂದು ಅಳಬೇಕಲ್ಲವೇ? ಉದಾರವಾದ ಮತವೆಂದು ಹೇಳುತ್ತಿರುವ ವೀರಶೈವರೆಲ್ಲರೂ ಉದಾರ ಭಾವದಿಂದ ಸಂಸ್ಕೃತ ಗ್ರಂಥಗಳನ್ನು ಮುದ್ರಿಸಿ ಜಗತ್ತಿಗೆಲ್ಲಾ ಪ್ರಕಟವಾಗುವಂತೆ ಪ್ರಯತ್ನ ಮಾಡುವ ಉದಾರತೆಯನ್ನು ವಹಿಸಿ ಉದಾರಿಗಳು ಎಂಬ ಹೆಸರನ್ನು ಶಾಶ್ವತವಾಗಿ ಹೊಂದಬಾರದೇ?

ತಿರುವಾಂಕೂರು ದೇಶದಲ್ಲಿ 'ಕಾಲವಧ' ಎಂಬ ಒಂದು ಗ್ರಂಥವು ದೊರಕಿರುತ್ತದೆ. ಇದು ಮೂರು ಸಂಧಿ ಉಳ್ಳದಾಗಿ ಶಿವನ ಹಸ್ತದಿಂದ ಆದ ಯಮನ ಮರಣದ ಪುರಾಣವನ್ನು ವಿವರಿಸುತ್ತದೆ. ಮಾರ್ಕಂಡೇಯನು ವಿಶೇಷವಾಗಿ ಬೇಡಿಕೊಂಡದ್ದರಿಂದ ದಕ್ಷಿಣ ಮಲಬಾರಿನಲ್ಲಿ ಇರುವ ತ್ರಿಪಾಣಗೋಡೆ ಎಂಬಲ್ಲಿ ಶಿವನು ವಾಸಮಾಡಿಕೊಂಡಿದ್ದನೆಂದು ತಿಳಿಸುತ್ತದೆ.

ಫ್ರಾನ್ಸ್ ದೇಶದಲ್ಲಿ ಒಬ್ಬ ಕರ್ನಾಟಕಸ್ಥರಾದ ಜೋಷಪೆ ಎಂಬುವವರು ವಚನ ವಾಙ್ಮಯದ ಮಹತ್ವವನ್ನು ಯುರೋಪಿಯನ್ ಜನರಿಗೆ ತೋರಿಸಬೇಕೆಂದು ಅವುಗಳನ್ನು ಫ್ರೆಂಚ್ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಭಾಷಾಂತರ ಮಾಡಿ ಒಂದು ಮಾಸಿಕ ಪತ್ರದಲ್ಲಿ ಪ್ರಸಿದ್ಧ ಮಾಡುತ್ತಾ ಇದ್ದಾರೆ. ಫ್ರಾನ್ಸ್ ದೇಶದ ವಾಚಕರು ಅತ್ಯಾದರದಿಂದ ಓದುತ್ತಾ ಇದ್ದು ಈ ರೀತಿಯ ವಾಙ್ಮಯವು ಯಾವಾಗಲೂ ಓದುವದಕ್ಕೆ ಸಿಕ್ಕಬೇಕು ಎಂಬ ಹೆಚ್ಚಿನ ಅಪೇಕ್ಷೆಯನ್ನು ಪ್ರಕಟಪಡಿಸುತ್ತಾ ಇದ್ದಾರೆ. (ಸುದರ್ಶನ)

(ಸಂ. ೪೫, ೪೬)

# ವೀರಶೈವ ಯಾತ್ರಿಕನ ಅನುಭವ

(ಒಬ್ಬ ವೀರಶೈವನು ಯಾತ್ರೆ ಮಾಡುವಾಗ ಒಂದು ದೇವಸ್ಥಾನವನ್ನು ನೋಡುತ್ತಿರುವ ಕಾಲದಲ್ಲಿ)

---

ಆ ದೇವಸ್ಥಾನದ ಅರ್ಚಕ– ಬನ್ನಿ. ದೇವರ ದರ್ಶನಕ್ಕೆ ಬನ್ನಿ. ಅರ್ಚನೆ ಮಾಡುತ್ತೇನೆ.

ವೀರಶೈವ– ಅಷ್ಟು ತೊಂದರೆ ಬೇಡಿ, ಸುಮ್ಮನೆ ದೀಪಾರಾಧನೆ ಮಾಡಿ ತೋರಿ.

ಅರ್ಚಕ– ತಾವು ಬಹಳ ದೂರದಿಂದ ಬಂದಿರುವಿರಿ, ಅರ್ಚನೆ ಮಾಡಿಸಿದರೆ ತಮಗೂ ತಮ್ಮವರಿಗೂ ಬಹಳ ಅನುಕೂಲವಾಗುತ್ತದೆ.

ವೀರಶೈವ– ಸುಮ್ಮನೆ ತೊಂದರೆ ಮಾಡಬೇಡಿ, ದೀಪಾರಾಧನೆ ಮಾಡಿದರೆ ಸರಿ.

ಅರ್ಚಕ– ಹಾಗಲ್ಲ, ತಮ್ಮ ನಕ್ಷತ್ರ,ನಾಮ ಗೋತ್ರ ಸೂತ್ರ ಮುಂತಾದವುಗಳಿಂದ ಅರ್ಚನೆ ಮಾಡಿದರೆ ತಮಗೂ ತಮ್ಮ ಕುಟುಂಬದವರಿಗೂ ಮಂಗಳವೂ ಲಾಭವೂ ಪುತ್ರ ಪೌತ್ರಾದಿ ವೃದ್ಧಿಯೂ ಉಂಟಾಗುವುವು.

ವೀರಶೈವ– ನಮಗೆ ಆಗಬೇಕಾದ ಎಲ್ಲಾ ಅನುಕೂಲಗಳು ನಮ್ಮ ಇಷ್ಟಲಿಂಗ ದಿಂದಲೇ ಆಗಿರುತ್ತವೆ. ನಮ್ಮ ಇಷ್ಟಲಿಂಗಕ್ಕಿಂತ ತಾವು ಅರ್ಚಿಸುವ ಸ್ಥಾವರ ಲಿಂಗವು ಹೆಚ್ಚಾದುದಲ್ಲ.

ಅರ್ಚಕ– ತಮ್ಮ ಇಷ್ಟಲಿಂಗವು ಯಾವ ವಿಷಯದಲ್ಲಿ ಹೆಚ್ಚಾಯಿತು? ಹೇಳಿ, ನೋಡೋಣ ನಮ್ಮ ಸ್ಥಾವರ ಲಿಂಗದ ಸಾವಿರದಲ್ಲಿ ಒಂದು ಭಾಗವೂ ತಮ್ಮ ಇಷ್ಟಲಿಂಗ ವಿರುವದಿಲ್ಲ, ಮತ್ತು ಇದಕ್ಕೆ ನಡೆಯುವ ಅಭಿಷೇಕಾರಾಧನೆಯು ನೂರರಲ್ಲಿ ಒಂದು ಭಾಗವೂ ತಮ್ಮ ಇಷ್ಟ ಲಿಂಗಕ್ಕೆ ನಡೆಯುವುದಿಲ್ಲ.

ವೀರಶೈವ– ಭಗವಂತನಿಗೆ ದೊಡ್ಡವು ಚಿಕ್ಕವು ಎಂಬ ವ್ಯತ್ಯಾಸವಿಲ್ಲ. ಶಿವನು ಸರ್ವವ್ಯಾಪಿಯಾಗಿದ್ದಾನೆ. ದೊಡ್ಡ ಆನೆಯಲ್ಲಿಯೂ ಚಿಕ್ಕ ಇರುವೆಯಲ್ಲಿಯೂ ತುಂಬಿ ಕೊಂಡಿದ್ದಾನೆ. ಇದರಂತೆಯೇ ಆನೆಗೂ ಇರುವೆಗೂ ಜೀವಭಾವವು ಕೂಡ ಒಂದೇ ಆಗಿ ತುಂಬಿರುತ್ತದೆ. ಮತ್ತು ತಾವು ಪೂಜಿಸುವ ಸ್ಥಾವರ ಲಿಂಗವು ಭೂಮಿಯಲ್ಲಿ ಪ್ರತಿಷ್ಠೆಯಾಗಿದೆ. ತಾವು ಅದರ ಸಮೀಪದಲ್ಲಿ ಹೋದಾಗ ಮಾತ್ರ ಅದಕ್ಕೆ ಸ್ವಲ್ಪ ಹೊತ್ತು ಕಲ್ಪಿತ ಜೀವ ಸಾನ್ನಿಧ್ಯ ಲಭಿಸುತ್ತದೆ. ಮಿಕ್ಕ ಕಾಲದಲ್ಲಿ ಜೀವ ಸಾನ್ನಿಧ್ಯ ಲಭಿಸುವುದಿಲ್ಲ. ಹಾಗೆ ತಾವೂ ಸಹ ಅಲ್ಪಕಾಲ ಮಾತ್ರ ಶಿವ ಸಾನ್ನಿಧ್ಯದಲ್ಲಿರುತ್ತೀರಿ. ಒಂದು ದಿವಸದಲ್ಲಿ ಒಂದೆರಡು ಘಳಿಗೆ ಮಾತ್ರ ಶಿವ ಸಾನ್ನಿಧ್ಯ ಪಡೆದು ಮಿಕ್ಕ ಕಾಲವೆಲ್ಲ ಶಿವ ಸಾನ್ನಿಧ್ಯವಿಲ್ಲದವರಾಗಿದ್ದೀರಿ. ಮತ್ತು ಸ್ಥಾವರ ಲಿಂಗವನ್ನು ಅನೇಕ ಜನರು ಪೂಜಿಸುತ್ತಾರೆ.

ನಮ್ಮ ಇಷ್ಟಲಿಂಗವು ನಮ್ಮ ಶರೀರದಲ್ಲಿ ಪ್ರತಿಷ್ಠೆಯಾಗಿದೆ. ಅದಕ್ಕೆ ಸದಾ ಕಾಲದಲ್ಲಿಯೂ ಎಡಬಿಡದೆ ಜೀವ ಸಾನ್ನಿಧ್ಯವು ಇದ್ದೇ ಇರುತ್ತದೆ. ಇಷ್ಟಲಿಂಗವನ್ನು ನಾವೊಬ್ಬರೇ ಪೂಜಿಸುವೆವು. ಅಂತೂ ಈ ಎರಡು ಲಿಂಗಗಳಲ್ಲಿ ಯಾವುದು ಹೆಚ್ಚು ಮತ್ತು ಇವರಂತೆಯೇ ನಮ್ಮಿಬ್ಬರಲ್ಲಿ ಯಾರು ಶ್ರೇಷ್ಠರೆಂಬುದನ್ನು ನೀವೇ ಚೆನ್ನಾಗಿ ಆಲೋಚಿಸಿ ಹೇಳಿ, ನೋಡುವಾ.

ಅರ್ಚಕ– ಆಗಲಿ, ನಿಮ್ಮ ಇಷ್ಟಲಿಂಗದಲ್ಲಿ ಇನ್ನೂ ವಿಶೇಷವೇನು ಹೇಳಿ, ನೋಡುವಾ.

ವೀರಶೈವ– ತಾವು ಸ್ಥಾವರ ಲಿಂಗವನ್ನು ತಮಗೆ ರೋಗ ಬಂದ ಕಾಲದಲ್ಲಿಯೂ ಪಂಚಸೂತಕ ಕಾಲಗಳಲ್ಲಿಯೂ ಒಮ್ಮೆಯೂ ಅರ್ಚಿಸುವುದಿಲ್ಲ. ಆ ಕಾಲದಲ್ಲಿ ತಮಗೆ ಶಿವ ಸಾನ್ನಿಧ್ಯವೂ ಸಹ ಇರುವುದಿಲ್ಲ.

ಅರ್ಚಕ– ವಿಷಯವು ಈ ಪ್ರಕಾರವಿರುವಾಗ ತಾವು ಇಲ್ಲಿಗೆ ಯಾತಕ್ಕೋಸ್ಕರ ಬರಬೇಕು ?

ವೀರಶೈವ– ಭೂಲೋಕ ಸೌಂದರ್ಯವನ್ನೂ ಸ್ಥಳವನ್ನೂ ನೋಡುವ ನಿಮಿತ್ತ್ಯವಾಗಿ ಬಂದಿರುವೆನು. ದೇವತಾಫಲವನ್ನಪೇಕ್ಷಿಸಿ ಬರಲಿಲ್ಲ.

ಅರ್ಚಕ– ತಾವು ಪ್ರತಿದಿನವೂ ಇಷ್ಟಲಿಂಗಾರ್ಚನೆ ಮಾಡುತ್ತೀರಿ. ಸರಿ. ಆದರೆ ತಮಗೆ ಪ್ರತಿಕೂಲಗಳೂ ವ್ಯಸನಗಳೂ ಅಮಂಗಲ ಕಾರ್ಯಗಳೂ ಬರುವುದಿಲ್ಲವೇ ಹೇಳಿ

ವೀರಶೈವ– ನಿತ್ಯಲಿಂಗಧಾರಣೆಯಿಂದ ಬ್ರಹ್ಮ ಸ್ವರೂಪನಾದವನಿಗೆ ಲಿಂಗ ಪೂಜಾದಿ ಕ್ರಿಯೆಗಳನ್ನು ವ್ರತವಾಗಿ ಆಚರಿಸಲು ಅಮಂಗಲವು ಉಂಟಾಗುವುದಿಲ್ಲ. ಪೌಂಡರೀಕ ಯಾಗ ವ್ರತದಲ್ಲಿ ತತ್‌ಪರರಾದ ಸತಿಪತಿಗಳಲ್ಲಿ ಸತಿಯು ಬಹಿಷ್ಠೆಯಾದರೂ ಸೂತಕವು ಬಾರದೆ ಇರುವಂತೆ

–ವೈದ್ಯ ಗುರುಸ್ವಾಮಯ್ಯ ಸೇಲಂ

(ಸಂ. ೫೪–೫೫)

# ಹುಬ್ಬಳ್ಳಿಯ ಪ್ರಸಿದ್ಧ ವಕೀಲರಾದ ಪಾವಟೆ ಸಿದ್ಧರಾಮಪ್ಪನವರು ಶಿವಾಧೀನರಾದುದು

ಈ ಮಹನೀಯರು ವೀರಶೈವಗಲ್ಲಿ ರತ್ನಪ್ರಾಯರಾಗಿದ್ದರು. ಸಮಾಜದಲ್ಲಿ ನಿಜ ತತ್ವವನ್ನು ತಿಳಿದಾಚರಿಸುವ ಸ್ಥಿತಿಯು ಬರಲೆಂದು ಬಹಳವಾಗಿ ಪ್ರಯತ್ನಿಸಿದವರು. ಅನೇಕರು ಇವರ ದರ್ಶನಕ್ಕೆ ಹೋದಾಗ ವಿದ್ಯಾವಂತರು ಕಂಡರೆ ಅವರನ್ನು ಕೆಣಕಿ ಅನೇಕ ವಿಷಯಗಳಲ್ಲಿ ವಾದ ಮಾಡುವ ಪದ್ಧತಿಯು ಇವರಲ್ಲಿದ್ದಾಗ್ಯೂ ಕೊನೆಯಲ್ಲಿ ನಿಜತತ್ವಕ್ಕೆ ತಲೆಬಾಗಿಸುತ್ತಿದ್ದರೆಂಬುದಕ್ಕೆ ಲೇಶವೂ ಸಂಶಯವಿಲ್ಲ. ಇಂತಹ ೧-೨ ಸಂಭವಗಳು ನಮ್ಮ ಜತೆಯಲ್ಲಿಯೇ ನಡೆದಿವೆ. ಹುಬ್ಬಳ್ಳಿಯಲ್ಲಿ ಅವರ ಮನೆಯಲ್ಲಿ ಅವರನ್ನು ಕಾಣುವ ಸಂಭವವು ಬಂದಾಗ ಸಮಾಜದ ಅನೇಕ ವಿಷಯಗಳಲ್ಲಿ ನಮ್ಮ ಅಭಿಪ್ರಾಯಗಳನ್ನು ತಿಳಿಯುತ್ತಾ ಇದ್ದರಲ್ಲದೆ ತಾವು ಬಿಜಾಪುರ 'ಶಿವಾನುಭವ' ಪತ್ರಿಕೆಗೆ ಕಳುಹಿಸಲು ತಯಾರಿದ್ದ ಶ್ರೀಕರ ಭಾಷ್ಯದ ವಿಮರ್ಶೆ ಮುಂತಾದ ವಿಷಯಗಳನ್ನು ಓದಿ ಹೇಳಿ ಅದರಲ್ಲಿನ ಸ್ವಾರಸ್ಯದ ಭಾಗಗಳನ್ನು ವಿವರಿಸುತ್ತಾ ಇದ್ದರು. ಈಗ ವೀರಶೈವ ಸಮಾಜದಲ್ಲಿ ನಿಜತತ್ವವನ್ನು ಹರಡುವವರ ಸಂಖ್ಯೆ ಬಹಳ ಕಡಿಮೆಯಾಗಿದ್ದು ಇಂತಹ ಕಾಲದಲ್ಲಿ ಇವರನ್ನು ಕಳೆದುಕೊಂಡದ್ದು ಸಮಾಜಕ್ಕೆ ದೊಡ್ಡ ಹಾನಿಯೇ ಸರಿ. ಆದರೂ ಶಿವನಲ್ಲಿ ಸಾಮರಸ್ಯರಾಗುವವರನ್ನು ನೋಡಿ ವ್ಯಸನಪಡದೆ ಇರಬೇಕೆಂಬ ವೀರಶೈವರ ತತ್ವದ ಪ್ರಕಾರ ಇವರು ಶಿವಾಧೀನರಾಗಿ ಶಿವನಲ್ಲಿ ಸಮರಸವಾಗಿ ಆನಂದದಿಂದಿರಲೆಂದು ಶಿವ ಪ್ರಾರ್ಥನೆಯ ಮಾಡಿ ಇವರ ಪುತ್ರರು ಇಷ್ಟಲಿಂಗಪ್ಪನವರು ತಂದೆಯಂತೆ ಸಮಾಜ ವಿಷಯಗಳಲ್ಲಿಯೂ, ಧಾರ್ಮಿಕ ವಿಷಯಗಳಲ್ಲಿಯೂ, ಸಂಸಾರಿಕ ವಿಷಯಗಳಲ್ಲಿಯೂ ಪ್ರವರ್ತಿಸಿ ಪ್ರಸಿದ್ಧರಾಗಿ ಬಾಳಲೆಂದು ನಾವು ಬಯಸುತ್ತೇವೆ. ಇವರ ಕುಟುಂಬಕ್ಕೆ ಶಿವನು ಸೌಖ್ಯವನ್ನು ಕೊಡಲಿ.

(ಸಂ. ೪೭–೪೮)

# ಮೈಸೂರು ಮಹಾರಾಜರವರ ಕಾಲೇಜಿನ ಕನ್ನಡ ಪ್ರೊಫೆಸರ್ ಆಗಿದ್ದ ಮ. ರಾ. ಟಿ. ಎಸ್. ವೆಂಕಣ್ಣಯ್ಯನವರು ಗತಿಸಿದುದು

ಈ ಮಹನೀಯರು ಕನ್ನಡದ ಅಭಿವೃದ್ಧಿಗಾಗಿ ವಿಶೇಷ ಪ್ರಯತ್ನ ಮಾಡಿದವರು. ಇವರು ಹೋದುದರಿಂದ ಕನ್ನಡಿಗರಿಗೆ ಅಪಾರವಾದ ಹಾನಿಯಾಯಿತೆಂಬುವನ್ನು ನಾವೂ ಒಪ್ಪಿ ಆ ಬಗ್ಗೆ ಬಹಳ ವ್ಯಸನಪಡುತ್ತೇವೆ. ಬೆಂಗಳೂರು ಕರಿಸಿದ್ದದೇವರ ಮಠದ ಶ್ರೀ ಚನ್ನಬಸವ ಸ್ವಾಮಿಗಳವರೊಂದಿಗೆ ಮೈಸೂರಲ್ಲಿ ಅವರ ಅಪೇಕ್ಷೆಯ ಪ್ರಕಾರ ಅವರ ಮನೆಗೆ ಹೋಗಿದ್ದಾಗ ಭಾಷೆಯ ಸಂಬಂಧ, ಮಠದ ಸಂಬಂಧ, ಓಲೆಗರಿಯ ಪ್ರತಿಗಳ ಸಂಬಂಧ ಇವೇ ಮುಂತಾದ ಮಾತುಗಳಾದ ಮೇಲೆ "ನೀವು ಸ್ವತಂತ್ರವಾಗಿ ಈಗ ಬೇಕಾದ ಪುಸ್ತಕಗಳನ್ನು ಪ್ರಕಟಿಸುತ್ತಿದ್ದೀರಲ್ಲವೇ?" ಎಂದು ನಮಗೆ ಪ್ರಶ್ನೆ ಮಾಡಿದರು. "ಮೈಸೂರು ಸರಕಾರದ ಉದ್ಯೋಗದಿಂದ ವಿಶ್ರಾಂತಿಯನ್ನು ಪಡೆದು ಈಗ ಮನಬಂದ ಪುಸ್ತಕಗಳನ್ನು ಪ್ರಕಟಿಸುತ್ತಿರುವೆನು. ಶಿವನ ಸೇವೆ ಎಂಬ ಮಹದಾನಂದದಲ್ಲಿ ಇರುವೆನು." ಎಂದು ಉತ್ತರವನ್ನು ಕೊಟ್ಟಾಗ ತಮಗೂ ಅದೇ ಬಯಕೆಯು ಇರುವುದಾಗಿಯೂ ರಾಜಕೀಯ ವೃತ್ತಿಯಿಂದ ವಿಶ್ರಾಂತಿ ಪಡೆಯುವುದು ೪–೫ ವರ್ಷಗಳಿರುವುದಾಗಿಯೂ ಆಮೇಲೆ ತಾವೂ ಈ ಕೆಲಸವನ್ನು ಕೈಕೊಳ್ಳುವುದಾಗಿಯೂ ಹೇಳಿದ್ದರು. ಇವರನ್ನು ಕಳೆದುಕೊಂಡುದು ಕನ್ನಡಿಗರ ಚಿಂತಾಮಣಿಯನ್ನು ಕಳೆದುಕೊಂಡಂತೆಯೇ ಸರಿ. ಶಿವನು ಇವರ ಆತ್ಮಕ್ಕೆ ಸಂತೋಷವನ್ನುಂಟು ಮಾಡಲಿ. ಮತ್ತು ಇವರ ಸಂಸಾರಕ್ಕೆ ಸುಖವನ್ನೀಯಲಿ, ಎಂದು ಪ್ರಾರ್ಥಿಸುವೆವು. ಇವರ ಸ್ಮಾರಕ ನಿಧಿಯು ಬೆಳೆಯಲು ಕನ್ನಡಿಗರೆಲ್ಲರೂ ಪ್ರೋತ್ಸಾಹವನ್ನು ಕೊಟ್ಟು ಕಾರ್ಯವನ್ನು ಮಾಡುವವರಾಗಲಿ, ಎಂದು ಪ್ರಾರ್ಥಿಸುತ್ತೇವೆ.

(ಸಂ. ೪೭–೪೮)

# ಮೈಸೂರು ಶ್ರೀಮನ್ ಮಹಾರಾಜರವರ ಧರ್ಮನಿಷ್ಠೆ

ಶ್ರೀಮತ್ ಕರ್ನಾಟಕ ರತ್ನ ಸಿಂಹಾಸನಾಧೀಶ್ವರ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಪ್ರಭುಗಳವರು ಹಿಂದೂ ಧರ್ಮ ಗ್ರಂಥಗಳಾದ ವೇದ, ಉಪನಿಷತ್, ಪುರಾಣ, ಗೀತಾ ಮೊದಲಾದ ಗ್ರಂಥಗಳನ್ನು ಕನ್ನಡ ಭಾಷೆಯ ಟೀಕಾ ಬರೆಯಿಸಿ ಮುದ್ರಣ ಮಾಡಿಸುವರೆಂದೂ ಇದಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡುವರೆಂದೂ ಪ್ರಕಟವಾಗಿರುವುದನ್ನು ನೋಡಿ ಬಹಳವಾಗಿ ಆನಂದಿಸುತ್ತೇವೆ. ಧರ್ಮದ ಕಡೆಗೆ ಜನತೆಯ ಲಕ್ಷ್ಯವು ಕಡಿಮೆಯಾದ ಈ ಕಾಲದಲ್ಲಿ ಮಹಾದೇವನನ್ನು ಮರೆಯದಂತೆ ಇರುವುದಕ್ಕೆ ಮತ್ತು ಆ ಜ್ಞಾಪಕವನ್ನೇ ಪ್ರಧಾನವಾಗಿ ಉಳ್ಳ ಧರ್ಮಾಚರಣೆಯನ್ನು ನಡೆಸಲಿಕ್ಕೆ ಧರ್ಮ ಗ್ರಂಥಗಳ ಪುನರುಜ್ಜೀವನವಾದರೆ ಹೊಸವೆಂದು ಭಾವಿಸಿ ಜನರು ಓದಲಾತುರಪಡುವರು. ವಿದ್ಯಾಪ್ರಚಾರವು ಭರದಿಂದ ಸಾಗಿರುವ ಈ ಕಾಲದಲ್ಲಿಯೂ ಸಂಸ್ಕೃತದಲ್ಲಿ ಇರುವ ಉಪನಿಷತ್ತುಗಳನ್ನೆಲ್ಲಾ ಓದಿ ತಿಳಿದುಕೊಳ್ಳುವವರ ಸಂಖ್ಯೆಯೂ ಬಹಳ ಕಡಿಮೆಯಾಗಿದೆ. ಎಲ್ಲಾ ಉಪನಿಷತ್ತುಗಳನ್ನೂ ಪಠ್ಯವಾಗಿ ಇಟ್ಟಿರುವ ಪಾಠಶಾಲೆಯಾಗಲೀ ಪರೀಕ್ಷೆಯಾಗಲಿ ಹಿಂದೂ ದೇಶದಲ್ಲಿ ಒಂದಾದರೂ ಇಲ್ಲವೆಂದೇ ಹೇಳಬಹುದು. ಹೀಗಾಗಿ ಪೂರ್ವಿಕರ ಧರ್ಮ ಮಾರ್ಗವು ಯಾವ ಗುರಿಯನ್ನು ಉಳ್ಳದಾಗಿತ್ತು ಎಂಬುದನ್ನು ವಿಚಾರ ಮಾಡುವುದಕ್ಕೆ ತಕ್ಕ ಪ್ರಚಾರನೇ ಇಲ್ಲವಾಗಿವೆ. ಆದುದರಿಂದ ಜನರ ದೃಷ್ಟಿಯನ್ನು ಧರ್ಮ ಗ್ರಂಥಗಳ ಕಡೆಗೆ ಎಳೆಯಲೇಬೇಕಾಗಿದೆ. ಧರ್ಮ ಗ್ರಂಥಗಳನ್ನು ಪ್ರಕಟಪಡಿಸುವುದರ ಜೊತೆಯಲ್ಲಿ ಹಿಂದೂ ದೇಶದಲ್ಲಿ ಪ್ರಚಲಿತವಾಗಿರುವ ದ್ವೈತ–ಅದ್ವೈತ–ವಿಶಿಷ್ಟಾದ್ವೈತ–ಶಿವಾದ್ವೈತ– ಈ ತತ್ವಗಳ ಸಾರವನ್ನು ಧರ್ಮ ಗ್ರಂಥಗಳಿಂದ ಉದ್ಧರಿಸಿ ಜನತೆಗೆ ತೋರಿಸಿ ಪೂರ್ವ ಕಾಲದ ಪದ್ಧತಿಯಂತೆ ಸಾವಿರಾರು ಪಂಗಡಗಳಾಗಿ ಹಿಂದೂಗಳು ಇರುತ್ತಿದ್ದುದನ್ನು ತ್ಯಜಿಸಿ ತಮ್ಮ ಮನಬಂದಂತೆ ಮೇಲಿನ ನಾಲ್ಕು ಪಂಗಡಗಳಾಗಿ ಮಾತ್ರ ಇರುವಂತೆ ಅವರಿಗೆ ಮಾರ್ಗದರ್ಶನವನ್ನು ಮಾಡಿಸುವುದೂ, ಮಹಾಪ್ರಭುಗಳವರು ನಡೆಸುವ ಉತ್ತಮ ಕಾರ್ಯವೆಂದು ಭಾವಿಸುತ್ತೇವೆ.

ಶಿವಾದ್ವೈತದ ಮುಖ್ಯ ಗ್ರಂಥಗಳು ಸಂಸ್ಕೃತದಲ್ಲಿ, ಕನ್ನಡದಲ್ಲಿ ಇನ್ನೂ ಮುದ್ರಣವಾಗದೆ ಬಹಳ ಉಳಿದಿವೆ. ಇವುಗಳ ಉದ್ಧಾರದ ಕಡೆಗೂ ಮಹಾಪ್ರಭುಗಳು ತಮ್ಮ ಕೃಪಾದೃಷ್ಟಿಯನ್ನು ಬೀರಲೆಂದು ಪ್ರಾರ್ಥಿಸುತ್ತೇವೆ.

"ಶಿವರಹಸ್ಯ" ಎಂಬ ಇದುವರೆಗೂ ಮುದ್ರಣದ ಮುಖವನ್ನೆ ಕಾಣದ ಗ್ರಂಥವನ್ನು ಮುದ್ರಿಸುವುದಕ್ಕೆ ಮಹಾಪ್ರಭುಗಳವರು ಕೃಪೆ ಮಾಡಿರುವರೆಂಬುದನ್ನು ತಿಳಿದು

ಅನಂದಿಸಿ ಇಂತಹ ಧರ್ಮಪ್ರಚಾರ ಕಾರ್ಯಕ್ಕಾಗಿ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇವೆ.

ಪುರಾಣದಲ್ಲಿ ಹೇಳಲ್ಪಟ್ಟಿರುವ ಕಥೆಗಳನ್ನು ಚಾರಿತ್ರಿಕವಾಗಿ ಶೋಧಿಸಿ ಆಯಾಯ ಕಾಲದಲ್ಲಿ ಧರ್ಮ ಗ್ರಂಥದಲ್ಲಾದ ಬದಲಾವಣೆಗಳನ್ನೂ ಗೊತ್ತುಹಚ್ಚಿ ಪ್ರಕಟಪಡಿಸುವುದರಿಂದ ಧಾರ್ಮಿಕ ಇತಿಹಾಸವೂ ಬಯಲಿಗೆ ಬಂದು ಪೂರ್ವಿಕರ ಮತ್ತು ಈಗಿನವರ ಧಾರ್ಮಿಕ ವಿಚಾರಗಳನ್ನೂ ಹೋಲಿಸಿ ಈ ಕಾಲಕ್ಕೆ ತಕ್ಕಂತೆ ಪರಿಶೋಧಿಸಿ ನಡೆಯುವುದಕ್ಕೂ ಅನುಕೂಲವಾಗುವ ಮಹತ್ ಕಾರ್ಯವನ್ನು ಮಹಾಪ್ರಭುಗಳವರು ಕೈಗೊಳ್ಳಲೆಂದು ಅತ್ಯಂತ ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

(ಸಂ. ೫೩)

# ಹಾವೇರಿ ಹುಕ್ಕೇರಿ ಮಠದ ಶಿವಬಸವ ಮಹಾಸ್ವಾಮಿಗಳ ಲಿಂಗೈಕ್ಯ

ಶ್ರೀಮನ್ ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಶಿವಬಸವ ಸ್ವಾಮಿಗಳವರು ಹುಕ್ಕೇರಿಮಠ, ಹಾವೇರಿ ಇವರು ಪಾರ್ಥಿವ ಸಂವತ್ಸರದ ಪುಷ್ಯ ಶುದ್ಧ ೧೧ ರವಿವಾರ ದಿವಸ ಲಿಂಗೈಕ್ಯರಾದರು. ಲಿಂಗೈಕ್ಯರಾಗುವ ಕಾಲದಲ್ಲಿ ಇವರು ಎಚ್ಚರದಿಂದಿದ್ದು ಶಿವ ಪೂಜೆಯನ್ನು ಮಾಡಿ ತೀರ್ಥ ಪ್ರಸಾದಗಳನ್ನು ಸೇವಿಸಿ ಶಿವಮಂತ್ರ ಸ್ಮರಣೆಯನ್ನು ಮಾಡುತ್ತಾ ಆ ಕಾಲದಲ್ಲಿ ಮಠದಲ್ಲಿ ಕೂಡಿದ ಶಿವಭಕ್ತರನ್ನೆಲ್ಲಾ ನಿರೀಕ್ಷಿಸುತ್ತಾ ಕೇವಲ ಶಿವಾನುಭಾವಿಗಳಾಗಿದ್ದರು. ಇವರು ತಮ್ಮ ಜೀವಮಾನದಲ್ಲಿ ಲಿಂಗಪೂಜಾದುರಂಧರ ರಾಗಿ ಇದ್ದುದರ ಮತ್ತು ಯೋಗ ಸಾಧನೆಯಲ್ಲಿ ಬಲ್ಲವರಾಗಿ ಇದ್ದುದರ ಫಲವನ್ನು ಕೊನೆಯಲ್ಲಿ ಅನುಭವಿಸಿ ಉಳಿದವರಿಗೆ ಮಾರ್ಗದರ್ಶಕರಾದರು. ಇವರು ಸುಮಾರು ೮೦–೮೫ ವರ್ಷ ವಯೋವೃದ್ಧರಾಗಿಯೂ, ಜ್ಞಾನಬೋಧೆಯಲ್ಲಿ ಆಸಕ್ತಿಯುಳ್ಳವ ರಾಗಿಯೂ ಇದ್ದರು. ಶಿವಯೋಗ ಮಂದಿರವನ್ನು ಸ್ಥಾಪಿಸುವುದರಲ್ಲಿ ಬದ್ಧಕಂಕಣ ರಾಗಿದ್ದ ಹಾನಗಲ್ ಶ್ರೀ ನಿರಂಜನ ಪ್ರಣವ ಸ್ವರೂಪರಾದ ಸದಾಶಿವ ಸ್ವಾಮಿಗಳವರು ಇವರಲ್ಲಿ ಇದ್ದ ಸಮಾಜೋದ್ಧಾರ ಶಕ್ತಿಯನ್ನು ಕಂಡುಹಿಡಿದು ಇವರನ್ನು ಶಿವಯೋಗ ಮಂದಿರದ ಟ್ರಸ್ಟ್ ಕಮೀಟಿಯ ಅಧ್ಯಕ್ಷರನ್ನಾಗಿ ಮಾಡಿದ್ದರು. ಆ ಕೆಲಸವನ್ನು ಅನೇಕ ತೊಂದರೆಗಳು ಬಂದಾಗ್ಯೂ ಸಹಿಸಿಕೊಂಡು ಕೊನೆಯವರೆವಿಗೂ ಆ ಹಾನಗಲ್ ಶ್ರೀ ನಿರಂಜನ ಪ್ರಣವ ಸ್ವರೂಪರಾದ ಸದಾಶಿವ ಸ್ವಾಮಿಗಳವರ ಧ್ಯೇಯವನ್ನೇ ಸಾಧಿಸುತ್ತಾ ನೆರವೇರಿಸಿದರು. ಇವರು ನೂರಾರು ಜನರಿಗೆ ಅನುಗ್ರಹ ಉಪದೇಶಗಳನ್ನು ಕೊಟ್ಟು ಅನೇಕರನ್ನು ಸ್ವಾಮಿಗಳನ್ನಾಗಿ ಮಾಡಿದವರು ಹುಬ್ಬಳ್ಳಿಯ ಮೂರುಸಾವಿರಮಠದ ಈಗಿನ ಮಹಾಸ್ವಾಮಿಗಳಾದ ನಿ. ಜ. ಗುರುಸಿದ್ಧೇಶ್ವರ ಸ್ವಾಮಿಗಳವರು ಇವರಿಂದ ಅನುಗ್ರಹ ಉಪದೇಶವನ್ನು ಪಡೆದು ಸ್ವಾಮಿಗಳಾದವರೇ. ಇವರು ಲಿಂಗೈಕ್ಯರಾದ ದಿನ ಹಾವೇರಿ ವೀರಶೈವರು ನಾಲ್ಕು ಸಾವಿರ ರೂಪಾಯಿಗಳನ್ನು ತಮ್ಮಷ್ಟಕ್ಕೆ ತಾವೇ ಶೇಖರಿಸಿಕೊಂಡು ಅವರ ಅಂತ್ಯಕ್ರಿಯೆಯನ್ನು ಮಹಾ ವೈಭವದಿಂದ ನೆರವೇರಿಸಿದರು. ಇಂತಹವರು ಕಣ್ಮರೆಯಾದುದು ಸಮಾಜದ ಪ್ರಗತಿಗೆ ಕುಂದಕವಾದ ಕಾರ್ಯವಲ್ಲವೇ! ಹಾವೇರಿ ಸದ್ಧರ್ಮದೀಪಿಕೆಯು ಹೊರಡುವುದಕ್ಕೆ ಈ ಸ್ವಾಮಿಗಳೇ ಮುಖ್ಯ ಕಾರಣರು. ಇವರ ಪ್ರೋತ್ಸಾಹದಿಂದಲೇ ಅನೇಕ ಗ್ರಂಥಗಳು ಹೊರಬಿದ್ದುವು. ಇವರು ಲಿಂಗೈಕ್ಯ ರಾದುದಕ್ಕಾಗಿ ಗ್ರಂಥ ಪ್ರಚಾರದ ಅಭಿಲಾಷೆಯುಳ್ಳ ನಮಗೂ ವಿಷಾದವಾಗಿದೆ. ಇವರ ಅಂತ್ಯಕ್ರಿಯೆಯ ದಿನ ಸುಮಾರು ೧೦,೦೦೦ ಗಣತೃಪ್ತಿಯಾಯಿತು. ಆಮೇಲೆ ಏಕವಶ

ರುದ್ರಾಭಿಷೇಕ ಪೂಜೆಯು ಸಮಾಧಿಯ ಮೇಲೆ ನಡೆದು ಕೊನೆಯ ದಿನ ನಾಲ್ಕಾರು ಸಾವಿರ ಗಣರಾಧನೆಯಾಯಿತು. ಮುಧೋಳಿನ ಮಠಾಧ್ಯಕ್ಷರಾದ ಶ್ರೀ ಮೃತ್ಯುಂಜಯ ಸ್ವಾಮಿಗಳವರಿಂದ ಸುಶ್ರಾವ್ಯವಾದ ಪುರಾಣವೂ ಹನ್ನೊಂದು ದಿನಗಳವರೆವಿಗೆ ನಡೆ ಯಿತು. ಇಂತಹ ಶ್ರೀ ಶಿವಬಸವ ಸ್ವಾಮಿಗಳವರು ಲಿಂಗೈಕ್ಯರಾದುದಕ್ಕಾಗಿ ಭಕ್ತರೆಲ್ಲರೂ ಪರಮೋತ್ಸಾಹದಿಂದ ಉತ್ತರಕ್ರಿಯೆಗಳನ್ನು ನಡೆಸಿದುದು ಸ್ತುತ್ಯವಾದ ಕಾರ್ಯವಾಗಿದೆ.

—ಪ್ರಕಾಶಕ

ಈ ಸ್ವಾಮಿಗಳವರು ಲಿಂಗೈಕ್ಯರಾದ ಬಗ್ಗೆ ಕೊಪ್ಪಳದ ಗವಿಮಠದಲ್ಲಿ ಶ್ರೀ ನಿ. ಪ್ರಣವಸ್ವರೂಪ ಶಾಂತವೀರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಸದರಿ ಶ್ರೀ ಶಿವಬಸವ ಶಿವಯೋಗಿಗಳವರ ಮಹತ್ವದ ಗುಣಗಳ ವಿಷಯದಲ್ಲಿ ಶ್ರೀಮಾನ್ ಘನ ಲಿಂಗಚರ ಚಕ್ರವರ್ತಿ ಶ್ರೀ ನಿಜಗುಣ ಶಿವಾಚಾರ್ಯ ಪಟ್ಟಾಧ್ಯಕ್ಷರವರು ಯಲಬುರಿಗಿ ಮತ್ತು ಶ್ರೀ ರುದ್ರದೇಶಿಕರು ಎಡೆಹಳ್ಳಿ ಇವರೀರ್ವರೂ ಭಾಷಣ ಮಾಡಿದರು. ಮತ್ತು ಪಂಡಿತ ಗಂಗಾಧರ ಶಾಸ್ತ್ರಿಗಳು ಸ್ವಾಮಿಗಳ ಲಿಂಗೈಕ್ಯದ ಸುಖ ಮತ್ತು ವಿಯೋಗ ದುಃಖ ಇವುಗಳನ್ನು ವಿವರಿಸಿ ವ್ಯಾಖ್ಯಾನ ಮಾಡಿದರೆಂದೂ ಕೊನೆಗೆ ಅಧ್ಯಕ್ಷರು ಸ್ವಾಮಿ ಗಳವರ ನಿಜವಾದ ವಿರತಿ, ಶಾಂತಿ, ದಾತೃತ್ವ, ಶಿವಧರ್ಮನಿಷ್ಠೆ, ದಯೆ ಮೊದಲಾದ ಗುಣಗಳನ್ನು ಸರ್ವರಿಗೂ ಶ್ರುತಪಡಿಸಿದರು. ಶಿವೈಕ್ಯರಾದ ಸದರೀ ಸ್ವಾಮಿಗಳವರನ್ನು ಶಿವನಂತೆ ಸ್ಮರಿಸಬೇಕೆಂದು ಅಪ್ಪಣೆ ಕೊಡಿಸಿದರು. ಅನಂತರ ಶಿವಸ್ಮರಣೆಯಿಂದ ಸಭೆಯು ೧೦ ನಿಮಿಷಗಳ ಕಾಲ ಮೌನ ತಾಳಿ ಸಭೆಯ ವಿಸರ್ಜನೆಯಾಯಿತೆಂದು ತಿಳಿದುಬಂದಿದೆ.

(ಸಂ. ೫೬–೫೭)

# ಭಾವಲಿಂಗದ ಮಹತ್ವ

ವೀರಶೈವರು ಇಷ್ಟಲಿಂಗ, ಪ್ರಾಣಲಿಂಗ ಭಾವಲಿಂಗ ಎಂಬುದಾಗಿ ಮೂರು ಲಿಂಗಗಳ ಅನುಸಂಧಾನ ಮಾಡಬೇಕೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇಷ್ಟಲಿಂಗವು ಸ್ಥೂಲ ತನುವಿಗೆ ಸಂಬಂಧಪಟ್ಟುದೆಂದು ತಿಳಿದು ಅದರ ಅರ್ಚನೆಯನ್ನು ಮಾಡುತ್ತಾರೆ. ಪ್ರಾಣಲಿಂಗವು ಮನಸ್ಸಿಗೆ ಸಂಬಂಧಪಟ್ಟುದೆಂದು ತಿಳಿದು ಅದರ ಅನುಸಂಧಾನವನ್ನು ಮಾಡುತ್ತಾರೆ. ಭಾವಲಿಂಗವು ಒಳಹೊರಗೆ ವ್ಯಾಪಿಸಿರುವುದೆಂದು ಅದರ ಭಾವನೆಯನ್ನು ಮಾಡುತ್ತಾರೆ. ಇವುಗಳಲ್ಲಿ ಇಷ್ಟಲಿಂಗವು ತನ್ನ ತನುವಿನ ಭಾಗವನ್ನೆಲ್ಲಾ ಆವರಿಸಿಕೊಂಡಿರುವುದೆಂದು ಕೈಕಾಲು ಮೊದಲಾದ ಭಾಗಗಳನ್ನು ಇಷ್ಟಲಿಂಗದಲ್ಲಿಯೂ ಚಿಂತಿಸಿ ಪೂಜಿಸಬೇಕಾಗುತ್ತದೆ. ಪ್ರಾಣಲಿಂಗವು ಮನದಲ್ಲಿ ಇದೆ ಎನ್ನುವುದಾದರೆ ಅದು ಹೇಗೆ ಇದೆ ? ಅದರ ವ್ಯಾಪನೆ ಎಷ್ಟರ ಮಟ್ಟಿಗೆ ಇದೆ ? ಎಂಬುದನ್ನು ಚಿಂತಿಸಬೇಕಾಗುತ್ತದೆ. ಮೂರನೆಯದಾದ ಭಾವಲಿಂಗವು ಒಳಹೊರಗೆ ಇದೆ ಎಂದು ತಿಳಿಯುವಲ್ಲಿ ತನ್ನೊಳಗಿನ ಪ್ರಾಣ ಮತ್ತು ಭಾವದಲ್ಲಿ ಅದು ವ್ಯಾಪಿಸಿ ರುವುದನ್ನು ಸ್ವಲ್ಪಮಟ್ಟಿಗೆ ತಿಳಿಯಲು ಅವಕಾಶವಿದೆ. ಆದರೆ ಅದು ಹೊರಗೆ ಹೇಗೆ ಇದೆ ? ಅದರ ಸಂಬಂಧವು ಶಿವಭಕ್ತನಿಗೆ ಹೇಗೆ ಆಗುವುದು ? ಹೊರಗೆ ಎಂದರೆ ಯಾವ ಸ್ಥಳದಲ್ಲಿ ? ಯಾವ ರೀತಿ ಇದೆ ? ಎಂದು ತಿಳಿಯಬೇಕು. ಇವುಗಳನ್ನೆಲ್ಲಾ ತಿಳಿದರೆ ಭಾವ, ಭಾವದಿಂದ ಮನ, ಮನೋಮೂರ್ತಿಯಿಂದ ಇಷ್ಟಲಿಂಗ ಇವುಗಳನ್ನು ಸಂಬಂಧಿಸಿ ತಿಳಿಯಲಿಕ್ಕೆ ಅವಕಾಶವಾಗುತ್ತದೆ. ಒಬ್ಬ ಅದ್ವೈತಿಯು ತಾನು ಬ್ರಹ್ಮ ಎಂದು ತಿಳಿಯುವಲ್ಲಿ ತನ್ನ ಜೀವ ಅಥವಾ ಆತ್ಮವನ್ನು ಬ್ರಹ್ಮ ಎಂದು ತಿಳಿಯುತ್ತಾನೆ. ಮನುಷ್ಯನನ್ನು ನೋಡಿದಾಗ ಅವನಲ್ಲಿ ದೇಹ, ಪ್ರಾಣಜೀವ ಅಥವಾ ಆತ್ಮ ಹೀಗೆ ಮೂರು ಭಾಗಗಳಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಈ ಮೂರನ್ನು ಯಥಾಸ್ಥಿತಿಯಾಗಿ ತಿಳಿಯುವುವಕ್ಕೆ ತಕ್ಕ ಅನುಸಂಧಾನ ವನ್ನು ಹೇಳುವ ಶಿವಾದ್ವೈತವೇ ಬರೀ ಮಾತಿನ ಅದ್ವೈತಕ್ಕಿಂತ ಶ್ರೇಷ್ಠವಾದುದು. ಈ ಶಿವಾದ್ವೈತವನ್ನು ಅರಿದಾಚರಿಸಬೇಕಾದರೆ ಭಾವಲಿಂಗದ ಭಾವನೆಯನ್ನೇ ಚೆನ್ನಾಗಿ ಗೊತ್ತುಮಾಡಿಕೊಳ್ಳಬೇಕಾಗಿದೆ. ಅದು ಶಿವಾದ್ವೈತದ ಸಾಧನೆಗೆ ಮುಖ್ಯವಾಗಿದೆ. ಆದುದರಿಂದ ಇಂತಹ ವಿಷಯಗಳ ಕಡೆಗೆ ಈಗಿನ ವೀರಶೈವರ ಗಮನವು ಚೆನ್ನಾಗಿ ಬೀಳಲಿ ಎಂದು ಪ್ರಾರ್ಥಿಸುತ್ತೇನೆ.

—ಒಬ್ಬ ಭಕ್ತ.

(ಸ. ೧೪೪)

# ಸದ್ಧರ್ಮ ದೀಪಿಕೆಯ ಪ್ರಕಾಶಕನ ಪ್ರವಾಸ

ಈ ವರ್ಷ ಶ್ರಾವಣ ಮತ್ತು ಅಧಿಕ ಭಾದ್ರಪದದಲ್ಲಿ ಬೆಂಗಳೂರು, ಬೆಳಗಾಂವ ಜಿಲ್ಲಾ ಕಿತ್ತೂರು, ಗೋಕಾಕ ಬೈಲಹೊಂಗಲ, ಮುರಗೋಡು, ಮತ್ತು ಧಾರವಾಡ ಜಿಲ್ಲಾ ಸವಣೂರು, ಈ ಸ್ಥಳಗಳಿಗೆ ಹೋಗಿದ್ದೆನು.

ಬೆಂಗಳೂರಿನಲ್ಲಿ ಸರ್ಪಭೂಷಣ ಮಠದ ಶ್ರೀ ನಿರಂಜನವರ್ಯ ಮಹಾದೇವ ಸ್ವಾಮಿಗಳವರು ಬೆಂಗಳೂರ ಚಿಕ್ಕಪೇಟೆ ವೀರಭದ್ರಪ್ಪನವರ ಛತ್ರದಲ್ಲಿ ವಚನ ಪ್ರವಚನ ನಡೆಸಿ ಇರುವುದನ್ನು ನೋಡಿದೆನು. ವೀರಶೈವರಲ್ಲಿ ಶಿವಾನುಭಾವದ ಸ್ಥಿತಿಯನ್ನು ಸಹಜವಾಗಿ ತಿಳಿದುಕೊಂಡು ಬೋಧಿಸುವ ಸ್ವಾಮಿಗಳವರಲ್ಲಿ ಇವರೊಬ್ಬರು ಮುಖ್ಯ ರೆಂಬುದು ಗೋಚರಕ್ಕೆ ಬಂದು ಬಹಳ ಸಂತೋಷಪಟ್ಟೆನು. ಇವರು ಕಾಶಿಯಲ್ಲಿ ಮೊದಲು ಓದಿದ ಗ್ರಂಥಗಳಿಂದುಂಟಾದ ಧಾರ್ಮಿಕ ಜ್ಞಾನವನ್ನೂ, ಶಿವಶರಣರ ವಚನಗಳನ್ನು ಓದಿದಾಗ ಉಂಟಾದ ಧಾರ್ಮಿಕ ಜ್ಞಾನವನ್ನೂ ಹೋಲಿಸಿ ತಿಳಿದು ಕೊಂಡು ಮೊದಲು ಪಡೆದ ಜ್ಞಾನಕ್ಕಿಂತಲೂ ವಚನಗಳ ಧಾರ್ಮಿಕ ಜ್ಞಾನವು ಹೆಚ್ಚಿನ ದೆಂದು ಅಪ್ಪಣೆಕೊಡಿಸಿದರು. ಈ ಜ್ಞಾನವನ್ನು ಉಳಿದ ವೀರಶೈವ ಮಠಾಧಿಕಾರಿ ಗಳಲ್ಲಿಯೂ ಹರಡುವುದಕ್ಕೆ ಪ್ರಯತ್ನಪಡಬೇಕೆಂದು ಇವರನ್ನು ಪ್ರಾರ್ಥಿಸಿಕೊಳ್ಳಲು ಸದ್ಯಕ್ಕೆ ಮಠದ ಉತ್ಪತ್ತಿಯು ಅನುಕೂಲ ಸ್ಥಿತಿಯಲ್ಲಿ ಇಲ್ಲವಾದುದರಿಂದ ಯಾರಾ ದರೂ ಮಠಸ್ಥರು ತಮ್ಮ ಖರ್ಚಿನಿಂದ ಬೆಂಗಳೂರಿಗೆ ಬರುವುದಾದರೆ ಅವರಿಗೆ ಶಿವಾನು ಭಾವ ಜ್ಞಾನವನ್ನು ಬೆಳಗ್ಗೆ ೮ ರಿಂದ ೧೦ ರ ವರೆವಿಗೂ ಮಧ್ಯಾಹ್ನ ૩ ರಿಂದ ೫ ಘಂಟೆಯ ವರೆವಿಗೂ ಬೋಧಿಸಲು ಒಪ್ಪಿರುತ್ತಾರೆ. ಈಗ ಅದರಲ್ಲಿ ಇರುವ ವಿದ್ಯಾರ್ಥಿಗಳಿಗೆ ಭಾಷಾಜ್ಞಾನ ಮಾಡುವ ಸಂಸ್ಕೃತ ಗ್ರಂಥಗಳನ್ನೂ ವಚನ ಗ್ರಂಥ ಗಳನ್ನೂ ಮತ್ತು ಮತ ಜ್ಞಾನವನ್ನು ಬೋಧಿಸುವ ಸಂಸ್ಕೃತ ಗ್ರಂಥಗಳನ್ನೂ ಸಹಾ ಪಠ್ಯಪುಸ್ತಕಗಳಾಗಿ ಏರ್ಪಡಿಸಿ ಇರುವುದಾಗಿ ನನಗೆ ತಿಳಿಸಿದರು. ವಿಶ್ವವಿದ್ಯಾಲಯದ ಸಂಸ್ಕೃತ ಪರೀಕ್ಷೆ ಕೊಡಲುದ್ಯುಕ್ತರಾಗಿರುವ ಶಾಲೆಯ ವಿದ್ಯಾರ್ಥಿಗಳೆಲ್ಲರೂ ತಮ್ಮ ಪಠ್ಯಪುಸ್ತಕಗಳನ್ನು ಓದುವುದರ ಜೊತೆಗೆ ಧಾರ್ಮಿಕ ಜ್ಞಾನವನ್ನು ಹೊಂದುವು ದಕ್ಕಾಗಿ ಶ್ರೀಗಳವರು ಯೋಚಿಸಿದ ಪಠ್ಯಪುಸ್ತಕಗಳನ್ನು ಓದುವುದು ಅವಶ್ಯಕ.

ಈ ಧಾರ್ಮಿಕ ಜ್ಞಾನದ ಪಠ್ಯಪುಸ್ತಕಗಳ ಪರೀಕ್ಷೆಗಾಗಿ ವೀರಶೈವರ ಎಲ್ಲ ಶಾಲೆಗಳವರು ಕೂಡಿ ಒಂದು ಪರೀಕ್ಷಕ ಸಂಘವನ್ನೇ ಏರ್ಪಡಿಸಿಕೊಂಡು ಅವರು ಎಲ್ಲ ಶಾಲೆಯ ವಿದ್ಯಾರ್ಥಿಗಳನ್ನೂ ವರ್ಷಕ್ಕೊಮ್ಮೆ ಬರಹ ಮೂಲಕವಾಗಿ ಒಮ್ಮೆಗೆ ಪರೀಕ್ಷಿಸಿ ಅವರ ಯೋಗ್ಯತೆಯನ್ನು ನಿರ್ಧರಿಸುವ ಏರ್ಪಾಡು ಮಾಡುವುದು ಈಗ

ಆವಶ್ಯಕವಾದ ಕಾರ್ಯವಾಗಿದೆ. ಇಂತಪ ಧಾರ್ಮಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಜಿತೇಂದ್ರಿಯರಾದವರನ್ನೇ ಮುಂದೆ ಮಠಾಧಿಕಾರಿಗಳನ್ನಾಗಿ ನಿಯಮಿಸಿದರೆ ಧಾರ್ಮಿಕ ಜ್ಞಾನವು ಸಾರ್ವತ್ರಿಕವಾಗಿ ಒಂದೇ ವಿಧವಾಗಿ ಹರಡಲಿಕ್ಕೆ ಅನುಕೂಲವಾಗುತ್ತದೆ. ಈಗಿನ ಶೋಚನೀಯ ಸ್ಥಿತಿಯನ್ನು ಲಕ್ಷಿಸಿ ವೀರಶೈವರು ಇನ್ನು ಮುಂದಾದರೂ ಎಚ್ಚತ್ತುಕೊಳ್ಳುವುದು ಮೇಲು ಕಿತ್ತೂರು, ಗೋಕಾಕ, ಬೈಲಹೊಂಗಲ, ಮುರಗೋಡು ಈ ಕಡೆಗಳಲ್ಲಿ ಪುರಾಣ ಶ್ರವಣ ಶ್ರಾವಣಗಳು ನಡೆದಿದ್ದವು. ಅಲ್ಲಿ ಸ್ವಲ್ಪಮಟ್ಟಿಗೆ ವೀರಶೈವರ ಧಾರ್ಮಿಕ ಜ್ಞಾನದ ವಿಷಯವಾಗಿ ಹೇಳಿದುದಾಯಿತು. ಸವಣೂರಲ್ಲಿ–ಗುರುವರ್ಗಕ್ಕೆ ಸೇರಿದ ಚರಂತಿಮಠದಲ್ಲಿ–ಸಿಂಗಿರಾಜ ಪುರಾಣವು ಸಾಗಿದ್ದಿತು. ವೇ. ನಾಗನೂರ ಷಡಕ್ಷರ ಶಾಸ್ತ್ರಿಗಳು ಪುರಾಣವನ್ನು ಹೇಳುತ್ತಿದ್ದರು. ಪುರಾಣವು ಮುಗಿದ ದಿವಸ ಶಾಸ್ತ್ರಿಗಳು ಬಸವೇಶ್ವರನ. ಬೋಧೆಯು ವೀರಶೈವ ಮತದ ಮುಖ್ಯ ಸಾರ ವೆಂತಲೂ ಈತನ ನಾಮಸ್ಮರಣೆ ಮಾಡಿ ಭಕ್ತಿಯಿಡುವುದು ಪ್ರತಿಯೊಬ್ಬ ವೀರಶೈವ ನಿಗೂ ಅವಶ್ಯಕವಾದುದೆಂತಲೂ ಮುಂತಾಗಿ ಹೇಳಿ ಪುರಾಣವನ್ನು ಮುಗಿಸಿದನು. ಆ ಚರಂತಿ ಮಠದ ಶ್ರೀಗಳವರೂ ಕೂಡ ಬಸವೇಶ್ವರನಲ್ಲಿ ಪೂಜ್ಯತೆ ತೋರಿ ಸುವ ಭಾಷಣ ಮಾಡಿದುದಲ್ಲದೆ ಕಡೆಯಲ್ಲಿ ಬಸವೇಶ್ವರ ಮಹರಾಜಕೀ ಜಯ್ ಎಂಬು ದಾಗಿ ಜಯ ಘೋಷವನ್ನೂ ಮಾಡಿದರು. ಕೆಲವರು ಗುರುವರ್ಗದವರು 'ಬಸವ' ಎಂಬ ನಾಮೋಚ್ಚಾರಣೆಯನ್ನೂ ಮಾಡಬಾರದೆಂದು ಹೇಳುತ್ತಾ ಬಲವಾದ ಚಳುವಳಿ ಯನ್ನು ನಡಸಿ ಇದ್ದಾಗ್ಯೂ ಪೂರ್ವ ಸಂಪ್ರದಾಯದಂತೆ ನಡೆದ ಮಠಗಳೂ ಇರುವ ವೆಂಬುದನ್ನು ತಿಳಿದು ಬಹಳ ಸಂತೋಷವುಂಟಾಯಿತು.

—ಪ್ರಕಾಶಕ

(ಸಂ. ೩೫–೩೬–೩೭)

# ರಾಷ್ಟ್ರಸಂಘದ ರಾಜ್ಯಾಡಳಿತವೂ ಧರ್ಮಸಂಸ್ಥೆಗಳು

ಹಿಂದೂ ದೇಶವು ಧರ್ಮದ ಮೂಲರಾಜ್ಯ. ಅನೇಕ ಸಾವಿರ ವರ್ಷಗಳಿಂದಲೂ ಇಲ್ಲಿ ಧರ್ಮವಿಚಾರಕ್ಕೆ ಅವಕಾಶವು ಕೊಡಲ್ಪಟ್ಟು ಉಪನಿಷತ್ತು, ಆಗಮ ಮುಂತಾದ ಅನೇಕ ಧರ್ಮಗ್ರಂಥಗಳು ಅಭ್ಯುದಯವಾಗಿ ಇವೆ. ಧರ್ಮ ಎಂದರೆ ಪರವಸ್ತುವಾದ (ಮೂಲವಸ್ತುರೂಪನಾದ) ಮಹಾದೇವನ ವಿಚಾರವಾಗಿ ತಿಳಿಯುವುದು. ಈ ತಿಳಿವಳಿಕೆಯ ಅನುಭವ, ಈ ಅನುಭವವನ್ನು ಅನುಸರಿಸಿ ನಡೆಯುವ ಭಾವ (ಅನುಭಾವ), ಇವೇ ಮುಂತಾದ ವಿಷಯಗಳನ್ನು ಒಳಗೊಂಡ ಆಚರಣೆ. ಈ ವಿಷಯದಲ್ಲಿ ಯಾರ ಯಾರ ತಿಳಿವಳಿಕೆ ಎಷ್ಟು ಮಟ್ಟದಲ್ಲಿ ಇರುವುದೋ ಆ ಮಟ್ಟಕ್ಕೆ ತಕ್ಕಂತೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಎಂಬ ಮುಖ್ಯವಾಗಿ ನಾಲ್ಕು ಭೇದದ ಮತಗಳಾಗಿ ಇರುವುವು. ಇವರು ಮೂಲ ವಸ್ತುವನ್ನು (ಮಹಾದೇವನನ್ನು) ಯಾವ ರೀತಿ ತಿಳಿದಿರುವರೋ ಆ ರೀತಿಗೆ ಅನುಸಾರವಾದ ನಡತೆಗಳು ಆಯಾ ಜನರಲ್ಲಿ ಇವೆ. ಆದರೆ ಇವುಗಳಲ್ಲಿನ ಪರಸ್ಪರ ವ್ಯತ್ಯಾಸವೇನು ? ಯಾವ ಆಚರಣೆಯು ಸುಲಭವಾದುದೂ ಬಹಳ ಪ್ರಯೋಜನವನ್ನು ಕೊಡತಕ್ಕದೂ ಆಗಿರುವುದೆಂಬ ಖಂಡನ ಮಂಡನಾತ್ಮಕವಾದ ವಿಮರ್ಶೆಗಳು ನಡೆಯುತ್ತಿರುವುದು ಅಪರೂಪವಾಗಿದೆ. ರಷ್ಯದಲ್ಲಿ ಇರುವಂತೆ ರಾಜಕೀಯವಾಗಿ ಮತಕ್ಕೆ ಪುರಸ್ಕಾರ ಕೊಡದೆ ಇದ್ದರೆ ಧರ್ಮದ ನಿಜಸ್ಥಿತಿಯನ್ನು ತಿಳಿಯಲಿಕ್ಕೆ ಪ್ರಯತ್ನಪಡದೆ ತಮ್ಮ ತಮ್ಮ ಮತವೇ ಶ್ರೇಷ್ಠವೆಂದು ಜನರು ನಾನಾಬಗೆಯಾಗಿ ಇರಲಿಕ್ಕೆ ಅವಕಾಶವಾಗುತ್ತದೆ. ಆದುದರಿಂದ ಹಿಂದೂ ದೇಶದಲ್ಲಿ ಧರ್ಮಕ್ಕೆ ಸೇರಿದಂತೆ ರಾಜಕೀಯವು ಇರಲಿಕ್ಕಾರಂಭಿಸಿದರೆ ಹಿಂದೂ ದೇಶದ ಧಾರ್ಮಿಕ ಅನೈಕ್ಯಮತ್ತತೆಯು ಅಳಿಯುವುದೇ ಇಲ್ಲ. ಹೀಗಾಗುವ ಬದಲಾಗಿ ಯಾರಾದರೂ ಯಾವ ಮತದ ಖಂಡನೆಯನ್ನಾಗಲೀ ಮಂಡನೆಯನ್ನಾಗಲೀ ಸ್ವೇಚ್ಛೆಯಾಗಿ ಮಾಡಲು ಯಾವ ನಿರ್ಬಂಧವೂ ಇಲ್ಲವಂತೆ–ರಷ್ಯ ದೇಶದಲ್ಲಿ ಈ ನಿಯಮವಿರುವಂತೆ–ಇಲ್ಲಿಯೂ ಏರ್ಪಡಿಸಿ ಯಾವ ಮತವೂ ಮಹಾದೇವನ ಬೆಂಬಳಿಗಾಗಿ ಹೆಚ್ಚು ಹೊತ್ತುತೆಗೆದುಕೊಳ್ಳದೆ, ಹೆಚ್ಚು ಖರ್ಚು ಮಾಡದೆ, ಹೆಚ್ಚು ಗೊಂದಲಕ್ಕೆ ಹೋಗದೆ, ಆಧುನಿಕ ಶಾಸ್ತ್ರಕಾರರು (Scientists) ಒಪ್ಪುವಂತಹ ನಿಯಮಗಳಿಗೆ ಅನುಸಾರವಾಗಿ, ಸಕಲ ಜನಾನುಕೂಲವಾಗಿ ತನ್ನ ಪ್ರಕ್ರಿಯೆಯನ್ನು ನಡೆಸುವುದೋ ಅಂತಹ ಒಂದು ಮತವನ್ನೇ ಅಥವಾ ಒಂದು ಮಾರ್ಗವನ್ನೇ ಪ್ರಚಾರ ಮಾಡುವ ಕಾರ್ಯವನ್ನು ಅಂಗೀಕರಿಸಿದರೆ ಹಿಂದೂ ದೇಶದ ಧರ್ಮ ಮುಂದೂ ಕಾದಿಟ್ಟ ಕೀರ್ತಿಯು ಸರಕಾರಕ್ಕೆ ಬರುತ್ತದೆ. ಈಗಿನ ಮತಗಳ ಖಂಡನ

ಮಂಡನಗಳು ಬಹಿರಂಗ ಸಭೆಯಲ್ಲಿ ಯಾತ್ರೆಗಳಲ್ಲಿ ರಾಜಕೀಯ ಸೂತ್ರಕಾರರು ಸೇರುವ ಸಭೆಯೇ ಮುಂತಾದ ಕಡೆಗಳಲ್ಲಿ ನಡೆದು ಅವುಗಳ ಫಲಿತಾಂಶವನ್ನು ಕೇಂದ್ರರಾಜ್ಯ ಸೂತ್ರಕಾರರೂ ತಿಳಿದು ತಾವೂ ಅಂತಹ ಸಭೆಗಳನ್ನು ಏರ್ಪಡಿಸಿ ಅಲ್ಲಿ ನಿರ್ಣಯವಾದಂತೆ ಪ್ರಚಾರಕ್ಕೆ ತರುವ ಏರ್ಪಾಡಾಗಬೇಕು. ಹೀಗಾದರೆ ಹಿಂದೂ ದೇಶವು ಒಂದು ಧರ್ಮಮಾರ್ಗಕ್ಕೆ ರೂಪಾಂತರಗೊಳ್ಳಲು ಅನುಕೂಲವಾಗುತ್ತದೆ. ವೇದಾಗಮಾದಿಗಳನ್ನು ನಂಬುವ ಹಿಂದೂ ದೇಶದ ಮೂಲಧಾರ್ಮಿಕರಲ್ಲದೆ ಹಿಂದೂ ದೇಶದಲ್ಲಿಯೇ ಉದ್ಭವವಾದ ಆರ್ಯಸಮಾಜ, ಸಿಕ್ಕರ ಪಂಗಡ, ಜೈನಧರ್ಮ ಬೌದ್ಧ ಮತ ಮುಂತಾದ ಹಿಂದೀಯರೂ ಇಲ್ಲಿ ಇದ್ದಾರೆ. ಪರದೇಶದಲ್ಲಿ ಉದ್ಭವವಾಗಿ ಇಲ್ಲಿಗೆ ಬಂದ ಮಹಮ್ಮದೀಯರು, ಕ್ರೈಸ್ತರು, ಪಾರ್ಸಿಗಳು ಮುಂತಾದವರೂ ಇಲ್ಲಿ ಇದ್ದಾರೆ. ಇವರೆಲ್ಲರೂ ಒಡಂಬಟ್ಟರೆ ಇವರೆಲ್ಲರನ್ನೂ ಸೇರಿಸಿಕೊಂಡೇ ಧರ್ಮವಿಚಾರವು ನಡೆಯುವುದು ಒಳ್ಳೆಯದು.

ಈ ರೀತಿ ಧರ್ಮ ವಿಚಾರವು ನಡೆಯಲಿಕ್ಕೆ ತಕ್ಕ ಹಣವು ಬೇಕೆಂಬುದೊಂದು ಮೂಲಪ್ರಶ್ನೆ. ಈ ವರೆವಿಗೆ ಧಾರ್ಮಿಕಕ್ಕಾಗಿ ರಾಜಕೀಯದಲ್ಲಿ ವೆಚ್ಚ ಮಾಡುವ ಹಣ, ಧರ್ಮೋನ್ನತಿಗಾಗಿ ಮುಂದೆ ಸರಕಾರದವರು ಕೊಡಬಹುದಾದ ಹೆಚ್ಚಿನ ಹಣ ಭರತಖಂಡಕ್ಕೆಲ್ಲಾ ಒಂದು ಧರ್ಮ ಮಾರ್ಗವನ್ನು ಬಯಸುವ ಧರ್ಮಸಂಸ್ಥೆಗಳಲ್ಲಿ ಉತ್ಪತ್ತಿಯಾಗುವ ಹಣದಲ್ಲಿ ಶೇಕಡಾ ಕೆಲವು ಭಾಗ, ಧರ್ಮನಿಷ್ಟರು ಕೊಡಬಹುದಾದ ಉದಾರ ದಾನ ಮುಂತಾದುವುಗಳ ಮೂಲಕವಾಗಿ ಈ ಹಣವನ್ನು ಒದಗಿಸ ಬಹುದು.

ಒಟ್ಟಿನಲ್ಲಿ ರಾಜಕೀಯ ಸೂತ್ರಧಾರಿಗಳಲ್ಲಿ ಒಂದು ಬಿನ್ನಹವನ್ನು ಮಾಡ ಬೇಕಾಗಿದೆ. ರಷ್ಯಾ ದೇಶದಲ್ಲಿ ಧರ್ಮವನ್ನು ಮೊದಲು ಅಲ್ಲಗಳೆದು ದೇವಾಲಯ ಗಳನ್ನೆಲ್ಲಾ ಸುಟ್ಟುಹಾಕಿ ಕೋಟ್ಯಾಂತರ ರೂಪಾಯಿಗಳು ನಷ್ಟವಾದ ಮೇಲೆ ರಾಜಕೀ ಯದಲ್ಲಿ ಮಹಾದೇವನಿದ್ದಾನೆ ಎಂಬ ಭಾವನೆ ಬಂದು ಈಗ ಪ್ರಾರ್ಥನಾ ಮಂದಿರ (Church) ಮೊದಲಾದವುಗಳನ್ನು ಕಟ್ಟಿಸಲವಕಾಶ ಕೊಡುತ್ತಿರುವಂತೆ ಮತ್ತು ಮಹಾಭಾರತವನ್ನು ರಷ್ಯನ್ ಭಾಷೆಗೆ ಭಾಷಾಂತರಿಸುವಂತೆ ಹಿಂದೂ ದೇಶದಲ್ಲಿನ ಧರ್ಮದ ಗತಿಯು ಆಗಬಾರದು. ರಾಜಕೀಯ ಸಂಸ್ಥೆಯವರು ಧರ್ಮಸಂಸ್ಥೆಗಳ ಉತ್ಪತ್ತಿಯನ್ನು ಆಯಾ ಧರ್ಮೋನ್ನತಿಗೆ ಅವಕಾಶಕೊಡುವಂತೆ ವೆಚ್ಚ ಮಾಡಲು ಯಾವ ಕೊರತೆಯೂ ಇಲ್ಲದಂತೆ ಬಿಟ್ಟುಬಿಡಬೇಕು. ಮತ್ತು ಬಹು ಜನರು ನಿರ್ಧ ರಿಸಿದ ಒಂದೇ ಮಾರ್ಗದ ಧಾರ್ಮಿಕವನ್ನು ಬಯಸುವವರನ್ನೇ ಧರ್ಮ ಪ್ರಗತಿ ಪರರನ್ನಾಗಿ ಅಂಗೀಕರಿಸಿ ಅವರ ಮೂಲಕ ಧಾರ್ಮಿಕ ಸುಧಾರಣೆಯನ್ನು ಮಾಡ ಬೇಕು. ಹೀಗೆ ಮಾಡಿದಲ್ಲದೆ ಧರ್ಮ ಸುಧಾರಣೆಯಾಗುವುದಿಲ್ಲ.

ದೇವಸ್ಥಾನಗಳು ಮುಂತಾದವುಗಳಿಗಾಗಿ ಹಿಂದೂ ದೇಶದಲ್ಲಿ ಹೆಚ್ಚು ಖರ್ಚು ಮಾಡುತ್ತಿರುವುದೇ ಮುಂತಾದವು ರಾಷ್ಟ್ರದ ಆರ್ಥಿಕ ಪ್ರಗತಿಗೆ ಕೊರತೆಯಾದ ಕಾರ್ಯಗಳೆಂದು ಒಪ್ಪಲಿಕ್ಕೆ ಅಡ್ಡಿಯಿಲ್ಲ. ದೇವನು ನಮಗಿಂತ ಭಿನ್ನನಾಗಿ ಇದ್ದಾನೆ ಎಂಬ ಜ್ಞಾನವನ್ನು ತಂದು ಕೊಡುವುದಿಷ್ಟೇ ದೇವಸ್ಥಾನಗಳ ಕೆಲಸ. ಹೆಚ್ಚು ವೆಚ್ಚದಿಂದ ಅಲ್ಪ ಫಲ ಕೊಡುವ ಧಾರ್ಮಿಕ ಕಾರ್ಯಗಳನ್ನು ಕಡಿಮೆ ಮಾಡುವ ಉಪಾಯವನ್ನು, ರಾಜಕೀಯವಾಗಿ ಏರ್ಪಡಿಸುವುದೂ ಅನ್ಯಾಯವಾದುದಲ್ಲ. ಮೂರ್ತಿಪೂಜೆಯನ್ನು ತಿರಸ್ಕರಿಸಿ ಅನೇಕ ಉಪನಿಷತ್ತುಗಳು ಧರ್ಮವನ್ನು ಬೋಧಿಸುತ್ತವೆ. ಈಗಿನ ದೇವಾಲಯಗಳನ್ನು ಧರ್ಮ ಪ್ರವಚನ ಶಾಲೆಗಳಾಗಿ ಮಾರ್ಪಡಿಸುವುದು ಒಳ್ಳೆಯದು.

—ಪ್ರಕಾಶಕ

(ಸಂ. ೬೨–೬೩)

# ಅಮೇರಿಕೆಯ ಚಿಕ್ಯಾಗೋ ವಿಶ್ವವಿದ್ಯಾಲಯದಿಂದ ಡಾಕ್ಟರ್ ವಿಲಿಯಂ ಮೆಕ್ಕಾರ್ಮಿಕ್

ಇವರು ವೀರಶೈವ ಧರ್ಮ ಹಾಗೂ ಸಾಹಿತ್ಯವನ್ನು ಅಭ್ಯಾಸ ಮಾಡಲು ಕರ್ನಾಟಕಕ್ಕೆ ಬಂದಿದ್ದಾರೆ. ಅವರಿಗೆ ಸಹಾಯ ಮಾಡಬೇಕೆಂಬುವರು ಅವರೊಡನೆ ಪತ್ರವ್ಯವಹಾರ ಮಾಡುವವರಾಗಲಿ, ಅವರು ವೀರಶೈವರಲ್ಲಿ ಇಲ್ಲಿ ಬಳಕೆಯಾಗಿ ಓದುತ್ತಿರುವ ಪುರಾಣಗಳ ಹೆಸರಿನ ಪಟ್ಟಿಯು ಬೇಕೆಂದೂ ಅಪೇಕ್ಷಿಸುತ್ತಾರೆ. ಇವರ ಆಕಾಂಕ್ಷೆಯು ಬಹಳ ಉತ್ತಮವಾದುದು, ವೀರಶೈವ ಧರ್ಮದ ಅಭ್ಯಾಸ ಮಾಡುವುದರಿಂದ ಇಡೀ ಜಾಗತಿಕ ವಿಚಾರಧರ್ಮಸಾರವನ್ನೇ ಇವರು ತಿಳಿದಂತಾಗುತ್ತದೆ. ಶ್ರೀ ವಿವೇಕಾನಂದರು ಅಮೇರಿಕಾದಲ್ಲಿ ಭಾರತೀಯ ಧರ್ಮದ ಬೀಜವನ್ನು ಬಿತ್ತಿದರು. ಆಗ ಅವರು ವೀರಶೈವ ಧರ್ಮವನ್ನು ಚೆನ್ನಾಗಿ ತಿಳಿದಿರಲಿಲ್ಲವಾದುದರಿಂದ ಅದನ್ನು ಅವರು ಬಿತ್ತಲಿಲ್ಲ. ಆದರೂ ಅವರು ಬಿತ್ತಿದ ಬೀಜದ ಅಂಕುರವು ಬೆಳೆದು ವೀರಶೈವ ಧರ್ಮವನ್ನು ಅಭ್ಯಾಸಮಾಡಬೇಕೆಂಬ ಕುತೂಹಲದ ಎಲೆಗಳನ್ನು ಬಿಡಲು ತೊಡಗಿದೆ. ಈ ಎಲೆಗಳು ಚೆನ್ನಾಗಿ ಬೆಳೆದು ಹೂ ಕಾಯಿ ಹಣ್ಣುಗಳಾದರೆ ಭಾರತೀಯ ಧರ್ಮದ ಬೀಜದಿಂದಾದ ಸುಶೋಭಿತವಾದ ಮರವು ಅಮೇರಿಕನ್ನರ ದೃಷ್ಟಿಗೆ ವ್ಯಕ್ತವಾಗುತ್ತದೆ. ಅಮೇರಿಕಾದಲ್ಲಿ ಈಗ ವ್ಯಾಪಿಸಿರುವ ಶ್ರೀ ರಾಮಕೃಷ್ಣ ಪರಮಹಂಸರ ಬೋಧೆಯ ಶಾಖಾಸಂಘಗಳಿಗಿಂತಲೂ ವೀರಶೈವ ಸಂಘವು ಅಲ್ಲಿ ಹೆಚ್ಚಾಗಿ ಕೆಲಸಮಾಡಬೇಕಾಗಿದೆ. ಆದರೆ ಆ ಕೆಲಸವೇನೂ ನಡೆದಿಲ್ಲ. ಈ ಕೊರತೆಯನ್ನು ವೀರಶೈವ ಧರ್ಮದ ದುರ್ದೈವದ ಪಾಲಿಗೆ ಸೇರಿಸಬೇಕಾಗಿದೆ. ಈಗ ಬಂದಿರುವ ಮೇಲ್ಕಂಡ ಶ್ರೀ ಮೆಕ್ಕಾರ್ಮಿಕ್ ರವರಿಗೆ ವೀರಶೈವ ಧರ್ಮವು ಚೆನ್ನಾಗಿ ತಿಳಿಯುವಂತೆ ಏರ್ಪಡಿಸುವದು ಉತ್ತಮವಾಗಿದೆ. ಇವರಾದರೂ ಕರ್ನಾಟಕವಲ್ಲೆಲ್ಲಾ ಸಂಚರಿಸಿ ಅಲ್ಲಲ್ಲಿ ವೀರಶೈವ ಧರ್ಮಜ್ಞರ ವಿಶೇಷ ವಿಷಯಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಇವರು ಸದ್ಧರ್ಮ ದೀಪಿಕೆಯ ಕಾರ್ಯಾಲಯಕ್ಕೆ ಬರುವ ಸುಯೋಗವು ದೊರಕಿದರೆ ಇಲ್ಲಿಂದಲೂ ವೀರಶೈವ ಧರ್ಮದ ಕೆಲವು ವಿಷಯಗಳನ್ನು ಗ್ರಹಿಸಿಕೊಳ್ಳಲು ಅನುಕೂಲವಾಗಬಹುದು. ದೀಪಿಕೆಯು ಸಹಾಯ ಮಾಡುವುದಿಷ್ಟೇ ಆಗಿದೆ.

—ಪ್ರಕಾಶಕ

(ಸಂ. ೧೪೧)

# ತುಂಡು ಗುಂಡು

## (ಕೊರತೆಯನ್ನು ರೂಪಿಸುವುದು)

---

(ಶ್ರೀ ಶಿವಯೋಗ ಮಂದಿರದ ಸುವರ್ಣ ಮಹೋತ್ಸವ ಮೊದಲಾದವುಗಳಲ್ಲಿ ನಡೆದ ವಿಷಯುಗಳ ವಿಮರ್ಶೆ)

೧) ಶ್ರೀ ರೇವಣಸಿದ್ಧರು ವೀರಶೈವ ಮತಸ್ಥಾಪಕರೆಂದು ಮಹಾಸಭೆಯಲ್ಲಿ ನಿರ್ಣಯಿಸಬೇಕಾಗಿ ಹೇಳುತ್ತಾ ೩-೪ ಜನ ಮಹನೀಯರು ನಿಂತರು.

ಬಸವೇಶ್ವರನು ಜೀರ್ಣವಾಗಿದ್ದ ಹಳೆಯ ಮನೆಯನ್ನು ಭವ್ಯವಾಗಿ ಹೊಸ ಮನೆಯಾಗಿ ಷಟ್‌ಸ್ಥಲಾತ್ಮಕವಾಗಿ ರಚಿಸಿದನು. ಮತಸ್ಥಾಪನೆಯವರು ಇಂಥವರೇ ಎಂದು ನಿರ್ಧರಿಸುವುದು ಈಗ ಸಾಧ್ಯವಿಲ್ಲ. ಇತಿಹಾಸ ಶೋಧನೆಯಿಂದ ತಿಳಿಯ ಬೇಕು ಎಂದು ವ್ಯಾಖ್ಯಾನಗಳಾದವು. ಆದರೂ ಮೊದಲಿನ ಮಾತನ್ನೇ ಪುನಃ ಪುನಃ ವಾದಿಸಲಿಕ್ಕೆ ಆರಂಭಿಸಲು ಮಾನ್ಯ ಅಧ್ಯಕ್ಷರು (Sit down) ಎಂದು ಹೇಳಿ ಮೊದಲಿನ ಪ್ರಶ್ನೆಕಾರರನ್ನು ಕೂಡುವಂತೆ ಮಾಡಿದರು. ಇಲ್ಲದಿದ್ದರೆ ಬೀರೂರು ಮಹಾಸಭೆಯಂತೆ ಮಹಾಕಲಹವಾಗುತ್ತಿತ್ತೋ ! ಏನೋ ! ಇನ್ನು ಮುಂದೆ ಆಚಾರ್ಯರ ಅನುಯಾಯಿಗಳು ಚಾರಿತ್ರಿಕವಾಗಿ ತಮ್ಮ ಆಚಾರ್ಯರ ಕಾಲವನ್ನು ಪರಿಶೋಧಿಸಿ ಪ್ರಸಿದ್ಧಪಡಿಸುವುದು, ಆಚಾರ್ಯರು ಧರ್ಮಸ್ಥಾಪಕರಾಗಿ ಏನೇನು ಕೆಲಸ ಮಾಡಿದರೆಂಬುದೂ ಪ್ರಸಿದ್ಧವಾಗುವಂತೆ, ಐತಿಹಾಸಿಕವಾಗಿ ತೋರಿಸುವುದು, ಉತ್ತಮವಲ್ಲವೇ? ಉದಾರಣೆಗೆ ವಿಭೀಷಣನಿಗಾಗಿ ಮೂರು ಕೋಟಿ ಲಿಂಗ ಸ್ಥಾಪನೆ ಮಾಡಿದ್ದುದು ಶೈವವಾಗಿದೆ. ಆಚಾರ್ಯರು ವೀರಶೈವರ ಇಷ್ಟಲಿಂಗವನ್ನು ಕೊಟ್ಟರೆಂದು ಹೇಳಿದಂತೆ ಆಗುವುದಿಲ್ಲ.

೨) ವೀರಶೈವರು ಧರಿಸುವ ಇಷ್ಟಲಿಂಗದಲ್ಲಿ ಲಿಂಗದ ಪೀಠವು ಪ್ರಪಂಚ ದ್ಯೋತಕವೆಂದು ಲಿಂಗದ ವಿಷಯದ ಉಪನ್ಯಾಸಕರು ಹೇಳಿದರು. ಪ್ರಪಂಚವೂ ಆರು ತತ್ವ, ಲಿಂಗವೂ ಆರು ಸ್ಥಲ, ಮನುಷ್ಯ ಶರೀರದಲ್ಲಿ ಭೂಮಧ್ಯದವರೆಗೆ ಆರು ಸ್ಥಲ, ಹೀಗೆ ತಿಳಿದರೆ ಅಂಗ ಲಿಂಗ ಸಾಮರಸ್ಯವಾಗುತ್ತದೆ. ಈ ಮರ್ಮವು ಉಪನ್ಯಾಸಕರಿಗೆ ತಿಳಿಯಲಿಲ್ಲವೇ ?

೩) ವೀರಶೈವವು ಒಂದು ಮತವೆಂದು ಒಬ್ಬರ ಅಭಿಪ್ರಾಯ ಮನ್‌ಧಾತುವಿನಿಂದ ಮತ ಎಂಬ ಪದ ಆಗಿದೆ. ಆದುದರಿಂದ ವೀರಶೈವವು ಒಂದು ಮತ ಎಂದು ಒಬ್ಬರು ಮಹನೀಯರು ಹೇಳಿದರು. ಏಸುಕ್ರಿಸ್ತ, ಮಹಮ್ಮದ ಪೈಗಂಬರ, ಮೊದಲಾದ ಮನುಷ್ಯರು ಮನನ ಮಾಡಿದ್ದು ಅವರವರ ಮತ ಎನ್ನಬಹುದು.

ಹಾಗೆ ವೀರಶೈವವನ್ನು ಒಬ್ಬರೂ ಹೇಳಿಲ್ಲ. ಜಾಗತಿಕ ತತ್ವ, ಧರ್ಮವನ್ನೇ ಹೇಳಿರುವುದರಿಂದಲೂ "ವೀರ ನಿಯಮವ್ರತ ಧರ್ಮಪರರ್" ಎಂದು ಮಗ್ಗೆಯ ಮಾಯಿದೇವರು ಹೇಳಿರುವುದರಿಂದಲೂ ಇದು ವೀರಶೈವ ಧರ್ಮವೆಂದು ಕರೆಯುವುದೇ ಯುಕ್ತವಲ್ಲವೇ ?

೪) ಶಿವನ ಅನುಭವ ಗೋಷ್ಠಿಯಲ್ಲಿ ವೀರಶೈವರಿಗೆ ಪೂಜ್ಯನಾದ ಶಿವನು ಯಾರು ಎಂಬುದರ ವಿವರವೇ ಈ ಗೋಷ್ಠಿಯಲ್ಲಿ ಬರಲಿಲ್ಲ. ನನೆಯೊಳಗಣ ಪರಿಮಳದಂತೆ ಎಂಬುದರ ವಿವರವೇ ಬರಲಿಲ್ಲ. ಶಿವತತ್ವವು ಸೂಕ್ಷ್ಮವಾದುದು. ಅಣೋರಣೀಯಾನ್ ಎಂಬುದರ ವಿವರವು ಬಯಲಿಗೆ ಬಂದಿದ್ದರೆ ಚೆನ್ನಾಗಿರುತ್ತಿತ್ತು.

೫) ಕ್ರಿ. ಶ. ೧೦೫೨ಕ್ಕೆ ಹಿಂದೆ ಇದ್ದ ಚಾಲುಕ್ಯರ ಜಯಸಿಂಹರಾಜನ ಹೆಂಡತಿ ಸುಗ್ಗಲೆಯನ್ನು ದೇವರ ದಾಸಿಮಯ್ಯನವರು ತಿದ್ದಿದರೆಂಬ ಭಾವನೆಯ ಉಪನ್ಯಾಸ ವಾಯಿತು. ಆ ಜಯಸಿಂಹನಿಗೆ ಸುಗ್ಗಲೆ ಎಂಬ ಹೆಂಡತಿ ಇರಲೇ ಇಲ್ಲ. ಕ್ರಿ. ಶ. ೧೧೩೮ರ ಸುಮಾರಿನಲ್ಲಿ ದೊರೆಯಾದ ಎರಡನೆಯ ಜಯಸಿಂಹನಿಗೆ ಸುಗ್ಗಲೆ ಎಂಬ ಹೆಂಡತಿಯು ಇದ್ದಳೆಂದು ತೋರಿಸುವುದಕ್ಕೆ ಚಾರಿತ್ರಿಕ ಮೂಲವೂ ದೊರಕುತ್ತದೆ. ಆದುದರಿಂದ ೧೨ ನೆಯ ಶತಮಾನದ ಜಯಸಿಂಹನ ಕಾಲಕ್ಕೆ ದೇವರ ದಾಸಿಮಯ್ಯನವರು ತಮ್ಮ ವಚನಗಳನ್ನು ಹೇಳಿದ್ದಾರೆ. ಒಂದನೆಯ ಜಯಸಿಂಹನಿಗೆ ಬೇರೆ ಹೆಂಡತಿ ಇದ್ದಂತೆ ಶ್ರೀ ಶೈಲದ ಶಾಸನವೂ ದೊರಕುತ್ತದೆ. ಇದನ್ನು ಸಮಾಜದವರು ವಿಮರ್ಶೆ ಮಾಡಿ ನೋಡಬಾರದೇಕೇ ?

೬) ವೀರಶೈವರಲ್ಲಿ ಗ್ರಂಥಗಳನ್ನು ಬರೆಯುವಾಗ ಒಂದು ಸಮಿತಿಯವರ ಅಭಿಪ್ರಾಯಕ್ಕೆ ಅನುಗುಣವಾಗಿ ಬರೆಯುವಂತೆ ಮಾಡಬೇಕೆಂದು ಕೆಲವರ ಸೂಚನೆ. ಹಾಗೆ ಹೇಳುವುದು ಸರಿಯಲ್ಲ. ಗ್ರಂಥವನ್ನು ಬರೆಯುವ ವ್ಯಕ್ತಿಯ ಸ್ವಾತಂತ್ರವನ್ನು ಕತ್ತರಿಸಿದಂತಾಗುತ್ತದೆ. ಗ್ರಂಥವನ್ನು ಬರೆಯುವವರಿಗೆ ಸ್ವಾತಂತ್ರವಿರಬೇಕು. ಅವರು ಬರೆದ ಗ್ರಂಥ ಅಥವಾ ಗ್ರಂಥದ ಭಾಗವನ್ನು ಖಂಡಿಸಲಿಕ್ಕೆ ಅಥವಾ ಮಂಡಿಸಲಿಕ್ಕೆ ವೀರಶೈವ ಮಹಾಸಭೆಯವರಿಗೆ ಹಕ್ಕಿದೆ ಎಂಬುದನ್ನು ಸರ್ವತ್ರ ಪಡಿಸಬೇಕು. ಈ ಖಂಡನ ಮಂಡನಾಕಾರ್ಯಕ್ಕಾಗಿ ಒದಗಿರುವ ನಿಧಿಯ ಬಡ್ಡಿಯ ಹಣವನ್ನು ಖರ್ಚು ಮಾಡಬಹುದು. ಪ್ರತ್ಯೇಕವಾಗಿ ಮಹಾಸಭೆಯವರೇ ಗ್ರಂಥವನ್ನು ಬರೆಸುವುದು ಈಗ ಉತ್ತಮವಾದುದಲ್ಲ.

೭) ವೀರಶೈವ ಮಹಾಸಭೆಯಿಂದ ಪತ್ರಿಕೆಯನ್ನು ಪ್ರಚಾರಪಡಿಸುವುದಕ್ಕಾಗಿ ಆರು ಸಾವಿರ ರೂಪಾಯಿ ನಿಧಿಯುವಾಗ್ದಾನವಾದುದು ಸಂತೋಷದ ವಿಷಯವಾಗಿದೆ. ಈ ನಿಧಿಯು ಇನ್ನೂ ಬಹಳ ಹೆಚ್ಚಬೇಕಾಗಿದೆ. ಆದರೆ ವೀರಶೈವರಲ್ಲಿ ಅಂತರ್ವಿವಾದಗಳು ಬಹಳವಾಗಿ ಇವೆ. ಇವುಗಳನ್ನೆಲ್ಲಾ ಪರಿಶೋಧಿಸಿ ಪತ್ರಿಕೆಯನ್ನು ಪ್ರಕಟಿಸುವುದು ಮಹಾಸಭೆಯವರಿಗೆ ಬಹಳ ಕಷ್ಟದ ಕೆಲಸವಾಗಿದೆ. ಅವರು ಒಂದೊಂದನ್ನೇ

ಪರಿಶೋಧಿಸಬೇಕಾದರೆ ತಜ್ಞರನ್ನು ನೇಮಿಸಿ ಅವರಿಗೆ ಖರ್ಚುಕೊಟ್ಟು ಪರಿಶೋಧನೆಯ ಅಂಶವನ್ನು ಪತ್ರಿಕೆಯಲ್ಲಿ ಪ್ರಕಟಿಸುವುದಕ್ಕೆ ವಿಪರೀತವಾಗಿ ಹಣದ ಖರ್ಚು ಬೇಕಾಗುವುದು. ಇದರಿಂದ ಈ ನಿಧಿಯ ದ್ರವ್ಯವೆಲ್ಲಾ ಸ್ವಲ್ಪ ವಿಷಯಕ್ಕೆ ಖರ್ಚಾಗಿ ಬರಿಗೈಯಾಗಬಹುದು. ಕೇಂದ್ರ ಸರಕಾರದವರು ಸ್ಥಾಪಿಸಿದ ಸಂಶೋಧನ ಪ್ರಕಟನೆಯ ಸಮಿತಿಯವರಿಗೆ (ಅಕ್ಯಾಡಮಿ) ಬಹು ಕಷ್ಟವೂ ಖರ್ಚೂ ಆಗುತ್ತಿರುವುದನ್ನು ನೋಡಿದರೆ ವೀರಶೈವ ಸಮಾಜದವರಿಗೆ ಆ ಕಾರ್ಯವು ಪ್ರಕೃತದಲ್ಲಿ ಸುಲಭ ಸ್ಥಿತಿಯಲ್ಲಿ ಇಲ್ಲ ಎಂಬುದು ವ್ಯಕ್ತವಾಗುತ್ತದೆ. ಆದುದರಿಂದ ವೀರಶೈವ ಮಹಾಸಭೆಯವರು ಪತ್ರಿಕಾ ಪ್ರಸಾರವನ್ನು ಈಗಲೇ ಮಾಡಲು ಕೈಗೊಳ್ಳಬಾರದು. ಈ ನಿಧಿಯು ಹೆಚ್ಚಾಗುವಂತೆ ಏರ್ಪಡಿಸಿ ಅದರ ಬಡ್ಡಿಯಿಂದ ಧರ್ಮ ಪ್ರಚಾರ ಕಾರ್ಯವು ನಡೆಯುವಂತೆ ಮಾಡುವುದು ಆವಶ್ಯಕವಾಗಿದೆ. ಕನಿಷ್ಟಪಕ್ಷ ಎರಡು ಲಕ್ಷದವರೆಗೂ ಈ ನಿಧಿಯು ಹೆಚ್ಚಬೇಕಾಗಿದೆ.

೮) ಈಗ ಒದಗಿರುವ ಪತ್ರಿಕಾ ಪ್ರಸಾರದ ಹಣದಲ್ಲಿ ಮುದ್ರಣ ಯಂತ್ರವನ್ನು ಕೊಂಡುಕೊಳ್ಳುವುದೂ ಸರಿಯಲ್ಲ. ಇನ್ನೂ ಹೆಚ್ಚಿನ ಬಂಡವಾಳವನ್ನು ಹಾಕಿ ಮುದ್ರಣ ಯಂತ್ರವನ್ನು ಕೊಂಡುಕೊಳ್ಳುವುದು ಅಗತ್ಯ. ಅದನ್ನು ನಡೆಸುವ ಖರ್ಚು ಬೇಕಾದ ನೌಕರುಗಳ ಸಂಬಳದ ಖರ್ಚು ಸಾವಿರಗಟ್ಟಲೆ ಬೇಕಾಗುವುದು ಅಂತರ್ವಿವಾದಗಳು ಬಹಳ ಕಡಿಮೆಯಾಗಿ ಧರ್ಮಪ್ರಸಾರವು ಹೆಚ್ಚಾಗಲು ಪತ್ರಿಕೆ ನಡೆಸುವ ಕಾಲಬಂದಾಗ ಈ ನಿಧಿಯನ್ನು ಉಪಯೋಗಿಸಬಹುದು.

೯) ಪತ್ರಿಕಾ ಪ್ರಸಾರ ಮತ್ತು ಮುದ್ರಣ ಯಂತ್ರದ ಕ್ರಿಯನಡೆಯುವ ಕಾಲ ಬರುವವರೆವಿಗೂ ಈಗಿನ ನಿಧಿಯನ್ನು ಪುದುವಟ್ಟಾಗಿ (ರಿಜರ್ವ್) ಇಟ್ಟು ಆ ಬಡ್ಡಿಯ ಹಣದಿಂದ ಪತ್ರಿಕೆಗಳನ್ನು ನಡೆಸುವವರಿಗೆ ಹಣದ ಪ್ರೋತ್ಸಾಹ ಗ್ರಂಥಗಳನ್ನು ಅಥವಾ ಲೇಖನಗಳನ್ನು ಬರೆಯುವವರಿಗೆ ಬಹುಮಾನ ಕೊಡಬಹುದು. ಮತ್ತು ಸಮಾಜದಲ್ಲಿನ ಒಡಕುಗಳನ್ನು ಬಗೆಹರಿಸುವುದಕ್ಕಾಗಿ ಇವೇ ಮುಂತಾದ ಕೆಲಸ ಮಾಡುವುದಕ್ಕಾಗಿ ಆಗಾಗ ಪ್ರಕಟನ ಪತ್ರಿಕೆಗಳನ್ನು ಹೊರಡಿಸುವುದಕ್ಕೂ ಸಹ ಈ ನಿಧಿಯ ಬಡ್ಡಿಯ ಹಣವನ್ನು ಉಪಯೋಗಿಸಬಹುದು. ಸುಮಾರು ೧೦ ಲಕ್ಷ ರೂಪಾಯಿಗಳ ನಿಧಿ ಆಗುವವರೆವಿಗೂ ಬಡ್ಡಿಹಣವನ್ನು ಮಾತ್ರವೇ ಸಮಾಜದ ಉಪಕಾರಕ್ಕಾಗಿ ಖರ್ಚು ಮಾಡಬೇಕು. ಶಿವಯೋಗ ಮಂದಿರದಲ್ಲಿ ಈ ನಿಧಿಯ ಏರ್ಪಾಡು ಪ್ರಾರಂಭವಾಗಿರುವುದರಿಂದ ಈ ಮಂದಿರದ ಸ್ಥಾಪಕರಾದ ಶ್ರೀ ನಿ. ಪ್ರ. ಕುಮಾರ ಮಹಾಸ್ವಾಮಿಗಳವರ ಹೆಸರಿನ ಸಂಬಂಧದ ಗುರುತು ಆಗುವಂತಹ ಒಂದು ಹೆಸರನ್ನು ಆ ನಿಧಿಗೆ ಇಡಬೇಕು. ಅಥವಾ ಶಿವಯೋಗ ಮಂದಿರದ ಹೆಸರನ್ನಿಡಬೇಕು.

೧೦) ಕೇಂದ್ರ ರಾಜಕೀಯದ ಪ್ರಕಟನ ಪರಿಶೋಧನೆಯ ಸಂಸ್ಥೆಯವರು (ಅಕ್ಯಾಡಮಿ) ವೀರಶೈವ ಸಮಾಜದ ವಿಷಯದಲ್ಲಿ ಮತ್ತು ಅವರ ಪೂಜ್ಯನಾದ ಶಿವನ

ವಿಷಯದಲ್ಲಿ ಬಹಳವಾಗಿ ಅಪಪ್ರಚಾರ ಮಾಡುತ್ತಿರುವುದಕ್ಕೆ ಅವರಿಗೆ ವೀರಶೈವ ಧರ್ಮದ ಸಂಗತಿಯು ಸರಿಯಾಗಿ ತಿಳಿಯದಿರುವುದೇ ಕಾರಣವೆಂದು ತಿಳಿಯಬೇಕಾಗಿದೆ. ಉಪನಿಷತ್ತುಗಳಲ್ಲಿ ಮತ್ತು ಉಳಿದ ಭಾರತೀಯ ಧರ್ಮಗ್ರಂಥಗಳಲ್ಲಿ ರುದ್ರ ಮತ್ತು ಶಿವ ಇವರ ವಿಷಯಗಳು ಬೇರೆ ಬೇರೆಯಾಗಿ ಹೇಳಲ್ಪಟ್ಟಿವೆ. ಬ್ರಹ್ಮ, ವಿಷ್ಣು, ರುದ್ರ ಇವರು ತ್ರಿಮೂರ್ತಿಗಳು, ಸತ್ವ, ರಜ, ತಮೋಗುಣಪ್ರಧಾನವುಳ್ಳವರು. ಇವರಲ್ಲಿ ಒಬ್ಬನಾದ ರುದ್ರನಿಗೆ "ಶಿವ" ಎಂದು ಗ್ರಂಥಗಳಲ್ಲಿ ಉಕ್ತವಾಗಿದೆ. ಈ ತ್ರಿಮೂರ್ತಿಗಳಲ್ಲಿ ಒಬ್ಬನಾದ ರುದ್ರ ಅಥವಾ ಕೈಲಾಸದ ಶಿವನನ್ನೇ ವೀರಶೈವರು ಪೂಜಿಸುತ್ತಾರೆಂದು ಅಕ್ಯಾಡಮಿಯವರಾಗಲಿ, ಭಾರತದ ಬಹು ಜನರಾಗಲಿ ತಿಳಿದಿರುತ್ತಾರೆ ಈ ರುದ್ರ ಅಥವಾ ಕೈಲಾಸದ ಶಿವ ವೀರಶೈವರಿಗೆ ಪೂಜ್ಯ ಲಿಂಗರೂಪನಾದ ಶಿವನೇ ಅಲ್ಲ; ವೀರಶೈವರ ಪೂಜ್ಯನಾದ ಶಿವನು ಶಿವತತ್ವ ಅಥವಾ ಸೂಕ್ಷ್ಮತತ್ವ ಅಥವಾ ಅಣುತತ್ವ ಎಂದು ಹೇಳಲ್ಪಡುವ ಶಿವ ಎಂದು ಕರೆಯಲ್ಪಡುವವನನು ಪೂಜಿಸುವ ಧರ್ಮವಾಗಿದೆ. ಅಪರೆ ವೀರಶೈವರು ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನನ್ನು ಪೂಜಿಸುತ್ತಾರೆ. ವಿಷ್ಣುವಿನ ಪೂಜಿಸುವುದಿಲ್ಲ, ಇವರು ಪಕ್ಷಪಾತಿಗಳು ಎಂದು ಅಕ್ಯಾಡಮಿಯವರು ಆಕ್ಷೇಪಿಸುತ್ತಾರೆ. ಅವರಿಗೆ ವೀರಶೈವ ತತ್ವವು ಗೊತ್ತಿಲ್ಲ. ಬ್ರಹ್ಮೋಪನಿಷತ್ತಿನಲ್ಲಿ ಬ್ರಹ್ಮ, ವಿಷ್ಣು, ರುದ್ರ ಇವರು ಮನುಷ್ಯನ ನಾಭಿ, ಹೃದಯ, ಕಂಠ ಇವುಗಳಿಗೆ ಅಧಿಪತಿಗಳೆಂದೂ ಶಿರಸ್ಸಿನ ಅಧಿಪತಿಯಾಗಿ "ಅಕ್ಷರ" ಇದ್ದಾನೆಂದೂ ಈ ಅಕ್ಷರನನ್ನು ಬ್ರಾಹ್ಮಣರೂ ಸಹ ಪೂಜಿಸಬೇಕೆಂದೂ ಹೇಳಲ್ಪಟ್ಟಿದೆ. ಈ ಅಕ್ಷರನೇ ಲಿಂಗ ಎಂದು ಕಠೋಪನಿಷತ್ತಿನಲ್ಲಿ ಕೊನೆಯ ಭಾಗದಲ್ಲಿ ಮಾಂಡೂಕ್ಯೋಪನಿಷತ್ತಿನಲ್ಲಿ ವಿಶ್ವ, ತೈಜಸ, ಪ್ರಾಜ್ಞ ಇವರಿಗಿಂತ ಶ್ರೇಷ್ಠನಾಗಿ ನಾಲ್ಕನೆಯವನಾಗಿ "ಶಿವ" ಇದ್ದಾನೆ ಎಂದು ಹೇಳಲ್ಪಟ್ಟಿದೆ. ಈ ಶಿವನನ್ನೇ ಲಿಂಗರೂಪವಾಗಿ ತಿಳಿದು ವೀರಶೈವರು ಪೂಜಿಸುತ್ತಾರೆ. ಇವರಿಗೆ ಬ್ರಹ್ಮ, ವಿಷ್ಣು, ರುದ್ರರು ಅವಶ್ಯಕವಾಗಿ ಪ್ರತ್ಯೇಕವಾಗಿ ಬೇಕಾಗಿಲ್ಲ. ಈ ಬ್ರಹ್ಮ, ವಿಷ್ಣು, ರುದ್ರರು ಜಗತ್ತಿನ ಉತ್ಪತ್ತಿಗೆ ಮೂಲಕಾರಣನಾದ ಶಿವನ ರೂಪವಾದ ಲಿಂಗದೊಳಗೆ ಕೂಡಿರುತ್ತಾರೆಂದು ವೀರಶೈವರು ತಿಳಿದಿರುತ್ತಾರೆ. ಇಂತಹ ವೀರಶೈವರ ಧರ್ಮದ ಸ್ಥಿತಿಗತಿಗಳನ್ನು ತಿಳಿದುಕೊಂಡು ಅಕ್ಯಾಡಮಿಯವರು ವೀರಶೈವ ಧರ್ಮದ ಸಂಗತಿಗಳನ್ನು ಪ್ರಕಟಿಸಬೇಕು ಎಂಬುದಾಗಿ ಬಹು ವಿನಯದಿಂದ ಅವರನ್ನು ಪ್ರಾರ್ಥಿಸಬೇಕಾಗಿದೆ. ಬ್ರಹ್ಮ, ವಿಷ್ಣು, ರುದ್ರರು ಒಬ್ಬರಿಗೊಬ್ಬರು ಜಗಳವಾಡಿದ ಕಥೆಗಳು ವ್ಯಾಸಋಷಿಯ ಪುರಾಣಗಳಲ್ಲಿ ಬಹಳವಾಗಿ ಬರೆಯಲ್ಪಟ್ಟಿವೆ. ಆ ಕಥೆಗಳಿಗೆ ಸಂಬಂಧಿಸಲ್ಪಟ್ಟ ಶಿವ ಅಥವಾ ರುದ್ರನನ್ನು ವೀರಶೈವರು ಪೂಜಿಸುವುದೇ ಇಲ್ಲ. ಆ ಪುರಾಣಗಳಲ್ಲಿ ಹೇಳಲ್ಪಟ್ಟ ರುದ್ರನು ತಾಮಸಗುಣದವನೆಂದೂ ಆ ಶಿವನನ್ನು ವೀರಶೈವರು ಪೂಜಿಸುತ್ತಾರೆಂದೂ ಇವರು ಉಗ್ರಶೈವರೆಂದೂ ಕೆಲವು ಕಡೆ ಬರೆದಿರುವುದಾಗಿ ತಿಳಿಯಬರುತ್ತದೆ. ಮಾಂಡೂಕ್ಯೋಪನಿಷತ್ತಿನಲ್ಲಿ ವಿಶ್ವ, ತೈಜಸ, ಪ್ರಾಜ್ಞ ಈ ತತ್ವಗಳನ್ನು ಮೀರಿದ

ನಾಲ್ಕನೆಯವನಾದ ಶಿವನು ಪ್ರಪಂಚದ ಉಪಶಮನದವನೆಂದು, ಶಾಂತನೆಂದು, ಅದ್ವೈತನೆಂದು ಹೇಳಲ್ಪಟ್ಟಿದ್ದಾನೆ. ಈ ಶಿವನನ್ನು ನಂಬಿದವರೇ ವೀರಶೈವರು. ಇವರು ಶಿವಾದ್ವೈತಿಗಳೆಂದೂ ಕರೆಯಲ್ಪಡುತ್ತಾರೆ. ಆದುದರಿಂದ ಇವರ ಧಾರ್ಮಿಕ ವಿಷಯವನ್ನು ಸರಿಯಾಗಿ ತಿಳಿದುಕೊಂಡು ಕೇಂದ್ರ ಪ್ರಕಟನ ಶೋಧನಾ ಸಂಸ್ಥೆಯವರು (ಅಕ್ಯಾಡಮಿ) ವಿಷಯಗಳನ್ನು ಬರೆಯದಿದ್ದರೆ ವೀರಶೈವ ಧರ್ಮದ ಅಪಪ್ರಚಾರ ಮಾಡಿದಂತಾಗುತ್ತದೆ.

೧೧) ಬಸವೇಶ್ವರನು ಭಕ್ತಸ್ಥಲದಿಂದ ಐಕ್ಯ ಸ್ಥಲದ ವರೆವಿಗೂ ನಡೆದು ಆ ಐಕ್ಯ ಸ್ಥಲದಿಂದ ಪುನಃ ಭಕ್ತಿ ಸ್ಥಲದ ವರೆವಿಗೆ ಆಚರಿಸಿದ್ದಾನೆ ಎಂದು ಒಬ್ಬರು ಉಪನ್ಯಾಸಕರು ಹೇಳಿದ ಮಾತಿಗೆ ಆಧಾರವೇನೂ ಇಲ್ಲ. ಐಕ್ಯ ಸ್ಥಲವನ್ನು ಆಚರಿಸಿದ ಮೇಲೆ ಸ್ವಲೀಲಾನಂದ ಭಕ್ತ ಸ್ಥಲ ಎಂಬುದನ್ನು ಆಚರಿಸಬೇಕೆಂದು ಕೆಲವು ಗ್ರಂಥಗಳು ಹೇಳುತ್ತವೆ. ಇದರ ವಿಚಾರದ ಮರ್ಮವನ್ನು ಆ ಉಪನ್ಯಾಸಕರು ಚೆನ್ನಾಗಿ ತಿಳಿದುಕೊಳ್ಳಬೇಕಾಗಿದೆ.

೧೨) ಎರಡು ಹಸ್ತಗಳನ್ನು ಕೂಡಿಸಿ (ಸಂಪುಟ ಮಾಡಿ) ಕೈಮುಗಿಯಬೇಕೆಂದು ಒಂದು ಉಪನ್ಯಾಸದಲ್ಲಿ ತಿಳಿಸಲ್ಪಟ್ಟಿತು. ಕರಕಮಲ ಎಂಬ ಪ್ರಯೋಗವನ್ನು ಬಹಳ ಸಾರೆ ಮಾಡಿರುವುದನ್ನು ಗ್ರಂಥಗಳಲ್ಲಿ ನೋಡಬಹುದು. ಆದುದರಿಂದ ಕೈಗಳನ್ನು ಕಮಲದ ಮೊಗ್ಗಿನಂತೆ ಜೋಡಿಸಿ ತೋರಿಸುವದರಿಂದ ಕರ ಕಮಲದ ಅರ್ಪಣೆಯ ಭಕ್ತಿಯನ್ನು ತೋರಿಸಿದಂತಾಗುತ್ತದೆ. ಇದೇ ಕೈಮುಗಿಯುವುದು ಅಥವಾ ಕೈಯನ್ನು ಮೊಗ್ಗೆಯಂತೆ ಜೋಡಿಸುವುದು ಆಗಿದೆ.

೧೩) "ಸ್ವಪಚನ ದೈವದಂತರ ಮರ್ನೋರ್ಮೆ ವಿಚಾರಿಸಿ ನೋಡೆ" ಎಂಬ ಕನ್ನಡ ಶತಕತ್ರಯದ ಪದ್ಯದಲ್ಲಿ ಹೊಲೆಯನು ಜನರ ಭಾವನೆಯಲ್ಲಿ ಲಿಂಗಕ್ಕಿಂತ ಹೆಚ್ಚಿನವನಾಗಿದ್ದಾನೆ ಎಂಬ ಅಭಿಪ್ರಾಯದಲ್ಲಿ ವೀರಶೈವರಿಗೆ ಇಷ್ಟಲಿಂಗವನ್ನು ಧರಿಸಿದ್ದರಿಂದ ಆಗುವ ಶುದ್ಧತೆಯ ಸ್ಮರಣೆಯೇ ಇಲ್ಲ. ನಾನು ಶುದ್ಧನೆಂಬ ಭಾವವನ್ನು ಮರೆದು ನಾನು ಹೊಲೆಯನನ್ನು ಮುಟ್ಟುವುದರಿಂದ ಅಶುದ್ಧನಾದೆನೆಂದು ತಿಳಿದು ಸ್ನಾನ ಮಾಡುತ್ತಾನೆ. ಹಾಗೆ ಮಾಡಬಾರದು ಎಂಬ ಬೋಧೆಯು ಆ ಪದ್ಯದಿಂದ ಆಗುತ್ತದೆ. "ನಸ್ಪೃಷ್ಟಿ ಬುದ್ಧ್ಯಾಸ್ನಾಯೀತ ಯದಿ ಕುರ್ಯಾತ್ ಸಪಾತಕಿ" ಎಂಬ ಆಗಮ ಶ್ಲೋಕವಿದೆ. ಆ ಪ್ರಕಾರ ನಾನು ಮುಟ್ಟಾದೆನು, ಮೈಲಿಗೆಯಾದೆನು ಎಂಬ ಭಾವನೆಯಿಂದ ಹೊಲೆಯನನ್ನು ಮುಟ್ಟಿದವನು ಸ್ನಾನಮಾಡಬಾರದು. ಮೈಮೇಲೆ ಧೂಳುಬಿದ್ದರೆ ಕಾಲಿಗೆ ಗೋಮಯ ಹತ್ತಿದರೆ ನಾವು ಅಶುದ್ಧರಾದೆವೆಂಬ ಭಾವನೆಯಿಲ್ಲದೆ ಹೇಗೆ ತೊಳೆದುಕೊಳ್ಳುತ್ತೇವೆಯೋ ಹಾಗೆ ಸ್ನಾನಮಾಡಬಹುದೆಂಬ ಅಭಿಪ್ರಾಯವು ಇಲ್ಲಿ ಇದೆ. ಈ ಸಂದರ್ಭದಲ್ಲಿ ದೇವಸ್ಥಾನದ ಲಿಂಗ ಅವನ್ನು ಮುಟಿದ ಶುದ್ಧತೆ ಮುಂತಾದವುಗಳ ಉಪಮಾನ ಕೊಡುವುದು ಬೇಕಾಗಿಲ್ಲ. ಶತಕ

ತ್ರಯಕಾರರು ಇಷ್ಟಲಿಂಗವನ್ನೇ ಮುಖ್ಯವಾಗಿಟ್ಟುಕೊಂಡು ಈ ಪದ್ಯವನ್ನು ಹೇಳಿದ್ದಾರೆ.

೧೪) ಆಧ್ಯಾತ್ಮಿಕ ಪ್ರೌಢಶಾಲೆ (Divinity College) ಯ ಬಗ್ಗೆ ಒಂದೂವರೆ ಲಕ್ಷರೂಪಾಯಿ ನಿಧಿಯು ಒದಗಿದುದಕ್ಕಾಗಿ ಬಹಳ ಸಂತೋಷಿಸಬೇಕಾಗಿದೆ. ಈ ಪ್ರೌಢಶಾಲೆಯನ್ನು ಶ್ರೀ ನಿ. ಪ್ರ. ವಿರಕ್ತ ಸ್ವಾಮಿಗಳವರೇ ಬಹಳ ಹಣವನ್ನು ಹಾಕಿ ಏರ್ಪಡಿಸಿದುದಕ್ಕೆ ಧನ್ಯವಾದವನ್ನು ಮಾಡಬೇಕಾಗಿದೆ. ಶ್ರೀಮಂತರು, ಗುರುವರ್ಗದ ಸ್ವಾಮಿಗಳು, ವಿರಕ್ತ ವರ್ಗದ ಸ್ವಾಮಿಗಳು ಇನ್ನೂ ಹೆಚ್ಚಾಗಿ ಅಭಿಮಾನವನ್ನು ವಹಿಸಿ ಈ ಪ್ರೌಢಶಾಲೆಯ ನಿರ್ಮಾಣಕ್ಕಾಗಿ ಕಾರ್ಯ ಮಾಡುವುದು ಬಹಳ ಅವಶ್ಯವಾಗಿದೆ. ಈಗಲೂ ಈ ಪ್ರೌಢಶಾಲೆಯನ್ನು ರಾಜಕೀಯವಾಗಿ ಬೇಗನೆ ಏರ್ಪಡುವಂತೆ ವೀರಶೈವ ಮಹಾಸಭೆಯವರು ಪ್ರಯತ್ನಿಸಬೇಕು. ಈ ವಿಷಯದಲ್ಲಿ ಈಗಿನ ವೀರಶೈವ ಮಹಾಸಭೆಯ ಅಧ್ಯಕ್ಷರು ತಮ್ಮ ಅಧ್ಯಕ್ಷತೆಯ ಕಾಲದೊಳಗಾಗಿಯೇ ಏರ್ಪಡಿಸಿ ಭಾರತೀಯ ಧರ್ಮೋನ್ನತಿಗೆ ಅನುಕೂಲವನ್ನು ಮಾಡಿ ಧಾರ್ಮಿಕರೆಲ್ಲರಿಗೂ ಚಿರಋಣಿಗಳಾಗಿರುವಂತೆ ಕಾರ್ಯ ಮಾಡುವುದು ಅತ್ಯವಶ್ಯಕವಾಗಿರುವುದು.

೧೫) ಸುವರ್ಣ ಮಹೋತ್ಸವದ ಸಂಬಂಧದಲ್ಲಿ ಪ್ರಕಟವಾದ "ಬೆಳಗು" ಎಂಬ ಪುಸ್ತಕದಲ್ಲಿ ಪರಮ ಪೂಜ್ಯರಾದ ಶ್ರೀ ಕುಮಾರ ಶಿವಯೋಗಿಗಳು "ವೀರಶೈವರ ಆರಾಧ್ಯ ದೇವತೆಗಳಲ್ಲಿ ಗುರುವಿಗೆ ಅಗ್ರಸ್ಥಾನ ಕೊಡುತ್ತಿದ್ದರು" ಎಂಬ ವಾಕ್ಯವಿದೆ. (ಪುಟ ೭೬) ಕ್ರಿ. ಶ. ೧೯೨೬ ನೆಯ ಇಸ್ವಿಯಲ್ಲಿ ಪ್ರಕಟವಾದ "ಜಂಗಮಾಧಿಕ್ಯ" ಎಂಬ ಗ್ರಂಥವನ್ನು ಪ್ರಕಟಿಸಲಿಕ್ಕೆ ಸದರೀ ಕುಮಾರ ಶ್ರೀಗಳವರೇ ಕಾರಣರಾದರು. ಸದರೀ ಕುಮಾರ ಶ್ರೀಗಳವರಿಗಾಗಿ ಬಾಳೆಹಳ್ಳಿ ಮಠದ ಶ್ರೀಗಳು ಹಾಕಿದ ೨೧ ಪ್ರಶ್ನೆಗಳಿಗೆ ಉತ್ತರವಾಗಿ ಈ ಜಂಗಮಾಧಿಕ್ಯವು ಬರೆಯಲ್ಪಟ್ಟಿದೆ. ಆದರಲ್ಲಿ ಅಷ್ಟಾವರಣದಲ್ಲಿ ಕಂಡ ಗುರುವಿಗಿಂತ ಅದೇ ಅಷ್ಟಾವರಣದಲ್ಲಿನ ಜಂಗಮವು ಅಧಿಕವೆಂದು ಪ್ರಸ್ತಾಪಿಸಲ್ಪಟ್ಟಿದೆ. ಅದಕ್ಕೆ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ—

ಗುರುಶಿಷ್ಯ ಸಮಾರೂಢ ಲಿಂಗ ಮಾಹಾತ್ಮ್ಯ ಸಂಪದಃ
ಸ್ವಯಂ ಚಿದ್ರೂಪ ವಿಜ್ಞಾನಾತ್ ಜಂಗಮಾಧಿಕ್ಯ ಮುಚ್ಯತೆ

ಎಂಬ ಶ್ಲೋಕವೂ ಒಂದು ಪ್ರಮಾಣವಾಗಿ ತೋರಿಸಲ್ಪಟ್ಟಿದೆ ಹೀಗಿರುವುದರಿಂದ ಗುರುವಿಗೆ ಅಗ್ರಸ್ಥಾನವುಂಟು ಎಂಬ ಮಾತಿಗೆ ಆಧಾರವಿಲ್ಲ. ಇದು ವೀರಶೈವ ತತ್ವವನ್ನು ಚೆನ್ನಾಗಿ ತಿಳಿಯದ ಸಂಗತಿಯಾಗಿದೆಯಲ್ಲವೇ ?

೧೬) ಶಿವಾನುಭವ ಗೋಷ್ಠಿ ಅಥವಾ ಸಮ್ಮೇಲನಗಳಲ್ಲಿ ಶಿವಶರಣರ ವಚನಗಳನ್ನು ಓದಿ ಅವುಗಳ ಅಭಿಪ್ರಾಯವನ್ನು ಪೂರ್ವ ಸಂಪ್ರದಾಯದವರ ರೀತಿಗೆ ಅನುಸಾರವಾಗಿ ತಿಳಿಸುತ್ತಾ ಬರುವಂತೆ ಕೆಲವು ಹೊತ್ತು ವಿನಿಯೋಗಿಸುವುದು ಬಹಳ

ಉತ್ತಮವಾದುದು. ಈಗ ವಚನಗಳಿಗೆ ಸಂಪ್ರದಾಯ ಸಿದ್ಧವಲ್ಲದ ಅರ್ಥವನ್ನು ಹೇಳುವುದಾಗಲಿ, ಮುದ್ರಿಸಿ ಪ್ರಕಟಿಸುವುದಾಗಲಿ ಬಹಳವಾಗಿ ನಡೆದಿದೆ. ಶಿವಾನುಭವ ಸಮ್ಮೇಳನಗಳು ಇದಕ್ಕೆ ಗಮನಕೊಡದೆ ಇರುವುದು ಸರಿಯಲ್ಲ. ವಚನಗಳ ಅಪಪ್ರಚಾರಕ್ಕೆ ಅವಕಾಶವಾದಂತಾಗುತ್ತದೆ.

೧೭) ಶಿವಾನುಭವವು ಶಿವಾದ್ವೈತ ತತ್ವವನ್ನು ಬೋಧಿಸುವ ಅಭಿಪ್ರಾಯಗಳ ಸಾಧನೆಯುಳ್ಳುದಾಗಿದೆ. ಈ ಶಿವಾದ್ವೈತದಲ್ಲಿ ಕೈಲಾಸದ ಶಿವನು ಒಬ್ಬನೇ ಮುಖ್ಯನು ಎಂದು ಹೇಳುವ ಸಾಕಾರ ಶಿವಾದ್ವೈತವು ಒಂದಾಗಿದೆ. ಇದನ್ನು ಶ್ರೀಕಂಠ ಅಥವಾ ನೀಲಕಂಠ ಎಂಬುವವರು ಕ್ರಿ. ಶ. ೧೧ನೆಯ ಶತಮಾನ ಅಂತ್ಯ ೧೨ನೆಯ ಶತಮಾನದ ಆದಿಯಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ ಹೇಳಿದ್ದಾರೆ. ಈ ಶಿವಾದ್ವೈತವು ವೀರಶೈವರಿಗೆ ಸಂಬಂಧಿಸಿದುದಲ್ಲ. ನಿರಾಕಾರ ಮೂಲವಸ್ತುವಾದ ಶಿವನೊಬ್ಬನೇ ಮುಖ್ಯ ದೈವವಾಗಿದ್ದಾನೆ, ಜಗತ್ತಿನ ಉತ್ಪತ್ತಿ ಲಯಗಳಿಗೆ ಅವನೇ ಕಾರಣನಾಗಿದ್ದಾನೆ. ಎಂದು ಬೋಧಿಸುವ ನಿರಾಕಾರ ಶಿವಾದ್ವೈತದ ಸಾಧನೆಯೇ ವೀರಶೈವರದಾಗಿದೆ. (ಇಂತಹ ವಿಷಯಗಳ ವಿಮರ್ಶೆಯನ್ನೇ ವೀರಶೈವರ ಪಂಡಿತರು ಉಪನಿಷತ್ತು, ಆಗಮ, ವೇದ, ಮೊದಲಾದವುಗಳಿಂದ ಗ್ರಹಿಸಿ ಸಮಾಜದಲ್ಲಿ ಪ್ರಕಟವಾಗುವಂತೆ ಮಾಡುವುದು ಅವಶ್ಯಕವಾಗಿದೆ.

(ಸಂ. ೧೫೭)

# ಕಾಶಿಯ ವಿಶ್ವವಿದ್ಯಾಲಯದ ಮೂಲಕ ವೀರಶೈವ ಗ್ರಂಥಗಳ ಬೋಧೆಗೆ ಏರ್ಪಾಡು ಮಾಡುವುದು

ಕಾಶಿಯಲ್ಲಿರುವ ಹಿಂದೂ ವಿಶ್ವವಿದ್ಯಾಲಯದಲ್ಲಿ ಯಾವ ಮತದವರಾದರೂ ತಮ್ಮ ಮತ ತತ್ವಗಳನ್ನು ಬೋಧಿಸಲ್ಪಟ್ಟು ಅದಕ್ಕೆ ಪಂಡಿತರನ್ನು ನೇಮಿಸುವುದೇ ಮೊದಲಾದ ಖರ್ಚುಗಳಿಗಾಗಿ ಬಡ್ಡಿಯು ಉತ್ಪನ್ನವಾಗುವಷ್ಟು ಮೂಲ ಧನವನ್ನು ನಿಧಿಯಾಗಿ ಒಪ್ಪಿಸಿದರೆ ಅದರ ಸಹಾಯದಿಂದ ಆಯಾ ಮತ ಬೋಧೆಯನ್ನು ಮಾಡಲು ಏರ್ಪಡಿಸುತ್ತರಾಗಿ ತಿಳಿಯಬರುತ್ತದೆ.

ಆದ್ದರಿಂದ ಅಲ್ಲಿ ವೀರಶೈವರು ಧರ್ಮ ಬೋಧೆ ನಡೆಸುವುದಕ್ಕಾಗಿ ಒಂದು ನಿಧಿಯನ್ನೇರ್ಪಡಿಸಿ ಅಲ್ಲಿ ಕಲಿಸಲ್ಪಡಬೇಕಾದ ವೀರಶೈವ ಗ್ರಂಥಗಳನ್ನೂ ತೋರಿಸಿದರೆ ಆ ಬೋಧೆಯು ನಡೆಯುತ್ತದೆ. ಆ ಮೂಲಕ ವೀರಶೈವ ತತ್ವವು ಜಗತ್ತಿಗೆಲ್ಲಾ ತಿಳಿಯುವುದಕ್ಕೆ ಅವಕಾಶವಾಗುತ್ತದೆ. ಸಂಸ್ಕೃತ ವಿದ್ಯಾರ್ಥಿಗಳೂ ಕಾಶಿಯಲ್ಲಿ ಬಹಳ. ಹಿಂದೂ ದೇಶದಲ್ಲಿ ಕಾಶಿಯು ಬಹುಪುರಾತನ ಕಾಲದಿಂದಲೂ ವಿದ್ಯೆಗೆ ಪ್ರಸಿದ್ಧವಾದ ಸ್ಥಾನ. ಇಂಥ ಪ್ರಸಿದ್ಧ ಸ್ಥಳದಲ್ಲಿ ಪ್ರಸಿದ್ಧ ವಿದ್ಯೆಯಾದ ವೀರಶೈವ ತತ್ವ ಬೋಧೆಯನ್ನು ನೆಲೆಗೊಳಿಸುವ ಕಾರ್ಯವನ್ನು ವೀರಶೈವರು ಮಾಡುವುದು ಬಹಳ ಒಳ್ಳೆಯ ಕಾರ್ಯವಾಗಿರುತ್ತದೆ.

(ಸಂ. ೨೦)

# ಧಾರ್ಮಿಕ ವರ್ತಮಾನಗಳು

ಅಮೇರಿಕಾ ಖಂಡದ ಚಿಕಾಗೊ ಪಟ್ಟಣದಲ್ಲಿ ಸರ್ವ ಧರ್ಮ ಸಮ್ಮೇಳನವು ನಡೆದುದು ಈ ಹಿಂದೆಯೇ ವಾಚಕರಿಗೆ ತಿಳಿದ ವಿಷಯವಾಗಿದೆ. ಧರ್ಮ ವಿಷಯದಲ್ಲಿ ಹಿಂದೂದೇಶವು ಬಹಳ ಮುಂದಿರುವುದು ಎಂಬುದನ್ನು ತಿಳಿದವರಾಗಿ ಅಂಥಾ ಸರ್ವ ಧರ್ಮ ಸಮ್ಮೇಳನವನ್ನು ಹಿಂದೂ ದೇಶದಲ್ಲಿಯೇ ನಡೆಸಬೇಕೆಂದು ಅಮೇರಿಕೆಯ ಜನರು ಆಲೋಚಿಸಿಕೊಂಡಿರುವದಾಗಿ ತಿಳಿಯಬರುತ್ತದೆ. ವೀರಶೈವರೂ ಈ ಕಾಲದಲ್ಲಿ ತಮ್ಮ ಧರ್ಮದ ವಿಷಯದ ವಿವರವನ್ನು ಈ ಸಮ್ಮೇಳನದಲ್ಲಿ ಸರಿಯಾದ ರೀತಿಯಲ್ಲಿ ತೋರಿಸುವುದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡುವರೆಂದು ನಿರೀಕ್ಷಿಸುತ್ತೇವೆ.

ವೀರಶೈವ ಮಹಾಸಭೆಯು ಧಾರವಾಡದಲ್ಲಿ: ಎರಡನೆಯಸಾರೆ ನಡೆದದ್ದರಿಂದ ಈಚೆಗೆ ಯಾವ ಯೋಜನೆಯನ್ನೂ ಮಾಡದೆ ಕೂತುಕೊಂಡಿರುವಂತೆ ಕಾಣುತ್ತದೆ. ಮುಂದಿನ ಮಹಾಸಭೆಯು ತನ್ನ ನಿರ್ಣಯಗಳನ್ನು ರೂಢಿಯಲ್ಲಿ (ಅಮಲಿನಲ್ಲಿ) ತರಲಿಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನು ಮೊದಲೇ ಮಾಡಿಕೊಂಡು ಆಮೇಲೆ ಸೇರುವುದು ಉತ್ತಮವಾಗಿರುತ್ತದೆ.

ಮಹಾಸಭಾ ಸ್ಟ್ಯಾಂಡಿಂಗ್ ಕಮೀಟಿಯವರು ಬಾಗಲಕೋಟೆಯಲ್ಲಿ ಕೂಡುವರೆಂದು ವರ್ತಮಾನವಿದೆ. ಹೀಗೆ ಕೂಡಿದಾಗ ಆದ ನಿರ್ಣಯಗಳು ಬೇಗನೆ ಪ್ರಕಟವಾಗಲೆಂದು ಹಾರೈಸುತ್ತೇವೆ.

(ಸ. ೨೦)

# ಮೈಸೂರ್ ಸ್ಟಾರ್

ಮೈಸೂರ್ ಸ್ಟಾರ್ ಪತ್ರಿಕೆಯು ಶಾಶ್ವತವಾದ ವಿರಾಮವನ್ನು ಪಡೆಯಿತು. (ಅದರ ಪ್ರಕಟನೆಯು ನಿಲ್ಲಿಸಲ್ಪಟ್ಟಿತು.) ಎಂಬ ವಿಷಯವನ್ನು ಅದರ ೧೯೩೪ನೆಯ ಮೇ ೨೬ನೆಯ ಸಂಚಿಕೆಯಿಂದ ತಿಳಿದು ಬಹಳ ವ್ಯಸನಪಡಬೇಕಾಗಿದೆ.

೪೨ ವರ್ಷಗಳಿಂದ ದೇಶ ಸೇವೆ ಮಾಡಿದ ಈ ಪತ್ರಿಕೆಗೆ ಅಂಚೆಯ ಸೌಲಭ್ಯವು ದೊರಕದೆ ಇರುವುದು ಬಹಳ ವಿಷಾದಕರವಾದ ಸಂಗತಿಯಾಗಿದೆ.

ಈ ಪತ್ರಿಕೆಯಲ್ಲಿ ವ್ಯವಹಾರದಲ್ಲಿಯೂ, ರಾಜಕೀಯದಲ್ಲಿಯೂ, ಧಾರ್ಮಿಕ ದಲ್ಲಿಯೂ ಮಹತ್ತರವಾದ ಸಂಗತಿಗಳು ಆಗಾಗ ಪ್ರಕಟಿಸಲ್ಪಟ್ಟುದರಿಂದ ಜನರು ನಿಜ ವಾದ ಏಳಿಗೆಯ ಕಡೆಗೆ ಗಮನಕೊಟ್ಟು ಅದರಂತೆ ನಡೆಯಲಿಕ್ಕೆ ಮಾರ್ಗವನ್ನು ತೋರಿಸಿ ಕೊಟ್ಟಂತಾಗಿರುತ್ತಿದ್ದಿತು. ರಾಜಧಾನಿಯ ಮುನಿಸಿಪಲ್ ಆಡಳಿತದಲ್ಲಿ ಯೋಗ್ಯವಾಗಿ ವ್ಯವಸ್ಥೆಯಾಗುವಂತೆ ಬಹಳ ಪ್ರಕಟಣೆಗಳಿರುತ್ತಿದ್ದವು.

ವೀರಶೈವರ ವಿಷಯದಲ್ಲಿ ಈ ಪತ್ರಿಕೆಯು ಮಾಡಿರುವ ಉಪಕಾರವು ಇಷ್ಟಿ ಷ್ಟೆಂದು ವಿವರಿಸಲಿಕ್ಕೆ ಸಾಧ್ಯವಾಗುವಂತಿಲ್ಲ. ಕೈ. ವಾ. ಯಜಮಾನ ವೀರಸಂಗಪ್ಪ ನವರು ೧೮೯೧ ನೆಯ ಇಸವಿಯ ಜನ ಪರಿಗಣತೆಯಲ್ಲಿ ಶೂದ್ರರೆಂದು ಭಾವಿಸಲ್ಪಟ್ಟ ವೀರಶೈವ ಜನಾಂಗವನ್ನು ಶೂದ್ರರಲ್ಲವೆಂದು ತೋರಿಸುವುದಕ್ಕೆ ಈ ಪತ್ರಿಕೆಯ ಮೂಲಕವಾಗಿ ಬಹಳ ಸಾಹಸ ಮಾಡಿದರು. ವೀರಶೈವವು ಜ್ಞಾನ ಬ್ರಾಹ್ಮಣ್ಯ ತತ್ವ ವುಳ್ಳದು ಎಂಬುದನ್ನು ತೋರಿಸುವುದಕ್ಕೆ ದೀರ್ಘಕಾಲ ಪ್ರಯತ್ನ ಮಾಡಿದರು. ಕೈ ॥ ವಾ ॥ ಪಿ. ಆರ್. ಕರಿಬಸವಶಾಸ್ತ್ರಿಗಳವರೊಡನೆ ಕೂಡಿಕೊಂಡು ಅಷ್ಟಿನ ಗ್ರಂಥದ ಮುಖವನ್ನೇ ಕಾಣದಿದ್ದ ವೀರಶೈವರಿಗೆ ಅನೇಕ ಗ್ರಂಥಗಳನ್ನು ಓದು ವಂತೆ ಮಾಡಿಟ್ಟರು. ಇವರನ್ನು ವೀರಶೈವ ಜನಾಂಗವು ಎಂದೂ ಮರೆಯುವಂತಿಲ್ಲ. ಇವರ ತರುವಾಯ ಮ ॥ ರಾ ॥ ವಿರೂಪಾಕ್ಷಯ್ಯನವರಾದರೂ ವೀರಶೈವ ಮಹಾ ಸಭೆ ಮೊದಲಾದುವುಗಳ ವಿಷಯದಲ್ಲಿ ಚೆನ್ನಾಗಿ ಬರೆಯುತ್ತಾ ವೀರಶೈವ ಸಮಾಜ ದಲ್ಲಿ ಧರ್ಮ ಜಾಗ್ರತಿಯನ್ನುಂಟು ಮಾಡಿದರು. ವಿರಕ್ತ ವರ್ಗದ ಮೇಲೆ ಗುರು ವರ್ಗದ ಪಂಚಾಚಾರ್ಯ ಪ್ರಭಾ ಪತ್ರಿಕೆ ಎಂಬ ಪ್ರಚಂಡ ಮಾರುತವು ಬೀಸಿದ್ದಾಗ್ಯೆ ದೊಡ್ಡ ಪರ್ವತವಾಗಿ ಎದುರು ನಿಂತು ಅ ಬಹುದೂರ ಬೀಸದಂತೆ ತಡೆದರು.

ಮೈಸೂರ್ ಸ್ಟಾರ್ ಪತ್ರಿಕೆಯು ಅಸ್ತಂಗತವಾದುದು ವೀರಶೈವರ ದೌರ್ಭಾ ಗ್ಯವೇ ಸರಿ. ಇನ್ನಾದರೂ ವೀರಶೈವರು ಈ ಪತ್ರಿಕೆಯ ಪುನರುಜ್ಜೀವನ ಮಾಡಲಿಕ್ಕೆ ತಕ್ಕ ಸಹಾಯಗಳನ್ನು ಮಾಡಿ ಸಂಪಾದಕರವರಿಗೆ ಪ್ರೋತ್ಸಾಹಿಸಬೇಕೆಂದೂ ಸರಕಾರ ದವರೂ ಈ ಪತ್ರಿಕೆಗೆ ಅಂಚೆಯ ಸೌಲಭ್ಯವನ್ನು ಒದಗಿಸಿಕೊಡಲು ಹಿಂಜರಿಯಬಾರ ದೆಂದೂ ಪ್ರಾರ್ಥಿಸುತ್ತೇವೆ. (ಸಂ. ೨೦—೨೧)

# ಪತ್ರಿಕಾ ಪ್ರಕಟಣೆ

ತಾರೀಖು ೨೧–೭–೪೬ ಸಾಧ್ವೀ ಪತ್ರಿಕೆಯ ಕಾರ್ಯಾಲಯದ ಅಟ್ಟದಲ್ಲಿ ಆ ಪತ್ರಿಕೆಯ ನಾಲ್ಕನೆಯ ವರ್ಷದ ವರ್ಧಂತಿ ಉತ್ಸವವು ನಡೆದಿತ್ತು.

ಸಾಧ್ವಿ ಪತ್ರಿಕೆಯು ಮೈಸೂರಿನ ವೃದ್ಧ ಪಿತಾಮಹ ಶ್ರೀ ವೆಂಕಟಕೃಷ್ಣಯ್ಯನವರಿಂದ ಮೊದಲು ನಡೆಸಲ್ಪಡುತ್ತಿತ್ತೆಂತಲೂ ಈಗ ದಿನಪತ್ರಿಕೆಯಾಗಿ ಮಾರ್ಪಟ್ಟು ನಾಲ್ಕನೆಯ ವರ್ಷವೆಂತಲೂ ಶ್ರೀ ಆಗರಂ ರಂಗಯ್ಯನವರು ಹೇಳಿದರು. ಆನಂತರ ಅಧ್ಯಕ್ಷರಾದ ಹುಬ್ಬಳ್ಳಿ ಗೆಜೆಟ್ ಪತ್ರಿಕಾಕರ್ತರಾದ ಡಾ॥ ನಾ. ಸು. ಹರ್ಡೀಕರವರ ಮತ್ತು ಅವರ ವಿನಂತಿ ಪ್ರಕಾರ ಶ್ರೀ ದಿವಾಕರ ರಂಗರಾಯರವರ ಭಾಷಣಗಳೂ ಆದುವು.

ರಾ॥ ದಿವಾಕರ ರಂಗರಾಯರವರು ಅನಿರೀಕ್ಷಿತವಾಗಿ ಆಗಂತುಕವಾಗಿ ಈ ವರ್ಧಂತಿಗಾಗಿ ಬಂದಿರುವುದಾಗಿಯೂ ಈಗಿನ ರಾಜ್ಯಾಂಗ ರಚನೆಯಲ್ಲಿ ಬ್ರಿಟಿಷ್ ಕರ್ಣಾಟಕ ಮತ್ತು ಮೈಸೂರು ದೇಶ ಎರಡನ್ನೂ ಕೂಡಿಸಿ ಕರ್ಣಾಟಕ ಪ್ರಾಂತ್ಯವೊಂದನ್ನು ರಚಿಸುವ ಆವಶ್ಯಕತೆ ಈಗ ಒದಗಿರುವುದೆಂತಲೂ ಈ ಹಿಂದೆ ಬ್ರಿಟಿಷ್ ಕರ್ಣಾಟಕವನ್ನು ಮಾತ್ರ ಒಂದು ಪ್ರಾಂತವಾಗಿ ಮಾಡುವ ಆಲೋಚನೆ ಕೆಲವರದಿತ್ತೆಂತಲೂ ಆ ಉದ್ದೇಶಕ್ಕಾಗಿ ಈಗ ಬಂದಿರುವೆವೆಂತಲೂ ಪ್ರಾರಂಭಿಸಿ ಪತ್ರಿಕೆಯ ಕರ್ತವ್ಯ, ಪತ್ರಿಕಾಕರ್ತರ ಧ್ಯೇಯ, ಪತ್ರಿಕೆಯನ್ನು ಓದುವವರ ಅಭಿಮಾನ, ಸುದ್ದಿಗಾರರ ಕೆಲಸ ಈ ವಿಷಯಗಳನ್ನು ಕುರಿತು ಭಾಷಣ ಮಾಡಿದರು. ಯೂರೋಪು ಅಮೇರಿಕಾಗಳಲ್ಲಿ ಬಂಡವಾಳಗಾರರು ಅನೇಕ ಪತ್ರಿಕೆಗಳನ್ನು ಒಂದೇ ವಿಧವಾದ ಅಭಿಪ್ರಾಯವುಳ್ಳವುಗಳನ್ನಾಗಿ ಪ್ರಕಟಿಸಲಿಕ್ಕೆ ಕಾರಣರಾದಂತೆ ಭಾರತದಲ್ಲಿ ಆಗಬಾರದೆಂದೂ ಇಲ್ಲಿ ವ್ಯಕ್ತಿ ಸ್ವಾತಂತ್ರ್ಯವಿದ್ದು ಒಂದೊಂದು ಪತ್ರಿಕೆಯನ್ನು ಒಬ್ಬೊಬ್ಬರು ನಡೆಸುವಂತಾಗಬೇಕೆಂದೂ ಪತ್ರಿಕೆ ನಡೆಸುವುದು ಸಾರ್ವಜನಿಕಾಭಿಪ್ರಾಯವೇ ಹೊರತು ಸ್ವಂತ ವ್ಯಕ್ತಿಯದಲ್ಲವೆಂದು ಈಗ ಇಂಗ್ಲಿಷ್ ಪತ್ರಿಕೆಗಳಿಗಿಂತ ದೇಶಭಾಷೆಯ ಪತ್ರಿಕೆಗಳಿಗೇನೇ ಜನರ ಅಭಿಮಾನವುಂಟಾಗಿರುವುದು ಒಳ್ಳೆಯದೆಂದೂ ಸಾಧ್ವಿ ಪತ್ರಿಕೆಗೆ ಪ್ರೋತ್ಸಾಹ ಕೊಡಬೇಕೆಂದು ಹೇಳಿದುದೇ ಅವರ ಭಾಷಣದ ಸಾರಾಂಶ. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಈಗ್ಗೆ ೨೦ ವರ್ಷಗಳ ಹಿಂದೆ ಇದ್ದ ಪತ್ರಿಕಾ ಕಾರ್ಯಕ್ಕಿಂತ ಈಗ ನಡೆಸುತ್ತಿರುವುದು ಭಿನ್ನವಾಗಿದೆ ಎಂದೂ ಈಗ್ಗಿಂತಲೂ ನಾಳೆ ಇನ್ನೂ ಭಿನ್ನವಾಗುವುದೆಂತಲೂ ಎರಡು ಮೂರು ಸಾರಿ ಹೇಳಿದುದಲ್ಲದೆ ಪತ್ರಿಕೆಯ ಕರ್ತರೂ ಇನ್ನು ಮುಂದೆ ೧೦ ವರ್ಷಗಳಲ್ಲಿ ನಮ್ಮ ರಾಷ್ಟ್ರವು ಯಾವ ದೆಸೆಗೆ ಬರುವುದೆಂಬುದರ ಗಮನವಿಟ್ಟುಕೊಂಡು ಅದನ್ನು ಸರಿಪಡಿಸುವುದಕ್ಕೆ ತಕ್ಕಂತೆ ಜನರ ಅಭಿಪ್ರಾಯವನ್ನು ಮಾರ್ಪಡಿಸುವ ಲೇಖನಗಳನ್ನು ಬರೆಯಬೇಕೆಂದೂ ಕಂಡು ಕೇಳಿದ ಜಿನ್ನದ ಮಾಡು

ವುದು ಸರಿಯಲ್ಲವೆಂದೂ ನಿಜಸಂಗತಿಯನ್ನೇ ಜನತೆಗೆ ಒಳ್ಳೆಯದಾಗುವುದನ್ನೇ ಪರೀಕ್ಷಿಸಿ ಪ್ರಕಟಿಸಬೇಕೆಂದೂ ವಿಮಾನಗಳಲ್ಲಿ ಪತ್ರಿಕೆಗಳು ಇನ್ನು ಮುಂದೆ ಹಂಚಲ್ಪ ಡುವುವಾದರೂ ಸ್ಥಳೀಯ ಪತ್ರಿಕೆಗಳಲ್ಲಿನ ಅಭಿಮಾನವನ್ನು ಜನರು ತ್ಯಜಿಸಬಾರ ದೆಂದೂ ಸಾಧ್ವಿ ಪತ್ರಿಕೆ ಇನ್ನೂ ದೊಡ್ಡದಾಗಿ ಹೆಚ್ಚಾಗಿ ಪ್ರಚಾರವಾಗುವಂತೆ ಜನರು ಪ್ರೋತ್ಸಾಹಿಸಬೇಕೆಂದೂ ಭಾಷಣ ಮಾಡಿದರು. ಇದೆಲ್ಲವೂ ಕೇಳುವವರಿಗೆ ಆನಂದ ವಾಗಿದ್ದಿತು. ಆದರೆ ಕೊನೆಯಲ್ಲಿ ಬುದ್ಧನು ಅಹಿಂಸಾತತ್ತ್ವ ಬೋಧನೆ ಮಾಡಿದನು. ಈಗ ಮಹನೀಯರಾದ ಗಾಂಧೀಜಿಯವರೂ ಬೋಧನೆ ಮಾಡುತ್ತಾರೆ. ಅದಕ್ಕೂ ಇದಕ್ಕೂ ವ್ಯತ್ಯಾಸವಿದೆ. ಗಾಂಧೀಜಿಯವರು ಹೇಳಿದುದೇ ಈಗ ಸರಿಯಾಗಿದೆ. ಎಂದರು. ಆದರೆ ವ್ಯತ್ಯಾಸವೇನು ಹೇಗೆ ಸರಿಯಾಗಿದೆ ಎಂಬುವನ್ನು ತಿಳಿಸಲಿಲ್ಲ. ಮಾಂಸ ತಿನ್ನತಕ್ಕವರನ್ನು ಪರ ಪ್ರೇರಣೆಯಿಂದ ಮಾಂಸ ಬಿಡುವಂತೆ ಮಾಡಬಾರದು, ಹಾವು ಚೇಳುಗಳನ್ನೂ ಹುಲಿ ತೋಳಗಳನ್ನೂ ಕೊಲ್ಲಬಹುದು, ಎಂಬುದೇ ಗಾಂಧೀಜಿ ಯವರ ಅಹಿಂಸೆಯ ಹೇಳಿಕೆ. ಧಾರ್ಮಿಕವಾಗಿ ಇದು ಹೇಗೆ ಅಹಿಂಸೆಯೋ ಗೊತ್ತಾ ಗುವುದಿಲ್ಲ. ಹೀಗೆ ಅಧ್ಯಕ್ಷರು ರಾಜಕೀಯದಲ್ಲಿ ಧಾರ್ಮಿಕವನ್ನು ಬೆರೆಸಲಿಕ್ಕೆ ಹೋದುದು ಸರಿಯಲ್ಲ. ರಾಷ್ಟ್ರದಲ್ಲಿ ಅಭಿಪ್ರಾಯವೊಂದೇ ಇರಬೇಕೆಂದು ಕಟ್ಟಕಡೆ ಇವರು ಹೇಳಿದುದರಲ್ಲಿ ಈ ಸಮಸ್ಯೆಯು ಹೊರಬಿದ್ದಿತು. ತಾವು ವೃದ್ಧ ಪಿತಾ ಮಹರಲ್ಲಿ ಗೌರವವಿಟ್ಟಿರುವುದಾಗಿಯೂ ಭಾಷಣ ಮಾಡಿದರು.

ನಾನೂ ತರುಣನಾಗಿದ್ದಾಗ ವೃದ್ಧ ಪಿತಾಮಹರು ನಡಸುತ್ತಿದ್ದ ವೃತ್ತಾಂತ ಚಿಂತಾಮಣಿ ಸಾಧ್ವಿ ಮುಂತಾದವುಗಳನ್ನು ಓದಿದವನು. ಅವುಗಳಿಂದ ಪತ್ರಿಕಾ ಪ್ರಪಂಚದ ಪ್ರಯೋಜನವನ್ನು ತಿಳಿದವನು. ಆದುದರಿಂದ ಅವರಲ್ಲಿ ಗೌರವ ಭಾವವು ನನಗೂ ತುಂಬಿಕೊಂಡಿರುವುದು. ವೃದ್ಧ ಪಿತಾಮಹರು ಮಾಡಿದ ದೇಶ ಸೇವೆಯನ್ನು ಆಧಾರವಾಗಿಟ್ಟುಕೊಂಡು ಅವರ ಆಶೀರ್ವಾದವು ನಮ್ಮ ಮೇಲೆ ಇರಲಿ ಎಂದು ಈಗ ಶ್ರೀ ಅಗರಂ ರಂಗಯ್ಯನವರು ಪ್ರಾರ್ಥಿಸುತ್ತಿರುವುದೂ ಅವರು ಇಟ್ಟ ಹೆಸರನ್ನೇ ಪತ್ರಿಕೆಗೂ ಇಟ್ಟು ಅದಕ್ಕಾಗಿ ಕೋರ್ಟಿನ ವ್ಯಾಜ್ಯ ಬಂದರೂ ಜಗ್ಗದೆ ಸ್ಥಿರಪಡಿಸಿ ಕೊಂಡು ಕಷ್ಟ ನಷ್ಟಗಳಿಗೀಡಾಗಿ ನಡೆಸುತ್ತಿರುವುದೂ ಎಷ್ಟು ದೊಡ್ಡ ಕೃತಜ್ಞತೆಯ ಕಾರ್ಯವು ?

ವೀರಶೈವರಲ್ಲಿ ಕೃತಜ್ಞತೆಯುಂಟೇ ? ಇದ್ದರೆ ಸಮಾಜ ಸೇವೆಯನ್ನು ಮಾಡಿದ ಮೈಸೂರು ಸ್ಟಾರಿನ ಹೆಸರು ಮೈಸೂರಿನಲ್ಲಿ ಅಳಿದುಹೋಗುತ್ತಿತ್ತೇ ? ಯಜಮಾನ ವೀರಸಂಗಪ್ಪನವರನ್ನೂ ವಿರೂಪಾಕ್ಷಯ್ಯನವರನ್ನೂ ಬಹಿರಂಗವಾದ ಸಭೆಗಳಲ್ಲಿ ಉಪಕಾರ ಸ್ಮರಿಸುವ ಕಾರ್ಯವು ಒಂದು ಸಾರಿಯಾದರೂ ನಡೆದಿರುವುದೇ ? ಇನ್ನು ೧೦ ವರ್ಷಗಳ ಮೇಲೆ ತಾವಿರುವ ಸ್ಥಿತಿಯನ್ನು ಯೋಚಿಸಿರುವರೇ ?

(ಸಂ. ೨೦–೨೧)

## ಈಗಿನ ಸಮಾಚಾರಗಳು
## ಎಲ್ಲ ಭಾಷೆಗೂ ಒಂದೇ ಲಿಪಿ

ಈಗ ಹಿಂದೂ ದೇಶದಲ್ಲಿ ಉಪಯೋಗದಲ್ಲಿ ಇರುವ ಎಲ್ಲಾ ದೇಶಿಯ ಭಾಷೆಗಳನ್ನು ಬರೆಯುವ ಲಿಪಿಯನ್ನು ಒಂದೇ ವಿಧವಾಗಿ ಮಾಡಬೇಕೆಂದೂ, ದೇವನಾಗರಿ ಲಿಪಿಯನ್ನೇ ಹಿಂದೀ ಮಹಾರಾಷ್ಟ್ರ, ಕನ್ನಡ, ತೆಲುಗು ಮೊದಲಾದ ಭಾಷೆಗಳನ್ನು ಮುದ್ರಣ ಮಾಡುವುದಕ್ಕೂ ಅಭ್ಯಾಸ ಮಾಡುವುದಕ್ಕೂ ಉಪಯೋಗ ಮಾಡಬೇಕೆಂದೂ ಮುಂದಾಳುಗಳು ಪ್ರಯತ್ನಿಸಿ ಇದರ ಏರ್ಪಾಡಿಗಾಗಿ ಒಂದು ಸಂಘವನ್ನು ಏರ್ಪಡಿಸಿ ಇರುತ್ತಾರೆ.

(ಸಂ. ೨೭, ೨೮)

### ಬಹಳ ಹಳೆಯ ಪಟ್ಟಣ

ಹಿಂದೂಸ್ಥಾನದಲ್ಲಿ ಭೂಗರ್ಭದಲ್ಲಿ ಸಿಕ್ಕಿದ ಪಟ್ಟಣಗಳಲ್ಲಿ ಸಿಂಧೂ ದೇಶದ ಮೋಹೆಂಜೋದಾರೋ ಎಂಬ ಪಟ್ಟಣವೇ ಬಹಳ ಪೂರ್ವ ಕಾಲದ್ದು ಎಂದರೆ ೫-೬ ಸಾವಿರ ವರುಷಗಳ ಹಿಂದಿನದು ಎಂದು ಗೊತ್ತುಮಾಡಲ್ಪಟ್ಟಿರುವುದು ಸರಿಯಷ್ಟೆ.

ಈಗ ಕರಾಚಿ ಪ್ರಾಂತದಲ್ಲಿ ಖೈರಪುರ ಸಂಸ್ಥಾನದಲ್ಲಿ ಕಾತೋಜಿ ಎಂಬ ಗ್ರಾಮದ ಹತ್ತಿರ ಇನ್ನೊಂದು ದೊಡ್ಡ ಪಟ್ಟಣವು ಭೂಗರ್ಭದಲ್ಲಿ ಸಿಕ್ಕಿರುವದೆಂತಲೂ, ಇದು ಮೋಹೆಂಜೋದಾರೋ ಪಟ್ಟಣಕ್ಕಿಂತ ಪೂರ್ವದ್ದೆಂತಲೂ ತಿಳಿಯಬಂದಿದೆ. ಸರಕಾರದವರು ಇಲ್ಲಿ ಅಗಿದು ಇದನ್ನು ಹೊರಗೆ ತೆಗೆಯಲಿಕ್ಕೆ ಪ್ರಯತ್ನಿಸುತ್ತಾ ಇದ್ದಾರೆ.

ಪೂರ್ವದಲ್ಲಿ ಪ್ರಳಯ ಎಂಬುದಾಗಿ ಕರೆಯಲ್ಪಡುತ್ತಿದ್ದ ಭೂಕಂಪವು ಸಂಭವಿಸಿ ಹೀಗೆ ಪಟ್ಟಣಗಳು ಭೂಮಿಯಲ್ಲಿ ಮುಳುಗಿ ಹೋದಂತೆ ಊಹಿಸಬೇಕಾಗಿದೆ.

(ಸಂ. ೨೭,೨೮)

# ಮಹಾದೇವಿಯಕ್ಕನವರ ಜೀವನ ಚರಿತ್ರೆ

ಈ ಹೆಸರಿನ ಒಂದು ಚಿಕ್ಕ ಪುಸ್ತಕವನ್ನು ಟಿ. ಎನ್. ಮಹಾದೇವಯ್ಯನವರು ಬರೆದಿರುವುದಲ್ಲದೆ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲಾ ಪುಷ್ಪ ೧ ಆಗಿ ಬೆಂಗಳೂರಿನಲ್ಲಿ ಪ್ರಕಟವಾಗಿದೆ. ಸರ್ಪಭೂಷಣ ಶಿವಯೋಗಿ ಮಠದ ಈಗಿನ ಅಧಿಕಾರಿಗಳಾದ ಶ್ರೀ. ನಿ. ಪ್ರ. ಮಹಾದೇವಸ್ವಾಮಿಗಳವರು ಇಂತಹ ಕಾರ್ಯಗಳನ್ನು ನಡೆಸುತ್ತಿರುವುದು ಸ್ತುತ್ಯವಾದುದು. ಇದು ಮೈಸೂರು ರೋಡಿನಲ್ಲಿರುವ ಬೆಂಗಳೂರು ಪ್ರೆಸ್ಸಿನಲ್ಲಿ ಅಚ್ಚಾಗಿರುತ್ತದೆ. ಆದರೂ ಕೆಲವು ಅಶುದ್ಧಗಳು ಇದರಲ್ಲಿ ಸೇರಿದೆ. ಉದಾ– ೧೩ನೆಯ ಪುಟದ ಕಡೆಯಭಾಗ.

ಗಿರಿಯಲ್ಲದೆ "ಹುಲ್ಲು ದೊರಡಿ" ಇಲ್ಲಿ 'ಹುಲು ಮೊರಡಿ' ಎಂದೂ 'ಕಿರಿವಳ್ಳಕ್ಕೆ ಳಿಸುವುದೆ' ಎಂಬಲ್ಲಿ 'ಕಿರಿದಳ್ಳಕ್ಕೆಳಸುವುದೆ' ಎಂದೂ ಆಗಬೇಕು.

ಈ ಚಿಕ್ಕ ಚರಿತ್ರೆಯುನ್ನು ಪ್ರಕಟಮಾಡುವುದರಲ್ಲಿಯೇ ಮಹಾದೇವಯ್ಯನವರು ಬಹಳ ಶ್ರಮವನ್ನು ತೆಗೆದುಕೊಂಡಿರುತ್ತಾರೆ. ಅಕ್ಕನವರ ವಚನಗಳಿಂದಲೇ ಅವರ ಚರಿತ್ರೆಯುನ್ನು ಆಕರ್ಷಣೆಮಾಡಿ ಇರುತ್ತಾರೆ.

ಈ ಚಿಕ್ಕ ಪುಸ್ತಕದ ಬೆಲೆ ಎರಡಾಣೆ. ಓದುಗರು ಗ್ರಹಿಸಲಿಕ್ಕೆ ಯೋಗ್ಯವಾಗಿ ಇದೆ.

(ಸಂ. ೨೭–೨೮)

# ಸಾಧು ಟಿ. ಎಲ್. ಲಾಸ್ವಾನಿ ಇವರ ಮಹತ್ವದ ಭಾಷಣ

ಲಾಸ್ವಾನಿ ಇವರು ಬೊಂಬಾಯಿಯಲ್ಲಿ ನಡೆದ ಅಖಿಲ ಭಾರತ ಜೀವದಯಾ ಪರಿಷತ್ತಿನ ೭ ನೆಯ ಅಧಿವೇಶನದ ಅಧ್ಯಕ್ಷರು.

ಇವರ ಆಗಿನ ಭಾಷಣವನ್ನು ಅನ್ನದಾನೀಶ್ವರ ವಿರಕ್ತಮಠ ಗುಡದೂರ ಎಂಬುವವರು ಯೋಗ್ಯ ರೀತಿಯಲ್ಲಿ ಕನ್ನಡಿಸಿ ಇರುತ್ತಾರೆ. ಇದನ್ನು ಓದುವುದರಿಂದ ಭರತ ಖಂಡವನ್ನು ಸುಧಾರಿಸುವ ಮೂಲಸೂತ್ರವೇ ನಮ್ಮ ಕೈಗೆ ಸಿಕ್ಕಂತಾಗುವುದು.

## ಸೇವಾಧರ್ಮ ಅಥವಾ ಮಾನವ ಧರ್ಮಸಾಧನ

ಅನ್ನದಾನೀಶ್ವರ ವಿರಕ್ತಮಠ ಗುಡದೂರ ಇವರು ರಚಿಸಿದ ಒಂದು ಚಿಕ್ಕ ಪುಸ್ತಕದ ಬೆಲೆ ಎರಡಾಣೆ.

ಇದು ಪ್ರತಿಯೊಬ್ಬ ಮನುಷ್ಯನೂ ಪರರ ಸೇವಾ ಮಾಡಬೇಕೆಂಬುವನ್ನು ಬೋಧಿಸುತ್ತದೆ. ತನು, ಮನ ಧನಗಳನ್ನು ಸಮರ್ಪಿಸಿ ಸೇವಾ ಮಾಡಬೇಕೆಂದು ಬೋಧಿಸುತ್ತದೆ. ಬಸವೇಶ್ವರನ ಮೂರು ವಚನಗಳಿಂದ ಕೊನೆಗೊಂಡಿರುತ್ತದೆ. ಬಸವೇಶ್ವರನ ದಾಸೋಹಂಭಾವದ ಬಗೆಯನ್ನು ಇನ್ನೂ ಹೆಚ್ಚಾಗಿ ವಿವರಿಸಿದ್ದರೆ ಚೆನ್ನಾಗಿರುತ್ತಿದ್ದಿತು.

(ಸಂ. ೨೭-೨೮)

# ನೀರಾದಿಂದ ಸಕ್ಕರೆ

---

ಭಾರತವು ಸ್ವತಂತ್ರವಾಗುವುದಕ್ಕಾಗಿ ಈಚಲ ಮರಗಳನ್ನು ಕಡಿದು ಹಾಕುವ ಸತ್ಯಾಗ್ರಹವು ಕೆಲವು ಕಾಲ ಪ್ರಚಾರದಲ್ಲಿದ್ದಿತು. ಆಗ ದೈವದತ್ತ (ದೇವರ ದೇಣಿಗೆ) ವಸ್ತುಗಳನ್ನು ಹಾಳು ಮಾಡಬಾರದೆಂದೂ ಆ ಮರದಿಂದ ಹೆಂಡೆ ಹೆಂಡವನ್ನು ಪಡೆಯುವುದಕ್ಕಿಂತಲೂ 'ನೀರಾ'ವನ್ನು ಪಡೆದರೆ ಅದು ಕ್ಷಯರೋಗ ಗುಣಕಾರಿ ಎಂದು ಜನವಾರ್ತೆ ಇರುವುದನ್ನು ಪರೀಕ್ಷಿಸಬೇಕೆಂದೂ ಸದ್ಧರ್ಮ ದೀಪಿಕೆಯಲ್ಲಿ ಪ್ರಕಟವಾಗಿದ್ದಿತು. ಮುಂಬಯಿ ಸರಕಾರದವರು 'ನೀರಾ' ದಿಂದ ಆಗುವ ಪ್ರಯೋಜನವನ್ನು ಸಾಧ್ಯವಾದಷ್ಟು ಪಡೆಯುತ್ತಿದ್ದಾರೆ. ಈಗ ಆಂಧ್ರ ಸರಕಾರದವರು 'ನೀರಾ' ದಿಂಪ ಸಕ್ಕರೆಯನ್ನು ಉತ್ಪತ್ತಿಮಾಡಲು ಪ್ರಯೋಗ ನಡೆಸುತ್ತಿರುವರೆಂದು ತಿಳಿಯ ಬರುತ್ತದೆ. (ಸಾಧ್ವಿ ೬–೧೨–೫೫) ದೇವರ ದೇಣಿಗೆಯನ್ನು ಯುಕ್ತ ರೀತಿಯಲ್ಲಿ ಉಪಯೋಗಿಸುವವರೇ ಜಾಣರು. ಹೊಗೆಯ ಸೊಪ್ಪಿನಿಂದ ಆಗುವ ಕೆಡಕು ಬಹಳ ಎಂಬುದನ್ನು ಜನತೆಯು ಚೆನ್ನಾಗಿ ಪರಿಶೀಲಿಸುವುದು ಉತ್ತಮವಾಗಿದೆ. ಇದಕ್ಕಿಂತಲೂ ಈಚಲು ಮರದಿಂದ ಆಗುವ ಕೆಡಕು ಹೆಚ್ಚಿನದಲ್ಲ. ಆದುದರಿಂದ ಹೊಗೆಯ ಸೊಪ್ಪಿನ ನಿರ್ಬಂಧವನ್ನು ಮಾಡುವುದರ ಕಡೆಗೆ ರಾಜಕೀಯವು ಹೆಚ್ಚು ಗಮನವನ್ನು ಕೊಡಬೇಕಾದದು ಅತ್ಯಂತಾವಶ್ಯಕವಾಗಿದೆ.

(ಸಂ. ೩೫,೩೬,೩೭)

## ಕ್ವೆಟ್ಟಾ ಭೂಕಂಪ

ಕ್ವೆಟ್ಟಾದಲ್ಲಿ ಆದ ಭೂಕಂಪದ ದೆಸೆಯಿಂದ ಜನರಿಗೆ ಉಂಟಾದ ತೊಂದರೆಗಳನ್ನು ದೂರ ಮಾಡುವುದಕ್ಕಾಗಿ ಹಿಂದೂಸ್ಥಾನದ ರಾಜ ಪ್ರತಿನಿಧಿ (Viceray) ಗಳು ಒಂದು ದ್ರವ್ಯ ನಿಧಿ (Fund) ಏರ್ಪಡಿಸಿ ಇರುವದು ಸರಿಯಷ್ಟೆ. ಈ ದ್ರವ್ಯ ನಿಧಿಗೆ ಇನ್ನೂ ಹೆಚ್ಚು ಹೆಚ್ಚಾಗಿ ಜನರು ಅನುಕೂಲಿಸಬೇಕಾಗಿದೆ. ಅಲ್ಲಿನ ಜನರ ತೊಂದರೆಯು ಇನ್ನೂ ತೀರಿಲ್ಲವೆಂಬ ವರ್ತಮಾನಗಳು ಈಗಲೂ ಬರುತ್ತಾ ಇವೆ.

(ಸಂ. ೨೭–೨೮)

# ಪೂರ್ವ ಜನ್ಮ ಸ್ಮರಣೆಯುಳ್ಳ ಬಾಲಕ

ಹಿಂದೂಸ್ಥಾನದ ಝಾಂಸಿ ಸಂಸ್ಥಾನದಲ್ಲಿ ಇರುವ ಸಗೂರ್ ಎಂಬ ಊರಿನಲ್ಲಿ ಎರಡೂವರೆ ವರ್ಷ ವಯಸ್ಸುಳ್ಳ ಒಬ್ಬ ಹುಟ್ಟು ಕುರುಡ ಬಾಲಕನು ಭಗವದ್ಗೀತಾ ರಾಮಾಯಣ ಮಹಾಭಾರತಗಳನ್ನು ಸ್ಪಷ್ಟವಾಗಿ ಬಾಯಿಪಾಠವಾಗಿ ಹೇಳುತ್ತಿರುವ ನೆಂತಲೂ ಸಂಸ್ಕೃತ ಶ್ಲೋಕಗಳ ಅರ್ಥವನ್ನು ಚೆನ್ನಾಗಿ ಮಾಡುತ್ತಿರುವನೆಂತಲೂ ಯಾರಾದರೂ ಅವನೆದುರಿಗೆ ತಪ್ಪು ಅರ್ಥವನ್ನು ಹೇಳಿದರೆ ಕೂಡಲೆ ಸರಿಪಡಿಸಿಹೇಳು ತ್ತಿದ್ದಾನೆ ಎಂತಲೂ ಪ್ರಕಟವಾಗಿದೆ.

ಈ ಬಾಲಕನು ಹಿಂದಿನ ಜನ್ಮದ ವೃತ್ತಾಂತವನ್ನೂ ಆಗಾಗ ಹೇಳುತ್ತಿರುವ ನೆಂತಲೂ ಈ ಜನ್ಮದಲ್ಲಿ ಇನ್ನೂ ೫ ವರ್ಷಗಳು ಇರುವೆನೆಂತಲೂ ಹಿಂದೆ ಒಬ್ಬ ಮಹಾತ್ಮನಾಗಿದ್ದನೆಂತ ತಿಳಿಯಬರುತ್ತದೆ.

ಹಿಂದೂ ಶಾಸ್ತ್ರದಲ್ಲಿ ಬರೆದಿರುವಂತೆ ಪೂರ್ವಜನ್ಮ ಪುನರ್ಜನ್ಮಗಳುಂಟೆಂದು ಹೇಳಲು ಇದೂ ಒಂದು ಮುಖ್ಯವಾದ ದೃಷ್ಟಾಂತವಲ್ಲವೇ ? ಮತ್ತು ಹಿಂದೂ ಧರ್ಮ ಶಾಸ್ತ್ರದ ಪರಿಚಯವನ್ನು ಮಾಡಿಕೊಳ್ಳುವುದು ಉತ್ತಮವಲ್ಲವೇ ? ಈ ಧರ್ಮಜ್ಞಾನ ದಿಂದ ಮುಂದಿನ ಜನ್ಮದ ಪರಿಶುದ್ಧತೆಯನ್ನಾಗಲೀ ಕೈವಲ್ಯವನ್ನಾಗಲೀ ಪಡೆಯುವು ದಕ್ಕೆ ಅನುಕೂಲವಾಗುವುದಿಲ್ಲವೇ ?

(ಸಂ. ೪೩)

# ಶಸ್ತ್ರ ಸನ್ಯಾಸ (DISARMAMENT)

ನ್ಯೂಯಾರ್ಕಿನ (ಅಮೇರಿಕಾ ಖಂಡ) ನ್ಯೂ ಹಿಸ್ಟರಿ ಸೊಸೈಟಿಯವರು ಶಸ್ತ್ರ ಸನ್ಯಾಸ (Disarmament)ದ ವಿಷಯವಾಗಿ ಲೇಖನ ಬರೆಯಲು ಇಡೀ ಜಗತ್ತಿಗೂ ಒಂದು ಸ್ಪರ್ಧೆಯನ್ನು ಏರ್ಪಡಿಸಿದ್ದರು. ಈ ಬಗ್ಗೆ ಒಂದು ಲೇಖನವನ್ನು ಕೊಳ್ಳೇಗಾಲ ತಾಲ್ಲೂಕು ಮಧುವನಹಳ್ಳಿಯಲ್ಲಿ ಇರುವ ಎಚ್. ಜೆ. ಶಿವಶಂಕರಪ್ಪ ಎಂಬುವವರು ಕಳುಹಿಸಿದ್ದರು. ಇಡೀ ಹಿಂದೂಸ್ಥಾನಕ್ಕಾಗಿ ಈ ಬಗ್ಗೆ ಇಟ್ಟಿದ್ದ ಬಹುಮಾನವು (National Prize) ಡಾಲರುಗಳು ೫೦ (ಸುಮಾರು ೧೫೦ ರೂಪಾಯಿಗಳು ಉಳ್ಳದು) ಸದರಿಯವರಿಗೆ ದೊರಕಿರುವದಲ್ಲದೆ ಯೋಗ್ಯತಾ ಪತ್ರವೂ ಸಿಕ್ಕಿದೆ.

"ಅಹಿಂಸಾ ಪರಮೋಧರ್ಮಃ" ಎಂಬುದನ್ನು ಪಾಲಿಸತಕ್ಕದ್ದರಲ್ಲಿ ಬಹು ಮುಖ್ಯರಾದವರು ವೀರಶೈವ ಜನಾಂಗದವರು. ಇಡಿ ಜಗತ್ತೇ ಯುದ್ಧ ಮಾಡದಂತೆ ಇರಬೇಕೆಂದು ಯೋಚಿಸುತ್ತಿರುವ ಅಮೇರಿಕಾದವರ ಪ್ರಯತ್ನಕ್ಕೆ ಸಹಾಯಕರಾಗಿ ಇವರು ಲೇಖನವನ್ನು ಕಳುಹಿಸಿ ಅದರಲ್ಲಿ ಯಶಸ್ವಿಯಾದುದು ವೀರಶೈವ ಜನಾಂಗಕ್ಕೇ ಭೂಷಣವಾದ ಕಾರ್ಯವಾಗಿದೆ. ಇವರು ವೀರಶೈವ ತತ್ವದ ಗ್ರಂಥಗಳಲ್ಲಿನ ವಿಷಯಗಳನ್ನು ಇಂಗ್ಲಿಷ್‌ನಲ್ಲಿ ಬರೆದು ಪ್ರಕಟಿಸುವ ಕೆಲಸವನ್ನು ಇನ್ನು ಮುಂದೆ ವಹಿಸುವೆವೆಂದು ಒಂದು ಪತ್ರವನ್ನು ಬರೆದಿರುತ್ತಾರೆ. ಇವಕ್ಕಾಗಿ ಬಹಳ ಸಂತೋಷಪಡಬೇಕಾಗಿದೆ.

(ಸಂ. ೪೩)

# ಕರ್ನಾಟಕ ಸಾಹಿತ್ಯ ಪರಿಷತ್ತು

---

## ಕನ್ನಡ ನುಡಿ

## ಪರಿಷತ್ತಿನ ವಾರ ಪತ್ರಿಕೆ

## (ಪ್ರತಿ ಶುಕ್ರವಾರವೂ ಹೊರಡುತ್ತದೆ)

## ಫುಲ್ಸ್‌ಕ್ಯಾಪ್ ಆಕಾರದ ೮ ಪುಟಗಳು

ವಾರ್ಷಿಕ ಚಂದಾ ರೂ. ೧-೮-೦ ಬಿಡಿ ಪತ್ರಿಕೆ ೬ ಕಾಸು

(ಅಂಚೆ ವೆಚ್ಚ ಸೇರಿ ೨-೪-೦)

## ಬರುವ ವಿಜಯದಶಮಿಯಿಂದ ಹೊರಡುತ್ತದೆ.

ಕಳೆದ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಪರಿಷತ್ತಿನ ಉಪಾಧ್ಯಕ್ಷರು ಶ್ರೀ ಬಿ. ಎಂ. ಶ್ರೀಕಂಠಯ್ಯನವರು–"ಕನ್ನಡಕ್ಕಾಗಿಯೇ ಕನ್ನಡ ಚಳುವಳಿಗಾಗಿಯೇ ಮೀಸಲಾದ ಒಂದು ವಾರಪತ್ರಿಕೆ ಬೇಕು–ಕನ್ನಡದ ಹಿರಿಮೆಯನ್ನು ಎತ್ತಿ ಹೇಳಿ ಕನ್ನಡ ಪ್ರಚಾರಕ್ಕಾಗಿಯೇ ಮೀಸಲಾದ ಒಂದು ಪತ್ರಿಕೆ ಇರುವುದರ ಅವಶ್ಯಕತೆ ಈಗ ತೋರಿ ಬರುತ್ತಾ ಇದೆ". ಎಂದು ಹೇಳಿದ್ದರಷ್ಟೆ. ಈ ಉದ್ದೇಶವನ್ನು ಕಾರ್ಯರೂಪಕ್ಕೆ ತರಬೇಕೆಂದು ಆಲೋಚಿಸಿ, ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲವು ಈ ಕೆಳಗಿನಂತೆ ತೀರ್ಮಾನಮಾಡಿದೆ :

> "ಕನ್ನಡ ಪ್ರಚಾರಕಾರ್ಯಕ್ಕಾಗಿ ಪರಿಷತ್ತಿನಿಂದ ಒಂದು ವಾರ ಪತ್ರಿಕೆಯನ್ನು ಪ್ರಕಟಿಸತಕ್ಕದ್ದು.
>
> –ಈ ಪತ್ರಿಕೆಯ ಮೊದಲ ಸಂಚಿಕೆ ಈ ಸಲ ವಿಜಯದಶಮಿಯ ದಿನ ಹೊರಡತಕ್ಕದು; ಈ ಪತ್ರಿಕೆಗೆ ಶ್ರೀಮಾನ್ ಅ. ನ. ಕೃಷ್ಣರಾಯರವರು ಸಂಪಾದಕರಾಗಿರಬೇಕೆಂದು ಪ್ರಾರ್ಥಿಸಿಕೊಳ್ಳತಕ್ಕದ್ದು.

ಮೇಲಿನ ತೀರ್ಮಾನಕ್ಕೆ ಅನುಸಾರವಾಗಿ ಬರುವ ವಿಜಯದಶಮಿಯ ದಿನ ಈ ಪತ್ರಿಕೆಯ ಮೊದಲನೆಯ ಸಂಚಿಕೆಯನ್ನು ಪ್ರಕಟಪಡಿಸಲು ಸಿದ್ಧತೆಗಳಾಗುತ್ತಿವೆ.

ಪತ್ರಿಕೆ ಸಂಪೂರ್ಣವಾಗಿ ಕನ್ನಡ ನುಡಿ, ಅದರ ಪ್ರಚಾರ, ಅದರ ಏಳಿಗೆ, ಇದಕ್ಕೇ ಮೀಸಲಾಗಿದೆ; ಕನ್ನಡಿಗರಿಗೆ ಕನ್ನಡದ ವಿಷಯವಾಗಿ, ಕನ್ನಡದ ಮೂಲಕ, ಎಲ್ಲ ತಿಳುವಳಿಕೆ ಕೊಡುವುದೇ ಅದರ ಮುಖ್ಯ ಉದ್ದೇಶ. ಅದರಲ್ಲಿ ಬರುವವು ಕನ್ನಡದ ಸುದ್ದಿಗಳು. ಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆ ಮಾತ್ರ ಸಂಬಂಧಿಸಿದ ಬರಹಗಳು, ಸುದ್ದಿಗಳು.

ಈ ಪತ್ರಿಕೆ ಚಿರಕಾಲ ಕನ್ನಡದ ಮತ್ತು ಕನ್ನಡಿಗರ ಸೇವೆ ಮಾಡುವಂತೆ ಎಲ್ಲ ಕನ್ನಡಿಗರೂ ಪರಿಷತ್ತಿನ ಈ ಹೊಸ ಪ್ರಯತ್ನವನ್ನು ಹರಸಿ ಪತ್ರಿಕೆಗೆ ಎಲ್ಲ ಬಗೆಯ ಪ್ರೋತ್ಸಾಹಗಳನ್ನು ಕೊಡಬೇಕೆಂದು ಪ್ರಾರ್ಥನೆ. ಇಷ್ಟವುಳ್ಳವರು ಏಜೆನ್ಸಿಗಾಗಿ ಬರೆದು ಕೊಳ್ಳಬಹುದು–ಪರಿಷತ್ತಿನ ಶಾಖೆಯಿಂದ.

ಕನ್ನಡ ಭಾಷೆಯ ಏಳಿಗೆಗಾಗಿ ಕನ್ನಡದ ಪ್ರಚಾರಕ್ಕಾಗಿ ಒಂದು ಪತ್ರಿಕೆ ಇರುವುದು ಅತ್ಯವಶ್ಯಕವಾದುದು. ಇಂತಹ ಪ್ರಯತ್ನವನ್ನು ಕನ್ನಡ ಸಾಹಿತ್ಯ ಪರಿಷತ್ತಿನವರು ಮಾಡಿದುದು ಸ್ತೋತ್ರಾರ್ಹವಾದ ಕೆಲಸವಾಗಿದೆ.

ಈ ಪತ್ರಿಕೆ ಕನ್ನಡದ ಅಭಿಮಾನಿಗಳೆಲ್ಲರೂ ಸಹಾಯ ಮಾಡಬೇಕಾದುದು ಅವಶ್ಯಕ. ಈ ಪತ್ರಿಕೆಯು ಮುಂದೆ ಬಂದು ಕನ್ನಡದ ಸಾಹಿತ್ಯ ಪಚಾರಮಾಡುವುದ ರಲ್ಲಿ ಮುಖ್ಯವಾಗಿ ಇದ್ದು ಕನ್ನಡ ಭಾಷೆಯ ಶ್ರೇಷ್ಠತೆಯನ್ನು ಪ್ರಕಟ ಪಡಿಸುವಂತಾಗಿ ಕನ್ನಡಿಗರ ಅಚ್ಚುಮೆಚ್ಚಾಗಿ ಇರುವಂತೆ ಬೆಳೆಯಲೆಂದು ನಾವು ಆಶಿಸುತ್ತೇವೆ.

(ಈ ಪ್ರಸಿದ್ಧಿ ಪತ್ರಿಕೆಯು ೧೯೩೮ ಸಪ್ಟಂಬರಿನಲ್ಲಿ ನಮಗೆ ಬಂದಿದೆ.)

–ಪ್ರಕಾಶಕ

(ಸಂ. ೪೫–೪೬)

# ಮುದುಕರನ್ನು ಹುಡುಗರನ್ನಾಗಿ ಮಾಡುವ ಔಷಧ

ದೆಹಲಿಯಬಳಿ ಘಾಜಿಯಾಬಾದ್ ಊರಿನಲ್ಲಿ ಇರುವ 'ಕಾಯಕಲ್ಪಕಾನನ' ಎಂಬ ಆಶ್ರಮದಲ್ಲಿ ಇರುವ ಶ್ರೀ ಆನಂದ ಸ್ವಾಮಿ ಎಂಬುವವರು ಅಜಕಲ್ಪ, ಬುದ್ಧಿಕಲ್ಪ, ರಕ್ತರೋಗಗಳ ಕಲ್ಪ ಎಂಬ ಔಷಧಗಳ ವಿಷಯವನ್ನು ಉದಾರವಾಗಿ ಜನರಿಗೆ ಬೋಧಿಸುತ್ತಾರೆಂದೂ ಇದರಿಂದ ಜನರ ಆಯುಷ್ಯವರ್ಧನವೇ ಮೊದಲಾದ ಹೆಚ್ಚಿನ ಪ್ರಯೋಜನಗಳಾಗುವವೆಂದೂ ಶ್ರೀಯುತ ಮದನ ಮೋಹನ ಮಾಳವೀಯವರು ಅಜಕಲ್ಪವನ್ನು ಸೇವಿಸಿದರೆಂದೂ ಶ್ರೀಯುತ ಮೋ. ಕೆ. ಗಾಂಧೀಜಿಯವರು ಸೇವಿಸಲಿರುವರೆಂದೂ ಬರೆದಿದ್ದ ಪ್ರಕಟನೆಯನ್ನು ನೋಡಿ ಅವರನ್ನು ಪತ್ರಮುಖಾಂತರ ವಿಚಾರಿಸಲು ಅವರು ಒಂದು ಪ್ರಸಿದ್ಧ ಪತ್ರವನ್ನು ಕಳುಹಿಸಿರುತ್ತಾರೆ.

ಅವರು ಅಜಕಲ್ಪಕ್ಕಾಗಿ ಕರೀ ಆಡನ್ನು ಸಾಕಿ ಅದಕ್ಕೆ ಔಷಧಿ ಕೊಡಬೇಕೆಂತಲೂ ಒಂದು ರೀತಿಯಿಂದ ಕ್ರಮವಾಗಿ ಹೆಚ್ಚಿಸಿ ೨೦ ದಿವಸಗಳ ನಂತರ ಒಂದು ರೀತಿ ಕಡಿಮೆ ಮಾಡುತ್ತಾ ೪೦ ದಿವಸ ಹೀಗೆ ಔಷಧಿಯನ್ನು ಕೊಟ್ಟು ೮೦ ದಿವಸ ಅದರ ಹಾಲಕರೆದು ಒಂದು ಅಥವಾ ಒಂದೂವರೆ ಸೇರು ಹಾಲನ್ನು ದಿನ ಕುಡಿಯಬೇಕೆಂತಲೂ ಇದಕ್ಕೆ ಬೇಕಾಗುವ ೪೨ ತೊಲೆ ಔಷಧಿಯನ್ನು ತಮ್ಮ ತಮ್ಮ ಸ್ಥಳಗಳಲ್ಲಿಯೇ ಯೋಗ್ಯರಾದ ವೈದ್ಯರ ಮೂಲಕ ಪಡೆಯಬಹುದೆಂತಲೂ ಆದರೆ ಪ್ರತಿಯೊಬ್ಬನೂ ಈ ಔಷಧಿಯನ್ನು ತೆಗೆದುಕೊಳ್ಳುವಾಗ ಈಗಿನ ರೀತಿಗನುಸಾರವಾಗಿ ತಿದ್ದುಪಡಿ ಮಾಡಲ್ಪಟ್ಟ ಪಂಚ ಕರ್ಮವನ್ನು ರೋಗಿಯ ಬಲ ಮತ್ತು ತಡೆಯುವ ಶಕ್ತಿಗೆ ಅನುಕೂಲವಾಗಿ ಮಾಡಲೇಬೇಕೆಂತಲೂ, ಇಷ್ಟೆಲ್ಲಾ ಇದ್ದಾಗ್ಯೂ ಬ್ರಹ್ಮಚರ್ಯ ಪದ್ಧತಿಯನ್ನು ಪಾಲಿಸಬೇಕೆಂತಲೂ, ವಿವರಿಸಿ ಇರುತ್ತಾರೆ. [ಆದರೆ ಮುಂದೆ ಹೀಗೆ ಬರೆದಿರುತ್ತಾರೆ].

The medicene in very costly but keeping in view the economic condition of the country and our philonthropic motives wehave decided to allow concession to deserving patients and in the cause of Ayurvedatry to meet all pockets. The Price therefore may be rettled personaliy.

ಈ ಔಷಧಿಯು ಬಹಳ ಬೆಲೆಯುಳ್ಳದ್ದು. ಆದರೆ ಈ ದೇಶದ ಆರ್ಥಿಕ ಸ್ಥಿತಿಯನ್ನೂ ನಮ್ಮ ಲೋಕೋಪಕಾರ ಬುದ್ಧಿಯ ಉದ್ದೇಶವನ್ನೂ ವಿಚಾರದಲ್ಲಿ ಇಟ್ಟುಕೊಂಡು ಯೋಗ್ಯರಾದ ರೋಗಿಗಳಿಗೆ ದಯತೋರಿಸಬೇಕೆಂದೂ ಆಯುರ್ವೇದವು ಎಲ್ಲರಿಗೂ ತಗಲಲೆಂದೂ ನಾವು ನಿಶ್ಚಯಿಸಿದ್ದೇವೆ. ಆದ್ದರಿಂದ ಕ್ರಯವನ್ನು ಸಮಕ್ಷಮ ಬಂದು ಗೊತ್ತುಮಾಡಿಕೊಳ್ಳಬಹುದು.

ಇದಲ್ಲದೆ ಬುದ್ಧಿ ಕಲ್ಪ ಔಷಧಿಗೆ ೧೫ ರೂ. ಬೆಲೆಯನ್ನಿಟ್ಟಿರುತ್ತಾರೆ. ಇತರ ಕಲ್ಪಗಳು ತಯಾರಾಗುತ್ತಾ ಇವೆ. ಎಂದು ಆ ಪ್ರಸಿದ್ಧ ಪತ್ರದಲ್ಲಿ ಇದೆ.

ದೆಹಲಿ ಬಳಿ ಘಾಜಿಯಾಪುರಕ್ಕೆ ಹೋಗಬೇಕೆಂದರೆ ರೋಗಿಗಳಿಗೆ ಎಷ್ಟು ಖರ್ಚು ಬರಬಹುದು ? ಈ ದುಡ್ಡನ್ನು ರೋಗಿಗಳಿಂದ ಕೊಡಿಸಿ ರೇಲ್ವೆ ಕಂಪನಿಯವರಿಗೆ ಲಾಭಮಾಡಿಸುವುದಾದರೆ ದೇಶದ ಆರ್ಥಿಕ ಸುಧಾರಣೆ ಹೇಗೆ ಆಗುವುದೆಂಬುದನ್ನು ಇವರು ಯೋಚಿಸಿದಂತೆಯೇ ತೋರಲಿಲ್ಲ. "ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ" ಆಗಲಿ.

—ಒಬ್ಬ ವಿಚಾರಕ,

(ಸಂ. ೪೫-೪೬)

# ಬಂಗಾಳ ಸಕಲ ವಿದ್ಯಾನಿಲಯು

## (Bengal University)

---

ಹಿಂದೂ ದೇಶದ ಪೂರ್ವದ ಸಂಸ್ಕೃತಿ ಮತ್ತು ಜ್ಞಾನಗಳನ್ನು ಮುಂದುವರಿಸುವುದಕ್ಕಾಗಿ ಪೂರ್ವದಲ್ಲಿ ತಕ್ಷಶಿಲ ಮತ್ತು ನಲಂದ ಎಂಬ ಸ್ಥಳಗಳಲ್ಲಿ ವಿದ್ಯಾನಿಲಯುಗಳು ಇದ್ದಂತೆ ಈಗ ಬಂಗಾಳ ದೇಶದಲ್ಲಿ "ಬಂಗಾಳ ಸಕಲ ವಿದ್ಯಾನಿಲಯ" ಎಂಬ ಹೆಸರಿನ ಒಂದು ಸಕಲ ವಿದ್ಯಾನಿಲಯುವನ್ನು ಏರ್ಪಡಿಸಲು ಪ್ರಯತ್ನ ನಡೆಯುತ್ತಾ ಇದೆ. ಇದು ವೇದಾಂತ, ಪೂರ್ವ ಚರಿತ್ರೆ, ಜ್ಯೋತಿಷ್ಯ, ಕಲಾವಿದ್ಯೆ, ರಾಜ್ಯಗಳು (ಸರಕಾರ) ಪೂರ್ವದ ವ್ಯಾಪಾರದ ಇತಿಹಾಸ, ಅರ್ಥಶಾಸ್ತ್ರ, ಈ ಶಾಖೆಗಳ ತಿಳಿವಳಿಕೆಯು ಪೂರ್ವದಲ್ಲಿ ಇದ್ದುದ್ದನ್ನು ಅವುಗಳ ಈಗಿನ ಅಭಿವೃದ್ಧಿಯೊಡನೆ ಕಲಿಯುವಂತೆ ಆಗುತ್ತದೆ.

ಸದ್ಯಕ್ಕೆ ಮಹಾ ಮಹೋಪಾಧ್ಯಾಯ "ಪ್ರಮಥನಾಥ ತರ್ಕ ಭೂಷಣ" ಎಂಬ ಕಾಶಿಯ ಹಿಂದೂ ವಿದ್ಯಾನಿಲಯುದ ಪೂರ್ವಿಕ ವಿದ್ಯಾಭ್ಯಾಸದ ಶಾಖೆಯ ಅಧ್ಯಕ್ಷರು (Dean of faculty Oriental Learning) ಇದಕ್ಕೆ ಮೊದಲನೆಯ ಉಪಾಧ್ಯಕ್ಷರು (Vice-chancellar) ಆಗುವರೆಂದು ತಿಳಿದು ಬಂದಿದೆ. ಇದಕ್ಕಾಗಿ ಶ್ರೀ ಹರಿದಾಸ ಮಜಮ್‌ದಾರ್ ಎಂಬ ಅಮೃತ ಸಮಾಜದ ಸ್ಥಾಪಕರು ಒಂದೂವರೆ ಲಕ್ಷ ರೂಪಾಯಿಗಳಿಗಿಂತ ಮೇಲು ಬೆಲೆಯಾಗುವ ೧೨ ಬೀಘೆಗಳ ಅಳತೆಯುಳ್ಳ ಸ್ಥಳವನ್ನು ಕೊಟ್ಟಿರುತ್ತಾರೆ.

ಇದಲ್ಲದೆ ಸದರಿಯವರು ಈ ಬಂಗಾಳದ ಸಕಲ ವಿದ್ಯಾನಿಲಯುದ ಪ್ರಾರಂಭದ ವೆಚ್ಚದ ಅನುಕೂಲಕ್ಕಾಗಿ ವರುಷಕ್ಕೆ ಒಂದು ಸಾವಿರ ರೂಪಾಯಿ ಆದಾಯವುಳ್ಳ ಒಂದು ಆಸ್ತಿಯನ್ನು ದಾನವಾಗಿ ಕೊಟ್ಟಿರುತ್ತಾರೆ.

ಹೀಗೆ ಪೂರ್ವ ಸಂಸ್ಕೃತಿ ಮತ್ತು ಜ್ಞಾನವನ್ನು ಉಳಿಸುವುದಕ್ಕಾಗಿ ಬಂಗಾಳ ದೇಶದವರು ಪ್ರಯತ್ನ ಪಡುತ್ತಾ ಇರುವಲ್ಲಿ ವೀರಶೈವರು ತಮ್ಮ ಪೂರ್ವ ಸಂಸ್ಕೃತಿಯನ್ನು ಶ್ರೇಷ್ಠವಾದ ಜ್ಞಾನವನ್ನೂ ಉಳಿಸುವುದಕ್ಕೆ ಏನು ಪ್ರಯತ್ನ ಮಾಡುತ್ತಿರುವರು ?

ಹಿಂದೂ ದೇಶದ ಉತ್ತರ ಭಾಗದಲ್ಲಿ ಬಂಗಾಳಿಗಳು ಮುಂದಾಳಾಗಿರುವಂತೆ ದಕ್ಷಿಣದಲ್ಲಿ ವೀರಶೈವರು ಮುಂದಾಳುಗಳಾಗಿ ಇರತಕ್ಕ ಶಕ್ತಿಯು ಈ ವೀರಶೈವರಲ್ಲಿ ಇದ್ದರೂ ಇವರ ಆಲೋಚನೆಗಳೂ, ಕಾರ್ಯಗಳೂ, ಬಹಳ ಸಂಕುಚಿತ ಭಾವನೆಯಲ್ಲಿ ಇರುವುದಕ್ಕಾಗಿ ಬಹಳ ವಿಷಾದಿಸಬೇಕಾಗಿದೆ.

ಬಂಗಾಳಿಯರಂತೆ ಎಂದು ವೀರಶೈವರು ತಮ್ಮ ಮುಂದಾಳುತನವನ್ನು ಸ್ಥಿರಗೊಳಿಸಲೆಳಸುವರೋ ಆಗ ದಕ್ಷಿಣ ಹಿಂದೂಸ್ಥಾನವೇ ಶುಭಾಶ್ವಾಸನದ ಸ್ಥಿತಿಯನ್ನು ಹೊಂದುವುದೆಂಬುದನ್ನು ವೀರಶೈವರು ಇನ್ನು ಮುಂದಾದರೂ ಯೋಚಿಸಲಿ.

(ಸಂ. ೪೫–೪೬)

# ಪ್ರಸಿದ್ಧ ನೇತ್ರವೈದ್ಯರಾದ ಡಾ॥ ಮುರಿಗೆಪ್ಪನವರು ಮೋದಿ

ಹಿಂದೂ ದೇಶದಲ್ಲಿ ಪ್ರಸಿದ್ಧ ನೇತ್ರ ವೈದ್ಯರಾದ ಡಾಕ್ಟರ್ ಮುರಿಗಪ್ಪ ಚನ್ನನ ವೀರಪ್ಪ ಮೋದಿ (M. C. Modi) ಇವರು ಈಗ ಧಾರವಾಡ, ದೇವಗೇರಿ ಮೊದ ಲಾದ ಕಡೆಗಳಲ್ಲಿ ಸಂಚರಿಸುತ್ತಿದ್ದಾರೆ. ಇವರು ಮುಂಬಯಿ K. Bh. B ಕಣ್ಣಿನ ಆಸ್ಪತ್ರೆ ಮತ್ತು ರಾಮವಾಡಿ ಆಸ್ಪತ್ರೆಯಲ್ಲಿ ಅಭ್ಯಾಸ ಮಾಡಿ "Efficiencnyi Opthalmogy" ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರು. ಗುಜರಾತ್ ದೇಶದಲ್ಲಿ ನೇತ್ರ ಚಿಕಿತ್ಸೆಯನ್ನು ಆರಂಭಿಸಿದವರು. ೧೯೪೩ರಲ್ಲಿ ೧೦,೦೦೦ ರೋಗಿಗಳನ್ನು ಉಪಚರಿಸಿ ೭೦೦ ಕುರುಡರಿಗೆ ಕಣ್ಣುಗಳನ್ನು ಕೊಟ್ಟವರು. ಈ ವರ್ಷ ಹುಬ್ಬಳ್ಳಿ, ಗದಗ ಮೊದಲಾದ ಕಡೆಗಳಲ್ಲಿ ಅನೇಕ ಸಾವಿರ ಜನರಿಗೆ ಕಣ್ಣಿನ ರೋಗವನ್ನು ಗುಣ ಪಡಿಸಿರುವುದಲ್ಲದೆ ಸಾವಿರಾರು ಜನ ಕುರುಡರಿಗೆ ಕಣ್ಣು ಕಾಣುವಂತೆ ಮಾಡಿದ್ದಾರೆ. ಇವರಿಗೆ ಹೋದ ಹೋದಲ್ಲಿ ನೇತ್ರ ರೋಗಿಗಳು ಹಿಂಬಾಲಿಸುತ್ತಿದ್ದಾರೆ. ಇವರಿ ಗಾದರೂ ರೋಗಿಗಳನ್ನು ಕಂಡರೆ ಪರಮದಯೆ, ಊಟ ನಿದ್ದೆಗಳಿಗಾಗಿ ಆದ ಅನನು ಕೂಲವನ್ನು ಲಕ್ಷಿಸದೆ ರೋಗಿಗಳನ್ನು ನೋಡುತ್ತಾರೆ. ಬಡವರ ಮೇಲಂತೂ ಅಪಾರ ವಾದ ಕರುಣ ಇವರು ಮುಂದೆ ಅಮೇರಿಕಾಕ್ಕೆ ಹೋಗಬೇಕೆಂದಿದ್ದಾರೆ. ಇವರಿಗೆ ಮಹಾದೇವನು ಚಿರಾಯುರಾರೋಗ್ಯವನ್ನೂ ಇವರ ಕೆಲಸದಲ್ಲಿ ಇನ್ನೂ ವಿಶೇಷ ವಾದ ಕೀರ್ತಿಯನ್ನೂ ಮಹಾದೇವನು ದಯಪಾಲಿಸಿ ಕಾಪಾಡಲಿ.

(ಸಂ. ೪೭–೪೮)

# INDIA CENTRE (10-8-1939)

**P. E. N. Congress in Stockhom**

**Sophia Wadiya to represent India**

---

P. E. N. ಈ ಸಂಘದ ಶಾಖೆಯಾದ ಇಂಡಿಯಾದ ಅಂತರ್‌ರಾಷ್ಟ್ರೀಯ ಕೇಂದ್ರವನ್ನು ಸ್ಥಾಪಿಸಿದ ಸೋಫಿಯಾ ವಾಡಿಯಾರವರು ಈ ವರ್ಷ ಸ್ಟಾಕಹೋಂನಲ್ಲಿ ೪ ರಿಂದ ೭ ಸೆಪ್ಟೆಂಬರಿನವರೆಗೆ ನಡೆಯಲಿರುವ ೧೭ನೆ ರಾಷ್ಟ್ರೀಯ ಪಿ. ಇ. ಎನ್. ಸಂಘಕ್ಕೆ ಇಂಡಿಯಾ ಪಿ. ಇ. ಎನ್ ಪರವಾಗಿ ಹೋಗುವರು.

ಇವರು ಹಿಂದಿನ ಎರಡು ವರ್ಷಗಳ ಪಿ. ಇ. ಎನ್ ರಾಷ್ಟ್ರಸಂಘಗಳಿಗೆ ಎಂದರೆ ೧೯೩೫ ರಲ್ಲಿ ಬಾರ್ಸಿಲೋನಾದಲ್ಲಿಯೂ ಮತ್ತು ೧೯೩೬ ರಲ್ಲಿ ಬ್ಯೂನಾಸ್ ಏರಿಶ್ ನಲ್ಲಿಯೂ ನಡೆದವುಗಳಿಗೆ ಇಂಡಿಯಾ ಪರವಾಗಿ ಪ್ರತಿನಿಧಿಯಾಗಿ ಹೋಗಿರುವರು. ಜೋಧಪುರದಿಂದ ೨೭ ನೆಯ ಅಗಸ್ಟ್ ಭಾನುವಾರ ವಿಮಾನ ಮಾರ್ಗವಾಗಿ ಹೋಗುವರು.

ಈ ಮೊದಲು P. E. N· ಎಂಬ ಒಂದು ಮಾಸಪತ್ರಿಕೆಯನ್ನು ಶ್ರೀಮತಿ ವಾಡಿಯಾ ಸೋಫಿಯಾರವರು ಹೊರಡಿಸುತಿದ್ದಾರೆಂದೂ ಪ್ರಪಂಚದಲ್ಲಿನ ಎಲ್ಲಾ ಧರ್ಮ (Religions) ಅಭಿಪ್ರಾಯಗಳನ್ನು ಒಂದುಗೂಡಿಸಿ ಪ್ರಪಂಚದಲ್ಲೆಲ್ಲಾ ಒಂದೇ ಮತವನ್ನು ಪ್ರಚಾರದಲ್ಲಿ ತರಬೇಕೆಂದೂ ಜಗತ್ತಿನಲ್ಲಿರುವ ಎಲ್ಲಾ ಭಾಷೆಗಳು ಉನ್ನತಿಯ ಪ್ರಚಾರವನ್ನು ಮಾಡಬೇಕೆಂದೂ ಉದ್ಯುಕ್ತವಾಗಿರುವ P. E. N. ಸಂಘದ ಪರವಾಗಿ ಈ ಪತ್ರಿಕೆ ಹೊರಡುವುದೆಂದು ಈ ಮುಂಚೆಯೇ ಈ ಮಾಸಪತ್ರದ ಒಂದು ಸಂಚಿಕೆಯಲ್ಲಿ ಪ್ರಕಟಿಸಿ ಇದ್ದಿತು. ಈ P. E. N. ಸಂಘದ ಹಿಂದೂದೇಶದ (ಇಂಡಿಯಾ) ಶಾಖೆಗೆ ಡಾಕ್ಟರ್ ರವೀಂದ್ರ ಟಾಗೋರರವರು ಅಧ್ಯಕ್ಷರಾಗಿರವರು ಮ. ರಾ. ರಮಾನಂದ ಚತ್ತರಜಿಯವರು, ಶ್ರೀಮತಿ ಸರೋಜಿನಿ ನಾಯುಡುರವರು,

ಸರ್ ರಾಧಾಕೃಷ್ಣನ್‌ರವರು (ಧರ್ಮ ಗ್ರಂಥಗಳ ಸಾರವನ್ನು ಇಂಗ್ಲಿಷ್‌ನಲ್ಲಿ ಬರೆದು ಪ್ರಸಿದ್ಧರಾದವರು). ಈ ಮೂವರೂ ಉಪಾಧ್ಯಕ್ಷರಾಗಿಯೂ ಇಂಡಿಯಾ P. E. N. ಪತ್ರಿಕೆಯ ಲೇಖಕರಾದ ಈ ಸೋಫಿಯಾ ವಾಡಿಯಾರವರು ಈ ಸಂಘ ಸ್ಥಾಪನೆಯ ಮೂಲರಾಗಿಯೂ ಇರುತ್ತಾರೆ. ಈ ಇಂಡಿಯಾ ಪಿ. ಇ. ಎನ್. ಸಂಘದ ಮುಖ್ಯ ಆಫೀಸು ಮುಂಬಯಿ ಮಲಬಾರ್ ಹಿಲ್ ನಾರಾಯಣ ದಾಬೋಲಕರ ರಸ್ತೆ ೭೭ನೆಯ ನಂಬರಿನ ಕಟ್ಟಡದಲ್ಲಿ ಇದೆ. ಈ ಸಂಘದಿಂದ ಇಡೀ ಜಗತ್ತಿನ ಜನತೆಯ ಧಾರ್ಮಿಕ ಸ್ವಾತಂತ್ರ್ಯ ಜೀವನಕ್ಕೆ ಬಹಳ ಸಹಾಯವಾಗುವದೆಂಬ ನಿರೀಕ್ಷಣೆ ಇದೆ. ಈ ಸಂಬಂಧ ದಲ್ಲಿ ಪತ್ರವ್ಯವಹಾರ ಮಾಡುವವರು ಮೇಲೆ ಕಂಡ ಈ ಪತ್ರಿಕಾ ಲೇಖಕರ ವಿಳಾಸಕ್ಕೆ ಮಾಡಬಹುದು.

—ಪ್ರಕಾಶಕ

(ಸಂ. ೪೭–೪೮)

# ಮಾ. ರಾ. ಎಸ್. ನಿಜಲಿಂಗಪ್ಪನವರ ಭಾಷಣ

ಕೆ. ಪಿ. ಸಿ. ಸಿ. ಅಧ್ಯಕ್ಷರೂ ಮತ್ತು ಭಾ. ರಾ. ಸಭಾಸದಸ್ಯರೂ ಆದ ಶ್ರೀ ಎಸ್. ನಿಜಲಿಂಗಪ್ಪನವರು ಬೆಂಗಳೂರಲ್ಲಿ ಈ ವರ್ಷದ ಬಸವಜಯಂತಿ ಉತ್ಸವದಲ್ಲಿ ಭಾಷಣ ಮಾಡುತ್ತಾ ಜಂಗಮನು ಲೋಕೋದ್ಧಾರಕ್ಕಾಗಿ ಅವತರಿಸಿದ ಶಿವನ ಅಂಶ– ಇಂದು ಜಂಗಮ ಕೇವಲ ತನ್ನ ಸ್ವಪ್ರತಿಷ್ಠೆಯನ್ನು ಮೆರೆಯಿಸುವ ಡೊಂಬರನಂತಾಗಿದ್ದಾನೆ. ಅವನು ಶ್ರೀಗಂಧದ ಮರದಂತೆ ಸ್ವಾರ್ಥಿ. ಗಂಧದ ಮರ ತಾನಾಗಿ ಬೇರುಗಳಿಂದ ಭೂಮಿಯ ಸಾರವನ್ನು ಹೀರುವ ಗೋಜಿಗೆ ಹೋಗುವುದಿಲ್ಲ. ಅದು ತನ್ನ ಸುತ್ತು ಮುತ್ತಿನ ಮರಗಳ ಬೇರುಗಳನ್ನಪ್ಪಿ ಅವು ಹೀರಿದ ಸಾರವನ್ನು ತಾನು ಸೆಳೆದು ಬೆಳೆಯುತ್ತದೆ. ತನ್ನ ಸುಗಂಧದ ಕೆಚ್ಚನ್ನು ಮೆರೆಯಿಸುತ್ತದೆ.

(ಸಂ. ೫೮-೫೯)

## ಅಲ್ಯೂಮಿನಿಯಂ ಜೋಡು

ಆಸ್ಟ್ರೇಲಿಯಾ ಖಂಡವಲ್ಲಿ ಇರುವ ಸಿಡ್ನಿ ಎಂಬ ಊರಲ್ಲಿನ ಜೋಡು ಅಂಗಡಿಯವನೊಬ್ಬನು ಕೆಟ್ಟುಹೋದ ಬಾಂಬರು ವಿಮಾನಗಳ ಅಲ್ಯೂಮಿನಿಯಂಲೋಹದಿಂದ ಜೋಡುಗಳನ್ನು ತಯಾರಿಸುತ್ತಿರುವನಂತೆ. ಅವು ಮೂರು ಔನ್ಸ್ (ಸುಮಾರು ೨೧೧ ತೊಲೆ) ತೂಕ ಮಾತ್ರವಿದ್ದು ಅಂದವು ಕೆಡದೆ ಚಳಿಗಾಲದಲ್ಲಿ ಶಾಖವಾಗಿಯೂ ಬೇಸಗೆಯಲ್ಲಿ ತಂಪಾಗಿಯೂ ಇರುವವಂತೆ. “ಅಹಿಂಸಾ ಪರಮೋ ಧರ್ಮಃ” ಎಂಬ ವೇದವಾಕ್ಯವನ್ನು ಅನುಸರಿಸಿದ ವೀರಶೈವರು ಚರ್ಮದ ಬಳಕೆಯನ್ನು ಮಾಡಿದರೆ ಆ ಚರ್ಮಕ್ಕಾಗಿ ಪ್ರಾಣಿಗಳ ವಧೆಯಾಗುತ್ತದೆಂದು ಚರ್ಮದ ಜೋಡುಗಳನ್ನು ಉಪಯೋಗಿಸುವುದಿಲ್ಲ. ಅಂತಹವರಿಗೆ ಅಲ್ಯೂಮಿನಿಯಂ ಜೋಡು ಅನುಕೂಲವಲ್ಲವೇ ?

(ಸಂ. ೬೦-೬೧)

# ರೇಲ್ವೆ

೧. ಮೈಸೂರು ಅರಸೀಕೆರೆ ಮಾರ್ಗದಲ್ಲಿ ಕಾವೇರಿ ನದಿಗೆ ಸಂಬಂಧಪಟ್ಟ ಒಂದು ಸೇತುವೆಯು ಬಹಳ ಶಿಥಿಲವಾಗಿದೆ. ಜಾಗ್ರತೆ ಸರಿಪಡಿಸದಿದ್ದರೆ ತೊಂದರೆಯಾಗುವ ಸಂಭವವಿದೆ.

೨. ಮೈಸೂರು ರೇಲ್ವೆಯಲ್ಲಿ ಮೈಸೂರಿನಿಂದ ಬೀರೂರು ವರೆವಿಗೆ ಕೆಲವು ಕಡೆಗಳಲ್ಲಿ ಗಾಡಿಗಳು ಒಗ್ಗಾಲಿ ಆಗುತ್ತಲಿವೆ. ಹಳಿಗಳನ್ನು ಹಾಕಿದ ರಸ್ತೆ ಒಂದು ಮಗ್ಗಲು ಇಳಿಜಾರು ಒಂದು ಮಗ್ಗಲು ಎತ್ತರ ಹೀಗಾಗಿದೆ.

೩. ಮೂರನೆಯ ತರಗತಿಯ ಗಾಡಿಯ ಪ್ರಯಾಣಿಕರ ತೊಂದರೆಗಳನ್ನು ಹೇಳ ತೀರದು. ಪ್ರಯಾಣಿಕರಿಗೆ ತಕ್ಕಷ್ಟು ಗಾಡಿಗಳಿಲ್ಲ. ಇದ್ದುದರಲ್ಲಿಯೂ ಕೆಲವರು ಮಲಗಿರುತ್ತಾರೆ, ಕೆಲವರು ನಿಂತಿರುತ್ತಾರೆ. ನಿಂತರೂ ಒಬ್ಬರಿಗೊಬ್ಬರು ಒತ್ತಾಡಿ ಬಾಗಿಲು ತೆಗೆಯುವುದಕ್ಕೆ ಆಗದಷ್ಟು ನಿಬಿಡ, "ಬಲಾಚೀ ರೈಲ್‌ವೇ" ಎಂಬಂತೆ ಆಗಿದೆ. ಗಾಡಿಗಳಲ್ಲಿ ಎಷ್ಟು ಜನರು ಕೂಡಬೇಕೋ ಅದಕ್ಕೆ ತಕ್ಕಂತೆ ಕೂಡುವ ಸ್ಥಳವನ್ನು ವಿಂಗಡಿಸುವುದು ಮೇಲು. ಒಬ್ಬೊಬ್ಬರ ಸ್ಥಳಕ್ಕೂ ಮಧ್ಯೆ ಸಾಧಾರಣ ಒಂದು ಚಿಕ್ಕ ಪಟ್ಟಿ ಇದ್ದರೆ ಬಹಳ ಉತ್ತಮ.

(ಸಂ. ೬೫-೬೭)

## ದನಗಳು

ಕೆಲವು ಊರುಗಳಲ್ಲಿ ಹಸುಗಳು ಬಹಳ ಚಿಕ್ಕವು. (ದೊಡ್ಡ ಆಡಿನಷ್ಟು) ಆಗಲಿಕ್ಕೆ ಹತ್ತಿವೆ. ಹುಟ್ಟಿದ ಹೋರಿಗಳೂ ಬಹಳ ಚಿಕ್ಕವು. ಇಂತಹವುಗಳನ್ನು ಗುಂಪಿನಿಂದ ಬೇರ್ಪಡಿಸುವುದು ಉತ್ತಮ. ಬೀಜದ ಹೋರಿಗಳನ್ನು ಊರವರು ಸಾಕಿ ದನಗಳ ತಳಿಯನ್ನು ಉತ್ತಮಪಡಿಸುವುದು ಮುಖ್ಯವಾದ ಕೆಲಸ. (ಸಾಗರ, ಹಿರೇಕೆರೂರು ಈ ಸ್ಥಳಗಳಲ್ಲಿ ಪ್ರಕಾಶನಿಗೆ ಈ ವಿಷಯ ಕಂಡು ಬಂದಿದೆ). ಕೆಲವು ಕಡೆ ಹಾಲಿನ ಕೊರತೆ ಬಹಳ. ಪಶುಶಾಲೆಗಳು ಹೆಚ್ಚಾಗಬೇಕು. ರಾಜಕೀಯವಾಗಿ ಇವುಗಳಿಗೆ ಸ್ವಲ್ಪ ಸಹಾಯ ಮಾಡುವಂತೆ ಏರ್ಪಡಿಸಿ ಇವುಗಳನ್ನು ಅಭಿವೃದ್ಧಿಪಡಿಸುವುದು ಅವಶ್ಯಕ.

(ಸಂ. ೬೭-೬೭)

# ಸಮಾಚಾರಗಳು

ಜಬ್ಬಲಪುರದಲ್ಲಿ ೧೧ಟನ್ ಮದ್ದು ೨೫ ಮಣ ಸಣ್ಣಗುಂಡು (ಚರಿ) ಇವು ಪೋಲಿಸಿನವರಿಗೆ ಸಿಕ್ಕಿರುವಂತೆ. ಬೆಂಗಳೂರಿನಲ್ಲಿಯೂ ಕಾಶಿಯಲ್ಲಿಯೂ ರಿವಾಲ್ವರುಗಳು ಗುಂಡುಗಳು ಮೊದಲಾದವು ಸಿಕ್ಕಿವೆ, ಎಂದು ತಿಳಿಯಬಂದಿದೆ. ಒಮ್ಮೆಗೇ ದಂಗೆ ಏಳುವ ಉಪಾಯಕ್ಕಾಗಿ ಹೀಗೆ ಪ್ರಯತ್ನ ನಡೆದಿದೆ ಎಂದು ತಿಳಿಯಬೇಕೇನು ? ಹಾಗೆ ನಡೆಯುವುದಾದರೆ ಅದನ್ನು ತಡೆಗಟ್ಟಲು ನಮ್ಮ ಸ್ವಾತಂತ್ರ್ಯದ ರಾಜ್ಯವು ಪ್ರಯತ್ನಿಸಿರುವುದೇನು ? ಇಲ್ಲವೇ ಮಹನೀಯರಾದ ಗಾಂಧೀಜಿಯವರ ಬೋಧೆಯಾದ ಶ್ರೀ ರಾಮನಾಮ ಸ್ಮರಣೆಯ ಮಂತ್ರವೇ ಸಾಕೆಂದು ಯೋಚಿಸುತ್ತಿರುವುದೇನು ? ಈ ಕಾಲದಲ್ಲಿ ರಾಜಕೀಯವಾಗಿ ಚುರುಕಾದ ಪ್ರಯತ್ನವನ್ನು ಮಾಡದಿದ್ದರೆ ಹಿಂದೂ ದೇಶಕ್ಕೆ ಕ್ಷೇಮವಿಲ್ಲವೆಂದು ಚನ್ನಾಗಿ ವ್ಯಕ್ತವಾಗುತ್ತಲಿದೆ. ಇದರ ಶಾಂತಿಗಾಗಿ ಮಹಾದೇವನನ್ನು ಪ್ರಾರ್ಥಿಸುವುದೂ ಅಗತ್ಯ. ತಕ್ಕ ಪ್ರಯತ್ನವೂ ನಡೆಯಲಿ.

(ಸಂ. ೬೬–೬೭)

## ಸಾಮಾನುಗಳ ಬೆಲೆ ಇಳಿತ

ಪ್ರಪಂಚದ ಹಡಗುಗಳಲ್ಲಿ ಸಾಮಾನು ಕಳುಹಿಸುವ ಬಾಡಿಗೆ ಇಳಿದಿದೆ. ಕೆಲವು ಕಡೆಗಳಲ್ಲಿ ೧೦೦ಕ್ಕೆ ೩೦ ರಷ್ಟು ಇಳಿದಿದೆ. ಪರದೇಶದಿಂದ ಬರತಕ್ಕ ಸಾಮಗ್ರಿಗಳ ಬೆಲೆ ಇಳಿದಿದೆ. ಇನ್ನೂ ಇಳಿಯುವ ವಾರ್ತೆ ಇದೆ. ಹಣವಿದ್ದವರು ಪರದೇಶದ ಸಾಮಾನನ್ನು ಕೊಂಡು ಶೇಖರಿಸಿ ಇಡಲು ಹೋಗುವುದು ಉತ್ತಮವಲ್ಲ.

(ಸಂ.೮೧–೮೨)

# ಮೈಸೂರು ರಾಜಧಾನಿಯಲ್ಲಿ ಸರ್ದಾರ್ ಪಟೇಲ್‌ರವರ ಭಾಷಣ

ಭಾರತ ರಾಜಕೀಯದ ಉಪ ಪ್ರಧಾನಿಗಳಾದ ಸರ್ದಾರ್ ವಲ್ಲಭಭಾಯ್ ಪಟೇಲರವರು ೨೪-೨-೪೯ರಲ್ಲಿ ಮೈಸೂರು ರಾಜಧಾನಿಗೆ ಬಂದರು. ಆ ಸಂಜೆ ರಂಗಾಚಾರ್ಲು ಸ್ಮಾರಕ ಭವನದ ಮೈದಾನದಲ್ಲಿ ಅವರಿಗೆ ಇತ್ತ ಮಾನಪತ್ರಕ್ಕೆ ಉತ್ತರವಾಗಿ ಒಂದು ಭಾಷಣ ಮಾಡಿದರು. ಅದರಲ್ಲಿ ಧಾರ್ಮಿಕ ವಿಷಯವಾಗಿ ಈ ರೀತಿ ಇದ್ದಿತು.

"ನಮ್ಮ ದೇಶದಲ್ಲಿ ಬೇಧ ಭಾವನೆ ತೊಲಗಬೇಕು. ಒಂದೊಂದು ಕೋಮಿನಲ್ಲೂ ಅನೇಕ ಉಪಕೋಮುಗಳಿವೆ. ಉಚ್ಚನೀಚ ಭಾವನೆಗಳು ತಾಂಡವವಾಡುತ್ತಿವೆ. ಇವು ದೇಶಕ್ಕೆ ಪ್ರಗತಿದಾಯಕವಲ್ಲ. ಅಸ್ಪೃಶ್ಯತಾ ನಿವಾರಣೆಗೆಂದು ಕಾನೂನನ್ನು ಮಾಡಿ ದೇವಸ್ಥಾನಗಳನ್ನು ಪರಿಜನರಿಗೆ ತೆರೆವದ್ದಾಯಿತು. ಆದರೆ ಜನರ ಹೃದಯ ಮಂದಿರವು ತೆರೆನ ಹೊರತು ಇದು ಫಲಕಾರಿಯಾಗಲಾರದು. ಗಾಂಧೀಜಿಯವರ ಕನಸಾದ ರಾಮರಾಜ್ಯವನ್ನು ಸ್ಥಾಪಿಸಬೇಕಾದರೆ ಅವರು ಹಾಕಿಕೊಟ್ಟಿರುವ ಸತ್ಯ, ಅಹಿಂಸಾ ಮಾರ್ಗದ ಮೂಲಕವೇ ಸಾಧ್ಯ."

ವೀರಶೈವರು ಒಂದೇ ಬಗೆಯಾದ ಧಾರ್ಮಿಕಾಚರಣೆಯುಳ್ಳವರು. ಇವರು ತಮ್ಮಲ್ಲಿ ಉಚ್ಚ ನೀಚ ಭಾವಗಳು ಆಜನ್ಮ ಸಿದ್ಧವಾಗಿವೆ ಎಂದು ಯೋಚಿಸುವುದು ಆ ಧರ್ಮಶಾಸ್ತ್ರದ ಪ್ರಕಾರವೇ ಸರಿಯಲ್ಲ. ಉಂಟೆಂದು ತಿಳಿದವರು ಸರ್ದಾರರ ಭಾಷಣಗಳನ್ನು ಚೆನ್ನಾಗಿ ಆಲೋಚಿಸಿ ತಿದ್ದಿಕೊಳ್ಳಲಿ. ವೀರಶೈವವೂ ಒಂದು ಕೋಮು ಅಲ್ಲ, ತಕ್ಕ ಸಂಸ್ಕಾರವನ್ನು ಹೊಂದಿ ಎಲ್ಲರೂ ಒಂದೇ ಎಂದು ತಿಳಿವ ಧರ್ಮಾಚರಣೆಯುಳ್ಳದು. ಇದು ಜಾಗ್ರತಿಕ ಧರ್ಮವನ್ನು ಪರಿಣಮಿಸಲು ಯೋಗ್ಯವಾದುದಾಗಿದೆ. ಇದನ್ನು ಸರಪಾರರವರೂ ಚೆನ್ನಾಗಿ ತಿಳಿಯಲಿ.

(ಸಂ. ೮೧-೮೨)

## ಇದು ನಿಮಗೆ ಗೊತ್ತೆ ?

ಜಾರ್ಜಿಯಾ ದೇಶದಲ್ಲಿ ಹತ್ತು ಸಾವಿರ ಮಂದಿ ೧೧೦ ವರ್ಷಕ್ಕಿಂತಲೂ ಹೆಚ್ಚಿನ ವಯಸ್ಸುಳ್ಳವರು ದೃಢವಾದ ದೇಹವುಳ್ಳವರಾಗಿ ಇದ್ದಾರೆ. ೧೨೪ ವರ್ಷ ವಯಸ್ಸಿನ ಎಸ್. ಆರ್ಷೆಬಾ ಎಂಬುವರು ನೂರುವರ್ಷಗಳ ಹಿಂದೆ ರೂಸೊ-ಜಪಾನ್ ಯುದ್ಧದಲ್ಲಿ ಯೋಧರಾಗಿದ್ದರೆಂದೂ ಆಮೇಲೆ ಕುರಿಕಾಯುವವರಾಗಿ ಅನಂತರ ಕಮ್ಮಾರರಾಗಿ ಕೆಲಸ ಮಾಡುತ್ತಿದ್ದು ಈಗ ತೋಟಗಾರರಾಗಿದ್ದಾರೆ. ಕುದುರೆ ಸವಾರಿ ಮಾಡುತ್ತಾರೆ. ಇವರಿಗೆ ಹಲ್ಲುಗಳು ಎಲ್ಲವೂ ಈಗಲೂ ಇದ್ದು ಗಟ್ಟಿಯಾಗಿಯೂ ಇರುವುವು. ಹೀಗೆ ಭಾರತದಲ್ಲಿ ಆಗುವುದಕ್ಕೆ ಇನ್ನೂ ನೂರಾರು ವರ್ಷಗಳು ಹಿಡಿಯಬಹುದೇ ?

(ಸಂ. ೧೪೬)

## ಅರ್ಬುದ ರೋಗದ (ಕ್ಯಾನ್ಸರ್) ಔಷಧ

ಅರ್ಬುದ ರೋಗಕ್ಕೆ (ಮಾಂಸವು ಜಿಡ್ಡುಗಟ್ಟುವುದಕ್ಕೆ) ಸೋವಿಯತ್ ವಿಜ್ಞಾನಿಗಳು ಶೋಧನೆಯನ್ನು ಮಾಡಿ ಔಷಧವನ್ನು ಕಂಡುಹಿಡಿಯುತ್ತಿದ್ದಾರೆ. ಈ ರೋಗಕ್ಕೆ ಹರಳೆಣ್ಣೆಯು (ಕ್ಯಾಸ್ಟರ್) ಆಯಿಲ್) ದಿವ್ಯವಾದ ಔಷಧವಾಗಿದೆ. ಇದರ ಪ್ರಯೋಜನವೂ ರಷ್ಯದ ವಿಜ್ಞಾನಿಗಳಿಗೆ ಅವಶ್ಯಕವೇ ಹೇಗೆ ?

(ಸಂ. ೧೪೬)

# ಬೆಂಗಳೂರಿನಲ್ಲಿ ನಡೆದ ಜಯಂತ್ಯುತ್ಸವಗಳು

ಬೆಂಗಳೂರಿನ ಪ್ರಸಿದ್ಧವಾದ ಸರ್ಪ ಭೂಷಣ ಮಠದಲ್ಲಿ ಈ ವರ್ಷದ ಯುಗಾದಿ ಹಬ್ಬದ ದಿನ ಶ್ರೀ ನಿ. ಜಗದ್ಗುರು ಅಲ್ಲಮಪ್ರಭು ಮಹಾಸ್ವಾಮಿಗಳವರ ಜಯಂತಿಯು, ಮಾರನೆ ದಿನ ಶ್ರೀ ನಿಜಗುಣ ಶಿವಯೋಗಿಗಳ ಜಯಂತಿಯು, ಮಾರನೆದಿನ ಶ್ರೀ ಸರ್ಪಭೂಷಣ ಮಠದ ಮೂಲಿಗರಾದ ಸ್ವಾಮಿಗಳ (ಸಪ್ಪಣ್ಣಪ್ಪನವರ) ಜಯಂತಿಯು ನಡೆದವು. ಎರಡನೆಯ ದಿನ ನಡೆದ ನಿಜಗುಣ ಶಿವಯೋಗಿಗಳ ಜಯಂತಿಯಲ್ಲಿ ಭಾಷಣವನ್ನು ಮಾಡುತ್ತಾ ಶರಣ ಸಾಹಿತ್ಯ ಸಂಪಾದಕರಾದ ಕೀರ್ತನಾಚಾರ್ಯ ಮೊದಲಾದ ಬಿರುದುಗಳನ್ನು ಸಂಪಾದಿಸಿದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ನಿಜಗುಣರ ಕಾಲವು ೧೬ನೇ ಶತಮಾನವೆಂದು ತೋರಿಸಿದರು. ಈ ವಿಷಯುವನ್ನು ವಿವರಿಸುವ ಸಂದರ್ಭದಲ್ಲಿ ವೀರಶೈವ ಪಂಚಾಚಾರ್ಯರು (ಶ್ರೀ ರೇವಣಸಿದ್ಧರೇ ಮೊದಲಾದವರು) ಕ್ರಿ. ಶ. ೧೨ನೆಯ ಶತಮಾನದವರೆಂದೂ, ಆರು ಶಾಸ್ತ್ರಗಳನ್ನು ಬರೆದರೆಂದು ಪ್ರಸಿದ್ಧರಾದ ನಿಜಗುಣರು ಆ ಪಂಚಾಚಾರ್ಯರ ತರುವಾಯದವರೆಂದೂ ವಿಂಗಡಿಸಿ ತೋರಿಸಿದರು. ಮೂರನೇ ದಿನದ ಜಯಂತಿಯಲ್ಲಿ ಸರ್ಪ ಭೂಷಣ ಸ್ವಾಮಿಗಳು ಕ್ರಿ. ಶ. ೧೭೯೦ ತರುವಾಯ ಇದ್ದವರೆಂದು ಶೋಧಿಸಿದ ವಿಷಯುವನ್ನು ವಿವರಿಸಿದರು. ಮುಂದೆ ಸದ್ಧರ್ಮ ದೀಪಿಕೆಯ ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರು ಅದ್ವೈತಿಗಳ ಬರಿಯ ಮಾತಿನ ಬ್ರಹ್ಮದಲ್ಲಿ ಗರ್ವಿಸುತ್ತಿದ್ದವರಿಗೆ ಶಿವಾನುಭವದ ಪ್ರವೇಶವನ್ನು ಉಂಟು ಮಾಡುವುವಕ್ಕಾಗಿ ಶ್ರೀ ನಿಜಗುಣರು ಮತ್ತು ಸಪ್ಪಣ್ಣಪ್ಪನವರು ಆ ಪ್ರವೇಶದ ಬಾಗಿಲಿನ ಎರಡು ತೋಳುಗಳಾಗಿದ್ದರೆಂದು ಮುಂತಾಗಿ ಹೇಳಿದರು. ಇನ್ನು ಅನೇಕ ಮನರಂಜನೆಯ ನೀತಿಯ ಉಪದೇಶಗಳು, ಶಿವಾನುಭವದ ಭಾಷಣಗಳೂ ಮಹನೀಯರಿಂದ ಮಾಡಲ್ಪಟ್ಟವು. ಪೂಜ್ಯ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಮಂಗಳಾಚರಣೆಯು ಉತ್ಸವದ ಕೊನೆಯಲ್ಲಿ ಪ್ರತಿ ದಿನವು ಸುಶ್ರಾವ್ಯವಾಗಿ ನಡೆದಿದ್ದಿತು.

—ನೋಡಿದವನೊಬ್ಬ

(ಸಂ. ೧೫೦)

## ಧಾರ್ಮಿಕ ಮತಗಳ ಪಕ್ಷಪಾತವನ್ನು ಹಿಡಿಯಬಾರದು

ತಮ್ಮ ತಮ್ಮ ಧಾರ್ಮಿಕ ಮತಗಳ ಪಕ್ಷಪಾತವನ್ನು ಜನರು ಹಿಡಿಯಬಾರದು. ರಾಜ್ಯಭಾರದಲ್ಲಿ ಉತ್ತಮವಾದ ೩–೪ ಮಾರ್ಗಗಳನ್ನು ನಿರ್ಧರಿಸಿ ಅವುಗಳಲ್ಲಿ ಯಾವುದಾದರೊಂದನ್ನು ಒಂದು ದೇಶದ ಜನರು, ತಮ್ಮ ಬಹುಮತದಲ್ಲಿ ನಿರ್ಧರಿಸಿಕೊಂಡು ರಾಜ್ಯವನ್ನು ಉನ್ನತಿಗೆ ತರಬೇಕೆಂದು ವಿಶ್ವಸಂಸ್ಥೆಯವರು ಮೇಲು ವಿಚಾರಣೆ ನಡೆಯಿಸಿಕೊಂಡು ಹೋಗುವುದು ಮೇಲು. ಮತ ಪಕ್ಷಪಾತದ ಆಘಾತವು ರಾಜಕೀಯದಲ್ಲಿ ಆವರಿಸದಂತೆ ವಿಶ್ವಸಂಸ್ಥೆಯವರು ಬಲವಾದ ರಕ್ಷಣಕಾರರಾಗಿರಬೇಕು. ಈ ರೀತಿ ನಡೆಯಿಸಿ ಪ್ರಪಂಚದ ಶಾಂತಿಯನ್ನು ಕಾಯ್ದುಕೊಂಡು ಇವರ ಫಲಿತಾಂಶವು ಮುಂದೆ ಇಪ್ಪತ್ತು ವರ್ಷಗಳ ಮೇಲೆ ಹೇಗಿರುವುದು ಎಂಬುದನ್ನು ಪರಿಶೀಲಿಸುತ್ತಾ ಶಾಂತಿಯಿಂದ ಇರಬಾರದೇ ?

(ಸಂ. ೧೧೧)

### ವಿಮರ್ಶೆ (ಸೋಮವಾರ ಬಿಡುವು)

ಇಂಗ್ಲೀಷರು ಭಾರತ ದೇಶವನ್ನಾಳುವಾಗ ಶ್ರೀ ಯೇಸು ಕ್ರಿಸ್ತನ ಸ್ಮಾರಕವಾದ ಭಾನುವಾರದ ರಜಾ ಪದ್ಧತಿಯು ಭಾರತದಲ್ಲಿ ಪ್ರಚಾರಕ್ಕೆ ಬಂದಿತು. ಈಗ ಭಾರತವು ಸ್ವತಂತ್ರವಾಗಿ ಇರುವುದರಿಂದ ಪೂರ್ವ ಪದ್ಧತಿಯ ಪ್ರಕಾರ ಭಾರತೀಯರೆಲ್ಲರೂ ಸೋಮವಾರವನ್ನು ರಜಾ ದಿನವನ್ನಾಗಿ ಆಚರಿಸುವಂತೆ ಕೇಂದ್ರ ರಾಜಕೀಯವು ಏರ್ಪಡಿಸುವದು ಅತ್ಯವಶ್ಯಕವಾದ ಕಾರ್ಯಕವಾಗಿದೆ.

—ಪ್ರಕಾಶಕ

(ಸಂ. ೯೯–೧೦೦)

# ಅಂಚೆಯ ಇಲಾಖೆ

ಪೋಸ್ಟ್ (ಅಂಚೆ) ಖಾತೆಯವರು ಕಾರ್ಡುಗಳು ಮತ್ತು ಬುಕ್ ಪೋಸ್ಟ್‌ಗಳಿಗೆ ಈಗ ಇರುವ ಒಂಬತ್ತು ಪೈಗೆ ಬದಲಾಗಿ ಆರು ಪೈಯಂತೆಯೂ, ಈಗ ಅರ್ಧ ತೊಲೆಯ ಪತ್ರಕ್ಕೆ ಒಂದಾಣೆ ಇರುವುದರ ಬದಲಾಗಿ ಒಂದು ತೊಲೆಯವರೆವಿಗಿನ ಪತ್ರಗಳಿಗೆ ಒಂದಾಣೆಯಂತೆಯೂ, ಟಪ್ಪಾಲು ಖರ್ಚನ್ನು ವಿಧಿಸಿದರೆ ಇಂತಹ ಹಣದ ಮುಗ್ಗಟ್ಟಿನ ಕಾಲದಲ್ಲಿ ಬಡ ರೈತರಿಗೆ ಕಾಗದ ಪತ್ರಗಳನ್ನು ಬರೆಯುವುದಕ್ಕೆ ಅನುಕೂಲವಾಗಿ ಪರಿಣಮಿಸುತ್ತದೆ.

ಇದಲ್ಲದೆ ರೇಲ್ವೆ ಸ್ಟೇಷನ್‌ಗಳಲ್ಲಿ ಇರತಕ್ಕ ಕಾಗದದ ಪೆಟ್ಟಿಗೆಗಳನ್ನು ರೇಲ್ವೆ ಪೋಸ್ಟಿನವರೇ ಟಪಾಲು (ಮೇಲು) ಗಾಡಿ ಮತ್ತು ಪ್ರಯಾಣಿಕರ (Passenger) ಗಾಡಿಗಳು ಬಂದಾಗ ತೆಗೆದುಕೊಂಡು ಹೋಗುವಂತೆ ಏರ್ಪಡಿಸಿದರೆ ಬಹಳ ಜನರು ಟಪಾಲು ಹೊತ್ತಿನಲ್ಲಿಲ್ಲದೆ ಉಳಿದ ಹೊತ್ತುಗಳಲ್ಲಿ ರೇಲ್ವೆ ಗಾಡಿಯಲ್ಲಿ ಓಡಾಡುವ ಜನರ ಸಂಗಡ ಕಾಗದ ಕಳುಹಿಸುವ ಪ್ರಯತ್ನವು ನಿಂತು ಹೋಗಿ ಟಪಾಲು ಇಲಾಖೆಗೆ ಹೆಚ್ಚಿನ ಲಾಭವಾಗಬಹುದು. ಇದಕ್ಕಾಗಿ ಟಪಾಲು ಇಲಾಖೆಯವರಿಗೆ ಪ್ರಯಾಣಿಕರ (Passenger) ಗಾಡಿಯಲ್ಲಿ ಒಬ್ಬ ಟಪಾಲು ನವಕರನು ಇರುವಂತೆ ನೇಮಿಸುವುದೊಂದೇ ಹೆಚ್ಚಿನ ಖರ್ಚು. ಈ ನವಕರನೇ ಪ್ರಯಾಣಿಕರ ಗಾಡಿ ನಿಲ್ಲುವ ಸ್ಟೇಷನ್‌ಗಳಲ್ಲಿ ಅಲ್ಲಿ ತಲಪಬೇಕಾದ ಕಾಗದಗಳನ್ನು ಒಂದು ಚೀಲದಲ್ಲಿ ಹಾಕಿ ಸ್ಟೇಷನ್ ಮಾಸ್ತರವರಲ್ಲಿ ಕೊಟ್ಟರೆ ಪೋಸ್ಟ್ ಮಾಸ್ಟರು ಅದನ್ನು ತರಿಸಿಕೊಳ್ಳಬಹುದು. ಪ್ರಯಾಣಿಕರ (ಪ್ಯಾಸೆಂಜರ್) ಗಾಡಿ ಅಂಚೆಯ ಗಾಡಿ (ಮೇಲು) ಕೂಡಿದಾಗ ಕಾಗದ ಪತ್ರಗಳ ಚೀಲಗಳನ್ನು ಬದಲಾಯಿಸಿಕೊಳ್ಳಬಹುದು. ಆದರೆ ಇದರಿಂದ ಪ್ರಜೆಗಳಿಗೂ ಅಂಚೆ ಇಲಾಖೆಯವರಿಗೂ ಕೂಡಾ ಹೆಚ್ಚಿನ ಲಾಭವಾಗಬಹುದೆಂಬ ನಿರೀಕ್ಷಣೆ ಇದೆ. ಮತ್ತು ಕಾಗದ ಪತ್ರಗಳನ್ನು ದಿನಕ್ಕೆ ಎರಡು ಸಾರಿ ಸಾಗಿಸಿದಂತೆಯೂ ಆಗುತ್ತದೆ. ಒಂದೊಂದು ಸ್ಟೇಷನ್‌ನಲ್ಲಿ ಇರುವ ಟಪಾಲು ಪೆಟ್ಟಿಗೆಗಳಿಂದ ಕಾಗದಗಳನ್ನು ತೆಗೆದುಕೊಂಡು ತಮ್ಮ ಗಾಡಿಗೆ ಒಯ್ಯಲಿಕ್ಕೆ ಎರಡು ನಿಮಿಷಗಳ ಕಾಲಕ್ಕಿಂತ ಹೆಚ್ಚಾಗಿ ಬೇಕಾಗಲಾರದೆಂದು ನಂಬಬಹುದಾಗಿದೆ. ಈ ವಿಷಯದಲ್ಲಿ ಪೋಸ್ಟ್ ಇಲಾಖೆಯವರು ಮುಖ್ಯವಾಗಿ ಗಮನಕೊಡಬೇಕಾಗಿದೆ. ಮತ್ತು ನ್ಯಾಯ ವಿಧಾಯಕ ಸಭೆಯ ಮೆಂಬರುಗಳು ಗಮನತೆಗೆದುಕೊಂಡು ಈ ಬಗ್ಗೆ ಪ್ರಯತ್ನಿಸುವುದೂ ಅವಶ್ಯಕ.

ಈಗಿನ ಟಪಾಲು ದರಗಳೇ ಹೆಚ್ಚಾಗಿರುವಲ್ಲಿ ಅಂಚೆ (ಮೇಲು) ಗಾಡಿಯಲ್ಲಿ ಹೋಗುವ ಕಾಗದಗಳಿಗೆ ಲೇಟ್ ಲೆಟರ್ ಫೀ ಅರ್ಧಾಣೆ ಹೆಚ್ಚು ವಿಧಿಸಿ ಇರುವುದರಿಂದ ಒಂದು ಕಾರ್ಡಿಗೆ ಒಂದೂ ಕಾಲಾಣೆ ಕಾಗದಕ್ಕೆ ಒಂದೂ ಮುಕ್ಕಾಲಾಣೆ ಖರ್ಚು ಮಾಡಬೇಕಾಗುತ್ತದೆ. ಈ ತೊಂದರೆಯಿಂದ ಅನೇಕರು ಮೇಲುಗಾಡಿಯಲ್ಲಿ ಹೋಗುವ ಜನರನ್ನು ನೋಡಿ ಅವರಲ್ಲಿ ತಮ್ಮ ಕಾಗದಗಳನ್ನು ಕೊಟ್ಟು ಕಳುಹಿಸುತ್ತಾರೆ. ಈ ಲೇಟ್ ಫೀಯನ್ನು ವಜಾ ಮಾಡಿ ಸ್ಟೇಷನ್‌ಗಳಲ್ಲಿ ಇರುವ ಡಬ್ಬಿಗಳನ್ನೇ ರೇಲ್ವೆ ಪೋಸ್ಟಿನವರು ತೆಗೆಯುವಂತೆ ಏರ್ಪಡಿಸಿದರೆ ಪೋಸ್ಟ್ ಇಲಾಖೆಯವರಿಗೆ ಲಾಭವು ಹೆಚ್ಚಾಗುವುದರಲ್ಲಿ ಸಂಶಯವಿಲ್ಲ. ಈ ಕಡೆಗೆ ಪೋಸ್ಟ್ ಇಲಾಖೆಯವರು ಹೆಚ್ಚು ಗಮನ ಕೊಡುವರೆಂದು ನಂಬುತ್ತೇವೆ.

(ಸಂ. ೨೭–೨೮)

# ಸಂತೋಷ

ರಾ. ಸಾ. ಪಿ. ಜಿ. ಹಳಕಟ್ಟಿಯವರು ವಚನ ಶಾಸ್ತ್ರವನ್ನು ಪ್ರಚುರಪಡಿಸಿದ ಕೃತಜ್ಞತೆಗಾಗಿ ಅವರಿಗೆ ಬಾಗಲಕೋಟೆ ವೀರಶೈವ ಸಮಾಜದವರು ೭೭೧ ರೂ. ಗಳ ನಿಧಿಯನ್ನು ಅರ್ಪಿಸಿದ ವಿಷಯವು ಸಂತೋಷದ ಸಂಗತಿಯಾಗಿದೆ.

ವೀರಶೈವರಲ್ಲಿ ಬರಹದ ಸಂಬಂಧದಲ್ಲಿ ಎಂದರೆ ಸಾಹಿತ್ಯದ ವಿಷಯದಲ್ಲಿ ಗಮನ ಕೊಡುವವರು. ವಿರಳ. ಅದರಲ್ಲಿಯೂ ಧಾರ್ಮಿಕ ಗ್ರಂಥಗಳನ್ನು ಓದಬೇಕೆಂಬ ಚಟ ವುಳ್ಳವರು ಇನ್ನೂ ವಿರಳ. ಈ ಕೊರತೆಯಿಂದ ಧಾರ್ಮಿಕ ಗ್ರಂಥಗಳು ಪ್ರಚಾರಕ್ಕೆ ಬರುವುದೇ ಬಹಳ ಕಷ್ಟವಾಗಿದೆ.

ತಮ್ಮ ತಮ್ಮ ಧಾರ್ಮಿಕ ಗ್ರಂಥಗಳನ್ನು ಜನರು ಓದುವುದರಿಂದ ಮಹಾದೇವ ನನ್ನು ಹೇಗೆ ತಿಳಿಯಬೇಕೆಂಬ ವಿಷಯವು ಗೊತ್ತಾಗುವುದಲ್ಲದೆ, ಹೀಗೆ ಗೊತ್ತು ಮಾಡಿ ಕೊಂಡ ಜ್ಞಾನದಿಂದ ಈ ಜನ್ಮದಲ್ಲಿ ತಮ್ಮ ಪ್ರಾಣ (ಜೀವ)ಕ್ಕೆ ಸುಧಾರಣೆಯಾಗಿ ಆ ಜೀವನು ಹೊಂದುವ ಇನ್ನೊಂದು ಜನ್ಮದಲ್ಲಿಯೂ ಸಹಾ ಅವನಿಗೆ ಸುಖವನ್ನು ಕೊಡುವುದಾಗಿ ಪರಿಣಮಿಸುತ್ತದೆ. (ಜೀವನಿಗೆ ಮರಳಿ ಜನ್ಮವುಂಟೆಂಬುದನ್ನು ಕೆಲವು ಪಾಶ್ಚಾತ್ಯರೇ ಸಿದ್ಧಮಾಡಿದ್ದಾರೆ.) ಆದ್ದರಿಂದ ಧಾರ್ಮಿಕ ವಿದ್ಯೆಯನ್ನು ಅವಶ್ಯ ವಾಗಿ ಎಲ್ಲರೂ ಓದಬೇಕು. ತಮ್ಮ ಧರ್ಮದ ಸಂಗತಿಗಳಿಗೂ ಇತರರ ಧರ್ಮದ ಸಂಗತಿಗಳಿಗೂ ಏನು ವ್ಯತ್ಯಾಸವೆಂಬುದನ್ನು ತಿಳಿದುಕೊಳ್ಳುವುದು ಇನ್ನೂ ಉತ್ತಮ.

ಈ ಕಡೆಗೆ ಸಮಾಜದವರು ಇನ್ನೂ ಹೆಚ್ಚಾಗಿ ಗಮನಕೊಟ್ಟು ತಮ್ಮ ಧಾರ್ಮಿಕ ವಾಙ್ಮಯವನ್ನು ಬೆಳೆಸುವುದು ಅತ್ಯವಶ್ಯಕವೆಂದು ನಾವು ಒತ್ತಿ ಹೇಳದೆ ಬಿಡಲಾರೆವು.

—ಪ್ರಕಾಶಕ

(ಸಂ. ೨೯–೩೦)

# ಅಕ್ಕಿಯನ್ನು ಉಪಯೋಗಿಸದೆ ಜೀವಿಸುವ ಉಪಾಯಗಳು

ಈಗ ಪ್ರಪಂಚದಲ್ಲಿ ಆಹಾರಕ್ಕಾಗಿ ಅಕ್ಕಿಯನ್ನು ಉಪಯೋಗಿಸುವವರ ಸಂಖ್ಯೆ ಬಹಳ ಬಹಳವಾಗಿದೆ. ಆದರೆ ಅಕ್ಕಿಯನ್ನು ಬೆಳೆಯುವವರು ಅಷ್ಟು ಹೆಚ್ಚಾಗದೆ ಇರುವುದರಿಂದ ಅಕ್ಕಿಯ ಅಭಾವವು ಬಹಳವಾಗಿದೆ. ಈ ವರ್ಷ ಅನಾವೃಷ್ಟಿ ಬಹಳ ವಾಗಿ ಅತಿವೃಷ್ಟಿ ಸ್ವಲ್ಪ ಕಾಲ ಬಂದು ಭತ್ತದ ಬೆಳೆಯು ಬಹಳ ಕಡಿಮೆಯಾಗಿದೆ ಇದಕ್ಕಾಗಿ ಅಕ್ಕಿ ತಕ್ಕಷ್ಟು ಸಿಕ್ಕದಿರುವುದರಿಂದ ಇತರ ಧಾನ್ಯಗಳಿಂದ ಜೀವಿಸುವುದನ್ನು ಭಾರತೀಯರು ಕಲಿಯುವುದು ಅತ್ಯವಶ್ಯಕವಾಗಿದೆ. ಆ ಉಪಾಯಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ. ೧. ಒಂದು ಸೇರು ನೀರು (ಸುಮಾರು ೯೭ ರೂಪಾಯಿ ತೂಕ) ಕಾಯಿಸಬಹುದಾದ ಸುಮಾರು ೧॥ ಸೇರು ನೀರು ಹಿಡಿಯುವ ಪಾತ್ರೆಯಲ್ಲಿ ನೀರನ್ನು ಕಾಯಲಿಕ್ಕೆ ಇಡಬೇಕು. ಆ ನೀರಿನಲ್ಲಿ ಕಾಯಿಪಲ್ಲೆ ಸೊಪ್ಪು ಸ್ವಲ್ಪ ದ್ವಿದಳ ಧಾನ್ಯ ಯಾವುದನ್ನಾದರೂ ಬೇಯಿಸಲಿಕ್ಕೆ ಹಾಕಬಹುದು. ಈ ಪಾತ್ರೆಯ ಮೇಲೆ ಪೂರ್ಣ ವಾಗಿ ಮುಚ್ಚಲ್ಪಡುವ ಬಟ್ಟಲಿನಂತಹ ಒಂದು ಮುಚ್ಚಳದಲ್ಲಿ ಗೋಧಿಯ ಹಿಟ್ಟು ಒಂದು ಸೇರನ್ನು ಚೆನ್ನಾಗಿ ನೀರು ಕಲೆಸಿ ಪಾತ್ರೆಯೊಳಗಿನ ನೀರಿನ ಉಗಿಯಿಂದ ಕಡಬು ಆಗುವಂತೆ ಹಿಟ್ಟನ್ನು ಬಟ್ಟಲಲ್ಲಿ ಚೆನ್ನಾಗಿ ತಟ್ಟಿ ಮೇಲೆ ಒಂದು ಮುಚ್ಚಳ ವನ್ನು ಪೂರ್ಣವಾಗಿ ಮುಚ್ಚಬೇಕು. ಹಿಟ್ಟಿನಲ್ಲಿಯೂ ಸೊಪ್ಪು ಕಾಯಿಪಲ್ಲೆ ಕಾಳು ಗಳಲ್ಲಿಯೂ ಸಂಬಾರ ಪುಡಿ ಉಪ್ಪನ್ನು ತಕ್ಕಷ್ಟು ಪ್ರಮಾಣದಲ್ಲಿ ಕೂಡಿಸಬೇಕು. ಪಾತ್ರೆಯಲ್ಲಿ ನೀರು ಕುದಿಯುತ್ತಾ ಒಳಗಿನದು ಚೆನ್ನಾಗಿ ಬೇಯುವುದರೊಳಗಾಗಿ ಮೇಲಿನ ಕಡಬು ಚೆನ್ನಾಗಿ ಬೇಯುವುದು. ಒಂದು ವೇಳೆ ಕಡಿಮೆ ಬೆಂದರೆ ಅಡಿಗೆಯ ಕಡೆಯ ಕಾಲದಲ್ಲಿ ಕಡಬಿನ ಬಟ್ಟಲನ್ನು ಬುಡಮೇಲಾಗಿ ಇಟ್ಟು ಪಾತ್ರೆಯೊಳಗಿನ ನೀರನ್ನು ಉಗಿಯು ನೇರವಾಗಿ ಕಡುಬಿಗೆ ತಗಲುವಂತೆ ಮಾಡಬಹುದು. ಕಡಬು ಚೆನ್ನಾಗಿ ಬೆಂದ ಮೇಲೆ ಎರಡು ಪಾತ್ರೆಗಳನ್ನು ಇಳಿಸಿಕೊಂಡು ಅದೇ ಕಡಬು ಪಾತ್ರೆ ಯೊಳಗಿರುವ ಕಟ್ಟು (ಇದನ್ನು ಅರೆದು ಕೂಡಿಸಿಕೊಂಡರೂ ಆಗಬಹುದು) ಸಹಾ ಊಟ ಮಾಡಲಿಕ್ಕೆ ಬರುತ್ತದೆ. ಗೋಧಿಯ ಹಿಟ್ಟು ಉಗಿಯಲ್ಲಿ ಬೇಯುವುದರಿಂದ ಮನುಷ್ಯ ಪ್ರಕೃತಿಗೆ ಉಷ್ಣಕಾಯಿಯಾಗುವುದಿಲ್ಲ. ಇದೊಂದು ಉಪಾಯ ಈ ಕಡಬನ್ನು ಉಪಯೋಗಿಸಿಕೊಂಡು ಅನೇಕ ತಿಂಗಳು ಇರಬಹುದು. ಹೆಸರುಕಾಳು, ಕಡಲೆ, ಅಲಸಂದಿ, ಕಡಲೇಕಾಯಿ ಬೀಜ, ಅವರೇ ಬೇಳೆ ಇವುಗಳನ್ನೂ ಬೇರೆ ಬೇರೆ ಯಾಗಿ ಅನೇಕ ವಿಧವಲ್ಲಿ ಅಡಿಗೆ ಮಾಡಿ ತಿಂಗಳುಗಟ್ಲೆ ಜೀವಿಸಬಹುದು. ಒಂದೊಂದು ಅಡಿಗೆಯನ್ನು ಕೆಲ ಕೆಲವು ದಿವಸಕ್ಕೆ ಬದಲಾಯಿಸುತ್ತಿರಬೇಕು. ಹೀಗೆ ಮಾಡಿದರೆ

ಆರೋಗ್ಯಕ್ಕೆ ಯಾವ ಬಾಧೆಯೂ ಇರುವುದಿಲ್ಲ. ಈ ಸದ್ಧರ್ಮ ದೀಪಿಕೆಯು ಕಾರ್ಯಾಲಯದಲ್ಲಿ ಒಂದು ಕುಟುಂಬವೇ ಅಕ್ಕಿಯಿಲ್ಲದೆ ೪-೫ ವರ್ಷಗಳ ಕಾಲ ಆರೋಗ್ಯದಿಂದ ಬಾಳಿ ಇದೆ. ಈ ಹಿಂದೆ ಅಕ್ಕಿಯ ಪಡಿತರವು ರೂಢಿಯಲ್ಲಿ ಇದ್ದಾಗ ಅಕ್ಕಿಯ ಅಧಿಕಾರಿಗಳಿಂದ ಪಡಿತರವನ್ನು ಪಡೆಯುವುದು ಕಷ್ಟವಾದಾಗ ಆಗಿನಿಂದಲೂ ಅಕ್ಕಿಯನ್ನು ಬಿಟ್ಟು ಈಚೆಗೆ ಅಕ್ಕಿಯ ಪಡಿತರ ತಪ್ಪಿದಾಗ್ಯೂ ಅಕ್ಕಿಗೆ ಅಪೇಕ್ಷಿಸದೆ ಅಕ್ಕಿಯಿಂದಾಗುವ ಶರೀರ ಬಲಕ್ಕಿಂತಲೂ ಮೇಲೆ ಕಂಡ ಧಾನ್ಯಗಳಿಗಿಂದಾಗುವ ಬಲವೇ ಉತ್ತಮವಾದುದೆಂದು ಈ ಕುಟುಂಬಕ್ಕೆ ಅನುಭವವು ಬಂದಿದೆ. ಮೊದಲಿಗಿಂತಲೂ ಪುಷ್ಟರಾಗಿದ್ದಾರೆ. ಈ ವಿಷಯದ ಕಡೆಗೆ ಸರ್ವರ ಗಮನವೂ ಬೀಳಲಿ, ಬರಿಯ ಹುರಿಗಡಲೆಯಾಧಾರದಿಂದ ಕೆಲವು ದಿವಸ ಇರಲಿಕ್ಕೆ ಬರುತ್ತದೆ, ಎಂಬುದೂ ಚೆನ್ನಾಗಿ ಗೊತ್ತಾಗಿದೆ.

—ಪ್ರಕಾಶಕ

(ಸಂ. ೧೪೪)

# ಮೈಸೂರು ಮಹಾರಾಜ ಶ್ರೀ ಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರು

ಮೈಸೂರಿನ ರಾಜ್ಯಪಾಲರಾದ ಶ್ರೀ ಜಯಚಾಮರಾಜ ಒಡೆಯರು ಕಳೆದ ಸೋಮವಾರ ನ್ಯೂಯಾರ್ಕ್ (ಅಮೇರಿಕಾ ಸಂಯುಕ್ತ ಸಂಸ್ಥಾನದ ಮುಖ್ಯ ಪಟ್ಟಣ) ದಲ್ಲಿ ಎಥಿಕ್ಸ್ (ನೀತಿಶಾಸ್ತ್ರ) ಸಂಸ್ಥೆಯ ಸಂಘದ ಪರವಾಗಿ ನೈತಿಕದ ಬೆಲೆ ಮತ್ತು ಬಲ ಎಂಬ ವಿಷಯದಲ್ಲಿ ಉಪನ್ಯಾಸ ಮಾಡಿದರು. ಅವರು ಬರುವ ತಿಂಗಳ ೧೦ ನೆಯ ದಿನ ಮಿನಿಸೋಟಾ ವಿಶ್ವವಿದ್ಯಾಲಯದಲ್ಲಿ ಭಾರತ ದರ್ಶನ ಶಾಸ್ತ್ರದಲ್ಲಿ "ಅವಧೂತರ" ಭಾವನೆ ಎಂಬ ವಿಷಯದಲ್ಲಿ ಉಪನ್ಯಾಸಮಾಡಲಿರುವರು. ಯೇಲ್ ವಿಶ್ವವಿದ್ಯಾಲಯದಲ್ಲಿಯೂ ಮತ್ತು ಚಿಕಾಗೋ ಪಟ್ಟಣದಲ್ಲಿಯೂ ಅವರ ಉಪನ್ಯಾಸ ಮಾಡಲಿರುವರು ಎಂಬುದಾಗಿ ವರದಿಯಾಗಿದೆ. ನೀತಿಯು ಕಾಲ ಸಂದರ್ಭ ಮತ್ತು ರೂಢಿಗೆ ತಕ್ಕಂತೆ ಬದಲಾವಣೆಯನ್ನು ಹೊಂದುತ್ತದೆ. ಒಂದು ಕಾಲದ ಒಬ್ಬ ಗಂಡಸು ಒಬ್ಬಳೆ ಹೆಂಡತಿಯನ್ನು ಮದುವೆಯಾಗಬಹುದೆಂಬುದು ಸರಿಕಂಡರೆ ಮತ್ತೊಂದು ಸಂದರ್ಭದಲ್ಲಿ ಒಬ್ಬ ಗಂಡಸು ಅನೇಕ ಹೆಂಡರನ್ನು ಮದುವೆಯಾಗುವುದು ಅವಶ್ಯಕವಾಗುತ್ತದೆ. (ಹಿಟ್ಲರನು ಯುದ್ಧದ ಕೊನೆಗಾಲದಲ್ಲಿ ಹೀಗೆಯೇ ವಿಧಿಸಿದನು—ಇವರಂತೆ ಅನೇಕ ಉದಾಹರಣೆಗಳಿವೆ) ದೇವನನ್ನು ನಂಬಿ ನಡೆಯುವುದು ಎಲ್ಲಾ ಕಾಲದಲ್ಲಿಯೂ ಸಂದರ್ಭದಲ್ಲಿಯೂ ಅತ್ಯವಶ್ಯಕವಾದುದಾಗಿದೆ. ಭಾರತ ದರ್ಶನಶಾಸ್ತ್ರದಲ್ಲಿ ಅವಧೂತರ ಭಾವನೆಎಂಬುದು ಮುಖ್ಯವಾಗಿ ವೇದಾಂತದ ವಿಷಯವನ್ನು ಒಳಗೊಂಡಿರುವ ಸಂಗತಿಯಾಗಿದೆ. ಈ ಹಿಂದೆ ಶ್ರೀ ಸ್ವಾಮಿ ವಿವೇಕಾನಂದರು ಚಿಕಾಗೋ ಪಟ್ಟಣದಲ್ಲಿ ವೇದಾಂತ ಸಂಬಂಧದ ಉಪನ್ಯಾಸವನ್ನು ಮಾಡಿ ಅಮೇರಿಕನ್ ಜನಾಂಗದವರನ್ನು ದಂಗುಬಡಿಸಿದರು. ಈಗ ಅವರು ಹೇಳಿದುದಕ್ಕಿಂತಲೂ ಹೆಚ್ಚಿನದಾದ ಆತ್ಮವಿದ್ಯೆಯು ಅವರ ಆಚರಣೆಯು ಅಮೇರಿಕನ್ ಜನಾಂಗದಲ್ಲಿ ತೋರಿಸಲ್ಪಡಬೇಕಾಗಿದೆ. ಈ ಕಾಲದಲ್ಲಿ ವಿಜ್ಞಾನಶಾಸ್ತ್ರನಲ್ಲಿ ನುರಿತವರ ಅಭಿಪ್ರಾಯವು ಬೇರೆ ಬೇರೆ ಕಡೆಗಳಿಗೆ ಹೋಗಿದೆ. ಚಂದ್ರಲೋಕದಲ್ಲಿಯೇ ಆಗಲಿ, ಮಂಗಳ ಗ್ರಹದಲ್ಲಿಯೇ ಆಗಲಿ, ಖಾಲಿಜಾಗ ಸಿಕ್ಕುವುದಾದರೆ ಅಲ್ಲಿ ಮನೆಕಟ್ಟಬೇಕೆಂಬ ಆಲೋಚನೆಯುಳ್ಳವರಾಗಿದ್ದಾರೆ. ಅದಿಲ್ಲದಿದ್ದರೆ ತಾವೇ ಒಂದು ಉಪಗ್ರಹವನ್ನು ನಿರ್ಮಿಸಿ ಅದರಲ್ಲಿ ವಾಸಮಾಡಬೇಕೆಂದಿದ್ದಾರೆ. ಇಂತಹ ಅದ್ಭುತ ಆಶೆಯುಳ್ಳವರಿಗೆ ಧಾರ್ಮಿಕದ ನಂಬಿಗೆಯ ಮಾತುಗಳು ರುಚಿಸುವುದಿಲ್ಲ. ದೇವನನ್ನು ನಂಬಿ ದೇಹವನ್ನು ಹಗುರು ಮಾಡಿಕೊಳ್ಳುವ ವಿಚಾರವು ಅವರಲ್ಲಿ ಮೂಡಿದರೆ ಲೋಕಾಂತರದ ವಾಸಕ್ಕೆ ಅವರಿಗೆ

ಅನುಕೂಲವಾಗಬಹುದೆಂದು ಅವರು ಯೋಚಿಸಬಹುದು. ಶಿವಾದ್ವೈತ ತತ್ವದ ಪ್ರಕಾರ ಶರೀರವಲ್ಲಿನ ನವಚಕ್ರಗಳು ಕುಂಡಲಿಯ ಸಾಧನೆ ಮತ್ತು ಬಹಿರಂಗದಲ್ಲಿ ಕುಂಡಲಿ ಯನ್ನು ನೋಡುವುದು ಇವೇ ಮುಂತಾದ ಸಾಧನೆಗಳಿಂದ ಮನುಷ್ಯ ಶರೀರವಲ್ಲಿ ಅನೇಕ ರೀತಿಯಲ್ಲಿ ಉತ್ತಮ ಸ್ಥಿತಿಯಾಗುವುದೆಂಬುದನ್ನು ತೋರಿಸಬೇಕಾಗಿದೆ. ಇದರಿಂದ ಶಿವಯೋಗದಲ್ಲಿ ತಜ್ಞರಾದವರ, ಶಿವಾನುಭಾವದಲ್ಲಿ ಮಗ್ನರಾದವರ, ಅದರಲ್ಲಿಯೂ ನಿಪುಣರಾದವರ ೨-೩ ಮಂಡಲಿಯೊಡನೆ ಹೋಗಿ ಈಗಿನ ವಿಜ್ಞಾನ ಶಾಸ್ತ್ರಕ್ಕೆ ಹೋಲುವ ಅಂದರೆ ಅನಾಟಮಿ (ಶಾರೀರಕಶಾಸ್ತ್ರ) ಸಂಬಂಧಪಟ್ಟ ವಿಷಯ ಗಳನ್ನು ಧಾರ್ಮಿಕ ಸಾಧನೆಯ ಕಾಯಗಳಿಗೆ ಸರಿಹೋಗುವಂತೆ ಇರುವವುಗಳನ್ನು ತೋರಿಸಿಕೊಡುವ ಕಾರ್ಯವನ್ನು ಮಾಡಿದರೆ ಜಗತ್ತಿನಲ್ಲೆಲ್ಲಾ ವ್ಯಾಪಿಸುವ ಧಾರ್ಮಿಕದ ದೊಡ್ಡ ಕಾರ್ಯವನ್ನು ಮಾಡಿದಂತಾಗುವುದು. ಇನ್ನು ಮೇಲಾದರೂ ಒಡೆಯರವರು ಈ ಕಡೆಗೆ ಗಮನ ಕೊಡುವುದು ಅವಶ್ಯಕವಾಗಿದೆ.

(ಸಂ. ೧೫೦)

# ನೀತಿವಾಕ್ಯ, ಒಗಟು ಇತ್ಯಾದಿ
## (ತನ್ನನ್ನು ತಾನು ಉದ್ಧರಿಸುವುದು)
### ಆತ್ಮಾನಾತ್ಮಾನಮುದ್ಧರೇತ್

---

ನರಣೇ ವಿಜಯಾ ಶೂರೋ । ವಿದ್ಯಯಾ ನ ಚ ಪಂಡಿತಃ
ನ ವಕ್ತಾ ವಾಕ್ಪಟುಶ್ಚೈವ ನ ದಾತಾ ದಾನ ತತ್ಪರಃ
ಇಂದ್ರಿಯಾ ವಿಜಯಿೊ ಶೂರೊ ಬ್ರಹ್ಮಜ್ಞಾನೀ ಚ ಪಂಡಿತಃ
ಸತ್ಯವಾಣೀ ಭವೇದ್ವಕ್ತಾ ದಾತಾ ಭೂತ ಹಿತೇ ರತಃ

ಯುದ್ಧದಲ್ಲಿ ಗೆದ್ದವನನ್ನು ಶೂರನೆಂದೂ ವಿದ್ಯೆಯಲ್ಲಿ ನಿಪುಣನಾದವನನ್ನು ಪಂಡಿತನೆಂದೂ ವಾಚಾಳಕನನ್ನು ಮಾತಾಳಿ ಎಂದೂ ದಾನ ಮಾಡುವವನನ್ನು ದಾತನೆಂದೂ ತಿಳಿಯಬೇಕೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿದ್ದರೂ ಇಂದ್ರಿಯಗಳನ್ನು ಜಯಿಸಿದವನು ಶೂರನೆಂದೂ ಬ್ರಹ್ಮಜ್ಞಾನಿಯಾದವನು ಪಾಂಡಿತನೆಂದೂ ಸತ್ಯವಾದ ಮಾತನಾಡುದವನನ್ನು ವಕೂರನೆಂದೂ ಸರ್ವಪ್ರಾಣಿಗಳ ಹಿತದಲ್ಲಿಯೇ ಇರುವವನನ್ನು ದಾತನೆಂದೂ ತಿಳಿಯುವುದೇ ಮುಖ್ಯವಾದದು ಎಂಬುದೇ ಶ್ಲೋಕಗಳ ತಾತ್ಪರ್ಯ.

(ಸಂ. ೫೨)

## ನೀತಿ ವಾಕ್ಯಗಳು

ಅನ್ನವನಿಕ್ಕಿ ನನ್ನಿಯ ನುಡಿದು ಅರವಟಿಗೆಯನಿಕ್ಕಿ ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗ ಉಂಟಲ್ಲದೆ ಶಿವನ ನಿಜವು ಸಾಧ್ಯವಾಗದು ಗುಹೇಶ್ವರನನರಿದ ಶರಣಂಗೆ ಆವ ಫಲವೂ ಇಲ್ಲ. —ಪ್ರಭುಸ್ವಾಮಿ.

ಟಿಪ್ಪಣಿ. ನನ್ನಿ=ಸಹಜ. ಆವ ಫಲವೂ ಇಲ್ಲ=ಪಡೆಯ ಬೇಕಾದ ಪ್ರಯೋಜನ ವಾವುದೂ ಇಲ್ಲ. [ಮೋಕ್ಷದ ಅಪೇಕ್ಷೆಯೂ ಇಲ್ಲ. ಸಹಜವಾಗಿ ಮೋಕ್ಷದಲ್ಲಿ ಇರುವನೆಂದು ತಾತ್ಪರ್ಯ.]

ಹತ್ತು ಸಾವಿರಕಿಕ್ಕಿ । ಮತ್ತೆ ದಣಿಯಲು ಬೇಡ
ತತ್ವವನು ಅರಿದ – ಸತ್ಯ ಶಿವಯೋಗಿಗೇ
ತುತ್ತನಿಕ್ಕೆಂದ –ಸರ್ವಜ್ಞ.
(ಕ್ಯಾತನ ಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರು ಹೇಳುತ್ತಿದ್ದ ಪದ್ಯವಿದು).

ಹಾಲು ಹಿಡಿದು ಬೆಣ್ಣೆಯನರಸಲುಂಟೇ ? ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೇ ?

—ಅಕ್ಕಮಹಾದೇವಿ.

(ಸಂ. ೩೮–೩೯)

**ಕಂದ ಪದ್ಯ**—ಹನ್ನೊಂದು ವರುಷಣ್ಣನಿ
ಗಿನ್ನಿಬ್ಬರು ಮಡದಿ ಮಕ್ಕಳು ಮೂರ್ಬಳಿಕಂ ॥
ಮುನ್ನುಳಿದ ಹಿರಿಯರೆಲ್ಲರು
ತನ್ನಿಂದ ಕಿರಿಯರಾತಿದರನ್ವಯವೇನ್ನೈ ॥

(ಸಂ. ೩೨)

**ಕಂದ.** ಆರಡಿಗ ಹಾರತದವ್ವನ
ದಾರಿಯೊಳಾಂಪೂತ್ತು ಬರುತೆ ಖಗಗನ ಮಗನಾ ।
ವೈರಿಯ ವಾಹನ ಜನನಿಯು
ದೂರನೆ ಗಾನಂಜಿ ಧರೆಗೆ ಧಾರೆಯನೆರೆದೆಂ

ಇದರ ತಾತ್ಪರ್ಯವು ಸುಲಭವಲ್ಲವೇ ?

ಸಂ. ೩೪–೩೩

# ೮

## ಪತ್ರೋತ್ತರ ಮತ್ತು ವಾದ ಭೂಮಿ

### (೧–ಪತ್ರಗಳು. ೨–ವಾದ ಭೂಮಿ)

[ಪತ್ರಿಕಾ ಪ್ರಪಂಚದಲ್ಲಿ ಸಂಪಾದಕರು ಅನೇಕರೊಡನೆ ಪತ್ರವ್ಯವಹಾರವನ್ನು ಮಾಡುವುದು ಅನಿವಾರ್ಯ. ಸದ್ಧರ್ಮದೀಪಿಕಾ ಪತ್ರಿಕಾಲಯಕ್ಕೆ ಅನೇಕ ಜನ ವಾಚಕರು ಅಭಿಮಾನಿಗಳು ಜಿಜ್ಞಾಸುಗಳು ಬರೆದ ಪತ್ರಗಳನ್ನು ಶ್ರೀ ಚನ್ನಮಲ್ಲಿಕಾರ್ಜುನರು ಸಾವಧಾನವಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ಅಗತ್ಯ ಕಂಡಾಗ ಸೂಚಿಸುತ್ತಿದ್ದರು. ಒಮ್ಮೊಮ್ಮೆ ಇವರೂ ಕೂಡ ವಾದ ಭೂಮಿಗೆ ಇಳಿಯುವುದು ಅನಿವಾರ್ಯವಾಗುತ್ತಿತ್ತು. ಈ ಸಂಬಂಧದ ಕೆಲವು ಮಾದರಿಗಳನ್ನು ಮುಂದೆ ನೋಡಬಹುದು. (ಸಂ.) ಎಂದು ಬರೆದು ಮುಂದೆ ಕೊಟ್ಟಿರುವ ಅಂಕಿಯು ಸಂಚಿಕೆಯ ನಂಬರನ್ನು ಸೂಚಿಸುತ್ತದೆ ಪು=ಪುಟಸಂಖ್ಯೆ]



ಶ್ರೀ ಚನ್ನಮಲ್ಲಿಕಾರ್ಜುನರು ತಮ್ಮ ಸಂಶೋಧನಾ ವ್ಯಾಸಂಗಕ್ಕಾಗಿ ಪದೇಪದೇ
ಹೋಗಿ ಬರುತ್ತಿದ್ದ ಮೈಸೂರಿನ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್
(ಪ್ರಾಚ್ಯ ಸಂಶೋಧನಾಲಯ)

# ೧. ಪ್ರಶ್ನೋತ್ತರಗಳು

೧) ಮ. ರಾ. ಜೀರಿಗೆ ಬಸವಲಿಂಗಪ್ಪನವರು ಆರಳೆಪೇಟೆ ಬೆಂಗಳೂರು ಸಿಟಿ,
ಹೈಕೋರ್ಟ ಟ್ರಾನ್ಸ್‌ಲೇಟರ್ (ರಿಟೈರ್ಡ್) ೧೭–೧೨–೩೩

ಸನ್ಮಾನ್ಯ ಶ್ರೀ ಚೆನ್ನಮಲ್ಲಿಕಾರ್ಜುನ ಅವರಿಗೆ ಶರಣಾರ್ಥಿಗಳು.

ನಿಮ್ಮ ೧೫ನೆಯ ಸಂಚಿಕೆಯ (ಸದ್ಧರ್ಮ ದೀಪಿಕೆ) ಬಂದು ಸೇರಿತು. ನೀವು ವೀರ ಶೈವ ನಿಮ್ಮ ಗ್ರಂಥೋದ್ಧರಣಕ್ಕಾಗಿ ಅತ್ಯಂತವಾಗಿ ಶ್ರಮತೆಗೆದುಕೊಳ್ಳುತ್ತಿರುವುದು ಸೂಕ್ತವಾದುದಾಗಿರುತ್ತದೆ. ಕೆಲವು ಜನ ವಿದ್ವಾಂಸರ ಅಭಿಪ್ರಾಯಗಳನ್ನು ನೋಡಿ ಮನಸ್ಸಿಗೆ ಬಹಳ ಆನಂದವಾಯಿತು. ಆಗಮಗಳ ಕಾಲ ವಿಚಾರವಾಗಿ ಸತ್ಯಾಂಶವು ನಿಮ್ಮ ಸಂಶೋಧನದಿಂದ ಇನ್ನೂ ಹೆಚ್ಚಾಗಿ ಹೊರಬೀಳುವುದೆಂದು ನಾನು ಭರವಸೆ ಉಳ್ಳವನಾಗಿರುತ್ತೇನೆ. ಅದರೊಳಗೂ ವೀರಶೈವದ ಷಟ್ ಸ್ಥಲದ ಕಾಲನಿರ್ಣಯವು ಹೊರಬೀಳಬಹುದೆಂದು ನಾನು ಬಹಳ ಭರವಸೆ ಉಳ್ಳವನಾಗಿದ್ದೇನೆ......ನಾನು ನಿಮ್ಮ ಪತ್ರಿಕೆಗೆ ಉತ್ತಮ ಲೇಖನಗಳನ್ನು ಕಳುಹಿಸುವೆನು. ವೀರಶೈವ ಧರ್ಮರಕ್ಷಣೆಯ ನಿಮ್ಮ ಉತ್ಕೃಷ್ಟಕಾರ್ಯವು ವಿಜಯವಾಗಲೆಂದು ನಾನು ಸಾಂಬಶಿವನನ್ನು ಪ್ರಾರ್ಥಿಸುತ್ತೇನೆ.

ತಮ್ಮ ಮಿತ್ರ
(sd·) J. Basawalingappa
Cottonpet Bangalore city,
(ಸಂ. ೧೬–೧೭ ಪು–೧)

(ಈ ಪತ್ರಕ್ಕೆ ಶರಣರ ಉತ್ತರ ರೂಪವಾದ ಪ್ರತಿಕ್ರಿಯೆ)

ಈ ಮಹನೀಯರ ಅಭಿಪ್ರಾಯದಂತೆ ವೀರಶೈವ ಧರ್ಮದ ನಿಜಸ್ಥಿತಿಯು ಪ್ರಕಟವಾಗುವ ಸೇವಾಕಾರ್ಯವು ಈ ಪತ್ರಿಕೆಯಿಂದ ನಡೆಯಬೇಕೆಂಬುದೇ ಮುಖ್ಯ ಉದ್ದೇಶವು. ಇದಕ್ಕೆ ಸಮಾಜದವರ ಬೆಂಬಲವು ಅತ್ಯವಶ್ಯವಾಗಿದೆ. ಈ ಮಹನೀಯರು ಕಳುಹಿಸುವ ಉತ್ತಮ ಲೇಖನಗಳನ್ನು ಪ್ರಕಟಿಸಲು ನಿರೀಕ್ಷಿಸುತ್ತಿರುವೆನು. ಸಮಾಜ ಸುಧಾರಣೆಯೇ ಮುಖ್ಯ ಉದ್ದೇಶವಾಗಿ ಉಳ್ಳ ನಿಜ ತತ್ತ್ವವನ್ನು ಬೋಧಿಸುವ ಲೇಖನಗಳು ಯಾರಿಂದ ಬಂದರೂ ಬಹಳ ಆಧಾರದಿಂದ ಅಂಗೀಕರಿಸಲ್ಪಡುತ್ತವೆ.

(ಸಂ. ೧೬–೧೭ ಪು. ೧–೨)

—ಪ್ರಕಾಶಕ

M-54-1

೨) ವೇ. ಮೂ. ರುದ್ರಯ್ಯನವರು ಮುದ್ದೇಬಿಹಾಳ
ಪುರಾಣಿಕ ೨೧–೧೧–೩೩
(ಮಾಮಲೇದಾರರು ಮುದ್ದೇಬಿಹಾಳ)

ವಿನಂತಿ

ಸದರಿ ಪತ್ರಿಕೆಯಲ್ಲಿ ನಿಜಗುಣರ ಗ್ರಂಥಗಳ ವಿವೇಕ ಚಿಂತಾಮಣಿ ಮುಂತಾದ ಆರು ಶಾಸ್ತ್ರಗಳ ಸುಲಭ ಶೈಲಿಯ ಕನ್ನಡ ಟೀಕಾ ಬರೆಯಬೇಕು. ಮತ್ತು ವೀರಶೈವ ಮತ ತತ್ತ್ವಗಳ ಸುಲಭ ಗ್ರಂಥವಾಗುವಂಥ ವಿಷಯವನ್ನು ಇನ್ನೂ ವಿಚಾರಿಸಿ ಸಣ್ಣ ಸಣ್ಣ ಗ್ರಂಥಗಳಾಗುವಂಥ ವಿಷಯಗಳನ್ನು ಬರೆಯಬೇಕು. ಅಂತಾ ಅನಿಸುತ್ತದೆ. ನೀವು ಅನುಭವಿಕರಿರುವುದರಿಂದ ಮಿ. ಶಿವಯೋಗಪ್ಪ ಸೆಟ್ಟಿ ಮುಂತಾದವರಿಗೆ ಕೇಳಿ, ಆಕರ್ಷಣವಾಗುವಂತೆ ಬರಿಯಬೇಕು. ಅಂತಾ ಬಹು ಜನರ ಅಭಿಪ್ರಾಯವಿದೆ. ನಿಮಗೆ ಯೋಗ್ಯ ತೋರಿದಂತೆ ಮಾಡಬೇಕು. (ಸಂ. ೧೭—೧೭ ಪು. ೨)

ಇ. ವಿ.

(ಈ ಪತ್ರಕ್ಕೆ ಶರಣರ ಪ್ರತಿಕ್ರಿಯೆ)

ವೀರಶೈವರ ನಿಜತತ್ತ್ವವನ್ನು ಬೋಧಿಸುವ ಗ್ರಂಥಗಳು ಕೈಬರಹದಲ್ಲಿ ಸಾವಿರ ಗಟ್ಟಲೆ ಇವೆ. ಪೂರ್ವಿಕರ ಈ ಮೂಲ ಗ್ರಂಥಗಳು. ಸಂಗ್ರಹ ಗ್ರಂಥಗಳೂ ಮುದ್ರಣ ಮುಖವನ್ನೇ ಕಾಣದೆ ಇನ್ನೂ ಅನೇಕವಾಗಿರುತ್ತವೆ. ನಿಜಗುಣರ ಗ್ರಂಥಗಳಲ್ಲಿ ವೀರ ಶೈವರ ವಿಷಯಗಳು ಬಹಳ ಸ್ವಲ್ಪ ಮಟ್ಟಿಗೆ ಇರುತ್ತವೆ. ಮತ್ತು ಇವು ಇದುವರೆವಿಗೆ ಅನೇಕ ಸಾರಿ ಮುದ್ರಣವಾಗಿವೆ. ರಾವ್‌ಸಾಹೇಬ ಫಕೀರಪ್ಪನವರು ಗುರುಬಸಪ್ಪ ನವರು ಹಳಕಟ್ಟಿ ಇವರು ಪ್ರಕಟಿಸುತ್ತಿರುವ ವೀರಶೈವ ಗ್ರಂಥಗಳ ದೆಸೆಯಿಂದ ಕನ್ನಡ ದಲ್ಲಿ ವೀರಶೈವ ಗ್ರಂಥ ಪ್ರಸಾರವೆಂಬ ಜ್ಞಾನ ಸೂರ್ಯನ ಉದಯದ ನಸುಬೆಳಕು ಈಗೀಗ ತೋರುತ್ತಲಿದೆ. ಇನ್ನೂ ಮುಂದೆ ಆ ಸೂರ್ಯನ ಕಿರಣಗಳು ಸಮಾಜದವರ ಹೃದಯವೆಂಬ ಆಕಾಶದ ತುಂಬಾ ಪ್ರಸಾರವಾಗುವಂತೆ ಮಾಡುವುದು ಅತ್ಯವಶ್ಯಕ ವಾಗಿದೆ. ಈ ಉದ್ದೇಶಕಾಗಿ ಈ ಸದ್ಧರ್ಮದೀಪಿಕೆಯಂಥಾ ಹತ್ತು ಪತ್ರಿಕೆಗಳಾದರೂ ಸಾಲವು ಆದರೆ ನಿಜಗುಣ ಶಿವಯೋಗಿಗಳ ಗ್ರಂಥಗಳ ವಿಷಯದಲ್ಲಿ ಗಮನಕೊಡಬಾರ ದೆಂಬ ಅಭಿಪ್ರಾಯವಲ್ಲ. ಅನುಕೂಲವರಿತು ಅವುಗಳ ವಿವೇಚನೆಯನ್ನು ಮಾಡ ಲಾಗುವುದು.

ನೀತಿ ವಿಷಯಕ ಗ್ರಂಥಗಳನ್ನೂ ಪ್ರಕಟಿಸಬೇಕೆಂಬ ಈ ಮಹನೀಯರ ಅಭಿ ಪ್ರಾಯವೂ ಲೇಸಾದುದೇ ಈಗ ಮತದೊಡನೆ ನೀತಿ ಕೂಡಿರುವ ಗ್ರಂಥಗಳು ಪುರಾತನ ದೇವಿಯರ ತ್ರಿವಿಧಿ ಮೊದಲಾದ ಗ್ರಂಥಗಳು ಪ್ರಕಟವಾಗುತ್ತಾ ಇವೆ. ಸಾಧ್ಯವಾದಷ್ಟು ರೀತಿಯಲ್ಲಿ ಧರ್ಮ ಜಾಗೃತಿಯನ್ನು ಉಂಟುಮಾಡುವುದೇ ಈ

ಕಾಲದಲ್ಲಿ ಅತ್ಯಾವಶ್ಯಕವಾದುದರಿಂದಲೂ, ಪೂರ್ವಗ್ರಂಥಗಳನ್ನು ಇದ್ದ ರೀತಿಯಲ್ಲಿ ಪ್ರಕಟಿಸುವುದರಿಂದಲೂ, ಸಮಾಜ ಬಾಂಧವರು ಪೂರ್ವಿಕರ ಧಾರ್ಮಿಕ ಸ್ಥಿತಿಯನ್ನು ತಿಳಿದು ಆನಂದಪಡುವವರಾಗಲಿ ಎಂಬುದೇ ಮುಖ್ಯ ಕೋರಿಕೆಯು.

ಇನ್ನೊಬ್ಬ ಮಹನಿಯರು ಆರೋಗ್ಯದ ವಿಷಯವನ್ನು ಪ್ರಕಟಿಸಬೇಕೆಂದು ಮುಖತಃ ಸೂಚಿಸಿರುವರು. ೧) ನಮ್ಮ ಹಿರಿಯರು ಆಚಾರವನ್ನು ಆರೋಗ್ಯದ ದೃಷ್ಟಿಯಿಂದಲೇ ನಡೆಸುತ್ತಿರುವರಾದ್ದರಿಂದ ಈಗ ಆ ವಿಷಯಕ್ಕೂ ಗಮನಕೊಡ ಬೇಕಾಗಿದೆ.

ಇದಲ್ಲದೆ ನಮ್ಮ ತಾಯಿನುಡಿಯಾದ ಕನ್ನಡ ಭಾಷಾ ಸೇವೆಯನ್ನು ಮಾಡುವ ಕೆಲಸವೂ ಅತ್ಯವಶ್ಯವಾಗಿದೆ. ಭಾರತ ನಿಘಂಟು, ವೈದ್ಯನಿಘಂಟು ಮೊದಲಾದ ಪೂರ್ವಿಕರು ರಚಿಸಿದ ಕೆಲವು ಗ್ರಂಥಗಳು ಇನ್ನು ಮುದ್ರಣವಾಗದೆ ಉಳಿದಿವೆ.

೨) ಎಲ್ಲಕ್ಕೂ ಮಹಾದೇವನ ಕೃಪೆಯೇ ಬಹುಮುಖ್ಯವಾದುದರಿಂದ ಅದನ್ನು ಪಡೆಯಲು ಸರ್ವರೂ ಗಮನಕೊಟ್ಟರೆ, ಎಂತಹ ಅಸಾಧ್ಯವೆಂದು ಯೋಚಿಸುವ ಕೆಲಸಗಳೂ ಕೂಡಾ ಸುಸಾಧ್ಯವಾಗಿ ಪರಿಣಮಿಸಬಹುದಲ್ಲವೆ?

(ಸಂ. ೧೬-೧೭. ಪು. ೨ ರಿಂದ ೪.)

ಪ್ರಕಾಶಕ.

---

೧. ಹೀಗೆ ಬರೆವವರು ಯಾರೆಂಬುದನ್ನು ಶರಣರು ಸೂಚಿಸಿಲ್ಲ. ಅವರಿಗೂ ತಮ್ಮ ಈ ಪ್ರತಿಕ್ರಿಯೆಯಲ್ಲೇ ಉತ್ತರಿಸಿದ್ದಾರೆ.

೨. ಇಲ್ಲಿ ಇನ್ನೂ ಅನೇಕ ವಿಷಯ ತಿಳಿಸಿದ್ದಾರೆ ಅದನ್ನೆಲ್ಲ ಸಂಗ್ರಹಿಸಿ ಮುಖ್ಯವಾದುದನ್ನು ಅಲ್ಲಿ ಬರೆದಿದ್ದ ಬರವಣಿಗೆಯಲ್ಲಿಯೇ ಇಲ್ಲಿ ಕೊಟ್ಟಿದೆ.

೩) ಜೆ. ರುದ್ರಪ್ಪ. ಎಂ. ಎ. ಎಲೆಲ್. ಬಿ. (ತಾರೀಖು ಇಲ್ಲ.)
ಮುನಸಿಫ್ ಮಂಡ್ಯ. ಮೈಸೂರು ಡಿಸ್ಟ್ರಿಕ್ಟ್.

ತಾವು ಸದ್ಧರ್ಮದೀಪಿಕೆ ಮಾಸಪತ್ರಿಕೆಯನ್ನು ವಿಚಕ್ಷಣೆಯಿಂದ ಹೊರಡಿಸುತ್ತಿರುವುದು ಸ್ತುತ್ಯವಾದ ಕೆಲಸ. ವೀರಶೈವ ಪುರಾತನ ಗ್ರಂಥಗಳನ್ನು ಹೊರಗೆಡಹುತ್ತಿರುವುದನ್ನು ನೋಡಿದರೆ ಸಮಾಜವು ತಮಗೆ ಚಿರಕೃತಜ್ಞವಾಗಿರಬೇಕು. ತಮ್ಮ ಭಾಷಾಪರಣಿಯೂ ವಿಷಯಪ್ರತಿಪಾದನೆಯೂ ಬಹಳ ಚೆನ್ನಾಗಿವೆ. ತಮ್ಮ ಹಸ್ತದಿಂದ ಷಟ್‌ಸ್ಥಲ ವಿಚಾರದಲ್ಲಿಯೂ ಮೂವತ್ತಾರು ತತ್ತ್ವಗಳ ವಿಚಾರದಲ್ಲಿಯೂ, ಒಂದೆರಡು ಲೇಖನಗಳನ್ನು ನೋಡಬೇಕೆಂಬ ಕುತೂಹಲವಿದೆ. ತಮಗೆ ವಿರಾಮವಾದಾಗ್ಗೆ ಬರೆಯಿರಿ.

(ಸಂ. ೨೦-೨೧-ಪು-೧)

ಈ ಮಹನೀಯರ ಅಭಿಪ್ರಾಯದಂತೆ ಷಟಸ್ಥಲ ಮತ್ತು ತತ್ವಗಳ ವಿಷಯಗಳನ್ನು ಅನುಕೂಲವಾದಾಗ ಪ್ರಕಟಿಸಬೇಕೆಂಬ ಯೋಜನೆ ಇರುತ್ತದೆ.

(ಸಂ. ಅದೇ)

—ಪ್ರಕಾಶಕ

ಪ್ರಾಕ್ತನ ವಿದ್ಯಾವಿಚಕ್ಷಣ

೪) ಆರ್. ನರಸಿಂಹಾಚಾರ್

ಮ॥ ರಾ॥ ಸದ್ಧರ್ಮದೀಪಿಕೆ ಪ್ರಕಾಶಕರು ಶ್ರೀ ಚೆನ್ನಮಲ್ಲಪ್ಪನವರ ಸನ್ನಿಧಿಯಲ್ಲಿ ವಿಜ್ಞಾಪನೆಗಳು.

ನೀವು ಸದ್ಧರ್ಮದೀಪಿಕೆಯ ಸಂಚಿಕೆಗಳನ್ನು ನನ್ನಲ್ಲಿ ವಿಶ್ವಾಸವಿಟ್ಟು ಕಳಿಸುತ್ತಿರುವುದು ಸರಿಯಷ್ಟೆ. ನಿಮ್ಮ ಪತ್ರಿಕೆಗೋಸುಗ ಹತ್ತು ರೂಪಾಯಿಗಳನ್ನು ನನ್ನ ಡೋನೇಷನ್ನಾಗಿ ಕಳಿಸಿದ್ದೇನೆ,ಸ್ವೀಕರಿಸಬೇಕು.ಇತಿ ವಿಜ್ಞಾಪನೆಗಳು (೧೯೩೫ನೆಯಇಸ್ವಿ)

(ಸಂ-೨೯-೩೦)

ಸಹಿ ಆರ್. ನರಸಿಂಹಾಚಾರ್.

೫) ಸರ್ದಾರ್ ಹೆಚ್. ಎಲ್. ದೇವರಾಜ ಅರಸ ಮೈಸೂರ
ಇನಾಮುದಾರ್ ದರ್ಬಾರ್‌ಭಕ್ಷಿ ಆ್ಯಂಡ್ ಆನರಿ A.D.C. ೪-೧೦-೧೯೪೭
ಟು. H. H. ದಿ. ಮಹಾರಾಜಾ ಆಫ್ ಮೈಸೂರು.

Dear Sir

I write to thank you for kindly sending me copy of "ಸದ್ಧರ್ಮದೀಪಿಕೆ". I find it interesting Yours sincerely,

To,
The Editor (ಸಹಿ) H. L. DEVARAJ URS
Saddharma Deepike

(ಪ್ರತಿಕ್ರಿಯೆ)

ಅನಿರೀಕ್ಷಿತವಾಗಿ ಅಪ್ರಾರ್ಥಿಕವಾಗಿ ಮೇಲೆ ಕಂಡ ಪತ್ರ ಬಂದಿರುವುದನ್ನು ಸಾದಕರ ದಿಂದ ಸ್ವೀಕರಿಸಿದ್ದೇವೆ. ಹೃದಯಪೂರ್ವಕವಾಗಿ ಪಾರಾಗಿಹೊರಹೊಮ್ಮಿದ ವಾಗ್ಬಿಂದುಗಳಿವು. ಲೇಖಕನ ಶ್ರಮರೂಪವಾದ ಉಷ್ಣವನ್ನು ಶಾಂತಗೊಳಿಸುವ ಜಲ ಬಿಂದುಗಳಿವು.

ಒಬ್ಬ ಶಿವಶರಣರು ಹೀಗೆ ಹೇಳಿರುವರು.

ಕಂದ॥ ಬಲುಬೇಕೆಂಬುದು ತನು ಗುಣ।
ಒಲಿದರೆಯು ಒಲ್ಲೆನೆಂಬುದು ಕಡುವೈರಾಗ್ಯಂ॥
ಪುಲಭದಿ ಉಭಯುವನಳಿದರೆ।
ಛಲಶೀಲವಂತರೆಂಬೆನು ಬಸವಪ್ರಭುವೇ॥.

—ತಾನಾಗಿ ಅಪೇಕ್ಷೆಪಟ್ಟು ಪಡೆಯುವ ಪದವಿಯು ಆಸೆಗೊಳಗಾದುದು. ಬಯಸದೆ ಸುಖವು ತನಗೆ ತಾನೇ ಬಂದುದನ್ನು ಒಲ್ಲೆನೆಂದು ತಿರಸ್ಕರಿಸುವುದು ಕಡುವೈರಾಗ್ಯ. ಎರಡೂ ಇರಬಾರದು. ಮಹಾದೇವನಕೃಪೆಯಿಂದ ಬಂದುದರಲ್ಲಿ ತೃಪ್ತನಾಗಬೇಕು. ಈ ಧರ್ಮಕಟ್ಟಳೆಯ ಪ್ರಕಾರ ಇದು ಮಹಾದೇವನ ಕೃಪೆಯಿಂದ ಬಂದುದೆನ್ನುತ್ತೇನೆ.

ಪ್ರಕಾಶಕ ಸದ್ಧರ್ಮದೀಪಿಕೆ, ಮೈಸೂರು

(ಸಂ. ೬೬–೬೭. ಪು. ೧)

೬) ಕರ್ನಾಟಕ ಸೇವಾಸಂಘ

ಮದ್ರಾಸು.

'ಸದ್ಧರ್ಮದೀಪಿಕೆ'ಯು ಅತ್ಯವಶ್ಯಕವಾದ ಪತ್ರಿಕೆಯು. ಕನ್ನಡದಲ್ಲಿ ಇಂಥ ಪತ್ರಿಕೆ ಬೇರೊಂದಿಲ್ಲವೆಂದು ಸಂಚಿಕೆಯನ್ನೋದಿ ಕಂಡುಬಂತು. ಕನ್ನಡಿಗರ ಜನಜೀವನದಲ್ಲಿ ಸರಿಯಾದ ಧರ್ಮಬದ್ಧವಾದ ಹಾದಿಯನ್ನು ತೋರಿಸುವುದಕ್ಕೆ ಈ ಪತ್ರಿಕೆ ಅವಶ್ಯಕವಾದುದಾಗಿ ತಿಳಿಯುತ್ತೇನೆ. ಇಂತಹ ಪತ್ರಿಕೆ ಕನ್ನಡಿಗರಿಗೆ ಬೇಕು.

(ಸಂ. ೭೨-೭೩-. ಪು. ೨೮)

೭) ಅರಮನೆಯ ಪತ್ರ.

(ಮೈಸೂರು ಶ್ರೀ ಮನ್ಮಹಾರಾಜರವರ ಅರಮನೆಯಿಂದ ಸದ್ಧರ್ಮದೀಪಿಕೆಯ ಪ್ರಕಾಶಕರಿಗೆ ಬಂದ ಪತ್ರದ ಯಥಾಪ್ರತಿ)

(ಸಂ. ೭೯-೭೦ ಪುಟ ೧-೨)

Sardar
H. L. Devaraj Urs

The Palace
Mysore
20. Jan 1949

Durbar Bhakshi Hon. A.D.C. to
H. H. The Maharaja of Mysore
Dear Sri Channamallikarjuna

I acknowledge with many thanks the receipt of the copy of 'Saddharmadeepika' so kindly sent to me by post. The book-let is Really Interesting and instructive. Wishing you every suceess in your attempt.

Thanking you cnce again,

Your sincerely
(sd.) H. L. Devaraj Urs.

To,
Sri Channamallikarjuna
Editor, Saddharma deepika
Sri Raghavendra Printing Press
Badami nanjappan math
old agrahara-Mysore

(ಪ್ರತಿಕ್ರಿಯೆ)

ಪರಾತ್ಪರ ವಸ್ತುವಿನ ಸೇವೆ ಮಾಡಬೇಕೆಂದು ಧಾರ್ಮಿಕ ವಿಷಯಗಳನ್ನು ಪ್ರಕಟಿಸುವ ಪತ್ರವಿದು. ಹಿಂದೆ ಚೋಳರಾಜರು ಧಾರ್ಮಿಕ ವಿಷಯಗಳಲ್ಲಿ ಶ್ರದ್ಧೆಯಿಟ್ಟು ಅದರ ಪ್ರಚಾರಕ್ಕೆ ಅವಕಾಶವನ್ನುಂಟುಮಾಡಿದ್ದರು. ಹೊಯ್ಸಳರಾಜರೂ ಹರೀಶ್ವರನೇ ಮೊದಲಾದವರಿಗೆ ಧಾರ್ಮಿಕಗ್ರಂಥಪ್ರಸಾರಕ್ಕಾಗಿ ಸಹಾಯಮಾಡಿದರು. ವಿಜಯನಗರದ ಕೆಳದಿಯ ಸಂಸ್ಥಾನದ ರಾಜರೂ ಈ ಕಡೆಗೆ ಗಮನವಿಟ್ಟಿದ್ದರು. ಬ್ರಿಟಿಷರರಾಜ್ಯ ಭಾರತದ ಧಾರ್ಮಿಕಕ್ಕೆ ರಾಜಕೀಯದ ಸಹಾಯವಿಲ್ಲದೆ ಹೋಯಿತು. ೨ನೇಯ ವರ್ಷದ ಸ್ವಾತಂತ್ರ್ಯದ ಕೂಸಾದ ಭಾರತವು ಏನು ತಾನೇ ಮಾಡೀತು? ಈ ಕಾಲವು ಧಾರ್ಮಿಕ ಪ್ರಸಾರದ ಅವನತಿಯಕಾಲ ಎಂದು ಯೋಚಿಸುತ್ತಿದ್ದಾಗ ಮೈಸೂರು ಶ್ರೀ ಮನ್ಮಹಾರಾಜರವರು ಲಕ್ಷಗಟ್ಟಲೆ ರೂಪಾಯಿಗಳ ಖರ್ಚಿನಿಂದ ವೇದ ಉಪನಿಷತ್ ಪುರಾಣ ಮುಂತಾದವುಗಳ ಪ್ರಕಟನೆಗೆ ಕಾರಣರಾದುದನ್ನು ತಿಳಿದು ಧರ್ಮೋಜ್ಜೀವನ ಸೂರ್ಯನ ಹೊಸ ಕಿರಣವು ಪ್ರಸರಿಸಲಾರಂಭಿಸಲ್ಪಟ್ಟಿರುದೆಂದು ಸಂತೋಷಿಸಲವಕಾಶವಾಗಿದೆ. ಇದಲ್ಲದೆ ಈಗ ಅರಮನೆಯಿಂದ ಪತ್ರಬಂದಿರುವುದನ್ನೂ ನೋಡಿದರೆ ಧಾರ್ಮಿಕ ಲಕ್ಷ್ಯವು ಶ್ರೀಮನ್ಮಹಾರಾಜರಿಗೆ ವಿಶೇಷವಾಗಿರುವುದೆಂದು ತಿಳಿದು ಬಹಳವಾಗಿ ಆನಂದಿಸಬೇಕಾಗಿದೆ. ಧಾರ್ಮಿಕದ ಕಡೆಗೆ ವಿಶೇಷ ಲಕ್ಷ್ಯವಿಲ್ಲದ ಈಗಿನ ವೀರಶೈವ ಪ್ರಪಂಚವನ್ನು ನೋಡಿ, ಧಾರ್ಮಿಕಕ್ಕೆ ಮಹಾದೇವನ ಕೃಪೆಯೇ ಇಲ್ಲವೋ ಏನೋ ಎಂಬ ಯೋಚನೆಯೂ ಒಮ್ಮೊಮ್ಮೆ ಬರುತ್ತಲಿದ್ದಿತು. ಆದರೆ ಈ ಪತ್ರವನ್ನು ನೋಡಿ ದರ್ಬಾರ್ ಭಕ್ತಿಯವರು ಸೋಹಂ ಭಾವನೆಯವರಾಗಿದ್ದರೆ ಮಹಾದೇವನೇ ಈ ಅಭಿಪ್ರಾಯವನ್ನು ಅಪ್ಪಣೆಕೊಟ್ಟನೆಂದೂ, ಹಾಗಿಲ್ಲದಿದ್ದರೆ ಅವರ ಮುಖಾಂತರ ಈ ರೀತಿ ತನ್ನ ಅಭಿಪ್ರಾಯವನ್ನು ಹೊರಗೆಡೆವಿದನೆಂದೂ ಭಾವಿಸಿ ಯೋಚನೆಯನ್ನು ದೂರದಲ್ಲಿರಿಸುವ ಅವಕಾಶವೊದಗಿದೆ. ಪರವಸ್ತುವಿನ ಕೃಪೆಯೇ ಅವನ ಪ್ರಸನ್ನತೆಯೇ, ಅವನಸಾನ್ನಿಧ್ಯವೇ, ಅವನ ಸಾಮರಸ್ಯವೇ, ಅವನಸೇವೆಯೇ ಸರ್ವಕ್ಕೂ ಮೂಲಕಾರಣವೆಂದು ಅಮೂಲವಸ್ತುವನ್ನು ಗಟ್ಟಿಯಾಗಿ ಅಂಟಿಕೊಂಡಿರುವುದೇ ಬಹಳ ಮೇಲಾದುದು ಎಂಬ ಬೋಧೆಯು ಈ ಪತ್ರದಿಂದ ದೊರಕಿದಂತಾಗಿದೆ. ಇದನ್ನು ಸಾದರದಿಂದ ಸ್ವೀಕರಿಸಿದ್ದೇನೆ.

(ಸಂ. ೭೯–೮೦. ಪು. ೧–೨)

—ಪ್ರಕಾಶಕ

(೮) ನ್ಯೂಯಾರ್ಕ್
ಬುಧವಾರ ಎಪ್ರಿಲ್ ೨೭, ೧೯೪೯.

ಶ್ರೀ ಚೆನ್ನಮಲ್ಲಿಕಾರ್ಜುನ ಅವರಿಗೆ ವಂದನೆಗಳು.

ನೀವು ಈವರೆಗೆ ನನಗೆ ಕಳಿಸಿದ 'ಸದ್ಧರ್ಮದೀಪಿಕೆ'ಯ ಸಂಚಿಕೆಗಳು ಮುಟ್ಟಿರುವುವು ಅದಕ್ಕಾಗಿ ನಿಮಗೆ ನಾನು ಕೃತಜ್ಞನಾಗಿರುತ್ತೇನೆ.

ಜೂನ್ ತಿಂಗಳಲ್ಲಿ ನಾನು ಅಮೇರಿಕೆಯ ಮುಖ್ಯ ಪಟ್ಟಣಗಳಲ್ಲಿ ಬಸವಣ್ಣನವರ ಆತ್ಮವಿಚಾರ, ಅವರ ಕ್ರಾಂತಿ, ಅವರ ಅನುಭವಮಂಟಪ ಈ ವಿಷಯುಗಳನ್ನು ಕುರಿತು ಭಾಷಣ ಮಾಡಬೇಕೆಂದಿದ್ದೇನೆ. ಈ ಸಂದರ್ಭದಲ್ಲಿ ನನಗೆ ಸಹಾಯವಾಗುವ ಕೆಲವು ವಿಷಯುಗಳ ಟಿಪ್ಪಣಿಗಳನ್ನು ಬರೆದು ಕಳಿಸಿದರೆ ಬಹಳ ಉಪಕಾರವಾಗುವುದು. ಹಿಂದುಸ್ತಾನದ ಧಾರ್ಮಿಕಪುರುಷರ ಬಗ್ಗೆ ಮತ್ತು ಅವರು ತೋರಿಸಿರುವ ಶಿವಾನುಭಾವ ಮಾರ್ಗದ ಬಗ್ಗೆ ತಿಳಿದುಕೊಳ್ಳಲು ಅಮೇರಿಕೆಯ ಜನರು ಬಹಳೇ ಆತುರಪಡುತ್ತಾರೆ. ಸಾಮಾನ್ಯ ಜನರಲ್ಲಿಯೂ, ಪಂಡಿತರಲ್ಲಿಯೂ ಈ ತರದ ಬಯಕೆಯಿದ್ದುದು ಕಂಡು ಬರುತ್ತದೆ. ಅದಕ್ಕೆ ಆಲಸಿಗಳಾದ ನಮ್ಮ ಜನರು ಪರದೇಶಗಳಲ್ಲಿ ಆತ್ಮವಿದ್ಯೆಯ ಪ್ರಸಾರ ಮಾಡಲು ಒಂದು ಸುವ್ಯವಸ್ಥಿತ ಯೋಜನೆಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಿಲ್ಲವೆಂದು ನೆನೆದರೆ ದುಃಖವೆನಿಸುತ್ತದೆ.

ನಾನು ಅಭ್ಯಸಿಸುತ್ತಿರುವ ಕಾಲೇಜದಲ್ಲಿ ವರ್ಗಗಳು ವಿವಾದ ಪದ್ಧತಿಯಲ್ಲಿ ಸಾಗುತ್ತವೆ. ಕೆಲವು ಸಂದರ್ಭಗಳಲ್ಲಿ ಹಿಂದೂಸ್ಥಾನದ ಜನರ ಆತ್ಮವಿಚಾರ ಮತ್ತು ಅದನ್ನು ಹೇಗೆ ಆಚರಿಸುವರು ಎಂಬುದನ್ನು ಅಥಣಿ ಶಿವಯೋಗಿಗಳ ಮತ್ತು ಅಕ್ಕ ಮಹಾದೇವಿಯ ಜೀವನ ಚರಿತ್ರೆಯ ಕೆಲವು ಸಂಗತಿಗಳನ್ನು ಆಯ್ದುಕೊಂಡು ವಿವರಿಸಿದೆನು. ವರ್ಗದ ವಿದ್ಯಾರ್ಥಿಗಳು ಈ ದಿಸೆಯಲ್ಲಿ ಹೆಚ್ಚು ಹೆಚ್ಚು ತಿಳಿದುಕೊಳ್ಳಬೇಕೆಂಬ ಕುತೂಹಲವನ್ನು ವ್ಯಕ್ತಪಡಿಸುತ್ತಿದ್ದರು.

ಒಂದು ಸೂಚನೆ– 'ವಚನ ಸಾಹಿತ್ಯಮಂಟಪ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಎಲ್ಲವಚನಗಳನ್ನೂ ಇಂಗ್ಲೀಷಿನಲ್ಲಿಯೂ ಮತ್ತು ಹಿಂದೂಸ್ಥಾನದ ಇತರ ಭಾಷೆಗಳಲ್ಲಿಯೂ ಭಾಷಾಂತರಿಸುವ ಯೋಜನೆಯನ್ನು ಕೂಡಲೇ ಕೈಕೊಳ್ಳಬೇಕು. ನಾನು ಹಿಂದೂಸ್ಥಾನಕ್ಕೆ ಮರಳಿ ಬಂದಮೇಲೆ ಈ ದಿಸೆಯಲ್ಲಿ ಸೇವೆಸಲ್ಲಿಸಲು ಸಿದ್ಧನಿದ್ದೇನೆ. ಈ ವಿಷಯುದ ಆವಶ್ಯಕತೆಯ ಬಗ್ಗೆ ಜನರಲ್ಲಿ ಜಾಗೃತಿಯನ್ನು ನಿಮ್ಮ ಪತ್ರದ ಮುಖಾಂತರ ಉಂಟುಮಾಡಿದರೆ ದೊಡ್ಡಕಾರ್ಯವಾಗುವುದು.

ಮೇಲೆ ಕಾಣಿಸಿದ ನನ್ನ ಬೇಡಿಕೆಯುನ್ನು ಪೂರ್ತಿಮಾಡುವ ಬಗ್ಗೆ (ಸಂಕ್ಷಿಪ್ತ ವಿಷಯು ಟಿಪ್ಪಣಿಗಳು, ಬಸವಣ್ಣನವರ ಸಂದೇಶ, ಅನುಭವ ಮಂಟಪದ ಇತಿಹಾಸ ಮತ್ತು ಉದ್ದೇಶ ಮತ್ತು ಟಿ. ಎಚ್. ಎಂ. ಸದಾಶಿವಯ್ಯನವರ ಪುಸ್ತಕಗಳು ಇಂಗ್ಲೀಷಿನಲ್ಲಿ) ಕೂಡಲೆ ಉತ್ತರ ಬರೆಯಬೇಕಾಗಿ ವಿನಂತಿ.

ತಮ್ಮ ವಿರೂಪಾಕ್ಷಪ್ಪ ಜವಳಿ.

From (Address)
V. K. Javali
503, John Jay Hall.
Columbia University
New-York 27. N. Y.

To
Sri Channamallikarjun
Editor, Saddharma Deepike.
Mysore (India)

(ಪ್ರತಿಕ್ರಿಯೆ)

ಇವರು ಅಪೇಕ್ಷಿಸಿದ ಪ್ರಕಾರ ಕೆಲವು ವಿಷಯುಗಳ ವಿಚಾರವನ್ನು ಇವರಿಗೆ ಸದ್ಧರ್ಮ ದೀಪಿಕೆಯ ಕಾರ್ಯಾಲಯದಿಂದ ಏರ್‌ಮೇಲ್ ಪತ್ರದ ಮುಖಾಂತರ ವಾಗಿ ಕಳಿಸಲಾಗಿದ್ದಿತು. ಆಮೇಲೆ ಇವರಿಂದ ಜೂನ್ ತಿಂಗಳಲ್ಲಿ ಒಂದು ಏರ್‌ಮೇಲ್ ಪತ್ರವು ಬಂದಿದೆ. ಅದರಲ್ಲಿ ಈ ಕೆಳಗಿನ ವಿಚಾರವಿದೆ :

ಶ್ರೀ ಚೆನ್ನಮಲ್ಲಿಕಾರ್ಜುನರವರಿಗೆ ಮೇ ೨೫-೧೯೪೯

ನೀವು ದಯವಿಟ್ಟು ಕಳಿಸಿದ ಟಿಪ್ಪಣಿಗಳು ಬಸವಣ್ಣನವರ ಕ್ರಾಂತಿ, ಅನುಭವ ಮಂಟಪ ಮುಂತಾದವು ಈ ಮೊದಲೇ ಕೈಸೇರಿವೆ. ಆದರೆ ನನ್ನ ಕೊನೆಯ ಎಂ. ಎ. ಪರೀಕ್ಷೆಯ ಅಭ್ಯಾಸದಲ್ಲಿ ತೊಡಗಿದ್ದರಿಂದ ನಿಮಗೆ ಉತ್ತರ ಬರೆಯಲು ತಡವಾಯಿತು ಕ್ಷಮಿಸಬೇಕಾಗಿ ವಿನಂತಿ.

ಈಗ ನನ್ನ ಪರೀಕ್ಷೆ ಮುಗಿದು ನಿಶ್ಚಿಂತನಾಗಿದ್ದೇನೆ. ನೀವು ಕಳಿಸಿದ ಟಿಪ್ಪಣಿಗಳನ್ನು ಜೊತೆಯಲ್ಲಿ ಇಟ್ಟುಕೊಂಡು ಲಿಂಗಾಯತ ತತ್ತ್ವದ ಬಗ್ಗೆ ನಾನು ಕಂಡಿರುವ ಪುಸ್ತಕಗಳನ್ನು ಓದುತ್ತಿದ್ದೇನೆ. "The Lingayat View of Life" ಎಂಬ ವಿಷಯುವನ್ನು ಕುರಿತು ಅಮೇರಿಕೆಯ ಕೆಲವು ಊರುಗಳಲ್ಲಿ ಭಾಷಣ ಮಾಡಬೇಕೆಂದಿದ್ದೇನೆ. ಈ ದಿಸೆಯಲ್ಲಿ ಕೆಲವು ಸಂಘಗಳೊಡನೆ ಪತ್ರವ್ಯವಹಾರ ನಡೆಸಿದ್ದೇನೆ. ಹಿಂದೂಸ್ತಾನದವರಿಂದ ಆತ್ಮವಿದ್ಯೆಯ ಬಗ್ಗೆ, ಶಿವಾನುಭವದ ಬಗ್ಗೆ ತಾವು ಕಲಿಯಬೇಕಾಗಿದೆ ಎಂದು ಅಮೇರಿಕೆಯ ಜನರು (ಸಾರ್ವಜನಿಕರೂ ಮತ್ತು ಪಂಡಿತರೂ ಸಹ) ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದಾರೆ. ಹೀಗಿದ್ದರೂ ತಮ್ಮ ಹಿರಿಯರು ಕಂಡುಹಿಡಿದ ಮಾರ್ಗವನ್ನು, ಸಂಪಾದಿಸಿದ ವಿದ್ಯೆಯನ್ನು ಪರನಾಡಿನ ಜನರಿಗೆ ತಿಳಿಸಲು ನಮ್ಮವರು ಏನು ಪ್ರಯತ್ನಿಸುತ್ತಿದ್ದಾರೆ ? ಶರಣರು ತೋರಿಸಿದ ಉದಾತ್ತ ತತ್ತ್ವಗಳನ್ನು, ಆಚರಣೆಯನ್ನೂ ಪ್ರಸಾರಮಾಡುವ ಕಾರ್ಯವನ್ನು ನಮ್ಮ ಸ್ವಾಮಿಗಳು ಕೈಕೊಂಡರೆ, ಪಾಶ್ಚಾತ್ಯ ಜನರು ಅವರನ್ನು ಆದರದಿಂದ ಸ್ವೀಕರಿಸುವರು.

ಒಮ್ಮೊಮ್ಮೆ ನನ್ನ ಮನಸ್ಸಿನಲ್ಲಿ "All World Anubhava Mantapa" ಎಂಬ ಒಂದು ದೊಡ್ಡ ಸಭೆಯನ್ನು ಕರೆಯಬೇಕೆಂಬ ವಿಚಾರವು ಏರುತ್ತದೆ. ನಮ್ಮವರಿಂದ ಈ ಕಾರ್ಯಕ್ಕೆ ಬೆಂಬಲ ಸಿಗಬಹುದೇ ? ನಾನು ಹಿಂದೂಸ್ತಾನಕ್ಕೆ ತಿರುಗಿ ಬಂದ ಮೇಲೆ ನಾವೆಲ್ಲರೂ ಕೂಡಿ ಈ ಬಗೆಗೆ ವಿಚಾರಿಸುವಾ.

ಜೂನ್ ತಿಂಗಳಲ್ಲಿ ಅಮೇರಿಕೆಯ ಪ್ರವಾಸವನ್ನು ಮುಗಿಸಿ ನಾನು ಮುಂದೆ ಇಂಗ್ಲಂಡಕ್ಕೆ ಹೋಗುತ್ತೇನೆ. ಅಲ್ಲಿಂದ ಫ್ರಾನ್ಸ್, ಸ್ವೀಡನ್, ಇಟಲಿ ಮೊದಲಾದ ದೇಶಗಳಿಗೆ ಹೋಗಿ ಹಿಂದೂಸ್ತಾನಕ್ಕೆ ಸೆಪ್ಟಂಬರ್ ೧೯೪೯ಕ್ಕೆ ತಿರುಗಿಬರಬಹುದು ಅವಶ್ಯ ಕಂಡಾಗ ನನ್ನ ಮುಂದಿನ ಕಾರ್ಯಕ್ರಮದ ಬಗ್ಗೆ ತಮಗೆ ಪತ್ರ ಬರೆಯುತ್ತೇನೆ.

(ಸಂ. ೮೩–೮೪. ಪು ೧೦ ರಿಂದ ೧೨)

ಚೆನ್ನಪ್ಪ ಉತ್ತಂಗಿ
ಮಿಷನ್ ಕಾಂಪೌಂಡು, ಧಾರವಾಡ

ಧಾರವಾಡ
೧೦–೯–೧೯೪೯

ಶ್ರೀ ಚೆನ್ನಮಲ್ಲಿಕಾರ್ಜುನ ಅವರಿಗೆ

ತಮ್ಮ ಸದ್ಧರ್ಮ ದೀಪಿಕೆಯ ಒಂದು ಅಂಕ ತಲುಪಿದೆ. ಉಳಿದವುಗಳು ಬಂದಿಲ್ಲ. ನಾನು ಈ ಮೊದಲು ತಿಳಿಸಿದಂತೆ ನನ್ನ ಪೆನ್ಷನ್ ನಿಂತುಹೋದ ಮೂಲಕ ಯಾವ ಪತ್ರಿಕೆಯನ್ನು ತರಿಸುತ್ತಿಲ್ಲ. ಆದರೆ ತಮ್ಮ ಸದ್ಧರ್ಮದೀಪಿಕೆಯಲ್ಲಿ ಬಹು ಬೆಲೆಯುಳ್ಳ ಹಾಗು ಸಂಶೋಧನಾತ್ಮಕ ವಿಷಯಗಳು ಬರುತ್ತಿರುವುದರಿಂದ ತಾವು ದಯವಿಟ್ಟು ಉಚಿತವಾಗಿ ಕಳುಹಿಸಬೇಕಾಗಿ ವಿನಂತಿ. ನಾನೀಗ ತಮ್ಮ 'ಅನಾದಿ ವೀರಶೈವ ಸಂಗ್ರಹ' ಎಂಬ ಗ್ರಂಥವನ್ನು ಓದುತ್ತಿದ್ದೇನೆ. ಅದರಲ್ಲಿ ಅನೇಕ ಅಂಶ ಗಳು ನಮ್ಮ ವಿಚಾರಗಳಿಗೆ ಹೋಲುತ್ತಿರುವುದರಿಂದ ಗ್ರಂಥವನ್ನು ಬೆಳಕಿಗೆ ತಂದ ಯಶಸ್ಸು ತಮಗೆ ಸೇರುತ್ತದೆ.

ಒಂದು ಸಂಶೋಧನ ವಿಷಯ–ಪುಟ ೯ ರಲ್ಲಿ 'ಮರುಳುಶಂಕರ'ದೇವರೇ ಮರುಳ ಸಿದ್ಧರೆಂದು ಬರೆದಿದೆ. ಇದು ವಾದಗ್ರಸ್ಥ ವಿಷಯ. ಮರುಳಸಿದ್ಧನ ವಚನ 'ರೇವಣ್ಣಪ್ರಭುವೇ' ಎಂದಿದ್ದರೆ 'ಶುದ್ಧ ಸಿದ್ಧ ಪ್ರಸಿದ್ಧ ಪ್ರಶಾಂತ ಮಲ್ಲಿಕಾರ್ಜುನದೇವ' ಎಂದು ಮರುಳಶಂಕರದೇವರ ವಚನವಿದೆ. 'ರೇವಣ್ಣಪ್ರಭುವೇ' ಎಂದು ಒಂದೇ ವಚನವಿರುವುದರಿಂದ ಅವನ ವಚನಗಳು ಇದ್ದಂತೆ ತೋರಲಿಲ್ಲ. ಇಬ್ಬರ ಸಾಂಪ್ರ ದಾಯಿಕ ಮಠಗಳು ಬೇರೆ ಬೇರೆ ಇರುವುದರಿಂದ ಮರುಳಸಿದ್ಧ, ಮರುಳಶಂಕರ ಇವರು ಬೇರೆ ಬೇರೆ ಎಂದು ಬುದ್ಧಯ್ಯ ಪೌರಾಣಿಕ ಇವರ ಅಭಿಪ್ರಾಯ. ಶ್ರೀ ನರಸಿಂಹಾ ಚಾರ್ಯರು ಒಂದೇ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದು ಸೂಕ್ಷ್ಮವಾಗಿ ಸಂಶೋಧಿಸದೆ ಹೇಳಿದ ಮಾತೆಂದು ನೆನೆಸಿದ್ದೆ. ಆದರೆ ನೀವು ತೆಗೆದಿರುವ ಊಹೆಗಳ ಮೇಲಿಂದ ಅದು ನಿಜವಿರಲೂಬಹುದೆಂಬ ಸಂಶಯ ಉಂಟಾಗುತ್ತದೆ. ತಮ್ಮ ಪಂಚಾ ಚಾರ್ಯರ ಪುಸ್ತಕವು ಹೊರಡುವುದಕ್ಕೆ ತಡವಿದ್ದೀತು. ಆದುದರಿಂದ ಮರುಳಶಂಕರನೇ ಮರುಳಸಿದ್ಧನೆಂಬುವುದಕ್ಕೆ ಇರುವ ಚರಿತ್ರಾಂಶಗಳಲ್ಲಿ ಮುಖ್ಯವಾದವುಗಳನ್ನು ಕೇವಲ ಸೂಚನಾರೂಪವಾಗಿ ಬರೆದರೆ ನಾನು ಈ ವಿಷಯದಲ್ಲಿ ಅಭ್ಯಾಸ ಮಾಡುತ್ತಿದ್ದ ಒಂದು ನಿಶ್ಚಿತ ನಿರ್ಣಯಕ್ಕೆ ಬರಬೇಕೆಂದು ಅಪೇಕ್ಷಿಸುತ್ತೇನೆ. ಅದರಿಂದ ಬಹಳ ಉಪಕಾರ

ವಾಗುತ್ತದೆ. ದಯವಿಟ್ಟು ಅಲಕ್ಷ್ಯ ಮಾಡದೆ, ವಿಲಂಬಮಾಡದೆ ಇದಕ್ಕೆ ಉತ್ತರ ಬರೆದು ನನಗಿರುವ ಸಂಶಯವನ್ನು ದೂರ ಮಾಡುವಿರಾಗಿ ನಂಬಿಕೆ. ತಮ್ಮ ಪತ್ರದ ದಾರೀ ಕಾಯುವ,

ತಮ್ಮವನಾದ
ಚ. ಉತ್ತಂಗಿ

(ಪ್ರತಿಕ್ರಿಯೆ)

ಇವರಿಗೆ (ಚನ್ನಪ್ಪ ಉತ್ತಂಗಿ ಅವರಿಗೆ) ಮೈಸೂರಿನಲ್ಲಿ ಮುದ್ರಣವಾದ 'ಸದ್ಧರ್ಮ ದೀಪಿಕೆ' ಮಾಸಪತ್ರಿಕೆಗಳೆಲ್ಲವನ್ನೂ ಕಳುಹಿಸಿದ ತರುವಾಯ ಅವರಿಂದ ಬಂದ ಪತ್ರವೀರೀತಿಯಿದೆ.

೧೧) ಚನ್ನಪ್ಪ ಉತ್ತಂಗಿ, ಧಾರವಾಡ
ಮಿಷನ್ ಕಾಂಪೌಂಡು ಧಾರವಾಡ ೨೩-೯-೪೯

ತಮ್ಮ ಸದ್ಧರ್ಮ ದೀಪಿಕೆಯ ಎಲ್ಲ ಅಂಶಗಳು ತಲುಪಿವೆ. ಅದಕ್ಕಾಗಿ ಅತ್ಯಂತ ವಂದನೆಗಳು. ಸಂಶೋಧನ ದೃಷ್ಟಿಯಿಂದ ಬರೆಯುತ್ತಿರುವ ತಮ್ಮ ಲೇಖನಗಳನ್ನು ಓದಿ, ತುಂಬಾ ಸಂತೋಷಪಟ್ಟಿದ್ದೇನೆ. ತಾವು ಕಳುಹಿಸಿರುವ ಕಡೆಯ ಸಂಚಿಕೆಯಲ್ಲಿ ಪಂಚಾಚಾರ್ಯರ ಚರಿತ್ರೆಯು ಪ್ರಾರಂಭವಾಗಿದೆ. ಅದರಲ್ಲಿ ಮರುಳುಸಿದ್ಧರ ಚರಿತ್ರಾಂಶ ಗಳು ಬೇಗನೆ ಬೇಗನೆ ಹೊರಡಬಹುದೆಂದು ತೋರಿಕೆಯಿದೆ. ಅದು ಪ್ರಕಟವಾದೊಡನೆ ನನಗೆ ಆ ಸಂಚಿಕೆಯನ್ನು ದಯವಿಟ್ಟು ತಪ್ಪದೆ ಕಳುಹಿಸಬೇಕಾಗಿ ವಿನಂತಿ. ತಮ್ಮ ವಿಚಾರಗಳು ಬೆಲೆಯುಳ್ಳವುಗಳಾಗಿರುವುದರಿಂದ ತಮ್ಮ ಲೇಖನಗಳಿಗಾಗಿ ಇಷ್ಟು ಬಯಕೆ. ಲೇಖಾಂಕ ಹೊರಡುವುದಕ್ಕೆ ತಡವಾದರೆ ಪತ್ರದ್ವಾರಾ ಕೆಲವು ಸೂಚನೆ ಗಳು ಸದ್ಯಕ್ಕೆ ದೊರೆತರೆ ಸಾಕು. ನಾನು ಈ ಬಗ್ಗೆ ಸ್ವಲ್ಪ ವಿಚಾರ ನಡೆಯಿಸಿರುವುದ ರಿಂದ ತಮ್ಮ ಲೇಖನಗಳನ್ನು ಈಗ ನಿರೀಕ್ಷಿಸಿರುವೆ............ (ಬೇರೆ ವಿಷಯ)

ತಮ್ಮವನಾದ
ಚ. ಉತ್ತಂಗಿ.

(ಪ್ರತಿಕ್ರಿಯೆ)

ಇದನ್ನು ಬರೆದ ಮೇಲೆ ಇವರು 'ಸದ್ಧರ್ಮ ದೀಪಿಕೆ' ಕಾರ್ಯಾಲಯದಲ್ಲಿ ದರ್ಶನ ವನ್ನಿತ್ತಿದ್ದರು. ಸ್ವಲ್ಪಕಾಲ ಮಾತನಾಡಿದುದರಲ್ಲಿ ನನಗೆ ತಿಳಿದ ಕೆಲವು ವಿಷಯ ಗಳನ್ನು ಹೇಳಿದೆನು. ವಾಚಕರ ಪರಾಂಬರಿಕೆಯ ಬಗ್ಗೆ ಮುಂದೆ ಸದ್ಧರ್ಮದೀಪಿಕೆ ಯಲ್ಲಿ ಇವರು ಕೇಳಿದ ಅಂಶಗಳ ಉತ್ತರವನ್ನು ಪ್ರಕಟಿಸುವೆನು.

ಪ್ರಕಾಶಕ
(ಸಂ. ೮೯-೯೦. ಪು. ೨೪-೨೬)

೧೨) ಶ್ರೀಮನ್ನಿರಂಜನ ಶ್ರೀ ಸಂಗಮನಾಥ ಸ್ವಾಮಿಗಳು ಬಿಲ್ಲಳ್ಳಿ ವಿರಕ್ತಮಠ ಚೆನ್ನಗಿರಿ ಪೋಷ್ಟ. — ಬಿಲ್ಲಳ್ಳಿ ೬-೫-೧೯೫೦

ಮಹನಿಯರೇ, ತಾವು ಬರೆಯುತ್ತಿರುವ ಪಂಚಾಚಾರ್ಯರ ಚರಿತ್ರೆಯನ್ನು ಬಹಳ ಶ್ರಮವಹಿಸಿ ಶೋಧಮಾಡಿ ಬರೆಯುತ್ತಿರುವುದನ್ನು ನೋಡಿದರೆ ತಮಗೆ ನಾವು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ತೀರದು. ಪಂಚಾಚಾರ್ಯರ ನಿಜವಾದ ವಿಚಾರ ತಮ್ಮ ಪತ್ರಿಕೆಯಿಂದ ಗೊತ್ತಾಗುತ್ತೆ. ಬಸವಾದಿ ಪ್ರಮಥರ ನಿಂದೆಯು ನಿಜವಾದ ವಿಚಾರ ಹೊರಗೆ ಹಾಕುವ ತಮ್ಮ ಚರಿತ್ರೆಯಿಂದ ಇನ್ನು ಮೇಲೆ ನಿಲ್ಲುತ್ತೆ. ಇನ್ನು ಮೇಲಾದರೂ ಪಂಚಪೀಠದವರು ಸಮತಾ ಭಾವನೆ ಹೊಂದಿದರೆ, ವೀರಶೈವಸಮಾಜವು ಸುಧಾರಿಸಿಕೊಳ್ಳುತ್ತೆ. ತಮ್ಮ ಸದ್ಧರ್ಮದೀಪಿಕೆಯನ್ನು ಓದುವುದಕ್ಕೆ ಬಹಳ ಪ್ರೀತಿ ತಮ್ಮ ಪತ್ರಿಕೆಗೆ ನಾವು ಯಾವಾಗಲೂ ಚಂದಾದಾರರಾಗಲು ಸಿದ್ಧರಿದ್ದೇವೆ. (ಇದೇ ಸ್ವಾಮಿಗಳ ಇನ್ನೊಂದು ಪತ್ರ. ತಾ. ೧೦-೬-೫೦)

ನಾವು ಅನೇಕ ಪತ್ರಿಕೆಗಳನ್ನು ತರಿಸುತ್ತೇವೆ. ಅವೆಲ್ಲದರಕ್ಕಿಂತ ತಮ್ಮ ಪತ್ರಿಕೆಯನ್ನು ಓದಲು ನಮಗೆ ಬಹಳ ಪ್ರೀತಿಯು. ... ವೀರಶೈವ ಧರ್ಮದ ತಿರುಳನ್ನು ತಿಳಿಯುವುದಕ್ಕೆ ಈಗ ಸದ್ಯಕ್ಕೆ 'ಶಿವಾನುಭವ' 'ಸದ್ಧರ್ಮದೀಪಿಕೆ' ಬಿಟ್ಟರೆ ಮತ್ಯಾವವೂ ಇಲ್ಲವು ಆ ವಿಚಾರದಲ್ಲಿ ತಮ್ಮ ಉಪಕಾರವನ್ನು ಸ್ಮರಿಸಬೇಕಾಗಿರುತ್ತೆ....

(ಪ್ರತಿಕ್ರಿಯೆ)

ಹೀಗೆ ಬರೆದು ಪತ್ರಿಕೆ ಸರಿಯಾಗಿ ಬರುವುದಿಲ್ಲವೆಂದು ಆಕ್ಷೇಪಿಸುತ್ತಾರೆ. ಅದು ಸರಿಯೇ. ಮುದ್ರಣದ ಕೆಲಸವು ಜಾಗ್ರತೆಯಾಗಿ ಆಗಲೆಂದು ಮೊಳೆಗಳನ್ನು ಮುದ್ರಣಾಲಯಕ್ಕೆ ಮುದ್ರಣಕ್ಕೆ ಮಾತ್ರ ಕಳುಹಿಸುವಂತೆ ಮಾಡಿದ್ದರೂ ಕೆಲಸವು ಜಾಗ್ರತೆ ಆಗಲೊಲ್ಲದು, ಎಷ್ಟು ತ್ವರಿತ ಮಾಡಬೇಕೆಂದರೂ ಕೆಲವು ತೊಂದರೆಗಳು ಬರುತ್ತಲಿವೆ. ಅವುಗಳನ್ನು ಆದಷ್ಟು ಬೇಗನೆ ಸರಿಪಡಿಸಬೇಕೆಂದು ಸಂಪಾದಕರ ಇಷ್ಟವಿದೆ. ಅಲ್ಲಿನ ವರೆವಿಗೂ ೪೮೦ ಪುಟಗಳು ಮುದ್ರಣವಾದರೆ ಒಂದು ವರ್ಷವಾಯಿತೆಂದು ಭಾವಿಸಬೇಕೆಂದು ಹಿಂದೆ ಚಂದಾದಾರರಿಗೆ ವಿಜ್ಞಾಪಿಸುತ್ತಿದ್ದಂತೆ ಈಗಲೂ ವಿಜ್ಞಾಪಿಸುತ್ತೇನೆ.[೧]

(ಸಂ-೯೧-೯೨ ಪು. ೩೭)

೧. ಇಲ್ಲಿ ವ್ಯವಸ್ಥಾಪಕ ಎಂದು ಕೆಳಗೆ ಹೆಸರಿಸಿದ್ದಾರೆ.

೧೩) ಬಸವಪ್ಪ ದೇವರು
ಪರಶುಗೌಡನ ಪಾಳ್ಯ.

ನಾನು ಮೂರು ವರ್ಷಗಳಿಂದಲೂ ತಮ್ಮ ಚಂದಾದಾರನಾಗಿ ತಮ್ಮ ಲೇಖನಕ್ಕೆ ಬೆರಗಾಗಿದ್ದೇನೆ. ಹಿಂದೆಂದೂ ಕಾಣದ ಬಸವೇಶ್ವರನ ಕಾಲ, ಪಂಚಾಚಾರ್ಯರ ಕಾಲವೆಂಬ ಲೇಖನಗಳೂ ತಮ್ಮ ರಾಜಕೀಯ ಲೇಖನಗಳೂ ಅಸಮಾನವಾಗಿವೆ.*

(ಸಂ. ೯೫–೯೬ ಪು ೭.)

೧೪) ಜಿನಕೆರೆ ಮುರಿಗಪ್ಪ
ಸ್ವಾಮಿಕಿ.

ನಿಮ್ಮ ಪತ್ರಿಕೆಯಲ್ಲಿ ಬರೆದ ಅದ್ವೈತ ತತ್ತ್ವದ ವಿಷಯವು ನ್ಯಾಯವಾಗಿದ್ದರೂ ನಿಮ್ಮ ಮೇಲೆ ಟೀಕಾ ಬರೆದಿರುವ M. L. ನಾಗಣ್ಣ ಇವರ ವಿಚಾರ ವಿಮರ್ಶೆಯನ್ನು ನೋಡಿದರೆ......ಕೆಲವರಿಂದ...... ಅವರ ತತ್ತ್ವವನ್ನು ಎತ್ತಿ ಕಟ್ಟುವವರಾಗಿದ್ದಾರೆ ಎಂದು ಭಾಸವಾಗುತ್ತದೆ......ಈ ದಿವಸ ಪ್ರಭಾಪತ್ರಿಕೆಯಲ್ಲಿ ಅವರು ಟೀಕಾ ಮಾಡಿದ ವಿಷಯವೇ ಇತ್ತು. ಅನ್ಯಾಯದ ಪರಮಾವಧಿ‡

(ಪ್ರತಿಕ್ರಿಯೆ)

ಸದ್ಧರ್ಮದೀಪಿಕೆಯು ಅಲ್ಪಸ್ವಲ್ಪವಾಗಿ ಸಮಾಜಸೇವೆಯನ್ನು ಮಾಡುತ್ತಿದೆ ಎಂಬುದು ಇವುಗಳಿಂದ ತಿಳಿದುಬರುತ್ತದೆ. ತಾತ್ವಿಕ ವಿಷಯಗಳನ್ನು ತಿಳಿದವರಾದ ಮತ್ತು ಇತಿಹಾಸ ಸಂಶೋಧಕರಾದ ಪಂಡಿತರು ವಿಮರ್ಶಾತ್ಮಕ ಲೇಖನಗಳನ್ನು ಬರೆದರೆ, ಸದ್ಧರ್ಮದೀಪಿಕೆಯಲ್ಲಿ ಇದ್ದಕ್ಕಿದ್ದಂತೆ ಪ್ರಕಟಿಸುವುದಲ್ಲದ ಅದರ ಸಂಬಂಧದ ನಮ್ಮ ಅಭಿಪ್ರಾಯವನ್ನೂ ಪ್ರಕಟಿಸುವೆವು. ಹೀಗಾದರೆ ನಿಜವಾದ ಸಂಗತಿಗಳು ಬೇಗನೆ ಪ್ರಚಾರಕ್ಕೆ ಬರುವುದಕ್ಕೆ ಅವಕಾಶವಾಗುತ್ತದೆ. 'ಸತ್ಯಂವದ ಪ್ರಿಯಂವದ' ಎಂಬಂತೆ ಸತ್ಯವಾಗಿ ಪ್ರಿಯವಾದುದನ್ನು ಹೇಳಿಬಿಡಬೇಕೆಂದು ನಮ್ಮ ಯೋಚನೆಯಿದ್ದರೂ ಅಪ್ರಿಯವೆಂಬವರಿಗೆ 'ಅಪ್ರಿಯಸ್ಯಚ ಪಥ್ಯಸ್ಯವಕ್ತಾಶ್ರೋತಾಚ ದುರ್ಲಭಃ' ಎಂಬ ಪಂಚತಂತ್ರದ ಉಕ್ತಿಯಂತೆ ಅಪ್ರಿಯವಾದರೂ ಹಿತಕಾರಿಗಳಾಗಿ ಇದರಲ್ಲಿನ ವಿಷಯಗಳಿವೆ ಎಂದು ನಮ್ಮ ಭಾವನೆ.

ಪ್ರಕಾಶಕ
(ಸಂ ೯೫–೯೬– ಪು ೭–೮)

---

* ತಾರೀಖು ವಗೈರೆ ಏನನ್ನೂ ಪ್ರಕಾಶಕರು ಹಾಕಿಲ್ಲ.
‡ ಇಲ್ಲಿಯೂ ತಾರೀಖು ವಗೈರೆ ಏನನ್ನೂ ತಿಳಿಸಿಲ್ಲ.

೧೫) ವಿರೂಪಾಕ್ಷಪ್ಪ ಜವಳಿ ‡

ಮಹನಿಯರೇ, ನೀವು ಕಳಿಸಿದ ನಿಮ್ಮ ಪತ್ರಿಕೆಯ ಪ್ರತಿಯು ಮುಟ್ಟಿತು. ವಚನ ಮಂಟಪದ ಕೆಲಸದ ಬಗ್ಗೆ ತಮ್ಮ ಪ್ರೋತ್ಸಾಹದ ನುಡಿಗಳನ್ನು ಓದಿದೆನು. ನೀವು ಮಾಡುವ ಕೆಲಸವನ್ನು, ಹಳಕಟ್ಟಿ ಅವರು ಮಾಡುವ ಕೆಲಸವನ್ನು ವಚನ ಮಂಟಪವು ಮಾಡುವ ಕೆಲಸವನ್ನು ನಿಜವಾಗಿ ನೋಡಿದರೆ ಸ್ವಾಮಿಗಳೆಂಬುವರು ಮಾಡತಕ್ಕದ್ದು. ಆದರೆ ಅವರು ಪವಿತ್ರ ಕೆಲಸಗಳಾದ ಸಾಹಿತ್ಯ ಸೇವೆ, ತತ್ತ್ವಪ್ರಚಾರ, ಸಮಾಜಸೇವೆ ಮರೆತಿದ್ದಾರೆ. ಕಾರಣ ಸಮಾಜದಿಂದ ಪೋಷಣೆ ಮನ್ನಣೆ ಪಡೆಯಲು ಅವರು ಅನರ್ಹರಾಗಿದ್ದಾರೆ. ಹಳಕಟ್ಟಿಯವರಿಗೂ ನಿಮಗೂ ನಾನು ಸ್ವಾಮಿಗಳೆಂದು ಸಂಬೋಧಿಸುತ್ತೇನೆ.

ಇನ್ನು ಜಾತಿಯಕಲ್ಪನೆಯು ಇಂಡಿಯಾ ದೇಶವನ್ನು ಸಾಕಷ್ಟು ಹಾಳುಮಾಡಿದೆ. ಹಳೆಯಕಾಲದಲ್ಲಿ ಸ್ವಾರ್ಥದಿಂದ ಕಲ್ಪಿಸಿದ ನಾಲ್ಕುಜಾತಿಗಳೇ ಧರ್ಮವೆಂದು ಪ್ರತಿಪಾದಿಸುವುದು ನಮಗೆ ಈಗ ಬೇಕಾಗಿಲ್ಲ. ಅವು ನನ್ನ ದೃಷ್ಟಿಯಿಂದ ಅವಾಚ್ಯ ಮತ್ತು ಅಪವಿತ್ರ ಶಬ್ದಗಳು.(...) ದೇವ ಮನುಷ್ಯ ಸಂಬಂಧವನ್ನು ಹೇಳುವುದು ಮಾತ್ರ ಧರ್ಮ. ಮನುಷ್ಯ ಮನುಷ್ಯ ಸಂಬಂಧವನ್ನು ಹೇಳುವುದು ಸಮಾಜ ವಿಜ್ಞಾನ.ಸಮಾಜ ವಿಜ್ಞಾನದಲ್ಲಿ ಕೈಹಾಕಲು ಧರ್ಮಕ್ಕೆ ಅಧಿಕಾರವಿಲ್ಲ. ಯಾವುದೇ ಅರ್ಥದಲ್ಲಿಯಾಗಲಿ ಜಾತಿಯ ವಿಚಾರಕ್ಕೆ ನಿಮ್ಮ ಪತ್ರಿಕೆಯು ಎಡೆಗೊಟ್ಟರೆ ದಯವಿಟ್ಟು ನಿಮ್ಮ ಪತ್ರಿಕೆಯನ್ನು ನನಗೆ ಕಳಿಸಬೇಡಿ.

ತಮ್ಮ ವಿರೂಪಾಕ್ಷಪ್ಪ ಜವಳಿ.
(ಸಂ. ೧೦೧-೧೦೨-ಪು. i)

---

‡ ತಾರೀಖು ಊರು ಇತ್ಯಾದಿ ಯಾವ ವಿವರವೂ ಸಿಕ್ಕುವುದಿಲ್ಲ. ಬಹುಶಃ ಜವಳಿಯವರು ಭಾರತಕ್ಕೆ ಬಂದಮೇಲೆ ಧಾರವಾಡದಲ್ಲಿ ಅವರು ವಚನ ಮಂಟಪವನ್ನು ಸ್ಥಾಪಿಸಿದ ನಂತರ ಬರೆದ ಪತ್ರವಾಗಿರಬೇಕು. ಇದಕ್ಕೂ ಪೂರ್ವದಲ್ಲಿಯೇ 95-96ನೇಯ ಸಂಚಿಕೆಯಲ್ಲಿ ಜವಳಿಯವರು ವಚನ ಮಂಟಪವನ್ನು ಸ್ಥಾಪಿಸಿದ ಬಗ್ಗೆ ಬಸವೇಶ್ವರನ ವಚನಗಳನ್ನು ಇಂಗ್ಲೀಷ ಹಿಂದಿ ಭಾಷೆಗೆ ಭಾಷಾಂತರಿಸುವ ಬಗ್ಗೆ ವಿವರಣೆ ನೀಡಿದ್ದಾರೆ (ಪು.೮).ಆ ಗ್ರಂಥಕ್ಕೆ ಇಂಗ್ಲೀಷಸಲ್ಲಿ ಅಥವಾ ಕನ್ನಡದಲ್ಲಿ ಮುನ್ನುಡಿಯನ್ನು ಬರೆಯಲು 1) ಬಸವಣ್ಣನವರು ಬಾಗಲಕೋಟಿಯವರಿಗೆ 2) ನವಕಲ್ಯಾಣಮಠದ ಕುಮಾರಸ್ವಾಮಿಗಳಿಗೆ, 3) ಎಸ್. ಎಂ. ಹುಣಿಶಾಳ ಅವರಿಗೆ ವಿವಿಧ ವಿಷಯಗಳನ್ನು ಕೊಟ್ಟು ಬರೆಯಲು ಕೇಳಿಕೊಂಡಿರುತ್ತಾರೆ. ಶ್ರೀ ಚನ್ನಮಲ್ಲಿಕಾರ್ಜುನ ಅವರಿಗೂ "ಅನುಭವ ಮಂಟಪ ಮತ್ತು ಅದರ ವಿಶೇಷ ಸಂಗತಿಗಳು" ಎಂಬ ವಿಷಯವನ್ನು ಕೊಟ್ಟು ಜಾಗತಿಕ ಧರ್ಮಾಚರಣೆಯೊಡನೆ ಹೋಲಿಸಿಬರೆಯಬೇಕೆಂದು ಕೇಳಿಕೊಂಡ ಬಗ್ಗೆ ವಿವರಣೆ ಇದೆ. ವಚನ ಮಂಟಪದ ಪದಾಧಿಕಾರಿಗಳು ಈ ಠರಾವನ್ನು ೨೦-೧೧-೫೦ ರಂದು ಕೈಕೊಂಡ ಹಾಗೆ ಗೊತ್ತಾಗುವುದು.

(ಸಂ. ೯೫-೯೬. ಪು. ೮.)

(ಪ್ರತಿಕ್ರಿಯೆ)

ಜಾತಿಯ ವಿಚಾರಕ್ಕೆ ಎಡೆಗೊಡುವುದನ್ನು ತಪ್ಪಿಸುವುದಕ್ಕಾಗಿಯೇ ಈ ಪತ್ರಿಕೆಯು ಬಹಳವಾಗಿ ಪ್ರಯತ್ನ ಮಾಡುತ್ತಲಿದೆ. ವೀರಶೈವರಲ್ಲಿ ಕೆಲವರು ತಮ್ಮ ತತ್ತ್ವದ ನಿಶ್ಚಯಕ್ಕೆ ವಿರುದ್ಧವಾಗಿದ್ದರೂ ಆ ಕಡೆಗೆ ಗಮನ ಕೊಡುತ್ತಿರುವುದಕ್ಕಾಗಿ ಬಹಳ ವಿಷಾದಿಸಬೇಕಾಗಿದೆ. ಈಗಿನ ಜಾತಿಗಳ ಹಿರಿಯುತನವನ್ನು ಹೊಂದಿರುವ (...)ರು ಎನಿಸಿಕೊಂಡಿರುವವರೂ ಆ...ವು ಸ್ಥೂಲತನುವಿಗೆ ಇಷ್ಟಲಿಂಗ ಸಂಬಂಧವನ್ನು ಅಂಗೀಕರಿಸಿ ಮನುಷ್ಯನನ್ನು ದೇವನನ್ನಾಗಿ ಮಾಡುವುದಿಲ್ಲ.(Super human) ಭಾರತೀಯ ಧರ್ಮಗ್ರಂಥಗಳಲ್ಲಿ ಹೇಳಿರುವಂತೆ ಎಲ್ಲ ಜಾತಿಗಳಿಗೂ ಶ್ರೇಷ್ಠವೆನಿಸಿಕೊಂಡ ಅತಿವರ್ಣ (ವರ್ಣಗಳನ್ನು ಮೀರಿದವನು=ವಚನಗಳನ್ನು ತ್ಯಾಜ್ಯ ಮಾಡಿದವನು) ಆಗಿರುವುದೇ ಉತ್ತಮವಾದುದು.ಇನ್ನೂ ಯೋಚಿಸುವುದಕ್ಕೆ ಹೋಗದೆ ವೀರಶೈವ ಸಮಾಜವು ಜಾತಿಯಿಂದ ಬಿಡಲ್ಪಟ್ಟು ಜಾತಿಗೆ ಅಂಟಿಕೊಳ್ಳದೆ ನಿರ್ಲಿಪ್ತವಾಗಿರುವಂತೆ ಬೇಗನೆ ಆಗಲಿ ಎಂದರೆ ತಮ್ಮ ದೋಷಗಳನ್ನು ತಾವು ತಿದ್ದಿಕೊಂಡು ನಿಜವಾದ ವೀರಶೈವರಾಗಲಿ.

ಪ್ರಕಾಶಕ

(ಸಂ. ೧೦೧-೧೦೨ ಪು. i ರಿಂದ ii)

೧೬) ಬೆಳಗಾವಿ ಜಿಲ್ಲಾ ಚಿಕ್ಕೋಡಿಯಿಂದ *

ವೀರಶೈವ ಧರ್ಮಜ್ಞರಲ್ಲಿ ವಿಜ್ಞಾಪನೆ.

ಸೌ. ಪಾರ್ವತೀಬಾಯಿ ಹುಂಬರವಾಡಿ ಇವರು ತಾ. ೨೩-೩-೫೧ರ ಸಂದೇಶ ಪತ್ರಿಕೆಯಲ್ಲಿ ಪತಿವ್ರತೆಯರು ಅಕ್ಕಮಹಾದೇವಿಯ ವೈಭವ ಮೂರ್ತಿಯನ್ನು ಪೂಜಿಸಬೇಕೆಂದು ತಮ್ಮ ಹೃದ್ಗತ ಐಸಿರಿಯ ಆಸೆಯನ್ನು ಪ್ರದರ್ಶನ ಮಾಡಿ ಉಳಿದ ಮಹಿಳೆಯರ ಅಭಿಪ್ರಾಯ ಕೇಳಿದ್ದರಿಂದ ತಾ. ೩೦-೩-೫೧ ರ ಸಂದೇಶ ಪತ್ರದಲ್ಲಿ ಅಕ್ಕನ ಬಳಗದ ಅಧ್ಯಕ್ಷೆ ಸೌ. ಮಲಕವ್ವ ಮಂಟ ಮುಕ್ತೆ ಇವರು ಮೂರ್ತಿ ಪೂಜೆಯು ವೀರಶೈವ ಧರ್ಮಸಮ್ಮತವೆ ? ಎಂದು ಪ್ರಶ್ನೆ ಪೂರ್ವಕ ಉತ್ತರಕೊಟ್ಟು ಮೂರ್ತಿ ಪೂಜೆಗಾಗಿ ವೀರಶೈವ ಧರ್ಮಜ್ಞರ ಸಮ್ಮತಿಬೇಕು ಎಂದು ಹೇಳಿದ್ದರಿಂದ ಈಗ ಪಂಚಪೀಠದವರಿಗೂ ಪಂಚಶೂನ್ಯ ಸಿಂಹಾಸನಾಧೀಶ್ವರರಿಗೂ ವಿದ್ಯಾವಂತ ಮಹಾಸ್ವಾಮಿಗಳಿಗೂ ಪಂಡಿತ ಶಾಸ್ತ್ರಿಗಳಿಗೂ ಅರಿಕೆಮಾಡಿಕೊಂಡಿದ್ದೇವೆ. ಉತ್ತರ ಬಂದನಂತರವೃತ್ತಪತ್ರಿಕೆ ಹಸ್ತಪತ್ರಿಕೆಯು ಜಾಹೀರು ಮಾಡಲಾಗುವುದು.

---

* ಈ ಗ್ರಾಮದವರು ಸದ್ಧರ್ಮದೀಪಿಕೆಯ ಸಂಪಾದಕರಿಗೆ ಪತ್ರಬರೆದು ತಮಗೆ ಬಂದ ಕೆಲವು ಸಂಶಯಗಳಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಕೇಳಿಕೊಂಡಿದ್ದಾರೆ. ಇವರ ಈ ಪತ್ರದಲ್ಲಿ ತಾರೀಖು, ಬರೆದವರ ಹೆಸರು ಏನೂ ಇಲ್ಲ. ಅಲ್ಲಿನ ವೀರಶೈವ ಸಮಾಜದ ಕೆಲವರು ಇದನ್ನು ಬರೆದಿದ್ದಾರೆಂದು ತಿಳಿಯಬೇಕು. (ಸಂ. ೧೦೧-೧೦೨ ಪು ii)

೧) ವೀರಶೈವರು ಲಿಂಗದ ಹೊರತು ಅನ್ಯದೇವತಾರಾಧನೆ ಮಾಡಕೂಡ ದೆಂದು ಸೂಕ್ಷ್ಮಾಗಮ, ಪಾರಮೇಶ್ವರಾಗಮ, ಸಿದ್ಧಾಂತ ಶಿಖಾಮಣಿ, ಲಿಂಗಧಾರಣ ಚಂದ್ರಿಕೆಮೊದಲಾದ ಗ್ರಂಥಗಳಲ್ಲಿಯೂ, ಬಸವಣ್ಣ......ಮೊದಲಾದ ಶಿವಶರಣರ ವಚನಗಳಲ್ಲಿಯೂ ಉಕ್ತವಾಗಿದೆಯೆಂದು ಕೇಳಿದ್ದೇವೆ. ಅದು ನಿಜವೊ ? ಲಿಂಗದ ಹೊರತು ಅನ್ಯಪೂಜೆ ಮಾಡಿದರೆ ಮಹಾಶಾಪವ ನರಕವೆಂದು ಶರಣರು ಹಳಿದಿದ್ದಾರೆಂದು ತೀಳಿದ್ದೇನೆ. ಇದು ಯಥಾರ್ಥವೋ? ಈ ಎಲ್ಲ ಮಹಾತ್ಮರು ಉಪದೇಶಿಸಿರುವ ಲಿಂಗಾಚಾರವನ್ನು ಕೇಳಿ ತಿಳಿದಬಳಿಕ ಅಕ್ಕಮಹಾದೇವಿಯ ಮೂರ್ತಿಯನ್ನು ಕಂಡು ಸ್ಥಾಪಿಸಿ ಪೂಜಿಸುವುದು ಯುಕ್ತವೆ?.......(೨) ಹೊಟ್ಟೆಪಾಡಿಗಾಗಿ ಸ್ಥಾವರಲಿಂಗ ಪೂಜೆ ಮಾಡುತ್ತ ಬಂದುದು ಗ್ರಾಹ್ಯನಿಯಮವಲ್ಲ. ಶೈವಾಚಾರವನ್ನು ದೂರಮಾಡುತ್ತ ಲಿಂಗಾಂಗಿಗಳ ಆಚಾರವನ್ನು ಆಚರಿಸುತ್ತ ಹೋಗುವುದು ಯೋಗ್ಯವಲ್ಲವೆ?.........*

(ಸಂ. ೧೦೧-೧೦೨ ಪು. ii,iii)

(ಈ ಬಗ್ಗೆ ಶ್ರೀ ಚೆನ್ನಮಲ್ಲಿಕಾರ್ಜುನರ ಸಂಕ್ಷೇಪ ಉತ್ತರ)

'ವೀರಶೈವರು ಗುರುಲಿಂಗ ಜಂಗಮ ಎಂಬ ತ್ರಿಮೂರ್ತಿಗಳ ಹೊರತಾಗಿ ಸ್ಥಾವರಲಿಂಗ ಅಥವಾ ಮೂರ್ತಿಗಳನ್ನು ಪೂಜಿಸಬಾರದು' ಎಂಬ ತತ್ತ್ವವು ಆಚರಣೀಯವಾದುದು. ಪೂರ್ವದ ಪೂಜ್ಯ ಮಹನೀಯರಿಂದ ಅಂಗೀಕರಿಸಲ್ಪಟ್ಟುದು. ಈ ವಿಷಯವಾಗಿ ಮೇಲಿನ ಲೇಖನಕ್ಕೆ ವಿವರವಾದ ಉತ್ತರವನ್ನು ಸದ್ಧರ್ಮದೀಪಿಕೆಯಲ್ಲಿ ಪ್ರಕಟಿಸಲಾಗುವುದು. ಅಕ್ಕಮಹಾದೇವಿಯ ಆಲಯವೊಂದನ್ನು ನಿರ್ಮಿಸಿ ಅದರಲ್ಲಿ ಅಕ್ಕಮಹಾದೇವಿಯ ವಚನ ಶಿವಶರಣರ ವಚನ ಮೊದಲಾದುವುಗಳ ವಿಮರ್ಶೆಯನ್ನು ಮಾಡಬಹುದೇ ಹೊರತು ಮೂರ್ತಿಸ್ಥಾಪನೆ, ಪೂಜೆ, ವೈಭವ, ಮೆರವಣಿಗೆಗಳನ್ನು ನಡೆಸುವುದು ಎಂದೆಂದೂ ಯೋಗ್ಯವಲ್ಲ. ಸಧ್ಯಃ ಇಷ್ಟನ್ನು ಸಂಕ್ಷಿಪ್ತವಾಗಿ ಬರೆದಿದ್ದೇನೆ. ‡ —ಪ್ರಕಾಶಕ.

...ಈಗ ಮೂರ್ತಿಯನ್ನು ಸ್ಥಾಪಿಸಲಿ...ಬೇಕಾದವರು ಪೂಜಿಸಿಕೊಳ್ಳಲಿ ಎಂದು ಸುಮ್ಮನಿದ್ದರೆ ವೀರಶೈವ ಧರ್ಮದ ಕಾರ್ಯವೇ ಇದು ಎಂಬ ಬಗ್ಗೆ ಅರ್ಧಾಂಗೀಕಾರ ಕೊಟ್ಟಂತಾಗುತ್ತದೆ...ಹೊಟ್ಟೆಪಾಡಿಗೆ ಸ್ಥಾವರಲಿಂಗ ಪೂಜೆಮಾಡುವವರಿಗೆ ಅನುಕೂಲ ಕಲ್ಪಿಸಿ ಕೊಟ್ಟಂತಾಗಿ ಮುಖ್ಯವಾದ ಶಿವ ಶರಣರ ವಚನ, ಬೋಧೆ...ಗಳಿಗೆ ಅವಕಾಶ ವಿಲ್ಲವಾಗುತ್ತದೆ. ಈಗ ಅನೇಕ ದೇವಾಲಯಗಳಲ್ಲಿ ವಚನ...ಪುರಾಣ ಓದಬೇಕೆಂಬುವರಿಗೆ

---

* ಇತ್ಯಾದಿಯಾಗಿ ಒಟ್ಟು ಏಳು ಪ್ರಶ್ನೆ ಹಾಕಿದ್ದಾರೆ. ನಾವು (ಸಂಪಾದಕರು) ಮುಖ್ಯವಾದ ಅವರ ಪ್ರಶ್ನೆಯನ್ನು ಮಾತ್ರ ಮೇಲೆ ತಿಳಿಸಿದಂತೆ ಕೊಟ್ಟಿದ್ದೇವೆ. (ಸಂ.)

‡ ಕೆಳಗೆ ಶ್ರೀ ಚೆನ್ನಮಲ್ಲಿಕಾರ್ಜುನರ ಉತ್ತರವನ್ನು ನಾವು ಇನ್ನೂ ಸಂಕ್ಷೇಪಗೊಳಿಸಿ ಮೂಲ ಮಾತಿನಲ್ಲಿಯೇ ಕೊಟ್ಟಿದ್ದೇವೆ.......ಹೀಗೆ ಹಾಕಿದ ಕಡೆ ಸಂಕ್ಷೇಪಗೊಳಿಸಿದ್ದೇವೆ ಎಂದು ತಿಳಿಯಬೇಕು.

ವಿರೋಧವಾದ ಉತ್ತರ:– 'ಇಲ್ಲಿ ಪೂಜೆ ನಡೆಯಬೇಕಾಗಿದೆ. ಗಲಭೆಯಾಗುವ ಕೆಲಸ ಮಾಡಬೇಡಿರಿ'–ಎಂದು ಹೇಳುವುದನ್ನು ಕಂಡಿದ್ದೇವೆ. ಉತ್ತರ ಹಿಂದೂಸ್ಥಾನವಲ್ಲಿ ಅನೇಕ ದೇವಾಲಯುಗಳಲ್ಲಿ ಲಿಂಗ...ಮೊದಲಾದುದನ್ನು ಕಿತ್ತು ಇರುವುದನ್ನು ಪತ್ರಿಕೆ ಗಳಲ್ಲಿ ಓದುತ್ತಿದ್ದೇವೆ. ಆದ್ದರಿಂದ ಶಿವಶರಣರ ಬೋಧೆಯ ಪ್ರಕಾರ ಹೃದಯದಲ್ಲಿನ ಶಿವನನ್ನು ಇಷ್ಟಲಿಂಗ ರೂಪದಲ್ಲಿ ಪೂಜೆಮಾಡುವುದೇ ಉತ್ತಮ...ವೀರಶೈವ ತತ್ತ್ವದ ಪ್ರಕಾರ ಎಲ್ಲರೂ ಶಿವರೂಪರಾಗಲಿಕ್ಕೆ ಅವಕಾಶವಿದ್ದರೂ ಹಾಗೆಮಾಡದೆ ಹಠಾತ್ತಾಗಿ ಬೆರಸಲಿಕ್ಕೆ ಬರುವವರನ್ನು ತಡೆಯಲು ನ್ಯಾಯ ವಿಧಾಯಕವಾದ ಯಾವುದಕ್ಕೂ ಇಲ್ಲ ... ತಕ್ಕ ಸಂಸ್ಕಾರವಿಲ್ಲದೆ ಎಲ್ಲರನ್ನು ಒಂದೇ ಎಂದು ಹೇಳುವುದು ಕತ್ತೆ ಕುದುರೆ ಒಂದೇ ಎಂದು ಹೇಳಿದ ಹಾಗಾಗುತ್ತದೆ. ...ಅಕ್ಕನಬಳಗದವರಾಗಲಿ ಇತರರಾಗಲಿ ತಮ್ಮ ಧರ್ಮದ ನಿಜಸ್ಥಿತಿ ಏನು ? ಎಂಬುದನ್ನು...ತಿಳಿದುಕೊಳ್ಳುವುದು ಅವಶ್ಯಕ ಕೆಲಸ......ಮೂರ್ತಿಪೂಜೆ ಮಾಡುವುದು ವೀರಶೈವ ಧರ್ಮವಲ್ಲ...ಆ ಧರ್ಮವನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋದರೆ ಎಲ್ಲರಿಗೂ ಉತ್ತಮ ಧರ್ಮವಾವು ದೆಂಬುದರ ಕಡೆಗೆ ಗಮನ ಬಿದ್ದು ಎಲ್ಲರೂ ಸುಧಾರಿಸಿಕೊಳ್ಳಲು ಅನುಕೂಲವಾಗುತ್ತದೆ. ಮೂರ್ತಿಪೂಜೆ ಮಾಡುವುದು ವೀರಶೈವ ಧರ್ಮವೆಂದು ಗ್ರಂಥಾಧಾರಕೊಟ್ಟು ಯಾರಾ ದರೂ...ಪ್ರಕಟಿಸಿದರೆ ಅದುಸರಿಯಲ್ಲವೆಂದು ಗ್ರಂಥಾಧಾರದಿಂದ ಪ್ರಕಟಿಸಬಹುದು.

—ಪ್ರಕಾಶಕ

(ಸಂ. ೧೦೧–೧೦೨ ಪು. iii, iv)

(೧೭) ಚನ್ನಪ್ಪ ಉತ್ತಂಗಿ. *

ತಮ್ಮ ಸದ್ಧರ್ಮದೀಪಿಕೆ ಸಂಚಿಕೆ ೯೯–೧೦೦ ಕೈಸೇರಿತು. ಅದಕ್ಕಾಗಿ ಕೃತಜ್ಞ ನಾಗಿದ್ದೇನೆ, ಅದರಲ್ಲಿ ತಾವು ವಿಮರ್ಶೆ ಮಾಡಿರುವಂತೆ 'ಕಿತ್ತನಕೆರೆಯ ವೀರ' ಎಂಬವ ರಿಂದ ರಚಿತವಾದ ಎಲ್ಲ ಪುರಾತನರ ಪುರಾಣವೆಂಬುದೊಂದು ಓಲೆಯ ಗ್ರಂಥವು ತಮ್ಮ ಹಸ್ತಗತವಾದಂತೆ ತಿಳಿಯುತ್ತದೆ. ಅದರಲ್ಲಿ ಅನುಭವ ಮಂಟಪದಲ್ಲಿ ಭಾಗವಹಿಸಿದ ಕೆಲವು ಶಿವ ಶರಣರ ಹೆಸರುಗಳು ಹೇಳೋಣವಾಗಿದ್ದು ಆ ಗುಂಪಿನಲ್ಲಿ 'ಆದಯ್ಯ'ನ ಹೆಸರುಸಹ ಬಂದಿದೆ. ಶ್ರೀಮಾನ್ ಹಳಕಟ್ಟಿಯವರು ಅಭಿಪ್ರಾಯಪಡುವಂತೆ ಆದ ಯ್ಯನು ಅನುಭವ ಮಂಟಪದಲ್ಲಿದ್ದವನಲ್ಲವೆಂದು ತಮ್ಮ ಶಿವಾನುಭವದಲ್ಲಿ ಪ್ರಕಟಿಸಿ ದ್ದಾರೆ. ಅವನು ಬಸವಣ್ಣನವರ ಸಮಕಾಲೀನನೆಂಬುದು ಕವಿಚರಿತೆಯಿಂದ ತಿಳಿದು ಬರು ತ್ತದೆ. ಆದಯ್ಯನ ಬಗ್ಗೆ ಶಿಲಾ ಶಾಸನಗಳಲ್ಲಿ ಏನಾದರೂ ಉಲ್ಲೇಖವಿದೆಯೆ ? ಇದ್ದರೆ ತಿಳಿಸಿದರೆ ಉಪಕಾರ. ಮತ್ತು ಅವನು ಅನುಭವ ಮಂಟಪದಲ್ಲಿ ಭಾಗವಹಿಸಿದ್ದ ಬಗೆಗೆ ತಮ್ಮ ಅಭಿಪ್ರಾಯವೇನು ? ಎಂಬುವನ್ನು ತಿಳಿಸಬೇಕಾಗಿ ವಿನಂತಿ. ಆ ಪಕ್ಷದಲ್ಲಿ,

* ತಾರೀಖು ಇನ್ನಿತರ ಯಾವ ವಿಷಯವೂ ಇಲ್ಲ.

ಆಧಾರ ಸಹಿತವಾಗಿ ತಿಳಿಸಿದರೆ ಉತ್ತಮ. ಈ ವಿಷಯವನ್ನು ಪತ್ರದ್ವಾರ ಸಂಕ್ಷೇಪವಾಗಿ ಕಳಿಸಿದರೆ ಸಾಕು. ಸಾಧ್ಯವಾದರೆ ತಮ್ಮ ಪತ್ರಿಕೆಯಲ್ಲಿ ಆ ಬಗೆಗೆ ಒಂದು ಚಿಕ್ಕಲೇಖನ ವನ್ನು ಬರೆದು ಪ್ರಸಿದ್ಧಿಸಿ ಆ ಪ್ರತಿಯನ್ನು ನನಗೆ ಕಳಿಸಿಕೊಟ್ಟರೂ ಆಗಬಹುದು. ನಾನು ಈಗ ಅವನ ವಚನಗಳನ್ನು ಸಂಗ್ರಹಿಸುವಕಾರ್ಯ ಕೈಕೊಂಡಿದ್ದು ಅದನ್ನು ಹೊರ ಪಡಿಸುವ ಯೋಚನೆಯಲ್ಲಿದ್ದೇನೆ. ಅದರಲ್ಲಿ ತಮ್ಮ ಅಭಿಪ್ರಾಯವನ್ನು ಇದ್ದಂತೆ ಮುದ್ರಿ ಸುವ ಯೋಚನೆ ಇದೆ. ಈ ಸಂಶೋಧನೆಯಕಾರ್ಯದಲ್ಲಿ ತಮ್ಮಿಂದ ವಿಶೇಷವಾದುದೇ ನಾದರೂ ಹೊರಬೀಳುವುದಾದರೆ ಅದನ್ನು ಕಾಣಿಸಬೇಕೆಂಬ ಉದ್ದೇಶದಿಂದ ಈ ಪತ್ರ ವನ್ನು ಬರೆದುದಾಗಿದೆ. ಆದಯ್ಯನು ವರ್ತಕನಾಗಿದ್ದರೂ ಅವನು ಸಂಸ್ಕೃತ ಪಂಡಿತ ನಿದ್ದಂತೆ ಅವನು ಕೊಟ್ಟ ವೇದಾಗ ಯಾದಿಗಳಿಂದ ತಿಳಿದುಬರುತ್ತದೆ. ಈ ಬಗೆಗೂ ತಮ್ಮ ವಿಚಾರವನ್ನು ವಿಶದೀಕರಿಸಿದರೆ ಒಳ್ಳೇದು.

—ಚನ್ನಪ್ಪ ಉತ್ತಂಗಿ.

(ಈ ಪತ್ರಕ್ಕೆ ಉತ್ತರ)

'ಕಿತ್ತನಕೆರೆ ವೀರ' ಎಂಬುವರು ರಚಿಸಿದ 'ಎಲ್ಲ ಪುರಾತನರ ಪುರಾಣದಲ್ಲಿ ಹೇಳಿ ದಂತೆ ಶಿವಶರಣ ಆದಯ್ಯನವರು ಬಸವೇಶ್ವರನ ಸಮಕಾಲೀನರಾಗಿಯೂ ಅವನ ತರು ವಾಯವೂ ಇದ್ದರೆಂದು ಕಂಡುಬರುತ್ತದೆ. 'ಎಲ್ಲ ಪುರಾತನರ ವಚನಗಳು' ಎಂಬ ೩೯೦೦ ವಚನಗಳಿರುವ ದೊಡ್ಡ ಹೊತ್ತಿಗೆಯಲ್ಲಿ ಆದಯ್ಯನ ವಚನಗಳು ದೊರಕುತ್ತವೆ. ಅವು ೩೦೦೦ದ ಕಟ್ಟಿನಲ್ಲಿ ೨೦೬ ಇವೆ. ೯೦೦ ರ ಕಟ್ಟಿನಲ್ಲಿ ೬೧ ಇವೆ ಅವುಗಳನ್ನು ಇನ್ನೂ ಹೊರ ತೆಗೆದುನೋಡಿಲ್ಲ. ಆದಯ್ಯನು ರೇವಣಸಿದ್ಧರು ಮೊದಲಾದ ಆಚಾರ್ಯರ ಹೆಸರನ್ನು ತೆಗೆದುಕೊಂಡಿರುವುದು ಅವನ ವಚನಗಳಿಂದ ತಿಳಿದುಬರುತ್ತದೆ. ಆಚಾರ್ಯರು ಬಸವೇಶ್ವರನ ಅಂತ್ಯಕಾಲದಲ್ಲಿಯೂ ಅವನ ತರುವಾಯವೂ ಇದ್ದರೆಂಬ ಅಂಶವು ಪಂಚಾಚಾರ್ಯರ ಚರಿತ್ರೆ ಮೊದಲನೆಯಭಾಗ 'ಶ್ರೀ ರೇವಣಸಿದ್ಧರು' ಎಂಬುದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

ಕ್ರಿ. ಶ. ೧೧೬೨ ರಲ್ಲಿ ಪ್ರಸಾದಿಭೋಗಣ್ಣನವರು ಶ್ರೀಶೈಲದಲ್ಲಿ ವಚನಗಳನ್ನು ಹಾಡಿದರೆಂದು ತಿಳಿದು ಬರುವುದರಿಂದಲೂ, ಅದರಲ್ಲಿ ನಾಲ್ಕುಜನ ಆಚಾರ್ಯರ ಹೆಸರಿರು ವುದರಿಂದಲೂ, ಪ್ರಸಾದಿಭೋಗಣ್ಣಗಳ ವಚನಗಳನ್ನೊಳಗೊಂಡು ೩೯೦೦ ವಚನಗಳ ಕಟ್ಟು ಇರುವುದರಿಂದಲೂ, ಬಸವೇಶ್ವರನ ತರುವಾಯ ಶ್ರೀ ಶೈಲದಲ್ಲಿ ಕೆಲವು ವಚನ ಗಳ ಸಂಗ್ರಹವು ನಡೆಯಿತೆಂದು ಭಾವಿಸಲು ಅವಕಾಶವಾಗಿದೆ.

ಸೌರಾಷ್ಟ್ರ ಎಂಬುದನ್ನು ತದ್ಭವಮಾಡಿದರೆ 'ಸೊರಟು' ಎಂದಾಗುತ್ತದೆ. ಸೌ. ರಾಷ್ಟ್ರಸೋಮೇಶನು ಆದಯ್ಯನಿಗೆ ದರ್ಶನವಿತ್ತನೆಂದು ಆದಯ್ಯನ ಪುರಾಣವು ಹೇಳುತ್ತದೆ. ಆದಯ್ಯನಿದ್ದ ಪುಲಿಗೆರೆಯನ್ನು 'ವ್ಯಾಘ್ರಪುರಿ' ಎಂದು ಆ ಪುರಾಣ ಗುರು ತಿಸುತ್ತದೆ (?) ಆದುದರಿಂದ ವೀರಶೈವರ ಗ್ರಂಥಗಳಲ್ಲಿನ ಸೌರಾಷ್ಟ್ರವು ಸೊರಟೂರೇ

ಆಗಿದೆ. ಈ ಸಂಗತಿಯು ಒಬ್ಬ ವೃದ್ಧ ಮಹನೀಯರಿಂದ ತಿಳಿದುಬಂದಿದೆ. ಇದು ಪುಲಿಗೆರೆ ಅಥವಾ ಲಕ್ಷ್ಮೇಶ್ವರದ ಹತ್ತಿರ ಇದೆ. ಏಕಾಂತರಾಮಯ್ಯನವರ ಪವಾಡದವಾದವು ಬಿಜ್ಜಳನ ಸಭೆಯಲ್ಲಿ ಬಂದಾಗ ಆವರ ಪರವಾಗಿ ವಾದಿಸಲು ಪುಲಿಗೆರೆ ಅಥವಾ ಲಕ್ಷ್ಮೇಶ್ವರದಿಂದ ಅಗ್ಗಣಿ ಹೊನ್ನಯ್ಯ ಮೊದಲಾದವರು ಬಂದಿದ್ದರೆಂದು ಗ್ರಂಥಗಳಿಂದ ತಿಳಿದು ಬರುತ್ತದೆ. ಏಲೇಶ್ವರದ ಕೇತಯ್ಯ ಎಂಬುದಾಗಿ ಒಬ್ಬ ಶರಣನ ಹೆಸರನ್ನು ತಿಳಿಯುತ್ತೇವೆ. ಅವನಿದ್ದ ಏಲೇಶ್ವರವು ಈಗಿನ 'ಯಲಸೂರು' ಎಂದು ವೃದ್ಧ ಮಹನಿಯರ ಮುಖದಿಂದ ನಾನು ಕೇಳಿದ್ದೇನೆ. ಈ ಯಲಸೂರು ಲಕ್ಷ್ಮೇಶ್ವರದ ಸಮೀಪದಲ್ಲಿದೆ. ಲಕ್ಷ್ಮೇಶ್ವರದಲ್ಲಿ 'ಸುರಗಿಮಠ' ಎಂಬ ಒಂದು ಮುಖ್ಯಮಠವಿದೆ. ವೀರಶೈವರಲ್ಲಿ ಶ್ರೀರೇವಣಸಿದ್ಧರ ಶಾಖೆಯು ಉಪಸೂತ್ರಗಳಲ್ಲಿ 'ಸುರಗಿಯಬಗೆ' ಎಂಬುದೊಂದು ಇದೆ. ಲಕ್ಷ್ಮೇಶ್ವರದ ಮಠದ ದೆಸೆಯಿಂದಲೇ ಈ ಬಗೆಯು ಸೇರಲ್ಪಟ್ಟಿರಬೇಕು. ಆದಯ್ಯ, ಶ್ರೀ ರೇವಣಸಿದ್ಧರು, ಏಕಾಂತ ರಾಮಯ್ಯನವರು ಶ್ರೀ ಬಸವೇಶ್ವರ ಇವರು ಸಮಕಾಲೀನರೆಂದೂ, ಬಸವೇಶ್ವರನ ತರುವಾಯ ಉಳಿದವರೆಲ್ಲರೂ ಬದುಕಿದ್ದರೆಂದೂ ನಿರ್ಣೈಸುವಲ್ಲಿ ಬಾಧಕವೇನೂ ಬರಲಾರದು. ಆದಯ್ಯನು ಸಂಸ್ಕೃತ ಬಲ್ಲವನೇ ಎಂಬುದನ್ನು ಇನ್ನೂ ಶೋಧಿಸಿ ಬರೆಯುವೆನು.

ಶ್ರೀ ಚೆನ್ನಮಲ್ಲಿಕಾರ್ಜುನ
(ಸಂ ೧೦೧–೧೦೨ ಪು. v, vi)

೧೮) ಅ. ಕೊಟ್ಟೂರು ಬಸಪ್ಪ ವಕೀಲರು
ಸಾಗರ. ಡಿಸ್ಟ್ರಿಕ್ಟ್ ಶಿವಮೊಗ್ಗ.

ಕೆಳದಿಮಠದ ಆಸ್ತಿ ಪಾಸ್ತಿಗಳ ವಿಚಾರಣೆಗೆ ಕಮಿಷನ್ ನೇಮಕ.

ಸಾಗರತಾಲ್ಲೂಕಿನಲ್ಲಿ ಭಾರಿ ಪುರಾತನ ಮಠವಾದ ಕೆಳದಿಮಠದಲ್ಲಿ ಕಳೆದ ೧೦-೧೫ ವರ್ಷಗಳ ಅವ್ಯವಸ್ಥೆ ಬಗ್ಗೆಯೂ, ಪಟ್ಟದ ಸ್ವಾಮಿಯು ಲಗ್ನವಾಗಿದ್ದು ೨ ಮಕ್ಕಳ ತಂದೆಯಾಗಿ ಆಶ್ರಮ ಭಾಗವಾಗಿದ್ದ ಆಸ್ತಿಗಳು ದುರುಪಯೋಗವಾದ ಬಗ್ಗೆ ಇಲ್ಲಿಯ ಪ್ರಮುಖ ವೀರಶೈವರು ೨೮–೪–೫೦ ರಲ್ಲಿ ಸರಕಾರಕ್ಕೆ ವಿಶೇಷ ಮನವಿ ಮಾಡಿಕೊಂಡಿದ್ದರ ಬಗ್ಗೆ (೧) ಸರಕಾರ ಶಿವಮೊಗ್ಗ ಜಿಲ್ಲೆಯ ಡೆ॥ ಕಮಿಷನರು, (೨) ಶ್ರೀ ಟಿ. ಬಸಪ್ಪಗೌಡರು B.A. L L.B. (೩) ಶ್ರೀ ಕೆ. ಮರಿಯಪ್ಪ B.Sc.LL.B. ಈ ಮೂರು ಜನರ ಕಮಿಷನ್ ನೇಮಿಸಿದ್ದಾರೆ. ಇವರು ಶೀಘ್ರದಲ್ಲಿ ಕ್ರಮ ಕೈಕೊಳ್ಳುವರು. ಇದೇ ರೀತಿ ಇನ್ನೂ ಮಲೆನಾಡಿನಲ್ಲಿ ಅನೇಕ ವೀರಶೈವ ಮಠಗಳು ಧರ್ಮ ಮೂಢ ಭಕ್ತಿ ಸೋಗಿನಲ್ಲಿ ನಾಶಹೊಂದುತ್ತಲಿವೆ.ಕೆಲವು ಮಠಗಳ ಆಸ್ತಿಯನ್ನು ಕೆಲವು ಸ್ವಾರ್ಥಿಗಳು ಕೊಂಡಿದ್ದಾರೆ. ಕೆಲವು ದುರ್ವಿನಿಯೋಗ ಆಗಿವೆ. ಇದನ್ನು ಕಂಡ ವೀರಶೈವರು ನೊಂದಿದ್ದಾರೆ.

(ಪ್ರತಿಕ್ರಿಯೆ)

—ಹೀಗಾಗಿ ಈಗಿನ ಸ್ವಾಮಿಗಳಿಗಿಂತ ಪೂರ್ವದಲ್ಲಿ ಪೂಜ್ಯರಾದ ಸ್ವಾಮಿಗಳ ಅಧೀನವಾಗಿ, ಪ್ರಸಿದ್ಧವಾಗಿ ಮೆರೆಯುತ್ತಿದ್ದ ಮತ್ತು ವೀರಶೈವ ಸಮಾಜದಲ್ಲಿ ಬಹು ಮುಖ್ಯವಾಗಿ ಅನೇಕ ಸಮಾಜಕಾರ್ಯಗಳಿಗೆ ಆಶ್ರಯಕೊಟ್ಟು ಸಮಾಜ ರಕ್ಷಣೆಮಾಡಿದ ಮಠವು ಇಂದು ಕಮಿಟಿಯ ಸ್ವಾಧೀನವಾಗುವ ಕಾಲವು ಬಂದಿದೆ. ಈ ವಿಷಯದಲ್ಲಿ ಮುಂದೇನು ನಡೆಯುವುದೆಂಬುವನ್ನು ಯಾವ ಮಹನೀಯರು ತಿಳಿಸಿದರೂ ಪ್ರಕಟಿಸಲು ಸಿದ್ಧರಾಗಿದ್ದೇವೆ.

ಮುಖ್ಯಮುಖ್ಯ ಮಠಗಳ ಸ್ವಾಮಿಗಳಾದವರು ಈಗ ಜಾಗ್ರತೆಯೊಡನೆ ತಮ್ಮ ಅಧಿಕಾರವನ್ನು ನಡೆಸುವ ಕಾಲವಿದು. ಯೋಗ್ಯ ರೀತಿಯಲ್ಲಿ ಅವರ ಏರ್ಪಾಡುಗಳಿಲ್ಲ ದಿದ್ದರೆ ಸಮಾಜವಾಗಲಿ, ರಾಜಕೀಯವಾಗಲಿ ಅದರಲ್ಲಿ ಕೈಹಾಕದೆ ಬಿಡುವುದಿಲ್ಲ ಎಂಬುದನ್ನು ಅವರು ಚೆನ್ನಾಗಿ ತಿಳಿದುಕೊಂಡಿರಲಿ......(ತಾರೀಖು ವಗೈರೆ ಏನೂ ಇಲ್ಲ)

—ಪ್ರಕಾಶಕ

(ಸಂ. ೧೦೧–೧೧೨ ಪು. vi, vii)

(೧೯) ಅಹಮ್ಮದ್ ಷರೀಫ್

ಕನ್ನಡ ಪಂಡಿತ ಗೌ. ಹೈಸ್ಕೂಲ್
ಕೊರಟಗೆರೆ.

ಶ್ರೀಯುತರಿಗೆ ವಂದನೆಗಳು,

ತಮ್ಮ ಅಮೋಘಮಾಸ ಪತ್ರಿಕೆ 'ಸದ್ಧರ್ಮದೀಪಿಕೆ'ಯನ್ನು ಕೆಲಕಾಲದಿಂದಲೂ ಉಚಿತವಾಗಿ ನನ್ನ ತಿಪಟೂರು ವಿಳಾಸಕ್ಕೆ ಕಳಿಸುತ್ತಿದ್ದೀರಿ. ಅದಕ್ಕಾಗಿ ನನ್ನ ಅನೇಕ ಕೃತಜ್ಞತೆಗಳು......ತಮ್ಮ ಮಾಸಪತ್ರಿಕೆಯನ್ನು ಅತ್ಯಂತ ಆಸಕ್ತಿಯಿಂದ ಓದುತ್ತಿದ್ದೇನೆ. ಮುಖ್ಯವಾಗಿ 'ಆತ್ಮವಿಚಾರ' ಪತ್ರಿಕೆಗೆ ನೀವು ಕೊಟ್ಟಿರುವ ಸಮಾಧಾನಗಳು ಗಮನಾರ್ಹವಾಗಿವೆ. ಏಕೇಶ್ವರವಾದಿಗಳು, ಅಮೂರ್ತೋಪಾಸಕರೂ ಆದ ನಮ್ಮಂತ ಹವರಿಗೆ ಓದಲರ್ಹವಾಗಿವೆ. ತಮ್ಮ ಭಾಷಾ ಸೇವೆಯಂತೂ ಪ್ರಶಂಸನೀಯವಾದುದು. ಸಮಯದೊರೆತಲ್ಲಿ ತಮ್ಮ ಪತ್ರಿಕೆಯ ಲೇಖಕರಲ್ಲಿ ಭಾಗವಹಿಸಬೇಕೆನ್ನುತ್ತದೆ. ಆದರೆ ತಮ್ಮ ಪತ್ರಿಕೆಯು ವೀರಶೈವ ಮತದ ತತ್ತ್ವಗಳಿಗೆ ಮಾತ್ರ ಮೀಸಲಾಗಿದೆಯೆಂದು ಹಿಂಜರಿಯಬೇಕಾಗಿದೆ......

ಇತಿ ಕನ್ನಡಿಗ
ಅಹಮ್ಮದ್ ಷರೀಫ್

(ಪ್ರತಿಕ್ರಿಯೆ)

ಇವರು ರಾಜಕೀಯ ಹೈಸ್ಕೂಲ್ ಕನ್ನಡ ಪಂಡಿತರು ಎಂಬುದು ಅವರ ವಿಳಾಸದಿಂದ ಗೊತ್ತಾಗುತ್ತದೆ. ಇವರ ಅಪೇಕ್ಷೆಯ ಪ್ರಕಾರ....ಒಂದು ಮಾಸಪತ್ರಿಕೆಯು ಕಳುಹಿಸಲ್ಪಡುತ್ತಲಿತ್ತು. ಅತಿವರ್ಣಾಶ್ರಮಕ್ಕೆ ಸೇರಿದ ಅಭಿಪ್ರಾಯದ ಪ್ರಕಾರ ನಿರಾಕಾರ ವಸ್ತುವಿನ ಅನುಸಂಧಾನವು ವೀರಶೈವರಲ್ಲಿ ಇರುವುದರಿಂದ ನಿರ್ಗುಣಾರಾಧಕರಿಗೆ ಏಕೇಶ್ವರ ವಾದಿಗಳಿಗೆ ವೀರಶೈವರ ಅಭಿಪ್ರಾಯವು ಸರಿಗೂಡುತ್ತದೆ. ನಿರ್ಗುಣೋಪಾಸಕರು ಮೂರ್ತಿಪೂಜೆಯನ್ನು ಮಾಡುವುದಿಲ್ಲ. ಉಪನಿಷತ್ತುಗಳೂ ಈ ಅಭಿಪ್ರಾಯಗಳನ್ನು ಒಪ್ಪುತ್ತವೆ. ಮಹಮ್ಮದೀಯರೂ ಏಕೇಶ್ವರ ವಾದಿಗಳು. ನಿರಾಕಾರನಾದ ಒಬ್ಬ ದೇವನು ಉಂಟೆಂದು ಹೇಳುವವರು. 'ಲಾ ಇಲಾಹ' (ಭಿನ್ನ ಭಾವವಾಗಿ ಒಂದೂ ಇಲ್ಲ.) ಇಲ್ಲಿ 'ಲ್ಲಾಹಾ' (ಒಬ್ಬ ಜ್ಞಾನಿಮಹಿಮಾವಂತನಿದ್ದಾನೆ). ಎಂದು ನಂಬಿರುವವರು ಮಹಮ್ಮದೀಯರು (ಮೂರ್ತಿ ಪೂಜಕರಲ್ಲ) ವೀರಶೈವರೂ ಹಾಗೆಯೇ ಹೇಳುವವರು. ಅದನ್ನೇ ಸದ್ಧರ್ಮದೀಪಿಕೆ ಪ್ರತಿಪಾದಿಸುವುದರಿಂದ ಮಹಮ್ಮದೀಯರಾದ ಕನ್ನಡ ಪಂಡಿತರಿಗೆ ಆಸಕ್ತಿಹುಟ್ಟಿದೆ. ಈ ಪತ್ರಿಕೆಯು ವೀರಶೈವ ತತ್ತ್ವಗಳಿಗೆ ಮೀಸಲಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ.......ಈ ಕನ್ನಡ ಪಂಡಿತರು ಏನಾದರೂ ಲೇಖನ ಕಳಿಸಿದರೆ ಪ್ರಕಟಿಸಲು ಯಾವ ಅಡ್ಡಿಯೂ ಇಲ್ಲ... ನಿರಾಕಾರವಸ್ತುವು ಸರ್ವತ್ರ ವ್ಯಾಪಿಸಿರುವಂತೆ ತನ್ನಲ್ಲಿಯೂ ವ್ಯಾಪಿಸಿ ಇದ್ದಾನೆ ಎಂದು ವೀರಶೈವರು ತಿಳಿದು ಆಚರಿಸುತ್ತಾರೆ.......ಹಿಂದೂ ಮಹಮ್ಮದೀಯರನ್ನು ಧಾರ್ಮಿಕದಲ್ಲಿ ಕೂಡಿಸುವ ಒಂದು ಯೋಜನೆಯನ್ನು ತೆಗೆದರೆ ವೀರಶೈವರನ್ನೇ ಮಧ್ಯಸ್ಥರಾಗಿ ಇಟ್ಟುಕೊಳ್ಳಬೇಕೆಂಬುದನ್ನು ಅವರು ಜ್ಞಾಪಕದಲ್ಲಿ ಇಟ್ಟಿರಬೇಕಾಗುತ್ತದೆ.

ಪ್ರಕಾಶಕನಲ್ಲಿ ಇರುವ ನಿರ್ಗುಣೋಪಾಸನೆಯ ಹೆಚ್ಚಿನ ಆಸಕ್ತಿಯನ್ನು ತಿಳಿದುಕೊಂಡವರಾಗಿದ್ದ ಶಿರಾಳಕೊಪ್ಪದ ಕೆ. ಮರ್ದಾನ್‌ಸಾಬರು ಪ್ರಕಾಶಕನೊಡನೆ ಧಾರ್ಮಿಕ ಮಿತ್ರರಾಗಿ ವರ್ತಿಸುತ್ತಿದ್ದರು. ಅವರಿಗೆ ಈಗಲೂ ಒಂದು ಪತ್ರಿಕೆಯು ಕಳುಹಿಸಲ್ಪಡುತ್ತದೆ.

— ಪ್ರಕಾಶಕ

(ಸಂ. ೧೦೫–೧೦೬, ಪು. ೧೧–೧೨)

೨೦) ಸಿದ್ಧಬಸಪ್ಪ ವೀರಪ್ಪ ಗಿಡ್ನವರ್ — ಹಳ್ಯಾಳ
ರೆಸಿಡೆಂಟ್ ಮ್ಯಾಜಿಸ್ಟ್ರೇಟ್, ಹಲಿಯಾಳ — ೧೩–೧೦–೩೨

ಶ್ರೀ ಚನ್ನಮಲ್ಲಿಕಾರ್ಜುನರಲ್ಲಿ ವಂದನೆಗಳು,

ನಿಮ್ಮ ೧೦೯-೧೧೦ ಸಂಚಿಕೆಯ ಮೊದಲನೆಯ ಲೇಖನ ಗೌರೀ ಶಂಕರಸ್ವಾಮಿಗಳ ಬಗ್ಗೆ ಬರೆದದ್ದು ಯೋಗ್ಯವಿದೆ. ನಾನು ಸ್ವಾಮಿಯವರಿಂದ ಇನ್ನಷ್ಟು ಪ್ರಯೋಜನ

ವನ್ನು ಪಡೆಯಲಿಲ್ಲವೆಂದು ನನ್ನ ಕೊರತೆಯ ಬಗ್ಗೆ ಪಳಹಳಿಯಾಗಿದೆ. ನಾಲ್ಕು ಸಾರೆ ಅವರ ಪ್ರವಚನ ಕೇಳಿದೆ. ಎರಡು ಸಾರೆ ಧಾರವಾಡ, ಒಮ್ಮೆ ಬೈಲುಹೊಂಗಲ, ಒಮ್ಮೆ ಗದಗದಲ್ಲಿ ನೀವು ಬಂದಾಗ. ಅವರು ಅನುಭವ ಮಂಟಪದ ವಿಷಯಕ್ಕೆ ಹೇಳಿದ್ದು ಹೃದಯದಲ್ಲಿ ಮೂಡಿ ಹೋಗಿ ಬಿಟ್ಟಿದೆ.......ಅವರು ಬರೆದ ಗ್ರಂಥಗಳು ಯಾವುದಾದರೂ ಪ್ರಸಿದ್ಧವಾಗಿವೆಯೋ ಹೇಗೆ ?....ಅವರ ಫೋಟೋ ಸಿಕ್ಕೂವುದೇ ಹೇಗೆ ?...ಅನುಕೂಲಮಾಡಿಕೊಂಡು ಬರೆಯುವಿರಾಗಿ ಆಶಿಸುವೆನು.

ಸಿದ್ಧಬಸಪ್ಪ ವೀರಪ್ಪ ಗಿಡ್ನಣ್ಣನವರ
(ಸಂ. ೧೦೧. ಪು. ೧)

(ಪ್ರತಿಕ್ರಿಯೆ)

......ಅವರು (ಗೌರೀಶಂಕರ ಸ್ವಾಮಿಗಳು) ರಚಿಸಿದ ಅಕ್ಕಮಹಾದೇವಿ ಚಂಪೂ ಕಾವ್ಯವು ಬಹುಮಟ್ಟಿಗೆ ಮುದ್ರಣವಾಗಿದೆ...ಅದು ಇನ್ನೂ ಹೊರಬಿದ್ದಿಲ್ಲ...ಪುಸ್ತಕ ಗಳಿಂದ ಅಭಿಪ್ರಾಯಗಳು ಸ್ಪಷ್ಟವಾಗಿ ತಿಳಿದುಬಂದಂತೆ ಶ್ರೀ ಸ್ವಾಮಿಗಳಿಂದ ತಿಳಿದು ಬರುವುದಿಲ್ಲ. ಇದಲ್ಲದೆ ಒಬ್ಬೊಬ್ಬರು ಸ್ವಾಮಿಗಳು ಒಂದೊಂದು ವಿಧ ವಾಗಿ ಬೋಧಿಸುತ್ತಾರೆ. ವೀರಶೈವರ ನಿಜವಾದ ಧಾರ್ಮಿಕಾಭಿಪ್ರಾಯಗಳು ಹೊರ ಬೀಳುವಂತೆ ಒಂದು ಏರ್ಪಾಡು ಗವೀಮಠದಲ್ಲಿ ನಡೆಯುವುದಾದರೆ ಧಾರ್ಮಿಕೋನ್ನ ತಿಯ ಒಂದು ಶ್ರೇಷ್ಠವಾದ ಕೆಲಸವಾದಂತೆ ಆಗುತ್ತದೆ. ಇದು ಅರಮನೆಗೆ ಸಂಬಂಧ ಪಟ್ಟ ಮಠವಾದ್ದರಿಂದ ಶ್ರೀಮನ್ಮಹಾರಾಜರವರು ಆ ಬಗ್ಗೆ ತಕ್ಕ ಏರ್ಪಾಡು ಮಾಡಿ ದುದಾದರೆ ಮಠದ ಕೀರ್ತಿಯು ಮುಂದೆ ಇನ್ನೂ ಬೆಳೆಯುವುದಕ್ಕೆ ಅವಕಾಶ ವಾಗುತ್ತದೆ.............(ಇತ್ಯಾದಿ)

— ಪ್ರಕಾಶಕ
(ಸಂ. ೧೧೧. ಪು. ೧-೨)

೨೧) ಬಿ. ಎಂ. ಮುದ್ದಪ್ಪ ದೇನಾಡು. (ತಾರೀಖು ಇಲ್ಲ)

Sir,

I am very anxious to go through your monthly paper called "Saddharma Deepike". I am sorry to note why you stop sending the above magazine to me. Contents of the magazine are very interesting to read. When I read it a band of our communities come to hear the contents of the Magazine. Thy often come to me and insist to read the magazine. I therefore request you to send the Magazine at your earliest convenience. You may know that I am a yearly subscriber. I shall do my help to your Kariyalayam next

year in finance. I am falling in love with your Magazine, I became insane as I didnot read the magazine. Please send your magazine without further delay.

ಪ್ರಕಾಶಕರ ಪ್ರತಿಕ್ರಿಯೆಯೂ ಇದೆ. ಅದನ್ನು ಇಲ್ಲಿ ಕೊಟ್ಟಿಲ್ಲ....

(ಸಂ. ೧೧೧. ಪು. ೨)

೨೨) ವೀರಭದ್ರಪ್ಪ ಹಾಲಭಾವಿ
ಧಾರವಾಡ. *

ವಯೋವೃದ್ಧರೂ, ಶಿವಾನುಭಾವಿಗಳೂ ಆದ ಶ್ರೀ ಚೆನ್ನಮಲ್ಲಿಕಾರ್ಜುನ ಅವರಿಗೆ ಅನೇಕ ಶರಣು ಶರಣಾರ್ಥಿಗಳು.

ತಾವು ಬರೆದ 'ಬಸವೇಶ್ವರನ ಕಾಲ'ವೆಂಬ ಒಳ್ಳೇ ಸಂಶೋಧನಾತ್ಮಕ ಗ್ರಂಥದಿಂದ ಸಮಾಜಕ್ಕೆ ಬಹಳ ದೊಡ್ಡ ಉಪಕಾರವಾದಂತಾಗಿದೆ. ಇದರ ಉಪಯೋಗ ಮಾಡುವ ಪ್ರಸಂಗವು ಇತ್ತೀಚೆಗೆ ಬಂದು ಸಂಭವಿಸಿತು. ಅದು ಏನೆಂದರೆ—

ಬ್ರಿಟಿಷ ಸರಕಾರದವರು ತಮ್ಮ ಆಡಳಿತೆಯ ಸೌಕರ್ಯಕ್ಕಾಗಿ ಸುಮಾರು ೭೫ ವರ್ಷಗಳ ಹಿಂದೆ ಪ್ರತಿಯೊಂದು ಜಿಲ್ಲೆಯ ಎಲ್ಲ ತರದ ಮಾಹಿತಿಯನ್ನೊಳಗೊಂಡ 'ಗ್ಯಾಜಿಟೀಯರ್' ಎಂಬ ಗ್ರಂಥಗಳನ್ನು ಪ್ರಕಟಿಸಿರುವುದು ತಮಗೆ ಗೊತ್ತಿರಲಿಕ್ಕೆ ಸಾಕು. ಅವುಗಳನ್ನು ಈಗಿನ ಪರಿಸ್ಥಿತಿಗನುಸಾರವಾಗಿ ಹೆಚ್ಚು ಸಂಶೋಧನೆ ಮಾಡಿ, ತಿದ್ದಿ ಪ್ರಕಟಿಸಬೇಕೆಂದು ಈಗಿನ ಮುಂಬೈ ಸರಕಾರದವರು ಒಬ್ಬ ಅಧಿಕಾರಿಯನ್ನು ನೇಮಿಸಿರುವರು.

ಲಿಂಗಾಯತ ಸಮಾಜದ ವಿಷಯವಾಗಿ ಕರ್ನಾಟಕದ ಜಿಲ್ಲೆಗಳ ಗ್ರಂಥಗಳಲ್ಲಿ ಮಾಹಿತಿ ಇರುವುದು. ಅದರಲ್ಲಿ ಏನೇನು ಹೆಚ್ಚು ಕಡಿಮೆ ಮಾಡಬೇಕೆಂಬುವರ ಬಗ್ಗೆ ದಿವಾನ್ ಬಹದ್ದೂರ್ ಆರ್. ಎಸ್. ಹಿರೇಮಠ ಸಾಹೇಬರಿಗೆ ಬರೆದು ಈಗಿರುವ ಗ್ಯಾಜಿಟಿಯರ್ ಗ್ರಂಥಗಳಲ್ಲಿಯ ಲಿಂಗಾಯತರ ಬಗ್ಗೆ ಬರೆದಿರುವುವರ ನಕಲು ಮಾಡಿ ಕಳುಹಿಸಿದರು. ದಿ. ಬ. ರವರು ಅಲ್ಲಿಯ ಕೆಲವು ಪ್ರಮುಖರಿಗೆ ಈ ನಕಲಿನ ಪ್ರತಿಗಳನ್ನು ಮಾಡಿ ಕಳಿಸಿ ಅವರ ಸೂಚನೆಗಳನ್ನು ಕೇಳಿದರು. ಆದರೆ ಇವರಲ್ಲಿ ವಿಶೇಷ ಜನರು ಇದಕ್ಕೆ ಲಕ್ಷ್ಯಕೊಡಲಿಲ್ಲವೆಂಬುದು ಬಹಳ ವಿಷಾದದ ಸಂಗತಿಯು.

ಶ್ರೀ ಬಸವಣ್ಣನವರ ವಿಷಯವಾಗಿ ಹಿಂದಿನ ಗ್ಯಾಜಿಟೀಯರದಲ್ಲಿ ಎಷ್ಟೋ ಅಸಂಬದ್ಧ ಸಂಗತಿಗಳು ಉಲ್ಲೇಖಿಸಲ್ಪಟ್ಟಿರುತ್ತವೆ. ಅಕಸ್ಮಾತ್ತಾಗಿ ಈ ಕಾಲಕ್ಕೆ ನಾನು ತಮ್ಮ ಗ್ರಂಥವನ್ನು ಓದುತ್ತಿದ್ದೆನು. ನನ್ನ ಈಗಿನ ಪರಿಸ್ಥಿತಿಯಲ್ಲಿ ಸ್ವತಂತ್ರ ಸೂಚನೆಗಳನ್ನು ಮಾಡುವುದು ಕಠಿಣವಾಗಿತ್ತು. ತಮ್ಮ ಗ್ರಂಥವು ಈ ಬಗ್ಗೆ ಬಹಳ

* 'ಬಸವೇಶ್ವರನ ಕಾಲ'ದ ಸಾರಾಂಶವು ಮುಂಬೈ ರಾಜಕೀಯದ ಕೈಸೇರಿತು (ಈ ವಿಷಯವಾಗಿ ಬಂದ ಪತ್ರ ಸಂ. ೧೧೮-೧೧೯ ಪು. ೧ ತಾರೀಖು ಇಲ್ಲ) — ಪ್ರಕಾಶಕ

ಸಪಕಾರಿಯಾಯಿತು. ಅದರ ಸಾರಾಂಶವನ್ನು ತೆಗೆದು ಅದನ್ನು ಮೇಲೆ ಹೇಳಿದ ಅಧಿಕಾರಿಗಳ ಕಡೆಗೆ ಕಳುಹಿಸಿರುತ್ತದೆ. ಗ್ಯಾಜಿಟಿಯರುಗಳಲ್ಲಿಯ ಲಿಂಗಾಯತರ ಬಗೆಗೆ ಇರುವ ಬೇರೆ ಬೇರೆ ವಿವರಗಳನ್ನು ದಿ. ಬ. ರವರು ಶ್ರೀ ಬುದ್ದಯ್ಯನವರು ಮತ್ತು ನಾನೂ ಕೂಡಿ, ಸರಿಯಾಗಿ ತಿದ್ದಿ ಕಳುಹಿಸಿರುತ್ತೇವೆ. ಅವರು ಇದು ಮುಟ್ಟಿದ ಬಗ್ಗೆ ನಮ್ಮ ಆಭಾರವನ್ನು ಮನ್ನಿಸಿ ಉತ್ತರ ಕಳುಹಿಸಿರುತ್ತಾರೆ.

ಇನ್ನು ತಮಗೆ ಒಂದು ಸೂಚನೆ......ಬಸವಣ್ಣನವರ ಬಗ್ಗೆ ಇತರ ಪಂಡಿತರ... ಲೇಖನ...ವಿಮರ್ಶೆಯು ತಮ್ಮ ಗ್ರಂಥಗಳಲ್ಲಿರುವುದು ಸರಿಯಷ್ಟೆ. ಅದರಲ್ಲಿ ಮುಖ್ಯ ವಾಗಿ ಅವರ ಕಾಲದ ವಿಷಯವೇ ಇರುವುದರಿಂದ ಇತರ ವಿವರಗಳ ಬಗ್ಗೆ ಸಂಪೂರ್ಣ ಉಲ್ಲೇಖವಿರುವುದಿಲ್ಲಾ. ಈ ಶ್ರೀ ಪಾಂಡುರಂಗರಾವ್ ದೇಸಾಯಿಯವರು ಚಾಲುಕ್ಯ ಮತ್ತು ಕಲಚೂರ್ಯ ರಾಜಮನೆತನದವರ ಇತಿಹಾಸವನ್ನು ಸಾಹಿತ್ಯ ಪರಿಷತ್ ಪತ್ರಿಕೆ ಮೊದಲಾದುವುಗಳಲ್ಲಿ ಪ್ರಕಟಿಸುತ್ತಿರುವರು. ಇದರಲ್ಲಿ ಬಸವಣ್ಣನವರ ವಿಷಯವಾಗಿ ಸರಿಯಾದ (ಪೂರ್ಣ) ಅಭಿಪ್ರಾಯವಿರುವುದಿಲ್ಲ. ಬಸವಣ್ಣನವರ ಕಾಲದ ವಿಷ ಯವು ಎಷ್ಟು ಮಹತ್ವದ್ದೋ ಆತನಿಗೆ ೧೧೩೧ರಲ್ಲಿ ವೀರಶೈವ ದೀಕ್ಷೆಯನ್ನು ಯಾರು ಮಾಡಿದರು ? ಆಗ ವೀರಶೈವ ಸಮಾಜದ ಧಾರ್ಮಿಕ ಪರಿಸ್ಥಿತಿ ಯಾವತರದ್ದಿತ್ತು ? ಅನುಭವ ಮಂಟಪ ಸ್ಥಾಪನೆ ಯಾವಾಗ ಆಯಿತು ? ಅದರಲ್ಲಿ ಚರ್ಚೆ ಎಷ್ಟು ವರ್ಷ ನಡೆಯಿತು ? ಆಗಿನ ರಾಜಕೀಯ ಪರಿಸ್ಥಿತಿ ಏನಿತ್ತು ? ಮೊದಲಾದ ವಿಷಯಗಳು ಮಹತ್ವವಿರುವುದರಿಂದ ಅವುಗಳ ಬಗ್ಗೆ ತಾವು ಇಲ್ಲಿಯವರೆಗೆ ಪ್ರಯಾಸಪಟ್ಟಂತೆ ಒಳ್ಳೆ ಸಂಶೋಧನೆ ನಡೆಸಿ ಇನ್ನೊಂದು ಗ್ರಂಥ ಪ್ರಕಟಿಸಬೇಕೆಂದು ದಿವಾನ್ ಬಹ ದ್ದೂರರವರು, ಶ್ರೀ ಬುದ್ಧಯ್ಯ ಸ್ವಾಮಿಗಳು, ಮತ್ತು ನನ್ನ ಆಗ್ರಹದ ಸೂಚನೆ ಇದೆ. ಈ ಕಾರ್ಯವು ಎರಡನೆಯವರಿಂದ ಆಗುವುದು ಶಕ್ಯವಿಲ್ಲ.

ಶ್ರೀ ಬಸವೇಶ್ವರನು ಈ ಕಾರ್ಯವನ್ನು ನೆರವೇರಿಸಲಿಕ್ಕೆ ತಮಗೆ ಆಯುರಾ ರೋಗ್ಯವನ್ನು ದಯಪಾಲಿಸಲೆಂದು ಬೇಡುತ್ತೇನೆ.

ವೀರಭದ್ರಪ್ಪ ಹಾಲಭಾವಿ

(ಸಂ. ೧೧೮-೧೧೯ ಪುಟ. ೧-೨)

(ಇಲ್ಲಿ ಪ್ರಕಾಶಕರ ಯಾವ ಪ್ರತಿಕ್ರಿಯೆಯೂ ಇಲ್ಲ)

ಸುರಕೋಡ ಹಿರೇಮಠದ — ಹುನಗುಂದ

೨೩) ಶ್ರೀ ಶ್ರೀ ಗುರುಪಾದ ಶಿವಾಚಾರ್ಯ. — ೨೦-೨-೫೬

ತಾವು ಇಲ್ಲಿಯವರೆಗೆ ರೇಣುಕಾ ಚರಿತ್ರೆಯ ಸಂಶೋಧನೆ ನಡೆಸಿದ್ದೀರಿ. ಆದರೆ ಇನ್ನು ಸಂಶೋಧನೆ ಆಳವಾಗಿದೆ. ಏಕೆಂದರೆ— ಈಗ ರೇಣುಕರು ಸಂಸ್ಕೃತದಲ್ಲಿ ಬರೆದ 'ರಸಾಮೃತ'ವೆಂಬ ಪ್ರಾಚೀನ ವೈದ್ಯ ಗ್ರಂಥ ಸಿಕ್ಕಿದೆ. ೭೮ ರಿಂದ ೩೦೦ ಶ್ಲೋಕದ ವರೆಗೆ ಇದೆ. ಅಪೂರ್ಣವಿದೆ; ಅಶುದ್ಧವಿದೆ. ಇನ್ನೊಂದು ರೇಣುಕರು

ಬರೆದದ್ದು 'ರಸರಾಜ ಶಿರೋಮಣಿ' ಎಂಬುದು ನೇಪಾಳ ಮಹಾರಾಜರ ಅರಮನೆಯ ಲೈಬ್ರರಿಯಲ್ಲಿದೆ. ಅದಕ್ಕೆ ನಾನು ಪತ್ರ ಹಾಕಿದ್ದೇನೆ. ಇನ್ನೂ ಉತ್ತರ ಬಂದಿಲ್ಲ. ......ಆದ್ಯ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗ ಕೊಟ್ಟಿಲ್ಲವೆಂಬುದು ತಮ್ಮ ವಾದ...ನನಗೆ ಆದ್ಯ ಶಂಕರಾಚಾರ್ಯರು ಬರೆದ ಕೈ ಬರಹದ ಪ್ರತಿ 'ತ್ರಿಪುರಾಂತಕೇಶ್ವರ ರಗಳೆ' ಕನ್ನಡ ೩೦೦ ಪದ್ಯಗಳಿವೆ....ಮೊದಲು ಗುರುಭಾರತೀಯರನ್ನು ನಮಸ್ಕರಿಸಿ ನಂತರ ರೇಣುಕರನ್ನು ನಮಸ್ಕರಿಸಿ ಸುರು ಮಾಡಿದ್ದಾರೆ. ಅದರಲ್ಲಿ ತಮ್ಮ ಪೂರ್ವಾಚಾರ್ಯರ ಸ್ತುತಿ ಮಾಡಿದ್ದಾರೆ. ರೇಣುಕರು ಆದ್ಯ ಶಂಕರಾಚಾರ್ಯರಿಗೆ ಲಿಂಗ ಕೊಟ್ಟ ಮೇಲೆ ಅವರು ಮೇಲೆ ಹೇಳಿದ ಗ್ರಂಥ ಬರೆದಿದ್ದಾರೆ ಎಂದು ಇನ್ನೂ ಸಂಶೋಧಿಸುತ್ತೇನೆ. ಗಡಬಿಡಿಯಿಂದ ಸಂಶೋಧನೆ ನಡೆಸಬಾರದು. ಏಕೆಂದರೆ ನಮ್ಮ ಕವಿಗಳು ತಾಳ ಮೇಳವಿಲ್ಲದವರು. ಒಂದಕ್ಕೊಂದು ಸಂಬಂಧವಿಲ್ಲದ ಹಾಗೆ ಬರೆದಿದ್ದಾರೆ. ಹೀಗಾಗಿ ಬಿಚ್ಚಲಾರದ ಒಗಟಿನಂತಿದೆ. ರೇಣುಕರ ಹೆಸರು ಮಂಡನ ಮಿಶ್ರರು ಬರೆದ 'ಭಾವ ಪ್ರಕಾಶ'ವೆಂಬ ಮೀಮಾಂಸಾ ಗ್ರಂಥದಲ್ಲಿ ಬಂದಿದೆ. ಅಂದರೆ ಅವರ ಬಗ್ಗೆ ರೇಣುಕರು ಏನೂ ಬರೆದಿಲ್ಲವೆಂದು ಹಾಸ್ಯಮಾಡಿದ್ದಾರೆ. ಇನ್ನೊಂದು ಆವರ್ತಿ ಆ ಶ್ಲೋಕವನ್ನು ತಮಗೆ ಕಳುಹಿಸಿ ಕೊಡುತ್ತೇನೆ. ಪ್ರಬುದ್ಧ ಕರ್ನಾಟಕ ಮೈಸೂರು ಪತ್ರಿಕೆಯಲ್ಲೂ ಆ ವಿಷಯ ಬಂದಿದೆ. ಆದರೆ ೨೫ ವರ್ಷದ ಹಿಂದಿನ ಸಂಚಿಕೆಯಲ್ಲಿ ಇರಬಹುದು...ನನಗೆ ಸಂಶೋಧನೆಯ ಅಭಿರುಚಿ ಇಲ್ಲದಾಗ ಓದಿದ ವಿಷಯ, ನೆನಪು ಇಲ್ಲ......ತಮ್ಮ ಆಲೋಚನೆಗೆ ವಿರುದ್ಧವಾದ ಕೆಲವಂಶಗಳು ಹೊರಬಿದ್ದುವೆಂದು ತಿಳಿಯಬಾರದು. ಆಚಾರ್ಯರನ್ನೂ ಇತ್ತೀಚೆಗೆ ಮಾಡಬೇಕೆಂಬ ಹವ್ಯಾಸದಲ್ಲಿ ಬೀಳಬೇಡಿ. ಸಂಶೋಧನೆ ನಿಷ್ಪಕ್ಷಪಾತವಿರಲಿ.

(ಸಂ. ೧೩೭ ಪು. ೫.)

## (ಪ್ರತಿಕ್ರಿಯೆ)

ಈ ಮಹನೀಯರು ಈ ಪತ್ರ ಬರೆದುದಕ್ಕಾಗಿ ಸಂತೋಷಿಸುತ್ತೇನೆ. ಏಕೆಂದರೆ ವಿಮರ್ಶೆ ನಡೆದಲ್ಲಿ ವಿಷಯ ನಿರ್ಧಾರಕ್ಕೆ ಬರುವುದೆಂದು ಬಲವಾದ ನಂಬಿಕೆಯಿದೆ. ಶ್ರೀ ರೇಣುಕರು 'ರಸಾಮೃತ' 'ರಸರಾಜಶಿರೋಮಣಿ' ಎಂಬ ಎರಡು ಗ್ರಂಥ ಬರೆದಿರುವುದಾಗಿ ಇವರು ತಿಳಿಸುತ್ತಾರೆ... ಆ ಗ್ರಂಥಗಳ ಶೋಧನೆ ಮಾಡಿ ಬರೆಯುವವರೆಗೂ ವಿಮರ್ಶೆಗೆ ಇಟ್ಟುಕೊಳ್ಳುವುದಿಲ್ಲ. 'ತ್ರಿಪುರಾಂತಕೇಶ್ವರ ರಗಳೆ'ಯನ್ನು ರಚಿಸುವಾಗ ಗುರುಭಾರತೀಯರನ್ನು ನಮಸ್ಕರಿಸಿ ಅನಂತರ ರೇಣುಕರನ್ನು ನಮಸ್ಕರಿಸಿ ತಮ್ಮ ಪೂರ್ವಾಚಾರ್ಯರ ಸ್ತುತಿಯನ್ನು ಮಾಡಿ, ಆ ಗ್ರಂಥವನ್ನು ಬರೆದರೆಂಬ ವಿಷಯಗಳಿಂದ ಶ್ರೀ ಶಂಕರಾಚಾರ್ಯರ ಪೀಠದ ಪರಂಪರೆಯವರೊಬ್ಬರೋ ಅಥವಾ ಅವರಲ್ಲಿ ವಿಶೇಷ ಭಕ್ತಿಯನ್ನಿಟ್ಟವರೊಬ್ಬರೋ ಬರೆದನೆಂದು ತಿಳಿಯಬೇಕಾಗಿದೆ. ಅವರು ಸ್ತುತಿ ಮಾಡಿದ ಕೊನೆಯ ಆಚಾರ್ಯರ ಹೆಸರು ಗೊತ್ತಾದರೆ, ಅವರ ಕಾಲವನ್ನು ಗೊತ್ತು

ಮಾಡಬಹುದಾಗಿದೆ. ಈ ವಿಷಯವನ್ನು ಈ ಪತ್ರದ ಲೇಖಕರು ಬರೆದಂತೆ ಸಂಶೋಧನೆ ಮಾಡಿ.. ಬರೆದಲ್ಲಿ ವಿಮರ್ಶೆಯೊಡನೆ ಅದನ್ನು ಪ್ರಕಟಿಸುತ್ತೇವೆ. ಈ ಸಂಶೋಧನೆಯನ್ನು ಬಾಕಿಯಲ್ಲಿಟ್ಟುಕೊಂಡು 'ರೇಣುಕರು ಆದ್ಯ ಶಂಕರಾಚಾರ್ಯರಿಗೆ ಲಿಂಗಕೊಟ್ಟ ಮೇಲೆ ಅವರು ಮೇಲೆ ಹೇಳಿದ ಗ್ರಂಥವನ್ನು ಬರೆದಿದ್ದಾರೆ ಎಂದು ಯೋಚಿಸುವುದು ಸರಿಯಲ್ಲ. ಈಗ ಪ್ರಕಟಪಡಿಸಿದ ಶ್ರೀ ರೇವಣಸಿದ್ಧರ ಚರಿತ್ರೆಯಲ್ಲಿ ಚಂದ್ರಮೌಳೀಶ್ವರ ಲಿಂಗದ ವಿಷಯವಾಗಿ ಬರೆದ ಪ್ರಕರಣದಲ್ಲಿ ೫-೬ ಗ್ರಂಥಗಳಲ್ಲಿ ಆದಿ ಶಂಕರಾಚಾರ್ಯರಿಗೆ ಲಿಂಗವನ್ನು ಕೊಟ್ಟರೆಂದು ಬರೆದಿರುವುವನ್ನು ಉಲ್ಲೇಖಿಸಿ ತಮ್ಮ ಭಕ್ತಿವಿಶೇಷದಿಂದ ಈ ರೀತಿ ಬರೆದಿರುವರೆಂದು ವಿವರಿಸಿ ಇದೆ. ಆ ಗ್ರಂಥಗಳೆಲ್ಲವೂ ಚಂದ್ರಮೌಳೀಶ್ವರ ಸಂಬಂಧದ ಶಾಸನವು ಹುಟ್ಟಿದಮೇಲೆ ಹುಟ್ಟಿದವುಗಳು. ಈ ದಿನ ನನಗೆ ಒಂದು ಮೌಢ್ಯ ವಿಶೇಷದ ಭಕ್ತಿಯುಂಟಾದರೆ ನಾನೂ ಆದ್ಯಶಂಕರಾಚಾರ್ಯರಿಗೆ ಶ್ರೀ ರೇಣುಕರು ಲಿಂಗವನ್ನು ಕೊಟ್ಟರೆಂದು ಲೇಖನವನ್ನು ಅಥವಾ ಗ್ರಂಥವನ್ನು ಬರೆಯಬಹುದು. ಆದರೆ ಅದು ಚಾರಿತ್ರಿಕವಾಗಿ ಪರಿಣಮಿಸಲಾರದು. 'ಚಂದ್ರಮೌಳೀಶ್ವರ' ಲಿಂಗದ ಪ್ರಕರಣವನ್ನು ಈಗಲೂ ಓದಿದರೆ ಇನ್ನೂ ಅನೇಕ ವಿಷಯಗಳು ಈ ಲೇಖಕರಿಗೆ ತಿಳಿಯಬಹುದು. ಈ ವಿಷಯವು ಬಿಚ್ಚಲಾರದ ಒಗಟಲ್ಲ.

ಈಗ ವೀರಶೈವರಲ್ಲಿ ಪಂಚಾಚಾರ್ಯರೆಂದು ಗಣಿಸಲ್ಪಡುವ ಪೂಜ್ಯರ ಚರಿತ್ರೆಯೂ ಬಿಚ್ಚಲಾರದ ಒಗಟಾಗಿಲ್ಲ. ಏಕೆಂದರೆ ಅವರ ವಿಷಯವನ್ನು ಹೇಳುವ ಕೆಲವು ಗ್ರಂಥಗಳೂ, ಲೇಖನಗಳೂ, ಆಗಮಗಳೂ, ಅವರ ಸಹವರ್ತನರ ಶಾಸನಗಳೇ ಮೊದಲಾದವುಗಳೂ ದೊರಕುತ್ತಲಿವೆ. ಮಂಡನಮಿಶ್ರರು ರೇಣುಕರೊಡನೆ ಮಾತನಾಡಿರಬಹುದು. ಆದರೆ ರೇಣುಕ ಎಂಬ ಹೆಸರು ಬಂದಕೂಡಲೆ ಅವರು ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕರು ಎಂದು ಯಾರೂ ಭಾವಿಸಬಾರದು. ಇವರ ವಿಷಯವನ್ನು ಹೇಳುವುದಕ್ಕೆ ಈಗ ಮೊದಲನೆಯ ಕವಿ ಎಂದು ಭಾವಿಸಲ್ಪಟ್ಟಿರುವ ಹರೀಶ್ವರ ಕವಿಯು ಕೈಲಾಸದಲ್ಲಿ 'ರೇಣುಕ' ಎಂಬ ಹೆಸರಿನವರೊಬ್ಬರು ಭೂಲೋಕಕ್ಕೆ 'ರೇವಣಸಿದ್ಧ' ಎಂಬ ಹೆಸರಿನಿಂದ ಅವತರಿಸಿದರೆಂದು ಹೇಳುವುದಲ್ಲದೆ, ದೇಹಾಂತ್ಯದಲ್ಲಿ (ಕೊನೆಯಲ್ಲಿ) ಅವರಿಗೆ ರೇಣುಕ ಎಂದು ಕರೆದಿದ್ದಾರೆ. ಆದುದರಿಂದ ರೇವಣಸಿದ್ಧರು ಯಾವ ಯಾವ ಕೆಲಸಗಳನ್ನು ಮಾಡಿವರು ಎಂದು ವೀರಶೈವ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದೋ ಆ ಕೆಲಸಗಳ ಕಾಲವನ್ನೂ, ವ್ಯಕ್ತಿಯನ್ನೂ ಚೆನ್ನಾಗಿ ಶೋಧಿಸಿ, ಅಂತಹ ಒಬ್ಬ ವ್ಯಕ್ತಿಯನ್ನು ಆಚಾರ್ಯರೆಂದೂ, ಪೂಜ್ಯರೆಂದೂ ನಂಬುವುದು ಸಹಜವಾಗಿಯೇ ಇದೆ. ಅಲ್ಲಿಯೊಬ್ಬ ರೇಣುಕ ಎಂಬ ಹೆಸರನ್ನು ಕಂಡಕೂಡಲೆ ಕಾಲಮಾನಗಳಿಗೆ ಮೇಳವಿಲ್ಲದೆ ಎಲ್ಲರನ್ನು ಆಚಾರ್ಯರೆಂದು ತಿಳಿಯುವುದು ಸರಿಯಾಗಿಲ್ಲ. ಪುರಾಣಾದಿ ಗ್ರಂಥಗಳಲ್ಲಿ ಹೇಳಲ್ಪಟ್ಟ ಕೆಲಸಗಳನ್ನೆಲ್ಲ ಮಾಡಿದವರಾಗಿರಬೇಕು. ಈಗ ಪ್ರಸಿದ್ಧವಾದ ಶ್ರೀ ರೇವಣಸಿದ್ಧರ ಚರಿತ್ರೆಯಲ್ಲಿ ಅವರ ಕೆಲಸಗಳನ್ನು ಶಾಸನ ಮುಂತಾದವುಗಳ ಆಧಾರದಿಂದ ಒಬ್ಬರಿಗೆ ಸಂಬಂಧಪಟ್ಟುದನ್ನು ತೋರಿಸಿ ಅವರು ಕ್ರಿ. ಶ. ೧೨ ನೆಯ

ಶತಮಾನದವರೆಂದೂ, ೧೩ ನೆಯ ಶತಕದ ಆದಿಯಲ್ಲೂ ಇದ್ದರೆಂದು ವಿವರಿಸಿ ತೋರಿಸಿವೆ. ಇತರರು ತೋರಿಸುವ ಆಚಾರ್ಯರೂ ಹೀಗೆ ಕೆಲಸಗಳನ್ನು ಮಾಡಿರುವುದು ಹೊರಬೀಳಬೇಕಾಗಿದೆ. "ತಮ್ಮ ಆಲೋಚನೆಗೆ ವಿರುದ್ಧವಾದ ಕೆಲವಂಶಗಳು ಹೊರಬಿದ್ದಿವೆ ಎಂದು ತಿಳಿದುಕೊಳ್ಳಬಾರದು" ಹೀಗೆ ಈ ಲೇಖಕರು ಬರೆದಿರುವುದು ಸರಿಯಲ್ಲ. ನನ್ನ ಆಲೋಚನೆ ಆಚಾರ್ಯರನ್ನು ೧೨ ನೆಯ ಶತಮಾನಕ್ಕೆ ತರಬೇಕೆಂದೇನೂ ಇಲ್ಲ. ಅವರು ಕ್ರಿ. ಶ. ೧೨ ನೆಯ ಶತಮಾನದವರೆಂದು ಹೇಳಿದವರೊಡನೆ ಹಣಾಹಣಿಯಾಗಿ ೩–೪ ಘಂಟೆಗಳ ಕಾಲ ಗಟ್ಟಿಯಾಗಿ ಕೂಗಿ ಕೂಗಿ ಜಗಳವಾಡಿದ್ದವನು ನಾನು. ಈಚೆಗೆ ಅನೇಕ ಗ್ರಂಥಗಳನ್ನು ಶಾಸನಗಳನ್ನು ನೋಡಿದಮೇಲೆ ಈಗ ಆ ಮಬ್ಬಿಗೆ ಅಂಜನವನ್ನು ಹಾಕಿದಂತಾಗಿದೆ. ಆಚಾರ್ಯರು ಕ್ರಿ. ಶ. ೧೨ ನೆಯ ಶತಕದವರೆಂದು ಹೇಳುವುದಕ್ಕೆ ಅನೇಕ ಆಧಾರಗಳು ಈಗ ದೊರಕಿರುತ್ತವೆ. ಈಗ ದೊರಕಿರುವವುಗಳ ಆಧಾರದ ಮೇಲೆ ಈ ಲೇಖಕರಿಗೆ ಒಂದು ಆಹ್ವಾನವನ್ನು ಕೊಡಬೇಕಾಗಿದೆ. ಈ ಲೇಖಕರು ಶ್ರೀ ರೇವಣಸಿದ್ಧರು (ವೀರಶೈವ ಪಂಚಾಚಾರ್ಯರಲ್ಲಿ ಮೊದಲನೆಯವರು) ಕ್ರಿ. ಶ. ೧೨ ನೆಯ ಶತಮಾನಕ್ಕೆ ಹಿಂದಿನವರೆಂಬುದನ್ನು ಚಾರಿತ್ರಿಕವಾಗಿ ಶೋಧಿಸಿ, ಶಾಸನ ಇಲಾಖೆಯವರು ಮತ್ತು ಚರಿತ್ರ ಶೋಧಕರು ಸಮ್ಮತಿಸುವಂತೆ ತೋರಿಸಿ ಕೊಟ್ಟರೆ ಇವರಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಡಲಿಕ್ಕೆ ನಾನು ಸಿದ್ಧನಿದ್ದೇನೆ. ಇವೆಲ್ಲ ಸಂಗತಿಗಳನ್ನು ತಿಳಿದ ಮೇಲೆ "ಆಚಾರ್ಯರನ್ನು ಇತ್ತೀಚೆಗೆ ಮಾಡಬೇಕೆಂಬ ಹವ್ಯಾಸದಲ್ಲಿ ಬೀಳಬೇಡಿ ಸಂಶೋಧನೆ ನಿಷ್ಪಕ್ಷಪಾತವಿರಲಿ" ಎಂಬ ತಮ್ಮ ಮಾತನ್ನು ಈ ಲೇಖಕರು ಹಿಂದಕ್ಕೆ ತೆಗೆದುಕೊಳ್ಳಲಿ. ನನಗೆ ಪಕ್ಷಪಾತದ ಬರವಣಿಗೆ ಬರೆಯಬೇಕೆಂಬ ಯೋಚನೆ ಎಳ್ಳಷ್ಟೂ ಇಲ್ಲ. ಹಾಗಿದ್ದರೆ ಪತ್ರಿಕಾ ನಡೆಸುವವನಾಗಿ ಮುಂದೆ ಬರುತ್ತಿರಲಿಲ್ಲ. ಇದನ್ನೊಂದು ಪಕ್ಷದ ಪತ್ರಿಕೆಯೆಂದು ಯಾರೂ ತಿಳಿಯಬಾರದು. ತಮಗೆ ತಿಳಿದ ವಿಷಯವನ್ನು ವಿಮರ್ಶಾರೂಪವಾಗಿ ತಿಳಿಸುತ್ತಾ ಬಂದರೆ, ಈ ಪತ್ರಿಕೆಗೆ ತಮ್ಮ ವಿಮರ್ಶೆಯನ್ನು ಕಳುಹಿಸಿದರೆ ಅಂತಹ ಲೇಖನವನ್ನು ನನ್ನ ವಿಮರ್ಶೆಯೊಡನೆ ಪ್ರಕಟಿಸಿಯೇ ತೀರುವೆನು....... ಒಂದು ಪಕ್ಷವನ್ನು ವಹಿಸಲು ನಾನು ಗುರುವೂ ಅಲ್ಲ; ವಿರಕ್ತನೂ ಅಲ್ಲ.

(ಈ ಲೇಖಕರು ಬಹಳ ವರ್ಷಗಳಿಂದಲೂ ಅನೇಕ ಲೇಖನಗಳನ್ನು ಸದ್ಧರ್ಮದೀಪಿಕೆಗೆ ಕಳುಹಿಸುತ್ತಲೂ, ಗ್ರಂಥಗಳ ವಿಷಯದಲ್ಲಿ ಅಭಿಪ್ರಾಯವನ್ನು ಕೇಳುತ್ತಲೂ ಬಂದಿದ್ದಾರೆ. ಇವರು ಇಂತಹ ಸಂಶೋಧನದಲ್ಲಿ ಇರುವುದಕ್ಕಾಗಿ ಆನಂದಿಸಬೇಕಾಗಿದೆ. ಚಾರಿತ್ರಿಕವಾಗಿ ಇವರು ಕ್ರಿ. ಶ. ೧೨ ನೆಯ ಶತಮಾನಕ್ಕೆ ಆ ಆಚಾರ್ಯರು ಹಿಂದಿನವರೆಂದು ತೋರಿಸಲು ಒಂದು ಸಾವಿರ ರೂಪಾಯಿಗಳ ಪಣವನ್ನು ತೊಡಲಿಕ್ಕೆ ಸಿದ್ಧರಿರುವರೇ ?

– ಪ್ರಕಾಶಕ

(ಸಂ. ೧೩೭, ಪು. ೫ ರಿಂದ ೮)

೨೪) ಸಿದ್ಧವೀರಪ್ಪ ಶರಣರು ದುಗ್ಗವತ್ತಿ
ದುಗ್ಗವತ್ತಿ ೧೩-೩-೫೬

ಸ್ವಾಮಿ,

೧೩೫ ನೆಯ ಪತ್ರಿಕೆ ಬಂದಿತು. ೧೩೬ ನೆಯ ಪತ್ರಿಕೆ ಬಾರದೆ ನಿಂತಿರುವ ಕಾರಣ ವೇನು ? ತಿಳಿಯಲಿಲ್ಲ. ನಿಮ್ಮ ಪತ್ರಿಕೆಯೊಂದು ನಮಗೆ ಮೋಕ್ಷಮಾರ್ಗದ ಹೆಬ್ಬಾಗಿಲಾಗಿದೆ. ಅದನ್ನು ಕಳೆದುಕೊಂಡು ನಾವೇನು ಮಾಡಬೇಕು ? ಈ ಪತ್ರಿಕೆಯನ್ನು ನಮ್ಮ ನಿಮ್ಮ ಪ್ರಾಣಾಂತ್ಯದವರೆಗೂ ಕಳುಹಿಸುತ್ತಿರಬೇಕು. ಮತ್ತು ನಮ್ಮ ವಿಷಯವಾಗಿ ಚಂದಾಹಣದ ವಿಷಯವಾಗಿ ಏನೂ ಸಂಶಯ ತಿಳಿದುಕೊಳ್ಳಬಾರದು. ಇಲ್ಲಿ ನಾವು ಅನೇಕ ಪತ್ರಿಕೆಗಳನ್ನು ತರಿಸುತ್ತಿದ್ದೇವೆ. 'ಸದ್ಧರ್ಮದೀಪಿಕೆ'ಯೇ ಶ್ರೇಷ್ಠವೆಂದು ಕಂಡು ಬಂದಿದೆ. ಮತ್ತು ಯಾವ ಮಿತಿಗೆ ನಮ್ಮ ಚಂದಾವು ಮುಗಿಯುತ್ತದೆ ತಿಳಿಸಿರಿ. ಕಡೆಗೆ ಎಲ್ಲಾ ಪತ್ರಿಕೆಗಳನ್ನು ಕರಿಸುವುದು ನಿಲ್ಲಿಸಿ ಸಾವಧಾನ ೧, ಸದ್ಧರ್ಮದೀಪಿಕೆ ೨. ಈ ಎರಡು ತರಿಸುತ್ತೇವೆ.

ಸಿದ್ಧವೀರಪ್ಪ ದುಗ್ಗವತ್ತಿ.

(ಪ್ರತಿಕ್ರಿಯೆ)

ಈ ಪತ್ರಿಕೆಯ ಅಲ್ಪಸೇವೆಯು ಈ ಮಹನೀಯರಿಂದ ಅಂಗೀಕರಿಸಲ್ಪಟ್ಟಿರುವುದ ಇದನ್ನು ಮುಂದುವರಿಸುವ ಉತ್ಸಾಹವನ್ನು ಅಧಿಕ ಮಾಡುತ್ತದೆ.

– ಪ್ರಕಾಶಕರು
(ಸಂ. ೧೩೭. ಪು. ೮)

೨೫) ಶ್ರೀ ಸದಾಶಿವ, ವೀರಭದ್ರಪ್ಪ ಹಂಜಿ. ಬಾಗಲಕೋಟೆ
ಎಂ. ಎ. ಬಿ. ಟಿ. ೧೫-೧೧-೫೬
ಬಾಗಲಕೋಟೆ.

ಶ್ರೀ ಬಸವೇಶ್ವರರ ಬಗೆಗೆ ಅನ್ಯಮತದವರು ಸುಮ್ಮನೆಯಾದರು. ತಪ್ಪು ಸಂಗತಿಗಳನ್ನು ಬರೆಯುತ್ತಿರುವರು. ಮತ್ತೆ ಅವರನ್ನು ಖಂಡನಮಾಡಿ ಸಾಕಷ್ಟು ಆಧಾರ ಕೊಡುವುದು ಅವಶ್ಯವಿದೆ. ಬಸವೇಶ್ವರನ ಜೀವನ ಚರಿತ್ರೆಯನ್ನು ನಾನು ಬರೆದಿದ್ದೇನೆ. ತಮ್ಮ ಬಸವೇಶ್ವರನ ಕಾಲ ಎಂಬ ಉದ್ಗ್ರಂಥವನ್ನು ಓದಿದೆನು. ಆದರೂ ನನಗೆ ಸಮರ್ಪಕವಾಗಿ ಅವರು ಹುಟ್ಟಿದ ತಾರೀಖು, ಇಸವಿ, ಅವರು ಐಕ್ಯ ಹೊಂದಿದ ಇಸ್ವಿ ಇಲ್ಲವೆ ಮಿತಿ ಹೇಳುವುದಿಲ್ಲ. ತಾವು ದಯಮಾಡಿ ಅವುಗಳನ್ನಷ್ಟು ತಿಳಿಸುವಿರೆಂದು ನಂಬಿದ್ದೇನೆ....... ತಮ್ಮ ಪತ್ರ ಬಂದನಂತರ... ಪುಸ್ತಕ ಕಳಿಸುವೆನು

(ತಾವು ಬರೆದ ಪುಸ್ತಕಗಳನ್ನು) ದಯಮಾಡಿ ಬೇಗನೆ ಉತ್ತರ ಕೊಡುವಿರೆಂದು ನಂಬಿದ್ದೇನೆ.

ಸದಾಶಿವ ವೀರಭದ್ರಪ್ಪ ಹಂಜಿ.

(ಸಂ. ೧೩೭. ಪು. ೮)

(ಪ್ರತಿಕ್ರಿಯೆಯಿಲ್ಲ)

೨೬)

Dunda Lingappa  
Sholapur

Sholapur  
28-5-59

Respected Editor Saddharma deepike.

We are very proud of your kindness that you supplied us with your monthly. We are one of the mission of establishing and publishing in new public, the Tattwas published in your 'Saddharmadeepike' your monthly helped us month in our mission. Now the very source of help is stopped accidently.

Please excuse me and take troubles to send the same. That is the only way for us to fight out our point with the "kevaladvit mata" siting our work towards "Dharma" and our poverty in finances. Please sent us your monthly and oblige.

Your Sincerely,

Dunda Lingappa.

(ಪ್ರತಿಕ್ರಿಯೆ)

ಕೇವಲಾದ್ವೈತ ಮತದವರೊಂದಿಗೆ ವಿಮರ್ಶೆಮಾಡಬೇಕೆಂಬ ಈ ಶ್ರೀ ದುಂಡ ಲಿಂಗಪ್ಪನವರು ಸೊಲ್ಲಾಪುರ ಇವರಿಗೆ ಪತ್ರಿಕೆಗಳನ್ನು ಕಳಿಸುತ್ತಲೇ ಇದ್ದೇವೆ.

- ಪ್ರಕಾಶಕ

(ಸಂ. ೧೫೧, ಪು. ೧)

೨೭) ವೇ. ಕರವೀರ ಶಾಸ್ತ್ರಿಗಳು ಚಿನ್ನೂರು
ಹೊಂದಿಮಠ ಚಿನ್ನೂರ. ೩೧-೫-೫೯

ತಿಳಿಸುವುದೇನಂದರೆ ನಿಜಗುಣ ಶಿವಯೋಗಿಗಳ ಕಾಲ ಯಾವುದು ? ಬಸವೇಶ್ವರನ ಕಾಲ ಯಾವುದು ? ಇದರಲ್ಲಿ ಬಸವೇಶ್ವರ ಮೊದಲಿನವನೋ ? ನಿಜಗುಣ ಶಿವಯೋಗಿಕಾಲ ಮೊದಲಿನದೋ ದಯವಿಟ್ಟು ತಿಳಿಸಿರಿ. ಪಂಚಾಚಾರ್ಯ ಚರಿತ್ರೆಯ ಕಂ(ಖಂ)ಡನೆ ಬರೆಯುವವರಿದ್ದೇವೆ ತಿಳಿಯಿರಿ. ನಿಮ್ಮ ಚರಿತ್ರೆಯಲ್ಲಿ ಬಸವೇಶ್ವರ ನಿಂದಿತ್ತಲಿಯ ಆಧಾರವದೆಯಲ್ಲಾ ! ಅತ್ತಲಿನ ಒಂದೂ ಆಧಾರ ನಿಮಗೆ ಸಿಕ್ಕಂತೆ ಕಾರಣ ನಿಮಗೆ ಬಸವೇಶ್ವರನಿಗಿಂತಾ ಮೊದಲೇ ಪಂಚಾಚಾರ್ಯರು ಇದ್ದರೆಂಬ ಬಗ್ಗೆ ನಿಮ್ಮ ಲೇಖ ಖಂಡನೆ ಮಾಡುತ್ತೇವೆ. ಸಮಾಜದಲ್ಲಿ ನಿಮ್ಮಿಂದ ಇಲ್ಲದ ಗೊಂದಲ ಎಬ್ಬಿಸಿದ್ದೀರಿ. ತೀವ್ರ ಉತ್ತರ ಬರೆಯಿರಿ.

(ಸಂ. ೧೫೧. ಪು. ೧.)

(ಪ್ರತಿಕ್ರಿಯೆ ರೂಪ ಉತ್ತರ)

ಇವರು ಪಂಚಾಚಾರ್ಯರ ಚರಿತ್ರೆಯ ಖಂಡನೆಯನ್ನು ಬರೆಯತಕ್ಕವರಿದ್ದಾರೆ ಎಂಬುದನ್ನು ತಿಳಿದು ಸಂತೋಷವಾಗಿದೆ. ಒಂದೊಂದು ವಿಷಯದ ವಿಮರ್ಶೆಗಳು ನಡೆದರೆ ಕೊನೆಗೆ ನಿಜಸಂಗತಿಯು ಹೊರಬೀಳುತ್ತದೆ. ಇವರ ಖಂಡನೆಯನ್ನು ನೋಡಿ ಅದರ ವಿಮರ್ಶೆಯನ್ನು ಮಾಡುವವರೂ ಇರಬಹುದು. ಈಗ ಪ್ರಕಟವಾಗಿರುವ 'ರೇವಣಸಿದ್ಧರು' ಎಂಬ ಚರಿತ್ರೆಯಲ್ಲಿ ಬಸವೇಶ್ವರನಿಂದ ಈಚಿಗಿನ ಕಾಲದ ಆಧಾರವಿದೆ ಎಂದೂ, ಅದಕ್ಕಿಂತ ಮುಂಚಿನ ಆಧಾರವಿಲ್ಲವೆಂದೂ, ಬಸವೇಶ್ವರನಿಗಿಂತ ಮೊದಲೇ ಪಂಚಾಚಾರ್ಯರು ಇದ್ದರೆಂಬ ಬಗ್ಗೆ ಪ್ರಕಟಿಸಿ ಇವರು ಈ ಚರಿತ್ರೆಯ ಲೇಖನವನ್ನು ಖಂಡನೆ ಮಾಡುತ್ತಾರೆಂಬ ಮುಖ್ಯ ಅಭಿಪ್ರಾಯವು ಮೇಲೆ ಕಂಡ ಪತ್ರದಲ್ಲಿ ಇದೆ. ಬಸವೇಶ್ವರನ ತರುವಾಯ ಕಾಲದ ಶ್ರೀ ರೇವಣಸಿದ್ಧರ ಚರಿತ್ರೆಯನ್ನು ಒಪ್ಪಿಕೊಂಡಲ್ಲಿ ಅದರ ಖಂಡನೆಯನ್ನು ಬರೆಯಲಿಕ್ಕೆ ಕಾರಣವೇ ಇಲ್ಲ. ಈ ಚರಿತ್ರೆಯಲ್ಲಿ ಕಾಣದೆ ಇದ್ದ ಭಾಗವನ್ನು ಎಂದರೆ ಕ್ರಿ. ಶ. ೧೨ ನೆಯ ಶತಮಾನಕ್ಕಿಂತ ಪೂರ್ವದಲ್ಲಿ ರೇವಣಸಿದ್ಧರು (ಈಗ ಪಂಚಾಚಾರ್ಯರಲ್ಲಿ ಒಬ್ಬರೆಂದು ಗಣಿಸಲ್ಪಡುವವರು) ಇದ್ದರೆಂಬುವನ್ನು ತಕ್ಕ ಶಿಲಾಶಾಸನ ಇತಿಹಾಸ ಸಂಬಂಧದ ಇತರ ಆಧಾರಗಳು ಮುಂತಾದವುಗಳಿಂದ ತೋರಿಸಿಕೊಡುವುದಾದರೆ ಸಮಾಜವೇ ಒಪ್ಪುತ್ತದೆ. ಈ ಪ್ರಕಾಶಕನೂ ಒಪ್ಪುತ್ತಾನೆ. ಆಗ ಅದು ಶ್ರೀ ರೇವಣರ ಚರಿತ್ರೆಯ ಮತ್ತೊಂದು ಭಾಗವಾಗಿ ಪರಿಣಮಿಸುತ್ತದೆ. ಹೀಗೆ ಈಗ ಪ್ರಕಟವಾದ ಶ್ರೀ ರೇವಣರ

ಚರಿತ್ರೆಯನ್ನೂ, ಈ ಶಾಸ್ತ್ರಗಳು ಮುಂದೆ ಪ್ರಕಟಿಸುವುದಾದರೆ, ಆ ಚರಿತ್ರೆಯನ್ನೂ ಕೂಡ ಸಮಾಜದವರು ತಿಳಿದುಕೊಳ್ಳಲಿ. ಈ ಬಗೆಗೆ ಈಗಲೂ ಭಿನ್ನಾಭಿಪ್ರಾಯವಿಲ್ಲ, ಕೆಲವು ವರ್ಷಗಳ ಹಿಂದೆ, ಈ ಪ್ರಕಾಶಕನು ಬಸವೇಶ್ವರನಿಗಿಂತ ಮುಂಚೆ ಶ್ರೀ ರೇವಣ ಸಿದ್ಧರು ಇದ್ದರು ಎಂದು ವಾದಿಸುವವನಾಗಿದ್ದನು. ಇತಿಹಾಸಕಾರರು ಮಾಡಿದ ಶೋಧಗಳು, ಶಿಲಾಲಿಪಿಗಳು ಇತಿಹಾಸವೆಂದು ಭಾವಿಸಬಹುದಾದ ಪುಸ್ತಕಗಳಲ್ಲಿನ ಸಂಗತಿಗಳೇ ಮೊದಲಾದವುಗಳನ್ನು ನೋಡಿ ನೋಡಿ, ಈಗ ಆಚಾರ್ಯರೆಂದು ಗಣಿಸಲ್ಪಡುವ ಶ್ರೀ ರೇವಣರು ೧೨ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಇರಲಿಲ್ಲವೆಂದು ಮನಗಂಡಿದ್ದಾನೆ. ಮುಂದೆ ಯಾರಾದರೂ ಬಸವೇಶ್ವರನಿಗಿಂತ ಪೂರ್ವದವರೆಂಬುದನ್ನು, ಅವರು ಆಗ ಮಾಡಿದ ಕೆಲಸವನ್ನೂ, ಆ ಕೆಲಸಗಳ ಸುಮಾರು ಕಾಲವನ್ನೂ ತಿಳಿಸಿ, ಈಗ ಪ್ರಕಟವಾದ ಚರಿತ್ರೆಯಲ್ಲಿನ ೭೫ ಪ್ರಕರಣಗಳಲ್ಲಿ ಹೇಳಿದುದಕ್ಕಿಂತ ಬೇರೆಯಾದ ವಿಷಯಗಳನ್ನು ತೋರಿಸುವುದಾದರೆ ಪ್ರಕಾಶಕನ್ನು ತಲೆ ಬಗ್ಗಿಸಿ ಆ ಭಾರವನ್ನು ಹೊರುತ್ತಾನೆ. ಈ ಪ್ರಕಾಶಕನು ಈಗಿನ ಸಮಾಜದಲ್ಲಿ ಗುರುವೂ ಅಲ್ಲ ಜಂಗಮವೂ ಅಲ್ಲ. ಯಾವುದೊಂದು ಪಕ್ಷವನ್ನು ಹಿಡಿದು ವಾದಿಸಬೇಕೆಂಬ ಹಠವಾದಿಯೂ ಅಲ್ಲ. ನಿಜವಾದ ಅಂಶವನ್ನು ಹೊರಗೆಕಂಡು ಅದನ್ನು ಸಮಾಜವು ಅಂಗೀಕರಿಸುವಂತೆ ಆಗಿ ಸಮಾಜವು ಒಂದು ಅಭಿಪ್ರಾಯದಲ್ಲಿ ಇರುವಂತೆ ಆಗಲಿ, ಎಂದು ಹಾರೈಸುವವನೂ, ಅದಕ್ಕೆ ತಕ್ಕ ಪ್ರಯತ್ನ ಮಾಡುವವನೂ ಆಗಿದ್ದಾನೆ.

"ಸಮಾಜದಲ್ಲಿ ನಿಮ್ಮಿಂದ ಇಲ್ಲದಗೊಂದಲ ಎಬ್ಬಿಸಿದ್ದೀರಿ" ಎಂಬ ಮೇಲೆ ಕಂಡ ಪತ್ರದಲ್ಲಿನ ವಾಕ್ಯವು ಸಮಾಜದ ಗಮನವನ್ನು ಹೆಚ್ಚಾಗಿ ಸೆಳೆಯುತ್ತಲಿದೆ. ಬಸವೇಶ್ವರನಿಗಿಂತ ಪೂರ್ವದಲ್ಲಿ ಆಚಾರ್ಯರಿದ್ದರು ಎಂಬುದು ಸಮಾಜದಲ್ಲಿನ ಕೆಲವರ ಅಭಿಪ್ರಾಯ. ಬಸವೇಶ್ವರನ ಕಾಲದಲ್ಲಿಯೇ ಇದ್ದರು ಎಂದು ಕೆಲವರ ಅಭಿಪ್ರಾಯ. ಈಗಿನ ಆಚರಣೆಯಲ್ಲಿ ಬಹುಮಟ್ಟಿಗೆ ಬಸವೇಶ್ವರನ ಕಾಲದ ಶೂನ್ಯ ಪೀಠದ ಅಲ್ಲ-ಮಾಪ್ರಭುಸ್ವಾಮಿಗಳ ಅನುಯಾಯಿಗಳಾದ ವಿರಕ್ತ ಜಂಗಮಸ್ವಾಮಿಗಳು ಪಂಚಾಚಾರ್ಯ ಪೀಠದ ಅನುಯಾಯಿಗಳಾದ ಗುರುವರ್ಗದ ಮಠಸ್ಥರು ಇವರನ್ನು ಕೂಡಿಕೊಂಡೇ ಸಮಾಜದಲ್ಲಿನ ದೀಕ್ಷೆವಿವಾಹಾದಿ ಕಾರ್ಯಗಳೆಲ್ಲ ನಡೆಯುತ್ತಲಿವೆ. ಇತರ ಪ್ರತಿನಿಧಿಗಳಾದ ಕೆಲಸಗಳು ಈ ಕಾರ್ಯದಲ್ಲಿ ಸ್ಥಾಪಿಸಲ್ಪಡುತ್ತವೆ. ಹೀಗೆ ಎರಡು ಪಂಗಡದವರೂ ಕೂಡಿ ಕೆಲಸಮಾಡುತ್ತಿರುವುದು ಎಂದಿನಿಂದ ಪ್ರಾರಂಭವಾಯಿತು ? ಯಾವ ಸ್ಥಳದಲ್ಲಿ ನಡೆಯಿತು ? ಹೇಗೆ ನಡೆಯಿತು ? ಎಂದು ತಿಳಿದುಕೊಳ್ಳುವುದೇ ಮುಖ್ಯ ಕೆಲಸವಾಗಿದೆ. ಬಸವೇಶ್ವರನಿಗಿಂತ ಮುಂಚಿನವರಾಗಿ, ಆಚಾರ್ಯರಿದ್ದರೆ ಅವರ ಕಾಲದಲ್ಲಿ ವಿರಕ್ತಜಂಗಮರಾಗಿದ್ದರು ಎಂಬುದನ್ನು ತಿಳಿಯಬೇಕಾಗುತ್ತದೆ. ಹಾಗೆ ಜಂಗಮರು ಇದ್ದು ಕೆಲಸಮಾಡಿದುದು ಏನು ? ಅವರ ಹೆಸರುಗಳು ಯಾವುವು ? ಪರಂಪರೆ ಏನು ? ಎಂಬುದು ಇದುವರೆಗೂ ಇತಿಹಾಸರೂಪವಾಗಿ ತಿಳಿದಿಲ್ಲ,

ವೀರಶೈವರಲ್ಲಿ ಪ್ರಚಲಿತವಾಗಿರುವ ಪುರಾಣಾದಿ ಗ್ರಂಥಗಳಿಂದಲೂ ತಿಳಿದುಬರುವುದಿಲ್ಲ. ಬಸವೇಶ್ವರನಿಗಿಂತ ಹಿಂದೆ ಬರೇ ಗುರುವರ್ಗದವರೇ ಇದ್ದಿದ್ದರೆ, ಶ್ರೀರೇವಣಸಿದ್ಧರ ಮಗನಾದ ರುದ್ರಮುನಿಯು ಅನೇಕ ಸಂದರ್ಭಗಳಲ್ಲಿ ಕಲ್ಯಾಣದಬಸವೇಶ್ವರನೊಡನೆ ಅಲ್ಲಮಪ್ರಭುಸ್ವಾಮಿಗಳ ಅನುಯಾಯಿಗಳೊಡನೆ ತಮ್ಮ ತಂದೆ ಸಹಿತವಾಗಿ ನಡೆದುಕೊಂಡಂತೆ ಅನೇಕಾಧಾರಗಳು ಸಿಕ್ಕುವುದರಿಂದ ಇವರಿಗಿಂತ ಪೂರ್ವದಲ್ಲಿ ಇವರ ಪೀಠದ ಸಂಬಂಧದವರಾಗಿ ಗುರುಪರಂಪರೆ ಹೇಗಿದ್ದಿತು ? ಯಾರಿದ್ದರು ? ಏನು ಕೆಲಸಮಾಡಿದರು ? ಎಂಬುದು ಇದುವರೆಗೂ ತಿಳಿದುಬಂದಿಲ್ಲ. ಶ್ರೀ ರೇವಣ ಸಿದ್ಧರನ್ನೂ ಪೂರ್ವಾಚಾರ್ಯರೆಂದು ಕರೆಯುವದಕ್ಕೆ ಅನೇಕ ಕಡೆಗಳ ಆಧಾರಸಿಕ್ಕುತ್ತದೆ. ಇದರಿಂದ ಈಗ ಗಣಿಸಲ್ಪಡುವ ಪಂಚಾಚಾರ್ಯರು ಅವರ ಕಾಲದವರೇ, ಅವರ ಅನ್ಯಯಾಯಿಗಳೇ ಎಂಬುದು ಸ್ಪಷ್ಟಪಡುತ್ತದೆ. ಅವರ ಕಾಲ ಕ್ರಿ. ಶ. ೧೨ನೆಯ ಶತಮಾನ. ಅದನ್ನನುಸರಿಸಿಯೇ ಅವರ ಸಂಬಂಧದ ಪುರಾಣಾದಿಗಳಲ್ಲಿ ಹೇಳಲ್ಪಟ್ಟ ಕಾರ್ಯಗಳನ್ನು ಶೋಧಿಸಿ ಈಗ ಶ್ರೀ ರೇವಣಸಿದ್ಧರ ಚರಿತ್ರೆಯು ಸಿದ್ಧವಾಗಿದೆ. ಇದನ್ನು ಬಿಟ್ಟು ಬಸವೇಶ್ವರನಿಗಿಂತ ಹಿಂದಿನ ಕಾಲದವರು ಗುರುವರ್ಗದವರೆಂದರೆ ಅವರಿಗೆ ಜಂಗಮರೇ ಇಲ್ಲ. ಗುರುಗಳ ಪರಂಪರೆಯೂ ಸಿಕ್ಕುವುದಿಲ್ಲ. ಹೀಗಿರುವಾಗ ಗುರುವರ್ಗದವರು ಬಹುಪೂರ್ವದವರೆಂದು ಹೇಳುವುದು ಇಲ್ಲದಗೊಂದಲ. ಈ ಗೊಂದಲವನ್ನು ಎಬ್ಬಿಸಿರುವುದು ಇದರಲ್ಲಿಯೇ ಇದೆ, ಎನ್ನುವುದಕ್ಕೆ ಮೇಲಿನ ಇವರ ಬರಹವೇ ಸಾಕ್ಷಿಯಾಗಿದೆ. ಈ ಗೊಂದಲವನ್ನು ತಿದ್ದಬೇಕಾದುದು ಈಗ ಸಮಾಜಕ್ಕೆ ಅತ್ಯವಶ್ಯಕವಾಗಿಬೇಕಾಗಿದೆ. ಸಮಾಜವು ಒಂದೇ ಅಭಿಪ್ರಾಯದಿಂದ ಇರಬೇಕಾಗಿದೆ. ಹೀಗೆ ತಿದ್ದುವ ಕೆಲಸವನ್ನು ಈ ಶಾಸ್ತ್ರಿಗಳು ಮಾಡಬೇಕಾದರೆ ಮೇಲೆಬರೆದಂತೆ ೧೨ನೆಯ ಶತಮಾನಕ್ಕಿಂತಪೂರ್ವದ ಗುರುಗಳು ಯಾರು ? ಅವರ ಪರಂಪರೆ ಏನು ? ಅವರು ಯಾವ ಕೆಲಸಗಳನ್ನು ಮಾಡಿದರು ? ಎಂಬುದನ್ನು ಆಯಾ ಕಾಲದ ಗ್ರಂಥಗಳೊಡನೆ ಅನುಕ್ರಮವಾಗಿ ತೋರಿಸಿ ಇತಿಹಾಸ ಶೋಧಕರಿಗೆ ಸರಿಬರುವಂತೆ ಒಪ್ಪಿಸಬೇಕು. ಹಾಗೆಮಾಡದಿದ್ದರೆ ಇಲ್ಲದ ಗೊಂದಲವನ್ನು ಇವರೇ ಎಬ್ಬಿಸಿದಂತಾಗುತ್ತದೆ. ಈಗ ಪ್ರಕಟಿಸಿದ ಶ್ರೀ ರೇವಣರ ಚರಿತ್ರೆಯಲ್ಲಿ ಅವರು ಮಾಡಿದ ಕೆಲಸಗಳನ್ನು ಗ್ರಂಥಗಳೊಡನೆ ಹೋಲಿಸಿ ನಿಜಾಂಶವನ್ನು ಶೋಧಿಸಿ ಹೊರಗೆಡವಿದುದಾಗಿದೆ. ಬಹುಮಟ್ಟಿಗೆ ಎಲ್ಲಾ ಕೆಲಸಗಳು ೧೨ನೆಯ ಶತಮಾನದಲ್ಲಿ ನಡೆದವುಗಳೆಂಬುವನ್ನು ತೋರಿಸಿ ಇದೆ. ಇವರ ಜೊತೆಗೆ ಪ್ರಭುಸ್ವಾಮಿಗಳ ಪರಂಪರೆಯವರು ಕೂಡಿದ್ದುದು, ಸಮಾಜರಚನೆ ಮಾಡಿದುದು ಕಲಶಗಳನ್ನೇರ್ಪಡಿಸಿದುದು ಈಗಿನ ರೂಢಿ ಹೇಗೆ ಬಂದಿತೆಂಬುದು ಸಹ ವಿವರಿಸಲ್ಪಟ್ಟಿದೆ. ಆದುದರಿಂದ ಸಮಾಜದಲ್ಲಿ ಇದ್ದ ಗೊಂದಲವನ್ನು ತಪ್ಪಿಸುವುದಕ್ಕಾಗಿ ಈ ಪುಸ್ತಕ ವಿದೆಯೇ ಹೊರತು ಎಬ್ಬಿಸುವುದಕ್ಕಾಗಿ ಅಲ್ಲ. ಹೀಗೆ ತಿದ್ದುವ ಕೆಲಸವನ್ನೇನಾದರೂ ಈ ಶಾಸ್ತ್ರಿಗಳು ಮಾಡಿದರೆ ಅವರ ಉಪಕಾರವನ್ನು ಬಹಳವಾಗಿ ಸ್ಮರಿಸುತ್ತೇನೆ.

ಆದರೆ ಅವರ ಪ್ರಕಟನೆಯು ಮೇಲೆ ಕಂಡ ಶಂಕೆಗಳನ್ನೆಲ್ಲ ಹೋಗಲಾಡಿಸುವಂತೆ ಇರಬೇಕು. ಈ ವಿಷಯದಲ್ಲಿ ಅವರೆ ಎಚ್ಚರವಿರಲಿ.

ಈ ಕಾಲದಲ್ಲಿ ಶ್ರೀ ರೇವಣಸಿದ್ಧರು ಶೈವರೆಂದೂ ಅವರಿಂದ ವೀರಶೈವ ಕಾರ್ಯವು ಏನೂ ನಡೆದಿಲ್ಲವೆಂದೂ ಕೆಲವರು ಹೇಳುತ್ತಿದ್ದಾರೆ. ಹೀಗೆ ಹೇಳುವವರು ಶ್ರೀರೇವಣರ ಸಂಬಂಧದ ಪೂರ್ಣವಿಷಯಗಳನ್ನು ತಿಳಿದವರಲ್ಲವೆಂದು ಭಾವಿಸಿ ಶ್ರೀ ರೇವಣರು ವೀರಶೈವರಿಗಾಗಿ ಮಾಡಿದ ಸಾಹಸಕಾರ್ಯಗಳು ಬಹಳವಾಗಿವೆ ಎಂದು ಸರ್ವರಿಗೂ ತಿಳಿಯುವಂತೆ ಈ ಚರಿತ್ರೆಯಲ್ಲಿ ಪ್ರಕಟಿಸಿದುದಾಗಿದೆ. ಹೇಗೆ ವೀರಶೈವರ ಐಕ್ಯ ಮತ್ಯತೆಯನ್ನು ಸಾಧಿಸುವುದಕ್ಕಾಗಿ ಈ ಪ್ರಕಾಶಕನ ಕುತೂಹಲವು ಹೆಚ್ಚಾಗಿದೆ.

ಇವರು ನಿಜಗುಣಶಿವಯೋಗಿಯ ಕಾಲವು ಯಾವುದೆಂದು ಪ್ರಶ್ನೆಮಾಡಿದ್ದಾರೆ. ಅವರ ಕಾಲವನ್ನು ಪ್ರಕಾಶಕನಿಗೆ ತಿಳಿದಂತೆ ನಿರ್ಧರಿಸಿ ಶ್ರೀರೇವಣರ ಚರಿತ್ರೆಯಲ್ಲಿಯೇ ಬರೆಯಲಾಗಿದೆ. ಅದು ಕ್ರಿ. ಶ. ೧೩ನೆಯ ಶತಮಾನ ಎಂದು ಗೊತ್ತಾಗಿದೆ. ಈ ವರ್ಷದ ಯುಗಾದಿಯಲ್ಲಿ ಬೆಂಗಳೂರಿನಲ್ಲಿ ನಡೆದ ಜಯಂತ್ಯುತ್ಸವದಲ್ಲಿ ಕರ್ನಾಟಕ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾದ ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಶ್ರೀ ನಿಜಗುಣರ ಕಾಲವು ೧೩ನೆಯ ಶತಮಾನವೆಂದು ಭಾಷಣಮಾಡಿದ್ದಾರೆ. ಇನ್ನು ಕೆಲವರು ಕ್ರಿ. ಶ. ೧೪೫೦ಎಂದು ಮುಂತಾಗಿ ಪ್ರಕಟಿಸಿದ್ದಾರೆ. ಏನಾದರೂ ಆಗಲಿ ಶ್ರೀ ನಿಜಗುಣರ ಕಾಲಮಾನವನ್ನು ತಿಳಿಯುವುದರಿಂದ ಪಂಚಾಚಾರ್ಯರ ಪ್ರಾಚೀನ (ಬಸವೇಶ್ವರನ ಕಾಲದ ಹಿಂದಿನ ಕಾಲವು) ನಿಜಗುಣರ ಗ್ರಂಥದಿಂದ ಸಿದ್ಧವಾಗುತ್ತದೆ ಎಂದು ಯೋಚಿಸಬಾರದು. ಸರಿಗೂಡುವ ಅನೇಕ ವಿಷಯಗಳಿಂದ ಅದನ್ನು ಸಿದ್ಧಗೊಳಿಸ ಬೇಕೆಂಬುದನ್ನು ಈ ಶಾಸ್ತ್ರಿಗಳು ಚೆನ್ನಾಗಿ ಯೋಚಿಸಿಕೊಂಡಿರಲಿ.

—ಪ್ರಕಾಶಕ

(ಸಂ. ೧೫೧. ಪು. ೨–೪)

೨೮) ಸದಾಶಿವ ಬಡಿಗಣ್ಣನವರ (ತಾರೀಖು ಇಲ್ಲ).
ಗದಗ

ಮಾನ್ಯರೇ, ವಂದನೆಗಳು.

ಸದ್ಧರ್ಮದೀಪಿಕೆ ಮಾಸಪತ್ರಿಕೆಯು ಈವರೆಗೂ ೧೫೧ ಸಂಚಿಕೆಗಳು ಪ್ರಕಟವಾಗಿವೆ. ಈ ಪತ್ರಿಕೆಯು ವೀರಶೈವ ಧಾರ್ಮಿಕದ ಬಗ್ಗೆ ಹಾಗು ಮಹಾಪುರುಷರ ಜೀವನ ಚರಿತ್ರೆಯ ಬಗ್ಗೆ ಸಂಶೋಧನೆ ಮಾಡುವುದರಲ್ಲಿ ಎತ್ತಿದ ಕೈ, ಎಂದು ವಾಚಕರು ಹೇಳದೆ ಇರಲಾರರು. ಸದ್ಧರ್ಮದೀಪಿಕೆಯು ಹೀಗೆಯೇ ಸದಾ ಮುಂದುವರಿಯಲೆಂದು ಹಾರೈಸುವ.

ತಮ್ಮ ವಿಶ್ವಾಸಿ
ಸದಾಶಿವ ಬಡಿಗಣ್ಣನವರ.

(ಪ್ರತಿಕ್ರಿಯೆ)

ಈ ಲೇಖಕರು ಅಭಿಪ್ರಾಯಪಡುವಂತೆ...ವೀರಶೈವರ ಮೂಲ ಮಹನಿಯರ ಚರಿತ್ರೆಯನ್ನು ಸಂಶೋಧನಮಾಡಿ ಬರೆಯುವುದು ಕಷ್ಟದ ಕೆಲಸವಾದರೂ ಸಮಾಜವು ನಿಜವಾದ ಸಂಗತಿಯನ್ನು ತಿಳಿಯಲೆಂದು...ತಿಳಿದ ವಿಷಯಗಳನ್ನು ನಿಜವಾದ ಇತಿಹಾಸವೆಂದು ಕಂಡು ಬಂದವುಗಳನ್ನು ಪ್ರಕಟಿಸುತ್ತಲಿದ್ದೇವೆ. ಚರಿತ್ರೆಯು ಒಬ್ಬರದಮಾತಲ್ಲ. ಒಬ್ಬರು ತಪ್ಪು ಹೇಳಿದಾಗ ಇನ್ನೊಬ್ಬರು-ಶೋಧಿಸಿ ತಿದ್ದುವುದಕ್ಕೆ ಬರುವಂತಹುದು. ಇದಕ್ಕಾಗಿ ಸಮಾಜದವರು....ಶೋಧಕರ ಅಂಶವನ್ನು ಒಮ್ಮೆಗೆ ತಿರಸ್ಕರಿಸದೆ ನಿಧಾನವಾಗಿ ಪರಿಶೋಧಿಸಿ ತಿಳಿಯುವುದು ಒಳ್ಳೆಯದು. ವೀರಶೈವೇತರರು ಆಚಾರ್ಯರ ಚರಿತ್ರೆಯನ್ನು ಒಬ್ಬೊಬ್ಬರೊಂದೊಂದು ವಿಧವಾಗಿ ಕಾಲಶೋಧನೆಯನ್ನು ಬರೆದರೂ, ಯಾವ ವಿರೋಧ ತೋರಿಸದೆ ಸಹವರ್ತಿಗಳಾಗಿ ತಮ್ಮ ಶೋಧನೆಯನ್ನು ಆ ಸಮಾಜದವರು ನಡೆಸುತ್ತಾರೆ....ಶಂಕರಾಚಾರ್ಯರ ಕಾಲವನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರೂ ಹೊಸಹೊಸ ಶೋಧಕರು ಇನ್ನೂ ಬರೆಯುತ್ತಲಿದ್ದಾರೆ. ವೀರಶೈವರೂ ಹಾಗೆ ಮಾಡಬೇಕು. ತಕ್ಕ ಇತಿಹಾಸ ಶೋಧನೆಯಿಂದ ಪೂಜ್ಯ ಮಹನಿಯರ ಚರಿತ್ರೆಯನ್ನು ಶೋಧಿಸಿ ಪ್ರಕಟಿಸುವವರನ್ನು ಈ ಪ್ರಕಾಶಕನು ಬಹಳವಾಗಿ ಪ್ರೀತಿಸುತ್ತಾನೆ. ನಿಜವಾದ ಇತಿಹಾಸಕ್ಕೆ ತಲೆಬಗ್ಗಿಸುತ್ತಾನೆ. ಅಂತಹ ಕೆಲಸವನ್ನು ಕೊಡಲೆಂದು ಸಮಾಜವನ್ನು ಪ್ರಾರ್ಥಿಸುತ್ತಾನೆ. ಸಮಾಜದವರು ಹಾಗೆ ಮಾಡುವವರೆಗೊ ಈಗಿನ ಶೋಧನೆಯ ಅಂಶಗಳನ್ನು ನಿಜವೆಂದು ಒಪ್ಪುವವರಾಗಲಿ.

—ಪ್ರಕಾಶಕ

(ಸಂ. ೧೫೨-ಪು. ೧-೨)

೨೯) (ಈಗಿನ ಸರ್ಪಭೂಷಣಮಠ, ಶಿರಾಳಕೊಪ್ಪ ವಿರಕ್ತಮಠ, ಮತ್ತು ನಂದಿ ಗೇರಿ ಮಾಗಡಿ ಮಠಾಧ್ಯಕ್ಷರಾದ ವೇದಾಂತಾಚಾರ್ಯ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು ಕಾಶಿಯಲ್ಲಿ ವಿದ್ಯಾಭ್ಯಾಸಮಾಡುವಾಗ ಬರೆದ ಪತ್ರ)

"ಮುಕ್ತ್ಯಂಗನಾ ಕಂಠಮಾಲೆ ಹಾಗು ಶಿವಯೋಗದರ್ಪಣ ಗ್ರಂಥಗಳು ತಲು ಪಿದುವು. ಅವು ಉತ್ತಮವಾಗಿರುವುವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ನಿಮ್ಮ ಸತತ ಪರಿಶ್ರಮದ ಫಲವಾಗಿ ಈ ರೀತಿ ಗ್ರಂಥಗಳು ಪ್ರಕಾಶಿತವಾಗಿರುವುದು ಸಮಾಜಕ್ಕೆ ಮಹದುಪಕಾರವಾಗಿರುವುದೆಂದೇ ಹೇಳಬಹುದು. ಶ್ರೀ ಪಂ. ಗೋಪಿನಾಥ ಕವಿ ರಾಜರಿಗೆ ಗ್ರಂಥಗಳನ್ನು ತೋರಿಸಲಾಯಿತು. ಅವರಿಗೆ ಹೊಸ ವಿಷಯುವಾವುದೂ ಇಲ್ಲ, ಆದರೆ ಗ್ರಂಥಗಳು ಉತ್ತಮ ಕೋಟಿಯವೆಂದು ತಿಳಿಸಿದರು. ಅವರು ಜ್ಞಾನ ನಿಧಿಯಾಗಿರುವುದರಿಂದ ಅವರ ಬಗ್ಗೆ ಹೆಚ್ಚು ಬರೆಯುವುದು ಅನವಶ್ಯ. ಇದು ಅತಿಶಯೋಕ್ತಿಯಲ್ಲ. ನಿಮ್ಮಂಥವರು ಅವರ ಸಂದರ್ಶನ ಮಾಡಿದ್ದರೆ ನಮ್ಮ ಸಮಾಜದ ಸೌಭಾಗ್ಯವೆಂದು ಹೇಳಬಹುದು.*

ಕಾಶಿ ಇತ್ಯಾಶಿಷ್ಯ,

೧೮–೫–೧೯೬೦ (ಸಂ. ೧೫೯–೬೦. ಪು. ೧೪)

*ಶ್ರೀ ಚೆನ್ನಮಲ್ಲಿಕಾರ್ಜುನರ ಮುಖ್ಯವಾದ ಕೆಲವು ಪತ್ರವ್ಯವಹಾರ ಮತ್ತು ಅವರ ಪ್ರತಿ ಕ್ರಿಯೆಗಳನ್ನು ಇಲ್ಲಿ ನಾವು ಸಂಗ್ರಹಿಸಿದ್ದೇವೆ. ಇನ್ನೊಂದು ಮುಖ್ಯ ವಿಷಯವೆಂದರೆ ಜರ್ಮನ್ ದೇಶದ 'ಕೀಲ್' ವಿಶ್ವವಿದ್ಯಾನಿಲಯದ ಪ್ರೊಫೆಸರ್ ಒಬ್ಬರೊಡನೆ ಶ್ರೀ ಚೆ. ಅವರು ವೀರಶೈವ ತತ್ತ್ವಜ್ಞಾನದ ಬಗೆಗೆ ಬಹು ದೀರ್ಘಕಾಲ ಪತ್ರವ್ಯವಹಾರವನ್ನಿಟ್ಟು ಕೊಂಡಿದ್ದರು. ನಮಗೆ ಆ ದಾಖಲೆಗಳು ಸಿಕ್ಕದಿದ್ದುದು ಒಂದು ಕೊರತೆಯೆನಿಸಿದೆ.

—ಸಂಪಾದಕರು

## ಶ್ರೀ ಚನ್ನಮಲ್ಲಿಕಾರ್ಜುನರು ಬರೆದ 'ಬಸವೇಶ್ವರನ ಕಾಲ' ಗ್ರಂಥದ ಬಗೆಗೆ ವೀರಭದ್ರಪ್ಪ ಹಾಲಭಾವಿ ಅವರು ಬರೆದ ಒಂದು ರಾಜಕೀಯ ಪತ್ರ ಈ ಕೆಳಗಿನಂತೆ ಇದೆ

---

"ಬಸವೇಶ್ವರನ ಕಾಲ"ದ ಸಾರಾಂಶವು ಮುಂಬೈ ರಾಜಕೀಯದ ಕೈಸೇರಿತು.

(ಈ ವಿಷಯವಾಗಿ ಬಂದ ಪತ್ರ)

ವಯೋವೃದ್ಧರೂ ಶಿವಾನುಭಾವಿಗಳೂ ಆದ ಶ್ರೀ ಚನ್ನಮಲ್ಲಿಕಾರ್ಜುನ ಅವರಿಗೆ ಅನೇಕ ಶರಣು ಶರಣಾರ್ಥಿಗಳು.

ತಾವು ಬರೆದ ಶ್ರೀ ಬಸವೇಶ್ವರನ ಕಾಲವೆಂಬ ಒಳ್ಳೆಯ ಸಂಶೋಧನಾತ್ಮಕ ಗ್ರಂಥದಿಂದ ಸಮಾಜಕ್ಕೆ ಬಹಳ ದೊಡ್ಡ ಉಪಕಾರವಾದಂತಾಗಿದೆ. ಇದರ ಉಪಯೋಗಮಾಡುವ ಪ್ರಸಂಗವು ಇತ್ತೀಚೆಗೆ ಬಂದು ಸಂಭವಿಸಿತು. ಅದು ಏನೆಂದರೆ—

ಬ್ರಿಟಿಷ್ ಸರಕಾರದವರು, ತಮ್ಮ ಆಡಳಿತೆಯ ಸೌಕರ್ಯಕ್ಕಾಗಿ ಸುಮಾರು ೭೫ ವರ್ಷಗಳ ಹಿಂದೆ ಪ್ರತಿಯೊಂದು ಜಿಲ್ಲೆಯ ಎಲ್ಲ ತರದ ಮಾಹಿತಿಯನ್ನೊಳಗೊಂಡ ಗ್ಯಾಜಿಟಿಯರ್ ಎಂಬ ಗ್ರಂಥಗಳನ್ನು ಪ್ರಕಟಿಸಿರುವುದು ತಮಗೆ ಗೊತ್ತಿರಲಿಕ್ಕೆ ಸಾಕು. ಅವುಗಳನ್ನು ಈಗಿನ ಪರಿಸ್ಥಿತಿಗನುಸಾರವಾಗಿ ಹೆಚ್ಚು ಸಂಶೋಧನೆ ಮಾಡಿ, ತಿದ್ದಿ ಪ್ರಕಟಿಸಬೇಕೆಂದು ಈಗಿನ ಮುಂಬೈ ಸರಕಾರದವರು ಒಬ್ಬ ಅಧಿಕಾರಿಯನ್ನು ನೇಮಿಸಿರುವರು.

ಲಿಂಗಾಯತ ಸಮಾಜದ ವಿಷಯವಾಗಿ ಕರ್ನಾಟಕದ ಜಿಲ್ಲೆಗಳ ಗ್ರಂಥಗಳಲ್ಲಿ ಮಾಹಿತಿ ಇರುವುದು. ಅದರಲ್ಲಿ ಏನೇನು ಹೆಚ್ಚು ಕಡಿಮೆ ಮಾಡಬೇಕೆಂಬುದರ ಬಗ್ಗೆ ದಿವಾನ್ ಬಹದ್ದೂರ್ ಆರ್. ಎಸ್. ಹಿರೇಮಠ ಸಾಹೇಬರಿಗೆ ಬರೆದು ಈಗಿರುವ ಗ್ಯಾಜಿಟಿಯರ್ ಗ್ರಂಥಗಳಲ್ಲಿಯ ಲಿಂಗಾಯತರ ಬಗ್ಗೆ ಬರೆದಿರುವುದರ ನಕಲು ಮಾಡಿ ಕಳಿಸಿದರು. ದಿವಾನ್ ಬಹದ್ದೂರರವರು ಅಲ್ಲಿಯ ಕೆಲವು ಪ್ರಮುಖರಿಗೆ ಈ ನಕಲಿನ ಪ್ರತಿಗಳನ್ನು ಮಾಡಿ ಕಳಿಸಿ ಅವರ ಸೂಚನೆಗಳನ್ನು ಕೇಳಿದರು. ಆದರೆ ಇವರಲ್ಲಿ ವಿಶೇಷ ಜನರು ಇದಕ್ಕೆ ಲಕ್ಷ್ಯ ಕೊಡಲಿಲ್ಲವೆಂಬುದು ಬಹಳ ವಿಷಾದದ ಸಂಗತಿ.

ಶ್ರೀ ಬಸವಣ್ಣನವರ ವಿಷಯವಾಗಿ ಹಿಂದಿನ ಗ್ಯಾಜಿಟಿಯರ್‌ದಲ್ಲಿ ಎಷ್ಟೋ ಅಸಂಬದ್ಧ ಸಂಗತಿಗಳು ಉಲ್ಲೇಖಿಸಲ್ಪಟ್ಟಿರುತ್ತವೆ. ಆಕಸ್ಮಾತ್ತಾಗಿ ಈ ಕಾಲಕ್ಕೆ ನಾನು ತಮ್ಮ ಗ್ರಂಥವನ್ನು ಓದುತ್ತಿದ್ದೆನು. ನನ್ನ ಈಗಿನ ಪರಿಸ್ಥಿತಿಯಲ್ಲಿ ಸ್ವತಂತ್ರ ಸೂಚನೆಗಳನ್ನು ಮಾಡುವುದು ಕಠಿಣವಾಗಿತ್ತು. ತಮ್ಮ ಗ್ರಂಥವು ಈ ಬಗ್ಗೆ ಬಹಳ ಸಹಕಾರಿಯಾಯಿತು. ಅದರ ಸಾರಾಂಶವನ್ನು ತೆಗೆದು ಅದನ್ನು ಮೇಲೆ ಹೇಳಿದ ಅಧಿಕಾರಿಗಳ ಕಡೆಗೆ ತಿಳಿಸಿರುತ್ತದೆ. ಗ್ಯಾಜಿಟಿಯರುಗಳಲ್ಲಿಯ ಲಿಂಗಾಯತರ ಬಗ್ಗೆ ಇರುವ

ಬೇರೆ ಬೇರೆ ವಿವರಗಳನ್ನು ದಿವಾನ್ ಬಹದ್ದೂರರವರು, ಶ್ರೀ ಬುದ್ಧಯ್ಯನವರು, ಮತ್ತು ನಾನು ಕೂಡಿ, ಸರಿಯಾಗಿ ತಿದ್ದಿ ಕಳಿಸಿರುತ್ತೇವೆ. ಅವರು ಇದು ಮುಟ್ಟಿದ ಬಗ್ಗೆ ತಮ್ಮ ಆಭಾರಮನ್ನಿಸಿ ಉತ್ತರ ಕಳಿಸಿದ್ದಾರೆ.

ಇನ್ನೂ ತಮಗೆ ಒಂದು ಸೂಚನೆಯನ್ನು ಮಾಡಬಯಸುತ್ತೇನೆ. ಬಸವಣ್ಣನವರ ಬಗೆಗೆ ಇತರ ಪಂಡಿತರು ಬರೆವ ಲೇಖನಗಳ ಬಗ್ಗೆ ವಿಮರ್ಶೆಯು ತಮ್ಮ ಗ್ರಂಥದಲ್ಲಿರುವುದು ಸರಿಯಷ್ಟೆ. ಅದರಲ್ಲಿ ಮುಖ್ಯವಾಗಿ ಅವರ ಕಾಲದ ವಿಷಯವೇ ಇರುವುದರಿಂದ ಇತರ ವಿವರಗಳ ಬಗ್ಗೆ ಸಂಪೂರ್ಣ ಉಲ್ಲೇಖವಿರುವುದಿಲ್ಲ. ಈಗ ಶ್ರೀ ಪಾಂಡುರಂಗರಾವ್ ದೇಸಾಯಿಯವರು ಚಾಲುಕ್ಯ ಮತ್ತು ಕಲಚೂರ್ಯ ರಾಜಮನೆತನದ ಇತಿಹಾಸವನ್ನು ಸಾಹಿತ್ಯ ಪರಿಷತ್ಪತ್ರಿಕೆ ಮುಂತಾದವುಗಳಲ್ಲಿ ಪ್ರಕಟಿಸುತ್ತಿರುವರು. ಇದರಲ್ಲಿ ಬಸವಣ್ಣನವರ ವಿಷಯವಾಗಿ ಸರಿಯಾದ (ಪೂರ್ಣ?) ಅಭಿಪ್ರಾಯವಿರುವುದಿಲ್ಲ. ಬಸವಣ್ಣನವರ ಕಾಲದ ವಿಷಯವು ಎಷ್ಟು ಮಹತ್ವದ್ದೋ ಆತನಿಗೆ ೧೧೩೧ ರಲ್ಲಿ ವೀರಶೈವ ದೀಕ್ಷೆಯನ್ನಾರು ಮಾಡಿದರು ? ಆಗ ವೀರಶೈವ ಸಮಾಜದ ಧಾರ್ಮಿಕ ಪರಿಸ್ಥಿತಿ ಹೇಗಿತ್ತು ? ಆತನು ಯಾವ ಯಾವ ಪಟ್ಟಣಗಳಲ್ಲಿ ಎಷ್ಟೆಷ್ಟು ಕಾಲ ಕಳೆದನು ? ಅನುಭವ ಮಂಟಪದ ಸ್ಥಾಪನೆ ಯಾವಾಗ ಆಯಿತು ? ಅದರಲ್ಲಿ ಚರ್ಚೆಯು ಎಷ್ಟು ವರ್ಷ ನಡೆಯಿತು ? ಆಗಿನ ರಾಜಕೀಯ ಪರಿಸ್ಥಿತಿ ಏನಿತ್ತು ? ಈ ಮೊದಲಾದ ವಿಷಯಗಳು ಹೆಚ್ಚು ಮಹತ್ವದವು ಇರುವುದರಿಂದ ಇವುಗಳ ಬಗ್ಗೆ ತಾವು ಇಲ್ಲಿಯವರೆಗೆ ಪ್ರಯಾಸಪಟ್ಟಂತೆ ಒಳ್ಳೆಯ ಸಂಶೋಧನೆ ನಡೆಸಿ ಇನ್ನೊಂದು ಗ್ರಂಥ ಪ್ರಕಟಿಸಬೇಕೆಂದು ದಿವಾನ್ ಬಹದ್ದೂರರವರು ಶ್ರೀ ಬುದ್ಧಯ್ಯ ಸ್ವಾಮಿಗಳು ಮತ್ತು ನನ್ನ ಆಗ್ರಹ ಸೂಚನೆ ಅದೆ. ಈ ಕಾರ್ಯವು ಎರಡನೆಯವರಿಂದ ಆಗಲು ಶಕ್ಯವಿಲ್ಲ.

ಶ್ರೀ ಬಸವೇಶ್ವರನು ಈ ಕಾರ್ಯವನ್ನು ನೆರವೇರಿಸಲು ತಮಗೆ ಆಯುರಾರೋಗ್ಯವನ್ನು ದಯಪಾಲಿಸಲೆಂದು ಬೇಡುತ್ತೇವೆ.

ವೀರಭದ್ರಪ್ಪ ಹಾಲಭಾವಿ.

(ಸಹಿ ಇದೆ.)

(—ಸಂ. ೧೧೮-೧೧೯)

# ೨. ವಾದಭೂಮಿ

[ವೀರಶೈವ ಸಿದ್ಧಾಂತದ ಬಗೆಗೆ ತತ್ಸಂಬಂಧದ ಇನ್ನಿತರ ವಿಷಯಗಳ ಬಗೆಗೆ ಇತರರ ಅಭಿಪ್ರಾಯಗಳು ಸರ್ಮಪಕವೆಂದು ತೋರದಿದ್ದಾಗ ಶ್ರೀ ಚೆನ್ನಮಲ್ಲಿಕಾರ್ಜುನರು ಅವರ ವಾದವನ್ನು ಖಂಡಿಸಿ ತಮ್ಮ ಪತ್ರಿಕೆಯಲ್ಲಿ ಸೂಕ್ತ ಉತ್ತರಗಳನ್ನು ಕೊಡುತ್ತಿದ್ದುದಕ್ಕೆ ಕೆಲವು ಮಾದರಿಗಳನ್ನು ಈ ಕೆಳಗೆ ನೋಡಬಹುದು]

(೧) ಪಾಲ್ಕುರಿಕೆ ಸೋಮನಾಥ ಕವಿ. (ಸಂ. ೮೩–೮೪ ಪು. ೨೭–೨೮).

ತಾಯಿನಾಡು ದಿನಪತ್ರದಲ್ಲಿ (೧೬-೪-೪೯) 'ಹೈದರಾಬಾದಿನ ಸಾಹಿತ್ಯಕ್ಷೇತ್ರ' ಎಂಬ ಶಿರೋಲೇಖದಲ್ಲಿ ವೀರಶೈವರವಲ್ಲಿ ಪ್ರಸಿದ್ಧನಾದ 'ಪಾಲುಕುರಿಕೆ ಸೋಮನಾಥ' ಕವಿಯ ವಿಷಯವಾಗಿ ಹೀಗೆ ಪ್ರಕಟಿಸಲ್ಪಟ್ಟು ಇದೆ :

"ಪಾಲುಕುರಿಕೆ ಸೋಮನಾಥ ತೆಲುಂಗಾಣದ ಮಿಲ್‌ಟನ್. ಈತನು ತೆಲುಂಗಾಣದ ಅತ್ಯಂತ ಪೂರ್ವಕವಿ. ಹದಿಮೂರನೆಯ ಶತಮಾನದಲ್ಲಿ ಮಹಾಕಾಕತೀಯರ ವೈಭವದ ಕಾಲದಲ್ಲಿ ಈತನು ಬಾಳಿದನು. ಇವನು ವರಂಗಲ್ಲು ಜಿಲ್ಲೆಯ ಪಾಲುಕುರಿಕೆಯಲ್ಲಿಯೇ ಸಿದ್ಧಿಯನ್ನು ಸಾಧಿಸಿದನು. ವೀರಶೈವ ಮತಸ್ಥಾಪಕನಾದ ಶ್ರೀಬಸವೇಶ್ವರನ ಮತವನ್ನು ಬೆಳಸಿದವರಲ್ಲಿ ಈತನು ಅಗ್ರಗಣ್ಯನಾಗಿದ್ದಾನೆ. ಪಾಲುಕುರಿಕೆ ಸೋಮನಾಥನು ದ್ವಿಭಾಷಾ ವಿಶಾರದನು. ಸಂಸ್ಕೃತ ಮತ್ತು ತೆಲಗು ಈ ಎರಡು ಭಾಷೆಗಳಲ್ಲಿ ಕಾವ್ಯಗಳನ್ನು ಬರೆದಿದ್ದಾನೆ. ಮಿಲ್‌ಟನ್‌ನಂತೆ ಇವನು ಕಾವ್ಯ ಮತ್ತು ವಾದಗಳಿಂದ ವೀರಶೈವ ಮತವನ್ನು ಬೆಳಿಸಿದವನು. ಬ್ರಾಹ್ಮಣನಾಗಿದ್ದರೂ ಇವನು ಧರ್ಮವನ್ನು ಬಿಟ್ಟು ವೇದಗಳನ್ನು ಖಂಡಿಸಿ ಶೈವಮತವನ್ನೇ ಪ್ರಚಾರ ಮಾಡಿದನು.

ಬಸವ ಪುರಾಣ, ಪಂಡಿತಾರಾಧ್ಯಚರಿತೆ, ವೃಷಾಧಿಪಶತಕಗಳು ಇವನ ತೆಲಗುಕೃತಿಗಳು. ಅಲ್ಲದೆ ಸಣ್ಣ ಪುಟ್ಟಕವಿತೆಗಳನ್ನು ಬರೆದಿದ್ದಾನೆ. ಬಸವ ಪುರಾಣದಲ್ಲಿ ಬಸವೇಶ್ವರನ ಜೀವನ ಚರಿತ್ರೆಯನ್ನು ಕಾವ್ಯದಲ್ಲಿ ಬರೆದಿದ್ದಾನೆ. ಪಂಡಿತಾರಾಧ್ಯರ ಚರಿತ್ರೆಯಲ್ಲಿ ಮಹಾಶೈವಾಚಾರ್ಯನಾದ ಮಲ್ಲಿಕಾರ್ಜುನ ಪಂಡಿತನ ಜೀವನ ಚಿತ್ರವಿದೆ. ಸೋಮವನು ಹಳೆಯ ದುರ್‌ಪಾದ ಬಿಟ್ಟು ತೆಲಗುದ್ವಿಪದಿಯನ್ನು ಬಳಸಿದ್ದಾನೆ. ಇವನ ಕಾವ್ಯವಾಹಿನಿಯಲ್ಲಿ ಧರ್ಮಬೋಧಾಮೃತವು ಉಕ್ಕಿಹರಿಯುತ್ತದೆ. ಗೌರನು ೧೫ ನೇಯ ಶತಮಾನದ ಕವಿ. ದ್ವಿನಾದ ಹರಿಶ್ಚಂದ್ರ ಮತ್ತು ನವನಾಥ ಚರಿತ್ರೆಗಳನ್ನು ಬರೆದಿದ್ದಾನೆ. ಇವನು ದೇವರಕೊಂಡದ ವೇಲಮ ಅರಸನ ಒಬ್ಬ ಮಂತ್ರಿಯೊಡನೆ ಬೀಗತನಮಾಡಿದ್ದನು. "ಈತನೂ ಶೈವ ಆದರೆ ಸೋಮನಂತೆ ನಾಸ್ತಿಕನಲ್ಲ......" ಇತ್ಯಾದಿ.

(ಪ್ರತಿಕ್ರಿಯೆ)

ಇಲ್ಲಿ ಸೋಮನಾಥ ಕವಿಯನ್ನು ನಾಸ್ತಿಕನೆಂದು ಕರೆದಿರುತ್ತಾರೆ "ಬ್ರಾಹ್ಮಣನಾಗಿದ್ದರೂ ಇವನು ಧರ್ಮವನ್ನು ಬಿಟ್ಟುವೇದಗಳನ್ನು ಖಂಡಿಸಿ, ಶೈವ ಮತವನ್ನೇ ಪ್ರಚಾರ ಮಾಡಿದನು" ಎಂಬ ಮೇಲಿನ ವಿವರಣದಿಂದ ಸೋಮನಾಥನು ನಾಸ್ತಿಕನಾಗಿ

ಭಾವಿಸಲ್ಪಟ್ಟಿದ್ದಾನೆ ಎಂದು ತಿಳಿಯಬೇಕಾಗಿದೆ. ಅವನು ನಾಸ್ತಿಕನೆಂದು ಯೋಚಿಸಿ ಬಾರದು. 'ನಾಸ್ತಿಕ'ನೆಂಬ ಪದವು ವೇದಗಳನ್ನು ಖಂಡಿಸಿದ ಮಾತ್ರದಿಂದ ಬರುವುದಿಲ್ಲ. ಭಗವದ್ಗೀತೆಯಲ್ಲಿಯೂ ತ್ರಯೊ ಧರ್ಮದಿಂದ (ಮೂರುವೇದಗಳ ಧರ್ಮ) ಸ್ವರ್ಗಲೋಕದ ಸುಖವು ಬರುತ್ತದೆ. ಆ ಪುಣ್ಯ ತೀರಿದ ಕೂಡಲೆ ಮತ್ತೆ ಭೂಲೋಕಕ್ಕೆ ಬಂದು ಹುಟ್ಟುತ್ತಾರೆ ಎಂದು ಬರೆಯಲ್ಪಟ್ಟಿದೆ. ಆದರೆ ಗೀತೆಯು 'ನಾಸ್ತಿಕ' ಎಂದು ಹೇಳಲಿಕ್ಕೆ ಬರುವುದಿಲ್ಲ. ಮಹಾದೇವನು (God) ಇಲ್ಲಿ ಹೇಳುವವರು ನಾಸ್ತಿಕರು. ಇಂತಹ ನಾಸ್ತಿಕನು ಸೋಮನಾಥನಲ್ಲ.

ಸೋಮನಾಥ ಭಾಷ್ಯ ಎಂಬುದೊಂದಿದೆ. ಅದರಲ್ಲಿ ಶಿವಾದ್ವೈತದ ವಿಷಯವನ್ನು ಚೆನ್ನಾಗಿ ತಿಳಿಸುತ್ತಾನೆ. ಅತಿವರ್ಣ ಅತ್ಯಾಶ್ರಮವನ್ನು ಪ್ರತಿಪಾದಿಸುತ್ತಾನೆ. ಅತಿವರ್ಣವೇ ಹಿಂದೂ ದೇಶದಲ್ಲಿ ಶ್ರೇಷ್ಠವಾದ ಧರ್ಮವೆಂದು ಉಪನಿಷತ್ತುಗಳು ಸಾರುತ್ತವೆ. ಈಗ ಅನೇಕರು ಹಿಂದೂ ದೇಶದ ಜನರಲ್ಲಿ ಬ್ರಾಹ್ಮಣವೇ ಶ್ರೇಷ್ಠವಾದ ಧರ್ಮವೆಂದು ತಿಳಿದುಕೊಂಡಿದ್ದಾರೆ. ಅದೇ ತಿಳುವಳಿಕೆಯನ್ನು ನಂಬಿಕೊಂಡು ಈ ಲೇಖಕರು ('ಇಂದು' ಪತ್ರಿಕೆಯ ಲೇಖಕನೊಬ್ಬನು) ಸೋಮನಾಥನನ್ನು ಹೀಗೆ ಕರೆದಿರಬಹುದು. ತಾಯಿನಾಡು ಪತ್ರಿಕೆಯು ಅದನ್ನೇ ಪುನಃ ತೋರಿಸಿಕೊಟ್ಟಿದೆ. ಆದರೆ ಬ್ರಾಹ್ಮಣ್ಯಕ್ಕಿಂತ ಅತಿವರ್ಣವು ಶ್ರೇಷ್ಠ ಎಂಬ ಭಾವನೆಯು ಹಿಂದೂ ದೇಶದ ಜನರಲ್ಲಿ ಇನ್ನೂ ಮೇಲೆ ಚೆನ್ನಾಗಿ ವ್ಯಾಪಿಸಬೇಕಾಗಿದೆ. ನಾರದ ಪರಿವ್ರಾಜ ಕೋಪನಿಷತ್ತು ಮೊದಲಾದವು ಅತಿವರ್ಣವು ಶ್ರೇಷ್ಠ ಎಂದು ಹೇಳುತ್ತವೆ. ಮನುಸ್ಮೃತಿಯ ನಿಬಂಧನೆಗಳು ಆತ್ಮಜ್ಞಾನಿಗೆ ಅನ್ವಯಿಸುವುದಿಲ್ಲ ಎಂದು ಅದರ ಕಡೆಯ ಅಧ್ಯಾಯವು ಹೇಳುತ್ತದೆ. ಇದೇ ಮೊದಲಾದ ಆಧಾರಗಳಿಂದ ಅತಿವರ್ಣ ಅತ್ಯಾಶ್ರಮ ಈ ಆಚಾರಗಳೇ ಶ್ರೇಷ್ಠ ಎಂದು ತಿಳಿಯಬೇಕು. ಹಿಂದಿನ ಮೌಢ್ಯಭಾವನೆಯಿದ್ದರೆ ಅದನ್ನು ತೊಲಗಿಸಬೇಕು. ಇಂತಹ ತತ್ತ್ವಬೋಧೆಯನ್ನೇ ಗ್ರಹಿಸಿ, ಪಾಲ್ಕುರಿಕೆ ಸೋಮನಾಥನು ಅತ್ಯಾಶ್ರಮಿಯಾಗಿದ್ದಾನೆ. ಅವನು ಹಿಂದೂ ದೇಶದ ಧರ್ಮದ ಶ್ರೇಷ್ಠ ಲಕ್ಷಣದ ಅನುಯಾಯಿಯೇ ಹೊರತು ನಾಸ್ತಿಕನಲ್ಲ ಎಂಬುದನ್ನು ಸರ್ವರೂ ಸದಾ ನೆನಪಿನಲ್ಲಿ ಇಟ್ಟಿರಬೇಕು. *

(ಈ ವಿಷಯದ ವಿಮರ್ಶಾತ್ಮಕ ಲೇಖನಗಳಿಗೆ ಈ ಪತ್ರಿಕೆಯು ಅವಕಾಶ ವೀಯುತ್ತದೆ)

—ಪ್ರಕಾಶಕ

(ಸಂ. ೮೩–೮೪, ಪು. ೨೭–೨೯)

---

* ಪಾಲ್ಕುರಿಕೆ ಸೋಮನಾಥರನ್ನು 'ನಾಸ್ತಿಕ'ಎಂದು ಸಂಬೋಧಿಸಿದ ಲೇಖಕರ ಅಭಿಪ್ರಾಯವನ್ನು ಯುಕ್ತಿ ಯುಕ್ತವಾಗಿ ಖಂಡಿಸಿ ಈ ಬಗೆಗೆ ವಿಮರ್ಶಾತ್ಮಕ ಲೇಖನಗಳಿಗೆ ಆಹ್ವಾನವಿತ್ತಿರುವ ಶ್ರೀ ಚೆನ್ನಮಲ್ಲಿಕಾರ್ಜುನರ ಸಮಾಜ ಪ್ರೇಮದ ಬಗೆಗೆ, ವೀರಶೈವ ಸಂಸ್ಕೃತಿಗೆ ಕಳಂಕ ತರುವವರ ಬಗೆಗೆ ಹೇಗೆ ನಿರ್ದಾಕ್ಷಿಣ್ಯವಾಗಿ ಬರೆದಿರುವರೆಂಬುದನ್ನು ಗಮನಿಸಬಹುದು.

# ವೀರಶೈವರಿಂದ ನಾಥ ಪಂಗಡಕ್ಕಾದ ಉಪಕಾರ

'ಬಸವೇಶ್ವರನು ನಾಥ ಪಂಗಡದ ಅನುಯಾಯಿ' ಎಂದು ಕಪಟರಾಳಕೃಷ್ಣ ರಾಯರವರು ಪ್ರಬುದ್ಧ ಕರ್ನಾಟಕ'* ಎಂಬ ಮೈಸೂರು ಸಕಲವಿದ್ಯಾನಿಲಯದಿಂದ ಹೊರಡುವ ಪತ್ರಿಕೆಯಲ್ಲಿ ಲೇಖನ ಪ್ರಕಟಿಸಿದ್ದಾರೆ. ನಮಗೆ ಸಿಕ್ಕಿರುವ 'ಬಸವೇಶ್ವರ ಸ್ತೋತ್ರ ಮಂತ್ರ' ಎಂಬ ಗ್ರಂಥದಿಂದ ವೀರಶೈವರಿಂದಲೇ ನಾಥ ಪಂಗಡಕ್ಕೆ ಉಪಕಾರ ವಾಗಿದೆಯೆಂದೂ, ಆ ಉಪಕಾರ ಸ್ಮರಣೆಗಾಗಿ ಒಬ್ಬ ನಾಥ ಪಂಗಡದವನು ಈ ಗ್ರಂಥ ವನ್ನು ರಚಿಸಿದ್ದಾನೆ ಎಂದೂ ಗೊತ್ತಾಗುತ್ತದೆ. × ರೇವಣಸಿದ್ಧರಿಂದ ನವನಾಥ ಸಿದ್ಧರಿಗೆ ಈ ಬಸವಸ್ತೋತ್ರ ಮಂತ್ರವು ವಿಭೂತಿಸಹಿತವಾಗಿ ಉಪದೇಶಿಸಲ್ಪಟ್ಟಿತೆಂದೂ, ಈ ನವನಾಥ ಸಿದ್ಧರು ಭೂತೇಶ್ವರನೆಂಬುವನಿಗೆ ಕೊಟ್ಟರೆಂದೂ, ಆ ಭೂತೇಶ್ವರ ನಿಂದ ಆ ಭಸಿತವನ್ನು ಗ್ರಂಥಕರ್ತನು ಹೊಂದಿದವನೆಂದೂ ಹೇಳಲ್ಪಟ್ಟಿದೆ. ಇದರಲ್ಲಿ ಅಕ್ಕಮಹಾದೇವಿಯ ವಚನವೂ ಹೇಳಲ್ಪಟ್ಟಿದೆ. ಭಸ್ಮವು ಗುರುವಾದ ಬಸವೇಶ್ವರ ನಿಂದ ಶುದ್ಧಸಿದ್ಧಪ್ರಸಿದ್ಧರೂಪವಾದುದೆಂದೂ ಹೇಳಲ್ಪಟ್ಟಿದೆ. ಇದರಿಂದ (ನಾಥ ಪಂಗಡದವರು) ಬಸವೇಶ್ವರನನ್ನು ಗುರುವೆಂದು ಸ್ಮರಣೆ ಮಾಡಿದುದೂ ತಿಳಿದು ಬರುತ್ತದೆ. ರೇವಣಸಿದ್ಧರ ಸಮಕಾಲೀನರಾದ ನವನಾಥಸಿದ್ಧರು ಅವರ ಶಿಷ್ಯಭೂತೇ ಶ್ವರ–ಈ ಭೂತೇಶ್ವರನ ಶಿಷ್ಯನೇ ಈ ಗ್ರಂಥದ ಕರ್ತೃ. ರೇವಣಸಿದ್ಧರ ತರುವಾಯ ಸುಮಾರು ೨೫–೩೦ ವರ್ಷಗಳಲ್ಲಿ ಈ ಗ್ರಂಥ ಹುಟ್ಟಿರಬೇಕು......................† ಸಾಮಾನ್ಯವಾಗಿ ಶೈವರಿಗೆಲ್ಲರಿಗೂ ಭಸ್ಮಧಾರಣೆ ಅವಶ್ಯಕ ಉಪನಿಷತ್ತುಗಳಲ್ಲೂ ಭಸ್ಮಧಾರಣವು ಶ್ರೇಷ್ಠವೆಂದು ಹೇಳಲ್ಪಟ್ಟಿದೆ. ಬಸವೇಶ್ವರನ ಶುದ್ಧ ಸಿದ್ಧಪ್ರಸಿದ್ಧರೂಪ ಭಸ್ಮವು ಈಗ ವೀರಶೈವರಲ್ಲಿ ಬಳಕೆಯಲ್ಲಿದೆ. ಇದರಿಂದ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ವಿಧಾನವನ್ನು ತಿಳಿದುಕೊಂಡೇ ಆಗ ಭಸ್ಮ ಸಂಸ್ಕಾರವನ್ನು ಮಾಡಿರಬಹುದೆಂದೂ, ಅದರಿಂದ ಈ ನಾಥರಿಗೆ ಮಹತ್ ಫಲಗಳು ತೋರಿರಬಹುದೆಂದೂ ನಂಬಬಹು ದಾಗಿದೆ. ಪಂಡಿತಾರಾಧ್ಯರಿಗೆ ಬಸವೇಶ್ವರನಿಂದ ಭಸ್ಮವುಕಳುಹಿಸಲ್ಪಟ್ಟಿತೆಂದು ವೀರ ಶೈವ ಗ್ರಂಥಗಳಿಂದ ತಿಳಿದುಬರುವುದರಿಂದ ಆ ಕಾಲದಲ್ಲಿ ಭಸ್ಮದ ಮಹಿಮೆಯು ವಿಶಾಲವಾಗಿ ವ್ಯಾಪಿಸಿತೆಂದು ನಂಬಬೇಕಾಗಿದೆ. ಆದರೆ ಸಾಮಾನ್ಯವಾಗಿ ಶೈವರು ಧರಿಸುವ ಭಸ್ಮದಂತಿರದೆ ಶುದ್ಧ ಸಿದ್ಧ ಪ್ರಸಿದ್ಧ ಭಸ್ಮದಲ್ಲಿ ಸಂಸ್ಕಾರ ವಿಶೇಷವುಂಟೆಂಬು

---

* ಪ್ರಬುದ್ಧಕರ್ನಾಟಕದ ಸಂಚಿಕೆ ಸಂಪುಟಗಳ ನಂಬರನ್ನು ಹೇಳಿಲ್ಲ.

× ಆ ಗ್ರಂಥದ ಮೂಲ ಪಾಠವನ್ನೆಲ್ಲ ಶ್ರೀ ಚೆನ್ನಮಲ್ಲಿಕಾರ್ಜುನರು ಈ ಲೇಖನದಲ್ಲಿ ತೋರಿ ಸಿದ್ದಾರೆ. ನಾವು ಅದನ್ನೆಲ್ಲ ಬರೆದಿಲ್ಲ. ಏಕೆಂದರೆ ಅದು ದೀರ್ಘವಾಗಿದೆ.

† ದೀರ್ಘಲೇಖನವನ್ನು ಸಂಕ್ಷೇಪಗೊಳಿಸಿದ್ದೇವೆ.

ದನ್ನು ಮರೆಯಬಾರದು. ಉಪನಿಷತ್ ಮೊದಲಾದ ಗ್ರಂಥಗಳಲ್ಲಿ ಹೇಳಲ್ಪಟ್ಟ ಭಸ್ಮವ್ರತ, ಶಾಂಭವವ್ರತ, ಶಿರೋವ್ರತ ಮುಂತಾದುವು ಇಂತಹ ಭಸ್ಮಕ್ಕೆ ಸಂಬಂಧಿಸಿದ ವಾಗಿರಬೇಕು.......ಈ ಗ್ರಂಥವೂ ಮೂಢ ಭಕ್ತಿಪರಂಪರೆಯನ್ನು ಸೇರಿಕೊಂಡೇ ಇದೆ. ಇರಲಿ. ಈ ವಿಷಯವನ್ನು ಇಲ್ಲಿಗೆ ನಿಲ್ಲಿಸಿ ಇದರಲ್ಲಿನ ಇತಿಹಾಸ ಶೋಧನೆಗೆ ಹೋಗೋಣ.

ಕ್ರಿ. ಶ. ೧೧೬೭ರಲ್ಲಿ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೊರಟು ಹೋದ ನೆಂಬುದು ನಿರ್ವಿವಾದವಾದ ಅಂಶ. ರೇವಣಸಿದ್ಧರು ಬದುಕಿದ್ದಂತೆ ತೋರಿಸುವ ಸಿರಿವಾಳ ಶಾಸನದ ಕಾಲ ಕ್ರಿ.ಶ.೧೧೮೭. ಪ್ರಭುದೇವ ನವನಾಥರಲ್ಲಿ ಒಬ್ಬನಾದ ಗೋರಕ್ಷ ಇವರ ಸಂವಾದವು ನಡೆದುದನ್ನು ನಿಶ್ಚಯಿಸಿದಂತೆ ರೇವಣಸಿದ್ಧರಿಗೂ, ಮರುಳು ಸಿದ್ಧರಿಗೂ, ಗೋರಕ್ಷನೊಡನೆ ಕೊಲ್ಲಾಪುರದಲ್ಲಿ ಸಂವಾದ ನಡೆದಿರುವುದನ್ನು ವೀರ ಶೈವ ಗ್ರಂಥಗಳಿಂದ ತಿಳಿಯಬಹುದು. ಪ್ರಭುದೇವರ ಹೆಸರನ್ನು ನವನಾಥರನ್ನು ವಿವರಿ ಸುವ 'ಹಠಯೋಗ ಪ್ರದೀಪಿಕೆ' ಎಂಬ ಗ್ರಂಥದಲ್ಲಿಯೂ ಕಾಣಬಹುದು. ಆದುದರಿಂದ ಇವರೆಲ್ಲರೂ ಸಮಕಾಲೀನರು. ನವನಾಥಸಿದ್ಧರಿಂದ ಮುಂದೆ ಭೂತೇಶ್ವರನೆಂಬ ನಾಥ ಪಂಗಡದವನಿಗೆ ಭಸ್ಮಮಂತ್ರವಿದ್ಯೆಯು ಹೋಗಿದೆ. ಈ ಭೂತೇಶ್ವರನೂ ಗುರುತಿಸಲ್ಪಡುವುದಕ್ಕೆ ದೊರಕುತ್ತಾನೆ. ತೊರಗಲ್ಲಿನಲ್ಲಿ ಭೂತನಾಥನ ದೇವಾಲಯವಿದೆ. ೧೨ ನೆಯ ಶತಮಾನದ ಕೊನೆಯ ಭಾಗದ ಸು.ಕ್ರಿ.ಶ. ೧೧೮೯ ರ ಒಂದು ಶಾಸನವೂ ಆ ತೊರಗಲ್ಲಿನ ಕಚೇರಿಯಲ್ಲಿ ಶೇಖರಿಸಲ್ಪಟ್ಟಿದೆ. ನಾಥ ಪಂಗಡದವರು ಪ್ರಖ್ಯಾತರಾದ ವರು ತಮ್ಮ ಹೆಸರಿನಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸುತ್ತಿದ್ದುದು ಕಂಡು ಬರುವುದರಿಂದ ಅಲ್ಲಿನ ಭೂತನಾಥ ದೇವಾಲಯವು ಭೂತೇಶ್ವರನಿಂದ ಕಟ್ಟಲ್ಪಟ್ಟು ದಾಗಿರಬೇಕು. ಅವನ ಶಿಷ್ಯನೊಬ್ಬನು ಈ ಗ್ರಂಥವನ್ನು (ಬಸವಸ್ತೋತ್ರ ಮಂತ್ರವೆಂಬ ಗ್ರಂಥವನ್ನು) ರಚಿಸಿರಬೇಕು.

ಇವರಿಂದ ೧೩ ನೆಯ ಶತಮಾನದಲ್ಲಿ ಹುಟ್ಟಿದ ಗ್ರಂಥವಿದು. ಇದರಲ್ಲಿ ಅಕ್ಕ ಮಹಾದೇವಿಯ ವಚನವೂ ಬಂದಿರುವುದರಿಂದ ವಚನ ಪ್ರಚಾರವು ಅಷ್ಟುಹೊತ್ತಿಗೆ ಚೆನ್ನಾಗಿ ನಡೆದಿದ್ದಿತೆಂದು ತಿಳಿಯಲಿಕ್ಕೆ ಬರುವಂತೆ ಇದೆ.

ಇಲ್ಲಿ ಹೇಳಲ್ಪಟ್ಟ ಬಸವಸ್ತೋತ್ರ ಮಂತ್ರವೇ ವೀರಶೈವರ ಬಳಕೆಯಲ್ಲಿಲ್ಲ. ಇದ ಕ್ಕಿಂತ ಭಿನ್ನನಾದ ರೀತಿಯಲ್ಲಿ ಇದೆ ಎಂಬುದನ್ನು ನೆನಪಿನಲ್ಲಿಡಬೇಕು. ವೃಷಭ ಮಹಾ ತ್ಮ್ಯೆಯುತೀರೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುವುದು. ಆದರೂ ಇಲ್ಲಿ ಹೇಳಲ್ಪಟ್ಟಿರು ವುದು ನಾಥ ಪಂಗಡದವರ ತಿಳುವಳಿಕೆಯೇ ಹೊರತು ಅನ್ಯರಿಗೆ ಅನ್ವಯಿಸತಕ್ಕದ್ದಲ್ಲ. (ವಿಮರ್ಶೆಗೆ ಅವಕಾಶಕೊಡಲ್ಪಡುವುದು* (ಸಂ. ೫೭–೫೭. ಪು. ೨೩–೩೨–ಪ್ರಕಾಶಕ.

* ಕಪಟರಾಳ ಕೃಷ್ಣರಾಯರ 'ಬಸವೇಶ್ವರನು ನಾಥ ಪಂಗಡದ ಅನುಯಾಯಿ' ಎಂಬ ಅಭಿ ಪ್ರಾಯವನ್ನು ಖಂಡಿಸಿ 'ವೀರಶೈವರಿಂದಲೇ ನಾಥ ಪಂಗಡಕ್ಕೆ ಉಪಕಾರವಾಗಿದೆ' ಎಂಬು ದನ್ನು ಶ್ರೀ. ಜೆ. ಅವರು ತೋರಿಸಿದ್ದಾರೆ.

# ಕನ್ನಡ ಸಂಶೋಧನೆಯಲ್ಲಿ
# ಶ್ರೀ ಶ್ರೀನಿವಾಸ ಮೂರ್ತಿಯವರ ಉಪನ್ಯಾಸ

[ಇದೊಂದು ದೀರ್ಘವಾದ ವಾದವಿವಾದಗಳಿಂದ ಕೂಡಿದ ಸಮಸ್ಯೆ. ೩೦-೩-೫೨ ರಲ್ಲಿ ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಯವರು ಕನ್ನಡಸಾಹಿತ್ಯ ಪರಿಷದಧ್ಯಕ್ಷರು. ಬೆಂಗಳೂರು ಇವರು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯವರು ಏರ್ಪಡಿಸಿದ 'ಕನ್ನಡ ಸಂಶೋಧನೋಪನ್ಯಾಸಗಳು' ಎಂಬ ಉಪನ್ಯಾಸಮಾಲಿಕೆಯಲ್ಲಿ 'ಪ್ರಭು ದೇವರು' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಆ ಉಪನ್ಯಾಸಸಾರವನ್ನು ತಾ. ೪-೪-೫೨ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆ ಪ್ರಕಟಿಸಿತು. ಆ ಪ್ರಕಟನೆಯನ್ನು ಧಾರವಾಡದ ಸಾವಧಾನ ಪತ್ರಿಕೆ ಮತ್ತು 'ಶರಣಸಾಹಿತ್ಯ' ಬೆಂಗಳೂರು ಈ ಎರಡು ಪತ್ರಿಕೆಗಳು ಖಂಡಿಸಿ ಲೇಖನ ಬರೆದವು.ಶ್ರೀ.ಜೆ. ಅವರ ಸದ್ಧರ್ಮದೀಪಿಕೆಯೂ ಖಂಡಿಸಿ ಬರೆಯಿತು. ಈ ಪ್ರಸಂಗವನ್ನು ಈ ಲೇಖನದಲ್ಲಿ ನಾವು ಸಂಕ್ಷೇಪತಃ ಇಲ್ಲಿ ವಿವರಿಸಿ ಸಿದ್ದೇವೆ.—ಸಂ.]

### ಶ್ರೀ ಎಂ. ಆರ್. ಶ್ರೀ ಅವರ ಭಾಷಣದಲ್ಲಿ ಅಲ್ಲಮಪ್ರಭು

"...ಇವರ ವಚನಗಳಲ್ಲಿ ಬಸವಾದಿಗಳಂತೆ ಪರತತ್ತ್ವಕ್ಕೆ ಶರಣುಹೋದ ಮೊರೆಯಿಲ್ಲ. ಸಿದ್ಧಪುರುಷನ ಧೀರ ಉಪದೇಶ ಸರಣಿ ಇರುತ್ತದೆ. ಅಲ್ಲಮನು ಮನಸ್ಸಿಗೆ ಮಾಡಿದ ಉಪದೇಶದಿಂದ ಅವನ ಮನಸ್ಸಿನ ಮಟ್ಟ ಏನಿತ್ತೆಂದು ಗೊತ್ತಾಗುವುದು. 'ಎಲೆಮನವೇ ನಿನ್ನನಿಜವ ತಿಳಿವೊಡೆಕೇಳು, ನಿನ್ನ ಒಡವೆ ಜ್ಞಾನ ರತ್ನ. ಅದನ್ನು ಕೆಳಗೆ ಇಡದೆ ನಡೆ. ಅಂದರೆ ಶಿವನು ತೃಪ್ತನಾಗುವನು'.

ಲೋಕ ಸಂಚಾರ ಮಾಡುತ್ತಾ ಅಲ್ಲಮನು ಕಲ್ಯಾಣಕ್ಕೆ ಬಂದನು. ಈ ಬರುವಿಕೆ ಬಸವನ ಅನುಯಾಯಿಗಳಲ್ಲಿ ಕೆಲವರಿಗೆ ಸೇರಲಿಲ್ಲ. ಅವನನ್ನು ಅಸೂಯೆಯಿಂದ ನೋಡಿದರು. ಅಲ್ಲಮನು ಆತ್ಮಜ್ಞಾನಿಯಾದ್ದರಿಂದ ಅಧಿಕಾರ ಬಲವಿದ್ದಿತು. 'ಸದ್ಭಕ್ತಿ ಸದಾಚಾರವಿಲ್ಲದ ಗುರುಲಿಂಗ ಬಂತೇನೋ ಮರುಳೇ' ಎಂದು ಕೇಳುವ ಧಾರ್ಷ್ಟ್ಯ ಅವನಲ್ಲಿತ್ತು....."

ಇನ್ನು ಅಲ್ಲಮನು ಸಿದ್ಧರಾಮನಿಗೆ ಇಷ್ಟಲಿಂಗ ಕಟ್ಟಿಸಿದ, ಎಂಬ ಮಾತಿನಿಂದ ಅವನ ಸ್ಥಾನವನ್ನು ಕೆಳಗೆಳೆಯುವ ಸಾಹಸ ನಡೆದಿದೆ. ದೆಲ್ಲ ಉದಾತ್ತ ಆತ್ಮಜ್ಞಾನಿಯಾದ ಅಲ್ಲಮನಿಗೆ ಸರಿಹೋಗುವುದಿಲ್ಲ. ಇಷ್ಟಲಿಂಗ ಎಂದರೇನು ? ಎಂಬ ವಿಷಯ ಇನ್ನೂ ನಿಷ್ಕರ್ಷೆಯಾಗಬೇಕಾಗಿದೆ. ಅದು ಸಿಂಹ ವಿಷ್ಟರದ ಮೇಲೆ ಸಾಲಿಗ್ರಾಮದಂತೆ ಇಟ್ಟು ಪೂಜಿಸುವ ವಸ್ತುವಾಗಿರಬೇಕೆಂದು ನನಗೆ ತೋರುತ್ತದೆ.

ಹೃದಯದಲ್ಲಿ ದೇವರನ್ನಿಟ್ಟುಕೊಂಡವನಿಗೆ ಇಷ್ಟಲಿಂಗವೇಕೆ ? ಲಿಂಗವನ್ನು ಕಟ್ಟಿದವ ದೊಡ್ಡವನಲ್ಲ. ವಿಶ್ವಾತ್ಮನಾದವನಿಗೆ ವಿಧಿನಿಷೇಧಗಳೇಕೆ ? ಅದಕ್ಕೆ ಏನು ಕಟ್ಟುಹಾಕುವಿರಿ. ಅಲ್ಲಮನು ವಿಶ್ವಾತ್ಮ; ವಿಶ್ವಕ್ಕೆ ಸೇರಿದ್ದಾನೆ. ಅವನಿಗೆ ಕಟ್ಟು ಹಾಕುವ ಬಗೆ ಹೇಗೆ ? ಪೂರ್ಣಜ್ಞಾನಿ. ಲೌಕಿಕದ ಸಂಪರ್ಕವನ್ನು ತೊರೆದ ಮಹಾ ವ್ಯಕ್ತಿ. ಎಲ್ಲರ ಸೊತ್ತು. ಈ ಪ್ರಕಾರ ವೀರಶೈವರು ಅಲ್ಲಮನ ಜೀವನವನ್ನು ಅಭ್ಯಾಸಮಾಡಿ, ಅವನ ನಿಜವಾದ ಯೋಗ್ಯತೆಯನ್ನು ಕಂಡುಕೊಂಡರೆ ಸಾರ್ಥಕ್ಯ.‡ (ಖಂಡನೆ)

## ಇಷ್ಟಲಿಂಗ

ಇಷ್ಟಲಿಂಗದ ಲಕ್ಷಣವನ್ನು ಶ್ರೀ ಶ್ರೀಯವರು ಹೇಳಿರುವುದು ಪ್ರಭುದೇವರ ಅಭಿಪ್ರಾಯಕ್ಕೆ (ಶಿವಶರಣರ ಶಿವಾದ್ವೈತ ತತ್ತ್ವಕ್ಕೆ) ಸರಿಯೇ ? ಎಂಬುದನ್ನು ವಿಮರ್ಶಿಸಿ ನೋಡೋಣ. 'ಪ್ರಭುದೇವರ ವಚನಗಳು' ಎಂಬ ಪುಸ್ತಕದಲ್ಲಿ*

"....ಘನಕ್ಕೆ ಘನವಾದ ವಸ್ತುತಾನೆ ಗುರುವಾದ; ತಾನೆ ಲಿಂಗವಾದ; ತಾನೆ ಜಂಗಮವಾದ; ತಾನೆ ಮಂತ್ರವಾದ.... ತಾನೆ ಸಕಲವಿದ್ಯಾಸ್ವರೂಪನಾದ; ಇಂತಿವೆಲ್ಲ ವನೊಳಕೊಂಡು ಎನ್ನ ಕರಸ್ಥಳಕ್ಕೆ ಬಂದ ಬಳಿಕ ಇನ್ನು ನಿರ್ವಿಕಾರ ಗುಹೇಶ್ವರ"

(೮, ೫೫. ಪು ೩೯)

ಇದರಿಂದ ವೀರಶೈವರ ಕರಪೀಠದಲ್ಲಿನ ಇಷ್ಟಲಿಂಗವು ವ್ಯಾಪಕವಾದುದೆಂದು ವ್ಯಕ್ತವಾಗುತ್ತದೆ. ಇಂತಹ ಇಷ್ಟಲಿಂಗವನ್ನು ಪ್ರಾಣಲಿಂಗದೊಡನೆ ಸಂಯೋಗಿಸಿದಾಗ ಸರ್ವವ್ಯಾಪಕವಾಗಬಲ್ಲುದು. ಏಕೆಂದರೆ ಪ್ರಾಣವು ಸರ್ವಸ್ವವನ್ನು ತಿಳಿಯಬಲ್ಲ ಮನಸ್ಸಿನ ಜ್ಞಾನದೊಡನೆ ಕೂಡಿಕೊಂಡಿರುವುದು.

ಹೃದಯ ಕಮಲದೊಳಗೊಂದು ಮರಿದುಂಬಿ ಹುಟ್ಟಿತ್ತು....
ಪಂಚವರ್ಣದ
ಹಂಸೆ ಪಂಜರವ ಖಂಡಿಸಿದರೆ ಗರಿ ಮುರಿದು ತುಂಬಿ ನೆಲಕ್ಕೆ ಉರುಳಿತ್ತು.
ನಿಜಮುದಯದ ಬೆಡಗಿನ ಕೀಲ ಗುಹೇಶ್ವರಾ ನಿಮ್ಮ ಶರಣರನುಭಾವ
ಸಂಗದಲ್ಲಿರ್ದು ಕಂಡೆನಯ್ಯ. (ಅದೇ ೮. ೯೫ ಪು. ೫೮)

ಇದರಿಂದ ಹೃದಯಕಮಲದಲ್ಲಿ ನಿಜವಸ್ತುವಿನ (ಲಿಂಗದ) ಉತ್ಪತ್ತಿಯ ಬೆಡಗಿನ ಮೂಲವನ್ನು ಶಿವಶರಣರು ಅನುಭಾವದಲ್ಲಿ ಬಲ್ಲವರೆಂಬುದು ವ್ಯಕ್ತವಾಗುತ್ತದೆ.

---

‡ ಇಲ್ಲಿಂದ ಮುಂದೆ ಸಾವಧಾನ ಪತ್ರಿಕೆಯಲ್ಲಿ, ಶರಣಸಂದೇಶದಲ್ಲಿ ಬಂದ ಖಂಡನೆಯ ಅಂಶವನ್ನು ಶ್ರೀ ಚೆನ್ನಮಲ್ಲಿಕಾರ್ಜುನರು ತಮ್ಮ ಪತ್ರಿಕೆಯಲ್ಲೂ ತಿಳಿಸಿದ್ದಾರೆ. ಇಲ್ಲಿ ಆ ವಿಷಯವನ್ನು ಸೇರಿಸಿಲ್ಲ. ಕೇವಲ ಸದ್ಧರ್ಮದೀಪಿಕೆಯ ಖಂಡನೆಯನ್ನು ಮಾತ್ರ ವಿವರಿಸಿದ್ದೇವೆ. ಎಂ. ಆರ್. ಶ್ರೀಯವರ ಅಭಿಪ್ರಾಯ ಖಂಡನೆ ಪ್ರಾರಂಭವಾಗಿದೆ. ಎಂ. ಆರ್. ಶ್ರೀಯವರಿಗೆ ಶ್ರೀ ಶ್ರೀಯವರು ಎಂದಿಷ್ಟೇ ಹೇಳುತ್ತ ಹೋಗಿದ್ದಾರೆ.

* ವಿಜಾಪುರದ ಮುದ್ರಣ, ೧೯೪೮

"ಅಷ್ಟದಳ ಕಮಲದ ಮೇಲಿಪ್ಪ ನಿಃಶೂನ್ಯ ಮರ್ಮವನರಿಯದೆ ಪ್ರಾಣ ಲಿಂಗವೆಂದೆಂಬರು ಸಂದೇಹ 'ಶು'(ಬು?)ದ್ಧಿಯ ವಂಚಕರು. ಲಿಂಗದಾಸ್ಯಾಯನಕ್ಕೆ ಲಿಂಗವನರಸುವ ಭಂಡರನೇನೆಂಬೆ ಗುಹೇಶ್ವರಾ"

(ಠ. ೩೦. ಪು. ೮೧)

ಪ್ರಾಣವನ್ನೇ ಲಿಂಗ ಎಂದು ಬಾಯಿಯಲ್ಲಿ ಮಾತ್ರ ಮಾತನಾಡುವವರನ್ನು ಖಂಡಿಸಿರುವುದು ಈ ವಚನದಿಂದ ವ್ಯಕ್ತವಾಗುತ್ತದೆ.

"ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ, ಜೀವಕ್ಕೆ ಜೀವವಾಗಿ ಇರ್ದುದನಾರುಬಲ್ಲರೋ ! ಅದು ದೂರವೆಂದು, ಸಮೀಪವೆಂದು, ಮಹಾಂತಗುಹೇಶ್ವರನೊಳಗೆಂದು ಹೊರಗೆಂದು ಬರು ಸೂರೆವೋದರು"

(ಠ ೪೩, ಪು. ೮೩)

ಲಿಂಗವು ಸೂಕ್ಷ್ಮ ತನುರೂಪವಾಗಿ ಸೂಕ್ಷ್ಮ ಮನರೂಪವಾಗಿ ಒಳಗೆ ಹೊರಗೆ ಎಲ್ಲಾ ಕಡೆಯಲ್ಲಿಯೂ ವ್ಯಾಪಕವಿರುವುದು ಎಂಬ ಅಭಿಪ್ರಾಯವು ಇದರಿಂದ ಚೆನ್ನಾಗಿ ವ್ಯಕ್ತವಾಗುವುದು.

"ತಮ್ಮ ತಮ್ಮ ಮುಖದಲ್ಲಿ ಲಿಂಗವನೊಲಿಸಿದವರು ಆರಾಧಿಸಿದವರು ಬೇಡಿದುದ ಪಡೆದರು ಎಲ್ಲ ಲಿಂಗೋಪಭೋಗಿಗಳಾಗಿ ಭೋಗಿಸುವದಿಲ್ಲ."

(ವ. ೭. ಪು. ೮೬)

ಇಲ್ಲಿ ಕಾಣುವ ಲಿಂಗಭೋಗೋಪಭೋಗಿ ಎಂಬ ಪದವು ತನುವಿಗೆ ಇಷ್ಟಲಿಂಗದ ಅವಶ್ಯಕತೆಯನ್ನು ತೋರಿಸುತ್ತದೆ. ಮತ್ತು ಭಿನ್ನರೂಪವಾಗಿ ತಿಳಿದ ಲಿಂಗವನ್ನು ಇದಿರಿಟ್ಟು ಪೂಜಿಸುವವರಿಗೆ ಫಲಪದವಿಯು ಪ್ರಾಪ್ತವಾಗುತ್ತದೆ. ಅದು ಶ್ರೇಷ್ಠವಲ್ಲ ಎಂಬುದನ್ನು ತೋರಿಸುತ್ತದೆ.

"ಅಂಗವ ಕಳೆಯಲೊಂದು ಲಿಂಗವ ಕಂಡೆ; ಲಿಂಗವ ಕಳೆಯಲೊಂದು ಅಂಗವ ಕಂಡೆ. ಅಂಗಲಿಂಗ ಸಂದಣಿಯನರಸಿ ಕಂಡೆ ನೋಡಿದೇ ಅಲ್ಲಿ ಅಯಿದಾನೆ ಶಿವನು. (ಪು. ೧೦)

ಅಂಗಲಿಂಗ ಎರಡೂ ಬೆರಸಿ ಇರಬೇಕೆಂಬ ಅಭಿಪ್ರಾಯವು ಇವರಿಂದ ಹೊರಬೀಳುತ್ತದೆ.

ಮೇಲಿನ ವಚನಗಳನ್ನು ಸಾವಧಾನವಾಗಿ ಪರಿಶೀಲಿಸಿದರೆ, ಅಂಗದ ಮೇಲೆ ಇಷ್ಟಲಿಂಗವನ್ನು ಧರಿಸುವುದು ಅವಶ್ಯಕವೆಂಬುದನ್ನು ಅಲ್ಲಮಪ್ರಭು ಸ್ವಾಮಿಗಳೇ ಹೇಳಿದುದು ವ್ಯಕ್ತವಾಗುತ್ತದೆ. ಶ್ರೀ ಶ್ರೀಯವರು ಪ್ರಾಣಲಿಂಗಿಸ್ಥಲ ಮುಂತಾಗಿ ಕೆಲವು ವಚನಗಳಲ್ಲಿ ಲಿಂಗವನ್ನು ಕಟ್ಟಿದೆನೆಂಬುವವನ್ನು ಖಂಡಿಸಿರುವುದು ಅಂಗಭಿನ್ನವಾಗಿ ಲಿಂಗ, ಲಿಂಗಭಿನ್ನವಾಗಿ ಅಂಗ ಉಂಟೆಂದು ತಿಳಿಯುವವರ ಲಿಂಗಧಾರಣೆಗೇ ಆಗಿರು

ತ್ತದೆ ಎಂಬುದನ್ನು ಚೆನ್ನಾಗಿ ಓದಿ ನಿರ್ಧರಿಸಿಕೊಳ್ಳಬೇಕಾಗಿದೆ. ಇವೆಲ್ಲವನ್ನೂ ಓದಿದವರು ಶ್ರೀ ಶ್ರೀ ಅವರು ಎಂದು ತಿಳಿಯಬಹುದಾದುದರಿಂದಲೇ "ಅವನ ವಚನಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮರ ವಚನಗಳಂತೆ ಅವು ಸುಲಭವಾಗಿಲ್ಲ" ಎಂದು ತಮ್ಮ ಭಾಷಣದಲ್ಲಿ ಮೊದಲೇ ಹೇಳಿದ್ದಾರೆ. ಅಷ್ಟಕ್ಕೆ ವಿರಮಿಸಿದ್ದರೆ, ಶ್ರೀ ಶ್ರೀಯವರ ಗಂಭೀರತೆಯು ಬಹಳ ಉಳಿಯುತ್ತಿತ್ತು. ಅದನ್ನು ಬಿಟ್ಟು—" ಇಷ್ಟಲಿಂಗ ಎಂದರೇನು ? ಎಂಬ ವಿಷಯ ಇನ್ನೂ ನಿಷ್ಕರ್ಷೆಯಾಗಬೇಕಾಗಿದೆ" ಎಂಬ ವಾಕ್ಯದ ಮುಂದೆಯೇ 'ಅದು ಸಿಂಹವಿಷ್ಟರದ ಮೇಲೆ ಸಾಲಿಗ್ರಾಮದಂತೆ ಇಟ್ಟು ಪೂಜಿಸುವ ವಸ್ತುವಾಗಿರಬೇಕೆಂದು ನನಗೆ ತೋರುತ್ತದೆ.' ಎಂದು ಹೇಳಿರುವುದು ಎಂದು ಹೇಳಿರುವುದನ್ನು ನೋಡಿದರೆ ಮೇಲೆ ಕಂಡವುಗಳೇ ಮೊದಲಾದ ಅಲ್ಲಮಪ್ರಭುಗಳ ವಚನಗಳಿಗೆ ಅರ್ಥಮಾಡಿಕೊಂಡಿಲ್ಲವೆಂದು ಹೇಳಬೇಕಾಗುತ್ತದೆ. "ಸಿಂಹವಿಷ್ಟರದ ಮೇಲೆ ಪೂಜಿಸುವಲಿಂಗ"ವು ಇಷ್ಟಲಿಂಗವೆಂದು ಪ್ರಭುದೇವರ ವಚನಗಳಲ್ಲಿ ಒಂದರಲ್ಲಾದರೂ ಇದೆಯೆ ? ಮೇಲೆ ಕಂಡ ೫೫ ನೆಯ ವಚನದಂತೆ ಸರ್ವವ್ಯಾಪಕವಾದ ಘನವಸ್ತುವನ್ನು ಸಿಂಹವಿಷ್ಟರದ ಮೇಲೆ ಶ್ರೀ ಶ್ರೀ ಅವರು ಹೇಗೆ ಕೂಡಿಸುವರು ? ಸಿಂಹವಿಷ್ಟರವಂತಿರಲಿ ಆಕಾಶದ ಮೇಲೆ ಕೂಡಿಸುವೆನೆಂದು ಇವರು ಹೇಳಿದರೂ ಇಷ್ಟಲಿಂಗವು ಅದಕ್ಕೆ ಒಡಂಬಡುವುದಿಲ್ಲ. ಅದು ಸಾಲಿಗ್ರಾಮದಂತೆ ಒಂದು ಸ್ಥಾವರ ಮೂರ್ತಿಯೂ ಅಲ್ಲ. ಅದು ಹೃದಯದ ಪ್ರಾಣಲಿಂಗದೊಡನೆ ಬೆರೆದಿರುವ ವಸ್ತು. ಅಂಗದಿಂದ ಅಗಲವಾದ ವಸ್ತು. ಪ್ರಭುಸ್ವಾಮಿಗೆ ಇಷ್ಟಲಿಂಗವು ಬೇಡವಾಗಿದ್ದಿತು, ಎಂದು ತೋರಿಸುವ ಶ್ರೀ ಶ್ರೀ ಅವರೇ ಈ ಭಾಷಣದ ಆರಂಭದಲ್ಲಿ "ಅವನು (ಅನಿಮಿಷನು) ಹಿಡಿದಲಿಂಗ ಅಲ್ಲಮನ ಕೈಗೆ ಬಂದಿತು. ಆಗ ಅವನು ಜ್ಞಾನಿಯಾದ" ಎಂದು ಹೇಳಿದುದೇಕೆ ?

ಶರಣಸಾಹಿತ್ಯವು ಈ ಬಗೆಗೆ ಹೇಳಿರುವ ಸಮಾಧಾನವು ಹೀಗೆ ಇದೆ.*

"ಇಷ್ಟಾ ಕೃತಾರ್ಥ ಬಂದೊಲಿದಿಕ್ತೆವಾಗಿ ತ ।
ನ್ನಿಷ್ಟಲಿಂಗಮದಕ್ಕು ಈ ಲಿಂಗಮಂ ಸಿಂಹ ।
ಲಿಷ್ಟರದೊಳರ್ಚಿಸರ್ಘ್ಯ ಪಾದ್ಯಾಚಮನ ಜಲಕ್ರಮಮದಲ್ಲದುದನು ।
ಮುಟ್ಟಿಸದಿರೇನುವನನರ್ಪಿಕವನೇನೊಂದು ।
ಕೊಟ್ಟು ಕೆಡಿಸದಿರೆನುತ್ತಾಜ್ಞಾಪಿಸುಪದೇಶ ।
ಗೊಟ್ಟು ಪೋಗಲ್ಕೆ......" (ಸಿಂಗಿ. ಪು. ಸಂಧಿ ೫–೬೧)

ಎಂಬುದು, ಶ್ರೀ ಶ್ರೀ ಯವರಿಗೆ "ಸಿಂಹವಿಷ್ಟರದ ಮೇಲೆ ಇಟ್ಟು ಪೂಜಿಸುವುದು" ಎಂದು ಹೇಳಲಿಕ್ಕೆ ಆಧಾರವಾಗಿರಬಹುದು. ಬಸವೇಶ್ವರನ ಜನನ ಕಾಲದಲ್ಲಿ

---

* ಶರಣ ಸಾಹಿತ್ಯ ಪತ್ರಿಕೆಯು ಎಂ. ಆರ್. ಶ್ರೀಯವರ ಭಾಷಣವನ್ನು ಏಪ್ರಿಲ್ ೧೯೫೩ ರ ಸಂಚಿಕೆಯಲ್ಲಿ ಖಂಡಿಸಿದೆ. ಆ ಖಂಡನೆಯಲ್ಲಿ ಹೀಗೆ ಹೇಳಿದೆ, ಎಂದು ತಿಳಿಯಬೇಕು.

ಕೊಡಲ್ಪಟ್ಟ ಇಷ್ಟಾರ್ಥವನ್ನು ಕೊಡುವ ಲಿಂಗವದು. ವೀರಶೈವರ ಇಷ್ಟಲಿಂಗವಲ್ಲ. (ಈಗ ವೀರಶೈವರಿಗೆ ಜನನ ಕಾಲದಲ್ಲಿ ಕೊಡಲ್ಪಡುವ ಲಿಂಗವು ನಿರಾಕಾರ ಘನ ವಸ್ತುವೇ ಆದರೂ, ಅಂಗಲಿಂಗ ಸಾಮರಸ್ಯವಿಲ್ಲದುದು. ಮುಂದೆ ದೀಕ್ಷಾ ಕಾಲದಲ್ಲಿ ಅಂಗಲಿಂಗ ಸಾಮರಸ್ಯವೂ ಆ ಸಂಬಂಧದ ಮಂತ್ರ ಬೋಧೆಯೂ ಆಗುತ್ತದೆ.)

'ಗುರುಲಿಂಗ ಜಂಗಮರ್ಪಿತವಾದ ಪದಾರ್ಥವನ್ನೇ ಕೊಟ್ಟು, ಮುಂದೆ, ಈ ಕೂಸಿನ ಇಷ್ಟಲಿಂಗದ ಕಳೆಯನ್ನು ಬೆಳೆಸಬೇಕು. ಇಷ್ಟಲಿಂಗವೇ ಇದು ಆಗುತ್ತದೆ. ಎಂದು ಹೇಳಿದ ಮಾತು' ಇದಾಗಿದೆ, ಎಂದು ನಿರ್ಧರಿಸಲಿಕ್ಕೂ ಬರುತ್ತದೆ. ಇದೊಂದು ಪದ್ಯದಿಂದಲೇ ಇಷ್ಟಲಿಂಗವನ್ನು ಅಳೆಯುವುದಕ್ಕೆ ಬರುವುದಿಲ್ಲ.

ಇದರ ಮುಂದಿನ ಪದ್ಯವು ಹೀಗೆ ಇದೆ—

ಉಚಿತೋಚಿತವ ಕರ್ಮಧರ್ಮಗಳನುತ್ಸಾಹ ।
ರಚನೆಗಳ ಲೌಕಿಕೋತ್ತದಿ ನಡಸುತೀರಾರು ।
ಶುಚಿ ದಿನಕೆ ವೃದ್ಧಿ ಸೂತಕಗಳೆದು ತಮ್ಮಿಷ್ಟ ವಿಪ್ರ ಸಂತರ್ಪಣಾರ್ಥ ॥
ರಚಿತ ನಾನಾ ಪದಾರ್ಥಗಳ ಶುಭ ಶೋಭನ ।
ಪ್ರಚಯ ದ್ರವ್ಯಗಳ ಪರುಠವಿಸಿ ಶಿವಯೋಗವಿ ।
ಸ್ವಚಲ ಮಂಗಳದ ಮಂಟಪವೆನಲ್ ತೊಟ್ಟಿಲಂ ಕಟ್ಟಿಸುಮುಹೂರ್ತದಲ್ಲಿ॥

ಬಸವೇಶ್ವರನು ಜನಿಸಿದಾಗ ಪಾಶುಪತ (ಆರಾಧ್ಯಬ್ರಾಹ್ಮಣ) ಸಂಸ್ಕಾರವು ಅವನಿಗೆ ಆಯಿತೆಂದೂ (ಇದೇ ಶಿವಸಿದ್ಧಾಂತಮತ) ಆ ಪ್ರಕಾರ ಶರೀರವು ಮಲೀನ ಲಿಂಗವು ಪವಿತ್ರ ಎಂದು ತಿಳಿದು ಅಂತಹ ಲಿಂಗವನ್ನು ಕೊಟ್ಟು ಮುಂದೆ ಅದೇ ಲಿಂಗವೇ ಸಂಸ್ಕಾರದಿಂದ ಇಷ್ಟಲಿಂಗವಾಗಿ ಆಗುತ್ತದೆ. ಎಂದು ಹೇಳಿದುದಾಗಿ ವ್ಯಕ್ತವಾಗುತ್ತದೆ. (ಪಾಶುಪತರು ಮುಂದೆ ಪಾಶುಪತವ್ರತಿ ಆದರೆ, ಅದೇ ವೀರಶೈವವಾಗುತ್ತದೆ. 'ಬಾರದು ಬಾರದು ಪಶುಪತಿ ವ್ರತವು' ಎಂದು ಬಸವೇಶ್ವರನು ವಚನವನು ಹೇಳಿಲ್ಲವೆ !)

ಬಸವೇಶ್ವರಾದಿಗಳ ಅನೇಕ ವಚನಗಳಲ್ಲಿ ಮೇಲೆ ಕಂಡ ಪ್ರಭುಸ್ವಾಮಿಗಳ ವಚನ್ನ ಗಳಲ್ಲಿ ಇಷ್ಟಲಿಂಗದ ವಿಷಯವು ಹೇಳಲ್ಪಟ್ಟಿದೆ. ಅವುಗಳನ್ನೆಲ್ಲಾ ಚೆನ್ನಾಗಿ ತಿಳಿದು ಕೊಳ್ಳದೆ, "ಸಿಂಹವಿಷ್ಟರದ ಮೇಲಿಡುವುದು" ಎಂದು, ನನಗೆ ತೋರುತ್ತದೆ ಎಂದು ಹೇಳಿರುವುದು ಇವರು ಇಷ್ಟಲಿಂಗವನ್ನು ಸರಿಯಾಗಿ ತಿಳಿದವರಲ್ಲವೆಂದು ಅವರ ಭಾಷಣ ದಿಂದಲೇ ವ್ಯಕ್ತವಾಗುತ್ತದೆ. ಇವರು ಹಾಗೆ ತಿಳಿಸಿದ್ದರೂ "ತಮ್ಮ ಮಟ್ಟಿಗೆ ತಿಳಿದು ಕೊಂಡಿರಲಿ" ಎಂದು ಸೈರಿಸಬಹುದು.

ಮುಂದೆ ವೀರಶೈವರಿಗೆ ಬುದ್ಧಿ ಹೇಳಲಿಕ್ಕೆ ಹೊರಟಿದ್ದಾರೆ. "ಹೃದಯದಲ್ಲಿ ದೇವರನ್ನಿಟ್ಟುಕೊಂಡವನಿಗೆ ಇಷ್ಟಲಿಂಗವೇಕೆ ? ಲಿಂಗವನ್ನು ಕಟ್ಟಿಕೊಂಡವನು ದೊಡ್ಡ ವನಲ್ಲ. (ಅಲ್ಲಮಪ್ರಭುವು) ಪೂರ್ಣಜ್ಞಾನಿ. ಲೌಕಿಕದ ಎಲ್ಲ ಸಂಪರ್ಕವನ್ನೂ

ತೋರಿದ ಮಹಾವ್ಯಕ್ತಿ...... ವೀರಶೈವರು ಅಲ್ಲಮನ ಜೀವನವನ್ನು ಅಭ್ಯಾಸಮಾಡಿ ಅವನ ನಿಜವಾದ ಯೋಗ್ಯತೆಯನ್ನು ಕಂಡುಕೊಂಡರೆ, ಸಾರ್ಥಕ್ಯ" ಎಂದು ಹೇಳಿದ ವಾಕ್ಯಗಳಿಂದ ಇವರು ಅಲ್ಲಮಪ್ರಭುಸ್ವಾಮಿಗಳ ನಿಜವಾದ ಯೋಗ್ಯತೆಯನ್ನು ತಿಳಿದವರೂ, ವೀರಶೈವರಿಗೆ ಬೋಧೆ ಮಾಡತಕ್ಕ ಗುರುಗಳು ಆದಂತೆ ವ್ಯಕ್ತವಾಗುತ್ತದೆ. ಈ ಅಭಿಪ್ರಾಯವು 'ಅಟ್ಟಕ್ಕೆ ಹಾರದ ಕೂಸು ಬೆಟ್ಟಕ್ಕೆ ಹಾರಿತು' ಎಂಬ ಗಾದೆಯನ್ನು ಸ್ಮರಣೆಗೆ ತರುತ್ತದೆ. ಇಷ್ಟಲಿಂಗ ಎಂದರೇನು ? ಎಂಬ ವಿಷಯ ಇನ್ನೂ ನಿಷ್ಕರ್ಷೆ ಯಾಗಬೇಕಾಗಿದೆ' ಎಂದು ಹೇಳಿದ ವ್ಯಕ್ತಿಗೆ ಇಷ್ಟಲಿಂಗಾನುಭಾವಿಗಳಿಗೆ ಬುದ್ಧಿ ಹೇಳುವ ಶಕ್ತಿ ಎಲ್ಲಿಂದ ಬಂದಿತು ?

ಇದರಿಂದ ಇವರು ತಮ್ಮ ಭಾಷಣದಲ್ಲಿ ಹಿಂದೆ ಏನು ಹೇಳಿದ್ದೇನೆ ಎಂಬ ಎಚ್ಚರ ವಿಲ್ಲದೆ ಮುಂದೆ ಹುರಿದುಂಬಿ ಮಾತಾಡಿದಂತೆ ವ್ಯಕ್ತವಾಗುತ್ತದೆ. ಹೀಗೆ ಪೂರ್ವಾ ಪರಿಜ್ಞಾನವಿಲ್ಲದೆ ಇವರು ಯಾಕೆ ಮಾತಾಡಿದರೋ ? ಇದಕ್ಕೆ ಕಾರಣವನ್ನು ಚೆನ್ನಾಗಿ ತಿಳಿಯಬೇಕಾಗಿದೆ. 'ಬಂಜೆ ಬೇನೆಯನರಿಯಳು' ಎಂಬಂತೆ ಲಿಂಗವನ್ನು ಧರಿಸಿದವರು ಅನುಭವಿಸುವ ಶಿವಯೋಗ ಸುಖವನ್ನು ಲಿಂಗಧಾರಣದ ಪ್ರಾರಂಭದೆಸೆಯನ್ನೇ ಅನು ಭವಿಸದವರೇನು ಬಲ್ಲರು ?

ಚಿತ್ರದುರ್ಗದಲ್ಲಿ ಆಸ್ಥಾನವಿದ್ವಾನ್ ನಂಜುಂಡಾರಾಧ್ಯರು 'ಲಿಂಗವಿಲ್ಲದೆ ವೀರಶೈವ ಧರ್ಮತತ್ತ್ವಗಳನ್ನಾಚರಿಸಲಿಕ್ಕೆ ಬರುತ್ತದೆ' ಎಂದು ಭಾಷಣ ಮಾಡಿದರೆಂದು ಒಂದು ಕೂಗು ಹೊರಬಿದ್ದಿತ್ತು. ಅದು ಮುಂದೆ ನಿರ್ಧಾರಕ್ಕೆ ಬಾರದೆ ಹಾಗೆ ಉಳಿಯಿತು. ಅದೇ ಆರಾಧ್ಯರು ಗಿರಿಯಾಪುರದಲ್ಲಿ ನನಗೆ ಒಂದು ಪ್ರಶ್ನೆಯನ್ನು ಮಾಡಿದರು. "ಶ್ರೀ ರಾಮಕೃಷ್ಣ ಪರಮಹಂಸರು ಅನೇಕ ವಚನಗಳನ್ನು ಹೇಳಿದ್ದಾರೆ. ಒಳ್ಳೆಯ ವರ್ತನದಲ್ಲಿ ನಡೆದಿದ್ದಾರೆ. ಅವರಿಗೆ ಮೋಕ್ಷವಿಲ್ಲವೆ ? ವೀರಶೈವರಿಗೆ ಮಾತ್ರ ಮೋಕ್ಷವೆ ?" ಎಂಬುದೇ ಆ ಪ್ರಶ್ನೆಯಾಗಿದ್ದಿತು. "ಶ್ರೀ ರಾಮಕೃಷ್ಣ ಪರಮಹಂಸರ ವಚನಗಳಲ್ಲಿ ಶಿವಾದ್ವೈತ ತತ್ತ್ವಾಚರಣೆಗೆ ವಿರೋಧವಾದ ಅವರ ಬೋಧನೆಗಳನೇಕ ರನ್ನು ನಾನು ತೋರಿಸುತ್ತೇನೆ. ಕಾಳೀ ಮೊದಲಾಗಿ ದೇವತೆಗಳ ಅನ್ಯಭಕ್ತಿಪೂಜೆಯೂ ಅವರಲ್ಲಿ ಇದ್ದಿತು. "ವೀರಶೈವರು ಅನನ್ಯ ಭಕ್ತಿಯವರು" ಎಂದು ಉತ್ತರ ಕೊಟ್ಟು ದಾಯಿತು.

ಹೀಗೆ ಲಿಂಗವಿಲ್ಲದ ವೀರಶೈವ ಮತವನ್ನು ಏರ್ಪಡಿಸಬೇಕೆಂದು ಬೆಂಗಳೂರಿನ ಕೆಲವು ಮುಂದಾಳುಗಳು ಯೋಚಿಸುತ್ತಿರಬಹುದೆಂದು ಕಂಡುಬರುತ್ತದೆ. ಲಿಂಗವಿಲ್ಲದ ವೀರಶೈವರನ್ನು ನಡೆಸಬಹುದೆಂಬವರು ವೀರಶೈವ ಧರ್ಮಕ್ಕೆ ಒಂದು ಹಾನಿಯನ್ನುಂಟು ಮಾಡುತ್ತಾರೆಂಬುದು ಒತ್ತಟ್ಟಿಗಿರಲಿ, ಭಾರತೀಯ ಧರ್ಮದ ಒಂದು ಉತ್ಕೃಷ್ಟ ಮಾರ್ಗವನ್ನೇ ಕೆಡಿಸುತ್ತಿದ್ದಾರೆ ಎಂದು ಹೇಳಲೇನೂ ಅನುಮಾನವಿಲ್ಲ.

"ಅಹರಹರ್ಬ್ರಹ್ಮ ವಿಷ್ಣು ಪುರಂದರಾದ್ಯಮರ ವರ ಸೇವಿತಂ ಮಾಮೇವ ಜ್ಯೋತಿ ಸ್ವರೂಪಂ ಲಿಂಗಂ ಮಾಮೇವೋ ಪಾಸಿಕವ್ಯಂ ತದೇವೋಪಾಸಿಕ ವ್ಯಂ ತದೇವಾಹಂ, ಲಿಂಗರೂಪಿಣಂ ಮಾಂ ಸಂಪೂಜ್ಯ ಚಿಂತಯಂತಿ ಯೋಗಿನಃ ಸಿದ್ಧಾಃ ಸಿದ್ಧಿಂಗತಾಃ"

ಎಂಮು ಭಸ್ಮಜಾಬಾಲೋಪನಿಷತ್ತಿನಲ್ಲಿ ಭುಸುಂಡ ಎಂಬ ಜಾಬಾಲನಿಗೆ ಸಾಂಬ ನಾದ ಮಹಾದೇವನು ಹೇಳಿದಂತೆ ಉಕ್ತವಾಗಿದೆ.

"ಋತಂ ಸತ್ಯಂ ಪರಬ್ರಹ್ಮ ಸಂಸಾರ ಭೇಷಜಂ' ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಮಹೇಶ್ವರಂ.... ಆತ್ಮಾನಂ ಸಚ್ಚಿ ದಾನಂದ ಮನಂ ತಂ ಬ್ರಹ್ಮ ಸುವ್ರತ "ಅಹಮಸ್ಮೀತ್ಯಭಿಧ್ಯಾಯೇತ್ ಧ್ಯೇಯಾತೀತಂ ವಿಮುಕ್ತಯೇ"

ಎಂದು ಶ್ರೀಜಾಬಾಲ ದರ್ಶನೋಪನಿಷತ್ ೯ ನೆಯ ಖಂಡದಲ್ಲಿ ಹೇಳಿದೆ.

ಇವು ಇಷ್ಟಲಿಂಗ ಪೂಜೆಯನ್ನು ತೋರಿಸುವ ಅಂಶಗಳು. ಇಂತಹ ಉದಾ ಹರಣೆಗಳು ಉಪನಿಷತ್ತುಗಳಲ್ಲಿ ಇನ್ನೂ ಇವೆ. (ಈಗಲೂ ಇಷ್ಟಲಿಂಗ ಪೂಜಕರಾದ ವೀರಶೈವರು ಪೂಜಾರಂಭದಲ್ಲಿ 'ಶುದ್ಧೋಹಂ ಮುಕ್ತೋಹಂ ಸಚ್ಚಿದಾನಂದ ಸ್ವರೂಪೋಹಂ' ಎಂದುಕೊಂಡು ಮುಂದೆ ಇಷ್ಟಲಿಂಗ ಪೂಜೆ ಮಾಡುತ್ತಾರೆ.) ಭಗವದ್ಗೀತೆಯಲ್ಲಿ :

"ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನತಿಷ್ಠತಿ ।
ತಮೇವ ಶರಣಂ ಗಚ್ಛ.... ತತ್ ಪ್ರಸಾದೇನ । ಶಾಂತಿಮಥಿ
ಗಚ್ಛಸಿ" (xviii ೬೧-೬೨)

ಎಂಬ ಬೋಧೆಯಿದೆ. ಮಹಾಭಾರತದಲ್ಲಿ ಅಶ್ವಮೇಧ ಪರ್ವದಲ್ಲಿ ಅಡಕವಾದ ಉತ್ತರ ಗೀತೆಯಲ್ಲಿ ಈ ಶ್ಲೋಕಗಳಿವೆ.

"ದೇಹೋ ದೇವಾಲಯ ಪ್ರೋಕ್ತೋ ಜೀವೋದೇವಸ್ಸನಾತನಃ ।
ತ್ಯಜೇದ ಜ್ಞಾನ ನಿರ್ಮಾಲ್ಯಂ ಸೋಹಂ ಭಾವೇನ ಪೂಜಯೇತ್"
(iv-೨೭)

"ಬಹಿರ್ಭ್ರಾಮ್ಯತಿಯೋಕಶ್ಚಿತ್ ತ್ಯಕ್ತ್ವಾದೇಹಸ್ಥಮೀಶ್ವರಂ ।
ಸ್ವಗೃಹೇ ಪಾಯಸಂ ತ್ಯಕ್ತ್ವಾ ಭಿಕ್ಷಾಮಟತಿ ದುರ್ಮತಿಃ" (iv-೨೮)
"ಶಿಲಾಮೃದ್ದಾರು ಪಾತ್ರೇಷು ದೈವಬುದ್ಧಿಃ ಪ್ರಕಲ್ಪಿತಃ ।
ಅಕಲ್ಪಿತಃ ಸ್ವಯ ಜ್ಯೋತಿರಾತ್ಮಾನೊ ದೇವತಾನಃ" ॥ (?)

ಈ ಶ್ಲೋಕಗಳ ಪ್ರಕಾರ ಮನುಷ್ಯನು ಹೃದಯದಲ್ಲಿರುವ ಈಶನನ್ನು ನಂಬ ಬೇಕು. ಅದನ್ನು ಬಿಟ್ಟು ಅನ್ಯವಾಗಿ ದೇವನನ್ನು ನಂಬುವುದು ದುರ್ಮತಿಯು



ಮೈಸೂರಿನಲ್ಲಿ ಚೆನ್ನಮಲ್ಲಿಕಾರ್ಜುನರು ತಮ್ಮ ಸಿದ್ಧೇಶ್ವರ ಪ್ರೆಸ್ ಸ್ಥಾಪಿಸಿ
ಕೆಲಸ ಮಾಡುತ್ತಿದ್ದ ಶ್ರೀ ಬಾದಾಮಿ ನಂಜಪ್ಪನವರ ಛತ್ರ.
ಬಲಭಾಗದ ಛತ್ರದ ಮಹಡಿಯ ಮೇಲೆ ಅವರ ಕಾರ್ಯಾಲಯವಿತ್ತು.
ಮುದ್ರಣಾಲಯ ಕೆಳಭಾಗದ ದೊಡ್ಡ ಕೊಠಡಿಯಲ್ಲಿತ್ತು.

ಎಂಬುದು ವ್ಯಕ್ತವಾಗುವುದಿಲ್ಲವೆ ? ಈ ಅಭಿಪ್ರಾಯವನ್ನು ತೋರಿಸುವ ಭಗವದ್ಗೀತೆಯ ಶ್ಲೋಕಗಳು ಇನ್ನೂ ಇವೆ.

[ಟಿಪ್ಪಣಿ :— ಶ್ರೀ ಶ್ರೀನಿವಾಸಮೂರ್ತಿಗಳ ಉಪನ್ಯಾಸದ ವಿಮರ್ಶೆಯನ್ನು ಈವರೆವಿಗೆ ಎಂಟು ಪುಟಗಳು ಮುದ್ರಿಸಿದ ಮೇಲೆ ಅವರಿಂದ "ಆಕ್ಷೇಪಣೆಗಳಿಗೆ ಒಂದು ಸಮಾಧಾನ" ಎಂಬ ಶಿರೋಲೇಖನವುಳ್ಳ ಮುದ್ರಣ ಪ್ರತಿಯು ಈ ಕಾರ್ಯಾಲಯಕ್ಕೆ ಬಂದಿದೆ.... ಅವರು ಈ ಪ್ರತಿಯೊಂದಿಗೆ ನನಗೆ ಬರೆದ ಪತ್ರದಲ್ಲಿ ಹೀಗೆ ಇದೆ— "ತಮ್ಮ ೧೦೫–೧೦೬ ರ ಸಂಚಿಕೆಯಲ್ಲಿ ನಾನು ಧಾರವಾಡದಲ್ಲಿ ಮಾಡಿದ ಭಾಷಣದ ಒಂದು ಅಬದ್ಧ ಸಂಗ್ರಹವ ಅಪೂರ್ಣ ಸಂಗ್ರಹದ ಆಧಾರದ ಮೇಲೆ ಲೇಖನವನ್ನು ಬರೆದಿದ್ದೀರಿ."

ಇವನ್ನು ಓದಿದಮೇಲೆ ಸಂಯುಕ್ತ ಕರ್ನಾಟಕದಲ್ಲಿ ೪-೪-೫೨ ರಲ್ಲಿ ಪ್ರಕಟಿಸಿದುದನ್ನು ನಂಬಿ ವಿಮರ್ಶೆ ಮಾಡಿದುದಕ್ಕೆ ಬಹಳ ವಿಷಾದಪಟ್ಟೆನು. ಬೆಂಗಳೂರಿನ 'ಶರಣ ಸಂದೇಶ' ಮತ್ತು ಗದುಗಿನ 'ಸಾವಧಾನ' ಈ ಪತ್ರಿಕೆಗಳೂ ಇದೇ ಮೂಲವನ್ನಿಟ್ಟುಕೊಂಡೇ ವಿಮರ್ಶೆಮಾಡಿವೆ.]*

(ಸಂ. ೧೦೫–೧೦೬)

---

* ಹೀಗೆ ಶ್ರೀ ಚೆನ್ನಮಲ್ಲಿಕಾರ್ಜುನರು ಶ್ರೀ M. R. ಶ್ರೀಯವರ ಭಾಷಣದ ಖಂಡನೆ ಮಾಡುತ್ತಿದ್ದಂತೆ ಅವರಿಗೆ M. R. ಶ್ರೀಯವರಿಂದ ತಮ್ಮ ಭಾಷಣದ ನಿಜವಾದ ವಿಷಯಗಳ ಮುದ್ರಿತ ಪ್ರತಿ ಬಂದಮೇಲೆ ಅದನ್ನು ತಮ್ಮ ೧೦೫-೧೦೬ ನೆಯ ಸಂಚಿಕೆಯ ix ರಿಂದ xiii ನೆಯ ಪುಟದವರೆಗೆ ಪೂರ್ಣ ಮುದ್ರಿಸಿ, ಅದರಲ್ಲಿಯೂ ಶ್ರೀ M. R. ಶ್ರೀಯವರು ಅಲ್ಲಮ ಪ್ರಭುಗಳ ಬಗೆಗಾಗಲಿ, ಇಷ್ಟಲಿಂಗಾದಿ ವೀರಶೈವ ತಾತ್ತ್ವಿಕ ವಿಚಾರಗಳ ಬಗೆಗಾಗಲಿ ವಿದ್ವತ್ಪೂರ್ಣ ವಿಮರ್ಶೆ ಮಾಡಿಲ್ಲವೆಂದು ಪುನಃ ತಮ್ಮ ೧೦೭-೧೦೮, ೧೦೯-೧೧೦, ಸಂಚಿಕೆಗಳಲ್ಲಿ ಒಟ್ಟು ಹತ್ತೊಂಬತ್ತು ಪುಟಗಳಲ್ಲಿ ದೀರ್ಘವಾಗಿ ಚರ್ಚಿಸಿದ್ದಾರೆ. ಇದು ಶ್ರೀ ಚೆನ್ನಮಲ್ಲಿಕಾರ್ಜುನರ ತಾತ್ತ್ವಿಕ ಜ್ಞಾನ, ಸಮಾಜ ಸಂಸ್ಕೃತಿಗಳ ಅಭಿಮಾನಕ್ಕೆ ಹಿಡಿದ ಕನ್ನಡಿಯಂತಿದೆ. ಆ ದೀರ್ಘ ವಿಷಯವನ್ನು ನಾವು ಸಂಗ್ರಹಿಸಿಲ್ಲ.

# ವೀರಶೈವರು ಬ್ರಾಹ್ಮಣಧರ್ಮದವರೇ ಅಲ್ಲವೆ !

## [ಪಿ. ಆರ್. ಕರಿಬಸವಶಾಸ್ತ್ರಿಗಳ ವಾದವನ್ನು ಶ್ರೀ. ಚೆ. ಅವರು ಅಲ್ಲಗಳೆದಿದ್ದಾರೆ]

ಮೈಸೂರು ರಾಜರ ಆಸ್ಥಾನಪಂಡಿತರಾಗಿದ್ದ ಪಿ. ಆರ್. ಕರಿಬಸವಶಾಸ್ತ್ರಿಗಳು ಕ್ರಿ. ಶ. ೧೯೨೮ರಲ್ಲಿ ಪ್ರಕಟವಾದ 'ಸನಾತನ ವೀರಶೈವ ಬ್ರಾಹ್ಮಣ' ಎಂಬ ಪುಸ್ತಕವನ್ನು ಪರಿಶೋಧಿಸಿದ್ದಾರೆ. ಈ ಪುಸ್ತಕದಲ್ಲಿ ಪ್ರಾಕೃತಬ್ರಾಹ್ಮಣ ಮತ್ತು ಅಪ್ರಾಕೃತ ಬ್ರಾಹ್ಮಣ ಇವರಿಗಿರುವ ತಾರತಮ್ಯಗಳು ತೋರಿಸಲ್ಪಟ್ಟು ಅಪ್ರಾಕೃತ ಬಾಹ್ಮಣ್ಯವೇ ಉತ್ತಮವಾದುದೆಂದು ಹೇಳಲ್ಪಟ್ಟಿದೆ. ಈ ಬ್ರಾಹ್ಮಣ್ಯಕ್ಕೆ 'ಸನಾತನ ಬ್ರಾಹ್ಮಣ' 'ಜ್ಞಾನಿ ಬ್ರಾಹ್ಮಣ' ಎಂದು ಕರೆದಿರುತ್ತಾರೆ.

ವೇದಗಳಲ್ಲಿ ಸಂಹಿತೆ ಬ್ರಾಹ್ಮಣ ಉಪನಿಷತ್ತು ಎಂಬ ಮೂರು ಭಾಗಗಳಿವೆ. 'ಬ್ರಾಹ್ಮಣ' ಎಂಬ ಭಾಗದಲ್ಲಿ ಬ್ರಾಹ್ಮಣರು ಆಚರಿಸಬೇಕಾದ ಕರ್ಮಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ದಾರದಿಂದ ಕೂಡಿದ ಜನಿವಾರವನ್ನು ಧರಿಸುವುದು ಶಿಖೆ ಬಿಡುವುದು ಮುಖ್ಯಕರ್ಮಗಳಾಗಿವೆ. ಈ ಕರ್ಮಗಳನ್ನು ಆಚರಿಸುವ ಬ್ರಾಹ್ಮಣರು ಕರ್ಮಕಾಂಡಿಗಳು ಎಂದು ಕರೆಯಲ್ಪಡುತ್ತಾರೆ. ಅಹಂಬ್ರಹ್ಮಾಸ್ಮಿ ಎಂದು ಹೇಳುವ ಅದ್ವೈತಿಗಳು ಮೇಲೆಕಂಡ ಬ್ರಾಹ್ಮಣ ಎಂಬ ವೇದಭಾಗದಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಆಚರಿಸುತ್ತ ಇದ್ದರೆ ಅವರು ಕರ್ಮಕಾಂಡಿ ಬ್ರಾಹ್ಮಣರಲ್ಲಿ ಸೇರಿಹೋಗುತ್ತಾರೆ. ನೂರೆಂಟು ಉಪನಿಷತ್ತುಗಳಲ್ಲಿ ಒಂದಾದ ಬ್ರಹ್ಮೋಪನಿಷತ್ ಎಂಬುದರಲ್ಲಿ ಹೇಳಲ್ಪಟ್ಟ ವೈದಿಕಬ್ರಾಹ್ಮಣ ಕರ್ಮದಲ್ಲಿ ಅಧಿಕೃತಕರಾದ ಬ್ರಾಹ್ಮಣರೇ ಮೊದಲಾದವರು ಮುಂದೆ ಮಾಡುವ ಕೆಲಸವನ್ನು ಹೀಗೆ ಹೇಳಿದೆ. [ಹೀಗೆ ಆ ಗ್ರಂಥದಲ್ಲಿನ ವಿಷಯವನ್ನೆಲ್ಲ ಶ್ರೀ ಚೆನ್ನಮಲ್ಲಿಕಾರ್ಜುನರು ವಿವರಿಸಿದ್ದಾರೆ. ಅನಂತರ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತ ವೀರಶೈವವು ಅತಿವರ್ಣವೆಂಬ ವಿಷಯ ಪ್ರತಿಪಾದನೆ ಮಾಡುತ್ತ ಈ ಕೆಳಗಿನಂತೆ ಕರಿಬಸವಶಾಸ್ತ್ರಿಗಳ ವಾದವನ್ನು ಅಲ್ಲಗಳೆದಿದ್ದಾರೆ]

(ಪ್ರತಿಕ್ರಿಯೆ)

"ಈ ಕಾಲದಲ್ಲಿ ಕರ್ಮಿಬ್ರಾಹ್ಮಣ, ಜ್ಞಾನಿಬ್ರಾಹ್ಮಣ ಈ ಹೆಸರುಗಳಿಗಾಗಿ ವಾದಿಸುತ್ತ ಕೂಡುವುದು ಏನೂ ಚೆನ್ನಾಗಿಲ್ಲ. ಈ ವಾದದಿಂದ ವೀರಶೈವರು ಹೊಸದಾಗಿ ಬ್ರಾಹ್ಮಣ್ಯವನ್ನು ಪಡೆಯುವುದಕ್ಕಾಗಿ ವಾದಮಾಡುತ್ತಿದ್ದಾರೆ ಎಂದು ಅನೇಕರು ತಿಳಿಯಬಹುದು. ಕೇಂದ್ರ ಸರಕಾರದವರ ಪರವಾಗಿ ಪ್ರಕಟವಾಗುತ್ತಿರುವ ಅಕ್ಯಾಡೆಮಿ

ಪತ್ರಿಕೆಯಲ್ಲಿನ ಒಂದು ಲೇಖನದಲ್ಲಿ ವೀರಶೈವರು ಬ್ರಾಹ್ಮಣರಾಗಲಿಕ್ಕೆ ಪ್ರಯತ್ನ ಪಡುತ್ತಿದ್ದಾರೆ ಎಂದು ಹೇಳಲ್ಪಟ್ಟಿದೆ. ಆ ಲೇಖಕರಿಗೆ ವೀರಶೈವದ ನೆಲೆಕಲೆಯೇ ತಿಳಿದಿಲ್ಲ. ಹೀಗಿರುವುದರಿಂದ ವೀರಶೈವರು 'ಬ್ರಾಹ್ಮಣ' ಎಂಬಶಬ್ದಕ್ಕೆ ಅಪೇಕ್ಷೆ ಪಡದೆ, ಬ್ರಾಹ್ಮಣಾದಿ ಜಾತಿಕರ್ಮಗಳಿಗೂ ಸಿಲ್ಕದೆ, ತಮ್ಮ ಪೂರ್ವಪರಂಪರೆಯ ಪದ್ಧತಿ ಪ್ರಕಾರ ಅತಿವರ್ಣದವರೆಂದು ಹೇಳುವುದೇ ಆವಶ್ಯಕವಾಗಿದೆ. ವೀರಶೈವರ ಮೂಲಗ್ರಂಥವೆಂದು ಭಾವಿಸಲ್ಪಟ್ಟ 'ಪಾಶುಪತ್ಯಾಗಮ'ದಲ್ಲಿ ವೀರಶೈವ ಪಂಚಾಚಾರ್ಯರು ಪ್ರತಿಯೊಬ್ಬರೂ, ಅತಿವರ್ಣದವರೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ಕಡೆಗೆ ವೀರಶೈವ ಸಮಾಜವೆಲ್ಲವೂ ಬಹಳ ಎಚ್ಚರವಿಟ್ಟುಗಮನಿಸಬೇಕಾಗಿದೆ. ವೀರಶೈವರಲ್ಲಿ ಅನೈಕಮತ್ಯವನ್ನು ಹಬ್ಬಿಸಿ, ಪಂಗಡಗಳನ್ನು ಮಾಡಿ, ಸಮಾಜದ ಉನ್ನತಿಯನ್ನು ಹಾಳುಮಾಡುವುದಕ್ಕಿಂತಲೂ, ನಿಜವಾದ ಧರ್ಮವನ್ನು ಒಂದುಗೂಡಿಸಿ, ಅದರಂತೆ ಆಚರಿಸಲು ಅವಕಾಶಕೊಟ್ಟು ಸಮಾಜವನ್ನು ಮುಂದಕ್ಕೆ ತಂದು ಇದು ಜಗನ್ಮಾನ್ಯವೆಂದು ತೋರಿಸಿಕೊಡುವುದರಲ್ಲಿ ಹೆಚ್ಚಿನ ಪ್ರಯೋಜನವುಂಟೆಂದು ಈ ಸಮಾಜದ ಸರ್ವರೂ ಯೋಚಿಸುವುದೂ, ಪ್ರಯತ್ನಿಸುವುದೂ ಈಗ ಅತ್ಯವಶ್ಯಕವಾಗಿದೆ.*

(—ಸಂ. ೧೫೭. ಪು. ೫-೮)

*ಶ್ರೀ ಚೆನ್ನಮಲ್ಲಿಕಾರ್ಜುನರು ೧೦-೬-೫೯ರಲ್ಲಿ ಪ್ರಕಟವಾದ ತಮ್ಮ ೧೫೭ನೇ ಸಂಚಿಕೆಯಲ್ಲಿ ಸಮಾಜ ಸಂಘಟನೆಯ ಈ ಭವಿಷ್ಯವನ್ನು ನುಡಿದಿರುವುದನ್ನು ವಾಚಕರು ಗಮನಿಸಬಹುದು. ಅವರ ಈ ಸಲಹೆಗೆ ಕಿವಿಗೊಡುವವರು ಉಂಟೆ ?

# ನಮ್ಮ ಜೀವನದ ಪರಿಸ್ಥಿತಿ ಮತ್ತು ಅದರ ಗುರಿ
## (ದೀರ್ಘವಾದದ ವಿಷಯ)

---

[ಶ್ರೀ. ಎಂ. ಎಲ್. ನಾಗಣ್ಣ ಎಂಬುವ ಮೈಸೂರಿನ ಒಬ್ಬ ವಿದ್ವಾಂಸರು. ಇವರು 'ಆತ್ಮವಿಚಾರ' ಎಂಬ ಮಾಸಪತ್ರವನ್ನು ಹೊರಡಿಸುತ್ತಿದ್ದರು. ಅವರು ಬರೆದ ಮೇಲಿನ ಶಿರೋನಾಮೆಯ ಲೇಖನವೊಂದು ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ತಾ. ೧-೪-೪೬ರಲ್ಲಿ ಮತ್ತು ೨೨-೪-೪೬ರಲ್ಲಿ ಪ್ರಕಟವಾಯಿತು. ಅವುಗಳ ಒಂದೊಂದು ಪ್ರತಿಯನ್ನು ಶ್ರೀ ಚೆನ್ನಮಲ್ಲಿಕಾರ್ಜುನರಿಗೆ ಕಳುಹಿಸಿಕೊಟ್ಟರು. ಆಗ ಶ್ರೀ. ಚೆ. ಅವರು ಸದ್ಧರ್ಮದೀಪಿಕೆಯಲ್ಲಿ ಈ ಲೇಖನದ ವಿಮರ್ಶೆಮಾಡಿದರು. ಇವರ ವಿಮರ್ಶೆಗೆ ಉತ್ತರವಾಗಿ ಶ್ರೀ ನಾಗಣ್ಣನವರು ತಮ್ಮ ಪ್ರತಿಕ್ರಿಯೆಯನ್ನು ಬರೆದರು. ಕೊನೆಕೊನೆಗೆ ಇದು ವೈಯಕ್ತಿಕವಾಗಿ ಬೆಳೆದು, ನೂರಾರು ಪುಟಗಳಷ್ಟು ಖಂಡನ ಮಂಡನ, ವಾದವಿವಾದಗಳಿಗೆ ಎಡೆಕೊಟ್ಟು ಬೆಳೆದು ಹೋಯಿತು. ಶ್ರೀ. ಚೆ. ಅವರು ಶಿವಾದ್ವೈತ ತತ್ತ್ವಪ್ರತಿಪಾದನೆಯನ್ನು ಈ ವಾದವಿವಾದದಲ್ಲಿ ಬಹುಸ್ವಾರಸ್ಯವಾಗಿಯೂ ಶಾಸ್ತ್ರಾಧಾರಪೂರ್ವಕವಾಗಿಯೂ ವಿವರಿಸಿದುದು ಇವರ ಅಗಾಧ ಪಾಂಡಿತ್ಯಕ್ಕೂ, ಶಾಸ್ತ್ರಾದಿಸಂಜನಿಕ ಅನುಭವಕ್ಕೂ ಹಿಡಿದ ಕನ್ನಡಿಯಂತಿದೆ. ಕೊನೆಯಲ್ಲಿ ವಾದವನ್ನು ಶ್ರೀ ಚೆನ್ನಮಲ್ಲಿಕಾರ್ಜುನರೇ ನಿಲ್ಲಿಸಿ ಇಷ್ಟನ್ನು ಮಾತ್ರ ಹೇಳಿದ್ದಾರೆ.]

"ಇನ್ನು ನಮ್ಮ ಶ್ರೀ M. L. ನಾಗಣ್ಣನವರಿಗೆ ಒಂದು ಮಾತನ್ನು ವಿನಯದಿಂದ ಕೇಳಿಕೊಳ್ಳಬೇಕಾಗಿದೆ. ಈ ಪುಸ್ತಕದಲ್ಲಿ (ಶ್ರೀ. M. L. ನಾಗಣ್ಣನವರು ಪ್ರಕಟಿಸಿದ ಪುಸ್ತಕದಲ್ಲಿ) ಹೇಳಲ್ಪಟ್ಟ ಅದ್ವೈತಿಗಳ ಕರ್ಮಾಚರಣೆಯ ಬೋಧೆಯೂ, ತಾವು ತಮ್ಮ ಪತ್ರಿಕೆಯ ಮೂಲಕ ಪ್ರಚಾರ ಮಾಡುತ್ತಿರುವ ಬೋಧೆಯೂ ಒಂದನ್ನೊಂದು ಬಹುಮಟ್ಟಿಗೆ ಹೋಲುತ್ತವೆ. ನೀವು 'ಅಹಂಬ್ರಹ್ಮಾಸ್ಮಿ' ಎಂದು ತಿಳಿದುಕೊಂಡವರಾದ್ದರಿಂದ, ಜ್ಞಾನಿಗಳೆಂಬುದೇನೋ ನಿಜ. ಇನ್ನು ಮುಂದೆ ಮಹಾವಾಕ್ಯ ಚತುಷ್ಟಯಗಳಲ್ಲಿ ಒಂದಾದ 'ಪ್ರಜ್ಞಾನಂಬ್ರಹ್ಮ' ಎಂಬುದನ್ನು ಸಾಧಿಸುವವರಾಗಬೇಕು. ಜ್ಞಾನದ ಎಚ್ಚರದಿಂದ ನಡೆಯುವುದರಲ್ಲಿ ಪ್ರಜ್ಞಾನವಿದೆ. ಆ ಬ್ರಹ್ಮ ನಡೆಯ ಬ್ರಹ್ಮ. ಜ್ಞಾನಕ್ಕೂ ಪ್ರಜ್ಞಾನಕ್ಕೂ ಏನು ಅಂತರವಿದೆ ಎಂಬುದನ್ನು ಸಾಧಿಸುವವರಾಗಬೇಕು. ನೀವು ತಿಳಿದಿರುವುದು ಶಬ್ದ ಬಹ್ಮ (ಮಾತಿನ ಬ್ರಹ್ಮ) ಆ ನಡೆಯು ಬಂದಾಗ

ಪ್ರಜ್ಞಾನಿಗಳು ಪ್ರಜ್ಞರು ಎನಿಸಿಕೊಂಬಿರಿ. ಇದು ಶಿವಾದ್ವೈತದ ನಡೆಯಲ್ಲವೆಂಬುದು ಚೆನ್ನಾಗಿ ಬಿಂಬಿತವಾಗಿದೆ. ಭಗವದ್ಗೀತೆಯಲ್ಲಿಯೂ, 'ಸ್ಥಿತಪ್ರಜ್ಞ' ಎಂಬ ವಿಷಯ ಬಂದಿದೆ. ಮೊಗ್ಗೆಯಮಾಯಿದೇವರೂ ಪ್ರಾಜ್ಞ, ಅಪ್ರಾಜ್ಞ ಎಂದು ಎರಡು ವಿಧವಾಗಿ ಭಾವಿಸಿ, ಭಕ್ತಿವರ್ಜಿತ ಪಾಂಡಿತ್ಯವು ವ್ಯರ್ಥವೆಂದು ಹೇಳಿದ್ದಾರೆ. ಶಿವಾದ್ವೈತ ಭಕ್ತಿಯು ಹೇಗಿದೆ ? ಎಂಬುದನ್ನು ಇನ್ನಾದರೂ ತಿಳಿಯಿರಿ; ಒಲ್ಲದಿದ್ದರೆ ಬಿಡಿರಿ. ನಮ್ಮ ಒತ್ತಾಯವೇನೂ ಇಲ್ಲ. ತಮ್ಮ ಮೇಲೆ ನಮ್ಮಲ್ಲಿರುವ ಶಿವಪ್ರೇಮವು ಈ ಮಾತನ್ನು ಹೇಳಿಸುತ್ತದೆ".

(ಸಂ. ೫೬-೫೭, ೯೫-೯೬, ೯೭-೯೮, ೯೯-೧೦೦, ೧೦೩-೧೦೪, ಮತ್ತು, ೧೨೭.)

# ವೀರಶೈವರಲ್ಲಿ ನವೀನ ಏರ್ಪಾಡು
## (ದೀರ್ಘವಾದದ ವಿಷಯ)

[ಆಸ್ಥಾನ ವಿದ್ವಾನ್ ಕೀರ್ತನ ಕೇಸರಿ ಶ್ರೀ ಶಿವಮೂರ್ತಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಹೊರಡುತ್ತಿರುವ ಶರಣಸಾಹಿತ್ಯ ಮಾಸಪತ್ರಿಕೆಯ ಸಂಪುಟ XI ಸಂಚಿಕೆ. ೪ರ ಪುಟ ೫೫–೫೭ರಲ್ಲಿ "ವೀರಶೈವರಲ್ಲಿ ಅಪ್ಟಾವರಣಗಳೇಕೆ ?" ಎಂಬತಲೆ ಬರಹವಲ್ಲಿ ಶ್ರೀಮಾನ್ O. N. ಲಿಂಗಣ್ಣಯ್ಯ ಬಿ. ಎ. ಆನರ್ಸ್ ಬೆಂಗಳೂರು ಇವರ ಒಂದು ಲೇಖನವನ್ನು ಪ್ರಕಟಿಸಿ ಇದ್ದಾರೆ–ಎಂದು ಶ್ರೀ ಚೆನ್ನಮಲ್ಲಿಕಾರ್ಜುನರು ತಮ್ಮ ಸಂಚಿಕೆ ೭೪–೭೫ರಲ್ಲಿ ಅದರ ಬಗೆಗೆ ತಮ್ಮ ಪ್ರತಿಕ್ರಿಯೆಯನ್ನು ಬರೆದರು. ಬಿ. ಶಿವಮೂರ್ತಿಶಾಸ್ತ್ರಿಗಳು ಲೇಖನದ ವಿಷಯವನ್ನು ಪುಷ್ಟೀಕರಿಸಿ, ಲಿಂಗಣ್ಣಯ್ಯನವರ ಅಭಿಪ್ರಾಯಕ್ಕೆ ತಲೆದೂಗಿ ಇದೊಂದು ವೀರಶೈವರಲ್ಲಿ ನವೀನವಾದ ಏರ್ಪಾಡು ಎಂದು ಪ್ರಶಂಸಿಸಿ ಬರೆದುದು ಶ್ರೀ ಚನ್ನಮಲ್ಲಿಕಾರ್ಜುನರಿಗೆ ಒಪ್ಪಿಗೆಯಾಗಲಿಲ್ಲ. ಈ ವಾದ ಭೂಮಿಯ ಮುಖ್ಯವಿಷಯ: ಗುರು ಮತ್ತು ಜಂಗಮಗಳೆರಡೂ ಬಹಳ ಮಟ್ಟಿಗೆ ಸಮಾನ ಧರ್ಮಗಳಾಗಿವೆ. ಇವನ್ನು ಬೇರೆಬೇರೆಯಾಗಿ ಕಲ್ಪಿಸಿ ಸಮಾಜದಲ್ಲಿ ದೊಡ್ಡಗೊಂದಲವೆದ್ದಿದೆ. ಆದ್ದರಿಂದ ಜಂಗಮ ತತ್ತ್ವವನ್ನು ಗುರುತತ್ವದಲ್ಲಿ ಸಮಾವೇಶಗೊಳಿಸಿ 'ಸಪ್ತಾವರಣ'ಗಳನ್ನು ಮಾತ್ರಬಳಕೆಗೆ ತಂದರೆ ಸಾಕು ಎಂಬುದೇ ಆಗಿದೆ. ಈ ವಾದವು ಕೊನೆಕೊನೆಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೂ, ಶ್ರೀ ಚೆನ್ನಮಲ್ಲಿಕಾರ್ಜುನವರಿಗೂ ವೈಯಕ್ತಿಕವಾಗಿ ಬೆಳೆದು ಚೆನ್ನಮಲ್ಲಿಕಾರ್ಜುನರು ಶಿವಮೂರ್ತಿ ಶಾಸ್ತ್ರಿಗಳವಾದವನ್ನೆಲ್ಲ ಶಾಸ್ತ್ರಾಧಾರಪೂರ್ವಕ ಮತ್ತು ಸೂಕ್ತಸಲಹೆಗಳ ಮೂಲಕ ಖಂಡಿಸಿದರು. ಈ ವಾದವಿವಾದವಲ್ಲಿ ಸಖರಾಯ ಪಟ್ಟಣದ ಸ್ವಾಮಿಗಳವರೂ ಭಾಗವಹಿಸಿ ಶಾಸ್ತ್ರಿಗಳವರ ವಾದವನ್ನು ಓ. ಎನ್ ಲಿಂಗಣ್ಣಯ್ಯನವರ ಅಭಿಪ್ರಾಯವನ್ನು ಖಂಡಿಸಿದರು. ಹೀಗೆ ಬಹಳ ರಾದ್ಧಾಂತಕ್ಕೆಡೆಗೊಟ್ಟ ಈ ವಾದ ಭೂಮಿಯಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಅತ್ಯದ್ಭುತವಾಗಿ ವಾದ ಮಾಡಿದುದು ಕಂಡು ಬರುತ್ತದೆ. ತಮ್ಮ ವಾದದ ಕೊನೆಯಲ್ಲಿ ಶ್ರೀ. ಚೆ. ಅವರು ಕೆಳಗಿನಂತೆ ಬರೆದು ಅದಕ್ಕೆ ಮಂಗಲ ಹಾಡಿದ್ದಾರೆ. ದೀರ್ಘವಾದ ಈ ವಿಷಯವನ್ನು ನಾವು ಸಂಪಾದಿಸುವ ಗೊಡವೆಗೆ ಹೋಗಲಿಲ್ಲ. ಕೆಳಗೆ ಆಯಾಯ ಸಂಚಿಕೆಗಳನ್ನು ಸೂಚಿಸಿದ್ದೇವೆ. ನೋಡಿಕೊಳ್ಳಬಹುದು]

ಪರತತ್ತ್ವಮೂರ್ತಿಯಷ್ಟಾವರಣರೂಪದಿಂ ।
ಧರೆಯೊಳವತರಿಸಿ, ಷಟಸ್ಥಲವೆಂಬ ಕ್ಷೇತ್ರದೊಳು
ಪರಮ ಪಂಚಾಚಾರ ಮಾರ್ಗವಿರುತಿಹುನಲ್ಲಿ ನಡೆದು ನಡೆದಂತೆ ನುಡಿದು ॥
ಹರನ ಶೈವಾಚಾರ ವರ್ತನೆಯನತಿಗಳೆದು
ನಿರುತದಿಂ ವೀರಶೈವವ ಪ್ರತಿಷ್ಠೆಯುವಾಳ್ವ
ಶರಣರೇಶ್ರೇಷ್ಠರೆಂದೊರೆದ ಮದ್ಗುರು ಚೆನ್ನವೀರಪಾಲಿಸುಗೆಮ್ಮನು ॥

—ವೀರಶೈವ ಸಿದ್ಧಾಂತ–ಧರ್ಮಾಚಾರ ಪ್ರಕರಣ

"ಇತ್ಯಾದಿ ಗ್ರಂಥಾಧಾರ–ಆದ್ಯರ ವಚನಗಳಿಂದ ವೀರಶೈವಕ್ಕೆ ಅಷ್ಟಾವರಣದ ಅದರಲ್ಲೂ ಜಂಗಮದ ಅವಶ್ಯಕತೆ ಅತಿಮುಖ್ಯವೆಂಬುದೂ, ತಾರತಮ್ಯ ವಿಶೇಷದಿಂದ ಲಿಂಗಕ್ಕಿಂತಗುರುವಿಗೆ, ಗುರುವಿಗಿಂತ ಜಂಗಮಕ್ಕೆ ಹೆಚ್ಚಳವಿದೆಯೆಂಬುದು ಮತ್ತು ಅಷ್ಟಾವರಣಗಳಲ್ಲಿ ಒಂದನ್ನುಳಿದರೆ ವೀರಶೈವಕ್ಕೆ ಕೊರತೆಯೆಂಬುದೂ ಸಹ ಸುಸ್ಪಷ್ಟ ವಾಗಿ ಕಂಡುಬರುವುದು. ಇದರ ಮೇಲೂಗ್ರಂಥಾಧಾರ ಹಾಗು ಆದ್ಯರುಕ್ತಿಗಳನ್ನೊಪ್ಪದೆ ತನ್ನ ವಾದ ವಿಚಾರವನ್ನೇ ಮುಂದುವರಿಸಲೆಳಸಿದರೆ ಉಪಾಯವಿಲ್ಲ".

(ಸಂ. ೮೪–೮೫)

ಭದ್ರಂ–ಶುಭಂ–ಮಂಗಳಂ

ಈ ವಾದ ವಿವಾದವನ್ನುಳ್ಳ ಸಂಚಿಕೆಗಳು. (೭೪,೭೫,೭೭, ೭೮,,೮೧–೮೨, ೮೩,೮೪,೮೫)

೬

# ಶ್ರೀ. ಜೆ. ಅವರ ಲೇಖನಗಳು ಮತ್ತು ಸಂಪಾದಿತ ಕೃತಿಗಳು

(ಉಪಲಭ್ಯ ಸಾಮಗ್ರಿಗಳನ್ನು ಆಧರಿಸಿ)

ಎಸ್. ಶಿವಣ್ಣ, ಬೆಂಗಳೂರು
ವಿಶ್ವವಿದ್ಯಾನಿಲಯ

